"ಶ್ರೀ ಮಧ್ವನಾಥೋ ವಿಜಯತೇ"

ಜಗದ್ಗುರು ಶ್ರೀ ಮನ್ಮಧ್ವಾಚಾರ್ಯರ ಮೂಲ ಗ್ರಂಥ ಮಾಲಿಕೆಯ

# ಯಮಕ ಭಾರತ
# ತಂತ್ರಸಾರ
# ಯತಿಪ್ರಣವಕಲ್ಪ
ಮತ್ತು
# ಋಗ್ಭಾಷ್ಯ

ಕನ್ನಡ ಟೀಕಾ ವ್ಯಾಖ್ಯಾನ, ವಿಶೇಷಾಂಕ, ಮೂಲಾರ್ಥ ಭಾಷಾಂತರ ಸಹಿತ

ವೇದಾಂತ ವಾಚಸ್ಪತಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತ.




-:ಪ್ರಕಾಶಕರು:-

ಅಗ್ರಹಾರ ಮುದ್ರಣಾಲಯ

ರಥ ಬೀದಿ, ಉಡುಪಿ

" ಶ್ರೀ ಮಧ್ವನಾಥೋ ವಿಜಯತೇ "

ಜಗದ್ಗುರು ಶ್ರೀ ಮನ್ಮಧ್ವಾಚಾರ್ಯರ ಮೂಲ ಗ್ರಂಥಗಳ ಮಾಲಿಕೆಯ

# ಯಮಕ ಭಾರತ

# ತಂತ್ರಸಾರ

# ಯತಿ ಪ್ರಣವ ಕಲ್ಪ

ಮತ್ತು

# ಋಗ್ಭಾಷ್ಯ

ಕನ್ನಡ ಟೀಕಾ ವ್ಯಾಖ್ಯಾನ, ವಿಶೇಷಾಂಕ, ಮೂಲಾರ್ಥ ಭಾಷಾಂತರ ಸಹಿತ

ವೇದಾಂತ ವಾಚಸ್ಪತಿ, ವೇದಮೂರ್ತಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತ

| | | |
|---|---|---|
| ಗ್ರಂಥದ ಹೆಸರು | | ಯಮಕ ಭಾರತ<br>ತಂತ್ರಸಾರ<br>ಯತಿ ಪ್ರಣವ ಕಲ್ಪ<br>ಮತ್ತು<br>ಖುಗ್ಭಾಷ್ಯ |
| ಪ್ರತಿ ಪದಾರ್ಥ, ಮೂಲಾರ್ಥ<br>ವಿಶೇಷಾಂಶ, ಭಾವಾನುವಾದ<br>ತಾತ್ಪರ್ಯ ಸಹಿತ<br>ಕನ್ನಡ ಟೀಕಾ ಭಾಷಾಂತರ | : | ವೇದಮೂರ್ತಿ, ವೇದಾಂತ ವಾಚಸ್ಪತಿ<br>ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು |

ಪ್ರಕಾಶಕರು : ಅಗ್ರಹಾರ ಮುದ್ರಣಾಲಯ, ರಥಬೀದಿ, ಉಡುಪಿ


ಮುದ್ರಕರು : ಮನೋರಮಾ ಆಫ್‌ಸೆಟ್ಸ್, ಯೆಯ್ಯಾಡಿ, ಮಂಗಳೂರು - 8

ಬೆಲೆ : ರೂ 200=00

ಪುಟಗಳು : XII + 566





# ಅರ್ಪಣೆ



ಅಲ್ಪವೇತನವನ್ನು ಪಡೆದು, ಶೈಶವಾವಸ್ಥೆಯಲ್ಲಿ ತೋರುತ್ತಿದ್ದ ಬಾಲಚೇಷ್ಟೆ, ಹಟಮಾರಿತನ,
ಅಹಂಕಾರ, ಮಮಕಾರ, ಗರ್ವ, ಉದ್ಧಟತನಗಳನ್ನು ನೋಡಿ ಲವಲೇಶವೂ ಕೋಪ
ತಾಳದೆ ಮುದ್ದುಮುದ್ದಾದ ಮಾತುಗಳಿಂದ ನುಡಿಮುತ್ತುಗಳನ್ನು ದುರ್ಗುಣಗಳನ್ನು
ದೂರೀಕರಿಸಲು ಬೋಧಿಸಿ ಸುಗಮ ಜೀವನ ನಿರ್ವಹಣೆಗೆ ಸೂಕ್ತ ಮಾರ್ಗದರ್ಶನವನ್ನಿತ್ತು
ಸುಖ ಸಂತಸಮಯಿ ಜೀವನ ಸಾಗಿಸಲು ದಿವ್ಯಜ್ಯೋತಿಯನ್ನು ತೋರಿಸಿ ಅನುಗ್ರಹಿಸಿದ
ನಮ್ಮ ಪುಣ್ಯ ತೀರ್ಥರೂಪ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು-ಹಾಗೂ
ಪೂಜ್ಯ ಮಾತೃಶ್ರೀ ಶ್ರೀಮತಿ ರಾಜಮ್ಮ ನಾರಾಯಣ ತಂತ್ರಿ
ಅವರ ಚರಣ ಕಮಲಗಳಿಗೆ ತುಂಬು ಹೃದಯದಿಂದ ಅರ್ಪಿಸುವ

- ಅವರ ಮಕ್ಕಳು -

ಅಗ್ರಹಾರ ಕೆ. ಕೆ. ತಂತ್ರಿ
ಅಗ್ರಹಾರ ಕೆ. ಮಾಧವ ತಂತ್ರಿ
ಅಗ್ರಹಾರ ರಘುಪತಿ ತಂತ್ರಿ
ಅಗ್ರಹಾರ ಕೆ. ಶ್ರೀಪತಿ ತಂತ್ರಿ
ಶ್ರೀಮತಿ ವನಜಾಕ್ಷಿ ಕೆ. ಆಚಾರ್ಯ
ಶ್ರೀಮತಿ ಸುಲೋಚನಾ ಆರ್. ಸರಳಾಯ
ಶ್ರೀಮತಿ ಶಕುಂತಳ ಭಾ. ರಾವ್
ಶ್ರೀಮತಿ ಪುಷ್ಪ ಬಿ. ಆಚಾರ್ಯ

# ಪ್ರಕಾಶಕರ ಅರಿಕೆ

ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥
ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

ಶ್ರೀ ಸೋದೆ ಮಠ ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದಂಗಳವರ ಸೊಗಸಾದ ಮುನ್ನುಡಿಯೊಡನೆ ಇದೀಗ ತಾನೆ ಜಗದ್ಗುರು ಶ್ರೀ ಮನ್ಮಧ್ವಾಚಾರ್ಯರ ನಾಲ್ಕು ಗ್ರಂಥಗಳು ಪುನರ್ ಮುದ್ರಣಗೊಳ್ಳುತ್ತಿವೆ ಎಂದು ತಿಳಿಸಲು ಸಂತೋಷಪಡುತ್ತೇವೆ. ಶ್ರೀ ಮದಾಚಾರ್ಯರ ಗ್ರಂಥಗಳ ಮಹಿಮೋಕ್ತಿಯನ್ನು ಬೇರೆ ಹೇಳಬೇಕಾಗಿಲ್ಲ. ಪರ್ಯಾಯ ಶ್ರೀ ಸೋದೆ ಮಠದ ಶ್ರೀಗಳವರೇ ಯಥಾವತ್ತಾಗಿ ವರ್ಣಿಸಿರುತ್ತಾರೆ. ಆಚಾರ್ಯ ಮಧ್ವರ ಗ್ರಂಥಗಳ ವಿಷಯ ಪ್ರತಿಪಾದನೆ ಕ್ರಮ ಅಸದೃಶವಾದುದು, ಅನುಪಮವಾದುದು. ಇದೀಗ ಪುನರ್ಮುದ್ರಣಗೊಳ್ಳುತ್ತಿರುವ ಯತಿಪ್ರಣವ ಕಲ್ಪ, ಋಗ್ಭಾಷ್ಯ, ಯಮಕ ಭಾರತ, ತಂತ್ರಸಾರ - ಈ ನಾಲ್ಕು ಗ್ರಂಥಗಳ ಕುರಿತೂ ಶ್ರೀಗಳವರು ಸುಂದರವಾಗಿ ವಿವರಿಸಿದ್ದಾರೆ. ಶ್ರೀಗಳವರು ಹೇಳಿದಂತೆ ಶ್ರೀಮದಾಚಾರ್ಯರ ಪ್ರತಿಯೊಂದು ಗ್ರಂಥವೂ ಅನರ್ಘ್ಯರತ್ನ. ಅವುಗಳ ಪಠನ-ಪಾಠನಗಳಿಂದ ಜನ್ಮಸಾಫಲ್ಯವಾಗುವುದರಲ್ಲಿ ಸಂದೇಹವಿಲ್ಲ.

ಶ್ರೀ ಮದಾಚಾರ್ಯರ ಸಿದ್ಧಾಂತ, ತತ್ತ್ವವಿಚಾರಗಳೆಲ್ಲಾ ಸಂಸ್ಕೃತ ಭಾಷೆಯಲ್ಲಿವೆ. ಸಂಸ್ಕೃತವರಿಯದ ತತ್ತ್ವಜಿಜ್ಞಾಸುಗಳಿಗೆ ಆಚಾರ್ಯರ ತತ್ತ್ವಗಳನ್ನು ತಿಳಿದುಕೊಳ್ಳಲು ಬೇರೆ ಮಾರ್ಗವಿರಲಿಲ್ಲ. ಇದನ್ನು ಮನಗಂಡು ಉಡುಪಿಯಲ್ಲಿ ಸಾಧಾರಣ 60 ವರ್ಷಗಳ ಹಿಂದೆ ಶ್ರೀ ಮಧ್ವಮುನಿ ಸೇವಾ ಸಂಘ ಎಂಬ ಸಂಸ್ಥೆಯೊಂದು ಜನ್ಮತಳೆದು ಶ್ರೀ ಮದಾಚಾರ್ಯರ ಎಲ್ಲಾ ಕೃತಿಗಳನ್ನೂ ಅನುವಾದ-ತಾತ್ಪರ್ಯ ಸಹಿತ ಪ್ರಕಟಿಸಲು ಮುಂದಾಗಿ, ಎಲ್ಲಾ ಗ್ರಂಥಗಳನ್ನೂ ಪ್ರಕಟಿಸಿತು. ಶ್ರೀ ಮದಾಚಾರ್ಯರ 37 ಗ್ರಂಥಗಳ ಅನುವಾದ ಕಾರ್ಯವನ್ನು ಉಡುಪಿ ಸಂಸ್ಕೃತ ಮಹಾಪಾಠ ಶಾಲೆಯಲ್ಲಿ ವೇದಾಂತ ಪ್ರಾಧ್ಯಾಪಕರೂ ಪಂಡಿತೋತ್ತಮರೂ ನಮ್ಮ ತೀರ್ಥರೂಪರೂ ಆಗಿರತಕ್ಕ ದಿ. ಅಗ್ರಹಾರ ನಾರಾಯಣ ತಂತ್ರಿಗಳು ವಹಿಸಿ ಪೂರ್ಣಗೊಳಿಸಿರುವರು. ತಂತ್ರಿಗಳು ಹೆಸರುವಾಸಿಯಾದ ವಿದ್ವಾಂಸರೂ, ಆಸ್ಥಾನ ವಿದ್ವಾಂಸರೂ ಆಗಿದ್ದರು. ಇವರ ಕೀರ್ತಿಯಿಂದಾಗಿ, ಇವರು ಅನುವಾದಿಸಿರುವ ಎಲ್ಲಾ ಗ್ರಂಥಗಳೂ ಕೆಲವೇ ವರ್ಷಗಳಲ್ಲಿ ಖರ್ಚಾಗಿ ಹೋದವು. ಆ ಗ್ರಂಥಗಳು ಅಷ್ಟು ಜನಪ್ರಿಯತೆಯನ್ನು ಗಳಿಸಿದ್ದವು. ಇದಕ್ಕೆ ಕಾರಣ ಅವರ ಪಾಂಡಿತ್ಯವೆಂದು ಬೇರೆ ಹೇಳಬೇಕಾಗಿಲ್ಲ. ಆ ಪ್ರತಿಗಳೆಲ್ಲಾ ಖರ್ಚಾಗಿ ಸುಮಾರು ಇಂದಿಗೆ ಇಪ್ಪತ್ತು ವರ್ಷಗಳಾಗಬಹುದು. ನಾವು ಪರವೂರಿಗೆ ಹೋದಾಗ, ನಾವು ಅಗ್ರಹಾರ ನಾರಾಯಣ ತಂತ್ರಿಗಳ ಮಕ್ಕಳೆಂದು ಗೊತ್ತಾದಾಗ ಎಷ್ಟೋ ಮಂದಿ ತಂತ್ರಿಗಳ ಪುಸ್ತಕಗಳನ್ನು ಕೇಳಿದ್ದುಂಟು. ಇದರ ಪುನರ್ ಮುದ್ರಣ ಕಾರ್ಯಕ್ಕೆ ಅನುಮತಿ ಇತ್ತು ಪ್ರೋತ್ಸಾಹಿಸಿದವರು ಮಧ್ವಮುನಿ ಸೇವಾ ಸಂಘದ ಅಧ್ಯಕ್ಷರಾಗಿರುವ ಶ್ರೀ ಕೆ.ಕೆ. ಪೈಯವರು.

ನಾವೀಗ ನಿವೃತ್ತ ಶಿಕ್ಷಕರ ಗುಂಪಿಗೆ ಸೇರಿದ್ದೇವೆ. ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಹಂಬಲ.

ತೀರ್ಥರೂಪರು ಅನುವಾದಿಸಿರುವ ಗ್ರಂಥಗಳನ್ನು ಪುನರ್ಮುದ್ರಣ ಮಾಡಬೇಕೆಂಬ ಆಸೆ ಅಂಕುರಿಸಿತು. ಬಹುಧನವ್ಯಯಸಾಧ್ಯವಾದ ಈ ಮಹಾಕಾರ್ಯ ನಮ್ಮಿಂದ ಸಾಧ್ಯವೇ ಎಂಬ ಸಂಶಯವು ಬಾರದಿರಲಿಲ್ಲ. ಈ ಸತ್ಕಾರ್ಯಕ್ಕೆ ದಾನಿಗಳ ಉದಾರ ಧನ ಸಹಾಯ ಸಿಗಬಹುದೆಂಬ ನಂಬಿಕೆಯಿಂದ ಈ ಮಹಾಕಾರ್ಯಕ್ಕೆ ಕೈ ಹಾಕಿದ್ದೇವೆ, ಮಹಾ ಸಾಹಸಕ್ಕೆ ಇಳಿದಿದ್ದೇವೆ. ಶ್ರೀ ಹರಿ-ವಾಯುಗಳ ಅನುಗ್ರಹವಿದ್ದರೆ ಯಾವುದೂ ಅಸಾಧ್ಯವಾಗಲಾರದು. ನಮ್ಮ ಈ ಕಾರ್ಯದಿಂದ ನಮ್ಮ ತೀರ್ಥರೂಪರಿಗೂ ಸಂತೋಷವಾಗಿ, ಅವರ ಆಶೀರ್ವಾದವೂ ದೊರೆಯದಿರಲಾರದು.

ಸಜ್ಜನರ ಪ್ರೋತ್ಸಾಹ-ಸಹಾಯ ದೊರೆತಲ್ಲಿ ಶ್ರೀ ಮಧ್ವಾಚಾರ್ಯರ 37 ಗ್ರಂಥಗಳನ್ನೂ ಪುನರ್ಮುದ್ರಣಗೊಳಿಸಬೇಕೆಂಬ ಮಹದಾಸೆಯನ್ನು ಇಟ್ಟುಕೊಂಡಿದ್ದೇವೆ. ಈವಾಗಲೇ ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಜನತೆಯ ಮುಂದೆ ಇಟ್ಟಿದ್ದೇವೆ. ಪ್ರತಿಗಳು ಮುಗಿಯುತ್ತಾ ಬಂದಿರುವುದು ಸಂತಸದ ಸಂಗತಿ. ಈಗ ಎರಡನೆಯ ಸಂಪುಟವಾಗಿ ೧ ಯತಿ ಪ್ರಣವಕಲ್ಪ ೨. ಋಗ್ಭಾಷ್ಯ, ೩. ಯಮಕ ಭಾರತ ೪. ತಂತ್ರಸಾರ - ಈ ನಾಲ್ಕು ಗ್ರಂಥಗಳು ಪುನರ್ಮುದ್ರಣಗೊಂಡಿವೆ. ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯದಂತೆ ಈ ಪುಸ್ತಕವೂ ಆಸ್ತಿಕರ ಮನೆಯಲ್ಲಿ ಶೋಭಿಸುವಂತಾಗಲಿ.

ಪ್ರೂಫ್ ತಿದ್ದಲು ಸಹಕರಿಸಿರುವವರು : ಶ್ರೀ ರಾಘವೇಂದ್ರ ಪುರಾಣಿಕ, ಸಾಹಿತ್ಯ ವಿದ್ವತ್ ವಿದ್ಯಾರ್ಥಿ ಮತ್ತು ಪರ್ಯಾಯ ಶ್ರೀ ಸೋದೆ ವಾದಿರಾಜ ಮಠದ ಪುರಾಣ ಪ್ರವಚಕ ಹಾಗೂ ಶ್ರೀ ಮುದ್ರಾಡಿ ರಾಮಕೃಷ್ಣ ಆಚಾರ್ಯ, ನಿವೃತ್ತ ಪಂಡಿತರು, ಸಂಸ್ಕೃತ ಕಾಲೇಜು ಪ್ರೌಢಶಾಲೆ, ಉಡುಪಿ.

ಮುದ್ರಣ ಕಾರ್ಯದಲ್ಲಿ ಸಹಕರಿಸಿದವರು - ಮನೋರಮಾ ಆಫ್‌ಸೆಟ್ ಪ್ರಿಂಟರ್ಸ್, ಯೆಯ್ಯಾಡಿ, ಮಂಗಳೂರು ಇದರ ಮಾಲಕರಾದ ಶ್ರೀ ರವಿ ಕುಮಾರ್ ಹಾಗೂ ಶ್ರೀ ಶಶಿ ಕುಮಾರ್ ಸಹೋದರರು.

ಅಗ್ರಹಾರ ಮುದ್ರಣಾಲಯ, ರಥಬೀದಿ, ಉಡುಪಿ ಇದರ ಕೆಲಸ ಮಾಡಿಸುವ ಪಾಲುದಾರ ಶ್ರೀ ವಿಷ್ಣುಮೂರ್ತಿ ಕೆ. ತಂತ್ರಿ ಮತ್ತು ಪಾಲುದಾರ ಶ್ರೀ ಅನಂತಮೂರ್ತಿ ಕೆ. ತಂತ್ರಿ

ಇವರುಗಳೆಲ್ಲರಿಗೂ ನಮ್ಮ ಆತ್ಮೀಯ ಕೃತಜ್ಞತೆಗಳು.

ನಮ್ಮ ಮುಂದಿನ ಪ್ರಕಟಣೆ - ಭಾಗವತ ತಾತ್ಪರ್ಯ

ಇತೀ ಸಜ್ಜನ ವಿದೇಯ

**ಅಗ್ರಹಾರ ಕೆ.ಕೆ. ತಂತ್ರಿ ಮತ್ತು ಸಹೋದರರು**





# ಶ್ರೀ ಕೃಷ್ಣ ಮಠ

ಜಗದ್ಗುರು ಶ್ರೀ ಮನ್ಮಧ್ವಾಚಾರ್ಯ ಸಂಸ್ಥಾನಂ

ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ,

ಉಡುಪಿ - 576 101, ದ.ಕ. ಫೋನ್ : 20598


---

ಶ್ರೀ ಮಧ್ವೇಶ ಹಯವದನಾಯ ನಮಃ

ನಿರ್ಮಥ್ಯೋಽಗ್ರಭವಾರ್ಣವೇ ನಿಜಮನ್ಯೋಽಭೀಷ್ಟಂ ದಿಶಾಮೀತಿಯಃ
ಸಮ್ಯಗ್ಜ್ಞಾಪಯಿತುಂ ಕರೇಣ ವಿಲಸನ್ಮಂಥಾನಮನ್ಯೇನ ಚ ।
ರಮ್ಯಂ ದಾಮ ದಧನ್ಮಹೇಶರಜತಗ್ರಾಮಶ್ರಿಯೋಽಲಂಕೃತಿಃ
ಕರ್ಮಂದೀಶ್ವರಭಕ್ತಿಬಂಧನವಶಃ ಪ್ರೀತೋಽಸ್ತು ಕೃಷ್ಣಃ ಪ್ರಭುಃ ॥
ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥
ಕಾಮಧೇನುರ್ಯಥಾ ಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವಾದಿರಾಜ ಶ್ರೀಪಾದೋಽಭೀಷ್ಟದಃ ಸತಾಮ್ ॥

ಶ್ರೀ ಮದಾನಂದತೀರ್ಥಭಗವತ್ಪಾದರ ಸಿದ್ಧಾಂತ ಅತ್ಯಂತ ನಿರ್ದುಷ್ಟವಾದುದು. ವೇದವಿರುದ್ಧವಾದ ಅನೇಕ ಮತಗಳು ಈ ಲೋಕದಲ್ಲಿ ತಲೆಯೆತ್ತಿದಾಗ ಯೋಗ್ಯಜೀವರಿಗೆ ತತ್ವಾಮೃತವನ್ನು ನೀಡುವ ಉದ್ದೇಶದಿಂದ ಪರಮಾತ್ಮನ ಅಪ್ಪಣೆಯಂತೆ ವಾಯುದೇವರೇ ಮಧ್ವಾಚಾರ್ಯರಾಗಿ ಅವತರಿಸಿದರು. ಪರಮ ಪುರುಷಾರ್ಥವೆನಿಸಿದ ಮೋಕ್ಷವನ್ನು ಪಡೆಯಲು ನಿಜವಾದ ದಾರಿಯನ್ನು ತೋರಿಸಿದರು. ಅದರ ಜೊತೆಯಲ್ಲಿ ಉಳಿದ ಸಿದ್ಧಾಂತಗಳಲ್ಲಿರುವ ಲೋಪದೋಷಗಳನ್ನು ವಿವಿಧ ಪ್ರಮಾಣಗಳಿಂದ ಸಿದ್ಧಪಡಿಸಿ ತೋರಿಸಿದರು. ಈ ರೀತಿ ಅವರು ವಾಸ್ತವ ವಿಚಾರಗಳನ್ನು ಅರಿತಿರುವುದರಿಂದಲೇ ತಮ್ಮ ಶಿಷ್ಯರಿಗೆ ನಾಸ್ಮದುಕ್ತಿಸದೃಶಂ ಹಿತರೂಪಮ್ ಎಂದು ಹೇಳಿದರು. 'ಸ ಏನಾನ್ ಬ್ರಹ್ಮಗಮಯತಿ' ಎಂದು ಉಪನಿಷತ್ತು ಪ್ರತಿಪಾದಿಸಿದಂತೆ ಭಗವಂತನ ಬಳಿಗೆ ಕೊಂಡೊಯ್ಯುವವರು ಚತುರ್ಮುಖ ಬ್ರಹ್ಮದೇವರು. ಅಂತಹ ಚತುರ್ಮುಖ ಬ್ರಹ್ಮದೇವರಾಗುವ ಶ್ರೀ ಮದಾಚಾರ್ಯರು ಪ್ರತಿಪಾದಿಸಿದ ಸಿದ್ಧಾಂತ ಸತ್ಯವಾದುದು ಎನ್ನುವುದರಲ್ಲಿ ಎರಡು ಮಾತಿಲ್ಲ.

ಆಚಾರ್ಯರು ಬರೆದ ಗ್ರಂಥಗಳು ಸರ್ವಮೂಲಗ್ರಂಥಗಳೆಂದೇ ಪ್ರಸಿದ್ಧವಾಗಿವೆ. ಅವರ ಎಲ್ಲಾ ಗ್ರಂಥಗಳೂ ಸಮಾನ ಮಹತ್ವವನ್ನು ಪಡೆದವುಗಳು. ನಾರಾಯಣ ಪಂಡಿತಾಚಾರ್ಯರು ಹೇಳಿದಂತೆ ಮಂದಮತಿಯವರಿಗೂ ಅರ್ಥವಾಗುವಂತಹವುಗಳು. ಪಂಡಿತರಿಗೂ ದುರವಗಾಹಗಳೆನಿಸುವವುಗಳು. ಅವರ ಗ್ರಂಥಗಳಲ್ಲಿ ಅವರ

ಮಾತುಗಳಿಗಿಂತಲೂ ಪ್ರಮಾಣವಾಗಿ ಅವರು ಉಲ್ಲೇಖಿಸಿದ ಗ್ರಂಥಗಳೇ ಅಧಿಕವಾಗಿವೆ. ಪ್ರತಿಯೊಂದು ಪ್ರಮೇಯಕ್ಕೂ ಶ್ರುತಿ-ಸ್ಮೃತಿಗಳ ಆಧಾರಕೊಟ್ಟು ಸ್ಪಷ್ಟಪಡಿಸುತ್ತಾರೆ. ಜ್ಞಾನ ಪ್ರಪಂಚದಲ್ಲಿ ಅವರೊಂದು ಮುಳುಗದ ಸೂರ್ಯನಂತೆ ಇರುವವರು. ಭಗವಂತನನ್ನು ಯಥಾವತ್ತಾಗಿ ತಿಳಿದು ರಚಿಸಿದ ಅವರ ಗ್ರಂಥಗಳು ಆಚಾರ್ಯರ ಪ್ರತೀಕಗಳಂತಿವೆ. ಗುರುಗಳ ಅನುಗ್ರಹ ಅವಶ್ಯಕವಾದುದರಿಂದ, ಅವರ ಅನುಗ್ರಹವನ್ನು ಅವರ ಗ್ರಂಥಗಳ ಅಧ್ಯಯನದಿಂದ ಪಡೆಯಬಹುದು. ಹೀಗಾಗಿ ಅವರ ಗ್ರಂಥಗಳ ಅಧ್ಯಯನ ಅತ್ಯಂತ ಆವಶ್ಯಕವಾಗಿದೆ.

ಆದರೆ ಆ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿರುವುದರಿಂದ, ಆ ಭಾಷೆಯ ಪರಿಚಯವಿಲ್ಲದವರಿಗೆ ಅವುಗಳ ಅಧ್ಯಯನ ಸುಕರವಾಗದು. ಅಂತಹವರೂ ಅಧ್ಯಯನದಿಂದ ವಂಚಿತರಾಗಬಾರದೆಂಬ ಸದುದ್ದೇಶವನ್ನಿಟ್ಟುಕೊಂಡು ಸ್ಥಾಪಿಸಲ್ಪಟ್ಟ ಶ್ರೀ ಮಧ್ವಮುನಿಸೇವಾ ಸಂಘ ಸ್ತುತ್ಯರ್ಹ ಕೆಲಸ ಮಾಡಿದೆ. ಅಂತಹ ಸಮಯದಲ್ಲಿಯೂ ಸಂಘ ಕೈಗೊಂಡ ಸಾಹಸ ಕಾರ್ಯ ನಿಜಕ್ಕೂ ಶ್ಲಾಘನೀಯ. ಅನುವಾದ ಕಾರ್ಯವನ್ನು ಪಂಡಿತವರ್ಯರಾದ ಶ್ರೀಯುತ ದಿವಂಗತ ಅಗ್ರಹಾರ ನಾರಾಯಣ ತಂತ್ರಿಗಳು ಸಮರ್ಥವಾಗಿ ನೆರವೇರಿಸಿದ್ದಾರೆ. ಮೊದಲ ಬಾರಿಗೆ ಸರ್ವಮೂಲ ಗ್ರಂಥಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿದ ಕೀರ್ತಿ ಶ್ರೀಯುತ ತಂತ್ರಿಗಳಿಗೆ ಸಂದಿದೆ.

ಈಗ ಅವರಿಂದ ಅನುವಾದಿತ ಗ್ರಂಥಗಳು ಅನುಪಲಬ್ಧವಾಗಿರುವುದನ್ನು ನೋಡಿ ಅವರ ಸುಪುತ್ರರಾದ ಶ್ರೀಯುತ ಕೆ.ಕೆ. ತಂತ್ರಿ ಮತ್ತು ಅವರ ಸಹೋದರರು ಅವುಗಳನ್ನು ಪುನರ್ಮುದ್ರಿಸುವ ಕಾರ್ಯವನ್ನು ಕೈಗೊಂಡಿರುವುದು ಅಭಿನಂದನೀಯ. ಈ ಸಂಪುಟದಲ್ಲಿ ಆಚಾರ್ಯರ ಯಮಕಭಾರತ, ತಂತ್ರಸಾರ ಸಂಗ್ರಹ, ಯತಿಪ್ರಣವಕಲ್ಪ ಮತ್ತು ಋಗ್ಭಾಷ್ಯ ಎಂಬ ನಾಲ್ಕು ಗ್ರಂಥಗಳನ್ನು ಪ್ರಕಟಿಸುತ್ತಿದ್ದಾರೆ. ಅವುಗಳ ಕುರಿತಾಗಿ ನಾಲ್ಕು ಮಾತುಗಳನ್ನು ಹೇಳುವುದು ಸಮುಚಿತವೆನಿಸುವುದು.

ಯಮಕಭಾರತ ಗ್ರಂಥ ಆಚಾರ್ಯರ ಕಾವ್ಯ ಪ್ರೌಢಿಮೆಯನ್ನು ತೋರಿಸುವ ಗ್ರಂಥವಾಗಿದೆ. ಸಾಮಾನ್ಯವಾಗಿ ಅರ್ಥಾಲಂಕಾರಗಳಿರುವ ಕಾವ್ಯಗಳನ್ನು ಸಾಮಾನ್ಯ ಪಂಡಿತರೂ ಬರೆಯಬಹುದು. ಆದರೆ ಯಮಕ ಮುಂತಾದ ಕ್ಲಿಷ್ಟ ಶಬ್ದಾಲಂಕಾರಗಳಿರುವ ಕಾವ್ಯವನ್ನು ರಚಿಸುವುದು ಪೂರ್ಣ ಪ್ರಮತಿಯಂತಹವರಿಗೇನೇ ಪೂರ್ಣವಾಗಿ ಸಾಧ್ಯವೆನಿಸುವುದು. ಲೌಕಿಕವಾಗಿಯೂ ಚಿತ್ರ ಕವಿತಾ ಶಕ್ತಿಯನ್ನು ತೋರಿಸಿದ ಕೃತಿಯಿದು ಎಂಬುದಾಗಿ ನಾರಾಯಣ ಪಂಡಿತಾಚಾರ್ಯರು ಹೊಗಳಿದ್ದಾರೆ. `ಗೋಪ್ಯಂ ಭಾರತ ಸಂಕ್ಷೇಪಮ್' ಎಂದು ಹೇಳಿದಂತೆ ಕೇವಲ ಎಂಭತ್ತೊಂದು ಶ್ಲೋಕಗಳಲ್ಲಿ `ಸಂಕ್ಷೇಪ' ಎನಿಸಿದ ಭಾರತವನ್ನು ಮತ್ತಷ್ಟು ಸಂಕ್ಷೇಪಗೊಳಿಸಿದ್ದಾರೆ.

ಆಚಾರ ವಿಚಾರಗಳ ಕುರಿತಾಗಿ ಆಚಾರ್ಯರು ಬರೆದ ಗ್ರಂಥಗಳು ಅನೇಕ. ಅವುಗಳಲ್ಲಿ ಬಹಳ ವಿಸ್ತಾರವಾದ ಗ್ರಂಥ ತಂತ್ರಸಾರ ಸಂಗ್ರಹ. ಭಗವಂತನೇ ಚತುರ್ಮುಖ ಬ್ರಹ್ಮದೇವರಿಗೆ ಉಪದೇಶ ಮಾಡಿದ ವಿಷಯಗಳಲ್ಲಿ ಅತ್ಯಂತ ಅವಶ್ಯಕವಾದವುಗಳನ್ನು ಆರಿಸಿ ಈ ಗ್ರಂಥವನ್ನು ರಚಿಸಿರುವರು. `ಪ್ರಣವ'ದ ಕುರಿತಾಗಿ ಆಚಾರ್ಯರು ಇಲ್ಲಿ ವಿಸ್ತೃತವಾದ ವಿವರಣೆಯನ್ನು ನೀಡಿದ್ದಾರೆ. ದೇವಾಲಯಗಳಿಗೆ ಸಂಬಂಧಪಟ್ಟಂತೆ ತಾಂತ್ರಿಕ ವಿಷಯಗಳನ್ನು ಸ್ಪಷ್ಟವಾಗಿ ನಿರೂಪಿಸುವುದರ ಮೂಲಕ ಭಗವತ್ಸಮ್ಮತವಾದ ವಿಚಾರಗಳನ್ನು ತಿಳಿಸಿದ್ದಾರೆ. ಅಂತರ್ಯಾಮಿಯ ಹಿನ್ನೆಲೆಯಲ್ಲಿಯೇ ಎಲ್ಲಾ ಪ್ರಮೇಯಗಳಿವೆ ಎನ್ನುವುದನ್ನು ಪ್ರತಿಪಾದಿಸಿದ್ದಾರೆ. ಪ್ರಧಾನ ವಿಷ್ಣುಮಂತ್ರಗಳನ್ನೂ ಮುಖ್ಯಪ್ರಾಣ ಮೊದಲಾದ ವಿಷ್ಣುಭಕ್ತರ ಮಂತ್ರಗಳನ್ನೂ ಅಂಗನ್ಯಾಸ, ಧ್ಯಾನಶ್ಲೋಕಗಳ ಜೊತೆಯಲ್ಲಿ ಉಲ್ಲೇಖಿಸಿದ್ದಾರೆ.

ಆಚಾರಕ್ಕೆ ಸಂಬಂಧಪಟ್ಟಂತೆ ಆಚಾರ್ಯರ ಇನ್ನೊಂದು ಗ್ರಂಥ `ಯತಿಪ್ರಣವ ಕಲ್ಪ'

ಸನ್ಯಾಸಾಶ್ರಮದ ವಿಧಿವಿಧಾನಗಳನ್ನು ಆಚಾರ್ಯರು ಸಂಕ್ಷೇಪವಾಗಿ ತಿಳಿಸಿದ್ದಾರೆ. ಸಂನ್ಯಾಸಿಯಾಗುವವನ ಅರ್ಹತೆ, ಆಶ್ರಮ ಸ್ವೀಕಾರದ ಆಚರಣಾರೀತಿಗಳು, ಸಂನ್ಯಾಸಿಯಾದವನಲ್ಲಿ ಇರಬೇಕಾದ ಕ್ರಮ ಇವುಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಗ್ರಂಥ ನೀಡುವುದು.

ವೇದದ ಪ್ರತಿಯೊಂದು ಶಬ್ದವೂ ಪ್ರತಿಯೊಂದು ಸ್ವರವೂ ಭಗವಂತನ ಗುಣಗಳನ್ನು ಹೇಳುತ್ತವೆ ಎಂಬುದನ್ನು ತೋರಿಸಿದವರೇ ಆಚಾರ್ಯರು. ಆಪಾತತಃ ಇತರ ದೇವತೆಗಳನ್ನು ಪ್ರತಿಪಾದಿಸುತ್ತಿದ್ದರೂ ಎಲ್ಲವೂ ಪರಮ ಮುಖ್ಯವೃತ್ತಿಯಿಂದ ಭಗವಂತನನ್ನು ತಿಳಿಸುವವು ಎನ್ನುವುದು ಆಚಾರ್ಯರ ಪರಮ ಸಿದ್ಧಾಂತ. ಈ ಎರಡು ಪ್ರಮೇಯಗಳನ್ನು ಪ್ರಾಯೋಗಿಕವಾಗಿ ಆಚಾರ್ಯರು ಋಗ್ಭಾಷ್ಯಗ್ರಂಥದಲ್ಲಿ ಸಮರ್ಥಿಸಿದ್ದಾರೆ. ವೇದಗಳಿಗೆ ಅರ್ಥ ಮಾಡುವಾಗ ಇತಿಹಾಸ, ಪುರಾಣ ಗ್ರಂಥಗಳನ್ನು ಹಾಗೂ ನಿರುಕ್ತ ಮೊದಲಾದ ಗ್ರಂಥಗಳನ್ನು ಇಟ್ಟುಕೊಳ್ಳಬೇಕೆಂದು ತಾವೇ ನಡೆದು ತೋರಿಸಿದ್ದಾರೆ. `ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎನ್ನುವ ಮಾತು ಆಚಾರ್ಯರಲ್ಲಿ ಪರಿಪೂರ್ಣವಾಗಿ ಸಮನ್ವಯಗೊಳ್ಳುವುದು. ಈ ಗ್ರಂಥದ ಮೂಲಕ ವೇದವ್ಯಾಖ್ಯಾನದ ರೀತಿಯನ್ನು ತಿಳಿಸಿದ್ದಾರೆ. ನಲ್ವತ್ತು ಸೂಕ್ತಗಳ ಮೂಲಕ ಸಮಗ್ರ ವೇದ ವಾಙ್ಮಯದ ಅಭಿಪ್ರಾಯ ತೆರೆದು ತೋರಿಸಿದ್ದಾರೆ.

ಆಚಾರ್ಯರ ಒಂದೊಂದು ಕೃತಿಯೂ ಅನರ್ಘ್ಯ. ಅಂತಹ ನಾಲ್ಕು ಗ್ರಂಥಗಳನ್ನು ಒಂದೇ ಸಂಪುಟದಲ್ಲಿ ಸಿಗುವಂತೆ ಶ್ರೀಯುತ ಕೆ.ಕೆ. ತಂತ್ರಿ ಮತ್ತು ಸಹೋದರರು ಮಾಡಿರುತ್ತಾರೆ. ಅವರಿಂದ ಇನ್ನೂ ಅನುವಾದಿತ ಕೃತಿರತ್ನಗಳು ಪ್ರಕಟವಾಗುವಂತಾಗಬೇಕು. ಅದಕ್ಕೆ ಬೇಕಾದ ಉತ್ಸಾಹ, ಸಾಮರ್ಥ್ಯಗಳನ್ನು ಸಮೀರಗುರುರಾಜ ವಂದಿತ ಹಯಗ್ರೀವವೇದವ್ಯಾಸ ಭೂವರಾಹಾತ್ಮಕ ಶ್ರೀ ಕೃಷ್ಣನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

(ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳವರು)
ಮಠಾಧೀಶರು
ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ, ಉಡುಪಿ.

||ಶ್ರೀ:||

# ಗ್ರಂಥಗಳ ಉದ್ದೇಶ, ಪರಿಚಯ.

## - ಯಮಕ ಭಾರತಂ -

'ಶಾಸ್ತ್ರೇಷು ಭಾರತಂ ಸಾರಂ', 'ನ ಭಾರತಸಮಂ ಶಾಸ್ತ್ರಂ', ಇತ್ಯಾದಿ ಪ್ರಮಾಣಗಳಿಂದ ಸರ್ವಶಾಸ್ತ್ರಗಳಿಗಿಂತಲೂ ಭಾರತವು ಶ್ರೇಷ್ಠವು. ಇದಕ್ಕೆ ಸಮಾನವಾದ ಬೇರೆ ಯಾವ ಶಾಸ್ತ್ರವೂ ಇಲ್ಲ. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್'- ಬೇರೆ ಕಡೆಗಳಲ್ಲಿ ಹೇಳಿದ ಪ್ರಮೇಯವೆಲ್ಲವೂ ಇಲ್ಲಿದೆ. ಇದರಲ್ಲಿ ಹೇಳದಿದ್ದ ಪ್ರಮೇಯವು ಎಲ್ಲಿಯೂ ಇಲ್ಲ. ಆದ ಕಾರಣ 'ತಜ್ಜ್ಞಾನಾನ್ಮುಚ್ಯತೇಽಜಸಾ' ಎಂದು ಹೇಳಿದ ಪ್ರಕಾರ ಸರ್ವಶಾಸ್ತ್ರೋತ್ತಮವಾದ ಭಾರತದ ಜ್ಞಾನದಿಂದ ಮೋಕ್ಷ ಹೊಂದಲು ಯೋಗ್ಯನಾಗುತ್ತಾನೆ. ಅಂತಹ ಭಾರತವು ಅತಿವಿಸ್ತೃತವಾಗಿರುವುದರಿಂದ ಸಮಗ್ರವಾಗಿ ತಿಳಿದುಕೊಳ್ಳಲು ಪ್ರಯಾಸ ಸಾಧ್ಯವಾಗಿರುವುದರಿಂದಲೂ, ಪ್ರಾಸಬದ್ಧವಾದ ಕಾವ್ಯರಚನೆಗೆ ಶ್ರೀ ಮದಾಚಾರ್ಯರಿಗೆ ಶಕ್ತಿಯಿಲ್ಲವೆಂಬ ದುರ್ಜನರ ಕುಶಂಕೆಗೆ ಅವಕಾಶ ಕೊಡದೆ ವಿಶ್ವತೋಮುಖ ಪಾಂಡಿತ್ಯವನ್ನು ಪ್ರಕಟೀಕರಿಸುವುದಕ್ಕಾಗಿಯೂ ಶಿಷ್ಯರ ಪ್ರಾರ್ಥನಾನುಸಾರ ಇಡೀ ಭಾರತದ ಅರ್ಥವನ್ನು 'ಯಮಕ ಭಾರತ'ವೆಂಬ ಈ ಪುಟ್ಟ ಗ್ರಂಥದಲ್ಲಿ ಶ್ರೀ ಮಧ್ವಾಚಾರ್ಯರು ನಿರೂಪಿಸಿರುವರು. ಸಾಮಾನ್ಯತಃ ಒಂದೇ ರೀತಿಯ ಪದಗಳನ್ನು ಬೇರೆ ಬೇರೆ ಅರ್ಥಗಳು ಬರುವಂತೆ ಅನೇಕಾವರ್ತಿ ಪ್ರಯೋಗಿಸುವುದು ಯಮಕವು. ಯಮಕ ಶ್ಲೋಕಗಳಿಂದ ಬದ್ಧವಾಗಿರುವುದರಿಂದ ಇದಕ್ಕೆ ಯಮಕ ಭಾರತವೆಂದು ಹೆಸರು. ಈ ಅಭಿಪ್ರಾಯವನ್ನೇ ಭಗವನ್ ಚಿತ್ರಕವಿತಾಂ ಲೌಕಿಕೀಂ ದರ್ಶಯನ್ ಕಿಲ । ಗೋಪ್ಯಂ ಭಾರತಸಂಕ್ಷೇಪಮಕೃಥಾ ವಿಶ್ವವಿಸ್ಮಯಂ (ಮಧ್ವ, ಸ. ೧೫ ಶ್ಲೋ 83) ಆಚಾರ್ಯರೇ! ಲೋಕವಿಷಯಕವಾದ ವಿಚಿತ್ರ ಕವಿತ್ವವನ್ನು ತೋರಿಸುತ್ತಾ ಇಡೀ ಜಗತ್ತಿಗೆ ಆಶ್ಚರ್ಯವನ್ನುಂಟು ಮಾಡತಕ್ಕ, ಇಡೀ ಭಾರತದ ಸಂಕ್ಷೇಪರೂಪವಾದ ಕಾವ್ಯರೂಪ ಗ್ರಂಥವನ್ನು ಮಾಡಿರುವಿರಿ, ಎಂದು ಸುಮಧ್ವವಿಜಯದಲ್ಲಿ ಸೂಚಿಸಿರುತ್ತಾರೆ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ. ಅವುಗಳನ್ನು ಅನುಸರಿಸಿ, ಸಿದ್ಧಾಂತಕ್ಕೆ ವಿರುದ್ಧವಾಗದಂತೆ ಅನುವಾದದಲ್ಲಿ ಪ್ರಯತ್ನಿಸಿರುವೆನು. ಆದ ಕಾರಣ ಈ ಯಮಕಭಾರತವನ್ನು ನಿತ್ಯ ಪಾರಾಯಣ ಮಾಡಿದಲ್ಲಿ ಮಹಾಭಾರತಪಾರಾಯಣದ ಫಲವು ಲಭಿಸುವುದೆಂಬ ಮಾತು ಶಾಸ್ತ್ರ ಸಮ್ಮತವಾಗಿದೆ.

## ___ ತಂತ್ರಸಾರ ___

**ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ಪರ್ಯಾಪ್ತವಾಂಛಿತಃ ।**

**ಅಮರ್ತ್ಯೈರಾಶ್ರಿತಛಾಯಂ ಕಲ್ಪದ್ರುಮಮಿವೋತ್ತಮಮ್ ॥** (ಮ.ಸ. ೧೫, ಶ್ಲೋ. ೭೮) ಕಲ್ಪವೃಕ್ಷದ ನೆರಳು ದೇವತೆಗಳಿಂದ ಹೇಗೆ ಆಶ್ರಿತವಾಗಿದೆಯೋ, ಹಾಗೆಯೇ ಈ ತಂತ್ರಸಾರದ ವರ್ಣ ಪಙ್ಕ್ತಿಗಳು ಭಗವನ್ಮೂರ್ತಿಗಳಿಂದ ತುಂಬಿವೆ ಮತ್ತು ವರ್ಣಾಭಿಮಾನಿಗಳಾದ ಬ್ರಹ್ಮಾದಿದೇವತೆಗಳಿಂದ ಆಶ್ರಿತವಾಗಿದೆ. ಮತ್ತು ತಂತ್ರಸಾರದ ಸಿದ್ಧಾಂತವು ದೇವತೆಗಳಿಂದ ಆಶ್ರಿತವಾಗಿದೆ. ಇಂತಹ ಗ್ರಂಥೋತ್ತಮವಾದ; ತಂತ್ರ ಗ್ರಂಥಗಳಲ್ಲಿ ಶ್ರೇಷ್ಠವಾದ ತಂತ್ರಸಾರಾಖ್ಯ ಗ್ರಂಥವನ್ನು ಹೊಂದಿದವರು ಸರ್ವಾಭೀಷ್ಟಗಳನ್ನು ಹೊಂದುವುದರಲ್ಲಿ ಸಂಶಯಲೇಶವೂ ಇಲ್ಲ, ಎಂದು ಕಲ್ಪವೃಕ್ಷದ ದೃಷ್ಟಾಂತವನ್ನು ಕೊಟ್ಟು ಸುಮಧ್ವ ವಿಜಯದಲ್ಲಿ ಸಮರ್ಥಿಸಿದ್ದಾರೆ. ಈ ತಂತ್ರಸಾರವು ಸಜ್ಜನರ ಸದಾಚಾರಗಳಿಗೆ (ಜಪಪೂಜಾ ಹೋಮಾದಿಗಳಿಗೆ) ಮುಖ್ಯವಾದುದು. 'ತಂತ್ರಂ ವೈ ವೇದ ಸಮ್ಮಿತಂ' = ಈ ಗ್ರಂಥವು ವೇದಗಳಿಗೆ ಸಮಾನವು. ತನೋತಿ ತ್ರಾಯತೇಚ ಎಂಬ ವ್ಯುತ್ಪತ್ತಿಯಿಂದ ಸಜ್ಜನರಿಗೆ ಸರ್ವಾಭೀಷ್ಟಗಳನ್ನು ಕೊಟ್ಟು ಸಂಸಾರಬಂಧದಿಂದ ಬಿಡುಗಡೆಯನ್ನು ಮಾಡಿಸುತ್ತದೆ. ಹಾಗೆಯೇ ತತ್ವಜ್ಞಾನವನ್ನು ವಿಸ್ತಾರಗೊಳಿಸಿ ಮುಕ್ತಿಯನ್ನು ಕೊಟ್ಟು ರಕ್ಷಿಸುವುದು, ಎಂಬ ವ್ಯುತ್ಪತ್ತಿಯಿಂದ 'ತಂತ್ರ' ಎನಿಸಿಕೊಂಡು ಶ್ರೇಷ್ಠವಾದುದು ಅಥವಾ ತಂತ್ರ ಗ್ರಂಥಗಳಲ್ಲಿ ಶ್ರೇಷ್ಠವಾದುದು ತಂತ್ರಸಾರ ಗ್ರಂಥವು. ಶ್ರೀ ಹರಿಯು ಮೂಲ ರೂಪದಿಂದ ತನ್ನ ಮಗನಾದ ಚತುರ್ಮುಖನಿಗೆ ಉಪದೇಶಿಸಿರುವ ಅತಿವಿಸ್ತೃತವಾಗಿರುವ ತಂತ್ರಸಾರ ಎಂಬ ಗ್ರಂಥದಿಂದ ಕೆಲವು ಮುಖ್ಯ ಭಾಗಗಳನ್ನು ಸಂಗ್ರಹಿಸಿಕೊಂಡು ಶ್ರೀ ಮದಾಚಾರ್ಯರು ಮೂಲ ತಂತ್ರಸಾರ ಗ್ರಂಥದ ಸಾರ ಸಂಗ್ರಹರೂಪವಾದ ಈ ತಂತ್ರಸಾರ ಗ್ರಂಥವನ್ನು ರಚಿಸಿರುವರು. ಇದರಲ್ಲಿ ೪ ಅಧ್ಯಾಯಗಳು. ೧ನೇ ಅಧ್ಯಾಯದಲ್ಲಿ

೭೫ ಶ್ಲೋಕ. ೨ನೇ ಅಧ್ಯಾಯದಲ್ಲಿ ೨೪ ಶ್ಲೋಕ. ೩ನೇ ಅಧ್ಯಾಯದಲ್ಲಿ ೧೬೧ ಶ್ಲೋಕಗಳು. ೪ನೇ ಅಧ್ಯಾಯದಲ್ಲಿ ೧೭೮ ಶ್ಲೋಕಗಳು. ಒಟ್ಟು ೪೩೮ ಶ್ಲೋಕಗಳು. ೧ನೇ ಅಧ್ಯಾಯದಲ್ಲಿ ೫೦ ಭಗವನ್ಮೂರ್ತಿಗಳು, ೨೪ ಭಗವನ್ಮೂರ್ತಿಗಳ ಲಕ್ಷಣಾದಿಗಳೂ, ಮಹಾ ಮಂತ್ರಗಳ ಪ್ರಶಂಸೆ, ಪೂಜಾಕ್ರಮ ಇತ್ಯಾದಿಗಳೂ ೨ನೇ ಅಧ್ಯಾಯದಲ್ಲಿ ೫೦ ಅಕ್ಷರಗಳ ನ್ಯಾಸಸ್ಥಾನಾದಿಗಳೂ ಕಲಶ ಪೂಜಾ ಕ್ರಮ, ಅನುಯಾಗ ಕ್ರಮ ಹೋಮಪದ್ಧತಿ, ಕುಂಡದ ಅಳತೆ ಇತ್ಯಾದಿಗಳೂ ೩ನೇ ಅಧ್ಯಾಯದಲ್ಲಿ ಪ್ರತಿಮಾಲಕ್ಷಣಾದಿಗಳೂ ದೇವಾಲಯಕ್ಕೆ ಯೋಗ್ಯ ಸ್ಥಳ, ಚಕ್ರಾಬ್ಜ ಮಂಡಲಾದಿಗಳೂ, ಜೀರ್ಣೋದ್ಧಾರವಿಧಿ, ಇತರ ದೇವತಾ ಪ್ರತಿಷ್ಠೆ ಇತ್ಯಾದಿಗಳೂ, ೪ನೇ ಅಧ್ಯಾಯದಲ್ಲಿ ಭೂವರಾಹಮಂತ್ರಾದಿ ಮಂತ್ರಗಳೂ, ಲಕ್ಷ್ಮೀ ಮಂತ್ರಗಳೂ, ಮುಖ್ಯಪ್ರಾಣ ಮಂತ್ರಾದಿಗಳೂ, ಶಿವಪಂಚಾಕ್ಷರ, ಕ್ಷಿಪ್ರಪ್ರಸಾದ ಮಂತ್ರ ಇತ್ಯಾದಿಗಳೂ, ಗ್ರಂಥದ ಮಹಿಮೆ ಇತ್ಯಾದಿಗಳೂ ನಿರೂಪಿತಗಳಾಗಿವೆ. ಈ ಗ್ರಂಥ ಮಹಿಮೆಯನ್ನು ಶ್ರೀ ಮದಾಚಾರ್ಯರು "ಗ್ರಂಥೋಽಯಂ ಪಾಠಮಾತ್ರೇಣ" ಎಂಬ ಅಂತಿಮ ಶ್ಲೋಕದಲ್ಲಿ ನಿರೂಪಿಸಿದ ಕಾರಣ ಈ ಗ್ರಂಥವು ಆಚಾರ್ಯರು ರಚಿಸಿರುವ ಗ್ರಂಥಗಳಲ್ಲಿ ಅತಿಶ್ರೇಷ್ಠವೆಂದು ತಿಳಿಯುತ್ತದೆ. ಆದಕಾರಣ ಸಜ್ಜನರು ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಬೇಕೆಂಬ ಉದ್ದೇಶದಿಂದ ಶ್ರೀ ಮದಾಚಾರ್ಯರು ನಿರ್ಮಿಸಿರುವ ಈ ಗ್ರಂಥವನ್ನು ಅರ್ಥಜ್ಞಾನ ಪೂರ್ವಕವಾಗಿ ಆಗಲೀ, ಮಂತ್ರತುಲ್ಯವಾದ ಪ್ರಯುಕ್ತ ವೇದದ ಹಾಗೆ ನಿತ್ಯ ಪಠನವನ್ನಾದರೂ ಇಟ್ಟುಕೊಂಡು ಹರಿವಾಯುಗಳ ಪ್ರೀತಿಯನ್ನು ಸಂಪಾದಿಸಿ, ಸಕಲಾಭೀಷ್ಟಗಳನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

**- ಅಗ್ರಹಾರ ನಾರಾಯಣ ತಂತ್ರಿ.**

॥ ॐ ॥

॥ ಓಂ ಶ್ರೀಃ ಓಂ ॥

# ಶ್ರೀ ಮಧ್ವಮಕ ಭಾರತಂ

॥ಶ್ರೀಃ ॥

ವ್ಯಾಸಂ ಭಾರತಕರ್ತಾರಂ ಮಧ್ವಂ ಮೂಲಕೃತಂ ತಥಾ ।
ಚೇತೋವಾಗ್ದೇವತಾಂ ವಾಣೀಂ ಗುರೂಂಶ್ಚ ಪ್ರಣಮಾಮ್ಯಹಂ ॥

ಶ್ರೀ ಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂಲ ॥ ಧ್ಯಾಯೇತ್ತಂ ಪರಮಾನಂದಂ ಯನ್ಮಾತಾ ಪತಿಮಯದಪರಮಾಽಽನಂದಂ ।
ಉಜ್ಝಿತಪರಮಾನಂ ದಂಪತ್ಯಾದ್ಯಾದ್ಯಾಶ್ರಮೈಃ ಸದೈವ ಪರಮಾನಂದಂ ॥ ॥೧॥

ಅರ್ಥ ॥ ಜಗನ್ಮಾತೆಯಾದ ರಮಾದೇವಿಯು ಬ್ರಹ್ಮರುದ್ರಾದಿಗಳಿಂದುತ್ತಮಳಾದಾಗ್ಯೂ, ತನಗೆ ಆನಂದ ಪಡೆಯುವುದಕ್ಕಾಗಿ ಯಾವ ಶ್ರೀ ವಿಷ್ಣುವನ್ನು ಪತಿಯನ್ನಾಗಿ ಹೊಂದಿರುವಳೋ, ಅಂತಹ, ಭಕ್ತರಿಗೆ ಪರಮಾನಂದರೂಪವಾದ ಮೋಕ್ಷವನ್ನು ಕೊಡುವವನೂ, ಬ್ರಹ್ಮಚರ್ಯಾದ್ಯಾಶ್ರಮಗಳಿಗೆ ವಿಹಿತಗಳಾದ ಕರ್ಮಗಳಿಂದ ಕಾಮಕ್ರೋಧಾದಿಗಳನ್ನು ನಿಗ್ರಹಿಸಿಕೊಂಡವರಿಗೆ ಜ್ಞಾನದಾತನೂ, ಆದ ಪರಮಾನಂದರೂಪಿಯಾದ ಶ್ರೀ ವಿಷ್ಣುವನ್ನು ಜ್ಞಾನಿಯು ಧ್ಯಾನಿಸಬೇಕು. ॥೧॥

ಮೂ॥ ಯಸ್ಯ ಕರಾಲೋಽಲಂ ಚಕ್ರಂ ಕಾಲಃ ಪರಸ್ಯ ಹಿ ಕರಾಲೋಲಂ ।
ಯಸ್ಯ ಗದಾ ಪವಮಾನಃ ಸನ್ಯೋ ವ್ಯಾಸೋಽಭವತ್ಸದಾಪವಮಾನಃ । ॥೨॥

ಅ॥ ಅತ್ಯಂತ ಭಯಜನಕಳಾದ ಕಾಲನಾಮಕದುರ್ಗಾದೇವಿಯೇ ಪ್ರಲಯಕಾಲದಲ್ಲಿಯೂ ಇರತಕ್ಕ ಯಾವ ಶ್ರೀ ನಾರಾಯಣನ ಕೈಯಲ್ಲಿ ಚೆನ್ನಾಗಿ ಚಲಿಸುತ್ತಿರುವ ಚಕ್ರಾಭಿಮಾನಿನಿಯಾಗಿರುವಳೋ, ಸರ್ವಜ್ಞರಾದ ವಾಯುದೇವರು ಗದಾಭಿಮಾನಿಯಾಗಿರುವರೋ, ಯಾವ ಶ್ರೀ ಹರಿಯು ಮುಖ್ಯಪ್ರಾಣ ಪರ್ಯಂತ ತನ್ನ ಉದರದಲ್ಲಿರತಕ್ಕ ಜಗತ್ತನ್ನು ಸೃಷ್ಟಿಸುವನೋ, ಅಂತಹ ಶ್ರೀ ಹರಿಯೇ ವೇದವ್ಯಾಸರಾಗಿ ಪರಮಪವಿತ್ರವಾದ ವಾಸಿಸ್ಠರ ವಂಶದಲ್ಲಿ ಅವತರಿಸಿದನು.

ಮೂ॥ ಯಸ್ಯ ರಮಾ ನ ಮನೋಗಂ ಜಗೃಹೇ ವಿಶ್ವಂಭರಾಽಪೀ ನಮನೋಽಗಂ।
ಯಸ್ಯಪುಮಾನಾನಂದಂ ಭುಂಕ್ತೇ ಯದ್ಧಾಮ ಕಪತಿಮಾನಾನಂದಂ ॥ ॥೩॥

ಅ॥ ಸರ್ವಜ್ಞಳಾದ ಲಕ್ಷ್ಮೀದೇವಿಯು ಸರ್ವಜಗದ್ಧಾರಕಳಾದಾಗ್ಯೂ ಯಾವ ವ್ಯಾಸರು ತಿಳಿದುದನ್ನೆಲ್ಲಾ ತಿಳಿಯುವುದಿಲ್ಲವೋ, ಯಾರ ನಮಸ್ಕಾರಸ್ತೋತ್ರಾದಿಗಳನ್ನು ಮಾಡುವವರೇ ಶಾಶ್ವತವಾದ ಆನಂದವನ್ನು ಅನುಭವಿಸುವರೋ, ಯಾರು ಬ್ರಹ್ಮ ರುದ್ರ ರಮಾ ಮುಖ್ಯಪ್ರಾಣಾದಿಗಳಿಗೆ ಆನಂದದಾಯಕರೋ, ಅಂತಹ ವ್ಯಾಸರೇ ಭಕ್ತರಿಗೆ ಅಭೀಷ್ಟದಾಯಕರು.

ಮೂ॥ ಪರಮೇಷು ಯದಾ ತೇಜಃ ಪರಮೇಷು ಚಕಾರ ವಾಸೋದೇವೋ ಜಃ ॥
ಮಾನಧಿ ಬಿಭ್ರತ್ಸು ಮನೋ ಮಾಽನಧಿಮಾಽಽಽಸೀನ್ನ ವಾಸುದೇವೋಽಜಃ ॥೪॥

ಅ॥ (ಜಃ=ಯಃ) ಯಾವ ಶ್ರೀ ಹರಿಯು ಉತ್ಪತ್ತಿಯಿಲ್ಲದವನಾದರೂ, ಇಂದ್ರಾದಿಗಳಿಗಿಂತ ಉತ್ತಮರಾದ ಜ್ಞಾನಪೂರ್ಣ ಮನಸ್ಸುಳ್ಳ ಬ್ರಹ್ಮಾದಿದೇವತೆಗಳಲ್ಲಿ ಅಲೌಕಿಕ ಉತ್ಕೃಷ್ಟಜ್ಞಾನವನ್ನು ಕರುಣಿಸಿರುವನೋ, ಅಂತಹ ಶ್ರೀ ಹರಿಯು ಜ್ಞಾನಪೂರ್ಣಮನಸ್ಸಿನಿಂದ ಸ್ತುತಿಸುವ ಬ್ರಹ್ಮಾದಿಗಳಿಂದ ವಂದ್ಯನಾದ ಪ್ರಯುಕ್ತವೇ ವಾಸುದೇವನೆನಿಸುತ್ತಾನೆ. (ಹೊರತು ವಸುದೇವನಿಂದ ಹುಟ್ಟಿದ ಪ್ರಯುಕ್ತ ವಾಸುದೇವನೆನಿಸಿಕೊಂಡದ್ದಲ್ಲ.) ಮತ್ತು ಲಕ್ಷ್ಮೀದೇವಿಗೆ ಬ್ರಹ್ಮಾದಿಗಳಿಗಿಂತ ಅತ್ಯಧಿಕ ಜ್ಞಾನವನ್ನು ಕರುಣಿಸಿರುವ ಪ್ರಯುಕ್ತವೂ ಆ ಶ್ರೀ ಹರಿಯನ್ನು ವಾಸುದೇವನೆನ್ನುತ್ತಾರೆ. ॥೪॥

ಮೂ॥ ಸೋಽಜನಿ ದೇವಕ್ಯಂತೇ ಯಸ್ಮಾದನುಕಂಪನಾಽವ ದೇವಕ್ಯಂತೇ।
ಅವದನ್ ದೇವ ಕ್ಯಂ ತೇ ಭುವನಂ ಹಿ ಸುರಾಃ ಸದೈವ ದೇವಕ್ಯಂತೇ॥ ॥೫॥

ಅ॥ ದೇವತೆಗಳಿಗೆ ತಾರತಮ್ಯದಿಂದ ಆನಂದವನ್ನು ಹೇಳಿ ದೇವಾಧಿಪತಿಯಾದ ಶ್ರೀ ಹರಿಗೆ ಪೂರ್ಣಾನಂದವನ್ನು ವೇದಾಭಿಮಾನಿ ದೇವತೆಗಳು ಹೇಳಿರುವ ಕಾರಣ ಶ್ರೀ ಕೃಷ್ಣನು ದೇವತೆಗಳ ವಿರೋಧಿಗಳಾದ ದೈತ್ಯರ ನಾಶಕ್ಕಾಗಿ ದೇವಕಿಯ ಸಮೀಪದಲ್ಲಿಯೇ ಪ್ರಾದುರ್ಭವಿಸಿರುವವನು ಹೊರತು ದೇವಕಿಯ ಮಲದಿಂದ ಹುಟ್ಟಿದವನಲ್ಲ. ಬ್ರಹ್ಮಾದಿಗಳು (ಕೃಷ್ಣಾವತಾರಾನಂತರದಲ್ಲಿ) ಶ್ರೀ ಹರಿಯೇ ಬ್ರಹ್ಮಸೃಷ್ಟವಾದ ಜಗತ್ತನ್ನು ರಕ್ಷಿಸು. ನಾವು ಸರ್ವದಾ ನಿನ್ನ ಅಧೀನರೇ. ಆದಕಾರಣ ಭುವನಾಂತರ್ಗತರಾದ ಸಜ್ಜನರಾದ ನಮಗೆ ದೈತ್ಯರಿಂದ ನಾಶವು ಪ್ರಾಪ್ತವಾಗಲು ಕರುಣೆಯಿಂದ ರಕ್ಷಿಸು. ಹೀಗೆ ಶ್ರೀಕೃಷ್ಣನನ್ನು ಸ್ತುತಿಸಿದರು. ॥೫॥

ಮೂ॥ ನೀತೋ ವಸುದೇವೇನ ಸ್ವತತೇನ ಸ ಗೋಕುಲಂ ಸುವಸುದೇವೇನ।
ತತ್ರ ಯಶೋದಾ ತನಯಂ ಮೇನೇ ಕೃಷ್ಣಂ ಸ್ವಕೀಯಮವದಾತನಯಂ ॥೬॥

ಅ॥ ತಂದೆಯೆಂದೆನಿಸಿದ ವಸುದೇವನು ಶ್ರೀ ಕೃಷ್ಣನನ್ನು ನಂದಗೋಕುಲಕ್ಕೆ ಒಯ್ದನು. ನಂದಗೋಪನ ಹೆಂಡತಿಯಾದ ಯಶೋದಾದೇವಿಯೂ ದ್ರೋಣನೆಂಬ ವಸುವಿನ ಸ್ವರೂಪನಾದ ನಂದಗೋಪನೂ ನಿತ್ಯಮುಕ್ತನೂ, ಸರ್ವೋತ್ತಮನೂ ಆದ ಶ್ರೀ ಕೃಷ್ಣನನ್ನು ತಮ್ಮ ಮಗನೆಂದೇ ಚೆನ್ನಾಗಿ ತಿಳಿದುಕೊಂಡರು. ॥೬॥

ಮೂ॥ ವವೃಧೇ ಗೋಕುಲಮಧ್ಯಾ ದ್ಯೋ ದೇವೋ ವಿಶ್ವಮದ್ಭುತಾಕುಲಮಧ್ಯಾತ್।
ತತ್ರ ಚ ಪೂತನಿಕಾಯಾ ವಧಮಕರೋದ್ಯನ್ನಿಜಾಃ ಪೂತನಿಕಾಯಾಃ॥ ॥೭॥

ಅ॥ ಸ್ವರ್ಗಾದಿಸರ್ವಲೋಕಗಳಿಗೂ ಒಡೆಯನಾದ ಶ್ರೀ ಕೃಷ್ಣನು ಅಜ್ಞರ ದೃಷ್ಟಿಯಿಂದ ವೃದ್ಧಿಯನ್ನು ಹೊಂದಿದವನಂತೆ ತೋರಿಸುತ್ತಿದ್ದನು. (ವಸ್ತುತಃ ವೃದ್ಧಿಹ್ರಾಸ ಶೂನ್ಯನು.) (ಏಕೆಂದರೆ) ಹೇಳಲಶಕ್ಯವಾಗುವಂತೆ ವ್ಯಾಕುಲೀಭೂತವಾದ ವಿಶ್ವವನ್ನು ಸರ್ವಾತ್ಮನಾ ಸಂಹರಿಸುವ, ಪ್ರಲಯಕಾಲದಲ್ಲಿಯೂ ಇರುವ ಶ್ರೀ ಕೃಷ್ಣನಿಗೆ ಈಗ ವೃದ್ಧಿಹ್ರಾಸಾದಿಗಳು ಹೇಗೆ ಕೂಡುವುದು? ಹಾಗೆಯೇ ಗೋಕುಲದಲ್ಲಿರುವಾಗ ಪೂತನಿಕಾ ಎಂಬ ರಾಕ್ಷಸಿಯನ್ನು ಸಂಹರಿಸಿದ ಪ್ರಯುಕ್ತ ಸ್ತ್ರೀ ಹತ್ಯಾದೋಷವು ಹೇಗೆ ಬರುವುದು? ಸರ್ವಥಾ ಬರಲಾರದು. ಏಕೆಂದರೆ - ಶುದ್ಧರಾದ ತನ್ನ ಭಕ್ತರು ಕರ್ಮವಶಾತ್ ನೀಚಯೋನಿಯನ್ನು ಹೊಂದಿದರೂ ಯಾವ ಶ್ರೀ ಕೃಷ್ಣನ ಭಕ್ತರಾಗಿದ್ದರೆ ಪೂತರಾಗುತ್ತಾರೋ, ಅಂತಹ ಶ್ರೀ ಕೃಷ್ಣನಿಗೆ ಸ್ತ್ರೀಹತ್ಯಾ ಪಾಪವು ಹೇಗೆ ಸಂಭವಿಸುವುದು? ॥೭॥

ಮೂ॥ ಅಧುನೋಚ್ಚಕಟಂ ಲೋಲೀ ಪಾದಾಂಗುಷ್ಠೇನ ವಾತಪೇಶಶಕಟಂ ಲೋಲೀ।
ಅತನೋದ್ರಕ್ಷಾಮಸ್ಯ ಸ್ವಾಜ್ಞಾನಾದ್ಗೋಪಿಕಾ ಸದೇರಕ್ಷಾಮಸ್ಯ॥ ॥೮॥

ಅ॥ ಬಂಡಿಯ ಕೆಳಗಡೆ ಮಲಗಿಸಲ್ಪಟ್ಟ ಶ್ರೀಕೃಷ್ಣನು ಬಂಡಿಯ ಸಮೀಪಕ್ಕೆ ಚಲಿಸಿಕೊಂಡು ಹೋಗಿ ಕಾಲಿನ ಹೆಬ್ಬೆರಳೊಂದರಿಂದಲೇ ಶಕಟಾಸುರನನ್ನು ಸಂಹರಿಸಿದನು. ಶೇಷಶಾಯಿಯೂ, ಸರ್ವಜಗತ್ಪ್ರವರ್ತಕನೂ, ಪ್ರಾಣೋತ್ತಮನೂ, ರಮಾರಕ್ಷಕನೂ, ಅಪರಿಚ್ಛಿನ್ನನೂ, ಆದ ಶ್ರೀ ಕೃಷ್ಣನ ಮಹಿಮೆಯನ್ನರಿಯದೆ ಭಯನಿವಾರಣೆಗಾಗಿ ಯಶೋದಾದೇವಿಯು ಮಂತ್ರಾದಿಗಳಿಂದ ರಕ್ಷೆಮಾಡಿದಳಂತೆ. ॥೮॥

ಮೂ|| ಮುಖಲಾಲಸಲೋಲಾ ತನ್ಮುಖಗಂ ಜಗದಚಷ್ಟ ಸಾಲಸಲೋಲಾತತ್ ।
ನಾಧ್ಯೈನ್ಮಾಯಾಮಸ್ಯ ಜಗತ್ಪ್ರಭೋಃ ಸ್ವಾಧಿಕತತತಮಾಯಾಮಸ್ಯ|| ||೯||

ಅ|| ಯಶೋದೆಯು ಶ್ರೀ ಕೃಷ್ಣನ ಮುದ್ದು ಮುಖದ ಚುಂಬನಾದಿಗಳಲ್ಲಿ ಆಸಕ್ತಳಾಗಿರುವಾಗ ಭಗವದ್ರಕ್ಷಿತ ಚೇತನಾಚೇತನಾತ್ಮಕ ಆವರಣ ಸಹಿತ ಇಡೀ ಬ್ರಹ್ಮಾಂಡವನ್ನೇ ಶ್ರೀ ಕೃಷ್ಣನ ಪುಟ್ಟಬಾಯಿಯಲ್ಲಿಯೇ ಕಂಡು ಬೆಚ್ಚಿ ಬೆರಗಾದಳು. ಹೀಗಾದರೂ ಯಶೋದೆಯು ಅತ್ಯುತ್ತಮವೂ ವ್ಯಾಪ್ತವೂ ಆದ ಗುಣಕ್ರಿಯಾದಿಗಳ ವಿಸ್ತಾರವುಳ್ಳ, ಸರ್ವಜಗತ್ಸೃಷ್ಟ್ಯಾದಿಕರ್ತನಾದ ಶ್ರೀ ಕೃಷ್ಣನ ಮಹಿಮೆಯನ್ನು ಪೂರ್ಣವಾಗಿ ಅರಿತುಕೊಂಡಿಲ್ಲವಷ್ಟೆ. ||೯||

ಮೂ || ತಸ್ಯ ಸುಶರ್ಮಾಣ್ಯಕರೋ ದರಿಣೋ ಗರ್ಗ ಸದುಕ್ತಿಕರ್ಮಾಣ್ಯಕರೋತ್ ।
ಅವದನ್ನಾಮಾನಮಯಂ ಜಗದಾದಿಂ ವಾಸುದೇವನಾಮಾನಮಯಂ|| ||೧೦||

ಅ|| ಮುಕ್ತರಿಂದ ಪ್ರಾಪ್ಯನಾದ ಶ್ರೀ ವಿಷ್ಣುವನ್ನು ಪೂಜಿಸುತ್ತಿರುವ (ಯಾದವರಿಗೆ ಪುರೋಹಿತರಾದ) ಗರ್ಗಾಚಾರ್ಯರು ಶಂಖಪಾಣಿಯಾದ ಶ್ರೀ ಕೃಷ್ಣನಿಗೆ ವೇದೋಕ್ತಪ್ರಕಾರ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದರು. ಗರ್ಗಾಚಾರ್ಯರು ವೇದಾದಿ ಪ್ರಮಾಣಗಳಿಂದ ಸಾಕಲ್ಯೇನ ಅಜ್ಞೇಯನೂ, ಸರ್ವಜಗತ್ಪ್ರೇರಕನೂ, ಸರ್ವಜಗತ್ಸೃಷ್ಟಿಕರ್ತನೂ, ಆದ ಶ್ರೀ ಕೃಷ್ಣನಿಗೆ ವಾಸುದೇವನೆಂಬ ಹೆಸರನ್ನಿಟ್ಟು ನಂದಾದಿಗಳಿಗೆ ಶ್ರೀ ಕೃಷ್ಣನು ಸಾಕ್ಷಾತ್ ಶ್ರೀ ನಾರಾಯಣನ ಅವತಾರಭೂತನೆಂದುಪದೇಶಿಸಿದರು. ||೧೦||

ಮೂ|| ತಸ್ಯ ಸಖಾ ಬಲನಾಮಾ ಜ್ಯೇಷ್ಠೋ ಭ್ರಾತಾಽಥ ಯನ್ನಿಜಾ ಬಲನಾ ಮಾ।
ಯಸ್ಯ ಚ ಪರ್ಯಂಕೋಽಯಂ ಪೂರ್ವತನೋ ವಿಷ್ಣುಮಜಸಪರ್ಯಂ ಕೋಽಯಂ|| ||೧೧||

ಅ || ಶ್ರೀ ಕೃಷ್ಣನ ಅಣ್ಣನಿಗೆ ಬಲನೆಂಬ ಹೆಸರನ್ನು (ಗರ್ಗಾಚಾರ್ಯರು ಇಟ್ಟರು.) ಆ ಬಲರಾಮನು ಶ್ರೀ ಕೃಷ್ಣನಿಗೆ ಪ್ರಿಯನೂ, ಜ್ಯೇಷ್ಠನೂ ಆಗಿದ್ದನು. ಲಕ್ಷ್ಮೀದೇವಿಯು ಯಾವ ಶ್ರೀ ಕೃಷ್ಣನಿಗೆ ಸ್ವಾಭಾವಿಕವಾಗಿ ಆವರಣರೂಪಳೋ, ಪ್ರಿಯಪತ್ನಿಯೋ ಯಾವ ಶ್ರೀ ಕೃಷ್ಣನಿಗೆ ಬಲರಾಮನು ಮೂಲರೂಪದಲ್ಲಿ ಶಯ್ಯಾರೂಪನೋ, ಅಂತಹ ಹಾಸಿಗೆಯಾಗಿದ್ದ ಶೇಷರೂಪನಾದ ಬಲರಾಮನೆಲ್ಲಿ? ಬ್ರಹ್ಮಾದಿಗಳಿಂದ ಪೂಜಿಸಿಕೊಳ್ಳುವ ಸಾಕ್ಷಾತ್ ವಿಷ್ಣುಸ್ವರೂಪನಾದ ಶ್ರೀ ಕೃಷ್ಣನೆಲ್ಲಿ? (ಆದ ಕಾರಣ ಪ್ರಿಯತ್ವ ಜ್ಯೇಷ್ಠತ್ವಾದಿಗಳು ಅವತಾರ ಪ್ರಯುಕ್ತವೇ ಹೊರತು ಸ್ವಾಭಾವಿಕವಾದುದಲ್ಲ.)

ಮೂ|| ತೇನ ಹತೋ ವಾತರಯಸ್ತೃಣಚಕ್ರೋ ನಾಮ ದಿತಿಸುತೋಽವಾತರಯಃ ।
ಹರಮಾಹೋ ಬಾಲತಮಂ ಸ್ವಾತ್ಮಾನಂ ಕಂಠರೋಧಿನಾಽಬಾಲತಮಂ|| ||೧೨||

ಅ|| ವಾಯುವಂತೆ ವೇಗವುಳ್ಳ ತೃಣಾವರ್ತನೆಂಬ ದೈತ್ಯನು ವ್ಯಾಪ್ತಪರಿಮಾಣವುಳ್ಳವನಾದುದರಿಂದಲೇ ಶ್ರೀ ಕೃಷ್ಣನ ಇಚ್ಛೆಯಿಲ್ಲದೆ ಯಾರಿಂದಲೂ ಒಯ್ಯಲಶಕ್ಯನಾದ ಸರ್ವಸ್ವತಂತ್ರನಾದ ಲಕ್ಷ್ಮೀಪತಿಯಾದ ಶ್ರೀ ಕೃಷ್ಣನನ್ನು ಚಿಕ್ಕಮಗುವೆಂದು ತಿಳಿದು ವಾಯುವೇಗದಿಂದ ಆಕಾಶಕ್ಕೆ ಒಯ್ದು ಆತನ ಕುತ್ತಿಗೆಯನ್ನು ಅಮುಕಿ ಹಿಡಿದು ಕೊಲ್ಲಲಿಚ್ಛಿಸಿದಾಗ ಶ್ರೀ ಕೃಷ್ಣನು ದೈತ್ಯನ ಕಂಠದಲ್ಲಿ ಶ್ವಾಸವಾಯುವನ್ನು ನಿರೋಧಿಸಿ ಶ್ವಾಸೋಚ್ಛ್ವಾಸವಿಲ್ಲದವನನ್ನಾಗಿ ಮಾಡಿ ಸಂಹರಿಸಿದನು. ||೧೨||

ಮೂ || ಸೋಽವನಿಮಧ್ಯೇ ರಂಗನ್ನರಿದರಯುಕ್ ಬಾಲರೂಪಮಧ್ಯೇರಂ ಗನ್ ।
ಅಮುಷನ್ನವನೀತಮದಃ ಸಗೋಕುಲೇ ಗೋಪಿಕಾಸುನವನೀತಮದಃ|| ||೧೩||

ಅ|| ಗೋಕುಲದಲ್ಲಿದ್ದ ಗೃಹ ಪ್ರದೇಶದ ಮಧ್ಯದಲ್ಲಿ ಎಲ್ಲಾ ಇತರ ಬಾಲಕರಂತೆ ಆಡುತ್ತಿದ್ದು ಚಕ್ರ ಶಂಖಧಾರಿಯಾದ ಶ್ರೀಕೃಷ್ಣನು ಬಾಲರೂಪಿವಾಯುವನ್ನೇರಿ ಸುತ್ತಲೂ ಸಂಚರಿಸುತ್ತಾ ಗೋಪಿಕಾ ಸ್ತ್ರೀಯರ ಸ್ತೋತ್ರದಿಂದ ಮತ್ತನಾಗಿ ಅವರಿಗೆ ಆನಂದವನ್ನುಂಟುಮಾಡುತ್ತಾ ಅವರಿಗೆ ಚೌರ್ಯದಿಂದ ಅನುಗ್ರಹ ಸುಖವನ್ನು ದಯಪಾಲಿಸುವುದಕ್ಕಾಗಿ ಮೇಲೆ ಸಿಕ್ಕದಲ್ಲಿ ಮುಚ್ಚಿಟ್ಟಿದ್ದ ಬೆಣ್ಣೆಯ ಮುದ್ದೆಯನ್ನು ಕದ್ದನು.

ಮೂ|| ತನ್ಮಾತಾ ಕೋಪಮಿತಾ ತಮನುಸಸಾರಾತ್ಮವಾದ ವಾಕೋಪಮಿತಾ ।
ಜಗೃಹೇ ಸಾಽನಮನಂ ತಂ ದೇವಂ ತಚ್ಚಿಂತಯೈವ ಸಾನಮನಂತಂ|| ||೧೪||

ಅ|| ಶ್ರೀ ಕೃಷ್ಣನ ಕಳ್ಳತನವನ್ನು ಕೇಳಿ ಸಿಟ್ಟುಗೊಂಡ ತಾಯಿಯಾದ ಯಶೋದೆಯು ಓಡುತ್ತಿರುವ ಶ್ರೀಕೃಷ್ಣನನ್ನು, ಆಪಾತತಃ ತೋರುವ ಕರ್ಮಾದಿರೂಪವಾದ ಅರ್ಥವನ್ನು ತೊರೆದು ಮುಖ್ಯತಃ ಭಗವತ್ಪ್ರತಿಪಾದಕವೇ ಆದ ವೇದವಾಕ್ಯದಂತೆ ಗೃಹಕೃತ್ಯಗಳನ್ನೆಲ್ಲಾ ಬಿಟ್ಟು ಬಿಟ್ಟು ಬೆನ್ನಟ್ಟಿ ಓಡಿದಳು. ಯಾರಿಗೂ ಹಿಡಿಯಲಶಕ್ಯನೂ ಯಾರಿಗೂ ನಮಸ್ಕರಿಸದವನೂ, ಜಗದ್ವ್ಯಾಪಾರಯುಕ್ತನೂ, ಸ್ವತಂತ್ರೇಚ್ಛನೂ, ಅಪರಿಚ್ಛಿನ್ನನೂ ಆದ ಶ್ರೀಕೃಷ್ಣನನ್ನು ಯಶೋದೆಯು ತನ್ನನ್ನು ಹಿಡಿಯಲಿ, ಎಂಬ ಶ್ರೀ ಕೃಷ್ಣನ ಇಚ್ಛೆಯಿಂದಲೇ ಹಿಡಿಯುವವಳಾದಳು. ||೧೪||

ಮೂ|| ಅಥ ಸಾಽಂತರಿತಾಮಾನಂ ವಿಷ್ಣುಂ ವಿಶ್ವೋದ್ಭವಂ ಸದಾಽಂತರಿತಾಮಾನಂ ।
ಅನಯದ್ದಾಮೋದರತಾಂ ಯೋಽರಮಯತ್ಸುಂದರೀಂ ನಿಜಾಮೋದರತಾಂ|| ||೧೫||

ಅ|| ಆ ಮೇಲೆ ಜ್ಞಾನಾನಂದಾದಿಗುಣಸ್ವರೂಪನಾದ ತನ್ನಲ್ಲಿ (ಶ್ರೀಕೃಷ್ಣನಲ್ಲಿ)ಯೇ ಸ್ನೇಹಭರಿತಳಾದ ಸುಂದರಿಯಾದ ಲಕ್ಷ್ಮೀರೂಪದುರ್ಗೆಯನ್ನೇ ಸದಾ ಯಾವ ಶ್ರೀ ಕೃಷ್ಣನು ರಮಿಸುತ್ತಿರುವನೋ, ಅಂತಹ ಸಮಸ್ತವಸ್ತುಗಳ ಜ್ಞಾನವುಳ್ಳವನೂ, (ಬ್ರಹ್ಮ ರಮಾಮುಖ್ಯಪ್ರಾಣರನ್ನುದರದೊಳಗೆ ಧರಿಸಿರುವವನೂ) ವ್ಯಾಪ್ತನೂ, ಸರ್ವಜಗತ್ಸೃಷ್ಟಿಕರ್ತನೂ, ಸದಾ ಬಂಧಕ್ಕೆ ಸಿಗಲಾರದವನೂ ಆದ ಶ್ರೀ ಕೃಷ್ಣನನ್ನು ಯಶೋದೆಯು ಹಗ್ಗದಿಂದ ಕಟ್ಟಿಹಾಕಿದಳು. ||೧೫||

ಮೂ|| ಚಕ್ರೇ ಸೋಽರ್ಜುನನಾಶಂ ಪ್ರಾಪ್ನೋತಿ ಯತ್ಸ್ಮೃತಿಃ ಸದಾಽರ್ಜುನನಾಂ ಶಂ।
ತೌ ಚ ಗತೌ ನಿಜಮೋಕಃ ತೇನೈವ ನುತೇನ ಯನ್ನಿಜಾನಿಜಮೋಕಃ|| ||೧೬||

ಅ|| ಯಾವ ಶ್ರೀ ಕೃಷ್ಣನ ಸ್ಮರಣೆಮಾತ್ರದಿಂದಲೇ ಪುರುಷನು ಶುದ್ಧನಾಗಿ ನಿತ್ಯ ಸುಖ ಸ್ವರೂಪ ಮೋಕ್ಷವನ್ನು ಹೊಂದುತ್ತಾನೋ, ಅಂತಹ ಶ್ರೀ ಕೃಷ್ಣನು ೨ ಸರಳೀ ವೃಕ್ಷ (ಮತ್ತಿಮರ)ಗಳನ್ನು ಮುರಿದನು. ಆ ವೃಕ್ಷ ಶರೀರರೂಪರಾದ ಶಾಪಗ್ರಸ್ತರಾದ ನಲಕೂಬರ ಮಣಿಗ್ರೀವನೆಂಬ ಸುರರು ಶ್ರೀ ಕೃಷ್ಣನನ್ನು ಸ್ತುತಿಸಿ ಆತನ ಅನುಗ್ರಹದಿಂದಲೇ ಶಾಪದಿಂದ ಬಿಡುಗಡೆಹೊಂದಿ ಸ್ವರ್ಗಸ್ಥಾನವನ್ನು ಹೊಂದಿದರು. ಅವರಲ್ಲಿ ಅವಿಷ್ಟರಾದ ಧುನಿ, ಚಮು ಎಂಬ ದೈತ್ಯರು ತಮಸ್ಸನ್ನು ಹೊಂದಿದರು. ತನ್ನ ಭಕ್ತರಿಗೂ ದ್ವೇಷಿಗಳಿಗೂ ಅವರವರಿಗೆ ಯೋಗ್ಯವಾದ ಸ್ಥಾನಗೊಳಿಸುವುದು ಶ್ರೀ ಪರಮಾತ್ಮನ ಸ್ವಭಾವವು. ||೧೬||

ಮೂ|| ಅಥ ವೃಂದಾವನವಾಸಂ ಗೋಪಾಃ ಚಕ್ರುರ್ಜಗಚ್ಛ್ರಿತಾಽವನವಾಸಂ ।
ತತ್ರ ಬಕಾಸುರಮಾರಃ ಶೌರಿರಭೂನ್ನಿತ್ಯಸಂಶ್ರಿತಾಸುರಮಾರಃ|| ||೧೭||

ಅ|| ಸರಳೀವೃಕ್ಷಗಳು ಬಿದ್ದ ಮೇಲೆ ಗೊಲ್ಲರು (ಆ ಊರನ್ನೇ ಬಿಟ್ಟು) ಸರ್ವಜಗತ್ಪ್ರಭುವಾದ ಶ್ರೀ ಕೃಷ್ಣನೊಡನೆ (ಶ್ರೀ ಕೃಷ್ಣನ ಆವಾಸದಿಂದ) ಸ್ವರ್ಗತುಲ್ಯವಾದ ವೃಂದಾವನದಲ್ಲಿ ಆವಾಸ ಮಾಡಿದರು. ಶ್ರೀ ವೃಂದಾವನದಲ್ಲಿ ಜಗನ್ನಾಶಕರಾದ ಮುಖ್ಯಪ್ರಾಣ, ತಮೋಭಿಮಾನಿಯಾದ ದುರ್ಗಾದೇವಿ ಇವರಿಗೆ ಆಶ್ರಯನೂ, ರತಿಪ್ರದನೂ ಆದ ಶ್ರೀಕೃಷ್ಣನು ಬಕಾಸುರನನ್ನು ಸಂಹರಿಸಿದನು.||೧೭||

ಮೂ|| ಅಹನದ್ವತ್ಸತನೂಕಂ ಯೋಽಪಾಲ್ಲೋಕಂ ಸ್ವಯತ್ನವತ್ಸತನೂಕಂ ।
ಸೋಽಪಾದ್ವತ್ಸಾನಮರಃ ಸಹಾಗ್ರಜೋ ಗೋಪವತ್ಸವತ್ಸಾನನಮರಃ|| ||೧೮||

ಅ|| ಶ್ರೀ ವಿಷ್ಣುವಿಗಿಂತ ಅಧಮರಾದ ರುದ್ರ, ಬ್ರಹ್ಮಾದಿದೇವತೆಗಳಿಂದೊಡಗೂಡಿದ ಚೇತನಾ ಚೇತನಾತ್ಮಕ ನಿಖಿಲಜಗತ್ತನ್ನು ಪ್ರಯತ್ನವಿಲ್ಲದ ಪುರುಷನಂತೆ ಅನಾಯಾಸದಿಂದಲೇ ರಕ್ಷಿಸುತ್ತಿರುವವನೂ, ಮರಣಶೂನ್ಯನೂ, ಪ್ರಾಣ ಲಕ್ಷ್ಮಿಯವರಿಂದ ಸಹಿತವಾದ ಜಗತ್ತಿಗೆ ಸುಖವನ್ನುಂಟು ಮಾಡುವವನೂ ಆದ ಯಾವ ಶ್ರೀ ಕೃಷ್ಣನು ಗೊಲ್ಲರ ಮಕ್ಕಳಂತೆ ಅಣ್ಣನಾದ ಬಲರಾಮನಿಂದ

ಕೂಡಿಕೊಂಡು ಕರುಗಳನ್ನು ಮೇಯಿಸುತ್ತಿದ್ದನೋ, ಅಂತಹ ಶ್ರೀ ಕೃಷ್ಣನು ಕರುವಿನ ರೂಪತಾಳಿ ಬಂದ ವತ್ಸಾಸುರನನ್ನು ಸಂಹರಿಸಿದನು. ||೧೮||

**ಮೂ|| ಸ ವಿಭುಃ ಶ್ರೀಮಾನಹಿಕೇ ನನರ್ತ ಯಸ್ಯ ಶ್ರಮಾನಮಾ ಮಾ ನ ಹಿ ಕೇ |**
**ಅಕರೋನ್ನದ್ಯುದಕಾಂತಂ ಕಾಂತಂ ನೀತ್ವೋರಗಂ ಸ ನಾಽಽದ್ಯುದಕಾಂತಂ|| ||೧೯||**

ಅ|| ಸರ್ವಸಮರ್ಥನಾದ ಶ್ರೀ ಕೃಷ್ಣನು ಕಾಳಿಂಗಸರ್ಪದ ಶಿರಸ್ಸಿನಲ್ಲಿ ಕುಣಿದಾಡಿದವನಾದಾಗ್ಯೂ ಕಾಂತಿಯುಳ್ಳವನೇ ಆದನು. (ಅಂದರೆ ಸರ್ಪನ ವಿಷದಿಂದ ಶರೀರದ ಕಾಂತಿಯು ಕೆಡಲಿಲ್ಲ.) ಪ್ರಲಯೋದಕದಲ್ಲಿ ಶೇಷಶಾಯಿಯಾದ ಯಾವ ಶ್ರೀಕೃಷ್ಣನ ಶರೀರ ಕಾಂತಿಯು ಶ್ರಮಪ್ರಯುಕ್ತ ಅತ್ಯಲ್ಪ ಸಂಕೋಚವುಳ್ಳದ್ದೂ ಆಗಲಿಲ್ಲವೋ, ಅಂತಹ ಲಕ್ಷ್ಮೀಪತಿಯಾದ ಪರಮಪುರುಷನಾದ ಶ್ರೀಕೃಷ್ಣನಿಗೆ ಸರ್ಪಮಸ್ತಕದಲ್ಲಿ ನರ್ತನಮಾತ್ರದಿಂದ ಶೋಭೆಗೆ ಹಾನಿ ಬಂದಿಲ್ಲವೆಂಬುವದು ಆಶ್ಚರ್ಯಕರವಲ್ಲ. ಶ್ರೀಕೃಷ್ಣನು ಯಮುನಾನದಿಯ ನೀರನ್ನು ವಿಷದಿಂದ ಕೆಡಿಸುತ್ತಿರುವ ಕಾಳಿಂಗನನ್ನು ಸಮುದ್ರದ ಮಧ್ಯದಲ್ಲಿರುವ ರಮಣಕದ್ವೀಪಕ್ಕೆ ಕಳುಹಿಸಿಕೊಟ್ಟು ನದಿಯ ನೀರನ್ನು ನಿರ್ವಿಷವನ್ನಾಗಿ ಮಾಡಿದನು. ||೧೯||

**ಮೂ|| ಹತ್ವಾ ಧೇನುಕಮೂಢಂ ಬಲಾತ್ಪ್ರಲಂಬಂ ಭ ಖೇಟ್ ಸಧೇನುಕಮೂಢಂ |**
**ವಜ್ರಮಾವೀದಮೃತಾಶಃ ಪೀತ್ವಾ ವಹ್ನಿಂ ಚರಸ್ಥಿರಾದಮೃತಾಶಃ|| ||೨೦||**

ಅ || ಧೇನುಕಾಸುರನಿಗೆ ದೀರ್ಘಾಯುಷ್ಯವರವಿತ್ತ ಆಕಾಶಾಭಿಮಾನಿಯಾದ ಗಣಪತಿಗೆ ನಿಯಾಮಕನೂ, ಸತ್ಯಸಂಕಲ್ಪನೂ ಆದ ಶ್ರೀಕೃಷ್ಣನು, ತಾನೇ ಮೂರ್ಖನಾದ ಧೇನುಕಾಸುರನನ್ನೂ, ಬಲರಾಮನನ್ನು ಹೊತ್ತಿರುವ ಪ್ರಲಂಬಾಸುರನನ್ನು ಬಲರಾಮನಲ್ಲಿ ಅವಿಷ್ಟವಾದ ತನ್ನ ಶುಕ್ಲಕೇಶರೂಪದಿಂದಲೂ ಸಂಹರಿಸಿ ಆನಂದಾಮೃತವನ್ನು ಉಣ್ಣುತ್ತಿದ್ದರೂ, ಚರಾಚರವಸ್ತುಗಳನ್ನೆಲ್ಲಾ ಭಕ್ಷಿಸುತ್ತಿರುವ ಕಾಡುಕಿಚ್ಚನ್ನು ಕುಡಿದು ನಂದಗೋಕುಲವನ್ನೂ, ಗೋವುಗಳ ಗುಂಪನ್ನೂ ರಕ್ಷಿಸಿದನು. ||೨೦||

**ಮೂ|| ಗಿರಿಣಾ ರಕ್ಷಾಽಪಿ ಕೃತಾ ವ್ರಜಸ್ಯ ತೇನ ಸ್ವರಕ್ಷರಕ್ಷಾಪಿಕೃತಾ |**
**ಶಕ್ರಾಯ ವ್ಯಂಜಯತಾ ಸ್ವಾಂ ಶಕ್ತಿಂ ವಿಶ್ವಮಾತ್ಮನಾಽವ್ಯಂ ವ್ಯಂಜಯತಾ|| ||೨೧||**

ಅ|| ಆನಂದರೂಪಿಯಾದ ಶ್ರೀಕೃಷ್ಣನು ತನಗಾಗಿ ಹಾಲು ಸುರಿಸುವ ಗೋವುಗಳನ್ನು ನಾಶಗೊಳಿಸುವ ಮೇಘಗಳನ್ನು ಚೆನ್ನಾಗಿ ರಕ್ಷಿಸುತ್ತಿರುವ ಇಂದ್ರನಿಗೆ ಮೇಘಾಧಿಪತಿತ್ವರೂಪ ಅಧಿಕಾರಗಳನ್ನು ಕೊಟ್ಟವನಾದಾಗ್ಯೂ, ಅಂತಹ ಶ್ರೀಕೃಷ್ಣನ ಮಹಿಮೆಯನ್ನು ಮರೆತಿರುವ ದೇವೇಂದ್ರನಿಗೆ ತಾನು ಸಾಕ್ಷಾತ್ ಭಗವದವತಾರಭೂತನೆಂಬುದನ್ನು ಪ್ರಕಾಶಗೊಳಿಸುವವನಾಗಿ ಗೋವರ್ಧನಪರ್ವತವನ್ನೆತ್ತಿ ಇಂದ್ರನ ಆಜ್ಞಾಪ್ರಕಾರ ಮೇಘಗಳಿಂದ ಪೀಡಿಸಲ್ಪಟ್ಟ ಗೋವುಗಳ ಸಮೂಹವನ್ನೂ ಗೋಪಾಲಕರನ್ನೂ ರಕ್ಷಿಸಿ ತನ್ನ ಅದ್ಭುತಶಕ್ತಿಯನ್ನು ತೋರಿಸುತ್ತಾ ತಾನೇ ಜಗದ್ರಕ್ಷಕನೆಂಬುದನ್ನು ಗೋಪಾಲಕರಿಗೆ ತಿಳಿಸಿದನು. ||೨೧||

**ಮೂ|| ರೇಮೇ ಗೋಪೀಷ್ವರಿಹಾ ಸ ಮನ್ಮಥಾಕ್ರಾಂತಸುಂದರೀಪೀಷ್ವರಿಹಾ |**
**ಪೂರ್ಣಾನಂದೈಕತನುಃ ಸ ವಿಶ್ವರುಕ್ಪಾವನೋಽಪ್ಯಾನಂದೈಕತನುಃ|| ||೨೨||**

ಅ|| ಯದ್ಯಪಿ ಶ್ರೀಕೃಷ್ಣನು ಅತ್ಯಧಿಕ ಆನಂದಾತ್ಮಕ ಮುಖ್ಯ ಶರೀರವುಳ್ಳವನು, (ಸಮಸ್ತ ಕಾಮಗಳನ್ನು ಹೊಂದಿರುವವನು.) ಎಲ್ಲಾ ಭಕ್ತರ ಕಾಮಾದ್ಯುಪದ್ರವಗಳನ್ನು ಪರಿಹರಿಸುವವನು. ಭಕ್ತರಿಗೆ ದುಃಖವನ್ನು ಪರಿಹರಿಸಿ ಮುಖ್ಯತಃ ಆನಂದ ಕೊಡುವುದಕ್ಕಾಗಿ ಅವತರಿಸಿದವನು. ಆದರೂ ಸರ್ವದಾ ಪೂರ್ಣಾನಂದವುಳ್ಳ ಶ್ರೀಕೃಷ್ಣನು ಶಂಖಚೂಡನೆಂಬ ಅಸುರನನ್ನು ಸಂಹರಿಸಿ ಕಾಮಪೀಡಿತರಾದ, ಸುಂದರಿಯರಾದ ಗೋಪಿಕಾ ಸ್ತ್ರೀಯರೊಡನೆ ವಿಹರಿಸಿ ತಾನು ನಿರ್ಲಿಪ್ತನಾಗಿ ಅವರ ಕಾಮವನ್ನು ಪೂರಯಿಸಿ ಆನಂದವನ್ನು ಕೊಟ್ಟುದ್ಧರಿಸಿದನು. ||೨೨||

ಮೂ॥ ಅಥ ಹತಯೋರ್ಗಳಿಕೇತ್ಯೋಃ ಶ್ರಿಫಲ್ಕಜಪ್ರಾಪಿತಃ ಪುರೀಂ ಗಳಿಕೇಶ್ಯೋಃ ।
ಭಂಕ್ತ್ವಾ ಧನುರಾಜವರಂ ಜಘಾನ ತೇನೈವ ಚ ಸ್ವಯಂ ರಾಜವರಂ॥ ॥೨೩॥

ಅ ॥ ಆ ಮೇಲೆ ಬ್ರಹ್ಮರುದ್ರರಿಂದ ಸ್ತುತ್ಯನಾದ ಶ್ರೀಕೃಷ್ಣನು ವೃಷಭಾಕಾರನಾದ ಅರಿಷ್ಟಾಸುರ, ತುರಗರೂಪಿಯಾದ ಕೇಶಿನಾಮಕ ದೈತ್ಯ ಇವರಿಬ್ಬರನ್ನು ಸಂಹರಿಸಿದ ಮೇಲೆ ಮಧುರಾಪಟ್ಟಣಕ್ಕೆ ಅಕ್ರೂರನೊಡನೆ ಹೋಗಿ ಬ್ರಹ್ಮರುದ್ರರ ವರಬಲವುಳ್ಳ ರುದ್ರನ ಧನುಸ್ಸನ್ನು ಮುರಿದು ಆ ಬಿಲ್ಲಿನ ತುಂಡಿನಿಂದಲೇ ಕಂಸನ ಸೈನ್ಯವನ್ನು ಸಂಹರಿಸಿಬಿಟ್ಟನು. ॥೨೩॥

ಮೂ॥ ಮೃತ್ವನ್ ಗಜಮುಗ್ರಬಲಂ ಸಬಲೋ ರಂಗಂ ವಿವೇಶ ಸ್ತುತಿಮುಕ್ ರಬಲಂ ।
ಹತ್ವಾ ಮಲ್ಲೌ ಬಲಿನೌ ಕಂಸಂ ಚ ವಿಮೋಕ್ಷಿತೌ ತತೌ ರೌ ಬಲಿನೌ॥ ॥೨೪॥

ಅ ॥ ಶ್ರೀಕೃಷ್ಣನು ಬಲರಾಮನೊಡನೆ ರುದ್ರನ ವರಬಲವುಳ್ಳ ಕುವಲಯಾಪೀಡ ಎಂಬ ಆನೆಯನ್ನು ಮರ್ದಿಸಿ ವಾದ್ಯಧ್ವನಿ ವಿಶೇಷದಿಂದ ರಮಣೀಯವಾದ ರಣರಂಗಸ್ಥಾನವನ್ನು ಪ್ರವೇಶಿಸಿ ಅಲ್ಲಿ ಬಲಿಷ್ಠರಾದ ಚಾಣೂರ ಮುಷ್ಟಿಕರನ್ನೂ, ಕಂಸನನ್ನೂ, ಅವನ ಸೈನವನ್ನೂ ಸಂಹರಿಸಿ, ಬ್ರಹ್ಮಾದಿಗಳಿಂದ ಸ್ತುತಿಸಲ್ಪಟ್ಟನು. ಆ ಮೇಲೆ ಭಕ್ತರನ್ನು ಸಂಸಾರಬಂಧದಿಂದ ಬಿಡುಗಡೆ ಮಾಡತಕ್ಕ ಶ್ರೀಕೃಷ್ಣನು ಭಕ್ತ್ಯಾದಿಗುಣಗಳುಳ್ಳವರೂ, ವರಬಲವುಳ್ಳವರೂ, ಕಂಸನಿಂದ ಬಂಧಿತರೂ ಆದ ತನ್ನ ಪಿತೃಗಳಾದ ದೇವಕೀ ವಸುದೇವರನ್ನು ಕಾರಾಗೃಹದಿಂದ ಬಿಡುಗಡೆಗೊಳಿಸಿದ ಮೇಲೆ ಉಪವೀತನಾಗಿ ಸಾಂದೀಪಿಗುರುಗಳಿಂದ ಸಮಸ್ತ ವೇದಾಧ್ಯಯನವನ್ನು ಮಾಡಿದನು. ॥೨೪॥

ಮೂ ॥ ಪ್ರಾದಾತ್ಸಾಂದೀಪನಯೇ ಮೃತಪುತ್ರಂ ಜ್ಞಾನದೀಪಸಾಂದೀಪನಯೇ ।
ಗುರ್ವರ್ಥೇಽಜ್ಞಾನತಮಃಪ್ರಭೇದಿತಾ ನಿತ್ಯಸಂಭೃತಾಜ್ಞಾನತಮಃ॥ ॥೨೫॥

ಅ॥ ಯಾವ ಶ್ರೀಕೃಷ್ಣನು ಸಮಸ್ತಸಜ್ಜನರ ಅಜ್ಞಾನವೆಂಬ ತಮಸ್ಸನ್ನು ಛೇದಿಸಿರುವನೋ, ಸಕಲ ಸಜ್ಜನರ ಅಜ್ಞಾನಪರಿಹಾರಕಳಾದ, ಸಕಲವಿದ್ಯಾಭಿಮಾನಿನಿಯಾದ ರಮಾದೇವಿಯು ನಮಸ್ಕಾರಪೂರ್ವಕವಾಗಿ ಯಾವ ಶ್ರೀಕೃಷ್ಣನ ಆಜ್ಞೆಯನ್ನು ಪರಿಪಾಲಿಸುತ್ತಿರುತ್ತಾಳೋ, ಅಂತಹ ಶ್ರೀಕೃಷ್ಣನು ಬಲರಾಮನೊಡನೆ ಲೋಕಶಿಕ್ಷಣಾರ್ಥವಾಗಿ ಪಂಡಿತೋತ್ತಮರಿಗೂ ಶಿಕ್ಷಕರಾದ ಗುರುಗಳಾದ ಸಾಂದೀಪಿನ್ಯಾಚಾರ್ಯರಿಗೆ ಗುರುದಕ್ಷಿಣಾರೂಪವಾಗಿ ಮೃತಪುತ್ರನನ್ನು ಬದುಕಿಸಿ ತಂದುಕೊಟ್ಟನು. ॥೨೫॥

ಮೂ॥ ಜಿತ್ವಾ ಮಾಗಧರಾಜಂ ತೋಷಿತಮಕರೋತ್ಸದಾಽಽತ್ಮಯೋಗಧರಾಜಂ ।
ಅನುಕುರ್ವನ್ನಿಜಸದನಂ ಚಕ್ರೇ ರಮ್ಯಂ ಪುರಂ ಸುಬೋಧನಿಜಸದನಂ॥ ॥೨೬॥

ಅ॥ ಶ್ರೀಕೃಷ್ಣನು ಮಗಧದೇಶಾಧಿಪತಿಯಾದ ಜರಾಸಂಧನನ್ನು ಗೆದ್ದು ಸದಾ ತನ್ನಧ್ಯಾನಾದಿಗಳನ್ನು ಮಾಡಿಕೊಂಡಿರುವ ಚತುರ್ಮುಖ ಬ್ರಹ್ಮನನ್ನು ಸಂತೋಷಗೊಳಿಸಿದನು. (ಅಂದರೆ ತಾನು ಜರಾಸಂಧನಿಗೆ ಅಜೇಯತ್ವ ವರವನ್ನು ಕೊಟ್ಟ ಪ್ರಯುಕ್ತ ತನ್ನಲ್ಲಿ ಗೌರವದಿಂದ ಶ್ರೀಕೃಷ್ಣನು ಗೆಲ್ಲದೆ ಹೋದರೆ ಮಹಾನರ್ಥನವು ಸಂಭವಿಸುವುದು ಎಂದು ಭಯಗ್ರಸ್ತನಾಗಿದ್ದ ಬ್ರಹ್ಮನ ಭಯವನ್ನು ಶ್ರೀಕೃಷ್ಣನು ಜರಾಸಂಧನನ್ನು ಗೆದ್ದು ಪರಿಹರಿಸಿದನು.) ಭಗವತ್ಸಾಕ್ಷಾತ್ಕಾರದಿಂದ ಸ್ವಸ್ವರೂಪಾವಿರ್ಭಾವವನ್ನು ಹೊಂದಿರುವ ಮುಕ್ತರಿಗೆ ಆವಾಸಸ್ಥಾನವಾದ ಶ್ವೇತದ್ವೀಪದಂತಿರುವುದು, ಸಮೀಚೀನಜ್ಞಾನವುಳ್ಳ ಯಾದವಾದಿಗಳಿಗೆ ಮಂದಿರವಾದುದು ಮನೋಹರವೂ ಆದ ದ್ವಾರಕಾಪಟ್ಟಣವನ್ನು ಸಮುದ್ರದ ನಡುವೆ ನಿರ್ಮಿಸಿದನು ॥೨೬॥

ಮೂ॥ ಪ್ರಸಭಂ ಸ ಗಜಬಲಸ್ಯ ಕ್ಷತ್ರಸ್ಯೋಚ್ಚೈಃ ಸಮಗಧರಾಜಬಲಸ್ಯ ।
ಮಾನಂ ಶಿಶುಪಾಲವರಂ ಹತ್ವಾ ಭೈಷ್ಮೀಮವಾಪ ಶಿಶುಪಾಲವರಂ॥ ॥೨೭॥

ಅ॥ ಶ್ರೀಕೃಷ್ಣನು ಆನೆ ಮೊದಲಾದ ಚತುರಂಗಸೈನ್ಯವುಳ್ಳ, ಜರಾಸಂಧನ ಸೈನ್ಯದ ಸಹಾಯ ಪಡೆದ, ಶಿಶುಪಾಲನಿಗೆ

ರುಕ್ಮಿಣಿದೇವಿಯನ್ನು ವಿವಾಹ ಮಾಡಿಸಬೇಕೆಂದು ನಿಶ್ಚಯಿಸಿ ಕೃಷ್ಣನೊಡನೆ ಯುದ್ಧಕ್ಕೆ ಸನ್ನದ್ಧರಾದ ರುಕ್ಮಿ ಮೊದಲಾದ ದುಷ್ಟಶಕ್ತಿಯರ ಬ್ರಹ್ಮಾದಿಗಳ ವರದಿಂದುಂಟಾದ ದುರಹಂಕಾರವನ್ನು ನಾಶಗೊಳಿಸಿ ಬಲಾತ್ಕಾರವಾಗಿ ರುಕ್ಮಿಣೀದೇವಿಯನ್ನು ಮದುವೆ ಮಾಡಿಕೊಂಡನು. ॥೨೭॥

**ಮೂ॥ ಹಂಸೋ ಡಿಭಿಕಶ್ಚಪಲಾವಮುನಾ ಸಂಸೂದಿತೌ ಯವನಕಶ್ಚ ಪಲಾ ।**
**ಕೀರ್ತಿರ್ವಿಮಲಾ ವಿರತಾ ಪ್ರತತಾ ವಿಶ್ವಾಧಿಪಾವನೀಽಽಲಾವಿರತಾ॥ ॥೨೮॥**

ಅ॥ ಚಂಚಲ ಸ್ವಭಾವವುಳ್ಳ ಹಂಸ ಡಿಭಿಕರನ್ನೂ, ಕಾಲಯವನನ್ನೂ ಶ್ರೀಕೃಷ್ಣನು ಸಂಹರಿಸಿದಾಗ ನಿರ್ಮಲವೂ, ರಮಾಬ್ರಹ್ಮಾದಿಗಳಿಂದ ಸ್ತುತ್ಯವೂ, ಭಾಗೀರಥ್ಯಾದಿತೀರ್ಥಗಳಿಗಿಂತಲೂ ಅತ್ಯಧಿಕವಾಗಿ ಜಗತ್ತನ್ನು ಪವಿತ್ರೀಕರಿಸತಕ್ಕುದೂ, ಆದ ಅತ್ಯುತ್ತಮವಾದ ಕೀರ್ತಿಯು ಮುಖ್ಯವಾಯುವಿನಿಂದ ಉಪದೇಶಾದಿಗಳ ದ್ವಾರಾ ಪ್ರಸಿದ್ಧೀಕರಿಸಲ್ಪಟ್ಟು ಸರ್ವತ್ರ ಹಬ್ಬಿಸಿತು.॥೨೮॥

**ಮೂ॥ ಸತ್ಯಾಜಾಂಬವತೀರ್ಯಾ ಭಾರ್ಯಾ ವಿಂದಾದ್ಯಾಃ ಭಾನುಸಾಂಬವತೀರ್ಯಾ ।**
**ಪ್ರದ್ಯುಮ್ನಂ ಮೋದರತಃ ಪ್ರಾಪ ಜ್ಯೇಷ್ಠಂ ಹರಿಃ ಸುತಂ ಮೋದರತಃ॥ ॥೨೯॥**

ಅ॥ ರುಕ್ಮಿಣೀ ಸತ್ಯಭಾಮಾ ಮೊದಲಾದವರ ಸಂಬಂಧವಿಲ್ಲದೇನೇ ಆನಂದಭರಿನಾಗಿ ಸ್ವರಮಣನಾದರೂ ಶ್ರೀಕೃಷ್ಣನು ಸತ್ಯಭಾಮೆ ಜಾಂಬವತಿಯರೇ ಪ್ರಧಾನರಾಗಿ ಉಳ್ಳ ಮಿತ್ರವಿಂದಾ ಮೊದಲಾದ ೧೬೦೦೦ ಸುಂದರಿಯನ್ನು ಮದುವೆ ಮಾಡಿಕೊಂಡು ಸತ್ಯಭಾಮೆಯಲ್ಲಿ ಭಾನು, ಜಾಂಬವತಿಯಲ್ಲಿ ಸಾಂಬ ಮೊದಲಾದ ಮಕ್ಕಳನ್ನೂ ಸಾಕ್ಷಾದ್ರಮಾರೂಪಳಾದ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನನೆಂಬ ಜ್ಯೇಷ್ಠಪುತ್ರನನ್ನೂ ಪಡೆದನು. ॥೨೯॥

**ಮೂ॥ ಯತ್ಪರಿವಾರತಯೇಶಾಃ ಜಾತಾ ದೇವಾಃ ನೃಪಾತ್ಮನಾಽರತಯೇಶಾಃ ।**
**ಯದ್ಭರಿತಂ ವಿಷಸರ್ಪಪ್ರಭೃತಿ ಧ್ಯಾಂತಂ ನ ಮಾರುತಿಂ ವಿಷಸರ್ಪ॥ ॥೩೦॥**

ಅ॥ ಯಾವ ಶ್ರೀಕೃಷ್ಣನ ಕಾರ್ಯಕ್ಕೆ ಅಂಗಭೂತ ಶತ್ರು ಸಂಹಾರಕ ಸೇವಾನಿಮಿತ್ತದಿಂದ ಸರ್ವಲೋಕಗಳಿಗೆ ನಿಯಾಮಕರೂ, ಸರ್ವದಾ ಭಗವದ್ಧ್ಯಾನದಲ್ಲಿಯೇ ಆಸಕ್ತನಾದ ಸದಾಗುತಿಯುಳ್ಳ ಮುಖ್ಯಪ್ರಾಣನಿಂದ ನಿಯಮ್ಯರೂ ಆದ ಶೇಷಾದಿದೇವತೆಗಳು ಪರಿವಾರರಾಗಿ ಕ್ಷತ್ರಿಯರಾಗಿ ಹುಟ್ಟಿರುವರೋ, ಯಾವ ಶ್ರೀಕೃಷ್ಣನ ಅನುಗ್ರಹಕ್ಕೆ ಪೂರ್ಣಪಾತ್ರನಾದ ಭೀಮಸೇನನನ್ನು ಶತ್ರುಗಳು ಪ್ರಯೋಗಿಸಿದ, ವಿಷ, ಸರ್ಪ, ಅಗಾಧಜಲ, ವಿಷಾನ್ನ, ಲಾಕ್ಷಾಗೃಹ, ಬೆಂಕಿ ಮೊದಲಾದ ಮಾರಕ ವಸ್ತುಗಳು ಸರ್ವಥಾ ಪೀಡಿಸಲು ಶಕ್ತಗಳಾಗಲಿಲ್ಲವೋ, (ಅಂತಹ ಶ್ರೀಕೃಷ್ಣನು ಮದುವೆ ಮಾಡಿಕೊಂಡನು) ॥೩೦॥

**ಮೂ॥ ಯೇನ ಹಿಡಿಂಬಬಕಾದ್ಯಾ ರಕ್ಷೋಧೀಶಾಃ ನಿಪಾತಿತಾಃ ಬಬಕಾದ್ಯಾಃ ।**
**ಭೀಮೇ ಪ್ರೀತಿಮಮೇಯಾಂ ವ್ಯಂಜಯತಾ ತೇನ ಶೇಷಪಾತಿ ಮಮೇ ಯಾಂ॥ ॥೩೧॥**

ಅ॥ ಶೇಷ ರುದ್ರ ಗರುಡ ಮೊದಲಾದವರಿಂದ ತಿಳಿಯಲಶಕ್ಯವೂ, ಅವರಲ್ಲಿರುವ ಪ್ರೀತಿಗಿಂತ ಎಷ್ಟೋ ಅಧಿಕವೂ ಆದ ಯಾವ ಪ್ರೀತಿಯನ್ನು ಭೀಮಸೇನನಲ್ಲಿ ಶ್ರೀಕೃಷ್ಣನು ತೋರಿಸಿರುವನೋ ಅಂತಹ ಪ್ರೀತಿಯನ್ನು ಭೀಮನಲ್ಲಿ ವ್ಯಕ್ತಪಡಿಸುವುದಕ್ಕಾಗಿ ಮಾಂಸ ಭಕ್ಷಕರಾದ ಹಿಡಿಂಬ, ಬಕ ಮೊದಲಾದ ರಾಕ್ಷಸೇಶ್ವರರನ್ನು ಭೀಮಸೇನನ ಕೈಯಿಂದಲೇ ಕೊಲ್ಲಿಸಿದನು. ॥೩೧॥

**ಮೂ ॥ ಅಥ ಕೃಷ್ಣಾ ಪರಣೇತಾನ್ ಪ್ರಾಪ್ತಾನ್ ರಾಜ್ಞೋಽಶ್ಯಣೋತ್ಪದಾವರಣೇತಾನ್ ।**
**ದೃಷ್ಟ್ವಾಂ ಯಾತಸ್ಸಬಲಸ್ತಾಂ ಚಾನ್ಯೈಃಪೀತ್ಪೃಥಾಸುತಾನ್ ತತಸ್ಸಬಲಃ॥ ॥೩೨॥**

ಅ॥ ಆ ಮೇಲೆ ಯೋಗ್ಯರೂ ಬಲಿಷ್ಠರೂ ಆದ ಭೀಮಾದಿಗಳಿಂದ ತಮಗ ಮಾನಭಂಗವಾಗುವುದೆಂಬ ಜ್ಞಾನವಿಲ್ಲದಿದ್ದು

ಅಜ್ಞಾನ ಮೋಹಿತರಾಗಿ ತಾವೇ ದ್ರೌಪದಿಯನ್ನು ವರಿಸಬೇಕೆಂಬ ಇಚ್ಛೆಯಿಂದ ದುಷ್ಟರಾಜರು ಸ್ವಯಂವರ ಮಂಟಪಕ್ಕೆ ಬಂದಿರುತ್ತಾರೆಂಬ ವರ್ತಮಾನವನ್ನು ಕೇಳಿ ಶ್ರೀಕೃಷ್ಣನು ಬಲರಾಮನೊಡನೆ ಪಾಂಡವರನ್ನೂ ದ್ರೌಪದಿಯನ್ನೂ ನೋಡಲೋಸುಗ ಬಂದು ಆ ದ್ರೌಪದಿಯನ್ನು ಪಾಂಡವರಿಗೆ ಮದುವೆ ಮಾಡಿಸಿ ದ್ರೌಪದಿಗೂ ಸರ್ವದಾ ನಿರುಪಾಧಿಕ ಪ್ರೀತಿಪಾತ್ರರಾದ ಪಾಂಡವರಿಗೂ ಆಶೀರ್ವಾದರೂಪ ವರವನ್ನಿತ್ತು (ಅವರನ್ನು ಪಾಂಚಾಲಪುರದಿಂದ ಹಸ್ತಿನಾವತೀಪಟ್ಟಣಕ್ಕೆ ಕಳುಹಿಸಿದನು). ॥೩೨॥

ಮೂ॥ ತಾನಿಂದ್ರಪ್ರಸ್ಥಲವಾಸಾನ್ ಚಕ್ರೇ ಕೃಷ್ಣಃ ಪರೋ ನಿಜಸ್ಥಲವಾಸಾನ್ ।
ಸ್ವಬಲೋದ್ರೇಚಿತಮಾನ್ಯೈಃ ಜುಗೋಪ ಧರ್ಮಂ ಚ ತೈಃ ಪರಾಚಿತಮಾನ್ಯೈಃ॥ ॥೩೩॥

ಅ॥ ಸರ್ವೋತ್ತಮನಾದ ಶ್ರೀಕೃಷ್ಣನು ತನ್ನ ಅಜ್ಞಾನುಸಾರವಾಗಿಯೇ ಇರುವ ಪಾಂಡವರನ್ನು ತಮ್ಮ ಪಾಲಿನ ರಾಜ್ಯದ ಏಕದೇಶವಾದ ಇಂದ್ರಪ್ರಸ್ಥದಲ್ಲಿಯೇ ಇರಿಸಿ, ಪಾಂಡವರಿಗೆ ತನ್ನ ಅನುಗ್ರಹರೂಪ ಬಲದಿಂದ ಎಲ್ಲಾ ರಾಜರೂ ವಂದಿಸುವಂತೆ ಮಾಡಿಸಿ, ಉತ್ತಮರಿಂದಲೂ ಶತ್ರುಗಳಿಂದಲೂ ಸರ್ವಸನ್ಮಾನವನ್ನು ಹೊಂದುತ್ತಿರುವ ಪಾಂಡವರಿಂದ ವರ್ಣಾಶ್ರಮೋಚಿತ ಧರ್ಮವನ್ನು ಕಾಪಾಡಿದನು. ॥೩೩॥

ಮೂ॥ ವಾಲಿವಧಾನುನಯಾಯ ಪ್ರಣಯೀ ಸಖ್ಯಂ ಸುಸಂದಧೇ ನು ನಯಾಯ ।
ವಾಸವಜೇನ ವಿಶೇಷತ್ತ್ತೇನೈವ ಪುನರ್ನೃಜನ್ಮಜೇನ ವಿಶೇಷಾತ್॥ ॥೩೪॥

ಅ॥ ರಾಮರೂಪದಲ್ಲಿ ವಾಲಿಯನ್ನು ಸಂಹರಿಸಿದುದರಿಂದುಂಟಾದ ಪಶ್ಚಾತ್ತಾಪವನ್ನು ಪರಿಹರಿಸಿಕೊಳ್ಳುವವನಂತೆಯೇ, ವಾಲಿಯನ್ನು ಕೊಲ್ಲಿಸಿದ ಸುಗ್ರೀವನೇ ಕರ್ಣನಾಗಿ ಹುಟ್ಟಿದಾಗ ಆತನನ್ನು ಬಿಟ್ಟು ಲೋಕನೀತಿಯನ್ನು ತೋರಿಸುವುದಕ್ಕಾಗಿಯೇ ಸರ್ವಲೋಕಸಂಹಾರಕನಾದ ಶ್ರೀಕೃಷ್ಣನು ಮೊದಲು ವಾಲಿಯಾಗಿ ಹುಟ್ಟಿದ್ದ ಇಂದ್ರನೇ ಕೃಷ್ಣಾವತಾರಕಾಲದಲ್ಲಿ ಅರ್ಜುನನಾಗಿ ಹುಟ್ಟಿದಾಗ ಆತನಲ್ಲಿ ಧರ್ಮರಾಜ ನಕುಲ ಸಹದೇವರಿಗಿಂತ ಅತ್ಯಧಿಕ ಪ್ರೀತಿಯನ್ನು ಅತಿದೃಢವಾಗಿ ಅನೇಕ ಪ್ರಕಾರ ತೋರಿಸುತ್ತಿದ್ದನು. ವಸ್ತುತಸ್ತು ಪ್ರಲಯಕಾಲದಲ್ಲಿ ಅಪರಾಧವಿಲ್ಲದಿದ್ದರೂ ಚತುರ್ಮುಖ ಮೊದಲಾದ ಸಕಲ ಪ್ರಾಣಿ ಸಮುದಾಯವನ್ನೇ ಸಂಹರಿಸುವ ಭಕ್ತವತ್ಸಲನಾದ ಶ್ರೀ ನೃಸಿಂಹರೂಪಿಯಾದ ಶ್ರೀಕೃಷ್ಣನಿಗೆ ಪ್ರತ್ಯವಾಯದಿಂದುಂಟಾದ ಪಶ್ಚಾತ್ತಾಪವು ಸರ್ವಥಾ ಅಸಂಭಾವಿತವೇ ಆಗಿದೆಯಷ್ಟೆ. ॥೩೪॥

ಮೂ॥ ಮಾತುಃ ಪರಿಭವಹಾಽನ್ಯೈ ರಾಜ್ಞಾ ದ್ಯುಸದಾಮಿತಶ್ಚ ಪರಿಭವಹಾನ್ಯೈ ।
ಅಭವನ್ನರಕಮುರಾರಿರ್ಯೋಽವಾತ್ಸೀದತ್ಸಮಸ್ತನರಕಮುರಾರಿಃ॥ ॥೩೫॥

ಅ॥ ಭೂದೇವತೆಯಾದ ಧರಾದೇವಿಗೆ ಪತಿಯಾದ ಶ್ರೀ ವರಾಹರೂಪಿಯೂ, ಭೂ ಎಂದು ಹೆಸರುಳ್ಳ ಲಕ್ಷ್ಮಿಯ ಅವತಾರಭೂತಳಾದ ಸತ್ಯಭಾಮೆಗೆ ಪತಿಯೂ ಆದ ಯಾವ ಶ್ರೀಕೃಷ್ಣನು ಸರ್ವತ್ರ ವ್ಯಾಪ್ತವಾದ ಮಹಾ ಮಾಹಾತ್ಮ್ಯವುಳ್ಳವನೆಂದು ಜ್ಞಾನಿಗಳ ಮನಸ್ಸಿನಲ್ಲಿ ಧ್ಯೇಯನಾಗಿ ಆವಾಸಮಾಡಿಕೊಂಡಿರುವನೋ ಅಂತಹ, ಸ್ವರ್ಗವೇ ಮಂದಿರವಾಗಿ ಉಳ್ಳ ದೇವತೆಗಳಿಗೆ ಅಧಿಪತಿಯಾದ ಇಂದ್ರನಿಂದಲೂ, ಇತರ ಮುನಿಗಳಿಂದಲೂ ತಾಯಿಯಾದ ಅದಿತಿದೇವಿಯ ಕುಂಡಲವನ್ನಪರಹರಿಸಿದ ನರಕಾಸುರನ ನಾಶಕ್ಕಾಗಿ ಪ್ರಾರ್ಥಿತನೂ ಸಂಸಾರದುಃಖಪರಿಹಾರಕನೂ ಆದ ಶ್ರೀ ಕೃಷ್ಣನು ನರಕಾಸುರನನ್ನೂ ಮುರಾಸುರನನ್ನೂ, ವಿನಾಶಗೊಳಿಸಿದನು. ॥೩೫॥

ಮೂ॥ ನೀತೋ ದಿವಿ ದೇವವರ್ಯೈ ರೇಮೇ ಸತ್ಯಾಸಮನ್ವಿತೋಽದೇವವರ್ಯೈಃ ।
ಸರ್ವರ್ತುವನೇ ಶಶಿನಾ ನಿಶಿ ಸತ್ಯಾಂ ವಾಸರೇ ವನೇಽಶಶಿನಾ॥ ॥೩೬॥

ಅ॥ ಅಸುರರಿಗಿಂತಲೂ ಹೆಚ್ಚು ಬಲವುಳ್ಳ, ಭಗವದ್ಭಕ್ತರಾದ ಇಂದ್ರಾದಿದೇವಶ್ರೇಷ್ಠರಿಂದ ಕರೆಯಲ್ಪಟ್ಟು ಶ್ರೀಕೃಷ್ಣನು

ಸ್ವರ್ಗಕ್ಕೆ ಹೋಗಿ ಅಲ್ಲಿ ಎಲ್ಲಾ ಋತುಗಳ ಸಂಪತ್ತುಗಳಿಂದ ರಮಣೀಯವಾದ ನಂದನವನದಲ್ಲಿ ನಿಷ್ಕಲಂಕನಾದ ಚಂದ್ರನಪ್ರಭೆಗಳಿಂದ (ಅಂಧಕಾರಲೇಶವಿಲ್ಲದಿರುವ ಪ್ರಯುಕ್ತ) ರಾತ್ರಿಯು ಹಗಲಿಗೆ ಸಮನಾಗಿ ಬೆಳಗುತ್ತಿರಲು ರಾತ್ರಿಯಲ್ಲಿ ಸತ್ಯಭಾಮೆಯೊಡನೆ ಕ್ರೀಡಿಸಿದನು. ||೩೭||

ಮೂ|| ಸುರತರುಮಾಪಾಲಿಮತಾತ್ಪ್ರಕಾಶಯನ್ ಶಕ್ತಿಮಾತ್ಮನಃ ಪಾಲಿಮತಾತ್ ।
ಸುರವರವೀರೇಷು ದರೀ ಪ್ರಧಾನಜೀವೇಶ್ವರಃ ಪರೇಷುದರೀ|| ||೩೭||

ಅ|| ಲೋಕಪಾಲಕರಿಗೆ ನಿಯಾಮಕನಾದ ಇಂದ್ರನ ಅಭಿಪ್ರಾಯವನ್ನು ನಾಶಗೊಳಿಸಿದವನೂ, ಬಡಜೀವರಿಗೆ ನಿಯಾಮಕನೂ, ಸಮಸ್ತದೇವತೆಗಳ ನಾನಾವಿಧ ಆಯುಧಗಳನ್ನು ಖಂಡಿಸಿ ಸೋಲಿಸಿದವನೂ, ಆದ ಶ್ರೀಕೃಷ್ಣನು ಶಂಖವನ್ನೂದಿ ದೇವಶ್ರೇಷ್ಠರಿಗೆಲ್ಲಾ ತನ್ನ ಅದ್ಭುತಶಕ್ತಿಯನ್ನು ಪ್ರಕಾಶಗೊಳಿಸುತ್ತಾ ಸತ್ಯಭಾಮೆಯ ಅಭಿಪ್ರಾಯಾನುಸಾರವಾಗಿ ಪಾರಿಜಾತ ವೃಕ್ಷವನ್ನು ಕಿತ್ತೊಯ್ದನು. ||೩೭||

ಮೂ|| ಪುರಮಭಿಯಾಯಾರಿದರೀ ದತ್ವಾ ಭದ್ರಾಂ ಪೃಥಾಸುತಾಯಾರಿದರೀ ।
ಶಕ್ರಪುರೀಮಭಿಯಾತಃ ಪ್ರಾದಾದ್ವಹ್ನೇರ್ವನಂಸತಾಮಭಿಯಾತಃ|| ||೩೮||

ಅ|| ಚಕ್ರಶಂಖಧಾರಿಯಾದ ಶ್ರೀಕೃಷ್ಣನು ದ್ವಾರಕಾಪಟ್ಟಣಕ್ಕೆ ಬಂದು ಅರ್ಜುನನಿಗೆ ತನ್ನ ತಂಗಿಯಾದ ಸುಭದ್ರಾದೇವಿಯನ್ನು ಮದುವೆ ಮಾಡಿಸಿ ಸುಭದ್ರೆಯು ತನಗೆ ಹೆಂಡತಿಯಾಗಬೇಕೆಂಬ ದುರ್ಯೋಧನನ ಆಶೆಯನ್ನು ನಾಶಗೊಳಿಸಿ ಇಂದ್ರಪ್ರಸ್ಥಕ್ಕೆ ಬಂದು ಖಾಂಡವವನದಲ್ಲಿ ವಾಸವಾಗಿದ್ದ ಜರಿತಾರಿ ಮೊದಲಾದ ಪ್ರಾಣಿಗಳನ್ನು ಬೆಂಕಿಯಿಂದ ರಕ್ಷಿಸಿ ಯುದ್ಧಕ್ಕಾಗಿ ಬಂದ ಇಂದ್ರಾದಿ ದೇವತೆಗಳನ್ನು ತುಚ್ಛೀಕರಿಸಿ ಇಡೀ ಖಾಂಡವವನವನ್ನೇ ಅಗ್ನಿಗೆ ಆಹುತಿಯಾಗಿ ಕೊಟ್ಟನು. ||೩೮||

ಮೂ|| ಶಿವಭಕ್ತಪ್ರವರಾರ್ದ್ಯಂ ಪುಮಾನ್ನ ಸೇಹೇ ಗಿರೀಶವಿಪ್ರವರಾದ್ಯಂ ।
ತಂ ಸ್ಮಾತ್ಮೇಂದ್ರವರೇಣ ವ್ಯಧುನೋದ್ಭೀಮೇನ ಧೂತರುದ್ರವರೇಣ|| ||೩೯||

ಅ|| ಶಿವಭಕ್ತರಲ್ಲಿ ಅಗ್ರಗಣ್ಯನಾದ ಯಾವ ಜರಾಸಂಧನನ್ನು ರುದ್ರ ದುರ್ವಾಸರ ವರಬಲದಿಂದ ದೃಪ್ತನಾದ ಕಾರಣ ಯಾವನೊಬ್ಬನೂ ಸಹಿಸಲು ಶಕ್ತನಾಗಲಿಲ್ಲವೋ ಅಂತಹ ಜರಾಸಂಧನನ್ನು ರುದ್ರನ ವರವನ್ನು ಬಹುಧಾ ತಿರಸ್ಕರಿಸಿರುವವನೂ, ಮತ್ತೂ ಬಹುಧಾ ಪರಾಜಿತನಾದ ರುದ್ರನಿಗಿಂತ ಶ್ರೇಷ್ಠನೂ ವಿಷ್ಣುಭಕ್ತರಲ್ಲಿ ಅಗ್ರಗಣ್ಯನೂ ಆದ ಭೀಮನ ಕೈಯಿಂದಲೇ ಶ್ರೀಕೃಷ್ಣನು ಸಂಹಾರ ಮಾಡಿಸಿದನು. ||೩೯||

ಮೂ|| ಯಸ್ಯಾಜ್ಞಾಬಲಸಾರೈಃ ಪಾರ್ಥೈರ್ದಿಗ್ಭ್ಯೋ ಹೃತಂ ಧನಂ ಬಲಸಾರೈಃ ।
ಜಿತ್ವಾ ಕ್ಷ್ಮಾಮವಿಶೇಷಾಂ ಪ್ರಸಹ್ಯ ಭೂಪಾನ್ ಸಮಸ್ತಕಾಮವಿಶೇಷಾಂ|| ||೪೦||

ಅ|| ಯಾವ ಶ್ರೀಕೃಷ್ಣನ ಆಜ್ಞೆಯಿಂದಲೇ ಲಬ್ಧವಾದ ವೀರ್ಯದಿಂದ ಶತ್ರುಗಳನ್ನೆಲ್ಲಾ ಓಡಿಸುತ್ತಿರುವ, ಅತಿ ಬಲಿಷ್ಠರಾದ ಪಾಂಡವರು ಸಮಸ್ತರಾಜರನ್ನು ಬಲಾತ್ಕಾರದಿಂದ ಗೆಲಿದು ಮೋಕ್ಷೇತರ ಸಮಸ್ತ ಕಾಮಗಳಿಂದ ಕೂಡಿದ ಭೂಮಿಯನ್ನು ನಿಶ್ಶೇಷವಾಗಿ ವಶೀಕರಿಸಿಕೊಂಡು ದಿಗ್ದೇಶಗಳಿಂದ ಬೇಕಾದಷ್ಟು ದ್ರವ್ಯ ಸಂಪತ್ತನ್ನು ತಂದು ಹಾಕಿದರೋ, (ಅಂತಹ ಶ್ರೀಕೃಷ್ಣನು ದೇವೋತ್ತಮನು.) ||೪೦||

ಮೂ|| ಅಥ ಪಾರ್ಥಾನ್ ಕ್ರತುರಾಜಂ ಪ್ರಾಪಯದಮರೇಟ್ ಸರುದ್ರಶಕ್ರತುರಾಜಂ ।
ಪೂಜಾ ತೇನಾವಾಪಿ ಭಿನ್ನಶ್ಚೈದ್ಯಃ ಸ್ಮೃತಿಂ ಗತೇನಾವಾಪಿ|| ||೪೧||

ಅ|| ದಿಗ್ವಿಜಯಾನಂತರದಲ್ಲಿ ಸಮಸ್ತ ದೇವತೆಗಳಿಗೆ ಒಡೆಯನಾದ ಶ್ರೀಕೃಷ್ಣನು ಪರಿವಾರತ್ವೇನ ಪೂಜ್ಯರಾದ ರುದ್ರ

ದೇವೇಂದ್ರ, ವಾಯು ಬ್ರಹ್ಮಾದಿ ದೇವತೆಗಳುಳ್ಳ ರಾಜಸೂಯ ಯಜ್ಞವನ್ನೂ, ಅಶ್ವಮೇಧ ಯಜ್ಞಶ್ರೇಷ್ಠವನ್ನೂ ಪಾಂಡವರಿಂದ ಮಾಡಿಸಿ ಆ ರಾಜಸೂಯ ಯಜ್ಞದಲ್ಲಿ ತಾನೇ ಅಗ್ರಪೂಜೆಯನ್ನು ಹೊಂದಿ ಅದಕ್ಕೆ ನಿರೋಧಕನಾದ ಶಿಶುಪಾಲನನ್ನು ಚಕ್ರಾಯುಧದಿಂದ ಸಂಹರಿಸಿದನು. ಶಿಶುಪಾಲನಲ್ಲಿ ಅವಿಷ್ಟನಾದ ಜಯನು ಶ್ರೀಕೃಷ್ಣನನ್ನು ಹೊಂದಿದನು. ||೪೧||

**ಮೂ|| ನಿಹತೌ ಸೌಭಕರೂಶೌ ಶೀತೋ ಭಾತಶ್ಚ ಯೇನ ತೌ ಭಕರೂಶೌ ।**
**ಅಜಯದ್ರುದ್ರಂ ಚ ರಣೇ ಬಾಣಾರ್ಥೇಽವನತಿಪತಿತಕಚಂದ್ರಂ ಚರಣೇ|| ||೪೨||**

ಅ|| ಸಾಲ್ವ ದಂತವಕ್ರರನ್ನು ಶ್ರೀಕೃಷ್ಣನೇ ಸಂಹರಿಸಿರುವನು. ಶಾಂತ ಕ್ರೂರಪ್ರಕಾರವುಳ್ಳ, ಚಂದ್ರಸೂರ್ಯರೂ ಶ್ರೀಕೃಷ್ಣನ ಪ್ರೇರಣೆಯಿಂದಲೇ ತಂತಮ್ಮ ಕಾರ್ಯಗಳಲ್ಲಿ ಪ್ರವೃತ್ತರಾಗಿದ್ದಾರೆ. (ಅದು ಕಾರಣ ಚಂದ್ರಸೂರ್ಯಾದಿ ಸಮಸ್ತ ದೇವತೆಗಳಿಗೂ ಶ್ರೀಕೃಷ್ಣನೇ ಪ್ರವರ್ತಕನೆಂದಾದ ಮೇಲೆ ಅಂತಹವನು ಸಾಲ್ವನ ಮಾಯೆಯಿಂದ ಮೋಹಿತನಾದನೆಂದು ಭಾರತಾದಿಗಳಲ್ಲಿ ಹೇಳಿದ್ದು ಅಸುರಜನ ಮೋಹನಾರ್ಥವಾಗಿಯೇ) ರುದ್ರನು ತನ್ನ ಭಕ್ತನಾದ ಬಾಣಾಸುರನನ್ನು ರಕ್ಷಿಸುವುದಕ್ಕಾಗಿ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ಚಂದ್ರಶಿರಸ್ಕನಾಗಿಯೇ ಮೊರೆಹೊಕ್ಕು ಕಾಲಿಗೆರಗಿದಾಗ ಶಿರಸ್ಸಿನಲ್ಲಿದ್ದ ಚಂದ್ರನೂ ಕೂಡ ಕಾಲಿನ ಬುಡಕ್ಕೆ ಬಿದ್ದಿರುವನಷ್ಟೆ. ಹೀಗೆ ಬಾಣಾಸುರನ ಯುದ್ಧದಲ್ಲಿ ರುದ್ರನನ್ನು ಯಾವ ಶ್ರೀ ಕೃಷ್ಣನು ಸೋಲಿಸಿರುವನೋ ಅಂತಹ ಶ್ರೀಕೃಷ್ಣನೇ ದೇವೋತ್ತಮನು. ||೪೨||

**ಮೂ|| ಅಸೃಜಜ್ಜ್ವರಮುಗ್ರತಮಃಕ್ಷಯಪ್ರದೋ ಲೀಲಯಾಽಧಿವರಮುಗ್ರತಮಃ ।**
**ಕ್ರೀಡಾಮಾತ್ರಂ ವಿಶ್ವಂ ಪ್ರಕಾಶಯನ್ನಾತ್ಮನಃ ಸವಿಹರಕಮಾತ್ರಂ ವಿಶ್ವಂ|| ||೪೩||**

ಅ|| ಅನೇಕಾನೇಕ ಬಾಣಾಸುರನ ಭೃತ್ಯರಾದ ಉಗ್ರದೈತ್ಯರನ್ನು ಸಂಹರಿಸಿ ತಮಸ್ಸನ್ನು ಹೊಂದಿಸಿಕೊಟ್ಟು ಯುದ್ಧಕ್ಕಾಗಿ ಬಂದ ರುದ್ರನ ಅಜ್ಞಾನವನ್ನು ನಾಶಗೊಳಿಸಿದ ರಮಾರಮಣನಾದ ಶ್ರೀಕೃಷ್ಣನು ಗರುಡರುದ್ರಚತುರ್ಮುಖಾದಿಗಳಿಂದ ಸಹಿತವಾದ ಸರ್ವಜಗತ್ತನ್ನು ಕ್ರೀಡಾಮಾತ್ರದಿಂದಲೇ ನಿರ್ಮಿಸುವ ಮತ್ತು ರಕ್ಷಿಸುವ, ಪ್ರಕಾಶಗೊಳಿಸುವ ಶಕ್ತಿಯಿದ್ದವನು ಬಾಣಾಸುರನ ಪಟ್ಟಣವನ್ನು ರಕ್ಷಿಸುವುದಕ್ಕಾಗಿ ಶಿವಪ್ರೇರಿತವಾದ ಶೈವಜ್ವರವನ್ನೂ ಜಯಿಸುವುದಕ್ಕಾಗಿ ವೈಷ್ಣವಜ್ವರವನ್ನು ಸೃಷ್ಟಿಸಿ ಸೋಲಿಸಿದ ಮೇಲೆ ಬಾಣಾಸುರನಿಂದ ಬದ್ಧನಾದ ಉಷಾಪತಿಯಾದ ಅನಿರುದ್ಧನನ್ನು ಬಾಣಾಸುರನ ಬಂಧನದಿಂದ ಬಿಡಿಸಿದನು. ||೪೩||

**ಮೂ|| ಯಸ್ಯಾವೇಶೋರುಬಲಾನ್ನ್ಯಹನತ್ಪಾರ್ಥೋಽಸುರಾನ್ ಪ್ರಜೇಶೋರುಬಲಾನ್ ।**
**ವರದಾನಾದಸ್ಯೈವ ಜಗತ್ಪ್ರಭೋರೀರಣಾತ್ಸಮನುಗತನಾದಸ್ಯೈವ|| ||೪೪||**

ಅ|| ಯಾವ ಶ್ರೀಕೃಷ್ಣನ ಆವೇಶನಿಮಿತ್ತಕವಾದ ಉತ್ಕೃಷ್ಟಸಾಮರ್ಥ್ಯದಿಂದಲೂ, (ನಾನು ಭೂಮಿಯಲ್ಲಿರುವ ಪರ್ಯಂತ ಅರ್ಜುನನನ್ನು ಯಾವನೊಬ್ಬನೂ ಗೆಲ್ಲುವವನಿಲ್ಲ ಎಂಬ) ಶ್ರೀ ಕೃಷ್ಣನ ವರದಿಂದಲೂ, ಪಾರ್ಥಶಬ್ದಮುಖ್ಯವಾಚ್ಯನಾದ ಜಗತ್ಪ್ರಭುವಾದ ತನ್ನ ಅಂತರ್ಯಾಮಿಯಾದ ಶ್ರೀಕೃಷ್ಣನ ಪ್ರೇರಣೆಯಿಂದಲೂ, ಅರ್ಜುನನು ಪ್ರಜಾಪತಿಗಳಾದ ರುದ್ರಾದಿಗಳಿಂದ ಉತ್ಕೃಷ್ಟವಾದ ವರವನ್ನು ಪಡೆದಿರುವ ನಿವಾತಕವಚಾದಿಅಸುರರನ್ನು ಸಂಹರಿಸಿರುವನೋ, (ಅಂದರೆ - ಭೀಮ ಅರ್ಜುನಾದಿಗಳು ಅಸುರಾದಿಗಳನ್ನು ಸಂಹರಿಸುವರು ಎಂದು ಹೇಳಿದ್ದು, ಅವರಲ್ಲಿ ಅಂತರ್ಯಾಮಿಯಾದ ಶ್ರೀ ಕೃಷ್ಣನೇ ಸಂಹರಿಸಿದ್ದು, ಎಂಬ ಅಭಿಪ್ರಾಯದಿಂದಲೇ, ಅವರು ನಿಮಿತ್ತಭೂತರು ಮಾತ್ರ) (ಅಂತಹ ಶ್ರೀ ಕೃಷ್ಣನೇ ಸರ್ವದೇವೋತ್ತಮನು.) ||೪೪||

**ಮೂ || ಯಸ್ಯಾವೇಶಾತ್ಸ ಬಲಃ ಪ್ರಚಕರ್ಷ ಪುರಂ ಪ್ರಸಹ್ಯ ಚೇಶಾತ್ಸಬಲಃ ।**
**ಕುರುಪತಿನಾಮ ನು ಯಮುನಾಽಽಕೃಷ್ಟಾ ಯೇನಾಯರರ್ಘ್ಯಾಮತನು ಯಮುನಾ|| ||೪೫||**

ಅ|| ಯಾವ ಶ್ರೀ ಕೃಷ್ಣನ ಶುಕ್ರಕೇಶರೂಪದ ಆವೇಶ ಪ್ರಯುಕ್ತವೇ ಬಲರಾಮನು ಹಸ್ತಿನಾವತೀ ಎಂಬ ದೊಡ್ಡ ಪಟ್ಟಣವನ್ನು

ಬಲಾತ್ಕಾರದಿಂದ ನೇಗಿಲಿನಿಂದ ಸೆಳೆದನೋ, ಆಮೇಲೆ ದುರ್ಯೋಧನನ ಮಗಳಾದ ಲಕ್ಷಣೆಯ ವರನಾದ ಸಾಂಬನಿಂದ ಕೂಡಿಯೇ ಹಸ್ತಿನಾವತಿಗೆ ನಿಯಾಮಕನಾದ ದುರ್ಯೋಧನನಿಂದ ಪೂಜೆಯನ್ನು ಹೊಂದಿಯೇ ಹೋಗಿರುವನೋ ಅನಂತರ ಗೋಕುಲದಲ್ಲಿ ಯಮುನಾ ನದಿಯನ್ನು ನೇಗಿಲಿನಿಂದ ಸೆಳೆದಿರುವನೋ, ಆ ಬಲರಾಮನನ್ನು ರುದ್ರನಿಂದಲೂ ಪೂಜ್ಯನನ್ನಾಗಿ ವೈದಿಕರು ಹೇಳುತ್ತಾರೋ, ಬಲರಾಮನು (ಅಂತಹ ಅಂತರ್ಯಾಮಿಯಾದ ಶ್ರೀಕೃಷ್ಣನ ಸಾಮರ್ಥ್ಯದಿಂದಲೇ ಮಹಾಕಾರ್ಯಗಳನ್ನು ನಡೆಸಿದ್ದು.) ||೪೫||

**ಮೂ|| ಯದ್ಬಲವಾನ್ ಕ್ರೋಧವಶಾನ್ನಿನಾಯ ನಾಶಂ ವೃಕೋದರಃ ಕ್ರೋಧವಶಾನ್ ।**
**ಲೇಭೇಚಾನ್ಯಾ ಗಮ್ಯಂ ಸ್ಥಾನಂ ಪುಷ್ಪಾಣಿ ಧಾಮ ಚಾನ್ಯಾಗಮ್ಯಂ||** ||೪೬||

ಅ|| ಯಾವ ಶ್ರೀ ಕೃಷ್ಣನ ಅನುಗ್ರಹಬಲವುಳ್ಳ ಭೀಮಸೇನನು, ಕ್ರೋಧವಶಾಖ್ಯ ಅಸುರರು ಹರಿದ್ರೋಹಿಗಳೆಂಬ ಸಿಟ್ಟಿನಿಂದಲೇ ಅವರನ್ನು ನಾಶಗೊಳಿಸಿರುವನೋ, ಬರುವ ಕಲ್ಪದಲ್ಲಿ ಚತುರ್ಮುಖನ ಪತ್ನಿಯಾಗುವ ದ್ರೌಪದಿಯ ಪ್ರೇರಣಾನುಸಾರವಾಗಿಯೇ ಬೇರೆ ಯಾರಿಂದಲೂ ಹೊಂದಲಶಕ್ಯವಾದ ಕುಬೇರನ ಅಲಕಾಪಟ್ಟಣವನ್ನು ಹೊಂದಿ ಅಲ್ಲಿ ತನ್ನಿಂದಲೇ ಗಮ್ಯವಾದ ಸೌಗಂಧಿಕ ಪುಷ್ಪಸ್ಥಾನಕ್ಕೆ ಹೋಗಿ ಅಲ್ಲಿರುವ ಪುಷ್ಪಗಳನ್ನು ಹೊಂದಿರುವನೋ (ಅಂತಹ ಶ್ರೀಕೃಷ್ಣನೇ ಸರ್ವದೇವೋತ್ತಮನು) ||೪೬||

**ಮೂ|| ಯದ್ಬಲಭಾರವಹತ್ವಾನ್ನಾಚಲದುರಗಾದಿಭಿಃ ಸುಭಾರವಹತ್ವಾತ್ ।**
**ಧರ್ಮಾದರಿಹಾಽಪಿ ಪದಂ ಭೀಮೋ ಯೇನೈವ ಸಾಹಸಂ ರಿಹಾಽಪಿ ಪದಂ||** ||೪೭||

ಅ|| ನಹುಷನ ಧರ್ಮವನ್ನೆಲ್ಲಾ ಹೊಂದಲಭಿಪ್ರಾಯದಿಂದ ಯಾವ ಭೀಮನು ಮುನಿಮೊದಲಾದವರು ಕೊಟ್ಟ ಸಾಹಸೀ ಎಂಬ ಬಿರುದನ್ನು ಹೊಂದಿರುವನೋ, ಅಶಕ್ತನಾಗಿ ತಪ್ಪಿಸಿಕೊಳ್ಳದಿದ್ದುದಲ್ಲ. (ಅಂದರೆ ಆ ಮುನಿಗಳು ಭೀಮನ ಅಭಿಪ್ರಾಯವನ್ನು ತಿಳಿಯದೇನೇ ಭ್ರಮೆಯಿಂದ ಹಾಗೆ ಹೇಳಿದ್ದು.) ಅಂತಹ ಭೀಮನು ಈ ಸಮಯದಲ್ಲಿ ಹೀಗೆಯೇ ನಿಂತಿರಬೇಕೆಂಬ ಶ್ರೀಕೃಷ್ಣನ ಆಜ್ಞಾರೂಪಸಂಕಲ್ಪವನ್ನು ಅನುಸರಿಸಿ, ಸರ್ವರೂಪನಹುಷ, ಯಕ್ಷರೂಪಿ ಧರ್ಮ, ಅಶ್ವತ್ಥಾಮ ಇವರಿಂದ (ತಪ್ಪಿಸಿಕೊಳ್ಳಲು ಸಮರ್ಥನಾದಾಗ್ಯೂ) ಬದ್ಧನಂತೆ ತೋರಿಸುತ್ತಾ ಅತ್ಯಲ್ಪವಾದರೂ ಚಲಿಸಲಿಲ್ಲ. ಮತ್ತು ವೈರಿಗಳನ್ನು ನಿಗ್ರಹಿಸಲಿಕ್ಕೆ ಶಕ್ತನಾದರೂ ಕ್ಷತ್ರಿಯನಿಗೆ ವಿದ್ಯಾಸಂಪಾದಿತ ತೇಜಸ್ಸನ್ನು ತನ್ನ ಜೀವನಕ್ಕಾಗಿ ಉಪಯೋಗಿಸಿಕೊಳ್ಳುವುದು ಮುಖ್ಯ ಧರ್ಮವಲ್ಲದ ಕಾರಣ ನಹುಷ ಧರ್ಮರು ಮಾಡಿದ ಪ್ರಶ್ನೆಗೆ ಪರಿಹಾರ ಹೇಳಿಯೂ ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ನಾರಾಯಣಾಸ್ತ್ರಕ್ಕೆ ನಮಸ್ಕಾರ ಮಾಡಿಯೂ ತನ್ನನ್ನು ಬಿಡಿಸಿಕೊಳ್ಳಲಿಕ್ಕೆ ಇಚ್ಛಿಸಲೀ: ||೪೭||

**ಮೂ|| ನ ಹಿ ನಹುಷೋಽಲಂ ನಹಿತುಂ ಧರ್ಮೋದ್ರೌಣಿಸ್ತಥೇತರೋಽಲಂ ನಹಿತುಂ ।**
**ನೋ ರಾಟ್ಕರ್ಣೋ ಬ್ರಹ್ಮವರೀ ಯೇನ ಧ್ವಸ್ತೋಽಸ್ತ್ರಮಗ್ರಹೀತ್ಸ ಬ್ರಹ್ಮ ವರೀ||** ||೪೮||

ಅ|| ಭೀಮನು ಉಪೇಕ್ಷಾ ಮಾಡದಿದ್ದುದರಿಂದ ದುರ್ಯೋಧನ, ಜರಾಸಂಧಾದಿಗಳು ವರಬಲವುಳ್ಳವರಾದರೂ ಭೀಮನನ್ನು ಬಂಧಿಸಲಿಕ್ಕೆ ಹೇಗೆ ಸಮರ್ಥರಾಗದೆ ತಾವೇ ಹೇಗೆ ಧ್ವಸ್ತರಾದರೋ, ಹಾಗೆಯೇ ಉಪೇಕ್ಷಾಕಾಲದಲ್ಲಿಯೂ ನಹುಷನಾಗಲೀ, ಧರ್ಮರೂಪಯಕ್ಷನಾಗಲೀ, ನಾರಾಯಣಾಸ್ತ್ರವನ್ನು ಬಿಟ್ಟ ಅಶ್ವತ್ಥಾಮನಾಗಲೀ ಆ ಭೀಮನನ್ನು ತನ್ನ ಸಾಮರ್ಥ್ಯದಿಂದ ಬಂಧಿಸಲಿಕ್ಕೆ ಶಕ್ತರಲ್ಲ. ಏಕೆಂದರೆ - ದುರ್ಯೋಧನ ಮೊದಲಾದ ದುಷ್ಟರಾಜರ ಸಮುದಾಯವು, ಪರಶುರಾಮನ ವರವುಳ್ಳ ಕರ್ಣನು, ಬ್ರಹ್ಮನ ವರವುಳ್ಳ ಜರಾಸಂಧನೂ ಕೂಡಾ ಭೀಮನಿಂದಲೇ ಪರಾಜಿತರಾಗಿರುತ್ತಾರೆ. ಬಲಿಷ್ಠನಾದ ಬ್ರಾಹ್ಮಣ ಜಾತಿಯಾದ ಅಶ್ವತ್ಥಾಮನೂ ಪರಾಜಿತನಾಗಿಯೇ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೇ ಬ್ರಹ್ಮಾಸ್ತ್ರವನ್ನೂ ಬಿಟ್ಟಿರುವನು. (ಅಂದರೆ ಬ್ರಾಹ್ಮಣನ ವಧವು ನಿಂದ್ಯವಾದ ಕಾರಣ ಭೀಮನು ದುರ್ಯೋಧನಾದಿಗಳನ್ನೆಂಬಂತೆ ಅಶ್ವತ್ಥಾಮನನ್ನು ಕೊಂದದ್ದಲ್ಲ. ಮತ್ತೆ ಅಶ್ವತ್ಥಾಮನು ಪರಾಜಿತನಾಗಿಯೇ ಪಾಂಡವರ ವಂಶವನ್ನೇ ನಾಶಗೊಳಿಸುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಬಿಟ್ಟಾಗ ಭೀಮನು ಅಸ್ತ್ರದೇವತೆಯಾದ ಶ್ರೀವಿಷ್ಣುವಿನ ಗೌರವದಿಂದಲೇ ಬದ್ಧನಂತೆ ತೋರಿಸಿಕೊಂಡದ್ದು. ಭೀಮನು ಉಪೇಕ್ಷಾ ಮಾಡಿದ ಪ್ರಯುಕ್ತವೇ ಅಶ್ವತ್ಥಾಮನು ಭೀಮನನ್ನು ಬಂಧಿಸಿದ್ದಲ್ಲದೆ ತನ್ನ ಸಾಮರ್ಥ್ಯದಿಂದಲ್ಲ.) ||೪೮||

ಮೂ॥ ಕ್ಷಾತ್ರಂ ಧರ್ಮಂ ಸ್ವವತಾ ಗುರುವೃತ್ತ್ಯೈ ಕೇಶವಾಜ್ಞಯಾ ಚ ಚರಮಂ ಸ್ವವತಾ ।
ಸರ್ವಂ ಸೇಹೇಽಮನಸಾ (ಮನಸಾ) ಭೀಮೇನೇಶ್ವೈಕಮಾನಿನಾ ಹೇಮನಸಾ॥ ॥೪೯॥

ಅ॥ ಕ್ಷಾತ್ರಧರ್ಮದಲ್ಲಿ ಬದ್ಧದೀಕ್ಷರೂ ಶ್ರೀಕೃಷ್ಣನ ಬುದ್ಧ್ಯನುಸಾರವಾಗಿಯೇ ತಿಳಿದುಕೊಂಡಿರುವವರೂ, ಶ್ರೀಹರಿಗೆ ಅತ್ಯಂತ ಪ್ರಿಯರೂ, ಆದ ಸಾಕ್ಷಾತ್ ವಾಯ್ವವತಾರಭೂತರಾದ ಭೀಮಸೇನದೇವರು ಮಹಾಶಕ್ತಿಯುಳ್ಳವರಾದರೂ ಶ್ರೀ ಕೃಷ್ಣನ ಆಜ್ಞೆ ಪರಿಪಾಲನೆಗಾಗಿಯೂ, ಕ್ಷಾತ್ರಧರ್ಮದ ರಕ್ಷಣೆಗಾಗಿಯೂ ಧರ್ಮರಾಜಾದಿಗುರುಗಳ ಅನುಸರಣೆಗಾಗಿಯೂ ವೈರಿಗಳು ಮಾಡಿದ ಅನಿಷ್ಟವು ತುಚ್ಛ ಎಂಬ ಬುದ್ಧಿಯಿಂದ ವೈರಿಗಳು ಮಾಡಿದ ದಂಡಾದ್ಯುಪದ್ರವಗಳನ್ನು ತಾನು ಸಂಪಾದಿಸಿದ ದ್ರವ್ಯ ಸಂರಕ್ಷಣೆಗಾಗಿ ರಾಜಾದಿಗಳು ಮಾಡಿದ ಅನಿಷ್ಟವನ್ನನುಭವಿಸುವವನಂತೆಯೇ ಸಹಿಸಿಕೊಂಡಿದ್ದರು. ॥೪೯॥

ಮೂ ॥ ಯದ್ಭಕ್ತಪ್ರವರೇಣ ಪ್ರೋತಃ ಸ್ವಸ್ಮಿನ್ ಸ ಕೀಚಕಃ ಪ್ರವರೇಣ ।
ಪತಿತಾಸ್ತಸ್ಯ ಸಹಾಯಾಃ ಕೃಷ್ಣಾರ್ಥೇ ಮಾನಿನಃ ಸಮಸ್ಯ ಸಹಾಯಾಃ॥ ॥೫೦॥

ಅ ॥ ವಿಷ್ಣು ಭಕ್ತರಲ್ಲಿ ಅಗ್ರಗಣ್ಯನೂ, ಬಲಿಷ್ಠನೂ ಆದ ಭೀಮನು ದ್ರೌಪದಿಯ ರಕ್ಷಣೆಗಾಗಿ ಪ್ರಸಿದ್ಧನಾದ ಕೀಚಕನನ್ನು ಶರೀರದಲ್ಲಿ (ಅಂದರೆ ಶಿರಸ್ಸು ಮೊದಲಾದ ಅವಯವಗಳನ್ನು ಗುದದಲ್ಲಿ) ಹುದುಗಿಸಿ ಸಂಹರಿಸಿರುವನು. ಆಗ ಕೀಚಕನ ಸಹಾಯಕ್ಕೆ ಬಂದ ಗರ್ವಿಷ್ಠರಾದ ಉಪಕೀಚಕರು ದ್ರೌಪದೀ ಸಮೇತ ಕೀಚಕನ ಶರೀರವನ್ನು ಹಿಡಿದುಕೊಂಡು ಹೋಗಲುದ್ಯುಕ್ತರಾದಾಗ ಅವರನ್ನು ಭೀಮನು ದ್ರೌಪದಿಯ ರಕ್ಷಣೆಗಾಗಿ ಸಂಹರಿಸಿದನು. ॥೫೦॥

ಮೂ॥ ಯದ್ಭಕ್ತ್ಯಾಽನುಗೃಹೀತೌ ಪಾರ್ಥೋ ಭೀಮಶ್ಚ ಗೋನೃಪೌ ನು ಗೃಹೀತೌ ।
ಋಣಮುಕ್ತ್ಯೈ ಸುವ್ಯತ್ಯಸ್ತ್ಯೈ ಕ್ರಮಶೋ ವೀರಾವಮುಂಚತಾಂ ಸುವ್ಯತ್ಯಸ್ತ್ಯೈ॥ ॥೫೧॥

ಅ॥ ವೀರರಾದ ಭೀಮಾರ್ಜುನರು ಶ್ರೀ ಕೃಷ್ಣನಲ್ಲಿ ಮಾಡಿದ ಪರಮಭಕ್ತಿಯಿಂದುಂಟಾದ ಶ್ರೀ ಕೃಷ್ಣನ ಅನುಗ್ರಹವುಳ್ಳವರಾಗಿ ೧ ಸಂವತ್ಸರಪರ್ಯಂತ ಅಜ್ಞಾತವಾಸ ಕಾಲದಲ್ಲಿ ವಿರಾಟರಾಜನು ತಮ್ಮನ್ನು ರಕ್ಷಿಸಿಕೊಂಡು ಇದ್ದ ಕಾರಣ ಆ ಋಣಪರಿಹಾರಕ್ಕಾಗಿಯೂ, ಮತ್ತು ಅಜ್ಞಾತವಾಸಕಾಲದಲ್ಲಿ ವಿರಾಟರಾಜನು ಸ್ವಾಮಿಯೂ, ಪಾಂಡವರು ಭೃತ್ಯರೂ ಆಗಿರುವರು. ಅದು ದಾಟಿದ ಮೇಲೆ ಪಾಂಡವರು ತಂತಮ್ಮ ರೂಪದಿಂದ ಇರುತ್ತಿರಲು ಪಾಂಡವರು ಪ್ರಭುಗಳೂ ವಿರಾಟರಾಜನು ಭೃತ್ಯರೂ ಆಗುವರು, ಹೀಗೆ ಸ್ವಾಮಿ ಭೃತ್ಯಭಾವವು ವ್ಯತ್ಯಾಸವಾಗಿ ತಮ್ಮ ನಿಜಸ್ಥಿತಿಯನ್ನು ತೋರ್ಪಡಿಸುವುದಕ್ಕಾಗಿಯೂ ಕೌರವರು ಸೆರೆಹಿಡಿದ ಗೋವುಗಳ ಸಮುದಾಯ, ಮತ್ಸ್ಯರಾಜ ಇವರನ್ನು ಪ್ರಥಮದಿನ ಭೀಮಸೇನನು ಬಿಡಿಸಿದನು. ಮರುದಿನ ಅರ್ಜುನನು ಗೋವುಗಳನ್ನು ಬಿಡಿಸಿದನು. ॥೫೧॥

ಮೂ ॥ ಯದ್ಭಕ್ತ್ಯಾಽಮಿತಯಾಽಲಂ ಕೃಷ್ಣಾ ಕಾರ್ಯೇ ವಿವೇಶ ಕೃಷ್ಣಾಕಾರ್ಯೇ ।
ಯಾಮಿರಾರ್ಧತನುತ್ವಾನ್ನಾಪಾದ್ಭೀಮಾದ್ಯತೇಽಪಿ ನಾಽಪಾದ್ಭೀಮಾತ್॥ ॥೫೨॥

ಅ॥ ವಾಯುದೇವರ ಅರ್ಧಾಂಗಿಯಾದ ಕಾರಣವೂ ಇನ್ನೊಬ್ಬಪಾಲಕನಿಲ್ಲದಿರುವ ಶತ್ರುಭಯಂಕರನಾದ ಅಕಾರ ಶಬ್ದವಾಚ್ಯನಾದ ಶ್ರೀ ಹರಿಯ "ತ್ವಾಂ ನಾನ್ಯೋ ಮಾರುತಾತ್ ಸ್ಪೃಶೇತ್" ಎಂಬ ಸಂಕಲ್ಪಾನುಸಾರವಾಗಿಯೂ, ಯಾವ ದ್ರೌಪದಿಯನ್ನು ಭೀಮನು ಹೊರತು ಇನ್ನೊಬ್ಬ ಯಾವ ಪುರುಷನೂ ಸ್ಪರ್ಶಿಸಲಾರನೋ, ಅಂತಹ ದ್ರೌಪದಿಯು ದುಶ್ಶ್ಯಾಸನನು ತನ್ನ ಸೀರೆ ಸೆಳೆದಾಗ ಅಮಿತವಾದ ಭಗವದ್ಭಕ್ತಿಯಿಂದ "ಹಾ ಕೃಷ್ಣ ದ್ವಾರಕವಾಸ ಕ್ವಾಸಿ ಯಾದವನಂದನ" ಇತ್ಯಾದಿ ರೂಪವಾದ ಉತ್ತಮವಾದ ಭಗವದಾಹ್ವಾನ ಕಾರ್ಯದಲ್ಲಿಯೇ ಆಸಕ್ತಳಾದಳು. ॥೫೨॥

ಮೂ॥ ಯಾಂ ಸ್ಪ್ರಷ್ಟುಮಿಚ್ಛಂಮಜಾತಶತ್ರುಂ ನ್ಯವಾರಯತ್ಸ್ವಃಸ್ಥಮಜಾತಶತ್ರುಂ ।
ಶಂರೂಪಾನೇ ನಿತ್ಯರತೇರಿಯಂ ಶ್ರೀರಿತಿ ಸ್ಮ ದೇವೇಟ್ ಯದಿತೇರಿಯಂ ಶ್ರೀಃ॥ ॥೫೩॥

ಅ॥ ಸುಖಸ್ವರೂಪನಾದ ಮುಖ್ಯಪ್ರಾಣನಲ್ಲಿ ನಿತ್ಯದಲ್ಲಿಯೂ ರಮಿಸುತ್ತಿರುವುದರಿಂದ ಶ್ರೀ ಎನಿಸಿಕೊಂಡ ಭಾರತಿಯನ್ನು ಶತ್ರುಗಳಿಲ್ಲದಿರುವ ಧರ್ಮರಾಜನು ಸ್ವರ್ಗದಲ್ಲಿರುವಾಗ ದ್ರೌಪದಿಯಲ್ಲಿ ಶ್ಯಾಮಲಾದಿಗಳ ಆವೇಶವಿಲ್ಲದಿರುವ ಪ್ರಯುಕ್ತ ಮೊದಲಿನ ಸಂಸ್ಕಾರದಿಂದ ಮುಟ್ಟಲಿಕ್ಕೆ ಇಚ್ಛಿಸಿದಾಗ ಆತನನ್ನು ದೇವೇಂದ್ರನು ಇತರರ ಸ್ಪರ್ಶಕ್ಕೆ ಅಯೋಗ್ಯಳಾದುದರಿಂದ ತಡೆದನು. ಧರ್ಮರಾಜಾದಿಗಳು ಮೊದಲು ಭೂಮಿಯಲ್ಲಿದ್ದಾಗ ದ್ರೌಪದಿಯಲ್ಲಿ ಶ್ಯಾಮಲಾದಿಗಳ ಆವೇಶವಿದ್ದುದರಿಂದಲೂ ಧರ್ಮರಾಜಾದಿಗಳಲ್ಲಿ ವಾಯುದೇವರ ಆವೇಶವಿದ್ದುದರಿಂದಲೂ ದ್ರೌಪದಿಯು ಆ ಧರ್ಮರಾಜಾದಿಗಳಿಗೆ ಸ್ಪರ್ಶಯೋಗ್ಯಳಾಗಿದ್ದಳು. ॥೫೩॥

ಮೂ॥ ಮನಸಾಮನಸಾಽಮನಸಾ ಮನಸಾಯಮನಂತಮಜಸ್ರಮವೇದನುಯಾ ।
ವಿಲಯಂ ವಿಲಯಂವಿಲಯಂವಿಲಯನ್ನಿಖಿಲಂ ತ್ವಸುಭಂ ಪ್ರಚಕಾರ ಚ ಯಾ॥ ॥೫೪॥

ಅ॥ (ತನ್ನನ್ನು ಸ್ಮರಿಸುವವರ) ದುಃಖವನ್ನು ವಿಶೇಷತಃ ಕೊಡತಕ್ಕದ್ದೂ, ಜ್ಞಾನಭಕ್ತ್ಯಾದಿಗಳನ್ನು ನಾಶಗೊಳಿಸತಕ್ಕದ್ದೂ ಆದ ಪಾಪವನ್ನು ವಿನಾಶಗೊಳಿಸುವವನೂ, ತ್ರಿವಿಧಪರಿಚ್ಛೇದವಿಲ್ಲದವನೂ ಆದ ಶ್ರೀಪರಮಾತ್ಮನಿಂದ ಪ್ರೀತಿಪೂರ್ವಕವಾಗಿ ಆಘ್ರಾಣಿಸಿಕೊಳ್ಳುವವನೂ ಸರ್ವರ ಮನಸ್ಸಿಗೆ ಆಶ್ರಯನೂ ಆದ ತನ್ನ ಪತಿಯಾದ ವಾಯುದೇವರನ್ನು ಸರ್ವದಾ ಅನುಸರಿಸಿಕೊಂಡು ಅವರಿಂದೊಡಗೂಡಿಯೇ ಫಲೇಚ್ಛೆಯಿಲ್ಲದೇನೇ ಸರ್ವಥಾ ಭಗವದ್ಧ್ಯಾನದಲ್ಲಿ ಆಸಕ್ತಳಾದ ದ್ರೌಪದಿಯನ್ನು ಮುಟ್ಟಲಿಕ್ಕೆ ಇಚ್ಛಿಸುವ ಧರ್ಮರಾಜನನ್ನೂ ದೇವೇಂದ್ರನು ತಡೆದನು. ॥೫೪॥

ಮೂ॥ ಸೋಽಗಾದ್ದೂತಮುಖೇನ ಪ್ರಭುಃಣೇದಂ ವರ್ತತೇ ಯದೂತಮುಖೇನ ।
ಪಾರ್ಥಾರ್ಥೇ ಬಹುತನುತಾಂ ಯತ್ರ ಪ್ರಾಕಾಶಯತ್ಸ್ವಯಂ ಸಬಹುತನುತಾಂ॥ ॥೫೫॥

ಅ॥ ಪೂರ್ಣಜ್ಞಾನವುಳ್ಳ ಜಗನ್ನಿಯಾಮಕನಾದ ಯಾವ ಶ್ರೀಕೃಷ್ಣನು ಪಾರ್ಥಸಂತಾನಕ್ಕಾಗಿ ಪಾಂಡವರ ಕುಲವನ್ನೇ ರಕ್ಷಿಸಿರುವನೋ, ಕೌರವರ ಸಭೆಯಲ್ಲಿ (ತಾನು ಬಂಧಕ್ಕೆ ಅಯೋಗ್ಯನೆಂಬುದನ್ನು ಪ್ರಕಟೀಕರಿಸಲೋಸುಗ) ಗುಣಪೂರ್ಣಗಳಾದ, ಅನಂತರೂಪಗಳನ್ನು ಪ್ರಕಾಶಗೊಳಿಸಿರುವನೋ, ಯಾವ ೨ ಸೈನ್ಯಗಳ ಮಧ್ಯದಲ್ಲಿ ಅರ್ಜುನನಿಗಾಗಿ ವಿಶ್ವರೂಪವನ್ನು (ತಾನೇ ಸರ್ವಸಂಹಾರಕನೆಂಬುದನ್ನು ತೋರಿಸಲೋಸುಗ) ಪ್ರಕಟೀಕರಿಸಿರುವನೋ ಅಂತಹ ಸರ್ವಸ್ವತಂತ್ರನಾದ ಶ್ರೀಕೃಷ್ಣನು ಪಾಂಡವರ ದೌತ್ಯವನ್ನು ವಹಿಸಿ ಕುರುಗಳನ್ನು ಸಂಹರಿಸುವುದಕ್ಕಾಗಿ ಕೌರವರ ಆಸ್ಥಾನಕ್ಕೆ ಹೋಗಿರುವನು ॥೫೫॥

ಮೂ॥ ಗುರುಕರ್ಣನದೀಜಾದೀನವಧೀಚ್ಛಕ್ಷುರ್ಬಲೇನ ಜನದೀಜಾದೀಽಽನ್ ।
ಶಕ್ತ್ಯಾ ನಿಜಯಾ ಪರವಾನ್ ಸ್ವಜನಾನುದ್ರೇಚಯನ್ನನಂತಯಾಽಪರವಾನ್॥ ॥೫೬॥

ಅ॥ ಲೋಕಮಾತೆಯಾದ ರಮಾದೇವಿಯ ಪುತ್ರನಾದ ಬ್ರಹ್ಮನನ್ನು ಪ್ರಲಯಕಾಲದಲ್ಲಿ ಸಂಹರಿಸುವವನೂ, ಸ್ವಜನರಿಗೆ ಲಕ್ಷ್ಮಿಯನ್ನು (ಸಂಪತ್ತನ್ನು) ಹೊಂದಿಸಿಕೊಡುವವನೂ, ಶತ್ರುಸಂಹಾರಕನಾಗಿರುವುದರಿಂದ ಶತ್ರುಗಳುಳ್ಳವನೆಂದು ಹೇಳಿಸಿಕೊಳ್ಳುವವನೂ, ವಸ್ತುತಸ್ತು ದ್ವೇಷಾದಿದೋಷಗಳಿಲ್ಲದವನಾದುದರಿಂದ ದ್ವೇಷ್ಯಶತ್ರುಗಳಿಲ್ಲದವನೂ, ಭೀಷ್ಮಾದಿಗಳನ್ನು ತನ್ನ ಸಾಮರ್ಥ್ಯಕ್ಕಿಂತಲೂ ಹೆಚ್ಚು ಸಾಮರ್ಥ್ಯವುಳ್ಳವರನ್ನಾಗಿ ತೋರಿಸುವವನೂ, ವಸ್ತುತಃ ಅನಂತಾನಂತಶಕ್ತಿಯುಳ್ಳವನೂ, ಆದ ಶ್ರೀ ಕೃಷ್ಣನು ದ್ರೋಣ ಕರ್ಣ ಭೀಷ್ಮಾದಿಗಳ ಆಯುಷ್ಯವನ್ನು ಕಣ್ಣಿನ ನೋಟದಿಂದಲೇ ಹರಣಮಾಡಿ ಸಂಹರಿಸಿದನು. ॥೫೬॥

ಮೂ॥ ಯಸ್ಯ ಸುನೀತಿಸಹಾಯಾನ್ನರಿಪೂನ್ಮೇನೇಽರ್ಜನಃ ಸಮೇತಸಹಾಯಾನ್ ।
ಅಕರೋಚ್ಚಾಸು ಪರಾಸುಪ್ರತತಿಂ ಸೇನಾಸು ಧಾವನಾಸುಪರಾಸು॥ ॥೫೭॥

ಅ॥ ಶ್ರೀಕೃಷ್ಣನ ಸಾರಥ್ಯದಿಂದಲೂ, ತತ್ತತ್ಕಾಲೋಚಿತ ಶೋಭನ ನೀತಿರೂಪ ಸಹಾಯದಿಂದಲೂ ಸೇನೆಯಿಂದ ಕೂಡಿಬಂದ ಶತ್ರುಗಳನ್ನು ಲಕ್ಷ್ಯಮಾಡದೆ ನಿರ್ಭಯವಾಗಿ ಹೋಗುತ್ತಿರುವ ಅರ್ಜುನನು ಇದಿರುಬರುವ ಎಲ್ಲಾ ಶತ್ರುಗಳನ್ನು ಇವರು ತನಗೆ ಯುದ್ಧ

ಮಾಡಲು ಯೋಗ್ಯರೆಂದು ತಿಳಿಯಲಿಲ್ಲ. ಮಾತ್ರವಲ್ಲ, ಮತ್ತೂ ಓಡಿ ಹೋಗಿಯಾದರೂ ಪ್ರಾಣರಕ್ಷಣೆಯನ್ನು ಮಾಡಿಕೊಳ್ಳುವ ಅಂತ ಮನಸ್ಸುಳ್ಳ ಕ್ಷಾತ್ರಧರ್ಮನಿರತರಾಗಿ ಇದಿರು ಬಂದ ಈ ಸೇನೆಗಳಲ್ಲಿ ಹೆಚ್ಚು ಜನರನ್ನು ಮೃತರಾಗುವಂತೆ ಮಾಡಿದನು. ||೫೭||

ಮೂ|| ಯೇನ ಜಯದ್ರಥಮಾರಃ ಪಾತ್ರಾ ಶತ್ರೂನವಾಪತದ್ರಥಮಾರಃ ।
ಯದ್ವಿರಹಾದಪಿ ದೇಹೇ ಸ ರಥಃ ಶಶ್ವತ್ಸ್ಥಿತೇಃ ಸದಾದಪಿ ದೇಹೇ|| ||೫೮||

ಅ|| ಸಾರಥಿಯಾದ ಯಾವ ಶ್ರೀಕೃಷ್ಣನಿಂದಲೇ ಅರ್ಜುನನು ರಥದ ಶೋಭೆಯಿಂದುಂಟಾದ ಸುಖವಿಶೇಷವುಳ್ಳವನೋ ಅಂತಹ ಸಾರಥಿಯಾಗಿದ್ದು ರಕ್ಷಿಸುವ ಶ್ರೀಕೃಷ್ಣನಿಂದಲೇ ಅರ್ಜುನನು ಜಯದ್ರಥನನ್ನೂ, ಬೇರೆ ಶತ್ರುಗಳನ್ನೂ ಸಂಹರಿಸಿರುವನು. ಹರಿಯ ಅಧೀನ ಶೋಭೆಯುಳ್ಳ ಆ ರಥವು ಶ್ರೀಕೃಷ್ಣನ ಅಸನ್ನಿಧಾನದಿಂದಲೇ ಯುದ್ಧದ ಅಂತ್ಯದಲ್ಲಿಯೇ ಸುಟ್ಟು ಹೋಯಿತು. (ಅರ್ಜುನನು ಶ್ರೀಕೃಷ್ಣನ ಸಹಾಯದಿಂದ ಬಾಹ್ಯರಥದಲ್ಲಿ ಮಾತ್ರ ಸುಖವುಳ್ಳವನಲ್ಲ. ಮತ್ತೆ) ಶರೀರದಲ್ಲಿಯೂ ಸರ್ವಥಾ ಶ್ರೀಕೃಷ್ಣನ ಸನ್ನಿಧಾನವಿದ್ದ ಪ್ರಯುಕ್ತವೇ ಯುದ್ಧಾದಿಗಳಲ್ಲಿ ಜಯಶಾಲಿಯಾಗಿ ಸುಖವಿಶೇಷವನ್ನನುಭವಿಸುತ್ತಿದ್ದನು. ||೫೮||

ಮೂ|| ಯದ್ಭರಿತೋ ಭರತಾಭಃ ಪ್ರಭುರಂಭಾಭಾವಿತೋಽಭಿಭರತಾಭಃ ।
ಭೀಮೋ ರಭಸಾಽಭಿಭವೀ ಪ್ರಸಭಂ ಭಾಭಾಭಿಭೂರ್ಭಾಸಾ ಭಿಭವೀ|| ||೫೯||

ಅ|| ಭೀಮಸೇನನು ಭರತನಾಮಕ ಯಾವ ಶ್ರೀಕೃಷ್ಣನಿಂದ ಪೋಷಿತನಾಗಿಯೇ ತಾನು ಭರತ ಕುಲದಲ್ಲಿ ಹುಟ್ಟಿ ಭರತಕುಲವನ್ನು ಪ್ರಸಿದ್ಧಿಗೊಳಿಸಿರುವನೋ ಸರ್ವದಾ ಪರಬ್ರಹ್ಮನನ್ನು ಧರಿಸಿರುವ ರಮಾದೇವಿಯ ಕೃಪಾಪಾತ್ರನೋ, ಭಾರತಯುದ್ಧದಲ್ಲಿ ಎಲ್ಲರಿಗಿಂತ ಹೆಚ್ಚು ಮೆರೆದವನೋ, ತನ್ನ ತೇಜಸ್ಸಿನಿಂದಲೂ, ಅಟ್ಟಹಾಸದಿಂದಲೂ ಬಲಾತ್ಕಾರವಾಗಿ ಶತ್ರುಗಳನ್ನು ಸೋಲಿಸಿದವನೋ, ಪ್ರಕಾಶ ಸ್ವರೂಪನಾಗಿರುವುದರಿಂದ ಪ್ರಕಾಶಸ್ವರೂಪನಾದರುದ್ರಾದಿಗಳಿಗೂ ಆಶ್ರಯನೋ, ಅತಿಸೌಂದರ್ಯ, ಮಹಾಕ್ರೌರ್ಯಗಳಿರುವ ಅಭಿಮನ್ಯು ಘಟೋತ್ಕಚರನ್ನು ಅಧೀನರನ್ನಾಗಿ ಉಳ್ಳವನೋ, (ಅಂತಹ ಶ್ರೀಕೃಷ್ಣನ ಸನ್ನಿಧಾನದಿಂದಲೇ ಭೀಮನು ಇಂತಹ ಮಹಿಮೆಯನ್ನು ಹೊಂದಿರುವನು.) ||೫೯||

ಮೂ|| ಯದನುಗ್ರಹಿಪೂರ್ಣತ್ವಾದ್ಭೀಮಃ ಸರ್ವಾನರೀನನಹಿಪೂರ್ಣತ್ವಾಽತ್ ।
ಅದಹದ್ವಾಹುಬಲೇನ ಕ್ರೋಧಾಗ್ನಾವಾಹಿತಾನ್ನಿಜಾಹುಬಲೇನ|| ||೬೦||

ಅ|| ಜೀವನ್ಮುಕ್ತರನ್ನು ತನ್ನ ದರ್ಶನಾದಿಗಳಿಂದಲೇ ಪವಿತ್ರೀಕರಿಸುವವನೂ, "ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ" ಎಂಬ ಅನುಸಂಧಾನದಿಂದಲೇ ಶತ್ರುಗಳನ್ನು ಸಂಹರಿಸುವವನೂ, ಆದ ಭೀಮನು ಶ್ರೀಕೃಷ್ಣನ ಅನುಗ್ರಹವುಳ್ಳವರಲ್ಲಿ ಅಗ್ರಗಣ್ಯನಾದುದರಿಂದ ತನ್ನ ಬಾಹುಬಲದಿಂದಲೇ ನರಸಿಂಹನ ಆಹ್ವಾನರೂಪವಾದ ಮನ್ಯುಸೂಕ್ತದಿಂದ ನೃಸಿಂಹರೂಪವಾದ ಅಗ್ನಿಯಲ್ಲಿ (ವೈರಿಬಲವೆಂಬ ಹವಿಸ್ಸನ್ನು ಹೋಮಿಸಿ) ವೈರಿಗಳನ್ನು ಸಂಹರಿಸಿದನು. ||೬೦||

ಮೂ|| ಕೃಷ್ಣಾಭೀಮಾಪ್ತತಮಃ ಶೀರ್ಣಂ ಯೇನ ಸ್ವಕೀಯಹೃದಯಮಾಪ್ತತಮಃ ।
ಧೃತರಾಷ್ಟ್ರಸುತಾನವಧೀದ್ಭೀಮೇನ ಸ್ಥಾಪಿತೋ ಮನಸಿ ಸುಸುತಾನವಧೀತ್|| ||೬೧||

ಅ|| ಯಾವ ಭೀಮಸೇನನು ತನ್ನ ಭಕ್ತರ ಮನಸ್ಸಿನಲ್ಲಿರತಕ್ಕ ಅಜ್ಞಾನವನ್ನು ಪರಿಹರಿಸಿರುವನೋ ಯಾವನು ತನ್ನ ಯಾ ಸ್ವಕೀಯರ ಮನಸ್ಸಿನಲ್ಲಿ ವಿಹಿತವಾದುದನ್ನು ಸಮರ್ಪಿಸುವುದಕ್ಕಾಗಿ ಶ್ರೀ ಕೃಷ್ಣನನ್ನು ಸರ್ವದಾ ಇರಿಸಿರುವನೋ ಅಂತಹ ಭೀಮನ ಕೈಯಿಂದ ದ್ರೌಪದೀ ಭೀಮರಿಗೆ ಅತ್ಯಾಪ್ತನಾದ ಶ್ರೀಕೃಷ್ಣನು ಚೆನ್ನಾಗಿ ಜರ್ಝರಿತವಾದ ದುರ್ಯೋಧನಾದಿಗಳನ್ನು ಸಂಹಾರ ಮಾಡಿಸಿ ಧರ್ಮವನ್ನು ಕಾಪಾಡಿದನು. ||೬೧||

**ಮೂ|| ಭೀಮವಿಪಾಟಿತದೇಹಾನದರ್ಶಯತ್ಸ್ವಾನರೀನ್ನಿಪಾಟಿತದೇಹಾನ್ ।**
**ಕೃಷ್ಣಾಯಾ ಹಿತಕಾರೀ ಸಮ್ಯಗೀರಪ್ರಿಯಃ ಸದಾಽಹಿತಕಾರೀ|| ||೬೨||**

ಅ|| ಸದಾ ತನ್ನ ಭಕ್ತಳಾದ ದ್ರೌಪದಿಯ ಶತ್ರುಗಳನ್ನು ಸಂಹರಿಸುವವನೂ, ಮುಖ್ಯಪ್ರಾಣನಿಗೆ ಮುಖ್ಯತಃ ಪ್ರಿಯನಾದ ಕಾರಣ ಅವನ ಪತ್ನಿಯಾದ ದ್ರೌಪದಿಗೆ ಹಿತಕಾರಿಯೂ ಆದ ಶ್ರೀ ಕೃಷ್ಣನು ಭೀಮನಿಂದ ಭಿನ್ನ ಭಿನ್ನ ದೇಹಗಳುಳ್ಳವರೂ, ಅಂತಹ ದೇಹಗಳನ್ನು ಭಕ್ಷಿಸುವುದಕ್ಕಾಗಿ ಬಂದ ಕಾಗೆ ನರಿನಾಯಿ ಮೊದಲಾದವುಗಳನ್ನು ಹಸ್ತಾದಿಚೇಷ್ಟೆಗಳಿಂದ ನಿವಾರಿಸುವವರೂ ಆದ ಪತಿತರಾದ ದುರ್ಯೋಧನಾದಿ ಶತ್ರುಗಳನ್ನು ದ್ರೌಪದಿಗೆ ತೋರಿಸಿದನು. ||೬೨||

**ಮೂ|| ಅಥ ಹರಿಣಾಽಪೀತಬಲಂ ದ್ರೌಣೇರಸ್ತ್ರಂ ಮಹಾರಿಣಾ ಪೀತಬಲಂ ।**
**ದಧತಾ ವಾಸೋಽಮರಣಂ ನೀತಂ ಚಕ್ರೇಽಭಿಮನ್ಯುಜಂ ಸೋಮರಣಂ|| ||೬೩||**

ಅ|| ವೈರಿಗಳನ್ನು ಸಂಹರಿಸಿದ ಮೇಲೆ ಯಾವ ಶ್ರೀಕೃಷ್ಣನು ಉತ್ತರಾದೇವಿಯ ಗರ್ಭದಲ್ಲಿರುವಾಗಲೂ ತಾನು ರಕ್ಷಿಸುತ್ತಿದ್ದುದರಿಂದ ಮರಣರಹಿತನೂ, ಅಶ್ವತ್ಥಾಮನ ಅಸ್ತ್ರಕ್ಕೆ ಲಕ್ಷ್ಯಭೂತನೂ ಆದ ಅಭಿಮನ್ಯು ಪುತ್ರನಾದ ಪರೀಕ್ಷಿದ್ರಾಜನನ್ನು ಗರ್ಭದಿಂದ ಸುರಕ್ಷಿತವಾಗಿ ಹೊರಗೆ ಬರುವಂತೆ ಮಾಡಿರುವನೋ, ಅಂತಹ ಗರ್ಭಪೋಷಕನೂ, ಸುದರ್ಶನಧಾರಿಯೂ ಆದ ಶ್ರೀ ಕೃಷ್ಣನು ಮಹಾಸಾಮರ್ಥ್ಯೋಪೇತವಾದ ಅಶ್ವತ್ಥಾಮನ ಬ್ರಹ್ಮಾಸ್ತ್ರದ ಸಾಮರ್ಥ್ಯವನ್ನು ಕುಂದಿಸಿದನು. ||೬೩||

**ಮೂ|| ತಸ್ಯ ಚ ರಕ್ಷಾ ಸುಕೃತಾ ಜನಾರ್ದನೇನೇಶಶೇಷಕೇಕ್ಷಾಸುಕೃತಾ ।**
**ಪಾರ್ಥೇಷು ಪ್ರೇಮವತಾ ನಿತ್ಯಂ ಭರ್ತ್ರಾಽಸುತಾಸುವಿಪ್ರೇಮವತಾ|| ||೬೪||**

ಅ|| ರುದ್ರ ಶೇಷ ಬ್ರಹ್ಮರನ್ನು ಕೃಪಾಕಟಾಕ್ಷದಿಂದಲೇ ರಕ್ಷಿಸುವವನೂ, ಪಾಂಡವರಲ್ಲಿ ವಿಶೇಷತಃ ಪ್ರೀತಿಯಿರುವವನೂ, ಪಾಂಡವರಿಗೆ ಸ್ವಾಮಿಯೂ, ಕ್ರೋಧಕ್ಕೆ ಒಳಗಾದ ಬ್ರಾಹ್ಮಣರ ಶಾಪವನ್ನು ಸತ್ಯವನ್ನಾಗಿ ಮಾಡಿದವನೂ ಆದ ಶ್ರೀಕೃಷ್ಣನು ಪಾಂಡವರಲ್ಲಿರುವ ಪ್ರೇಮಾತಿಶಯದಿಂದ ಪರೀಕ್ಷಿದ್ರಾಜನನ್ನು ಸರ್ವದಾ ರಕ್ಷಿಸುತ್ತಿದ್ದನು. (ಆದುದರಿಂದಲೇ ಪರೀಕ್ಷಿದ್ರಾಜನು ವಿಷ್ಣುರಾತನೆಂದು ಪ್ರಸಿದ್ಧನಾದನು) ||೬೪||

**ಮೂ|| ಜ್ಞಾನಂ ಪರಮಂ ಪ್ರಾದಾದ್ಭೀಷ್ಮಗತಃ ಸ್ಮೃತಿವಿಮೋಕ್ಷಚರಮಂ ಪ್ರಾದಾತ್ ।**
**ಪಾಂಡುಸುತಾನಾಮಧಿಕಂ ಚಕ್ರೇ ವೇದಂ ಗುಣೋತ್ತರಂ ಸ್ವನಾಮಧಿಕಂ|| ||೬೫||**

ಅ|| ಪಾಂಡವರಿಗೆ ಯೋಗ್ಯವಾದ ರಾಜ್ಯವನ್ನು ಕೊಡದಿರುವ ಕೌರವರನ್ನು ಸಂಹರಿಸುವ ಶ್ರೀಕೃಷ್ಣನು ಭೀಷ್ಮಾಚಾರ್ಯರಲ್ಲಿ ಸನ್ನಿಹಿತನಾಗಿ ಅವರ ಮೂಲಕ ಮುಕ್ತಿಯನ್ನು ಹೊಂದಿಸಲಿಕ್ಕೆ ಮುಖ್ಯ ಕಾರಣನಾದ ಉತ್ತಮಜ್ಞಾನವನ್ನುಪದೇಶಿಸಿದನು. ಮತ್ತು ಋಗಾದಿಪ್ರಸಿದ್ಧ ನಾಲ್ಕು ವೇದಗಳಲ್ಲಿ ಹೇಳದಿರುವ ಕೆಲವು ಭಗವದ್ಗುಣಗಳನ್ನು ಪ್ರತಿಪಾದಿಸುವುದೂ, ಪಾಂಡವರ ಚರಿತ್ರೆ ಪ್ರತಿಪಾದಕವೂ, ಬಹ್ವರ್ಥ ಸಹಸ್ರನಾಮಗಳಿಂದ ಕೂಡಿದ್ದೂ ಇತಿಹಾಸ ರೂಪವೂ ಆದ ಭಾರತವನ್ನು ಪ್ರಸಿದ್ಧ ಋಗಾದಿಗಳಿಗಿಂತಲೂ ಉತ್ತಮವನ್ನಾಗಿ ಪಾಂಡವರಿಗೆ ಉಪದೇಶಿಸಿದನು.

ವಿ|| "ಅಧಿಕಂ = ಋಗಾದಿವೇದಾಪೇಕ್ಷಯಾ ಉತ್ತಮಂ............... ಗುಣೋತ್ತರಂ = ಉತ್ತರಾಃ = ಉತ್ಕೃಷ್ಟಾಃ ಗುಣಾಃ = ಭಗವದ್ಗುಣಾಃ ಪ್ರತಿಪಾದ್ಯಾಃ = ಯಸ್ಯ ಸಃ=ಗುಣೋತ್ತರಃ =, ತಂ ಋಗಾದಿವೇದಾನುಕ್ತಸ್ವಗುಣಪ್ರತಿಪಾದಕಮಿತಿಯಾವತ್. ಸ್ವನಾಮಧಿಕಂ=ಸ್ವಸ್ಯ ನಾಮಾನಿ=ವಿಶ್ವಂ ವಿಷ್ಣುಃ = ಇತ್ಯಾದಿ ಸಹಸ್ರನಾಮಾದಿ ಧೀಯಂತೇ ಅಸ್ಮಿನ್ನಿತಿ ಸ್ವನಾಮಧಿಃ, ಸ್ವನಾಮಧಿರೇವ ಸ್ವನಾಮಧಿಕಃ, ....................... ತಥಾ ಚ ಭಾರತರೂಪೋ ವೇದಃ ಪ್ರಸಿದ್ಧ ವೇದಾನುಕ್ತಸ್ವಗುಣಪ್ರತಿಪಾದಕತ್ವಾತ್ ಪ್ರತ್ಯೇಕಂ ಬಹ್ವರ್ಥಸಹಸ್ರನಾಮವತ್ತ್ವಾಚ್ಚ ಋಗಾದ್ಯಪೇಕ್ಷಯೋತ್ತಮಃ ಇತಿ ಪ್ರತಿಪಾದಿತವಾನಿತಿ ಭಾವಃ " ಎಂದು ಯಾದಪತ್ಯದಲ್ಲಿದೆ. ||೬೫||

**ಮೂ|| ತೇನಾವಾಪಿ ಸುಜಾತ್ಯೈರ್ಹಯಮೇಧಸ್ತುರಗಾವರ್ತನೇಽಪಿ ಸುಜಾತ್ಯೈಃ |**
**ಪಾಂಡುಸುತೈಸ್ಸವಸೂಕ್ತೈರಾಪ್ತೈರ್ವ್ಯಾಸಾತ್ಮನಾ ಸುಸವಸೂಕ್ತೈಃ||** ||೬೬||

ಅ|| ಸಮೀಚೀನವಾದ ಜ್ಞಾನವನ್ನು ಹೊಂದಿದವರೂ ಭೂಮಿಯಲ್ಲಿ ಯಜ್ಞಕ್ಕಾಗಿ ಕುದುರೆಯನ್ನು ಬಿಟ್ಟು ಕೆಡುಕು ಇಲ್ಲದೆ ಹೊಂದಿದವರೂ, ಅಶ್ವಮೇಧ ಯಜ್ಞಕ್ಕಾಗಿ ಧನಾಧಿಪರುದ್ರದೇಹಾಂತರ್ಗತ ಪರಶುರಾಮನಿಂದ ದ್ರವ್ಯವನ್ನು ಹೊಂದಿದವರೂ, ಅಥವಾ ಧನಾಧಿಪರುದ್ರಾಂತರ್ಗತನಾದ ಪರಶುರಾಮನೇ ಕಾರ್ಯಕರ್ತನಾಗಿ ಉಳ್ಳವರೂ, ಶ್ರೀ ಪರಶುರಾಮನನ್ನೇ ಶರಣುಹೊಂದಿ ದ್ರವ್ಯವನ್ನು ಪಡೆದವರೂ, ಯಜ್ಞವನ್ನು ಮಾಡಲಿಕ್ಕೆ ಉಪಯುಕ್ತವಾದ ಜ್ಞಾನವುಳ್ಳವರೂ ಆದ ಪಾಂಡವರು ಶ್ರೀಕೃಷ್ಣ ವೇದವ್ಯಾಸರ ಅನುಗ್ರಹದಿಂದ ಅಶ್ವಮೇಧ ಯಜ್ಞವನ್ನು ಮಾಡಿದರು. ||೬೬||

**ಮೂ|| ತದನು ಸುಪಾಂಡುತನೂಜೈಃ ರೇಮೇ ಕ್ಷ್ಮಾಂ ಪಾಲಯನ್ ಸುಪಾಂಡುತನೂಜೈಃ|**
**ಅನುಪಮಸುಖರೂಪೋ ಜಃ ಪರಮಃ ಶ್ರೀ ವಲ್ಲಭಃ ಸತಿ ಸುಖರೂಪೋಽಜಃ ||** ||೬೭||

ಅ|| ಅಸದೃಶಸುಖಸ್ವರೂಪಶರೀರವುಳ್ಳವನೂ, ಸರ್ವೋತ್ತಮನೂ, ಆಕಾಶದಂತೆ ಸಮಸ್ತ ಪದಾರ್ಥಗಳಲ್ಲಿ ಪ್ರವಿಷ್ಟನೆಂದು ಜ್ಞೇಯನೂ, ನಿತ್ಯಮುಕ್ತನೂ, ಲಕ್ಷ್ಮೀರಮಣನೂ, ಆದ ಶ್ರೀ ಕೃಷ್ಣನು ಶುದ್ಧಬಾಹ್ಯ ದೇಹಗಳಿಂದ ಸ್ವರೂಪ ದೇಹವನ್ನು ಹೊಂದಿರುವ ಪಾಂಡವರಿಂದ ಭೂಮಿಯನ್ನು ರಕ್ಷಿಸುತ್ತ ಕ್ರೀಡಿಸುತ್ತಿದ್ದನು. ||೬೭||

**ಮೂ|| ಸುಗತಿಂ ಚರಮಾಮದದಾನ್ನಿಜಯೋಗ್ಯಾಂ ಜ್ಞಾನಿಸುತತಿಂ ಪರಮಾಮದದಾತ್ |**
**ಪಾರ್ಥಾನಾಂ ಸಯದೂನಾಂ ಸ ಪಿತೃಪ್ರೇಷ್ಯಾದಿನಾಮಿನಾಂ ಸಯದೂನಾಂ||** ||೬೮||

ಅ|| ಲಯಕಾಲದಲ್ಲಿ ವಾಯು ಶೇಷ ಮೊದಲಾದ ದೇವತೆಗಳಿಂದ ಕೂಡಿದ ಗರುಡಾದಿಗಳನ್ನು ಸಂಹರಿಸುವ ಚತುರ್ಮುಖನಿಗೂ ಸಂಹಾರಕನಾದ ಶ್ರೀಕೃಷ್ಣನು ವಸುದೇವಾದಿ ಪಿತೃಗಳೂ, ಉದ್ಧವಾದಿ ದೂತರೂ, ಪ್ರದ್ಯುಮ್ನಾದಿ ಪುತ್ರರೂ, ಬಲರಾಮಾದಿ ಭ್ರಾತೃಗಳೂ ಇರುವ ಯಾದವರಿಂದ ಕೂಡಿದ ಪಾಂಡವರಿಗೆ ಜ್ಞಾನಿಗಳಾದ ಇತರ ದೇವತೆಗಳಿಗಿಂತಲೂ ಉತ್ತಮವಾದ ಸ್ವಯೋಗ್ಯವಾದ ಸಾಯುಜ್ಯ ರೂಪವಾದ ಪ್ರಶಸ್ತಗತಿಯನ್ನು ಕೊಟ್ಟನು. ||೬೮||

**ಮೂ|| ರೇಮೇ ತತ್ರಾಪಿ ಸುಖೀ ಪರಮೋಽನಂತೋ ನನಂದ ತತ್ರಾಪಿ ಸುಖೀ |**
**ಪ್ರಾಣೇನೇಂದಿರಯಾ ಚ ಪ್ರಯುತೋ ನಿತ್ಯಂ ಮಹಾಗುಣೇಂದಿರಯಾ ಚ||** ||೬೯||

ಅ|| ಸರ್ವಥಾ ದುಃಖಸ್ಪರ್ಶವಿಲ್ಲದವನೂ, ಸರ್ವೋತ್ತಮನೂ, ದೇಶ ಕಾಲ ಗುಣಗಳಿಂದ ಅಂತಶೂನ್ಯನೂ ನಿತ್ಯಾಭಿವ್ಯಕ್ತ ಆನಂದವುಳ್ಳವನೂ, ಮುಖ್ಯಪ್ರಾಣ ರಮಾದೇವಿಯರಲ್ಲಿ ಇತರ ದೇವತೆಗಳಿಗಿಂತ ಉತ್ಕೃಷ್ಟ ಸಂಬಂಧವಿರುವವನೂ ಪ್ರಾಣನಿಗಿಂತಲೂ ಉತ್ಕೃಷ್ಟಗುಣಗಳುಳ್ಳ ಲಕ್ಷ್ಮೀದೇವಿಯಿಂದ ಕೂಡಿದವನೂ, ಆದ ಶ್ರೀಕೃಷ್ಣನು ಪಾಂಡವರೊಡನೆ ಕ್ರೀಡಿಸುತ್ತಿದ್ದು ವೈಕುಂಠಾದಿಸ್ಥಾನಗಳಲ್ಲಿಯೂ ಮಹಾಗುಣಗಳುಳ್ಳವನಾಗಿಯೇ ರಮೆಯೊಡನೇ ಕ್ರೀಡಿಸುತ್ತಿದ್ದನು. ||೬೯||

**ಮೂ|| ಏವಂ ಸರ್ವಾಣಿ ಹರೇರೂಪಾಣಿ ಶ್ರೀಪತೇಃ ಸುಪರ್ವಾಣಿಹರೇಃ |**
**ಪೂರ್ಣಸುಖಾನಿ ಸುಭಾಂತಿ ಪ್ರತತಾನಿ ನಿರಂತರಾಣಿ ಸುಭಾಂತಿ||** ||೭೦||

ಅ|| ದೇವತೆಗಳಿಗೆ ಮುಖ್ಯಾಶ್ರಯನೂ, ದೈತ್ಯರನ್ನು ಸ್ಥಾನಭ್ರಷ್ಟರನ್ನಾಗಿ ಮಾಡುವ ಪ್ರಯುಕ್ತ ಹರಿ ಎನಿಸಿಕೊಂಡವನೂ ಆದ ಶ್ರೀಕೃಷ್ಣನ ಸಂಪೂರ್ಣ ಸುಖ ಸ್ವರೂಪಗಳೂ ಉತ್ಕೃಷ್ಟ ಪ್ರಭೆಯುಳ್ಳವುಗಳೂ, ಚೆನ್ನಾಗಿ ವ್ಯಾಪ್ತಗಳೂ, ಪರಸ್ಪರ ಭೇದವಿಲ್ಲದವುಗಳೂ, ಲಕ್ಷ್ಮ್ಯಾದಿಗಳ ಹೃದಯದೊಳಗೂ, ಹೊರಗೂ, ಸಮೀಪದಲ್ಲಿಯೂ ಇರುವವುಗಳೂ ಆದ ಮತ್ಸ್ಯಾದಿ ಎಲ್ಲಾ ಭಗವದ್ರೂಪಗಳನ್ನು ಭಾರತಪ್ರತಿಪಾದ್ಯ ಕೃಷ್ಣರೂಪದಂತೆ ಜ್ಞಾನಿಗಳು ತಿಳಿಯಬೇಕು. ||೭೦||

ಮೂ।। ರಾಮ ರಾಮ ಮಹಾಬಾಹೋ ಮಾಯಾ ತೇ ಸುದುರಾಸದಾ ।
ಪಾದ ಸಾದದ ಕೋ ಲೋಕೇ ಪಾದಾವೇವ ತವಾಸಜೇತ್।। ।।೨೧।।

ಅ।। ದುಷ್ಟ ಶಿಕ್ಷಕನೂ, ಭಕ್ತರ ತಾಪತ್ರಯಪರಿಹಾರಕನೂ, ಕ್ರೀಡಾರೂಪನೂ, ಸಾಕಲ್ಯೇನ ತಿಳಿಯಲಶಕ್ಯನೂ, ಮಹಾಬಲಿಷ್ಠನೂ, ಮಹಾಜ್ಞಾನವುಳ್ಳವನೂ, ಆಜಾನುಪರಿಮಿತಬಾಹುಗಳುಳ್ಳವನೂ, ಆದ ಶ್ರೀ ಹರಿಯೇ ನಿನ್ನ ಮಹಿಮೆಯು ಮುಕ್ತ ಬ್ರಹ್ಮಾದಿಗಳಿಗೂ ಹೊಂದಲಸಾಧ್ಯವು. ಜ್ಞಾನದಾಯಕನೂ, ಇಂದ್ರಿಯಗಳಿಗೆ ಭೋಗದಾಯಕನೂ, ದೇವತೆಗಳ ಶತ್ರುಗಳಾದ ದೈತ್ಯಾದಿಗಳಿಗೆ ತಮಃ ಪ್ರಾಪಕನೂ ಆದ ಶ್ರೀ ಹರಿಯೇ ಸತ್ಯಾದಿಲೋಕಗಳಲ್ಲಿರತಕ್ಕ ಬ್ರಹ್ಮನೂ ಕೂಡಾ ನಿನ್ನ ಪಾದಗಳನ್ನಾಶ್ರಯಿಸುತ್ತಿರುವನು. ।।೨೧।।

ಮೂ।। ಜೇತ್ಸವಾತವ ವೇದಾಪಾಃಕೇ ಲೋಕೋದದ ಸಾದವ ।
ದಾಸರಾದುಸುತೇಯಾಮಾಹೋವಾಹಾ ಮಮ ರಾಮ ರಾಃ।। ।।೨೨।।

ಅ।। ಸರ್ವರನ್ನು ಜಯಿಸುವವನೂ, ಮುಖ್ಯಪ್ರಾಣನಿಂದ ಸಹಿತವಾದ ಸರ್ವಜಗತ್ಪ್ರವರ್ತಕನೂ, ವ್ಯಾಸರೂಪದಿಂದ ವೇದವಿಭಾಜಕನೂ, ಸಾಕಲ್ಯೇನ ವೇದಾಗೋಚರನೂ, ಸರ್ವಗುಣಪರಿಪೂರ್ಣನೂ, ಸರ್ವದೋಷವಿದೂರನೂ, ಸರ್ವಜಗದ್ಭಿನ್ನನೂ, ಜಗತ್ತಿಗೆ ಜ್ಞಾನದಾಯಕನೂ, ಭಕ್ತರ ಭಯಪರಿಹಾರಕನೂ, ಶಾಸ್ತ್ರದಸ್ಯುಗಳ ದಾಹಕನೂ, ಅಥವಾ ಭಗವದ್ಭಕ್ತರಿಗೆ ಸುಖದಾಯಕನೂ, ಸೌರ, ಶೈವ, ಗಾಣಪತ, ಶಾಕ್ತೇಯಮತ ನಿರಾಸಕನೂ, ಅನಿಂದ್ಯನೂ, ಕದಾಚಿತ್ ಮೇಷರೂಪ ಶಂಕರನುವಾಹನನಾಗಿ ಉಳ್ಳವನೂ, ಇಂತಹ ಶ್ರೀರಾಮನೇ ನೀನೇ ನನಗೆ ಧನರೂಪನು ।।೨೨।।

ಮೂ।। ದೇವಾನಾಂ ಪತಯೋ ನಿತ್ಯಂ ಮತಂ ಯಸ್ಯ ನ ಜಾನತೇ ।
ತಸ್ಮೈ ದೇವ ನಮಸ್ಯೇಽಹಂ ಭವತೇಽಸುರಮಾರಯೇ।। ।।೨೩।।

ಅ।। ದೇವಶ್ರೇಷ್ಠರೂ ಕೂಡ ಯಾವ ಬುದ್ಧರೂಪಿಯಾದ ಶ್ರೀಹರಿಯ ಸಿದ್ಧಾಂತವನ್ನು ಸರ್ವದಾ ಸಂಪೂರ್ಣ ತಿಳಿಯುವುದಿಲ್ಲವೋ, (ದೇವತೆಗಳು ದಾನವಾದಿಗಳು ತಿಳಿಯುವುದಿಲ್ಲವೆಂಬುವುದು ಸುತರಾಂ ಸಿದ್ಧ-) ಬುದ್ಧರೂಪಿ ಶ್ರೀ ಹರಿಯೇ ನಾನು ಅಂತಹ, ಅಸುರಘಾತಕನೂ, ಇಂದ್ರಿಯಾಭಿಮಾನಿಗಳಾದ ದೇವತೆಗಳಿಗೆ ಜ್ಞಾನದಾಯಕನೂ, ಆದ ನಿನ್ನನ್ನು ಸದಾ ನಮಸ್ಕರಿಸುವೆನು. ।।೨೩।।

ಮೂ।। ಸಮಸ್ತದೇವಜನ ಕವಾಸುದೇವಪರಾಮೃತ ।
ವಾಸುದೇವ ಪರಾಮೃತ ಜ್ಞಾನಮೂರ್ತೇ ನಮೋಽಸ್ತು ತೇ।। ।।೨೪।।

ಅ।। ಕಲಿಯುಗಾಂತ್ಯದಲ್ಲಿ ದುಷ್ಟರಾಜರಿಗೆ ಘಾತುಕನೂ, ಸುಖ ಜ್ಞಾನ ಪ್ರಾಣ ಕ್ರೀಡಾದಿ ಮೋಕ್ಷಗಳನ್ನು ಕೊಡುವವನೂ, ಅತ್ಯಂತ ಸುಖಸ್ವರೂಪನೂ, ಸರ್ವೋತ್ತಮನೂ, ಮರಣರಹಿತನೂ, ಜ್ಞಾನಸ್ವರೂಪನೂ, ವಿಶೇಷಜ್ಞಾನಸುಖಗಳಿರುವುದರಿಂದ ವಾಸುದೇವನೆನಿಸಿಕೊಂಡವನೂ ಆದ ಕಲ್ಕಿರೂಪಿಯಾದ ಶ್ರೀ ಹರಿಯೇ ನಿನಗೆ ನಮಸ್ಕಾರವು. ಅಥವಾ ಸರ್ವದೇವೋತ್ಪಾದಕನೂ, ಸರ್ವರಿಂದುತ್ತಮೋತ್ತಮನೂ, ಶಶ್ವದೇಕಪ್ರಕಾರನೂ, ಆದಿಯುಗಾದಿಗಳನ್ನು ಮಾಡಿರುವ ವಾಸುದೇವನಾಮಕನೂ, ಉತ್ತಮರಿಗೆ ಮೋಕ್ಷದಾಯಕನೂ ಜ್ಞಾನಸ್ವರೂಪಿಯೂ ಆದ ಶ್ರೀ ಹರಿಯೇ ನಿನಗೆ ನಮಸ್ಕಾರವು ।।೨೪।।

ಮೂ।। ದೇವಾದೇ ದೇವಲೋಕಪ ಪೂರ್ಣಾನಂದಮಹೋದಧೇ ।
ಸರ್ವಜ್ಞೇಶ ರಮಾನಾಥ ದೇವಾದೇಽದೇವಲೋಕಪ।। ।।೨೫।।

ಅ।। ಆದಿದೇವನೂ, ಮಹಾಪತ್ತುಗಳಿಂದಲೂ ದೇವಸಮೂಹರಕ್ಷಕನೂ, ಪೂರ್ಣಾನಂದದಿಂದ ಸಮುದ್ರತುಲ್ಯನೂ, ತನ್ನಲ್ಲಿಯೂ, ಪರರಲ್ಲಿಯೂ ಇರುವ ಸಮಸ್ತ ವಿಶೇಷ ವಿಷಯಗಳ ಜ್ಞಾನವುಳ್ಳವನೂ, ಸರ್ವಸ್ವಾಮಿಯೂ, ಸರ್ವಪ್ರೇರಕನೂ, ಕ್ರೀಡಾದಿ ಗುಣವಿಶಿಷ್ಟನೂ, ಸರ್ವಸೃಷ್ಟ್ಯಾದಿಕರ್ತನೂ, ವಿನಾಶವಿಲ್ಲದವನೂ, ಮುಕ್ತರಿಗೂ ಸುಖವನ್ನಿತ್ತು ರಕ್ಷಿಸುವವನೂ, ಅಂತಹ ಲಕ್ಷ್ಮೀಪತಿಯಾದ ಶ್ರೀಹರಿಯೇ ನೀನು ನಮ್ಮನ್ನು ರಕ್ಷಿಸು. ।।೨೫।।

ಮೂ॥ ಯೋ ನಿರ್ಮಮೇsಶೇಷಪುರಾಣವಿದ್ಯಾಂ ಯೋನಿರ್ಮಮೇಶೇಷಪುರಾಣವಿದ್ಯಾಂ ।
ಯೋsನಿರ್ಮಮೇಶೇಷಪುರಾಣವಿದ್ಯಾಂ ಯೋ ನಿರ್ಮಮೇಶೇ ಷಪುರಾಣವಿದ್ಯಾಂ॥ ॥೭೬॥

ಅ॥ ಶುಕಾಚಾರ್ಯರಲ್ಲಿ ಅವಿಷ್ಟರಾದ ಸೂತ್ರ ಎಂದು ಹೆಸರುಳ್ಳ ವಾಯುದೇವರ ಜನಕನೂ, ಚೆನ್ನಾಗಿ ಲಕ್ಷ್ಮೀಶೇಷರನ್ನು ಅಥವಾ ರೋಮಹರ್ಷಣ ಪೈಲರಲ್ಲಿರತಕ್ಕ ಕಾಮಶೇಷರನ್ನು ಪವಿತ್ರೀಕರಿಸುವವನೂ, ಸರ್ವಜ್ಞನೂ, ಬಲಸ್ವರೂಪಿಯಾದ ಮುಖ್ಯಪ್ರಾಣನನ್ನು ಚೆನ್ನಾಗಿ ತಿಳಿದವನೂ, ಕಾಮವಿಲ್ಲದವನೂ, ಅಕಾರವಾಚ್ಯನಾದ ಶ್ರೀವಿಷ್ಣುವಿನ ಭೃತ್ಯರಿಗೆ ಶರೀರಗಳನ್ನು ಹೊಂದಿಸಿಕೊಟ್ಟವನೂ, ಮಮತಾ ಇಲ್ಲದಿರುವವರಿಗೆ ನಿಯಾಮಕನೂ, ಪ್ರಾಣನಿಗೆ ಶರೀರವನ್ನು ಹೊಂದಿಸಿಕೊಟ್ಟ ಶ್ರೀಹರಿಯನ್ನು ತಿಳಿದಿರುವ ಶುಕ್ರಾಚಾರ್ಯರಲ್ಲಿರುವ ಅಶೇಷಪುರಾಣ ವಿದ್ಯೆಗಳಿಗೆ ಅಭಿಮಾನಿಯರಾದ ಲಕ್ಷ್ಮೀಭಾರತಿಯರಿಗೆ ಉತ್ಪಾದಕನೂ ಆದ ಲಕ್ಷ್ಮೀಪತಿಯಾದ ಶ್ರೀವೇದವ್ಯಾಸರೂಪಿಯಾದ ಶ್ರೀ ವಿಷ್ಣುವು ಹಿಂದೆ ಹೇಳಿದ ಗುಣವಿಶಿಷ್ಟನೆಂದು ವೇದಾದಿಗಳಿಂದ ತಿಳಿಯಲ್ಪಟ್ಟಿರುತ್ತಾನೆ. ಅಂತಹ ವಿಷ್ಣುಸ್ವರೂಪರಾದ ವೇದವ್ಯಾಸರನ್ನು ಶರಣುಹೊಂದುವೆನು. ನನ್ನನ್ನು ರಕ್ಷಿಸು. ॥೭೬॥

ಮೂ॥ ಅನಂತಪಾರಾಮಿತವಿಕ್ರಮೇಶ ಪ್ರಭೋ ರಮಾಪಾರಮನಂತಪಾರ ।
ಮಹಾಗುಣಾಢ್ಯಾಪರಿಮೇಯಸತ್ವ ರಮಾಲಯಾಶೇಷಮಹಾಗುಣಾಢ್ಯ॥ ॥೭೭॥

ಅ॥ ದೇಶ ಕಾಲ ಗುಣಗಳಿಂದ ಪರಿಚ್ಛೇದವಿಲ್ಲದವನೂ, ಅಸಂಖ್ಯೇಯಾದ್ಭುತ ಅನಾದಿ ಪರಾಕ್ರಮಗಳುಳ್ಳವನೂ, ಸರ್ವಸಮರ್ಥನೂ, ಸರ್ವಜಗತ್ಸ್ವಾಮಿಯೂ, ಚೆನ್ನಾಗಿ ಲಕ್ಷ್ಮೀಪಾಲಕನೂ, ಪ್ರಕೃತ್ಯಾದಿ ನಿತ್ಯವಸ್ತುಗಳಿಗೆ ಪಾಲಕನೂ, ನಾಶವಿಲ್ಲದವನೂ, ಬಲಜ್ಞಾನ ಮೊದಲಾದ ಮಹಾಗುಣಪೂರ್ಣನೂ, ಅನಂತಬಲಜ್ಞಾನಸಮುದಾಯಸ್ವರೂಪನೂ, ರಮಾದಿಗಳಿಗಿಂತ ಸ್ವಭಾವತಃ ಸರ್ವಗುಣಗಳ ಆಧಿಕ್ಯವುಳ್ಳವನೂ, ಚತುಮುಖಾದಿಗಳೂ ಭೃತ್ಯರಾಗಿ ಉಳ್ಳವನೂ, ಇಂತಹ ಶ್ರೀನಿವಾಸನೇ (ನಿನ್ನನ್ನು ನಾನು ಶರಣು ಹೊಂದುವೆ. ನನ್ನನ್ನು ರಕ್ಷಿಸು.) ॥೭೭॥

ಮೂ॥ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ।
ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ ಭಾ॥ ॥೭೮॥

ಅ॥ ಸರ್ವಪ್ರಕಾಶಕನೂ, ಸರ್ವಜ್ಞನೂ, ಭೂಮ್ಯಾದಿಸರ್ವವಸ್ತುಗಳಿಗೆ ಆಧಾರನೂ, ಭಕ್ತರಿಗೆ ಸರ್ವಾಭೀಷ್ಟದಾಯಕನೂ, ತತ್ತದ್ಯೋಗ್ಯತಾನುಸಾರ ಸರ್ವಧರ್ಮಗಳನ್ನು ಮಾಡಿಸುವವನೂ, ಪ್ರಕೃತ್ಯಾದಿಗಳಿಗೆ ಉಪಾದಾನಕಾರಣತ್ವಪ್ರದನೂ, ಸ್ವಕೀಯರ ಅತಿ ಸಮೀಪವರ್ತಿಯೂ, ಸುರಾದಿಗಳಿಂದ ಸೇವ್ಯನೂ, ಸುರಾದಿಗಳಿಗೆ ಅಭೀಷ್ಟದಾಯಕನೂ, ತತ್ತದ್ಯೋಗತಾನುಸಾರ ನಾನಾಪ್ರಕಾರವಾಗಿ ಪ್ರೇರೇಪಿಸುವವನೂ, ಸಜ್ಜನರಿಂದ ವಿಶೇಷತಃ ನಮ್ಯನೂ, ಸರ್ವಜಗದ್ವಿಲಕ್ಷಣನೂ, ಸರ್ವೋತ್ತಮನೂ, ಸರ್ವಸ್ವತಂತ್ರನೂ, ಆನಂದಪೂರ್ಣನೂ, ಸರ್ವದಾ ಸದುಪದೇಶಕನೂ, ಸರ್ವಪೂಜ್ಯನೂ, ಮುಕ್ತಿಯಲ್ಲಿ ಆನಂದ ವಿಸ್ತಾರಕರ್ತನೂ, ತಾನೇ ಪೂಜಿಸಿಕೊಳ್ಳುವವನೂ, ದುರ್ಜನರ ವಿನಾಶಕನೂ, ಸರ್ವತ್ರ ವ್ಯಾಪ್ತನೂ, ಭಕ್ತರಿಂದ ಗಾನಮಾಡಲ್ಪಡುವವನೂ, ದುರ್ಜನರಿಗೆ ಚೆನ್ನಾಗಿ ಮೋಹಕನೂ, ಸರ್ವರ ಹೃದಯದಲ್ಲಿ ಸಂಚರಿಸುವವನೂ, ಸರ್ವಗುಣಪೂರ್ಣನೂ, ಭಕ್ತರ ಹೃದಯದಲ್ಲಿರತಕ್ಕ ಅಜ್ಞಾನ ತಮೋವಿದಾರಕನೂ, ನಾನೇ ಸರ್ವೇಶನು ನನ್ನಿಂದ ಬೇರೆ ಸರ್ವೇಶನಿಲ್ಲವೆಂದು ಹೇಳುವವರನ್ನು ನಾಶಗೊಳಿಸುವವನೂ, ಬ್ರಹ್ಮಾದಿಗಳಿಂದಲೂ ಸಂಪೂರ್ಣ ತಿಳಿಯಲಶಕ್ಯನೂ, ಸರ್ವರು ಮಾಡತಕ್ಕ ಕರ್ಮಗಳಿಗೆ ಸಾಕ್ಷಿಯಾದವನೂ, ಸಜ್ಜನರಿಂದ ಸ್ತುತ್ಯನೂ, ದೇವಾದಿಗಳಲ್ಲಿ ಅತಿಸುಂದರ ಸ್ವರೂಪಿಯೂ, ಬ್ರಹ್ಮಾದಿಗಳಿಗೆ ತತ್ವೋಪದೇಶಕನೂ, ಭಕ್ತರಿಂದ ಸ್ಮರಿಸಲ್ಪಡುವವನೂ, ಭಕ್ತರಿಂದ ಕೇಳಲ್ಪಡುವವನೂ, ಭಗವದ್ಭಕ್ತರಿಗೆ ಆಹ್ಲಾದವನ್ನುಂಟುಮಾಡುವವನೂ, ಆದ ಶ್ರೀ ಹರಿಯೇ (ನಿನ್ನನ್ನು ನಾನು ಶರಣು ಹೊಂದುವೆ. ನನ್ನನ್ನು ರಕ್ಷಿಸು.) ॥೭೮॥

ಮೂ॥ ಸೈವ ಪರಃ ಕೇಶವತಃ ಪರಮಾದಸ್ಮಾತ್ಸಮಶ್ಚ ಸುಕೇಶವತಃ ।
ಸೋsಯಂ ಶಪಥವರೋ ನಃ ಶಶ್ವತ್ಸಂಧಾರಿತಃ ಸುಶಪಥವರೋsನಃ॥ ॥೭೯॥

ಅ॥ ಗರುಡಧ್ವಜನೂ, ಸರ್ವೋತ್ತಮನೂ, ಬ್ರಹ್ಮರುದ್ರರಿಗೆ ಪ್ರೇರಕನೂ ಆದ ಶ್ರೀ ಹರಿಗಿಂತ ಇನ್ನೊಬ್ಬರು ಸರ್ವೋತ್ತಮರಿಲ್ಲ. ಈ ಅರ್ಥವು ಶ್ರುತಿಯುಕ್ತಿಗಳಿಂದ ತಪ್ತಪರಶುಧಾರಣಾದಿರೂಪ ಶಪಥದಿಂದ ಅವತಾರದಲ್ಲಿಯೂ ನಿಶ್ಚಿತವಾಗಿದೆ. ಏಕೆಂದರೆ ಮುಖ್ಯಪ್ರಾಣನೂ ಪೂರ್ಣಸುಖಸ್ವರೂಪಿಯಾದ ಶ್ರೀ ಹರಿಯ ಆಜ್ಞಾನುಸಾರವೇ ಮೋಕ್ಷದಾಯಕನು. ಆದಕಾರಣ ಮುಖ್ಯಪ್ರಾಣನ ಅವತಾರಭೂತರಾದ ನಾವೂ ಮೋಕ್ಷಪ್ರದನಾದ ಶ್ರೀಹರಿಯ ಮಾರ್ಗೋಪದೇಶಕರಾದ ಕಾರಣ ಹೀಗೆ ನಿಶ್ಚಯಿಸಿರುವೆವು. ॥೭೯॥

ಮೂ॥ ಕೃಷ್ಣಕಥೇಯಂ ಯಮಿತಾ ಸುಖತೀರ್ಥೇನೋದಿತಾಽನೇನೇಯಂ ಯಮಿತಾ ।
ಭಕ್ತಿಮತಾ ಪರಮೇಶೇ ಸರ್ವೋದ್ರೇಕಾತ್ಸದಾ ನುವಾತಾಽಽಪ ರಮೇಶೇ॥ ॥೮೦॥

ಅ॥ ಮುಖ್ಯಪ್ರಾಣನ ಅವತಾರಭೂತನಾದ ತನಗೆ ಪ್ರೇರಕನೂ, ಸರ್ವೋತ್ತಮಸ್ವಾಮಿಯೂ, ಆದ ಲಕ್ಷ್ಮೀಪತಿಯಾದ ಶ್ರೀಹರಿಯಲ್ಲಿ ಸರ್ವೋತ್ತಮನೆಂದು ಭಕ್ತಿಯಿರುವವನೂ, ಸರ್ವದಾ ಸ್ತುತಿಸುವವನೂ ಆದ, ಆನಂದದಾಯಕಶಾಸ್ತ್ರವನ್ನು ನಿರ್ಮಿಸಿರುವ ಪೂರ್ಣಪ್ರಜ್ಞಾಚಾರ್ಯರು ಮಾಡಿರುವ ಯಮಕಮಾಲಿಕಾರೂಪವಾದ (ಹಿಂದೆ ಹೇಳಿದ ವರ್ಣಗಳನ್ನೇ ತಿರುಗಿ ಒಟ್ಟಿಗೆ ಸ್ಥಾನ ಭೇದದಿಂದ ಹೇಳುವಿಕೆಯು ಯಮಕವು) ಈ ಶ್ರೀಕೃಷ್ಣಕಥೆಯು ಲಕ್ಷ್ಮೀಪತಿಯಾದ ಅಕಾರವಾಚ್ಯನಾದ ಯಾವ ಶ್ರೀವಿಷ್ಣುವನ್ನು ಪ್ರತಿಪಾದಿಸುತ್ತದೋ ಅಂತಹ ಶ್ರೀವಿಷ್ಣುವನ್ನು ನಾನು ಹೊಂದಿರುವೆನು. (ಅಂದರೆ ಶ್ರೀವಿಷ್ಣುವು ನನ್ನಲ್ಲಿಯೇ ವಿಶೇಷತಃ ಸನ್ನಿಹಿತನಾಗಿರುತ್ತಾನೆ.) ॥೮೦॥

ಮೂ॥ ಇತಿ ನಾರಾಯಣನಾಮಾ ಸುಖತೀರ್ಥಸುಪೂಜಿತಃ ಸು ನಾರಾಯಣನಾ ಮಾ ।
ಪೂರ್ಣಗುಣೈರಧಿಕ ಪೂರ್ಣಜ್ಞಾನೇಚ್ಛಾಭಕ್ತಿಭಿಃ ಸ್ವಧಿಕಪೂರ್ಣ:॥ ॥೮೧॥

ಅ॥ ಆನಂದಾದಿಗುಣಪೂರ್ಣನೂ, ಸರ್ವೋತ್ತಮನೂ, ದೋಷವಿರುದ್ಧ ಗುಣಾಶ್ರಯನೂ ಆದ ಶ್ರೀಹರಿಯೇ ನಾರಾಯಣನಾಮ ಪ್ರತಿಪಾದ್ಯನೂ, ಲಕ್ಷ್ಮೀ ಬ್ರಹ್ಮಾದಿಗಳಿಗೆ ಆಧಾರಭೂತನೂ, ಪರಮಪುರುಷನೂ, ಉತ್ತಮರಾದ ಬ್ರಹ್ಮಾದಿಗಳಲ್ಲಿ ಸನ್ನಿಹಿತನೂ, ಆದ ನೀನು ಹಿಂದೆ ಹೇಳಿದ ಪ್ರಕಾರ ಪೂರ್ಣಜ್ಞಾನ ಇಚ್ಛಾ ಪರಮ ಭಕ್ತಿಗಳಿಂದ ಆನಂದತೀರ್ಥನಾಮಕನಾದ ನನ್ನಿಂದ ಭಕ್ತಿಪೂರ್ವಕವಾಗಿ ಪೂಜಿಸಲ್ಪಟ್ಟ ಪ್ರಯುಕ್ತ ನನ್ನನ್ನು ರಕ್ಷಿಸು ॥೮೧॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ ಶ್ರೀಮದ್ಯಮಕಭಾರತಂ ಸಂಪೂರ್ಣಂ ॥

ಸುರಶಿಖಾಮಣಿ ಮಧ್ವವಿನಿರ್ಮಿತಂ ಯಮಕಭಾರತಮೇತದಶೇಷತಃ ।
ವಿವರಿತುಂ ನ ಹಿ ಶಕ್ಯಮಥಾಪಿ ತತ್ಕರುಣಯಾ ಕೃತಿರೀಷದಿಯಂ ಮಯಾ ॥

ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ ।
ಭೂಯಾತ್ಕುಸುಮಮಾಲೇವ ಪ್ರೀತ್ಯೈ ಮಾಧವಮಧ್ವಯೋಃ ॥

ವ್ಯಾಸಂ ಸರ್ವಗುಣಾವಾಸಂ ವಾಸವೀನಂದನಂ ಪ್ರಭುಂ ।
ಶ್ರೀನಿವಾಸಂ ಸದಾ ವಂದೇ ಭಾಸಮಾನಂ ಹೃದಂಬರೇ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ತಂತ್ರಸಾರ

**|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ||**

**|| ಹರಿಃ ಓಂ ||**

**ಲಕ್ಷ್ಮೀನಾರಾಯಣಂ ಪೂರ್ಣಜ್ಞಾನಾನಂದಾದಿಸದ್ಗುಣಂ ।**
**ಮಂತ್ರವರ್ಣಾಭಿಧೇಯಂ ಚ ವಂದೇ ಬ್ರಹ್ಮಾದಿವಂದಿತಂ ||**

**ಮೂಲ || ಓಂ || ಜಯತ್ಯಬ್ಜಭವೇಶೇಂದ್ರವಂದಿತಃ ಕಮಲಾಪತಿಃ ।**
**ಅನಂತವಿಭವಾನಂದಶಕ್ತಿಜ್ಞಾನಾದಿಸದ್ಗುಣಃ|| ||೧||**

ಅ|| ಬ್ರಹ್ಮ, ರುದ್ರ, ಇಂದ್ರಾದಿದೇವತೆಗಳಿಂದ ಸ್ತೋತ್ರ, ನಮಸ್ಕಾರಾದಿಗಳನ್ನು ಮಾಡಿಸಿಕೊಂಡವನೂ, ಪೂರ್ಣಗಳಾದ ಐಶ್ವರ್ಯ, ಆನಂದ, ಸಾಮರ್ಥ್ಯ, ಜ್ಞಾನ ಮೊದಲಾದ ನಿರ್ದೋಷ ಗುಣಗಳುಳ್ಳವನೂ ಆದ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ ಸರ್ವೋತ್ಕೃಷ್ಟನಾಗಿರುತ್ತಾನೆ ||೧||

ವಿಶೇಷ ಅರ್ಥ || ಶ್ರೀ ಭಗವಂತನ ಪ್ರೀತಿಗಾಗಿ ಸರ್ವರೂ ಶ್ರೀ ಪರಮಾತ್ಮನನ್ನು ಪ್ರತಿಪಾದಿಸುವ ಮಂತ್ರ ಜಪ ಪೂಜಾದಿಗಳನ್ನು ತಿಳಿದು ಮಾಡಬೇಕಾಗಿರುವುದರಿಂದ ಕಲಿಯುಗದಲ್ಲಿ ಅಲ್ಪಾಯುಷ್ಯ, ಅಲ್ಪಪ್ರಜ್ಞೆ ಮೊದಲಾದವುಗಳುಳ್ಳ ಜನರಿಗೆ ಅತಿವಿಸ್ತೃತವಾದ ವಿಷ್ಣುವಿನಿಂದ ಹೇಳಲ್ಪಟ್ಟ ತಂತ್ರಸಾರದಲ್ಲಿ ಹೇಳಿದ ಪ್ರಕಾರ ತಿಳಿದು ಮಾಡಲಿಕ್ಕೆ ಸರ್ವಥಾ ಅಶಕ್ಯವಾಗಿರುವುದರಿಂದ ಅಂತಹ ಜನರಿಗೆ ಅನುಗ್ರಹಿಸಲೋಸುಗ ಶ್ರೀಮದಾಚಾರ್ಯರು ಆ ತಂತ್ರಸಾರದ ಸಾರಸಂಗ್ರಹ ರೂಪವಾದ ಈ ಗ್ರಂಥವನ್ನು ರಚಿಸಿ ಭಕ್ತರನ್ನು ಅನುಗ್ರಹಿಸಿರುತ್ತಾರೆ.

**ಮೂ|| ವಿಧಿಂ ವಿಧಾಯ ಸರ್ಗಾದೌ ತೇನ ಪೃಷ್ಟೋಽಬ್ಜಲೋಚನಃ ।**
**ಆಹ ದೇವೋ ರಮೋತ್ಸಂಗವಿಲಸತ್ಪಾದಪಲ್ಲವಃ ||೨||**

ಅ|| ಲಕ್ಷ್ಮೀದೇವಿಯ ತೊಡೆಯಲ್ಲಿ ಪ್ರಕಾಶಮಾನಗಳಾದ ಚಿಗುರು ಎಲೆಗಳಂತೆ ಇರುವ ಪಾದಗಳುಳ್ಳ (ಅಂದರೆ - ಲಕ್ಷ್ಮೀದೇವಿಯು ತನ್ನ ಕೈಗಳಿಂದ ಶ್ರೀಪರಮಾತ್ಮನ ಚರಣಗಳನ್ನು ಒತ್ತುತ್ತಾ ಇರುತ್ತಾಳೆ.) ತಾವರೆಯಂತೆ ಕಣ್ಣುಗಳುಳ್ಳ, ಶ್ರೀ ಪರಮಾತ್ಮನು ಸೃಷ್ಟಿಕಾಲದಲ್ಲಿ ಸರ್ವರಿಗಿಂತ ಮೊದಲು ಚತುರ್ಮುಖವನ್ನು ಸೃಷ್ಟಿಸಿ ಅವನಿಂದ ಪ್ರಶ್ನಿಸಿಕೊಂಡವನಾಗಿ ಅವನಿಗೆ ಉಪದೇಶಿಸಿದನು. ||೨||

**ಮೂ|| ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ ।**
**ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ|| ||೩||**

ಅ|| ನಾನು ಒಬ್ಬನೇ ಸರ್ವಗುಣ ಪರಿಪೂರ್ಣನು (ಬೇರೆ ಯಾರೂ ಇಲ್ಲ.) ಪ್ರಣವವು ನನ್ನನ್ನು ಪ್ರತಿಪಾದಿಸುವುದು. ಆ ಈ ಪ್ರಣವವು ಅಕಾರ, ಉಕಾರ, ಮಕಾರ, ನಾದ, ಬಿಂದು, ಘೋಷ, ಶಾಂತ, ಅತಿಶಾಂತ, ಎಂಬ ೮ ಅಕ್ಷರಗಳುಳ್ಳದೆಂದು ತಿಳಿದಿದೆ.||೩||

**ಮೂ॥ ಸ ವಿಶ್ವತ್ತೈಜಸ ಪ್ರಾಜ್ಞತುರೀಯಾತ್ಮಾಂತರಾತ್ಮನಾಂ ।**
**ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ॥ ॥೪॥**

ಅ॥ ಆ ಎಂಟು ವರ್ಣಗಳುಳ್ಳ ಪ್ರಣವವು (ತನ್ನ ಅವಯವಗಳಾದ ೮ ವರ್ಣಗಳಿಂದ) ವಿಶ್ವತ್ತೈಜಸ ಪ್ರಾಜ್ಞ ತುರೀಯ ಆತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮ ಎಂಬೀ ನನ್ನ ೮ ರೂಪಗಳನ್ನು ಕ್ರಮವಾಗಿ ಪ್ರತಿಪಾದಿಸುತ್ತದೆ. ॥೪॥

**ಮೂ॥ ತದ್ರೂಪಭೇದಾಃ ಪಂಚಾಶನ್ಮೂರ್ತಯೋ ಮಮ ಚಾಪರಾಃ ।**
**ಪಂಚಾಶದ್ವರ್ಣವಾಚ್ಯಾಸ್ತಾ ವರ್ಣಾಸ್ತಾರಾರ್ಣಭೇದಿತಾಃ**
**ದ್ವಿರಷ್ಟಪಂಚಕಚತುಃ ಪಂಚೇತ್ಯೇವಾಷ್ಟವರ್ಗಗಾಃ ॥ ॥೫॥**

ಅ॥ ಅ ವಿಶ್ವಾದಿ ೮ ರೂಪಗಳಿಂದ ಅಭಿವ್ಯಕ್ತಗಳಾದ ೫೦ ನನ್ನ ರೂಪಗಳಿವೆ. ಆ ೫೦ ಭಗವದ್ರೂಪಗಳನ್ನು ಆಕಾರ ಮೊದಲಾದ ೫೦ ಅಕ್ಷರಗಳು ಪ್ರತಿಪಾದಿಸುತ್ತವೆ. ಆ ೫೦ ಅಕ್ಷರಗಳು ಪ್ರಣವದ ೮ ಅಕ್ಷರಗಳಿಂದ ವ್ಯಕ್ತಗಳು. (ದ್ವಿರಷ್ಟ=) ೧೬ ಸ್ವರಾಕ್ಷರಗಳು, (ಪಂಚಕ) ಕ ವರ್ಗ ಮೊದಲಾದುದು ೫ ವರ್ಗ, (೨೫ ಅಕ್ಷರಗಳು) (ಚತುಃ =)ಯ ರ ಲ ವ, ಎಂದು ೪ ವರ್ಣಗಳು, (ಪಂಚ) ಶ ಷ ಸ ಹ ಳ, ಎಂದು ೫ ಅಕ್ಷರ, ಹೀಗೆ ೫೦ ಅಕ್ಷರಗಳು ಪ್ರಣವದ ೮ ಅಕ್ಷರಗಳಿಂದ ಅಭಿವ್ಯಕ್ತಗಳು. ಏವಂಚ ವಿಶ್ವಾದಿ ೮ ರೂಪಗಳಿಂದ ಅಜಾದಿ ೫೦ ಭಗವದ್ರೂಪಗಳು ಅಭಿವ್ಯಕ್ತಗಳಾದುವು. ॥೫॥

**ಮೂ॥ ಅಜ ಆನಂದ ಇಂದ್ರೇಶಾವುಗ್ರ ಊರ್ಜ ಋತಂಭರಃ ॥೬॥**
**ಋಘುಲ್ಯಶೌಲ್ಲ್ಯಜಿರೇಕಾತ್ಮೈರ ಓಜೋಭೃದೌರಸಃ ।**
**ಅಂತೋಽರ್ಧಗರ್ಭ ಕಪಿಲಃ ಖಪತಿರ್ಗರುಡಾಸನಃ॥ ॥೭॥**
**ಘರ್ಮೋ ಜಸಾರಶ್ಚಾರ್ವಂಗಶ್ಛಂದೋಗಮ್ಯೋ ಜನಾರ್ದನಃ ।**
**ಝಾಟಿತಾರಿರ್ಞಮಷ್ಟಂಕೀ ಠಲಕೋ ಡರಕೋ ಢರೀ॥ ॥೮॥**
**ಣಾತ್ಮಾ ತಾರಸ್ಥಭೋ ದಂಡೀ ಧನ್ವೀ ನಮ್ಯಃ ಪರಃ ಫಲೀ ।**
**ಬಲೀ ಭಗೋ ಮನುರ್ಯಜ್ಞೋ ರಾಮೋ ಲಕ್ಷ್ಮೀಪತಿರ್ವರಃ॥ ॥೯॥**
**ಶಾಂತಸಂವಿತ್‌ಷಡ್ಗುಣಶ್ಚ ಸಾರಾತ್ಮಾ ಹಂಸಳಾಳುಕೌ ।**
**ಪಂಚಾಶನ್ಮೂರ್ತಯಸ್ತ್ವೇತಾಃ ಮಮಾಕಾರಾದಿಲಕ್ಷಕಾಃ॥ ॥೧೦॥**

ಅ॥ ಪ್ರಣವದಲ್ಲಿರತಕ್ಕ ಅಕಾರ ಮೊದಲಾದ ೮ ವರ್ಣಗಳ ಮಧ್ಯದಲ್ಲಿ ಅಕಾರದಿಂದ ೧೬ ಸ್ವರ ವರ್ಣಾತ್ಮಕ ೪ ವರ್ಗವು ವ್ಯಕ್ತವಾಯ್ತು. 1) ಅಜ 2) ಆನಂದ 3) ಇಂದ್ರ 4) ಈಶ 5) ಉಗ್ರ 6) ಊರ್ಜ 7) ಋತಂಭರ 8) ಋಘ 9) ಲೃಶ 10) ಲೄಜಿ 11) ಏಕಾತ್ಮಾ 12) ಐರ 13) ಓಜೋಭೃತ್ 14) ಔರಸ 15) ಅಂತ 16) ಅರ್ಧಗರ್ಭ, ಎಂದೂ (೨) ಉಕಾರದಿಂದ 17 ಕಪಿಲ, 18) ಖಪತಿ, 19) ಗರುಡಾಸನ, 20) ಘರ್ಮ 21) ಙಸಾರ (೩) ಮಕಾರದಿಂದ 22) ಚಾರ್ವಂಗ 23) ಛಂದೋಗಮ್ಯ 24) ಜನಾರ್ದನ, 25) ಝಾಟಿತಾರಿ 26) ಞಮ, (೪) ನಾದದಿಂದ 27) ಟಂಕೀ, 28) ಠಲಕ, 29) ಡರಕ 30) ಢರೀ 31) ಣಾತ್ಮಾ ೫) ಬಿಂದುವಿನಿಂದ 32) ತಾರ 33) ಥಭ 34) ದಂಡೀ 35) ಧನ್ವೀ 36) ನಮ್ಯ (೬) ಘೋಷದಿಂದ 37) ಪರ, 38) ಫಲೀ, 39) ಬಲೀ 40) ಭಗ, 41) ಮನು, ೭) ಶಾಂತದಿಂದ 42) ಯಜ್ಞ 43) ರಾಮ 44) ಲಕ್ಷ್ಮೀಪತಿ 45) ವರ, (೮) ಅತಿಶಾಂತದಿಂದ 46) ಶಾಂತಸಂವಿತ್ 47) ಷಡ್ಗುಣ 48) ಸಾರಾತ್ಮಾ 49) ಹಂಸ 50) ಳಾಳುಕ ಎಂಬೀ ನನ್ನ ೫೦ ರೂಪಗಳು ಆಕಾರ ಮೊದಲಾದ ೫೦ ವರ್ಣಗಳಿಂದ ಹೇಳಲ್ಪಡತಕ್ಕವುಗಳು. ॥೬-೧೦॥

**ಮೂ ॥ ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರಭೇದವಾನ್ ।**
**ಆದ್ಯೈಸ್ತ್ರಿಚತುರ್ವರ್ಣೈರ್ಭಿನ್ನಾ ವ್ಯಾಹೃತಯಃ ಕ್ರಮಾತ್॥ ॥೧೧॥**

ಅ॥ 'ಓಂ ನಮೋ ನಾರಾಯಣಾಯ' ಎಂಬ ೮ ಅಕ್ಷರಗಳುಳ್ಳ ಮಂತ್ರವು ಪ್ರಣವಮಂತ್ರದ ೮ ಅಕ್ಷರಗಳಿಂದಲೇ ಅಭಿವ್ಯಕ್ತವು. (ಅಂದರೆ ನಾರಾಯಣಾಷ್ಟಾಕ್ಷರದ ೮ ಅಕ್ಷರಗಳು ಪ್ರಣವದ ೮ ಅಕ್ಷರಗಳ ಅರ್ಥವನ್ನು ಕ್ರಮದಿಂದ ಹೇಳುತ್ತವೆ.) ಆಕಾರ ಉಕಾರ ಮಕಾರ ನಾದಗಳೆಂಬ ಪ್ರಣವದ ಪ್ರಥಮ ೪ ವರ್ಣಗಳಿಂದ ಕ್ರಮವಾಗಿ ಭೂಃ, ಭುವಃ, ಸ್ವಃ, ಭೂರ್ಭುವಃಸ್ವಃ, ಎಂಬೀ ೪ ವ್ಯಾಹೃತಿಗಳು ಅಭಿವ್ಯಕ್ತಗಳಾಗಿವೆ. ॥೧೧॥

ಮೂ॥ ಅನಿರುದ್ಧಾದಿಕಾಸ್ತಾಸಾಂ ದೇವತಾ ವ್ಯತ್ಕ್ರಮೇಣ ವಾ ।
ತಾಶ್ಚತುರ್ಮೂರ್ತಯಸ್ತ್ವೇವ ದ್ವಾದಶಾರ್ಣಪದೋದಿತಾಃ ॥೧೨॥

ಅ॥ ಆ ಭೂರಾದಿ ೪ ವ್ಯಾಹೃತಿಗಳಿಂದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ೪ ಭಗವದ್ರೂಪಗಳು ಈ ಕ್ರಮದಿಂದ ಅಥವಾ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂದು ವ್ಯತ್ಕ್ರಮದಿಂದ ಪ್ರತಿಪಾದ್ಯಗಳು, ಅನಿರುದ್ಧ ಮೊದಲಾದ ಆ ೪ ಭಗವದ್ರೂಪಗಳೇ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರದ ಓಂಕಾರಾದಿ ೪ ಪದಗಳಿಂದ (ಅಂದರೆ ಓಂಕಾರದಿಂದ ವಾಸುದೇವ, ನಮಃ ಪದದಿಂದ ಸಂಕರ್ಷಣ, ಭಗವತೇ ಎಂಬ ಪದದಿಂದ ಪ್ರದ್ಯುಮ್ನ ವಾಸುದೇವಾಯ ಎಂಬ ಪದದಿಂದ ಅನಿರುದ್ಧ ಎಂದು) ವಾಸುದೇವಾದಿ ಕ್ರಮದಿಂದಲೇ ಪ್ರತಿಪಾದಿಸಲ್ಪಡುತ್ತವೆ.॥೧೨॥

ಮೂ॥ ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿಭ್ಯಸ್ತಥೈವ ಚ ।
ವಿಭೇದೋ ದ್ವಾದಶಾರ್ಣಾನಾಂ ಕೇಶವಾದ್ಯಾಶ್ಚ ದೇವತಾಃ॥ ॥೧೩॥

ಅ॥ ನಾರಯಣಾಷ್ಟಾಕ್ಷರ ಮಂತ್ರದಲ್ಲಿರತಕ್ಕ ೮ ಅಕ್ಷರಗಳಿಂದಲೂ, ಭೂರಾದಿ ೪ ವ್ಯಾಹೃತಿಗಳಿಂದಲೂ, ಹೀಗೆ ೧೨ ಅಕ್ಷರಗಳಿಂದ ವಾಸುದೇವ ದ್ವಾದಶಾಕ್ಷರ ಮಂತ್ರದಲ್ಲಿರತಕ್ಕ ೧೨ ಅಕ್ಷರಗಳು ಅಭಿವ್ಯಕ್ತಗಳಾದುವು. ಆ ೧೨ ಅಕ್ಷರಗಳು ಕ್ರಮದಿಂದ ಕೇಶವ ಮೊದಲಾದ ೧೨ ಭಗವದ್ರೂಪಗಳನ್ನು ಪ್ರತಿಪಾದಿಸುತ್ತವೆ. ॥೧೩॥

ಮೂ॥ ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಪುನಃ ।
ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್॥ ॥೧೪॥

ಅ॥ ನಾರಾಯಣಾಷ್ಟಾಕ್ಷರ ಮಂತ್ರದಲ್ಲಿರತಕ್ಕ ೮ ಅಕ್ಷರಗಳಿಂದಲೂ, ಮೂರಾವರ್ತಿ ಉಚ್ಚರಿಸಿದ ವ್ಯಾಹೃತಿಗಳಿಂದಲೂ, ತಿರುಗಿ ಒಂದಾವರ್ತಿ ಉಚ್ಚರಿಸಿದ ವ್ಯಾಹೃತಿಯಿಂದಲೂ (ಅಂದರೆ ೧೬ ವ್ಯಾಹೃತಿಗಳಿಂದಲೂ) ಹೀಗೆ ೨೪ ಅಕ್ಷರಗಳಿಂದ ವೇದಗಳನ್ನಧ್ಯಯನ ಮಾಡುವವರಿಗೆ ಬ್ರಾಹ್ಮಣ್ಯವನ್ನು ಸಂಪಾದಿಸಿ ಕೊಟ್ಟು ವೇದಗಳನ್ನು ಪೋಷಿಸುವುದರಿಂದ ವೇದಮಾತೃ ಎನಿಸಿಕೊಂಡ ೨೪ ಅಕ್ಷರಗಳುಳ್ಳ ಗಾಯತ್ರಿ ಎಂಬ ಮಂತ್ರವು ಅಭಿವ್ಯಕ್ತವಾಯ್ತು. ॥೧೪॥

ಮೂ॥ ಚತುರ್ವಿಂಶನ್ಮೂರ್ತಯೋऽಸ್ಯಾಃ ಕಥಿತಾ ವರ್ಣದೇವತಾಃ ।
ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ॥ ॥೧೫॥

ಅ॥ ಕೇಶವಾದಿ ೧೨, ಸಂಕರ್ಷಣಾದಿ ೧೨, ಹೀಗೆ ೨೪ ಭಗವನ್ಮೂರ್ತಿಗಳು ಗಾಯತ್ರಿಯ ೨೪ ಅಕ್ಷರಗಳಿಗೆ ಪ್ರತಿಪಾದ್ಯದೇವತೆಗಳು. ಕೇವಲ ವಿಷ್ಣುಪ್ರತಿಪಾದಕವಾದ ೩ ವರ್ಗಗಳುಳ್ಳ ಪುರುಷ ಸೂಕ್ತವು ಗಾಯತ್ರಿಯಿಂದ ಅಭಿವ್ಯಕ್ತವಾದುದು. (ಅಂದರೆ ಪುರುಷಸೂಕ್ತವು ೩ ವರ್ಗಗಳಿಂದ ಗಾಯತ್ರಿಯ ೩ ಪಾದಗಳ ಅರ್ಥಗಳನ್ನು ಹೇಳುತ್ತದೆ.) ವೇದಗಳು ಪುರುಷಸೂಕ್ತದಿಂದ ಅಭಿವ್ಯಕ್ತಗಳು. (ಅಂದರೆ ಪುರುಷಸೂಕ್ತಕ್ಕೆ ವ್ಯಾಖ್ಯಾನ ರೂಪಗಳು) ॥೧೫॥

ಮೂ ॥ ವೈದಿಕಾಃ ಸರ್ವಶಬ್ದಾಶ್ಚ ತಸ್ಮಾತ್ಸರ್ವಾಭಿಧೋऽಸ್ಮ್ಯಹಂ ।
ಪಂಚಾಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋऽಪಿ ಚ॥ ॥೧೬॥

ಅ॥ ಪುರಾಣ ಇತಿಹಾಸಾದಿರೂಪಗಳಾದ ಸಂಸ್ಕೃತ ಶಬ್ದಗಳೆಲ್ಲವೂ ವೇದಗಳಿಂದಲೇ ಅಭಿವ್ಯಕ್ತಗಳು. (ವೇದಗಳಿಗೆ ವ್ಯಾಖ್ಯಾನರೂಪಗಳು) ವೈದಿಕ ಲೌಕಿಕ ಎಲ್ಲಾ ಶಬ್ದಗಳೂ ಪ್ರಣವ ವ್ಯಾಖ್ಯಾನಭೂತಗಳಾದ ೫೦ ಅಕ್ಷರಗಳಿಂದಲೇ ಅಭಿವ್ಯಕ್ತಗಳು. ಧ್ವನ್ಯಾತ್ಮಕ ಶಬ್ದಗಳೂ ಭಗವದ್ವಾಚಕಗಳು. ಆದ ಕಾರಣದಿಂದಲೂ ನಾನೇ ಸರ್ವಶಬ್ದವಾಚ್ಯನು. ॥೧೬॥

ಅವ ॥ "ಯೋ ಹ ವಾ ಅವಿದಿತಾರ್ಷಚ್ಛಂದಃ" ಇತ್ಯಾದಿ ಶ್ರುತಿಯಿಂದ ಋಷಿ ಛಂದಸ್ಸು ದೇವತೆಗಳ ಜ್ಞಾನಾವಶ್ಯಕವಾದ ಕಾರಣ ಅವುಗಳನ್ನು ಆಚಾರ್ಯರು ನಿರೂಪಿಸುತ್ತಾರೆ.

**ಮೂ॥ ಋಷಿಶ್ಚ ದೇವತ್ವೈಕೋಽಹಂ ತಾರಾದೀನಾಂ ವಿಶೇಷತಃ ।**
**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ** ॥೧೭॥

ಅ॥ ಪ್ರಣವ ಮೊದಲಾದ ಸಮಸ್ತ ಮಂತ್ರಗಳಿಗೂ ನಾನೇ ಮುಖ್ಯವಾಗಿ ದ್ರಷ್ಟ್ಯ ಮತ್ತು ಪ್ರತಿಪಾದ್ಯದೇವತೆಯು. ನನ್ನನ್ನಾಶ್ರಯಿಸಿರುವ ಲಕ್ಷ್ಮೀಯಿಂದ ಅಭಿಮನ್ಯಮಾನನಾದ ದೈವೀಗಾಯತ್ರಿಯು ಪ್ರಣವ ಅಷ್ಟಾಕ್ಷರಗಳಿಗೆ ಛಂದಸ್ಸು. (ಸಮಸ್ತ ಮಂತ್ರಗಳಿಗೂ ಮುಖ್ಯತಃ ಶ್ರೀ ಹರಿಯೇ ದ್ರಷ್ಟ್ಯ, ಪ್ರತಿಪಾದ್ಯ ದೇವತೆ. ಲಕ್ಷ್ಮೀಸೂಕ್ತ, ವಾಯುಸೂಕ್ತ, ಇತ್ಯಾದಿಗಳಲ್ಲಿಯೂ ಲಕ್ಷ್ಮ್ಯಾದಿಗಳು ಅಮುಖ್ಯತಃ ಪ್ರತಿಪಾದ್ಯರು. ಶ್ರೀ ಹರಿಯೊಬ್ಬನೇ ಮುಖ್ಯ ಪ್ರತಿಪಾದ್ಯನು.) ॥೧೭॥

**ಮೂ ॥ ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।**
**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ॥** ॥೧೮॥
**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ॥** ॥೧೯॥
**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್।**
**ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ॥** ॥೨೦॥
**ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ।**
**ತಾದೃಗ್ರೂಪಾಶ್ಚ ಪಂಚಾಶಜ್ಜ್ಞಾನಮುದ್ರಾಭಯೋದ್ಯತಾಃ॥** ॥೨೧॥

ಅ॥ ಉದಯಿಸುವ ಸೂರ್ಯನಂತೆ ಪ್ರಕಾಶಿಸುವವನೂ, ಜ್ಞಾನಾನಂದಾತ್ಮಕದೇಹವುಳ್ಳವನೂ (ಬಲಕ್ಕೆ ಮೊದಲಾದ ೪ ಕೈಗಳಲ್ಲಿ ಕ್ರಮವಾಗಿ) ಚಕ್ರ ಶಂಖ ಗದಾ ಪದ್ಮಗಳನ್ನು ಧರಿಸಿರುವವನೂ, (ಎಡ ಬಲ ಪಾರ್ಶ್ವಗಳಲ್ಲಿ) ಶ್ರೀ ಭೂಮಿಯರಿಂದ ಆಲಿಂಗಿತನೂ, ವಿಶ್ವ ತೈಜಸ ಮೊದಲಾದ ೮ ಮೂರ್ತಿಗಳ ನಡುವೆ ಇರುವವನೂ ಅಥವಾ ಐದು ಆವರಣಭೂತಗಳಾದ ತನ್ನ ರೂಪಗಳ ನಡುವೆ ಇರುವವನೂ, ೬ನೇ ಆವರಣಭೂತರಾದ ಬ್ರಹ್ಮ ವಾಯು ರುದ್ರ ಶೇಷ ಗರುಡರಿಂದಲೂ, ೭ನೇ ಆವರಣಭೂತರಾದ ಇಂದ್ರ ಮೊದಲಾದ ೧೦ ಮಂದಿ ಲೋಕಪಾಲಕರಿಂದಲೂ ಪರಮಭಕ್ತಿಯಿಂದ ಸರ್ವೋತ್ತಮನೆಂದು ಸೇವಿಸಲ್ಪಡುವವನೂ, ನಿತ್ಯವಾದ ಪರಿಪೂರ್ಣ ಶಕ್ತಿಯುಳ್ಳವನೂ, ಸರ್ವೇಶ್ವರನೂ ಆದ ನನ್ನನ್ನು ಸರ್ವದಾ ಧ್ಯಾನಿಸಬೇಕು. (ಎಂದು ಚತುರ್ಮುಖನನ್ನು ಕುರಿತು ಶ್ರೀ ನಾರಾಯಣನ ವಾಕ್ಯವು) ದೀಪದಂತೆ ಪ್ರಕಾಶವುಳ್ಳವುಗಳೂ, ಸಮಸ್ತ ಆಭರಣಗಳಿಂದ ಆಲಂಕೃತಗಳೂ, ಚಕ್ರ, ಶಂಖ, ವರ, ಅಭಯ ಮುದ್ರೆಗಳನ್ನು ಕೈಗಳಿಂದ ಧರಿಸಿದವುಗಳೂ ಆದ ಆ ವಿಶ್ವಾದಿ ೮ ಭಗವದ್ರೂಪಗಳನ್ನು ಧ್ಯಾನಿಸಬೇಕು. ಮತ್ತು ಅಜಾದಿ ೫೦ ಭಗವದ್ರೂಪಗಳು ಮೂಲ ರೂಪ ಸದೃಶಗಳಾದ ಉದಯಿಸುವ ಸೂರ್ಯನಂತೆ ಪ್ರಕಾಶವುಳ್ಳವುಗಳು. ಜ್ಞಾನಮುದ್ರೆ ಅಭಯಮುದ್ರೆಗಳನ್ನು ಎರಡು ಕೈಗಳಿಂದ ಧರಿಸಿದವುಗಳು. ॥೧೮-೨೧॥

**ಮೂ ॥ ಟಂಕೀ ದಂಡೀ ಚ ಧನ್ವೀ ಚ ತತ್ತದ್ಯುಕ್ತಾಸ್ತು ವಾಮತಃ ।**
**ವಾಸುದೇವಾದಿಕಾಃ ಶುಕ್ಲರಕ್ತಪೀತಾಸಿತೋಜ್ವಲಾಃ॥** ॥೨೨॥
**ಚಕ್ರ ಶಂಖ ಗದಾಜ್ಜೇತಃ ಪ್ರಥಮೋ ಮುಸಲೀ ಹಲೀ ।**

ಸಚಕ್ರಶಂಖಸ್ತ್ವಪರಸ್ತೃತೀಯಃ ಶಾರ್ಙ್ಗಬಾಣವಾನ್॥ ॥೨೩॥
ಸಶಂಖಚಕ್ರಸ್ತುರ್ಯಸ್ತು ಚಕ್ರಶಂಖಾಸಿಚರ್ಮವಾನ್। ॥೨೪॥

ಅ॥ ಆದರೆ ಅಜಾದಿ ೫೦ ಭಗವದ್ರೂಪಗಳ ಮಧ್ಯದಲ್ಲಿ ಟಂಕೀ, ದಂಡೀ, ಧನ್ವೀ, ಎಂಬ ೩ ಭಗವದ್ರೂಪಗಳು, ಎಡಗೈಯಲ್ಲಿ ಅಭಯ, ಮುದ್ರಾಸ್ಥಾನದಲ್ಲಿ ಟಂಕ (ಕಲ್ಲು ಚೇಣು)ವನ್ನೂ, ದಂಡವನ್ನೂ, ಧನುಸ್ಸನ್ನೂ ಧರಿಸಿವೆ. ಚತುರ್ಮೂರ್ತಿಗಳಲ್ಲಿ ವಾಸುದೇವನಿಗೆ ಬಿಳಿಪು, ಸಂಕರ್ಷಣನಿಗೆ ಕೆಂಪು, ಪ್ರದ್ಯುಮ್ನನಿಗೆ ಹಳದಿ, ಅನಿರುದ್ಧನಿಗೆ ನೀಲ ರೂಪಗಳಿವೆ. ವಾಸುದೇವನು ಚಕ್ರ, ಶಂಖ, ಗದಾಪದ್ಮಗಳನ್ನೂ, ಸಂಕರ್ಷಣನು ಚಕ್ರ, ಶಂಖ, ಮುಸಲ, ಹಲಾಯುಧಗಳನ್ನೂ ಪ್ರದ್ಯುಮ್ನನು ಶಂಖ, ಚಕ್ರ, ಧನುಸ್ಸು ಬಾಣಗಳನ್ನೂ, ಅನಿರುದ್ಧನು ಚಕ್ರ, ಶಂಖ, ಖಡ್ಗ, ಚರ್ಮಗಳನ್ನೂ ಹೀಗೆ ಈ ನಾಲ್ವರೂ ನಾಲ್ಕು ನಾಲ್ಕು ಭುಜಗಳಿಂದ ಧರಿಸಿರುತ್ತಾರೆ. ॥೨೨-೨೪॥

ಮೂ ॥ ಕೇಶವೋ ಮಧುಸೂದನಃ ಸಂಕರ್ಷಣದಾಮೋದರೌ ।
ಸವಾಸುದೇವಃ ಪ್ರದ್ಯುಮ್ನೋ ದಕ್ಷೋಚ್ಚಕರಶಂಖಿನಃ॥ ॥೨೫॥

ಅ ॥ ಕೇಶವ, ಮಧುಸೂದನ, ಸಂಕರ್ಷಣ, ದಾಮೋದರ, ವಾಸುದೇವ, ಪ್ರದ್ಯುಮ್ನ ಈ ೬ ಭಗವನ್ಮೂರ್ತಿಗಳು ಮೇಲಿನ ಬಲಗೈಯಲ್ಲಿ ಶಂಖವನ್ನು ಧರಿಸಿರುತ್ತವೆ. ॥೨೫॥

ಮೂ॥ ವಿಷ್ಣುಮಾಧವಾನಿರುದ್ಧಪುರುಷೋತ್ತಮಾಧೋಕ್ಷಜಾಃ ।
ಜನಾರ್ದನಶ್ಚ ವಾಮೋಚ್ಚಕರಸ್ಥಿತದರಾ ಮತಾಃ॥ ॥೨೬॥

ಅ॥ ವಿಷ್ಣು, ಮಾಧವ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ಜನಾರ್ದನ ಈ ೬ ಭಗವನ್ಮೂರ್ತಿಗಳ ಮೇಲಿನ ಎಡಗೈಯಲ್ಲಿ ಶಂಖವಿದೆ.

ಮೂ॥ ಗೋವಿಂದಶ್ಚ ತ್ರಿವಿಕ್ರಮಃ ಸಶ್ರೀಧರಹೃಷೀಕಪಾಃ ।
ನೃಸಿಂಹಶ್ಚಾಚ್ಯುತಶ್ಚೈವ ವಾಮಾಧಃಕರಶಂಖಿನಃ॥ ॥೨೭॥

ಅ॥ ಗೋವಿಂದ, ತ್ರಿವಿಕ್ರಮ, ಶ್ರೀಧರ, ಹೃಷಿಕೇಶ, ನೃಸಿಂಹ, ಅಚ್ಯುತ, ಈ ೬ ಭಗವನ್ಮೂರ್ತಿಗಳ ಕೆಳಗಿನ ಎಡಗೈಯಲ್ಲಿ ಶಂಖವಿದೆ. ॥೨೭॥

ಮೂ॥ ವಾಮನಃ ಸನಾರಾಯಣಃ ಪದ್ಮನಾಭ ಉಪೇಂದ್ರಕಃ ।
ಹರಿಃಕೃಷ್ಣಶ್ಚ ದಕ್ಷಾಧಃಕರೇ ಶಂಖಧರಾ ಮತಾಃ । ॥೨೮॥

ಅ॥ ವಾಮನ, ನಾರಾಯಣ, ಪದ್ಮನಾಭ, ಉಪೇಂದ್ರ, ಹರಿ, ಶ್ರೀಕೃಷ್ಣ, ಈ ೬ ಭಗವದ್ರೂಪಗಳ ಕೆಳಗಿನ ಬಲಗೈಯಲ್ಲಿ ಶಂಖವಿದೆ. ॥೨೮॥

ಮೂ॥ ಶಂಖ ಚಕ್ರ ಗದಾ ಪದ್ಮಧರಾಶ್ಚೈತೇ ಹಿ ಸರ್ವಶಃ ।
ಕ್ರಮವ್ಯುತ್ಕ್ರಮಪದ್ಮಾದಿ ಗದಾದಿ ವ್ಯುತ್ಕ್ರಮಸ್ತಥಾ ।
ಅರ್ಧಕ್ರಮಃ ಸಾಂತರಶ್ಚ ಷಟ್ಸು ಷಟ್ಸ್ವರಿಪೂರ್ವಿಣಾಮ್ ॥೨೯॥

ಅ॥ ಕೇಶವ ಮೊದಲಾದ ೨೪ ಭಗವದ್ರೂಪಗಳೂ ಶಂಖ ಚಕ್ರ ಗದಾ ಪದ್ಮಗಳಿಂದ ಕೂಡಿದ ೪, ೪, ಕೈಯುಳ್ಳವುಗಳು. (೬, ೬ ಭಗವದ್ರೂಪಗಳ ೪ ಗುಂಪುಗಳಲ್ಲಿಯೂ ಹೀಗೆ ವೈಲಕ್ಷಣಗಳನ್ನು ತಿಳಿಯಬೇಕು) ಕ್ರಮ-ಹಿಂದೆ ಹೇಳಿದಂತೆ ಕ್ರಮವಾಗಿ ಚಕ್ರ ಗದಾ

ಪದ್ಮಗಳು. ವ್ಯುತ್ಕ್ರಮ = ಪದ್ಮಗದಾಚಕ್ರಗಳು. ಪದ್ಮಾದಿ ಕ್ರಮ = ಪದ್ಮ ಚಕ್ರ ಗದೆಗಳು, ಗದಾದಿವ್ಯುತ್ಕ್ರಮ =ಗದಾ ಚಕ್ರ ಪದ್ಮಗಳು. ಅರ್ಧಕ್ರಮ =ಚಕ್ರ ಪದ್ಮಗದೆಗಳು. ಸಾಂತರಃಕ್ರಮಃ=ಗದಾ ಪದ್ಮಚಕ್ರಗಳು. ಹೀಗೆ ೬ ಪ್ರಕಾರಗಳನ್ನು ಕೇಶವ ಮೊದಲಾದ ೬, ೬, ಭಗವದ್ರೂಪಗಳ ನಾಲ್ಕು ಗುಂಪಿನಲ್ಲಿಯೂ ಚಕ್ರ ಗದಾ ಪದ್ಮಗಳೆಂಬ ಆಯುಧಗಳನ್ನೂ ತಿಳಿಯಬೇಕು.

ಹೀಗೆ ಚಕ್ರ ಮೊದಲಾದ ಆಯುಧಗಳನ್ನು ಕ್ರಮ ಮೊದಲಾದ ಆರು ಪ್ರಕಾರಗಳಿಂದ ಪ್ರತಿ ೬, ೬ರಲ್ಲಿಯಲ್ಲಿಯೂ ೬ ಭಗವನ್ಮೂರ್ತಿಗಳಿಗೆ ವೈಲಕ್ಷಣ್ಯವನ್ನೂ ತಿಳಿಯಬೇಕು.

ಹೇಗೆಂದರೆ - ಮೇಲಿನ ಬಲಗೈ, ಮೇಲಿನ ಎಡಗೈ, ಕೆಳಗಿನ ಎಡಗೈ, ಕೆಳಗಿನ ಬಲಗೈ, ಇವುಗಳಲ್ಲಿ ಕ್ರಮವಾಗಿ (೧) ಕೇಶವನಿಗೆ - ಶಂಖ, ಚಕ್ರ, ಗದಾ, ಪದ್ಮಗಳೆಂದು ಕ್ರಮವು (೨) ಮಧುಸೂದನನಿಗೆ - ಶಂಖ ಪದ್ಮ, ಗದಾ, ಚಕ್ರಗಳು, ಎಂದು ವ್ಯುತ್ಕ್ರಮವು (೩) ಸಂಕರ್ಷಣನಿಗೆ - ಶಂಖ, ಪದ್ಮ, ಚಕ್ರ, ಗದೆಗಳು ಎಂದು ಪದ್ಮಾದಿಕ್ರಮವು (೪) ದಾಮೋದರನಿಗೆ - ಶಂಖ, ಗದಾ, ಚಕ್ರ, ಪದ್ಮಗಳು ಎಂದು ಗದಾದಿವ್ಯುತ್ಕ್ರಮವು (೫) ವಾಸುದೇವನಿಗೆ - ಶಂಖ, ಚಕ್ರ, ಪದ್ಮ, ಗದೆಗಳು ಎಂದು ಅರ್ಧಕ್ರಮವು (೬) ಪ್ರದ್ಯುಮ್ನನಿಗೆ - ಶಂಖ, ಗದಾ, ಪದ್ಮ, ಚಕ್ರಗಳು, ಎಂದು ಸಾಂತರ ಕ್ರಮವು, ಹೀಗೆ ಮೇಲಿನ ಬಲಗೈಯಲ್ಲಿ ಶಂಖವನ್ನು ಧರಿಸಿರುವ ಕೇಶವಾದಿ ೬ ಭಗವನ್ಮೂರ್ತಿಗಳಿಗೆ ಪರಸ್ಪರ ವೈಲಕ್ಷಣ್ಯವನ್ನು ತಿಳಿಯಬೇಕು.

ಮೇಲಿನ ಎಡಗೈ, ಕೆಳ ಎಡಗೈ, ಬಲ ಕೆಳಗೈ, ಮೇಲಿನ ಬಲಗೈ, ಇವುಗಳಲ್ಲಿ ಕ್ರಮವಾಗಿ (೧) ಶ್ರೀ ವಿಷ್ಣುವಿಗೆ - ಶಂಖ, ಚಕ್ರ, ಗದಾ, ಪದ್ಮಗಳು (೨) ಮಾಧವನಿಗೆ - ಶಂಖ, ಪದ್ಮ, ಗದಾ, ಚಕ್ರಗಳು (೩) ಅನಿರುದ್ಧನಿಗೆ - ಶಂಖ, ಪದ್ಮ, ಚಕ್ರ, ಗದೆಗಳು (೪) ಪುರುಷೋತ್ತಮನಿಗೆ - ಶಂಖ, ಗದಾ, ಚಕ್ರ, ಪದ್ಮಗಳು (೫) ಅಧೋಕ್ಷಜನಿಗೆ - ಶಂಖ, ಚಕ್ರ, ಪದ್ಮ, ಗದೆಗಳು (೬) ಜನಾರ್ದನನಿಗೆ ಶಂಖ, ಗದಾ, ಪದ್ಮ, ಚಕ್ರಗಳು, ಹೀಗೆ ಎಡ ಮೇಲಿನ ಕೈಯಲ್ಲಿ ಶಂಖವುಳ್ಳ ವಿಷ್ಣ್ವಾದಿ ೬ ಭಗವನ್ಮೂರ್ತಿಗಳಿಗೆ ಪರಸ್ಪರ ವೈಲಕ್ಷಣ್ಯವು.

ಕೆಳ ಎಡಗೈ, ಕೆಳಬಲಗೈ, ಬಲ ಮೇಲಿನ ಕೈ, ಮೇಲಿನ ಎಡ ಕೈ, ಇವುಗಳಲ್ಲಿ ಕ್ರಮವಾಗಿ (೧) ಗೋವಿಂದನಿಗೆ - ಶಂಖ, ಚಕ್ರ, ಗದಾ, ಪದ್ಮಗಳು (೨) ತ್ರಿವಿಕ್ರಮನಿಗೆ - ಶಂಖ, ಪದ್ಮ, ಗದಾ, ಚಕ್ರಗಳು (೩) ಶ್ರೀಧರನಿಗೆ - ಶಂಖ, ಪದ್ಮ, ಚಕ್ರ, ಗದೆಗಳು (೪) ಹೃಷೀಕೇಶನಿಗೆ - ಶಂಖ, ಗದಾ, ಚಕ್ರ, ಪದ್ಮಗಳು (೫) ನರಸಿಂಹನಿಗೆ - ಶಂಖ, ಚಕ್ರ, ಪದ್ಮ, ಗದೆಗಳು (೬) ಅಚ್ಯುತನಿಗೆ - ಶಂಖ, ಗದಾ, ಪದ್ಮ, ಚಕ್ರಗಳು, ಹೀಗೆ ಎಡ ಕೆಳ ಕೈಯಲ್ಲಿ ಶಂಖಧಾರಿಗಳಾದ ಗೋವಿಂದಾದಿ ೬ ಭಗವನ್ಮೂರ್ತಿಗಳ ವೈಲಕ್ಷಣ್ಯವು.

ಬಲ ಕೆಳಗೈ, ಮೇಲಿನ ಬಲಗೈ, ಮೇಲಿನ ಎಡಗೈ, ಎಡ ಕೆಳಗಿನ ಕೈ, ಇವುಗಳಲ್ಲಿ ಕ್ರಮವಾಗಿ, (೧) ವಾಮನನಿಗೆ - ಶಂಖ, ಚಕ್ರ, ಗದಾ, ಪದ್ಮಗಳು (೨) ನಾರಾಯಣನಿಗೆ - ಶಂಖ, ಪದ್ಮ, ಗದಾ, ಚಕ್ರಗಳು (೩) ಪದ್ಮನಾಭನಿಗೆ - ಶಂಖ, ಪದ್ಮ, ಚಕ್ರ, ಗದೆಗಳು (೪) ಉಪೇಂದ್ರನಿಗೆ - ಶಂಖ, ಗದಾ, ಚಕ್ರ, ಪದ್ಮಗಳು (೫) ಹರಿಗೆ - ಶಂಖ, ಚಕ್ರ, ಪದ್ಮ, ಗದೆಗಳು (೬) ಕೃಷ್ಣನಿಗೆ - ಶಂಖ, ಗದಾ, ಪದ್ಮ, ಚಕ್ರಗಳು ಹೀಗೆ ಬಲ ಕೆಳ ಕೈಯಲ್ಲಿ ಶಂಖಧಾರಿಗಳಾದ ವಾಮನಾದಿ ೬ ಭಗವನ್ಮೂರ್ತಿಗಳ ವೈಲಕ್ಷಣ್ಯವನ್ನು ತಿಳಿಯಬೇಕು.॥೨೯॥

ಮೂ॥ ವರ್ಣಾನಾಂ ದೇವತಾನಾಂ ಚ ನಿತ್ಯತ್ವಾನ್ನ ಕ್ರಮಃ ಸ್ಮೃತಃ ।
ವ್ಯಕ್ತಿಕ್ರಮಂ ಬ್ರಹ್ಮಬುದ್ಧಾವಪೇಕ್ಷ್ಯ ಕ್ರಮ ಉಚ್ಯತೇ॥ ॥೩೦॥

ಅ॥ ಯದ್ಯಪಿ ಅಕರಾದಿ ವರ್ಣಗಳೂ ಅವುಗಳ ದೇವತೆಗಳೂ ನಿತ್ಯಗಳಾದುದರಿಂದಲೂ, ವ್ಯಾಪ್ತಗಳಾದುದರಿಂದಲೂ, ಸ್ವಾಭಾವಿಕವಾಗಿ ದೈಶಿಕ ಕ್ರಮವಾಗಲೀ, ಕಾಲಿಕಕ್ರಮವಾಗಲೀ ಇಲ್ಲ. (ಅಂದರೆ ಇಂತಹ ದೇಶದಲ್ಲಿ ಇಂತಹ ಕಾಲದಲ್ಲಿ ಈ ವರ್ಣದ ಮೇಲೆ ಇದು ಹುಟ್ಟತೆಂಬುದನ್ನು ಇಲ್ಲ. ಎಲ್ಲಾ ದೇಶಕಾಲಗಳಲ್ಲಿಯೂ ಎಲ್ಲಾ ವರ್ಣಾದಿಗಳೂ ಇವೆ.) ಆದರೂ ಬ್ರಹ್ಮನು ಬುದ್ಧಿಯಿಂದ ಯಾವ ವರ್ಣಾದಿಗಳನ್ನು ಪ್ರಥಮತಃ ವಿಷಯೀಕರಿಸಿರುತ್ತಾನೋ ಅದು ಒಂದನೇದ್ದು. ಮೇಲಿನದ್ದು ಎರಡನೇದ್ದು. ಹೀಗೆ ವ್ಯಕ್ತಿಕ್ರಮವನ್ನು ಇಟ್ಟುಕೊಂಡು ವರ್ಣಗಳಿಗೂ ದೇವತೆಗಳಿಗೂ ಪೂರ್ವಾಪರೀಭಾವಕ್ರಮವು ॥೩೦॥

ಮೂ || ಸಮಾಸವ್ಯಾಸಯೋಗೇನ ವ್ಯಾಹೃತೀನಾಂ ಚತುಷ್ಟಯಂ |
ಸತ್ಯಂ ಚಾಂಗಾನಿ ತಾರಸ್ಯ ಪ್ರೋಚ್ಯಂತೇಽಷ್ಟಾಕ್ಷರಸ್ಯ ಚ ||೩೧||
ಕ್ರುದ್ಧ ಮಹಾವೀರದ್ಯುಸಹಸ್ರಸಹಿತೋಲ್ಕಕಾಃ |
ಚತುರ್ಥ್ಯಂತಾ ಹೃದಾದೀನಿ ಪೃಥಗ್ರೂಪಾಣಿ ತಾನಿ ಚ ||
ವಿಷ್ಣೋರೇವಾತ್ಮಭೇದೇಽಪಿ ತದ್ವೈಶ್ವರ್ಯಾತ್ತ್ವದನ್ಯವತ್| ||೩೨||

ಅ|| ಪ್ರಣವ ಮಂತ್ರಕ್ಕೆ - ಒಟ್ಟು ಸೇರುವಿಕೆ, ಪ್ರತ್ಯೇಕವಾಗಿ ಇರುವಿಕೆ ಎಂಬ ಉಪಾಯದಿಂದ ಅಂದರೆ `ಭೂರ್ಭುವಸ್ವಃ' ಎಂದು ಒಟ್ಟು ಸೇರಿ ೧ ವ್ಯಾಹೃತಿಯು, ಭೂಃ ಭುವಃ ಸ್ವಃ ಎಂದು ಪ್ರತ್ಯೇಕ, ಪ್ರತ್ಯೇಕ ೩ ವ್ಯಾಹೃತಿಗಳು ಹೀಗೆ ೪ ವ್ಯಾಹೃತಿಗಳು, `ಸತ್ಯಂ' ಎಂಬ ಪದವೂ ಹೀಗೆ ೫ ಪದಗಳು ಹೃದಯಾದಿ ಪಂಚಾಂಗಗಳಲ್ಲಿ ನ್ಯಾಸ ಮಂತ್ರಗಳೆಂತ ಹೇಳಲ್ಪಟ್ಟಿವೆ.

ಓಂ ಭೂಃ ಅನಿರುದ್ಧಾಯ ಹೃದಯಾಯ ನಮಃ, ಓಂ ಭುವಃ ಪ್ರದ್ಯುಮ್ನಾಯ ಶಿರಸೇ ಸ್ವಾಹಾ | ಓಂ ಸ್ವಃ ಸಂಕರ್ಷಣಾಯ ಶಿಖಾಯೈ ವೌಷಟ್ | ಓಂ ಭೂರ್ಭುವಃ ಸ್ವಃ ವಾಸುದೇವಾಯ ಕವಚಾಯ ಹುಂ | ಓಂ ಸತ್ಯಂ ನಾರಾಯಣಾಯಾಸ್ತ್ರಾಯ ಫಟ್. ಈ ಪ್ರಕಾರ ಪಂಚಾಂಗ ನ್ಯಾಸವನ್ನು ತಿಳಿಯಬೇಕು.

ಅಷ್ಟಾಕ್ಷರ ಮಂತ್ರಕ್ಕೆ - ಚತುರ್ಥೀ ವಿಭಕ್ತ್ಯಂತಗಳಾದ ಕ್ರುದ್ಧಾದಿಗಳಿಂದ ಕೂಡಿದ ಉಲ್ಕಗಳು. ಅಂದರೆ `ಕ್ರುದ್ಧೋಲ್ಕಾಯ ಹೃದಯಾಯ ನಮಃ' `ಮಹೋಲ್ಕಾಯ' `ವೀರೋಲ್ಕಾಯ' `ದ್ಯೂಲ್ಕಾಯ' `ಸಹಸ್ರೋಲ್ಕಾಯ' ಇವು ಐದು ಅಂಗನ್ಯಾಸ ಮಂತ್ರಗಳು. ಈ ಕ್ರುದ್ಧೋಲ್ಕಾದಿ ನಾಮವುಳ್ಳವುಗಳು, ಹೃದಯಾದ್ಯಂಗಗಳಲ್ಲಿ ನಿಯಾಮಕಗಳಾಗಿರುವುದರಿಂದ ಹೃದಯಾದಿನಾಮವುಳ್ಳವುಗಳೂ ಆದ ವಿಷ್ಣುವಿನ ಹಿಂದೆ ಹೇಳಿದ ರೂಪಗಳಿಂದ ಬೇರೆ ಐದು ರೂಪಗಳೂ ಇವೆ. ವಸ್ತುತಃ ಎಲ್ಲಾ ಭಗವದ್ರೂಪಗಳಿಗೂ ಶ್ರೀ ವಿಷ್ಣುವಿನಿಂದ ಅತ್ಯಂತಾಭೇದವಿದ್ದರೂ ಆತನ ಅಚಿಂತ್ಯ ಐಶ್ವರ್ಯ ಶಕ್ತಿಯಿಂದಲೇ ಶ್ರೀ ವಿಷ್ಣುವಿನಿಂದ ಬೇರೆ ಬೇರೆಯೆಂದೇ ಹೇಳಿಸಿ ಕೊಳ್ಳಲ್ಪಡುತ್ತದೆ. ||೩೧-೩೨||

ಮೂ || ಚಕ್ರ ಶಂಖ ವರಾಭೀತಿಹಸ್ತಾನ್ಯೇತಾನಿ ಸರ್ವಶಃ|| ||೩೩||
ಮೂಲರೂಪಸವರ್ಣಾನಿ ಕೃಷ್ಣವರ್ಣಾ ಶಿಖೋಚ್ಯತೇ |
ಚತುರ್ವಿಂಶನ್ಮೂರ್ತಯಶ್ಚ ಮೂಲರೂಪಸವರ್ಣಕಾಃ|| ||೩೪||

ಅ|| ಕ್ರುದ್ಧೋಲ್ಕ ಮೊದಲಾದ ೫ ಭಗವದ್ರೂಪಗಳೂ ೪ ಕೈಗಳಲ್ಲಿ ಚಕ್ರ ಶಂಖ ವರ ಅಭಯ ಮುದ್ರೆಗಳನ್ನೂ ಧರಿಸಿವೆ. ಅದರಲ್ಲಿ ಕ್ರುದ್ಧೋಲ್ಕ ಮೊದಲಾದ ೪ ಭಗವದ್ರೂಪಗಳಿಗೆ ಮೂಲ ರೂಪದಂತೆ ಸೂರ್ಯಸದೃಶ ಪ್ರಕಾಶವು. ಶಿಖೆಯಲ್ಲಿ ನಿಯಾಮಕವಾಗಿರುವ `ವೀರೋಲ್ಕ'ವೆಂಬ ಭಗವನ್ಮೂರ್ತಿಗೆ ಮಾತ್ರ ಕೃಷ್ಣವರ್ಣವು ಗಾಯತ್ರಿಯ ಅಕ್ಷರ ದೇವತೆಗಳಾದ ಕೇಶವಾದಿ ೨೪ ಭಗವನ್ಮೂರ್ತಿಗಳಿಗೂ ಮೂಲರೂಪದಂತೆ ಸೂರ್ಯಸದೃಶಪ್ರಕಾಶವು. ||೩೩-೩೪||

ಮೂ|| ಆದಿವರ್ಣತ್ರಯಂ ನಾಭಿಹೃಚ್ಛಿರಸ್ಸು ಯಥಾಕ್ರಮಮ್ |
ನ್ಯಸನೀಯಂ ಚ ತದ್ವರ್ಣದೇವತಾಧ್ಯಾನಪೂರ್ವಕಂ|| ||೩೫||

ಅ|| ಪ್ರಣವದ ೮ ಅಕ್ಷರಗಳ ಮಧ್ಯದಲ್ಲಿ ಮೊದಲಿನ ಅಕಾರ ಉಕಾರ ಮಕಾರಗಳಿಗೆ ಪ್ರತಿಪಾದ್ಯರಾದ ವಿಶ್ವತೈಜಸ ಪ್ರಾಜ್ಞರೆಂಬ ಭಗವದ್ರೂಪಗಳನ್ನು ಧ್ಯಾನಿಸುತ್ತಾ ನಾಭಿ ಹೃದಯ ಶಿರಸ್ಸುಗಳಲ್ಲಿ ಕ್ರಮವಾಗಿ ಅಕಾರ ಉಕಾರ ಮಕಾರಗಳ ನ್ಯಾಸವನ್ನು ಮಾಡಬೇಕು. ||೩೫||

ಮೂ|| ಪಜ್ಜಾನುನಾಭಿಹೃದಯವಾಜ್ಞಾಸಾನೇತ್ರಕೇಷುಚ |
ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾದ್ವ್ಯಾಹೃತೀನಾಂ ಪ್ರಜಾಪತಿಃ|| ||೩೬||

ಮುನಿಶ್ಛಂದಸ್ತು ಗಾಯತ್ರೀ ದೇವತಾ ಭಗವಾನ್ ಹರಿಃ ।
ಉದ್ಯದಾದಿತ್ಯವರ್ಣಶ್ಚ ಜ್ಞಾನಮುದ್ರಾಭಯೋದ್ಯತಃ॥ ॥೩೭॥

ಅ॥ ಅಷ್ಟಾಕ್ಷರ ಮಂತ್ರದ ಓಂಕಾರ ಮೊದಲಾದ ೮ ಅಕ್ಷರಗಳ ನ್ಯಾಸವನ್ನು ಪಾದ, ಮೊಣಕಾಲು, ನಾಭಿ, ಹೃದಯ, ವಾಕ್, ಮೂಗು, ನೇತ್ರ, ಶಿರಸ್ಸುಗಳಲ್ಲಿ ಕ್ರಮವಾಗಿ ಓಂ ಓಂ ವಿಶ್ವಾಯ ನಮಃ ಪಾದಯೋಃ, ಓಂ ನಂ ತೈಜಸಾಯ ನಮಃ ಜಾನ್ವೋಃ, ಇತ್ಯಾದಿ ಪ್ರಕಾರ ನ್ಯಾಸವನ್ನು ಮಾಡಬೇಕು. ವ್ಯಾಹೃತಿಗಳಿಗೆ ಚತುರ್ಮುಖನು ಋಷಿಯ (ಮಂತ್ರದ್ರಷ್ಟನು), ಛಂದಸ್ಸು ಗಾಯತ್ರಿಯು, ಉದಯಿಸುತ್ತಿರುವ ಸೂರ್ಯನಂತೆ ಪ್ರಕಾಶಿಸಿಕೊಂಡಿರುವವನೂ, ಎರಡು ಕೈಗಳಲ್ಲಿ ಜ್ಞಾನಮುದ್ರೆ, ಅಭಯಮುದ್ರೆಗಳನ್ನು ಧರಿಸಿಕೊಂಡಿರುವವನೂ ಆದ ಹರಿಯೇ ದೇವತೆಯು. ॥೩೬, ೩೭॥

ಮೂ॥ ತಾರೇಣ ವ್ಯಾಹೃತೀಭಿಶ್ಚ ಜ್ಞೇಯಾನ್ಯಂಗಾನಿ ಪಂಚ ಚ ।
ನಾಭಿಹೃತ್ಕೇಷು ಸರ್ವೇಷು ಚತಸ್ರೋ ವ್ಯಾಹೃತೀರ್ನ್ಯಸೇತ್॥ ॥೩೮॥

ಅ॥ ಪ್ರಣವದಿಂದಲೂ, ನಾಲ್ಕು ವ್ಯಾಹೃತಿಗಳಿಂದಲೂ, ಹೀಗೆ ಐದು ಪದಗಳಿಂದ `ಓಂ ಓಂ ನಾರಾಯಣಾಯ ಹೃದಯಾಯ ನಮಃ' `ಓಂ ಭೂಃ ವಾಸುದೇವಾಯ ಶಿರಸೇ ಸ್ವಾಹಾ' ಇತ್ಯಾದಿ ಪ್ರಕಾರ ಹೃದಯ ಮೊದಲಾದ ೫ ನ್ಯಾಸ ಸ್ಥಾನಗಳನ್ನು ತಿಳಿಯಬೇಕು. ಅಥವಾ ನಾಭಿ, ಎದೆ, ಶಿರಸ್ಸು, ನಾಭ್ಯಾದಿ ಸರ್ವಾಂಗ ಇವುಗಳಲ್ಲಿ ಓಂ ಭೂಃ ಅನಿರುದ್ಧಾಯ ನಮಃ ನಾಭೌ, ಇತ್ಯಾದಿ ಪ್ರಕಾರ ನಾಲ್ಕು ವ್ಯಾಹೃತಿಗಳ ನ್ಯಾಸವನ್ನು ಮಾಡಬೇಕು. ॥೩೮॥

ಮೂ॥ ದ್ವಾದಶಾರ್ಣಸ್ಯ ಜಗತೀ ಛಂದೋಽನ್ಯತ್ತಾರವತ್ಸ್ಮೃತಂ ।
ಅಚ್ಛವರ್ಣೋಽಭಯವರಕರೋ ಧ್ಯೇಯೋಽಮಿತದ್ಯುತಿಃ॥ ॥೩೯॥

ಅ॥ ೧೨ ಅಕ್ಷರಗಳುಳ್ಳ ವಾಸುದೇವ ಮಂತ್ರಕ್ಕೆ ಜಗತೀ ಛಂದಸ್ಸು, ಋಷ್ಯಾದಿಗಳೂ ದೇವತಾದಿಗಳೂ ಪ್ರಣವ ಮಂತ್ರದಂತೆ, ವಾಸುದೇವನು ದೇವತೆಯು, ಶುಭ್ರವರ್ಣನೂ, ೨ ಕೈಗಳಲ್ಲಿ ಅಭಯ ಮುದ್ರೆ ವರಮುದ್ರೆಗಳನ್ನು ಧರಿಸಿರುವವನೂ, ಅಪರಿಮಿತ ಪ್ರಕಾಶವುಳ್ಳವನೂ ಆದ ವಾಸುದೇವನನ್ನು ಧ್ಯಾನಿಸಬೇಕು ॥೩೯॥

ಮೂ॥ ಪದೈರ್ವ್ಯಸ್ತೈಃ ಸಮಸ್ತೈಶ್ಚ ಜ್ಞೇಯಾನ್ಯಂಗಾನಿ ಪಂಚ ಚ ।
ಅಷ್ಟಾಕ್ಷರಾಣಾಂ ಸ್ಥಾನೇಷು ಬಾಹ್ವೋರೂರ್ವೋಶ್ಚ ವಿನ್ಯಸೇತ್॥ ॥೪೦॥

ಅ॥ ವಾಸುದೇವದ್ವಾದಶಾಕ್ಷರಮಂತ್ರದ ಒಂದೊಂದು ಪದದಿಂದಲೂ (೪ರಿಂದಲೂ) ಒಟ್ಟು ಕೂಡಿದ ಒಂದು ಪದದಿಂದಲೂ, ಹೀಗೆ ಐದು ಪದಗಳಿಂದ (ಅಂದರೆ ಓಂ ಓಂ ವಾಸುದೇವಾಯ ಹೃದಯಾಯ ನಮಃ, ಓಂ ನಮಃ ಸಂಕರ್ಷಣಾಯ ಶಿರಸೇಸ್ವಾಹಾ, ಓಂಭಗವತೇ ಪ್ರದ್ಯುಮ್ನಾ ಯ ಶಿಖಾಯೈ ವೌಷಟ್, ಓಂ ವಾಸುದೇವಾಯ ಅನಿರುದ್ಧಾಯ ಕವಚಾಯ ಹುಂ, ಓಂ ನಮೋ ಭಗವತೇ ವಾಸುದೇವಾಯ ನಾರಾಯಣಾಯಾಸ್ತ್ರಾಯ ಫಟ್ ಎಂದು) ಹೃದಯಾದಿ ೫ ಸ್ಥಾನಗಳಲ್ಲಿ ನ್ಯಾಸಗಳನ್ನು ಮಾಡಬೇಕು. ವಾಸುದೇವ ಮಂತ್ರದ ೧೨ ಅಕ್ಷರಗಳಿಗೆ ಅಷ್ಟಾಕ್ಷರಕ್ಕೆ ಹೇಳಿರುವ ಪಾದಾದಿ ೮ ಸ್ಥಾನ, ೨ ಬಾಹು, ೨ ತೊಡೆ, ಹೀಗೆ ೧೨ ಸ್ಥಾನಗಳಲ್ಲಿ ನ್ಯಾಸವನ್ನು ಮಾಡಬೇಕು. ಮತ್ತು ಓಂ ಓಂ ಕೇಶವಾಯ ನಮಃ ಪಾದಯೋಃ ಇತ್ಯಾದಿ ಪ್ರಕಾರ ವಾಸುದೇವ ಮಂತ್ರದ ೧೨ ಅಕ್ಷರಗಳಿಗೆ ಕೇಶವಾದಿ ೧೨ ಮಂದಿ ದೇವತೆಗಳು ಎಂದೂ ತಿಳಿಯಬೇಕು. ॥೪೦॥

ಮೂ॥ ವಿಶ್ವಮಿತ್ರಸ್ತು ಸಂಧ್ಯಾರ್ಥೇ ತದನ್ಯತ್ರ ಪ್ರಜಾಪತಿಃ ।
ಮುನಿರ್ದೇವಸ್ತು ಸವಿತೃನಾಮಾ ಸೃಷ್ಟ್ಯುತ್ಪತೋ ಹರಿಃ॥ ॥೪೧॥

ಅ॥ ಸಂಧ್ಯಾಕಾಲದಲ್ಲಿ ಜಪಿಸುವ ವ್ಯಾಹೃತಿಸಹಿತವಾದ ಗಾಯತ್ರಿಗೆ ವಿಶ್ವಾಮಿತ್ರನೂ, ಅಷ್ಟಮಹಾಮಂತ್ರದಲ್ಲಿ ಸೇರಿದ

ವ್ಯಾಹೃತಿಯಿಲ್ಲದ ಬ್ರಹ್ಮಗಾಯತ್ರಿಗೆ ಚತುರ್ಮುಖನೂ ಋಷಿಯೂ, ಜಗತ್ತನ್ನು ಸೃಷ್ಟಿಸುವುದರಿಂದ ಸವಿತಾ ಎನಿಸಿಕೊಂಡ ಶ್ರೀ ಹರಿಯೇ ಪ್ರತಿಪಾದ್ಯನು. ||೪೧||

ಮೂ || ಪ್ರೋದ್ಯದಾದಿತ್ಯವರ್ಣಶ್ಚ ಸೂರ್ಯಮಂಡಲಮಧ್ಯಗಃ |
ಚಕ್ರಶಂಖಧರೋಽಂಕಸ್ಥದೋರ್ದ್ವಯೋ ಧ್ಯೇಯ ಏವ ಚ|| ||೪೨||

ಅ|| ಉದಯಿಸಿಕೊಂಡು ಬರುವ ಸೂರ್ಯನಂತೆ ಪ್ರಕಾಶಿಸಿ ಕೊಂಡಿರುವವನೂ, ಸೂರ್ಯಮಂಡಲದ ಮಧ್ಯದಲ್ಲಿರುವವನೂ, ಎರಡು ಕೈಗಳಲ್ಲಿ ಚಕ್ರ ಶಂಖಗಳನ್ನು ಧರಿಸಿರುವವನೂ, ಉಳಿದ ೨ ಕೈಗಳನ್ನು ಉತ್ತಾನವಾಗಿ ತೊಡೆಯ ಮೇಲೆ ಇರಿಸಿಕೊಂಡಿರುವವನೂ ಆದ ಶ್ರೀ ಹರಿಯನ್ನು ಧ್ಯಾನಿಸಬೇಕು. ||೪೨||

ಮೂ|| ಸತಾರಾಶ್ಚ ವ್ಯಾಹೃತಯೋ ಗಾಯತ್ರ್ಯಂಗಾನಿ ಪಂಚ ಚ |
ದೋಃಪತ್ಸಂಧಿಷು ಸಾಗ್ರೇಷು ನಾಭಿಹೃನ್ಮುಖಕೇಷು ಚ | ||೪೩||

ವರ್ಣನ್ಯಾಸಶ್ಚ ಕರ್ತವ್ಯಸ್ತಾರವನ್ನಿಖಿಲಂ ಸ್ಮೃತಂ |
ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ ||೪೪||

ಅ|| ಓಂಕಾರದಿಂದ ಕೂಡಿದ ನಾಲ್ಕು ವ್ಯಾಹೃತಿಗಳು ಹೀಗೆ ಐದು, ಗಾಯತ್ರಿಗೆ ಹೃದಯಾದ್ಯಂಗ ನ್ಯಾಸ ಮಂತ್ರಗಳನ್ನು ತಿಳಿಯಬೇಕು. ಕೈ, ಕಾಲು, ಬೆರಳುಗಳ ಸಂಧಿ, ತುದಿ ಒಟ್ಟಿಗೆ ೨೦, ಮತ್ತು ನಾಭಿ, ಎದೆ, ಮುಖ, ಶಿರಸ್ಸು ಹೀಗೆ ೪, ಹೀಗೆ ಒಟ್ಟಿಗೆ ೨೪ ಸ್ಥಾನಗಳಲ್ಲಿ ಗಾಯತ್ರಿಯ ೨೪ ವರ್ಣಗಳ ನ್ಯಾಸವನ್ನು ಕ್ರಮವಾಗಿ `ಓಂ ತಂ ಕೇಶವಾಯ ನಮಃ ' ಓಂ ತ್ಸಂ ನಾರಾಯಣಾಯ ನಮಃ ' ಇತ್ಯಾದಿ ಪ್ರಕಾರ ಮಾಡಬೇಕು. ೫೦ ಅಕ್ಷರಗಳುಳ್ಳ ಮಾತೃಕಾಮಂತ್ರಗಳಿಗೂ, ಪುರುಷಸೂಕ್ತಕ್ಕೂ ಪ್ರಣವಮಂತ್ರದಂತೆ ಋಷಿ ದೇವತೆ ಛಂದಸ್ಸು ಧ್ಯಾನ ಮೊದಲಾದವುಗಳನ್ನು ತಿಳಿಯಬೇಕು. ||೪೩-೪೪||

ಮೂ|| ಅನುಷ್ಟುಭಶ್ಚ ತ್ರಿಷ್ಟುಪ್ಚ ಛಂದೋಽಸ್ಯ ತ್ರಿಷ್ಟುಭೋಽಪಿವಾ |
ವಿಷ್ಣುಶಬ್ದಶ್ಚತುರ್ಥ್ಯಂತೋ ಹೃದಯೇತಃ ಷಡಕ್ಷರಃ|| ||೪೫||

ಅ|| ಋಕ್‌ಶಾಖೆಯ ಪ್ರಕಾರ ಪುರುಷ ಸೂಕ್ತಕ್ಕೆ ೧೬ ಋಕ್ಕುಗಳು. ಅವುಗಳಲ್ಲಿ ಮೊದಲಿನ ೧೫ ಋಕ್ಕುಗಳಿಗೆ ಅನುಷ್ಟುಪ್ ಛಂದಸ್ಸು, ೧೬ನೇ ಋಕ್ಕಿಗೆ ಮಾತ್ರ ತ್ರಿಷ್ಟುಪ್ ಛಂದಸ್ಸು. ಋಜು ಶ್ಯಾಖೆಯ ಪ್ರಕಾರ ಪುರುಷ ಸೂಕ್ತಕ್ಕೆ ೧೮ ಋಕ್ಕುಗಳು. ಅವುಗಳಲ್ಲಿ ಮೊದಲಿನ ೧೫ ಋಕ್ಕುಗಳಿಗೆ ಅನುಷ್ಟುಪ್ ಛಂದಸ್ಸು, ಕೊನೆಯ ೩ ಋಕ್ಕುಗಳಿಗೆ ಮಾತ್ರ ತ್ರಿಷ್ಟುಪ್ ಛಂದಸ್ಸು. ಚತುರ್ಥೀ ವಿಭಕ್ತಿಯೇ ಅಂತ್ಯದಲ್ಲಿ ಉಳ್ಳ ವಿಷ್ಣು ಶಬ್ದವು ನಮಃ ಎಂಬ ಶಬ್ದದಿಂದ ಸೇರಿದರೆ `ವಿಷ್ಣವೇ ನಮಃ' ಎಂದು ವಿಷ್ಣು ಷಡಕ್ಷರ ಮಂತ್ರವಾಗುವುದು. (ಓಂಕಾರ ಸೇರಿದರೆ ೭ ಅಕ್ಷರಗಳು. ಅಷ್ಟಮಹಾಮಂತ್ರದಲ್ಲಿ ಸೇರಿದ ವಿಷ್ಣುಮಂತ್ರವು ಓಂಕಾರವಿಲ್ಲದಿದ್ದುದು.) ||೪೫||

ಮೂ|| ತಾರವತ್ಸರ್ವಮಸ್ಯಾಪಿ ಶ್ಯಾಮೋ ಧ್ಯೇಯೋ ಹರಿಃ ಸ್ವಯಂ |
ವರ್ಣಾ ಏವ ಷಡಂಗಾನಿ ಷಣಯೋರ್ಭೇದಯೋಗತಃ|| ||೪೬||

ಅ|| ಈ ವಿಷ್ಣು ಷಡಕ್ಷರ ಮಂತ್ರಕ್ಕೆ ಋಷಿ, ಛಂದಸ್ಸು, ದೇವತಾ ಧ್ಯಾನಾದಿಗಳೆಲ್ಲವನ್ನೂ ಪ್ರಣವದಂತೆ ತಿಳಿಯಬೇಕು. ಇಂದ್ರನೀಲಮಣಿಗೆ ಸದೃಶವಾದ ಕಾಂತಿಯುಳ್ಳ ಭಗವದ್ರೂಪವನ್ನು ಧ್ಯಾನಿಸಬೇಕು. `ಷ್ಣು' ಎಂಬಲ್ಲಿ ಷಕಾರ, ಣಕಾರಗಳನ್ನು ಬೇರೆ ಬೇರೆಯಾಗಿ ಎಣಿಸಿಕೊಂಡು ೬ ಅಕ್ಷರಗಳಿಂದ `ಓಂ ವಿಂ ವಿಶ್ವಾಯ ಹೃದಯಾಯ ನಮಃ ಓಂ, ಇತ್ಯಾದಿ ಪ್ರಕಾರ ಹೃದಯಾದಿ ಷಡಂಗನ್ಯಾಸಗಳನ್ನು ಮಾಡಬೇಕು. ||೪೬||

ಮೂ॥ ಪಜ್ಞಾನುನಾಭಿಹೃನ್ನಾಸಾಕೇಷು ನ್ಯಾಸಶ್ಚ ವರ್ಣಶಃ ।
ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ॥ ॥೪೭॥

ಅ॥ ಪಾದ, ಮೊಣಕಾಲು, ಹೊಕ್ಕಳು, ಹೃದಯ, ಮೂಗು, ಶಿರಸ್ಸು ಎಂಬ ೬ ಸ್ಥಾನಗಳಲ್ಲಿ, ಈ ಮಂತ್ರದಲ್ಲಿರತಕ್ಕ ೬ ವರ್ಣಗಳಿಂದ `ಓಂ ವಿಂ ವಿಶ್ವಾಯ ನಮಃ ಇತಿ ಪಾದಯೋಃ, ಇತ್ಯಾದಿ ಪ್ರಕಾರ ಷಡಂಗನ್ಯಾಸವನ್ನು ಮಾಡಬೇಕು. ಪ್ರಣವ ಮೊದಲಾದ ಈ ಅಷ್ಟಮಹಾಮಂತ್ರಗಳೇ ಇತರ ಎಲ್ಲಾ ವರಾಹಾದಿ ಮಂತ್ರಗಳಿಗೆ ಮೂಲಭೂತಗಳಾಗಿರುವುದರಿಂದ (ಅಂದರೆ ಎಲ್ಲಾ ಮಂತ್ರಗಳೂ ಅಷ್ಟಮಹಾಮಂತ್ರಗಳ ವ್ಯಾಖ್ಯಾನ ರೂಪಗಳಾಗಿರುವುದರಿಂದ) ಅವುಗಳಿಗಿಂತ ಅತ್ಯಾವಶ್ಯಕವಾಗಿ ಇವುಗಳನ್ನೇ ತ್ರಿಸಂಧ್ಯಾಕಾಲಗಳಲ್ಲಿಯೂ ನಿಯಮೇನ ಜಪಿಸಬೇಕು. ॥೪೭॥

ಮೂ॥ ಏತಜ್ಞಾನಾತ್ಸಮಸ್ತಂ ಚಜ್ಞಾತಂ ಸ್ಯಾಚ್ಛಬ್ದಗೋಚರಂ ।
ಏತಜ್ಜಪಾತ್ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್॥ ॥೪೮॥

ಅ॥ ಈ ಅಷ್ಟಮಹಾಮಂತ್ರಾರ್ಥಗಳನ್ನು ತಿಳಿದುಕೊಂಡರೆ ಸಮಸ್ತ ಮಂತ್ರಪ್ರತಿಪಾದ್ಯವಾದ ಅರ್ಥವನ್ನು ತಿಳಿದುಕೊಂಡಂತೆ ಆಗುವುದು. (ಸರ್ವಮಂತ್ರಾರ್ಥ ಜ್ಞಾನಫಲವೂ ಅಷ್ಟಮಹಾಮಂತ್ರಾರ್ಥಜ್ಞಾನದಲ್ಲಿಯೇ ಅಡಕವಾಗುತ್ತದೆ) ಮತ್ತು ಈ ಅಷ್ಟಮಹಾ ಮಂತ್ರಗಳನ್ನು ಜಪಿಸಿದರೆ ಉಳಿದ ಎಲ್ಲಾ ಮಂತ್ರಗಳನ್ನು ಜಪಿಸಿದಂತೆ ಆಗುವುದು. (ಇವುಗಳ ಜಪಫಲದಲ್ಲಿಯೇ ಉಳಿದ ಎಲ್ಲಾ ಮಂತ್ರಗಳ ಜಪಫಲವು ಅಡಕವಾಗಿರುತ್ತದೆ. ಆದುದರಿಂದಲೂ ತ್ರಿಸಂಧ್ಯೆಗಳಲ್ಲಿಯೂ ಇವುಗಳನ್ನೇ ಜಪಿಸಬೇಕು.) ॥೪೮॥

ಮೂ॥ ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಬ್ಜಾದಿಕಮಂಡಲೇ ।
ಅಚಲೇ ಹೃದಯೇವಾಪಿ ಚಲೇ ವಾ ಕೇವಲಸ್ಥಲೇ॥ ॥೪೯॥

ಅ॥ ಚಕ್ರ, ಅಬ್ಜ, ಭದ್ರಕ, ಆವಾವ ದೇವತಾಯಂತ್ರಮೊದಲಾದ ಮಂಡಲ, ಅಗ್ನಿ ಸೂರ್ಯಾದಿಗಳು, ಶಾಲಿಗ್ರಾಮ ಮೊದಲಾದ ಅಚಲ ಪ್ರತಿಮೆಯು, ದೇವಾಲಯಗಳಲ್ಲಿರತಕ್ಕ ಸ್ಥಿರಪ್ರತಿಮೆಯು, ಸನ್ಯಾಸಿ ಗುರು ಮೊದಲಾದ ಚಲಪ್ರತಿಮೆಯು ಹೃದಯ, ನೀರು, ಭೂಮಿಯಲ್ಲಿ ಮಾಡಿದ ಮಂಡಲ, ಸ್ಥಂಡಿಲ ಇವುಗಳಲ್ಲಿ ಯಾವುದರಲ್ಲಾದರೂ ನಿತ್ಯದಲ್ಲಿಯೂ ಭಗವಂತನನ್ನು ಪೂಜಿಸಬೇಕು. ॥೪೯॥

ಮೂ॥ ಅಷ್ಟಾಕ್ಷರೇಣ ಸಂಪೂಜ್ಯ ಪ್ರಥಮಂ ದೇವತಾಂ ಪರಾಂ ।
ಮಧ್ಯೇ ಸವ್ಯೇ ಗುರುಂಶ್ಚೈವ ದಕ್ಷಿಣೇ ಸರ್ವದೇವತಾಃ॥ ॥೫೦॥

ಪುನಃ ಸವ್ಯೇ ಸರ್ವಗುರೂನಾಗ್ನೇಯಾದಿಷು ಚ ಕ್ರಮಾತ್ ।
ಗರುಡಂ ವ್ಯಾಸದೇವಂ ಚ ದುರ್ಗಾಂ ಚೈವ ಸರಸ್ವತೀಂ॥ ॥೫೧॥

ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್ ।
ತದಂತಃ ಪೂರ್ವದಿಕ್ಪೂರ್ವಮಧರ್ಮಾದೀಂಶ್ಚ ಪೂಜಯೇತ್॥ ॥೫೨॥

ಅಪೂಜಿತಾ ಅಧರ್ಮಾದಿದಾತಾರಸ್ತೇ ತಥಾಽಭಿಧಾಃ ।
ನಿರ್ಋತಿಶ್ಚೈವ ದುರ್ಗಾ ಚ ಕಾಮೋ ರುದ್ರಶ್ಚ ದೇವತಾಃ॥ ॥೫೩॥

ಅ॥ ಪೀಠ ಸ್ಥಾಪನ ಪ್ರದೇಶದ ಮಧ್ಯದಲ್ಲಿ ಪ್ರಥಮತಃ ಸರ್ವೋತ್ತಮನಾದ ಶ್ರೀನಾರಾಯಣನನ್ನು ಮೂಲಮಂತ್ರದಿಂದ ಆವಾಹನ ಮಾಡಿ ಪೀಠಸ್ಥಾಪನಪ್ರದೇಶದ ಎಡಬದಿಯಲ್ಲಿ ಮುಖ್ಯಪ್ರಾಣನನ್ನೂ, ಬಲಪಾರ್ಶ್ವದಲ್ಲಿ ವಿಷ್ಣು ಬ್ರಹ್ಮ ರುದ್ರರನ್ನೂ, ಪುನಃ ॥೫೦॥ ಎಡಬದಿಯಲ್ಲಿ ಸನತ್ಕುಮಾರ, ಸನಕ, ಸನಂದನ, ಸನಾತನರನ್ನೂ, ಆಗ್ನೇಯ, ನೈರ್ಋತ್ಯ, ವಾಯವ್ಯ, ಈಶಾನ್ಯಗಳೆಂಬ ೪

ಕೋಣ ದಿಕ್ಕುಗಳ ಕೆಳಭಾಗಗಳಲ್ಲಿ ಕ್ರಮವಾಗಿ ಗರುಡ, ವೇದವ್ಯಾಸ, ದುರ್ಗಾದೇವಿ, ಸರಸ್ವತಿಯರನ್ನು, ||೫೧|| ೪ ಕೋಣದಿಕ್ಕುಗಳ ಊರ್ಧ್ವ ಭಾಗಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಾಭಿಮಾನಿಗಳಾದ ೪ ದೇವತೆಗಳನ್ನೂ, ಆ ಕೋಣದಿಕ್ಕುಗಳ ಮಧ್ಯವಾದ ಪೂರ್ವಾದಿ ಪ್ರಧಾನ ೪ ದಿಕ್ಕುಗಳಲ್ಲಿ ಕ್ರಮವಾಗಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯಗಳ ಅಭಿಮಾನಿ ದೇವತೆಗಳನ್ನೂ, ಪೂಜಿಸಬೇಕು. ||೫೨|| ಆ ಅಧರ್ಮಾದಿಗಳಿಗೆ ಕ್ರಮವಾಗಿ ನಿರ್ಋತಿ, ದುರ್ಗಾ, ಕಾಮ, ರುದ್ರರು ಅಭಿಮಾನಿ ದೇವತೆಗಳು. ಅವರನ್ನು ಪೂಜಿಸದಿದ್ದರೆ ನಮಗೆ ಅಧರ್ಮಾದಿಗಳನ್ನು ಕೊಡುವರು. ಅದರಿಂದಲೇ ಅವರಿಗೂ ಅಧರ್ಮಾದಿನಾಮಗಳು. ||೫೧ ೫೩||

ಮೂ || ಯಮವಾಯುಶಿವೇಂದ್ರಾಶ್ಚ ಜ್ಞೇಯಾ ಧರ್ಮಾದಿದೇವತಾಃ |
ಪರಮಃ ಪುರುಷೋ ಮಧ್ಯೇ ಶಕ್ತಿರಾಧಾರರೂಪಿಣೀ|| ||೫೪||

ಅ|| ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಿಗೆ ಕ್ರಮವಾಗಿ ಯಮ, ವಾಯು, ರುದ್ರ, ಇಂದ್ರರನ್ನು ಅಭಿಮಾನಿ ದೇವತೆಗಳೆಂದು ತಿಳಿಯಬೇಕು. ಪೀಠಸ್ಥಾಪನ ಮಧ್ಯದೇಶದಲ್ಲಿ ಬ್ರಹ್ಮಾಂಡದ ಕೆಳಪ್ರದೇಶದಲ್ಲಿ ಸರ್ವೋತ್ತಮನಾದ ಶ್ರೀನಾರಾಯಣನನ್ನು ಮೇಲ್ಭಾಗದಲ್ಲಿ ಸಾಕ್ಷಾತ್ ಆವರಣಾಧಾರರೂಪಳಾದ ಶಕ್ತಿನಾಮಕಳಾದ ಲಕ್ಷ್ಮೀದೇವಿಯನ್ನು ಪೂಜಿಸಬೇಕು. ||೫೪||

ಮೂ|| ಕೂರ್ಮೋऽನಂತಶ್ಚ ಪೃಥಿವೀ ಕ್ಷೀರಸಾಗರ ಏವ ಚ |
ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯೋ ಮಹಾನ್|| ||೫೫||

ಪದ್ಮಮೇತತ್ತ್ರಯಂ ದೇವೀ ರಮೈವ ಬಹುರೂಪಿಣೀ |
ಸೂರ್ಯಸೋಮಹುತಾಶಾಶ್ಚ ಪದ್ಮೇ ಶ್ರೀ ಸ್ತ್ರಿಗುಣಾತ್ಮಿಕಾ|| ||೫೬||

ಅ|| ಶಕ್ತಿನಾಮಕಳಾದ ಲಕ್ಷ್ಮಿಯ ಮೇಲೆ ಬ್ರಹ್ಮಾಂಡಕ್ಕೆ ಆಧಾರಭೂತನಾದ ವಿಷ್ಣುಕೂರ್ಮನನ್ನೂ, ಬ್ರಹ್ಮಾಂಡದೊಳಗೆ ಅಗಾಧ ಜಲಾಧಾರಭೂತನಾದ ಇನ್ನೊಬ್ಬ ವಿಷ್ಣುಕೂರ್ಮನನ್ನೂ, ಆ ಕೂರ್ಮರೂಪಿಯಾದ ಶ್ರೀ ವಿಷ್ಣುವಿನ ಪುಚ್ಛವನ್ನು ಆಶ್ರಯಿಸುತ್ತಿರುವ ಕೂರ್ಮರೂಪಿಯಾದ ವಾಯುವನ್ನೂ, ಆ ವಾಯುವಿನ ಪುಚ್ಛವನ್ನು ಆಶ್ರಯಿಸುತ್ತಿರುವ ಶೇಷನನ್ನೂ, ಆ ಶೇಷನ ಹೆಡೆಯ ಮೇಲೆ ಪಂಚಭೂತಗಳಿಗಿಂತ ಅಧಮವಾದ ಪೃಥಿವಿಯನ್ನೂ, ಪೃಥಿವ್ಯಭಿಮಾನಿನಿಯಾದ ಭೂದೇವಿಯನ್ನೂ, ಅದರ ಮೇಲೆ ಕ್ಷೀರಸಾಗರಾಭಿಮಾನಿಯಾದ ವರುಣನನ್ನೂ, ಆತನ ಮೇಲೆ ಶ್ವೇತದ್ವೀಪವನ್ನೂ ಅದರ ಮೇಲೆ ದಿವ್ಯನಾನಾವಿಧ ರತ್ನಖಚಿತ ಪದ್ಮವನ್ನೂ, ಅದರ ಮಧ್ಯದಲ್ಲಿ ೮ ದಲಗಳುಳ್ಳ ಪದ್ಮವನ್ನೂ ಧ್ಯಾನಿಸಿಕೊಂಡು, ಆ ಪದ್ಮದಲ್ಲಿ ಕುಳಿತಿರುವ ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನನ್ನು ಪೂಜಿಸಬೇಕು ||೫೫|| ಶ್ವೇತದ್ವೀಪ, ಮಂಟಪ, ಪದ್ಮ ಇವು ಮೂರಕ್ಕೆ ಬಹುರೂಪಿಯೂ, ನಿರ್ವಿಕಾರಳೂ ಆದ ಲಕ್ಷ್ಮೀದೇವಿಯೇ ದೇವತೆಯು. ಆ ಪದ್ಮದ ೬ ದಲಗಳ ಮಧ್ಯದಲ್ಲಿ ಇದುರು ಭಾಗದಲ್ಲಿರತಕ್ಕ ೩ ದಲಗಳಲ್ಲಿ ದೀಪರೂಪಗಳಾದ ಸೂರ್ಯ, ಚಂದ್ರ, ಅಗ್ನಿಮಂಡಲಗಳನ್ನೂ ಪೃಷ್ಠಭಾಗಗಳಲ್ಲಿರುವ ೩ದಲಗಳಲ್ಲಿ ಸತ್ವಾಭಿಮಾನಿನಿಯಾದ ಲಕ್ಷ್ಮೀದೇವಿ, ರಜೋಭಿಮಾನಿನಿಯಾದ ಭೂದೇವಿ, ತಮೋಭಿಮಾನಿನಿಯಾದ ದುರ್ಗಾದೇವಿ ಇವರನ್ನು ಧ್ಯಾನಿಸುತ್ತಾ ಪೂಜಿಸಬೇಕು. ||೫೬||

ಮೂ|| ಆತ್ಮಾಂತರಾತ್ಮಪರಮಾತ್ಮಜ್ಞಾನಾತ್ಮಾನಶ್ಚ ಮೂರ್ತಯಃ |
ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ|| ||೫೭||

ಪ್ರಹ್ವೀ ಸತ್ಯಾ ತಥೇಶಾನಾऽನುಗ್ರಹಾ ಚೇತಿ ಶಕ್ತಯಃ |
ಅಷ್ಟದಿಕ್ಷು ಚ ಮಧ್ಯೇ ಚ ಸ್ವರೂಪಾಣ್ಯೇವ ತಾ ಹರೇಃ|| ||೫೮||

ಅ|| (ಪದ್ಮದಲ್ಲಿ ಪೂರ್ವ ಮೊದಲಾದ ೪ ದಿಕ್ಕುಗಳಲ್ಲಿ ಕ್ರಮವಾಗಿ) ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ ಎಂಬ ಭಗವನ್ಮೂರ್ತಿಗಳನ್ನು ೮ ದಲಗಳುಳ್ಳ ಪದ್ಮದ ಪೂರ್ವಾದಿ ೮ ದಲಗಳಲ್ಲಿ ಕ್ರಮವಾಗಿ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಎಂದೂ ಮಧ್ಯದಲ್ಲಿ ಅನುಗ್ರಹಾ, ಎಂದೂ, ಹೀಗೆ ಶಕ್ತಿಗಳನ್ನು ಪೂಜಿಸಬೇಕು. ವಿಮಲಾ

ಮೊದಲಾದ ಸ್ತ್ರೀರೂಪಗಳಾದ ೯ ಶಕ್ತಿಗಳನ್ನು ಭಗವಂತನ ಸಾಕ್ಷಾತ್ಸ್ವರೂಪಗಳೆಂದೇ ಧ್ಯಾನಿಸಬೇಕು. ||೫೭-೫೮||

ಮೂ || ತತೋಽನಂತಂ ಯೋಗಪೀಠಸ್ವರೂಪಂ ಪೂಜಯೇದ್ಧರೇಃ |
ತತ್ರಾಽವಾಹ್ಯ ಹರಿಂ ಚಾರ್ಘ್ಯಂ ಪಾದ್ಯಮಾಚಮನೀಯಕಂ|| ||೫೯||

ಮಧುಪರ್ಕಂ ಪುನಶ್ಚಾಽಚಾಂ ಸ್ನಾನಂ ವಾಸೋವಿಭೂಷಣೇ |
ಉಪವೀತಾಸನೇ ದತ್ವಾ ಗಂಧಪುಷ್ಪೇ ತಥೈವ ಚ|| ||೬೦||

ಅ|| ಪೀಠದಲ್ಲಿರತಕ್ಕ ಪದ್ಮದ ಮಧ್ಯದಲ್ಲಿರತಕ್ಕ ಆಸನರೂಪವಾದ ಅನುಗ್ರಹಾಖ್ಯಶಕ್ತಿಯಲ್ಲಿ ಶ್ರೀಹರಿಯ ಯೋಗಾಸನರೂಪನಾದ ಶಯ್ಯಾಕಾರನಾದ ಶೇಷನನ್ನು ಪೂಜಿಸಬೇಕು. ಆ ಯೋಗಪೀಠ ಸ್ವರೂಪನಾದ ಅನಂತಾಸನದಲ್ಲಿರತಕ್ಕ ಭಗವತ್ಪ್ರತಿಮೆಯಲ್ಲಿ ತನ್ನ ಬಿಂಬಭೂತನಾದ ಹೃದಯದಲ್ಲಿರತಕ್ಕ ಶ್ರೀಹರಿಯನ್ನು ಅವಾಹನ ಮಾಡಿ (ಪಾದಗಳಲ್ಲಿ ಪುಷ್ಪಾಂಜಲಿಯನ್ನರ್ಪಿಸಿ) ಶಂಖೋದಕದಿಂದ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕಗಳನ್ನು ಕೊಟ್ಟು ಪುನಃ ಆಚಮನೀಯವನ್ನಿತ್ತು ಅಭಿಷೇಕ ಮಾಡಿ ವಸ್ತ್ರವನ್ನರ್ಪಿಸಿ, ಆಭರಣದಿಂದಲಂಕರಿಸಿ ಯಜ್ಞೋಪವೀತ, ಆಸನ, ಗಂಧ, ಪುಷ್ಪಗಳನ್ನರ್ಪಿಸಿ (ಆವರಣ ಪೂಜೆ ಮಾಡಬೇಕು). ||೫೯-೬೦||

ಮೂ || ಲಕ್ಷ್ಮೀಧರೇ ಯಜೇತ್ತತ್ರ ಪಾರ್ಶ್ವಯೋರುಭಯೋರ್ಹರೇಃ |
ಹೃದಯಾದೀಂಸ್ತಥೇಂದ್ರಾದಿದಿಕ್ಷ್ವಸ್ತ್ರಂ ಕೋಣಕೇಷು ಚ|| ||೬೧||

ಅ|| ಆ ಯೋಗಪೀಠದ ಮೇಲೆ (೧) ಶ್ರೀ ಹರಿಯ ಎಡಬದಿಯಲ್ಲಿ ಲಕ್ಷ್ಮೀದೇವಿಯನ್ನೂ, ಬಲಬದಿಯಲ್ಲಿ ಭೂದೇವಿಯನ್ನೂ, ೨ನೇ ಆವರಣ (ಸುತ್ತು) ರೂಪವಾಗಿ (ಪೀಠದಿಂದ ಹೊರಗೆ) ಪೂರ್ವಾದಿ ೪ ದಿಕ್ಕುಗಳಲ್ಲಿ ಹೃದಯಾದಿ ನಾಮವುಳ್ಳಕ್ರುದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯೂಲ್ಕ ರೂಪಗಳನ್ನೂ, ಆಗ್ನೇಯಾದಿ ೪ ವಿದಿಕ್ಕುಗಳಲ್ಲಿ ಅಸ್ತ್ರ ಎಂದು ಹೆಸರುಳ್ಳ ಸಹಸ್ರೋಲ್ಕವೆಂಬ ರೂಪವನ್ನೂ, ೪ ಸಲ ಹೇಳಿ ಪೂಜಿಸಬೇಕು. ||೬೧||

ಮೂ|| ವಾಸುದೇವಾದಿಕಾನ್ ದಿಕ್ಷು ಕೇಶವಾದೀಂಸ್ತತಃಪರಂ |
ಮತ್ಸ್ಯಕೂರ್ಮವರಾಹಾಂಶ್ಚ ನಾರಸಿಂಹಂ ಚ ವಾಮನಂ|| ||೬೨||

ಭಾರ್ಗವಂ ರಾಘವಂ ಕೃಷ್ಣಂ ಬುದ್ಧಂ ಕಲ್ಕಿನಮೇವ ಚ|
ಅನಂತಂ ವಿಶ್ವರೂಪಂ ಚ ತದ್ಬಹಿಃ ಪೂಜಯೇತ್ಕ್ರಮಾತ್|| ||೬೩||

ಅ|| (೩ನೇ ಆವರಣರೂಪವಾಗಿ) ಪೂರ್ವಾದಿ ೪ ದಿಕ್ಕುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರನ್ನೂ, ಕೋಣದಿಕ್ಕುಗಳಲ್ಲಿ ಮಾಯಾ, ಜಯಾ, ಕೃತಿ, ಶಾಂತಿ, ಎಂಬ ಲಕ್ಷ್ಮೀರೂಪಗಳನ್ನೂ, (೪ನೇ ಆವರಣರೂಪವಾಗಿ) ಕೇಶವಾದಿ ೧೨ ಮೂರ್ತಿಗಳಲ್ಲಿ ೪ ದಿಕ್ಕುಗಳಲ್ಲಿ ಎರಡೆರಡು ಮೂರ್ತಿಗಳನ್ನು, ಕೋಣದಿಕ್ಕುಗಳಲ್ಲಿ ಒಂದೊಂದು ಮೂರ್ತಿಯನ್ನೂ, (೫ನೇ ಆವರಣರೂಪವಾಗಿ) ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಅನಂತ, ವಿಶ್ವರೂಪ, ಈ ೧೨ ರೂಪಗಳಲ್ಲಿ ದಿಕ್ಕುಗಳಲ್ಲಿ ಎರಡನ್ನೂ, ವಿದಿಕ್ಕುಗಳಲ್ಲಿ ಒಂದೊಂದು ಮೂರ್ತಿಯನ್ನು ಪೂಜಿಸಬೇಕು. ||೬೨-೬೩||

ಮೂ|| ಅನಂತ ಬ್ರಹ್ಮವಾಯ್ವೀಶಾನ್ ವೀಶಂ ಚಾಗ್ರೇ ಪ್ರಪೂಜಯೇತ್ |
ವಾರುಣೀಂ ಚೈವ ಗಾಯತ್ರೀಂ ಭಾರತೀಂ ಗಿರಿಜಾಮಪಿ|| ||೬೪||

**ಕೋಣೇಷು ವೀಂದ್ರವಾಮೇಚ ಸುಪರ್ಣೀಂ ಪ್ರಯಜೇದಪಿ ।**
**ಇಂದ್ರಾದೀನ್ ಶೇಷವಿಧ್ಯಂತಾನ್ ಸಭಾರ್ಯಾನ್ ಸಪರಿಗ್ರಹಾನ್॥** ||೬೫||

ಅ॥ (೬ನೇ ಆವರಣ ರೂಪವಾಗಿ) (೪ ದಿಕ್ಕುಗಳಲ್ಲಿ) ಶೇಷ, ಚತುರ್ಮುಖ, ಮುಖ್ಯಪ್ರಾಣ, ರುದ್ರರನ್ನೂ, ಮುಂಭಾಗದಲ್ಲಿ ಗರುಡನನ್ನೂ, ವಿದಿಕ್ಕುಗಳಲ್ಲಿ ವಾರುಣೀ, ಗಾಯತ್ರೀ, ಭಾರತೀ, ಪಾರ್ವತಿಯರನ್ನೂ, ಗರುಡನ ಎಡಬದಿಯಲ್ಲಿ ಸುಪರ್ಣೀದೇವಿಯನ್ನೂ ಪೂಜಿಸಬೇಕು. (೭ನೇ ಆವರಣವಾಗಿ ಪೂರ್ವಾದಿ ೮ ದಿಕ್ಕುಗಳಲ್ಲಿ) ಅವರವರ ಪತ್ನಿಯರು, ಆಯುಧಗಳು, ಪರಿವಾರಾದಿಗಳೂ ಇವರಿಂದೊಡಗೂಡಿದ ಇಂದ್ರಾದ್ಯಷ್ಟದಿಕ್ಪಾಲಕರು, ಕೆಳ ಲೋಕಕ್ಕೆ ಅಧಿಪತಿಯಾದ ಶೇಷ, ಊರ್ಧ್ವಲೋಕಕ್ಕೆ ಅಧಿಪತಿಯಾದ ಚತುರ್ಮುಖ, ಈ ಆವರಣ ದೇವತೆಗಳನ್ನು ಪೂಜಿಸಬೇಕು. ||೬೪-೬೫||

**ಮೂ ॥ ಧೂಪದೀಪೌ ತತೋ ದತ್ವಾ ನೈವೇದ್ಯಂ ಮೂಲಮಂತ್ರತಃ ।**
**ಅನೇನ ಕ್ರಮಯೋಗೇನ ಜುಹುಯಾತ್ಸಂಸ್ಕೃತೇಽನಲೇ॥** ||೬೬||

ಅ॥ ಹೀಗೆ ಆವರಣ ದೇವತೆಗಳಿಗೆ ಪೂಜೆ ಮಾಡಿದ ಮೇಲೆ ಧೂಪದೀಪಗಳನ್ನರ್ಪಿಸಿ ನಾರಾಯಣಾಷ್ಟಾಕ್ಷರ ಮಂತ್ರದಿಂದ ನೈವೇದ್ಯವನ್ನು ಪ್ರೋಕ್ಷಿಸಿ ಮುಟ್ಟಿಕೊಂಡು ಮೂಲಮಂತ್ರವನ್ನು ಜಪಿಸಿ ಸಮರ್ಪಿಸಬೇಕು. ಇದೇ ರೀತಿಯಾಗಿ ಪೀಠಪೂಜಾದಿಕ್ರಮರೂಪ ಉಪಾಯದಿಂದ ಸಂಸ್ಕೃತವಾದ ಅಗ್ನಿಯಲ್ಲಿ ಶ್ರೀ ಪರಶುರಾಮನನ್ನಾವಾಹಿಸಿ ಪೂಜಿಸಿ ನಿತ್ಯದಲ್ಲಿಯೂ ಪೂಜಾಂಗವಾದ ಅನುಯಾಗ ಹೋಮವನ್ನು ಮಾಡಬೇಕು. ||೬೬||

**ಮೂ॥ ಪುಷ್ಪಾಂಜಲಿಶ್ಚ ಹೋಮಶ್ಚ ಮೂಲೇನಾಷ್ಟೋತ್ತರಂ ಶತಂ ।**
**ಸಕೃತ್ಸಕೃತ್ಪುಷ್ಪಮನ್ಯೈರ್ಹೋಮಸ್ತ್ವಸ್ಯ ಚತುರ್ಗುಣಃ॥** ||೬೭||

ಅ॥ ಅಷ್ಟಾಕ್ಷರ ಮಂತ್ರದಿಂದ ೧೦೮ ಸಲ ಪುಷ್ಪಾಂಜಲಿಯನ್ನೂ, ಹೋಮವನ್ನೂ ಮಾಡಬೇಕು. ಇತರ ಪೀಠದೇವತಾ ಮಂತ್ರಗಳಿಂದಲೂ, ಆವರಣದೇವತಾಮಂತ್ರಗಳಿಂದಲೂ ಒಂದೊಂದು ಸಲ ಪುಷ್ಪಾಂಜಲಿಯನ್ನೂ ನಾಲ್ಕು ನಾಲ್ಕು ಸಲ ಹೋಮವನ್ನೂ ಮಾಡಬೇಕು. ||೬೭||

**ಮೂ॥ ವಿಸರ್ಜಯಿತ್ವಾ ನೈವೇದ್ಯಂ ಮೂಲೇನ ತ್ರಿಃಸಮರ್ಪ್ಯ ಚ॥**
**ಧೂಪದೀಪೌ ಪುನರ್ದತ್ವಾ ಪುನರ್ಮೂಲೇನ ಪೂರ್ವವತ್॥** ||೬೮||

ಅ॥ ಆಮೇಲೆ ನೈವೇದ್ಯವನ್ನು ವಿಸರ್ಜಿಸಿ ಅಷ್ಟಾಕ್ಷರಮಂತ್ರದಿಂದ ಮೂರು ಸಲ ಪುಷ್ಪಾಂಜಲಿಯನ್ನರ್ಪಿಸಿ, ಪುನಃ ಧೂಪದೀಪಗಳಿಂದ ಪೂಜಿಸಿ ತಿರುಗಿ ಮೂಲ ಮಂತ್ರದಿಂದಲೂ ವೈಷ್ಣವ ಎಲ್ಲಾ ಮಂತ್ರಗಳಿಂದಲೂ ಮೂರಾವರ್ತಿ ಪುಷ್ಪಾಂಜಲಿಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ||೬೮||

**ಮೂ॥ ಅರ್ಚಯಿತ್ವಾ ಹರಿಂ ಧ್ಯಾತ್ವಾ ಜಪೇದಷ್ಟೋತ್ತರಂ ಶತಂ।**
**ಪುನರ್ಧ್ಯಾಯೇದ್ಧರಿಂ ಸರ್ವದೇವದೇವೇಶ್ವರಂ ಪ್ರಭುಂ॥** ||೬೯||

ಅ॥ ಅನಂತರ ಸ್ತೋತ್ರಪಾಠಗಳನ್ನು ಹೇಳುತ್ತಾ ಪ್ರದಕ್ಷಿಣನಮಸ್ಕಾರಾದಿ ಪೂರ್ವಕವಾಗಿ ಮೂರು ಸಲ ಪುಷ್ಪಾಂಜಲಿಗಳಿಂದ ಶ್ರೀ ಹರಿಯನ್ನು ಪೂಜಿಸಿ "ಉದ್ಯದ್ಭಾಸ್ವತ್" ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ಧ್ಯಾನಿಸಿ ಅಷ್ಟಾಕ್ಷರವನ್ನು ೧೦೮ ಸಲ ಜಪಿಸಿ ಆ ಮೇಲೆ ಕೃಷ್ಣಾರ್ಪಣ ಬಿಟ್ಟು "ಆ ಮೇಲೆ ತನ್ನ ಹೃದಯದಲ್ಲಿ ಆವಾಹಿಸುವುದಕ್ಕಾಗಿ ಸಮಸ್ತ ದೇವದೇವೋತ್ತಮನೂ, ಸರ್ವಜಗತ್ಪ್ರಭುವೂ ಆದ ಶ್ರೀ ಹರಿಯನ್ನು ಧ್ಯಾನಿಸಬೇಕು. ||೬೯||

**ಮೂ ॥ ಜಪಧ್ಯಾನಹುತಾರ್ಚಾದೀನೇವಂ ಯಃ ಕುರುತೇ ಸದಾ ।**
**ಧರ್ಮಾರ್ಥಕಾಮಮೋಕ್ಷಾಣಾಂ ಭಾಜನಂ ಸ್ಯಾತ್ಸ ಏವ ಹಿ॥** ॥೭೦॥

ಅ ॥ ಹಿಂದೆ ಹೇಳಿದ ಪ್ರಕಾರ ಯಾವನು ಸದಾ ಜಪ ಧ್ಯಾನ ಹೋಮ ಪೂಜಾದಿಗಳನ್ನು ಮಾಡುತ್ತಾನೋ, ಆತನೇ ಧರ್ಮ ಅರ್ಥ, ಕಾಮ, ಮೋಕ್ಷಗಳನ್ನು ಹೊಂದಲು ಯೋಗ್ಯನಾಗಿರುತ್ತಾನೆ. ॥೭೦॥

**ಮೂ ॥ ಸರ್ವೋತ್ತಮಂ ಹರಿಂ ಜ್ಞಾತ್ವಾ ಯ ಏವಂ ಭಕ್ತಿಪೂರ್ವಕಂ ।**
**ಜಪಧ್ಯಾನಾದಿಭಿರ್ನಿತ್ಯಂ ಪೂಜಯೇನ್ನಾಸ್ಯ ದುರ್ಲಭಂ॥** ॥೭೧॥

ಅ ॥ ಯಾವನು ಹೀಗೆ ಭಕ್ತಿ ಪೂರ್ವಕವಾಗಿ ಶ್ರೀ ಹರಿಯನ್ನು ಸರ್ವೋತ್ತಮನೆಂದು ತಿಳಿದು ಜಪಧ್ಯಾನಾದಿಗಳಿಂದ ಸದಾ ಪೂಜಿಸುವನೋ, ಈತನಿಗೆ ಹೊಂದಲಶಕ್ಯವು ಯಾವುದೂ ಇಲ್ಲ. ॥೭೧॥

**ಮೂ ॥ ಭಕ್ತಿಂ ಕೃತ್ವಾಽನ್ಯದೇವೇಷು ಬ್ರಹ್ಮರುದ್ರಾದಿಕೇಷ್ವಪಿ ।**
**ಸರ್ವೋತ್ಕರ್ಷಮವಿಜ್ಞಾಯ ವಿಷ್ಣೋರ್ಯಾತಿ ತಮೋ ಧ್ರುವಂ॥** ॥೭೨॥

ಅ ॥ ಶ್ರೀವಿಷ್ಣುವಿಗೆ ಸರ್ವೋತ್ತಮತ್ವವನ್ನು ತಿಳಿಯದೆ ಬ್ರಹ್ಮ ರುದ್ರ ಮೊದಲಾದ ಇತರ ದೇವತೆಗಳು ಸರ್ವೋತ್ತಮರೆಂದು ತಿಳಿದರೆ ಜಪಾದಿಗಳನ್ನು ಮಾಡುವನಾದರೂ ನಿಶ್ಚಯವಾಗಿಯೂ ಅಂಧಂತಮಸ್ಸನ್ನು ಹೊಂದುತ್ತಾನೆ. ॥೭೨॥

**ಮೂ ॥ ನ ಯಜ್ಞಾ ನ ಚ ತೀರ್ಥಾನಿ ನೋಪವಾಸವ್ರತಾನಿ ಚ ।**
**ದೈವತಾನಿ ಚ ಸರ್ವಾಣಿ ತ್ರಾತುಂ ತಂ ಶಕ್ನುಯುಃ ಕ್ವಚಿತ್॥** ॥೭೩॥

ಅ ॥ ವಿಧಿಪ್ರಕಾರ ಮಾಡಿದ ಯಜ್ಞಗಳೂ, ಸ್ನಾನಾದಿಗಳಿಂದ ಸೇವಿಸಲ್ಪಟ್ಟ ಭಾಗೀರಥ್ಯಾದಿ ತೀರ್ಥಗಳೂ, ಮಾಸೋಪವಾಸಾದಿಗಳೂ ಚಾಂದ್ರಾಯಣಾದಿ ವ್ರತಗಳೂ, ಅನ್ಯದೇವತೆಗಳೂ ಎಲ್ಲರೂ ಮಿಲಿತರಾದರೂ, ವಿಪರೀತ ಜ್ಞಾನಿಯಾದ ಅಭಕ್ತನಿಗೆ ಬರತಕ್ಕ ಅನರ್ಥವನ್ನು ಪರಹರಿಸಲಿಕ್ಕೆ ಸಮರ್ಥರಲ್ಲ. ॥೭೩॥

**ಮೂ ॥ ಹರಿರ್ಹಿ ಸರ್ವದೇವಾನಾಂ ಪರಮಃ ಪೂರ್ಣಶಕ್ತಿಮಾನ್ ।**
**ಸ್ವತಂತ್ರೋಽನ್ಯೇ ತದ್ವಶಾ ಹಿ ಸರ್ವೇಽತಃ ಸ ಜಗದ್ಗುರುः॥** ॥೭೪॥

ಅ ॥ ಬ್ರಹ್ಮಾದಿಗಳಿಗಿಂತ ಅತಿಶಯಿತಪೂರ್ಣಶಕ್ತಿಯುಳ್ಳವನಾದುದರಿಂದ ಶ್ರೀಹರಿಯೇ ಸರ್ವ ದೇವತೆಗಳಿಂದಲೂ ಶ್ರೇಷ್ಠನು. ಶ್ರೀಹರಿಯೇ ಸರ್ವಸ್ವತಂತ್ರನಾದುದರಿಂದ ಬ್ರಹ್ಮಾದಿಗಳೂ ಆತನ ಅಧೀನರು. ಆದಕಾರಣ ಶ್ರೀಹರಿಯೇ ಜಗದ್ಗುರುವೆನಿಸುತ್ತಾನೆ. ॥೭೪॥

**ಮೂ ॥ ಬ್ರಹ್ಮಾದಯಶ್ಚ ತದ್ಭಕ್ತ್ಯಾ ಭಾಗಿನೋ ಭೋಗಮೋಕ್ಷಯೋಃ ।**
**ತಸ್ಮಾಜ್ಜ್ಞೇಯಶ್ಚ ಪೂಜ್ಯಶ್ಚ ವಂದ್ಯೋ ಧ್ಯೇಯಃ ಸದಾ ಹರಿಃ॥** ॥೭೫॥

ಅ ॥ ಬ್ರಹ್ಮಾದಿಗಳೂ ಶ್ರೀ ವಿಷ್ಣುವಿನ ಭಕ್ತಿಯಿಂದಲೇ ಸಾಂಸಾರಿಕಫಲಾತಿಶಯ, ನಿತ್ಯಾನಂದಾನುಭವರೂಪ ಮೋಕ್ಷ ಇವುಗಳಿಗೆ ಯೋಗ್ಯರಾಗಿರುತ್ತಾರೆ. ಆದಕಾರಣ ಶ್ರೀಹರಿಯನ್ನೇ ಸರ್ವೋತ್ತಮನೆಂದು ತಿಳಿಯಬೇಕು. ಷೋಡಶೋಪಚಾರಗಳಿಂದ ಪೂಜಾ ನಮಸ್ಕಾರ ಸ್ತೋತ್ರಗಳನ್ನು ಮಾಡಬೇಕು. ಸರ್ವದಾ ನೀನು ನನ್ನ ಸ್ವಾಮಿಯು, ನಾನು ನಿನ್ನ ಭೃತ್ಯನು ಎಂದು ಧ್ಯಾನಿಸುತ್ತಿರಬೇಕು. ॥೭೫॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ತಂತ್ರಸಾರೇ ಪ್ರಥಮೋಽಧ್ಯಾಯಃ ॥**

॥ಶ್ರೀಃ॥

# ೨ನೆ ಅಧ್ಯಾಯವು

ಮೂ॥ ಯಸ್ಯಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ।
ವೀರ್ಯದಃ ಕೇsಭಿತೋ ವಕ್ತ್ರಮಕ್ಷಿಕರ್ಣೇಷು ನಾಸಯೋಃ॥ ॥೧॥

ಗಂಡಯೋರೋಷ್ಠಯೋರ್ದಂತಪಂಕ್ತ್ಯೋರ್ಮೂರ್ಧ್ನಿ ವಾಚಿ ಚ।
ದೋಃಪತ್ಸಂಧಿಷು ಸಾಗ್ರೇಷು ಪಾರ್ಶ್ವಯೋಃ ಪೃಷ್ಠಗುಹ್ಯಯೋಃ॥ ॥೨॥

ತುಂದೇ ಚ ಹೃದಿ ಧಾತೂನಾಂ ಸಪ್ತಕೇ ಪ್ರಾಣಜೀವಯೋಃ।
ಸಕ್ಷಕಾರಾನ್ನ್ಯಸೇದ್ವರ್ಣಾನ್ನೃಸಿಂಹಃ ಕ್ಷಸ್ಯ ದೇವತಾ॥ ॥೩॥

ಅ॥ ಎಲ್ಲಾ ಮಂತ್ರಗಳ ಜಪದ ಆದ್ಯಂತಗಳಲ್ಲಿ `ಅಂ ಅಜಾಯ ನಮಃ ' ಇದು ಮೊದಲಾದ ಪಂಚಾಶದ್ವರ್ಣಾತ್ಮಕ ಮಾತೃಕಾಮಂತ್ರಮಂತ್ರಗಳಿಂದಲೂ ಕ್ಷಕಾರದಿಂದಲೂ ಅಂಗನ್ಯಾಸ ಮಾಡಬೇಕು. ಹೀಗೆ ಮಾಡಿದರೆ ಮಂತ್ರಜಪದಿಂದ ವಿಶೇಷವಾಗಿ ಅಭೀಷ್ಟಫಲವು ಸಿಗುವುದು. ಎಲ್ಲಾ ಮಂತ್ರಜಪಗಳ ಪೂರ್ವೋತ್ತರಗಳಲ್ಲಿ ಮಾತೃಕಾನ್ಯಾಸವನ್ನು ಮಾಡಬೇಕು. (೫೦ ವರ್ಣಗಳ ನ್ಯಾಸಸ್ಥಾನಗಳು) ಹಣೆಯ ಮೇಲ್ಭಾಗ (1) ಮುಖ, (2) ೨ ಕಣ್ಣು (4) ೨ ಕಿವಿ, (6) ಮೂಗಿನ ಹೊಳ್ಳೆ, ೨ (8) ೨ ಕೆನ್ನೆ, (10) ೨ ತುಟಿ, (12) ಹಲ್ಲುಗಳ ೨ ಸಾಲು, (1+) ಶಿಖೆಯ ಇದುರು ಭಾಗ, (15) ವಾಗಿಂದ್ರಿಯ, (16) ೫ ಕೈಬೆರಳುಗಳ ಸಂಧಿ, (21) ೫ ಕೈಬೆರಳುಗಳ ತುದಿ, (26) ಪಾದದ ೫ ಬೆರಳುಗಳ ಸಂಧಿ, (31) ೫ ತುದಿ, (36) ಹೊಟ್ಟೆಯ ಬಲ ಎಡ ತುದಿಗಳು, (38) ಹೊಟ್ಟೆಯ ಹಿಂದಿನ ಬದಿ, (39) ಗುಹ್ಯಸ್ಥಾನ (40) ಹೊಟ್ಟೆಯ ಕೆಳಭಾಗ, (41) ಹೃದಯ (42) ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು, ಮಜ್ಜಾ, ಅಸ್ಥಿ, ಹೀಗೆ ೭ ಧಾತು, (49) ಮುಖ್ಯವಾಯು, (50) ಜೀವನು, (51) ಈ ಸ್ಥಾನಗಳಲ್ಲಿ ಕ್ಷಕಾರದಿಂದ ಕೂಡಿದ ಅಕಾರ ಮೊದಲಾದ ೫೧ ವರ್ಣಗಳಿಂದ ಕ್ರಮವಾಗಿ ಅಂಗನ್ಯಾಸ ಮಾಡಬೇಕು.) ಕ್ಷಕಾರಕ್ಕೆ ನರಸಿಂಹನು ದೇವತೆಯು. (ಅಕಾರಾದಿಗಳಿಗೆ ಅಜಾದಿ ಭಗವದ್ರೂಪಗಳು ದೇವತೆ.) ॥೧-೩॥

ಮೂ ॥ ಜಪೇ ನ್ಯಾಸೇ ಚ ವಿಹಿತಃ ಕ್ಷೋsಕ್ಷರಾಣಾಂ ಸದಾsಂತತಃ।
ಪ್ರಾಣಾಯಾಮೋ ರೇಚಯಿತ್ವಾ ಪೂರಯಿತ್ವಾ ಚ ಕುಂಭಕೇ॥ ॥೪॥

ಅ॥ ೫೦ ಅಕ್ಷರಗಳ ಜಪನ್ಯಾಸಗಳನ್ನು ಮಾಡಿದ ಮೇಲೆಯೇ ಯಾವಾಗಲೂ ಕ್ಷಕಾರದ ಜಪನ್ಯಾಸಗಳನ್ನು ಮಾಡಬೇಕು. ಬಲ ಮೂಗಿದ ರಂಧ್ರದಿಂದ ಶ್ವಾಸವಾಯುವನ್ನು ಹೊರಪಡಿಸಿ ಎಡಮೂಗಿನರಂಧ್ರದಿಂದ ವಾಯುವನ್ನು ಒಳಗೆ ಸೆಳೆದುಕೊಂಡು (ಬೆರಳುಗಳಿಂದ ಮೂಗಿನ ೨ ರಂಧ್ರಗಳನ್ನು ಬಂಧಿಸಿ ಸುಷುಮ್ನಾಡಿನಲ್ಲಿ) ಕುಂಭಕದಲ್ಲಿ ವಾಯುವನ್ನು ನಿರೋಧಿಸುವುದು ಪ್ರಾಣಾಯಾಮವೆನಿಸುತ್ತದೆ. ॥೪॥

ಮೂ॥ ತಾರೈಸ್ತ್ರಿದ್ವಾದಶಾವೃತ್ತೈದ್ವ್ಯೇಕ ದ್ವಾದಶಕೇನ ವಾ।
ತತ್ತನ್ಮಂತ್ರೇಣ ವಾ ಕಾರ್ಯೋ ಗಾಯತ್ರ್ಯಾ ದಶತಾರಕೈಃ॥ ॥೫॥

ಅ॥ (ಪ್ರಾಣ ನಿರೋಧ ಸಮಯದಲ್ಲಿ) ೩೬, ೨೪, ಅಥವಾ ೧೨, ಪ್ರಣವಗಳಿಂದ, ಅಥವಾ ಹಿಂದೆ ಹೇಳಿದ ಸಂಖ್ಯೆಗಳಿಂದಲೇ ನಾವು ಜಪಿಸುವ ಆವಾವ ಮಂತ್ರಗಳಿಂದ, ಅಥವಾ ೧೦ ಪ್ರಣವ, ವ್ಯಾಹೃತಿ, ಗಾಯತ್ರೀಶಿರಸ್ಸು, ಇವುಗಳಿಂದ ಕೂಡಿದ ಗಾಯತ್ರಿಯಿಂದ (ಅಂದರೆ ಓಂಭೂಃ, ಓಂಭುವಃ, ಓಂಸ್ವಃ, ಓಂಮಹಃ, ಓಂ ಜನಃ, ಓಂತಪಃ, ಓಂಸತ್ಯಂ, ಓಂತತ್ಸವಿತುರ್ವರೇಣ್ಯಂ ಭರ್ಗೋ

ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್, ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸ್ವರೋಮ್ ಎಂಬ ೭ ವ್ಯಾಹೃತಿ, ೧೦ ಪ್ರಣವ, ಗಾಯತ್ರೀ ಶಿರಸ್ಸುಗಳಿಂದ ಕೂಡಿದ ಗಾಯತ್ರಿಯಿಂದ) ಪ್ರಾಣಾಯಾಮವನ್ನು ಮಾಡಬೇಕು.||೫||

**ಮೂ || ಆದಾವೇವ ಜಪೇ ಕುರ್ಯಾಚ್ಛೋಷಣಂ ದಹನಂ ಪ್ಲುತಿಂ |**
**ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಂ|| ||೬||**

ಅ || ಪ್ರಾಣಾಯಾಮಕ್ಕಿಂತ ಮೊದಲು ವಾಯು ಅಗ್ನಿ ವರುಣರ ಬೀಜಾಕ್ಷರಗಳಾದ ಯರವಗಳ ಜಪಗಳಿಂದ (ನಾಭಿದೇಶ, ಹೃದಯ ಶಿರಸ್ಸುಗಳಲ್ಲಿ ಮಂಡಳದಲ್ಲಿರತಕ್ಕ) ವಾಯು, ಅಗ್ನಿ, ವರುಣರಲ್ಲಿ ಶ್ರೀಹರಿಯನ್ನು ಧ್ಯಾನಿಸಿ (ವಾಯ್ವಗ್ನಿ ಬೀಜಗಳಿಂದ) ಪಾಪ ಪುರುಷನ ಶೋಷಣವನ್ನೂ, ದಹನವನ್ನೂ, (ವರುಣ ಬೀಜದಿಂದ) ಶರೀರ ಕ್ಷಾಳನ (ತೊಳೆಯುವಿಕೆ)ವನ್ನು ಮಾಡಬೇಕು. ||೬||

**ಮೂ || ಏಕಪಂಚಾಶದರ್ಣಾನಾಂ ಚತುರ್ವಿಂಶತಿಮೂರ್ತಯಃ |**
**ಆತ್ಮಾದ್ಯಾ ವಾಸುದೇವಾದ್ಯಾಃ ವಿಶ್ವಾದ್ಯಾ ಮತ್ಸ್ಯ ಕಚ್ಛಪೌ|| ||೭||**

**ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ |**
**ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ|| ||೮||**

**ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶನಾಮಕಾಃ |**
**ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ|| ||೯||**

ಅ || (ಕಲಶ ಪೂಜಾ ಪ್ರಕಾರವನ್ನು ಹೇಳುತ್ತಾರೆ) ಅಕಾರಾದಿ ಕ್ಷಕಾರಾಂತ ೫೧ ವರ್ಣಗಳಿಗೆ ಅಜಾದಿ ನರಸಿಂಹ ಪರ್ಯಂತ ೫೧ ಭಗವನ್ಮೂರ್ತಿಗಳು ದೇವತೆಗಳು ಮತ್ತು ಕೇಶವಾದಿ ೨೪, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ೪, ವಾಸುದೇವ ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧ, ಎಂಬ ೪, ವಿಶ್ವ, ತೈಜಸ, ಪ್ರಾಜ್ಞ, ತುರೀಯ ಎಂಬ ೪, ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ವೇದವ್ಯಾಸ, ಶ್ರೀಕೃಷ್ಣ, ದತ್ತಾತ್ರೇಯ, ಬುದ್ಧ, ಕಲ್ಕಿ, ಶಿಂಶುಮಾರ ಎಂಬ ೧೩ ಈ ೧೦೦ ಭಗವನ್ಮೂರ್ತಿಗಳು ಸಾಕ್ಷಾತ್ ಸ್ವರೂಪಾಂಶಗಳು, ಕಲಶದಲ್ಲಿ ಸನ್ನಿಹಿತರಾಗಿರುವದರಿಂದ ಕಲಶ ಎಂದು ಹೆಸರುಳ್ಳವುಗಳು. ಈ ೧೦೦ ಮೂರ್ತಿಗಳಿಂದೊಡಗೂಡಿದ ಬುಧ ವರುಣರಲ್ಲಿ ಅಂತರ್ಯಾಮಿಯಾದ ಶ್ರೀಲಕ್ಷ್ಮೀನಾರಾಯಣನನ್ನು ಕುಂಭೋದಕದಲ್ಲಿ ಪೂಜಕನು ಆವಾಹಿಸಬೇಕು. ||೭ -೮-೯||

**ಮೂ || ಪೂರ್ವೋಕ್ತವಿಧಿನಾಽಭ್ಯರ್ಚ್ಯ ಪ್ರತಿಮಾಂ ಶಿಷ್ಯಮೇವ ವಾ |**
**ಸ್ನಾಪಯೇತ್ಪೂರ್ವಮರ್ಚಾಯಾಂ ಜಪೋಽನೂನಃ ಸಹಸ್ರತಃ|| ||೧೦||**

**ಮೂಲಮಂತ್ರಸ್ಯ ಚಾಂಗಾನಾಂ ನ್ಯಾಸಃ ಸ್ನಾನಾದನಂತರಂ |**
**ಪ್ರತಿಮಾಯಾಂ ಸನ್ನಿಧಿಕೃಚ್ಛಿಷ್ಯೇ ಮಾಹಾತ್ಮ್ಯಕೃದ್ಭವೇತ್|| ||೧೧||**

ಅ || ಹೀಗೆ ಹಿಂದೆ ಹೇಳಿದ ಪ್ರಕಾರ ಷೋಡಶೋಪಚಾರಗಳಿಂದ ಕಲಶದಲ್ಲಿ ಶ್ರೀಹರಿಯನ್ನು ಪೂಜಿಸಿ ಪವಿತ್ರಗಳಾದ ಆ ಕಲಶೋದಕಗಳಿಂದ ಪ್ರತಿಮೆಗೆ ಅಭಿಷೇಕ ಮಾಡವೇಕು. ಮಂತ್ರ ಸ್ವೀಕಾರಕ್ಕಾಗಿ ದೀಕ್ಷೆಯನ್ನು ಹೊಂದುವ ಶಿಷ್ಯನಿಗೂ ಹೀಗೆಯೇ ಅಭಿಷೇಕ ಮಾಡಬೇಕು. ಪ್ರತಿಮೆಗೆ ಅಭಿಷೇಕ ಮಾಡುವುದಕ್ಕಿಂತ ಮೊದಲು ೧೦೦೦ಕ್ಕೆ ಕಮ್ಮಿಯಾಗದೆ ಮೂಲಮಂತ್ರದ ಜಪವನ್ನು ಮಾಡಬೇಕು. ಅಭಿಷೇಕ ಮಾಡಿದ ಮೇಲೆ ಅಂಗಗಳಲ್ಲಿ ತತ್ವನ್ಯಾಸ, ಮಾತೃಕಾನ್ಯಾಸಗಳನ್ನು ಮಾಡಬೇಕು. ಹೀಗೆ ಅಭಿಷೇಕ ಮಾಡಿ ತತ್ವನ್ಯಾಸ ಮಾತೃ ಕಾನ್ಯಾಸಗಳನ್ನು ಮಾಡಿದುದರಿಂದ ಪ್ರತಿಮೆಯಲ್ಲಿ ವಿಶೇಷವಾಗಿ ಭಗವತ್ಸನ್ನಿಧಾನವುಂಟಾಗುತ್ತದೆ. ಅಭಿಷೇಕಾದಿಯು ಶಿಷ್ಯನಿಗೆ ಜ್ಞಾನ ಭಕ್ತ್ಯಾದಿ ಗುಣಗಳನ್ನು ಹುಟ್ಟಿಸಿ ಶ್ರೇಷ್ಠ್ಯವನ್ನು ಹುಟ್ಟಿಸುತ್ತದೆ. ||೧೦-೧೧||

ಮೂ ॥ ಕಲಶಃ ಕೀರ್ತಿಮಾಯುಶ್ಚ ಪ್ರಜ್ಞಾಂ ಮೇಧಾಂ ಶ್ರಿಯಂ ಭಗಂ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥೧೨॥

ಅ ॥ ಹಿಂದೆ ಹೇಳಿದ ವಿಧಿಪ್ರಕಾರ ಪೂಜಿತವಾದ ಕಲಶವು ಅಥವಾ ಕಲಶಾಭಿಷೇಕವು ಶಿಷ್ಯನಿಗೆ ಕೀರ್ತಿ, ಆಯುಷ್ಯಾಭಿವೃದ್ಧಿ, ವಿಶೇಷಜ್ಞಾನ, ಧಾರಣಾಶಕ್ತಿ, ಕಾಂತಿ, ಐಶ್ವರ್ಯ, ಯೋಗ್ಯತಾಭಿವ್ಯಕ್ತಿ, ಪಾಪಪರಿಹಾರ, ಪುಣ್ಯಾಭಿವೃದ್ಧಿ ಇವುಗಳನ್ನು ಹೊಂದಿಸಿಕೊಡುವುದು. ॥೧೨॥

ಮೂ ॥ ಉಪಸರ್ಗೇಷು ಜಾತೇಷು ದೈವಭೂತಾತ್ಮಹೇತುಷು ।
ಆಯುಷೇ ವಾಥ ಶಾಂತ್ಯೈವಾ ಶ್ರಿಯೈ ವಾ ಪುಣ್ಯವೃದ್ಧಯೇ॥ ॥೧೩॥

ಯೋಗ್ಯತಾಯೈ ಮಂತ್ರಸಿದ್ಧ್ಯೈ ವಿಷ್ಣೋಃ ಪ್ರೀತ್ಯರ್ಥಮೇವ ವಾ ।
ಜುಹುಯಾತ್ಸಹಸ್ರಮಯುತಂ ಲಕ್ಷಂ ಕೋಟಿಮಥಾಪಿ ವಾ॥ ॥೧೪॥

ಪೂರ್ವವತ್ಸಂಸ್ಕೃತೇ ವಹ್ನೌ ಧ್ಯಾತ್ವಾ ದೇವಂ ಜನಾರ್ದನಂ ॥೧೫॥

ಅ ॥ ದೈವಯೋಗದಿಂದುಟಾದ ದುರ್ಭಿಕ್ಷಾದಿಗಳು, ಭೌತಿಕಗಳಾದ ಜ್ವರಾದಿಗಳು, ಮನಸ್ಸಿನಿಂದುಂಟಾದ ದುಃಸ್ವಪ್ನಾದಿಗಳು, ಇಂತಹ ದುಃಖಗಳುಂಟಾದಾಗ ಅಂತಹ ದುಃಖಗಳ ಪರಿಹಾರ, ಅಪಮೃತ್ಯು ಪರಿಹಾರವಾಗಿ ಪೂರ್ಣಾಯುಷ್ಯ ಸಿದ್ಧಿ, ಐಶ್ವರ್ಯ, ಪುಣ್ಯಾಭಿವೃದ್ಧಿ, ತನ್ನ ಯೋಗ್ಯತೆಯ ಅಭಿವ್ಯಕ್ತಿ, ಮಂತ್ರಗಳಿಗೆ ಉದ್ದಿಷ್ಟಫಲವನ್ನು ಕೊಡತಕ್ಕ ಶಕ್ತಿ, ಸಿದ್ಧಿ, ಶ್ರೀವಿಷ್ಣು ಪ್ರೀತಿ ಇವುಗಳಿಗಾಗಿಯೂ ಹಿಂದೆ ಹೇಳಿದಂತೆ ಪೀಠಪೂಜಾದಿಗಳಿಂದ ಪವಿತ್ರವಾದ ಕುಂಡದಲ್ಲಿದ್ದ ಅಗ್ನಿಯಲ್ಲಿ ಶ್ರೀಪರಮಾತ್ಮನನ್ನು ಧ್ಯಾನಿಸಿ ತಂತಮ್ಮ ಶಕ್ತ್ಯನುಸಾರ ೧೦೦೦, ೧೦೦೦೦, ೧೦೦೦೦೦, ೧೦೦೦೦೦೦, ಆಹುತಿಗಳನ್ನು ಕೊಡಬೇಕು. ॥೧೩-೧೫॥

ಮೂ ॥ ಕೃತ್ವಾ ತ್ರಿಮೇಖಲಂ ಕುಂಡಂ ಚತುರ್ವಿಂಶಾಂಗುಲೋಚ್ಛ್ರಿತಂ ।
ತಾವತ್ಖಾತಂ ಚತುಷ್ಕೋಣಮುಚ್ಛ್ರಿತಂ ದ್ವಾದಶೈವ ವಾ॥ ॥೧೬॥

ಅ ॥ (ಆ ಕುಂಡದ ಲಕ್ಷಣ ಹೇಳುತ್ತಾರೆ.) ಮೂರುಮೇಖಲೆ=(ಕುಂಡದಸುತ್ತಲೂ ಮಾಡತಕ್ಕ ಚತುರಸ್ರಾಕಾರವಾದ ದಂಡೆ)ಯುಳ್ಳದ್ದೂ, ಕುಂಡದ ಮೇಲುಭಾಗ ಭೂಮಿಗಿಂತ ೨೪ ಅಂಗುಲ ಎತ್ತರವಿರಬೇಕು ಕೆಳಭಾಗವೂ ಭೂಮಿಗಿಂತ ೨೪ ಅಂಗುಲ ಅಗೆಯಬೇಕು. ಇಂತಹ ಚತುಷ್ಕೋಣಾಕಾರವಾದ ಕುಂಡವನ್ನು ಮಾಡಬೇಕು. ಅಥವಾ ಭೂಮಿಗಿಂತ ೧೨ ಅಂಗುಲ ಎತ್ತರವಿದ್ದರೂ ಸಾಕು, (ಗರ್ತ (ಗುಳಿ) ೨೪ ಅಂಗುಲವೇ, ಎಂದೂ ಒಂದು ಪಕ್ಷವಿದೆ.) ॥೧೬॥

ಮೂ ॥ ದ್ವ್ಯಂಗುಲಂ ತ್ರ್ಯಂಗುಲಂ ವಾಪಿ ಚತುರಂಗುಲಮೇವ ವಾ ।
ವಿಸ್ತಾರೋ ಮೇಖಲಾನಾಂ ಸ್ಯಾದಂತ್ಯಾ ವಾ ಚತುರಂಗುಲಾ ॥
ಚತುರ್ವಿಂಶಾಂಗುಲಂ ವಾ ತದ್ವಿಸ್ತಾರೋ ದ್ವಾದಶೈವ ವಾ। ॥೧೭॥

ಅ ॥ ೩ ಮೇಖಲೆಗಳಲ್ಲಿ ಒಂದೊಂದರ ಅಗಲವು, ೨ ಅಂಗುಲ, ೩ ಅಂಗುಲ, ಅಥವಾ ೪ ಅಂಗುಲವು ಇರಬೇಕು. ಕೊನೆಯ ಮೇಖಲೆ (ದಂಡೆ) ಮಾತ್ರ ೪ ಅಂಗುಲದ್ದೇ ಆಗಿರಬೇಕು. ಅಥವಾ ಒಟ್ಟಿಗೆ ೩ ಮೇಖಲೆಗಳ ಅಗಲವು ೨೪ ಅಂಗುಲ, ಅಥವಾ ೧೨ ಅಂಗುಲವಿರಬೇಕು. ॥೧೭॥

ಮೂ ॥ ಅಶ್ವತ್ಥಪತ್ರಾಕೃತಿಃ ಸ್ಯಾನ್ಮೂಲತೋ ದ್ವಾದಶಾಂಗುಲಾ ।
ಯೋನಿಃ ಖಾತೇ ಚ ವಿನತಾ ಪ್ರವಿಷ್ಟಾ ದ್ವ್ಯಂಗುಲಂ ತಥಾ। ॥೧೮॥

**ತದಾತ್ಮನಿ ಹರಿಂ ಧ್ಯಾತ್ವಾ ಕುಂಡೇ ದೇವೀಂ ಶ್ರಿಯಂ ತಥಾ |**
**ವಿಷ್ಣುವೀರ್ಯಾತ್ಮಕಂ ವಹ್ನಿಂ ನಿಕ್ಷಿಪೇತ್ಪ್ರಣವೇನ ಹ|| ||೧೯||**

ಅ || ಮೇಖಲೆಯ ಮೇಲ್ಭಾಗದಲ್ಲಿ (ಆಜ್ಯಾಹುತಿಕೊಡುವ ಪ್ರದೇಶದಲ್ಲಿ) ಅಶ್ವತ್ಥದ ಎಲೆಯ ಆಕಾರವಾಗಿ, ಮೂಲಾರಭ್ಯ ೧೨ ಅಂಗುಲ ಉದ್ದವಾದ ಯೋನಿಯನ್ನು ನಿರ್ಮಿಸಬೇಕು. ಅದು ಪೂರ್ವ ಪಶ್ಚಿಮಗಳಲ್ಲಿ ೧೦ ಅಂಗುಲ ದೀರ್ಘವಾಗಿ ಕ್ರಮವಾಗಿ ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಾ ತುದಿಯಲ್ಲಿ ೨ ಅಂಗುಲವಿದ್ದು ಕುಂಡದ ಮಧ್ಯದಲ್ಲಿ ಸ್ವಲ್ಪ ಬಗ್ಗಿರಬೇಕು. ಇಂತಹ ಲಕ್ಷಣಗಳಿರುವ ಭಗವಂತನ ಸನ್ನಿಧಾನಕ್ಕೆ ಯೋಗ್ಯವಾದ ಕುಂಡದಲ್ಲಿ ಶ್ರೀಹರಿಯನ್ನೂ ಅವನೊಡನೆ ಕ್ರೀಡಿಸುತ್ತಿರುವ ಲಕ್ಷ್ಮೀದೇವಿಯನ್ನೂ ಧ್ಯಾನಿಸಿ ವಿಷ್ಣು ವೀರ್ಯಾಭಿಮಾನಿಯಾದ ವಹ್ನಿಯಿಂದ ಅಭಿಮನ್ಯಮಾನವಾದ ಅಗ್ನಿಯನ್ನು ಧ್ಯಾನಿಸಿ ಓಂಕಾರವನ್ನುಚ್ಚರಿಸಿ ಪ್ರತಿಷ್ಠಾಮಾಡಬೇಕು. ||೧೮+೧೯||

**ಮೂ || ಕುರ್ಯಾತ್ಕ್ರಿಯಾಃ ಷೋಡಶ ಚ ವ್ಯಾಹೃತೀಭಿಃ ಪೃಥಕ್ ಪೃಥಕ್ |**
**ವಹ್ನೇಸ್ತದ್ಗಹರೇಃ ಪ್ರೀತಿಂ ಕುರ್ವನ್ ದ್ರವ್ಯೈರ್ಯಜೇತ್ತತಃ ||೨೦||**

ಅ || ೪ ವ್ಯಾಹೃತಿಗಳಿಂದ ಪ್ರತ್ಯೇಕ ಪ್ರತ್ಯೇಕ (ಪುಷ್ಪವನ್ನು ಸಮರ್ಪಿಸಿ ಭೂರಾದಿವ್ಯಾಹೃತಿ ದೇವತೆಗಳನ್ನು ಧ್ಯಾನಿಸಿ) ವ್ಯಾಹೃತಿ ಮಂತ್ರಗಳಿಂದ (ಅಗ್ನಿಗೆ) ಗರ್ಭಾಧಾನಾದಿ ಷೋಡಶ ಸಂಸ್ಕಾರಗಳನ್ನು ಮಾಡಬೇಕು. (ಷೋಡಶೋಪಚಾರಗಳಿಂದ ಅಗ್ನಿಯಲ್ಲಿ ಶ್ರೀಹರಿಯನ್ನು ಪೂಜಿಸಿ) ಅಗ್ನಿಯ ಮತ್ತು ಅಗ್ನ್ಯಂತರ್ಯಾಮಿಯಾದ ಶ್ರೀ ಪರಶುರಾಮನ ಪ್ರೀತಿಗಾಗಿ ವಿಧ್ಯುಕ್ತ ದ್ರವ್ಯಗಳಿಂದ ಹೋಮಿಸಬೇಕು. ||೨೦||

**ಮೂ || ಆಜ್ಯೇನ ವಾ ಪಾಯಸೇನ ಸಮಿದ್ಭಿಃ ಕ್ಷೀರಿಣಾಮಥ |**
**ತಿಲೈರ್ವಾ ತಂಡುಲೈರ್ವಾಽಥ ಮಧುರೈಸ್ತ್ರಿಭಿರೇವ ವಾ|| ||೨೧||**

**ಬ್ರಹ್ಮವೃಕ್ಷಸಮಿದ್ಭಿರ್ವಾ ಸಮಿದ್ಭಿರ್ವಾಽಮೃತೋದ್ಭವೈಃ |**
**ಅಮೃತಾಸ್ಸಮಿಧೋ ಜ್ಞೇಯಾಸ್ಸರ್ವತ್ರ ಚತುರಂಗುಲಾಃ|| ||೨೨||**

ಅ || ಆಜ್ಯ, ಪಾಯಸ, ಅಶ್ವತ್ಥ, ಗೋಳೀಮರ ಮೊದಲಾದ ವೃಕ್ಷಗಳ ಸಮಿಧೆಗಳು, ಎಳ್ಳು, ಅಕ್ಕಿ, ಜೇನು, ಶರ್ಕರಾ, ಬೆಲ್ಲ ಮತ್ತು ೪ ಪಲಾಶವೃಕ್ಷದ ಸಮಿಧೆಗಳು, ಅಮೃತಬಳ್ಳಿಯ ಸಮಿಧೆಗಳು, (ಇವುಗಳು ಹೋಮ ದ್ರವ್ಯಗಳು) ಎಲ್ಲಾ ಶಾಂತಿಕಾದಿ ಕರ್ಮಗಳಲ್ಲಿ ಅಮೃತಬಳ್ಳಿಯ ಸಮಿಧೆಗಳು ಮಾತ್ರ ೪ ಅಂಗುಲದವುಗಳೇ ಆಗಬೇಕು. ||೨೧, ೨೨||

**ಮೂ || ಏವಮೇವ ತು ದೀಕ್ಷಾಯಾಮಾಜ್ಯೇನೈವಾಹುತಿಕ್ರಿಯಾ |**
**ಪೂಜಾ ಚ ಕಾರ್ಯಾ ವಿಧಿವತ್ಪೂರ್ವಂ ಸರ್ವಹುತೇಷ್ವಪಿ|| ||೨೩||**

ಅ || ವೈಷ್ಣವದೀಕ್ಷೆಯಲ್ಲಿ ಹೀಗೆಯೇ ಕುಂಡನಿರ್ಮಾಣ, ಗರ್ಭಾಧಾನಾದಿಗಳನ್ನು ಮಾಡಿ ತುಪ್ಪದಿಂದಲೇ ಹೋಮಿಸಬೇಕು. ಎಲ್ಲಾ ಹೋಮಗಳನ್ನು ಮಾಡುವುದಕ್ಕಿಂತ ಮೊದಲು ವಿಧಿಪ್ರಕಾರ ಗಣಪತಿ, ಪ್ರಧಾನ ದೇವತಾ, ನವಗ್ರಹ ಇವರ ಪೂಜೆಗಳನ್ನು ಮಾಡಬೇಕು. ||೨೩||

**ಮೂ || ಗುರವೇ ದಕ್ಷಿಣಾಂ ದದ್ಯಾಲ್ಲಕ್ಷೇ ಲಕ್ಷೇ ಶತಂ ಸುಧೀಃ |**
**ಆತ್ಮನೈವ ಕೃತೇ ಹೋಮೇ ಶಕ್ತಿತೋ ಗುರುದಕ್ಷಿಣಾಂ|| ||೨೪||**

ಅ || ಜ್ಞಾನಿಯು ಪ್ರತಿಲಕ್ಷ ಹೋಮದಲ್ಲಿ ೧೦೦, ೧೦೦, ಗೋವುಗಳನ್ನು ಪುರೋಹಿತರಿಗೆ ಗುರುದಕ್ಷಿಣೆಯಾಗಿ ಕೊಡಬೇಕು. ಯಜಮಾನನೇ ಹೋಮ ಮಾಡಿದ್ದಾದರೆ ಶಕ್ತ್ಯಾನುಸಾರ ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟರೆ ಸಾಕು. ||೨೪||

**||ದ್ವಿತೀಯೋಽಧ್ಯಾಯಃ ಸಮಾಪ್ತಃ||**

॥ಶ್ರೀಃ॥

# ೩ನೇ ಅಧ್ಯಾಯವು

## ಪ್ರತಿಮಾಲಕ್ಷಣವು

ಮೂ ॥ ಪ್ರತಿಷ್ಠಾಂ ಕಾರಯನ್ವಿಷ್ಣೋಃ ಕುರ್ಯಾತ್ಸುಪ್ರತಿಮಾಂ ಬುಧಃ ।
ಲೋಹೈರ್ವಾ ಶಿಲಯಾ ದಾರ್ವಾ ಮೃದಾ ವಾಽಪಿ ಯಥಾಕ್ರಮಂ ॥೧॥

ಷಣ್ಣವತ್ಯಂಗುಲಾಂ ಯೋಗ ಆಸೀನಾಮಥವಾ ಸ್ಥಿತಾಂ ।
ಶಯಾನಾಂ ವಾ ಮುಮುಕ್ಷೂಣಾಂ ವ್ಯಾಚಕ್ಷಾಣಾಂ ನಿಜಾಂ ಸ್ಥಿತಿಂ ॥೨॥

ಮುಖಾದೂರ್ಧ್ವಂ ದ್ವ್ಯಂಗುಲೋಚ್ಚಾಂ ನವಾಂಗುಲಲಸನ್ಮುಖಾಂ ।
ಸುವೃತ್ತತ್ರ್ಯಂಗುಲಗ್ರೀವಾಮಾಸ್ತನಾಚ್ಚ ಷಡಂಗುಲಾಂ ॥೩॥

ಪಂಚಾದಶಾಂಗುಲಾಂ ನಾಭೇರಾ ಸಾರ್ಧದಶಕಾಂಗುಲಾಂ ।
ವೃಷಣಾದಾ ಮೂಲತಶ್ಚ ಸಾರ್ಧದ್ವ್ಯಂಗುಲಮಾಯತಾಂ ॥೪॥

ತಾವದಾ ಗುದತೋ ದೀರ್ಘಾಂ ಚೈತ್ಯಾದಾಽಷ್ಟಾದ  ಶಾಂಗುಲಾಂ।
ತಥಾ ದ್ವ್ಯಂಗುಲಚೈತ್ಯಾಂ ಚ ದ್ವಾವಿಂಶಜ್ಜಂಘಯಾ ಯುತಾಂ ॥೫॥

ಆರಭ್ಯ ಗುಲ್ಫಮಧ್ಯಂಚ ಸಹಾರ್ಧಚತುರಂಗುಲಾಂ ।
ಷಡಂಗುಲೋಚ್ಚಪ್ರಪದಾಂ ಸಾರ್ಧತ್ರ್ಯಂಗುಲಮೇವ ಚ ॥೬॥

ಪ್ರಪದೋಚ್ಚಯುತಾಮಂತೇ ದ್ವ್ಯಂಗುಲಪ್ರಪದೋಚ್ಛ್ರಯಾಂ ।
ತ್ರ್ಯಂಗುಲದ್ವ್ಯಂಗುಲಾಮರ್ಧಹೀನಮಧ್ಯಾಂಗುಲಾಮಪಿ ॥೭॥

ತ್ರಿಪಾದಾಂಗುಲಹೀನಾನ್ಯಾಂ ತತಸ್ತಾದೃಶತತ್ಪರಾಂ ।
ಪಾದೋನೋಚ್ಚಾಂಗುಷ್ಠನಖಾಂ ತದರ್ಧತದನಂತರಾಂ ॥೮॥

ಕ್ರಮಶಃ ಪಾದಹೀನಾನ್ಯಾಂ ರಕ್ತಪಾದನಖಾಂ ಶುಭಾಂ ।
ವಿಸ್ತಾರಃ ಪ್ರಪದಸ್ಯಾಪಿ ಷಡಂಗುಲ ಉದಾಹೃತಃ ॥೯॥

ಅಂಗುಷ್ಠಪರಿಣಾಹಸ್ತು ಚತುರಂಗುಲ ಈರಿತಃ ।
ತ್ರ್ಯಂಗುಲಸ್ತು ತದನ್ಯಸ್ಯ ವ್ರೀಹ್ಯರ್ಧೋನಾಃ ಕ್ರಮಾತ್ಪರಾಃ ॥೧೦॥

ದಶಾಂಗುಲಂ ಜಂಘಮೂಲಂ ಮಧ್ಯಂ ತತ್ತ್ರ್ಯಂಗುಲಾಧಿಕಂ ।
ಸಪ್ತದಶಾಂಗುಲಂ ತೂರ್ಧ್ವಂ ಜಾನುರಷ್ಟಾದಶಾಂಗುಲಃ ॥೧೧॥

ಊರ್ವತೋಽಪಿ ತಥಾ ಜ್ಞೇಯೋ ಮಧ್ಯಂ ದ್ವಿರ್ದ್ವಾದಶಾಂಗುಲಂ ।
ಚತುರಂಗುಲಾಧಿಕಂ ಮೂಲಂ ಗುಹ್ಯಂ ಸಾರ್ಧಚತುಷ್ಟಯಂ ॥೧೨॥

ಸಾರ್ಧತ್ರಯಂ ಪರೀಣಾಹಾದ್ವೃಷಣಂ ಚತುರಂಗುಲಂ ।
ಸಪ್ತಾಂಗುಲಂ ಪರೀಣಾಹಾದ್ವೃತ್ತಂ ಪ್ರೋಕ್ತಂ ಸಮಸ್ತಶಃ ॥೧೩॥

ಅಷ್ಟತ್ರಿಂಶಾಂಗುಲಃ ಕಟ್ಯಾಃ ಪರಿಣಾಹ ಉದಾಹೃತಃ ।
ಸುವೃತ್ತತ್ವಂ ತಥಾ ಶ್ರೋಣ್ಯೋಃ ಪೀನತ್ವಂ ಚ ಸಮಸ್ತಶಃ ॥೧೪॥

ವಿಸ್ತಾರಶ್ಚ ತಥಾ ಕಟ್ಯಾಃ ಸುಪ್ರತಿಷ್ಠಿತತಾ ಪದೋಃ ।
ಕಟ್ಯಾಶ್ಚೈವಾಂಗುಲಾಧಿಕ್ಯಂ ನಾಭೇರಧ ಉದಾಹೃತಂ ॥೧೫॥

ನಾಭಿಃ ಸಾರ್ಧಾಂಗುಲಶ್ಚೈವ ಗಂಭೀರೋಽರ್ಧಾಂಗುಲೋನ್ನತಃ ।
ವೃತ್ತಃ ಪ್ರದಕ್ಷಿಣಶ್ಚೈವ ದ್ವಿಚತ್ವಾರಿಂಶದಂಗುಲಂ ॥೧೬॥

ಮಧ್ಯಂ ಸ್ತನೇ ಪರೀಣಾಹಃ ಷಡಂಗುಲಮತೋಽಧಿಕಃ ।
ಏಕೋನವಿಂಶಾಂಗುಲಂ ತದುರೋ ವಿಸ್ತಾರಲಕ್ಷಣಂ ॥೧೭॥

ಪಾದೋನಮಂಗುಲಂ ಚೈವ ಭುಜಾಭ್ಯಾಂ ಸಹ ಸಾರ್ಧಕಂ ।
ಅಸಂಯೋರ್ವಿಸ್ತೃತಿಶ್ಚೈವ ಪೃಥಗಷ್ಟಾಂಗುಲಾ ಮತಾ ॥೧೮॥

ಸಪ್ತಾಂಗುಲೋಚ್ಛ್ರಯಃ ಕಕ್ಷಾದುಪರಿ ಸ್ಕಂಧಯೋರ್ಮತಃ ।
ಅಷ್ಟತ್ರಿಂಶಾಂಗುಲಂ ಚೈವ ಹಸ್ತಯೋರ್ಮಾನಮುಚ್ಯತೇ ॥೧೯॥

ಅಷ್ಟಾದಶಾಂಗುಲೋ ಬಾಹ್ವೋಃ ಪರಿಣಾಹ ಉದಾಹೃತಃ ।
ಕ್ರಮಾದೂನಂ ತದಂತೇ ತು ಸಾರ್ಧಾಷ್ಟಾಂಗುಲಮೀರಿತಂ ॥೨೦॥

ಸಾಂಗುಲಸ್ತು ತಲಃ ಸಾರ್ಧನವಾಂಗುಲ ಉದಾಹೃತಃ ।
ಸಮಂ ತದುಭಯಂ ಜ್ಞೇಯಂ ತಥೈವ ತಲವಿಸ್ತೃತಿಃ ॥೨೧॥

ಅರ್ಧಾಂಗುಲೋನ್ನತಾ ಮಧ್ಯಾ ದ್ವಯೋಃ ಸಾರ್ಧಾಂಗುಲೋನ್ನತಾ ।
ಕನಿಷ್ಠಿಕಾಯಾಸ್ತಸ್ಯಾಸ್ತು ವ್ರೀಹಿಮಾನಾಧಿಕಃ ಪರಃ ॥೨೨॥

ಸಾರ್ಧತ್ರಯ ಪರೀಣಾಹೌ ಮಧ್ಯಜೇಷ್ಠಾವುದಾಹೃತೌ ।
ಅನ್ಯೌ ವ್ರೀಹಿತದರ್ಧೋನಾವನ್ಯಾ ಸಾರ್ಧದ್ವಯಾಂಗುಲಾ ॥೨೩॥

ಪಾದೋನಾಂತಪರೀಣಾಹಾಃ ಸರ್ವಾ ಜ್ಯೇಷ್ಠಾಂ ವಿನಾ ಸ್ಮೃತಾಃ ।
ವಕ್ಷೋ ವಿಸ್ತಾರಸದೃಶಃ ಪರಿಣಾಹೋ ಗಲಸ್ಯ ಚ ॥೨೪॥

ಲಲಾಟಕುಕ್ಷಿಕಂಠಾಸ್ತು ದೀರ್ಘರೇಖಾತ್ರಯಾನ್ವಿತಾಃ ।
ವೃತ್ತೋ ಗಲೋ ಬಾಹವಶ್ಚ ಸ್ತನಾವಂಗುಲಯಸ್ತಥಾ ॥೨೫॥

ರಕ್ತಾಸ್ತಲನಖಾಶ್ಚೈವ ನೇತ್ರಾಂತೋಽಧರ ಏವಚ ।
ಉತ್ತರೋಷ್ಠಶ್ಚ ಜಿಹ್ವಾ ಚ ನಖೌ ಪಾದೋನಕಾಂಗುಲೌ ॥೨೬॥

ಅರ್ಧಾಂಗುಲೌ ತಥಾ ಮಧ್ಯಾವನ್ಯೇಽಷ್ಟಾಂಶಕ್ರಮೋನಕಾಃ ॥
ನಾಸಿಕಾಯಾ ಅಧಸ್ತಾತ್ತು ನಾಸಿಕಾ ಚ ರರಾಟಿಕಾ ॥೨೭॥

ಸಮಾ ಮಾನೇನ ನಾಸಾಯಃ ಉಚ್ಚತ್ವೇನೈವ ಮಾಪನೇ ।
ಅರ್ಧಾಂಗುಲಾಧಿಕಂ ಸರ್ವಮುಖಸ್ಯತು ಭವಿಷ್ಯತಿ ॥೨೮॥

ಚತುರಂಗುಲಂ ತಥೈವಾಽಸ್ಯಂ ಸಾರ್ಧವ್ರೀಹ್ಯಧರಂ ಸ್ಮೃತಂ ।
ಉತ್ತರಂ ವ್ರೀಹಿಮಾತ್ರಂ ತು ತದೂರ್ಧ್ವಂ ಚಾಧರೋಪಮಂ ॥೨೯॥

ಸಾರ್ಧಾಂಗುಲಮಧಃ ಪ್ರೋಕ್ತಮಧರಾದಧ ಏವಚ ।
ಆಸ್ಯಪಾರ್ಶ್ವದ್ವಯಂ ಪ್ರೋಕ್ತಮಾಕರ್ಣಾತ್ತು ಷಡಂಗುಲಂ ॥೩೦॥

ಸಪ್ತಾಂಗುಲಂ ನಾಸಿಕಾಯಾಃ ಪಾರ್ಶ್ವಮಾ ಕರ್ಣತಃ ಸ್ಮೃತಂ ।
ಸಪಾದಾಂಗುಲಮುಚ್ಚಾ ಚ ನಾಸಿಕಾ ಪರಿಕೀರ್ತಿತಾ ॥೩೧॥

ಅರ್ಧಾಂಗುಲೇ ಪುಟೇ ತಸ್ಯಾ ಮಧ್ಯಂ ಚ ಸಮುದಾಹೃತಂ ।
ನಾಸಿಕಾ ವ್ರೀಹಿವಿಸ್ತಾರಾ ಚಕ್ಷುಷೀ ಚಾಂಗುಲತ್ರಯೇ ॥೩೨॥

ಅಂಗುಲಂ ಚೈವ ವಿಸ್ತೀರ್ಣೇ ಫುಲ್ಲೇಽರ್ಧಂ ಚ ತದನ್ಯಥಾ ।
ಚತುರಂಗುಲೌ ಭ್ರುವೌ ಚೈವ ತಥಾಽರ್ಧಾಂಗುಲ ವಿಸ್ತೃತೌ ॥೩೩॥

ಅಸಂಹತೌ ಚ ನಿಬಿಡೌ ತಥಾ ಪಕ್ಷ್ಮ ಸುನೀಲಕಂ ।
ಕರ್ಣೌಚ ತ್ರ್ಯಂಗುಲೌ ಸಾರ್ಧದ್ವಯವಿಸ್ತಾರಸಂಯುತೌ ॥೩೪॥

ಸಕುಂಡಲಂ ತಾವದೇವ ವಿವರಂ ಸಂಪ್ರಕೀರ್ತಿತಂ ।
ತಥಾ ದ್ವ್ಯಂಗುಲವಿಸ್ತಾರೋ ಲತಾಭ್ಯಾಂ ಸಹ ಕಥ್ಯತೇ ॥೩೫॥

ಕರ್ಣಪೂರಯುತೌ ಕರ್ಣಾವುತ್ಪಲಾಭ್ಯಾಂ ಚ ಸಂ ಯುತೌ ।
ನೀಲಾಲಕಸಹಸ್ರೇಣ ಯುಕ್ತಂ ತನ್ಮುಖಪಂಕಜಂ ॥೩೬॥

ಲಲಾಟಂ ಸುವಿಶಾಲಂ ಚ ತಥಾ ಸಾರ್ಧನವಾಂಗುಲಂ ।
ವಿಸ್ತಾರೋ ಮೂರ್ಧ್ನಿ ವೃತ್ತಂ ಚ ಶಿರಃ ಛತ್ರಾಕೃತಿ ಸ್ಮೃತಂ ॥೩೭॥

ದೀರ್ಘಾಶ್ಚ ಕುಂಚಿತಾಗ್ರಾಶ್ಚ ನೀಲಾಃಕೇಶಾಃ ಹರೇರ್ಮತಾಃ ॥
ಮುಖಮಾನೇನ ಚೈವೋಚ್ಚಂ ಕಿರೀಟಂ ಕೇಶವಸ್ಯ ಹಿ ॥೩೮॥

ಕುಂಡಲೇ ಮಕರಾಕಾರೇ ವಕ್ಷಶ್ಚೈವ ಸಕೌಸ್ತುಭಂ ।
ಸಶ್ರೀವತ್ಸಂ ದಕ್ಷಿಣತಃ ಪೀನಂ ತುಂಗಮುದಾಹೃತಂ ॥೩೯॥

ಹಾರಗ್ರೈವೇಯಸಹಿತಮುಪವೀತಯುತಂ ತಥಾ ।
ಬಾಹವಶ್ಚ ಸಕೇಯೂರಕಂಕಣಾಂಗದಮುದ್ರಿತಾಃ ॥೪೦॥

ಸಮುಧ್ಯಬಂಧಂ ಮಧ್ಯಂ ಚ ನಿತಂಬೇ ಪೀತಮಂಬರಂ ।
ಕಾಂಚೀಗುಣಶ್ಚ ಪದಯೋರ್ನೂಪುರೇ ಚಾತಿಸುಸ್ವರೇ ॥೪೧॥

ಅಂಗುಲೀಯಾನಿಚ ಪದೋಃ ಕೃತಿಭಿಃ ಸಾಧು ಕಾರಯೇತ್ ।
ಸೋತ್ತರೀಯಂ ಚ ಚಕ್ರಾದ್ಯೈರಾಯುಧೈಶ್ಚ ಸಮನ್ವಿತಂ ॥೪೨॥

ಅನುನ್ನತೈರವಿರಲೈರ್ದಂತೈರ್ಯುಕ್ತಂ ಚ ಸುಸ್ಮಿತಂ ।
ಸಮದೃಷ್ಟಿಯುತಂ ಕಾರ್ಯಂ ಶ್ಲಕ್ಷ್ಣ ಚೈವ ಮನೋಹರಂ ॥೪೩॥

ಅ ॥ ("ಊರ್ಧ್ವದೃಷ್ಟಿಮಧೋದೃಷ್ಟಿಂ ತಿರ್ಯಗ್ದೃಷ್ಟಿಂ ವಿವರ್ಜಯೇತ್" ಇತ್ಯಾದಿ ಪ್ರಮಾಣಗಳಿಂದ ಲಕ್ಷಣವಿಲ್ಲದ ಪ್ರತಿಮೆಯನ್ನು ಪೂಜಿಸಬಾರದೆಂದು ಹೇಳಿದ ಕಾರಣ ಸಲಕ್ಷಣವಾದ ಪ್ರತಿಮೆಯನ್ನೇ ಪೂಜಿಸಬೇಕಾದುದರಿಂದ ಪ್ರತಿಮಾಲಕ್ಷಣವನ್ನು ಹೇಳುತ್ತಾರೆ.) ಶ್ರೀ ವಿಷ್ಣುಪ್ರತಿಮೆಯನ್ನು ಪ್ರತಿಷ್ಠೆಮಾಡಿಸಿ ಪೂಜೆಯನ್ನು ಮಾಡಿಸುವ ಅಥವಾ ಮಾಡುವ ಜ್ಞಾನಿಯು ಸುವರ್ಣ, ರಜತ, ತಾಮ್ರ, ಶಿಲೆ, ಮರ, ಮಣ್ಣು ಇವುಗಳಿಂದ ಪ್ರಾಶಸ್ತ್ಯ ಕ್ರಮವನ್ನು ಅನುಸರಿಸಿ (ಮೊದಲು ಮೊದಲು ಹೇಳಿದ್ದು ಸಿಗದಿದ್ದರೆ ಉತ್ತರೋತ್ತರದಲ್ಲಿ ಹೇಳಿದ ದ್ರವ್ಯಗಳಿಂದ) ಲಕ್ಷಣವತ್ತಾದ ಪ್ರತಿಮೆಯನ್ನು ಶಿಲ್ಪಿಗಳಿಂದ ಮಾಡಿಸಬೇಕು. ಪ್ರತಿಮಾಲಕ್ಷಣ ಜ್ಞಾನವಿದ್ದು ನಿರ್ಮಿಸುವ ಪ್ರಕಾರವನ್ನು ತಿಳಿದವನಾದರೆ ತಾನೇ ಮಾಡಬಹುದು ॥೧॥ ಯೋಗಾಭ್ಯಾಸಾವಸ್ಥೆಯನ್ನು ತೋರಿಸುತ್ತಾ ಕುಳಿತಿರುವ ಲಕ್ಷ್ಮೀನಾರಾಯಣ ನರಸಿಂಹಾದಿಪ್ರತಿಮೆ, ಅಥವಾ ನಿಂತಿರುವ ರಾಮಕೃಷ್ಣಾದಿ ಪ್ರತಿಮೆ, ಮೋಕ್ಷೇಚ್ಛುಗಳಿಗಾಗಿ ಶೇಷಶಾಯಿಯಾದ ರಂಗನಾಥ ಅನಂತಶಯನಾದಿಪ್ರತಿಮೆ, ಜ್ಞಾನ ಮುದ್ರೆಯಿಂದ ತನ್ನ ಸ್ವರೂಪವನ್ನು ಮೋಕ್ಷ ಸಾಧನ ಜ್ಞಾನಕ್ಕಾಗಿ ಉಪದೇಶಿಸುವ ವೇದವ್ಯಾಸ ಹಯಗ್ರೀವ ಮೊದಲಾದ ಪ್ರತಿಮೆ ಇಂತಹ ಪ್ರತಿಮೆಗಳನ್ನು ಮಾಡಿಸಬೇಕು. ಪ್ರತಿಮೆಯು ಒಟ್ಟಿಗೆ ೯೬ ಅಂಗುಲ (೪ ಮೊಳ) ದೀರ್ಘವಾಗಿರಬೇಕು. ॥೨॥ (ಪ್ರತಿಮೆಗೆ ೯೬ ಅಂಗುಲವು ಹೇಗೆಂದರೆ) ಗಡ್ಡವನ್ನಾರಂಭಿಸಿ ಲಲಾಟ ಪರ್ಯಂತ ಪ್ರದೇಶವು ಮುಖವೆನಿಸುತ್ತದೆ. ಮುಖದಿಂದ ಮೇಲಿನ ಶೀರ್ಷವು ೨ ಅಂಗುಲ ಉದ್ದ, ಶೀರ್ಷದಿಂದ ಕೆಳಗೆ ೯ ಅಂಗುಲ ಉದ್ದವಿರುವ ಸುಂದರವಾದ ಮುಖವೂ' ಅತಿ ಉರುಟಾದ ೩ ಅಂಗುಲ ಉದ್ದವಿರುವ ಕುತ್ತಿಗೆಯೂ, ಕುತ್ತಿಗೆಯಿಂದ ಸ್ತನಪರ್ಯಂತ ೬ ಅಂಗುಲ ಉದ್ದ (॥೩॥) ಎದೆಯಿಂದ ಹೊಕ್ಕಳವರೇಗೆ ೧೫ ಅಂಗುಲವೂ, ಹೊಕ್ಕಳಿನಿಂದ ವೃಷಣಪರ್ಯಂತ ೧೦ ಅಂಗುಲವೂ, ವೃಷಣದ ಮೂಲಪ್ರದೇಶವು ೨॥ ಅಂಗುಲವೂ (॥೪॥) ವೃಷಣದ ಮೂಲಪ್ರದೇಶದಿಂದ ಅಪಾನವಾಯುದ್ವಾರ ಪರ್ಯಂತ ೨॥ ಅಂಗುಲವೂ, ಗುದದಿಂದ ಮೊಣಕಾಲಿನ ಪರ್ಯಂತ ೧೮ ಅಂಗುಲವೂ, ೨ ಅಂಗುಲ ಉದ್ದ ಮೊಣಗಂಟು, ಮೊಣಗಂಟಿನಿಂದ ಕೆಳಗೆ ೨೨ ಅಂಗುಲ ಉದ್ದವಿರುವ ಮೊಣಕಾಲಿನಿಂದ ಕೂಡಿದ್ದೂ (॥೫॥) ಮೊಣಗಂಟಿನ ಕೆಳಭಾಗವಾದ ಪಾದಗಳ ಎರಡು ಪಾರ್ಶ್ವಗಳಲ್ಲಿರತಕ್ಕ ಗೋಲಾಕಾರಗಳಾದ ಎರಡು ಗ್ರಂಥಿಗಳಿಗೆ ಗುಲ್ಫ ಎಂದು ಹೆಸರು. ಆ ಗುಲ್ಫದಿಂದ ಕೆಳಪಾದತಲ ಪರ್ಯಂತ ೪॥ ಅಂಗುಲ ಉದ್ದ, ಗುಲ್ಫ ಸಹಿತವಾದ ಆದಿಭಾಗದಲ್ಲಿ ಕಾಲಿನ ಬುಡದಿಂದ ಗುಲ್ಫದ ತುದಿಯವರೆಗೆ ೬ ಅಂಗುಲ ಉನ್ನತ ಪಾದಾಗ್ರವಿರಬೇಕು, ಕಾಲಿನ ಮಧ್ಯಭಾಗದಲ್ಲಿ ೩॥ ಅಂಗುಲ, ಕಾಲಿನ ತುದಿಭಾಗದಲ್ಲಿ ೨ ಅಂಗುಲ ಎತ್ತರವಿರಬೇಕು॥ (॥೬1/2॥) ಪ್ರತಿಮೆಯಲ್ಲಿ ಪಾದದ ಹೆಬ್ಬೆರಳು, ತೋರುಬೆರಳು ೩ ಅಂಗುಲ ಉದ್ದ, ನಡುಬೆರಳು ೨॥ ಉದ್ದ, ಅನಾಮಿಕಾ ಬೆರಳು ೨। ಅಂಗುಲ ಉದ್ದ, ಕಿರಿಬೆರಳು ೧। ಅಂಗುಲ ಉದ್ದವಿರಬೇಕು. (॥೭1/2॥) ಅಂಗುಷ್ಠದ ಉಗುರು ॥। ಅಂಗುಲ ಉದ್ದ, ತರ್ಜನೀ ಬೆರಳಿನ ಉಗುರು 3/8 ಅಂಗುಲ ಉದ್ದ. ನಡುಬೆರಳು, ಅನಾಮಿಕಾ ಬೆರಳು, ಕಿರಿಬೆರಳು ಇವುಗಳ ಉಗುರುಗಳು ಕ್ರಮವಾಗಿ ಪೂರ್ವ ಪೂರ್ವಕ್ಕಿಂತ ಕಾಲು ಕಾಲು ಅಂಶಗಳಿಗಿಂತ ಕಡಿಮೆ ಕಡಿಮೆ ಉದ್ದವಿರಬೇಕು. ಪಾದಗಳ ಉಗುರುಗಳು ಕೆಂಪಾಗಿಯೂ ಪುಷ್ಟ ಅವಯವಾದಿಗಳುಳ್ಳವುಗಳಾದುದರಿಂದ ಮನೋಹರವಾಗಿಯೂ ಇರಬೇಕು. ಪಾದಾಗ್ರದ ವಿಸ್ತಾರವು ೬ ಅಂಗುಲವಿರಬೇಕು. ॥೬॥ ಹೆಬ್ಬೆರಳಿನ ಸುತ್ತಳತೆಯ ಸ್ಥೌಲ್ಯವು ೪ ಅಂಗಲ,ತರ್ಜನಿಯ ಸ್ಥೌಲ್ಯವು ೩ ಅಂಗುಲ, ಉಳಿದ ೩ ಅಂಗುಲಿಗಳು ಕ್ರಮವಾಗಿ ಅರ್ಧವ್ರೀಹಿಯಿಂದ ಕಡಿಮೆ ಕಡಿಮೆ ಸ್ಥೌಲ್ಯ ಪರಿಮಾಣಉಳ್ಳವುಗಳು. (॥೧೦॥) ಮೊಣಕಾಲಿನ ಗಂಟಿನ ಕೆಳಭಾಗದ ತುದಿಯ ಸ್ಥೌಲ್ಯವು ೧೦ ಅಂಗುಲ ಪರಿಮಾಣವುಳ್ಳದ್ದು. ಮಧ್ಯಪ್ರದೇಶದ ಸ್ಥೌಲ್ಯವು ೧೩ ಅಂಗುಲ, ಊರ್ಧ್ವ ಭಾಗವು (ಸುತ್ತಳತೆ) ೧೭ ಅಂಗುಲ, ಮೊಣಗಂಟಿನ ಸ್ಥೌಲ್ಯವು ೧೮ ಅಂಗುಲ.

(॥೧೧॥) ತೊಡೆಯ ಕೆಳಭಾಗವು ೧೮ ಅಂಗುಲ, ಮಧ್ಯಭಾಗವು ೨೪ ಅಂಗುಲ, ಮೂಲಭಾಗದ ಸುತ್ತಳತೆ ೨೮ ಅಂಗುಲ, ಶಿಶ್ನದ ದೈರ್ಘ್ಯವು ೪॥ ಅಂಗುಲ (॥೧೨॥) ಶಿಶ್ನದ ಸ್ಥೌಲ್ಯವು. (ಸುತ್ತಳತೆ) ೩॥ ಅಂಗುಲ, ಅಂಡಕೋಶದ ದೈರ್ಘ್ಯವು ೪ ಅಂಗುಲ ಸ್ಥೌಲ್ಯವು. (ಸುತ್ತಳತೆ) ೭ ಅಂಗುಲ. ಮೊಣಗಂಟು, ತೊಡೆ, ಶಿಶ್ನ, ಅಂಡ ಇವೆಲ್ಲವೂ ಉರುಟಾಗಿರಬೇಕು. (॥೧೩॥) ಕಟಿಯ ಸುತ್ತಳತೆ, ೩೮ ಅಂಗುಲ. ಜಘನ (ಸೊಂಟ) ಉರುಟಾಗಿರಬೇಕು. ಮೊಣಕಾಲು ಮೊದಲಾದ ಎಲ್ಲಾ ಅವಯವಗಳೂ ಪುಷ್ಟವಾಗಿರಬೇಕು. (॥೧೪॥) ಸೊಂಟವು ವಿಸ್ತೃತವಾಗಿರಬೇಕು. ಪಾದತಲಗಳು ಎಡೆಬಿಡದೆ ಪೀಠದ ಮೇಲೆ ಚೆನ್ನಾಗಿ ಕುಳಿತಿರುವಂತಹ ಪ್ರತಿಮೆಯನ್ನು ಮಾಡಿಸಬೇಕು. ಹೊಕ್ಕಳಿನ ಕೆಳಗೆ ಕೆಳಹೊಟ್ಟೆಯ ಸ್ಥೌಲ್ಯವು ಕಟಿಗಿಂತ ೧ ಅಂಗುಲ ಹೆಚ್ಚು. ಅಂದರೆ ೩೯ ಅಂಗುಲವು. (॥೧೫॥) ಹೊಕ್ಕಳಿನ ಹೊರಪ್ರದೇಶದ ದೈರ್ಘ್ಯವು ॥ ಅಂಗುಲ, ಹೊಕ್ಕಳಿನ ಆಳವು ೧॥ ಅಂಗುಲ, ನಾಭಿಯು ಉರುಟಾಗಿರಬೇಕು. ಬಲಬದಿಯಲ್ಲಿ ಸುಳಿಯಿರಬೇಕು. ನಾಭಿಸ್ತನಗಳ ಮಧ್ಯಪ್ರದೇಶದ (ಹೊಟ್ಟೆಯ ಮಧ್ಯದ) ಸುತ್ತಳತೆ ೪೨ ಅಂಗುಲ. (॥೧೬॥) ಎದೆಯ ದೈರ್ಘ್ಯವು ಮಧ್ಯಪ್ರದೇಶಕ್ಕಿಂತಲೂ ೬ ಅಂಗುಲ ಹೆಚ್ಚು. (ಅಂದರೆ ೪೮ ಅಂಗುಲ.) ವಕ್ಷಃಸ್ಥಳದ ವಿಸ್ತಾರವು ೧೯ ಅಂಗುಲ. (॥೧೭॥) ೨ ತೋಳುಗಳಿಂದ ಕೂಡಿದ ವಕ್ಷಃಸ್ಥಳದ ವಿಸ್ತಾರವು ೨೯।. ಪ್ರತಿಯೊಂದು ಭುಜಶಿರಸ್ಸಿನ ವಿಸ್ತಾರವು ೮.೮. ಅಂಗುಲ. (॥೧೮॥) ಕಂಕುಳಗಳಿಂದ ಪ್ರತಿಯೊಂದು ಭುಜ ಶಿರಸ್ಸಿನವರೇಗೆ ೭.೭. ಅಂಗುಲ ಎತ್ತರವು-೨. ಹಸ್ತಗಳ ಉದ್ದವು ೩೮ ಅಂಗುಲ. (॥೧೯॥) ಭುಜಗಳ ಊರ್ಧ್ವಭಾಗದ (ಬುಡದ) ಸುತ್ತಳತೆಯು ೧೮ ಅಂಗುಲ. ಕ್ರಮವಾಗಿ ಕಡಿಮೆಯಾಗುತ್ತಾ ಪ್ರಪ್ರತ್ಯೇಕ ೨ ಬಾಹುಗಳು ಕೊನೆಗೆ (ಕೈ ಆಭರಣ ಇಡುವ ಪ್ರದೇಶದಲ್ಲಿ)೮॥ ಅಂಗುಲ ಸ್ಥೌಲ್ಯವು (॥೨೦॥) ಬೆರಳುಗಳಿಂದ ಕೂಡಿದ ಹಸ್ತತಲವು ೯॥ ಅಂಗುಲ ದೀರ್ಘವು. ನಡುಬೆರಳೂ ಹಸ್ತ ತಲವೂ ಎರಡೂ ಸಮವಾಗಿರಬೇಕು. (ಅಂದರೆ ಪ್ರಪ್ರತ್ಯೇಕ೪॥ ಅಂಗುಲ ದೀರ್ಘವಾಗಿರಬೇಕು.) ಅಂಗೈಯ ಅಗಲವೂ ದೈರ್ಘ್ಯದಂತೆಯೇ ೪॥ ಅಂಗುಲ. (॥೨೧॥) ನಡುಬೆರಳು, ತರ್ಜನೀ ಅನಾಮಿಕೆಗಳಿಗಿಂತ ಅರ್ಧ ಅಂಗುಲ ಹೆಚ್ಚು ದೀರ್ಘ. (ಅಂದರೆ ೪॥। ಅಂಗುಲ ದೀರ್ಘವು.) ಕಿರಿಬೆರಳುಗಳಿಗಿಂತ ನಡುಬೆರಳು ೧॥ ಅಂಗುಲ ದೀರ್ಘ. ಅಂಗುಷ್ಠವು ಕಿರಿಬೆರಳುಗಿಂತ ವ್ರೀಹಿಪರಿಮಾಣದಷ್ಟು ದೀರ್ಘವು. (ಅಂದರೆ ತರ್ಜನೀ ಅನಾಮಿಕೆಗಳು ೪। ಅಂಗುಲ ದೀರ್ಘ. ಕಿರಿಬೆರಳು ೩। ಅಂಗುಲ ದೀರ್ಘ.) (॥೨೨॥) ನಡುಬೆರಳು ಹೆಬ್ಬೆಟ್ಟುಗಳು ೩॥ ಅಂಗುಲ ಸ್ಥೂಲ. ತರ್ಜನೀ ಮನಾಮಿಕೆಗಳ ಸುತ್ತಳತೆ ೩ ಅಂಗುಲ. ಕಿರಿಬೆರಳು ೨॥ ಅಂಗುಲ ಸುತ್ತಳತೆಯುಳ್ಳದ್ದು. (॥೨೩॥) ಅಂಗುಷ್ಠ ವಿನಹ ಬೇರೆ ಬೆರಳುಗಳ (ಅಂದರೆ ತೋರಬೆರಳು, ನಡು ಬೆರಳು, ಉಂಗುರಬೆರಳುಗಳ) ಆದಿಭಾಗದಲ್ಲಿ ೩॥ ಅಂಗುಲ ಸುತ್ತಳತೆ. ಅಂತ್ಯಭಾಗದಲ್ಲಿ ೩। ಅಂಗುಲ ಕನಿಷ್ಠಕೆಯ ಆದಿಭಾಗದಲ್ಲಿ ೨॥ ಅಂಗುಲ, ಅಂತ್ಯಭಾಗದಲ್ಲಿ ೨। ಅಂಗುಲ. ಅಂಗುಷ್ಠಕ್ಕೆ ಆದಿಭಾಗದಲ್ಲಿಯೂ ಅಂತ್ಯಭಾಗದಲ್ಲಿಯೂ ಒಂದೇ ರೀತಿಯು. ಕುತ್ತಿಗೆಯ ಸುತ್ತಳತೆಯು ಎದೆಯ ವಿಸ್ತಾರಕ್ಕೆ ಸದೃಶವು. (ಅಂದರೆ ೧೯॥ ಅಂಗುಲ ಸುತ್ತಳತೆಯು) ॥೨೪॥ ಹಣೆ ಹೊಟ್ಟೆ, ಕುತ್ತಿಗೆಗಳು ದೀರ್ಘಗಳಾದ ೩ ರೇಖೆಗಳಿಂದೊಡಗೂಡಿರಬೇಕು. ಕುತ್ತಿಗೆ ಬಾಹು ಸ್ತನ ಬೆರಳುಗಳು ಉಂಟಾಗಿರಬೇಕು. (॥೨೫॥) ಅಂಗೈಗಳು, ಉಗುರುಗಳು, ಕಣ್ಣಿನ ಪ್ರಾಂತಭಾಗ, ಕೆಳತುಟಿ, ಮೇಲ್ತುಟಿ, ನಾಲಿಗೆ, ಇವು ಕೆಂಪಾಗಿರಬೇಕು. ಅಂಗೈಗಳ ಹೆಬ್ಬೆರಳುಗಳ ಉಗುರುಗಳು ॥। ಅಂಗುಲ ಉದ್ದ. (॥೨೬॥) ನಡು ಬೆರಳುಗಳ ಉಗುರುಗಳು ॥ ಅಂಗುಲ ಉದ್ದ, ಅವುಗಳಿಂದ ತೋರುಬೆರಳುಗಳ ಉಗುರುಗಳೂ, ಅವುಗಳಿಂದ ಉಂಗುರ ಬೆರಳುಗಳ ಉಗುರುಗಳೂ ಅವುಗಳಿಗಿಂತ ಕಿರಿಬೆರಳುಗಳ ಉಗುರುಗಳೂ, ೮,೮ ಅಂಶ ಗಿಡ್ಡ. ಮೂಗಿನ ಕೆಳಭಾಗವು, (ಮೂಗಿನ ತುದಿಯಿಂದ ಗಲ್ಲದ ವರೇಗಿನ ಪ್ರದೇಶ) ಮೂಗು, ಹಣೆ, ಇವು ಮೂರೂ ಸಮಪರಿಮಾಣವುಳ್ಳವುಗಳು. (ಅಂದರೆ ೩-೩ ಅಂಗುಲ ಉದ್ದ) ಮೂಗಿನ ಎತ್ತರವನ್ನು ಅಳತೆಯಲ್ಲಿ ಸೇರಿಸಿಕೊಂಡರೆ ಗಲ್ಲವನ್ನಾರಂಭಿಸಿ ಕೇಶಪರ್ಯಂತ ಒಟ್ಟು ಮುಖವು ೯॥ ಅಂಗುಲ ಉದ್ದ ॥೨೭-೨೮॥ ಬಾಯಿಯು ಅಡ್ಡವಾಗಿ ೪ ಅಂಗುಲ ಉದ್ದ ಕೆಳತುಟಿಯು ೧॥ ವ್ರೀಹಿ ಪರಿಮಾಣವು. (ಅಂದರೆ ॥ ಅಂಗುಲ ಎತ್ತರ) ಮೇಲ್ತುಟಿಯು ೧ ವ್ರೀಹಿ ಪರಿಮಾಣವು. ಮೇಲ್ತುಟಿಯಿಂದ ಮೂಗಿನವರಗಿನ ಮೇಲುಭಾಗವು ಕೆಳತುಟಿಗೆ ಸದೃಶವು. (॥ಅಂಗುಲ ಪರಿಮಿತವು) (॥೨೯॥) ಕೆಳತುಟಿಯಿಂದ ಗಲ್ಲದ ವರೆಗಿನ ಕೆಳಭಾಗವು ೧॥ ಅಂಗುಲ ಪರಿಮಿತವು. ೨ ಕಿವಿಗಳನ್ನಾರಂಭಿಸಿ ಬಾಯಿಯ ೨ ಬದಿಗಳೂ ೬೬ ಅಂಗುಲ ಉದ್ದ. (॥೩೦॥) ೨ ಕಿವಿಗಳನ್ನಾರಂಭಿಸಿ ಮೂಗಿನ ೨ ಬದಿಗಳೂ ೭೭ ಅಂಗುಲ ಉದ್ದ. ಮೂಗು ೧। ಅಂಗುಲ ಎತ್ತರ (॥೩೧॥) ೨ ಕಿವಿಗಳನ್ನಾರಂಭಿಸಿ ಮೂಗಿನ ೨ ಬದಿಗಳೂ ೭೭ ಅಂಗುಲ ಉದ್ದ. ಮೂಗು ೧। ಅಂಗುಲ ಎತ್ತರ (॥೩೧॥) ೨ ಕಿವಿಗಳನ್ನಾರಂಭಿಸಿ ಮೂಗಿನ ೨ ಬದಿಗಳೂ ೭ ೭ ಅಂಗುಲ ಉದ್ದ. ಮೂಗು ೧। ಅಂಗುಲ ಎತ್ತರ (॥೩೧॥ ಮೂಗಿನ

ಸೊಳ್ಳೆಗಳೂ, ಸೊಳ್ಳೆಗಳ ಮಧ್ಯಪ್ರದೇಶವೂ ॥ ಅಂಗುಲ ಎತ್ತರ ಮೂಗು ಅಗ್ರಭಾಗದಲ್ಲಿ ೧ ವ್ರೀಹಿಯಷ್ಟು ವಿಸ್ತಾರವು. ಕಣ್ಣುಗಳು ೩ ಅಂಗುಲ ಉದ್ದ. (॥೩೨॥) ಅರಳಿದ ಕಣ್ಣುಗಳು ೧ ಅಂಗುಲ ವಿಸ್ತಾರ, ಅರಳದಿದ್ದ ಕಣ್ಣುಗಳು ॥ ಅಂಗುಲ. ಹುಬ್ಬುಗಳು ೪ ಅಂಗುಲ ಉದ್ದ, ॥ ಅಂಗುಲ ಅಗಲ. (॥೩೩॥) ಹುಬ್ಬಿನ ರೋಮಗಳು ಒಂದಕ್ಕೊಂದು ಮುಟ್ಟದಿದ್ದರೂ ನಿಬಿಡಗಳಾಗಿರಬೇಕು. ಕಣ್ಣಿನ ರೆಪ್ಪೆಯು ಅತಿ ಕಪ್ಪಾಗಿರಬೇಕು. ಕಿವಿಗಳು ೩ ಅಂಗುಲ ಉದ್ದ. ೨॥ ಅಂಗುಲ ವಿಸ್ತಾರ (॥೩೪॥) ಕುಂಡಲಾಕಾರ ಪ್ರದೇಶ ವಿಶೇಷದಿಂದ ಕೂಡಿದ ಕರ್ಣರಂಧ್ರವು ೨॥ ಅಂಗುಲ ಉದ್ದ. ಕಿವಿಯ ಬಳ್ಳಿ ಸಮೇತ ಕಿವಿಯ ಒಳಭಾಗವು ೨ ಅಂಗುಲ ಅಗಲ. (॥೩೫॥) ಕಿವಿಗಳು ಕರ್ಣಾಭರಣ, ನೀಲಕಮಲಗಳಿಂದ ಕೂಡಿರಬೇಕು. ಪ್ರತಿಮೆಯ ಮುಖಕಮಲವು ಸಾವಿರಾರು ನೀಲ ಮುಂಗುರುಳುಗಳಿರುವ ಕೂದಲುಗಳಿಂದ ಕೂಡಿರಬೇಕು. (॥೩೬॥) ಹಣೆಯು ೯ ಅಂಗುಲ ವಿಸ್ತೀರ್ಣವಿರಬೇಕು. ಪ್ರತಿಮೆಯ ಶಿರಸ್ಸು ಬಲ ಎಡಭಾಗಗಳಲ್ಲಿ ೯॥ ಅಂಗುಲ. ಶಿರಸ್ಸು ಛತ್ರಾಕಾರವಾಗಿ ಉರುಟಾಗಿರಬೇಕು. ಮಧ್ಯಭಾಗವು ಎತ್ತರವಾಗಿರಬೇಕು. (॥೩೭॥) ಶ್ರೀಹರಿಯ ಕೂದಲುಗಳು ದೀರ್ಘಗಳಾಗಿಯೂ ಕಪ್ಪಾಗಿಯೂ ತುದಿಯಲ್ಲಿ ಉಂಗುರದಂತೆ ಗುಂಗುರಗಳಾಗಿಯೂ ಇರಬೇಕು. ಕಿರೀಟವು ಮುಖದ ಪರಿಮಾಣದಂತೆ ೯ ಅಂಗುಲ ಎತ್ತರವಿರಬೇಕು. (॥೩೮॥) ಕರ್ಣ ಕುಂಡಲಗಳು ಮೊಸಳೆಯ ಆಕಾರವುಳ್ಳವುಗಳಾಗಿರಬೇಕು. ವಕ್ಷಃ ಸ್ಥಳದಲ್ಲಿ ಕೌಸ್ತುಭಮಣಿ ಬಲಸ್ತನದ ಊರ್ಧ್ವ ಭಾಗದಲ್ಲಿ ಶ್ರೀವತ್ಸ ಚಿಹ್ನೆಯೂ ಇರಬೇಕು. ಅದು ಪುಷ್ಟವಾಗಿಯೂ ಎತ್ತರವಾಗಿಯೂ ಇರಬೇಕು. (॥೩೯॥) ಮುತ್ತಿನ ಸರ, ಕುತ್ತಿಗೆಯ ಆಭರಣ, ಯಜ್ಞೋಪವೀತಗಳಿಂದ ಕೂಡಿರಬೇಕು. (ತೋಳುಸರಿಗೆ, ಬಳೆ, ಮುರುಗಿ, ಬಾಹುಮೂಲಾಭರಣ, ಮುದ್ರಾಂಗುರ ಇವುಗಳು ಬಾಹುಗಳಲ್ಲಿರಬೇಕು.(॥೪೦॥) ಉದರ ಮಧ್ಯದಲ್ಲಿ ನಡಕಟ್ಟಾಭರಣವೂ, ಸೊಂಟದಲ್ಲಿ ಪೀತಾಂಬರವೂ ಅದರ ಮೇಲೆ ಒಡ್ಯಾಣವೂ, ಪಾದಗಳಲ್ಲಿ ಧ್ವನಿಗೈಯುವ ಸರಪಳಿಗಳೂ (॥೪೧॥) ಪಾದಗಳ ಬೆರಳುಗಳಲ್ಲಿ ಉಂಗುರಗಳೂ, ಇವುಗಳನ್ನೆಲ್ಲಾ ಒಳ್ಳೇ ಶಿಲ್ಪಿಗಳಿಂದ ಚೆನ್ನಾಗಿ ಮಾಡಿಸಬೇಕು. ಪ್ರತಿಮೆಯು ಉತ್ತರೀಯ ವಸ್ತ್ರ, ಚಕ್ರ, ಶಂಖ, ಗದಾ, ಪದ್ಮಗಳೆಂಬ ಆಯುಧಗಳಿಂದ ಕೂಡಿರಬೇಕು. (॥೪೨॥) ಪ್ರತಿಮೆಯು ದೀರ್ಘಗಳಾದ ಪರಸ್ಪರ ಕೂಡಿರುವ ದಂತಗಳಿಂದಲೂ, ಮುಗುಳು ನಗೆಯಿಂದಲೂ ಕೂಡಿರಬೇಕು. ಕಣ್ಣಿನ ದೃಷ್ಟಿಯು ಸರಿಯಾಗಿರಬೇಕು. ಅತಿನಯವಾಗಿಯೂ ಮನೋಹರವಾಗಿಯೂ ಇರಬೇಕು. (॥೪೩॥) ॥೧-೪೩॥

ಅವ ॥ ಪ್ರತಿಮಾಲಕ್ಷಣವನ್ನು ಹೇಳಿ ಆ ಶಿಲಾದಿ ಪ್ರತಿಮೆಗಳನ್ನು ನಿರ್ಮಾಣ ಮಾಡತಕ್ಕ ಪ್ರಕಾರವನ್ನು ಹೇಳುತ್ತಾರೆ.

ಮೂ ॥ ಪ್ರತಿಮಾರ್ಥಂ ವ್ರಜನ್ಪಂಚಧ್ವನಿಭಿರ್ಮಂಗಲೈರ್ಯುತಃ ।
ಗತ್ವಾ ಶುಚಿ ಸ್ಥಲಂ ತತ್ರ ಶಿಲಾಂ ಚೈವ ಪರೀಕ್ಷಯೇತ್॥ ॥೪೪॥

ಧ್ವನಿಭೇದೇನ ವಿಜ್ಞಾಯ ಶಿಲಾಂ ಗರ್ಭವತೀಂ ತ್ಯಜೇತ್ ।
ಮೂಲಮಂತ್ರಂ ಜಪನ್ ವಿಷ್ಣುಂ ಧ್ಯಾಯನ್ ತಿಷ್ಠೇದುಪೋಷಿತಃ॥ ॥೪೫॥

ವಾಕ್ಸ್ಮೀ ಚೇದ್ಯಜ್ಞವೃಕ್ಷಸ್ಯ ಸಾರೇಣೈವ ತು ಕಾರಯೇತ್ ।
ಬಲಿದಾನಂ ಚ ಸಂಕ್ಷೇಪವಿಧಾನೇನೈವ ಕಥ್ಯತೇ॥ ॥೪೬॥

ಅಸ್ಯ ಸಂಕ್ಷೇಪಶಾಸ್ತ್ರತ್ವಾನ್ನ ವಿಸ್ತರವಿರೋಧಿತಾ ।
ದತ್ತ್ವೋಪಹಾರಂ ಹರಯೇ ತದ್ಭೂತೇಭ್ಯೋ ಬಲಿಂ ಹರೇತ್॥ ॥೪೭॥

ಪ್ರಾಚ್ಯೇಭ್ಯೋ ವಿಷ್ಣುಭೂತೇಭ್ಯ ಇತ್ಯಾದ್ಯಖಿಲದಿಕ್ಷು ಚ।
ಆದಾಯ ವಿಷ್ಣುಭೂತೇಭ್ಯೋ ಲೋಕಪೇಭ್ಯಸ್ತಥಾ ಹರೇ:॥ ॥೪೮॥

ಅನುಜ್ಞಾಮುದ್ಧರೇದ್ವೃಕ್ಷಂ ಶಿಲಾಂ ವಾ ಪ್ರತಿಮಾಕೃತೇ ।
ಪ್ರತಿಮಾಂ ಪಿಂಡಿಕಾಂ ಪೀಠಂ ಶಿಲಾಭಿಸ್ತು ತ್ರಿಜಾತಿಭಿಃ॥ ॥೪೯॥

**ಸ್ವರಸ್ಫೂಲತ್ವಭೇದೇನ ಪುಂಸ್ತ್ರ್ಯಾದ್ಯಾ ಜಾತಿತಃ ಶಿಲಾಃ ।**
**ಪುಂಶಿಲಾ ಪ್ರತಿಮಾರ್ಥಂ ತು ಸ್ತ್ರೀಶಿಲಾ ಪೀಠಕ್ಲೃಪ್ತಯೇ** ॥೫೦॥

**ವೇದಮಂಗಲಘೋಷೇಣ ವಾದ್ಯೈಸ್ತತ್ಪ್ರತಿಮಾಂ ಹರೇತ್** ॥೫೧॥

ಅ॥ ಪ್ರತಿಮಾನಿರ್ಮಾಣಕ್ಕೆ ಯೋಗ್ಯ ಶಿಲಾದಿಗಳನ್ನು ತರಲಿಕ್ಕೆ ಹೊರಟ ಪುರುಷನು (ಸುವರ್ಣಂ, ರಜತಂ ದೂರ್ವಾಹರಿದ್ರಾ ಮಧುಸರ್ಪಿಷೀ। ಅಕ್ಷತಾಃ ಸರ್ಷಪಾಶ್ಚೈವ ಮಂಗಲಾಃ ಪರಿಕೀರ್ತಿತಾಃ । ಎಂಬ ಪ್ರಮಾಣದಲ್ಲಿ ಹೇಳಿದ) ಮಂಗಲದ್ರವ್ಯಗಳನ್ನು ಹಿಡಿದುಕೊಂಡು (1) ಕೋಲಿನಿಂದ ಹೊಡೆಯುವ ನಗಾರಿ ಮೊದಲಾದವುಗಳು, (2) ಕೈಯಿಂದ ಬಾರಿಸುವ ಮದ್ದಳೆ ಮೊದಲಾದುದು, (3) ಬೆರಳಿನ ತುದಿಯಿಂದ ಬಾರಿಸುವ ವೀಣೆ ಮೊದಲಾದುದು, (4) ತಾಳ ಮೊದಲಾದುದು, (5) ಮುಖದಿಂದ ಧ್ವನಿಗೈಯುವ ಕೊಳಲು ಮೊದಲಾದುದು. ಈ ಐದು ಮಹಾವಾದ್ಯಗಳನ್ನು ಬಾರಿಸುತ್ತಾ ಪವಿತ್ರವಾದ ಶಿಲೆಯಿರುವ ದೇಶಕ್ಕೆ ಹೋಗಿ ಅಲ್ಲಿ (ಶಿಲ್ಪಿಗಳಿಂದ) ಶಿಲೆಯನ್ನು ಪರೀಕ್ಷಿಸಬೇಕು. ॥೪೪॥ ಶಬ್ದ ವಿಶೇಷದಿಂದ ಶಿಲೆಯನ್ನು ಪರೀಕ್ಷಿಸಿ (ಗರ್ಭಾಶ್ಯಾಂತರವಸ್ಥಿತಾಃ ಎಂಬ ಪ್ರಮಾಣ ಪ್ರಕಾರ ಶಿಲಾದಿಗಳೊಳಗಿರುವ ಮಂಡೂಕ ಮೊದಲಾದ ಪದಾರ್ಥಗಳು ಗರ್ಭ ಎನಿಸುತ್ತವೆ.) ಅಂತಹ ಗರ್ಭವುಳ್ಳ ಶಿಲೆಯನ್ನು ಬಿಡಬೇಕು. ಆ ರಾತ್ರಿ ಉಪವಾಸ ಮಾಡುತ್ತಾ ಶ್ರೀ ವಿಷ್ಣುವನ್ನು ಧ್ಯಾನಿಸುತ್ತಾ ನಾರಾಯಣಾಷ್ಟಾಕ್ಷರವನ್ನು ಜಪಿಸಿಕೊಂಡು ಅಲ್ಲಿಯೇ ಆವಾಸಮಾಡಬೇಕು. ॥೪೫॥ ಮರದಿಂದ ಪ್ರತಿಮೆಯನ್ನು ಮಾಡುವುದಾದರೆ ಯಜ್ಞಕ್ಕೆ ಯೋಗ್ಯಗಳಾದ ವೃಕ್ಷಗಳ ಸಾರಭಾಗದಿಂದಲೇ ಮಾಡಿಸಬೇಕು. ॥೪೬॥ ಶಿಲೆಯನ್ನು ತೆಗೆಯುವುದಕ್ಕಿಂತ ಮೊದಲು ಸಂಕ್ಷೇಪವಾಗಿ ಬಲಿಯನ್ನು ಕೊಡುವ ವಿಧಿಯು ಹೇಳಲ್ಪಡುತ್ತದೆ. ಈ ಗ್ರಂಥವು ಸಂಕ್ಷೇಪವಾಗಿ ಸರ್ವವಿಧಿಗಳನ್ನು ಹೇಳತಕ್ಕುದಾದುದರಿಂದ ಇತರ ಗ್ರಂಥಗಳಲ್ಲಿ ಬಲಿಹರಣವಿಧಿಯು ಅತಿ ವಿಸ್ತಾರವಾಗಿದ್ದರೂ ಅವುಗಳಿಗೆ ಪರಸ್ಪರ ವಿರೋಧವಿಲ್ಲ. ಶ್ರೀ ಹರಿಗೆ ಮೂಲಮಂತ್ರದಿಂದ ನೈವೇದ್ಯವನ್ನರ್ಪಿಸಿ ಕುಮುದಾದಿ ವಿಷ್ಣುಪಾರ್ಷದವರಿಗೂ, ಪೂರ್ವಾದಿ ೮ ದಿಕ್ಕುಗಳಿಗೂ ಅಭಿಮಾನಿಗಳಾದ ವಿಷ್ಣುದೂತರಿಗೂ, ಇಂದ್ರಾದ್ಯಷ್ಟದಿಕ್ಪಾಲಕರಿಗೂ ಶಿಲಾದಿಗಳ ಸುತ್ತಮುತ್ತಲೂ, ಪೂರ್ವಾದಿ ೮ ದಿಕ್ಕುಗಳಲ್ಲಿಯೂ ಬಲಿಯನ್ನು ಕೊಟ್ಟು ಪೂಜಿಸಬೇಕು. ಆ ಮೇಲೆ ಶ್ರೀ ಹರಿ, ವಿಷ್ಣುದೂತರು, ಅಷ್ಟ ದಿಕ್ಪಾಲಕರು, ಇವರಿಂದ ಅನುಜ್ಞೆಯನ್ನು ಪಡೆದು ॥೪೭-೪೮॥ ಪ್ರತಿಮೆಯನ್ನು ನಿರ್ಮಿಸುವುದಕ್ಕಾಗಿ ವೃಕ್ಷವನ್ನಾದರೆ ಭೇದಿಸಬೇಕು. ಶಿಲೆಯನ್ನಾದರೆ ಕೀಳಬೇಕು. ಪುರುಷಶಿಲಾ, ಸ್ತ್ರೀಶಿಲಾ, ನಪುಂಸಕ ಶಿಲಾ, ಎಂಬ ೩ ಜಾತಿ ಶಿಲೆಗಳಿಂದ, ಪ್ರತಿಮಾ, ಪೀಠ, ಪಿಂಡಿಕಾಗಳನ್ನು ಮಾಡಿಸಬೇಕು ॥೪೯॥ ಸ್ವರಗಳಲ್ಲಿ ಉಚ್ಚಧ್ವನಿ, ನೀಚಧ್ವನಿ ಮೊದಲಾದ ವಿಶೇಷಗಳಿಂದ ಪುರುಷ ಶಿಲಾದಿ ಜಾತಿಗಳನ್ನು ತಿಳಿಯಬೇಕು. ಅವುಗಳಲ್ಲಿ ಪುಂಶಿಲೆಯಿಂದ ಪ್ರತಿಮೆಯನ್ನೂ, ಸ್ತ್ರೀಶಿಲೆಯಿಂದ ಪೀಠವನ್ನೂ, ನಪುಂಸಕಶಿಲೆಯಿಂದ ಪಿಂಡಿಕೆಯನ್ನೂ (ಪೀಠದ ಕೆಳಭಾಗದಲ್ಲಿಡತಕ್ಕ ಅಡಿಗಲನ್ನೂ) ನಿರ್ಮಾಣ ಮಾಡಿಸಬೇಕು. ॥೫೦॥ ಶಿಲ್ಪಿಗಳು ವಿಧಿವತ್ತಾಗಿ ಮಾಡಿದ ಶಿಲಾದಿ ಪ್ರತಿಮೆಯನ್ನು ವೇದಘೋಷ, ಶಂಖಧ್ವನಿ, ಗಾನ, ವಾದ್ಯ ಮೊದಲಾದ ವೈಭವಗಳಿಂದ ಆಲಯಕ್ಕೆ ತರಬೇಕು. ॥೫೧॥

ಅವ ॥ ದೇವಾಲಯ ನಿರ್ಮಾಣಕ್ಕೆ ಯೋಗ್ಯವಾದ ಸ್ಥಳವನ್ನು ಹೇಳುತ್ತಾರೆ.

**ಮೂ॥ ಪ್ರಾಗುದಕ್ಪ್ರವಣೇ ದೇಶೇ ಕುರ್ಯಾದ್ದೇವಾಲಯಂ ಸುಧೀಃ ।**
**ರಾಮಾವೃತೇ ದಕ್ಷಿಣತಃ ಪಶ್ಚಾದ್ಗಿರ್ಯಗ್ರ ಏವ ವಾ ।**
**ಮಧ್ಯೇ ವಾ ಗ್ರಾಮ ಪುರಯೋರ್ವಿಶಾಲೇ ಸುಶುಚೌ ತಥಾ॥** ॥೫೨॥

**ಐಶಾನೀಂ ದಿಶಾಮೇಕಾಂ ತು ವಿನೋದಕವಿವರ್ಜಿತೇ ।**
**ಜಲಾಶಯಸ್ಯ ಮಧ್ಯೇ ವಾ ಶಿಲಾವೃಕ್ಷಾದಿವರ್ಜಿತೇ॥** ॥೫೩॥

**ಶ್ಮಶಾನಾದಿಕದೇಶಾನಾಂ ವಿದೂರೇ ಸುಮನೋಹರೇ ।**
**ಕಿಷ್ಕುದ್ವಾದಶತೋಽನೂನಂ ಕುರ್ಯಾದ್ದೇವಾಲಯಸ್ಥಲಂ॥** ॥೫೪॥

ದ್ವಿಗುಣಂ ಚತುರ್ಗುಣಂ ವಾಽಪಿ ಶತಕಿಷ್ಕು ಪ್ರಮಾಣಕಂ ।
ಕೃತ್ವಾ ಭೂಶೋಧನಂ ಸಮ್ಯಕ್ ಸಾರ್ಧಪುಂಮಾನತಸ್ತ್ವಧಃ॥ ॥೫೫॥

ಕೇಶಾಂಗಾರಾಸ್ಥಿವಲ್ಮೀಕಲೋಷ್ಟಾಶ್ಮಾದಿವಿವರ್ಜಿತೇ ।
ಹರಿಂ ತತ್ರಾಪಿ ಸಂಪೂಜ್ಯ ಬಲಿಂ ದತ್ವಾ ಚ ಪೂರ್ವವತ್॥ ॥೫೬॥

ಮೃದ್ದಾರುಶೈಲೈರ್ಲೋಹೈರ್ವಾ ಕುರ್ಯಾದ್ದೇವಾಲಯಂ ದೃಢಂ ।
ದೀರ್ಘಾಸ್ತು ಕಲಮಾಸ್ತಿಸ್ರಸ್ತಿರ್ಯಗಷ್ಟಯವೋದರಾಃ॥ ॥೫೭॥

ಅಂಗುಲ್ಯಾ ಮಧ್ಯರೇಖಾಯಾಃ ಸಮಾ ಲಕ್ಷಣತಃ ಸ್ಮೃತಾಃ ।
ಸ್ವಾಂಗುಲ್ಯಾ ಮಧ್ಯರೇಖಾ ತು ಪ್ರತಿಮಾದಿಷು ಲಕ್ಷಣಂ॥ ॥೫೮॥

ಹ್ರಸ್ವ ಮಧ್ಯೋಚ್ಚಭೇದೇನ ತತ್ರನ್ಮಾನಂ ಸಮಸ್ತಶಃ ।
ಪ್ರಾದೇಶಹಸ್ತಪುರುಷಮಾನಂ ಸಾಮಾನ್ಯಲಕ್ಷಣಂ॥ ॥೫೯॥

ಅ ॥ ವರ್ಷಾಕಾಲದಲ್ಲಿ ಯಾವ ಪ್ರದೇಶಕ್ಕೆ ಬಿದ್ದ ನೀರು ಪೂರ್ವ, ಉತ್ತರ, ಈಶಾನ್ಯ ದಿಕ್ಕುಗಳಿಗೆ ಅಭಿಮುಖವಾಗಿ ಹರಿದು ಹೋಗುವುದೋ ಅಂತಹ ಪ್ರದೇಶದಲ್ಲಿ ದೇವಾಲಯವನ್ನು ಜ್ಞಾನಿಯು ಕಟ್ಟಿಸಬೇಕು. ಪುಷ್ಪಗಳಿಂದ ತುಂಬಿದ ವನಮಧ್ಯದಲ್ಲಿ, ಬೆಟ್ಟದ ಮೇಲೆ, ಬೆಟ್ಟದ ಪೂರ್ವ, ದಕ್ಷಿಣ, ಪಶ್ಚಿಮ ದಿಕ್ಕುಗಳಲ್ಲಿ, ಗ್ರಾಮ ಪಟ್ಟಣಗಳ ನಡುವೆ, ಈಶಾನ್ಯದಿಕ್ಕು ಹೊರತು ಎಲ್ಲಾ ದಿಕ್ಕುಗಳಲ್ಲಿ ಮಳೆಗಾಲದಲ್ಲಿ ನೀರು ನಿಲ್ಲದಿರುವ ಅತ್ಯಂತ ಶುದ್ಧವಾದ ಸ್ಥಳದಲ್ಲಿ, ಸರೋವರಾದಿಗಳ ಮಧ್ಯದಲ್ಲಿ ಕಲ್ಲುಮರ ಮೊದಲಾದವುಗಳ ಪೀಡೆಯಿಲ್ಲದೆ ಇರುವ ದೇಶದಲ್ಲಿ ॥೫೨-೫೩॥ ಶ್ಮಶಾನ, ಅಂತ್ಯಜಾದಿಗಳ ಮನೆ ಇತ್ಯಾದಿಗಳಿಂದ ಬಹು ದೂರವಿದ್ದು, ಮನಸ್ಸಿಗೆ ಸಂತೋಷವನ್ನು ಹುಟ್ಟಿಸುವ ಪ್ರದೇಶ ವಿಶೇಷಗಳಲ್ಲಿ ಕಿಷ್ಕು (೪೨ ಅಂಗುಲ)ಗಳ ೧೨ಕ್ಕೆ (ಅಂದರೆ ೫೦೪ ಅಂಗುಲಗಳಿಗೆ) ಕಮ್ಮಿಯಾಗದಂತೆ ದೇವಾಲಯ ಸ್ಥಳವನ್ನು ಆರಿಸಿ ಶಿಲ್ಪಿಗಳಿಂದ ದೇವಾಲಯವನ್ನು ಕಟ್ಟಿಸಬೇಕು. ॥೫೪॥ ಅಥವಾ ೨೪ ಕಿಷ್ಕು (೧೦೦೮ ಅಂಗುಲ) ೪೮ ಕಿಷ್ಕು (೨೦೧೬ ಅಂಗುಲ) ೧೦೦ ಕಿಷ್ಕು (೪೨೦೦ ಅಂಗುಲ) ಗಳಷ್ಟು ದೇವಾಲಯ ಕಟ್ಟಲಿಕ್ಕೆ ಸ್ಥಳವನ್ನು ಆರಿಸಿ ೧॥ ಪುರುಷ ಪ್ರಮಾಣದಷ್ಟು (೭॥ ಮೊಳದಷ್ಟು) ನೆಲದಡಿಯನ್ನು ಅಗಿಸಿ, ಅಥವಾ ನೀರು ಸಿಗುವ ಪರ್ಯಂತ, ಕಲ್ಲು ಸಿಗುವ ಪರ್ಯಂತ, ಕೂದಲು, ಅಂಗಾರ, ಎಲುಬು, ಹುತ್ತ, ಮಣ್ಣಿನ ಹೆಂಟೆ, ಕಲ್ಲು ಮೊದಲಾದುದು ಇಲ್ಲದಂತೆ ಚೆನ್ನಾಗಿ (ಹಾರೆ, ಪಿಕ್ಕಾಸು ಇತ್ಯಾದಿಗಳಿಂದ) ಭೂಶುದ್ಧಿಯನ್ನು ಮಾಡಿ, ದೇವಾಲಯ ನಿರ್ಮಾಣ ಸ್ಥಳದಲ್ಲಿಯೂ, ಶ್ರೀಹರಿಯನ್ನೂ, ಅಷ್ಟದಿಕ್ಪಾಲಕರನ್ನೂ ಪೂಜಿಸಿ ಹಿಂದಿನಂತೆಯೇ ಬಲಿಯನ್ನು ಕೊಟ್ಟು ಮಣ್ಣು, ಮರ, ಕಲ್ಲುಗಳ ಗುಂಪು, ಸುವರ್ಣ, ರಜತ, ತಾಮ್ರ ಮೊದಲಾದವುಗಳಿಂದ, ಅನುಕೂಲವಿದ್ದಂತೆ ದೃಢವಾಗಿ ದೇವಾಲಯವನ್ನು ಶಿಲ್ಪಿಗಳಿಂದ ಕಟ್ಟಿಸಬೇಕು. ॥೫೫-೫೬1/2) (ಅಂಗುಲ ಪರಿಮಾಣದ ಲಕ್ಷಣ ಹೇಳುತ್ತಾರೆ) ನೆಲದಲ್ಲಿ ಒಂದರ ತುದಿ ಇನ್ನೊಂದಕ್ಕೆ ಮುಟ್ಟುವಂತೆ ಉದ್ದವಾಗಿಟ್ಟ ೩ ಶಾಲಿ ಅಕ್ಕಿಗಳೂ, ಒಂದಕ್ಕೆ ಒಂದು ತಗಲಿಸಿ ಅಡ್ಡವಾಗಿಟ್ಟ ೮ ಜವೆ ಗೋಧಿಗಳ ಮಧ್ಯಭಾಗಗಳೂ, ॥೫೩॥ ಮಹಾಪುರುಷನ ಅಂಗುಷ್ಠದ ಮಧ್ಯರೇಖೆಯೂ, ನಡುಬೆರಳಿನ ಮಧ್ಯಪರ್ವವೂ, ಇವು ನಾಲ್ಕೂ ಅಳತೆಯಲ್ಲಿ ಸಮಗಳಾಗಿವೆ. (ಪರಿಮಾಣಭೂತವಾದ ಅಂಗುಲವೆನಿಸುತ್ತವೆ.) ಪ್ರತಿಮೆಯನ್ನು ಮಾಡಿಸತಕ್ಕ ಪುರುಷನ ಹೆಬ್ಬೆರಳಿನ ಮಧ್ಯರೇಖಾರೂಪವಾದ ಅಂಗುಲವನ್ನು ವಿಶೇಷವಾಗಿ ಪ್ರತಿಮಾ ಪೀಠಾದಿಗಳ ನಿರ್ಮಾಣ ಕಾರ್ಯಗಳ ಅಳತೆಯಲ್ಲಿಟ್ಟುಕೊಳ್ಳಬೇಕು. ಅಂದರೆ ಇಂತಹ ಅಂಗುಲ ಪರಿಮಾಣದಿಂದಲೇ ೯೬ ಅಂಗುಲ ಪುರುಷ ಪ್ರಮಾಣ ರೂಪ ಪ್ರತಿಮಾದಿಗಳನ್ನು ಮಾಡಿಸಬೇಕು. ॥೫೮॥ ೬ ಯವ ಪರಿಮಿತ ಅಂಗುಲಿಯು ಅಧಮ ಪರಿಮಾಣ. ೭ ಯವ ಪರಿಮಿತಿ ಅಂಗುಲಿಯು ಮಧ್ಯಮ ಪರಿಮಾಣ. ೮ ಯವ ಪರಿಮಿತ ಅಂಗುಲಿಯು ಉತ್ತಮ ಪರಿಮಾಣ. ಹೀಗೆ ೩ ವಿಧಗಳಿವೆ. ಅವುಗಳಲ್ಲಿ ಉತ್ತಮಾಂಗುಲಿ ಪರಿಮಾಣದಿಂದಲೇ ಪ್ರತಿಮಾದಿಗಳನ್ನು ಮಾಡಿಸುವುದು ಮುಖ್ಯವಾದ ಪ್ರಯುಕ್ತ ಅದನ್ನೇ ಹೇಳಿದ್ದು. ಪ್ರಾದೇಶ (ಗೇಣು, ೧೨ ಅಂಗುಲ) ಪರಿಮಿತ ಪ್ರತಿಮೆಯು ಹ್ರಸ್ವ ಪ್ರತಿಮೆಯು, ಹಸ್ತ (೧ ಮೊಳ, ೨೪ ಅಂಗುಲ) ಪರಿಮಿತ ಪ್ರತಿಮೆಯು ಮಧ್ಯಮ

ಪ್ರತಿಮೆಯು. ಪುರುಷ ಪ್ರಮಾಣ (೫ ಮೊಳ, ೧೨೦ ಅಂಗುಲ,) ಪರಿಮಿತ ಪ್ರತಿಮೆಯು ಉತ್ತಮ ಪ್ರತಿಮೆಯು. ಹ್ರಸ್ವಾದಿ ಪರಿಮಾಣಭೇದವಿರುವ ಪ್ರತಿಮೆಗಳಲ್ಲಿ ಆ ಪ್ರತಿಮೆಗಳ ಅಂಗುಲವನ್ನೇ ಪರಿಮಾಣವೆಂದು ತೆಗೆದುಕೊಳ್ಳಬೇಕು. ಈ ಪ್ರಾದೇಶಾದಿಪರಿಮಾಣವು ಪ್ರತಿಮೆಗೆ ಸಾಮಾನ್ಯ ಲಕ್ಷಣವು. ೯೬ ಅಂಗುಲಾದಿಗಳಿರಬೇಕೆಂಬುವುದು ವಿಶೇಷ ಲಕ್ಷಣವು. (ಮನೆಯಲ್ಲಿ ಪ್ರಾದೇಶ ಪರಿಮಿತ ಪ್ರತಿಮೆಯೇ ಪೂಜ್ಯವು.) ॥೫೮-೫೯॥

ಅವ॥ ಗರ್ಭಗೃಹದ್ವಾರದ ದೈರ್ಘ್ಯ ಪರಿಮಾಣವನ್ನು ಹೇಳುತ್ತಾರೆ.

ಮೂ॥ ಪ್ರತಿಮಾದ್ವ್ಯರ್ಧಕಂ ದ್ವಾರಮೂರ್ಧ್ವಮರ್ಧಂಚ ವಿಸ್ತೃತಿಃ ।
ಪ್ರತಿಮಾರ್ಧಪ್ರಮಾಣೇನ ಪೀಠಸ್ಯೋಚ್ಚತ್ವಮಿಷ್ಯತೇ॥ ॥೬೦॥

ಉನ್ನತಿಃ ಪಿಂಡಿಕಾಯಾಸ್ತು ಚತುರಂಗುಲಮಾನತಃ ।
ತ್ರ್ಯಂಗುಲಂ ದ್ವ್ಯಂಗುಲಂ ವಾಽಪಿ ಗೃಹಾಂತಃ ಪ್ರತಿಮಾಸಮಂ॥ ॥೬೧॥

ಊರ್ಧ್ವಂ (ಉಚ್ಚಂ) ಪರ್ಯಕ್ಷ ಕ್ರಮಶಃ ಉಚ್ಚತ್ವಂ ಮಧ್ಯತಃ ಸ್ಮೃತಂ ॥
ತಾವದುಚ್ಚಂ ಬಹಿಶ್ಚೈವ ಯದ್ಯೇಕಂ ಶಿಖರಂ ಭವೇತ್॥ ॥೬೨॥

ಅರ್ಧೋಚ್ಚಮಥವಾಽಪಿ ಸ್ಯಾದಧಸ್ತಾತ್ಪ್ರತಿಮೋನ್ನತಂ ।
ತತೋ ದ್ವಿಗುಣಮಾನಂ ವಾ ಸಾರ್ಧಪ್ರತಿಮಮೇವ ವಾ॥ ॥೬೩॥

ಶಿಖರಾಂತರೇ ತು ಪ್ರತಿಮಾಮಾನಂ ತದ್ಗಲಮುಚ್ಯತೇ ।
ತತ್ತ್ರಿಪಾದಂ ತದರ್ಧಂ ವಾ ತದರ್ಧ್ಯಮಥಾಪಿ ವಾ॥ ॥೬೪॥

ವರ್ತುಲಂ ಪದ್ಮಸದೃಶಂ ಹಸ್ತಿಪೃಷ್ಠಸಮಂ ತಥಾ ।
ಚತುರಸ್ರಂ ಚಾಷ್ಟಕೋಣಂ ವಿಮಾನಂ ಪರಿಕೀರ್ತಿತಂ॥ ॥೬೫॥

ಪ್ರತಿಮಾಯಾ ದಶಗುಣಂ ವಿಂಶದ್ಗುಣಮಥಾಪಿ ವಾ ।
ವರ್ತುಲಂ ಶಿಖರಂ ತ್ವೇಕಂ ಕಿರೀಟಾಕೃತಿಮದ್ಭವೇತ್॥ ॥೬೬॥

ಅ॥ ಗರ್ಭಗೃಹದ ಬಾಗಿಲು ಪುರುಷ ಪ್ರಮಾಣವುಳ್ಳ (೧೨೦ ಅಂಗುಲವಿರುವ) ಪ್ರತಿಮೆಯಿಂದ ೧॥ ಪಾಲು ಎತ್ತರವಿರಬೇಕು. ಬಾಗಿಲಿನ ಅಗಲವು ಎತ್ತರದ ಅರ್ಧದಷ್ಟು ಇರಬೇಕು. ಪ್ರತಿಮೆಯು ಅರ್ಧ ಪ್ರಮಾಣದಷ್ಟು ಪೀಠವು ಎತ್ತರವಿರಬೇಕು. ॥೬೦॥ ಪ್ರತಿಮೆಯ ಅಂಗುಲದ ಅಳತೆಗಿಂತ, ೪, ೩, ಅಥವಾ ೨, ಅಂಗುಲದಷ್ಟು ಪೀಠದ ಅಡಿಗಲ್ಲಿನ ಎತ್ತರವಿರಬೇಕು. ಗರ್ಭಗೃಹದ ಮಧ್ಯದಲ್ಲಿ ಪ್ರತಿಮೆಯ ಮೇಲುಗಡೆಯ ಅವಕಾಶವು ಪ್ರತಿಮೆಯ ಪರಿಮಾಣದಷ್ಟು ದೀರ್ಘವಾಗಿರಬೇಕು. ನಡುವಿಗಿಂತ ಕೆಳಗೆ ಸುತ್ತಲೂ ೪ ದಿಕ್ಕುಗಳ ಮೂಲೆಯಲ್ಲಿ ಪ್ರತಿಮೆಯ ಪರಿಮಾಣಕ್ಕಿಂತ ಕ್ರಮವಾಗಿ ಧೈರ್ಘ್ಯವು ಕುಗ್ಗುತ್ತಾ ಬಂದು ಬದಿಯಲ್ಲಿ ಪ್ರತಿಮೆಯ ಸಮಪ್ರಮಾಣವಿರಬೇಕು. ದೇವಸ್ಥಾನದ ಮೇಲಿನ ಶಿಖರವು ಒಂದೇ ಅಂತಸ್ತಿನದ್ದಾಗಿದ್ದರೆ ಆ ಶಿಖರವೂ ಪ್ರತಿಮೆಯಷ್ಟು ಎತ್ತರವಿರಬೇಕು. ॥೬೧-೬೨॥ ಅಥವಾ ಪ್ರತಿಮೆಯ ಅರ್ಧದಷ್ಟು ಎತ್ತರವಿರಬೇಕು. ಗರ್ಭಗುಡಿಯೊಳಗೆ ವರ್ತುಲಾಕಾರ ವಿಮಾನಕ್ಕಿಂತ ಕೆಳಗಿನ ಭೂಮಿಪರ್ಯಂತ ಗೋಡೆಯ ಪ್ರದೇಶವು, ಪ್ರತಿಮೆಯಷ್ಟೇ ಎತ್ತರವಾಗಲೀ, ಪ್ರತಿಮೆಗಿಂತ ಇಮ್ಮಡಿ ಎತ್ತರವಾಗಲೀ ೧॥ ಪಾಲಿನಷ್ಟು ಎತ್ತರವಾಗಲೀ ಇರಬೇಕು. ॥೬೩॥ ೨ ಅಂತಸ್ತಿನ ಗರ್ಭಗುಡಿಯಾಗಿದ್ದರೆ ವಿಮಾನ ಶಿಖರಗಳ ಮಧ್ಯದಲ್ಲಿ ರತಕ್ಕ ಕಂಠ ಸದೃಶಾಕಾರವಾದ ೨ ಅಂತಸ್ತಿನ ಗೋಡೆಯೂ ಪ್ರತಿಮೆಯ ಪರಿಮಾಣದಷ್ಟೇ ಆಗಬೇಕು. ಶಿಖರವು ಪ್ರತಿಮೆಯ ಮುಕ್ಕಾಲು ಪಾಲು, ಅರ್ಧಪಾಲು, ಕಾಲುಪಾಲು ಇದ್ದರೂ ಸಾಕು. ॥೬೪॥ ದೇವಸ್ಥಾನದ ಗರ್ಭಗುಡಿಯು ಉರುಟಾಗಲೀ, ಕಮಲಪುಷ್ಪದಂತಾಗಲೀ, ಆನೆಯ ಬೆನ್ನಿನಂತೆ ಆಗಲೀ, ಚಚ್ಚೌಕವಾಗಿ ಆಗಲೀ, ೮ ಮೂಲೆಯುಳ್ಳದ್ದಾಗಿ ಆಗಲೀ, ಮಾಡಲ್ಪಡಬೇಕು. ॥೬೫॥ ಗರ್ಭಗುಡಿಯು ಅನೇಕ ಶಿಖರಗಳುಳ್ಳದ್ದಾದರೆ

ಪ್ರತಿಮಾ ಪರಿಮಾಣಕ್ಕಿಂತ ಅದು ೧೦ ಪಾಲು ಅಥವಾ ೨೦ ಪಾಲು ಹೆಚ್ಚು ಎತ್ತರವಿರಬೇಕು. ಆ ಅನೇಕ ಶಿಖರಗಳ ಮಧ್ಯದಲ್ಲಿ ಒಂದು ಶಿಖರವು ಎತ್ತರವಾಗಿ ಕಿರೀಟದಂತೆಯೇ ಉರುಟಾಗಿಯೇ ಇರಬೇಕು. ||೬೬||

ಅವ || ಹೀಗೆ ಗರ್ಭಗುಡಿಯನ್ನು ನಿರ್ಮಿಸುವ ಪ್ರಕಾರವನ್ನು ಹೇಳಿ ಗರ್ಭಗುಡಿಯ ಇದಿರು ಮಾಡಬೇಕಾದ ಮಂಟಪವನ್ನು ಹೇಳುತ್ತಾರೆ.

**ಸಭಯಾಽಪಿ ಸಮೇತಂ ವಾ ಪೃಥಕ್ ಸಭಮಥಾಪಿ ವಾ ।**
**ದ್ವಿಸಭಂ ತ್ರಿಸಭಂ ವಾಽಪಿ ಸಗೋಪುರಮಥಾಪಿ ವಾ॥** ||೬೭||

**ಪ್ರಾಕಾರವೃತ್ತಯುಕ್ತಂ ವಾ ಸಪ್ತಪ್ರಾಕಾರಮೇವವಾ ।**
**ಸಮ (ಸದ್ಮ) ವೃತ್ತಂ ಕಿಷ್ಕುಮಾತ್ರಂ ಬಹಿರ್ವಾ ಚತುರಸ್ರಕಂ॥** ||೬೮||

**ತತಃ ಪರಂ ಕಿಷ್ಕುಮಾತ್ರಂ ಸಭಾಯಾ ಅಂತರಂ ಯದಿ ।**
**ತತಸ್ತಾವತ್ತೃತೀಯಾಯಾಃ ಸಾರ್ಧಮೇವ ಹ್ಯುದಾಹೃತಂ॥** ||೬೯||

**ಕಿಷ್ಕುತ್ರಯಂ ಚ ಶಕ್ರಾದೇಃ ಸ್ಥಾನಂ ತದ್ವೃತ್ತತಃ ಸ್ಮೃತಂ ।**
**ತತಸ್ತು ಮಂಟಪಂ ಕುರ್ಯಾತ್ಪ್ರತಿಷ್ಠಾಯಾಃ ಸುಲಕ್ಷಣಂ॥** ||೭೦||

ಅ|| ಗರ್ಭಗುಡಿಯ ಇದಿರು ಮಂಟಪವನ್ನು ಗರ್ಭಗುಡಿಗೆ ತಾಗಿಕೊಂಡು, ಅಥವಾ ತಾಗಿಕೊಳ್ಳದೆ ಪ್ರತ್ಯೇಕವಾಗಿಯೂ ಕಟ್ಟಿಸಬಹುದು. ತಂತಮ್ಮ ಶಕ್ತ್ಯನುಸಾರ ೨ ಅಥವಾ ೩ ಮಂಟಪಗಳನ್ನು ಕಟ್ಟಿಸಬೇಕು. ಗರ್ಭಗುಡಿಗೆ ಗೋಪುರವು (ಹೊರಬಾಗಿಲು) ಇರಬೇಕು. ||೬೭|| ಗರ್ಭಗುಡಿಗೆ ಉರುಟಾದ ೧ ಸುತ್ತು ಗೋಡೆಯಾಗಲೀ, ೭ ಸುತ್ತು ಗೋಡೆಯಾಗಲೀ ಇರಬೇಕು. ಗರ್ಭಗುಡಿಗೆ ಹೊರಗೆ ೨ ಮೊಳದಷ್ಟು ಉರುಟಾದ ಗೋಡೆ, ಅಥವಾ ಚಚ್ಚೌಕ ಗೋಡೆಯಿರಬೇಕು. (೭ ಪ್ರಾಕಾರಗಳಾದರೆ ಒಳಗಿನದ್ದು ೬ ಉರುಟು, ೭ನೇದ್ದು ಚಚ್ಚೌಕ) ||೬೮|| ಗರ್ಭಗುಡಿಗಿಂತ ಮುಖಮಂಟಪಕ್ಕೆ ವ್ಯವಧಾನವು ಬೇಕಾಗಿದ್ದರೆ ೧ನೇ ಮುಖಮಂಟಪವು ೨ ಮೊಳ ದೂರವಾಗಿಯೂ, ೨ನೇ ಮುಖಮಂಟಪವು ಅದಕ್ಕಿಂತ ಇನ್ನು ೨ ಮೊಳ ದೂರವಾಗಿಯೂ, ೩ನೇ ಮಂಟಪವು ೨ನೇಕ್ಕಿಂತ ೨|| ಮೊಳ ದೂರವಾಗಿಯೂ ಇರಬೇಕು. ||೬೯|| ಗರ್ಭಗುಡಿಯ ಸುತ್ತಲೂ ಪೂರ್ವಾದಿ ೮ ದಿಕ್ಕುಗಳಲ್ಲಿ ಇಂದ್ರಾದ್ಯಷ್ಟದಿಕ್ಪಾಲಕರಿಗಾಗಿ ೬,೬ ಮೊಳವುಳ್ಳ ಮಂಟಪವನ್ನು ನಿರ್ಮಿಸಬೇಕು. ಹೀಗೆ ದೇವಾಲಯವನ್ನು ನಿರ್ಮಿಸಿದ ಮೇಲೆ ಪ್ರತಿಮೆಯನ್ನು ಪ್ರತಿಷ್ಠಾ ಮಾಡುವುದಕ್ಕಾಗಿ ಲಕ್ಷಣವತ್ತಾದ ಮಂಟಪವನ್ನು ಕಟ್ಟಿಸಬೇಕು ||೭೦|| ||೬೭-೭೦||

ಆವ || ಗರ್ಭಗುಡಿಯನ್ನು ಕಟ್ಟಿದ ಮೇಲೆ ಅದಕ್ಕೆ ಅಂಗಭೂತವಾದ ವಾಸ್ತುಪುರುಷನ ಪೂಜೆಯನ್ನು ಹೇಳುತ್ತಾರೆ.

**ಮೂ|| ಪೂಜಯೇದ್ವಾಸ್ತುಪುರುಷಸ್ಯೋಪರಿಸ್ಥಾಂಸ್ತು ಸರ್ವದಾ ।**
**ದೇವಾನ್ ಬ್ರಹ್ಮಾದಿಕಾನ್ ವಾಸ್ತುರ್ವರಾಹಸ್ಯ ಹರೇಃ ಸುತಃ॥** ||೨೧||

**ಪಾತಿತೋ ದೈವತೈರ್ಭೂಮೌ ಚತುರಸ್ರಾಕೃತಿಃ ಸ್ಥಿತಃ ।**
**ಕೃತ್ವಾಽಷ್ಟಕಾಷ್ಟಕೋಷ್ಠಾನಿ ಮಧ್ಯೇ ಬ್ರಹ್ಮಾ ಚತುಷ್ಟಯೇ॥** ||೭೨||

**ಪೂಜ್ಯೋ ದ್ವಯೇ ದ್ವಯೇ ಶಕ್ರೋ ಯಮೋ ವರುಣ ಏವ ಚ।**
**ಸೋಮಶ್ಚ ಪೂಜ್ಯಾಃ ಕೋಣೇಷು ವಹ್ನ್ಯಾದ್ಯಾಃ ಕೋಣದೇವತಾಃ॥** ||೭೩||

**ಪುನಸ್ತ್ರಯೇ ತ್ರಯೇ ಕಾಮಂ ಧಾತಾರಂ ಸವಿಧಾತೃಕಂ ।**
**ಸ್ಕಂದಂ ಚ ಪೂಜಯೇತ್ಕೋಣೇ ಸೂರ್ಯಂ ಚೈವ ವಿನಾಯಕಂ॥** ||೭೪||

ಕಾಲಂ ಕುಬೇರಂ ಚ ಬಹಿಃ ಪ್ರತ್ಯೇಕಂ ದಿಕ್ಷು ಪೂಜಯೇತ್ ।
ಹಾರಿಂ ಹರಿಂ ಗಭೀರಂ ಚ ಗಾಹನಂ ಗಹನಂ ಶುಭಂ॥ ||೭೫||

ತ್ರಾತಮಂಗಾರಕಂ ಚೈವ ಪೂರ್ವಸ್ಯಾಂ ದಿಶಿ ಪೂಜಯೇತ್ ।
ದಾರಣಂ ವಿದರಿಂ ದೂತಂ ಪ್ರದ್ಯೋತಂ ದ್ಯೋತನಂ ದರಿಂ॥ ||೭೬||

ಮೃತ್ಯುಂ ಶನೈಶ್ಚರಂ ಚೈವ ದಕ್ಷಿಣಸ್ಯಾಂ ಪ್ರಪೂಜಯೇತ್ ।
ಪುಷ್ಕರಂ ಕ್ಷರಣಂ ಕ್ಷಾರಿಂ ವಿಕ್ಷಣಂ ಕ್ಷೋಭಣಂ ಕ್ಷಣಂ॥ ||೭೭||

ಚಾರ್ವಂಗಂ ಭಾರ್ಗವಂ ಚೈವ ಪಶ್ಚಿಮಸ್ಯಾಂ ಪ್ರಪೂಜಯೇತ್ ।
ಚಾರಂ ವಿಚಾರಂ ಪ್ರಚರಂ ಸಂಚರಂ ಚಾರಣಂ ಚರಂ॥ ||೭೮||

ಬೃಹಸ್ಪತಿಂ ಬುಧಂ ಚೈವಾಪ್ಯುತ್ತರಸ್ಯಾಂ ಪ್ರಪೂಜಯೇತ್ ।
ಏವಮೇವ ವಿಮಾನಸ್ಯ ಕೃತೇಃ ಪ್ರಾಗಪಿ ಪೂಜಯೇತ್॥ ||೭೯||

ಅ॥ ವಾಸ್ತುಪುರುಷನ ಮೇಲಿರುವ ಬ್ರಹ್ಮಾದಿ ದೇವತೆಗಳನ್ನೂ, ವಾಸ್ತುಪುರುಷನನ್ನೂ ಕೂಡ ಪೂಜಿಸಬೇಕು. ವರಾಹರೂಪಿಯಾದ ಶ್ರೀ ಹರಿಯ ಪುತ್ರನಾದ ವಾಸ್ತುಪುರುಷನು ದೇವತೆಗಳಿಂದ ಭೂಮಿಗೆ ತಳ್ಳಲ್ಪಟ್ಟವನಾಗಿ ಭೂಮಿಯಲ್ಲಿ ಚತುಷ್ಕೋಣಾಕಾರನಾಗಿ ಇರುವನು. ಸಮಚತುಷ್ಕೋಣಾಕಾರವಾದ ವಾಸ್ತುಪೀಠದಲ್ಲಿ ೬೪ ಕೋಣೆಗಳನ್ನು ಬರೆದು ಅದರ ನಡುವಿನ ೪ ಕೋಣೆಗಳಲ್ಲಿ ಬ್ರಹ್ಮನನ್ನು, ||೭೧||೭೨|| ಅದರ ಹೊರಗಿನ ಪೂರ್ವದಿಕ್ಕಿನ ೨ ಕೋಣೆಗಳಲ್ಲಿ ಇಂದ್ರ, ದಕ್ಷಿಣ ದಿಕ್ಕಿನ ೨ ಕೋಣೆಗಳಲ್ಲಿ ಯಮ, ಪಶ್ಚಿಮದಲ್ಲಿ ವರುಣ. ಉತ್ತರದಲ್ಲಿ ಸೋಮ, ಅಗ್ನೇಯಾದಿ ೪ ವಿದಿಕ್ಕುಗಳಲ್ಲಿ ಕ್ರಮವಾಗಿ ಅಗ್ನಿ, ನಿರ್ಋತಿ, ವಾಯು;ಈಶಾನ, ಇವರನ್ನು ಪೂಜಿಸಬೇಕು ||೭೩|| ಆ ಇಂದ್ರಾದಿ ಕೋಣೆಗಳಿಗಿಂತ ಹೊರಗಿನ ಸಾಲುಗಳಲ್ಲಿದ್ದ ಪ್ರತಿದಿಕ್ಕಿನ ೩,೩, ಕೋಣೆಗಳಲ್ಲಿ ಕಾಮ ಧಾತೃ ವಿಧಾತೃ ಈ ಮೂರು ದೇವತೆಗಳನ್ನು  ಈಶಾನ್ಯ, ಆಗ್ನೇಯ, ನೈಋತ್ಯ, ವಾಯವೀಯ ಈ ೪ ಕೋಣೆಗಳಲ್ಲಿ ಕ್ರಮವಾಗಿ ಹಾರಿ, ಹರಿ, ಗಭೀರ, ಗಾಹನ, ಗಹನ, ಶುಭ, ತ್ರಾತ, ಅಂಗಾರಕ ಈ ೮ ದೇವತೆಗಳನ್ನು ಪೂಜಿಸಬೇಕು ||೭೫1/2|| ದಕ್ಷಿಣ ದಿಕ್ಕಿನಲ್ಲಿ ದಾರಣ, ವಿದರಿ, ದೂತ, ಪ್ರದ್ಯೋತದ್ಯೋತನ, ದರಿ, ಮೃತ್ಯು, ಶನೈಶ್ಚರ ಈ ೮ ದೇವತೆಗಳನ್ನು ಪೂಜಿಸಬೇಕು || ೭೬ 1/2|| ಪಶ್ಚಿಮ ದಿಕ್ಕಿನಲ್ಲಿ ಪುಷ್ಕರ, ಕ್ಷರಣ, ಕ್ಷಾರಿ, ವಿಕ್ಷಣ, ಕ್ಷೋಭಣ, ಕ್ಷಣ, ಚಾರ್ವಂಗ, ಭಾರ್ಗವ, ಇವರನ್ನು ಪೂಜಿಸಬೇಕು. ||೭೭1/2|| ಉತ್ತರ ದಿಕ್ಕಿನಲ್ಲಿ ಚಾರ, ವಿಚಾರ, ಪ್ರಚರ, ಸಂಚರ, ಚಾರಣ, ಚರ, ಬೃಹಸ್ಪತಿ, ಬುಧ ಈ ೮ ದೇವತೆಗಳನ್ನು ಪೂಜಿಸಬೇಕು. ಹೀಗೆಯೇ ದೇವಾಲಯವನ್ನು ನಿರ್ಮಿಸುವುದಕ್ಕಿಂತ ಮೊದಲೂ ಭೂಶುದ್ಧಿ ಮಾಡಿ ಚತುಷ್ಕೋಣಾಕಾರದ ಪೀಠವನ್ನು ಬರೆದು ಆ ಪೀಠದಲ್ಲಿ ಈ ೬೪ ವಾಸ್ತುದೇವತೆಗಳನ್ನು ಪೂಜಿಸಬೇಕು ||೭೧-೭೯||

ಅವ || ಹೀಗೆ ಮಧ್ಯದಲ್ಲಿ ವಕ್ತವ್ಯಾಂಶವನ್ನು ಹೇಳಿ ಪ್ರಕೃತ ಮಂಟಪವನ್ನು ಮಾಡತಕ್ಕ ಪ್ರಕಾರವನ್ನು ಹೇಳುತ್ತಾರೆ.

ಮೂ॥ ಸಪ್ತಪರ್ಣಮಯಂ ಸಾಧು ಕಾರಯೇನ್ಮಂಟಪಂ ತತಃ ।
ಸಪ್ತಹಸ್ತಂ ದ್ವಿಷಡ್ಢಸ್ತಂ ಅಥವಾ ದ್ವಿಗುಣಂ ತತಃ॥ ||೮೦||

ಚತುರ್ಗುಣಂ ವಾ ಸಮ್ಯಕ್ತು ಚತುರಸ್ರಂ ಸಹಾಜಿರಂ ।
ಅಸ್ವಚ್ಛ ಮಂಟಪಂ ದೀರ್ಘಂ ಪಂಚಹಸ್ತಂ ತು ಕಾರಯೇತ್॥ ||೮೧||

ತ್ರಿಚತುಷ್ಕೋಷ್ಟಕಂ ತತ್ರ ಮಧ್ಯೇ ಪ್ರಾಗಾಯತಂ ಶುಭಂ ।
ಕಾರಯೇನ್ಮಂಡಲಂ ಸಾಧು ಹಸ್ತಮಾತ್ರಸುವಿಸ್ತೃತಂ॥ ||೮೨||

**ತತ್ರ ದ್ವಾದಶ ಪಾತ್ರಾಣಿ ಸ್ಥಾಪಯೇತ್ಪಾಲಿಕಾದಿಕಂ ।**
**ಪಾಲಿಕಾಸ್ತು ಚತುರ್ವಿಂಶತ್ಯಂಗುಲೋಚ್ಛ್ರಯಸಂಯುತಾಃ॥** ॥೮೩॥

**ಅಷ್ಟಾದಶಾಂಗುಲಶ್ಚೈವ ತಥಾ ಪಂಚಮುಖಾ ಇತಿ ।**
**ದ್ವಾದಶಾಂಗುಲಕಾಶ್ಚೈವ ಶರಾವಾಃ ಪಶ್ಚಿಮಾನುಗಾಃ॥** ॥೮೪॥

**ತತ್ರ ವಿಷ್ಣುಂ ಚತುರ್ಮೂರ್ತಿಂ ಪೂಜಯೇದ್ಭಕ್ತಿತಸ್ತ್ರಿಶಃ ।**
**ಸಪ್ತಧಾನ್ಯಾನಿ ತೇಷ್ವೇವ ಪೂರಯೇದಂಕುರಾರ್ಥತಃ॥** ॥೮೫॥
**ತತ್ರ ನಿತ್ಯಂ ಬಲಿಂ ದದ್ಯಾದ್ವಿಷ್ಣವೇ ದಶರಾತ್ರಕಂ ।**
**ಬ್ರಹ್ಮ ಶಂಕರ ಗೀರ್ವಾಣ ಪಿತೃಗಂಧರ್ವಯಕ್ಷಕೈಃ॥** ॥೮೬॥

**ಭೂತೈಶ್ಚ ಪಾಯಸೇನೈವ ತಥಾ ಪದ್ಮಾಕ್ಷತೇನಚ ।**
**ಅನ್ನಾಪೂಪೇನ ಪುಷ್ಪಾನ್ನೈರನ್ನಲಾಜಾಕ್ಷತೈರಪಿ ।**
**ಸಕ್ತುಭಿಶ್ಚಕ್ರಮೇಣೈವ ದೇವಾಂತಂ ಪಾಯಸೇನ ವಾ** ॥೮೭॥

೮॥ ವಾಸ್ತುಪೂಜೆ ಮಾಡಿದ ಮೇಲೆ ಭೂರ್ಜವೃಕ್ಷದಿಂದ ೭, ೧೨, ೨೪ ಅಥವಾ ೪೮ ಮೊಳಗಳಿದ್ದೂ ಸಮಚತುಷ್ಕೋಣಾಕಾರವಾಗಿ ಹೊರಬದಿಯಲ್ಲಿ ಅಂಗಣಕ್ಕೆ ಮುಟ್ಟಿಕೊಂಡಿರುವ ಮಂಟಪವನ್ನು ಕಟ್ಟಿಸಬೇಕು. ಅಲ್ಲದೆ ಪ್ರಧಾನ ಮಂಟಪದ ಸಮೀಪದಲ್ಲಿಯೇ ಅಂಕುರಾರ್ಪಣೆಗಾಗಿ ೫ ಮೊಳ ವಿಸ್ತಾರವೂ ೭॥ ದೀರ್ಘವೂ ಆದ ಇನ್ನೊಂದು ಮಂಟಪವನ್ನು ಕಟ್ಟಿಸಬೇಕು॥೮೦।೮೧॥ ಆ ಮಂಟಪದ ಮಧ್ಯದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ೧೨ ಮೊಳ ದೀರ್ಘವೂ, ೧೨ ಕೋಣೆಗಳೂ, ಚಚ್ಚೌಕವಾಗಿಯೂ, ಅವುಗಳ ಬದಿಗಳಲ್ಲಿ ೨ ವೀಥಿಗಳೂ, ಶ್ವೇತ, ಪೀತ, ಅರುಣ, ಸಿತ ಎಂಬ ರಂಗೋಲೆಹುಡಿಗಳಿಂದ ಅಲಂಕೃತವಾಗಿಯೂ ವಕ್ರಾದಿದೋಷರಹಿತವಾಗಿಯೂ ಇರುವ ವಿಸ್ತೃತವಾದ ಮಂಡಲವನ್ನು ವಿರಚಿಸಬೇಕು. ಆ ಒಂದೊಂದು ಕೋಣೆಯು ೧,೧, ಮೊಳ ಪರಿಮಾಣವುಳ್ಳ ಚಚ್ಚೌಕವಾಗಿಯೂ ಇರಬೇಕು. ॥೮೨॥ಆ ಮಂಡಲದಲ್ಲಿದ್ದ ೧೨ ಕೋಣೆಗಳಲ್ಲಿ ಪೂರ್ವದ ೪ ಕೋಣೆಗಳಲ್ಲಿ ಪೂರ್ವದ ೪ ಕೋಣೆಗಳಲ್ಲಿ ೪, ಪಾಲಿಕೆ (ತಪ್ಪಲೆಯಂತಿರುವ ಸ್ವಲ್ಪ ಎತ್ತರವಾಗಿರುವ ದೊಡ್ಡದಾದ ಪಾತ್ರೆ)ಗಳನ್ನು ಮಧ್ಯದ ೪ ಕೋಣೆಗಳಲ್ಲಿ ೪ ಪಂಚಮುಖ (೪ ಬದಿಗಳಲ್ಲಿ ಗಿಂಡಿಯ ಮುಖ, ಮಧ್ಯದಲ್ಲಿ ೧ ಮುಖ ಹೀಗೆ ಐದು ಮುಖಗಳುಳ್ಳ) ಪಾತ್ರಗಳನ್ನು ಪಶ್ಚಿಮದ ೪ ಕೋಣೆಗಳಲ್ಲಿ ೪ ಶರಾವ (ದಧ್ಯಾದಿಗಳನ್ನು ಇಡತಕ್ಕ ಪಾತ್ರೆ)ಗಳನ್ನು ಹೀಗೆ ೧೨ ಕೋಣೆಗಳಲ್ಲಿ ೧೨ ಪಾತ್ರಗಳನ್ನು ಇಡಬೇಕು. ಆ ಪಾತ್ರಗಳ ಮಧ್ಯದಲ್ಲಿ ಪಾಲಿಕೆಗಳು ೨೪ ಅಂಗುಲ ಎತ್ತರವಾಗಿರಬೇಕು. ॥೮೩॥ ಪಂಚಮುಖಗಳು ೧೮ ಅಂಗುಲ ಎತ್ತರ, ಶರಾವಗಳು ೧೨ ಅಂಗುಲ ಎತ್ತರಗಳಾಗಿಯೂ ಇರಬೇಕು. ॥೮೪॥ ಅ ೩ ಕೋಣೆಗಳಿದ್ದ ೩ ವಿಧಪಾತ್ರಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಎಂಬ ೪ ಮೂರ್ತಿಗಳನ್ನು ಒಂದೊಂದರಲ್ಲಿ ಒಂದೊಂದಾವರ್ತಿ, ಅಂದರೆ ೪ ಪಾಲಿಕಾಗಳಲ್ಲಿ ಒಂದಾವರ್ತಿ, ೪ ಪಂಚಮುಖಗಳಲ್ಲಿ ಒಂದಾವರ್ತಿ, ೪ ಶರಾವಗಳಲ್ಲಿ ಒಂದಾವರ್ತಿ ಹೀಗೆ ಮೂರಾವರ್ತಿ ಪೂಜಿಸಬೇಕು. ಆ ಅನಿರುದ್ಧಾದಿಗಳ ಪೂಜೆಗಾಗಿ ಮಾಡಿದ ಅ ೧೨ ಪಾತ್ರಗಳಲ್ಲಿ ಅಂಕುರಗಳ ಉತ್ಪತ್ತಿಗಾಗಿ ಹೆಸರು ಮೊದಲಾದ ೭ ಧಾನ್ಯಗಳನ್ನು (ಶಕ್ತಿಯಿದ್ದಷ್ಟು ಬೇರೆ ಧಾನ್ಯಗಳನ್ನು) ರಾತ್ರಿಯಲ್ಲಿಯೇ ತುಂಬಿಸಬೇಕು. ॥೮೫॥ ಆ ಪಾಲಿಕಾದಿ ಪಾತ್ರಗಳ ಸಮೀಪದಲ್ಲಿ, ಬ್ರಹ್ಮ, ರುದ್ರ, ದೇವತೆಗಳು, ಪಿತೃಗಳು, ಗಂಧರ್ವರು, ಯಕ್ಷರು, ಭೂತಗಳು, ಇವರಿಂದ ಕೂಡಿದ ಶ್ರೀ ವಿಷ್ಣುವಿಗೆ ೧೦ ದಿನ ಪರ್ಯಂತ ಪ್ರತಿನಿತ್ಯವೂ ಬಲಿಯನ್ನು (ನೈವೇದ್ಯವನ್ನು) ಕೊಡಬೇಕು. ॥೮೬॥ ಅದರಲ್ಲಿ ಶ್ರೀ ವಿಷ್ಣುವಿಗೆ ಪಾಯಸವೇ; ಬ್ರಹ್ಮನಿಗೆ ಕಮಲ ಪುಷ್ಪ ಅಕ್ಕಿ ಕಾಳು ಇವುಗಳೇ; ರುದ್ರನಿಗೆ ಅನ್ನ, ಅಪ್ಪ; ದೇವತೆಗಳಿಗೆ ಪುಷ್ಪ, ಅನ್ನ; ಪಿತೃಗಳಿಗೆ ಅನ್ನ; ಗಂಧರ್ವರಿಗೆ ಅರಳು; ಯಕ್ಷರಿಗೆ ಅಕ್ಕಿಕಾಳು; ಭೂತಗಳಿಗೆ ಹಿಟ್ಟು; ಇವುಗಳನ್ನು ನೈವೇದ್ಯವಾಗಿ, ದೇವತಾಕ್ರಮದಿಂದಲೂ, ದ್ರವ್ಯಕ್ರಮದಿಂದಲೂ ಸಮರ್ಪಿಸಬೇಕು. ಅಥವಾ ವಿಷ್ಣು ಬ್ರಹ್ಮರುದ್ರರಿಗೆ ಪಾಯಸ, ಇತರರಾದ ಗೀರ್ವಾಣಾದಿ ೫ ಮಂದಿಗೆ ಪದ್ಮಾಕ್ಷತ ಮೊದಲಾದ ೫ ದ್ರವ್ಯಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು.

॥೮೭॥

ಅವ || ಪ್ರತಿಮೆಗೆ ಅಧಿವಾಸವು ಅವಶ್ಯಕವಾದ ಪ್ರಯುಕ್ತ ಅಧಿವಾಸನವಿಧಿಯನ್ನು ಹೇಳುತ್ತಾರೆ.

**ಮೂ|| ತದೈವ ಪ್ರತಿಮಾಯಾಶ್ಚ ಕಾರಯೇದಧಿವಾಸನಂ|** **||೮೮||**

**ಪಂಚಗವ್ಯೇ ಸಪ್ತರಾತ್ರಂ ಕ್ಷಿಪ್ತ್ವಾ ಪುರುಷಸೂಕ್ತತಃ |**
**ವೇದಾಂಶ್ಚ ಚತುರಃ ಸಮ್ಯಕ್ ಪಾರಯೇಯುರ್ದ್ವಿಜೋತ್ತಮಾಃ||** **||೮೯||**

**ಪ್ರಾಚ್ಯಾದಿದ್ವಾರಗೌ ದ್ವೌದ್ವಾವೇಕೈಕಂ ತು ದಶಾವರಾಃ |**
**ಯಥಾಲಬ್ಧಂ ಯಥಾವಿತ್ತಮಥವಾ ವಿಷ್ಣುತತ್ಪರಾಃ||** **||೯೦||**

ಅ|| ಅಂಕುರಾರ್ಪಣ ಕಾಲದಲ್ಲಿಯೇ ಪುರುಷ ಸೂಕ್ತದಿಂದ ಭಗವತ್ಪ್ರತಿಮೆಯನ್ನು ಪಂಚಗವ್ಯದಲ್ಲಿಯೂ ಜಲಾದಿಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕ ೭,೭, ದಿವಸಗಳಲ್ಲಿ ಪ್ರತಿಮೆಗೆ ಅಧಿವಾಸವನ್ನು ಮಾಡಿಸಬೇಕು. ಆಗ ಬ್ರಾಹ್ಮಣೋತ್ತಮರಿಂದ ಋಗಾದಿ ೪ ವೇದಗಳನ್ನು ಚೆನ್ನಾಗಿ ಪಾರಾಯಣ ಮಾಡಿಸಬೇಕು. ||೮೯|| ಪೂರ್ವಾದಿ ೪ ದಿಕ್ಕುಗಳ ೪ ದ್ವಾರಗಳಲ್ಲಿ ಒಂದೊಂದು ದ್ವಾರದಲ್ಲಿ ೨,೨, ಬ್ರಾಹ್ಮಣರು ಅಂದರೆ ಪೂರ್ವದಲ್ಲಿ ಋಕ್ ಶಾಖಿಗಳು ೨, ದಕ್ಷಿಣದಲ್ಲಿ ಋಜುರ್ವೇದಿಗಳು ೨, ಪಶ್ಚಿಮದಲ್ಲಿ ಸಾಮವೇದಿಗಳು ೨, ಉತ್ತರದಲ್ಲಿ ಅಥರ್ವಣವೇದಿಗಳು ೨, ಹೀಗೆ ೮ ಬ್ರಾಹ್ಮಣರು ಇಬ್ಬರಿಬ್ಬರು ಸಿಗದಿದ್ದರೆ ಒಬ್ಬೊಬ್ಬರಿಂದ ಋಗಾದಿವೇದಗಳಿಗೆ ಪಾರಾಯಣವನ್ನು ಮಾಡಿಸಬೇಕು. ಹೀಗೆ ವೇದಮಂತ್ರ ಪುರುಷಸೂಕ್ತ ಮೊದಲಾದವುಗಳಿಗಾಗಿ ೧೦ ಮಂದಿ ಬ್ರಾಹ್ಮಣರಿಗೆ ಕಡಿಮೆಯಾಗದಂತೆ ಪಾರಾಯಣ ಮಾಡಿಸಬೇಕು. ೧೦ ಮಂದಿ ಬ್ರಾಹ್ಮಣರು ಯೋಗ್ಯರೂ ದೊರೆಯದಿದ್ದರೆ ಎಷ್ಟು ಮಂದಿ ಯೋಗ್ಯರು ದೊರೆಯುತ್ತಾರೋ, ಅಷ್ಟು ಮಂದಿ ಬ್ರಾಹ್ಮಣರಿಂದಲೇ ಪಾರಾಯಣ ಮಾಡಿಸಬೇಕು. ಬಹುಮಂದಿ ದೊರೆತರೂ ದಕ್ಷಿಣೆ ಕೊಡಲಿಕ್ಕೆ ಶಕ್ತಿಯಿಲ್ಲವಾದರೆ ತನಗೆ ಶಕ್ತ್ಯನುಸಾರವಾಗಿಯೇ ಪಾರಾಯಣ ಮಾಡಿಸಬೇಕು. ವೇದ ಪಾರಾಯಣ ಮಾಡತಕ್ಕ ಬ್ರಾಹ್ಮಣರೆಲ್ಲರೂ ವಿಷ್ಣುಭಕ್ತರೇ ಆಗಿರಬೇಕು. ||೯೦||

ಅವ || ಪ್ರತಿಷ್ಠೆಗೆ ಅಂಗಭೂತವಾದ ಹೋಮ ಮಾಡುವುದಕ್ಕಾಗಿ ಕುಂಡ ನಿರ್ಮಾಣ ಪ್ರಕಾರವನ್ನು ಹೇಳಿ ಹೋಮ ವಿಧಾನವನ್ನು ಹೇಳುತ್ತಾರೆ.

**ಮೂ|| ತ್ರಯೋದಶಾತ್ರ ಕುಂಡಾನಿ ಪರಿತಃ ಕಾರಯೇದ್ಬುಧಃ|**
**ಉಕ್ತಲಕ್ಷಣಯುಕ್ತಾನಿ ಪ್ರಧಾನಂ ತ್ವಗ್ನಿಕೋಣಕೇ||** **||೯೧||**

**ಸಾಕ್ಷಾತ್ತು ಕೋಣಕಾದ್ಧಸ್ತಮಾತ್ರಮಂತರತಃ ಸುಧೀಃ |**
**ಅಜ್ಯಾಹುತೀಸ್ತೇಷು ಕುರ್ಯಾತ್ಪ್ರತ್ಯೇಕಂ ಲಕ್ಷಸಂಖ್ಯಕಂ||** **||೯೨||**

**ಪ್ರತ್ಯೇಕಮಯುತಂ ವಾಽಪಿ ಪ್ರಧಾನೇ ಲಕ್ಷಸಂಖ್ಯಕಂ |**
**ಅರ್ಧಂ ತದರ್ಧಮಥವಾ ಮೂಲಮಂತ್ರೇಣ ಮಂತ್ರವಿತ್||** **||೯೩||**

**ಪಂಚವಿಂಶತಿತತ್ವಾರ್ಥೇ ಪ್ರಧಾನೇ ಜುಹುಯಾತ್ಸುರಃ |**
**ಪ್ರತ್ಯೇಕಂ ತು ಸಹಸ್ರಂ ವಾ ಪ್ರತ್ಯೇಕಂ ಶತಮೇವ ವಾ||** **||೯೪||**

**ಶತಂ ಪುರುಷಸೂಕ್ತೇನ ಗಾಯತ್ರ್ಯಾ ಚ ಸಹಸ್ರಕಂ |**
**ಕೃತ್ವಾ ಜಲಾಧಿವಾಸಂ ಚ ಪೂರ್ವಂ ವಾ ಪಂಚಗವ್ಯತಃ||** **||೯೫||**

ಅ|| ಮಂಟಪದಲ್ಲಿ ಪೂರ್ವಾದಿ ೪ ದಿಕ್ಕುಗಳಲ್ಲಿ ಒಂದೊಂದು ಕುಂಡ, ಆಗ್ನೇಯ ಕೋಣದಲ್ಲಿ ಪ್ರಧಾನ ಕುಂಡ, ೫ ಕುಂಡಗಳಿಗಿಂತ ಹೊರಗೆ ಸುತ್ತಲೂ ೮ ದಿಕ್ಕುಗಳಲ್ಲಿ ಒಂದೊಂದು ಕುಂಡ, ಹೀಗೆ ೧೩

ಕುಂಡಗಳನ್ನು ೨ನೇ ಅಧ್ಯಾಯದಲ್ಲಿ ಹೇಳಿದ ಲಕ್ಷಣವತ್ತಾಗಿ ಜ್ಞಾನಿಯು ಮಾಡಿಸಬೇಕು. ||೯೧|| ಅಗ್ನೇಯ ಕೋಣದಲ್ಲಿರುವ ಕುಂಡದಿಂದ ೨೪ ಅಂಗುಲ ದೂರದಲ್ಲಿ ಅಗ್ನೇಯ ಕೋಣದಲ್ಲಿಯೇ ಪ್ರಧಾನ ಕುಂಡವನ್ನು ಮಾಡಿಸಬೇಕು. ಅ ೧೩ ಕುಂಡಗಳಲ್ಲಿ ಪ್ರತ್ಯೇಕ ಪ್ರತ್ಯೇಕ ಒಂದೊಂದು ಲಕ್ಷ್ಯ, ಅಥವಾ ೧೦ ಸಹಸ್ರ, ಅಜ್ಯಾಹುತಿಯನ್ನು ಕೊಡಬೇಕು. ಪ್ರಧಾನ ಕುಂಡದಲ್ಲಿ ಮಾತ್ರ ಲಕ್ಷ ಹೋಮ ಮಾಡಬೇಕು. ಪ್ರಧಾನಕುಂಡದಲ್ಲಿ ಲಕ್ಷಹೋಮ ಮಾಡಲಿಕ್ಕೆ ದ್ರವ್ಯಾದಿಗಳ ಅನುಕೂಲ್ಯವಿಲ್ಲವಾದರೆ ೫೦ ಸಹಸ್ರ ಅಥವಾ ೨೫ ಸಹಸ್ರ ಆಜ್ಯಾಹುತಿಗಳನ್ನು ಮಂತ್ರಾಭಿಜ್ಞನು ವಿಧ್ಯುಕ್ತ ಪ್ರಕಾರ ನಾರಾಯಣಾಷ್ಟಾಕ್ಷರಮಂತ್ರದಿಂದಲೇ ಕೊಡಬೇಕು. ||೯೨|| ೯೩|| ಮೂಲಮಂತ್ರದಿಂದ ಹೋಮಿಸುವುದಕ್ಕಿಂತ ಮೊದಲೇ ೨೫ ತತ್ತ್ವಾಭಿಮಾನಿಗಳ ಒಬ್ಬೊಬ್ಬರ ಉದ್ದಿಶ್ಯ ಪ್ರಧಾನ ಕುಂಡದಲ್ಲಿ ಹೋಮಿಸಬೇಕು. ತಿರುಗಿ ಮೂಲಮಂತ್ರದಿಂದ ಹೋಮಿಸಿದ ಮೇಲೆ ೨೫ ತತ್ತ್ವಾಭಿಮಾನಿ ದೇವತೆಗಳ ಪ್ರೀತಿಗಾಗಿ ಪ್ರತ್ಯೇಕ ಪ್ರತ್ಯೇಕ ಆವಾವ ಮಂತ್ರಗಳಿಂದ ಪ್ರಧಾನ ಕುಂಡದಲ್ಲಿಯೇ ೧೦೦೦ ಆವೃತ್ತಿ ಅಥವಾ ೧೦೦ ಆವೃತ್ತಿ ಮತ್ತು ಪುರುಷ ಸೂಕ್ತದಿಂದ ೧೦೦ ಸಲ, ಗಾಯತ್ರಿಯಿಂದ ೧೦೦೦ ಆವೃತ್ತಿ ಹೋಮ ಮಾಡಬೇಕು. ಪ್ರತಿಮೆಗೆ ಪಂಚಗವ್ಯಾಧಿವಾಸದಿಂದ ಮೊದಲು ಅಥವಾ ಮೇಲೆ ಜಲಾಧಿವಾಸವನ್ನು ಮಾಡಿಯೇ ಕುಂಡಗಳಲ್ಲಿ ಅಜ್ಯಾಹುತಿಯನ್ನು ಕೊಡಬೇಕು. ||೯೪-೯೫ || ||೯೧-೯೫||

ಅವ || ಅಭಿಷೇಕಕ್ಕಾಗಿ ಕಲಶ ಸ್ಥಾಪನವನ್ನು ಹೇಳಲಿಕ್ಕೆ ಅದಕ್ಕೆ ಅವಶ್ಯಕವಾದ ಪ್ರಮೇಯವನ್ನು ಹೇಳುತ್ತಾರೆ.

ಮೂ|| ಚಕ್ರಾಬ್ಜಂ ಭದ್ರಕಂ ವಾಽಪಿ ಮಂಟಪೇ ಮಂಡಲಂ ಶುಭಂ |
ಪದ್ಮಂ ವೃತ್ತತ್ರಯಂ ಚಕ್ರಂ ರಾಶಯೋ ವೀಥಿಕಾಸ್ತಥಾ|| ||೯೬||

ಶೋಭೋಪಶೋಭಿಕಾಶ್ಚೈವ ಚಕ್ರಾಬ್ಜಸ್ಯ ತು ಲಕ್ಷಣಂ |
ಚತುರಸ್ರಂ ವಿನಾ ಚಕ್ರಂ ವಿಶೇಷೋ ಭದ್ರಕೇ ಸ್ಮೃತಃ|| ||೯೭||

ಸಹಸ್ರಮರ್ಧಂ ಪಾದಂ ವಾ ಕಲಶಾಂಸ್ತತ್ರ ಪೂರಯೇತ್ |
ಶತಂ ತದರ್ಧಂ ಪಾದಂ ವಾ ವಿತ್ತಾಭಾವೇ ನಿಗದ್ಯತೇ|| ||೯೮||

ಕ್ವಾಥೇನ ಕ್ಷೀರಿವೃಕ್ಷಾಣಾಂ ತಥಾ ಪಂಚಾಮೃತೈರಪಿ |
ಪಂಚಗವ್ಯೇನ ಶುದ್ಧೇನ ಜಲೇನ ಚ ಪೃಥಕ್ ಪೃಥಕ್|| ||೯೯||

ಪೂರಯೇತ್ಕಲಶಾನ್ಮಧ್ಯಂ ಶುದ್ಧೋದೇನೈವ ಪೂರಯೇತ್ |
ಬ್ರಾಹ್ಮಸ್ಯೈವ ಚತುರ್ದಿಕ್ಷು ಗಂಧೋದಾನಾಂ ಚತುಷ್ಟಯಂ|| ||೧೦೦||

ಚತುರ್ದಲಶ್ವೇತಪದ್ಮಚತುಷ್ಕೇ ಮಂಡಲಸ್ಥಿತೇ |
ಪೂರ್ವಾದಿಕ್ರಮಯೋಗೇನ ರಸ ಕ್ವಾಥಶುಭೋದಕಾನ್|| ||೧೦೧||

ಗಂಧಾಂಶ್ಚ ಸ್ಥಾಪಯೇತ್ಪಂಚಗವ್ಯಂ ಶುದ್ಧಾಂತರೇ ನ್ಯಸೇತ್ |
ಪೃಥಕ್ಚತುರ್ದಲಂ ಪದ್ಮಂ ರಕ್ತಂ ಕೃತ್ವಾಽಲ್ಪಕಂ ಸುಧೀಃ|| ||೧೦೨||

ಪಂಚಾಶತ್ತ್ವೇತು ಗಂಧೋದಂ ಸರ್ವಮಧ್ಯೇ ನಿಧಾಪಯೇತ್ |
ಬ್ರಾಹ್ಮಸ್ಯ ಪುರುತಸ್ತ್ವೇಕಂ ಸಾರ್ವಂ ಸಂಸ್ಥಾಪಯೇದ್ಬೃಹತ್|| ||೧೦೩||

ಅಷ್ಟದಿಕ್ಷ್ವಷ್ಟಪದ್ಮೇಷು ಪಂಚಕಂ ಪಂಚಕಂನ್ಯಸೇತ್ |
ಅನೇನ ಕ್ರಮಯೋಗೇನ ಕಲಶಾ ಅಖಿಲಾ ಅಪಿ|| ||೧೦೪||

ತತ್ರದ್ರವ್ಯಮಯಾಸ್ತತ್ರ ತತ್ರ ಸ್ಥಾಪ್ಯಾಸ್ತು ಬಾಹ್ಯತಃ ।
ತದ್ವೈವಾಂಕುರಪಾತ್ರಾಣಿ ಪರಿತಸ್ತತ್ರ ವಿನ್ಯಸೇತ್॥ ॥೧೦೫॥

ಕುಶೋದಕಂ ಚ ಕಾರ್ಪೂರಂ ಕೌಂಕುಮಂ ಚಾಂದನಂ ತಥಾ ।
ತುಹಿನೋದಂ ಹ್ರೈರಿಬೇರಮೌಶೀರಂ ಕೋಷ್ಮಸಾರ್ಷಪಂ॥ ॥೧೦೬॥

ನದೀಸಂಗಮಜಂ ಚೈವ ತಾಟಾಕಂ ಕೌಪ್ಯಮೇವ ಚ।
ನಿರ್ಝರೋದಮಿತಿಪ್ರೋಕ್ತಾ ವಿಶೇಷಕಲಶಾಸ್ತ್ವಿಮೇ॥ ॥೧೦೭॥

ಶುದ್ಧೋದದ್ವಯಮಂಪ್ಯೇತನ್ಮಹಾತೀರ್ಥಸಮುದ್ಭವಂ ।
ಚತುರ್ವಿಂಶತಿ ಮೂರ್ತೀನಾಂ ವರ್ಣಮೂರ್ತೀಸ್ತಥಾಽಪರಾಃ॥ ॥೧೦೮॥

ಆವಾಹಯೇಚ್ಛತತ್ವೇ ತು ಕ್ರಮವ್ಯುತ್ಕ್ರಮತಸ್ತು ತಾಃ ।
ವರ್ಣಮೂರ್ತೀಃ ಪುನಶ್ಚೈವ ದ್ವಿಚತುರ್ವಾರಮೇವ ಚ॥ ॥೧೦೯॥

ಸಹಸ್ರಕಲಶಾದಿತ್ವೇ ಜಪೇನ್ಮಂತ್ರಾಂಶ್ಚ ಭಕ್ತಿತಃ॥ ॥೧೧೦॥

ಅ॥ ಪ್ರತಿಷ್ಠಾ ಮಂಟಪದಲ್ಲಿ ಚಕ್ರಾಬ್ಜ, ಅಥವಾ ಭದ್ರಕ ಎಂಬ ಅಂದವಾದ ಮಂಡಲವನ್ನು ಬರೆಯಬೇಕು. ಮಧ್ಯದಲ್ಲಿ ಪದ್ಮ, ಅದರ ಸುತ್ತಲೂ ವರ್ತುಲಾಕಾರವಾದ ೩ ರೇಖೆಗಳು, ಅದರ ಹೊರಗೆ ಚಕ್ರ, ಅದರ ಸುತ್ತಲೂ ಮೇಷಾದಿರಾಶಿಗಳು ವೀಥಿಗಳು, ॥೯೬॥ ಶೋಭೆ ಉಪಶೋಭಗಳು, ದ್ವಾರಗಳು (ಪಾದಪೀಠಗಳು) ಇವು ಚಕ್ರಾಬ್ಜ ಮಂಡಲದ ಲಕ್ಷಣವು. ಆದಿಯಲ್ಲಿ ಪದ್ಮವನ್ನು ಬರೆದು ಅದರ ಸುತ್ತಲೂ, ವೃತ್ತ ರೇಖೆಗಳ ಬದಲು ಚತುರಸ್ರ ೩ ರೇಖೆಗಳನ್ನು ಬರೆದು ಚಕ್ರವನ್ನು ಬರೆಯದೆ ರಾಶ್ಯಾದಿಗಳನ್ನು ಬರೆದರೆ ಭದ್ರಕವೆನಿಸುತ್ತದೆ ॥೯೭॥ ಆ ಮಂಡಲದಲ್ಲಿ ೧೦೦೦, ಅಥವಾ ೫೦೦ ಅಥವಾ ೨೫೦, ದ್ರವ್ಯಾದಿ ಸಂಪತ್ತು ಇಲ್ಲವಾದರೆ ೧೦೦, ೫೦, ೨೫, ಕಲಶವನ್ನಾದರೂ ಸ್ಥಾಪಿಸಬೇಕು ॥ ೯೮॥ ಗೋಳಿ, ಅಶ್ವತ್ಥ ಮೊದಲಾದ ವೃಕ್ಷಗಳ ತೊಗಟೆಯ ರಸದಿಂದ ಮಿಶ್ರಿತವಾದ ಕಷಾಯದಿಂದ ೧ನೇ ಕಲಶವನ್ನೂ, ಪಂಚಾಮೃತಗಳಿಂದ ೨ನೇ ಕಲಶವನ್ನೂ, ಪಂಚಗವ್ಯದಿಂದ ೩ನೇ ಕಲಶವನ್ನೂ ಶುದ್ಧ ಜಲದಿಂದ ೪ನೇ ಕಲಶವನ್ನೂ ಹೀಗೆ ಪ್ರತ್ಯೇಕ ಪ್ರತ್ಯೇಕ ॥೯೯॥ ಬದಿಯ ೪ ಕಲಶಗಳನ್ನು ತುಂಬಿಸಿ ಮಧ್ಯ ಕಲಶವನ್ನು ಶುದ್ಧೋದಕದಿಂದಲೇ ತುಂಬಿಸಬೇಕು. ಬ್ರಹ್ಮನಿಂದ ಅಭಿಮನ್ಯುಮಾನವಾದ ಆ ಬ್ರಾಹ್ಮಕಲಶದ ಸುತ್ತಲೂ ೪ ದಿಕ್ಕುಗಳಲ್ಲಿ ಸ್ಥಾಪಿಸಿದ ೪ ಕಲಶಗಳನ್ನು ಗಂಧೋದಕದಿಂದ ತುಂಬಿಸಬೇಕು. ॥೧೦೦॥ (ಅಂದರೆ ೨೫ ಕಲಶಗಳೆಂಬ ಪಕ್ಷದಲ್ಲಿ ಆದಿಯಲ್ಲಿ ಚಕ್ರಾಬ್ಜಾದಿ ಮಂಡಲವನ್ನು ಬರೆದು ಆ ಮಂಡಲದ ಮಧ್ಯದಲ್ಲಿ ಶುದ್ಧೋದಕದಿಂದ ಪೂರ್ಣವಾದ ಬ್ರಾಹ್ಮ ಕಲಶವನ್ನೂ, ಅದರ ಪೂರ್ವಾದಿ ೪ ದಿಕ್ಕುಗಳಲ್ಲಿ ಗಂಧೋದಕದಿಂದ ಪೂರ್ಣ ೪ ಕಲಶಗಳನ್ನೂ ಅದರ ಸುತ್ತಲೂ ೪ ದಿಕ್ಕುಗಳಲ್ಲಿ) ಚಕ್ರಾಬ್ಜಾದಿ ಮಂಡಲಗಳ ವೀಥಿಗಳಲ್ಲಿ ಶುಭ್ರರಂಗವಲ್ಲಿಯಿಂದ ೪ ದಲಗಳುಳ್ಳ ೪ ಪದ್ಮಗಳನ್ನೂ ಬರೆದು ಪೂರ್ವಭಾಗದಲ್ಲಿರತಕ್ಕ ಪದ್ಮ ಮಧ್ಯದಲ್ಲಿ ೧, ೪ ದಳಗಳಲ್ಲಿ ೪ ಹೀಗೆ ಪಂಚಾಮೃತಗಳಿಂದ ಪೂರ್ಣ ೫ ಕಲಶಗಳನ್ನೂ, ಹೀಗೆ ದಕ್ಷಿಣ ಭಾಗದಲ್ಲಿದ್ದ ಪದ್ಮದಲ್ಲಿದ್ದ ಕ್ಷೀರ ವೃಕ್ಷಗಳ ಕಶಾಯೋಧಕದಿಂದ ಪೂರ್ಣಗಳಾದ ಐದು ಕಲಶಗಳನ್ನು ಪಶ್ಚಿಮದ ಪದ್ಮದಲ್ಲಿ ಶುದ್ಧೋದಕದಿಂದ ಪೂರ್ಣ ೫ ಕಲಶಗಳನ್ನೂ ಉತ್ತರ ಭಾಗದಲ್ಲಿದ್ದ ಪದ್ಮದಲ್ಲಿ ಗಂಧೋದಕದಿಂದ ಪೂರ್ಣ ೫ ಕಲಶಗಳನ್ನೂ ಹೀಗೆ ೨೫ ಕಲಶಗಳನ್ನು ಸ್ಥಾಪಿಸಬೇಕು. ಆದರೆ ಪಶ್ಚಿಮಭಾಗದಲ್ಲಿದ್ದ ಪದ್ಮದ ೪ ದಲಗಳಲ್ಲಿ ೪ ಶುದ್ಧೋದಕ ಕಲಶಗಳನ್ನು ಸ್ಥಾಪಿಸಿ ಆ ೪ ಕಲಶಗಳ ಮಧ್ಯದಲ್ಲಿ ಇನ್ನೊಂದು ಸೂಕ್ಷ್ಮಾಕಾರವಾದ, ಕೆಂಪು ಬಣ್ಣವುಳ್ಳ ಪದ್ಮವನ್ನು ಬರೆದು ಅದರಲ್ಲಿ ಪಂಚಗವ್ಯದಿಂದ ಪೂರ್ಣವಾದ ಕಲಶವನ್ನು ಸ್ಥಾಪಿಸಬೇಕು. ॥೧೦೧-೧೦೨॥ ೫೦ ಕಲಶಗಳನ್ನು ಸ್ಥಾಪಿಸಬೇಕೆಂಬ ಪಕ್ಷದಲ್ಲಿ ಬ್ರಾಹ್ಮಕಲಶದ ಸುತ್ತಲೂ ಇರುವ ೪೦ ಕಲಶಗಳ ಮಧ್ಯದಲ್ಲಿ ಗಂಧೋದಕದಿಂದ ಪೂರ್ಣಗಳಾದ ೮ ಕಲಶಗಳನ್ನು ಸ್ಥಾಪಿಸಬೇಕು. ಬ್ರಾಹ್ಮ ಕಲಶದ ಇದಿರು ರುದ್ರನಿಂದ ಅಥವಾ ಸಮಸ್ತ ದೇವತೆಗಳಿಂದ ಅಭಿಮನ್ಯಮಾನವಾದ ಶಾರ್ವ (ಸಾರ್ವ) ಕಲಶವನ್ನು ಸ್ಥಾಪಿಸಬೇಕು. (ಏವಂಚ ೧, ಬ್ರಾಹ್ಮ ಕಲಶ ೨, ಶಾರ್ವ ಕಲಶ, ಗಳ ಸುತ್ತಲೂ ೮ ಗಂಧೋಪಕದ ಕಲಶಗಳು. ಹೀಗೆ ೧೦ ಕಲಶಗಳು) ॥೧೦೩॥ ಆ ಕಲಶಗಳ ಹೊರಬದಿಯಲ್ಲಿ ೮ ದಿಕ್ಕುಗಳಲ್ಲಿ ೪,೪,

ದಲಗಳುಳ್ಳ, ೮ ಪದ್ಮಗಳನ್ನು ಬರೆದು ಒಂದೊಂದರಲ್ಲಿ ೫,೫ ಕಲಶಗಳನ್ನು ಸ್ಥಾಪಿಸಬೇಕು. (ಅಂದರೆ - ಪೂರ್ವ ಆಗ್ನೇಯ ಪದ್ಮಗಳಲ್ಲಿ ೫,೫ ಪಂಚಾಮೃತ ಕಲಶಗಳೂ, ದಕ್ಷಿಣ ನೈಋತ್ಯ ಪದ್ಮಗಳಲ್ಲಿ ೫,೫ ಕ್ವಾಥ ಕಲಶಗಳೂ ಪಶ್ಚಿಮ, ವಾಯವೀಯ ಪದ್ಮಗಳಲ್ಲಿ ೪,೪, ಶುದ್ಧೋದಕ ಕಲಶಗಳೂ, ಉತ್ತರ ಈಶಾನ್ಯ ಪದ್ಮಗಳಲ್ಲಿ ೫,೫, ಗಂದೋಧಕ ಕಲಶಗಳೂ ಪಶ್ಚಿಮ ದಿಕ್ಕಿನಲ್ಲಿ ರಕ್ತ ಪದ್ಮದಲ್ಲಿ ೨ ಪಂಚಗವ್ಯ ಕಲಶಗಳೂ ಹೀಗೆ ೪೦ ಕಲಶಗಳನ್ನು ಸ್ಥಾಪಿಸಬೇಕು) ಇದೇ ರೀತಿಯಾಗಿ ೧೦೦ ಆರಂಭಿಸಿ ೧೦೦೦ ಪರ್ಯಂತ ಕಲಶಗಳೂ ||೧೦೪|| ಪಂಚಾಮೃತಾದಿ ದ್ರವ್ಯಗಳಿಂದ ಪೂರ್ಣಗಳಾದ ಕಲಶಗಳನ್ನು ಮಂಡಲದ ಸುತ್ತಲೂ ಹಿಂದೆ ಹೇಳಿದ ಕ್ರಮದಂತೆ ಇಡಬೇಕು. ಕಲಶ ಸ್ಥಾಪನ ಕಾಲದಲ್ಲಿಯೇ ಕಲಶಗಳ ಸುತ್ತಲೂ (ದಿಕ್ಕುಗಳಲ್ಲಿ ೨-೨, ವಿದಿಕ್ಕುಗಳಲ್ಲಿ ೧, ೧ ಹೀಗೆ ೧೨) ಪಾಲಿಕಾ, ಪಂಚ ಮುಖ, ಶರಾವ, ಎಂಬ ಅಂಕುರಾರ್ಪಣ ಪಾತ್ರಗಳನ್ನು ಇಡಬೇಕು. ||೧೦೫||

ಸರ್ವಕಲ್ಪದಲ್ಲಿಯೂ ಅತ್ಯಾವಶ್ಯಕವಾದ ವಿಶೇಷ ಕಲಶಗಳನ್ನು ಹೇಳುತ್ತಾರೆ.

೧ ದರ್ಭೆ ಯುಕ್ತ ಜಲ, ೨ ಕರ್ಪೂರ ಮಿಶ್ರಿತ, ೩ ಕುಂಕುಮ ಕುಸುಮೋದಕ, ೪ ಚಂದನ ಮಿಶ್ರಿತ, ೫ ಹಿಮ ನೀರು, ೬ ಮುಡಿವಾಳದ ನೀರು, ೭ ಲವಂಚ ಮಿಶ್ರಿತ ನೀರು, ೮ ಕಂಕುಷ್ಠ ಸಾಸಿವೆ ಮಿಶ್ರಿತ ನೀರು, ||೧೦೬|| ೯ ನದೀ ಸಂಗಮದ ನೀರು, ೧೦ ಸರೋವರದ ನೀರು, ೧೧ ಬಾವಿಯ ನೀರು, ೧೨ ಪ್ರವಾಹದ ನೀರು, ಈ ೧೨ ಕಲಶಗಳನ್ನು ಅಂಕುರ ಪಾತ್ರೆಗಳ ಒಳಗಡೆ ಸುತ್ತಲೂ ಸ್ಥಾಪಿಸಬೇಕು. ||೧೦೭|| ಬ್ರಾಹ್ಮ ಶಾರ್ವ ಕಲಶಗಳಲ್ಲಿ ಮಹಾ ತೀರ್ಥಗಳಿಂದ ತಂದ ಶುದ್ಧೋದಕವನ್ನು ತುಂಬಿಸಬೇಕು. ೨೫ ಕಲಶಗಳೆಂಬ ಪಕ್ಷದಲ್ಲಿ ಬ್ರಾಹ್ಮ ಕಲಶದಲ್ಲಿ ಮೂಲ ಮೂರ್ತಿಯನ್ನು ಬೇರೆ ೨೪ ಕಲಶಗಳಲ್ಲಿ ಕೇಶವ ಮೊದಲಾದ ೨೪ ಮೂರ್ತಿಗಳನ್ನು, ೫೦ ಕಲಶಗಳೆಂಬ ಪಕ್ಷದಲ್ಲಿ ಅಜಾದಿ ೫೦ ಕಲಶಗಳಲ್ಲಿ ಅಜಾದಿಳಾಳುಕ ಪರಿಯಂತ ೫೦ ಭಗವನ್ಮೂರ್ತಿಗಳನ್ನೂ ||೧೦೮|| ೧೦೦ ಕಲಶಗಳೆಂಬ ಪಕ್ಷದಲ್ಲಿ ಕ್ಷಕಾರ ವಾಚ್ಯ ನರಸಿಂಹ ಮೂರ್ತಿ, ಅಜಾದಿ ೫೦ ಮೂರ್ತಿ, ಹೀಗೆ ೫೧, ಕೇಶವಾದಿ ೨೪, ಆತ್ಮಾದಿ ೪, ವಾಸುದೇವಾದಿ ೪, ವಿಶ್ವಾದಿ ೪, ಮತ್ಸ್ಯಾದಿ ೧೩, ಹೀಗೆ ೧೦೦ ಮೂರ್ತಿಗಳನ್ನೂ, ೨೫೦ ಎಂಬ ಪಕ್ಷದಲ್ಲಿ ಆಜಾದಿ ಶಿಂಶುಮಾರಾಂತ ೧೦೦ ಮೂರ್ತಿಗಳನ್ನು ಕ್ರಮವಾಗಿಯೂ ಪೂರ್ವ ಕ್ರಮ ವಿಪರೀತವಾಗಿ ಶಿಂಶುಮಾರಾದಿ ಆಜಾದಿ ೧೦೦ ಮೂರ್ತಿಗಳನ್ನೂ, ಆ ಮೇಲೆ ೫೦ ಕಲಶಗಳಲ್ಲಿ ಆಜಾದಿ ೫೦ ವರ್ಣ ದೇವತೆಗಳನ್ನೂ, ಹೀಗೆ ೨೫೦ ವರ್ಣ ದೇವತೆಗಳನ್ನೂ, ೫೦೦ ಕಲಶಗಳೆಂಬ ಪಕ್ಷದಲ್ಲಿ ಹಿಂದೆ ಹೇಳಿದ ೨೫೦ ದೇವತೆಗಳನ್ನೇ ೨ ಆವರ್ತಿ ಮತ್ತು ೧೦೦೦ ಕಲಶಗಳೆಂಬ ಪಕ್ಷದಲ್ಲಿ ೪ ಆವರ್ತಿ ಹಿಂದೆ ಹೇಳಿದ ದೇವತೆಗಳನ್ನೇ ಆವಾಹಿಸಬೇಕು. ಹೀಗೆ ಕಲಶಗಳಲ್ಲಿ ದೇವತೆಗಳನ್ನು ಆವಾಹಿಸಿ ಆ ಕಲಶಗಳನ್ನು ಕೈಯಿಂದ ಮುಟ್ಟಿಕೊಂಡು ಭಕ್ತಿಪೂರ್ವಕವಾಗಿ ಮಾತೃಕಾಮಂತ್ರ ಪ್ರಣವಾದಿ ಮಂತ್ರಗಳನ್ನು ಜಪಿಸಬೇಕು ||೧೦೯|| ||೯೬-೧೦೯||

**ಮೂ || ತತಸ್ತು ಪಂಚಘೋಷೈಶ್ಚ ವೇದಘೋಷೈಸ್ತಥಾऽऽದರಾತ್ ||೧೧೦||**

**ಆನೀಯ ಪ್ರತಿಮಾಂ ಸ್ನಾನಂ ಕಾರಯೇತ್ಪ್ರಣವೇನ ತು|**
**ಮಂತ್ರೈಃ ಪುರುಷಸೂಕ್ತಾಂತ್ಯೈರ್ವಿಶ್ವತಶ್ಚಕ್ಷುಷಾ ತಥಾ|| ||೧೧೧||**

**ಪುನಶ್ಚಾಷ್ಟಾಕ್ಷರೇಣೈವ ಪ್ರಣವೇನೈವ ಭಕ್ತಿತಃ |**
**ಸ್ನಾಪಯಿತ್ವಾ ಗಂಧಜಲೈರ್ಗಂಧಪುಷ್ಪಾದಿಭಿಃ ಪುನಃ|| ||೧೧೨||**

**ಅಲಂಕೃತ್ಯ ಸ್ಥಾಪಯೇತ್ತು ಪ್ರತಿಮಾಂ ಪ್ರಣವೇನ ತು |**
**ಜಪೇದಷ್ಟಾಕ್ಷರಂ ಮಂತ್ರಂ ತತ್ತನ್ಮೂರ್ತಿಮನುಂ ತಥಾ|| ||೧೧೩||**

**ಅಷ್ಟೋತ್ತರಶತಂ ಮಂತ್ರೀ ಧ್ಯಾಯೇತ್ತೇಜೋಮಯೀಂ ಪುನಃ |**
**ಪ್ರತಿಮಾಂ ಪ್ರತಿಮಾಂತಸ್ಥಾಂ ತನ್ಮಧ್ಯೇ ಪರಮಂ ವಪುಃ|| ||೧೧೪||**

ಚಿದಾನಂದರಸಂ ಸರ್ವಗುಣಸಂಪೂರ್ಣಮುತ್ತಮಂ ।
ಪಂಚವಿಂಶತಿತತ್ವಾನಾಂ ದೇವತಾಸ್ತದನಂತರಂ॥ ||೧೧೫||

ಸ್ಥಾಪಯೇತ್ಪ್ರತಿಮಾಮಧ್ಯೇ ಪರಿತಃ ಕೇಶವಸ್ಯ ತು।
ತತ್ರಾತ್ಯಾಹಾರ್ಷಸೂಕ್ತಂ ಚ ಘರ್ಮಸೂಕ್ತಂ ಚ ವೈಷ್ಣವಂ॥ ||೧೧೬||

ಸೂಕ್ತಂ ಚ ವಿಶ್ವಕರ್ಮೀಯಂ ಪೌರುಷಂ ಸೂಕ್ತಮೇವ ಚ।
ಜಪ್ತ್ವಾ ಚೈವ ನಿಜಂ ಮಂತ್ರಂ ಪುನರಷ್ಟಾಕ್ಷರಂ ಸುಧೀಃ॥ ||೧೧೭||

ಪ್ರಣವಂ ಚ ಜಪೇದ್ವಿಷ್ಣುಂ ಧ್ಯಾಯನ್ನುತ್ತಮರೂಪಿಣಂ ।
ತತಸ್ತು ಕಲಶೈರ್ಬಾಹ್ಯಕ್ರಮೇಣೈವ ಜನಾರ್ದನಂ॥ ||೧೧೮||

ಸ್ನಾಪಯೇದುಕ್ತಮಂತ್ರೈಸ್ತು ಮಧ್ಯಮಂ ಪ್ರಣವೇನ ತು।
ಅಷ್ಟಾರ್ಣೇನ ನಿಜೇನಾಪಿ ತಥಾ ಪುರುಷಸೂಕ್ತತಃ॥ ||೧೧೯||

ಆವಾಹನಂ ಚ ಸ್ನಪನಂ ಪಂಚಗವ್ಯೇನ ಮಧ್ಯವತ್ ।
ಪೂರ್ವಾದ್ಯುತ್ತರಪರ್ಯಂತಃ ಕಲಶಕ್ರಮ ಉಚ್ಯತೇ॥ ||೧೨೦||

ಅ|| ಕಲಶ ಪೂಜೆ ಮಾಡಿದ ಮೇಲೆ ವೇದಘೋಷ, ಪಂಚವಾದ್ಯಘೋಷಗಳು ಆಗುತ್ತಿರಲು ಭಕ್ತಿಪೂರ್ವಕವಾಗಿ ಪ್ರತಿಮೆಯನ್ನು ಸ್ನಾನಮಂಟಪಕ್ಕೆ ತಂದು ಪ್ರಣವ ಮಂತ್ರ, ಪುರುಷಸೂಕ್ತ ಮಂತ್ರ ಮೊದಲಾದ ಮಂತ್ರಗಳಿಂದಲೂ "ವಿಶ್ವತಶ್ಚಕ್ಷುರುತ ವಿಶ್ವತೋಮುಖಃ " ಎಂಬ ಮಂತ್ರದಿಂದಲೂ ಪ್ರತಿಮೆಗೆ ಪಂಚಗವ್ಯೋದಕದಿಂದ ಸ್ನಾನ ಮಾಡಿಸಬೇಕು. ||೧೧೦-೧೧೧|| ಪುನಃ ನಾರಾಯಣಾಷ್ಟಾಕ್ಷರ ಪ್ರಣವ ಮಂತ್ರಗಳಿಂದ ಭಕ್ತಿಪೂರ್ವಕವಾಗಿ ವಿಶೇಷ ಕಲಶಗಳಲ್ಲಿರತಕ್ಕ ಗಂಧ ಜಲಗಳಿಂದ ಅಭಿಷೇಕ ಮಾಡಿ ಗಂಧ ಪುಷ್ಪಾದಿಗಳಿಂದ ಪ್ರತಿಮೆಯನ್ನಲಂಕರಿಸಿ ಪ್ರಣವ ಮಂತ್ರದಿಂದ ಗರ್ಭಗೃಹದಲ್ಲಿರತಕ್ಕ ಪಿಂಡಿಕಾದಲ್ಲಿ ಪ್ರತಿಷ್ಠಿಸಬೇಕು. ||೧೧೨|| ಆ ಮೇಲೆ ಪ್ರತಿಮೆಯನ್ನು ಮುಟ್ಟಿಕೊಂಡು ಅಷ್ಟಾಕ್ಷರ ಮಂತ್ರವನ್ನೂ, ಪ್ರತಿಷ್ಠಿಸಲ್ಪಡತಕ್ಕ ಆಯಾಯದೇವತಾ ಮಂತ್ರವನ್ನೂ ಮಂತ್ರಾರ್ಥಜ್ಞಾನವುಳ್ಳ, ಮಂತ್ರ ಸಿದ್ಧಿಯುಳ್ಳ ಪುರುಷನು ೧೦೮ ಸಲ ಜಪಿಸಬೇಕು. ಅನಂತರ ಪ್ರತಿಮೆಯೊಳಗೆ ಸನ್ನಿಹಿತವಾಗಿರುವ ತೇಜೋಮಯವಾದ ಮುಖ್ಯ ವಾಯು ಪ್ರತಿಮಾ, ಅದರೊಳಗೆ ಲಕ್ಷ್ಮೀ ರೂಪಪ್ರತಿಮಾ, ಅದರ ಮಧ್ಯದಲ್ಲಿ ಚಿದಾನಂದಾತ್ಮಕವಾದ ಸರ್ವಗುಣ ಪರಿಪೂರ್ಣವಾದ ನಿರತಿಶಯೋತ್ತಮವಾದ ಶ್ರೀ ಪರಮಾತ್ಮನ ದಿವ್ಯರೂಪವನ್ನು ಧ್ಯಾನಿಸಬೇಕು. ||೧೧೩||೧೧೪|| ಆ ಮೇಲೆ ಪ್ರತಿಮೆಯ ಮಧ್ಯದಲ್ಲಿ ಸನ್ನಿಹಿತನಾದ ಶ್ರೀ ಹರಿಯ ಸುತ್ತಲೂ ೨೫ ತತ್ವಾಭಿಮಾನಿ ದೇವತೆಗಳನ್ನೂ ೧೧ ತತ್ವಾಭಿಮಾನಿ ದೇವತೆಗಳನ್ನೂ ಆವಾಹನ ಮಾಡಬೇಕು ||೧೧೫|| ಪ್ರತಿಮೆಯಲ್ಲಿ ವಿಶೇಷವಾಗಿ ಭಗವತ್ಸನ್ನಿಧಾನವು ಸಿದ್ಧಿಸುವುದಕ್ಕಾಗಿ ಪ್ರತಿಮೆಯ ಹೃದಯವನ್ನು ಮುಟ್ಟಿಕೊಂಡು "ಅತ್ಯಾಹಾರ್ಷಮಂಥರೇಧಿ" ಎಂಬ ಅತ್ಯಾಹಾರ್ಷ ಸೂಕ್ತ, "ಘರ್ಮಾ ಸಮಂತಾ ತ್ರಿವೃತಂ" ಎಂಬ ಘರ್ಮಸೂಕ್ತ, "ವಿಷ್ಣೋರ್ನುಕಂ ವೀರ್ಯಾಣಿ" ಎಂಬ ವಿಷ್ಣು ಸೂಕ್ತ, "ವಿಶ್ವತಶ್ಚಕ್ಷುರುತ" ಎಂಬ ವಿಶ್ವಕರ್ಮ ಸೂಕ್ತ, ಸಹಸ್ರಶೀರ್ಷಾ ಪುರುಷಃ" ಎಂಬ ಪುರುಷ ಸೂಕ್ತ, ಇವುಗಳನ್ನು ಜಪಿಸಿ ಸರ್ವೋತ್ತಮನಾದ ಶ್ರೀ ವಿಷ್ಣುವನ್ನು ಧ್ಯಾನಿಸಿಕೊಂಡು ಆಯಾಯಭಗವನ್ಮೂರ್ತಿಗಳ ಮಂತ್ರ, ನಾರಾಯಣಾಷ್ಟಾಕ್ಷರ, ಪ್ರಣವ ಮಂತ್ರಗಳನ್ನು ಜಪಿಸಬೇಕು. ||೧೧೬||೧೧೭|| ಪೀಠದಲ್ಲಿ ಪ್ರತಿಮೆಯನ್ನು ಇಟ್ಟು ಜಪಿಸಿದ ಮೇಲೆ ಆಯಿಯಲ್ಲಿ ಹೊರ ಪಙ್ತ್ತಿಯಲ್ಲಿರತಕ್ಕ ಕಲಶ, ಆ ಮೇಲೆ ಅದರದರೊಳ ಪಙ್ತ್ತಿಯ ಕಲಶ, ಈ ಕ್ರಮವಾಗಿ ೧೦೦೦, ೫೦೦ ಮೊದಲಾದ ಕಲಶಗಳಿಂದ ಹಿಂದೆ ಹೇಳಿದ ಅತ್ಯಾಹಾರ್ಷ ಮೊದಲಾದ ಮಂತ್ರಗಳನ್ನುಚ್ಚರಿಸುತ್ತಾ ಶ್ರೀವಿಷ್ಣು ಪ್ರತಿಮೆಗೆ ಅಭಿಷೇಕ ಮಾಡಬೇಕು. ಮಧ್ಯದ ಬ್ರಾಹ್ಮ ಕಲಶದಿಂದ ಪ್ರಣವ, ಅಷ್ಟಾಕ್ಷರ, ಆಯಾಯ ಮೂರ್ತಿಮಂತ್ರ, ಪುರುಷಸೂಕ್ತ ಈ ಮಂತ್ರಗಳಿಂದಲೇ ಅಭಿಷೇಚಿಸಬೇಕು. ಮಧ್ಯದ ಬ್ರಾಹ್ಮ ಕಲಶದಲ್ಲಿ ಯಾವ ದೇವತೆಗೆ ಆವಾಹನವೋ ಪಂಚಗವ್ಯ ಕಲಶದಲ್ಲಿಯೂ ಆ ದೇವತೆಯನ್ನೇ ಆವಾಹಿಸಬೇಕು. ಬ್ರಾಹ್ಮ ಕಲಶದಿಂದ ಯಾವ ಮಂತ್ರಗಳನ್ನುಚ್ಚರಿಸುತ್ತಾ ಅಭಿಷೇಚಿಸಬೇಕೋ ಆ ಪ್ರಣವಾದಿ ಮಂತ್ರಗಳಿಂದಲೇ

ಪಂಚಗವ್ಯ ಕಲಶದಿಂದಲೂ ಅಭಿಷೇಚಿಸಬೇಕು. (ಏವಂಚ ಬ್ರಾಹ್ಮ ಪಂಚಗವ್ಯಕಲಶ ಈ ಎರಡಕ್ಕೂ ಒಂದೇ ದೇವತೆಯು) ||೧೯|| ಪ್ರತಿ ಪಂಚಕದಲ್ಲಿಯೂ ಪೂರ್ವಭಾಗದಲ್ಲಿದ್ದ ಕಲಶವನ್ನಾರಂಭಿಸಿ ಪ್ರದಕ್ಷಿಣಾಕಾರವಾಗಿ ಉತ್ತರ ದಿಕ್ಕಿನ ಕಲಶಪರ್ಯಂತ ಕಲಶಗಳನ್ನು ಕ್ರಮವಾಗಿ ತೆಗೆದುಕೊಂಡು ಒಂದೊಂದರಿಂದ ಅಭಿಷೇಕ ಮಾಡಬೇಕು. ಕೊನೆಗೆ ಬ್ರಾಹ್ಮಕಲಶದಿಂದ ಅಭಿಷೇಕವು. ||೨೦||
||೧೧-೨೦||

ಮೂ|| ಜಪ್ತ್ವಾ ಪುನಶ್ಚ ತನ್ಮಂತ್ರಾನ್ ಪೂಜಯೇಚ್ಚ ವಿಧಾನತಃ |
ದ್ವಾರಲೋಕಪತಿಭ್ಯಶ್ಚ ಬಲಿಂ ದತ್ವಾ ಯಥಾಕ್ರಮಂ|| ||೨೧||

ವಸ್ತ್ರರತ್ನ ಹಿರಣ್ಯಾದ್ಯೈರಲಂಕೃತ್ಯ ವಿಭೂಷಿತಃ |
ಗುರವೇ ದಕ್ಷಿಣಾಂ ದದ್ಯಾತ್ಕೋಟಿಂ ಲಕ್ಷಂ ಸಹಸ್ರಕಂ|| ||೨೨||

ಶತಮರ್ಧಂ ತದರ್ಧಂ ವಾ ನಿಃಸ್ವೋ ಭಕ್ತ್ಯಾ ಕ್ಷಮಾಪಯೇತ್ |
ತದರ್ಧಮೃತ್ವಿಜಾಂ ಚೈವ ತದರ್ಧಂ ಪಾರಣಾಕೃತಾಂ|| ||೨೩||

ಆ ಶ್ವಭ್ಯ ಆಶ್ವಪಾಕೇಭ್ಯೋದದ್ಯಾದನ್ನಂ ಸಮಸ್ತಶಃ |
ಪುರಸ್ತಾತ್ಪರತ ಶ್ಚೈವ ಸಪ್ತರಾತ್ರಂ ನಿರಂತರಂ|| ||೨೪||

ಸುವರ್ಣವಸ್ತ್ರರತ್ನಾದ್ಯೈರಾಗತಾಭ್ಯಾಗತಾನಪಿ |
ಪೂಜಯೇ ಚ್ಚಕ್ತಿತೊ ಭಕ್ತ್ಯಾ ಪ್ರೀಯತಾಂ ಭಗವಾನಿತಿ|| ||೨೫||

ಗೀತನೃತ್ಯೈಶ್ಚ ವಾದ್ಯೈಶ್ಚ ಪುರಾಣೈರಿತಿಹಾಸಕೈಃ |
ಸ್ತೋತ್ರೈರ್ಮಂಗಲಘೋಷೈಶ್ಚ ವೈದಿಕೈರ್ದಿನಸಪ್ತಕಂ|| ||೨೬||

ನಯೇತ್ತತೋ ಮಹಾರಾಜವಿಭೂತ್ಯಾಽವಬೃಥಂ ಸುಧೀಃ |
ಕಾರಯೇದ್ದೇವದೇವಸ್ಯ ಸ್ವಾಧ್ಯಾಯೈರ್ಗೀತನರ್ತನೈಃ|| ||೨೭||

ಮಹಾನದೀಸಂಗಮೇತು ತೀರ್ಥೇ ಚಾತಿ ಪ್ರಶಸ್ತಕೇ |
ಸ್ನಾಪಯೇತ್ಪೂರ್ವವನ್ಮಂತ್ರೈಃ ಪುಂಸೂಕ್ತಾಂತೈಃ ಸ್ಮರನ್ ಹರಿಂ|| ||೨೮||

ತತಃ ಪೂರ್ವವದಾಗತ್ಯ ಪ್ರವೇಶ್ಯ ಪುರುಷೋತ್ತಮಂ |
ಪೂಜಯಿತ್ವಾ ವಿಧಾನೇನ ದತ್ವಾ ದಾನಾನಿ ಶಕ್ತಿತಃ|| ||೨೯||

ಗುರುಂ ಚ ಭಕ್ತ್ಯಾ ಸಂಪೂಜ್ಯ ಸ್ವೀಕುರ್ಯಾದಾಶಿಷಸ್ತತಃ |
ಶತಪ್ರಸ್ಥಾದನೂನಂ ತು ನೈವೇದ್ಯಂ ಪಾಯಸೋತ್ತರಂ|| ||೩೦||

ದಿನೇಷ್ವೇತೇಷು ದಾತವ್ಯಂ ಸಘೃತಂ ಸಸಿತಾದಿಕಂ |
ಪಶ್ಚಾದಪಿ ಯಥಾಶಕ್ತಿ ಪೂಜಾ ಕಾರ್ಯಾ ಹರೇಃ ಸದಾ|| ||೩೧||

ಅ|| ಕಲಶಾಭಿಷೇಕ ಮಾಡಿದ ಮೇಲೆ, "ಅತ್ವಾಹಾರ್ಷಂ" ಮೊದಲಾದ ಮಂತ್ರಗಳನ್ನು ತಿರುಗಿ ಪಠಿಸಿ ೧ನೇ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಪ್ರತಿಮೆಯನ್ನು ಪೂಜಿಸಬೇಕು. ಆ ಮೇಲೆ ದ್ವಾರಪಾಲಕರಾದ ಜಯವಿಜಯಾದಿಗಳಿಗೂ, ಇಂದ್ರಾದ್ಯಷ್ಟದಿಕ್ಪಾಲಕರಿಗೂ ಕ್ರಮಪ್ರಕಾರ ಬಲಿಯನ್ನು ಕೊಟ್ಟು ||೨೧|| ವಸ್ತ್ರ, ರತ್ನ, ಹಿರಣ್ಯ ಮೊದಲಾದವುಗಳಿಂದ ಗುರುಗಳನ್ನಲಂಕರಿಸಿ ಆಚಾರ್ಯರಿಗೆ ಕೋಟಿ ನಾಣ್ಯ, ಲಕ್ಷ, ಸಹಸ್ರ ||೨೨|| ನೂರು, ಐವತ್ತು, ಇಪ್ಪತ್ತೈದು ನಾಣ್ಯಗಳನ್ನಾದರೂ ದಕ್ಷಿಣೆಯಾಗಿ ಕೊಡಬೇಕು. ಅಷ್ಟೂ ಕೊಡಲಿಕ್ಕೆ

ಶಕ್ತಿಯಿಲ್ಲದೆ ನಿರ್ಧನನಾಗಿದ್ದರೆ, ತನ್ನ ಶಕ್ತ್ಯನುಸಾರ ದಕ್ಷಿಣೆ ಕೊಟ್ಟು ಭಕ್ತಿಪೂರ್ವಕವಾಗಿ ಗುರುಗಳಲ್ಲಿ ಕ್ಷಮೆ ಬೇಡಿಕೊಳ್ಳಬೇಕು. ಗುರುಗಳ ದಕ್ಷಿಣೆಗಿಂತ ಅರ್ಧದಷ್ಟು ಋತ್ವಿಜರಿಗೂ, ಅದರ ಅರ್ಧ ವೇದಪಾರಾಯಣ ಮಾಡಿದವರಿಗೂ, ಮಂತ್ರಾದಿ ಜಪ ಮಾಡಿದವರಿಗೂ ಕೊಡಬೇಕು. ||೧೨೩|| (ಉತ್ಸವ ದಿನಗಳಲ್ಲಿ ಸರ್ವಜಾತಿಗೂ ಅನ್ನವನ್ನು ಕೊಡಬೇಕೆನ್ನುತ್ತಾರೆ.) ಸಮಸ್ತ ಬ್ರಾಹ್ಮಣರಿಗೂ, ಅನ್ನದಾನ ಮಾಡಬೇಕು. ಅಲ್ಲದೆ ಬ್ರಾಹ್ಮಣೋಚ್ಛಿಷ್ಟದಿಂದ ನಾಯಿ ಚಂಡಾಲ ಮೊದಲಾದವರು ತೃಪ್ತರಾಗುವಂತೆ ಬ್ರಾಹ್ಮಣರಿಗೆ ಪರಿವೇಷಿಸಬೇಕು. ಪ್ರತಿಮಾ ಪ್ರತಿಷ್ಠೆಗಿಂತ ಮೊದಲು ೭ ದಿನ ಪ್ರತಿಷ್ಠಾ ನಂತರ ೭ ದಿನ, ವಿಚ್ಛೇದವಿಲ್ಲದೆ ||೧೨೪|| ಅತಿಥಿ ಅಭ್ಯಾಗತರನ್ನು ಸುವರ್ಣ ವಸ್ತ್ರ ರತ್ನಾದಿಗಳಿಂದ ತನ್ನ ಶಕ್ತ್ಯನುಸಾರ, ಶ್ರೀ ಪರಮಾತ್ಮನು ಪ್ರೀತನಾಗಲಿ, ಎಂದು ಭಕ್ತಿಯಿಂದ ಪೂಜಿಸಬೇಕು. ||೧೨೫|| ಪ್ರತಿಷ್ಠೆಯಾದ ಮೇಲೆಯೂ ೭ ದಿನಗಳಲ್ಲಿ ಗಾನ ನರ್ತನ ವಾದ್ಯಘೋಷ ಪುರಾಣ ಭಾರತ ಇತಿಹಾಸಗಳ ಪಠನ ವಾಚನ, ಸೂಕ್ತ ಪಾರಾಯಣ, ಋಗಾದಿ ವೇದಗಳ ಮಂಗಲಧ್ವನಿ, ಇವುಗಳಿಂದ ಮಹೋತ್ಸವವನ್ನು ಮಾಡಬೇಕು ||೧೨೬|| ೭ ದಿನಗಳು ಆದ ಮೇಲೆ ಛತ್ರ ಚಾಮರ ಮೊದಲಾದ ರಾಜೋಪಚಾರ ಗಾನ ನರ್ತನಾದಿಗಳಿಂದ ಮಹಾನದ್ಯಾದಿಗಳ ಸಮೀಪಕ್ಕೆ ಹೋಗಿ ಜ್ಞಾನಿಯು ವೇದಾದಿಗಳನ್ನು ಪಠಿಸುತ್ತಾ ಭಗತ್ಪ್ರತಿಮೆಗೆ ಅವಭೃಥ ಸ್ನಾನ ಮಾಡಿಸಬೇಕು. ||೧೨೭|| ಅಂದರೆ ಮಹಾನದೀ ಸಂಗಮ ಸ್ಥಳದಲ್ಲಿ ಆಗಲೀ ಅತಿ ಪ್ರಶಸ್ತವಾದ ತೀರ್ಥದಲ್ಲಿ ಆಗಲೀ "ಅತ್ಯಾಹಾರ್ಷ" ಮೊದಲಾದ ಪುರುಷ ಸೂಕ್ತಾಂತ ಮಂತ್ರಗಳಿಂದ ಶ್ರೀ ಹರಿಯನ್ನು ಸ್ಮರಿಸಿಕೊಂಡು ಪ್ರತಿಷ್ಠಾಕಾಲದಲ್ಲಿ ಹೇಳಿದಂತೆ ಕಲಶದಿಂದ ಅಭಿಷೇಕ ಮಾಡಬೇಕು. ||೧೨೮|| ಅವಭೃಥ ಸ್ನಾನವಾದ ಮೇಲೆ ಹಿಂದಿನಂತೆ ಮಹಾರಾಜ ವೈಭವಗಳಿಂದ ಗರ್ಭಗುಡಿಗೆ ಬಂದು ಗರ್ಭಗುಡಿಯ ಮಧ್ಯದಲ್ಲಿ ಭಗವತ್ಪ್ರತಿಮೆಯನ್ನು ಪ್ರತಿಷ್ಠಿಸಿ ಷೋಡಶೋಪಚಾರವಿಧಿಯಿಂದ ಪೂಜಿಸಿ ತಂತಮ್ಮ ಶಕ್ತ್ಯನುಸಾರ, ಬ್ರಾಹ್ಮಣರಿಗೆ ಸುವರ್ಣಾದಿದಾನಗಳನ್ನು ಮಾಡಿ ||೧೨೯|| ಭಕ್ತಿಯಿಂದ ಗುರುಗಳಿಗೆ ಅಭೀಷ್ಟಗಳನ್ನು ಕೊಟ್ಟು ತೃಪ್ತಿಗೊಳಿಸಿ ಅವರಿಂದ ಆಶೀರ್ವಾದಗಳನ್ನು ಪಡೆದುಕೊಳ್ಳಬೇಕು. ಆ ಉತ್ಸವ ದಿನಗಳಲ್ಲಿ ಎಲ್ಲಾ ೧೦೦ ಮಂದಿ ಬ್ರಾಹ್ಮಣರ ಭೋಜನಕ್ಕೆ ಕಡಿಮೆಯಾಗದಷ್ಟು ಪಕ್ವಾನ್ನ, ಪಾಯಸ, ಘೃತ, ಶರ್ಕರ, ಜೇನುತುಪ್ಪ ಮೊದಲಾದುವನ್ನು ಶ್ರೀ ಹರಿಗೆ ಸಮರ್ಪಿಸಬೇಕು. ಉತ್ಸವ ಮುಗಿದ ಮೇಲೆಯೂ, ಸರ್ವದಾ ಶಕ್ತ್ಯನುಸಾರ ಶ್ರೀ ಹರಿಗೆ ಪೂಜೆಯನ್ನು ಮಾಡುತ್ತಿರಬೇಕು. ||೧೩೦|| ||೧೨೧-೧೩೦||

ಅ|| ಪ್ರತಿಮೆಯನ್ನು ಪ್ರತಿಷ್ಠಾ ಮಾಡತಕ್ಕ ಪ್ರಕಾರವನ್ನು ಹೇಳಿ ಈಗ ಜೀರ್ಣ ದೇವಾಲಯವನ್ನು ಉದ್ಧಾರ ಮಾಡತಕ್ಕ ಪ್ರಕಾರವನ್ನು ಹೇಳುತ್ತಾರೆ.

ಮೂ|| ಜೀರ್ಣಾಲಯೋದ್ಧೃತೌ ಚೈವ ತತ್ತನ್ಮಂತ್ರಾನ್ ಸ್ವಕಂ ತಥಾ ।
ಪ್ರಾತಿಲೋಮ್ಯೇನ ಜಪ್ತ್ವೈವ ಮೂರ್ತೌ ಸಂಕೋಚಯೇದ್ಧರಿಂ|| ||೧೩೨||

ಉಕ್ತೇನೈವ ವಿಧಾನೇನ ತದರ್ಧೈರ್ವಿಭವೈಃ ಸುಧೀಃ ।
ಪಾದಮಾತ್ರೈರಪಿ ಹರಿಂ ಸ್ನಾಪಯಿತ್ವಾ ಯಥೋದಿತಂ|| ||೧೩೩||

ಏತೇನೈವ ವಿಧಾನೇನ ಕೃತ್ವಾ ದೇವಾಲಯಂ ಪುನಃ ।
ಸ್ನಾಪಯೇತ್ಪುಂಡರೀಕಾಕ್ಷಂ ದ್ವಿಗುಣೇನ ಪ್ರವಾಹಣಾತ್|| ||೧೩೪||

ವಿಭವೇನಾನುಲೋಮೇನ ಜಪನ್ಮಂತ್ರಾನ್ ಪುನಸ್ತಥಾ|
ಆರಾಧಯೇಜ್ಜಗನ್ನಾಥಂ ಧ್ಯಾಯನ್ ಭಕ್ತ್ಯಾ ಯಥೋದಿತಂ|| ||೧೩೫||

ಯಾತ್ರಾऽಪಿ ಪೂರ್ವವತ್ತತ್ರಾಪ್ಯುತ್ಸವೇಷು ಚ ಸರ್ವಶಃ ।
ಕಲಶೋಕ್ತವಿಧಾನೇನ ಪೂಜಾ ಬಲಿಹೃತಿಸ್ತಥಾ|| ||೧೩೬||

ಉತ್ಸವೇಷು ಸದಾ ಕಾರ್ಯಾ ಕಲಶಶ್ಚೋತ್ಸವಾದನು ।
ಯಾತ್ರಾ ಸ್ನಾನಂ ಚ ಕರ್ತವ್ಯಂ ಸಮ್ಯಗುಕ್ತವಿಧಾನತಃ|| ||೧೩೭||

ಅ॥ ಜೀರ್ಣವಾದ ದೇವಾಲಯವನ್ನು ತಿರುಗಿ ಕಟ್ಟಿಸುವ ಸಂದರ್ಭದಲ್ಲಿ, ಪ್ರತಿಮೆಯಲ್ಲಿಯೂ ಗರ್ಭಗೃಹ ಮಂಟಪ ಮೊದಲಾದವುಗಳಲ್ಲಿಯೂ ಸರ್ವತ್ರ ಸನ್ನಿಹಿತನಾದ ಶ್ರೀ ಹರಿಯನ್ನು ತತ್ತ್ವದೇವತಾಮಂತ್ರ, ಆಯಾಯ ದೇವತಾಮಂತ್ರಗಳನ್ನು ವ್ಯುತ್ಕ್ರಮವಾಗಿ ಜಪಿಸಿ ಪ್ರಾರ್ಥಿಸಿ ಕೇವಲ ಪ್ರತಿಮೆಯಲ್ಲಿಯೇ ಸನ್ನಿಹಿತನಾಗುವಂತೆ ಪ್ರಾರ್ಥಿಸಬೇಕು ॥೧೩೨॥ ಜ್ಞಾನಿಯು ಹಿಂದೆ ಹೇಳಿದ ವಿಧಿಯಿಂದ ಕಲಶಾದಿಗಳನ್ನಿಟ್ಟು ಪ್ರತಿಷ್ಠಾಕಾಲಕ್ಕಿಂತ ಅರ್ಧ, ಅಥವಾ ಕಾಲು ಪಾಲು ಉಪಚಾರಗಳಿಂದ ಶಾಸ್ತ್ರೋಕ್ತ ಪ್ರಕಾರ ಅಭಿಷೇಕ ಮಾಡಿ (ದೇವಾಲಯ ನಿರ್ಮಾಣ ಪರ್ಯಂತ ಸ್ಥಳಾಂತರದಲ್ಲಿಡಬೇಕು) ॥೧೩೩॥ ಆ ಮೇಲೆ ಹಿಂದೆ ಹೇಳಿದ ಲಕ್ಷಣಗಳಿಂದ ದೇವಾಲಯವನ್ನು ನಿರ್ಮಿಸಿ ಶ್ರೀ ಹರಿಯನ್ನು ಪ್ರತಿಷ್ಠಾ ಮಾಡಿ ಪ್ರತಿಮೋದ್ಧರಣ ಕಾಲದಲ್ಲಿ ಮಾಡಿದ ಉತ್ಸವಕ್ಕಿಂತ ಇಮ್ಮಡಿ ವೈಭವದಿಂದ. ಹೀಗೆಯೇ ತತ್ತ್ವದೇವತಾಮಂತ್ರಗಳನ್ನು ಆವಾವ ಮೂರ್ತಿ ಮಂತ್ರವನ್ನು ಸೃಷ್ಟಿ ಕ್ರಮದಿಂದ ಜಪಿಸಿ ೧ನೇ ಅಧ್ಯಾಯದಲ್ಲಿ ಹೇಳಿದಂತೆ ಶ್ರೀ ಭಗವಂತನನ್ನು ಭಕ್ತಿಯಿಂದ ಧ್ಯಾನಿಸುತ್ತಾ ಪೂಜಿಸಬೇಕು ॥೧೩೪॥ ೧೩೫॥ ಜೀರ್ಣ ದೇವಾಲಯದ ಉದ್ಧಾರಾನಂತರದಲ್ಲಿಯೂ, ಎಲ್ಲಾ ಉತ್ಸವಗಳಲ್ಲಿಯೂ, ಹಿಂದೆ ಹೇಳಿದ ಪ್ರಕಾರ ಅವಭೃಥ ಸ್ನಾನ ಮಾಡಬೇಕು. ಪ್ರತಿ ಉತ್ಸವಕಾಲಗಳಲ್ಲಿಯೂ ವಿಧಿಪ್ರಕಾರ ಕಲಶಸ್ಥಾಪನ ಮಾಡಿ ಅಭಿಷೇಕಾದಿಗಳನ್ನು ಮಾಡಿ ಪೂಜಿಸಿ ಬಲಿಯನ್ನು ಕೊಟ್ಟು ಉತ್ಸವಾನಂತರ ಹಿಂದೆ ಹೇಳಿದ ವಿಧಿಪ್ರಕಾರ ಅವಭೃಥಸ್ನಾನಕ್ಕಾಗಿ ತೀರ್ಥಕ್ಕೆ ಹೋಗಿ ಪ್ರತಿಮೆಗೆ ಅವಭೃಥ ಸ್ನಾನ ಮಾಡಿಸಿದ ಮೇಲೆ ಕಲಶಾಭಿಶೇಕವನ್ನು ಮಾಡಬೇಕು. ॥೧೩೬॥೧೩೭॥ ॥೧೩೨-೧೩೭॥

ಅವ॥ ಪ್ರತಿಮೆಗೆ ಸಂಪ್ರೋಕ್ಷಣೆ ಮಾಡಬೇಕೆಂದು ಹೇಳಲಿಕ್ಕೆ ಅದರ ನಿಮಿತ್ತವನ್ನು ಹೇಳುತ್ತಾರೆ.

**ಮೂ॥ ಚೋರ ಚಂಡಾಲ ಪತಿತಶ್ವೋದಕ್ಯಾದಿಪ್ರವೇಶನೇ ।**
**ಶವಾದ್ಯುಪಹತೌ ಚೈವ ಪೂಜಾವಿಚ್ಛೇದನೇ ತಥಾ॥** ॥೧೩೮॥

**ಸ್ನಪನೋಕ್ತೇನ ಮಾರ್ಗೇಣ ಪ್ರಾಯಶ್ಚಿತ್ತವಿಧಿಃಸ್ಮೃತಃ । (ಕೃತಿಃಸ್ಮೃತಾ)**
**ಸರ್ವತ್ರ ವಿಷ್ಣುಗಾಯತ್ರ್ಯಾ ಹೋಮಃ ಸ್ಯಾದಯುತಾವರಃ॥** ॥೧೩೯॥

**ನಾ ವಾ ವ್ಯಾದ್ಯಭಿಧಾನಾನು ವಿದ್ಮಹೇ ಧೀಮಹೇ ತಥಾ ।**
**ಪ್ರಚೋದಯಾತ್ತೃ ತೀಯಾಧಸ್ತನ್ನೋ ಗಾಯತ್ರಿನಾಮಿಕಾ॥** ॥೧೪೦॥

**ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ ।**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರ್ಯೈಃ ಸ್ಮರನ್ ಹರಿಂ॥** ॥೧೪೧॥

**ಗೋಲಕಾದ್ವಿತಯಂ ವಿಷ್ಣೋಸ್ತ್ರಿತಯಂ ವಾ ಪ್ರಕೀರ್ತಿತಂ ।**
**ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಂ॥** ॥೧೪೨॥

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಸದಾ ।**
**ಗೃಹ್ಣಂತಿ ದೇವತಾ ನೈತಾಂ ತತಸ್ಸ್ಯಾದ್ದೇಶ ವಿಪ್ಲವಃ॥** ॥೧೪೩॥

**ವ್ಯಾಧಿಚೋರಾದಿಭಿಸ್ತಸ್ಮಾದಂತರ್ಧ್ಯೇಯೋ ಹರಿಃ ಸದಾ ।**
**ವಿಷ್ಣುಭಕ್ತಿ ವಿಹೀನಸ್ಯ ಗತಿಃ ಸ್ಯಾನ್ನಶುಭಾ ಕ್ವಚಿತ್॥** ॥೧೪೪॥

**ಭಕ್ತಸ್ಯಾಪ್ಯನ್ಯದೇವೇಷು ತಸ್ಮಾದ್ಧ್ಯೇಯೋ ಹರಿಃ ಸದಾ।**
**ಸಂಸ್ಮೃತೋ ಭಗವಾನ್ವಿಷ್ಣುಃ ಸರ್ವಮಂಗಲಮಂಗಲಃ ।**
**ಸಮಸ್ತಾಭೀಷ್ಟದಾಯೀ ಸ್ಯಾತ್ತೇನ ಧ್ಯೇಯೋಽಖಿಲೈರ್ಜನೈಃ॥** ॥೧೪೫॥

ಕಳ್ಳರು, ಚಂಡಾಲರು, ಬ್ರಹ್ಮಹತ್ಯಾದಿ ಮಹಾಪಾತಕದಿಂದ ಜಾತಿಭ್ರಷ್ಟರು, ನಾಯಿ, ಮುಟ್ಟಾದ ಹೆಂಗಸು, ಕತ್ತೆ, ಮೊದಲಾದವರು ದೇವಾಲಯಕ್ಕೆ ಪ್ರವೇಶಿಸಿದರೂ, ಶವಾದಿಗಳ ಸಂಪರ್ಕವಾದರೂ, ಪೂಜೆ ಭಂಗ ಬಂದರೂ, ಕಲಶಸ್ಥಾಪನ ಪೂರ್ವಕ ಅಭಿಷೇಕಾದಿಗಳನ್ನು ಮಾಡುವುದೇ ಪ್ರಾಯಶ್ಚಿತ್ತವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಪ್ರತಿಷ್ಠಾ, ಜೀರ್ಣದೇವಾಲಯೋದ್ಧಾರ, ಸಂಪ್ರೋಕ್ಷಣಗಳಲ್ಲಿ ವಿಷ್ಣುಗಾಯತ್ರೀ ಮಂತ್ರದಿಂದ ೧೦೦೦೦ (ಹತ್ತು ಸಹಸ್ರಕ್ಕೆ) ಕಡಿಮೆಯಿಲ್ಲದೆ ಹೋಮ ಮಾಡಬೇಕು. ||೧೩೮-೧೩೯|| "ನಾ" - "ವಾ" "ವಿ" ಎಂಬೀ ೩ ಅಕ್ಷರಗಳು ಆದಿಯಾಗಿ ಉಳ್ಳ, "ನಾರಾಯಣ" "ವಾಸುದೇವ " "ವಿಷ್ಣು" ಎಂಬ ೩ ನಾಮಗಳಲ್ಲಿ ಪ್ರಥಮ ೨ ನಾಮಗಳು ಚತುರ್ಥ್ಯಂತಗಳಾಗಿಯೂ, ೩ನೇ ನಾಮವು ಪ್ರಥಮಾಂತವಾಗಿಯೂ ಇರಬೇಕು. ಕ್ರಮವಾಗಿ ಈ ೩ ನಾಮಗಳ ನಂತರ "ವಿದ್ಮಹೇ" "ಧೀಮಹಿ" "ಪ್ರಚೋದಯಾತ್" ಎಂಬುವುದನ್ನೂ ಮತ್ತೂ ೩ನೇ ವಿಷ್ಣುಃ ಎಂಬ ನಾಮಕ್ಕಿಂತ ಮೊದಲು "ತನ್ನೋ" ಎಂಬುವನದನ್ನೂ ಸೇರಿಸಿದರೆ ವಿಷ್ಣು ಗಾಯತ್ರಿಯಾಗುತ್ತದೆ. ಏವಂಚ "ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋದಯಾತ್" ಇದು ವಿಷ್ಣು ಗಾಯತ್ರಿಯೆನಿಸುತ್ತದೆ. ||೧೪೦|| ವಿಷ್ಣುಪ್ರತಿಮೆಯನ್ನು ಪ್ರತಿಷ್ಠೆ ಮಾಡಿದ ಪ್ರಕಾರ, ದುರ್ಗೆ, ರುದ್ರ, ಸ್ಕಂದ, ಸೂರ್ಯ, ಗಣಪತಿ, ಇಂದ್ರ, ಶೇಷ, ಗರುಡ ಮೊದಲಾದ ದೇವತೆಗಳನ್ನು, ಆವಾದ ದೇವತಾ ಮಂತ್ರಗಳಿಂದ ಆವಾದ ದೇವತೆಗಳಲ್ಲಿ ಶ್ರೀಹರಿಯು ಸನ್ನಿಹಿತನಾಗಿದ್ದಾನೆಂದು ಸ್ಮರಿಸುತ್ತಾ ಪ್ರತಿಷ್ಠಾ ಮಾಡಬೇಕು. ||೧೪೧|| ಹೇಗೆ ಶ್ರೀವಿಷ್ಣು ಪ್ರತಿಮೆಯನ್ನು ಪ್ರತಿಷ್ಠಾ ಮಾಡುವಾಗ ಕಾಣತಕ್ಕ ಪ್ರತಿಮೆಯು ೧ ಗೋಲಕವು. ಅದರೊಳಗೆ ತೇಜೋಮಯನಾದ ಮುಖ್ಯಪ್ರಾಣ, ಹೇಗೆ ೨ ಪ್ರತಿಮೆಗಳನ್ನು ಧ್ಯಾನಿಸಬೇಕೋ, ಹಾಗೆಯೇ ಇತರ ದೇವತೆಗಳ ಪ್ರತಿಮೆಗಳನ್ನು ಪ್ರತಿಷ್ಠಾ ಮಾಡುವ ಕಾಲದಲ್ಲಿ ೧ ಕಾಣತಕ್ಕ ಪ್ರತಿಮೆ, ೨ ಅದರೊಳಗೆ ರುದ್ರಾದಿ ದೇವತೆಗಳೂ ೩ ಅವರೊಳಗೆ ತೇಜೋಮಯನಾದ ಮುಖ್ಯಪ್ರಾಣ, ಹೀಗೆ ೩ ಗೋಲಕಗಳನ್ನು ಧ್ಯಾನಿಸಿ ಅದರೊಳಗೆ ಸನ್ನಿಹಿತನಾದ ಶ್ರೀಹರಿಯನ್ನು ಧ್ಯಾನಿಸಬೇಕು ||೧೪೨|| ಭಗವಸ್ಸನ್ನಿಧಾನವನ್ನು ಸ್ಮರಿಸದೆ ಇತರ ದೇವತೆಗಳನ್ನೇ ಸರ್ವೋತ್ತಮರೆಂದು ಪೂಜಿಸಿದರೆ ಸರ್ವಥಾ ಅದರಿಂದ ದೇವತೆಗಳಿಗೆ ಪ್ರೀತಿಯುಂಟಾಗಲಾರದು. ಏಕೆಂದರೆ ದೇವತೆಗಳು ವಿಷ್ಣುಧ್ಯಾನವಿಲ್ಲದೆ ಪೂಜೆಯನ್ನು ಸ್ವೀಕರಿಸಲಾರರು. ಇಂತಹ ಅಸುರ ಪೂಜೆಯಿಂದ ವ್ಯಾಧಿ, ಕಳ್ಳರು, ಅನಾವೃಷ್ಟಿ ಮೊದಲಾದ ಪೀಡೆಗಳಿಂದ ದೇಶಕ್ಕೇನೇ ಉಪದ್ರವವುಂಟಾಗಿ ಐಹಿಕಾನಿಷ್ಟ ಉಂಟಾಗುವುದರಿಂದ ಇತರ ದೇವತೆಗಳಲ್ಲಿ ಶ್ರೀ ಹರಿಯು ಅಂತರ್ಗತನಾಗಿ ನಿಯಮಾಕನಾಗಿದ್ದಾನೆಂದು ಸದಾ ಧ್ಯಾನಿಸಬೇಕು. ಅಲ್ಲದೆ ಅನ್ಯದೇವತೆಗಳಲ್ಲಿ ಭಕ್ತಿಯಿದ್ದರೂ ವಿಷ್ಣುಭಕ್ತಿಯಿಲ್ಲದವನಿಗೆ ಸ್ವರ್ಗಾದಿ ಪ್ರಾಪ್ತಿಯೇ ಸರ್ವಥಾ ಆಗಲಾರದು. ನರಕಾದ್ಯನರ್ಥಪ್ರಾಪ್ತಿಯೇ ಆಗುವುದು. ಹೀಗೆ ಪಾರಲೌಕಿಕ ಅನಿಷ್ಟವಿದ್ದ ಪ್ರಯುಕ್ತವೂ ಸದಾ ಶ್ರೀಹರಿಯನ್ನು ಧ್ಯಾನಿಸಬೇಕು. ೧೪೩||೧೪೪|| ಪರಮಮಂಗಲ ಮೂರ್ತಿಯಾದ ಶ್ರೀ ಭಗವಂತನನ್ನು ಸ್ಮರಿಸಿದರೆ ಆತನು ಸಕಲಾಭೀಷ್ಟಗಳನ್ನು ಕೊಡುವನು. ಅದರಿಂದ ಶ್ರೀಹರಿಯನ್ನು ಎಲ್ಲರೂ ಧ್ಯಾನಿಸಬೇಕು. ||೧೪೫|| ||೧೩೮ - ೧೪೫ ||

ಅವ || ಪ್ರತಿಮೆಗಳನ್ನು ಪ್ರತಿಷ್ಠೆ ಮಾಡುವಾಗ ೨೫ ತತ್ವಗಳ ದೇವತೆಗಳನ್ನು ಸ್ಥಾಪಿಸಬೇಕೆಂದು ಹೇಳಿದೆ. ತತ್ವಗಳು ಯಾವುವು? ತತ್ವದೇವತೆಗಳು ಯಾರು? ಎಂದರೆ ತತ್ವ, ತತ್ವಾಭಿಮಾನಿಗಳನ್ನು ಹೇಳುತ್ತಾರೆ.

ಮೂ|| ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ ||೧೪೬||

ದಶೇಂದ್ರಿಯಾಣಿ ಶಬ್ದಾದ್ಯಾಃ ಭೂತೇತಾಃ ಪಂಚವಿಂಶತಿಃ |
ತತ್ವಾಖ್ಯಾಃ ಕಾಲಮಾಯೇ ಚ ನಿಯತಿರ್ಮತಿರೇವ ಚ ||೧೪೭||

ವಿದ್ಯಾ ಕಲಾ ಪ್ರವೃತ್ತಿಶ್ಚ ದ್ವಾತ್ರಿಂಶತ್ತತ್ವಸಂಗ್ರಹಃ |
ಸ್ಫೂರ್ತಿ ಸಂವಿತ್ಪ್ರತಿಷ್ಠಾ ಚ ಶಕ್ತಿರಿತ್ಯಪರಾಣಿ ಚ ||೧೪೮||

ಮಹಾಲಕ್ಷ್ಮೀಸ್ಸ್ವರೂಪಾಣಿ ಏಕಾದಶವಿದೋ ವಿದುಃ |
ವಿಷ್ಣೋರಪಿ ಹಿ ರೂಪಾಣಿ ತನ್ನಾಮ್ನ್ಯೈಕಾದಶೈವ ತು ||೧೪೯||

ಪ್ರಧಾನೋಪಮವರ್ಣಾನಿ ದ್ವಿಭುಜಾನ್ಯಶೇಷತಃ |
ಕೃತಾಂಜಲಿಪುಟಾನ್ಯೇನ ಪ್ರಧಾನಂ ತಂ ಹರಿಂ ಪ್ರತಿ ||೧೫೦||

ಸರ್ವಾಣ್ಯೇತಾನಿ ತತ್ವಾನಿ ಬ್ರಹ್ಮಾ ತು ಪುರುಷಃ ಸ್ಮೃತಃ ।
ಮಹಾಂಶ್ಚಾವ್ಯಕ್ತನಾಮ್ನೀ ತು ಬ್ರಹ್ಮಾಣೀ ಸಂಪ್ರಕೀರ್ತಿತಾ ||೧೫೧||

ಏವಂ ವಾಯುರಪಿ ಜ್ಞೇಯೋ ಭಾರತೀ ಚಾಪಿ ತತ್ತ್ರಯಂ ।
ರುದ್ರೋಽಹಂಕಾರ ಉದ್ದಿಷ್ಟಃ ಸ್ಕಂದೇದ್ರೌ ಮನ ಉಚ್ಯತೇ ||೧೫೨||

ಅಹಂಕಾರಃ ಶೇಷವೀಂದ್ರಾವಪಿ ವಿದ್ವದ್ಭಿರೀರಿತೌ ।
ದಿಗ್ವಾಯುಸೂನುಸೂರ್ಯಶ್ಚ ವರುಣಶ್ಚಾಶ್ವಿನಾವಪಿ ||೧೫೩||
ವಹ್ನಿದಕ್ಷಾವಿಂದ್ರಸೂನುರ್ಮಿತ್ರಶ್ಚೈವ ಮನುಸ್ತಥಾ ।
ಇಂದ್ರಿಯಾಖ್ಯಾಶ್ಶಬ್ದನಾಮಾ ಬೃಹಸ್ಪತಿರುದಾಹೃತಃ ||೧೫೪||

ಅನ್ಯೇ ತು ಸೂನವೋ ವಾಯೋ ರುದ್ರಸ್ಯಾಪಿ ಪ್ರಕೀರ್ತಿತಾಃ ।
ಏತೇಷು ಭಗವಾನ್ವಿಷ್ಣುಃ ಪ್ರಧಾನತನುರೇವತು (ಧ್ಯೇಯಃ) ||೧೫೫||

ಅ॥ ಪುರುಷತತ್ವ, ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರತತ್ವ, ಮನಸ್ತತ್ವ ಶ್ರೋತ್ರಾದಿ (೧೦) ಇಂದ್ರಿಯ, ಶಬ್ದಾದಿ ೫ ವಿಷಯ, ೫ ಭೂತ, ಹೀಗೆ ೨೫ ತತ್ವಗಳು ಕಾಲ, ಮಾಯೆ, ನಿಯತಿ, ಮತಿ, ವಿದ್ಯೆ, ಕಲೆ, ಪ್ರವೃತ್ತಿ, ಈ ೭ ತತ್ವಗಳು ಸೇರಿ ೩೨ ತತ್ವಗಳಾಗುತ್ತವೆ. ಅಲ್ಲದೆ ಸ್ಫೂರ್ತಿ, ಸಂವಿತ್, ಪ್ರತಿಷ್ಠಾ, ಶಕ್ತಿ ಹೀಗೆ ಬೇರೆ ೪ ತತ್ವಗಳು. ಈ ಎಲ್ಲಾ ತತ್ವಗಳೂ, ಸೇರಿದರೆ ೩೬ ತತ್ವಗಳು ||೧೪೬-೧೪೮|| ಕಾಲ ಮಾಯಾ ಇತ್ಯಾದಿ ೧೧ ಮಹಾಲಕ್ಷ್ಮಿಯ ಸ್ವರೂಪಗಳು. ಆ ಲಕ್ಷ್ಮೀರೂಪಗಳು ಕಾಲ ಇತ್ಯಾದಿ ಶಬ್ದ ವಾಚ್ಯಗಳು. ಕಾಲಾದಿ ತತ್ವಗಳಿಗೆ ನಿಯಾಮಕಗಳು. ಈ ೧೧ ತತ್ವಗಳಿಗೆ ನಿಯಾಮಕಗಳಾಗಿ ಕಾಲಾದಿಗಳೆನಿಸುವ ಶ್ರೀವಿಷ್ಣುವಿನ ೧೧ ರೂಪಗಳೂ ಇವೆ. ||೧೪೯|| ತತ್ವಾಭಿಮಾನಿಗಳಾದ ಎಲ್ಲಾ ದೇವತೆಗಳೂ ಸರ್ವೋತ್ತಮನಾದ ಶ್ರೀಹರಿಯಂತೆ ಉದಯಿಸಿಕೊಂಡು ಬರುವ ಸೂರ್ಯನಿಗೆ ಸದೃಶಕಾಂತಿಯುಳ್ಳವುಗಳು. ೨ ಭುಜಗಳುಳ್ಳವುಗಳು. ಸರ್ವೋತ್ತಮನಾದ ಶ್ರೀಹರಿಗೆ ಅಭಿಮುಖವಾಗಿ ಕೈಮುಗಿದುಕೊಂಡು ನಿಂತಿವೆ. ಜೀವತತ್ವ, ಮಹತ್ತತ್ವಗಳಿಗೆ ಬ್ರಹ್ಮನು ದೇವತೆಯು, ಸರಸ್ವತಿಯು ಅವ್ಯಕ್ತಳೆನಿಸಿಕೊಂಡವಳಾಗಿ ಅವ್ಯಕ್ತ ತತ್ವಕ್ಕೆ ಅಭಿಮಾನಿನಿಯು ||೧೫೦-೧೫೧|| ಈ ೩ ತತ್ವಗಳಿಗೆ ಬ್ರಹ್ಮ ಸರಸ್ವತಿಯರಂತೆ ವಾಯು ಭಾರತಿಯರೂ ದೇವತೆಗಳು, ರುದ್ರ ಶೇಷ ಗರುಡರು ಅಹಂಕಾರ ತತ್ವಕ್ಕೂ, ಕಾಮ ದೇವೇಂದ್ರರು ಮನಸ್ತತ್ವಕ್ಕೂ ||೧೫೨|| ದಿಗಭಿಮಾನಿ ದೇವತೆಗಳು, ಮುಖ್ಯ ವಾಯು ಪುತ್ರನಾದ ಪ್ರಾಣ, ಸೂರ್ಯ, ವರುಣ, ಅಶ್ವಿನೀ ದೇವತೆಗಳು, ||೧೫೩|| ಅಗ್ನಿ, ದಕ್ಷಪ್ರಜಾಪತಿ, ಇಂದ್ರಪುತ್ರನಾದ ಜಯಂತ, ಮಿತ್ರ, ಸ್ವಾಯಂಭುವ ಮನು, ಇವರು ಇಂದ್ರಿಯ ಶಬ್ದವಾಚ್ಯರಾಗಿ ದಶೇಂದ್ರಿಯಗಳಿಗೂ, ಬೃಹಸ್ಪತ್ಯಾಚಾರ್ಯರು ರುದ್ರ ಪುತ್ರನಾದ ಪ್ರಾಣ ಇವರಿಬ್ಬರು ಶಬ್ದ ತತ್ವಕ್ಕೂ ||೧೫೪|| ಪ್ರಧಾನ ವಾಯುಪುತ್ರರಾದ ಅಪಾನ, ವ್ಯಾನ ಉದಾನ ಸಮಾನರು, ಮತ್ತು ರುದ್ರಪುತ್ರರಾದ ಅಪಾನ, ವ್ಯಾನ, ಉದಾನ, ಸಮಾನರೆಂಬ ನಾಲ್ವರೂ, ಸ್ಪರ್ಶ, ರೂಪ, ರಸ, ಗಂಧಗಳೆಂಬ ೪ ತತ್ವಗಳಿಗೂ, ಗಣಪತಿ, ಮರೀಚಿನಾಮಕ ಭೂತವಾಯು, ವಹ್ನಿ, ವರುಣ, ಪೃಥ್ವೀ ಎಂಬ ೫ ದೇವತೆಗಳು, ಆಕಾಶಾದಿ ಪಂಚ ಮಹಾಭೂತಗಳಿಗೂ ಅಭಿಮಾನಿಗಳಾಗಿರುತ್ತಾರೆ. ಎಲ್ಲರೂ ಅವುಗಳಿಗೆ ನಿಯಾಮಕರಾಗಿರುವುದರಿಂದ ಆವಾವ ಶಬ್ದವಾಚ್ಯರೂ ಆಗಿರುತ್ತಾರೆ. ಪುರುಷ ಮೊದಲಾದ ಎಲ್ಲಾ ತತ್ವಗಳಿಗೂ ಸರ್ವೋತ್ತಮನಾದ ಶ್ರೀಹರಿಯೇ ಅಂತರ್ಗತನಾಗಿ ನಿಯಾಮಕನಾಗಿರುತ್ತಾನೆಂದು ಧ್ಯಾನಿಸಬೇಕು. ||೧೫೫||

ಮೂ॥ ಧ್ಯೇಯಃ ಪರಾತ್ಮನೋರ್ಮಧ್ಯೇ ತತ್ವನಾಮ ತದರ್ಥಯೋಃ ।
ಜಪೇ ನ್ಯಾಸೇ ನಮೋಽಂತಸ್ತು ಸ್ವಾಹಾಂತೋಹೋ ಮಕರ್ಮಣಿ ||೧೫೬||

ತ್ರಿಚತುಃಷಡ್ದಶಾವೃತ್ತಿರೇತೇಷಾಂ ತು ಹುತಾದಿಕೇ ।
ನ್ಯಾಸೋಽಂಗುಲೀಷೂರುಬಾಹುಮಧ್ಯೇಷು ವ್ಯುತ್ಕ್ರಮೇ ಸ್ಮೃತಃ ||೧೫೭||

ಕ್ರಮೋ ವಿಪರ್ಯಯೇಣಾತ್ರ ಶಕ್ತ್ಯಾದಿತ್ವಂ ಪ್ರಕೀರ್ತಿತಂ ।
ಋಷಿಚ್ಛಂದೋ ದೇವತಾಂಗಧ್ಯಾನಾನುಕ್ತೌ ಪ್ರಧಾನವತ್ ॥೧೫೮॥

ಜ್ಞೇಯಾ ಮಂತ್ರಾಃ ಸಮಸ್ತಾಸ್ತೇ ಪೃಥಕ್ ಮೋಕ್ಷಪ್ರದಾಯಕಾಃ ।
ತಂತ್ರಮಾರ್ಗಾಸ್ತು ಹರಿಣಾ ಹ್ಯಸಂಖ್ಯಾಃಕೀರ್ತಿತಾ ಅಪಿ ॥ ॥೧೫೯॥
ತ್ರೇಷ್ವಯಂ ಸುಗಮೋ ಮಾರ್ಗಃ ಸುಫಲಶ್ಚಾಸು ತಿಷ್ಠತಾಂ ।
ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ ॥ ॥೧೬೦॥

ತಾವತ್ಸಮಸ್ತಂ ಕಥಿತಂ ಹ್ಯಸ್ಮಿನ್ ತಂತ್ರೇ ಯಥಾವಿಧಿ ।
ಪ್ರೀಯತೇಽನೇನ ಮಾರ್ಗೇಣ ಪೂಜಿತೋ ಮುಕ್ತಿದೋ ಭವೇತ್ ।
ಕಾಮದಶ್ಚ ಸ್ವಭಕ್ತಾನಾಂ ಭಗವಾನ್ ಪುರುಷೋತ್ತಮಃ ॥ ॥೧೬೧॥

ಅ॥ ಭಗವದ್ವಾಚಕಗಳಾದ ಪರ ಆತ್ಮ ಶಬ್ದಗಳ ಮಧ್ಯದಲ್ಲಿ ತತ್ವವಾಚಕಗಳಾದ ಪುರುಷಾದಿಪದಗಳನ್ನು ಕೊನೆಗೆ ಜಪನ್ಯಾಸಗಳಲ್ಲಿ "ನಮಃ" ಎಂಬ ಪದವನ್ನು ಹೋಮದಲ್ಲಿ ಸ್ವಾಹಾ ಎಂಬ ಶಬ್ದವನ್ನು ತತ್ವಮಂತ್ರಗಳಲ್ಲಿ ಪ್ರಯೋಗಿಸಬೇಕು. ॥೧೫೬॥ ತತ್ವಮಂತ್ರಗಳ ಹೋಮ ಜಪನ್ಯಾಸಾದಿಗಳಲ್ಲಿ ೩, ೪, ೬ ಅಥವಾ ೧೦ ಸಲ ತತ್ವಮಂತ್ರಗಳನ್ನು ಆವೃತ್ತಿ ಮಾಡಬೇಕು. ೨೦ ಬೆರಳು. ೬ ತೊಡೆ, ೨ ಬಾಹು, ಹೃದಯ ಇವುಗಳಲ್ಲಿ ತತ್ವಮಂತ್ರಗಳಿಂದ ತತ್ವದೇವತೆಗಳನ್ನು ವ್ಯುತ್ಕ್ರಮನ್ಯಾಸದಲ್ಲಿ ಸ್ಥಾಪಿಸುವುದು (ಅಂದರೆ ಎಡಪಾದದ ಕನಿಷ್ಠಾಂಗುಲಿಯನ್ನು ಆರಂಭಿಸಿ ಹೃದಯಪರ್ಯಂತ ಸ್ಥಾನಗಳಲ್ಲಿ ಸಂಹಾರ ಕ್ರಮದಲ್ಲಿ ಅಂಗನ್ಯಾಸ ಸ್ಥಾನಗಳು) ಕ್ರಮನ್ಯಾಸದಲ್ಲಿ ಹೃದಯವನ್ನಾರಂಭಿಸಿ ಎಡಕಾಲಿನ ಕಿರಿಬೆರಳಿನ ಪರ್ಯಂತ ಸ್ಥಾನಗಳಲ್ಲಿ ಮಂತ್ರಗಳಿಂದ ಅಂಗನ್ಯಾಸ ಮಾಡಬೇಕು. ಇದಕ್ಕೆ ಸೃಷ್ಟಿನ್ಯಾಸವೆಂದು ಹೆಸರು. ಕ್ರಮನ್ಯಾಸದಲ್ಲಿ (ಸೃಷ್ಟಿಕ್ರಮದಲ್ಲಿ) ಮಂತ್ರಗಳನ್ನು ಶಕ್ತ್ಯಾದಿಯಾಗಿ ನ್ಯಾಸಮಾಡಬೇಕು. (ಸಂಹಾರ ಕ್ರಮದಲ್ಲಿ ಮಂತ್ರಗಳನ್ನು ಪೃಥಿವ್ಯಾದಿಯಾಗಿ ನ್ಯಾಸ ಮಾಡಬೇಕು.) ॥೧೫೭॥ ಯಾವ ಮಂತ್ರಗಳಲ್ಲಿ ಋಷಿ, ಛಂದಸ್ಸು, ದೇವತೆ, ಅಂಗನ್ಯಾಸ, ಧ್ಯಾನಗಳನ್ನು ಪ್ರತ್ಯೇಕವಾಗಿ ಹೇಳಲಿಲ್ಲವೋ, ಅಂತಹ ಮಂತ್ರಗಳಲ್ಲಿ ಪ್ರಧಾನವಾದ ಪ್ರಣವಮಂತ್ರಕ್ಕೆ ಹೇಳಿದ ಋಷಿ ಛಂದಸ್ಸು, ಮೊದಲಾದವುಗಳನ್ನೇ ಇಟ್ಟುಕೊಳ್ಳಬೇಕು. (ಅಂತೂ ತತ್ವಮಂತ್ರಗಳಿಗೆ ಅಂತರ್ಯಾಮಿ ಮೊದಲಾದವುಗಳೇ ಋಷ್ಯಾದಿಗಳೆಂದು ತಿಳಿಯಬೇಕು.) ॥೧೫೮॥ ಆ ಎಲ್ಲಾ ತತ್ವಮಂತ್ರಗಳೂ ಪ್ರತಿಯೊಂದೂ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡತಕ್ಕವುಗಳು. ಯದ್ಯಪಿ ಶ್ರೀಹರಿಯು ಪಂಚರಾತ್ರಾದ್ಯಾಗಮಗಳಲ್ಲಿ ಭಗವತ್ಪೂಜಾ ಮಂತ್ರ ಜಪಹೋಮ ಪ್ರತಿಮಾ ನಿರ್ಮಾಣ ಮೊದಲಾದವುಗಳನ್ನು ಮಾಡುವ ರೀತಿ ಬಹುಪ್ರಕಾರ ಹೇಳಿರುವನು. ಆದರೂ ಅವುಗಳು ಬಹುವಿಧವಾಗಿರುವುದರಿಂದಲೂ ಅತಿ ವಿಸ್ತೃತಗಳಾಗಿರುವುದರಿಂದಲೂ ಅಲ್ಪಜ್ಞಾನಾದಿಗಳು ಈಗಿನ ಪುರುಷರಿಗೆ ತಿಳಿಯಲಿಕ್ಕೂ ಮಾಡಲಿಕ್ಕೂ ಅಶಕ್ಯಗಳಾಗಿವೆ. ॥೧೫೯॥ ಅಂತಹ ತಂತ್ರಮಾರ್ಗಗಳ ಸಾರವಾದ ಈ ನಾವು ಹೇಳಿದ ತಂತ್ರಮಾರ್ಗವು ಅನಾಯಾಸದಿಂದ ತಿಳಿಯಲಿಕ್ಕೂ ಮಾಡಲಿಕ್ಕೂ ಶಕ್ಯವಾಗಿದ್ದು ಇಲ್ಲಿ ಹೇಳಿದ ಪ್ರಕಾರ ಕರ್ಮವನ್ನು ಮಾಡುವವರಿಗೆ ವಿಶೇಷತಃ ಫಲಪ್ರದವೂ ಆಗಿದೆ. ಎಷ್ಟು ಕರ್ಮಗಳನ್ನು ಮಾಡದಿದ್ದರೆ ಕರ್ಮವು ಸಫಲವಾಗುವುದಿಲ್ಲವೋ (॥೧೬೦॥) ಆ ಎಲ್ಲಾ ಕರ್ಮಗಳನ್ನು ತಂತ್ರಪ್ರತಿಪಾದಕವಾದ ಈ ಗ್ರಂಥದಲ್ಲಿ ಆಗಮದಲ್ಲಿ ಹೇಳಿದ ಪ್ರಕಾರ ಸಂಗ್ರಹಿಸಿ ಹೇಳಿದೆ. ಇಲ್ಲಿ ಹೇಳಿದ ಪ್ರಕಾರ ಪೂಜಿತನಾದ ಶ್ರೀ ಭಗವಂತನು ಭಕ್ತರಿಗೆ ಪ್ರಸನ್ನನಾಗುತ್ತಾನೆ. ಪ್ರಸಾದದಿಂದ ಸಂಸಾರದಿಂದ ಬಿಡುಗಡೆ ಮಾಡಿ ಮೋಕ್ಷವನ್ನು ಕೊಟ್ಟು ಅಭೀಷ್ಟಪ್ರದನಾಗುತ್ತಾನೆ. ॥೧೫೭-೧೬೧॥

॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ

ತಂತ್ರಸಾರೇ ತೃತೀಯೋಽಧ್ಯಾಯಃ ॥

॥ ಶ್ರೀಃ ॥

# ನಾಲ್ಕನೇ ಅಧ್ಯಾಯವು

ಮೂ॥ ಅಥ ವಿಷ್ಣೂದಿತೇ ತಂತ್ರಸಾರೇ ಮಂತ್ರಗಣೋ ಹಿ ಯಃ।
ಉದಿತಃ ಸಂಗ್ರಹೇಣಾಸಾವುಚ್ಯತೇಽಖಿಲಸಾಧಕಃ ॥ ॥೧॥

ಅ॥ ಪ್ರತಿಮಾನಿರ್ಮಾಣಾದಿಗಳನ್ನು ಹೇಳಿದ ಮೇಲೆ ಸಾಕ್ಷಾತ್ ಮೂಲರೂಪಿಯಾದ ಶ್ರೀ ನಾರಾಯಣನಿಂದ ವಿರಚಿತವಾದ ತಂತ್ರಸಾರದಲ್ಲಿ ಯಾವ ಮಂತ್ರಗಳ ಸಮೂಹವು ಹೇಳಲ್ಪಟ್ಟದೋ, ಆ ಮಂತ್ರಗಳ ಮಧ್ಯದಲ್ಲಿ ಐಹಿಕಾಮುಷ್ಮಿಕ ನಿಖಿಲಪುರುಷಾರ್ಥಪ್ರದವಾದ ಮಂತ್ರಗಳನ್ನು ಸಂಗ್ರಹಿಸಿ ಈ ಅಧ್ಯಾಯದಲ್ಲಿ ಹೇಳುವುದು. ॥೧॥

ಮೂ॥ ಯಾಷ್ಟಮಸ್ತೂಯುತೋಽತೇನ ಸಮೇಚಶ್ಚೈವ ಭೂಭೃತಃ।
ಬೀಜಂ ನಮಶ್ಚ ಭಗವಾನುದ್ದೇಶ್ಯೋ ರೂಪಸಂಯುತಃ ॥೨॥

ಸ ಏವ ತಾದೃಶೋ ಲೋಕತ್ರಯಪಾಲೋ ಭುವಃಪತೇಃ।
ಭಾವಂ ಮೇ ದೇಹಿ ದಾಂತೇತು ದಾಪಯ ಸ್ವಾಹಯಾ ಯುತಃ ॥೩॥

ಮನುಸ್ತಸ್ಯಾಪರೋ ನಾಮ ಬೀಜೋದ್ದೇಶ ನಮೋಯುತಃ।
ನಮಃ ಸೋದ್ದೇಶಭಗವಾನ್ ಮಹಾಶಬ್ದಯುತಶ್ಚ ಸಃ ॥೪॥

ತಾದೃಶಃ ಸ್ವಾಹಯಾ ಯುಕ್ತೋ ವರಾಹಸ್ಯಾಪರೋ ಮನುಃ।
ಶ್ಯಾಮಃ ಸುದರ್ಶನದರಾಭಯ ಸದ್ವರೇತೋ
ಭೂಮ್ಯಾ ಯುತೋಽಖಿಲನಿಜೋಕ್ತಪರಿಗ್ರಹೈಶ್ಚ ॥೫॥

ಧ್ಯೇಯೋ ನಿಜೈಶ್ಚ ತನುಭಿಃ ಸಕಲೈರುಪೇತಃ
ಕೋಲೋ ಹರಿಃ ಸಕಲವಾಂಛಿತಸಿದ್ಧಯೇಽಜಃ ॥
ವೈಷ್ಣವಾನಾಂ ಮುನಿರ್ಬ್ರಹ್ಮಾ ಮಂತ್ರಾಣಾಂ ವರ್ಣಭೇದತಃ ॥೬॥

ಜ್ಞೇಯಂ ಛಂದೋ ದೈವತ್ಯಕಸ್ತತ್ತದ್ರೂಪೋ ಹರಿಃ ಪರಃ।
ಪ್ರಣವೇನ ಸ್ವನಾಮ್ನಾ ಚ ಭೂದರೇಣ ಪರಾತ್ಮನಾ ॥೭॥

ಸರ್ವಜ್ಞಸರ್ವಶಕ್ತಿಭ್ಯಾಂ ಷಡಂಗಾನಿ ವಿದೋ ವಿದುಃ।
ಜ್ಞಾನೈಶ್ವರ್ಯಪ್ರಭಾನಂದತೇಜಃಶಕ್ತಿಭಿರೇವ ವಾ।
ಪೂರ್ಣಾತ್ಮಮಧ್ಯಗೈಃ ಸರ್ವವೈಷ್ಣವಾಂಗಾನ್ಯಥೋ ವಿದುಃ ॥೮॥

### ೩೩ ಅಕ್ಷರಗಳುಳ್ಳ ಭೂವರಾಹ ಮಂತ್ರವು

ಅ॥ ಯಕಾರಕ್ಕಿಂತ ಅನೇದಾದ ಹಕಾರವಾದರೂ ಉಕಾರ ಬಿಂದುಗಳಿಂದ ಕೂಡಿದರೆ ಭೂವರಾಹರೂಪಿ ಶ್ರೀಹರಿಯ ಬೀಜಾಕ್ಷರವು, ಹುಂ ಎಂಬ ಬೀಜಾಕ್ಷರದ ಮೇಲೆ ನಮಃ ಶಬ್ದ, ಆ ಮೇಲೆ ಚತುರ್ಥೀ ವಿಭಕ್ತ್ಯಂತವಾದ ಭಗವಚ್ಛಬ್ದ

ವರಾಹರೂಪಶಬ್ದ 3 ಲೋಕಗಳನ್ನು ರಕ್ಷಿಸುವವನು ಎಂಬ ಅರ್ಥವನ್ನು ಹೇಳುವ ಭೂರ್ಭುವಃ ಸ್ವಃ ಪತಿಃ ಎಂಬ ಶಬ್ದಗಳು, ಆ ಮೇಲೆ ಭೂಪತಿತ್ವಂ ಎಂಬ ಪದ, ಆ ಮೇಲೆ ಮೇ ದೇಹಿ ದದಾಪಯ ಎಂಬ ಪದಗಳು, ಇವು ಸ್ವಾಹಾಪದದಿಂದ ಕೂಡಿದರೆ ಭೂವರಾಹರೂಪಿ ಶ್ರೀಹರಿಯ ಮಂತ್ರವಾಗುವುದು "ಓಂ ಹುಂ ನಮೋ ಭಗವತೇ ವರಾಹರೂಪಾಯ ಭೂರ್ಭುವಃಸ್ವಃ ಪತಯೇ ಭೂಪತಿತ್ವಂ ಮೆ ದೇಹಿ ದಾದಾಪಯ ಸ್ವಾಹಾ" ೮ ಅಕ್ಷರದ ವರಾಹ ಮಂತ್ರವು ಓಂಕಾರ, ಹುಂ ಎಂಬ ಬೀಜಾಕ್ಷರ, ಚತುರ್ಥ್ಯಂತವಾದ ವಾರಾಹಪದ ನಮಃ ಶಬ್ದ ಇವು ಸೇರಿದರೆ ವರಾಹನ ೮ ಅಕ್ಷರಗಳುಳ್ಳ ಮಂತ್ರವಾಗುವುದು. "ಓಂ ಹುಂ ವರಾಹಾಯ ನಮಃ" ಎಂದು. (೧೪ ಅಕ್ಷರದವರಾಹ ಮಂತ್ರವು) ನಮಃ ಪದ, ಚತುರ್ಥ್ಯಂತವಾದ ಭಗವತ್ ಶಬ್ದ, ಮಹಾವರಾಹ್ಯ ಶಬ್ದ, ಇವು ಸ್ವಾಹಾ ಶಬ್ದದಿಂದ ಸೇರಿದರೆ ೧೪ ಅಕ್ಷರಗಳುಳ್ಳ ವರಾಹ ಮಂತ್ರವಾಗುವುದು. "ಓಂ ನಮೋ ಭಗವತೇ ಮಹಾವರಾಹಾಯ ಸ್ವಾಹಾ ಓಂ" ಎಂದು ॥ (೩ ಮಂತ್ರಗಳಲ್ಲಿ ಹೇಳಿದ ವರಾಹರೂಪಿ ಶ್ರೀ ಹರಿಯ ಧ್ಯಾನವನ್ನು ಹೇಳುತ್ತಾರೆ) ಚಕ್ರ ಶಂಖ ಅಭಯ ಮುದ್ರೆ ವರಮುದ್ರೆಗಳಿಂದಲೂ, ಭೂದೇವಿಯಿಂದಲೂ, ಆವರಣಭೂತರಾದ ಲಕ್ಷ್ಮೀ ಧರಾಅನಂತ ಬ್ರಹ್ಮ ವಾಯ್ವಾದಿಗಳಿಂದಲೂ ಕೂಡಿದವನು, ತನ್ನ ಕೃದ್ಯೋಲ್ಕಾದಿ ರೂಪಗಳಿಂದ ಸುತ್ತುವರಿಸಲ್ಪಟ್ಟವನು, ಇಂತಹ ಶ್ಯಾಮವರ್ಣನಾದ ವರಾಹರೂಪಿಯಾದ ಶ್ರೀಹರಿಯನ್ನು ಸರ್ವಾಭೀಷ್ಟಸಿದ್ಧಿಗಾಗಿ ಧ್ಯಾನಿಸಬೇಕು. ॥೫೩॥ ಶ್ರೀ ವಿಷ್ಣುವೇ ದೇವತೆಯಾಗಿ ಉಳ್ಳ ಭೂವರಾಹ ಮೊದಲಾದ ಎಲ್ಲಾ ಮಂತ್ರಗಳಿಗೂ ಬ್ರಹ್ಮನೇ ಋಷಿಯು. (ಮಂತ್ರದ್ರಷ್ಟನು) ಅಕ್ಷರಗಳನ್ನು ಗಣನೆ ಮಾಡಿ ಛಂದಸ್ಸನ್ನು ತಿಳಿದುಕೊಳ್ಳಬೇಕು. ಆವಾವ ಮಂತ್ರನಾಮಗಳುಳ್ಳ ಸರ್ವೋತ್ತಮನಾದ ಶ್ರೀಹರಿಯೇ ದೇವತೆಯು. ಎಲ್ಲಾ ವೈಷ್ಣವ ಮಂತ್ರಗಳಿಗೂ ಪ್ರಣವ, ಆವಾವ ದೇವತಾ ನಾಮ, ಭೂಧರ, ಪರಮಾತ್ಮ, ಸರ್ವಜ್ಞ ಸರ್ವಶಕ್ತಿಪದ, ಈ ೬ ಮಂತ್ರಗಳಿಂದ ಷಡಂಗನ್ಯಾಸಗಳನ್ನು ಮಾಡಬೇಕು. ಪೂರ್ಣ ಆತ್ಮಶಬ್ದಗಳ ಮಧ್ಯದಲ್ಲಿರುವ ಜ್ಞಾನ ಐಶ್ವರ್ಯ ಪ್ರಭಾ, ಆನಂದ ತೇಜಃ ಶಕ್ತಿ, ಈ ಪದಗಳಿಂದ ಎಲ್ಲಾ ವೈಷ್ಣವ ಮಂತ್ರಗಳಿಗೂ ಅಂಗನ್ಯಾಸಗಳನ್ನು ಮಾಡಬೇಕು. ॥೧-೮॥

ಅವ॥ ಶ್ರೀಕರಾಷ್ಟಕ್ಷರ ಮಂತ್ರವನ್ನು ಹೇಳುತ್ತಾರೆ.

**ಮೂ॥ ತಿಷ್ಠೋದಾದಿಃ ಸ್ವಜಾಯಾಯಾಃ ಕಾರಣಂ ಸ್ವಾಹಯಾ ಯುತಃ**
**ಶ್ರೀಕರೋಽಷ್ಟಾರ್ಣಕೋ ಮಂತ್ರೋ ಗರುಡಾರೂಢಸಂಸ್ಮೃತಿಃ ।** ॥೯॥

**ದ್ವಿರ್ಭೀಷಯ ತ್ರಾಸಯ ಚ ಪ್ರಮರ್ದಯ ತಥೈವ ಚ॥**
**ಪ್ರಧ್ವಂಸಯಾಥೋ ರಕ್ಷೇತಿ ಪಂಚಾಂಗಶ್ಚೇದುದಾಹೃತಃ** ॥೧೦॥

ಅ॥ ಉತ್ ಆದಿಯಾಗುಳ್ಳ ತಿಷ್ಠ ಶಬ್ದದ ಮೇಲೆ ಸಂಪತ್ತಿಗೆ ಕಾರಣ ಎಂಬ ಅರ್ಥದ ಶ್ರೀಕರ ಶಬ್ದದ ಮೇಲೆ ಸ್ವಾಹಾ ಶಬ್ದವನ್ನು ಸೇರಿಸಿದರೆ "ಓಂ ಉತ್ತಿಷ್ಠ ಶ್ರೀಕರ ಸ್ವಾಹಾ" ಎಂದು ಶ್ರೀಕರಾಷ್ಟಕ್ಷರ ಮಂತ್ರವಾಗುವುದು. ಈ ಮಂತ್ರದಲ್ಲಿ ಗರುಡಾರೂಢನಾದ ಶ್ರೀಹರಿಯುನ್ನು ಧ್ಯಾನಿಸಬೇಕು. ಆದಿತ್ಯ ಚಂದ್ರಾವಪಿ ಚಕ್ರಶಂಖೌ ಶಂಖ ಪ್ರಸುನಾಖ್ಯನಿಧೀ ದಧಾನಃ । ಧ್ವಾಭ್ಯಾಂ ಕರಾಭ್ಯಾಂ ವಸುತಪರ್ಯನ್ಸಃಧ್ಯೇಯೋಽಂಕಗಶ್ರೀಃಗರುಡಾಂಸಸಂಸ್ಥಃ॥" ಎಂದು ಧ್ಯಾನಮಂತ್ರವು. ಭೀಷಯ ಭೀಷಯ ಹೃದಯಾಯಃ ನಮಃ ತ್ರಾಸಯ ತ್ರಾಸಯ ಶಿರಸೇ ಸ್ವಾಹಾ, ಇತ್ಯಾದಿ ಪ್ರಕಾರ ಪಂಚಾಂಗನ್ಯಾಸವನ್ನು ಮಾಡಬೇಕು. ಅಥವಾ ಜ್ಞಾನೈಶ್ವರ್ಯ ಇತ್ಯಾದಿಗಳಿಂದ ಷಡಂಗನ್ಯಾಸ ಮಾಡಬೇಕು. ॥೧॥

## ೩೨ ಅಕ್ಷರದ ನರಸಿಂಹ ಮಂತ್ರ

**ಮೂ॥ ಕ್ರೂರಂ ವೀರಂ ಬೃಹದ್ವಿಷ್ಣುಂ ದೀಪ್ಯಂತಂ ವಿಶ್ವತೋಮುಖಂ** ॥೧೧॥

**ಪುಂಪ್ಯಗೇಂದ್ರಂ ಭಯಕರಂ ಶುಭಂ ಮೃತ್ಯೋಶ್ಚ ಮಾರಕಂ ।**
**ನಮಾಮಿ ಸ್ವಯಮಿತ್ಯೇಷಃ ದ್ವಾತ್ರಿಂಶಾರ್ಣೋ ಮನುರ್ಹರೇಃ॥** ॥೧೨॥

ದ್ವಿರ್ಜಯಸ್ಯೋಪರಿ ನಿಜಂ ಸೋದ್ದೇಶಂ ಸರ್ವವಿತ್ತಥಾ ।
ಮಹಾತೇಜೋ ಬಲಂ ವೀರ್ಯಂ ತಾದೃಶಂ ಸ್ವಾಹಯಾ ಯುತಂ ।
ಚತುರ್ವಿಂಶಾಕ್ಷರೋ ಮಂತ್ರೋ ನಿಖಿಲೇಷ್ಟಪ್ರದಾಯಕಃ॥ ॥೧೩॥

ವಿದ್ಮಹೇಧೀಮಹೇ ಪೂರ್ವಂ ಸ್ವಯಂ ಚೈವ ಮಹಾಬಲಃ ॥
ಪ್ರೇರಯೇತ್ತನ್ನ ಇತ್ಯೇತನ್ಮಧ್ಯೇಽನಂತಃ ಪ್ರಕೀರ್ತಿತಃ॥ ॥೧೪॥

ಪಾದೈರ್ವ್ಯಸ್ತೈಃ ಸಮಸ್ತೈಶ್ಚ ಪದೈಶ್ಚಾಂಗಂ ಪ್ರಕೀರ್ತಿತಂ। ॥೧೫॥

ಪೂರ್ವಯೋಸ್ತತ್ರ ಪೂರ್ವಂತು ಸರ್ವಜ್ಞೇನ ಷಡಂಗಕಂ ।
ತೃತೀಯಂ ತು ದ್ವಿರಾವೃತ್ತೈಃ ಪಾದೈರಂಗಸಮನ್ವಿತಂ॥ ॥೧೬॥

ಧ್ಯಾಯೇನ್ನೃಸಿಂಹಮುರುವೃತ್ತರವಿತ್ರಿನೇತ್ರಂ
ಜಾನುಪ್ರಸಕ್ತ ಕರಯುಗ್ಮಮಥಾಪರಾಭ್ಯಾಂ ।

ಚಕ್ರಂ ದರಂ ಚ ದಧತಂ ಪ್ರಿಯಯಾ ಸಮೇತಂ
ತಿಗ್ಮಾಂಶುಕೋಟ್ಯಧಿಕತೇಜಸಮುಗ್ರ್ಯಶಕ್ತಂ॥ ॥೧೭॥

೨॥ ಆದಿಯಲ್ಲಿ ಕ್ರೂರ ಎಂದರ್ಥವುಳ್ಳ "ಉಗ್ರಂ" ಎಂಬ ಪದ, ಆಮೇಲೆ "ವೀರಂ" ಎಂಬ ಪದ, "ಬೃಹತ್" ಎಂಬ ಅರ್ಥತ "ಮಹಾ"ಶಬ್ದದಿಂದ ಕೂಡಿದ "ವಿಷ್ಣುಂ" ಎಂಬ ಪದ, ಪ್ರಕಾಶಿಸುವ ಎಂಬ ಅರ್ಥದ "ಜ್ವಲಂತಂ" ಎಂಬ ಪದ, ವಿಶ್ವತೋಮುಖ ಎಂಬ ಅರ್ಥದ "ಸರ್ವತೋಮುಖಂ" ಎಂಬ ಪದ, ಪುರುಷನನ್ನು ಹೇಳುವ ನೃ ಶಬ್ದದಿಂದ ಕೂಡಿದ, ಮೃಗೇಂದ್ರನನ್ನು ಹೇಳುವ "ನೃಸಿಂಹಂ" ಎಂಬ ಪದ, ಭಯಂಕರ ಎಂಬ ಅರ್ಥದ "ಭೀಷಣಂ" ಎಂಬ ಪದ, ಶುಭ ಪರ್ಯಾಯ "ಭದ್ರಂ" ಎಂಬ ಪದ, ಮೃತ್ಯುವಿಗೂ ಮಾರಕ ಎಂಬ ಅರ್ಥವುಳ್ಳ ಮೃತ್ಯುಂಮೃತ್ಯುಂ ಎಂಬ ಪದ, ನಮಾಮಿ ಎಂಬ ಪದ, ಸ್ವಯಂ ಎಂಬುವುದರ ಅರ್ಥದ "ಅಹಂ" ಎಂಬ ಪದ ಇವಿಷ್ಟು ಸೇರಿ ೩೨ ಅಕ್ಷರಗಳುಳ್ಳ ನರಸಿಂಹ ಮಂತ್ರವು ಏವಂಚ - ಓಂ ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ । ನೃಸಿಂಹಂ ಭೀಷಣಂ ಭದ್ರಂ ಮೃತ್ಯುಂಮೃತ್ಯುಂ ನಮಾಮ್ಯಹಂ ಎಂದು. ॥೧೨॥ (೨೪ ಅಕ್ಷರದ ನರಸಿಂಹ ಮಂತ್ರ) ೨ ಸಲ "ಜಯ" ಶಬ್ದ ಹೇಳಿದ ಬಳಿಕ ನರಸಿಂಹಾಯ ಎಂದು, ಹಾಗೆಯೇ ಸರ್ವವಿತ್ ಎಂಬುದರ ಅರ್ಥವುಳ್ಳ "ಸರ್ವಜ್ಞಾಯ" ಎಂದು "ಮಹಾತೇಜೋಬಲವೀರ್ಯಾಯ ಸ್ವಾಹಾ" ಎಂದು ಇಷ್ಟು ಸೇರಿದರೆ ೨೪ ಅಕ್ಷರಗಳುಳ್ಳ ನರಸಿಂಹ ಮಂತ್ರವಾಗುವುದು. ಈ ಮಂತ್ರವು ನಿಖಿಲ ಅಭೀಷ್ಟಗಳನ್ನು ಕೊಡುವುದು. "ಓಂ ಜಯ ಜಯ ನರಸಿಂಹಾಯ ಸರ್ವಜ್ಞಾಯ ಮಹಾತೇಜೋಬಲವೀರ್ಯಾಯ ಸ್ವಾಹಾ ಓಂ" ಎಂದು ಮಂತ್ರವು ॥೧೩॥ (ನೃಸಿಂಹಗಾಯತ್ರೀ) "ವಿದ್ಮಹೇ" ಎಂಬ ಶಬ್ದಕ್ಕಿಂತ ಮೊದಲು "ನರಸಿಂಹಾಯ" ಎಂಬ ಶಬ್ದ, "ಧೀಮಹಿ" ಎಂಬ ಶಬ್ದಕ್ಕಿಂತ ಮೊದಲು "ಮಹಾಬಲಾಯ" ಎಂಬ ಶಬ್ದವು, ಪ್ರೇರಣಾರ್ಥಕವಾದ "ಪ್ರಚೋದಯಾತ್", "ತನ್ನಃ" ಈ ಶಬ್ದಗಳ ನಡುವೆ "ಅನಂತಃ" ಎಂಬ ಪದವು ಇಷ್ಟು ಸೇರಿದರೆ ನರಸಿಂಹ ಗಾಯತ್ರಿಯು "ಓಂ ನರಸಿಂಹಾಯ ವಿದ್ಮಹೇ ಮಹಾಬಲಾಯ ಧೀಮಹಿ ತನ್ನೋಽನಂತಃ ಪ್ರಚೋದಯಾತ್ ಓಂ" ಎಂದು ನರಸಿಂಹ ಗಾಯತ್ರಿಯು. ॥೧೪॥ ಈ ೩ ಮಂತ್ರಗಳಲ್ಲಿ ಮೊದಲನೆಯ ಮಂತ್ರಕ್ಕೆ "ಉಗ್ರಂ ವೀರಂ ಮಹಾವಿಷ್ಣುಂ ಹೃದಯಾಯ ನಮಃ ಇತ್ಯಾದಿ ಪ್ರಕಾರ ಮಂತ್ರಗಳ ಪಾದಗಳಿಂದಲೂ, ವಿಶಿಷ್ಟ ಮಂತ್ರಗಳಿಂದಲೂ ಪಂಚಾಂಗನ್ಯಾಸವನ್ನು, ಷಡಂಗನ್ಯಾಸ ಪಕ್ಷದಲ್ಲಿ "ಸರ್ವಜ್ಞಾಯ ಅಸ್ತ್ರಾಯ ಫಟ್" ಎಂದೂ ಸೇರಿಸಿಕೊಳ್ಳಬೇಕು. ಜಯ ಜಯ ಎಂಬ ೨ನೇ ಮಂತ್ರಕ್ಕೆ ಜಯ ಮೊದಲಾದ ೬ ಪದಗಳಿಂದ "ಜಯ ಹೃದಯಾಯ ನಮಃ" ಇತ್ಯಾದಿ ಪ್ರಕಾರ ಷಡಂಗನ್ಯಾಸವನ್ನು ಮಾಡಬೇಕು. ೩ನೇ ನರಸಿಂಹ ಗಾಯತ್ರೀ ಮಂತ್ರಕ್ಕೆ ೩ ಪಾದಗಳನ್ನು ೨ ಸಲ ಉಚ್ಚರಿಸಿ ಷಡಂಗನ್ಯಾಸ ಮಾಡಬೇಕು. ॥೧೫॥೧೬॥ (ನರಸಿಂಹನ ಧ್ಯಾನವು) ವಿಶಾಲಗಳೂ, ವರ್ತುಲಗಳೂ ಆದ, ಸೂರ್ಯನಂತೆ ಪ್ರಕಾಶಮಾನಗಳಾದ ೩ ಕಣ್ಣುಗಳುಳ್ಳವನೂ, ಎರಡು ಕೈಗಳನ್ನು ಮೊಣಕಾಲಿನಲ್ಲಿಟ್ಟವನೂ, ಉಳಿದ ಎರಡು ಕೈಗಳಿಂದ ಚಕ್ರ

ಶಂಖಿಗಳನ್ನು ಧರಿಸಿರುವವನೂ ಕೋಟಿ ಸೂರ್ಯರಿಗಿಂತಲೂ ಮಿಗಿಲಾದ ತೇಜಸ್ಸುಳ್ಳವನೂ, ಪೂರ್ಣ ಶಕ್ತಿಯುಳ್ಳವನೂ ಆದ ಲಕ್ಷ್ಮೀಸಹಿತನಾದ ನರಸಿಂಹನನ್ನು ಧ್ಯಾನಿಸಬೇಕು. ||೧೭||

ಮೂ|| ಸರ್ವೇಷ್ವಪಿ ಹಿ ಮಂತ್ರೇಷು ಧ್ಯ್ಯಾದ್ಯಂನಂತಾಂತಬಾಹುಕಃ ।
ಚೇತನಾಂತಸ್ಥಮಾರಭ್ಯ ಸರ್ವಗಾಂತಸ್ಥರೂಪವಾನ್ ॥ ||೧೮||

ಅನಂತರೂಪೋ ಧ್ಯೇಯೋಽತಃ ಸ್ವಗುರೂಕ್ತಾನುಸಾರತಃ ।
ಯಥಾಯೋಗ್ಯಂ ಯಥಾಶಕ್ತಿ ತತ್ತದಾಯುಧಭೂಷಣಃ|| ||೧೯||

ಚಕ್ರಶಂಖಗದಾಪದ್ಮಖಡ್ಗಖೇಟಾಃ ಸಶಾರ್ಙ್ಗಕಾಃ ।
ಶರೋ ಮುಸಲವಜ್ರೌ ಚ ಹಲಃ ಪಾಶಾಂಕುಶೌ ತಥಾ|| ||೨೦||

ಶೂಲಂ ಚ ಭಿಂಡಿಪಾಲಶ್ಚ ಪಟ್ಟಿಸೋಽಗ್ನಿರ್ವರಾಭಯೇ ।
ತತ್ವಮುದ್ರಾಽಕ್ಷಮಾಲಾ ಚ ಪುಸ್ತಕಂ ಚ ವಿದಾರಣಂ ।
ಇತ್ಯಾದೀನ್ಯಖಿಲಾನ್ಯೇವ ವಿಷ್ಣೋಶ್ಚಿಂತ್ಯಾನಿ ಬಾಹುಷು|| ||೨೧||

ಅ|| ಪ್ರತಿಯೊಂದು ಮಂತ್ರಗಳಲ್ಲಿಯೂ ಪ್ರತಿಪಾದ್ಯಗಳಾದ ಭಗವನ್ಮೂರ್ತಿಗಳು ೨ ಕೈ, ೪ ಕೈ ಈ ಕ್ರಮದಿಂದ ಅನಂತಾನಂತ ಬಾಹುಗಳುಳ್ಳವುಗಳು, 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತ್ಯನುಸಾರವಾಗಿ ಅಣುರೂಪರಾದ ಜೀವರೊಳಗಿರುವ ಅತಿ ಸೂಕ್ಷ್ಮವಾದ ರೂಪವನ್ನಾರಂಭಿಸಿ ಅದಕ್ಕಿಂತ ಸ್ವಲ್ಪ ಸ್ಥೂಲ ರೂಪವು. ಅದಕ್ಕಿಂತಲೂ ದೊಡ್ಡ ರೂಪವು. ಇತ್ಯಾದಿ ಕ್ರಮದಿಂದ ಅವ್ಯಾಕೃತಾಕಾಶಪರ್ಯಂತ ಇರತಕ್ಕ ಅನೇಕ ಪರಿಮಾಣಗಳಿಂದ ಕೂಡಿದ ರೂಪಗಳುಳ್ಳವನೆಂದು ಶ್ರೀ ಭಗವಂತನನ್ನು ಧ್ಯಾನಿಸಬೇಕು. ||೧೮|| ಶಿಷ್ಯನ ಯೋಗ್ಯತೆಯನ್ನು ತಿಳಿದುಕೊಂಡ ಗುರುಗಳ ಉಪದೇಶ ಪ್ರಕಾರ ತನ್ನ ಶಕ್ತ್ಯನುಸಾರ ಶ್ರೀಹರಿಯು ಅನಂತಾನಂತರೂಪಗಳುಳ್ಳವನು ಎಂದೂ ಧ್ಯಾನಿಸಬೇಕು. (ಅಂದರೆ ಶಿಷ್ಯನಿಗೆ ಎಂತಹ ರೂಪವನ್ನು ಧ್ಯಾನಿಸಲಿಕ್ಕೆ ಯೋಗ್ಯತೆಯಿದೆಯೋ, ಅಂತಹ ಯೋಗ್ಯತೆಯನ್ನು ತಿಳಿದ ಗುರುವು ಎಂತಹ ರೂಪವನ್ನು ಉಪದೇಶಿಸುವನೋ ಅಂತಹ ರೂಪವನ್ನೇ ಧ್ಯಾನಿಸಬೇಕು) (ಮತ್ತು ಅಂತಹ ಗುರುಗಳು ಸಿಗುವ ಪರ್ಯಂತ ಬೇರೆ ಗುರುಗಳು, ಉಪದೇಶಿಸಿದ ಅನೇಕ ರೂಪಗಳಲ್ಲಿ ತನಗೆ ಎಂತಹ ರೂಪವನ್ನು ಧ್ಯಾನಿಸಲಿಕ್ಕೆ ಶಕ್ತಿಯಿದೆಯೋ ಅಂತಹ ರೂಪವನ್ನೇ ಧ್ಯಾನಿಸಬೇಕು) ಮತ್ತು ಯಾವ ಭಗವದ್ರೂಪಕ್ಕೆ ಯಾವ ಚಕ್ರ ಮೊದಲಾದ ಆಯುಧಗಳೂ ಕಿರೀಟ ಕುಂಡಲಾದಿ ಆಭರಣಗಳೂ ಯೋಗ್ಯಗಳೆಂದು ಆಗಮಗಳಲ್ಲಿ ಹೇಳಿವೆಯೋ ಅಂತಹ ಆಯುಧ ಆಭರಣಗಳುಳ್ಳವನೆಂದೂ ಶ್ರೀ ಹರಿಯನ್ನು ಧ್ಯಾನಿಸಬೇಕು. ||೧೯|| ಚಕ್ರ, ಶಂಖ, ಗದೆ, ಪದ್ಮ, ಖಡ್ಗ, ಖೇಟ (ಗುರಾಣಿ) ಬಿಲ್ಲು, ಬಾಣ, ಒನಕೆ, ವಜ್ರಾಯುಧ, ನೇಗಿಲು, ಹಗ್ಗ, ಅಂಕುಶ, ಶೂಲಾಯುಧ, ಭಿಂಡಿಪಾಲ, ಯುದ್ಧಕ್ಕೆ ಉಪಯುಕ್ತವಾದ ಕೊಡಲಿ, ಅಗ್ನಿಯಂತೆ ಭಯಜನಕ ಆಯುಧ, ವರಮುದ್ರೆ, ಅಭಯಮುದ್ರೆ, ತತ್ತ್ವಮುದ್ರೆ, ಪದ್ಮಾಕ್ಷಮಾಲಿಕೆ, ಪುಸ್ತಕ ಮೊದಲಾದವುಗಳನ್ನು (ಅಂದರೆ ಪರಶ್ವಧ, ಶಕ್ತಿ, ಪ್ರಾಸ, ಅಮೃತಪಸ್ತ್ರ ಮೊದಲಾದವುಗಳನ್ನು) ಶ್ರೀ ಪರಮಾತ್ಮನು ತನ್ನ ಒಂದೊಂದು ಕೈಯಲ್ಲಿ ಒಂದೊಂದನ್ನು ಹಿಡಿದುಕೊಂಡಿರುತ್ತಾನೆಂದೂ, ವಿದಾರಣವನ್ನು ೨ ಕೈಗಳಲ್ಲಿ ಹಿಡಿದುಕೊಂಡು ಶತ್ರುಗಳನ್ನು ಸಂಹರಿಸುತ್ತಿರುತ್ತಾನೆಂದೂ ಧ್ಯಾನಿಸಬೇಕು. ||೨೦-೨೧||

## ಹಂಸಮಂತ್ರವು

ಮೂ|| ವಿಯತ್ಸ ಇತಿ ಯುಗ್ಮಾರ್ಣೋ ವಿಪರೀತಶ್ಚ ಸ ಸ್ಮೃತಃ । ||೨೨||

ಸಃ ಸರ್ಗಹೀನೋ ವೇತಶ್ಚ ಬಿಂದುಹೀನೋತ್ತರಸ್ತಥಾ ।
ತ್ರಯ ಏತೇ ಮಹಾಮಂತ್ರಾಃ ಪುರುಷಾರ್ಥಚತುಷ್ಟಯೇ|| ||೨೩||

ಕಲ್ಪವೃಕ್ಷಾಃ ಪ್ರಿಯಾ ವಿಷ್ಣೋರ್ವಿಶೇಷಾತ್ ಜ್ಞಾನದಾಯಕಾಃ ।
ಏತೈರೇವ ದ್ವಿರಾವೃತ್ತೈರಂಗಮೇಷಾಂ ಪ್ರಕೀರ್ತಿತಂ॥ ॥೨೪॥

ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ॥
ಏಕವಿಂಶತ್ಸಹಸ್ರಾತ್ಮಾ ಸಷಟ್‌ಛತಮಹರ್ನಿಶಂ॥ ॥೨೫॥

ಅರ್ಪಣೀಯೋ ಹರೌ ನಿತ್ಯಂ ಪ್ರಾತರ್ಯೋಗೋ ಮಹಾನಯಂ ।
ಅಶೇಷದೋಷದಹನಸ್ತತ್ತ್ವಜ್ಞಾನಪ್ರದಾಯಕಃ॥ ॥೨೬॥

ಅಷ್ಟೈಶ್ವರ್ಯಪ್ರದಶ್ಚೈವ ಕೃತಾದೌ ಸಮುಪಾಸತಾಂ ।
ತಾರಯೋಗೋಽಪ್ಯೇವಮೇವ ಬ್ರಹ್ಮಾದಾವೇವ ವರ್ತತೇ॥ ॥೨೭॥

ಧ್ಯಾಯೇದ್ರವೀಂದುಕರಮಿಂದುಸಹಸ್ರಲಕ್ಷ ಕಾಂತಿಂ ।
ಪ್ರಿಯಾಸಹಿತಮಾಸ್ಥಿತಮಿಂದುಬಿಂಬೇ ।
ಶಂಖಾರಿದೋರ್ದ್ವಯಮುದರ್ಕಮಹೇಂದುಬಿಂಬಾತ್
ಸಂಸಿಚ್ಯಮಾನಮಮೃತೇನ ರಮಾಧಿನಾಥಂ॥ ॥೨೮॥

ಅಂತ್ಯಸ್ಯ ರಕ್ತವರ್ಣೋ ವಾ ಧ್ಯೇಯೋ ವಿಷ್ಣುಸ್ಸನಾತನಃ ।
ವಿದ್ಯುದ್ವರ್ಣೋಽಥವಾ ಜ್ಞೇಯಃ ಶಕ್ತ್ಯೇತಃ ಪಂಚಮಂತ್ರಯುಕ್॥ ॥೨೯॥

ಅಷ್ಟಾಕ್ಷರೋ ಮಹಾಮಂತ್ರಸ್ಸ್ವೈರೇವಾಂಗೈಃ ಸಮನ್ವಿತಃ ।
ಅಂತ್ಯಧ್ಯಾನಯುತಶ್ಚೈವ ನಿಶ್ಶ್ರೇಷಪುರುಷಾರ್ಥದಃ॥ ॥೩೦॥

ಅ॥ (ಮೂಲಾರೂಪವಾದ ಹಂಸಮಂತ್ರವು) ಅಕಾರಬೀಜವಾದ ಹಕಾರಕ್ಕೆ ಅನುಸ್ವಾರವನ್ನು ಸೇರಿಸಿ ಸಃ ಎಂದು ಸೇರಿಸಿದರೆ 'ಹಂಸಃ' ಎಂದು ೨ ಅಕ್ಷರಗಳುಳ್ಳ ಮಂತ್ರವೂ, ಆ ಮಂತ್ರವನ್ನೇ ಮುಂದು ಹಿಂದಾಗಿ ಉಚ್ಚರಿಸಿದರೆ 'ಸೋಹಂ' ಎಂದು ೨ನೇ ಮಂತ್ರವೂ, ಸಕಾರದ ವಿಸರ್ಗವನ್ನೂ, ಅಕಾರವನ್ನೂ ತೆಗೆದು ವಾಕಾರವನ್ನು ಸೇರಿಸಿದರೆ ಸ್ವಾ ಎಂದೂ, ಹಂ ಎಂಬುದರಲ್ಲಿ ಅನುಸ್ವಾರವನ್ನು ತೆಗೆದು ಆಕಾರ ಸೇರಿಸಿದರೆ ಹಾ ಎಂದೂ ಏವಂಚ 'ಸ್ವಾಹಾ' ಎಂದು ೨ ಅಕ್ಷರಗಳುಳ್ಳ ೩ನೇ ಮಂತ್ರವೂ ಆಗುತ್ತದೆ. ಏವಂಚ 'ಓಂ ಹಂಸಃ ಸೋಽಹಂ ಸ್ವಾಹಾ' ಎಂದು ೩ ಮಂತ್ರರೂಪವಾದ ಮಾಲಾರೂಪವಾದ ೬ ಅಕ್ಷರಗಳುಳ್ಳ ಹಂಸಮಂತ್ರವು ಈ ೩ ಮಂತ್ರಗಳು ಧರ್ಮಾದಿ ೪ ಪುರುಷಾರ್ಥಗಳನ್ನು ಕೊಡುವ ವಿಷಯದಲ್ಲಿ ಕಲ್ಪವೃಕ್ಷದಂತೆ ಶೀಘ್ರದಲ್ಲಿ ಅಪೇಕ್ಷಿತ ಅಶೇಷ ಫಲಪ್ರದಗಳು. ಶ್ರೀ ವಿಷ್ಣುವಿಗೆ ಅತಿ ಪ್ರಿಯಗಳು. ವಿಶೇಷತಃ ಶ್ರೀ ವಿಷ್ಣು ವಿಷಯಕ ಯಥಾರ್ಥಜ್ಞಾನವನ್ನು ಹುಟ್ಟಿಸುವವುಗಳು, ೨ ಸಲ ಉಚ್ಚರಿಸಿದ ಈ ಮಂತ್ರಗಳಿಂದಲೇ ಷಡಂಗನ್ಯಾಸವಾಗುವುದು. ॥೨೨॥೨೩॥೨೪॥ ಜ್ಞಾನಿಗಳಾದ ವಾಯುದೇವರೂ, ಅಜ್ಞರಾದ ಜೀವರೂ ಪ್ರತಿದಿನವೂ ೨೧,೬೦೦ ಸಲ ಶ್ವಾಸರೂಪವಾದ ಹಂಸಮಂತ್ರ ಜಪವನ್ನು ಮಾಡುತ್ತಲೇ ಇರುತ್ತಾರೆ. ॥೨೫॥ ಜ್ಞಾನಿಗಳು ಈ ಜಪವನ್ನು ಪ್ರತಿನಿತ್ಯವೂ ಸೂರ್ಯೋದಯ ಕಾಲದಲ್ಲಿಯೇ ಶ್ರೀಹರಿಯಲ್ಲಿ ಅರ್ಪಿಸುತ್ತಾರೆ. ಪೂರ್ವೇದ್ಯುಃ ಪ್ರಾತರಾರಭ್ಯಅದ್ಯ ಸೂರ್ಯೋದಯ ಪರ್ಯಂತಂ ಮದ್ದೇಹೇ ಸ್ಥಿತ್ವಾ ಮುಖ್ಯಪ್ರಾಣೇನ ಕೃತೇನ ಮುಖ್ಯಪ್ರಾಣಪ್ರೇರಿತೇನ ಮಯಾ ಕೃತೇನ ಚ ಷಟ್‌ಶತಾಧಿಕೈಕವಿಂಶತ್ಸಹಸ್ರಸಂಖ್ಯಾಕಶ್ವಾಸರೂಪಹಂಸಮಂತ್ರಜಪೇನ ಮುಖ್ಯಪ್ರಾಣಪತಿಃ ಹಂಸರೂಪೀ ಭಗವಾನ್ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಎಂದು ಪ್ರಾತಃ ಕಾಲದಲ್ಲಿಯೇ ಪೂರ್ವಸಂಕಲ್ಪಿತ ಜಪವನ್ನು ಸಮಾಪಿಸಬೇಕು. ಆವಾಗಲೇ, ಅದ್ಯ ಪ್ರಾತರಾರಭ್ಯಶ್ವಃ ಸೂರ್ಯೋದಯಪರ್ಯಂತಂ ಷಟ್‌ಶತಾಧಿಕೈಕವಿಂಶತ್ಸಹಸ್ರಸಂಖ್ಯಾಕ ಶ್ವಾಸರೂಪಹಂಸ ಮಂತ್ರಜಪಂ ಮುಖ್ಯಪ್ರಾಣಃ ಮದ್ದೇಹೇ ಸ್ಥಿತ್ವಾ ಕರೋತಿ ತತ್ಪ್ರೇರಿತೋಽಹಂ ಚ ಕರೋಮಿ ಎಂದು ಉತ್ತರಜಪಸಂಕಲ್ಪವನ್ನೂ ಮಾಡಬೇಕು. ಅತಏವ ಅತಿಶಯಿತ ಫಲಪ್ರದವಾಗಿ ಶ್ರೇಷ್ಠವಾದ ಕಾರಣ ಈ ಹಂಸಮಂತ್ರಕ್ಕೆ 'ಪ್ರಾತರ್ಯೋಗ' ಎಂದು ಹೆಸರು ಕೃತಾದಿ ೪

ಯುಗಗಳಲ್ಲಿಯೂ ಶ್ವಾಸರೂಪಹಂಸಮಂತ್ರವನ್ನು ಜಪಿಸುವವರ ಸಮಸ್ತದೋಷಗಳನ್ನು ದಹಿಸಿ ತತ್ವಜ್ಞಾನವನ್ನೂ ಅಣಿಮಾದ್ಯಷ್ಟೈಶ್ವರ್ಯಗಳನ್ನೂ ಕೊಡುವುದು. ಈ ಹಂಸಮಂತ್ರಕ್ಕೆ ಓಂಕಾರವನ್ನು ಸೇರಿಸಿದರೆ ೪ ಮಾಲಾ ಮಂತ್ರಗಳು, ಒಟ್ಟಾಗಿ ಸೇರಿ "ಓಂ ಹಂಸಃ ಸೋಹಂ ಸ್ವಾಹಾ" ಎಂದು ೭ ಅಕ್ಷರಗಳುಳ್ಳ ಇನ್ನೊಂದು ಹಂಸಮಂತ್ರವಾಗುವುದು. ೭ ಅಕ್ಷರಗಳುಳ್ಳ ಈ ಹಂಸಮಂತ್ರದ ಜಪಾದಿಗಳಲ್ಲಿ ಬ್ರಹ್ಮಾದಿ ದೇವತೆಗಳೇ ಅಧಿಕಾರಿಗಳು (ಜ್ಞಾನಮಾತ್ರದಲ್ಲಿ ಸರ್ವರಿಗೂ ಅಧಿಕಾರವಿದೆ) ॥೨೬॥೨೭॥ (೪ ಹಂಸಮಂತ್ರಗಳ ಧ್ಯಾನ ಪ್ರಕಾರ) ಮೇಲಿನ ೨ ಕೈಗಳಲ್ಲಿ ಸೂರ್ಯಚಂದ್ರರನ್ನೂ, ಕೆಳಗಿನ ೨ ಕೈಗಳಲ್ಲಿ ಶಂಖ ಚಕ್ರಗಳನ್ನೂ ಧರಿಸಿರುವವನೂ, ೧೦೦೦, ೧೦೦೦೦೦, ಚಂದ್ರರಿಗಿಂತಲೂ ಹೆಚ್ಚು ಕಾಂತಿಯಿರುವವನೂ, ಲಕ್ಷ್ಮೀಸಮೇತನಾಗಿ ಚಂದ್ರಮಂಡಲದ ಮಧ್ಯದಲ್ಲಿರುವವನೂ, ಶ್ರೇಷ್ಠವಾದ ಮಹಾಚಂದ್ರಮಂಡಲದ ಏಕದೇಶದಿಂದ ಸುರಿಯುತ್ತಿರುವ ಅಮೃತದಿಂದ ಅಭಿಷೇಚಿಸಲ್ಪಡುತ್ತಿರುವವನೂ ಆದ ರಮಾದೇವಿಗೆ ಸ್ವಾಮಿಯಾದ ಶ್ರೀ ಪರಮಾತ್ಮನನ್ನು ಧ್ಯಾನಿಸಬೇಕು ॥೨೮॥ ೭ ಅಕ್ಷರಗಳುಳ್ಳ ೫ನೇ ಹಂಸಮಂತ್ರಕ್ಕೆ ಸನಾತನನಾದ ಶ್ರೀಹರಿಯನ್ನು ರಕ್ತವರ್ಣನು ಅಥವಾ ಮಿಂಚಿನಂತೆ ವರ್ಣವುಳ್ಳವನೆಂದೂ ಧ್ಯಾನಿಸಬೇಕು. ಹಿಂದೆ ಹೇಳಿದ ಕೊನೆಯ ಹಂಸ ಮಂತ್ರವು ಶಕ್ತಿಬೀಜವಾದ ಅನುಸ್ವಾರಯುಕ್ತವಾದ ಹ್ರೀಂಕಾರದಿಂದ ಯುಕ್ತವಾದರೆ ೫ ಮಂತ್ರಗಳಿಂದೊಡಗೂಡಿದ ೮ ಅಕ್ಷರಗಳುಳ್ಳ "ಓಂ ಹ್ರೀಂ ಹಂಸಃ ಸೋಹಂ ಸ್ವಾಹಾ" ಎಂಬ ಹಂಸಾಷ್ಟಾಕ್ಷರ ಮಹಾಮಾಲಾ ಮಂತ್ರವಾಗುವುದು. ಈ ಮಾಲಾ ಮಂತ್ರಕ್ಕೆ ಓಂಕಾರ ಹ್ರೀಂಕಾರ ಮೊದಲಾದ ೫ ಮಂತ್ರಗಳಿಂದಲೇ ಪಂಚಾಂಗನ್ಯಾಸವಾಗುವುದು. ೮ ಅಕ್ಷರಗಳುಳ್ಳ ಈ ಹಂಸಮಂತ್ರದಲ್ಲಿ ೭ ಅಕ್ಷರಗಳುಳ್ಳ ಹಂಸಮಂತ್ರದಂತೆ ರಕ್ತವರ್ಣ ಅಥವಾ ವಿದ್ಯುದ್ವರ್ಣನಾದ ಶ್ರೀ ವಿಷ್ಣುವನ್ನು ಧ್ಯಾನಿಸಬೇಕು. ಈ ಮಂತ್ರವೂ ಸರ್ವಪುರುಷಾರ್ಥಪ್ರದವು (ಈ ಮಂತ್ರದಲ್ಲಿ ಸರ್ವರಿಗೂ ಅಧಿಕಾರವಿದೆ.)

ಮಂತ್ರ ಚಿಂತಾಮಣಿ ಮಂತ್ರ ಅಥವಾ ದಧಿವಾಮನ ಮಂತ್ರ.

ಮೂ॥ ಮೂಲಂ ನಃ ಪ್ರತಿಷೇಧಶ್ಚ ಸೋದ್ದೇಶೋ ಭಗವಾನಪಿ ।
ವಿಷ್ಣುರ್ಭೋಜ್ಯಾಧಿಪಃ ಸ್ವಾಹಾಯುಕ್ತೋऽಷ್ಟಾದಶವರ್ಣಕಃ॥ ॥೩೦॥

ಅಂಗಾನಿ ತತ್ಪದೈರೇವ ಮಂತ್ರಚಿಂತಾಮಣಿಃ ಸ್ವಯಂ ।
ಯಥೇಷ್ಟಭಕ್ಷ್ಯಭೋಜ್ಯಾದಿದಾತಾ ಮುಕ್ತಿಪ್ರದಾಯಕಃ॥ ॥೩೨॥

ಧ್ಯಾಯೇತ್ಸುಶುಕ್ಲಮರವಿಂದದಲಾಯತಾಕ್ಷಂ
ಸೌವರ್ಣಪಾತ್ರದಧಿಭೋಜ್ಯಮಥಾಮೃತಂ ಚ ।

ದೋರ್ಭ್ಯಾಂ ದಧಾನಮಖಿಲೈಶ್ಚ ಸುರೈಃ ಪರೀತಂ
ಶೀತಾಂಶುಮಂಡಲಗತಂ ರಮಯಾ ಸಮೇತಂ॥ ॥೩೩॥

ಅ॥ ಸರ್ವ ಶಾಸ್ತ್ರಗಳಿಗೂ ಮೂಲಭೂತವಾದ ಓಂಕಾರ, ನಕಾರ, ನಿಷೇಧಾರ್ಥಕವಾದ ಮಃ ಚತುರ್ಥ್ಯಂತವಾದ ಭಗವತೇ, ವಿಷ್ಣವೇ, ಭೋಜ್ಯ ವಸ್ತುಗಳಿಗೆ ಅಧಿಪತಿ, ಎಂಬ ಅರ್ಥವುಳ್ಳ ಅನ್ನಾಧಿಪತಯೇ, ಈ ಶಬ್ದಗಳ ಕೊನೆಗೆ ಸ್ವಾಹಾ ಶಬ್ದ, ಇವೆಲ್ಲಾ ಸೇರಿದರೆ ೧೮ ಅಕ್ಷರದ "ಓಂ ನಮೋ ಭಗವತೇ, ವಿಷ್ಣವೇ ಅನ್ನಾಧಿಪತಯೇ ಸ್ವಾಹಾ" ಎಂಬ ಮಂತ್ರಚಿಂತಾಮಣಿ ಮಂತ್ರ, ಅಥವಾ ದಧಿವಾಮನ ಮಂತ್ರವಾಗುವುದು ॥೩೦॥ ಮಂತ್ರದ ೬ ಪದಗಳಿಂದಲೇ ಷಡಂಗನ್ಯಾಸಮಾಡಬೇಕು. ಇಲ್ಲಿ ಯಥೇಷ್ಟ ಭಕ್ಷ್ಯ ಭೋಜ್ಯಾದಿ ಐಹಿಕ ಸಂಪತ್ತುಗಳನ್ನೂ, ಪರತ್ರ ಮೋಕ್ಷವನ್ನೂ ಕೊಡಬಲ್ಲುದು. ॥೩೨॥ (ಧ್ಯಾನಪ್ರಕಾರ) ಅತಿ ಶುಭ್ರವರ್ಣನೂ, ಕಮಲದಳದಂತೆ ವಿಶಾಲನೇತ್ರನೂ, ಚಿನ್ನದ ಪಾತ್ರದಲ್ಲಿರತಕ್ಕ ದಧ್ಯನ್ನ, ಅಮೃತಗಳನ್ನು ೨ ಕೈಗಳಿಂದ ಧರಿಸಿರುವವನೂ, ಎಲ್ಲಾ ದೇವತೆಗಳಿಂದೊಡಗೂಡಿ ಚಂದ್ರಮಂಡಲದಲ್ಲಿ ಕುಳಿತವನೂ, ಇಂತಹ ಲಕ್ಷ್ಮೀಸಮೇತನಾದ ಶ್ರೀ ಪರಮಾತ್ಮನನ್ನು ಧ್ಯಾನಿಸಬೇಕು. ॥೩೦-೩೩॥

## ವಾಮನ ಮಂತ್ರವು

ಮೂ॥ ಅಮೃತಃ ಸ್ವಯಮುದ್ದೇಶಯುತಃ ಸಹೃದಯೋ ಮನುಃ।
ಸತಾರೋಽಷ್ಟಾಕ್ಷರೋಽಂಗಾನಿ ಪದ್ಯೈರ್ವ್ಯಸ್ತಸಮಸ್ತಕೈಃ॥ ॥೩೪॥

ಉದ್ಯದ್ರವಿಪ್ರಭಮರೀಂದ್ರದರೌ ಗದಾಂ ಚ
ಜ್ಞಾನಂ ಚ ಬಿಭ್ರತಮಜಂ ಪ್ರಿಯಯಾ ಸಮೇತಂ।
ವಿಶ್ವಾವಕಾಶಮಭಿತಃ ಪ್ರತಿಪೂರಯಂತಂ
ಭಾಸಾ ಸ್ವಯಾ ಸ್ಮರತ ವಿಷ್ಣುಮಜಾದಿವಂದ್ಯಂ॥ ॥೩೫॥

ಅ॥ ಅಮೃತಬೀಜವಾದ ವಾಂ, ಚತುರ್ಥ್ಯಂತವಾದ ವಾಮನಾಯ ನಮಃ, ಆದಿಯಲ್ಲಿ ಓಂಕಾರ, ಇವಿಷ್ಟು ಸೇರಿದರೆ "ಓಂ ವಾಂ ವಾಮನಾಯ ನಮಃ" ಎಂದು ೮ ಅಕ್ಷರಗಳುಳ್ಳ ವಾಮನ ಮಂತ್ರವಾಗುವುದು. ಈ ಮಂತ್ರದ ೪ ಪದ ವಿಶಿಷ್ಟಮಂತ್ರ ಈ ೫ ಪದಗಳಿಂದ ಪಂಚಾಂಗನ್ಯಾಸಮಾಡಬೇಕು. ॥೩೪॥ (ಧ್ಯಾನವು) ಉದಯಿಸುತ್ತಿರುವ ಸೂರ್ಯನಂತೆ ಪ್ರಕಾಶಿಸಿರುವವನೂ, ಚಕ್ರ ಶಂಖ ಗದಾ ಜ್ಞಾನ ಮುದ್ರೆಗಳನ್ನು ೪ ಕೈಗಳಿಂದ ಧರಿಸಿರುವವನೂ, ತನ್ನ ಕಾಂತಿಯಿಂದ ಸಮಸ್ತ ಜಗತ್ತನ್ನು ಸುತ್ತಲೂ ಪ್ರಕಾಶಿಸುವವನೂ, ಬ್ರಹ್ಮಾದಿ ದೇವತೆಗಳಿಂದ ಸ್ತುತಿಸಲ್ಪಡುವವನೂ, ಅನಾದಿನಿತ್ಯನೂ ಆದ ಲಕ್ಷ್ಮೀಸಮೇತನಾದ ಶ್ರೀ ವಾಮನರೂಪಿ ಶ್ರೀ ಪರಮಾತ್ಮನನ್ನು ಧ್ಯಾನಿಸಿರಿ. ॥೩೪-೩೫॥

## ವಾಮನ ಗಾಯತ್ರೀ ಅಥವಾ ತ್ರಿವಿಕ್ರಮ ಗಾಯತ್ರೀ

ಮೂ॥ ತ್ರಿವಿಕ್ರಮಸ್ತು ಸೋದ್ದೇಶೋ ವಿಶ್ವರೂಪಶ್ಚ ತತ್ಪುರಃ।
ಧೀವಿದೌ ಚ ಮಹೇ ವಿಷ್ಣುಸ್ತನ್ನಃ ಪ್ರೇರಣ ಮಧ್ಯಗಃ ॥೩೬॥

ಅ॥ ಚತುರ್ಥ್ಯಂತವಾದ ತ್ರಿವಿಕ್ರಮಾಯ, ಆ ಮೇಲೆ ವಿದ್ಮಹೇ, ಚತುರ್ಥ್ಯಂತವಾದ ವಿಶ್ವರೂಪಾಯ ಧೀಮಹಿ, ಆ ಮೇಲೆ ತನ್ನಃ ಪ್ರೇರಣಾರ್ಥಕವಾದ ಪ್ರಚೋದಯಾತ್, ಈ ಪದಗಳ ಮಧ್ಯದಲ್ಲಿ ವಿಷ್ಣುಃ ಇವಿಷ್ಟು ಸೇರಿಸಿದರೆ ತ್ರಿವಿಕ್ರಮಾಯ ವಿದ್ಮಹೇ ವಿಶ್ವರೂಪಾಯ ಧೀಮಹಿ। ತನ್ನೋವಿಷ್ಣುಃ ಪ್ರಚೋದಯಾತ್, ಎಂಬ ವಾಮನಗಾಯತ್ರಿಯು, ಅಥವಾ ತ್ರಿವಿಕ್ರಮಗಾಯತ್ರಿಯು ಆಗುವುದು. ॥೩೬॥

## ಪರಶುರಾಮ ಮಂತ್ರ, ದಾಶರಥಿ ರಾಮ ಮಂತ್ರಗಳು

ಮೂ॥ ಸ್ವಯಮುದ್ದೇಶಸಂಯುಕ್ತಸ್ತದಾದ್ಯರ್ಣಪುರಃ ಸರಃ।
ಸನತಿಃ ಷಡಕ್ಷರೋ ಮಂತ್ರೋ ವರ್ಣೈರಂಗಕ್ರಿಯಾ ಮತಾ ॥೩೭॥

ಅಂಗಾರವರ್ಣಮಭಿತೋಽಡಬಹಿಃ ಪ್ರಭಾಭಿ।
ರ್ವ್ಯಾಪ್ತಂ ಪರಶ್ವಧ ಧನುರ್ಧರಮೇಕವೀರಂ।

ಧ್ಯಾಯೇದಜೇಶ ಪುರುಹೂತಮುಖೈಃಸ್ತುವದ್ಭಿ।
ರಾವೀತಮಾತ್ಮಪದವೀಂ ಪ್ರತಿಪಾದಯಂತಂ ॥೩೮॥

ಶ್ಯಾಮಂ ರವೀಂದ್ವಮಿತದೀಧಿತಿಕಾಂತಿಯುಕ್ತಂ
ಜ್ಞಾನಂ ಶರಂ ಚ ದಧತಂ ಪ್ರಿಯಯಾ ಸಮೇತಂ।
ಸ್ವಾತ್ಮಸ್ವರೂಪಮಮಿತಂ ಹನುಮನ್ಮುಖೇಷು
ಸಂದರ್ಶಯಂತಮಜಿತಂ ಸ್ಮರತೋರುಗೀರ್ಭಿಃ ॥೩೯॥

ನಿಜಗೋತ್ರಂ ತು ಸೋದ್ದೇಶಂ ಪೂರ್ವಾಕ್ಷರಪುರಸ್ಸರಂ ।
ನತ್ಯಂತಂ ತಾರಪೂರ್ವಂ ಚ ಮನುರಷ್ಟಾಕ್ಷರೋ ಮತಃ ॥೪೦॥

ತೇ ಚ ಬೀಚೇ ಬೀಜಭೂತೇ ಧರ್ಮಾದೀನಾಮಶೇಷತಃ ।
ಏತೇ ವಿಜಯದಾ ಮಂತ್ರಾಃ ಜ್ಞಾನಮೋಕ್ಷಪ್ರದಾಯಕಾಃ ।
ಹಿರಣ್ಯರತ್ನರಾಜ್ಯಾದಿಸಮಭೀಷ್ಟಸುರದ್ರುಮಾಃ ॥೪೧॥

ಅ॥ ಚತುರ್ಥ್ಯಂತವಾದ ರಾಮಾಯ ಎಂಬ ಶಬ್ದ, ಅದಕ್ಕೆ ಆದಿಯಾಗಿ ರಾಂ ಎಂಬ ಶಬ್ದ, ಕೊನೆಗೆ ನಮಃ ಎಂಬ ಶಬ್ದ ಇವಿಷ್ಟು ಸೇರಿದರೆ "ರಾಂ ರಾಮಾಯ ನಮಃ " ಎಂಬ ೬ ಅಕ್ಷರಗಳುಳ್ಳದ್ದು ಪರಶುರಾಮ ಮಂತ್ರವೂ ದಾಶರಥಿ ರಾಮಮಂತ್ರವೂ ಆಗುವುದು. ಮಂತ್ರದ ೬ ವರ್ಣಗಳಿಂದಲೇ ಷಡಂಗನ್ಯಾಸವು ॥೩೭॥ (ಪರಶುರಾಮಧ್ಯಾನವು) ಕೆಂಡದಂತೆ ಪ್ರಕಾಶಿಸುವವನೂ, ಬ್ರಹ್ಮಾಂಡದೊಳಗೂ ಹೊರಗೂ ತನ್ನ ಪ್ರಭೆಗಳಿಂದ ವ್ಯಾಪಿಸಿರುವವನೂ, ಕೊಡಲಿ ಬಿಲ್ಲುಗಳನ್ನು ಧರಿಸಿರುವವನೂ, ವೀರಾಗ್ರೇಸರನೂ, ಸ್ತುತಿಸುತ್ತಿರುವ ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳಿಂದ ಸ್ತುತಿಸಲ್ಪಟ್ಟವನೂ ಬ್ರಹ್ಮಾದಿಗಳಿಗೆ ತನ್ನ ಸ್ವರೂಪವನ್ನುಪದೇಶಿಸುತ್ತಿರುವವನೂ, ಇಂತಹ ಪರಶುರಾಮರೂಪಿ ಶ್ರೀ ಪರಮಾತ್ಮನನ್ನು ಧ್ಯಾನಿಸಬೇಕು. (ಎಂದು ಪರಶುರಾಮಧ್ಯಾನವು) ॥೩೮॥ (ದಾಶರಥಿರಾಮಧ್ಯಾನವು) ಅಪರಿಮಿತ ಸೂರ್ಯರಿಗಿಂತಲೂ ಹೆಚ್ಚು ಪ್ರಕಾಶಿಸುವವನೂ, ಅಮಿತ ಚಂದ್ರರಿಗಿಂತಲೂ ಹೆಚ್ಚು ಕಾಂತಿಯಿರುವವನೂ ಜ್ಞಾನಮುದ್ರೆ ಬಾಣಗಳನ್ನು ಕೈಗಳಲ್ಲಿ ಧರಿಸಿರುವವನೂ, ಉತ್ಕೃಷ್ಟವೇದ ವಚನಗಳಿಂದ ಹನುಮದಾದಿಗಳಿಗೂ ಸಾಕಲ್ಯೇನ ಆಜ್ಞೇಯವಾದ ತನ್ನ ಸ್ವರೂಪವನ್ನುಪದೇಶಿಸುತ್ತಿರುವವನೂ, ಪರಾಜಯವಿಲ್ಲದವನೂ, ಶ್ಯಾಮವರ್ಣನೂ, ಆದ ಸೀತಾಸಮೇತನಾದ ಶ್ರೀರಾಮಚಂದ್ರನನ್ನು ವೇದೋಕ್ತಗುಣಗಳಿಂದ ಧ್ಯಾನಿಸಿರಿ ॥೩೯॥ (ಭಾರ್ಗವರಾಘವ ಮಂತ್ರಗಳು) ಆದಿಯಲ್ಲಿ ಓಂಕಾರ ಭಾರ್ಗವ ಪದಕ್ಕಿಂತ ಮೊದಲು ಭಾಂ ಎಂದೂ, ರಾಘವಪದಕ್ಕಿಂತ ಮೊದಲು ರಾಂ ಎಂದೂ, ಪರಶುರಾಮ ದಾಶರಥಿರಾಮರ ಗೋತ್ರವಾಚಕಗಳಾದ ಚತುರ್ಥಂತಗಳಾದ ಭಾರ್ಗವಾಯ, ರಾಘವಾಯ ಎಂಬ ಪದಗಳು, ತುದಿಯಲ್ಲಿ ನಮಃ ಪದ ಇವಿಷ್ಟು ಸೇರಿದರೆ "ಓಂ ಭಾಂ ಭಾರ್ಗವಾಯ ನಮಃ" ಎಂದು "ಓಂ ರಾಂ ರಾಘವಾಯ ನಮಃ " ಎಂದು ಭಾರ್ಗವಾಷ್ಟಾಕ್ಷರ ಮಂತ್ರ ರಾಘವಾಷ್ಟಾಕ್ಷರ ಮಂತ್ರಗಳು ಆಗುವುವು. (ಧ್ಯಾನಾದಿಗಳನ್ನು ಹಿಂದಿನಂತೆ ಇಟ್ಟುಕೊಳ್ಳಬೇಕು) ॥೪೦॥ (ಭಾರ್ಗವ ರಾಘವರ ಏಕಾಕ್ಷರ ಮಂತ್ರಗಳು) ಬೀಜಾಕ್ಷರವಾದ ಭಾಂ ಎಂಬುವುದು ಏಕಾಕ್ಷರ ಭಾರ್ಗವ ಮಂತ್ರವು. ರಾಂ ಎಂಬುವುದು ಏಕಾಕ್ಷರ ರಾಘವ ಮಂತ್ರವು. ಇವು ಧರ್ಮಾದಿ ೪ಪುರುಷಾರ್ಥಗಳಿಗೂ ಕಾರಣಭೂತಗಳು. ಹಿಂದೆ ಹೇಳಿದ ಎಲ್ಲಾ ಮಂತ್ರಗಳು ವಿಜಯಪ್ರದಗಳು ನಿಷ್ಕಾಮುಕರಿಗೆ ಜ್ಞಾನ, ಮೋಕ್ಷಗಳನ್ನು ಕೊಡುವವು. ಹಿರಣ್ಯ ರತ್ನರಾಜ್ಯ ಮೊದಲಾದ ಐಹಿಕ ಅಭೀಷ್ಟ ಫಲಗಳನ್ನು ಕೊಡುವುದರಲ್ಲಿ ಕಲ್ಪವೃಕ್ಷ ಸದೃಶಗಳು. ॥೪೦॥ ॥೩೭-೪೧॥

## ಕೃಷ್ಣಮಂತ್ರವು

ಮೂ॥ ಕೃಷ್ಣೋ ಗೋವಿಚ್ಚ ಕಾಮೇತೌ ಸೋದ್ದೇಶೋ ವಲ್ಲವೀಜನಃ ॥೪೨॥

ಪ್ರಿಯಶ್ಚ ತಾದೃಶಃ ಸ್ವಾಹಾಯುಗಷ್ಟಾದಶವರ್ಣಕಃ ।
ಪದೈರಂಗಾನಿ ಸಂಪ್ರೀತಿಕಾಮಮೋಕ್ಷಪ್ರದೋ ಮನುಃ ॥೪೩॥

ಧ್ಯಾಯೇದ್ಧರಿನ್ಮಣನಿಭಂ ಜಗದೇಕವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।

ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ
ಸತ್ಯಾಸಮೇತಮಖಿಲಪ್ರದಮಿಂದಿರೇಶಂ ॥೪೪॥

ಸಕಾಮಃ ಸ್ವಯಮುದ್ದೇಶೀ ನತ್ಯಯೋಽಯಂ ಷಡಕ್ಷರಃ ।
ತದಾದಿರಪಿ ಸರ್ವೇಷ್ಟಚಿಂತಾಮಣಿರುದೀರಿತಃ ॥೪೫॥

ದೃಷ್ಟಾರ್ಥ ಏವ ಮಂತ್ರಾಣಾಂ ಕಲೌ ವೀರ್ಯಂ ತಿರಸ್ಕೃತಂ ।
ತತ್ರಾಪ್ಯುದ್ದೀಪ್ತವೀರ್ಯಾ ಹಿ ಮಂತ್ರಾ ಅತ್ರ ಪ್ರಕೀರ್ತಿತಾಃ ॥
ವಾಸಿಷ್ಠವೃಷ್ಣಿಪ್ರವರಮಂತ್ರಾಸ್ತತ್ರಾಪಿ ವೀರ್ಯದಾಃ ॥೪೬॥

ಅ॥ ಕಾಮ ಬೀಜವಾದ ಕ್ಲೀಂ ಎಂಬ ಶಬ್ದ, ಚತುರ್ಥ್ಯಂತವಾದ ಕೃಷ್ಣಾಯ, ವೇದ ವೇದ್ಯ ಎಂಬ ಅರ್ಥವುಳ್ಳ ಗೋವಿಂದಾಯ, ಗೋಪಿಕಾಸ್ತ್ರೀಯರಿಗೆ ಪ್ರಿಯ ಎಂಬ ಅರ್ಥವುಳ್ಳ ಗೋಪೀಜನವಲ್ಲಭಾಯ, ಕೊನೆಗೆ ಸ್ವಾಹಾ ಶಬ್ದ ಇವಿಷ್ಟು ಸೇರಿ ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪೀಜನವಲ್ಲಭಾಯ ಸ್ವಾಹಾ ಎಂಬ ೧೮ ಅಕ್ಷರದ ಕೃಷ್ಣ ಮಂತ್ರ, ಅಥವಾ ಮದನಗೋಪಾಲ ಮಂತ್ರವಾಗುವುದು. ಮಂತ್ರದ ಪದಗಳಿಂದ ಪಂಚಾಂಗನ್ಯಾಸವಾಗುವುದು. ಈ ಮಂತ್ರವು ಶ್ರೀ ವಿಷ್ಣುಪ್ರೀತಿ, ಐಹಿಕ ಸಕಲಾಭೀಷ್ಟ, ಮೋಕ್ಷ, ಇವುಗಳನ್ನು ಕೊಡುವುದು. ॥೪೩॥ (ಧ್ಯಾನವು) ಇಂದ್ರನೀಲಮಣಿಗೆ ಸದೃಶನೂ, ಸಮಸ್ತಜಗತ್ತಿನಿಂದ ವಂದ್ಯನೂ, ಲೋಕೋತ್ತರ ಸೌಂದರ್ಯವುಳ್ಳವನೂ, ೪ ಕೈಗಳಿಂದ ಚಕ್ರ ಶಂಖ, ವರ, ಅಭಯ ಮುದ್ರೆಗಳನ್ನು ಧರಿಸಿರುವವನೂ, ಪರಾಜಯವಿಲ್ಲದವನೂ, (ಭಕ್ತರ ಮೇಲೆ) ದಯಾ ರಸಪೂರ್ಣನೂ, ರುಗ್ಮಿಣೀ ಸತ್ಯಭಾಮಾಸಮೇತನೂ, ಭಕ್ತಾಭೀಷ್ಟಪ್ರದನೂ ಆದ ಲಕ್ಷ್ಮೀಪತಿಯಾದ ಶ್ರೀ ಹರಿಯನ್ನು ಧ್ಯಾನಿಸಬೇಕು ॥೪೪॥ (ಶ್ರೀ ಕೃಷ್ಣನದ್ದೇ ಮಂತ್ರಾಂತರವು) ಕಾಮಭೀಜವಾದ ಕ್ಲೀಂಕಾರ, ಚತುರ್ಥ್ಯಂತವಾದ ಕೃಷ್ಣಾಯ, ಕೊನೆಗೆ ನಮಃ ಪದ, ಇವಿಷ್ಟು ಸೇರಿ "ಕೀಂ ಕೃಷ್ಣಾಯ ನಮಃ" ಎಂಬ ಕೃಷ್ಣ ಷಡಕ್ಷರ ಮಂತ್ರವೂ, "ಕ್ಲೀಂ" ಎಂಬುವ ಏಕಾಕ್ಷರ ಕೃಷ್ಣಮಂತ್ರವೂ ಆಗುವುದು. ಈ ಏಕಾಕ್ಷರ ಮಂತ್ರವೂ ಚಿಂತಾಮಣಿಯಂತೆ ಸಮಸ್ತ ಅಭೀಷ್ಟಗಳನ್ನು ಕೊಡಬಲ್ಲುದು ॥೪೫॥ ವೇದ ಪಂಚರಾತ್ರಾದಿಗಳಲ್ಲಿ ಹೇಳಿದ ಸಮಸ್ತ ಮಂತ್ರಗಳಿಗೆ ಕಲಿಯುಗದಲ್ಲಿ ಐಹಿಕ ಫಲವನ್ನು ಹುಟ್ಟಿಸುವ ಶಕ್ತಿ ಮಾತ್ರವೇ ತಿರಸ್ಕೃತವಾಗಿದೆ. (ಮತ್ತೆ ಪಾರತ್ರಿಕ ಫಲವನ್ನು ಹುಟ್ಟಿಸುವ ಶಕ್ತಿಯು ಇದ್ದೇ ಇದೆ.) (ಕೃತಾದಿಗಳಲ್ಲಿ ಐಹಿಕಾ ಮುಷ್ಮಿಕ ನಿಖಿಲಫಲವನ್ನು ಹುಟ್ಟಿಸುವ ಶಕ್ತಿಯು ಇದೆ.) ಕಲಿಯುಗದಲ್ಲಿಯೂ ಐಹಿಕ ಅಮುಷ್ಮಿಕ ಉಭಯ ಫಲವನ್ನು ಹುಟ್ಟಿಸುವ ಸಾಮರ್ಥ್ಯವುಳ್ಳ ಮಂತ್ರಗಳೇ ೪ನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿವೆ. ೪ನೇ ಅಧ್ಯಾಯದಲ್ಲಿ ಹೇಳಿದ ಮಂತ್ರಗಳಲ್ಲಿಯೂ ವೇದವ್ಯಾಸ ಮಂತ್ರ, ಯಾದವ ಕೃಷ್ಣ ಮಂತ್ರ, ಇವುಗಳು ಹೆಚ್ಚು ಐಹಿಕ ಫಲವನ್ನು ಹುಟ್ಟಿಸಲಿಕ್ಕೆ ಸಮರ್ಥಗಳು ॥೪೬॥ ॥೪೨-೪೬॥

## ವೇದವ್ಯಾಸ ಮಂತ್ರವು

ಮೂ॥ ಸ್ವಯಂ ವೇದಪದಾರೂಢಃ ಪೂರ್ವವರ್ಣ ಪುರಸ್ಸರಃ ॥೪೭॥

ನತ್ಯಂತೋಽಷ್ಟಾಕ್ಷರೋ ಮಂತ್ರಃ ಪ್ರಿಯೋ ವಿಜ್ಞಾನ ಗೋಪತೇಃ
ವ್ಯಾಖ್ಯಾ ಶ್ರೀ ಸರ್ವವಿಜ್ಞಾನಕವಿತಾದಿಗುಣಪ್ರದಃ ॥
ವಾದೇ ವಿಜಯದೋ ನಿತ್ಯಂ ಯಥಾ ಯುದ್ಧೇನೃಕೇಸರೀ ॥೪೮॥

ವಿಜ್ಞಾನರೋಚಿಃ ಪ್ರತಿಪೂರಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಂ ।
ತರ್ಕಾಭಯೇತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ॥೪೯॥

ಜ್ಞಾನಾನಂದಪುರಃ ಪೂರ್ಣೋ ವಿದ್ಮಹೇ ಧೀಮಹೇ ತಥಾ ।
ತನ್ನಃ ಪ್ರೇರಣಮಧ್ಯೇತು ವ್ಯಾಸೋ ಮಂತ್ರಾಧಿಪಾಧಿಪಃ ॥೫೦॥

ಆದಿಬೀಜಂ ಸ್ಥಿರಾದೋಷಜ್ಞಾನ ಬೀಜಂ ವಿಮುಕ್ತಿದಂ ।
ಸರ್ವಪಾಪಕ್ಷಯಕರಂ ಸರ್ವವ್ಯಾಧಿವಿನಾಶನಂ ॥೫೧॥

**ಧ್ಯಾಯೇಚ್ಛಶಾಂಕಶತಕೋಟ್ಯತಿಸೌಖ್ಯಕಾಂತಿಂ**
**ಸಂಸಿಚ್ಯಮಾನಮಮೃತೋರುಘಟೈಃ ಸುರೇಶೈಃ ।**

**ವರ್ಣಾಭಿಮಾನಿಭಿರಜೇಶಮುಖೈಃಸಹೈವ**
**ಪಂಚಾಶತಾ ಪ್ರತಿಗಿರಂತಮಶೇಷವಿದ್ಯಾಃ** ॥೫೨॥

ಅ॥ ಮೊದಲು ವ್ಯಾಂ ಎಂಬ ಪದ, ಆ ಮೇಲೆ ವೇದಪದದಿಂದ ಕೂಡಿದ (ಸ್ವಯಂ) ಚತುರ್ಥ್ಯಂತವಾದ ವ್ಯಾಸಪದ, ಕೊನೆಗೆ ನಮಃ ಪದ. ಹೀಗೆ ೮ ಅಕ್ಷರಗಳುಳ್ಳ ವ್ಯಾಸಮಂತ್ರವು, ಜ್ಞಾನಸೂರ್ಯರೆಂದು ಪ್ರಸಿದ್ಧರಾದ ವೇದವ್ಯಾಸರಿಗೆ ಪ್ರೀತಿಯನ್ನು ಹುಟ್ಟಿಸುವುದು. ಓಂ ವ್ಯಾಂ ವೇದವ್ಯಾಸಾಯ ನಮಃ ಓಂ, ಎಂಬೀ ಮಂತ್ರವು ಜಪಿಸುವವನಿಗೆ ಸಚ್ಛಾಸ್ತ್ರಪ್ರವಚನಸಂಪತ್ತು, ಸಮಸ್ತವಸ್ತುಗಳ ಜ್ಞಾನ, ಕಾವ್ಯರಚನಾಪಟುತ್ವ, ಶಿಷ್ಯಸಂಪತ್ತು, ಕೀರ್ತಿ ಮೊದಲಾದ ಗುಣಗಳನ್ನು ಕೊಡುವುದು. ಯುದ್ಧದಲ್ಲಿ ನರಸಿಂಹ ಮಂತ್ರವು ಜಪಿಸುವವರಿಗೆ ಜಯಪ್ರದವಾಗುವಂತೆ ಜಲ್ಪಾದಿ ಕಥೆಗಳಲ್ಲಿ ಈ ವೇದವ್ಯಾಸ ಮಂತ್ರವೂ ನಿಯಮವಾಗಿ ಜಯಪ್ರದವಾಗುತ್ತದೆ. ॥೪೮॥ (ಧ್ಯಾನವು) ವಿಜ್ಞಾನವೆಂಬ ಪ್ರಕಾಶದಿಂದ ಬ್ರಹ್ಮಾಂಡದೊಳಗೂ ಹೊರಗೂ ತುಂಬಿರುವವನೂ, ಮರಕತಮಣಿಯಂತೆ ಸ್ವಚ್ಛಕಾಂತಿಯುಳ್ಳವನೂ, ಜ್ಞಾನಮುದ್ರೆ ಅಭಯ ಮುದ್ರೆಗಳಿಂದ ಕೂಡಿರುವವನೂ, ಬ್ರಹ್ಮರುದ್ರ ಮೊದಲಾದ ದೇವತೆಗಳಿಗೆ ವಿಜ್ಞಾನವನ್ನುಪದೇಶಿಸುತ್ತಿರುವವನೂ, ಇಂತಹ ವೇದವ್ಯಾಸರನ್ನು ನಮಸ್ಕರಿಸುತ್ತೇನೆ. ॥೪೯॥ (ವೇದವ್ಯಾಸ ಗಾಯತ್ರೀ ಮಂತ್ರವು) ಚತುರ್ಥ್ಯಂತಗಳಾದ ಆನಂದ ಶಬ್ದಗಳಿಂದ ಮೊದಲು ಪೂರ್ಣಶಬ್ದವು, ಜ್ಞಾನಶಬ್ದದಿಂದ ಮೇಲೆ ವಿದ್ಮಹೇ ಎಂಬ ಶಬ್ದವೂ, ಆನಂದಶಬ್ದ ಮೇಲೆ ಧೀಮಹಿ ಎಂಬ ಶಬ್ದವೂ, ತನ್ನಃ ಶಬ್ದ ಪ್ರಚೋದಯಾತ್ ಶಬ್ದಗಳ ನಡುವೆ ವ್ಯಾಸ ಶಬ್ದವನ್ನು ಉಪಯೋಗಿಸಬೇಕು. (ಅಂತೂ ಪೂರ್ಣಜ್ಞಾನಾಯ ವಿದ್ಮಹೇ ಪೂರ್ಣಾನಂದಾಯ ಧೀಮಹಿ । ತನ್ನೋ ವ್ಯಾಸಃ ಪ್ರಚೋದಯಾತ್ ಎಂದು ವ್ಯಾಸ ಗಾಯತ್ರಿಯು ಈ ಮಂತ್ರವು ಸಮಸ್ತ ಮಂತ್ರಶ್ರೇಷ್ಠಗಳಿಗೂ ಅತ್ಯುತ್ಕೃಷ್ಟವು. ॥೫೦॥ (ಏಕಾಕ್ಷರ ವೇದವ್ಯಾಸಮಂತ್ರವು) ಹಿಂದೆ ಹೇಳಿದ ವ್ಯಾಂ ವೇದವ್ಯಾಸಾಯ ನಮಃ " ಎಂಬ ಮಂತ್ರದ ಆದಿಯಲ್ಲಿರತಕ್ಕ ವ್ಯಾಂ ಎಂಬುವುದು ಬೀಜಾಕ್ಷರವು. ತಥಾಚ ವ್ಯಾಂ ಎಂಬುವುದೇ ಏಕಾಕ್ಷರ ವೇದವ್ಯಾಸ ಮಂತ್ರವು. ಈ ಮಂತ್ರವು ದುರ್ವಾದಿಗಳ ಕುಶಾಸ್ತ್ರಗಳಿಂದಲೂ ಕೆಡದಿರುವ ನಿರ್ದುಷ್ಟವಾದ ಜ್ಞಾನವನ್ನು ಹುಟ್ಟಿಸುವುದು, ಮೋಕ್ಷದಾಯಕವೂ, ಸಮಸ್ತ ಪಾಪಗಳಿಗೆ ನಾಶಕವೂ ಸಮಸ್ತ ವ್ಯಾದಿಪರಿಹಾರಕವೂ ಆಗಿದೆ. ॥೫೧॥ (೨ ಮಂತ್ರಗಳ ಧ್ಯಾನ ಹೇಳುತ್ತಾರೆ) ೧೦೦ ಕೋಟಿ ಚಂದ್ರರ ಕಾಂತಿಗಿಂತಲೂ ಮಿಗಿಲಾದ ಅತ್ಯಾಹ್ಲಾದಕರವಾದ ಕಾಂತಿಯಿರುವವನು, ಆಕಾರ ಮೊದಲಾದ ೫೦ ಅಕ್ಷರಾಭಿಮಾನಿಗಳಾದ ಬ್ರಹ್ಮರುದ್ರ ಮೊದಲಾದ ದೇವಶ್ರೇಷ್ಠರಿಂದ ಏಕಕಾಲದಲ್ಲಿದೇಯ ಸುಧಾಪೂರ್ಣ ಸ್ಥೂಲಕಲಶಗಳಿಂದ ಅಭಿಷೇಕ ಮಾಡಲ್ಪಡುವವನು, ೫೦ ಅಕ್ಷರಗಳನ್ನೂ ವೇದಮೊದಲಾದ ಸಕಲ ವಿದ್ಯೆಗಳನ್ನೂ, ಬ್ರಹ್ಮಾದಿಗಳಿಗೆ ಉಪದೇಶಿಸುತ್ತಿರುವವನೂ, ಇಂತಹ ವೇದವ್ಯಾಸರನ್ನು ಧ್ಯಾನಿಸಬೇಕು. ॥೫೨॥ ॥೪೭-೫೨॥

## ನಾಲ್ಕು ವಿಧ ಹಯಗ್ರೀವ ಮಂತ್ರ

**ಮೂ॥ ಸೋದ್ವೇಶಸ್ತು ಸ್ವಯಂ ದೀರ್ಘಪೂರ್ವಾರ್ಣಾದ್ಯೋ ನಮೋಯುತಃ ।**
**ಸರ್ವವಿದ್ಯಾಪ್ರದೋಽಷ್ಟಾರ್ಣ ಪ್ರತಿಪಾದಿಜಯಪ್ರದಃ ॥**
**ವಿಮುಕ್ತಿಸಾಧನಃ ಕೀರ್ತಿ (ಕಾಂತಿ) ಬುದ್ಧಿಸ್ಥೈರ್ಯಪ್ರದಃ ಸದಾ** ॥೫೩॥

**ವಂದೇ ತುರಂಗವದನಂ ಶಶಿಬಿಂಬಸಂಸ್ಥಂ**
**ಚಂದ್ರಾವದಾತಮಮೃತಾತ್ಮಕರೈಃ ಸಮಂತಾತ್ ।**
**ಅಂಡಾಂತರಂ ಬಹಿರಪಿ ಪ್ರತಿಭಾಸಯಂತಂ**
**ಶಂಖಾಕ್ಷಪುಸ್ತಕಸುಭೋಧಯುತಾಬ್ಜಬಾಹುಂ** ॥೫೪॥

ನಸ್ತೋಮುಖಾದಪಿ ನಿರಂತರಮುದ್ಗಿರಂತಂ
    ವಿದ್ಯಾ ಅಶೇಷತ ಉತಾಬ್ದಭವೇಶಮುಖ್ಯೈಃ ।
ಸಂಸೇವ್ಯಮಾನಮತಿಭಕ್ತಿಭರಾವನಮ್ರೈಃ
    ಲಕ್ಷ್ಮ್ಯಾಽಮೃತೇನ ಸತತಂ ಪರಿಷಿಚ್ಯಮಾನಂ ॥೫೫॥

ಅ॥ ಹಯಶಿರಃ ಮೊದಲಾದ ೪ ಮಂತ್ರಗಳಿಂದ ದೀರ್ಘವಾದ ಹಾಕಾರವು ಬಿಂದು ಯುಕ್ತವಾಗಿ ಮೊದಲು ಇರಬೇಕು. ಮೇಲೆ ಚತುರ್ಥ್ಯಂತವಾದ ಹಯಗ್ರೀವವಾಚಕವಾದ ಹಯಶಿರಃ ಮೊದಲಾದ ಶಬ್ದಗಳಿರಬೇಕು. ಕೊನೆಗೆ ನಮಃಶಬ್ದವು (ಏವಂಚ (1) ಹಾಂ ಹಯಶಿರಸೇ ನಮಃ (2) ಹಾಂ ಹಯಗ್ರೀವಾಯ ನಮಃ (3) ಹಾಂ ಹಯಶೀರ್ಷಾಯ ನಮಃ (4) ಹಾಂ ಹಯಶೀರ್ಷ್ಣೇ ನಮಃ ಎಂದು ೮ ಅಕ್ಷರಗಳುಳ್ಳದ್ದು ೪ ಮಂತ್ರಗಳುದ್ಧೃತಗಳಾದುವು.) ಈ ಮಂತ್ರಗಳು ಸಮಸ್ತವಿದ್ಯೆಗಳಲ್ಲಿ ಪಾಂಡಿತ್ಯ (ಜಲ್ಪಾದಿ ಕಥೆಗಳಲ್ಲಿ) ಪ್ರತಿವಾದಿಗಳನ್ನು ಸೋಲಿಸುವ ಶಕ್ತಿ ಬ್ರಹ್ಮವರ್ಚಸ್ಸೂ, ದುಶಾಸ್ತ್ರಗಳಿಂದಲೂ ಕೆಡದಿರುವ ಬುದ್ಧಿಶಕ್ತಿ, (ಅಥವಾ) ಧಾರಣಾಶಕ್ತಿ ಇವುಗಳನ್ನೂ ಮೋಕ್ಷಕ್ಕೆ ಸಾಧನವಾದ ಜ್ಞಾನವನ್ನೂ ವಿಶೇಷತಃ ಕೊಡುವುವು. ॥೫೪॥ (ಧ್ಯಾನವು) ಚಂದ್ರಬಿಂಬದಲ್ಲಿ ಕುಳಿತವನೂ, ಚಂದ್ರನಂತೆ ಶುಭವರ್ಣನೂ, ನಾಶರಹಿತನೂ ಅಮೃತವನ್ನು ಸುರಿಸುವವುಗಳೂ, ಮೋಕ್ಷಪ್ರದಗಳೂ ಆದ ಆದ ಸ್ವರೂಪ ಕಿರಣಗಳಿಂದ ಬ್ರಹ್ಮಾಂಡದೊಳಗೂ ಹೊರಗೂ ಎಲ್ಲೆಡೆಯಲ್ಲಿಯೂ ಪ್ರಕಾಶಗೊಳಿಸುವವನೂ, ಶಂಖ ಜಪಮಾಲೆ, ಪುಸ್ತಕ, ಜ್ಞಾನ ಮುದ್ರೆ ಇವುಗಳಿಂದ ಕೂಡಿದ ತಾವರೆಯದಂಡಿನಂತಿರುವ ೪ ಭುಜಗಳುಳ್ಳವನೂ, ಮೂಗಿನಿಂದಲೂ ಮುಖದಿಂದಲೂ ಸರ್ವದಾ ಸಮಸ್ತ ವಿದ್ಯೆಗಳನ್ನು ಉಪದೇಶಿಸುತ್ತಿರುವವನೂ, ಪರಮ ಭಕ್ತಿಯಿಂದ ಬಗ್ಗಿರುವ ಬ್ರಹ್ಮರುದ್ರರೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುತ್ತಿರುವವನೂ. ಲಕ್ಷ್ಮೀದೇವಿಯಿಂದ ನಿರಂತರವೂ ಅಮೃತದಿಂದ ಅಭಿಷೇಕ ಮಾಡಲ್ಪಡುವವನೂ ಇಂತಹ, ಕುದುರೆಯ ಮುಖದಂತೆ ಮುಖವಿರುವ ಹಯಗ್ರೀವರೂಪಿ ಶ್ರೀಹರಿಯನ್ನು ನಮಸ್ಕರಿಸುತ್ತೇನೆ. ॥೫೩-೫೫॥

## ಕಪಿಲ ಮಂತ್ರ, ದತ್ತಾತ್ರೇಯ ಮಂತ್ರಗಳು

ಮೂ॥ ಸ್ವಯಮುದ್ದೇಶವಾನ್ ಪೂರ್ವವರ್ಣಪೂರ್ವೋ ನಮೋಯುತಃ ।
    ಸತಾರೋಽಷ್ಟಾಕ್ಷರಶ್ಚೈವ ನವಾರ್ಣಶ್ಚ ಮನೂ ಸ್ಮೃತೌ ॥೫೬॥

ಪ್ರೋದ್ಯದ್ದಿವಾಕರಸಮಾನತನುಂ ಸಹಸ್ರ
    ಸೂರ್ಯೋರುದೀಧಿತಿಭಿರಾಪ್ತ ಸಮಸ್ತಲೋಕಂ ।
ಜ್ಞಾನಾಭಯಾಂಕಿತಕರಂ ಕಪಿಲಂ ಚ ದತ್ತಂ
ಧ್ಯಾಯೇದಜಾದಿಸಮಿತಿಂ ಪ್ರತಿಬೋಧಯಂತಂ
ಅಧೃಷ್ಯತಾಜ್ಞಾನಮೋಕ್ಷಪ್ರದೌ ಭಕ್ತೇಪ್ಸಿಮೌ ಸದಾ ॥೫೭॥

ಅ॥ ಸ್ವವಾಚಕವಾದ ಚತುರ್ಥ್ಯಂತವಾದ ಕಪಿಲಾಯ ಎಂಬಶಬ್ದವು, ಇದರ ಆದಿಯಲ್ಲಿ ಮೊದಲನೆಯ ಅಕ್ಷರವಾದ ಕಕಾರವು ಬಿಂದುಯುಕ್ತವಾಗಿರಬೇಕು. ಕೊನೆಯಲ್ಲಿ ನಮಶ್ಶಬ್ದವು. ಆದಿಯಲ್ಲಿ ಓಂಕಾರವು. ಏವಂಚ ಓಂ ಕಂ ಕಪಿಲಾಯ ನಮಃ ಎಂಬ ೮ ಅಕ್ಷರದ ಕಪಿಲ ಮಂತ್ರವು. ಹೀಗೆಯೇ ಸ್ವವಾಚಕವಾದ ಚತುರ್ಥ್ಯಂತವಾದ ದತ್ತಾತ್ರೇಯಾಯ ಎಂಬ ಶಬ್ದವು. ಆದಿಯಲ್ಲಿ ದಕಾರವು ಬಿಂದುಯುಕ್ತವಾಗಿರಬೇಕು. ಕೊನೆಯಲ್ಲಿ ನಮಶ್ಶಬ್ದವು. ಆದಿಯಲ್ಲಿ ಓಂಕಾರವು. ಏವಂಚ ಓಂ ದಂ ದತ್ತಾತ್ರೇಯಾಯ ನಮಃ ಎಂದು ೯ ಅಕ್ಷರಗಳುಳ್ಳ ದತ್ತಾತ್ರೇಯ ಮಂತ್ರವು. ಹೀಗೆ ೨ ಮಂತ್ರಗಳು ॥೫೬॥ (ಕಪಿಲ ದತ್ತಾತ್ರೇಯರ ಧ್ಯಾನವು) ಉದಯಿಸುವ ಸೂರ್ಯನಿಗೆ ಸದೃಶವಾದ ಕೆಂಬಣ್ಣದ ಶರೀರವುಳ್ಳವನೂ ಅಮಿತ ಸೂರ್ಯರಿಗಿಂತಲೂ ಹೆಚ್ಚು ಕಾಂತಿಯುಳ್ಳ ಕಿರಣಗಳಿಂದ ಎಲ್ಲಾ ಲೋಕಗಳನ್ನು ವ್ಯಾಪಿಸಿರುವವನೂ, ಜ್ಞಾನಮುದ್ರೆ,ಅಭಯಮುದ್ರೆಗಳನ್ನು ಧರಿಸಿರುವ ೨ ಕೈಗಳುಳ್ಳವನೂ, ಬ್ರಹ್ಮರುದ್ರಾದಿ ದೇವತಾ ಸಮೂಹಕ್ಕೆ ತತ್ವಜ್ಞಾನವನ್ನು ಬೋಧಿಸುತ್ತಿರುವವನೂ, ಭಕ್ತರಿಗೆ ಅಭೀಷ್ಟದಾಯಕನೂ, ಸುಖ ಸ್ವರೂಪನೂ ಇಂತಹ ಕಪಿಲರೂಪಿ ಶ್ರೀಹರಿಯನ್ನೂ

ದತ್ತಾತ್ರೇಯರೂಪಿ ಶ್ರೀ ಹರಿಯನ್ನೂ ಧ್ಯಾನಿಸಬೇಕು. ಈ ಕಪಿಲ ದತ್ತಾತ್ರೇಯ, ಭಗವದ್ರೂಪಗಳು ಈ ಮಂತ್ರೋಪಾಸಕರಿಗೆ ಸದಾ ಶತ್ರುಗಳಿಂದ ಪರಾಜಯರಾಹಿತ್ಯ, ತತ್ವಜ್ಞಾನ, ಮೋಕ್ಷ, ಇವುಗಳನ್ನು ಕೊಡತಕ್ಕವುಗಳು. ||೫೭||

## ವೈದಿಕ ವೈಷ್ಣವ ಮಂತ್ರಗಳು

**ಮೂ|| ಸೂಕ್ತಂ ದೀರ್ಘತಮೋದೃಷ್ಟಂ ವಿಷ್ಣೋರ್ನುಕಮಿತಿ ಪ್ರಭೋಃ ||೫೮||**

**ಸರ್ವಾರ್ಥದಂ ಗಾರ್ತ್ಸಮದಂ ಯೋಜಾತ ಇತಿ ಚಾಪರಂ |**
**ವಾಷಿಷ್ಠಂ ಚ ಪರೋಮಾತ್ರಯೇತಿ ಜ್ಞಾನವಿಮುಕ್ತಿದಂ ||೫೯||**

**ಭೌವನೀಯಂ ಸರ್ವಕಾಮಮೋಕ್ಷದಂ ಯ ಇಮೇತ್ಯಪಿ |**
**ಏವಮೇವಾಖಿಲಾ ವೇದಾಃ ಜ್ಞಾತವ್ಯಾ ವಿಷ್ಣು ತತ್ಪರಾಃ ||೬೦||**

ಅ|| ದೀರ್ಘತಮಃ ಎಂಬ ಋಷಿದೃಷ್ಟವಾದ ಶ್ರೀ ವಿಷ್ಣುಪ್ರತಿಪಾದಕವಾದ, ವಿಷ್ಣೋರ್ನು ಕಂವೀರ್ಯಾಣಿ ಪ್ರವೋಚಂ (ಋ, ೨-೨-೨೪) ಎಂಬ ಸೂಕ್ತವು ಸಮಸ್ತ ಪುರುಷಾರ್ಥ ಪ್ರದವು. ಗೃತ್ಸಮದ ಋಷಿದೃಷ್ಟವಾದ ಯೋಜಾತ ಏವ ಪ್ರಥಮಃ (ಋ, ೨-೬-೭) ಎಂಬ ವಿಷ್ಣುಪ್ರತಿಪಾದಕ ಮಂತ್ರವೂ ಸರ್ವಾಭೀಷ್ಟದಾಯಕವು, ವಸಿಷ್ಠ ಋಷಿಸದೃಷ್ಟವಾದ ಪರೋ ಮಾತ್ರಾಯಾ ತನ್ವಾ ವೃಧಾನ (ಋ, ೫-೬-೨೪) ಎಂಬ ವಿಷ್ಣುಮಂತ್ರವು ತತ್ವಜ್ಞಾನ ಮೋಕ್ಷಗಳನ್ನು ಕೊಡತಕ್ಕುದು. ಭುವನನ ಪುತ್ರನಾದ ವಿಶ್ವಕರ್ಮನಿಂದ ದೃಷ್ಟವಾದಯಇಮಾವಿಶ್ವಾ ಭುವನಾನಿ (ಋ, ೮-೩-೧೬) ಎಂಬೀ ವಿಷ್ಣು ಪ್ರತಿಪಾದಕಮಂತ್ರವು ಸಮಸ್ತ ಐಹಿಕಾಭೀಷ್ಟಗಳನ್ನೂ ಮೋಕ್ಷವನ್ನೂ ಕೊಡತಕ್ಕುದು. ಹೀಗೆಯೇ ಎಲ್ಲಾ ವೇದಗಳೂ ಶ್ರೀ ವಿಷ್ಣುವಿನಲ್ಲಿಯೇ ತಾತ್ಪರ್ಯವುಳ್ಳವುಗಳು. ಐಹಿಕಾಮುಷ್ಮಿಕ ಸರ್ವಪುರುಷಾರ್ಥದಾಯಕಗಳು ಎಂದು ತಿಳಿಯಬೇಕು. ||೫೮-೬೦||

## ಲಕ್ಷ್ಮೀ ಮಂತ್ರಗಳು

**ಮೂ|| ಸ್ವದೃಷ್ಟಂ ಸೂಕ್ತಮಖಿಲಕಾಮದಂ ಹರಿತುಷ್ಟಿದಂ |**
**ವಾಚೋಽಂಭೃಣ್ಯಾಃ ಶ್ರೀಯೋಽಂಗಾನಿ ಶ್ರೀರ್ಲಕ್ಷ್ಮೀರ್ಮೇಂದಿರಾ ರಮಾ ||೬೧||**

**ಕೌಶೇಯಪೀತವಸನಾಮರವಿಂದನೇತ್ರಾಂ**
**ಪದ್ಮದ್ವಯಾಭಯವರೋದ್ಯತ ಪದ್ಮಹಸ್ತಾಂ |**

**ಉದ್ಯಚ್ಛತಾರ್ಕಸದೃಶಾಂ ಪರಮಾಂಕಸಂಸ್ಥಾಂ**
**ಧ್ಯಾಯೇದ್ವಿಧೀಶನತಪಾದಯುಗಾಂ ಜನಿತ್ರೀಂ ||೬೨||**

**ಲಜ್ಜಾಬೀಜಂ ಚ ತದ್ಬೀಜಂ ತಸ್ಯಾ ವಿವಾಭಿಧಾಯಕಂ |**
**ಪಾಶಾಂಕುಶೌ ರಕ್ತವಸ್ತ್ರಂ ಲಜ್ಜಬೀಜೇ ವಿಶಿಷ್ಯತೇ ||**
**ಅಮಧ್ಯಯುಗ್ಮಸ್ವರಗತೇನ್ಯೈವಾಂಗಮುದಾಹೃತಂ ||೬೩||**

**ಸತ್ತಾಬೀಜಂ ಚ ದುರ್ಬೀಜಂ ತದ್ವದೇವ ಪ್ರಕೀರ್ತಿತಂ | ||೬೪||**

**ವರ್ಣ ಶ್ಯಾಮೋ ವಿಶೇಷೋಽತ್ರ ತಾಂಬೂಲಂ ನೀಲಮುತ್ಪಲಂ |**
**ಚಕ್ರ ಶಂಖೌ ತರ್ಜನಂ ಚ ಶೂಲಮಿತ್ಯಪರತ್ರ ಚ ||೬೫||**

**ನಮೋಽಂತಃ ಸ್ವೇನ ಸಹಿತಸ್ತದೇವಾನ್ಯೋ ಮನುಃ ಸ್ಮೃತಃ ||೬೬||**

**ದುರ್ಗಾತ್ರಿಷ್ಟುಪ್ ಕಶ್ಯಪೋಕ್ತಾ ತತ್ರ ವರ್ಣೋಽಗ್ನಿವತ್ ಸ್ಮೃತಃ ।**
**ತ್ರಿನೇತ್ರತ್ವಂ ಚ ದುರ್ಗಾಯಾಃ ಪ್ರಾಯಃ ಸರ್ವತ್ರ ಕಥ್ಯತೇ ॥**
**ಪಾದೈಃ ಸಮಸ್ತೇನ ತಥಾ ಷಡರ್ಣೇನಾಂಗಮುಚ್ಯತೇ** **॥೬೭॥**

**ರಮಾಯಾ ಏವ ರೂಪಾಣಿ ತ್ವೇತಾನಿ ಹಿ ವಿದೋ ವಿದುಃ ।**
**ಮುಖ್ಯತೋ ಜಾಮದಗ್ನ್ಯಸ್ತು ದೇವತಾಽಸ್ಯ ಮನೋಃ ಸ್ಮೃತಃ** **॥೬೭॥**

ಅ॥ ಮಾತಿಗೆ ನಿಯಮಕಳಾಗಿರುವುದರಿಂದ ವಾಕ್ ಎನಿಸಿಕೊಂಡ, ಆಕಾರ ವಾಚ್ಯನಾದ ಪರಬ್ರಹ್ಮನನ್ನು ಧರಿಸಿರುವುದರಿಂದ ಅಂಭ್ರಿಣೀ ಎನಿಸಿಕೊಂಡ ಲಕ್ಷ್ಮೀದೇವಿಯನ್ನು ಪ್ರತಿಪಾದಿಸುವ, ಲಕ್ಷ್ಮೀದೇವಿಯಿಂದಲೇ ಕಾಣಲ್ಪಟ್ಟ, `ಅಹಂ ರುದ್ರೇಭಿಃ' (ಋ ೮-೭-೧೧) ಎಂಬೀ ಅಂಭ್ರಿಣೀಸೂಕ್ತವು ಸರ್ವಾಭೀಷ್ಟದಾಯಕವೂ ವಿಷ್ಣುಪ್ರೀತಿಕರವೂ ಆಗಿದೆ. ಈ ಸೂಕ್ತಕ್ಕೆ ಶ್ರೀ ಲಕ್ಷ್ಮೀಃ, ಮಾ ಇಂದಿರಾ, ರಮಾ ಎಂಬೀ ಚತುರ್ಥ್ಯಂತಗಳಾದ ೫ ಪದಗಳು ಪಂಚಾಂಗನ್ಯಾಸ ಮಂತ್ರಗಳೆಂದು ತಿಳಿಯಬೇಕು. ॥೬೧॥ (ಧ್ಯಾನವು) ಹಳದಿ ಬಣ್ಣದ ರೇಶ್ಮೆಯ ೨ ಬಟ್ಟೆಗಳುಳ್ಳವಳು, ಕಮಲದಳದಂತೆ ಇರುವ ೨ ಕಣ್ಣುಗಳುಳ್ಳವಳು, ೨ ಪದ್ಮಗಳಿಂದಲೂ, ಅಭಯ ಮುದ್ರೆ, ವರ ಮುದ್ರೆಗಳಿಂದಲೂ ಕೂಡಿದ ೪ ಕೈಗಳುಳ್ಳವಳು, (ಅಂದರೆ ಮೇಲಿನ ೨ ಕೈಗಳಲ್ಲಿ ೨ ಪದ್ಮಗಳು, ಕೆಳಗಿನ ಬಲಗೈಯಲ್ಲಿ ಅಭಯ ಮುದ್ರೆ, ಕೆಳಗಣ ಎಡಗೈಯಲ್ಲಿ ವರಮುದ್ರೆ, ಉದಯಿಸುವ ಅನಂತ ಸೂರ್ಯರಂತೆ ಪ್ರಕಾಶಿಸುವವಳು, ಶ್ರೀ ಪರಮಾತ್ಮನ ತೊಡೆಯಲ್ಲಿ ಕುಳಿತಿರುವವಳು, ಬ್ರಹ್ಮರುದ್ರಾದಿ ದೇವತೆಗಳಿಂದ ನಮಸ್ಕರಿಸಲ್ಪಟ್ಟ ೨ ಚರಣಗಳುಳ್ಳವಳು, ಸರ್ವ ಜಗತ್ತಿಗೆ ಉತ್ಪಾದಕಳು, ಇಂತಹ ಲಕ್ಷ್ಮೀದೇವಿಯನ್ನು ಧ್ಯಾನಿಸಬೇಕು. ॥೬೨॥ (ಲಕ್ಷ್ಮೀದೇವಿಯ ಬೇರೆ ೨ ಮಂತ್ರಗಳನ್ನು ಹೇಳುತ್ತಾರೆ.) ಲಜ್ಜೆಯೆಂಬ ಅರ್ಥವಿರುವ ಹ್ರೀಂ ಎಂಬ ಬೀಜಾಕ್ಷರವೂ, ಶ್ರೀಂ ಎಂಬ ಬೀಜಾಕ್ಷರವೂ ಇವೆರಡೂ ಪ್ರ ಪ್ರತ್ಯೇಕ ಲಕ್ಷ್ಮೀಪ್ರತಿಪಾದಕ ಮಂತ್ರಗಳೇ ಆಗಿವೆ. ಈ ಬೀಜಾಕ್ಷರದಲ್ಲಿ ಪದ್ಮದ್ವಯದ ಬದಲು ಪಾಶ ಅಂಕುಶಗಳೆಂಬ ಆಯುಧ ವಿಶೇಷಗಳೂ, ಪೀತಾಂಬರದ ಸ್ಥಾನದಲ್ಲಿ ರಕ್ತಾಂಬರವನ್ನು ಇಟ್ಟುಕೊಳ್ಳಬೇಕು. ಹೀಗೆ ಆಯುಧ ವಸ್ತ್ರವಿಷಯದಲ್ಲಿಯೇ ವಿಶೇಷವು ಏವಂಚ ಧ್ಯಾನ ಶ್ಲೋಕದಲ್ಲಿ `ಕೌಶೇಯ ರಕ್ತ ವಸನಾಮರವಿಂದನೇತ್ರಾಂ ಪಾಶಾಂಕುಶಾಭಯವರೋದ್ಯತಪದ್ಮಹಸ್ತಾಂ।' ಎಂದಿಟ್ಟುಕೊಳ್ಳಬೇಕು. ಮಧ್ಯದಲ್ಲಿರತಕ್ಕ ಯುಗ್ಮಸ್ವರಗಳಿಂದ ಬೇರೆಯಾದವುಗಳು ಅಮಧ್ಯಗಳು. ಅಮಧ್ಯಗಳಾದ ಯುಗ್ಮಸ್ವರಗಳಿಂದ ಕೂಡಿದ ಮಂತ್ರದಿಂದಲೇ ಅಂಗನ್ಯಾಸ ಮಾಡಬೇಕು. (ಅಂದರೆ ಅ, ಆ, ಮೊದಲುಗೊಂಡು, ಅಂ, ಅಃ, ಎಂಬ ಪರ್ಯಂತ ೧೬ ಸ್ವರಗಳು. ಅದರಲ್ಲಿ ೧, ೩, ೫, ೭, ೯, ೧೧, ೧೩, ೧೫, ಎಂಬ ೮ ಸ್ವರಗಳು ಆಯುಗ್ಮಗಳು. ೨, ೪, ೬, ೮, ೧೦, ೧೨, ೧೪, ೧೬, ಎಂಬ ೮ ಸ್ವರಗಳು ಯುಗ್ಮಗಳು. ಆ ೮ ಯುಗ್ಮ ಸ್ವರಗಳ ಮಧ್ಯದಲ್ಲಿ ಲೃ ಲೄ ಎಂಬ ೨ ಸ್ವರಗಳನ್ನು ಬಿಟ್ಟು ಉಳಿದ ಆ, ಈ ಊ, ಐ, ಔ, ಅಃ ಎಂಬೀ ೬ ಯುಗ್ಮಸ್ವರಗಳಿಂದ ಸಂಬಂಧ್ಧವಾದ ಲಜ್ಜಾಬೀಜವಾದ ಹ್ರೀ ಶಬ್ದದಿಂದಲೂ ಶ್ರೀ ಶಬ್ದದಿಂದಲೂ ಷಡಂಗನ್ಯಾಸವನ್ನು ತಿಳಿದುಕೊಳ್ಳಬೇಕು. ಹ್ರೀ ಶಬ್ದಕ್ಕೆ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ, ಹ್ರಃ ಎಂದೂ ಶ್ರೀ ಶಬ್ದಕ್ಕೆ ಶ್ರಾಂ ಶ್ರೀಂ ಶ್ರೂಂ ಶ್ರೈಂ ಶ್ರೌಂ ಶ್ರಃ, ಎಂದೂ ತಿಳಿಯಬೇಕು. ॥೬೧-೬೩॥ (ಲಕ್ಷ್ಮೀದೇವಿದ್ದೇ ಬೇರೆ ೨ ಮಂತ್ರಗಳು) ಸತ್ತಾರ್ಥಕವಾದ ಭೂ ಎಂಬ ಬೀಜಾಕ್ಷರವೂ, ದುಃಎಂಬ ಅಕ್ಷರವುಳ್ಳ ದುರ್ಗಾಬೀಜವೂ, ಇವೆರಡೂ ಹಿಂದಿನ ಮಂತ್ರಗಳಂತೆಯೇ ಲಕ್ಷ್ಮೀಮಂತ್ರಗಳೇ ಆಗಿವೆ. ಹಿಂದಿನ ಮಂತ್ರಗಳಂತೆ ಅವುಗಳಿಗೂ ಅಂಗನ್ಯಾಸಾದಿಗಳು, ಧ್ಯಾನದಲ್ಲಿ ಮಾತ್ರ ಶ್ಯಾಮವರ್ಣವುಳ್ಳ ಲಕ್ಷ್ಮೀರೂಪವನ್ನು ಧ್ಯಾನಿಸಬೇಕು. ಭೂಭೀಜ ಮಂತ್ರದಲ್ಲಿ ಧ್ಯೇಯ ಮೂರ್ತಿಯ ಕೈಗಳಲ್ಲಿ ೨ ಪದ್ಮಗಳ ಸ್ಥಾನದಲ್ಲಿ ತಾಂಬೂಲವನ್ನೂ, ನೀಲೋತ್ಪಲವನ್ನೂ ಚಿಂತಿಸಬೇಕು. ದುರ್ಗಾಬೀಜದಲ್ಲಿ ಪದ್ಮಾದಿಗಳ ಸ್ಥಾನದಲ್ಲಿ ಚಕ್ರ ಶಂಖ ತರ್ಜನಮುದ್ರೆ ಶೂಲ ಇವುಗಳನ್ನು ಧ್ಯಾನಿಸಬೇಕು. ॥೬೫॥ ಭೂಂ, ದುಃ, ಎಂಬ ಬೀಜಾಕ್ಷರದ ಕೊನೆಯಲ್ಲಿ ನಮಃ ಶಬ್ದವು. ಅದು ಸ್ವವಾಚಗವಾದ ಚತುರ್ಥ್ಯಂತವಾದ ಭುವೇದುರ್ಗಾಯೈ ಎಂಬುವುಗಳಿಂದ ಕೂಡಿರಬೇಕು. ಏವಂಚ ಭೂಂ ಭುವೇ ನಮಃ ಎಂಬ ಪಂಚಾಕ್ಷರ ಭೂ ಮಂತ್ರವೂ, `ದುಃ ದುರ್ಗಾಯೈ ನಮಃ ಎಂಬ ಷಡಕ್ಷರ ದುರ್ಗಾಮಂತ್ರವೂ ಲಕ್ಷ್ಮೀದೇವಿದ್ದೇ ೨ ಮಂತ್ರಗಳು ॥೬೬॥ ತ್ರಿಷ್ಟುಪ್ ಛಂದೋಬದ್ಧವಾದ ಕಶ್ಯಪ ಋಷಿಯಿಂದ ದೃಷ್ಟವಾದ `ಜಾತವೇದಸೇ ಸುನವಾಮ (ಋ, ೧-೭-

೭) ಇತ್ಯಾದಿ ಋಙ್ಮಂತ್ರವೂ ದುರ್ಗಾಮಂತ್ರವೇ. ಆ ಮಂತ್ರದೇವತೆಯ ವರ್ಣವು ಅಗ್ನಿಯಂತೆ ರಕ್ತವರ್ಣವುಳ್ಳದ್ದು. ಎಲ್ಲಾ ದುರ್ಗಾಮಂತ್ರಗಳಲ್ಲಿಯೂ ದುರ್ಗಾದೇವಿಗೆ ಪ್ರಾಯಶಃ ಮೂರು ಕಣ್ಣುಗಳಿವೆ, ಎಂದು ಧ್ಯಾನಿಸಬೇಕು. ವೈದಿಕ ದುರ್ಗಾಮಂತ್ರಕ್ಕೆ ಮಂತ್ರದ ೪ ಪಾದಗಳಿಂದಲೂ ವಿಶಿಷ್ಟ ಮಂತ್ರಗಳಿಂದಲೂ ಪಂಚಾಂಗನ್ಯಾಸ ಮಾಡಬೇಕು. ಷಡಕ್ಷರ ದುರ್ಗಾ ಮಂತ್ರದಲ್ಲಿ ಮಂತ್ರದ ೬ ಅಕ್ಷರಗಳಿಂದ ಷಡಂಗನ್ಯಾಸವನ್ನು ಮಾಡಬೇಕು. ||೬೭|| ಶ್ರೀ ಭೂ ದುರ್ಗಾ ಇತ್ಯಾದಿಗಳೆಲ್ಲವೂ ಲಕ್ಷ್ಮೀದೇವಿದ್ದೇ ರೂಪಗಳು ಎಂದು ಜ್ಞಾನಿಗಳು ಹೇಳುತ್ತಾರೆ. ಜಾತವೇದಸೇ ಎಂಬ ದುರ್ಗಾಮಂತ್ರಕ್ಕೆ ಪರಶುರಾಮರೂಪಿಯಾದ ಶ್ರೀ ಹರಿಯೇ ಮುಖ್ಯ ಪ್ರತಿಪಾದ್ಯ ದೇವತೆಯು. ದುರ್ಗಾದೇವಿಯು ಆ ಮುಖ್ಯ ದೇವತೆಯು. ||೬೧-೬೭||

## ಚತುರ್ಮುಖ ಮಂತ್ರವು

**ಹಿರಣ್ಯಗರ್ಭಸೂಕ್ತಂ ಚ ಭೃಗುದೃಷ್ಟಂ ಪ್ರಕೀರ್ತಿತಂ ।**
**ಬ್ರಹ್ಮಧಾತೃವಿರಿಂಚಾಜಪಾದ್ಮೈ ರಂಗಮುದಾಹೃತಂ** ||೬೮||

**ಧ್ಯಾಯೇನ್ನಿಷಣ್ಣಮಜಮಚ್ಯುತನಾಭಿಪದ್ಮೇ**
**ಪ್ರೋದ್ಯದ್ದಿವಾಕರಸಮೂಹನಿಕಾಶಮಗ್ರ್ಯಂ ।**
**ಮಾತೃಪ್ರಕಾರಕರಮುತ್ತಮಕಾಂತಿಮದ್ಭಿಃ ವಕ್ತ್ರೈಃ**
**ಸೃಜಂತಮಖಿಲೈಃ ಪರಮಾರ್ಥವಿದ್ಯಾಃ** ||೬೯||

**ಸ್ವಯಮುದ್ದೇಶನತಿಮಾನ್ ತಸ್ಯ ಪಂಚಾಕ್ಷರೋ ಮನುಃ ।**
**ಸ್ವರಯಮೇವಾಪರೋऽಷ್ಟಾರ್ಣಸ್ತಾದೃಶಃ ಸಂಪ್ರಕೀರ್ತಿತಃ** ||೭೦||

ಅ|| ಭೃಗುಋಷಿಯಿಂದ ಕಾಣಲ್ಪಟ್ಟ ಹಿರಣ್ಯಗರ್ಭ ಸಮವರ್ತತಾಗ್ರೇ (೮-೭-೩) ಇದು ಮೊದಲಾದ ೧೫ ಋಕ್ಕುಗಳುಳ್ಳ ಹಿರಣ್ಯಗರ್ಭಸೂಕ್ತವು ಚತುರ್ಮುಖ ಬ್ರಹ್ಮಪ್ರತಿಪಾದಕವು. ಈ ಮಂತ್ರಕ್ಕೆ ಬ್ರಹ್ಮಧಾತೃ ವಿರಿಂಚ ಅಜ, ಪಾದ್ಮ ಈ ೫ ಪದಗಳಿಂದ ಅಂಗನ್ಯಾಸವನ್ನು ಮಾಡಬೇಕು ||೬೮|| ಶ್ರೀಹರಿಯ ನಾಭಿಪದ್ಮದಲ್ಲಿ ಕುಳಿತಿರುವವನೂ, ಉದಯಿಸುವ ಸೂರ್ಯರ ಸಮೂಹಕ್ಕೆ ಸದೃಶಕಾಂತಿಯಿರುವವನೂ, ಸರ್ವಜೀವೋತ್ತಮನೂ, ತಾಯಿಯಾದ ಲಕ್ಷ್ಮೀದೇವಿಯ ಕೈಗಳಿಗೆ ಸದೃಶಗಳಾದ ೪ ಕೈಗಳುಳ್ಳವನೂ (ಅಂದರೆ ಲಕ್ಷ್ಮಿಯಂತೆ ೨ ಕೈಗಳಲ್ಲಿ ೨ ಕಮಲಗಳನ್ನು ೨ ಕೈಗಳಲ್ಲಿ ಅಭಯ ವರಮುದ್ರೆಗಳನ್ನು ಧರಿಸಿರುವವನೂ) ಪರಮಸುಂದರಗಳಾದ ೪ ಮುಖಗಳಿಂದ ಸರ್ವೋತ್ತಮನಾದ ಶ್ರೀ ಹರಿಯನ್ನು ಪ್ರತಿಪಾದಿಸುವ ಋಗಾದಿ ೪ ವೇದಗಳನ್ನುಚ್ಚರಿಸುತ್ತಿರುವವನೂ, ಇಂತಹ ಅಕಾರವಾಚ್ಯ ಶ್ರೀನಾರಾಯಣನಿಂದ ಹುಟ್ಟಿರುವ ಚತುರ್ಮುಖ ಬ್ರಹ್ಮನನ್ನು ಧ್ಯಾನಿಸಬೇಕು. ||೬೯|| (ಬ್ರಹ್ಮನದ್ದೇ ಪಂಚಾಕ್ಷರ ಮಂತ್ರ) ಸ್ವವಾಚಕವಾದ ಬ್ರಹ್ಮ ಶಬ್ದವು, ಚತುರ್ಥ್ಯಂತವಾಗಿ ನತಿವಾಚಕ ನಮಃ ಶಬ್ದದಿಂದ ಕೂಡಿರಬೇಕು. ಅದು ಚತುರ್ಮುಖ ಬ್ರಹ್ಮನಿಗೆ `ಬ್ರಹ್ಮಣೇ ನಮಃ' ಎಂಬ ಪಂಚಾಕ್ಷರ ಮಂತ್ರವಾಗುವುದು. ಸ್ವವಾಚಕವಾದ ಹಿರಣ್ಯಗರ್ಭ ಶಬ್ದವು ಚತುರ್ಥೀ ವಿಭಕ್ತಿ, ನಮಶ್ಶಬ್ದದಿಂದ ಕೂಡಿದ್ದರೆ, `ಹಿರಣ್ಯಗರ್ಭಾಯ ನಮಃ' ಎಂದು ೮ ಅಕ್ಷರಗಳುಳ್ಳ ಇನ್ನೊಂದು ಮಂತ್ರವಾಗುವುದು. ||೬೮-೭೦||

## ಮುಖ್ಯಪ್ರಾಣ ಮಂತ್ರವು

**ಮೂ|| ಬಳಾದ್ಯಂ ಭೃಗುಣಾ ದೃಷ್ಟಂ ಪ್ರಾಣಾಗ್ನೇಃ ಸೂಕ್ತಮುಚ್ಯತೇ ।**
**ಪ್ರಾಣಾದ್ಯೈಃ ಪಂಚಭಿಸ್ತಸ್ಯಾಪ್ಯಂಗಾನ್ಯುಕ್ತಾನಿ ಸೂರಿಭಿಃ** ||೭೧||

**ಉದ್ಯದ್ರವಿಪ್ರಕರಸಂನಿಭಮಚ್ಯುಂತಾಕೇ**
**ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಂ ।**

ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಂ ॥೭೨॥

ಪ್ರಾಣಾದ್ಯಾಃ ಪಂಚ ಮಂತ್ರಾಶ್ಚ ತಸ್ಯ ದೇವಸ್ಯ ವಾಚಕಾಃ ।
ಉಚ್ಯತೇ ಹರಿರಪ್ಯೇತೈಃ ಸಾಕ್ಷಾನ್ನಾರಾಯಣಾದಿಕಃ ॥೭೩॥

ಅ॥ ಭೃಗುಋಷಿಯಿಂದ ಕಾಣಲ್ಪಟ್ಟ (ಬಳಿತ್ಥಾ ತದ್ವಪುಷೇ (ಋ. ೨-೨-೮) ಎಂಬ ಸೂಕ್ತವು ಸರ್ವಜಗತ್ತಿನ ಜೀವನಕ್ಕೆ ಕಾರಣನೂ, ಸ್ವತಃ ಗಮನಾದಿಗಳಿಗೆ ಅಸಮರ್ಥವಾದ ಸರ್ವಜಗತ್ತಿಗೆ ಪ್ರೇರಕನೂ, ಆಗಿರುವುದರಿಂದ ಪ್ರಾಣ ಎನಿಸಿಕೊಂಡ ಮುಖ್ಯಪ್ರಾಣನ ಪ್ರತಿಪಾದಕ ಮಂತ್ರವು. ಈ ವಾಯುಸೂಕ್ತಕ್ಕೆ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಎಂಬ ೫ ಪದಗಳಿಂದ ಪಂಚಾಂಗನ್ಯಾಸ ಮಾಡಬೇಕೆಂದು ಜ್ಞಾನಿಗಳು ಹೇಳಿರುವರು. ॥೭೧॥ (ಧ್ಯಾನವು) ಉದಯಿಸುವ ಸೂರ್ಯರ ಸಮೂಹಕ್ಕೆ ಸದೃಶನೂ ಪರಮಾತ್ಮನ ತೊಡೆಯಲ್ಲಿ ಕುಳಿತಿರುವವನು. ಸರ್ವದಾ ಶ್ರೀ ಹರಿಯ ಸ್ತುತಿಯನ್ನು ಮಾಡುತ್ತಿರುವವನು, (ಅಂದರೆ ಭಗವತ್ಪ್ರತಿಪಾದಕವೇದಗಳನ್ನುಚ್ಚರಿಸುತ್ತಿರುವವನು) ಗದಾ ಅಭಯ ಮುದ್ರೆಗಳನ್ನು ೨ ಕೈಗಳಲ್ಲಿ ಧರಿಸಿರುವವನು, ಅನೇಕಾವತಾರಗಳನ್ನು ಮಾಡಿರುವವನು ಇಂತಹ ಶ್ರೀ ಹರಿಯ ಇದಿರು ಕೈಗಳನ್ನು ಜೋಡಿಸಿಕೊಂಡು ಸ್ತುತಿಸುತ್ತಿರುವವನು, ಉತ್ಕೃಷ್ಟ ಅದ್ಭುತ ಕಾರ್ಯಗಳನ್ನು ಮಾಡುವ ವಿಷಯದಲ್ಲಿ ಸಮರ್ಥನು. ಇಂತಹ ಬಹುರೂಪಿಯಾದ ಮುಖ್ಯಪ್ರಾಣನನ್ನು ಧ್ಯಾನಿಸಬೇಕು ॥೭೨॥ (ವಾಯು ದೇವರದ್ದೇ ಬೇರೆ ಮಂತ್ರಗಳು) ಅಂತ್ಯದಲ್ಲಿ ನಮಶ್ಶಬ್ದ, ಚತುರ್ಥೀವಿಭಕ್ತ್ಯಂತಗಳಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ೫ ಮಂತ್ರಗಳು (ಪ್ರಾಣಾಯ ನಮಃ ಇದು ಮೊದಲಾದವುಗಳು) ಆ ಮುಖ್ಯಪ್ರಾಣನನ್ನೇ ಪ್ರತಿಪಾದಿಸುವವುಗಳು. ಈ ಮಂತ್ರಗಳಿಂದ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ಪಂಚರೂಪಿಯಾದ ಶ್ರೀಹರಿಯೇ ಮುಖ್ಯತಃ ಪ್ರತಿಪಾದ್ಯನು. (ಅಂದರೆ ಪ್ರಾಣಾದಿಗಳಲ್ಲಿ ಅಂತರ್ಗತನಾಗದೇನೇ ಪ್ರತಿಪಾದ್ಯನು. ಇದರಿಂದ ನಾರಾಯಣಾದಿ ಪಂಚಾತ್ಮಕವ್ಯೂಹವು ಪ್ರಾಣಾದಿಗಳಲ್ಲಿ ಅಂತರ್ಗತವಾದುದು ಒಂದು. ಅಂತರ್ಗತವಾಗದಿದ್ದುದು ಇನ್ನೊಂದು ಎಂದುಕ್ತವಾಯ್ತು.) ॥೭೦-೭೩॥

### ಸರಸ್ವತೀ ಭಾರತಿಯರ ಮಂತ್ರಗಳು

ಮೂ॥ ಬ್ರಹ್ಮಾಣ್ಯಾ ಅಪಿ ಭಾರತ್ಯಾ ಗೌರೀರ್ಯಸ್ತ ಇತಿ ಶ್ರುತೌ ।
ಮಂತ್ರೌ ದೀರ್ಘತಮೋದೃಷ್ಟೌ ಸರ್ವಾಭೀಷ್ಟಪ್ರದಾಯಕೌ ॥೭೪॥

ಉದ್ಯದ್ದಿವಾಕರಸಮೂಹನಿಭಾಂ ಸ್ವಭರ್ತು
ರಂಕಸ್ಥಿತಾಮಭಯಸದ್ವರ ಬಾಹುಯುಗ್ಮಾಂ ।

ಮುದ್ರಾಂ ಚ ತತ್ತ್ವದೃಶಯೇ ವರಪುಸ್ತಕಂ ಚ
ದೋರ್ಯುಗ್ಮಕೇನ ದಧತೀಂ ಸ್ಮರತ್ಯಾತ್ಮವಿದ್ಯಾಂ ॥೭೫॥

ಪಾದೈರ್ವ್ಯಸ್ತೈಃ ಸಮಸ್ತೈಶ್ಚ ತದಂಗಾನಿ ವಿದೋವಿದುಃ
ಸ್ವಯಮುದ್ದೇಶನತ್ಯಂತೌ ಮಂತ್ರೌ ದ್ವಾವಪರೌ ತಯೋಃ ॥೭೬॥

ಮಂತ್ರಾ ಹ್ಯೇತೇ ಹರಿಪ್ರೀತಿದಾಯಕಾಃ ಸರ್ವಕಾಮದಾಃ ।
ಇಷ್ಟಂ ದೈವಂ ಹರಿಃ ಸಾಕ್ಷಾಲ್ಲಕ್ಷ್ಮೀ ರ್ಭಾಗ್ಯಸ್ಯ ದೇವತಾ ॥೭೭॥

ಗುರುರ್ಬ್ರಹ್ಮಾಽಥ ವಾಯುರ್ವಾ ವಿದ್ಯಾದೇವ್ಯೌ ಪ್ರಕೀರ್ತಿತೇ ॥
ತಸ್ಮಾದೇತೇ ಪ್ರಿಯಾ ವಿಷ್ಣೋರ್ನಿರಂತರಂಗತಯಾ ಸದಾ ॥
ಜ್ಞೇಯಾಶ್ಚೈವ ಪ್ರಪೂಜ್ಯಾಶ್ಚ ವಿಷ್ಣೋಃ ಪ್ರೀತಿಮಭೀಪ್ಸತಾ ॥೭೮॥

ಅ॥ ಗೌರೀರ್ಮಿಮಾಯ ಸಲಿಲಾನಿ ತಕ್ಷತಿ (ಋ, ೨-೨-೨೨) ಎಂಬ ಮಂತ್ರವು, ಸರಸ್ವತೀ ಪ್ರತಿಪಾದಕವು. ಯಸ್ತೇಸ್ತನಃ ಶಶಯೋ ಯೋಮಯೋಭೂಃ (ಋ. ೨-೩-೨೩) ಎಂಬ ಮಂತ್ರವು ಭಾರತೀ ಪ್ರತಿಪಾದಕವು. ಇವೆರಡೂ ದೀರ್ಘತಮಃ ಎಂಬ ಋಷಿಯಿಂದ ಕಾಣಲ್ಪಟ್ಟವುಗಳು. ಸಮಸ್ತ ಅಭೀಷ್ಟಗಳನ್ನು ಕೊಡತಕ್ಕವುಗಳು ॥೭೪॥ (ಇವರಿಬ್ಬರ ಧ್ಯಾನವು) ಉದಯಿಸಿಕೊಂಡು ಬರುವ ಸೂರ್ಯರ ಸಮೂಹಕ್ಕೆ ಸದೃಶಳೂ, ತನ್ನ ಗಂಡನ ತೊಡೆಯಲ್ಲಿ ಕುಳಿತಿರುವವಳೂ, ೨ ತೋಳುಗಳಲ್ಲಿ ಅಭಯ ಮುದ್ರೆ ಶ್ರೇಷ್ಠವಾದ ವರಮುದ್ರೆಗಳನ್ನು ಧರಿಸಿರುವವಳೂ, ಉಳಿದ ೨ ತೋಳುಗಳಲ್ಲಿ ತತ್ವಜ್ಞಾನವನ್ನುಪದೇಶಿಸುವ ಜ್ಞಾನಮುದ್ರೆ ಉತ್ತಮ ಸದ್ಗ್ರಂಥ ಇವುಗಳನ್ನು ಧರಿಸಿರುವವಳೂ, ಇಂತಹ ಶ್ರೀ ಪರಮಾತ್ಮ ಪ್ರತಿಪಾದಕ ವಿದ್ಯೆಗೆ ಅಭಿಮಾನಿನಿಯಾದ ಸರಸ್ವತಿಯನ್ನೂ ಭಾರತಿಯನ್ನೂ ಧ್ಯಾನಿಸಬೇಕು. ಆವಾವ ಮಂತ್ರಗಳ ೪ ಪಾದಗಳಿಂದಲೂ ಸಮಸ್ತ ಮಂತ್ರಗಳಿಂದಲೂ ಪಂಚಾಂಗನ್ಯಾಸಗಳನ್ನು ಮಾಡಬೇಕೆಂದು ಜ್ಞಾನಿಗಳು ಹೇಳುತ್ತಾರೆ. ॥೭೫॥ (ಸರಸ್ವತೀ ಭಾರತಿಯರ ಪಂಚಾಕ್ಷರ ಮಂತ್ರಗಳು) ॥೭೫॥ ನಮಃ ಎಂಬುವುದೇ ಅಂತ್ಯದಲ್ಲಿ ಉಳ್ಳ ಚತುರ್ಥ್ಯಂತಗಳಾದ ಬ್ರಹ್ಮಾಣೀ ಭಾರತೀ ಪದಗಳೇ ಸರಸ್ವತೀ ಭಾರತಿಯರ ಬೇರೆ ೨ ಪಂಚಾಕ್ಷರ ಮಂತ್ರಗಳು. ಅಂದರೆ ಬ್ರಹ್ಮಾಣ್ಯೈ ನಮಃ ಭಾರತ್ಯೈನಮಃ ಎಂದು ೨ ಮಂತ್ರಗಳು ॥೭೬॥ ಲಕ್ಷ್ಮೀ ಬ್ರಹ್ಮಾದಿ ಮಂತ್ರಗಳೆಲ್ಲವೂ ಅಧಿಕಾರಿಗಳಿಗೆ ಶ್ರೀವಿಷ್ಣುವಿನ ಪ್ರಸಾದವನ್ನು ಸಂಪಾದಿಸಿ ಕೊಡುವವುಗಳು. (ಶ್ರೀ ವಿಷ್ಣುವು ಪ್ರಸನ್ನನಾದರೆ) ಐಹಿಕ ಆಮುಷ್ಮಿಕ ಸಮಸ್ತ ಅಭೀಷ್ಟಗಳನ್ನು ಕೊಡತಕ್ಕವುಗಳು (ಅಂದರೆ ಲಕ್ಷ್ಮ್ಯಾದಿ ಮಂತ್ರಗಳು ಭಗವಂತನ ಪ್ರೀತಿಯನ್ನು ಹುಟ್ಟಿಸುತ್ತಾ ಸರ್ವಪುರುಷಾರ್ಥಗಳನ್ನು ಕೊಡುವವುಗಳಾಗಿರುವುದರಿಂದ ಇಲ್ಲಿ ಹೇಳಲ್ಪಟ್ಟಿವೆ) ಸಮಸ್ತ ಮಂತ್ರಗಳಲ್ಲಿ ಪ್ರತಿಪಾದ್ಯನಾಗಿದ್ದು ಭಕ್ತರ ಅಭೀಷ್ಟವನ್ನು ದಯಪಾಲಿಸುವ ಶ್ರೀ ಹರಿಯು ಸಾಕ್ಷಾತ್ ಸರ್ವರಿಗೂ ಇಷ್ಟಪ್ರದ ದೇವತೆಯು. ಲಕ್ಷ್ಮೀದೇವಿಯು ಸರ್ವರಿಗೂ ಭಾಗ್ಯದಾಯಕ ದೇವತೆಯು. ॥೭೭॥ ಬ್ರಹ್ಮನು ಹೇಗೆ ಮುಕ್ತಿಯೋಗ್ಯರಿಗೆ ತತ್ವಜ್ಞಾನವನ್ನು ಪ ದೇಶಿಸುವ ಮೂಲಗುರುವೋ ಹಾಗೆಯೇ ವಾಯುದೇವರೂ ಮೂಲಗುರುಗಳೇ, ಸರಸ್ವತೀ ಭಾರತಿಯರು ಸಮಸ್ತ ವಿದ್ಯಾಪ್ರತಿಪಾದಕ ದೇವತೆಗಳು ವಿದ್ಯಾಭಿಮಾನಿಯರು. ಆದ ಕಾರಣ ಲಕ್ಷ್ಮೀ, ಬ್ರಹ್ಮ ವಾಯು, ಸರಸ್ವತೀ ಭಾರತಿಯರು ಇಷ್ಟ ದೇವತೆಯಾದ ಶ್ರೀ ವಿಷ್ಣುವಿಗೆ ಇತರ ದೇವತೆಗಳಿಗಿಂತ ಸದಾ ಹೆಚ್ಚು ಪ್ರಿಯರಾಗಿದ್ದಾರೆ. ಆದಕಾರಣ ಶ್ರೀ ವಿಷ್ಣುವಿನ ಪ್ರೀತಿಯನ್ನು ಇಚ್ಛಿಸುವ ಪುರುಷನು ಈ ಲಕ್ಷ್ಮ್ಯಾದಿ ೫ ದೇವತೆಗಳನ್ನು ಹೆಚ್ಚು ತಿಳಿಯಬೇಕು. ಮತ್ತು ಆವಾವ ಮಂತ್ರಗಳ ಜಪದಿಂದ ಇತರ ದೇವತೆಗಳಿಗಿಂತ ಹೆಚ್ಚು ಪೂಜಿಸಬೇಕು. ॥೭೮॥ ॥೭೪-೭೮॥

## ಪಂಚಾಕ್ಷರ ಶಿವಮಂತ್ರವು

**ಮೂ॥ ಉದ್ದೇಶನತಿಯುಙ್ಮಂತ್ರಃ ಸ್ವಯಮೇವ ಶಿವಸ್ಯ ತು ॥೭೯॥**

**ವರ್ಣೈರೇತೈಸ್ತದಂಗಾನಿ ವಾಮದೇವೋ ಮುನಿಃ ಸ್ಮೃತಃ ।**
**ಪಂಕ್ತಿಶಬ್ದಾರ್ಥವಿಜ್ಞಾನೇ ನ ಹಿ ಛಂದಸಿ ಸಂಶಯಃ ॥೮೦॥**

**ಧ್ಯೇಯಃ ಪಂಚಮುಖೋ ರುದ್ರಃ ಸ್ಫಟಿಕಾಮಲಕಾಂತಿಮಾನ್ ।**
**ವಿದ್ಯುಚ್ಛುಭ್ರಾಸಿತರಜಃ ಶ್ಯಾಮಾನ್ಯಸ್ಯ ಮುಖಾನಿ ಚ**
**ಜಟಾಪಬದ್ಧೇಂದುಕಲಃ ಪ್ರಿಯಾಯುಕ್ ನಾಗಭೂಷಣಃ ॥೮೧॥**

**ಮಂತ್ರೇಷ್ವೇತೇಷು ಸರ್ವೇಷು ವಾಚ್ಯಸ್ತಾರೇಣ ಕೇಶವಃ ॥೮೨॥**

**ಅಂತರ್ಯಾಮಿತಯಾ ಧ್ಯೇಯಃ ಸರ್ವದೇವೇಷು ಸರ್ವದಾ ॥೮೩॥**

ಅ॥ ಸ್ವವಾಚಕ ಶಿವಶಬ್ದವೇ ಚತುರ್ಥ್ಯಂತವಾಗಿ ನಮಃ ಶಬ್ದದಿಂದ ಕೂಡಿದರೆ ನಮಃ ಶಿವಾಯ ಎಂದು ಶಿವಮಂತ್ರವಾಗುವುದು. ಮಂತ್ರದಲ್ಲಿರತಕ್ಕ ೫ ಅಕ್ಷರಗಳಿಂದ ನಂ ಹೃದಯಾಯ ನಮಃ ಇತ್ಯಾದಿ ಪ್ರಕಾರ ಪಂಚಾಂಗನ್ಯಾಸ ಮಾಡಬೇಕು. ಈ ಮಂತ್ರಕ್ಕೆ ವಾಮದೇವನು ಋಷಿಯು, ಪಂಚಾಕ್ಷರ ಮಂತ್ರಕ್ಕೆ ಪಂಙ್ತಿ ಛಂದಸ್ಸು. (ಎಂದು ಸುಲಭದಿಂದ ಜ್ಞಾನವು ಬರುವುದಕ್ಕಾಗಿ ಹೇಳಿದ್ದು.

ವಸ್ತುತಃ ಛಂದಸ್ಸನ್ನು ಹೇಳಬೇಕಾಗಿಯೇ ಇಲ್ಲ. ಛಂದಸ್ಸಿನ ಲಕ್ಷಣವಿದ್ದವನಿಗೆ ಅಕ್ಷರ ಪರಿಗಣನೆಯಿಂದಲೇ ಛಂದಸ್ಸಿನ ಜ್ಞಾನವು ಬರುವುದು ಹೇಗೆಂದರೆ) ಈ ಮಂತ್ರದಲ್ಲಿ ೫ ಅಕ್ಷರ, ಇದರಲ್ಲಿ ೬ ಅಕ್ಷರ, ಇತ್ಯಾದಿ ಪ್ರಕಾರ ಆವಾವ ಮಂತ್ರಗಳಲ್ಲಿರತಕ್ಕ ಅಕ್ಷರ ಸಂಖ್ಯಾಜ್ಞಾನವು ಬರುವಾಗ ಈ ಮಂತ್ರಕ್ಕೆ ಯಾವುದು ಛಂದಸ್ಸು ಎಂಬ ವಿಷಯದಲ್ಲಿ ಸಂಶಯ ಪಡುವ ಸಂಭವವೇ ಇಲ್ಲ. (ಶಿವ ಪಂಚಾಕ್ಷರ ಮಂತ್ರಜಪದಿಂದಲೇ ಸಂಶಯ ನಿವೃತ್ತಿಯಾಗುವುದು ||೪೦|| (ಧ್ಯಾನವು) ಸ್ಪಟಿಕಮಣಿಯಂತೆ ಶುಭ್ರವಾದ ಕಾಂತಿಯಿರುವವನು, ಪಂಚಮುಖವುಳ್ಳವನು, ಆತನ ೫ ಮುಖಗಳು, ಮಿಂಚಿನಂತೆ ವರ್ಣ, ಕಪ್ಪು, ಕೆಂಪು, ನೀಲ ಬಣ್ಣದವುಗಳು. ಆತನ ಜಟೆಯಲ್ಲಿ ಚಂದ್ರನ ಕಲೆಯು ಶೋಭಿಸುತ್ತದೆ. ಸರ್ಪರಾಜನು ಆಭರಣನಾಗಿರುತ್ತಾನೆ. ಪ್ರಿಯಳಾದ ಪಾರ್ವತಿಯಿಂದ ಕೂಡಿರುವವನು, ಇಂತಹ ರುದ್ರರನ್ನು ಧ್ಯಾನಿಸಬೇಕು. ||೪೧|| ಹಿಂದೆ ಹೇಳಿರುವ ಮುಂದೆ ಹೇಳುವ ಎಲ್ಲಾ ಅನ್ಯದೇವತಾ ಮಂತ್ರಗಳಲ್ಲಿಯೂ (ಆದ್ಯಂತಗಳಲ್ಲಿ ಓಂಕಾರೋಚ್ಚಾರಣವು ಅವಶ್ಯವಾದ ಕಾರಣ ಆ ಓಂಕಾರದಿಂದ ಕೇಶವರೂಪಿ ಶ್ರೀ ಪರಬ್ರಹ್ಮನೇ ವಾಚ್ಯನಾಗಿರುತ್ತಾನೆ. ಆವಾವ ಮಂತ್ರಗಳಿಂದ ಪ್ರತಿಪಾದ್ಯರಾದ ಸಮಸ್ತ ದೇವತೆಗಳಲ್ಲಿಯೂ ಅಂತರ್ಯಾಮಿಯಾಗಿದ್ದು ಆವಾವ ಮಂತ್ರಗಳಲ್ಲಿ ಮುಖ್ಯ ಪ್ರತಿಪಾದ್ಯನು ಶ್ರೀ ಹರಿಯೇ, ರಮಾ ಬ್ರಹ್ಮಾದಿಗಳು ಪರಿವಾರ ಭೂತರು, ಎಂದು ಧ್ಯಾನಿಸಬೇಕು|| ||೭೯-೪೩||

**ಪಂಚಾಕ್ಷರ ಪಾರ್ವತೀ ಮಂತ್ರವು**

**ಮೂ|| ಸ ಏವ ವನಿತಾಲಿಂಗಃ ಪಾರ್ವತ್ಯಾ ಮನುರುಚ್ಯತೇ ।**
**ಗೌರೀ ವರಾಭಯಕರಾ ಧ್ಯೇಯಾ ಪೀತಾಂಬರಾ ಚ ಸಾ ||೪೪||**

ಅ|| ಹಿಂದಿನ ಮಂತ್ರದಲ್ಲಿರತಕ್ಕ ಶಿವಶಬ್ದವೇ ಸ್ತ್ರೀ ಲಿಂಗಾಂತವಾಗಿ ನಮಃ ಶಿವಯ್ಯೆ ಎಂದು ಉಪಯೋಗಿಸಿದರೆ ಪಾರ್ವತೀ ಪಂಚಾಕ್ಷರ ಮಂತ್ರವಾಗುತ್ತದೆ. (ಹಿಂದಿನ ಮಂತ್ರದಂತೆಯೇ ನ್ಯಾಸಾದಿಗಳು) (ಧ್ಯಾನವು) ಆ ಪಾರ್ವತಿಯು ವರಾಭಯ ಮುದ್ರೆಗಳನ್ನು ಧರಿಸುವ ಕೈಗಳುಳ್ಳವಳು ಪೀತಾಂಬರ ಧಾರಿಣಿಯು ಎಂದು ಧ್ಯಾನಿಸಬೇಕು. ||೪೪||

**ಶೇಷ ಮಂತ್ರವು**

**ಮೂ|| ಸ್ವಯಮುದ್ದೇಶನತ್ಯಂತಃ ಪೂರ್ವಪೂರ್ವ ಷಡಕ್ಷರಃ ||೪೫||**

**ಸನತ್ಕುಮಾರದೃಷ್ಟೋಽಯಂ ಮಂತ್ರಃ ಶೇಷಸ್ಯ ಕಾಮದಃ ।**
**ದಧಾನೋ ಹಲಸೌನಂದೌ ಶ್ವೇತವರ್ಣ ಕೃತಾಂಜಲಿಃ ||೪೬||**

**ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।**
**ವನಮಾಲೀ ನೀಲವಾಸಾಃ ಧ್ಯೇಯೋ ವಿಷ್ಣೋಃಸ್ತು ಪೃಷ್ಠತಃ ||೪೭||**

ಅ|| ಶೇಷ ಶಬ್ದವು ಚತುರ್ಥ್ಯಂತವಾಗಿರಬೇಕು. ಮೊದಲಿನ ವರ್ಣವಾದ ಶೇಕಾರವು ಅನುಸ್ವಾರ ಸಹಿತವಾಗಿರಬೇಕು. ಅಂತ್ಯದಲ್ಲಿ ನಮಃ ಶಬ್ದವು. ಹೀಗೆ `ಶೇಂ ಶೇಷಾಯ ನಮಃ' ಎಂದು ಶೇಷ ಷಡಕ್ಷರ ಮಂತ್ರವಾಗುವುದು. ಈ ಮಂತ್ರವು ಸನತ್ಕುಮಾರ ಋಷಿಯಿಂದ ದೃಷ್ಟವಾದುದು. ಭಕ್ತರಿಗೆ ಅಭೀಷ್ಟದಾಯಕವು. (ಧ್ಯಾನವು) ಆ ಶೇಷನು ಹಲಾಯುಧ ಮುಸಲಾಯುಧಗಳನ್ನು ಧರಿಸಿರುವವನು, ಶುಭ್ರವರ್ಣನು, ಸಪತ್ನೀಕನಾಗಿ ಶ್ರೀ ಹರಿಗೆ ಕೈ ಮುಗಿದುಕೊಂಡಿರುವವನು, ಸಹಸ್ರ ಹೆಡೆಗಳುಳ್ಳವನು, ಒಂದು ಕುಂಡಲ ಧರಿಸಿರುವವನು. ಪಾದಪರ್ಯಂತ ಜೋತಾಡಿಕೊಂಡಿರುವ ಪುಷ್ಪಮಾಲಿಕೆಯನ್ನು ಧರಿಸಿರುವವನೂ ನೀಲವರ್ಣದ ಬಟ್ಟೆಯನ್ನಿಟ್ಟುಕೊಂಡವನೂ ಇಂತಹ ಶೇಷನು ಶ್ರೀ ಪರಮಾತ್ಮನ ಬೆಂಬದಿಯಲ್ಲಿ ನಿಂತುಕೊಂಡು ಶ್ರೀಹರಿಯನ್ನು ಧ್ಯಾನಿಸುತ್ತಿದ್ದಾನೆಂದು ಧ್ಯಾನಿಸಬೇಕು. ||೪೬-೪೭||

## ಗರುಡಮಂತ್ರವು

**ಮೂ॥ ವ್ಯತ್ಯಸ್ತಪಕ್ಷಿತಾರೌ ಚ ಸ್ವಾಹಾಽಂತೋ ಗಾರುಡೋ ಮನುಃ।**
**ಕಾಶ್ಯಪೋಽಸ್ಯ ಮುನಿರ್ದ್ಯೇಯಃ ಸುಧಾಪೂರ್ಣಂ ಹಿರಣ್ಮಯಂ ॥೮೮॥**

**ದಧಾನಃ ಕುಂಭಮಭಯಂ ಪೀತಶುಕ್ಲಾರುಣೋ ಹರಿಃ।**
**ಕೃಷ್ಣಶ್ಚಾಽಜಾನುತೋ ನಾಭೇಃ ಕಂಠಾತ್ಕ್ಮಾದಂಶ ಏವ ಚ ॥೮೯॥**

**ಪ್ರಿಯಾಯುಕ್ ಪುರತೋ ವಿಷ್ಣೋಃ ಪಕ್ಷತುಂಡ ಸಮನ್ವಿತಃ।**
**ಜಂಗಮಸ್ಥಾವರವಿಷಹೃದಯಂ ಸರ್ವಕಾಮದಃ ॥೯೦॥**

ಅ॥ ವ್ಯುತ್ಕ್ರಮವಾಗಿ ಪಠಿತವಾದ ಪಕ್ಷಿ ಶಬ್ದ, ಆ ಮೇಲೆ ಓಂಕಾರ, ಅಂತ್ಯದಲ್ಲಿ ಅಗ್ನಿಭಾರ್ಯಾವಾಚಕ ಸ್ವಾಹಾ ಶಬ್ದ, ಏವಂಚ `ಕ್ಷಿಪ ಓಂ ಸ್ವಾಹಾ' ಎಂದು ಗರುಡ ಪಂಚಾಕ್ಷರ ಮಂತ್ರವು. ಈ ಮಂತ್ರದ್ರಷ್ಟನು ಕಶ್ಯಪ ಋಷಿಯು, ಅಮೃತದಿಂದ ತುಂಬಿರುವ ಹಿರಣ್ಮಯವಾದ ಕಲಶವನ್ನೂ ಅಭಯ ಮುದ್ರೆಯನ್ನೂ ಎರಡು ಕೈಗಳಲ್ಲಿ ಧರಿಸಿರುವವನೂ, ಪಾದವನ್ನಾರಂಭಿಸಿ ಮೊಣಗಂಟಿನ ಪರ್ಯಂತ ಹಳದಿ ಬಣ್ಣದವನು, ಜಾನುವಿನಿಂದ ಹೊಕ್ಕಳಿನ ಪರ್ಯಂತ ಬಿಳಿಯಾಗಿರುವವನು, ಅಲ್ಲಿಂದ ಕಂಠದ ವರೇಗೆ ಕೆಂಪು ಬಣ್ಣದವನು, ಅಲ್ಲಿಂದ ಶಿರಸ್ಸಿನ ವರೇಗೆ ಹಸುರು ಬಣ್ಣದವನು, ತಲೆಯಲ್ಲಿ ಕಪ್ಪು ಬಣ್ಣದವನು, ರೆಕ್ಕೆ ಕೊಕ್ಕುಗಳಿಂದ ಕೂಡಿರುವವನು, ಇಂತಹ ಗರುಡನು ತನ್ನ ಪ್ರಿಯಳಾದ ಸೌಪರ್ಣಿಯಿಂದೊಡಗೂಡಿ ಶ್ರೀ ವಿಷ್ಣುವಿನ ಇದುರು ಧ್ಯಾನಿಸುತ್ತಿದ್ದಾನೆಂದು ಗರುಡನನ್ನೂ ಧ್ಯಾನಿಸಬೇಕು. ಈ ಮಂತ್ರವನ್ನು ಜಪಿಸಿದರೆ ಸರ್ಪ ಮೊದಲಾದ ಸಂಚಾರ ಶೀಲಗಳಾದ ಜಂಗಮಪ್ರಾಣಿಗಳು, ಸಂಚಾರವಿಲ್ಲದ ವೃಕ್ಷಾಧಿಗಳು, ಇವುಗಳ ವಿಷಗಳೆಲ್ಲವೂ ಪರಿಹಾರವಾಗುವುವು. ಸರ್ವಾಭೀಷ್ಟಗಳೂ ಸಿದ್ಧಿಸುವುವು. ॥೮೮-೮೯-೯೦॥

## ಇಂದ್ರಾದಿ ದಶದಿಕ್ಪಾಲಕರ ಮಂತ್ರಗಳು

**ಮೂ॥ ಮಂತ್ರಾಶ್ಚ ಲೋಕಪಾಲಾನಾಂ ನಮೋಽಂತಾಃ ಸರ್ವಕಾಮದಾಃ।**
**ನೀಲ (ಪೀತ) ರಕ್ತಾಸಿತಶ್ವೇತರಕ್ತಶುಕ್ಲಾಶ್ಚ ವರ್ಣತಃ ॥೯೧॥**

**ಸಪ್ರಿಯಾಃ ಸಾಭಯಾಃ ವಜ್ರಶಕ್ತಿದಂಡಾಸಿಪಾಶಿನಃ।**
**ಗದಾ ಕುಮುದ ಶೂಲೇಷ್ವ (ಶೂಲರ್ಷ್ವಿ) ಖಡ್ಗಿನೋ ಭೂಷಣೋಜ್ವಲಾಃ ॥೯೨॥**

ಅ॥ ಕೊನೆಯಲ್ಲಿ ನಮಃ ಪದವು, ಚತುರ್ಥ್ಯಂತಗಳಾದ ಇಂದ್ರಾದಿ ಶಬ್ದಗಳೂ, ಇಂದ್ರಾಯ ನಮಃ ಇತ್ಯಾದಿ ರೂಪವಾಗಿ ಇಂದ್ರಾದಿ ದಶದಿಕ್ಪಾಲಕರ ಮಂತ್ರಗಳು, ಆ ಮಂತ್ರಗಳು ಸರ್ವಾಭೀಷ್ಟಪ್ರದಗಳು; ಇಂದ್ರಾದಿ ದೇವತೆಗಳೆಲ್ಲರೂ ಸಪತ್ನೀಕರೂ ಆಭರಣಾದಿಗಳಿಂದ ಆಲಂಕೃತರೂ ಪೀತಾದಿವರ್ಣವುಳ್ಳವರೂ ಆಗಿ ೧ ಕೈಯಲ್ಲಿ ಅಭಯ ಮುದ್ರೆಯನ್ನೂ ಮತ್ತೊಂದರಲ್ಲಿ ವಜ್ರಾಯುಧಗಳನ್ನೂ ಧರಿಸಿದವರಾಗಿರುತ್ತಾರೆ. ಹೇಗೆಂದರೆ - ಇಂದ್ರನಿಗೆ - ನೀಲ (ಹಳದಿ) ಬಣ್ಣ, ವಜ್ರಾಯುಧ, ಅಗ್ನಿಗೆ ಕೆಂಪು ಬಣ್ಣ, ಶಕ್ತ್ಯಾಯುಧ, ಯಮನಿಗೆ ಕಪ್ಪು ಬಣ್ಣ, ದಂಡಾಯುಧ, ನಿರ್ಋತಿಗೆ ಕಪ್ಪುಬಣ್ಣ, ಖಡ್ಗಾಯುಧ, ವರುಣನಿಗೆ ಶ್ವೇತವರ್ಣ ವಿಶೇಷ, ಪಾಶಾಯುಧ, ವಾಯುವಿಗೆ ಕಪ್ಪುಬಣ್ಣ, ಗದಾಯುಧ; ಚಂದ್ರನಿಗೆ ಬಿಳಿಬಣ್ಣ, ಕುಮುದ, ಈಶಾನನಿಗೆ ಬಿಳಿ ಬಣ್ಣ, ಶೂಲಾಯುಧ, ಅನಂತನಿಗೆ ಬಿಳಿ ಬಣ್ಣ, ಋಷ್ಟ್ಯಾಯುಧ, ಬ್ರಹ್ಮನಿಗೆ ಕೆಂಪು ಬಣ್ಣ, ಖಡ್ಗಾಯುಧ, ಈ ರೀತಿಯಾಗಿ ಇಂದ್ರನನ್ನಾರಂಭಿಸಿ ಬ್ರಹ್ಮನ ಪರ್ಯಂತ ದೇವತೆಗಳು ಇಂತಹ ರೂಪ ಆಯುಧಗಳಿಂದ ಯುಕ್ತರಾಗಿ ಭಕ್ತರಿಗೆ ಅಭೀಷ್ಟದಾಯಕರಾಗಿದ್ದಾರೆಂದು ಧ್ಯಾನಿಸಬೇಕು. ॥೯೧-೯೨॥

## ಷಡಕ್ಷರ ಸ್ಕಂದ ಮಂತ್ರವು

ಮೂ॥ ಅಗ್ನಿಶ್ಚ ಸ್ವಯಮುದ್ದೇಶೀ ಸನಮಃ ಸ್ಕಂದವಾಚಕಃ ।
ಕೌಶಿಕೋಽಸ್ಯ ಮುನಿರ್ವಹ್ನಿವರ್ಣ ಷಣ್ಮುಖ ಉಜ್ವಲಃ
ಧನುಃಶಕ್ತಿಧರೋ ಧ್ಯೇಯಃ ಕಾಮದೋ ಭಯನಾಶನಃ ॥೯೩॥

ಅ॥ ಆದಿಯಲ್ಲಿ ರಂ ಎಂಬ ಅಗ್ನಿಯ ಬೀಜಾಸುರ, ಚತುರ್ಥ್ಯಂತವಾದ ಸ್ಕಂದ ಶಬ್ದ, ಅಂತ್ಯದಲ್ಲಿ ನಮಃ ಶಬ್ದ ರಂ ಸ್ಕಂದಾಯ ನಮಃ ಎಂದು ಸ್ಕಂದ ಮಾತ್ರವು, ಈ ಮಂತ್ರಕ್ಕೆ ವಿಶ್ವಾಮಿತ್ರ ಋಷಿಯು ದ್ರಷ್ಟನು, (ಧ್ಯಾನವು) ಅಗ್ನಿಯಂತೆ ರಕ್ತವರ್ಣನು, ೬ ಮೋರೆಗಳುಳ್ಳವನು, ಪ್ರಕಾಶಿಸಿಕೊಂಡಿರುವವನು, ಧನುಸ್ಸು ಶಕ್ತ್ಯಾಯುಧಗಳನ್ನು ಧರಿಸಿರುವವನು, ಎಂದು ಸ್ಕಂದನನ್ನು ಧ್ಯಾನಿಸಬೇಕು. ಈ ಮಂತ್ರವು ಭಕ್ತಾಭೀಷ್ಟ ಪ್ರದವೂ ಭಯಪರಿಹಾರಕವೂ ಆಗಿದೆ. ॥೯೩॥

## ಸೂರ್ಯ ಮಂತ್ರವು

ಮೂ॥ ಹ್ರಸ್ವಃ ಕೃಪಾಲುಃ ಸೇತಶ್ಚ ಸ್ವಯಮನ್ಯಃ ಸ್ವಯಂ ತಥಾ ॥೯೪॥

ಸತಾರೋಽಷ್ಟಾಕ್ಷರಃ ಸೌರಃ ಕ್ರಮವ್ಯುತ್ಕ್ರಮತಃ ಪದೈಃ
ಅಂಗಾನಿಪದ್ಮಯುಗಲಧರೋ ಧ್ಯೇಯೋಽರುಣೋ ರವಿಃ ।

ಸರ್ವವ್ಯಾಧಿಹರಃ ಶ್ರೀದೋ ವೃಷ್ಟಿದೋಽಯಂ ಮನುಃ ಸ್ಮೃತಃ ॥೯೫॥

ಅ॥ ಕೃಪಾಲು ಎಂಬ ಅರ್ಥವುಳ್ಳ ಘೃಣೀಶಬ್ದವು ಹ್ರಸ್ವವಾಗಿದ್ದು ನಿಸರ್ಗದಿಂದ ಕೂಡಿರಬೇಕು. ಸೂರ್ಯವಾಚಕವಾದ ಸೂರ್ಯದಿ ಶಬ್ದಗಳು ಆದಿಯಲ್ಲಿ ಓಂಕಾರ ಏವಂಚ - ಓಂ ಘೃಣಿಃ ಸೂರ್ಯ ಆದಿತ್ಯಃ ಎಂದು, ೮ ಅಕ್ಷರಗಳುಳ್ಳ ಸೂರ್ಯ ಪ್ರತಿಪಾದಕ ಮಂತ್ರವು. ಓಂಕಾರ ಬಿಟ್ಟು ಉಳಿದ ೩ ಪದಗಳಿಂದ ಕ್ರಮವಾಗಿ ವ್ಯುತ್ಕ್ರಮವಾಗಿ ೩ ಪದಗಳಿಂದ ಷಡಂಗನ್ಯಾಸಗಳನ್ನು ಮಾಡಬೇಕು. ಘೃಣಿಃ ಸೂರ್ಯ ಆದಿತ್ಯಃ ಎಂದು ಕ್ರಮವು, ಆದಿತ್ಯಃ ಸೂರ್ಯ ಘೃಣಿಃ ಎಂದು ವ್ಯುತ್ಕ್ರಮವು (ಧ್ಯಾನವು) ೨ ಕೈಗಳಲ್ಲಿ ೨ ಪದ್ಮಗಳನ್ನು ಧರಿಸಿರುವವನು, ಕೆಂಬಣ್ಣದವನು, ಎಂದು ಸೂರ್ಯನನ್ನು ಧ್ಯಾನಿಸಬೇಕು. ಈ ಮಂತ್ರವು ಸಮಸ್ತ ವ್ಯಾಧಿ ಪರಿಹಾರಕವು, ಸರ್ವಸಂಪದ್ದಾಯಕವು, ಮಳೆ ಮೊದಲಾದ ಅಭೀಷ್ಟದಾಯಕವೂ ಆಗಿದೆ. ॥೯೪-೯೫॥

## ವಿಘ್ನೇಶ್ವರ ಮಂತ್ರವು

ಮೂ॥ ಮೋನಯದಾಸಾಪ್ರಪ್ರಕ್ಷಿ ವ್ಯತ್ಯಸ್ತೋ ವಿಘ್ನರಾಣ್ಮನುಃ ॥೯೬॥

ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ।
ಲಂಬೋದರೋ (ಮಹೋದರೋ) ಗಜಮುಖಃ ಪಾಶದಂತಾಂಕುಶಾಭಯೇ ॥೯೭॥

ಬಭ್ರುದ್ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಂ ।
ತತ್ರತತ್ರಸ್ಥಿತೋ ವಿಘ್ನಸ್ತತ್ರಚ್ಛಕ್ತೀಃ ಪ್ರಬೋಧಯನ್ ।
ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥೯೮॥

ಅ॥ ಮೋನಯದಾಸಾಪ್ರಪ್ರಕ್ಷಿ ಎಂಬ ಕ್ರಮದಿಂದ ಕೂಡಿರುವ ೮ ವರ್ಣ ಸಮುದಾಯವನ್ನು ವ್ಯುತ್ಕ್ರಮವಾಗಿ ಉಚ್ಚರಿಸಿದರೆ 'ಕ್ಷಿಪ್ರಪ್ರಸಾದಾಯ ನಮಃ' ಎಂದು ವಿಘ್ನೇಶ್ವರನ ಮಂತ್ರವಾಗುವುದು. ॥೯೬॥ (ಧ್ಯಾನವು) ಆ ಗಣಪತಿಯು ಕೆಂಪು ಬಟ್ಟೆಯನ್ನುಂಟುಕೊಂಡವನು, ಕೆಂಪು ಶರೀರವುಳ್ಳವನು, ಕೆಂಪು ಪುಷ್ಪಮಾಲಿಕೆ ಕೆಂಪುಗಂಧವನ್ನು ಹಚ್ಚಿಕೊಂಡಿರುವವನು,

ಡೊಳ್ಳೊಟ್ಟೆಯವನೂ ಆನೆಯ ಮುಖದಂತೆ ಮುಖವುಳ್ಳವನೂ, (೪ ಕೈಗಳಲ್ಲಿ) ಪಾಶದಂತ ಅಂಕುಶ ಅಭಯ ಮುದ್ರೆಗಳನ್ನು ಧರಿಸಿರುವವನು, ಇಂತಹ ವಿಘ್ನೇಶ್ವರನನ್ನು ಧ್ಯಾನಿಸಬೇಕು. ಈ ಮಂತ್ರವು ಸರ್ವವಿಘ್ನಪರಿಹಾರಕವು ಶೀಘ್ರದಲ್ಲಿ ಸರ್ವಾಭೀಷ್ಟದಾಯಕವು. ಆವಾವ ಮಂತ್ರಪ್ರತಿಪಾದ್ಯ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದು ಎಲ್ಲಾ ದೇವತೆಗಳಿಗೂ ಅವಾವ ಅಭೀಷ್ಟಫಲದಾನಾದಿ ರೂಪಶಕ್ತಿಗಳನ್ನು ಕೊಡುತ್ತಾ ಮಹಾಶಕ್ತಿಯುಳ್ಳವನು ಶ್ರೀವಿಷ್ಣು ಒಬ್ಬನೇ ಚೆನ್ನಾಗಿ ಸರ್ವಕಾರ್ಯಗಳನ್ನು ಮಾಡಿಸುತ್ತಿರುತ್ತಾನೆ. ||೯೬-೯೮||

## ಅಷ್ಟಾಕ್ಷರ ಧನ್ವಂತರಿ ವಿಷ್ಣುಮಂತ್ರವು

ಮೂ|| ಸ್ವಯಮುದ್ದೇಶವಾನ್ ಪೂರ್ವವರ್ಣಪೂರ್ವೋ ನಮೋಯುತಃ ||೯೯||

ಧಾನ್ವಂತರೋ ಮಹಾಮಂತ್ರಃ ಸಂಸ್ಮೃತಿವ್ಯಾಧಿನಾಶನಃ ।
ಅತ್ರೋಕ್ತಸರ್ವಮಂತ್ರಾಣಾಂ ನಾಯಕೋಪಲಸಂನಿಭಃ ||೧೦೦||

ಚಂದ್ರೌಘಕಾಂತಿಮಮೃತೋರು (ತಾತ್ಮ) ಕರೈರ್ಜಗಂತಿ
ಸಂಜೀವಯಂತಮಮಿತಾತ್ಮ ಸುಖಂ ಪರೇಶಂ ।

ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ
ಶೀತಾಂಶುಮಂಡಲಗತಂ ಸ್ಮರತಾಽತ್ಮಸಂಸ್ಥಂ ||೧೦೧||

ಮೂರ್ಧ್ನಿಸ್ಥಿತಾದಮುತ ಏವ ಸುಧಾಂ ಸ್ರವತೀಂ
ಭ್ರೂಮಧ್ಯಗಾಚ್ಚ ತತ ಏವ ಚ ತಾಲು ಸಂಸ್ಥಾತ್ ।
ಹಾರ್ದಾಚ್ಚ ನಾಭಿಸದನಾದಧರಸ್ಥಿತಾಚ್ಚ
ಧ್ಯಾತ್ವಾಽಭಿಪೂರಿತತನುರ್ದುರಿತಂ ನಿಹನ್ಯಾತ್ ||೧೦೨||

ಅಜ್ಞಾನದುಃಖಭಯರೋಗಮಹಾವಿಷಾಣಿ
ಯೋಗೋಽಯಮಾಶು ವಿನಿಹಂತಿ ಸುಖಂ ಚ ದದ್ಯಾತ್ ।
ಉನ್ಮಾದ ವಿಭ್ರಮ ಹರಃ ಪರತಶ್ಚ ಸಾಂದ್ರ
ಮಾನಂದಮೇವ ಪದಮಾಪಯತಿ ಸ್ಮ ನಿತ್ಯಂ ||೧೦೩||

ಧ್ಯಾತ್ವೈವ ಹಸ್ತತಲಗಂ ಸ್ವಮೃತಂ ಸ್ರವಂತಂ
ದೇವಂ ಸ ಯಸ್ಯ ಶಿರಸಿ ಸ್ವಕರಂ ನಿಧಾಯ ।
ಆವರ್ತಯೇನ್ಮನುಮಿಮಂ ಸ ಚ ವೀತರೋಗಃ
ಪಾಪಾದಪೈತಿ ಮನಸಾ ಯದಿ ಭಕ್ತಿನಮಃ ||೧೦೪||

ಶತಂ ಸಹಸ್ರಮಯುತಂ ಲಕ್ಷಂ ವಾಽಽರೋಗಸಂಕ್ಷಯಾತ್ ।
ಇಮಮೇವ ಜಪೇನ್ಮಂತ್ರಂ ಸಾಧೂನಾಂ ದುಃಖಶಾಂತಯೇ ||೧೦೫||

ಜ್ವರ (ಜೂತಿ) ದಾಹಾದಿಶಾಂತ್ಯರ್ಥಂ ತರ್ಪಯೇನ್ಮನುನಾಽಮುನಾ।
ಧ್ಯಾತ್ವಾ ಹರಿಂ ಜಲೇ ಸಪ್ತರಾತ್ರಾಜ್ಜೂತಿರ್ವಿನಶ್ಯತಿ ||೧೦೬||

**ಅಯುತಾಮೃತಸಮಿದ್ಹೋಮಾತ್ ಗೋಘೃತಕ್ಷೀರಸಂಯುತಾತ್ ।**
**ಸರ್ವರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ ॥೧೦೭॥**

**ಭೂತಾಭಿಚಾರಶಾಂತ್ಯರ್ಥಮಪಾಮಾರ್ಗಾಯತಿಕ್ರಿಯಾ ।**

**ದ್ವಿಗುಣಾಽಮೃತಯಾ ಪಶ್ಚಾತ್ಕೇವಲೇನ ಘೃತೇನ ವಾ ॥೧೦೮॥**

**ಆಯುರ್ವಿವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥೧೦೯॥**

**ಸರ್ವಕ್ರಿಯಾ ಹರೌ ಭಕ್ತೇ ಹರಿಭಕ್ತೈಸ್ಸ್ವನುಷ್ಠಿತಾಃ ।**
**ಗುರುಭಕ್ತೈಃ ಸದಾಚಾರ್ಯೆ ಫಲಂತ್ಯದ್ಧಾ ನ ಚಾನ್ಯಥಾ ॥೧೧೦॥**

೮॥ ಚತುರ್ಥ್ಯಂತವಾದ ಧನ್ವಂತರಿ ಶಬ್ದ ಆದಿಯಲ್ಲಿ ಅನುಸ್ವಾರ ಸಹಿತವಾದ ಧಕಾರವು, ಅಂತ್ಯದಲ್ಲಿ ನಮಶ್ಶಬ್ಧವು, ಇವು ಸೇರಿದಾಗ ಧಂ ಧನ್ವಂತರಯೇ ನಮಃ' ಎಂದು ಅತ್ಯುತ್ತಮವಾದ ಧನ್ವಂತರಿ ಅಷ್ಟಾಕ್ಷರ ಶ್ರೀ ವಿಷ್ಣು ಮಂತ್ರವಾಗುವುದು. ॥೯೯॥ ಈ ಮಂತ್ರವು ಜಪಿಸಿದವರ ಸರ್ವ ವ್ಯಾಧಿ ಪರಿಹಾರಕವಾಗಿ ಮೋಕ್ಷದಾಯಕವಾಗುವುದು, ಈ ಮಂತ್ರವು ಈ ೪ನೇ ಅಧ್ಯಾಯದಲ್ಲಿ ಹೇಳಿದ ಎಲ್ಲಾ ಮಂತ್ರಗಳಿಗೂ ಶ್ರೇಷ್ಠ ಮಣಿಸದೃಶವು. ಉತ್ತಮವು ॥೧೦೦॥ (ಧ್ಯಾನವು) ಅನಂತಾನಂತ ಚಂದ್ರರ ಕಾಂತಿಗಿಂತಲೂ ಹೆಚ್ಚು ಪ್ರಕಾಶವಿರುವವನು, ಅಮೃತವನ್ನು ಸುರಿಸುತ್ತಿರುವ ಸ್ವರೂಪ ಕಿರಣಗಳಿಂದ ಸರ್ವ ಜಗತ್ತನ್ನು ಬದುಕಿಸುವವನು, ನಿರವಧಿಕ ಆನಂದ ಸ್ವರೂಪನು, ರಮಾ ಬ್ರಹ್ಮಾದಿಗಳಿಗೆ ನಿಯಾಮಕನು, ೨ ಕೈಗಳಿಂದ ಜ್ಞಾನ ಮುದ್ರೆ ಸುಧಾ ಪೂರ್ಣ ಕಲಶಗಳನ್ನು ಧರಿಸಿರುವವನು, ಚಂದ್ರ ಮಂಡಲದಲ್ಲಿ ಕುಳಿತಿರುವವನು, ಇಂತಹ ಧನ್ವಂತರಿಯೇ ಧ್ಯಾನಿಸತಕ್ಕ ತನ್ನಲ್ಲಿದ್ದಾನೆಂದು ಧ್ಯಾನಿಸಿರಿ. (ಚಂದ್ರಮಂಡಲದಲ್ಲಿದ್ದವನೇ ತನ್ನಲ್ಲಿದ್ದಾನೆಂದು ಧ್ಯಾನಿಸಬೇಕು) ॥೧೦೦॥ ತನ್ನ ಶಿರಸ್ಸಿನಲ್ಲಿಯೂ ಹುಬ್ಬುಗಳ ನಡುವಿನಲ್ಲಿಯೂ, ದವಡೆಗಳಲ್ಲಿಯೂ, ಹೃದಯದಲ್ಲಿಯೂ, ಹೊಕ್ಕಳದಲ್ಲಿಯೂ ಮತ್ತು ಗುಹ್ಯೇಂದ್ರಿಯದ ಕೆಳಭಾಗದಲ್ಲಿಯೂ ಹೀಗೆ ಸರ್ವಾಂಗಗಳಲ್ಲಿಯೂ ಚಂದ್ರ ಮಂಡಲಾಂತರ್ಗತನಾದ ಶ್ರೀ ಧನ್ವಂತರಿರೂಪಿ ಶ್ರೀ ಪರಮಾತ್ಮನು ಅಮೃತ ಧಾರೆಯನು (ತನ್ನ ಶಿರಸ್ಸು ಮೊದಲಾದ ಅಂಗಗಳಲ್ಲಿ) ಸುರಿಯುತ್ತಿರುವವನೆಂದು ಧ್ಯಾನಿಸಿ, ಆ ಅಮೃತ ಧಾರೆಯಿಂದ ತನ್ನ ಶರೀರವು ತುಂಬಿಯದೆ ಎಂದು ಮಂತ್ರವನ್ನು ಜಪಿಸುವವನು ಧುರಿತಗಳೆಲ್ಲವನ್ನು ಧೂರೀಕರಿಸುವವನು (ಅಂದರೆ ಆವಾವ ಅವಯವಗಳಲ್ಲಿ ಸನ್ನಿಹಿತನಾದ ಧನ್ವಂತರಿಯು ತನ್ನ ಶಿರಸ್ಸು ಮೊದಲಾದ ಅಂಗಗಳಲ್ಲಿ ಅಮೃತವನ್ನು ಸುರಿಸುತ್ತಾನೆಂದು ಧ್ಯಾನಿಸಿದರೆ ಸರ್ವಾನಿಷ್ಟ ನಿವೃತ್ತಿಯಾಗುವುದು.) ॥೧೦೨॥ ಈ ಧನ್ವಂತರಿ ಮಂತ್ರವು ಅಜ್ಞಾನ, ಸಂಶಯ, ವಿಪರೀತ ಜ್ಞಾನ, ಅಧ್ಯಾತ್ಮಿಕಾದಿ ತ್ರಿವಿಧದುಃಖ, ಪಿಶಾಚಾದಿಗಳಿಂದುಂಟಾಗತಕ್ಕ ಭಯ, ನಾನಾವಿಧ ರೋಗ, ಶತ್ರುಗಳಿಂದ ಮರಣಕ್ಕಾಗಿ ಪ್ರಯುಕ್ತಭುಕ್ತ ವಿಷ, ಇವುಗಳೆಲ್ಲವನ್ನು ಶೀಘ್ರದಲ್ಲಿ ಪರಿಹರಿಸಿ ಸುಖವನ್ನು ಕೊಡುವುದು, ಅಲ್ಲದೆ ಉನ್ಮಾದ ವಿಭ್ರಮಾದಿಗಳನ್ನು ಪರಿಹರಿಸುತ್ತಾ ಪರಲೋಕದಲ್ಲಿಯೂ ಪೂರ್ಣ ಸ್ವರೂಪ ಸುಖವಿರುವ ಶಾಶ್ವತ ಸ್ಥಾನವನ್ನು ಜಾಪಕರಿಗೆ ಹೊಂದಿಸಿ ಕೊಡುವುದು. ॥೧೦೩॥ ಈ ಮಂತ್ರವನ್ನು ಧ್ಯಾನಿಸುವವನು ತನ್ನ ಶಿರಆದ್ಯಂಗಗಳಲ್ಲಿ ಅಮೃತವನ್ನು ಸುರಿಸುತ್ತಿರುವ ಶ್ರೀ ಧನ್ವಂತರಿಯನ್ನು ತನ್ನ ಹಸ್ತದಲ್ಲಿದವನನ್ನಾಗಿ ಧ್ಯಾನಿಸಿಕೊಂಡೇ ಅಂತಹ ಅಂಗೈಯನ್ನು ಯಾವನಾದರೂ ಒಬ್ಬ ರೋಗಿಯ ಶಿರಸ್ಸಿನಲ್ಲಿಟ್ಟು, ಈ ಧನ್ವಂತರಿ ಮಹಾಮಂತ್ರವನ್ನು ಅವೃತ್ತಿಯಿಂದ ಜಪಿಸುವನೋ ಆ ರೋಗಿಯಾದರೂ ಪರಮ ಭಕ್ತಿಯಿಂದ, ಶ್ರದ್ಧಾಪೂರ್ವಕವಾಗಿ ಶ್ರೀ ನಾರಾಯಣನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟವನಾಗಿದ್ದರೆ ಮಾತ್ರ ನಿರೋಗಿಯೂ ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದಿದವನೂ ಆಗುತ್ತಾನೆ. ॥೧೦೪॥ ಈ ಮಂತ್ರವನ್ನು ಸಜ್ಜನರು ೧೦೦, ೧೦೦೦, ೧೦೦೦೦, ೧೦೦೦೦೦೦೦ ಆವೃತ್ತಿ ರೋಗಗಳ ರೋಗ ನಿವೃತ್ತಿಗಾಗಿ ಜಪಿಸಬೇಕು. ಲಕ್ಷ ಆವೃತ್ತಿ ಜಪಿಸಿದರೂ ರೋಗ ನಿವೃತ್ತಿಯಾಗದಿದ್ದರೆ ರೋಗ ಪರಿಹಾರವಾಗುವ ವರೇಗೆ ಜಪಿಸಬೇಕು. ರೋಗವು ಬಹಳ ಕಠಿಣವಾಗಿದ್ದರೆ ಅದಕ್ಕನುಸಾರವಾಗಿ ನೂರು ಸಾವಿರ ಇತ್ಯಾದಿ ರೀತಿಯಾಗಿ ಸಜ್ಜನರ ದುಃಖ ಪರಿಹಾರಕ್ಕಾಗಿ ಈ ಮಂತ್ರವನ್ನೇ ಜಪಿಸಬೇಕು. ॥೧೦೫॥ ಜ್ವರದಿಂದುಂಟಾಗತಕ್ಕ ದಾಹಾದಿಗಳನ್ನು ಪರಿಹರಿಸುವುದಕ್ಕಾಗಿ

ನೀರಿನಲ್ಲಿ ಧನ್ವಂತರಿರೂಪಿ ಶ್ರೀ ಹರಿಯನ್ನು ಧ್ಯಾನ ಮಾಡಿ ೭ ದಿನಗಳ ಪರ್ಯಂತ ಈ ಮಂತ್ರದಿಂದ ತರ್ಪಣವನ್ನು ಕೊಟ್ಟರೆ ರೋಗವು ಸಂಪೂರ್ಣ ನಿವೃತ್ತಿಯಾಗುವುದು. ||೧೦೭|| ರೋಗಿಯು ಶ್ರೀ ಹರಿಗೆ ವಿಮುಖನಾಗದೆ ಭಕ್ತನಾಗಿದ್ದರೆ ಧನ್ವಂತರಿ ಮಂತ್ರದಿಂದಲೇ ನೋವಿನ ತುಪ್ಪ ಹಾಲುಗಳಿಂದ ಮಿಶ್ರವಾದ, ಹತ್ತು ಸಾವಿರ (೧೦೦೦೦) (೪, ೪, ಅಂಗುಲಗಳುಳ್ಳ) ಅಮೃತ ಬಳ್ಳಿಯ ಸಮಿಧೆಗಳಿಂದ ಹೋಮ ಮಾಡಿದರೆ ರೋಗಿಯ ಎಲ್ಲಾ ರೋಗಗಳೂ, ಸಂಪೂರ್ಣ ನಾಶವಾಗುವುದು. ||೧೦೭|| ಭೂತ ಪ್ರೇತ ಪಿಶಾಚಾದಿಗಳ ಪೀಡೆ, ಮಾರಣ ಹೋಮ ಮೊದಲಾದವುಗಳಿಂದುಂಟಾಗತಕ್ಕ ಅಪಮೃತ್ಯ್ವಾದಿಗಳ ಪರಿಹಾರಕ್ಕಾಗಿ ಉತ್ತರಣೆಯ ಸಮಿಧೆಗಳಿಂದ ಹೋಮ ಮಾಡಿ ಆ ಮೇಲೆ ಇಮ್ಮಡಿ ಅಮೃತ ಬಳ್ಳಿಯ ಸಮಿಧೆಗಳಿಂದಲೂ (ಅಮೃತಬಳ್ಳಿಯೇ ಸಿಗದಿದ್ದರೆ) ಇಮ್ಮಡಿ ಗೋವಿನ ತುಪ್ಪದಿಂದಲೂ ಹೋಮಿಸಬೇಕು. (೨ ಹೋಮಗಳಿಂದ ಭೂತ ಅಭಿಚಾರಗಳ ಶಾಂತಿಯಾಗುವುದು) (ಉತ್ತರಣೆಯ ಸಮಿಧೆಗಳಿಂದ ಮಾಡತಕ್ಕ ಹೋಮವು ಅತಿ ಕ್ರೂರವಾದ ಕಾರಣ ಅದನ್ನು ಮಾಡಿದ ಮೇಲೆ ತನ್ನ ರಕ್ಷಣೆಗಾಗಿ ಅದಕ್ಕಿಂತ ಇಮ್ಮಡಿಯಾಗಿ ಅಮೃತ ಬಳ್ಳಿಯ ಹೋಮ, ಅಥವಾ ಗೋಘೃತದಿಂದ ಹೋಮಿಸಬೇಕು. ||೧೦೮|| ಆಯುಷ್ಯಾಭಿವೃದ್ಧಿಗಾಗಿ ಪ್ರತಿನಿತ್ಯವೂ, ಅಥವಾ ಜನ್ಮನಕ್ಷತ್ರ ದಿನದಲ್ಲಿ ಆಗಲೀ ದನದ ಹಾಲು ತುಪ್ಪಗಳಿಂದ ಮಿಶ್ರವಾದ, ಕದಿರಿನ ೪, ೪, ಕುಡಿಗಳಿಂದ ಒಂದೊಂದು ಹೋಮ ಮಾಡಬೇಕು. ||೧೦೯|| ಹರಿಭಕ್ತನ ವಿಷಯದಲ್ಲಿಯೇ ಸದಾಚಾರ ಸಂಪನ್ನರಾದ ಹರಿಗುರು ಭಕ್ತರಿಂದಲೇ ಜಪಹೋಮ ಮೊದಲಾದ ಸರ್ವಕ್ರಿಯೆಗಳೂ ಹರಿಸ್ಮರಣ ಪೂರ್ವಕವಾಗಿ ಮಾಡಲ್ಪಟ್ಟರೇನೇ ನಿಶ್ಚಯವಾಗಿಯೂ ಫಲಿಸುವುದು. ಮಾಡತಕ್ಕವನಿಗೆ ಹರಿಭಕ್ತಿಯಾದಿ ಗುಣಗಳಿಲ್ಲದಿದ್ದರೆ ಸರ್ವಥಾ ಫಲಿಸಲಾರದು. ಭಗವದ್ಭಕ್ತನು ಭಗವದ್ಭಕ್ತನ ಉಪಕಾರಕ್ಕಾಗಿ ಜಪಹೋಮ ಮೊದಲಾದ ಸತ್ಕರ್ಮಗಳನ್ನು ಮಾಡಿದರೆ ಮಾತ್ರ ಫಲಿಸುತ್ತದೆ. ಇಲ್ಲವಾದರೆ ಫಲಿಸಲಾರದು) ||೯೯-೧೧೦||

ಗುರುಗಳು ಯಾರೆಂದರೆ ಅವರನ್ನು ತೋರಿಸುತ್ತಾ ಅವರ ಪೂಜಾದಿನಗಳೂ ಸಮಸ್ತಕರ್ಮಗಳಿಗೂ ಅಂಗೆವೆನ್ನುತ್ತಾರೆ.

ಮೂ|| ಬ್ರಹ್ಮಾಂತಾ ಗುರವಶ್ಚೈವ ಸಂಪ್ರದಾಯಪ್ರವರ್ತಕಾ: |
ತತ್ತದ್ಗುಣಾನುಸುರೇಣ ಪೂಜ್ಯಾ: ಧ್ಯೇಯಾಶ್ಚ (ಮಾನ್ಯಾಶ್ಚ) ಕೃತ್ಸ್ನಶ: ||೧೧೧||

ಸರ್ವೇಭ್ಯೋಽಭ್ಯಧಿಕಾ ಭಕ್ತಿರ್ವಿಷ್ಣೌ ಸ್ಯಾದತಿನಿಶ್ಚಲಾ |
ಲಕ್ಷ್ಮೀಬ್ರಹ್ಮಾದಿಷು ತತಃ ಕ್ರಮೇಣ ಸ್ಯಾತ್ಸುಭಾವಿತಾ ||೧೧೨||

ಏವಂ ವಿದ್ಯಾ: ಫಲಿಷ್ಯಂತಿ ನನ್ಯಥಾ ತು ಕಥಂಚನ |
ಶುಭಾನ್ ಧ್ಯಾಯಂತಿ ಯೇ ಕಾಮಾನ್ ಗುರುದೇವಪ್ರಸಾದಜಾನ್ ||೧೧೩||

ಇತರಾನಾತ್ಮಪಾಪೋತ್ಥಾನ್ ತೇಷಾಂ ವಿದ್ಯಾ ಫಲಿಷ್ಯತಿ |
ಮುಕ್ತಾವಪಿ ಚ ಸಂಸಾರೇ ನಾಽತ್ಮನೋ ವಿಷ್ಣುತಾಂ ಕ್ವಚಿತ್ ||೧೧೪||

ಬ್ರಹ್ಮರುದ್ರಾದಿಭಾವಂ ವಾ ಸಾಮ್ಯಂವಾಽಽಧಿಕ್ಯಮೇವ ವಾ|
ಅತದ್ವಶತ್ವಮಥವಾ ಯಃ ಸ್ಮರೇತ್ಸ ತು ಸಿದ್ಧಿಭಾಕ್ ||೧೧೫||

ನಾನ್ಯಥಾ ಸಿದ್ಧಿಮಾಪ್ನೋತಿ ಕಲ್ಪಕೋಟಿಶತೈರಪಿ |
ಸ್ಮೃತ್ವಾ ಗುರುಂ ಪೂರ್ವಗುರುಮಾದಿಮೂಲಗುರೂ ತಥಾ ||೧೧೬||

ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ |
ಅವಜ್ಞಾತಾ ಗುರೂಣಾಂ ಚ ದೇವತಾನಾಂ ನ ಸಿದ್ಧ್ಯತಿ ||೧೧೭||

ಪ್ರಯಾತಿ ಚ ತಮೋ ಘೋರಂ ಮಂತ್ರಾವಜ್ಞಾಕೃದೇವಚ |
ಯಸ್ಮಾತ್ತಾರತಮ್ಯವೇತ್ತಾ ಸ್ಯಾದ್ಗುರೂಣಾಂ ದೇವತಾಸ್ವಪಿ ||೧೧೮||

**ಭಕ್ತಿಮಾನ್ ಗುರುದೇವೇಷು ತದ್ಭಕ್ತೇಷು ಚ ಸಿದ್ಧ್ಯತಿ ।**
**ಗುರುದೇವಪ್ರತೀಪಾನಾಂ ವಿಮುಖಸ್ತತ್ಪ್ರಿಯೇ ರತಃ ॥೧೯॥**

**ಅಕಾಮಕ್ರೋಧಲೋಭಶ್ಚ ನ ಚಿರಾತ್ಸಿದ್ಧಿಮಾಪ್ನುಯಾತ್ ।**
**ಸಕಾಮೇಭ್ಯೋಽಮಿತಾಗುಣಾ ಯಾಽಕಾಮೈಸ್ತು ಕೃತಾ ಕ್ರಿಯಾ ॥**
**ತಸ್ಮಾದಕಾಮ ಏವಾಲಂ ಭಜೇದ್ವಿಷ್ಣುಂ ಸನಾತನಂ ॥೨೦॥**

ಅ॥ ಶಾಸ್ತ್ರಸಂಪ್ರದಾಯಪ್ರವರ್ತಕರಾಗಿರುವುದರಿಂದ ಸಾಕ್ಷಾತ್ ನಮ್ಮ ಗುರುಗಳನ್ನಾರಂಭಿಸಿ ಚತುರ್ಮುಖ ಪರ್ಯಂತರಾದವರು ಎಲ್ಲರೂ ಗುರುಗಳೆನಿಸುತ್ತಾರೆ. ಅವರವರ ಜ್ಞಾನ ಭಕ್ತ್ಯಾದಿಗುಣ ಆಧಿಕ್ಯಯವನ್ನನುಸರಿಸಿ ಅವರೆಲ್ಲರನ್ನೂ ಪೂಜಿಸಬೇಕು, ಗೌರವಿಸಬೇಕು. ॥೧೧॥ ಲಕ್ಷ್ಮೀ ಬ್ರಹ್ಮಾದಿ ಎಲ್ಲರಿಗಿಂತಲೂ ಶ್ರೀ ವಿಷ್ಣುವಿನಲ್ಲಿ ನಿರವಧಿಕವೂ ನಿರತಿಶಯ ನಿಶ್ಚಲವೂ ಆದ ಪರಮ ಭಕ್ತಿಯನ್ನಿಡಬೇಕು. ಆ ಮೇಲೆ ಲಕ್ಷ್ಮೀಬ್ರಹ್ಮಾದಿಗಳಲ್ಲಿ ಅವರವರ ಸ್ವರೂಪ ತಾರತಮ್ಯಕ್ಕನುಸಾರವಾಗಿಯೇ ಭಕ್ತಿಯನ್ನು ಮಾಡಬೇಕು. ॥೧೨॥ ಹಿಂದೆ ಹೇಳಿದಂತೆ ಭಕ್ತ್ಯಾದಿಗಳುಳ್ಳವರಿಗೇನೇ ಮಂತ್ರಾದಿ ವಿದ್ಯೆಗಳು ಹಿಂದೆ ಹೇಳಿದ ಫಲಪ್ರದಗಳಾಗುತ್ತವೆ. ಭಕ್ತ್ಯಾದಿಗಳಿಲ್ಲದವರಿಗೆ ಆ ವಿದ್ಯೆಗಳು ಸರ್ವಥಾ ಫಲಿಸಲಾರವು. ತಮಗೆ ಆದ ಅಭೀಷ್ಟಗಳೆಲ್ಲವೂ ನಮ್ಮ ಗುರು ದೇವತೆಗಳ ಅನುಗ್ರಹದಿಂದಲೇ ಆದವುಗಳು, ॥೧೩॥ ನಮಗೆ ಆದ ಅಶುಭಗಳೆಲ್ಲವೂ ತಾನು ಮಾಡಿದ ಪಾಪದಿಂದಲೇ ಆದದ್ದು ಎಂದನುಸಂಧಾನವುಳ್ಳವರಿಗೇನೇ ವಿದ್ಯೆಗಳು ಫಲಪ್ರದಗಳಾಗುತ್ತವೆ. (ಅಧಿಕಾರಿಗಳಿಗೆ) ಮುಕ್ತಿಯಲ್ಲಿಯೂ, ಸಂಸಾರದಲ್ಲಿಯೂ, ಎಲ್ಲಿಯೂ ತನಗೆ ಬ್ರಹ್ಮೈಕ್ಯವನ್ನೂ ವಿಷ್ಣುವಿಗೆ ಬ್ರಹ್ಮರುದ್ರಾದಿಗಳಿಂದ ಐಕ್ಯವನ್ನೂ ಶ್ರೀ ವಿಷ್ಣುವಿಗೆ ಬ್ರಹ್ಮಾದಿಗಳಿಂದ ಸಾಮ್ಯವನ್ನೂ ಶ್ರೀ ವಿಷ್ಣುವಿಗಿಂತ ಬ್ರಹ್ಮರುದ್ರಾದಿಗಳಿಂದ ಅಧಿಕ್ಯವನ್ನೂ ಬ್ರಹ್ಮಾದಿಗಳು ಶ್ರೀ ವಿಷ್ಣುವಿನ ಅಧೀನರಲ್ಲದವೆಂದೂ ಸರ್ವಥಾ ಎಲ್ಲಿಯೂ ಭಾವಿಸಬಾರದು. (ಮತ್ತೆ ತನಗಿಂತ ಶ್ರೀ ವಿಷ್ಣುವು ಭಿನ್ನನು, ಬ್ರಹ್ಮಾದಿಗಳಿಂದುತ್ತಮನು, ಬ್ರಹ್ಮಾದಿಗಳಿಗೆ ಸ್ವಾಮಿಯು, ಎಂದೇ ಸ್ಮರಿಸಬೇಕು) ಅಂತಹವನಿಗೇನೇ ವಿದ್ಯೆಯು ಫಲಿಸುತ್ತದೆ. ಹಿಂದೆ ಹೇಳಿದ ಗುಣಗಳಿಲ್ಲವಾದರೆ ನೂರಾರು ಕೋಟಿ ಕಲ್ಪಗಳ ಪರ್ಯಂತ ಸಾಧನ ಮಾಡಿದರೂ ಫಲಸಿದ್ಧಿಯನ್ನು ಹೊಂದಲಾರನು. ॥೧೩॥ ೧೪॥೧೫॥ ವಿದ್ಯೋಪದೇಶಕರಾದ ಗುರುಗಳು, ಅವರ ಗುರುಗಳೂ ಆದಿಗುರುಗಳಾದ ಶ್ರೀಮದಾಚಾರ್ಯರೂ ವ್ಯಾಸಾದಿ ನಾರಾಯಣ ಪರ್ಯಂತರಾದ ಮೂಲ ಗುರುಗಳೂ, ವಿದ್ಯಾದೇವತೆಗಳೂ, ವಾಸುದೇವನೂ ಇವರೆಲ್ಲರನ್ನು ಸ್ಮರಿಸಿದರೇನೇ ವಿದ್ಯಾಭ್ಯಾಸ ಮಾಡುವವನು ಫಲವನ್ನು ಹೊಂದುತ್ತಾನೆ. ವ್ಯಾಸಂ ಚ ಭಾರತೀಂ, ವಾಣೀಂ ವಿಧಿಂ ವಾಯುಂ ರಮಾಂ ತಥಾ । ತಥಾ ನಾರಾಯಣಂ ಮೂಲ ಗುರೂನಾಹುರ್ವಿಪಶ್ಚಿತಃ ಎಂಬ ಪ್ರಮಾಣದಿಂದ ೭ ಮಂದಿ ಮೂಲಗುರುಗಳು ॥೧೬॥ ಗುರುಗಳನ್ನೂ ದೇವತೆಗಳನ್ನೂ ನಿಂದಿಸುವವನು. ಮಂತ್ರಗಳನ್ನು ಅವಹೇಳನ ಮಾಡುವವನು, ಫಲಸಿದ್ಧಿಯನ್ನು ಹೊಂದಲಾರನು, ಅಲ್ಲದೆ ಘೋರವಾದ ತಮಸ್ಸನ್ನು ಹೊಂದುವನು. ॥೧೭॥ ಯಾವನು ಗುರುಗಳಲ್ಲಿಯೂ ದೇವತೆಗಳಲ್ಲಿಯೂ ತಾರತಮ್ಯವನ್ನು ತಿಳಿದುಕೊಂಡು ಆ ತಾರತಮ್ಯಾನುಸಾರವಾಗಿ, ಗುರುಗಳು, ದೇವತೆಗಳೂ, ಹರಿಗುರು ದೇವತಾಭಕ್ತರೂ, ಅವರಲ್ಲಿಯೂ, ಭಕ್ತಿಯನ್ನು ಮಾಡುವನೋ, ಆತನು ಫಲಸಿದ್ಧಿಯನ್ನು ಹೊಂದುತ್ತಾನೆ. ॥೧೮॥ ಹರಿಗುರು ದೇವತೆಗಳ ದ್ವೇಷಿಗಳಿಗೆ ವಿಮುಖನೋ (ಅವರಲ್ಲಿ ಸ್ನೇಹರಹಿತನಾಗಿ) ಹರಿಗುರು ದೇವತೆಗಳ ಹಿತದಲ್ಲಿ ಆಸಕ್ತನೋ, ನಿಷಿದ್ಧ ಕಾಮ ಸರ್ವಾತ್ಮನಾ ಕ್ರೋಧ ಲೋಭ ಇವುಗಳನ್ನು ಬಿಟ್ಟವನೋ, ಅಂತಹನು ಶೀಘ್ರದಲ್ಲಿ ಸಿದ್ಧಿಯನ್ನು ಹೊಂದುವನು. ॥೧೯॥ ಫಲಾಪೇಕ್ಷೆಯಿಲ್ಲದೆ ಸತ್ಕರ್ಮ ಮಾಡತಕ್ಕ ಪುರುಷರು ಮಾಡತಕ್ಕ ಕ್ರಿಯೆಗಳು ಫಲಾಪೇಕ್ಷೆಯಿಂದ ಪುರುಷರು ಮಾಡತಕ್ಕ ಕ್ರಿಯೆಗಳಿಂದ ಅನಂತ ಫಲದಾಯಕಗಳು. ಆದ ಕಾರಣ ನಿಷ್ಕಾಮನಾಗಿಯೇ ಜಪ ಪೂಜಾದಿಗಳಿಂದ ಚೆನ್ನಾಗಿ ಸನಾತನನಾದ ಶ್ರೀ ಹರಿಯನ್ನು ಭಜಿಸಬೇಕು. ॥೨೦॥ ॥೧೧-೨೦॥

## ವೈದಿಕ ಧನ್ವಂತರಿಮಂತ್ರವು

ಮೂ॥ ಅಯಂ ಮೇ ಹಸ್ತ ಇತಿ ಚ ಮಂತ್ರಃ ಪೂರ್ವೋಕ್ತವತ್ಸ್ಮೃತಃ ॥
ಅತ್ರೋಕ್ತಾಸ್ತು ಕ್ರಿಯಾಃ ಪೂರ್ವಮಂತ್ರೇಷ್ವಪ್ಯುಪಲಕ್ಷಣಂ ॥೨೧॥

ವಿಜಯಸ್ತಂಭನಾದೀನಿ ನಾರಸಿಂಹೈರ್ವಿಶೇಷತಃ ।
ಜಾಮದಗ್ನ್ಯೈಶ್ಚ ಕಾರ್ಯಾಣಿ ರಾಘುವೈರ್ಯಾದವೈರಪಿ ॥
ವಾರಾಹ್ಯೈಃ ಸ್ತಂಭನಂ ಕ್ಷಿಪ್ರಂ ಶ್ರೀಕರಾಃ ಕಥಿತಾಃ ಪುರಾ ||೧೨೨||

ಬಹುಬಾಹುಂ ಮಹಾಕಾಯಮುದ್ಯುಕ್ತಂ ಚೋದ್ಯತಾಯುಧಂ ।
ಸ್ಮರನ್ ವಿಜಯ ಮಾಪ್ನೋತಿ ಸ್ತಂಭನಾದೀಂಶ್ಚ ಕಾರಯೇತ್ ||೧೨೩||

ವಸುಪೂರ್ಣಕರಂ ರತ್ನಪರ್ವತಸ್ಥಂ ವಿಭಾವಯನ್ ।
ವಸುಸಿದ್ಧಿಮಮಪ್ನೋತಿ ಸೇವ್ಯಮಾನಮಜಾದಿಭಿಃ ।
ಶ್ರಿಯಾ ವಿಭೂತಿಭಿರ್ಯುಕ್ತಂ ಭಾವಯನ್ ಭೂತಿಮಾಪ್ನುಯಾತ್ ||೧೨೪||

ಯದ್ಯನ್ಮನೋಗತಂ ತಸ್ಯ ತತ್ತದಾಪ್ನೋತ್ಯಸಂಶಯಂ ।
ತಥಾ ತಥಾ ಹರಿಂ ಧ್ಯಾಯನ್ ಕ್ರಿಯಾಸ್ತಾಸ್ತಾಶ್ಚ ಸಾಧಯನ್ ||೧೨೫||

ಶ್ರಿಯೇ ಪದ್ಮಾನಿ ಜುಹುಯಾತ್ ಸಂಪ್ರೀತ್ಯಾ ಉತ್ಪಲಾನಿ ಚ ।
ಶರಾನ್ ಜಯಾಯ ಜುಹುಯಾದಭಿಮಂತ್ರ್ಯಪ್ರಯೋಜಯೇತ್ ||೧೨೬||

ವಿದ್ಯಾಯೈ ಮಂತ್ರಿತಂ ವಾರಿ ವಚಾಂ ವಾ ತುಲಸೀಮಪಿ ।
ಬ್ರಾಹ್ಮೀಂ ಘೃತಂ ಸುವರ್ಣಂ ವಾ ಶತಾವೃತ್ಯಾ ತು ನಿತ್ಯಶಃ ||೧೨೭||

ಅಕುರ್ವಂಶ್ಚ ಕ್ರಿಯಾ ಭಕ್ತ್ಯಾನಿರಪೇಕ್ಷೋ ಭಜನ್ ಹರಿಂ ।
ಸರ್ವಮೇತದವಾಪ್ನೋತಿ ವಿಶೇಷೇಣ ನ ಸಂಶಯಃ ||೧೨೮||

ಸೃಷ್ಟಿಸ್ಥಿತಿಲಯನ್ಯಾಸಾಃ ಪ್ರತಿಲೋಮಾನುಲೋಮತಃ ||೧೨೯||

ಸ್ಥಿತ್ಯಂತಾ ಏವ ವರ್ಣಾನಾಂ ಶ್ರೇಷ್ಠಾ ಏವ ಚತುರ್ದಶ ।
ಸಂಹೃತ್ಯಂತಾ ಮೋಕ್ಷಿಣಾಂ ಏಕವಿಂಶತಿರೇವ ವಾ ||೧೩೦||

ಅ॥ `ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ' ಎಂಬ ಮಂತ್ರವು ಹಿಂದಿನ ಮಂತ್ರದಂತೆಯೇ ಧನ್ವಂತರಿ ಪ್ರತಿಪಾದಕವು. ಹಿಂದೆ ಹೇಳಿದ ಅಶೇಷ ಫಲದಾಯಕವೂ ಆಗಿದೆ. (೪ ಪಾದ, ಸಮಸ್ತ ಪಾದಗಳಿಂದ ಪಂಚಾಂಗ ನ್ಯಾಸವನ್ನೂ ಅನುಷ್ಟುಪ್ ಛಂದಸ್ಸನ್ನೂ ಇಟ್ಟುಕೊಳ್ಳಬೇಕು) ಈ ಧನ್ವಂತರಿಮಂತ್ರದಲ್ಲಿ ಹೇಳಿದ ಜಪ ಹೋಮ ವಿಧಾನಾದಿಗಳು ಹಿಂದೆ ಹೇಳಿದ ಮಂತ್ರಗಳಲ್ಲಿಯೂ ಜಪಹೋಮಾದಿಗಳನ್ನು ಮಾಡಬೇಕೆಂಬ ವಿಷಯದಲ್ಲಿ ಜ್ಞಾಪಕಗಳು. ||೧೨೧|| ನಾರಸಿಂಹಮಂತ್ರ, ಪರಶುರಾಮ ಮಂತ್ರ, ರಾಮಮಂತ್ರ, ಕೃಷ್ಣ ಮಂತ್ರ, ಈ ಮಂತ್ರವಿಶೇಷಗಳಿಂದ ವಿಶೇಷ ವಿಜಯ ಅಗ್ನಸ್ತಂಭನ, ಜಲಸ್ತಂಭನ, ಪ್ರತಿವಾದಿಸ್ತಂಭನ, ವಿಷಸ್ತಂಭನ, ಶತ್ರುಸ್ತಂಭನ, ಶತ್ರೂಚ್ಚಾಟನ, ಮೊದಲಾದುವುಗಳು ಫಲಿಸುತ್ತದೆ. ವಾರಾಹಮಂತ್ರಗಳಿಂದ ಶೀಘ್ರದಲ್ಲಿ ಅಗ್ನಿಸ್ತಂಭಾನಾದಿಗಳು ಆಗುತ್ತವೆ. ಇವಲ್ಲದೆ ಹಿಂದೆ ಹೇಳಿದ ಶ್ರೀಕರ ಮಂತ್ರ ಹಂಸಮಂತ್ರ ಮೊದಲಾದವುಗಳು ಸಂಪತ್ಕರಗಳೆಂದು ಮೊದಲು ಹೇಳಲ್ಪಟ್ಟಿವೆ. ||೧೨೨|| (ನರಸಿಂಹಾದಿ ಮಂತ್ರಗಳಿಂದ ವಿಜಯ ಮೊದಲಾದ ಆವಾವ ಕಾಮ್ಯ ಫಲ ಪ್ರಾಪ್ತಿಗಾಗಿ ಅದಕ್ಕೆ ಉಪಯುಕ್ತವಾದ ಧ್ಯಾನ ವಿಶೇಷವನ್ನು ಹೇಳುತ್ತಾರೆ) ಅನೇಕ ತೋಳುಗಳುಳ್ಳವನು, ದೊಡ್ಡ ಶರೀರವುಳ್ಳವನು, ಶತ್ರು ಹನನಾದಿಗಳಲ್ಲಿ ಸನ್ನದ್ಧನಾದವನು, ಆಯುಧಗಳನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡವನು, ಇತ್ಯಾದಿ ಪ್ರಕಾರ ಶ್ರೀಹರಿಯನ್ನು ಧ್ಯಾನಿಸಿದರೆ ವಿಜಯವನ್ನು ಮಾತ್ರ ಹೊಂದುವುದಲ್ಲದೆ ಸ್ತಂಭನ, ಶತ್ರು ಮರಣ ಉಚ್ಚಾಟನ ಮೊದಲಾದ ಪ್ರಯೋಜನಗಳನ್ನೂ ಹೊಂದುವನು. ||೧೨೩|| (ದ್ರವ್ಯಾದ್ಯುದ್ದೇಶದಿಂದ ಮಾಡತಕ್ಕ ಮಂತ್ರ ಜಪದ ಧ್ಯಾನವನ್ನು ಹೇಳುತ್ತಾರೆ)

ಧನಧಾನ್ಯಾದಿ ಸಂಪತ್ತುಗಳಿಂದ ತುಂಬಿದ ಕೈಗಳುಳ್ಳವನೂ ರತ್ನಪರ್ವತದಲ್ಲಿ ಕುಳಿತವನೂ ಬ್ರಹ್ಮರುದ್ರಾದಿಗಳಿಂದ ಸೇವಿಸಲ್ಪಡುವವನೂ, ಎಂದು ಶ್ರೀಹರಿಯನ್ನು ಧ್ಯಾನಿಸಿದರೆ ಧನಧಾನ್ಯಾದಿ ಸಂಪತ್ತುಗಳನ್ನು ಹೊಂದುವನು. ಐಶ್ವರ್ಯಕ್ಕೆ ನಿಯಾಮಕಳಾದ ಲಕ್ಷ್ಮೀದೇವಿಯಿಂದಲೂ ನಾನಾವಿಧ ಸಂಪತ್ತುಗಳಿಂದಲೂ ಕೂಡಿದ ಶ್ರೀಹರಿಯನ್ನು ಧ್ಯಾನಿಸಿದರೆ ಧನಧಾನ್ಯಾದ್ಯೈಶ್ವರ್ಯವನ್ನು ಹೊಂದುವನು ||೧೨೪|| ಫಲಕಾಮಿಗೆ ವಿದ್ಯೆ ಮೊದಲಾದುದು ಯಾವುದು ಯಾವುದು ಅಭಿಲಷಿತವಾಗಿದೆಯೋ, ಹಾಗೆ ತಂತಮಗೆ ಇಷ್ಟವಾದ ಫಲಪ್ರದನೆಂದು ಶ್ರೀ ಹರಿಯನ್ನು ಧ್ಯಾನಿಸುತ್ತಾ ತಂತಮ್ಮ ಮನಸ್ಸುಗಳಲ್ಲಿರತಕ್ಕ ಆವಾವ ಪ್ರಯೋಜನಗಳಿಗೆ ಅನುಕೂಲವಾದ ಕ್ರಿಯೆಗಳನ್ನು ಮಾಡುವವನು ತಮಗೆ ಅಪೇಕ್ಷಿತವಾದ ಫಲವನ್ನು ನಿಶ್ಚಯವಾಗಿಯೂ ಹೊಂದುತ್ತಾನೆ. ||೧೨೫|| ಐಶ್ವರ್ಯ ಪ್ರಾಪ್ತಿಗಾಗಿ ತಾವರೆಗಳನ್ನೂ, ಚೆನ್ನಾಗಿ ಪ್ರೀತಿಸಂಪಾದನ ಮಾಡುವುದಕ್ಕಾಗಿ ನೈದಿಲೆ ಹೂಗಳನ್ನೂ ಹೋಮಿಸಬೇಕು. ವಿಜಯಾಪೇಕ್ಷೆಯಿದ್ದರೆ ಮೊದಲು ಹೋಮಿಸಿ ಆ ಮೇಲೆ ಬಾಣಗಳನ್ನು ನರಸಿಂಹಾದಿ ಮಂತ್ರಗಳಿಂದ ಅಭಿಮಂತ್ರಿಸಿ ಶತ್ರುಗಳಿಗೆ ಬಿಡಬೇಕು. ||೧೨೬|| ವಿದ್ಯಾ ಪ್ರಾಪ್ತಿಗಾಗಿ ಪ್ರತಿದಿನವೂ ೧೦೦ ಆವರ್ತಿ ವೇದ ವ್ಯಾಸಾದಿ ಮಂತ್ರಗಳಿಂದ ಅಭಿಮಂತ್ರಿತವಾದ ನೀರನ್ನು ಕುಡಿಯಬೇಕು. ಅದೇ ಪ್ರಕಾರ ಅಭಿಮಂತ್ರಿತವಾದ ಬಜೆಯನ್ನು ತುಳಸಿಯನ್ನು, ತಿಮರೆಯನ್ನು, ತುಪ್ಪವನ್ನು, ತೇದ ಸುವರ್ಣವನ್ನಾಗಲೀ ಭಕ್ಷಿಸಬೇಕು. ||೧೨೭|| ಕೇವಲ ಐಶ್ವರ್ಯಾದಿ ವಿಷಯಕ ಕಾಮನಾವಿಲ್ಲದವನಾಗಿ ಹಿಂದೆ ಹೇಳಿದ ಕರ್ಮಗಳನ್ನು ಮಾಡದಿದ್ದರೂ ಭಕ್ತಿಯಿಂದ ಶ್ರೀ ಹರಿಯನ್ನು ಭಜಿಸುವವನು ಹಿಂದೆ ಹೇಳಿದ ಫಲವೆಲ್ಲವನ್ನು ಸಕಾಮನು ಹೊಂದತಕ್ಕ ಫಲಕ್ಕಿಂತ ಹೆಚ್ಚು ಹೊಂದುತ್ತಾನೆ. ಸಂದೇಹವಿಲ್ಲ. ||೧೨೮|| ಮಂತ್ರದಲ್ಲಿರತಕ್ಕ ವರ್ಣಗಳಿಗೇನೇ, ಪ್ರಾತಿಲೋಮ್ಯ, ಅನುಲೋಮ್ಯ, ಪ್ರಾತಿಲೋಮ್ಯಾನುಲೋಮ್ಯ ಇವುಗಳಿಂದ ಜಪವನ್ನು ಮಾಡುವವರೆಲ್ಲರೂ ಸೃಷ್ಟಿನ್ಯಾಸ, ಸ್ಥಿತಿನ್ಯಾಸ, ಲಯನ್ಯಾಸಗಳನ್ನು ಮಾಡಬೇಕು. (ಅಂದರೆ - (೧)ಕ್ರಮವಾಗಿ ನ್ಯಾಸ ಮಾಡುವುದು ಸೃಷ್ಟಿನ್ಯಾಸವು. ಅಷ್ಟಾಕ್ಷರ ಮಂತ್ರದಲ್ಲಿ ೮ ವರ್ಣಗಳಿಗೆ ಶಿರಸ್ಸು ಕಣ್ಣು ನಾಸಾ, ವಾಕ್, ಹೃದಯ ನಾಭಿ ಜಾನು ಪಾದಗಳೆಂಬ ೮ ಸ್ಥಾನಗಳಲ್ಲಿ ಶಿರ ಆದಿಕ್ರಮದಿಂದ ಪಾದಪರ್ಯಂತ ಮಾಡತಕ್ಕ ನ್ಯಾಸವು ಸೃಷ್ಟಿನ್ಯಾಸವು (೨) ಇದೇ ವರ್ಣಗಳಿಗೆ ಪೂರ್ವಕ್ರಮ, ವಿಪರೀತವಾಗಿ ಪಾದವನ್ನಾರಂಭಿಸಿ ಶಿರಃ ಪರ್ಯಂತ (ಅಂದರೆ ತುದಿಯಿಂದ ಮೊದಲಿನ ವರೇಗೆ) ಮಾಡತಕ್ಕ ನ್ಯಾಸವು ಲಯನ್ಯಾಸವು (೩) ಇದೇ ವರ್ಣಗಳಿಗೆ ಶಿರ ಆದಿಕ್ರಮದಿಂದ ಅರ್ಧಭಾಗ, ಪಾದಾದಿವ್ಯುತ್ಕ್ರಮವಾಗಿ ಅರ್ಧ, ಹೀಗೆ ಮಾಡತಕ್ಕ ನ್ಯಾಸವು ಸ್ಥಿತಿನ್ಯಾಸವು, ಗೃಹಸ್ಥರಿಗೆ ಆ ಮೂರು ವರ್ಣನ್ಯಾಸಗಳ ಸ್ಥಿತಿನ್ಯಾಸವು ಅಂತ್ಯದಲ್ಲಿ ಬರುವಂತೆ ಮಾಡಬೇಕು. ಅವರಿಗೆ ೧೪ ಆವರ್ತಿ ವರ್ಣನ್ಯಾಸ ಮಾಡುವುದು ಉತ್ತಮವು. ಸನ್ಯಾಸಿಗಳಿಗೆ ಲಯನ್ಯಾಸವು ಅಂತ್ಯದಲ್ಲಿ ಬರುವಂತೆ ೨೧ ಆವರ್ತಿ ಮಾಡುವುದೇ ಉತ್ತಮವು. (ಬ್ರಹ್ಮಚಾರಿಗಳಿಗೆ ಸೃಷ್ಟಿಯು ಅಂತ್ಯದಲ್ಲಿ ಬರುವಂತೆ ೧೦ ಸಲ ನ್ಯಾಸ ಮಾಡುವುದು ಪ್ರಶಸ್ತವು.) ||೧೨೧-೧೩೦||

ಅವ || ಈ ಅಧ್ಯಾಯದಲ್ಲಿ ಹೇಳಿದ್ದು, ಹೇಳದಿದ್ದುದೂ ಆದ ಏಕಾಕ್ಷರ ಮೊದಲಾದ ಎಲ್ಲಾ ಮಂತ್ರಗಳಲ್ಲಿರತಕ್ಕ ವರ್ಣಗಳ ನ್ಯಾಸಸ್ಥಾನಗಳನ್ನು ಹೇಳುತ್ತಾರೆ.

ಮೂ|| ಪಾದಹೃತ್ಕೇಷು ನಾಭ್ಯಾಸ್ಯಯಂತಂ (ಕ್ರಂ) ಚ ಸಲಲಾಟಕಂ ।
**ಸನಾಸಿಕಾಕ್ಷ ದೃಕ್‌ಜಾನ್ವೋಃ ಸಶ್ರೋತ್ರಂ ಸೋರುಕಂ ತಥಾ ||೧೩೧||**

**ಸೋರಸ್ಕಂ ಚ ಸಂಕಂಠಂ ಚ ಸಭುಜದ್ವಯಮೇವ ಚ ।**
**ಸಗಂಡಯುಗ್ಮಂ ಸಾಲೀಕಂ ಸತುಂಡಕ್ರೋಡಕಂ ತಥಾ ||೧೩೨||**

**ಸತಲಂ (ಸಮೂಲಂ) ಚ ಸಗುಹ್ಯಂ ಚ ಸಪಾರ್ಶ್ವದ್ವಯಮೇವ ಚ**
**ಸದೋರ್ದ್ವಯಂ ವ್ಯಾಪಕಂ ಚ ಗಲಪಾರ್ಶ್ವದ್ವಯೇನ ಚ । (ಯಂ ತಥಾ)**
**ಕಕುತ್‌ಸ್ತನದ್ವಯೇನಾಪಿ ಪೃಷ್ಠಮೂಲೇನ ಸರ್ವಶಃ । ||೧೩೩||**

**ನ್ಯಾಸೋ ಯಥಾಕ್ರಮಂ ಪ್ರೋಕ್ತೋ ಮಂತ್ರೇಷ್ವೇತೇಷು ಕೃತ್ಸ್ನಶಃ ।**
**ಪ್ರತಿಮಾಯಾಮಾತ್ಮನಿ ಚ ನ್ಯಾಸೋಽಯಂಸನ್ನಿಧಾನಕೃತ್ ||೧೩೪||**

ಅ॥ ಪಾದ, ಹೃದಯ, ಶಿರಸ್ಸು, ಹೊಕ್ಕಳು, ಮುಖ, ಹಣೆ, ಮೂಗು, ಕಣ್ಣು, ಮೊಣಗಾಲು, ಕಿವಿ, ತೊಡೆ, ॥೧೩೧॥ ವೃಕ್ಷಸ್ಥಲ, ಕುತ್ತಿಗೆ, ಬಲಭುಜ, ಎಡಭುಜ, ಬಲಗೈ, ಎಡಗೈ, ಇಡಿದೇಹ, ಕುತ್ತಿಗೆಯ ಬಲಬದಿ, ಎಡಬದಿ, ಬಲಕೆನ್ನೆ, ಎಡಕೆನ್ನೆ, ಹಣೆ ತಲೆಗಳ ಮಧ್ಯ ಪ್ರದೇಶ, ಹೊಕ್ಕುಳಿನ ಕೆಳಪ್ರದೇಶ (ಹೊಟ್ಟೆ) ಭುಜಗಳ ಮಧ್ಯಪ್ರದೇಶ, ವೃಷಣ, ಗುಹ್ಯಪ್ರದೇಶ ಹೊಟ್ಟೆಯ ಬಲಬದಿ, ಎಡಬದಿ ॥೧೩೨॥೧೩೩॥ ಕುತ್ತಿಗೆಯ ಹಿಂಬದಿ, ಬಲಕುಚ, ಎಡಕುಚ, ಬೆನ್ನಿನ ಬುಡ, ಈ ಎಲ್ಲಾ ಪಾದವನ್ನಾರಂಭಿಸಿ ವೃಷ್ಣಮೂಲ ಪರ್ಯಂತ ಹೇಳಿದ ಸ್ಥಾನಗಳಲ್ಲಿ ಹಿಂದೆ ಹೇಳಿದ ಏಕಾಕ್ಷರ ಮೊದಲಾದ ೩೩ ಅಕ್ಷರಾಂತ ಆವಾವ ಮಂತ್ರಗಳ ವರ್ಣ ಸಂಖ್ಯಾಕ್ರಮವನ್ನನುಸರಿಸಿ ನ್ಯಾಸವನ್ನು ಮಾಡಬೇಕು. (ಏಕಾಕ್ಷರ ಮೊದಲಾದ ಸರ್ವಮಂತ್ರಗಳಲ್ಲಿಯೂ ಪಾದವನ್ನಾರಂಭಿಸಿ ಶಿರಃಪರ್ಯಂತವಾಗಿ ಈ ವರ್ಣನ್ಯಾಸ ಮಾಡಬೇಕು. ಇದು ಲಯನ್ಯಾಸವು, ವ್ಯುತ್ಕ್ರಮವಾಗಿ ಶಿರಸ್ಸನ್ನಾರಂಭಿಸಿ ಪಾದಪರ್ಯಂತ ಮಾಡತಕ್ಕದು. ಸೃಷ್ಟಿನ್ಯಾಸವು. ಅರ್ಧ ಶಿರ ಆದಿಕ್ರಮದಿಂದ, ಅರ್ಧ ಪಾದಾದಿ ಕ್ರಮದಿಂದ ಸ್ಥಿತಿನ್ಯಾಸವು) ಹಿಂದೆ ಹೇಳಿದ ವರ್ಣನ್ಯಾಸವು ಪೂಜಾಕಾಲದಲ್ಲಿ ತನ್ನಿಂದ ಉಪಾಸ್ಯಗಳಾದ ರಾಮಕೃಷ್ಣಾದಿ ಮೂರ್ತಿಗಳಲ್ಲಿಯೂ, (ಹಾಗೆಯೇ ಶ್ರೀ ಹರಿಯ ಅಂಗಗಳಲ್ಲಿ ಅವಾಹಿಸಲ್ಪಡತಕ್ಕ ಮಂತ್ರದಲ್ಲಿರತಕ್ಕ ವರ್ಣಪ್ರತಿಪಾದ್ಯರೂಪ ವಿಶೇಷಗಳಿಗೂ) ಜಪಪೂಜಾದಿಗಳನ್ನು ಮಾಡುವವನ ದೇಹದಲ್ಲಿಯೂ ದೇಹಾಂತರ್ಯಾಮಿಯಾದ ಶ್ರೀ ಹರಿಯ ಮಂತ್ರವರ್ಣ ಪ್ರತಿಪಾದ್ಯರೂಪ ವಿಶೇಷಗಳಿಗೂ ವಿಶೇಷತಃ ಸನ್ನಿಧಾನ ಪ್ರದವಾಗುತ್ತದೆ. ॥೧೩೧-೧೩೪॥

ಮೂ ॥ ಬೀಜಾಂತಃ ಸಾಧ್ಯಮಧ್ಯಂ ಚ ವಿಭಕ್ತದಲಮಂತ್ರಯುಕ್ ॥೧೩೫॥

ವರ್ಣಾನುಪ್ರ (ಪ್ರಾ) ತಿಲೋಮೇ (ಮ್ಯೇ)ತಂ (ನ) ವೃತ್ತಂ ಭೂಪುರಸಂಯುತಂ ।
ಬೀಜಸಂಧ್ಯಕೋಣಂ ಚ ಯಂತ್ರಂ ರಕ್ಷಾದಿಸಾಧಕಂ ॥೧೩೬॥

ಸಮಂ ತತ್ಸರ್ವಮಂತ್ರೇಷು ಜಪ್ತಂ ಧಾರ್ಯಂತು ವಾ ಭುವಿ ।
ವಿಲಿಖ್ಯ ಮಂಡಲೇ ವಾ ತತ್ಪೂಜಯೇದ್ಧರಿಮಂಜಸಾ ॥೧೩೭॥

ಅ॥ ಮೊದಲು ಸುವರ್ಣಾದಿಗಳಿಂದ ರಚಿತವಾದ ಚಚ್ಚೌಕ ಯಂತ್ರವನ್ನು ಮಾಡಿಸಿ ಅದರ ಮಧ್ಯದಲ್ಲಿ ತನ್ನಿಂದ ಜಪ್ಯವಾದ ಮಂತ್ರದ ಬೀಜಾಕ್ಷರವನ್ನೂ ಅದರ ಸುತ್ತಲೂ, 'ಮಮ ತತ್ವಜ್ಞಾನಂ ಭೂಯಾತ್' ಇದು ಮೊದಲಾದ ಅಪೇಕ್ಷಿತ ಪ್ರಯೋಜನವನ್ನು ಹೇಳುವ ವಾಕ್ಯವನ್ನೂ ಬರೆದು, ಅದರ ಸುತ್ತಲೂ ತನ್ನಿಂದ ಜಪ್ಯ ಮಂತ್ರದಲ್ಲಿರತಕ್ಕ ವರ್ಣಗಳ ಸಮಸಂಖ್ಯೆಯುಳ್ಳ ಮಧ್ಯ ಮಧ್ಯದಲ್ಲಿ ವ್ಯವಧಾನವಿರುವ ಪದ್ಮದಳಗಳಂತೆ ಆಕಾರವುಳ್ಳ ಗೃಹರೂಪದಳಗಳನ್ನು ಬರೆದು, ಆ ವಿವಿಕ್ತ ದಲಗಳಲ್ಲಿ ಮಂತ್ರದಲ್ಲಿರತಕ್ಕ - ವರ್ಣಗಳನ್ನು ಕ್ರಮದಿಂದ ಬರೆದು ಆ ದಲಗಳು ಪ್ರತ್ಯೇಕ ತೋರುವುದಕ್ಕಾಗಿ ಮಾಡಿದ ಮಧ್ಯೆ ಮಧ್ಯ ಪ್ರದೇಶಗಳಲ್ಲಿ ಅಕಾರವನ್ನಾರಂಭಿಸಿ ಕ್ಷಕಾರ ಪರ್ಯಂತ ೫೦ ಅಕ್ಷರಗಳನ್ನು ಕ್ರಮವಾಗಿಯೂ, ವ್ಯುತ್ಕ್ರಮವಾಗಿಯೂ ಬರೆದು ಅದರ ಹೊರಮೈಯಲ್ಲಿ ದ್ವಾರರೇಖೆಯನ್ನೂ, ಅದರ ಹೊರಗೆ ದ್ವಾರಗಳಿಂದ ಕೂಡಿದ ಭೂಪುರಗಳನ್ನೂ (ಚಚ್ಚೌಕ ೨ ರೇಖೆಗಳನ್ನೂ) ಬರೆದು, ೪ ಭೂಪುರ ಕೋಣ ದಿಕ್ಕುಗಳಲ್ಲಿ ಮಂತ್ರ ಬೀಜಾಕ್ಷರಗಳನ್ನು ದಿಕ್ಪಾಲಕರ ಬೀಜಾಕ್ಷರಗಳನ್ನು ಬರೆದು ಸರ್ವ ಯಂತ್ರಗಳಿಗೂ ಯಂತ್ರವನ್ನು ರಚಿಸಬೇಕು. ಈ ಯಂತ್ರವು ವಿಶೇಷತಃ ರಕ್ಷೆಯನ್ನು ಜ್ಞಾನಾದಿಗಳನ್ನೂ ಕೊಡಬಲ್ಲುದು. ॥೧೩೬॥ ಯಂತ್ರವನ್ನು ಬರೆಯುವ ವಿಧಿಯು ವರಾಹ್ಯಮಂತ್ರ ಮೊದಲಾದ ಎಲ್ಲಾ ಮಂತ್ರಗಳಲ್ಲಿಯೂ ಸಮವೇ ಆಗಿದೆ. ಇಂತಹ ಯಂತ್ರವನ್ನು 'ಯಂತ್ರರಾಜಾಯ ವಿದ್ಮಹೇ ದೇವಗ್ರಹಾಯ ಧೀಮಹಿ । ತಂ ನೋ ಯಂತ್ರಃ ಪ್ರಚೋದಯಾತ್ ॥' ಎಂಬ ಯಂತ್ರ ಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿ (ಪ್ರತಿಷ್ಠಿಸಬೇಕು) (ಇಂತಹ ಯಂತ್ರವನ್ನು ಕೈಯಲ್ಲಿ ಆಗಲೀ, ಕುತ್ತಿಗೆಯಲ್ಲಿ ಆಗಲೀ, ಕಟ್ಟಿಕೊಳ್ಳಬೇಕು. ಅಥವಾ ಪೂಜಿಸಬೇಕು) ಅಥವಾ ಭೂಮಿಯಲ್ಲಿ ಮಂಡಲ ಬರೆದು ಅದರಲ್ಲಿ ಯಂತ್ರವನ್ನು ಬರೆದು ಆ ಯಂತ್ರದಲ್ಲಿ ಆವಾವ ಪ್ರತಿಪಾದ್ಯ ಶ್ರೀ ಹರಿಯನ್ನು ಶಾಸ್ತ್ರೋಕ್ತ ಪ್ರಕಾರ ಪೂಜಿಸಬೇಕು. ॥೧೩೫-೧೩೭॥

ಅವ॥ ಗುರುಗಳಲ್ಲಿ ತಾರತಮ್ಯವನ್ನು ತಿಳಿಸಿ ಕೊಡುವುದಕ್ಕಾಗಿ ಗುರುಗಳ ಲಕ್ಷಣ ಹೇಳುತ್ತಾರೆ.

ಮೂ॥ ಪ್ರತಿಮೋಕ್ತ (ಪ್ರತಿಮಾ) ಲಕ್ಷಣೈರ್ಯಾವದ್ಯುಕ್ತ ಆಚಾರ್ಯ ಉತ್ತಮಃ ।
ಸರ್ವವಿತ್ತಪಸಾ ಯುಕ್ತ ಆಜ್ಞಾಶಕ್ತಿಯುತೋ ಹರೇಃ ॥೧೩೮॥

ಯಾವದ್ಭಕ್ತೋ ಯಥಾ ಲಬ್ಧೈರ್ಗುಣೈರ್ಯುಕ್ತೋsಪಿ (sಥ) ವೈಷ್ಣವಃ ।
ಗುರುಃ ಸತ್ಸಂಪ್ರದಾಯಜ್ಞಸ್ತಾರತಮ್ಯೇನ ಸಿದ್ಧಿದಃ ॥೧೩೯॥

ಉತ್ತಮಾದುತ್ತಮಾ ಸಿದ್ಧಿರ್ಧರ್ಮಮೋಕ್ಷಾದಿಷು ಸ್ಫುಟಾ ।
ತಸ್ಮಾದುತ್ತಮ ಆಚಾರ್ಯೇ ಲಬ್ಧೇ ನಾತೋsವರಂ ವ್ರಜೇತ್ ॥೧೪೦॥

ಏಕಸ್ಯ ಶಿಷ್ಯತಾಂ ಪ್ರಾಪ್ಯ ತದಾಜ್ಞಾಂ ನ ವಿನಾ ಸಮಂ ।
ಅವರಂ ವಾ ವ್ರಜೇದುಚ್ಚಗುಣಶ್ಚೇನ್ನೈವ ದುಷ್ಯತಿ ॥೧೪೧॥

ವಿಶೇಷತೋ ಗುಣಶ್ಚ ಸ್ಯಾದ್ದೇವೇಷ್ವಪ್ಯೇವಮೇವ ಹಿ ।
ತಸ್ಮಾದುತ್ತಮಮಾಚಾರ್ಯಂ ದೇವೇಶಂ ಚಾsಶ್ರಯೇದ್ಧರಿಂ ॥೧೪೨॥

ಅಪರೋಕ್ಷದೃಶೇರೇವ ಯಸ್ಮಾನ್ಮೋಕ್ಷೋನ ಚಾನ್ಯಥಾ ।
ಅಪರೋಕ್ಷದೃಶಿಶ್ಚೈವ ಶ್ರವಣಾನ್ಮನನಾದನಂ ॥
ಸಮ್ಯಕ್ ನಿಶ್ಚಿತತತ್ವಸ್ಯ ನಿದಿಧ್ಯಾಸನಯಾ ಭವೇತ್ ॥೧೪೩॥

ಅ॥ ಪ್ರತಿಮಾ ನಿರ್ಮಾಣಕ್ಕೆ ಹೇಳಿದ ಲಕ್ಷಣಗಳಿಂದಲೂ (೩೨ ಲಕ್ಷಣಗಳಿಂದಲೂ) ಕೂಡಿದವನೂ, ಸರ್ವಜ್ಞನೂ ವ್ರತ ಜಪ ಮೊದಲಾದ ತಪಸ್ಸಿನಿಂದ ಕೂಡಿದವನೂ, ಶ್ರೀ ಹರಿಯ ಆಜ್ಞಾರೂಪ ಶ್ರುತಿ ಸ್ಮೃತಿಗಳಲ್ಲಿ ವಿಹಿತ ಸಕಲ ಕರ್ಮಗಳನ್ನು ಮಾಡಲಿಕ್ಕೆ ಶಕ್ತಿಯಿರುವವನೂ ಆದ ಗುರುವೇ ಉತ್ತಮ ಗುರುವು ॥೧೩೮॥ ತನ್ನ ಯೋಗ್ಯತಾನುಸಾರ ಶ್ರೀ ಹರಿಯಲ್ಲಿ ಭಕ್ತಿಯುಳ್ಳವನೂ, ತಂತಮ್ಮ ಯೋಗ್ಯತಾನುಸಾರ ಪ್ರಾಪ್ತಗಳಾದ ಸಾರ್ವಜ್ಞ ಪಾಠಪ್ರವಚನ ಮೊದಲಾದ ಗುಣಗಳಿಂದಲೂ ಸ್ವಯೋಗ್ಯ ಲಕ್ಷಣಗಳಿಂದಲೂ ಕೂಡಿದವನೂ ವಿಷ್ಣು ಸರ್ವೋತ್ತಮತ್ವಾದಿ ಜ್ಞಾನವುಳ್ಳವನೂ, ವೈಷ್ಣವ ದೀಕ್ಷೆಯುಳ್ಳವನೂ, ಬ್ರಹ್ಮಾದಿ ಗುರೂಪದೇಶ ಪರಂಪರೆಯಿಂದ ಪ್ರಾಪ್ತವಾದ ಸತ್ಸಿದ್ಧಾಂತಜ್ಞಾನವುಳ್ಳವನೂ ಆದ ಎಲ್ಲಾ ಗುರುಗಳೂ ಕ್ರಮದಿಂದ ಅಮುಖ್ಯ ಗುರುಗಳು (ತಮಗಿಂತ ಉತ್ತಮರಾದವರೆಲ್ಲರೂ ತಾರತಮ್ಯಾನುಸಾರವಾಗಿಯೇ ಗುರುಗಳು, ತಾರತಮ್ಯಾನುಸಾರವಾಗಿಯೇ ಫಲವನ್ನು ಕೊಡುವವರು.) (ಚತುರ್ಮುಖನೇ ಮುಖ್ಯಗುರುವು. ಬೇರೆಯವರೆಲ್ಲರೂ ಅಮುಖ್ಯ ಗುರುಗಳು) ॥೧೩೯॥ ಉತ್ತಮ ಗುರುಗಳಿಂದ, ಪುಣ್ಯಜ್ಞಾನ, ಮೋಕ್ಷ, ವೈರಾಗ್ಯ ಭಕ್ತಿ ಮೊದಲಾದ ವಿಷಯದಲ್ಲಿ ಉತ್ತಮ ಸಿದ್ಧಿಯು ಪ್ರಾಪ್ತವಾಗುತ್ತದೆ. (ಅಧಮ ಗುರುಗಳಿಂದ ಅಲ್ಪಫಲ ಸಿದ್ಧಿಯು ದೊರೆಯುತ್ತದೆ.) ಉತ್ತಮವಾದ ಸಿದ್ಧಿಯನ್ನು ಹೊಂದಿಸಿ ಕೊಡುವುದರಿಂದ (ಅತಿಶಯಿತ ಜ್ಞಾನಾದಿಗಳ ಪ್ರಾಪ್ತಿಗಾಗಿ) ಉತ್ತಮ ಗುರುಗಳು ದೊರೆತರೆ ಅಂತಹ ಗುರುಗಳನ್ನು ಬಿಟ್ಟು ಅಧಮಗುರುಗಳನ್ನು ಸ್ವೀಕರಿಸಬಾರದು ॥೧೪೦॥ ಒಬ್ಬ ಗುರುಗಳ ಶಿಷ್ಯತನವನ್ನು ಹೊಂದಿ ಅವರ ಆಜ್ಞೆಯಿಲ್ಲದೆ ಅವರ ಸಮಾನನನ್ನಾಗಲೀ ಅವರಿಗಿಂತ ಅಧಮ ಗುರುಗಳನ್ನಾಗಲೀ ಸ್ವೀಕರಿಸಬಾರದು. (ಪೂರ್ವ ಗುರುಗಳ ಆಜ್ಞೆಯಿದ್ದರೆ ಸಮಾನಿಕನನ್ನೂ ಅಧಮ ಗುರುವನ್ನೂ ಸ್ವೀಕರಿಸಬಹುದು.)

ಮೊದಲಿನ ಗುರುಗಳಿಗಿಂತ ಹೆಚ್ಚು ಜ್ಞಾನಾದಿಗಳುಳ್ಳ ಗುರುಗಳು ದೊರೆತರೆ ಪೂರ್ವ ಗುರುಗಳ ಆಜ್ಞೆಯಿಲ್ಲದೇನೇ ಉತ್ತಮ ಗುರುವನ್ನು ಹೊಂದುವ ಪುರುಷನು ಪ್ರತ್ಯವಾಯವುಳ್ಳವನಾಗುವುದಿಲ್ಲ. ॥೧೪೧॥ ಉತ್ತಮ ಗುರುಗಳನ್ನು ಸ್ವೀಕಾರ ಮಾಡುವುದರಿಂದ, ಮೊದಲಿನ ಗುರುಗಳಿಂದುಂಟಾಗತಕ್ಕ ಜ್ಞಾನಾದಿಗಳಿಂದ ಅತಿಶಯವಾಗಿ ಜ್ಞಾನಾದಿ ಗುಣ ಸಮುದಾಯವೂ ಉಂಟಾಗುವುದು.

ಗುರುಗಳ ಸ್ವೀಕಾರ ವಿಷಯದಲ್ಲಿ ದೇವತೆಗಳಲ್ಲಿಯೂ ಇದೇ ನ್ಯಾಯವನ್ನು ಇಟ್ಟುಕೊಳ್ಳಬೇಕು. ಆದ ಕಾರಣ ಉತ್ತಮ ಗುರುಗಳನ್ನೂ, ಬ್ರಹ್ಮಾದ್ಯುತ್ತಮನಾದ ಶ್ರೀ ಹರಿಯನ್ನೂ ಆಶ್ರಯಿಸಬೇಕು. ||೧೪೨|| ಭಗವದಪರೋಕ್ಷ ಜ್ಞಾನದಿಂದಲೇ ಮೋಕ್ಷವು ಲಭಿಸುವುದು. ಕಾಶಿಯಲ್ಲಿ ಮರಣ ಮೊದಲಾದ ಬೇರೆ ಯಾವ ರೀತಿಯಿಂದಲೂ ಮೋಕ್ಷವಾಗಲಾರದು. ಶ್ರವಣ ಮನನಗಳಿಂದ ಭಗವತ್ತತ್ವವನ್ನು ನಿರ್ಣಯಿಸಿಕೊಂಡಿದ್ದವರಿಗೇನೇ ಭಗವದುಪಾಸನೆಯಿಂದ ಅಪರೋಕ್ಷ ಜ್ಞಾನವುಂಟಾಗುವುದು. ಶ್ರವಣಾದಿಗಳು ಗುರುಗಳಿಂದಲೇ ಆಗಬೇಕಾಗಿರುವುದರಿಂದ ಸಚ್ಛಾಸ್ತ್ರ ಶ್ರವಣಾದಿಗಳಿಗಾಗಿ ಗುರುಗಳನ್ನು ಆಶ್ರಯಿಸಬೇಕು. ||೧೩೮-೧೪೩||

ಮೂ || ದ್ವಿವಿಧಾ ಸಾ ಚ ಸಂಪ್ರೋಕ್ತಾ ವಿಷ್ಣುಶಾಸ್ತ್ರಾವಮರ್ಶನಂ ||೧೪೪||

ಏಕಂ ಧ್ಯಾನಂ ಹರೇರನ್ಯಚ್ಚತ್ವಾರ್ಯಂಗಾನಿ ತಸ್ಯ ಚ |
ಯಮಶ್ಚ ನಿಯಮಶ್ಚಾಸಾ ಪ್ರಾಣಾಯಾಮ ಇತೀರಿತಃ ||೧೪೫||

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ |
ಯಮಾಃ ಶೌಚಂ ತಪಸ್ತುಷ್ಟಿಃ ಸ್ವಾಧ್ಯಾಯೋ ಹರಿಪೂಜನಂ ||೧೪೬||

ನಿಯಮಾ ವೀರಪದ್ಮೇ ಚ ಸ್ವಸ್ತಿಕಾದ್ಯಾನಿ ಚಾಸನಂ |
ರೇಚಕಃ ಪೂರಕಶ್ಚೈವ ಕುಂಭಕಶ್ಚ ತ್ರಿಧಾ ಸ್ಮೃತಃ ||೧೪೭||

ಪ್ರಾಣಾಯಾಮಃ ಸ್ಮೃತಿಂ ವಿಷ್ಣೋರ್ವಿನಾ ನಿಯಮ ಉಚ್ಯತೇ |
ಅಧೀತಿಃಸ್ಮೃತಿಯುಕ್ತಾತ್ತು ನಿದಿಧ್ಯಾಸನಮೇವ ಹಿ ||೧೪೮||

ಪ್ರಾಣಾಯಾಮೇಽಪಿ ವಿಷ್ಣೋರ್ಯತ್ಸ್ಮರಣಂ ಧ್ಯಾನಮೇವ ತತ್ |
ಆಸಾ ಶೌಚಂ ಪ್ರಾಣಯಾಮೋ ನಿಷ್ಪರಿಗ್ರಹಪೂರ್ವಕಾಃ ||೧೪೯||

ತಪ ಆದ್ಯಾಃ ಕ್ರಮಾತ್ಸರ್ವೇ ಉತ್ತರೋತ್ತರತೋಽಧಿಕಾಃ |
ಸರ್ವಸ್ಮಾಚ್ಛ್ರವಣಾದ್ಯಾಸ್ತು ಮುಖ್ಯಾ ಮುಕ್ತಿಪ್ರಸಾಧನೇ ||೧೫೦||

ಅಜ್ಞಸ್ಯ ಶ್ರವಣಂ ಶ್ರೇಷ್ಠಮಯುಕ್ತೇರ್ಮನನಂ ತಥಾ |
ಧ್ಯಾನಂ ನಿಶ್ಚಿತತತ್ವಸ್ಯ ತಸ್ಮಾಚ್ಛಾಸ್ತ್ರಾವಮರ್ಶನಂ ||೧೫೧||

ವರಂ ದಶಗುಣಂ ತಸ್ಮಾದ್ಧ್ಯಾನಮೇಕಸ್ಯ ಶತೋತ್ತರಾ |
ಅಪರೋಕ್ಷದೃಶಾಽಪ್ಯೇಷಾ ಕರ್ತವ್ಯಾಂ ವಿಷ್ಣುತುಷ್ಟಿದಾ || ||೧೫೨||

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ |
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೇಷ್ಯತ್ಯಸಂಶಯಃ ||೧೫೩||

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ |
ಭವಿತಾ ನ ಚ ಮೇತಸ್ಮಾದನ್ಯಃ ಪ್ರಿಯತರೋ ಭುವಿ ||೧೫೪||

ಶೌಚಾಸನೇ ತ್ವಂಗಮಾತ್ರಂ ನ ಪೃಥಗ್ಧರ್ಮಕಾರಣಂ |
ಪ್ರಾಣಾಯಾಮಾದಯಸ್ತುಷ್ಟಿಪರ್ಯಂತಾ ದ್ವಿಗುಣಾಧಿಕಾಃ ||೧೫೫||

**ಸ್ವಾಧ್ಯಾಯೋಽತಃ ಕೋಟಿಗುಣಸ್ತತೋಽನಂತಗುಣಾ ಹರೇಃ**
**ಪೂಜಾಽತಸ್ತ್ರಿಗುಣಂ ಧ್ಯಾನಮಿತಿ ಧರ್ಮಕ್ರಮಃ ಸ್ಮೃತಃ** ॥೧೫೬॥

ಅ॥ (ಅಪರೋಕ್ಷಜ್ಞಾನಕ್ಕೆ ಸಾಧನವಾದ ನಿದಿಧ್ಯಾಸನಾರೂಪವಾದ ಉಪಾಸನೆಯನ್ನು ಹೇಳುತ್ತಾರೆ) ಆ ಉಪಾಸನೆಯು (1) ವಿಷ್ಣುಶಾಸ್ತ್ರಾವಮರ್ಶನ ರೂಪವಾದುದು (ಅಂದರೆ ಶ್ರವಣ ಮನನಗಳಿಂದ ತತ್ವನಿಶ್ಚಯವಾದ ಮೇಲೆ ಅಪರೋಕ್ಷಜ್ಞಾನಕ್ಕಾಗಿಯೇ ತಾನಾಗಿಯೇ ಸರ್ವದಾ ವೈಷ್ಣವ ಶಾಸ್ತ್ರವನ್ನು ವಿಚಾರ ಮಾಡುವುದು. ಶಿಷ್ಯರಿಗೆ ಪಾಠ ಹೇಳುವುದು. (2) ಧ್ಯಾನರೂಪವಾದುದು ಎಂದು ೨ ವಿಧವು. ಆ ಧ್ಯಾನಕ್ಕೆ ಯಮ, ನಿಯಮ, ಆಸನ, ಪ್ರಾಣಾಯಾಮ, ಎಂದು ೪ ಅಂಗಗಳು. ಅಪರೋಕ್ಷ ಜ್ಞಾನಕ್ಕಾಗಿಯೇ ತಾನೇ ಸರ್ವದಾ ವೈಷ್ಣವ ಶಾಸ್ತ್ರವನ್ನು ವಿಚಾರ ಮಾಡುವುದು. ಶಿಷ್ಯರಿಗೆ ಸರ್ವದಾ ವೈಷ್ಣವ ಶಾಸ್ತ್ರವನ್ನು ಪಾಠ ಹೇಳುವುದು.) ॥೧೪೫॥ ಅಹಿಂಸಾ = ಹಿಂಸೆ ಮಾಡದಿರುವಿಕೆ (ಅಂದರೆ ಕರ್ಮದಿಂದಲೂ, ಮನಸ್ಸಿನಿಂದಲೂ, ವಚನದಿಂದಲೂ, ಸಮಸ್ತ ಪ್ರಾಣಿಗಳಿಗೂ ಸರ್ವದಾ ಕ್ಲೇಶವನ್ನು ಹುಟ್ಟಿಸದಿರುವಿಕೆ) ಸತ್ಯಂ - ಸಮಸ್ತ ಪ್ರಾಣಿಗಳಿಗೆ ಹಿತವನ್ನುಂಟು ಮಾಡುವಿಕೆ, ಅಸ್ತೇಯಂ ಪರರ ದ್ರವ್ಯಗಳಲ್ಲಿ ಸರ್ವಥಾ ಇಚ್ಛೆಯಿಲ್ಲದಿರುವಿಕೆ, ಬ್ರಹ್ಮಚರ್ಯಂ ಎಲ್ಲಾ ಅವಸ್ಥೆಗಳಲ್ಲಿಯೂ ಸರ್ವಧಾ ಸರ್ವತ್ರ ೮ ವಿಧ ಮೈಥುನ ತ್ಯಾಗವು. ಅಪರಿಗ್ರಹಃ = ವೈರಾಗ್ಯವು ಇವು ಐದು ಯಮಗಳು. ಬಾಹ್ಯ ಅಭ್ಯಂತರ ಶುದ್ಧಿಗಳು, ಜಪ ಹೋಮ ಅತಿಥಿ ಸತ್ಕಾರಾದಿ ರೂಪ ತಪಸ್ಸು, ವಿಷಯಾಲಂಬುದ್ಧಿ, ವೇದಾಧ್ಯಯನ, ಮತ್ತು ಆಚಾರ್ಯ ಸೇವನೆ, ಷೋಡಶೋಪಚಾರಗಳಿಂದ ನಿತ್ಯದಲ್ಲಿಯೂ ಶ್ರೀ ಹರಿಯ ಪೂಜೆಯು, ಇವುಗಳು ನಿಯಮಗಳು, ವೀರಾಸನ, ಪದ್ಮಾಸನ, ಸ್ವಸ್ತಿಕಾಸನ, ಸಿದ್ಧಾಸನ, ಮೊದಲಾದವುಗಳು ಆಸನಗಳೆಂದು ಹೇಳಲ್ಪಡುತ್ತವೆ. ರೇಚಕ, ಪೂರಕ, ಕುಂಭಕ ಎಂದು ಪ್ರಾಣಾಯಾಮವು ಮೂರು ವಿಧವು ॥೧೪೬॥ ೧೪೭॥ ಶ್ರೀ ವಿಷ್ಣುವಿನ ಸ್ಮರಣೆಯಿಲ್ಲದೆ ಕೇವಲ ವೇದಾಧ್ಯಯನಾದಿ ರೂಪವಾದ ಪ್ರಾಣಾಯಾಮವು ನಿಯಮವೆಂದೆನಿಸುತ್ತದೆ. ಮಂತ್ರೋಚ್ಚಾರಣ, ಮಂತ್ರವಾಚ್ಯ ದೇವತಾಸ್ಮರಣ, ಇವುಗಳಿಂದ ಕೂಡಿದ ಪ್ರಾಣಾಯಾಮವಾದರೂ ನಿದಿಧ್ಯಾಸನವೆನ್ನಿಸುತ್ತದೆ. ॥೧೪೮॥ ಪ್ರಾಣಾಯಾಮದಲ್ಲಿ ಮಂತ್ರೋಚ್ಚಾರಣೆ ಮಾಡದೆ, ಕೇವಲ ವಿಷ್ಣುವಿನ ಸ್ಮರಣವೇ ಇದ್ದರೆ ಅಂತಹ ಪ್ರಾಣಾಯಾಮಕ್ಕೆ ಧ್ಯಾನವೆಂದು ಹೆಸರು. ಆಸನ, ಶೌಚ, ಪ್ರಾಣಾಯಾಮ, ವೈರಾಗ್ಯ ಅಹಿಂಸಾ, ಸತ್ಯ, ಅಸ್ತೇಯ ಮೊದಲಾದವುಗಳು, ॥೧೪೯॥ ತಪಸ್ಸು, ತುಷ್ಟಿ, ಮೊದಲಾದವುಗಳು ಎಲ್ಲವೂ, ಕ್ರಮವಾಗಿ ಮೊದಲು ಮೊದಲಿನವುಗಳಿಂದ ಮೇಲು ಮೇಲಿನವುಗಳು ಶ್ರೇಷ್ಠಗಳಾಗಿವೆ. ಹಿಂದೆ ಹೇಳಿದ ಎಲ್ಲವುಗಳಿಂದಲೂ ಶ್ರವಣ, ಮನನ, ಶಾಸ್ತ್ರಾರ್ಥ ವಿಚಾರಾದಿಗಳು ಮೋಕ್ಷ ಸಾಧನೆಯಲ್ಲಿ ಪ್ರಧಾನಗಳು. ॥೧೫೦॥ ಶಾಸ್ತ್ರಾರ್ಥಜ್ಞಾನವಿಲ್ಲದವನಿಗೆ (ಗುರುಮುಖದಿಂದ) ಸಚ್ಛಾಸ್ತ್ರಶ್ರವಣವು ಮುಖ್ಯವು. (ಆತನಿಗೆ ಮನನಾದಿಗಳಲ್ಲಿ ಅಧಿಕಾರವಿಲ್ಲ.) ಶಾಸ್ತ್ರಶ್ರವಣ ಮಾಡಿದ್ದರೂ ಯುಕ್ತಾಯುಕ್ತ ಸಂಶಯವಿದ್ದು ತತ್ವನಿಶ್ಚಯವಿಲ್ಲದವನಿಗೆ (ಶಾಸ್ತ್ರ ಶ್ರವಣಕ್ಕಿಂತಲೂ ಕೇಳಿದ ಪ್ರಮೇಯವು ದೃಢವಾಗುವುದಕ್ಕಾಗಿ) ಮನನವು ಶ್ರೇಷ್ಠವು, ಶ್ರವಣ ಮನನಗಳಿಂದ ಅಜ್ಞಾನ ಸಂಶಯ ವಿಪರ್ಯಾಯಗಳನ್ನು ಕಳೆದುಕೊಂಡು ತತ್ವನಿಶ್ಚಯವಿದ್ದವನಿಗೆ ಧ್ಯಾನವೂ, ವಿಷ್ಣುಶಾಸ್ತ್ರಾಮರ್ಶನವೂ ಶ್ರೇಷ್ಠವು. ಅವುಗಳಲ್ಲಿಯೂ ಧ್ಯಾನಕ್ಕಿಂತಲೂ ಶಾಸ್ತ್ರಾರ್ಥ ವಿಚಾರವೇ ಹತ್ತು ಪಾಲುವ ಶ್ರೇಷ್ಠವು (ಹೇಗೆಂದರೆ ವಿಷ್ಣು ಶಾಸ್ತ್ರಾವಮರ್ಶನದಿಂದ ವಿಷ್ಣುಶಾಸ್ತ್ರವಾದ ಮಂತ್ರೋಪನಿಷತ್ತು, ಭಾರತ ಭಾಗವತಾದಿಗಳು ಭಗವಂತನಿಗೆ ಸರ್ವೋತ್ತಮತ್ವ ಪ್ರತಿಪಾದಕಗಳೆಂದು ನಿಶ್ಚಯಿಸುವುದರಿಂದ ಶ್ರೇಷ್ಠವೇ ) ॥೧೫೧॥ ತಾನೇ ಮಾಡುವ ಶಾಸ್ತ್ರ ವಿಚಾರಕ್ಕಿಂತ ಒಬ್ಬ ಶಿಷ್ಯನಿಗಾದರೂ ಸಚ್ಛಾಸ್ತ್ರವನ್ನು ಅಭ್ಯಾಸ ಮಾಡಿಸುವುದು (೧೦೦) ನೂರು ಪಾಲು ಶ್ರೇಷ್ಠವು. ಪ್ರವಚನಸಾಧ್ಯ ಅಪರೋಕ್ಷ ಜ್ಞಾನರೂಪ ಫಲವುಳ್ಳವನೂ ಕೂಡ ಪ್ರವಚನವು ವಿಶೇಷತಃ ಶ್ರೀ ವಿಷ್ಣುವಿಗೆ ಪ್ರೀತಿಯನ್ನು ಹುಟ್ಟಿಸತಕ್ಕುದಾದ ಕಾರಣ ಸಚ್ಛಾಸ್ತ್ರಪ್ರವಚನವು ಸರ್ವದಾ ಅತ್ಯಾವಶ್ಯಕವು ॥೧೫೨॥ ಯಾರು ಈ ಪರಮ ರಹಸ್ಯವಾದ ಸರ್ವಶಾಸ್ತ್ರಾರ್ಥ ನಿರ್ಣಯವನ್ನು ನನ್ನ ಭಕ್ತರಿಗೆ ಪ್ರವಚನಾದಿಗಳಿಂದ ಉಪದೇಶಿಸುತ್ತಾನೋ ಅಂತಹವನು ನನ್ನಲ್ಲಿ ಉತ್ತಮ ಭಕ್ತಿಯನ್ನು ಮಾಡಿ ನಿಶ್ಶಂಶಯವಾಗಿ ನನ್ನನ್ನೇ ಹೊಂದುತ್ತಾನೆ. ॥೧೫೩॥ ಮನುಷ್ಯರಲ್ಲಿ ಶಾಸ್ತ್ರ ಪ್ರವಚನ ಮಾಡುವವನಕ್ಕಿಂತ ಇನ್ನೊಬ್ಬನು ನನಗೆ ಹೆಚ್ಚು ಪ್ರಿಯವನ್ನು ಮಾಡುವವನು ಇಷ್ಟರ ವರೇಗೆ ಹುಟ್ಟಲಿಲ್ಲ. ಅವನಕ್ಕಿಂತ ಇನ್ನೊಬ್ಬನು ಭೂಲೋಕದಲ್ಲಿ ಹೆಚ್ಚು ಪ್ರಿಯನಾದವನು ಇನ್ನು ಮುಂದೆಯೂ ಹುಟ್ಟುವಂತಿಲ್ಲ. ॥೧೫೪॥ ಶೌಚ ಆಸನಗಳು ಸರ್ವ ಕರ್ಮಗಳಿಗೂ ಅಂಗಭೂತಗಳಾಗಿವೆ. ಸ್ವತಂತ್ರವಾಗಿ ಫಲ ಜನಕಗಳಲ್ಲ. ಪ್ರಾಣಾಯಾಮ, ವೈರಾಗ್ಯ, ಅಹಿಂಸಾ, ಸತ್ಯ ಅಸ್ತೇಯ, ಬ್ರಹ್ಮಚರ್ಯ, ತಪಸ್ಸು, ತುಷ್ಟಿ ಇವುಗಳು ಇಂದು ಹಿಂದಿನವುಗಳಿಂದ ಮೇಲು ಮೇಲಿನವುಗಳು, ಎರಡು ಎರಡು ಪಾಲು ಹೆಚ್ಚು

ಫಲವುಳ್ಳವುಗಳು ||೧೫೫|| ತುಷ್ಟಿಗಿಂತಲೂ ಶಾಸ್ತ್ರಾಧ್ಯಯನವು ಕೋಟಿ ಪಾಲು ಹೆಚ್ಚು ಫಲವುಳ್ಳದ್ದು. ಶಾಸ್ತ್ರಾಧ್ಯನಕ್ಕಿಂತಲೂ ಶ್ರೀ ಹರಿಯ ಪೂಜೆಯು ಅನಂತಾನಂತ ಹೆಚ್ಚು ಗುಣವುಳ್ಳದ್ದು. ಶ್ರೀ ಹರಿಯ ಪೂಜೆಗಿಂತಲೂ ಧ್ಯಾನವು(೩) ಮೂರು ಪಾಲು ಹೆಚ್ಚು ಗುಣವುಳ್ಳದ್ದು. ಧರ್ಮ ಸಾಧನಗಳಾದ ಪ್ರಾಣಾಯಾಮಾದಿಗಳ ತಾರತಮ್ಯವು ಈ ರೀತಿಯಾದುದು. (ಅಂತೂ ಧ್ಯಾನಕ್ಕಿಂತ ಶಾಸ್ತ್ರಾರ್ಥ ವಿಚಾರವು ೧೦ ಪಾಲು, ಅದಕ್ಕಿಂತಲೂ ಶಾಸ್ತ್ರ ಪ್ರವಚನವು ೧೦೦ ಪಾಲು ಶ್ರೇಷ್ಠವು) ||೧೫೬|| ||೧೪೪-೧೫೬||

ಅವ || (ವೀರಾಸನಾದಿ 3 ಆಸನಗಳ ಲಕ್ಷಣ ಹೇಳುತ್ತಾರೆ.)

ಮೂ|| ಊರ್ವೋರಧಃ ಪದೋರೂರ್ಧ್ವಂ ವಿಭಾಗೇನೇತಿ ಚ ತ್ರಿಧಾ |
ಆಸನತ್ರಯಮುದ್ದಿಷ್ಟಂ ಮಂತ್ರಸ್ಮರಣಪೂರ್ವಕಂ ||೧೫೭||

ದ್ವಿಗುಣೋತ್ತರಂ ರೇಚಕಾದಿ ಷೋಡಶಾದಿಕ್ರಮೇಣ ತು ||
ಮಾತ್ರಾಣಾಂ ಹ್ರಸ್ವವರ್ಣಸ್ಯ ಕಾಲೋ ಮಾತ್ರೇತಿ ಶಬ್ದ್ಯತೇ ||೧೫೮||

ಕ್ರಮೇಣೈವಾಭ್ಯಸೇನ್ಮಾತ್ರಾವೃದ್ಧಿಮೇಕಾಗ್ರಧೀಃ ಪುನಃ |
ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ತು ವಾಮತಃ ||೧೫೯||

ಕುಂಭಕಂ ಚ ಸುಷುಮ್ನಾಯಾಂ ವಿಷ್ಣುಂ ವಾಯುಂ ಚ ಸಂಸ್ಮರೇತ್ |
ಮೂಲಾಧಾರಂ ಸಮಾರಭ್ಯ ತ್ವಾಮೂರ್ಧಾನಮೃಜುಸ್ಥಿತಾ ||೧೬೦||

ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಕಾऽऽರ್ಯಾऽವಭಾಸಿನೀ (ಪ್ರಕಾಶಿನೀ)
ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನೀ ||೧೬೧||

ಪೃಷ್ಠವಾಮಾಗ್ರದಕ್ಷಾಂತರ್ಭೇದಾಸ್ತೇ ಚ ಕ್ರಮೇಣ ತು |
ಹರಿನ್ನೀಲಃ ಸಿತಃ ಪಿಂಗೋ ಲೋಹಿತಶ್ಚಾತ್ರ ಕೇಶವಃ ||೧೬೨||

ಪ್ರದ್ಯುಮ್ನಾದಿ ಸ್ವರೂಪೇಣ ಧ್ಯೇಯಃ ಸಿದ್ಧಿಮಭೀಪ್ಸತಾ |
ಮೂಲೇ ಚ ನಾಭೌ ಹೃದಯೇಂದ್ರ ಯೋನಿಭ್ರೂಮಧ್ಯ ಮೂರ್ಧದ್ವಿಷಡಂತಕೇಷು ||೧೬೩||

ಚತುಃ ಷಡಷ್ಟದ್ವಿಚತುರ್ದ್ವಿಷಟ್ಕದಲೇಷು ಪದ್ಮೇಷು ಸಿತಾರುಣೇಷುಃ |
ಪಂಚಾತ್ಮಕೋऽಸೌ ಭಗವಾನ್ ಸದೈವ ಧ್ಯೇಯೋಽಹೃದಂತಾನ್ಯರುಣಾನಿ ತಾನಿ ||೧೬೪||

ತ್ರಿಕೋಣವಹ್ನೌ ಚ ಷಡಸ್ರವಾಯೌ ದ್ವಿಸ್ತ್ರಾವದತ್ರುರವಿವೃತ್ತ ಶಶಿತ್ರಿವಹ್ನೌ |
ವೃತ್ತೇ ವಿಧಾವಪಿ ವಿಚಿಂತ್ಯಮಿದಂ ದಶಾರ್ಧರೂಪಂ
ಸಿತಂ ತದಖಿಲಂ ಹೃದಯಾತ್ವರಸ್ಥಂ ||೧೬೫||

ಅ|| ೨ ಕಾಲುಗಳನ್ನು ತೊಡೆಗಳ ಕೆಳಗಡೆ ಇಟ್ಟುಕೊಂಡು ಋಜುಕಾಯನಾಗಿ ಕೂತುಕೊಳ್ಳುವುದು ಸ್ವಸ್ತಿಕಾಸನವು. ೨ ಕಾಲುಗಳನ್ನು ತೊಡೆಗಳ ಮೇಲುಗಡೆ ಇಟ್ಟುಕೊಂಡು ಕೂತುಕೊಳ್ಳುವುದು ಪದ್ಮಾಸನವು. ೧ ಕಾಲನ್ನು ತೊಡೆಯ ಮೇಲೆಯೂ ಇನ್ನೊಂದನ್ನು ಕೆಳಗೂ ಇಟ್ಟುಕೊಂಡು ಕೂತುಕೊಳ್ಳುವುದು ವೀರಾಸನವೆನಿಸಿಕೊಳ್ಳುತ್ತದೆ. ಹೀಗೆ (ಉತ್ತಮಗಳಾದ ೮ ಆಸನಗಳಲ್ಲಿಯೂ) ಮೂರು ಆಸನಗಳು ಉತ್ತಮೋತ್ತಮಗಳೆಂದು ಹೇಳಲ್ಪಟ್ಟಿವೆ. ಈ ಎಲ್ಲಾ ಆಸನಗಳನ್ನು `ಪೃಥ್ವಿ ತ್ವಯಾ ಧೃತಾ ಲೋಕಾಃ | ಇದು ಮೊದಲಾದ ಮಂತ್ರಗಳನ್ನು ಸ್ಮರಿಸಿಕೊಂಡೇ ಕಲ್ಪಿಸಿಕೊಳ್ಳಬೇಕು. ||೧೫೭|| ೧೬ ಮಾತ್ರೆಗಳಷ್ಟು ಕಾಲವು ರೇಚಕ ಪ್ರಾಣಾಯಾಮಕ್ಕೆ ಪೂರಕ ಪ್ರಾಣಾಯಾಮಕ್ಕೆ ೩೨ ಮಾತ್ರೆಗಳಷ್ಟು ಕಾಲವು, ಕುಂಭಕ ಪ್ರಾಣಾಯಾಮಕ್ಕೆ ೬೪ ಮಾತ್ರೆಗಳಷ್ಟು ಕಾಲವು. ಹೀಗೆ ಮೊದಲು

ಮೊದಲಿಗಿಂತ ೨, ೨ ಪಾಲು ರೇಚಕ ಪೂರಕ ಕುಂಭಕಗಳನ್ನೂ ಮಂತ್ರಗಳನ್ನೇ ಸ್ಮರಿಸುತ್ತಾ ಹೆಚ್ಚಿಸುತ್ತಾ ಬರಬೇಕು. ಹ್ರಸ್ವ ಅಕಾರಾದ್ಯುಚ್ಚಾರಣ ಕಾಲವು ಮಾತ್ರಾವೆನಿಸಿಕೊಳ್ಳುತ್ತದೆ. ॥೧೫॥ (ಪ್ರಥಮದಲ್ಲಿಯೇ ೧೬ ಮಾತ್ರಾ ಮೊದಲಾದ ಕ್ರಮದಿಂದ ಪ್ರಾಣಾಯಾಮ ಮಾಡಲು ಅಶಕ್ತನಾದರೆ) ಏಕಾಗ್ರ ಚಿತ್ತನಾಗಿ ಕ್ರಮದಿಂದಲೇ ಅಭ್ಯಾಸ ಮಾಡುತ್ತಾ ಮಾತ್ರಾವೃದ್ಧಿಯನ್ನು ಸಂಪಾದಿಸಬೇಕು. (ಅಂದರೆ ೨, ೩, ಮೊದಲಾದ ಕ್ರಮದಿಂದ ೧೬ ಮಾತ್ರಾ ಪರ್ಯಂತ ಅಭಿವೃದ್ಧಿಸಬೇಕು. ಅಭ್ಯಾಸವಾದ ಮೇಲೆ ಅದಕ್ಕಿಂತಲೂ ಅಧಿಕವಾಗಿ ಮಾತ್ರಾ ಕಾಲಗಳ ವೃದ್ಧಿಯನ್ನು ಸಂಪಾದಿಸಬೇಕು.) (೧೬ ಮಾತ್ರಾ ಪರ್ಯಂತ ಮಂತ್ರಗಳನ್ನು ಸ್ಮರಿಸುತ್ತಾ) ಬಲಭಾಗದ ನಾಸಾಪುಟದಿಂದ ಶ್ವಾಸವಾಯುವನ್ನು ಹೊರಗೆತಳ್ಳಿ, (೩೨ ಮಾತ್ರೋಚ್ಚಾರಣ ಕಾಲ ಪರ್ಯಂತ) ಎಡಭಾಗದ ನಾಸಾಪುಟದಿಂದ ಶ್ವಾಸವಾಯುವನ್ನು ಒಳಗೆ ಸೆಳೆದುಕೊಂಡು ॥೧೯॥ (೬೪ ಮಾತ್ರೋಚ್ಚಾರಣ ಕಾಲಪರ್ಯಂತ) ಮಧ್ಯದಲ್ಲಿರುವ ಸುಷುಮ್ನಾ ನಾಡಿನಲ್ಲಿ ಶ್ವಾಸವಾಯುವನ್ನು ನಿರೋಧ ಮಾಡಿಕೊಂಡು ಶ್ರೀ ವಿಷ್ಣುವನ್ನೂ ವಾಯುವನ್ನೂ ಕೂಡ ಭಕ್ತಿಪೂರ್ವಕವಾಗಿ ಸ್ಮರಿಸಬೇಕು. ಶರೀರದ ಮಧ್ಯದಲ್ಲಿ ವೃಷಣಕ್ಕೆ ಆಧಾರಭೂತವಾದ ಕೆಳಭಾಗದಿಂದ ಶಿರಸ್ಸಿನ ವರೇಗೆ ಮೋಟಾಗದೆ ದೀರ್ಘವಾಗಿರುವ ನಾಡಿಯು ಸುಷುಮ್ನಾ ಎನಿಸಿಕೊಳ್ಳುತ್ತದೆ. ಸುಷುಮ್ನಾ ಒಂದೇ ನಾಡಿಯೂ ವಜ್ರಿಕಾ, ಆರ್ಯಾ, ಅವಭಾಸಿನೀ (ಪ್ರಕಾಶಿನೀ), ವೈದ್ಯುತಾ, ಬ್ರಹ್ಮನಾಡೀ ಎಂದು ೫ ಭೇದವುಳ್ಳದ್ದು ॥೧೬೦॥ ೧೬೧॥ ಸುಷುಮ್ನಾ ಎಂಬ ಒಂದೇ ನಾಡಿಯ ಹಿಂಬದಿಗೆ ವಜ್ರಿಕಾ ಎಂದೂ, ಎಡಬದಿಗೆ ಆರ್ಯಾ ಎಂದೂ, ಇದಿರಿಗೆ ಅವಭಾಸಿನೀ (ಪ್ರಕಾಶಿನೀ) ಎಂದೂ, ಬಲಬದಿಗೆ ವೈದ್ಯುತಾ ಎಂದೂ ನಡುವಿಗೆ ಬ್ರಹ್ಮನಾಡೀ ಎಂದೂ ಹೆಸರು. ಏವಂಚ ಸುಷುಮ್ನಾ ನಾಡಿಯ ಹಿಂಬದಿ ಮೊದಲಾದ ೫ ಪ್ರದೇಶಗಳೇ ವಜ್ರಿಕಾ ಮೊದಲಾದ ೫ ಶಬ್ದಗಳಿಂದ ಹೇಳಲ್ಪಡುತ್ತವೆ. ಇಷ್ಟಪ್ರಾಪ್ತಿಯನ್ನು ಹೊಂದಲಿಚ್ಛಿಸುವ ಪುರುಷನು ವಜ್ರಿಕಾ ಮೊದಲಾದ ೫ ಪ್ರದೇಶಗಳಲ್ಲಿ ಕ್ರಮವಾಗಿ ಪ್ರದ್ಯುಮ್ನ ಮೊದಲಾದ ೫ ರೂಪವುಳ್ಳ ಕೇಶವನನ್ನು ಧ್ಯಾನಿಸಬೇಕು. ಹೇಗೆಂದರೆ ವಜ್ರಿಕಾ ಎಂಬ ಹಿಂಬದಿಯಲ್ಲಿ ಹಳದಿ ಬಣ್ಣವುಳ್ಳ ಪ್ರದ್ಯುಮ್ನನನ್ನೂ, ಆರ್ಯಾ ಎಂಬ ಎಡಬದಿಯಲ್ಲಿ ನೀಲರೂಪವುಳ್ಳ ಅನಿರುದ್ಧನನ್ನೂ, ಅವಭಾಸಿನೀ (ಪ್ರಕಾಶಿನೀ) ಎಂಬ ಇದಿರುಭಾಗದಲ್ಲಿ ಬಿಳಿವರ್ಣವುಳ್ಳ ವಾಸುದೇವನನ್ನೂ, ವೈದ್ಯುತಾ ಎಂಬ ಬಲಬದಿಯಲ್ಲಿ ಪಿಂಗಲ ವರ್ಣವುಳ್ಳ ಸಂಕರ್ಷಣನನ್ನೂ, ಬ್ರಹ್ಮನಾಡಿಯೆಂಬ ಮಧ್ಯಭಾಗದಲ್ಲಿ ಕೆಂಪು ಬಣ್ಣವುಳ್ಳ ಶ್ರೀ ನಾರಾಯಣನನ್ನೂ ಧ್ಯಾನಿಸಬೇಕು. ॥೧೬೨॥೧೬೩॥ ಗುದ ಪ್ರದೇಶದಲ್ಲಿ ೪ ದಲದಪದ್ಮ, ಹೊಕ್ಕಳಿನಲ್ಲಿ ೬ ದಲದ ಪದ್ಮ, ಹೃದಯದಲ್ಲಿ ೮ ದಲದ ಪದ್ಮ, ಕಿರಿ ನಾಲಗೆಯಲ್ಲಿ ೨ ದಲದ ಪದ್ಮ, ಹುಬ್ಬುಗಳ ನಡುವೆ ೪ ದಲದ ಪದ್ಮ, ಶಿರಸ್ಸಿನಿಂದ ೧೨ ಅಂಗುಲ ಎತ್ತರ ಪ್ರದೇಶದಲ್ಲಿ ೧೨ ದಲದ ಪದ್ಮ, ಹೀಗೆ ಬಿಳಿಪು ಕೆಂಪು ಆಗಿರುವ ೬ ಪದ್ಮಗಳಲ್ಲಿ, ಪಂಚರೂಪಿಯಾದ ಶ್ರೀ ಕೇಶವನನ್ನು ಸದಾ ಧ್ಯಾನಿಸಬೇಕು. ಈ ೬ ಪದ್ಮಗಳಲ್ಲಿ ಗುದಪ್ರದೇಶ ಹೊಕ್ಕುಳು ಹೃದಯ ಇವುಗಳಲ್ಲಿರತಕ್ಕ ೩ ಪದ್ಮಗಳು ಕೆಂಪಾಗಿವೆ. ಹೃದಯಕ್ಕಿಂತ ಮೇಲಿನ ೩ ಸ್ಥಾನಗಳಲ್ಲಿರತಕ್ಕ ೩ ಪದ್ಮಗಳು ಬಿಳಿಪೇ ಆಗಿವೆ. ॥೧೬೪॥ (ಆ ಪದ್ಮಗಳಲ್ಲಿರತಕ್ಕ ಮಂಡಲಗಳನ್ನೂ, ಮಂಡಲಗಳಲ್ಲಿರತಕ್ಕ ಧ್ಯೇಯರೂಪಗಳನ್ನೂ ಹೇಳುತ್ತಾರೆ.) ವೃಷಣ ಮೂಲ ಪ್ರದೇಶದಲ್ಲಿ ತ್ರಿಕೋಣ ವಹ್ನಿ ಮಂಡಲದಲ್ಲಿಯೂ ನಾಭಿಯಲ್ಲಿ ಷಟ್‌ಕೋಣ ವಾಯು ಮಂಡಲದಲ್ಲಿಯೂ ಹೃದಯಲ್ಲಿರುವ ದ್ವಾದಶ ಕೋಣ ಸೂರ್ಯಮಂಡಳದಲ್ಲಿ ಉರುಟಾದ ಚಂದ್ರಮಂಡಲ, ಅದರ ಮೇಲೆ ಇರುವ ತ್ರಿಕೋಣವಹ್ನಿಯಲ್ಲಿಯೂ, ಕಿರಿನಾಲಿಗೆ, ಭ್ರೂಮಧ್ಯ, ಶಿರಸ್ಸಿನಿಂದ ೧೨ ಅಂಗುಲ ಎತ್ತರ ಪ್ರದೇಶಗಳಲ್ಲಿರುವ ವರ್ತುಲವಾದ ಚಂದ್ರಮಂಡಲದಲ್ಲಿಯೂ, ಈ ಕ್ರಮದಿಂದ ೬ ಪದ್ಮಗಳಲ್ಲಿರತಕ್ಕ ೬ ಮಂಡಲಗಳಲ್ಲಿ ಪ್ರದ್ಯುಮ್ನ ಮೊದಲಾದ ೫ ರೂಪಗಳುಳ್ಳ ಪರಬ್ರಹ್ಮನನ್ನೂ ಧ್ಯಾನಿಸಬೇಕು. ಆ ೫ ರೂಪಗಳಲ್ಲಿ ಹೃದಯ ಪರ್ಯಂತ ಇರತಕ್ಕ ೩ ರೂಪಗಳು ಕೆಂಪಾಗಿಯೂ, ಹೃದಯದಿಂದ ಮೇಲಿನವುಗಳು ಬಿಳಿಪಾಗಿಯೂ ಇವೆ. ॥೧೬೫॥

ಅವ ॥ ಸುಷುಮ್ನಾ ನಾಡಿಯ ಸುತ್ತಲೂ ೪ ದಿಕ್ಕುಗಳಲ್ಲಿರತಕ್ಕ ಬೇರೆ ನಾಡಿಗಳನ್ನು ಹೇಳುತ್ತಾರೆ.

**ಮೂ ॥ ಇದಾ ಚ ಪಿಂಗಲಾ ಚೈವ ವಜ್ರಿಕಾ ಧಾರಿಣೀ ತಥಾ ।**
**ಸುಷುಮ್ನಾಯಾಶ್ಚತುರ್ದಿಕ್ಷು ವಜ್ರಿಕಾದ್ಯಾಸು ತತ್ರ ಚ ॥೧೬೬॥**

**ಚತುರ್ಮೂರ್ತಿಸ್ಸ ಭಗವಾನ್ ಹೃದಯೇ ಸಂವ್ಯವಸ್ಥಿತಃ ।**
**ದ್ವಾಸಪ್ತತಿಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ ॥೧೬೭॥**

ಬೃಹತೀಸಹಸ್ರಸ್ಪರ್ಶಾನಾಂ ಋಚಾಂ ವಾಚ್ಯೋಽತ್ರ ಕೇಶವಃ ।
ರೂಪಾಣಾಂ ಲಕ್ಷಣಂ ತೇಷಾಂ ರಹಸ್ಯತ್ವಾನ್ನ ಕಥ್ಯತೇ ॥೧೭೮॥

ವಿಷ್ಣುನಾ ಬ್ರಹ್ಮಣೇ ಪ್ರೋಕ್ತಂ ಗ್ರಂಥಸಂಕೋಚತಸ್ತಥಾ ।
ಖಂಡಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ ॥೧೭೯॥

ಅಪ್ರಯತ್ನಾತ್ಸಮಾಧಿಶ್ಚ ದರ್ಶನಂ ಚಿರಯಾ ತಯಾ ।
ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ ॥೧೭೦॥

ಪರಮಸ್ನೇಹಸಂಯುಕ್ತಯಥಾರ್ಥಜ್ಞಾನತೋ ಭವೇತ್ ।
ಸಾ ಭಕ್ತಿರಿತಿ ವಿಜ್ಞೇಯಾ ಸಾಧನಂ ಭೋಗಮೋಕ್ಷಯೋಃ ॥೧೭೧॥

ಮುಖ್ಯಮೇಷೈವ ನಾನ್ಯತ್ಸ್ಯಾತ್ಸರ್ವಂ ವ್ಯರ್ಥಂ ತಯಾ ವಿನಾ ।
ಸೈಕಾಽವ್ಯಭೀಷ್ಟಫಲದಾ ಮೋಕ್ಷೋ ದರ್ಶನಯುಕ್ತಯಾ ॥೧೭೨॥

ದರ್ಶನಂ ಚ ತಯಾ ಹೀನಂ ವ್ಯರ್ಥಮನ್ಯತ್ಕಿಮುಚ್ಯತೇ ।
ಯೋಗ್ಯಂ ತು ದರ್ಶನಂ ನೈವ ತಯಾ ಹೀನಂ ಭವಿಷ್ಯತಿ ॥೧೭೩॥

ಅ॥ ೫ ಭೇದಗಳುಳ್ಳ ಸುಷುಮ್ನಾನಾಡಿನ ಪಶ್ಚಿಮ ಮೊದಲಾದ ೪ ದಿಕ್ಕುಗಳಲ್ಲಿ ವಜ್ರಿಕಾ, ಇಡಾ, ಧಾರಿಣೀ, ಪಿಂಗಲಾ, ಎಂಬ ೪ ನಾಡಿಗಳು ಕ್ರಮದಿಂದ ಇರುತ್ತವೆ. ವಜ್ರಿಕಾ ಮೊದಲಾದ ೪ ನಾಡಿಗಳಲ್ಲಿಯೂ ಆ ಸುಷುಮ್ನಾನಾಡಿಯಲ್ಲಿಯೂ ಹೀಗೆ ೫ ನಾಡಿಗಳಲ್ಲಿಯೂ ಪದ್ಯುಮ್ನ ಅನಿರುದ್ಧ ವಾಸುದೇವ ಸಂಕರ್ಷಣ ಎಂಬ ೪ ಮೂರ್ತಿಗಳಿಂದ ಕೂಡಿಕೊಂಡ ಶ್ರೀ ನಾರಾಯಣನನ್ನು ಹೃದಯ ಪ್ರದೇಶದಲ್ಲಿರತಕ್ಕ ಐದು ನಾಡಿಗಳಲ್ಲಿ ಧ್ಯಾನಿಸಬೇಕು. ॥೧೭೬॥ ಪ್ರಧಾನಗಳಾದ ಸುಷುಮ್ನಾದಿ ನಾಡಿಗಳ ದೆಶೆಯಿಂದ ಬೇರೆಯಾದ ಪ್ರತಿಶಾಖಾನಾಡಿಗಳು ೭೨ ಸಹಸ್ರ ದೇಹದಲ್ಲಿರುತ್ತವೆ. ॥೧೭೭॥ ಬೃಹತೀಸಹಸ್ರ ಸ್ತೋತ್ರ ಸಂಬಂಧಿಗಳಾದ ಋಕ್ಕುಗಳಿಂದ ಪ್ರತಿಪಾದ್ಯನಾದ ಕೇಶವನನ್ನು ೭೨ ಸಹಸ್ರ ನಾಡಿಗಳಲ್ಲಿ ಧ್ಯಾನಿಸಬೇಕು. ಈ ೭೨ ಸಹಸ್ರ ನಾಡಿಗಳಿಗೆ ನಿಯಮಕಗಳಾದ ೭೨ ಸಹಸ್ರ ಭಗವದ್ರೂಪಗಳ @ ಲಕ್ಷಣಗಳು (ಉತ್ತಮಾಧಿಕಾರಿಗಳಲ್ಲದವರಿಗೆ ಅಧಿಕಾರವಿಲ್ಲದ ಕಾರಣ) ಅತಿಗೋಪ್ಯಗಳಾಗಿರುವುದರಿಂದ ಅವುಗಳನ್ನು ಹೇಳುವುದಿಲ್ಲ. ॥೧೭೮॥ (೭೨ ಸಹಸ್ರ ಭಗವದ್ರೂಪಗಳ ಲಕ್ಷಣಾದಿಗಳು) ಶ್ರೀವಿಷ್ಣುವಿನಿಂದ ಬ್ರಹ್ಮನಿಗೆ ಉಪದೇಶಿಸಲ್ಪಟ್ಟಿವೆ. ಈ ಗ್ರಂಥವು ಅತಿಸಂಕುಚಿತವಾದ ಕಾರಣ (ಉತ್ತಮಾಧಿಕಾರಿಗಳ ಉದ್ದಿಶ್ಯವೂ ಲಕ್ಷಣಗಳನ್ನು ಹೇಳಲಿಲ್ಲ. (ಸಚ್ಛಾಸ್ತ್ರಶ್ರವಣ ದರ್ಶನಾದಿಗಳಿಂದುಂಟಾದ ವಾಸನಾಮಯವಾದ ವಸ್ತುವನ್ನು ಮನಸ್ಸಿನಿಂದ ತಿಳಿದುಕೊಳ್ಳುವಿಕೆಯು ಸ್ಮೃತಿಯು) ಆ ಸ್ಮೃತಿಯು ಖಂಡಸ್ಮೃತಿ, ಅಖಂಡಸ್ಮೃತಿಯೆಂದು ೨ ವಿಧವು. ಆ ಅಖಂಡಸ್ಮೃತಿಯೂ ಧ್ಯಾನರೂಪವು ಸಮಾಧಿರೂಪವು ಎಂದು ೨ ವಿಧವು. ಅವುಗಳಲ್ಲಿ ಶ್ರೀಪರಮಾತ್ಮನ ಒಂದೊಂದು ಅವಯವಗಳ ಸ್ಮರಣೆಯು ಅಥವಾ ಕೆಲವು ಕಾಲ ಸ್ಮರಣೆ, ಕೆಲವು ಕಾಲ ಸ್ಮರಣೆಯಿಲ್ಲದಿರುವಿಕೆಯು ಧಾರಣಾ ಎನಿಸುತ್ತದೆ. ಸಮಸ್ತ ಅವಯವಗಳ ಸ್ಮರಣೆಯು ಅಥವಾ ನಿರಂತರ ಭಗವದ್ಗುಣಗಳ ಸ್ಮರಣೆಯು ಧ್ಯಾನವೆನಿಸುತ್ತದೆ. ॥೧೭೯॥ ಧ್ಯಾನಿಸಲು ಪ್ರಯತ್ನ ಮಾಡದಿದ್ದರೂ ನಿರಾಯಾಸವಾಗಿ ನಿರಂತರದಲ್ಲಿಯೂ ಭಗವಂತನ ಸರ್ವಾಂಗಸ್ಮರಣೆಯು ಸಮಾಧಿಯೆನಿಸುತ್ತದೆ. ಪ್ರಯತ್ನವಿಲ್ಲದೇನೇ ಬಹುಕಾಲದಿಂದ ಅನುವೃತ್ತವಾದ ಸಮಾಧಿಯಿಂದ ಶ್ರೀಹರಿಯ ಅಪರೋಕ್ಷಜ್ಞಾನವುಂಟಾಗುವುದು. (ಅಂದರೆ ಭಗವಂತನ ದರ್ಶನವಾಗುವುದು.) ಅಥವಾ

@ ವಿ॥ ೭೨ ಸಹಸ್ರನಾಡಿಗಳ ಮಧ್ಯದಲ್ಲಿ ಶರೀರದ ಬಲಬದಿಯಲ್ಲಿ ೩೬ ಸಹಸ್ರನಾಡಿಗಳು. ಎಡಬದಿಯಲ್ಲಿ ೩೬ ಸಹಸ್ರ ನಾಡಿಗಳು, ಬೃಹತೀ ಛಂದಸ್ಸಿನಲ್ಲಿ ೩೬ ಅಕ್ಷರಗಳು. ಬೃಹತೀ ಸಹಸ್ರ ಋಕ್ಕುಗಳಲ್ಲಿ ೩೬ ಸಹಸ್ರ ಸ್ವರಾಕ್ಷರಗಳು. ೩೬ ಸಹಸ್ರ ವ್ಯಂಜನಾಕ್ಷರಗಳು. ಏವಂಚ ೭೨ ಸಹಸ್ರ ಅಕ್ಷರಗಳು. ಪುರುಷರ ಆಯುಷ್ಯವು ೧೦೦ ಸಂವತ್ಸರವು. ಹಗಲು ರಾತ್ರಿಗಳು ಒಟ್ಟು ೭೨ ಸಸ್ರಗಳು. ಅವುಗಳಲ್ಲಿ ೩೬ ಸಹಸ್ರ ಹಗಲಿಗೆ ನಿಯಾಮಕಗಳಾದ ಸ್ವರ ಪ್ರತಿಪಾದ್ಯ ೩೬ ಸಹಸ್ರ ಪುರುಷ ರೂಪಗಳು. ಬಲಬದಿಯ ೩೬ ಸಹಸ್ರ ನಾಡಿಗಳಲ್ಲಿಯೂ ೩೬ ಸಹಸ್ರ ರಾತ್ರಿ ನಿಯಮಾಯಕ ವ್ಯಂಜನ ಪ್ರತಿಪಾದ್ಯ ೩೬ ಸಹಸ್ರ ಸ್ತ್ರೀ ರೂಪಗಳು. ಎಡಬದಿಯ ೩೬ ಸಹಸ್ರ ನಾಡಿಗಳಲ್ಲಿಯೂ, ನಿಯಾಮಕಗಳಾಗಿವೆ ಎಂದು ಧ್ಯಾನಿಸಬೇಕು. ಇವು ಐತರೇಯ ಭಾಷ್ಯದಲ್ಲಿ ವಿಶದವಾಗಿವೆ.

ಅವಿಚ್ಛಿನ್ನವಾದ ಶಾಸ್ತ್ರಾರ್ಥವಿಚಾರದಿಂದ ಭಗವದ್ದರ್ಶನವಾಗುವುದು. ||೧೭೦|| (ಭಗವದ್ದರ್ಶನಕ್ಕೆ ಧ್ಯಾನಾದಿಗಳು ಅಮುಖ್ಯ ಸಾಧನಗಳು. ಶ್ರೀ ಹರಿಭಕ್ತಿಯೇ ಮುಖ್ಯ ಸಾಧನವು. ಆದಕಾರಣ) ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢ ಸ್ನೇಹಯುಕ್ತವಾದ ಯಥಾರ್ಥಜ್ಞಾನದಿಂದಲೇ ಭಗವದ್ದರ್ಶನವಾಗುವುದು. ಅಂತಹ ಯಥಾರ್ಥಜ್ಞಾನವೇ ಭಕ್ತಿಯೆನಿಸುತ್ತದೆ. ಇಂತಹ ಭಕ್ತಿಯೇ ಮೋಕ್ಷಕ್ಕೂ ಮೋಕ್ಷದಲ್ಲಿರತಕ್ಕ ಆನಂದಾತಿಶಯಾನುಭವಕ್ಕೂ ಸಾಧನವು. ||೧೭೦|| ಎಲ್ಲಾ ಸಾಧನಗಳಲ್ಲಿಯೂ, ಭಕ್ತಿಯೇ ಮುಖ್ಯಸಾಧನವು. ಭಕ್ತಿಗಿಂತ ಬೇರೆಯೆಲ್ಲವೂ ಮುಖ್ಯ ಸಾಧನವಲ್ಲ. ಭಗವದ್ಭಕ್ತಿಯಿಲ್ಲವಾದರೆ ಕರ್ಮಾದಿಗಳೆಲ್ಲವೂ ನಿಷ್ಫಲವಾಗುವುದು. ಭಕ್ತಿಯೊಂದೇ ಸರ್ವಾಭೀಷ್ಟಫಲಗಳನ್ನು ಕೊಡಬಲ್ಲುದು. ಅಪರೋಕ್ಷ ಜ್ಞಾನ ಸಹಕೃತವಾದ ಭಕ್ತಿಯಿಂದಲೇ ಮೋಕ್ಷವಾಗುವುದು. ||೧೭೨|| ಭಕ್ತಿಯಿಲ್ಲದ ಅಪರೋಕ್ಷ ಜ್ಞಾನವೂ ಕೂಡ (ದ್ವೇಷಿಗಳಿಗೆ ಭಗವದವತಾರಗಳ ಅಪರೋಕ್ಷ ದರ್ಶನದಂತೆಯೇ) ವ್ಯರ್ಥವು ಆಗುವುದು. ಕರ್ಮಾದಿಗಳು ವ್ಯರ್ಥವೆಂದು ಏನು ಹೇಳಬೇಕು. ಯೋಗ್ಯವಾದ ಸಂಪೂರ್ಣ ಭಕ್ತಿಯಿಲ್ಲವಾದರೆ ಮುಕ್ತಿ ಸಾಧನವಾದ ಯೋಗ್ಯ ಭಗವತ್ಸಾಕ್ಷಾತ್ಕಾರವೂ ಆಗುವಂತೆಯೇ ಇಲ್ಲ. ||೧೭೩||

ಅವ || ತಾರತಮ್ಯದಿಂದ ಗುಣೋಪಸಂಹಾರ ಮಾಡುತ್ತಾ ಧ್ಯಾನಿಸುವ ಅಧಿಕಾರಿಗಳಿಗೆ ಶ್ರೀ ಪರಮಾತ್ಮನು ತಾರತಮ್ಯದಿಂದಲೇ ಮುಕ್ತಿಯ ಸುಖವನ್ನು ಕೊಡುತ್ತಾನೆನ್ನುತ್ತಾರೆ.

**ಮೂ|| ಆನಂದಚಿತ್ಸದಿತಿ ಪೂರ್ವಗುಣೈಃ ಸಮಸ್ತೈಃ**
**ಮರ್ತ್ಯಾದಿಭಿರ್ವಿಧಿಪರೈರ್ಭಗವಾನ್ ಕ್ರಮೇಣ |**
**ಧ್ಯಾತೋऽಧಿಕೈರಧಿಗುಣೋऽಧಿಕಮೇವ ಸೌಖ್ಯಂ**
**ಮುಕ್ತೌ ದದಾತಿ ಸತತಂ ಪರಮಸ್ವರೂಪಃ ||೧೭೪||**

**ನಿರ್ದೋಷಾಖಿಲಸಂಪೂರ್ಣಗುಣೇನ ಹರಿಣಾ ಸ್ವಯಂ**
**ಬ್ರಹ್ಮಣೇ ಕಥಿತಾತ್ತಂತ್ರಸಾರದುದ್ಧೃತ್ಯ ಸಾದರಂ ||೧೭೫||**

**ಆನಂದತೀರ್ಥಮುನಿನಾ ಕೃತೋ ಗ್ರಂಥೋऽಯಮಂಜಸಾ |**
**ಗ್ರಂಥೋऽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ |**
**ಕಿಮು ಜ್ಞಾನಾದನುಷ್ಠಾನಾದುಭಯಸ್ಮಾತ್ಪುನಃ ಕಿಮು ||೧೭೬||**

ಅ|| ತನ್ನ ಸ್ವರೂಪ ಭೂತ ಶರೀರವುಳ್ಳ ಶ್ರೀ ಪರಮಾತ್ಮನು ಮನುಷ್ಯರನ್ನಾರಂಭಿಸಿ ಚತುರ್ಮುಖ ಪರ್ಯಂತ ಎಲ್ಲಾ ಅಧಿಕಾರಿ ಜೀವರಿಂದಲೂ, ಆನಂದ, ಜ್ಞಾನ, ಸತ್ತ (ನಿರ್ದುಷ್ಟತ್ವ) ಆತ್ಮತ್ವ ಎಂಬ ಗುಣಗಳೇ ಮೊದಲಾದ ಅವರವರ ಯೋಗ್ಯತಾನುಸಾರ ಕ್ರಮದಿಂದ ಹೆಚ್ಚಾದ ಸ್ವಯೋಗ್ಯ ಬಹುಗುಣಗಳಿಂದ ಸರ್ವೋತ್ಕೃಷ್ಟಗಳಾದ ಜ್ಞಾನ ಆನಂದ ಮೊದಲಾದ ಅನಂತಾನಂತ ಗುಣಗಳುಳ್ಳವನೆಂದು ಧ್ಯಾನಿಸಲ್ಪಟ್ಟವನಾಗಿ, ಅವರವರ ಧ್ಯಾನಕ್ಕೆ ಅನುಗುಣವಾಗಿ ತಾರತಮ್ಯದಿಂದಲೇ ಶಾಶ್ವತವಾದ ಸುಖವನ್ನು ಮೋಕ್ಷದಲ್ಲಿ ತನ್ನ ಭಕ್ತರಿಗೆ ದಯಪಾಲಿಸುತ್ತಾನೆ. ||೧೭೪|| ದೋಷಲೇಶ ವಿದೂರನೂ, ಸರ್ವಗುಣ ಪರಿಪೂರ್ಣನೂ ಆದ ಶ್ರೀಹರಿಯಿಂದ ತಾನೇ ಚತುರ್ಮುಖ ಬ್ರಹ್ಮನಿಗೆ ಆದರದಿಂದ ಉಪದೇಶಿಸಲ್ಪಟ್ಟ ತಂತ್ರಸಾರ ಗ್ರಂಥದಿಂದ ವಿಶ್ವಾಸದಿಂದ ಕೆಲವು ಪ್ರಧಾನಾಂಶಗಳನ್ನು ಸಂಗ್ರಹಿಸಿ ||೧೭೫|| ಶ್ರೀ ಮದಾಚಾರ್ಯರಿಂದ ಪರಮಪವಿತ್ರವಾದ ಈ ಗ್ರಂಥವು ರಚಿಸಲ್ಪಟ್ಟಿತು. ಈ ಗ್ರಂಥವು ಅರ್ಥಾನು ಸಂಧಾನವಿಲ್ಲದೆ ಪಠನ ಮಾತ್ರದಿಂದಲೇ ಸರ್ವಾಭೀಷ್ಟಗಳ ಸಿದ್ಧಿಯನ್ನು ಕೊಡಲು ಸಮರ್ಥವು. ||೧೭೬|| ಹೀಗೆ ಇರಲು ಗ್ರಂಥಾರ್ಥ ಪರಿಜ್ಞಾನದಿಂದ ಸರ್ವಾಭೀಷ್ಟ ಸಿದ್ಧಿಯು ಆಗುತ್ತದೆಂದು ಏನು ಹೇಳಬೇಕು...? ಪುನಃ ಅದರಲ್ಲಿ ಹೇಳಿದ ಕರ್ಮಗಳನ್ನನುಷ್ಠಾನ ಮಾಡುವುದರಿಂದ ಸಕಲ ಇಷ್ಟಸಿದ್ಧಿಯೂ ಆಗುತ್ತದೆಯೆಂಬುವುದು ಸುತರಾಂಸಿದ್ಧ. ಜ್ಞಾನಪೂರ್ವಕವಾಗಿ ಕರ್ಮ ಮಾಡುವುದರಿಂದ ಎಲ್ಲಾ ಅಭೀಷ್ಟಗಳೂ ದೊರೆಯುತ್ತವೆ ಎಂದು ಹೇಳಬೇಕಾಗಿಯೇ ಇಲ್ಲವಷ್ಟೆ. ||೧೭೬||

ಅವ ॥ ಶ್ರೀ ಮದಾಚಾರ್ಯರು ಗ್ರಂಥವನ್ನು ಸಮಾಪಿಸಿ, ಭಗವಂತನ ಸ್ವರೂಪಜ್ಞಾನವು ಮೋಕ್ಷಾದಿ ಪುರುಷಾರ್ಥಗಳಿಗೆ ಸಾಧನವಾದಂತೆ ತನ್ನ ಸ್ವರೂಪಜ್ಞಾನವೂ ಅಶೇಷ ಪುರುಷಾರ್ಥಗಳಿಗೆ ಅಂತರಂಗ ಸಾಧನವೆಂದು ಬಳಿತ್ಥಾದಿ ಸೂಕ್ತಗಳಲ್ಲಿ ಹೇಳಲ್ಪಟ್ಟ ತನ್ನ ಮಹಿಮೆಯನ್ನು ಅಧಿಕಾರಿಗಳಿಗೆ ಪ್ರಕಟೀಕರಿಸುತ್ತಾ ತನ್ನ ಗ್ರಂಥವನ್ನು ಶ್ರೀ ನಾರಾಯಣನಲ್ಲಿ ಸಮರ್ಪಿಸುತ್ತಾರೆ.

ಮೂ॥ ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶನಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।

ವಾಯೋರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ
ಮದ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥೧೭೭॥

ಅಶೇಷದೋಷೋಜ್ಝಿತ ಪೂರ್ಣ ಸದ್ಗುಣಂ ಸದಾ ವಿಶೇಷಾಪಗತೋರುರೂಪಂ ।
ನಮಾಮಿ ನಾರಾಯಣಮ ಪ್ರತೀಪಂ ಸದಾ ಪ್ರಿಯೇಭ್ಯಃ ಪ್ರಿಯಮಾದರೇಣ ॥೧೭೮॥

ಇತಿ ಶ್ರೀ ಮದಾನಂದ ತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ತಂತ್ರಸಾರ ಸಂಗ್ರಹೇ ಚತುರ್ಥೋಽಧ್ಯಾಯಃ ।

ಅ ॥ ಯಾವ ವಾಯುದೇವರ ದಿವ್ಯರೂಪಗಳು `ಬಳಿತ್ಥಾ ಸೂಕ್ತ' ಮೊದಲಾದ ವೇದವಚನಗಳಲ್ಲಿ ಹೇಳಲ್ಪಟ್ಟಿವೆಯೋ, ಅಂತಹ ವಾಯುದೇವರ ಮೂಲರೂಪವು, ಪೂರ್ಣಬಲ ಸ್ವರೂಪವು ಜ್ಞಾನಪೂರ್ಣವು. ಜಗತ್ತಿನ ಪೋಷಣಾದಿಗಳನ್ನು ಮಾಡತಕ್ಕುದ್ದು. ಜೀವೋತ್ತಮವು, ಅವತಾರ ಮಾಡುವುದಕ್ಕಾಗಿಯೇ ಶ್ರೀ ಪರಮಾತ್ಮನಿಂದ ಪ್ರೇರಿತವಾಗಿ ೩ ರೂಪಗಳಿಂದ ಅವತಾರ ಮಾಡಿದ್ದು. ಆ ರೂಪಗಳಲ್ಲಿ ೧ನೇ ಹನುಮದ್ರೂಪವು ಶ್ರೀ ರಾಮದೇವರ ವಾರ್ತೆಯನ್ನು ಸೀತಾದೇವಿಗೂ ಸೀತಾದೇವಿಯ ವೃತ್ತಾಂತಗಳನ್ನು ಶ್ರೀ ರಾಮದೇವರಿಗೂ ಒಯಿದದ್ದು. ಶ್ರೀ ರಾಮನ ಚರಿತ್ರೆರೂಪಗಳಾದ ಮೂಲರಾಮಾಯಣಾದಿಗಳನ್ನು ಶಿಷ್ಯರಿಗೆ ಉಪದೇಶಿಸಿದ್ದು. ೨ನೇ ಭೀಮರೂಪವು ಕೌರವ ಸೇನೆಯನ್ನು ನಾಶಗೊಳಿಸಿದುದು, ಯಾವ ೩ನೇ ರೂಪವು ಶ್ರೀ ಹರಿಪ್ರತಿಪಾದಕ ಶಾಸ್ತ್ರವನ್ನು ನಿರ್ಮಿಸಿದುದರಿಂದ ಮಧ್ವ ಎಂದು ಹೆಸರುಳ್ಳದ್ದೋ ಅಂತಹ ೩ನೇ ರೂಪದಿಂದ ಶ್ರೀ ಪರಮಾತ್ಮನ ಪ್ರೀತಿಗಾಗಿ ತಂತ್ರಸಾರಾಖ್ಯ ಗ್ರಂಥವು ಮಾಡಲ್ಪಟ್ಟಿದೆ. (ಆದ ಕಾರಣ ಪರಮಾಪ್ತರು ಮಾಡಿರುವುದರಿಂದ ಈ ಗ್ರಂಥವನ್ನು ಸಕಲ ಸಜ್ಜನರೂ ಅತ್ಯಾದರಿಸಬೇಕು.) ॥೧೭೭॥
ಸರ್ವದೋಷವಿದೂರನೂ, ಸರ್ವಸದ್ಗುಣ ಭರಿತನೂ ಸರ್ವದಾ ಪರಸ್ಪರ ಉಚ್ಚನೀಚಭಾವವಿಲ್ಲದ ಅನಂತಾನಂತ ರೂಪಗಳುಳ್ಳವನೂ, ಅಥವಾ ಜ್ಞಾನ ಆನಂದ ಮೊದಲಾದ ಅಪರಿಮಿತ ವಿಶೇಷವುಳ್ಳ ಸರ್ವೋತ್ಕೃಷ್ಟ ಸ್ವರೂಪವುಳ್ಳವನೂ, ಅಸದೃಶನೂ, ಪ್ರೀತಿ ವಿಷಯಗಳಾದ ಸರ್ವವಸ್ತುಗಳಿಗಿಂತಲೂ ಸದಾ ಅತಿಪ್ರಿಯನಾದವನೂ, ಇಂತಹ ಶ್ರೀ ನಾರಾಯಣನನ್ನು ಅತ್ಯಾದರದಿಂದ ಸರ್ವದಾ ನಮಸ್ಕರಿಸುತ್ತಿದ್ದೇನೆ. ॥೧೭೮॥

ಅ॥ (1) ಶ್ರೀ ವಿಷ್ಣುವು ಚತುರ್ಮುಖನಿಗೆ ಉಪದೇಶಿಸಿದ ತಂತ್ರಸಾರ ಗ್ರಂಥದ ಸಾರವನ್ನು ತೆಗೆದು ತಂತ್ರಸಾರ ಸಂಗ್ರಹ ಎಂಬ ಗ್ರಂಥವನ್ನು ಶ್ರೀ ಮದಾಚಾರ್ಯರು ಮಾಡಿರುವರು.

(2) ಈ ಗ್ರಂಥವು ಅತಿಚಿಕ್ಕದಾದಾಗ್ಯೂ ವಿಷ್ಣುಭಕ್ತರಿಗೆ ಅತ್ಯುಪಯುಕ್ತಗಳಾದ ಸದಾಚಾರ ದೇವಪೂಜಾ ಮಂತ್ರ ಜಪಾನುಷ್ಠಾನ ಮೊದಲಾದ ವಿಷಯಗಳಿಂದೊಡಗೂಡಿಯದೆ.

(3) ಇದರಲ್ಲಿ ೪ ಅಧ್ಯಾಯಗಳಿವೆ. ಅವುಗಳಲ್ಲಿ ೧ನೇ ಅಧ್ಯಾಯದಲ್ಲಿ ಪ್ರಣವಮಹತ್ತ್ವ, ನಾರಾಯಣಾಷ್ಟಾಕ್ಷರ ದ್ವಾದಶಾಷ್ಟಾಕ್ಷರಾದಿ ಮಂತ್ರ, ಪೂಜಾಕ್ರಮ, ಹೋಮ ಭಗವನ್ಮಹಿಮೆ, ಮೊದಲಾದವುಗಳು ನಿರೂಪಿತಗಳಾಗಿವೆ.

೨ನೇ ಅಧ್ಯಾಯದಲ್ಲಿ ೧ನೇ ಅಧ್ಯಾಯದಲ್ಲಿ ಹೇಳಿದ ಮಂತ್ರ, ಜಪ, ಪೂಜಾ, ಹೋಮಾದಿಗಳಿಗೆ ಉಪಯುಕ್ತವಾದ ಇತಿ ಕರ್ತವ್ಯತಾ ವಿಶೇಷವು ರೂಪಿತವಾಗಿದೆ.

೩ನೇ ಅಧ್ಯಾಯದಲ್ಲಿ ಪ್ರತಿಮಾನಿರ್ಮಾಣವಿಧಿ ಪ್ರತಿಮಾಲಕ್ಷಣ, ದೇವಾಲಯ ನಿರ್ಮಾಣವಿಧಿ, ಪ್ರತಿಮಾ ಪ್ರತಿಷ್ಠಾವಿಧಿ, ಸಂಪ್ರೋಕ್ಷಣ ವಿಧಿ, ಇತ್ಯಾದಿಗಳು ವರ್ಣಿಸಲ್ಪಟ್ಟಿವೆ.

೪ನೇ ಅಧ್ಯಾಯದಲ್ಲಿ ಐಹಕಾಮುಷ್ಮಿಕ ಪುರುಷಾರ್ಥ ಪ್ರದಗಳಾದ ಭೂವರಾಹ ಮಂತ್ರ ಮೊದಲಾದ ವೈಷ್ಣವ ಮಂತ್ರಗಳೂ, ದುರ್ಗಾದ್ಯನ್ಯ ದೇವತಾ ಮಂತ್ರಗಳೂ, ತದುಪಯುಕ್ತ ಋಷ್ಯಾದಿಗಳೂ ಮಂತ್ರಗಳಿಗೆ ವಿಜಯಸ್ತಂಭನಾದಿಗಳನ್ನು ಮಾಡತಕ್ಕ ಸಾಮರ್ಥ್ಯವೂ, ಗ್ರಂಥದ ಮಹಿಮೆಯೂ ನಿರೂಪಿತವಾಗಿದೆ.

೫ ಅರ್ಥಾನುಸಂಧಾನವಿಲ್ಲದೆ ಈ ಗ್ರಂಥದ ಪಠನ ಮಾತ್ರದಿಂದಲೇ ಸರ್ವಾಭೀಷ್ಟಗಳೂ ಸಿದ್ಧಿಸುತ್ತವೆ. ಅರ್ಥಜ್ಞಾನ ಪೂರ್ವಕವಾಗಿ ಗ್ರಂಥವನ್ನು ಪಠನ ಮಾಡುವವರಿಗೆ ಸಮಸ್ತಾಭೀಷ್ಟಗಳೂ ಸಿದ್ಧಿಸುತ್ತವೆಂಬುವುದು ಸುತರಾಂಸಿದ್ಧ. ಜ್ಞಾನಪೂರ್ವಕಾನುಷ್ಠಾನದಿಂದ ಐಹಿಕಾಮುಷ್ಮಿಕ ಸರ್ವ ಪುರುಷಾರ್ಥಗಳೂ ಸಿದ್ಧಿಸುತ್ತವೆಂಬುವುದು ಬೇರೆ ಹೇಳಬೇಕಾಗಿಯೇ ಇಲ್ಲ.

(5) ಆದಕಾರಣ ಭಗವದ್ಭಕ್ತರೆಲ್ಲರೂ ಆದರದಿಂದ ಈ ಗ್ರಂಥದ ಶ್ರವಣಮನನಾದಿಗಳನ್ನು ಮಾಡಿ ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದುವ ಉದ್ದಿಶ್ಯವೇ ಸಾಕ್ಷಾತ್ ಶ್ರೀವಾಯು ದೇವರ ಅವತಾರಭೂತರಾದ ಶ್ರೀ ಸರ್ವಜ್ಞಾಚಾರ್ಯರು ಈ ಗ್ರಂಥವನ್ನು ರಚಿಸಿ ಅನುಗ್ರಹಿಸಿರುವರು. ||೧೭೮||

ಮಂತ್ರವರ್ಣ ಪದ್ಯೈರ್ವಾಚ್ಯಂ ಸರ್ವಪೂಜ್ಯಂ ಸುಖಪ್ರದಂ ।
ನರಾದಿಕಾಂತೋಪಾಸ್ಯಂ ಚ ವಂದೇ ಶ್ರೀಮಧ್ವವಲ್ಲಭಂ ॥

ಅಶೇಷ ಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।
ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥

ತಂತ್ರಿನಾರಾಯಣಾಖ್ಯೇನ ಭಾಷಾಯಾಂ ಸಾಧುತುಷ್ಟಯೇ ।
ರಚಿತಾ ಕೃಷ್ಣಪಾದಾಬ್ಜೇ ಸ್ವರ್ಪಿತಾ ಜಯತಾದ್ಭುವಿ ॥

॥ ಹರಿಃ ಓಂ ॥

॥ ಶ್ರೀರಸ್ತು ॥

॥ ಶ್ರೀ ಮಧ್ವನಾಥೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳಲ್ಲಿ ಕೊನೆಯದಾದ

# ಯತಿಪ್ರಣವಕಲ್ಪ

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ

ಉಡುಪಿ ಸಂಸ್ಕೃತ ಮಹಾಪಾಠಶಾಲಾ ಮತ್ತು
ಉಡುಪಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಚಾರ್ಯ

ವೇದಾಂತ ವಾಚಸ್ಪತಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

**ಕನ್ನಡ ಟೀಕಾ ಭಾಷಾಂತರ ಸಹಿತ**

॥ ಶ್ರೀರಸ್ತು ॥

# ಯತಿಪ್ರಣವಕಲ್ಪಃ

ನಮಸ್ತೇ ದೇವದೇವೇಶ ಪ್ರಪನ್ನಾರ್ತಿ ಹರಾವ್ಯಯ ।
ಪ್ರಪನ್ನಾನ್ಪಾಹಿ ನಃ ಕೃಷ್ಣ ನಿರ್ವಿಣ್ಣಾನ್ಘೋರ ಸಂಸೃತೇಃ ॥
ರಕ್ಷಿತಾಖಿಲ । ವಿಶ್ವಾಯ ಶಿಕ್ಷಿತಾಖಿಲರಕ್ಷಸೇ ।
ರುಗ್ಮಿಣೀಪತಯೇ ನಿತ್ಯಂ ಭಿಕ್ಷುಶ್ಲಾಘ್ಯಾಯ ತೇ ನಮಃ ॥
ಲಸತು ಶ್ರೀಮದಾನಂದ ತೀರ್ಥೇಂದುರ್ನೋ ಹೃದಂಬರೇ ।
ಯದ್ವಚಶ್ಚಂದ್ರಿಕಾ ಸ್ವಾಂತಸಂತಾಪಂ ವಿನಿಕೃಂತತಿ ॥
ಓಂ ನಮೋ ವಾದಿರಾಜಾಯ ದೀರ್ಘದಾರಿದ್ರ್ಯ ಘಾತಿನೇ ।
ರಾಜಭೋಗಪ್ರದಾತ್ರೇ ಚ ನಮೋಽಸ್ತು ಜಯದಾಯಿನೇ ॥
ಮನೋಜ್ಞಮೂರ್ತ್ಯೈಭಾರತ್ಯೈ ಮತಿಮತ್ಯೈ ಹರೇಃ ಪದೇ ।
ಕೃತರತ್ಯೈ ಸದೋನ್ನತ್ಯೈಮಹಾಭೂತ್ಯೈ ನಮೋ ನಮಃ ॥
ದಶಪ್ರಮತಿಸತ್ಕೃತೀರ್ವಿವೃತಿಭಿಃ ಸುಭಾಷಾಮಯ್ಯೈಃ
ಪ್ರಕಾಶಮುಪನೀತವಾನ್ ಹರಿಗುರುಪ್ರಸಾದೈಧಿತಃ ।
ಯತಿಪ್ರಣವ ಕಲ್ಪಕಂ ಪ್ರಗುಣತಂತ್ರಿ ನಾರಾಯಣಾಭಿದೋ
ವಿವೃಣುತೇಽಧುನಾ ಸುಗಮಹೃದ್ಯ ಭಾಷಾಗಿರಾ ॥
ಶ್ರೀಮದ್ಭನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ । ಹರಿಃ ಓಂ ॥

ಮೂ ॥ ಸಮಿಚ್ಚರ್ವಾಜ್ಯಕಾನ್ ಹುತ್ವಾ ಸಮ್ಯಕ್ ಪುರುಷಸೂಕ್ತತಃ ।
ಸರ್ವೇಷಾಮಭಯಂ ದತ್ವಾ ವಿರಕ್ತಃ ಪ್ರವ್ರಜೇದ್ಧರಿಂ ॥ ೧ ॥

ಅ ॥ ಶ್ರೀ ಹರಿಯನ್ನುದ್ದೇಶಿಸಿ ಪುರುಷ ಸೂಕ್ತಾದಿ ಮಂತ್ರಗಳಿಂದ ಚೆನ್ನಾಗಿ ಶಾಸ್ತ್ರೋಕ್ತ ಪ್ರಕಾರ ಸಮಿಧೆ, ಚರು, ಆಜ್ಯಗಳನ್ನು ಹೋಮಿಸಿ, ಸರ್ವರಿಗೂ ಅಭಯವನ್ನು ಕೊಟ್ಟು ವೈರಾಗ್ಯವನ್ನು ಹೊಂದಿದವನಾಗಿ ಶ್ರೀಹರಿಯನ್ನು (ಮೋಕ್ಷವನ್ನು) ಹೊಂದುವುದಕ್ಕಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು.

ವಿರಕ್ತಃ (1) ಸ್ರಕ್ ಚಂದನಾದಿಗಳು ಐಹಿಕ ವಿಷಯಗಳು, ಸ್ವರ್ಗಾದಿ ಸುಖಸಾಧನಗಳು ಪಾರಲೌಕಿಕ ವಿಷಯಗಳು. ಈ ಎರಡು ವಿಧ ವಿಷಯಗಳಲ್ಲಿಯೂ ಕೊನೆಗೆ ಕಡುಕು ಕಾಣುವುದರಿಂದ ಅಭಿಲಾಷೆಯನ್ನು ಬಿಟ್ಟು ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವಿಕೆ, ಅಂದರೆ ಇವುಗಳು ನನ್ನ ಅಧೀನದಲ್ಲಿರುವವುಗಳು. ನಾನು ಇವುಗಳ ಅಧೀನನಾಗಲಾರೆನು, ಎಂಬೀ ಭಾವನೆಯು ವೈರಾಗ್ಯವೆನಿಸುವುದು. (2) ಮುಕ್ತಿಗೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ಸಾಧನಗಳು ವೈರಾಗ್ಯಾದಿಗಳು. ಬಹು ವಿಧ ಸಾಂಸಾರಿಕ ದುಃಖಗಳನ್ನು ನೋಡಿಯೂ, ಸಜ್ಜನರ ಸಹವಾಸದಿಂದಲೂ, ಐಹಿಕ ಆಮುಷ್ಮಿಕ ಫಲಭೋಗಗಳಲ್ಲಿಯೂ, ನಿತ್ಯಾನಿತ್ಯ ವಸ್ತು ವಿವೇಕಾದಿಗಳಿಂದ ವಿಷಯಗಳಲ್ಲಿಯೂ ವೈರಾಗ್ಯವು ಹುಟ್ಟುವುದು. (4) ಅತಏವ" ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್" ಎಂಬ

ಶ್ರುತಿಯಲ್ಲಿ ಕರ್ಮಾರ್ಜಿತಗಳಾದ ಲೋಕಗಳನ್ನು ಪರೀಕ್ಷಿಸಿ ವೈರಾಗ್ಯವನ್ನು ಹೊಂದಬೇಕೆಂದು ಹೇಳಿದೆ (5) "ಅರಾಗಾದ್ವಿಹಿತಾತ್ಯಾಗಾದಿತ್ಯೇತೈರೇವ ಸಂಯುತೈಃ। ಅಪರೋಕ್ಷದರ್ಶನಂ ವಿಷ್ಣೋರ್ಜಾಯತೇ ನಾನ್ಯಥಾ ಕ್ವಚಿತ್" ॥ ವೈರಾಗ್ಯ, ಶಾಸ್ತ್ರೋಕ್ತಪ್ರಕಾರ ಕರ್ಮಗಳನ್ನು ಆಚರಿಸುವುದು, ಇತ್ಯಾದಿಗಳಿಂದ ಭಗವಂತನ ಅಪರೋಕ್ಷ ಜ್ಞಾನವುಂಟಾಗುತ್ತದೆ, ಎಂದು ಗೀತಾತಾತ್ಪರ್ಯದಲ್ಲಿ ಹೇಳಿದಂತೆ ವೈರಾಗ್ಯವು ಮೋಕ್ಷಸಾಧನವು (6) ಆಬ್ರಹ್ಮಸ್ತಂಬಪರ್ಯಂತಮಸಾರಂ ಚಾಪ್ಯನಿತ್ಯಕಂ। ವಿಜ್ಞಾಯ ಜಾತವೈರಾಗ್ಯಃ ಎಂದು ಚತುರ್ಮುಖ ಬ್ರಹ್ಮನನ್ನಾರಂಭಿಸಿ ತೃಣಪರ್ಯಂತ ಸರ್ವವಸ್ತುಗಳೂ ನಿಸ್ಸಾರವು ಅನಿತ್ಯವು ಎಂದು ತಿಳಿದು ವಿರಕ್ತಿಯನ್ನು ಹೊಂದಿ ಮುಕ್ತನಾಗುತ್ತಾನೆ. (7) "ಯಾವದ್ರಾಗವಿನಾಶಃಸ್ಯಾದ್ವಿರಕ್ತೋ ಭಕ್ತಿಸಂಯುತಃ । ಸರ್ವದೈವಾಪ್ರಮತ್ತಶ್ಚ ಪಶ್ಯೇದೇವ ಹರಿಂ ಪರಂ॥" ಯಾವಾಗ ವಿಷಯಗಳಲ್ಲಿ ಅನುರಾಗವು ವಿನಾಶವಾಗುವುದೋ, ಆಗ ವಿರಕ್ತವಾಗಿ ಭಗವಂತನಲ್ಲಿ ಭಕ್ತಿಯುಕ್ತನಾಗಿ ಶ್ರೀಹರಿಯನ್ನು ನಿಶ್ಚಯವಾಗಿಯೂ ಪ್ರತ್ಯಕ್ಷೀಕರಿಸುವನು, ಎಂದು ಛಾಂದೋಗ್ಯ ಭಾಷ್ಯ (8) "ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು" ॥ ಎಂದು ಗೀತೆಯಲ್ಲಿಯೂ ವೈರಾಗ್ಯಾದಿಗಳು ಮೋಕ್ಷಸಾಧನಗಳೆಂದು ಹೇಳಿದೆ (9) ಭಾಗವತದಲ್ಲಿ ಎಲ್ಲೆಡೆ ವೈರಾಗ್ಯವು ಮೋಕ್ಷಸಾಧನವೆಂದು ನಿರೂಪಿಸಿದೆ (10) "ಅಸಜ್ಜನೈಶ್ಚ ಸಂವಾಸೋ ನ ಕರ್ತವ್ಯಃ ಕಥಂಚನ। ಸಜ್ಜನೈಃ ಸ ತು ಮುಕ್ತಿದ"॥ ಸರ್ವಥಾ ದುರ್ಜನರ ಸಹವಾಸ ಮಾಡಬಾರದು. ಸಜ್ಜನರ ಸಹವಾಸವನ್ನೇ ಮಾಡಬೇಕು. ಆದರಿಂದ ವಿರಕ್ತನಾಗಿ ಮುಕ್ತಿಯನ್ನು ಹೊಂದುವನೆಂದು ೧೧ನೇ ಸ್ಕಂಧದ ಭಾಗವತ ತಾತ್ಪರ್ಯದಲ್ಲಿ ಹೇಳಿದೆ. (11) ಏವಂಚ ಮುಖ್ಯತಃ ಭಗವತ್ಪ್ರಸಾದವೇ ಮೋಕ್ಷಕ್ಕೆ ಸಾಧನವು. ಆ ಪ್ರಸಾದಕ್ಕೆ ವಿಷಯವೈರಾಗ್ಯ, ಭಗವದ್ಭಕ್ತಿ, ಭಗವದುಪಾಸನಾ, ಭಗವತ್ಸಾಕ್ಷಾತ್ಕಾರ, ಹೀಗೆ ೪ ಸಾಧನಗಳು. ಅವುಗಳಲ್ಲಿ ಆದಿಯಲ್ಲಿ ವೈರಾಗ್ಯವನ್ನು ಸಂಪಾದಿಸಿಕೊಂಡು ಅದರಿಂದ ಭಕ್ತಿದಾರ್ಢ್ಯ, ಅವುಗಳಿಂದುಪಾಸನಾ, ಅದರಿಂದ ಸಂತುಷ್ಟನಾದ ಶ್ರೀ ಪರಮಾತ್ಮನು ತನ್ನನ್ನು ತೋರಿಸುತ್ತಾನೆ. ಆದಕಾರಣ ವೈರಾಗ್ಯವು ಮುಕ್ತಿಗೆ ಸಾಧನವು. ಈ ಅಭಿಪ್ರಾಯದಿಂದಲೇ ವಿರಕ್ತಃ ಪ್ರವ್ರಜೇದ್ಬುಧಃ ಎಂದು ವೈರಾಗ್ಯವನ್ನು ಹೊಂದಿ ಸನ್ಯಾಸಾಶ್ರಮವನ್ನು ಹೊಂದಿ ಶ್ರೀಹರಿಯ ಪ್ರಸಾದದಿಂದ ಮುಕ್ತನಾಗುವನು ಎಂದು ಶ್ರೀಮದಾಚಾರ್ಯರು ಹೇಳಿರುವರು (2) ಪ್ರವ್ರಜೇದ್ಬುಧಃ=ಸನ್ಯಾಸಾಶ್ರಮವನ್ನು ಹೊಂದುವಕ್ರಮವು ಹೇಗೆಂದರೆ= (1) ಜೀವಶ್ರಾದ್ಧಂ ತಥಾ ಕ್ಷೌರಂ ಶಾಕಲಂ ಹೋಮಜಾಗರಂ ಕೃತ್ವಾ ಪರೇದ್ಯುಃ ಪುಂಸೂಕ್ತವಿರಜಾಖ್ಯಸಹೋಮಕೇ। ಷಟ್ಕೃತ್ವಾ ಸನ್ನ್ಯಸೇದ್ಬ್ರಹ್ಮಚಾರ್ಯಥವಾ ಗೃಹೀ॥ ಎಂದು ಪಂಚರಾತ್ರಾಗಮದಲ್ಲಿ ಹೇಳಿದ ಪ್ರಕಾರ ಬ್ರಹ್ಮಚಾರಿಯು ಅಥವಾ ಗೃಹಾಸ್ಥಾಶ್ರಮಿಯು ಜೀವ ಶ್ರಾದ್ಧ, ವಪನಕರ್ಮ ಶಾಕಲಹೋಮಾದಿಗಳನ್ನು ಮಾಡಿ ಮರುದಿವಸ ಪುರುಷ ಸೂಕ್ತ ಹೋಮ, ವಿರಜಾ ಹೋಮಗಳನ್ನು ಮಾಡಿ ಸನ್ಯಾಸಾಶ್ರಮವನ್ನು ಹೊಂದಬೇಕು ಎಂದು ಹೇಳಿದೆ. (2) ಅಧಿಮಾಸೇ ಶೂನ್ಯ ಮಾಸೇ ಚಾತುರ್ಮಾಸ್ಯವ್ರತೇ ತಥಾ। ಅಸಧ್ಯಾಯತಿಥೌ ದಗ್ಧೇಯೋಗೇ ವಿಪ್ರೋ ನ ಸಂನ್ಯಸೇತ್।ದೋಷಾನೇತಾನ್ವಿಸೃಜ್ಯಾಸ್ಯಾನ್ ಕೇಂದ್ರೇ ಶುಕ್ರೇ ಗುರೌ ಸ್ಥಿರೇ।ಸುಮುಹೂರ್ತೇ ಸ್ಥಿರೇ ಲಗ್ನೇಕುರ್ಯಾತ್ಪಟ್ಟಾಭಿಷೇಚನಂ॥ ಎಂದು ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಅಧಿಕಮಾಸ, ಶೂನ್ಯ ಮಾಸ, ಚಾತುರ್ಮಾಸ್ಯ ಕಾಲ, ಅನಧ್ಯಾಯ ತಿಥಿ, ದಗ್ಧಯೋಗ ಇತ್ಯಾದಿಗಳಲ್ಲಿ ಸನ್ಯಾಸಾಶ್ರಮವನ್ನು ಕೊಡಕೂಡದು, ಸ್ವೀಕರಿಸಕೂಡದು. ಆದ ಕಾರಣ ಇಂತಹ ದೋಷಗಳನ್ನು ಬಿಟ್ಟು, ಶುಕ್ರಾಚಾರ್ಯರು ಬೃಹಸ್ಪತ್ಯಾಚಾರ್ಯರು ಕೇಂದ್ರದಲ್ಲಿರುವ ಸುಮೂಹೂರ್ತದಲ್ಲಿ ಸ್ಥಿರವಾದ ಲಗ್ನದಲ್ಲಿ ಗುರುಗಳು ಪಟ್ಟಾಭಿಷೇಕವನ್ನು ಮಾಡಬೇಕು. (3) ಇದೇ ಅಭಿಪ್ರಾಯವನ್ನು ಶ್ರೀಮದಾಚಾರ್ಯರು ತಂತ್ರಸಾರದಲ್ಲಿ ಹೇಳಿರುವರು. ಪೂರ್ವೋಕ್ತವಿಧಿನಾಽಭ್ಯರ್ಚ್ಯ ಪ್ರತಿಮಾಂ ಶಿಷ್ಯಮೇವ ವಾ। ಸ್ನಾಪಯೇತ್। ಪ್ರತಿಮಾಯಾಂ ಸನ್ನಿಧಿಕೃಚ್ಛಿಷ್ಯೇ ಮಾಹಾತ್ಮ್ಯಕೃದ್ಭವೇತ್। ಕಲಶಃ ಕೀರ್ತಿಮಾಯುಶ್ಚ ಪ್ರಜ್ಞಾಂ ಮೇಧಾಂ ಶ್ರಿಯಂ ಭಗಂ। ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂಚ ಸಾಧಯೇತ್॥ ಗುರುಗಳು ಕಲಶಗಳನ್ನು ಪ್ರತಿಷ್ಠಾಪಿಸಿ ಶುದ್ಧೋದಕದಿಂದ ತುಂಬಿಸಿ ತುಲಸೀದಲವನ್ನು ಇಟ್ಟು ವಿಧ್ಯುಕ್ತ ಪ್ರಕಾರ ಚೆನ್ನಾಗಿ ಪೂಜಿಸಿ ಅಜಾದಿಶತಕಲಾಮೂರ್ತಿಗಳಿಂದ ಸಹಿತವಾದ ಮೂಲಮೂರ್ತಿಯನ್ನು ಆವಾಹನ ಮಾಡಿ ಧೂಪಾದಿ ಪೂಜೆಯನ್ನು ಮಾಡಿ ಆ ಕಲಶಗಳಿಂದ ಶಿಷ್ಯನಿಗೆ ಪಟ್ಟಾಭಿಷೇಕ ಮಾಡಬೇಕು. ಪ್ರತಿಮೆಯಲ್ಲಿ ಸನ್ನಿಧಾನ ಬರುವಂತೆ ಮಾಡತಕ್ಕ ಗುರುಗಳು ಶಿಷ್ಯನಿಗೆ ಮಾಹಾತ್ಮ್ಯವನ್ನು (ವರ್ಚೋವಿಶೇಷವನ್ನು) ಉಂಟು ಮಾಡುವರು. ಪಟ್ಟಾಭಿಷೇಕ ಕಲಶವು ಶಾಸ್ತ್ರೋಕ್ತ ಪ್ರಕಾರ ಪೂಜಿಸಲ್ಪಟ್ಟರೆ ಕೀರ್ತಿ. ದೀರ್ಘಾಯುಷ್ಯ, ಬುದ್ಧಿಶಕ್ತಿ, ಧಾರಣಾಶಕ್ತಿ, ಶರೀರಕಾಂತಿ, ಐಶ್ವರ್ಯಾದಿಷಡ್ಗುಣಗಳು, ಯೋಗ್ಯತಾಭಿವ್ಯಕ್ತಿ, ಪಾಪಹಾನಿ. ಪುಣ್ಯಾಭಿವೃದ್ಧಿ, ಇವುಗಳನ್ನು ಹೊಂದಿಸಿಕೊಡುವುದು (೫) ಕಲಶವು ಎಂತಹುದಾಗಬೇಕೆಂದರೆ- ಸೌವರ್ಣಂ ಕಲಶಂ ರಮ್ಯಂ ರೌಪ್ಯಂ ತಾಮ್ರಮಥಾಪಿ ವಾ । ನಿರ್ದೋಷಂ ಮೃಣ್ಮಯಂ ವಾಪಿ ಚಂದನೇನ ವಿಲೇಪಿತಂ। ಷಡಂಗುಲೋನ್ನತಾಃ ಕಾರ್ಯಾ। ಎಂಬ

ಪ್ರಮಾಣವಿಂದ ಸುವರ್ಣ, ಬೆಳ್ಳಿ, ತಾಮ್ರ, ಅಥವಾ ಮೃಣ್ಮಯ ಕಲಶಗಳನ್ನು ಚಂದನದಿಂದ ಲೇಪಿಸಿ, ಪೂಜಿಸಿ ಅವುಗಳಿಂದ ಅಭಿಷೇಕ ಮಾಡಬೇಕು (5) ಏತಕ್ಕೆ ಪಟ್ಟಾಭಿಷೇಕ ಮಾಡುವುದೆಂದರೆ ಪರಮಹಂಸಾಖ್ಯ ಪಾರಿವ್ರಾಜ್ಯಪದಾಧಿರೂಢರಾದ ಸಂಸ್ಥಾನಯತಿಗಳಿಗೆ ಇತರ ಸಂನ್ಯಾಸಿಗಳಿಗಿಂತ ಮಹಾಮಾಹಾತ್ಮ್ಯೆಯನ್ನು ತೋರ್ಪಡಿಸುವುದಕ್ಕಾಗಿ ಪಟ್ಟಾಭಿಷೇಕ ಮಾಡುವುದು. ಆದುದರಿಂದಲೇ ಹಂಸಾದಿಸಂನ್ಯಾಸಿಗಳಿಗಿಂತ ಈ ಯತಿವರ್ಯರು ಉತ್ಕೃಷ್ಟರೆಂದು ಅನ್ನಿಸಿಕೊಳ್ಳುವರು. (6) ಈ ಪಾರಿವ್ರಾಜ್ಯಪಾರಮಹಂಸ್ಯಸನ್ಯಾಶ್ರಮವನ್ನು ಕೊಡಲು ಉಪಯುಕ್ತಗಳಾದ ಧರ್ಮಗಳು ಯಾವುವು? ಏನು ಹೇಳುತ್ತಾ ಕೊಡಬೇಕು ಎಂದರೆ- ಆಬಾಲ್ಯಾದ್ಧರಿಭಕ್ತಿಮಾನ್ ಪಟುವಟೋಽನೂಚಾನಭಾವಾಸ್ಪದಃ ಆಬ್ರಹ್ಮಾಖಿಲವಸ್ತುರಾಗರಾಹಿತಃ ವಿಷ್ಣ್ವೇಕತಾನಸ್ಸದಾ। ಕಾಮಾದೀನ್ ಪರಿಹೃತ್ಯ ತಾನ್ ಶಮಮುಖಾನ್ ಧರ್ಮೋತ್ತಮಾನ್ ಜೋದಿತಾನ್ ನಿತ್ಯಂ ವೃದ್ಧಿಪರಾನ್ ಕ್ರಮೇಣ ಹಿ ಚರನ್ ಬ್ರಹ್ಮಾಪರೋಕ್ಷಂ ಭಜೇಃ ||೧|| ತತ್ಕ್ರತೇಽದ್ಯವಯಮೇವ ಪರಸ್ಯ ಬ್ರಹ್ಮಣೋ ಮನುವರಂ ಹ್ಯುಪದೇಷ್ಟುಂ । ಮಾನಸೀಂ ಕೃತಿಮವಾಪ್ಯ ದೃಢಾಶಾಃ ತತ್ವಮೇತ್ಯ ಕುರು ತೀರ್ಥತಟಾಂತೇ ||೨|| ಪೈತೃಕಾದಿಋಣಮೋಚನ ಕರ್ಮ ಬ್ರಾಹ್ಮಣೋಕ್ತವಿಧಿನೈವ ಸಮಾಪ್ಯ । ತೇನ ಬಂಧುಸಹಜಾಂ ವಿಗಣಯ್ಯ ಪ್ರೀತಿಮಾಪ್ನುಮಮೃತಂ ಪುನರೇಹಿ ||೩|| ಇಮಾಂ ಸಂಕಲ್ಪದೀಕ್ಷಾಂ ನೋ ಫಲಾಕ್ಷತಮಿಷೇಣ ವಾ । ತ್ವಯಿ ಸಂಘಟಯಾಮೋಽದ್ಯ ಗೃಹಾಣ ಕರಸಂಪುಟೇ ||೪|| ತತಃ ಪಾರಮಹಂಸ್ಯಾಖ್ಯಾಂ ತುರೀಯಾ ಶ್ರಮಸಂಪದಂ । ತ್ವಯಿ ಸಂಯೋಜಯಾಮಶ್ಚ ತೇನ ಶತ್ವದ್ಧೃತೀ ಭವ ||೫|| ತೇನ ಪ್ರಸನ್ನೋ ಭಗವಾನ್ ದರ್ಶಯೇಚ್ಚ ಸ್ವಕಾಂ ತನುಂ || ತತಃ ಸ್ವರೂಪಪ್ರಾಕಾಶ್ಯಂ ದದ್ಯಾಚ್ಛಾಶ್ವತಿಕಂ ಹರಿಃ ||೬|| ಇದಂ ಫಲಂ ಮಯಾ ತುಭ್ಯಂ ತುರೀಯಾಶ್ರಮಸಿದ್ಧಯೇ || ತೇನ ತೇ ಜನ್ಮಸಾಫಲ್ಯಂ ಹರಿಭಕ್ತಿರ್ಭವೇತ್ಸದಾ ||೭|| ಮಂಗಲಂ ಭಗವಾನ್ವಿಷ್ಣುಃ ಮಂಗಲಂ ಮಧುಸೂದನಃ । ಮಂಗಲಂ ದೇವಕೀಪುತ್ರೋಮಂಗಲಂ ಗರುಡಧ್ವಜಃ ||೮|| ಎಂದು ಹೇಳಿ ಫಲಮಂತ್ರಾಕ್ಷತೆಯನ್ನು ಈಯುವುದು.

ಉಪೋದ್ಘಾತವು ಸಮಾಪ್ತವಾಯಿತು (1) ೧ನೇ ದಿನದಲ್ಲಿ ಮಾತಾಪಿತೃಗಳಿಂದ ಅನುಜ್ಞೆಯನ್ನು ಪಡೆದು ಹಿಂದೆ ಹೇಳಿದ ಪ್ರಕಾರ ಗುರುಗಳಿಂದ ಫಲಮಂತ್ರಾಕ್ಷತೆಗಳನ್ನು ಹೊಂದಿದ ಮೇಲೆ ಸ್ನಾನ ನಿತ್ಯ ಕರ್ಮಾದಿಗಳನ್ನು ಮಾಡಿ ಗುರುದೇವತಾದಿಗಳನ್ನು ಪ್ರಾರ್ಥಿಸುತ್ತಾ ಗಣಯಾಗ, ಪಂಚಗವ್ಯ ಹೋಮ, ಪವಮಾನಹೋಮ, ಕೂಷ್ಮಾಂಡ, ತಿಲ ಹೋಮಗಳೆಂಬ ಪ್ರಾಯಶ್ಚಿತ್ತ ಹೋಮಗಳನ್ನು ಮಾಡಿಸಿದ ಮೇಲೆ ಯಥಾ ಶಕ್ತಿ ದಾನಾದಿಗಳನ್ನು ಮಾಡಿ, ಶಕ್ತ್ಯನುಸಾರ ಬ್ರಾಹ್ಮಣರನ್ನು ಭೋಜಿಸಬೇಕು.

(2) ೨ನೇ ದಿವಸದಲ್ಲಿ ಸ್ನಾನಾದಿಗಳನ್ನು ಮಾಡಿದ ಮೇಲೆ ಶಾಸ್ತ್ರೋಕ್ತಪ್ರಕಾರ ಪಾರಮಹಂಸ್ಯಾಖ್ಯಚತುರ್ಥಾಶ್ರಮ ಸ್ವೀಕಾರಕ್ಕೆ ಅಂಗ ಭೂತವಾದ 'ಕೃತ್ವಾ ಶ್ರಾದ್ಧಾನಿ ಸರ್ವಾಣಿ ಪಿತ್ರಾದಿಭ್ಯೋಽಷ್ಟಕಂ ಪೃಥಕ್ । ವಾಪಯಿತ್ವಾ ಚ ಕೇಶಾದೀನ್ ಮಾರ್ಜಯೇನ್ಮಾತೃಕಾ ಇಮಾಃ।" ಎಂದು ಬೋಧಾಯನಾಚಾರ್ಯರು ಹೇಳಿದ ಪ್ರಕಾರ ನವಶ್ರಾದ್ಧ, ಷೋಡಶಶ್ರಾದ್ಧ, ಮೊದಲಾದುವುಗಳನ್ನು ಶಿಷ್ಟಾಚಾರ ಪ್ರಕಾರ ಜೀವ ಶ್ರಾದ್ಧವನ್ನೂ ಮಾಡಬೇಕು. ಆ ಮೇಲೆ ತಿರುಗಿ ಸ್ನಾನಮಾಡಿ ಸರ್ವಪ್ರಾಯಶ್ಚಿತ್ತರೂಪ ಗೋದಾನ, ದಶದಾನಾದಿಗಳನ್ನು ಮಾಡಬೇಕು. 'ಕೃಚ್ಛ್ರಾಂಸ್ತು ಚತುರಃ ಕೃತ್ವಾ ಪಾವನಾರ್ಥಮನಾಶ್ರಮೀ || ಆಶ್ರಮೀ ಚೇತ್ತಪ್ತಕೃಚ್ಛ್ರಂ ತೇನಾಸೌ ಯೋಗ್ಯತಾಂ ವ್ರಜೇತ್|| ಎಂದು ಕಾತ್ಯಾಯನರು ಹೇಳಿದಂತೆ ಸನ್ಯಾಸಾಶ್ರಮ ಸ್ವೀಕಾರಕ್ಕೆ ಯೋಗ್ಯತೆಯು ಸಿದ್ಧಿಯಾಗುವುದಕ್ಕಾಗಿ ೪ ಕೃಚ್ಛ್ರಾಚರಣೆ, ಹಿರಣ್ಯಾದಿ ದಾನಗಳನ್ನು ಮಾಡುವುದು. 'ತತಃ ಸ್ಮರನ್ ವಾಸುದೇವಂ ಕೃತ್ವಾವಪನಕರ್ಮ ಚ । ಸಹಶ್ಮಶ್ರು ಲೋಮ ನಖಂ ಸ್ನಾಯಾತ್ಸಮ್ಯಕ್ ಸಮಾಹಿತಃ' ಎಂದು ಸಂನ್ಯಾಸಿ ಪದ್ಧತಿಯಲ್ಲಿ ಹೇಳಿದಂತೆ ಶ್ರೀವಾಸುದೇವನನ್ನು ಸ್ಮರಿಸುತ್ತಾ ೭ ಕೇಶಗಳನ್ನು ಬಿಟ್ಟು ವಪನ ಮಾಡಿಸಿಕೊಂಡು ಸ್ನಾನ ಮಾಡುವುದು. ಆಮೇಲೆ ಹಸ್ತಪಾದನಖೇಷ್ವದ್ಧಾ ಮುಖೇ ಚೈವ ಮೃದಂ ಕ್ಷಿಪೇತ್। ಪ್ರತಿ ಪ್ರತಿ ದ್ವಿಷಟ್ ಕೃತ್ವೋ ವೃಷಲಸ್ಪೃಷ್ಟಿ ಶುದ್ಧಯೇ || ಎಂದು ಹೇಳಿದಂತೆ ಗೋಮಯ ಮೃತ್ತಿಕಾ ಸ್ನಾನಗಳು. ನಿಮಜ್ಯ ತ್ರಿರಥಾಚಮ್ಯ ಸಂಸ್ಮರನ್ ಪರಮಂ ಹರಿಂ || ಎಂದು ಹೇಳಿದಂತೆ ವಿಧ್ಯುಕ್ತ ಪ್ರಕಾರ ಸಂಕಲ್ಪ ಮಾಡಿ ೧೦೮ ಸಲ ಮುಳುಗಿ ಸ್ನಾನ ಮಾಡಬೇಕು. ಅನಂತರ ಆಪೋಹಿಷ್ಠೇತಿ ತಿಸೃಭಿಃ ತರ್ಪಯೇದ್ದೇವತಾಸ್ತಾಃ|| ಋಷೀನ್ ಪಿತೄನ್ ವ್ಯಾಹೃತಿಭಿರ್ಯುಕ್ತಾನ್ ಕ್ರಮಶ ಏವಹಿ|| ಎಂದು ಹೇಳಿದಂತೆ ದೇವಋಷಿ ಪಿತೃತರ್ಪಣ, ಆ ಮೇಲೆ ಬ್ರಾಹ್ಮಣರಿಂದ ಪರಮಹಂಸ್ಯಾಖ್ಯ ತುರೀಯಾಶ್ರಮ ಸ್ವೀಕಾರಕ್ಕೆ ಅಂಗಭೂತವಾದ ಸ್ವಸ್ತಿ ಪುಣ್ಯಾಹ ವಾಚನವನ್ನು ಮಾಡಿಸಿಕೊಂಡು ಸಕ್ತುಪ್ರಾಶನ ದಧಿ ಘೃತ ಮಿಶ್ರ ಕ್ಷೀರ ಪ್ರಾಶನ, ಶಾಕಲಹೋಮ (ಶಕಲ=ಸಮಿಧ, ೪ ಸಮಿಧೆಗಳಿಂದ ಅಗ್ನಿ, ವಾಯು ಸೂರ್ಯ ಪ್ರಜಾಪತಿಗಳನ್ನು, ೧೨ ಶಕಲಗಳಿಂದ ಶ್ರೀ ವಿಷ್ಣುವನ್ನು ದೇವ ಕೃತಸ್ಯ ಇತ್ಯಾದಿ ಶಾಕಲ

ಮಂತ್ರವಿಂದ ಹೋಮಿಸಿ) ಪುರಾಣಶ್ರವಣಾದಿಗಳಿಂದ ಶ್ರೀವಾಸುದೇವನನ್ನು ಧ್ಯಾನಿಸುತ್ತಾ ಜಾಗರ ಮಾಡಬೇಕು. (3) ೩ನೇ ದಿವಸದಲ್ಲಿ ಸಮಿಚ್ಚರ್ವಾಜ್ಯಕಾನ್ ಹುತ್ವಾ ಸಮ್ಯಕ್ ಪುರುಷಸೂಕ್ತತಃ॥ ಎಂದು ಮೂಲದಲ್ಲಿ ಹೇಳಿದಂತೆ ಪ್ರಭಾತ ಕಾಲದಲ್ಲಿ ನಿತ್ಯಾಹ್ನಿಕ ಮಾಡಿ ಪುರುಷಸೂಕ್ತಹೋಮ, ವಿರಜಾಹೋಮ ಅಷ್ಟಾಕ್ಷರ ಹೋಮಗಳನ್ನು ಮಾಡಿ (ಅಂದರೆ-ಪುರುಷ ಸೂಕ್ತದಿಂದ ಸಮಿಧೆ, ಆಜ್ಯ, ಚರು, ಜುಹಯಾದ್ವಿ ರಜಾಮಂತ್ರೈಃ ಪ್ರಾಣಾಪಾನಾದಿಭಿಸ್ತತಃ। ಅನುವಾಕಾಂತಮೇಕಾಗ್ರಃ ಸಮಿದಾಜ್ಯಚರೂನ್ ಪೃಥಕ್ ॥ ಎಂದು ಶಿವ ಗೀತೆಗಳಲ್ಲಿ ಹೇಳಿದ ಪ್ರಕಾರ ಪ್ರಾಣಾಪಾನಾದಿ ವಿರಜಾ ಮಂತ್ರಗಳು (ನಾರಾಯಣಪನ್ನ ಮಂತ್ರಗಳು) ಇದು ಮೊದಲಾದ ಮಂತ್ರಗಳಿಂದ ಸಮಿಧೆ, ಅಜ್ಯ, ಚರುಗಳನ್ನು ಹೋಮಿಸಬೇಕು. (೫) ಸರ್ವೇಷಾಮಭಯಂ ದತ್ವಾ (೧) ದದ್ಯಾದ್ಭೂತಾಭಯಂ ಚಾಂಬುಪೂರ್ಣೇನಾಂಜಲಿನಾ ಸ್ಮರನ್ ಪ್ರೀಯತಾಂ ವಾಸುದೇವೋ ಮ ಐಶಾನೀಂ ದಿಶಮೇವ ತಂ ॥೧॥ ನಿನೀಯಾದಭಯಂ ಸರ್ವಭೂತೇಭ್ಯಃ ಇತಿಮಂತ್ರತಃ॥ ಸರ್ವಭೂತೇಷು ವಿಷ್ಣೋಸ್ತು ವಿಶೇಷಾವಸ್ಥಿತೇಸ್ಸದಾ ॥೨॥ ತತ್ರಸ್ಥಂ ಕೇಶವಂ ಧ್ಯಾಯನ್ ಸರ್ವಭೂತಾನಿ ನ ದ್ರುಹೇತ್। ಅಥೈಶಾನೀಂ ದಿಶಂ ಗಚ್ಛೇತ್ ಪುಣ್ಯತೀರ್ಥಂ ಜಲಾಶಯಂ ॥೩॥ ದಂಡಾದಿಕಂ ತಮನ್ವೇವ ನಯೇಯುರ್ಬ್ರಾಹ್ಮಣಾಸ್ತತಃ॥ ಎಂದು ಸಂನ್ಯಾಸ ಪದ್ಧತಿಯಲ್ಲಿ ಹೇಳಿದಂತೆ ನ ಮೇ ಕಶ್ಚಿತ್ ನಾಹಂ ಕಸ್ಯಚಿತ್ । ಎಂದು ಬಂಧುಗಳೊಡನೆ ಹೇಳಿ ಬಂಧುಬಾಂಧವರನ್ನು ಬಿಡುವುದು. ಆ ಮೇಲೆ ಶಾಸ್ತ್ರೋಕ್ತರೀತ್ಯಾ ಸ್ನಾನ, ಅನಂತರ "ಪುತ್ರೇಷಣಾ ವಿತ್ತೇಷಣಾ ಲೋಕೇಷಣಾ ಸರ್ವೇಷಣಾ ಮಯಾ ಪರಿತ್ಯಕ್ತಾ" "ಅಭಯಂ ಸರ್ವಭೂತೇಭ್ಯಃ ಮತ್ತಃ ಸ್ವಾಹಾ"ಎಂದು ೩ ಆವರ್ತಿ ಕರಸಂಪುಟದಲ್ಲಿದ್ದ ನೀರನ್ನು ಮೇಲಕ್ಕೆ ಹಾರಿಸಿ ಅಭಯದಾನ ಮಾಡುವುದು. ಯತ್ಕಿಂಚಿದ್ಬಾಧಕಂ ಕರ್ಮ ಕೃತಮಜ್ಞಾನತೋ ಮಯಾ॥ ಪ್ರಮಾದಾಲಸ್ಯದೋಷೋತ್ಥಂ ತತ್ಸರ್ವಂ ಸಂತ್ಯಜಾಮ್ಯಹಂ ॥೧॥ ಏವಂ ಸಂತ್ಯಜ್ಯ ಭೂತೇಭ್ಯೋ ದದ್ಯಾದಭಯದಕ್ಷಿಣಾಂ। ತ್ಯಕ್ತಸರ್ವವಿಶುದ್ಧಾತ್ಮಾ ಗತಸ್ನೇಹಶುಭಾಶುಭಃ॥೨॥ ಏಷ ತ್ಯಜಾಮ್ಯಹಂ ಸರ್ವಂ ಕಾಮಭೋಗಸುಖಾದಿಕಂ । ರೋಷಂ ತೋಷಂ ವಿವಾದಂ ಚ ಗಂಧಮಾಲ್ಯಾನುಲೇಪನಂ ॥೩॥ ಭೂಷಣಂ ನರ್ತನಂ ಗೇಯಂ ದಾನಮಾದಾನಮೇವಚ । ನಮಸ್ಕಾರಂ ಜಪಂ ಹೋಮಂ ಯಾಶ್ಚ ನಿತ್ಯಾಃ ಕ್ರಿಯಾ ವ ಯಾ॥೪॥ ನಿತ್ಯಂ ನೈಮಿತ್ತಿಕಂ ಕಾಮ್ಯಂ ವರ್ಣಧರ್ಮಾಶ್ರಮಾಶ್ಚ ಯೇ । ಸರ್ವಾನೇವ ಪರಿತ್ಯಜ್ಯ ದದಾಮ್ಯಭಯದಕ್ಷಿಣಾಂ ॥೫॥ ಪದ್ಭ್ಯಾಂ ಕರಾಭ್ಯಾಂ ವಿಹರನ್ನಾಹಂ ವಾಕ್ಕಾಯ ಮಾನಸೈಃ ॥ ಕರಿಷ್ಯೇ ಪ್ರಾಣಿನಾಂ ಹಿಂಸಾಂ ಪ್ರಾಣಿನಃ ಸಂತು ನಿರ್ಭಯಾಃ ॥೬॥ ಹೀಗೆ ಜಾಬಾಲ ಶ್ರುತಿಯಲ್ಲಿ ಹೇಳಿದಂತೆ ಅಜ್ಞಾನದಿಂದ ಮಾಡಿದ ಬಾಧಕಕರ್ಮವನ್ನೂ ಪ್ರಮಾದ ಆಲಸ್ಯಾದಿಗಳಿಂದುಂಟಾದ್ದೆಲ್ಲವನ್ನೂ ಬಿಟ್ಟು, ಸಮಸ್ತ ಪ್ರಾಣಿಗಳಿಗೂ ಅಭಯ ದಾನ ಮಾಡಬೇಕು. ಮತ್ತು ಕಾಮ, ಭೋಗ, ಸುಖಾದಿಗಳನ್ನೂ, ಕ್ರೋಧಾದಿಗಳನ್ನೂ, ಆಭರಣಾದಿಗಳನ್ನೂ ಎಲ್ಲವನ್ನೂ ಬಿಟ್ಟು ಅಭಯ ದಾನ ಮಾಡುತ್ತೇನೆ. ವಚನ ಶರೀರ ಮನಸ್ಸುಗಳಿಂದ ಪ್ರಾಣಿಗಳಿಗೆ ಹಿಂಸೆಯನ್ನು ಸರ್ವಥಾ ಮಾಡಲಾರೆನು. ಸಮಸ್ತ ಪ್ರಾಣಿಗಳೂ ಭಯವನ್ನು ಬಿಟ್ಟು ಜಿಡಲಿ ಎಂದು ಅಭಯದಾನ ಮಾಡಬೇಕು. ಯೋ ದತ್ವಾ ಸರ್ವಭೂತೇಭ್ಯಃ ಪ್ರವ್ರಜತ್ಯಭಯಂ ಗೃಹಾತ್ । ತಸ್ಯ ತೇಜೋಮಯಾ ಲೋಕಾಃ ಭವಂತಿ ಬ್ರಹ್ಮವಾದಿನಃ ॥ ಎಂದು ಮನುಸ್ಮೃತಿಯಲ್ಲಿ ಹೇಳಿದಂತೆ ಸಮಸ್ತ ಪ್ರಾಣಿಗಳಿಗೆ ಅಭಯ ದಾನ ಮಾಡಿ ಮನೆಯಿಂದ ಹೊರಟು ಹೋದವನಿಗೆ ತೇಜೋಮಯ ಲೋಕಗಳು ಸಿಗುತ್ತವೆ. (೩) ಆಮೇಲೆ ಆಚಮ್ಯ ವಿಷ್ಣುಂ ತೀರ್ಥೇ ತಂ ನತ್ವಾ ದೇವಾಂಶ್ಚ ಸರ್ವಶಃ । ನಿಮಜ್ಜ್ಯಾಪ್ಸು ತ್ರಿಶೋ ಹಸ್ತೇ ಶಿಖಾಯಜ್ಞೋಪವೀತಕೇ ॥೧॥ ಆದಾಯ ಜುಹುಯಾದಪ್ಸು ಪ್ರಣವೇನ ಸಮಾಹಿತಃ ॥ ಸಸ್ವಾಹೇನ ಪಟಾದ್ಯಂ ಚ ತ್ಯಕ್ತ್ವಾ ಸರ್ವಂ ಸ್ತುತ್ತರೇತ್ ॥ ಎಂದು ಸನ್ನ್ಯಾಸ ಪದ್ಧತಿಯಲ್ಲಿ ಹೇಳಿದ ಪ್ರಕಾರ ೩ ಸಲ ಮುಳುಗಿ ಶಿಖಾ ಯಜ್ಞೋಪವೀತ ಉತ್ತರೀಯ ವಸ್ತ್ರಗಳನ್ನು ವನಾಯ ಸ್ವಾಹಾ ಎಂಬ ಮಂತ್ರದಿಂದ ನೀರಿಗೆ ಹಾಕಬೇಕು. ಆ ಮೇಲೆ ದೀಯಮಾನಂ ತು ಗೃಹ್ಣೀಯಾತ್ಕೌಪೀನಾಚ್ಛಾದನಾದಿಕಂ ಎಂದು ಹೇಳಿದಂತೆ ಗೃಹಸ್ಥಾಶ್ರಮಿಗಳು ಕೊಡತಕ್ಕ ಕಟಿಸೂತ್ರ ಕೌಪೀನಗಳನ್ನುಟ್ಟುಕೊಂಡು ೨ ಕಾವಿಶಾಟಿಗಳನ್ನು ಹಿಡಿದುಕೊಂಡು ಸನ್ನ್ಯಸ್ತಂ ಮಯಾ ಎಂದು ಪ್ರೈಷೋಚ್ಚಾರಣ ಮಾಡಬೇಕು. ಹೇಗೆಂದರೆ- "ತತಃ ಪ್ರಭೃತಿ ॥ ಯಾವತ್ತು ಗುರೋರ್ವಿದ್ಯಾಮ ವಾಪ್ನುಯಾತ್"। ತಾವಚ್ಚ ವಾಗ್ಯತಸ್ತಿಷ್ಠೇಜ್ಜಪೇತ್ಪ್ರೈಷಾಂ ತತಃ ಪರಂ ॥೧॥ ಅನಿರುದ್ಧಾದಿನಾಮಾನಿ ಚತುರ್ಥ್ಯಂತಾನಿ ಮೂಲತಃ ॥ ಸವ್ಯಾಹೃತೀನಿ ಸನ್ನ್ಯಸ್ತಂ ಮಯೇತ್ಯೇತಾಸು ದೇವತಾಃ ॥೨॥ ಉದ್ದಿಶ್ಯ ಸರ್ವಮಪ್ಯಂ ಸ್ಯಾತ್ತದ್ವಿಭಾಗಂ ಬ್ರವೀಮ್ಯಹಂ। ಅನಿರುದ್ಧಾಯ ವಿತ್ತಂಚ ಶರೀರಂಚ ಸಮರ್ಪಯೇತ್ ॥೩॥ ಎಂದು ಹೇಳಿದಂತೆ ಓಂ ಅನಿರುದ್ಧಾಯ ವಿತ್ತಂ ಶರೀರಂ ಚಂ, ಓಂ ಪ್ರದ್ಯುಮ್ನಾಯ ದಶೇಂದ್ರಿಯಾಣಿ, ಓಂ ಸಂಕರ್ಷಣಾಯ ಮನೋಬುದ್ಧ್ಯಹಂಕಾರ ಚಿತ್ತಾನಿ, ಓಂ ವಾಸುದೇವಾಯ ಸ್ವಾತ್ಮಾನಂ ಸಮರ್ಪಯೇತ್। ಏವಂಚ ಅನಿರುದ್ಧಾದಿಭಗವದ್ರೂಪಗಳನ್ನುದ್ದೇಶಿಸಿ

ದೇಹಇಂದ್ರಿಯಆತ್ಮಾದಿಗಳೆಲ್ಲವನ್ನೂ ಸಮರ್ಪಿಸಬೇಕು. ಅಂದರೆ ಪ್ರೈಷೋಚ್ಚಾರಣೆ ಮಾಡಬೇಕು. ಸನ್ನ್ಯಸ್ತಂ ಮಯಾ ಎಂದು ಪ್ರೈಷೋಚ್ಚಾರಣಪೂರ್ವಕವಾಗಿ ಪ್ರತ್ಯೇಕ ಪ್ರತ್ಯೇಕ ಜಲಪೂರ್ವಕವಾಗಿ ಸಮರ್ಪಿಸಬೇಕು. (೪) ದೇವತೆಗಳನ್ನು ಸಾಕ್ಷಿಗಳನ್ನಾಗಿ ಮಾಡಿ 'ಓಂ ಭೂರ್ಭುವಃ ಸ್ವಃ ಸನ್ನ್ಯಸ್ತಂ ಮಯಾ' ಎಂದು ೩ ಸಲ ಮೆಲ್ಲಗೆ ೩ ಸಲ ಗಟ್ಟಿಯಾಗಿ ಪುನಃ ೩ ಸಲ ಅತ್ಯುಚ್ಚವಾಗಿ ಬಾಹುಗಳನ್ನು ಎತ್ತಿ ಕೊಂಡು ಪ್ರೇಷೋಚ್ಚಾರಣ ಮಾಡಬೇಕು. (೫) ಸನ್ನ್ಯಸ್ತಮಿತಿ ಯೋ ಬ್ರೂಯಾತ್ಪ್ರಾಣೈಃ ಕಂಠಗತೈರಪಿ । ನ ತಕ್ರ್ರತುಶತೈಃ ಪುಣ್ಯಂ ಪ್ರಾಪ್ತುಂ ಶಕ್ನೋತಿ ಮಾನವಃ । ಎಂದು ವಿಷ್ಣುಸ್ಮೃತಿಯಲ್ಲಿ ಹೇಳಿದಂತೆ ಸನ್ನ್ಯಾಸವು ಮಹಾಪುಣ್ಯದಾಯಕವು. "ಸರ್ವಭೂತೇಭ್ಯೋ ಮತ್ತಃ" ಎಂಬ ಮಂತ್ರದಿಂದ ಸರ್ವಭೂತಾಂತರ್ಯಾಮೀ ವಾಸುದೇವಃ ಪ್ರೀಯತಾಂ (೬) ಅನಂತರ ತ್ರಾಹಿ ಮಾಂ ಸರ್ವಲೋಕೇಶ ವಾಸುದೇವ ಸನಾತನ । ಸನ್ನ್ಯಸ್ತಂ ಮೇ ಜಗದ್ಯೋನೇ ಪುಂಡರೀಕಾಕ್ಷ ಮೋಕ್ಷದ ॥೧॥ ಯುಷ್ಮಚ್ಛರಣಮಾಪನ್ನಂ ತ್ರಾಹಿ ಮಾಂ ಪುರುಷೋತ್ತಮ ಎಂದು ಪ್ರಾರ್ಥಿಸಬೇಕು. (೮) ಆ ಮೇಲೆ ಇಂದ್ರಸ್ಯ ವಜ್ರೋಽಸಿ ತಥಾ ಸಖಾ ಮ ಇತ್ಯಾದಿ ಮಂತ್ರತಃ । ದಂಡಂ ಹರೇದ್ಯುಗ್ಮಪರ್ವಂ ಸಂಪೂರ್ಣಂ ಚಾಪಿ ಕಂಚನ ॥೧॥ ಸರ್ವತಃ ಸತ್ವಚಂ ವೃತ್ತಮೃಜುಂ ಲೋಮಪ್ರಮಾಣಕಂ ॥ ಎಂದು ಹೇಳಿದಂತೆ ಗೃಹಸ್ಥರು ಕೊಡತಕ್ಕ ದಂಡವನ್ನು ಇಂದ್ರಸ್ಯ ವಜ್ರವದಸಿ ಸಖಾ ಮೇ ಗೋಪಾಯ ಎಂಬ ಮಂತ್ರದಿಂದ ಸ್ವೀಕರಿಸಬೇಕು. (೯) ದಂಡ ಗ್ರಹಣ ಮಾಡಿದ ಮೇಲೆ ತಂತ್ರಸಾರದಲ್ಲಿ ಹೇಳಿದ ಶಾಸ್ತ್ರೋಕ್ತ ಪ್ರಕಾರ ಪೂಜಿಸಲ್ಪಟ್ಟ ಹೋಮಾಂಗ ಕಲಶತೀರ್ಥಗಳನ್ನು ೮ ಅಥವಾ ೪ ಬ್ರಾಹ್ಮಣರು ಉತ್ತರಾಭಿಮುಖವಾಗಿ ನಿಂತುಕೊಂಡು ಪುರುಷಸೂಕ್ತ, ವಿಷ್ಣುಸೂಕ್ತ, ವಿರಜಾ ಮಂತ್ರ ಓಂ ಸ್ವಸ್ತಿ ಸಾಮ್ರಾಜ್ಯಂ ಭೋಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಯಂ ಸಮಂತಪರ್ಯಾಯಿ ಸ್ಯಾತ್ ಸಾರ್ವಭೌಮಃ ಸಾರ್ವಾಯುಷ ಆಂತಾದಾ ಪರಾರ್ಧಾತ್ ಪೃಥಿವ್ಯೈ ಸಮುದ್ರ ಪರ್ಯಂತಾಯಾ ಏಕರಾಳಿತಿ ತದಪ್ಯೇಷ ಶ್ಲೋಕೋಽಭಿಗೀತೋ ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ । ಆವಿಕ್ಷಿತಸ್ಯ ಕಾಮಪ್ರೇರ್ವಿಶ್ವೇದೇವಾಃಸಭಾಸದ ಇತಿ।ಯೋ ವೈತಾಂ ಬ್ರಹ್ಮಣೋ ವೇದ।ಅಮೃತೇನಾವೃತಾಂ ಪುರೀಂ। ತಸ್ಮೈ ಬ್ರಹ್ಮ ಚ ಬ್ರಹ್ಮಾ ಚ। ಆಯುಃಕೀರ್ತಿಂ ಪ್ರಜಾ ದದುಃ (ಇತಿ ಬ್ರಾಹ್ಮಣಂ) ಇತ್ಯಾದಿ ಮಂತ್ರಗಳಿಂದ ಪ್ರೋಕ್ಷಣೆಮಾಡಿ ಅಭಿಷೇಕ ಮಾಡಬೇಕು. ಆ ಮೇಲೆ ಆಶ್ರಮಕೊಡತಕ್ಕ ಗುರುಗಳು ಪರಬ್ರಹ್ಮನನ್ನು ಧ್ಯಾನಿಸುತ್ತಾ ವೇದಾಂತವಿದ್ಯಾ ನಿಜರಾಜ್ಯಪಾಲನೇ ಸಂಕಲ್ಪ್ಯಮಾನೋ ಗುರುಣಾಗರಿಯಸಿ । ಅದಭ್ರಚೇತಾ ಅಭಿಷಿಚ್ಯತೇ ಪುರಾ ಸ ವಾರಿಭಿರ್ವಾರಿ ಜಪೂರಿತೈರಥ॥ ಎಂದು ಸುಮಧ್ವವಿಜಯದಲ್ಲಿ ಹೇಳಿದಂತೆ ತಂತ್ರಸಾರದಲ್ಲಿ ಹೇಳಿದ ಪ್ರಕಾರ ಚೆನ್ನಾಗಿ ಪೂಜಿಸಲ್ಪಟ್ಟ ಪಟ್ಟಾಭಿಷೇಕ ಕಲಶತೀರ್ಥವನ್ನು ಶಂಖದಲ್ಲಿ ತುಂಬಿಸಿ ಆ ಶಂಖವನ್ನು ೧೨ ಆವರ್ತಿ ಪ್ರಣವಗಳಿಂದ ಅಭಿಮಂತ್ರಿಸಿ ಶಂನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ ॥ ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ ॥ ಓಂ ನಮೋ ಬ್ರಹ್ಮಣೇ । ನಮಸ್ತೇವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ॥ ಋತಂ ವದಿಷ್ಯಾಮಿ। ಸತ್ಯಂ ವದಿಷ್ಯಾಮಿ ॥ ತನ್ಮಾಮವತು । ತದ್ವಕ್ತಾರಮವತು । ಅವತುಮಾಂ ಅವತು । ವಕ್ತಾರಂ॥ ಓಂ ಶಾಂತಿಃ ಶಾಂತಿಃ ಶಾಂತಿಃ॥ ಪುರುಷ ಸೂಕ್ತ ಇತ್ಯಾದಿ ಮಂತ್ರಗಳಿಂದ ಶಿಷ್ಯನಿಗೆ ಪ್ರೋಕ್ಷಿಸಿ ವೇದಾಂತವಿದ್ಯೆಯನ್ನು ಪರಿಪಾಲಿಸುವುದಕ್ಕಾಗಿ ಪಟ್ಟಾಭಿಷೇಕ ಪೂರ್ಣಕಲಶವನ್ನು ಅಭಿಷೇಕ ಮಾಡಬೇಕು.

(೧೦) ಹೀಗೆ ವಿರಕ್ತರಾಗಿ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಿ ಶುಷ್ಕಕಟಿಸೂತ್ರ ಕೌಪೀನಗಳನ್ನು ಧರಿಸಿಕೊಂಡು ಗೋಪೀ ಚಂದನ ಧಾರಣ ಮಾಡಿ ಕಮಂಡಲು ದಂಡಾದಿಗಳನ್ನು ಹಿಡಿದುಕೊಂಡು ಜಪತರ್ಪಣಾದಿಗಳನ್ನು ಮಾಡುತ್ತಾ ಇರಬೇಕು

(೧೧) ಸನ್ಯಾಸಾಶ್ರಮವು ಶ್ರೇಷ್ಠವೂ ಮಹಾ ಪುಣ್ಯದಾಯಕವೂ ಆಗಿರುವುದರಿಂದ ಸನ್ಯಾಸಿಗಳ ಮಹಿಮೆಯು ಎಂತಹುದು? ಅವರಲ್ಲಿ ಎಷ್ಟು ಪ್ರಭೇದವು? ಭೇದಕಧರ್ಮವು ಯಾವುದು? ಸೇವಾದಿಗಳಿಂದ ಏನು ಪ್ರಯೋಜನವು ಎಂದರೆ (ಬ್ರಹ್ಮವೈವರ್ತ ಪುರಾಣ. ಅಧ್ಯಾ. ೮೩) ದಂಡಗ್ರಹಣಮಾತ್ರೇಣನರೋ ನಾರಾಯಣೋ ಭವೇತ್ ॥೮೨॥ ಪೂರ್ವಕರ್ಮಾಣಿ ದಗ್ಧ್ವಾ ಚ ಪರಕರ್ಮನಿಕೃಂತನಂ। ಕುರುತೇ ಚಿಂತಯೇನ್ಮಾಂ ಚ ಹ್ಯಾಯಾತಿ ಮಮ ಮಂದಿರಂ ॥೮೩॥ ಸಂನ್ಯಾಸಿನಃ ಪದಸ್ಪರ್ಶಾತ್ಸದ್ಯಃ ಪೂತಾ ವಸುಂಧರಾ । ಸದ್ಯಃ ಪುನಂತಿ ತೀರ್ಥಾನಿ ವೈಷ್ಣವಸ್ಯ ಯಥಾ ವ್ರಜ ॥೮೪॥ ಸನ್ನ್ಯಾಸಿನಶ್ಚ ಸ್ಪರ್ಶೇನ ನಿಷ್ಪಾಪೋ ಜಾಯತೇ ನರಃ । ಸನ್ನ್ಯಾಸಿನಂ ಭೋಜಯಿತ್ವಾಽಶ್ವಮೇಧಫಲಂ ಭವೇತ್ ॥೮೫॥ ನತ್ವಾ ಚ ಕಾಮತೋ ದೃಷ್ಟ್ವಾ ರಾಜಸೂಯಫಲಂ ಲಭೇತ್ ॥ ಫಲಂ ಸನ್ನ್ಯಾಸಿನಾಂ ತುಲ್ಯಂ ಯತೀನಾಂ ಬ್ರಹ್ಮಚಾರಿಣಾಂ ॥೮೬॥ ದಂಡಗ್ರಹಣ ಮಾತ್ರದಿಂದಲೇ ಮನುಷ್ಯರು ಮುಕ್ತರಾಗುವರು. ಯತಿಗಳ

ಸ್ಪರ್ಶಮಾತ್ರದಿಂದ ಪಾಪದಿಂದ ಜನರು ಮುಕ್ತರಾಗುವರು. ಯತಿಗಳಿಗೆ ಭಿಕ್ಷೆ ಮಾಡಿಸಿದರೆ ಅಶ್ವಮೇಧ ಯಜ್ಞದ ಫಲವುಂಟಾಗುವುದು. ಇತ್ಯಾದಿಗಳು ನಿರೂಪಿತಗಳಾಗಿವೆ.

(೧೨) ಕುಟೀಚಕೋ ಬಹೂದಕೋ ಹಂಸಶ್ಚೈವ ತೃತೀಯಕಃ। ಚತುರ್ಥಃ ಪರಮೋಹಂಸೋ ಯೋ ಯಃ ಪಶ್ಚಾತ್ಸ ಉತ್ತಮಃ ॥ ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂದು ಸನ್ಯಾಸವು ೪ ವಿಧವೆಂದೂ, ಉತ್ತರೋತ್ತವು ಶ್ರೇಷ್ಠವೆಂದೂ ಹಾರೀತರು ಹೇಳಿರುವರು.

(೧೩)(೧) ಕುಟೀಚಕ= ಪುತ್ರಾದಿಗಳ ಮನೆಯಲ್ಲಿಯೇ ವಾಸಿಸುತ್ತಾ, ಕಾವಿಶಾಟಿಯನ್ನು ಧರಿಸಿಕೊಂಡು ಶಿಖಾ, ಯಜ್ಞೋಪವೀತ, ತ್ರಿದಂಡಗಳುಳ್ಳವನಾಗಿ ಬಂಧುಗಳಲ್ಲಿ ಅಥವಾ ತಮ್ಮ ಮನೆಯಲ್ಲಿಯೇ ಉಣ್ಣುತ್ತಾ ಭಗವಜ್ಞಾನಿಯಾಗಿರುವುದು. (೨) ಬಹೂದಕ=ಬಂಧುಗಳನ್ನು ಬಿಟ್ಟು ೭ ಮನೆಗಳಲ್ಲಿ ಭಿಕ್ಷಾಟನೆ ಮಾಡುತ್ತಾ ಹಿಂದಿನವರಂತೆ ಕಾವಿಶಾಟಿ ಇತ್ಯಾದಿಗಳು (೩) ಹಂಸ=ಹಿಂದಿನವರಂತೆ ಕಾವಿಶಾಟಿ ಇತ್ಯಾದಿಗಳು ಏಕಂ ತು ವೈಣವಂ ದಂಡಂ ಧಾರಯೇನ್ನಿತ್ಯಮಾದರಾತ್। ಎಂಬ ಸ್ಕಾಂದವಚನಾನುಸಾರ ಒಂದು ದಂಡವನ್ನು ಧರಿಸುವುದು. (೪) ಪರಮಹಂಸ=ಪರಮಹಂಸಸ್ತ್ರಿದಂಡಂ ಚ ರಜ್ಜುಂ ಗೋವಾಲನಿರ್ಮಿತಾಂ । ಶಿಖಾಂ ಯಜ್ಞೋಪವೀತಂ ಚ ನಿತ್ಯಂ ಕರ್ಮ ಪರಿತ್ಯಜೇತ್ । ಎಂದು ಸ್ಕಾಂದ ಪುರಾಣದಲ್ಲಿ ಹೇಳಿದಂತೆ ಇರುವುದು. ಕಾವಿಶಾಟಿ ಮೊದಲಾದುವುಗಳು ಹಿಂದಿನವರಂತೆ (ಇಲ್ಲಿ ಪರಮಹಂಸರಿಗೆ ತ್ರಿದಂಡ ಧಾರಣ ಹೇಳಿದಂತೆ ಇದೆ. ಇದು ಹೇಗೆ ಉಪಪನ್ನವಾಗುವುದೆಂದರೆ) ವಾಗ್ದಂಡೋಽಥ ಮನೋದಂಡಃ ಕರ್ಮದಂಡಸ್ತಥೈವಚ । ಯಸ್ಯೈತೇ ನಿಯತಾ ದಂಡಾಃ ಎಂಬ ಮನುಸ್ಮೃತಿ ಪ್ರಮಾಣಾನುಸಾರ ವಚನ, ಮನಸ್ಸು, ಕರ್ಮಗಳು ನಿಯತಗಳಾಗಿದ್ದರೆ ಅವುಗಳು ತ್ರಿದಂಡಗಳೆನಿಸುತ್ತವೆ. ಅವುಗಳಿಂದಲೇ ತ್ರಿದಂಡೀ ಎನಿಸುತ್ತಾನೆ. ವಸ್ತುತಃ ಕುರ್ಯಾತ್ಪರಮಹಂಸಸ್ತು ದಂಡಮೇಕಂ ತು ಧಾರಯೇತ್ । (ವಿಷ್ಣುಸ್ಮೃತಿ. ೨೪. ೨೬) ಎಂಬ ಪ್ರಮಾಣ ಪ್ರಕಾರ ಒಂದೇ ದಂಡವನ್ನು ಧರಿಸಬೇಕು. ಹೀಗೆಯೇ ಪ್ರತ್ಯಕ್ಷ ಸಿದ್ಧವೂ ಆಗಿದೆ. (14) ಏಕದಂಡೀ ತ್ರಿದಂಡೀ ವಾ............ಕಾಷಾಯಮಾತ್ರಸಾರೋಽಪಿ ಯತಿಃ ಪೂಜ್ಯೋ ಯುಧಿಷ್ಠಿರ ॥ (ಭಾರತ ಅಶ್ವಮೇಧ ಪರ್ವ) (15) ಚತುರ್ಥಮಾಶ್ರಮಂ ಗಚ್ಛೇತ್ಸನ್ಯಾಸವಿಧಿನಾ ದ್ವಿಜ॥ (ಹಾರೀತಸ್ಮೃತಿ ಅಧ್ಯಾ ೬.೪)(16) ಚತುರ್ಥಮಾಶ್ರ, ಮಂ ಗಚ್ಛೇಜ್ಜಿತಕ್ರೋಧೋ ಜಿತೇಂದ್ರಿಯಃ............ ವೇದಾಭ್ಯಾಸರತೋ ನಿತ್ಯಂ-ಅತ್ಮವಿದ್ಯಾ ಪರಾಯಣಃ॥ (ಸಂವರ್ತ ಸ್ಮೃತಿ)(17) ಧ್ಯಾನಯೋಗರತೋ ಭಿಕ್ಷುಃ ಪ್ರಾಪ್ನೋತಿ ಪರಮಾಂ ಗತಿಂ॥ (ಶಂಖಸ್ಮೃತಿ ಅ ೭-೭)(18)ಸನ್ನ್ಯಸೇತ್ಸರ್ವಕರ್ಮಾಣಿ ವೇದಮೇಕಂ ನ ಸನ್ನ್ಯಸೇತ್॥ (ವಸಿಷ್ಠ ಸ್ಮೃತಿ ೧೦-೨)(19) ಬ್ರಹ್ಮಚರ್ಯಾದೇವ ಪ್ರವ್ರಜೇತ್ ಗೃಹಾದ್ವಾ ವನಾದ್ವಾ ॥ ಜಾಬಾಲ ಶ್ರುತಿಃ) ಇತ್ಯಾದಿ ಪ್ರಮಾಣಗಳಿಂದ ಬ್ರಾಹ್ಮಣರು, ಬ್ರಹ್ಮಚಾರಿಗಳಾಗಲೀ, ಗೃಹಸ್ಥಾಶ್ರಮಿಗಳಾಗಲೀ ವಾನಪ್ರಸ್ಥಾಶ್ರಮಿಗಳಾಗಲೀ. ವಿರಕ್ತರಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಮುಕ್ತರಾಗುವರು. ಎಂದು ಸಿದ್ಧಿಸುವುದು.

## ಪಾರಿವ್ರಾಜ್ಯ ಪದಸ್ಥರು

ಹೀಗೆ ಸನ್ಯಾಸಿಗಳಲ್ಲಿ ೪ ಪ್ರಭೇದಗಳೂ ಅವರವರ ಧರ್ಮಗಳೂ ಲಕ್ಷಣಗಳೂ ಹೆಚ್ಚಾಗಿ ಪ್ರತಿ ಧರ್ಮ ಶಾಸ್ತ್ರಗಳಲ್ಲಿಯೂ ನಿರೂಪಿತಗಳಾಗಿವೆ. ಆದರೆ ಸಂಸ್ಥಾನಯತಿಗಳಲ್ಲಿ ಆ ಲಕ್ಷಣಾದಿಗಳು ಕೂಡುವುದಿಲ್ಲ. ಆ ಸನ್ಯಾಸಿಗಳಿಗೆ ಹೇಳದಿದ್ದ ಪಟ್ಟಾಭಿಷೇಕ ಮೊದಲಾದ ಧರ್ಮಗಳೂ ಕಂಡು ಬರುತ್ತಿವೆ. ಇವುಗಳು ಹೇಗೆ ಉಪಪನ್ನವಾಗುವುವು ಎಂದರೆ (೧) ಹಂಸಾಃ ಪರಮಹಂಸಾಶ್ಚ ಕುಟೀಚಕ ಬಹೂದಕಾಃ । ಪಾರಿವ್ರಾಜ್ಯಪದಸ್ಥಾಶ್ಚ ಇತಿ ಪಂಚಪ್ರಭೇದಿನಃ ॥೧॥ ತತ್ರಾಂತ್ಯೋಕ್ತಸ್ತು ಗುರುಣಾಽಭಿಷಿಕ್ತಃ ಪದಂ ವ್ರಜೇತ್। ಪಾರಿವ್ರಾಜ್ಯಪದಸ್ಥಸ್ಯ ತಪ್ತ ಮುದ್ರಾಧಿಕಾರಿತಾ ॥೨॥ ನಿಗ್ರಹೋಽನುಗ್ರಹ ಸ್ಚೈವ ವ್ಯಾಖ್ಯಾ ಪೂಜಾ ಮುರದ್ವಿಷಃ। ಅನ್ನಾಭಯ ಪ್ರದಾನಂಚ ವೈಭವೋ ರಾಜವತ್ಸ್ಥಿತಃ ॥೩॥ ದಾನಾದಾನಂ ಕಾ ಚನಾದೇಃ ಸಂಗ್ರಹಃ ಸ್ನೇಹವರ್ಜನಂ । ಅಹಂ ಮಮೇತಿ ತದ್ಭಾವಂ ವರ್ಜಯೇದ್ದೇಹಗೇಹಯೋಃ ॥೪॥ ಇತ್ಯಾದಿ ಬ್ರಹ್ಮಾಂಡೇ ॥ ಹಂಸ ಪರಮಹಂಸ, ಕುಟೀಚಕ, ಬಹೂದಕ, ಪಾರಿವ್ರಾಜ್ಯ ಪದಸ್ಥ, ಎಂದು ಸನ್ಯಾಸಿಗಳಲ್ಲಿ ೫. ಪ್ರಭೇದಗಳು. ಪಾರಿವ್ರಾಜ್ಯಪದಸ್ಥರಿಗೆ ಗುರುಗಳು ಪಟ್ಟಾಭಿಷೇಕ ಮಾಡಬೇಕು. ಅವರಿಗೇನೇ ತಪ್ತಮುದ್ರಾಧಿಕಾರವು. ನಿಗ್ರಹಾನುಗ್ರಹಶಕ್ತಿ, ಪಾಠ ಪ್ರವಚನ, ಶ್ರೀ ಭಗವತ್ಪೂಜಾ, ಅನ್ನದಾನ, ಅಭಯದಾನ, ರಾಜರಂತೆ ವೈಭವವು. ಸುವರ್ಣಾದಿಗಳ ದಾನ, ಪ್ರತಿಗ್ರಹ, ದ್ರವ್ಯಸಂಗ್ರಹ, ವಿಷಯಗಳಲ್ಲಿ ಸ್ನೇಹಪರಿತ್ಯಾಗ, ಶರೀರಗೃಹಾದಿಗಳಲ್ಲಿ ಮಮತಾಪರಿತ್ಯಾಗ

ಇತ್ಯಾದಿ ವಿಷಯಗಳು ಬ್ರಹ್ಮಾಂಡ ಪುರಾಣದಲ್ಲಿ ನಿರೂಪಿತಗಳಾಗಿವೆ. ಸಂಸ್ಥಾನಯತಿಗಳು ಈನೇ ಪಾರಿವ್ರಾಜ್ಯಪದಸ್ಥರಲ್ಲಿ ಸೇರಿದವರು. (೨) ಹೀಗೆಯೇ ವಿಷ್ಣುಸ್ಮೃತಿಯಲ್ಲಿ (ಅಧ್ಯಾ ೨೪) ಪಾರಿವ್ರಾಜ್ಯ ಪದಸ್ಥರು ನಿರೂಪಿತರಾಗಿರುತ್ತಾರೆ. ವಿರಕ್ತಃ ಸರ್ವಕಾಮೇಷು ಪಾರಿವ್ರಾಜ್ಯಂ ಸಮಾಶ್ರಯೇತ್ । ಆತ್ಮನ್ಯಗ್ನೀನ್ ಸಮಾರೋಪ್ಯ ದತ್ವಾ ಚಾಭಯದಕ್ಷಿಣಾಂ ॥೧॥........ ಅಹಿಂಸಾಂ ಸತ್ಯಮಸ್ತೇಯಂ ಬ್ರಹ್ಮಚರ್ಯಮಫಲ್ಗುತಾಂ । ದಯಾಂ ಚ ಸರ್ವಭೂತೇಷು ನಿತ್ಯಮೇತದ್ವ್ರತಿಶ್ಚರೇತ್ ॥೨॥ ಸಮಸ್ತಕಾಮಗಳಲ್ಲಿಯೂ ವಿರಕ್ತನಾಗಿ ಪಾರಿವ್ರಾಜ್ಯಪದವನ್ನು ಹೊಂದಬೇಕು. ಅವರು ಅಹಿಂಸೆ, ಯಥಾರ್ಥನುಡಿ, ಚೌರ್ಯಾಭಾವ, ಬ್ರಹ್ಮಚರ್ಯ, ಸರ್ವಪ್ರಾಣಿಗಳಲ್ಲಿ ದಯಾ ಇತ್ಯಾದಿಗಳನ್ನು ಸರ್ವದಾ ಆಚರಿಸುತ್ತಾ ಇರಬೇಕು, ಎಂದು ಹೇಳಿದೆ. (೩) ಏವಂಚ ಪರಮಹಂಸರಲ್ಲಿ (೧) ಕೇವಲ ಪರಮಹಂಸ (೨) ಪಾರಿವ್ರಾಜ್ಯಪದಸ್ಥ ಪರಮಹಂಸ, ಎಂದು ೨ ಪ್ರಭೇಧಗಳು. ಸಂಸ್ಥಾನಯತಿಗಳು ಪಾರಿವ್ರಾಜ್ಯಪದಸ್ಥ ಪರಮಹಂಸರಲ್ಲಿ ಸೇರಿರುವುದರಿಂದ ಅವರಿಗೆ ಪರಮಹಂಸ ಧರ್ಮಗಳೂ, ಬ್ರಹ್ಮಾಂಡಪುರಾಣದಲ್ಲಿ ಹೇಳಿದ ವಿಶೇಷಧರ್ಮಗಳೂ ಇರುವುದರಿಂದ ಯಾವ ಕುಶಂಕೆಗೂ ಅವಕಾಶವಿರುವುದಿಲ್ಲ. (೪) ಹಾಗಾದರೆ ಸಂಸ್ಥಾನಯತಿಗಳು ಪಾರಿವ್ರಾಜ್ಯ ಪದಸ್ಥ ಪರಮಹಂಸರೆಂದು ಏತಕ್ಕಾಗಿ ಅರ್ಥಮಾಡುವುದು? ಲೋಕದಲ್ಲಿ ಪ್ರಸಿದ್ಧಿಯಿದ್ದಂತೆ ಪರಮಹಂಸರೆಂದೇ ಏತಕ್ಕೆ ಅರ್ಥಮಾಡಕೂಡದು ಎಂದರೆ ಶ್ರೀ ಸುಮಧ್ವವಿಜಯದಲ್ಲಿ ಅಸಂಗಮಸ್ಮಾತ್ಪ್ರಕಟೀಕರೋಮ್ಯಹಂ ನಿಜಂ ಭಜನ್ ಪಾರಮಹಂಸ್ಯಮಾಶ್ರಮಂ, (ಸರ್ಗ ೪೦ ಶ್ಲೋ ೪) ತಮ್ಮದ್ದಾದ ಪಾರಮಹಂಸ್ಯ ಆಶ್ರಮವನ್ನು (ಯತ್ಯಾಶ್ರಮವನ್ನು) ತಾನು ಹೊಂದಿ ಪರಮಾತ್ಮನಿಂದ ಇತರಗಳಾದ ವೈಷಯಿಕವಸ್ತುಗಳಲ್ಲಿ ಆಸಕ್ತಿಯಿಲ್ಲವೆಂಬುದನ್ನು ಸರ್ವರಿಗೆ ತೋರ್ಪಡಿಸುತ್ತೇನೆಂದು ವಾಸುದೇವಾಚಾರ್ಯರು ಹೇಳಿರುವರು (೫) ಪಾರಿವ್ರಾಜ್ಯಂ ಪ್ರಾರ್ಥಯಂತಂ ಪಾದಾನ್ನಮ್ರಮಿಮಂ ಮುಹುಃ॥ (ಮಧ್ವ. ಸ. ೧೫ ಶ್ಲೋ ೯೩ ) ಶ್ರೀಮದಾಚಾರ್ಯರು ಪಾರಿವ್ರಾಜ್ಯವನ್ನು ಪ್ರಾರ್ಥಿಸತಕ್ಕ ತಮ್ಮ ಅನುಜನನ್ನು ಮನೆಗೆ ಕಳುಹಿಸಿದರು, ಎಂದಿದೆ (೬) ಹೀಗೆಯೇ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ತ್ರಿವಿಕ್ರಮಪಂಡಿತಾಚಾರ್ಯರು 'ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ ರೂಪ್ಯಪೀಠಾಭಿಧಾನೇ ತತ್ರಾಪಿ ಬ್ರಹ್ಮಜಾತಿಸ್ತ್ರಿಭುವನವಿಶದೇ ಮಧ್ಯಗೇಹಾಖ್ಯಗೇಹೇ। ಪಾರಿವ್ರಾಜ್ಯಾಧಿರಾಜಃ (ವಾಯುಸ್ತುತಿ, ಶ್ಲೋ ೩೯) ವಾಯುದೇವರು ಪಾರಿವ್ರಾಜ್ಯಕ್ಕೆ ನಿಯಾಮಕರಾಗಿ ಅವತರಿಸಿರುವರು ಎಂದು ಹೇಳಿರುವರು (೫) ಹೀಗೆ ಕೆಲವು ಕಡೆ ಪರಮಹಂಸಾಶ್ರಮಿಗಳೆಂದೂ, ಕೆಲವೆಡೆ ಪಾರಿವ್ರಾಜ್ಯಪದಸ್ಥರೆಂದೂ ಹೇಳಿದ ಕಾರಣ ಸಂಸ್ಥಾನಯತಿಗಳನ್ನು ಪಾರಿವ್ರಾಜ್ಯ ಪದಾಧಿಕಾರಿ ಪರಮಹಂಸರೆಂದು ಅವಶ್ಯವಾಗಿ ಅರ್ಥ ಮಾಡಬೇಕೆಂದು ಅಭಿಪ್ರಾಯವಾಯ್ತು. ಹಂಸಾದಿಗಳಿಗಿಂತ ಪಾರಿವ್ರಾಜ್ಯ ಪದಸ್ಥರಿಗೆ ವೈಲಕ್ಷಣ್ಯವು (೬) ಯದ್ಯಪಿ ನಾಲ್ಕು ವಿಧ ಆಶ್ರಮದವರಿಗೂ ಗಂಧ ಪುಷ್ಪಾದಿಗಳ ಸ್ವೀಕಾರ ಪೀತಾಂಬರ ಧಾರಿಣಾದಿಗಳಲ್ಲಿ ಅಧಿಕಾರವಿಲ್ಲ. ಆದರೆ ಪಾರಿವ್ರಾಜ್ಯಪದಸ್ಥರಿಗೆ ಮಾತ್ರ ಅಧಿಕಾರವಿದೆ ಎಂಬ ಅಭಿಪ್ರಾಯದಿಂದಲೇ 'ಕೃತಪರಮಸಪರ್ಯಃ ಸಾಂದ್ರಸಚ್ಚಂದನಾಂಭಃ ಪರಿಮಲಿತಭುಜೋರೋ ಮಂಡಲಾಂಸೋ ಮನೀಷೀ । ಸ್ಮಿತರುಚಿರಮುಖೇಂದುಃ ಸ್ನಿಗ್ಧಕೌಶೇಯವಾಸಾಃ ಸ ಮುನಿಸುರನರಾಣಾಂ ಚಕ್ಷುಷಾಮುತ್ಸವೋಽಭೂತ್ (ಮ. ಸರ್ಗ ೧೪. ಶ್ಲೋ ೩೮) ಶ್ರೀಮದಾಚಾರ್ಯರು ಭಗವಂತನ್ನು ಪೂಜಿಸಿ 'ತ್ವಯೋಪಭುಕ್ತ ಸ್ರಗ್ಗಂಧ ವಾಸೋಽಲಂಕಾರ ಚರ್ಚಿತಾಃ । ಎಂದು ಹೇಳಿದಂತೆ ಭಗವಂತನಿಗೆ ಸಮರ್ಪಿಸಿದ ಪರಿಮಲಿತ ಶ್ರೀಗಂಧ ಅಗರುಗಂಧಾದಿಗಳನ್ನು ತೋಳು ಹೆಗಲು ಎದೆಗಳಿಗೆ ಹಚ್ಚಿಕೊಂಡು ಪೀತಾಂಬರಧಾರಿಯಾಗಿ ಮಂದಹಾಸ ಮಾಡುತ್ತಾ ದೇವಾದಿಗಳಿಗೆ ಮಹಾಸಂತೋಷಕಾರಿಗಳಾದರು (೭) ಸಹಚರಪರಿಕ್ಲೃಪ್ತೇ ಸೂಕ್ಷ್ಮವಸ್ತ್ರಾಸ್ತೃತೇಽಸಾವವಿತನುರುಹರೂಪೌ ಶೀರವರ್ಯೇ ನಿಷಣ್ಣಃ ॥ (ಸರ್ಗ ೧೪ ಶ್ಲೋ ೪೦) ಶ್ರೀಮದಾಚಾರ್ಯರು ಶಿಷ್ಯನು ಮಾಡಿದ ರತ್ನಕಂಬಲವೆಂಬ ಆಸನ ಶ್ರೇಷ್ಠದಲ್ಲಿ ಕುಳಿತು ಬಹುವಿಧ ವಿದ್ಯಾ ವಿಲಾಸಗಳಿಂದ ಪಂಡಿತರನ್ನು ಸಂತೋಷಗೊಳಿಸಿದರು ಎಂದು ಸುಮಧ್ವವಿಜಯದಲ್ಲಿ ಹೇಳಿದೆ. ಆದ ಕಾರಣ ಗಂಧಧಾರಣ, ಪೀತಾಂಬರಧಾರಣ ಯಾನಾರೋಹಣಾದಿಗಳು ಸಾಮಾನ್ಯತಃ ಹಂಸಾದಿಯತಿಗಳಿಗೆ ನಿಷಿದ್ಧಗಳಾದಾಗ್ಯೂ ಪಾರಿವ್ರಾಜ್ಯಪದಸ್ಥರಾದ ಪರಮಹಂಸರಿಗೆ ನಿಷಿದ್ಧಗಳಲ್ಲ. ವಿಹಿತಗಳೇ ಆಗಿವೆ ಎಂದು ಸಿದ್ಧವಾಯ್ತು. ॥೧॥

ಅವತರಣಿಕೆ ॥ ವಿರಕ್ತಃಪ್ರವ್ರಜೇತ್ ವಿರಕ್ತರಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು ಎಂದು ಹೇಳಿದೆ, ಯಾರಿಂದ ಸ್ವೀಕರಿಸುವುದು? ಹೇಗೆ ಸ್ವೀಕರಿಸುವುದು? ಸ್ವೀಕರಿಸಿ ಏನು ಮಾಡಬೇಕು? ಎಂದರೆ

ಮೂ॥ಶ್ರುತ್ವಾ ಭಾಗವತಂ ಶುದ್ಧಮಾಚಾರ್ಯಂ ಶರಣಂ ವ್ರಜೇತ್ ಅಧೀಹಿ ಭಗವೋಬ್ರಹ್ಮೇತ್ಯಸ್ಮೈ ಬ್ರೂಯಾದ್ಗುರುಃ ಪರಂ॥೨॥ ಉಚ್ಚಾರಯೇತ್ತ್ರಿಶಸ್ತಾರಂ ದಕ್ಷಿಣೇ ಶ್ರವಣೇತಥಾ ॥೩॥

ಅ॥ ಭಗವನ್ಮಹಿಮಾದಿಗಳನ್ನು ಕೇಳಿ ಭಗವದ್ಭಕ್ತರೂ ಭಗವತ್ಸಂಬಂಧಿಯಾದ ಹರಿ ಸರ್ವೋತ್ತಮತ್ವಾದಿ ಗುಣ ಪ್ರತಿಪಾದಕವಾದ ವೇದಾಂತವಿದ್ಯೆಯಲ್ಲಿ ಪಾರಂಗತರೂ ಶುದ್ಧಾಂತಃ ಕರಣರೂ, ಆದ ಆಚಾರ್ಯರನ್ನು (ಗುರುಗಳನ್ನು) ಪೂಜ್ಯರೇ ಪರಬ್ರಹ್ಮನನ್ನುಪದೇಶಿಸಿರಿ, ಎಂದು ಪ್ರಾರ್ಥಿಸುತ್ತಾ ಶರಣುಹೊಂದಬೇಕು.

ಆಮೇಲೆ ಗುರುಗಳು ಶಿಷ್ಯನಿಗಾಗಿ ಪರಬ್ರಹ್ಮನನ್ನು ಹೇಳಬೇಕು. (ಉಪದೇಶಿಸಬೇಕು.) ಹಾಗೆಯೇ ಬಲ ಕಿವಿಯಲ್ಲಿ ೩ ಸಲ ಪ್ರಣವ ಮಂತ್ರವನ್ನು ಉಚ್ಚರಿಸಬೇಕು (ಉಪದೇಶಿಸಬೇಕು).

ವಿ॥ (1) ನತ್ವಾ ವಿಷ್ಣುಂ ಚ ಸಂಸ್ತೂಯ ಪ್ರವ್ರಜೇದಂತಿಕಂ ಗುರೋಃ ॥೧೦೭॥.......... ಯೋಯ ಏವೋತ್ತಮಃ ಪ್ರೋಕ್ತಃ ತಂ ಗುರುಂ ಪ್ರಾಪ್ಯ ವಂದಯೇತ್ ॥೧೦೮॥........ ಪ್ರಾರ್ಥಯೇದ್ವಿಷ್ಣು ಭಕ್ತ್ಯಾದಿ ಪುನಃ ಕುರ್ಯಾನ್ನತಿತ್ರಯಂ। ತೇನೋಕ್ತಃ ಪ್ರಣಮೇದ್ವಿಷ್ಣುಂ ದ್ವಿಗುಣಂ ವಾದಿಕಂ ತತಃ ॥೧೦೯॥ ತತೋಽನುಜ್ಞಾಮವಾಪ್ಯಾಥ ತದುಕ್ತ್ಯೋಪವಿಶೇತ್ತತಃ। ಪ್ರಬ್ರೂಯಾತ್ಪರಮಂ। ಬ್ರಹ್ಮ ಏಕವಾರಂ ಸನಾತನಂ ಇತ್ಯಾದಿ ಸನ್ಯಾಸ ಪದ್ಧತಿಯಲ್ಲಿ ಹೇಳಿದಂತೆ ಶ್ರೀವಿಷ್ಣುವನ್ನು ನಮಸ್ಕರಿಸಿ ಸ್ತುತಿಸಿ ಯಾರು ಉತ್ತಮ ಗುರುಗಳೋ ಅವರನ್ನು ಹೊಂದಿ ನಮಸ್ಕರಿಸಬೇಕು. ಅವರೊಡನೆ ವಿಷ್ಣುಭಕ್ತ್ಯಾದಿಗಳನ್ನು ಪ್ರಾರ್ಥಿಸಿ ತಿರುಗಿ ೩ ಸಲ ನಮಸ್ಕರಿಸಬೇಕು. ಅವರ ಆಜ್ಞೆಯಿಂದ ತಿರುಗಿ ಶ್ರೀವಿಷ್ಣುವಿಗೆ ನಮಸ್ಕರಿಸಿ ಅವರ ಸಮೀಪದಲ್ಲಿ ಕೂತುಕೊಳ್ಳಬೇಕು. ಆ ಮೇಲೆ ಗುರುಗಳು ಪ್ರಣವಾದಿ ಮಂತ್ರಗಳನ್ನುಪದೇಶಿಸಬೇಕು. (2) ಹಾಗಾದರೆ ಗುರು (ಆಚಾರ್ಯ)ಗಳೆಂದರೆ ಯಾರು? ಅವರು ಎಂತಹವರು ಆಗಬೇಕು? ಎಂದರೆ- ದ್ವಾತ್ರಿಂಶಲ್ಲಕ್ಷಣೈರ್ಯುಕ್ತೋ ಗುರುರುತ್ತಮ ಉಚ್ಯತೇ। ಬ್ರಹ್ಮೈವತಾದೃಶಸ್ತಸ್ಯ ಸಮೋ ನಾನ್ಯೋಽಸ್ತಿ ಕಶ್ಚನ॥ (ಸನ್ಯಾಸಪದ್ಧತಿ) ೩೨ ಲಕ್ಷಣಗಳುಳ್ಳವರು ಉತ್ತಮ ಗುರುಗಳು. ಅಂತಹವರು ಬ್ರಹ್ಮವಾಯುಗಳೇ. (3) ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ ವಿಶ್ರುತಾ ನೃಷು ಜಾತಂ ಚ ತಂ ವಿದ್ಯಾದ್ವೇ ವಸತ್ತಮಂ॥ ಇತಿ ಶ್ರುತಿಃ॥ ಇಂತಹ ಲಕ್ಷಣವು ಸಂಪೂರ್ಣವಾಗಿ ಶ್ರೀಮದಾಚಾರ್ಯರಲ್ಲಿ ಮಾತ್ರ ಪ್ರತ್ಯಕ್ಷ ಸಿದ್ಧವಾಗಿದೆ. (4) ಆದಕಾರಣ ಯಥಾಯೋಗ್ಯವಾಗಿ ಉತ್ತಮರಾದ ಸನ್ಯಾಸಿಗುರುಗಳನ್ನು ಹೊಂದಿ ಅವರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ತತ್ವಜ್ಞಾನವನ್ನು ಹೊಂದಿ ಮುಕ್ತಿಯನ್ನು ಹೊಂದಬೇಕೆಂದು ಸಿದ್ಧವಾಯ್ತು. (5) ಮತ್ತು ಆಚಾರ್ಯರೆಂದರೆ ಆಚಾರ್ಯಃ ಶ್ರೇಷ್ಠೋಗುರುಣಾಂ ಎಂದು ಗೌತಮ ಧರ್ಮಸೂತ್ರದಲ್ಲಿ ಹೇಳಿದಂತೆ ತಿಳಿಯದಿದ್ದ ಅರ್ಥದ ಜ್ಞಾನವನ್ನು ಹುಟ್ಟಿಸುವವರು ಗುರುಗಳು. ಅಂತಹ ಗುರುಗಳ ಮಧ್ಯದಲ್ಲಿ ಆಚಾರ್ಯರು ಶ್ರೇಷ್ಠರು. (6) ಹಾಗಾದರೆ ಗುರುಗಳಿಗೂ ಆಚಾರ್ಯರಿಗೂ ವ್ಯತ್ಯಾಸವೇನು? ಎಂದರೆ- ಸಚ್ಛಾಸ್ತ್ರ ನಿರ್ಮಾಣಾದಿಗಳನ್ನು ಮಾಡುವವರಾದರೆ ಅಂತಹವರನ್ನು ಆಚಾರ್ಯರೆಂದು ವ್ಯವಹರಿಸುವರು. ಹೇಗೆಂದರೆ ಆಚಿನೋತಿ ಹಿ ಶಾಸ್ತ್ರಾಣಿ ಆಚಾರಾನ್ ಗ್ರಾಹಯತ್ಯುತ । ಸ್ವಯಮಾಚರತೇ ಯಸ್ತು ತಮಾಚಾರ್ಯಂ ಪ್ರಚಕ್ಷತೇ ॥ ಸಚ್ಛಾಸ್ತ್ರಗಳನ್ನು ನಿರ್ಮಿಸುವವರು, ಅಥವಾ ತಾವು ಸಚ್ಛಾಸ್ತ್ರಗಳನ್ನು ಅಭ್ಯಾಸಮಾಡಿ ಪ್ರವಚನನಿರತರೂ, ತಾವು ಸದಾಚಾರ ಸಂಪನ್ನರಾಗಿ ಇತರರಿಗೆ ಸದಾಚಾರಗಳನ್ನು ಬೋಧಿಸುವವರು. ಇಂತಹವರನ್ನು ಆಚಾರ್ಯರೆಂದು ವ್ಯವಹರಿಸುವರು. (7) ಸನ್ಯಾಸಿನಾಂ ಸದ್ಗುರುಣಾಂಚ ಸಂಗಂ ಶ್ರೀ ವಿಷ್ಣು ಸರ್ವೋತ್ತಮ ಶಂಸಕಾನಾಂ।ತೇನೈವ ಸಜ್ಜ್ಞಾನ ಮವಾಪ್ಯ ರಾಜನ್ ಸಂಯಾಸ್ಯಸೇ ಮೋಕ್ಷ ಗತಿಂ ಚ ನಾನ್ಯಥಾ ॥ (ಗ. ಪು. ಪ್ರ. ಅಧ್ಯಾ. ೩೯. ಶ್ಲೋ. ೫.) ಶ್ರೀ ವಿಷ್ಣು ಸರ್ವೋತ್ತಮತ್ವವನ್ನುಪದೇಶಿಸುವ ಸನ್ಯಾಸಿಗಳ ಮತ್ತು ಸದ್ಗುರುಗಳ ಅಥವಾ ಸನ್ಯಾಸಿಗಳಾದ ಸದ್ಗುರುಗಳ ಸಂಗದಿಂದ ಸಜ್ಜ್ಞಾನವನ್ನು ಹೊಂದಿ ಮುಕ್ತಿ ಮಾರ್ಗವನ್ನು, ಹೊಂದುವಿ, ಎಂದು ಪ್ರಹ್ಲಾದನು ಹಿರಣ್ಯಕಶಿಪುವಿಗೆ ಹೇಳಿರುವನು. (8) ಗುರುಗಳನ್ನು ಅಥವಾ ಆಚಾರ್ಯರನ್ನು ನೋಡುವಾಗ ಏನು ಮಾಡಬೇಕೆಂದರೆ ಗುರೂಣಾಂ ದರ್ಶನೇ ಕಾಲೇ ವ್ಯಾಸರೂಪಂ ಹರಿಂ ಸ್ಮರೇತ್ ॥ ಎಂದು ಸುರೋತ್ತಮ ತೀರ್ಥರು ಹೇಳಿದಂತೆ ಗುರುಗಳನ್ನು ನೋಡುವ ಕಾಲದಲ್ಲಿ ಶ್ರೀವ್ಯಾಸರೂಪಿಯಾದ ಶ್ರೀಹರಿಯನ್ನು ಸ್ಮರಿಸುತ್ತಾ ಗುರುಗಳನ್ನು ಶರಣು ಹೊಂದಿ "ತ್ರಾಯಸ್ವ ಭೋ ಜಗನ್ನಾಥ ಗುರೋ ಸಂಸಾರವಹ್ನಿನಾ । ದಗ್ಧಂ ಮಾಂ ಕಾಲದಷ್ಟಂ ಚ ತ್ವಾಮಹಂ ಶರಣಂ ಗತಃ।" "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂಹ ದೇವಮಾತ್ಮಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ। ಗುರುಗಳೇ ತಮ್ಮನ್ನು ಶರಣು ಹೊಂದಿದ್ದೇನೆ ಎಂದು ಪ್ರಾರ್ಥಿಸಬೇಕು. ನಂತರ ಅಧೀಹಿ ಭಗವೋ ಬ್ರಹ್ಮ ಪರಬ್ರಹ್ಮನನ್ನು ಉಪದೇಶಿಸಿರಿ ಎಂದು ಪ್ರಾರ್ಥಿಸುವುದು. ಪೂಜ್ಯೇ ತತ್ರಭವಾನತ್ರಭವಾನ್ ಭವಾಂಶ್ಚ ಭಗವಾನಿತಿ । ಎಂಬ ಪ್ರಮಾಣದಿಂದ ಭಗವತ್ ಶಬ್ದವು ಪೂಜ್ಯ ವಾಚಕವು. ಪೂಜ್ಯ ಗುರುಗಳೇ ಸರ್ವಗುಣಪರಿಪೂರ್ಣನಾದ ಶ್ರೀಪರಮಾತ್ಮನನ್ನು ಉಪದೇಶಿಸಿರಿ ಎಂದು ಪ್ರಾರ್ಥಿಸಿಕೊಂಡು

ಸಮೀಪಿಸಬೇಕು. (3) ಆ ಮೇಲೆ ಗುರುಗಳು ಶಿಷ್ಯನ ಬಲ ಕಿವಿಯಲ್ಲಿ ಪ್ರಣವಾದಿಮಂತ್ರಗಳನ್ನುಪದೇಶಿಸಿ ಶಿರಸ್ಸಿನಲ್ಲಿ ಹಸ್ತವನ್ನಿಟ್ಟು ಪುರುಷಸೂಕ್ತ, ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥(ವೇದೋಕ್ತ ಧನ್ವಂತರಿ ಮಂತ್ರ) ಪ್ರಣವೋಮಾತೃಕಾಶ್ಚಾರ್ಣೌ ವ್ಯಾಹೃತಿರ್ದ್ವಾದಶಾಕ್ಷರಃ। ಗಾಯತ್ರೀ ಪೌರುಷಂ ವಿಷ್ಣುರ್ಮಹಾಮಂತ್ರಾಃ ಪ್ರಕೀರ್ತಿತಾಃ ॥ ಅಥವಾ ಪ್ರಣವೋಽಷ್ಟೌ ವ್ಯಾಹೃತಯೋ ದ್ವಿಷಟ್ ಸಾವಿತ್ರ. ಮಾತೃಕಾಃ। ಪೌರುಷಂ ವೈಷ್ಣವಂ ಚೇತಿ ಜಪೇ ಕ್ರಮ ಉದಾಹೃತಃ ॥ ಎಂದು ಹೇಳಿದ ಪ್ರಣವಮೊದಲಾದ ಅಷ್ಟಮಹಾಮಂತ್ರ, ಇದು ಮೊದಲಾದ ಮಹಾಮಂತ್ರಗಳನ್ನು ಉಪದೇಶಿಸಬೇಕು. ತಾರಃ=ತರಂತ್ಯನಿಷ್ಟನಿಚಯಮನೇನ ಎಂಬ ವ್ಯುತ್ಪತ್ತಿಯಿಂದ ಭಗವದ್ಭಕ್ತರು ಈ ಪ್ರಣವದಿಂದ ಅನಿಷ್ಟಸಮುದಾಯವನ್ನು ದಾಟುವುದರಿಂದ ಪ್ರಣವವು ತಾರಃ ಎನಿಸುತ್ತದೆ. ಅಥವಾ ತಾರಯಂತೀತ ತಾರಃ ಎಂಬವ್ಯುತ್ಪತ್ತಿಯಿಂದ ಜಪಿಸುವ ಸದ್ಭಕ್ತರನ್ನು ಸಂಸಾರದಿಂದ ಅಥವಾ ಅನಿಷ್ಟಸಮುದಾಯದಿಂದ ದಾಟಿಸುವುದರಿಂದ ತಾರಃ ಎನಿಸುತ್ತದೆ. (5) ಅತಏವ ತಾರಯೇದ್ಯದ್ಭವಾಂಬೋಧೇಃ ಸ್ವಜಪಾಸಕ್ತಮಾನಸಾನ್। ತರಸ್ತಾರ ಇತಿ ಖ್ಯಾತಃ ಎಂದು ಸ್ಕಾಂದದಲ್ಲಿ ಪ್ರತಿಪಾದಿಸಿದೆ. (6) ತಸ್ಮಾ ದೋಮಿತಿ ಪ್ರಣೌತಿ ಎಂಬ ಶ್ರುತಿಯಿಂದಲೂ ವೇದಸ್ಥಃ ಪ್ರಣವ್ಯಾಖ್ಯೋಽಸಾವಾತ್ಮಾನಂ ಯತ್ಪ್ರಣೌತ್ಯತಃ । ಎಂಬ ಗೀತಾತಾತ್ಪರ್ಯೋದಾಹೃತ ಪ್ರಮಾಣದಿಂದಲೂ ಪ್ರಣೌತೀತಿಃ ಎಂಬ ವ್ಯುತ್ಪತ್ತಿಯಿಂದ ವೇದಾದಿಗಳಿಕ್ಕಿಂತೆಲ್ಲಾ ಚೆನ್ನಾಗಿ ಸ್ತುತಿಸುವುದರಿಂದ ಪ್ರಣವಃ ಎನಿಸುತ್ತದೆ. (7) ಏವಂಚ ಪ್ರಣವ ಮಹಾಮಂತ್ರವು ಸಂಸಾರತಾರಕವಾದ ಕಾರಣ ಅದನ್ನು ತಾರವೆಂದೂ, ಭಗವಂತನನ್ನು ಎಲ್ಲದಕ್ಕಿಂತ ವಿಶೇಷತಃ ಸ್ತುತಿಸುವ ಕಾರಣ ಪ್ರಣವವೆಂದೂ ಪ್ರಾಜ್ಞರು ವ್ಯವಹರಿಸುವರು (8) ಓಂಕಾರಂ ಯೋ ವಿಜಾನಾತಿ ಸ ಯೋಗೀ ಸ ಹರಿಃ ಪುಮಾನ್ । ಸರ್ವಮಂತ್ರ ಪ್ರಯೋಗೇಷು ಪ್ರಣವಃ ಪ್ರಥಮಃ ಸ್ಮೃತಃ॥ (ಅಗ್ನಿಪುರಾಣ) (9) ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ । ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ ॥ ಇತ್ಯಾದಿ ಪ್ರಮಾಣಗಳಿಂದ ಓಂಕಾರಕ್ಕೆ ಇದ್ದಷ್ಟು ಪ್ರಾಧಾನ್ಯವು ಬೇರೆ ಯಾವ ಅಕ್ಷರಕ್ಕೂ ಇಲ್ಲ. ವೇದಾದಿಗಳೆಲ್ಲವೂ ಓಂಕಾರದ ಅರ್ಥವನ್ನೇ ವಿವರಿಸಿ ಹೇಳುತ್ತವೆ. (10) ಶ್ರೀಹರಿಯು ಸರ್ವದೇಶಕಾಲಗಳಲ್ಲಿ ವ್ಯಾಪ್ತನಾಗಿದ್ದು ಸರ್ವಗುಣಪರಿಪೂರ್ಣನಾಗಿದ್ದುದರಿಂದಲೂ ಸರ್ವರಿಗೆ ಸ್ವಾಮಿಯಾಗಿ ಸರ್ವತ್ರ ಪ್ರವಿಷ್ಟನಾಗಿರುವುದರಿಂದಲೂ ಓಂ ಎನಿಸುತ್ತಾನೆ. ಆದಕಾರಣ ಓಂಕಾರವು ಶ್ರೀಹರಿಗೆ ಮುಖ್ಯನಾಮಧ್ಯೇಯವು. (11) ಈ ಓಂಕಾರವು ಅ, ಉ, ಮ, ಎಂಬ ೩ ವರ್ಣ ಸ್ವರೂಪವು. ಶ್ರೀ ಹರಿಯು ಸರ್ವರಿಂದ ಭಿನ್ನನಾಗಿ ದೋಷಲೇಪರಹಿತನಾದುದರಿಂದ ಅಃ ಎಂದೂ, ಬ್ರಹ್ಮಾದಿಗಳಿಗಿಂತ ಉತ್ಕೃಷ್ಟನಾದುದರಿಂದ ಉಃ ಎಂದೂ, ಸಮಸ್ತವೇದಾದಿಗಳಿಂದಲೇ ತಿಳಿಯಲ್ಪಡುವವನಾದುದರಿಂದಲೂ, ಜ್ಞಾನಸ್ವರೂಪರಾದುದರಿಂದಲೂ ಮ್ ಎಂದೂ ಅನ್ನಿಸಿಕೊಳ್ಳುತ್ತಾನೆ ಮತ್ತು (12) ಅವರ್ಣಕ್ಕೆ ವಿಶ್ವನೂ, ಉ ವರ್ಣಕ್ಕೆ ತೈಜಸನೂ, ಮ್ ವರ್ಣಕ್ಕೆ ಪ್ರಾಜ್ಞರೂಪಿ ಶ್ರೀ ಪರಮಾತ್ಮನೂ ದೇವತೆಯು. (13) (೧) ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ । (೨) ಅಕಾರೋ ವೈ ಸರ್ವಾ ವಾಕ್ (೩) ಅಕ್ಷರಾಣಾಮಕಾರೋಽಸ್ಮಿ (೪) ಅಕಾರನಾಮಾ ನಾನ್ಯೋಽಸ್ತಿ ತಮ್ಮಾತ್ರೇ ಪುರುಷೋತ್ತಮಂ । (೫) ಅಕಾರಃ ಪ್ರಥಮಂ ನಾಮ ವಿಷ್ಣೋಃ ಸರ್ವಗುಣಾನ್ ಬ್ರುವನ್ ॥ (೬) ಅಭಾವಂ ಚೈವ ದೋಷಾಣಾಂ ಸರ್ವೇಷಾಂ ಕೇಶವೇ ವದೇತ್ (೭) ತಸ್ಮಾದಕಾರ ಏವಾಯಂ ಸರ್ವವಾಗಾತ್ಮಕಃ ಶ್ರುತಃ । ಇತ್ಯಾದಿ ಪ್ರಮಾಣಗಳಿಂದ ಎಲ್ಲಾ ಅಕ್ಷರಗಳಿಗಿಂತಲೂ ಅಕಾರವೇ ಪ್ರಧಾನವು. (13) ಆದುದರಿಂದಲೇ ಶ್ರೀ ಮಧ್ವಾಚಾರ್ಯರ ಶ್ರೀ ಹರಿಯು ಸರ್ವಗುಣಪರಿಪೂರ್ಣನು, ಸರ್ವದೋಷ ವಿರಹಿತನು, ಬ್ರಹ್ಮ ರುದ್ರಾದಿಗಳೆಲ್ಲರೂ ಶ್ರೀ ಹರಿಯ ಅಧೀನದಲ್ಲಿರುವವರು, ಎಂದು ಸರ್ವಶಾಸ್ತ್ರಾರ್ಥ ನಿರ್ಣಯವು ಎಂದು ಹೇಳಿರುವರು ಎಂಬ ವಿಷಯದಲ್ಲಿ ಪ್ರಣವವು (ಓಂಕಾರವು) ಪ್ರಮಾಣವು. (14) ಹೇಗೆಂದರೆ - (೧) ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ॥ (೨) ಓಂ ಬ್ರಹ್ಮ (೩) ಓಂಕಾರಃ ಪ್ರಣವಂ ಬ್ರಹ್ಮ (೪) ಓತತ್ವವಾಚೀ ಹ್ಯೋಂಕಾರಃ (೫) ಓತಮಸ್ಮಿತ್ ಜಗತ್ಸರ್ವಮತ್ಯುಚ್ಚಶ್ಚಾಖಿಲೈರ್ಗುಣೈಃ (೬) ಓಮಶೇಷ ಗುಣಾಧಾರಃ (೭) ಸರ್ವಸ್ಯ ಪ್ರಣವೋ ಹ್ಯಾದಿಃ (೮) ಓ ಮಿತ್ಯೇತದಕ್ಷರಮಿದಂ ಸರ್ವಂ (೯) ಪ್ರಣವಂ ಹೀಶ್ವರಂ ವಿದ್ಯಾತ್ (೧೦ ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ । (೧೦) ಓಮಿತ್ಯೇಕಾಕ್ಷರಂ ಬ್ರಹ್ಮ (೧೨) ಪ್ರಣವಃ ಸರ್ವವೇದೇಷು (೧೩) ಗೀರಾಮಸ್ಮೈಮಕ್ಷರಂ (೧೫) ಓಮಿತಿ ಬ್ರಹ್ಮ ಇದು ಮೊದಲಾದ ಗೀತಾ ದಶೋಪನಿಷತ್ತು ಶ್ರುತಿ ಸ್ಮೃತಿ ಮೊದಲಾದ ಪ್ರಮಾಣಗಳಿಂದ ಓಂಕಾರವೇ ಶ್ರೇಷ್ಠವಾದುದು. ಶ್ರೀ ಪರಮಾತ್ಮನ ಮುಖ್ಯ ನಾಮವು ಶ್ರೀಹರಿಗೆ ಸರ್ವಗುಣಪರಿಪೂರ್ಣತ್ವಾದಿಗಳನ್ನು ಕೊಂಡಾಡುತ್ತಿವೆ. (15) ಏವಂಚ ಓಂಕಾರವೊಂದನ್ನು ಕೂಲಂಕಷವಾಗಿ ತಿಳಿದುಕೊಂಡರೆ ಎಲ್ಲವನ್ನು ತಿಳಿದುಕೊಂಡಂತೆ ಆಯ್ತು. (16) ಇದೇ ಅಭಿಪ್ರಾಯವನ್ನು (೧) ಪ್ರಣವಾದ್ಯಾಸ್ತಥಾ ವೇದಾಃ (೨) ನ

ವರ್ಣೋಂಕಾರಸಮ್ಮಿತಂ ಇತ್ಯಾದಿ ಪ್ರಮಾಣಗಳು ಸಾರುತ್ತಿವೆ. (17) ಆದುದರಿಂದ ಗುರುಗಳು ಇಂತಹ ಪ್ರಣವನನ್ನು ಅಷ್ಟಮಹಾ ಮಂತ್ರಗಳನ್ನೂ ಶಿಷ್ಯನಿಗೆ ಉಪದೇಶಿಸಬೇಕು. (18) ಅಂತಹ ಅಷ್ಟಮಹಾಮಂತ್ರಗಳನ್ನು ಎಲ್ಲರೂ ನಿಯಮೇನ ಜಪಿಸಲೇಬೇಕು. ಏಕೆಂದರೆ ಸಂಧ್ಯಾಸು ಮಂತ್ರಾ ಇಮ ಏವ ಜಪ್ಯಾಸ್ತಾರೋ ಯತೀನಾಂ ಪ್ರಥಮೋ ಹಿ ಮಂತ್ರಃ। ಸಾವಿತ್ರ ಉಕ್ತಶ್ಚ ತಥಾ ಪರೇಷಾಂ ದ್ವಿಜನ್ಮನಾಂ ಶಶ್ವದ ನಿಂದಿತಾನಾಂ ಎಂಬೀ ಮಾಧವ ತೀರ್ಥ ಸ್ಮೃತಿಯಲ್ಲಿಯೂ, ತಾರೋಽಷ್ಟವರ್ಣೋ ದ್ವಿಷಡಕ್ಷರೋಽನ್ಯ ಷಡಕ್ಷರೋ ವ್ಯಾಹೃತಯಃ ಕ್ರಮೇಣ ॥ ಪಂಚಾಶದರ್ಣಾ ಸವಿತುಶ್ಚ ಪತ್ನೀ ಮಂಸೂಕ್ತಮಷ್ಟಾವಿತಿ ಮೂಲಮಂತ್ರಾಃ॥ ಎಂಬೀ ವಾಸುದೇವ ಸ್ಮೃತಿಯಲ್ಲಿಯೂ ಯತಿಗಳು ಪ್ರಥಮತಃ ಪ್ರಣವ ಮಂತ್ರವನ್ನೂ, ಗೃಹಸ್ಥರು ವಿಶ್ವಾಮಿತ್ರ ಗಾಯತ್ರಿಯನ್ನೂ ಜಪಿಸಿ ಎಲ್ಲರೂ ಅಷ್ಟಮಹಾ ಮಂತ್ರಗಳನ್ನು ನಿಯಮೇನ ಜಪಿಸಲೇಬೇಕು. ಆ ಮೇಲೆ ಇತರ ವೈಷ್ಣವ ಮಂತ್ರಗಳನ್ನು ಜಪಿಸಬೇಕು ಎಂದು ಹೇಳಿದೆ. (19) ಏತೇ ಹ್ಯಷ್ಟಮಹಾಮಂತ್ರಾಃ ಜ್ಞಾನಮೋಕ್ಷಫಲಪ್ರದಾಃ । ಅನ್ಯೇ ಚ ಕಾಮದಾ ಮಂತ್ರಾಃ ಕೃಷ್ಣ ಮಂತ್ರಾದಿಕಾಸ್ತಥಾ ॥೧॥ ನ್ಯಾಸ ಧ್ಯಾನ ಸಮಾಯುಕ್ತಾ ಸ್ವಋಷಿಛಂದದೇವತಾಃ । ವಿಷ್ಣುಧ್ಯಾನ ಸಮಾಯುಕ್ತಾಃ ಜಪ್ಯಾಸ್ತಾಸ್ಸರ್ವಸಿದ್ಧಯೇ ॥೨॥ ಏತೇಷಾಂ ಮಂತ್ರರತ್ನಾನಾಂ ಶ್ರುತಿಸ್ಮೃತ್ಯಾದೀಕೇಷ್ವಪಿ ಮಹಿಮಾ ವರ್ಣಿತಸ್ಸಮ್ಯಕ್ ಪುರಾಣೇಷ್ವಪಿ ಸರ್ವಶಃ ॥೩॥ ತಸ್ಮಾತ್ಸರ್ವಪ್ರಯತ್ನೇನ ನಿತ್ಯಂ ಜಪ್ಯಾದಿಮಾನ್ ಮನೂನ್ ॥ ಅಷ್ಟೋತ್ತರ ಸಹಸ್ರಂ ತು ಹ್ಯಷ್ಟೋತ್ತರಶತಂ ತು ವಾ ॥೪॥ ಇತಿ ಸಂಗ್ರಹೇ. ಇತ್ಯಾದಿ ಪ್ರಮಾಣಗಳಿಂದ ಅಷ್ಟಮಹಾಮಂತ್ರಗಳು ಜ್ಞಾನ ಮೋಕ್ಷರೂಪ ಫಲಗಳನ್ನು ಕೊಡುವವುಗಳು - ಆದಕಾರಣ ಇತರ ಮಂತ್ರಗಳಿಗಿಂತ ಪ್ರಧಾನಗಳು. ಇವುಗಳನ್ನು ಜಪಿಸಿದರೆ, ಇತರ ಮಂತ್ರಗಳನ್ನು ಜಪಿಸಿದಂತೆ ಆಗುವುದು. ಅಂದರೆ ಇತರ ಸಮಸ್ತಮಂತ್ರಗಳ ಜಪದ ಫಲವು ಅಷ್ಟಮಹಾಮಂತ್ರಗಳ ಜಪಫಲದಲ್ಲಿ ಸೇರುತ್ತದೆ. (20) ಪ್ರಣವೋ ಯತೀನಾಮೇವ ಗೃಹಿಭಿರ್ಜ್ಞಾಯತೇ ನ ಸಃ । ಎಂಬೀ ವಾರಾಹದಲ್ಲಿ ಪ್ರಣವ ಮಂತ್ರದಲ್ಲಿ ಯತಿಗಳಿಗೇನೇ ಅಧಿಕಾರವು. ಗೃಹಸ್ಥರಿಗೆ ಅಧಿಕಾರವಿಲ್ಲ ಎಂದು ಹೇಳಿದೆ, ಎಂದರೆ - ಪ್ರಣವಂಚ ಜಪೇದ್ವಿಷ್ಣುಂ ಧ್ಯಾಯಸ್ನುತ್ತಮರೂಪಿಣಂ ॥ ಎಂದು ಶ್ರೀ ಮದಾಚಾರ್ಯರೇ ಗೃಹಸ್ಥರೂ ಜಪಿಸಬೇಕೆಂದು ಹೇಳಿರುವರು. (21) ಮತ್ತು ದ್ವಾದಶಾರ್ಣೋವ್ಯಾಹೃತಯಃ ಷಡೇತೇ ಮನವೋಽಖಿಲೈಃ। ಮುಮುಕ್ಷುಭಿಸ್ಸದಾ ಜಪ್ಯಾಃ ಯತಿಭಿಸ್ತತ ಏವ ಹಿ॥ ಎಂದು ವಿಷ್ಣುತೀರ್ಥರು ಮುಮುಕ್ಷುಗಳಾದ ಗೃಹಸ್ಥಾದಿಗಳು ಪ್ರಣವಾದಿ ಅಷ್ಟಮಹಾಮಂತ್ರಗಳನ್ನು ಜಪಿಸುವ ಪ್ರಯುಕ್ತವೇ ಯತಿಗಳೂ ಜಪಿಸಬೇಕೆಂದು ಹೇಳಿರುವರು. (22) ಪ್ರಣವೋ ಯತೀನಾಮೇವ ಎಂಬೀ ವಾರಾಹವಚನಕ್ಕೆ ಪ್ರಣವ ಮಂತ್ರವನ್ನು ಪುನಶ್ಚರಣೆ ಮಾಡಲಿಕ್ಕೆ ಗೃಹಸ್ಥನಿಗೆ ಅಧಿಕಾರವಿಲ್ಲವೆಂದು ತಾತ್ಪರ್ಯವು. (23) ಇದೇ ಅಭಿಪ್ರಾಯವನ್ನು ಶೌನಕರು ಹೇಳಿರುವರು. ಗೃಹಸ್ಥಾದ್ಯಾಃ ತಥಾ ಶುದ್ಧಾಃ ಪೌನಶ್ಚರಣಕಂ ವಿನಾ। ನಿತ್ಯಮೇವ ಜಪಂ ಕುರ್ಯುಸ್ತೇಷಾಂ ಮಂತ್ರವಿಧಿಂ ಶೃಣ ॥ ಎಂದು ಪ್ರಣವ ಮಂತ್ರವನ್ನು ಪುನಶ್ಚರಣ ಮಾಡಕೂಡದು. ಜಪಮಾಡಬೇಕು. (24) ಏಕೋಂಕಾರಾ ಸಂಪುಟಾ ಚ ಷಡೋಂಕಾರೇತಿ ಸಾ ತ್ರಿಧಾ । ಆದ್ಯೋಂಕಾರಾ ಗೃಹಸ್ಥಸ್ಯ ವರ್ಣಿನಶ್ಚ ನ ಚೇತರೇ ॥ ವಾನಪ್ರಸ್ಥ ಯತೀನಾಂ ತು ಷಡೋಂಕಾರಾ ಪ್ರಶಸ್ಯತೇ ॥ ಎಂಬೀ ಆಗ್ನೇಯ ಪುರಾಣದಲ್ಲಿ ಗೃಹಸ್ಥನಿಗೆ ಆದಿಯಲ್ಲಿ ಓಂಕಾರವುಳ್ಳ ಗಾಯತ್ರಿಯಲ್ಲಿಯೂ ಯತಿಗಳಿಗೆ ಷಡೋಂಕಾರ ಗಾಯತ್ರಿಯಲ್ಲಿಯೂ ಅಧಿಕಾರವೆಂದು ಹೇಳಿದೆ. ಪ್ರಪಂಚ ಗೃಹಸ್ಥರೂ ಯತಿಗಳೂ ಎಲ್ಲರೂ ಗಾಯತ್ರೀ ಜಪವನ್ನು ಸರ್ವಥಾ ಮಾಡಲೇಬೇಕು ಎಂದು ಸಿದ್ಧವಾಯ್ತು. (25) ಈ ಅಭಿಪ್ರಾಯವನ್ನೇ ಕುಟೀಚಕೋ ಬಹೂದಶ್ಚ ಹಂಸಃ ಪರಮಹಂಸಕಃ । ವೇದಮಾತ್ರಪರಿತ್ಯಾಗೀ ಚಂಡಾಲಾದಧಮಃ ಸ್ಮೃತಃ ॥ ಎಂದು ಉಶನಸರೂ, ಬ್ರಾಹ್ಮಣ್ಯಂ ಚ ಕುತಸ್ತೇಷಾಂ ಗಾಯತ್ರೀರಹಿತಾತ್ಮನಾಂ ಎಂದು ವಸಿಷ್ಠರೂ ದೃಢೀಕರಿಸಿರುವರು. ॥೨-೩॥

ಅವ॥ (೧) ಯೋ ಹ ವಾ ಅವಿದಿತಾರ್ಷಛಂದೋದೈವತ ಬ್ರಾಹ್ಮಣೇನ ಮಂತ್ರೇಣ ಯಜತಿ ಯಜಯತಿ ಅಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತೇ ವಾ ಪದ್ಯತೇ ಪ್ರ ವಾ ಮೀಯತೇ ವಾ ಇತಿ ಶ್ರುತಿಃ (೨) ದೇವರ್ಷಿಛಂದಾಂಸಿ ಸಮ್ಯಗೇವ ವಿಚಾರಯೇತ್॥ ಮೃತ್ಯುಸ್ಸ್ಯಾದ್ದೇವತಾಽಜ್ಞಾನೇ ಛಂದೋಽಜ್ಞಾನೇ ತು ನಿಷ್ಫಲಂ ॥ ಅಂಗನ್ಯಾಸಂ ತಥಾ ಧ್ಯಾನಂ ಸಮ್ಯಗೇವಸಮಭ್ಯಸೇತ್ । ನ್ಯಾಸಹೀನೇ ಹರೇದಾಯುಃ ಧ್ಯಾನಹೀನೇ ತು ನಿಷ್ಫಲಂ ॥ ಇತಿಸ್ಮೃತಿಃ॥ (೩) ಋಷಿಛಂದೋ ದೈವತಾನಿ ಜ್ಞಾತ್ವಾಽರ್ಥಂ ಚೈವ ಭಕ್ತಿತಃ । ಸ್ವಾಧ್ಯಾಯೇನೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥ ಇತಿಸ್ಮೃತಿಃ ॥ ಇತ್ಯಾದಿ ಪ್ರಮಾಣಗಳಿಂದ ಎಲ್ಲಾ ಮಂತ್ರಗಳನ್ನು ಜಪಿಸುವಾಗಲೂ, ಪಠಿಸುವಾಗಲೂ ಋಷ್ಯಾದಿಗಳನ್ನು ತಿಳಿದರೇನೇ ಮೋಕ್ಷವಾಗುವುದು. ಇಲ್ಲವಾದರೆ ಮಹಾನರ್ಥವುಂಟಾಗುವುದು. (೪) ಮತ್ತು ಛಂದಸ್ಸನ್ನು ಛಂದಸ್ತ್ವೇನ ಮುನಿತ್ವೇನ ತಾಸಾಂ ಸ್ಮೃತಿರುದಾಹೃತಾ ॥ ಎಂಬ ಪ್ರಮಾಣಾನುಸಾರ ಛಂದಸ್ಸುಗಳ

ದೇವತೆಗಳನ್ನು ತಿಳಿದುಕೊಳ್ಳಬೇಕು. ಆದ ಕಾರಣ ಪ್ರಕೃತ ಪ್ರಣವ ಮಂತ್ರಕ್ಕೆ ಋಷ್ಯಾದಿಗಳನ್ನು ಹೇಳುತ್ತಾರೆ.

**ಮೂ॥ ಋಷಿ ಛಂದೋ ದೈವತಾನಿ ಬ್ರೂಯಾತ್ತಸ್ಯ ಕ್ರಮಾತ್ಸುಧೀಃ ॥೩॥**
**ಅಂತರ್ಯಾಮೀತಿ ಗಾಯತ್ರೀ ಪರಮಾತ್ಮೇತ್ಯನುಕ್ರಮಾತ್ ॥೪॥**

ಅ॥ ಆ ಪ್ರಣವ ಮಂತ್ರಕ್ಕೆ ಅಂತರ್ಯಾಮಿಯು ಋಷಿಯು. ದೈವೀಗಾಯತ್ರೀ ಛಂದಸ್ಸು. ಶ್ರೀ ಪರಮಾತ್ಮನು (ಶ್ರೀ ನಾರಾಯಣನು) ದೇವತೆಯು, ಎಂದು ಅನುಕ್ರಮವಾಗಿ ಜ್ಞಾನಿಗಳಾದ ಗುರುಗಳು ಶಿಷ್ಯನಿಗೆ ಉಪದೇಶಿಸಬೇಕು.

ಪ॥ (1) ಅಂತರ್ಯಾಮೀ = ಎಲ್ಲರ ಶರೀರದೊಳಗೆ ನಿಯಾಮಕವಾಗಿದ್ದು ಆವಾವ ಕಾರ್ಯಗಳನ್ನು ಮಾಡಿಸುವ ಭಗವದ್ರೂಪ ವಿಶೇಷವು. ಋಷಿಯು (2) ಋಷಿಶ್ಚ ದೇವತ್ಯೇಕೋಽಹಂ ತಾರಾದೀನಾಂ ವಿಶೇಷತಃ ॥ (ತಂತ್ರಸಾರ) (ಅ. ೧. ಶ್ಲೋ. ೧೭) ಪ್ರಣವ ಮೊದಲಾದ ಎಲ್ಲಾ ಮಂತ್ರಗಳಿಗೂ ವಾರಾಹಾದಿ ಮಂತ್ರಗಳಿಗೂ ಆಗಮಾಂತರದಲ್ಲಿ ಹೇಳಿದ ಇತರ ಮಂತ್ರಗಳಿಗೂ ನಾನೇ ಮುಖ್ಯ ಋಷಿಯು. (ಮಂತ್ರದ್ರಷ್ಟನು.) ನಾನೇ ದೇವತೆಯು (ಮುಖ್ಯ ಪ್ರತಿಪಾದ್ಯನು) ಎಂದು ಚತುರ್ಮುಖನನ್ನು ಕುರಿತು ಮೂಲರೂಪಿ ಶ್ರೀ ನಾರಾಯಣನು ಉಪದೇಶಿಸಿರುವನು. ಆದುದರಿಂದ ಮೂಲರೂಪಿ ಶ್ರೀ ನಾರಾಯಣನೇ ಋಷಿಯು. ಮತ್ತು ದೇವತೆಯು, ಎಂದು ತಿಳಿದುಕೊಳ್ಳಬೇಕು. (3) ರಮಾ ಬ್ರಹ್ಮಾದಿಗಳು ಋಷಿಗಳೆಂದು ಹೇಳಿದ ಮಂತ್ರಗಳಲ್ಲಿಯೂ ಅವರು ಅಮುಖ್ಯ ಋಷಿಗಳು. ಶ್ರೀ ನಾರಾಯಣನೇ ಮುಖ್ಯ ಋಷಿಯೆಂದು ತಿಳಿದುಕೊಳ್ಳಬೇಕು. (4) ಹಾಗಾದರೆ ಋಷಿ ಛಂದಸ್ಸು ದೇವತೆಗಳನ್ನು ಯಾವ ಕ್ರಮದಿಂದ ಪಠಿಸಬೇಕೆಂದರೆ "ಋಷಿದೈವತ ಛಂದ ಊಹನಿರ್ಣಯಃ" ಇತ್ಯಾದಿಗಳಿಂದ ತತ್ವವಿಚಾರವನ್ನು ಮಾಡುವಾಗ ಪ್ರಥಮತಃ ಋಷಿ ದೇವತೆಗಳು, ಕೊನೆಗೆ ಛಂದಸ್ಸು ಎಂದು ಕೆಲವರು ಹೇಳುವರು. ಆದರೆ ಅದು ಯುಕ್ತವಲ್ಲ (5) ಏಕೆಂದರೆ ನಿಯಮೋಽಯಂ ಜಪೇ ಹೋಮೇ ಋಷಿ ಛಂದೋಽಥ ದೈವತಂ। ಅನ್ಯಥಾ ಚೇತ್ಪ್ರಯುಂಜಾನಃ ತತ್ಫಲಂ ಚಾತ್ರ ಹೀಯತೇ ॥ (ಇತಿಬೃಹದ್ದೇವತಾ) (6) ಋಷಿಂ ತು ಪ್ರಥಮಂ ಬ್ರೂಯಾತ್ ಛಂದಸ್ತು ತದನಂತರಂ। ದೇವತಾಮಥ ಮಂತ್ರಾಣಾಂ ಕರ್ಮಸ್ವೇವಮಿತಿ ಶ್ರುತಿಃ। (7) ಋಷಿಛಂದೋ ದೈವತಂ ಚ ವಿನಿಯೋಗಮನುಕ್ರಮಾತ್ ॥ (ಇತಿ ಆಚಾರ್ಯಖಂಡ) (8) ಋಷಿಮಾದೌ ಪ್ರಯುಂಜೀತ ಛಂದೋ ಮಧ್ಯೇ ಪ್ರಯೋಜಯೇತ। ದೇವತಾಮವಸಾನೇಚ ಮಂತ್ರಜ್ಞೋ ಮಂತ್ರಸಿದ್ಧಯೇ ॥ (ಇತಿ ಗೃಹ್ಯಕಾರಃ) (9) ಇದು ಮೊದಲಾದ ಪ್ರಮಾಣಗಳಿಂದ ಅನುಕ್ರಮವಾಗಿ ಋಷಿ ಛಂದಸ್ಸು ದೇವತೆಗಳನ್ನು ಪಠಿಸಬೇಕೆಂದು ಸಿದ್ಧವಾಯ್ತು. ಇತ್ಯಾದಿ ಪ್ರಮಾಣಗಳನ್ನು ಅನುಸರಿಸಿಯೇ ಶ್ರೀ ಮದಾಚಾರ್ಯರೂ ಹಾಗೆಯೇ ಉಪದೇಶಿಸಿರುವರು.

ಗಾಯತ್ರೀ (1) ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ ॥ (ತಂತ್ರಸಾರ, ೧, ೧೭) ಪ್ರಣವ ಅಷ್ಟಾಕ್ಷರಗಳಿಗೆ ನನ್ನ ಪತ್ನಿಯಾದ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ದೈವೀಗಾಯತ್ರಿಯು ಛಂದಸ್ಸು (2) ಅಭಿಮಾನಿನೀ ತು ಗಾಯತ್ರ್ಯಾಃ ಮುಖ್ಯಾ ಶ್ರೀಃ ಪರಿಕೀರ್ತಿತಾ। ಬ್ರಹ್ಮಾಣ್ಯಮುಖ್ಯತೋ ಜ್ಞೇಯಾ ಎಂದು ಬೃಹದ್ಭಾಷ್ಯದಲ್ಲಿ ಹೇಳಿದಂತೆ ಗಾಯತ್ರೀ ಛಂದಸ್ಸಿಗೆ ಲಕ್ಷ್ಮೀದೇವಿಯು ಮುಖ್ಯಾಭಿಮಾನಿನಿಯು, ಸರಸ್ವತಿಯು ಅಮುಖ್ಯಾಭಿಮಾನಿನಿಯು, ಎಂದು ತಿಳಿದುಕೊಳ್ಳಬೇಕು, (3) ಇಂತಹ ಗಾಯತ್ರೀ ಛಂದಸ್ಸಿಗೆ ಲಕ್ಷ್ಮ್ಯಾದಿಗಳು ಅಭಿಮಾನಿಗಳಾಗಿದ್ದರೂ ಮುಖ್ಯತಃ ಗಾಯತ್ರೀ ಎನಿಸಿಕೊಂಡವನು ಶ್ರೀ ಹರಿಯೇ.(4) ಹೇಗೆಂದರೆ ಅಸಿತ್ವತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ। ನಾಶಶ್ಚತುರ್ವಿಧಃ ಎಂದು ಹೇಳಿದ ನಾಲ್ಕು ವಿಧ ನಾಶ ರಹಿತನಾದುದರಿಂದ ಅಕ್ಷರವೆನಿಸಿದ ಶ್ರೀ ವಿಷ್ಣು ನಾಮಕ ಪರಬ್ರಹ್ಮನೇ ಗಾಯಂತಂ ತ್ರಾಯತೇ (ತ್ರೈಜ್‌ಪಾಲನೇ) ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ಗಾಯಂತು ತ್ರಾಯತೇ ಯಸ್ಮಾದ್ಗಾಯತ್ರ್ಯೇ ಷೋ ಬುಧೈಃ ಸ್ಮೃತಃ ॥ ಎಂಬ ಸ್ಮೃತ್ಯನುಸಾರ ಗಾನ ಮಾಡುವವನನ್ನು ರಕ್ಷಿಸುವುದರಿಂದ ಅಥವಾ ತ್ರೈಜ್ ರಕ್ಷಣೇ ಗಾನದಿಂದ ರಕ್ಷಿಸುವುದರಿಂದ ಅಥವಾ "ಗಾಯತಿ ತ್ರಾಯತಿ ಚ" ಎಂಬ ಶ್ರುತಿಯಿಂದ ಗಾನ ರಕ್ಷಣೆಗಳನ್ನು ಮಾಡುವುದರಿಂದ ಗಾಯತ್ರೀ ಎನಿಸುತ್ತಾನೆ. (5) ಹಾಗಾದರೆ ಗಾಯತ್ರೀ ಶಬ್ದವಾಚ್ಯನು ಶ್ರೀ ವಿಷ್ಣುವೆಂದು ಹೇಳುವುದಾದರೆ ಸ್ತ್ರೀಲಿಂಗ ಪ್ರಯೋಗವು ಹೇಗೆ ಕೂಡುವುದು? ಎಂದರೆ ತತೋ ಹರಿರ್ಜಗೃಹೇ ಸ್ತ್ರೀವಪುಶ್ಚ ನಾರಾಯಣೇತಿ ಪ್ರವದಂತಿ ಲೋಕೇ ॥ (ಗ, ಪು, ಅಧ್ಯಾ ೧೫ ಶ್ಲೋ, ೧೯) ಎಂಬ ಪ್ರಮಾಣದಿಂದ ಶ್ರೀ ಪರಮಾತ್ಮನಿಗೆ ಸ್ತ್ರೀರೂಪವಿದ್ದುದರಿಂದ ಅಥವಾ ಶಬ್ದ ಸ್ವಭಾವವಾದುದರಿಂದ ಗಾಯತ್ರೀ ಎಂದು ಸ್ತ್ರೀಲಿಂಗ ಶಬ್ದ ಪ್ರಯೋಗವು ಸಂಗತವಾಗುವುದು. (6) ಸೈಷಾ ಚತುಷ್ಪದಾ ಗಾಯತ್ರೀ ಎಂಬುವ ಪ್ರಮಾಣದಿಂದ

ಗಾಯತ್ರಿಗೆ (೪) ನಾಲ್ಕು ಪಾದಗಳು. ಆ ನಾಲ್ಕು ಪಾದಗಳಿಂದ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿರತಕ್ಕ, ನಾರಾಯಣ ವಾಸುದೇವ, ವೈಕುಂಠ. ಸರ್ವಜೀವಾಂತರ್ಗಸ್ವರೂಪ ಹೀಗೆ ನಾಲ್ಕು ಭಗವದ್ರೂಪಗಳು ಪ್ರತಿಪಾದಿಸಲ್ಪಡುತ್ತವೆ. (7) ಅಥವಾ ಗಾಯತ್ರೀ ನಾಮಕ ಶ್ರೀ ವಿಷ್ಣುವಿಗೆ ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿ ಸ್ವರೂಪಭೂತಗಳಾದವುಗಳು ಮೂರು. ಪಾದೋಽಸ್ಯ ವಿಶ್ವಾಭೂತಾನಿ।ತ್ರಿಪಾದಸ್ಯಾಮೃತಂ ದಿವಿ । ಎಂಬ ಶ್ರುತಿಯಿಂದ ಸರ್ವಜೀವರೆಂಬುವುದು ಒಂದು. ಹೀಗೆ ನಾಲ್ಕು ಪಾದಗಳು. (8) ಅತಏವ ತ್ರಿಭಿಃ ಸ್ವರೂಪಪಾದೈಶ್ಚ ಭಿನ್ನೇನೈಕೇನ ಚೈವ ಹಿಃ ಗಾಯತ್ರೀನಾಮಕೋ ವಿಷ್ಣುಃ ಚತುಷ್ಪಾತ್ಸಂಪ್ರಕೀರ್ತಿತಃ ॥೧॥ ಭಿನ್ನಪಾದಾಃ ಸರ್ವಜೀವಾಃ। ತತ್ತತ್ಸಾದೃಶ್ಯಮಾತ್ರತಃ । ಸ್ವರೂಪಪಾದಾಃ ವಿಷ್ಣೋಸ್ತು ತ್ರಯೋ ಹಿ ದಿವಿ ಸಂಸ್ಥಿತಾಃ ॥೨॥ ನಾರಾಯಣೋ ವಾಸುದೇವೋ ವೈಕುಂಠ ಇತಿ ಚ ತ್ರಯಃ॥...... ಏವಂಚಾಪಿ ಚತುಷ್ಪಾತ್ತ್ವಂ ವಾಸುದೇವಸ್ಯ ಕೀರ್ತಿತಂ ॥ ಎಂದು ಬೃಹದ್ಭಾಷ್ಯದಲ್ಲಿ ಹೇಳದಂತೆಯೂ 3 ಸ್ವರೂಪ ಭೂತಗಳಾದವುಗಳು. ಒಂದು ಭಿನ್ನಾಂಶವು ಹೀಗೂ ಉಪಪನ್ನವಾಗುವುದು. (9) ಹೀಗೆಯೇ ಬೇರೆ ರೀತಿಯಾಗಿಯೂ ನಾಲ್ಕು ಪಾದಗಳೆನ್ನುವುದು ಸಂಗತವಾಗುವುದು. ವಿಸ್ತರಭಯದಿಂದ ವಿವರಿಸುವುದಿಲ್ಲ. (10) ಗಾಯತ್ರೀ ಎಂಬ ಕಲ್ಪದಲ್ಲಿ ಗಾಯತ್ರಿಗೆ (೩) ಮೂರೇ ಪಾದಗಳು. ಆಗ ಚತುರ್ಥಪಾದೋ ಗಾಯತ್ರ್ಯಾಃ ಪ್ರಣವಸ್ಸಮುದಾಹೃತಃ ಎಂದು ಬೃಹದ್ಭಾಷ್ಯದಲ್ಲಿ ಹೇಳಿದಂತೆ ಪ್ರಣವವು ಗಾಯತ್ರಿಯ ೪ನೇ ಪಾದವು. ಹೀಗೆ ನಾಲ್ಕು ಪಾದಗಳನ್ನುವುದು ಕೂಡುವುದು. (11) ಗಾಯತ್ರೀ ತ್ವನಿರುದ್ಧೋಽಸೌ ತ್ರಿಕಾಲೇಗೀಯತೇಃ ಯತಃ॥ (ಐತ. ೨.೩.೪.) ಎಂಬ ಪ್ರಮಾಣಾನುಸಾರ ಗಾಯತ್ರೀ ಎನಿಸಿಕೊಂಡವನು ಅನಿರುದ್ಧನು. (12) ವೇದಮಾತಾ ತು ಗಾಯತ್ರೀ ವೇದಗಳ ಅಭಿವ್ಯಕ್ತಿಗೆ ಕಾರಣವಾಗಿರುವುದರಿಂದಲೂ ವೇದಾಧ್ಯೇತೃಗಳಿಗೆ ಬ್ರಾಹ್ಮಣ್ಯವನ್ನು ಸಂಪಾದಿಸಿಕೊಟ್ಟು ವೇದಗಳಿಗೆ ಪೋಷಕವಾಗಿರುವುದರಿಂದಲೂ ಗಾಯತ್ರಿಯು ವೇದಮಾತಾ ಎನಿಸುತ್ತದೆ. (13) ಹಾಗಾದರೆ ಗಾಯತ್ರೀ ತ್ರಿಪದಾ ದೇವೀ ಎಂದು ಗಾಯತ್ರಿಗೆ ಮೂರು ಪಾದಗಳೆಂದದ್ದು ಹೇಗೆ ಸಂಗತವಾಗುವುದೆಂದರೆ-ಗಾಯತ್ರೀ ಶಬ್ದದಿಂದ ಪ್ರಸಿದ್ಧವಾದುದನ್ನು ಇಟ್ಟುಕೊಂಡರೆ ಮೂರು ಪಾದಗಳೆಂದದ್ದು ಸಂಗತವೇ ಆಗುವುದು. ಶ್ರೀ ವಿಷ್ಣುವನ್ನು ಇಟ್ಟುಕೊಳ್ಳುವಾಗ ಶ್ವೇತದ್ವೀಪ ಮೊದಲಾದ ೩ ಮಂದಿಗಳಲ್ಲಿರುವ ನಾರಾಯಣ ವಾಸುದೇವ ವೈಕುಂಠರೆಂಬ ೩ ಭಗವದ್ರೂಪಗಳನ್ನು ಇಟ್ಟುಕೊಳ್ಳಬೇಕು. ಹೀಗೆ ಮೂರು ಪಾದಗಳೆನ್ನುವುದು ಸಂಗತವಾಗುವುದು. (14) ಇಂತಹ ಗಾಯತ್ರಿಯನ್ನು ಯಾರು ಯಾರು ಎಷ್ಟು ಎಷ್ಟು ಜಪಿಸಬೇಕೆಂದರೆ-ಸ್ಮೃತಿರತ್ನಾಕರೇಯಾಜ್ಞವಲ್ಕ್ಯಃ॥ ಬ್ರಹ್ಮಚಾರ್ಯಾಹಿರಾಗ್ನಿಶ್ಚ ಶತಮಷ್ಟೋತ್ತರಂ ಜಪೇತ್। ವಾನಪ್ರಸ್ಥೋ ಯತಿ ಶ್ಚೈವ ಸಹಸ್ರಾದಧಿಕಂ ಜಪೇತ್॥ (15) ಸಂವರ್ತ॥ ಗೃಹಸ್ಥೋ ಬ್ರಹ್ಮಚಾರೀ ಚ ಶತಮಷ್ಟೋತ್ತರಂ ಜಪೇತ್। ವಾನಪ್ರಸ್ಥೋ ಯತಿಶ್ಚೈವ ಜಪೇದಷ್ಟ ಸಹಸ್ರಕಂ ॥(16) ಭರದ್ವಾಜಃ॥ ಅಷ್ಟೋತ್ತರಸಹಸ್ರಂ ವಾ ಶತಮಷ್ಟೋತ್ತರಂ ತು ವಾಜಪ್ಯಾತ್ವಷ್ಟಾವಿಂಶತಿಂ ವಾಪಿ ಬೀಜಶಕ್ತಿಕ್ರಮಾಜ್ಜಪೇತ್ ಇಂದು ಮೊದಲಾದ ಬಹು ಪ್ರಮಾಣಗಳಿಂದ ಸನ್ಯಾಸಿಗಳೂ ಸಹಸ್ರಾಧಿಕ ಗಾಯತ್ರೀ ಜಪ, ಮಾಡಬೇಕೆಂದು ತೋರುತ್ತದೆ ಆದರೆ ಸಂಪ್ರದಾಯದಲ್ಲಿ ೧೦ ವಿಶ್ವಾಮಿತ್ರ ಗಾಯತ್ರೀ ಜಪ ಮಾಡುವುದು ರೂಢಿಯಲ್ಲಿದೆ. ಆವಿಷಯದಲ್ಲಿ ಪ್ರಮಾಣವು ದೊರಕಲಿಲ್ಲ. ಆದರೆ ವಿಶ್ವಾಮಿತ್ರಸ್ತು ಸಂಧ್ಯಾರ್ಥೇ ಎಂದು ಆಚಾರ್ಯರು ತಂತ್ರಸಾರದಲ್ಲಿ ಹೇಳಿದಂತೆ ಸನ್ಯಾಸಿಗಳೂ ಸಂಧ್ಯಾವಂದನೆಯ ಪ್ರತಿನಿಧಿಯಾಗಿ ೧೦ ವಿಶ್ವಾಮಿತ್ರ ಗಾಯತ್ರೀ ಜಪವನ್ನು ಮಾಡುವುದೆಂದು ತೋರುತ್ತದೆ. ಯತಿಗಳೂ ಸಹಸ್ರಾಧಿಕ ಗಾಯತ್ರೀ ಜಪ ಮಾಡಬೇಕೆಂದು ಹೇಳಿದ್ದು ತದನ್ಯತ್ರ ಪ್ರಜಾಪತಿಃ । ಎಂದು ಆಚಾರ್ಯರು ಹೇಳಿದಂತೆ ಬ್ರಹ್ಮಗಾಯತ್ರೀ ಪರವೆಂದು ತೋರುತ್ತದೆ. ಶಿಷ್ಟಾಚಾರದಿಂದಲೇ ವ್ಯವಸ್ಥೆ ಮಾಡಿಕೊಳ್ಳುವುದು ಎಂದು ನಮ್ಮಭಿಪ್ರಾಯ.

ಪರಮಾತ್ಮಾ (1) ಯೋ ಹರಿಃ ಯಃ ಪರಮಃ ಯೋ ವಿಷ್ಣುಃ । ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ ॥ (3) ಆತ್ಮೈಕಸ್ತು ಜನಾರ್ದನಃ ॥ (4) ಏಷ ಉ ಏ ಬ್ರಹ್ಮ ಏ ಷ ಉ ಏವಾತ್ಮಾ (5) ಆತ್ಮಾ ಅಂತರಾತ್ಮೇತಿ ಹರಿರೇಕೇವ (6) ಆತ್ಮಾಹಿ ಪರಮಃ ಸ್ವತಂತ್ರಃ ಅಧಿಗುಣಃ (7) ಬ್ರಹ್ಮಾತ್ಮಾ ವಿಷ್ಣುರೇ ವ ಹಿ ॥ (8) ಆತ್ಮ ಬ್ರಹ್ಮಾದಯ ಶ್ಶಬ್ದಾಸ್ಸ್ಮೃತೇ ವಿಷ್ಣುಮವ್ಯಯಂ । ನ ಸಂಭವಂತಿ ಯಸ್ಮಾತ್ತೈ ರ್ನೈವಾಪ್ತಾ ಗುಣಪೂರ್ಣತಾ ॥(9) ಯ ಆತ್ಮಾ ಅಪಹತಪಾಪ್ಮಾ ವಿಷ್ಣುರೇವ ಜ್ಯೋತಿಃ ವಿಷ್ಣುರೇವಾತ್ಮಾ ವಿಷ್ಣುರೇವ ಬ್ರಹ್ಮ ಇದು ಮೊದಲಾದ ಶ್ರುತಿ ಸ್ಮೃತ್ಯಾದಿಗಳಿಂದ ಪ್ರತಿಪಾದಿಸಲ್ಪಟ್ಟವನು ಬ್ರಹ್ಮರುದ್ರಾದಿ ದೇವತೆಗಳಿಂದುತ್ತಮನಾದುದರಿಂದ ಪರಮನೆಂದೂ ಸರ್ವಗುಣಪರಿಪೂರ್ಣನಾದುದರಿಂದ ಆತ್ಮನೆಂದೂ ಅನಿಸಿಕೊಂಡ ಶ್ರೀ ಪರಮಾತ್ಮನು ಪ್ರಣವ ಮಹಾಮಂತ್ರಕ್ಕೆ ದೇವತೆಯು (ಪ್ರತಿಪಾದ್ಯನು) (11) ಸ್ರವತ್ಯನೋಂಕೃತಂ

ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ॥ ಇತ್ಯಾದಿ ಪ್ರಮಾಣಗಳಿಂದ ಆದ್ಯಂತಗಳಲ್ಲಿ ಓಂಕಾರವನ್ನುಚ್ಚರಿಸಬೇಕು. ಅಂತೂ ಮೂರು ಓಂಕಾರಗಳು. (12) ಪ್ರಣವಮಂತ್ರಕ್ಕೆ ಆದ್ಯಂತಗಳಲ್ಲಿ ಓಂಕಾರವನ್ನುಚ್ಚರಿಸಬೇಕೆಂಬ ನಿಯಮವಿಲ್ಲವೆಂದು ಕೆಲವರು ಅನ್ನುವರು. ಆ ವಿಷಯದಲ್ಲಿ ಪ್ರಮಾಣವು ಕಂಡುಬರಲಿಲ್ಲ. ಉಪದೇಶಾನುಸಾರವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು. ॥೩-೪॥

ಅವ॥ ಪ್ರಣವ ಪ್ರತಿಪಾದ್ಯದೇವತೆ, ಪ್ರಣವಸ್ವರೂಪಗಳನ್ನು ಹೇಳುತ್ತಾರೆ.

**ಮೂ॥ ವಿಶ್ವಶ್ಚ ತೈಜಸಃ ಪ್ರಾಜ್ಞಃ ತುರ್ಯಶ್ಚಾಕ್ಷರದೇವತಾಃ ॥೪॥ ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ। ಪರಂಜ್ಯೋತಿಃ ಪರಂಬ್ರಹ್ಮ ವಾಸುದೇವ ಇತಿ ಕ್ರಮಾತ್ ॥೫॥ ಅಕಾರಾದೇಸ್ತಥಾ ಶಾಂತಾತಿಶಾಂತಾಂತಸ್ಯ ದೇವತಾಃ ॥೬॥**

ಅ॥ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಎಂಬ ೪ ಭಗವದ್ರೂಪಗಳು ಪ್ರಣವಾಂಶಗಳಾದ ಅಕಾರ ಉಕಾರ ಮಕಾರ ನಾದ ಎಂಬ ೪ ವರ್ಣಗಳಿಗೆ ದೇವತೆಗಳು (ಅಂದರೆ ಅಕಾರಾದಿ ನಾಲ್ಕು ವರ್ಣಗಳಿಂದ ಪ್ರತಿಪಾದ್ಯಗಳು, ಹಾಗೆಯೇ ಕೃಷ್ಣ ರಾಮ ನರಸಿಂಹ ವರಾಹ ವಿಷ್ಣು ಪರಂಜ್ಯೋತಿ. ಪರಂಬ್ರಹ್ಮ, ವಾಸುದೇವ ಎಂಬ ೮ ಭಗವದ್ರೂಪಗಳು ಕ್ರಮವಾಗಿ ಪ್ರಣವಾಂಶವಾದ ಅಕಾರವನ್ನಾರಂಭಿಸಿ ಶಾಂತ, ಅತಿಶಾಂತ, ಪರ್ಯಂತ ೮ ಅಕ್ಷರಗಳಿಗೆ ದೇವತೆಗಳು.

ವಿ॥ (1) ಪ್ರಣವವು ಅಕಾರ, ಉಕಾರ, ಮಕಾರ, ನಾದ, ಬಿಂದು, ಘೋಷ, ಶಾಂತ, ಅತಿಶಾಂತ, ಎಂಬ ೮ ಅಕ್ಷರಾತ್ಮಕವು. (2) ನಾದಾದ್ವಿನಿರ್ಗತೋ ಬಿಂದುಃ ಬಿಂದೋರ್ಜಾತಾ ಕಲಾ ತತಃ ॥ ಎಂಬ ಪ್ರಮಾಣದಿಂದ ಘೋಷಸ್ಥಾನದಲ್ಲಿ ಕಲಾ ಎಂದು ಕ್ವಚಿತ್ ವ್ಯವಹಾರವು ಆದುದರಿಂದಲೇ ಅಕಾರಾದ್ಯತಿ ಶಾಂತಾಂತಃ ಪ್ರಣವೋಽಷ್ಟಾಕ್ಷರೋ ಮತಃ ಎಂಬುವ ತಂತ್ರಸಾರ ವ್ಯಾಖ್ಯಾನದಲ್ಲಿ ಪ್ರಣವಮಂತ್ರಕ್ಕೆ ಅಕಾರ ಉಕಾರಾದಿ ೮ ಅಕ್ಷರಗಳನ್ನು ಹೇಳಿರುವರು. (3) ವಿಶಿಷ್ಟ ಪ್ರಣವವು ಗುಣ ಪೂರ್ಣವಾದ ಶ್ರೀವಿಷ್ಣುವನ್ನು ಪ್ರತಿಪಾದಿಸುತ್ತದೆ. ಪ್ರಣವದ ಅಂಶಗಳಾದ ಅಕಾರಾದಿಗಳಿಂದ ವಿಶ್ವಾದಿಭಗವದ್ರೂಪಗಳು ವಾಚ್ಯಗಳು-(4) ಆದ್ಯೈಸ್ತಾರಚತುರ್ವರ್ಣೈರ್ಭಿನ್ನಾ ವ್ಯಾಹೃತಯಃ ಕ್ರಮಾತ್। ಪ್ರಣವ ಮಂತ್ರದ ಪ್ರಾಥಮಿಕ ಅಕಾರ, ಉಕಾರ, ಮಕಾರ, ನಾದ ಎಂಬ ೪ ವರ್ಣಗಳಿಂದ ಭೂಃಭುವಃ ಸ್ವಃ (ಎಂದು ವ್ಯಸ್ತ) ಭೂರ್ಭುವಃಸ್ವಃ ಎಂದು ಸಮಸ್ತ ವ್ಯಾಹೃತಿಗಳು ವ್ಯಕ್ತಗಳಾಗುತ್ತವೆ; ಎಂದು ತಂತ್ರಸಾರದಲ್ಲಿ ಹೇಳಿದಂತೆ ಇಲ್ಲಿಯೂ ಅಕಾರಾದಿ ನಾಲ್ಕು ಅಕ್ಷರಗಳಿಂದ ವಿಶ್ವಾದಿ ೪ ಭಗವದ್ರೂಪಗಳು ಪ್ರತಿಪಾದ್ಯಗಳಾಗುತ್ತವೆ. (5) ನಾದವು ಬಿಂದ್ವಾದಿಗಳಿಗೆ ಜನಕವಾಗಿರುವುದರಿಂದಲೂ ನಾದವು ವಿನಹ ಅಕಾರಾದಿಗಳ ಉಚ್ಚಾರಣೆಯಾಗದಿರುವುದರಿಂದಲೂ ಬಿಂದ್ವಾದಿಗಳಿಗಿಂತ ಪ್ರಧಾನವಾಗಿರುವ ಪ್ರಯುಕ್ತ 'ವಿಶ್ವಶ್ಚ, ತೈಜಸಃ, ಪ್ರಾಜ್ಞಃ ತುರ್ಯಶ್ಚಾಕ್ಷರದೇವತಾಃ' ಎಂದು ಅಕಾರಾದಿ ನಾಲ್ಕು ಅಕ್ಷರಗಳ ದೇವತೆಗಳನ್ನು ಒಂದೊಮ್ಮೆ ಹೇಳಿ ತಿರುಗಿ ಕೃಷ್ಣೋರಾಮಃ ಇತ್ಯಾದಿಗಳಿಂದ ಅಕಾರಾದಿ ೮ ಅಕ್ಷರಗಳ ದೇವತೆಗಳನ್ನು ಹೇಳಿರುವರು. (6) ಮತ್ತು ಇಲ್ಲಿ ಅಕಾರ ಉಕಾರ ಮಕಾರ ನಾದ ಎಂಬುವುದು ೪ ಅಕ್ಷರಗಳು ಪ್ರಣವದಲ್ಲಿ ಪ್ರಧಾನಾಕ್ಷರಗಳೆಂಬ ವಿವಕ್ಷೆಯಿಂದ ವಿಶ್ವಾದಿ ೪ ಭಗವನ್ಮೂರ್ತಿಯನ್ನು ಹೇಳಿರುವರು. (7) ನಾದದಿಂದ ಹುಟ್ಟತಕ್ಕ ಬಿಂದ್ವಾದಿಗಳೂ ಪೃಥಕ್ ಅಕ್ಷರಗಳೇ ಎಂಬ ವಿವಕ್ಷೆಯಿಂದ ಕೃಷ್ಣಾದಿ ೮ ರೂಪಗಳನ್ನು ಹೇಳಿರುವರು. (8) ಕೃಷ್ಣೋ ರಾಮೋ ನೃಸಿಂಹಶ್ಚ ಎಂಬುವಲ್ಲಿದ್ದ ಚ ಶಬ್ದಗಳು ಇಲ್ಲಿ ಹೇಳದೆ ತಂತ್ರಸಾರದಲ್ಲಿ ಹೇಳಿದ್ದ ಸವಿಶ್ವ ತೈಜಸ ಪ್ರಾಜ್ಞ ತುರೀಯಾತ್ಮಾಂತರಾತ್ಮನಾಂ ಪರಮಾತ್ಮಜ್ಞಾನಾತ್ಮಯುಜಾಂ ಎಂಬ ವಿಶ್ವ ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ಎಂಟು ಭಗವದ್ರೂಪಗಳನ್ನು ಅಕಾರಾದಿ ೮ ವರ್ಣಗಳು ಹೇಳುತ್ತವೆ, ಎಂದು ಸೂಚಿಸುತ್ತದೆ. (9) (10) ಪ್ರಣವ ಮಂತ್ರಕ್ಕೆ ೮ ಅಕ್ಷರಗಳೆಂದು ಹೇಳಿದ್ದು ಅಯುಕ್ತವು ಏಕೆಂದರೆ-ಪ್ರಣವಾಂಶಗಳಾದ ನಾದಾದಿಗಳು ವರ್ಣಧರ್ಮಗಳಾಗಿವೆ. ವರ್ಣಗಳಲ್ಲ. ನಾದಾದಿಗಳೂ ವರ್ಣಗಳಾದರೆ ೫೦ ಅಕ್ಷರಗಳಿಗಿಂತ ಹೆಚ್ಚು ಅಕ್ಷರಗಳು ಆಗಬೇಕಾಗುವುವು. (11) ಹಾಗೆ ಅಂಗೀಕರಿಸಿದರೆ ಪಂಚಾಶದ್ವರ್ಣವಾಚ್ಯಾಸ್ತಾಃ ವರ್ಣಾಸ್ತಾರಾರ್ಣಭೇದಿತಾಃ। ಇತ್ಯಾದಿ ತಂತ್ರಸಾರದಲ್ಲಿ ೫೦ ವರ್ಣಗಳೆಂದೂ ವರ್ಣಗಳು ವರ್ಣಾಂತರಗಳಿಗೆ ಅಭಿವ್ಯಂಜಕಗಳೆಂದೂ ಹೇಳಿದ್ದು ವಿರುದ್ಧವಾಗುವುದು (12) ಆದಕಾರಣ ೫೦ ವರ್ಣಗಳೆಂದು ಹೇಳಿದ ಕಾರಣ ನಾದಾದಿಗಳು ವರ್ಣಗಳಲ್ಲ. ವರ್ಣಧರ್ಮಗಳೇ ಎಂದರೆ-(೧) ಸೋಽಯಮಷ್ಟಾಕ್ಷರೋ ಮತಃ ।(೨) ವರ್ಣಾಸ್ತಾರಾರ್ಣ ಭೇದಿತಾಃ (೩) ತಾರೋಽಷ್ಟಾಕ್ಷರ ಭೇದವಾನ್ (೪) ಆದ್ಯೈಸ್ತಾರ ಚತುರ್ವರ್ಣೈಃ (೫) ಆದಿವರ್ಣತ್ರಯಂ ಇತ್ಯಾದಿ ಪ್ರಕಾರ ತಂತ್ರಸಾರದಲ್ಲಿ ಅಕಾರಾದಿಗಳಂತೆಯೇ ನಾದಾದಿಗಳನ್ನೂ ವರ್ಣಗಳೆಂದೇ ಪ್ರತಿಪಾದಿಸಿರುವರು. (13) ಹಾಗಾದರೆ-

ಪಂಚಾಶದ್ವರ್ಣವಾಚ್ಯಾಶ್ಚ ಎಂದು ೫೦ ವರ್ಣಗಳೆಂದದ್ದು ಹೇಗೆ ಸಮಂಜಸವಾಗುವುದು ಎಂದರೆ-ಅಷ್ಟವರ್ಣಾತ್ಮಕವಾದ ಪ್ರಣವದಿಂದ ಅಭಿವ್ಯಕ್ತಗಳಾದ ವರ್ಣಗಳು ೫೦ ಎಂದು ಹೇಳಿದ್ದು. ಅಲ್ಲದೆ ೫೦ ವರ್ಣಗಳಿಗೆ ಮೂಲಭೂತವಾದ ಪ್ರಣವದ ಅಂಶಭೂತಗಳಾದ ನಾದಾದಿಗಳು ವರ್ಣಗಳಲ್ಲವೆಂದು ಹೇಳಲಿಲ್ಲ. ಆದಕಾರಣ ವರ್ಣಗಳಲ್ಲ ಎಂದು ಸಿದ್ಧಿಸುವುದಿಲ್ಲವಷ್ಟೆ. (14) ಆದುದರಿಂದಲೇ (೧) ಏಕಪಂಚಾಶದ್ವರ್ಣಾನಾಂ (೨) ಮಾತೃಕಾ ಏಕಪಂಚಾಶತ್ ಇತ್ಯಾದಿಗಳಲ್ಲಿ ೫೦ ಅಕ್ಷರಗಳಿಗಿಂತ ಅಧಿಕವಾದ ಕ್ಷಕಾರವೂ ಅಕ್ಷರವೆಂದದ್ದು ಸಮಂಜಸವಾಗುವುದು. (15) ಮತ್ತು ಕರ್ಮನಿರ್ಣಯ ಟೀಕೆಯಲ್ಲಿ ಗರ್ಗರ ಗೋಧಾ ಪಿಂಗಾದೀನಾಂ ಘೋಷಾ ಅಪಿ ನಾದಮಾತ್ರವ್ಯಂಜಕತ್ವೇನ ಭಗವದ್ವಾಚಕಾ ಏವ ಎಂಬುವ ವ್ಯಾಖ್ಯಾನದಲ್ಲಿ ಘೋಷಾಣಮಕಾರಾದಿ ಪಂಚಾಶದಕ್ಷರಾವ್ಯಂಜಕತ್ವೇಽಪಿ ತದತಿರಿಕ್ತಃ ಘೋಷವ್ಯಂಗ್ಯಃ ನಾದೋ ನಾಮ ವರ್ಣಃಮಂತ್ರಶಾಸ್ತ್ರೇ ಪ್ರಸಿದ್ಧಃ ಎಂದು ನಾದವನ್ನು ವರ್ಣವೆಂದೂ ೫೦ ವರ್ಣಗಳಿಗಿಂತ ಬೇರೆಯೆಂದೂ ಸ್ಪಷ್ಟವಾಗಿ ಪ್ರತಿಪಾದಿಸಿರುವರು. (16) (೧) ಸಮುದ್ರ ಮೇಘ ವೃಕ್ಷಪತನ ಭೇರೀತಾಡನಾದಿ ಸರ್ವಘೋಷಾ ಅಪಿ ತಸ್ಯೈವ ನಾಮಾನಿ (ಐ.ಭಾ) (೨) ಹುಂಕಾರೇಣೈವ ಸಹ್ಯೈವಾಬ್ಧಿಃ ಸರ್ವಾಭಿಭವಶಕ್ತತಾಂ। ವಿಷ್ಣೋರ್ವಕ್ತಿ ಯತೋ ಹುಂ ಹಿ ಪರಾಭಿಭವವಾಚಕಃ ॥......... ಇತ್ಯಾದಯಃ ಸರ್ವಘೋಷಾಃ ವಿಷ್ಣೋರೇವ ಗುಣೋನ್ನತಿಂ ॥ ವದಂತಿ ಕಿಮು ಕಿಮುವೇದಾದ್ಯಾಃ ಮಾರ್ಜಾರಾದ್ಯ ಭಿಧಾಸ್ತಥಾ ॥(೩) ತಾವಾ ಏತಾ ಸ್ವರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ (ಶ್ರುತಿಃ) ( ೪) ಸರ್ವೈಶ್ಚ ವೈದಿಕಪದೈರಪಿ ಲೋಕಶಬ್ದೈರ್ಮೇಘಾಗ್ನಿವಾರಿಧಿತಲಾದಿರವೈಶ್ಚ ಸರ್ವೈಃ। ಏಕೋಽಭಿಧೇಯ ಪರಿಪೂರ್ಣಗುಣಃ ಇತ್ಯಾದಿ ಪ್ರಮಾಣಗಳಿಂದ ಸಮುದ್ರಾದಿಗಳ ಧ್ವನಿಗಳೂ ಶ್ರೀಭಗವಂತನದ್ದೇ ನಾಮಗಳು. ಆತನಿಗೇನೇ ಸರ್ವಗುಣಪರಿಪೂರ್ಣತ್ವಾದಿಗಳನ್ನು ಹೇಳುತ್ತವೆ. (೫) ಏವಂಚ ಪದಗಳಂತೆ ಸ್ವರಾದಿಗಳೂ ಭಗವದ್ಗುಣ ಪ್ರತಿಪಾದಕಗಳೆಂದು ಸಿದ್ಧಿಸುವುದು. (೬) ಅತ ಏವ ನದೀ ಸಮುದ್ರಘೋಷಾಶ್ಚ ನಾದತ್ವಾಚ್ಛ್ರೀಕೃಷ್ಣವಾಚಕಾ॥ನಾದೋ ಹಿ ಕೃಷ್ಣ ವಾಚೀ ಸ್ಯಾದೇವಂ ಘೋಷಾಃ ಪರೇಽಪಿಚ॥ ಇತ್ಯಾದಿ ಪ್ರಮಾಣಗಳಿಂದ ನಾದಾದಿಗಳು ವರ್ಣಗಳೆಂದೂ ಭಗವದ್ಗುಣಪ್ರತಿಪಾದಕಗಳೆಂದೂ ಸಿದ್ಧಿಸುವುದು. (17) ಹಾಗಾದರೆ-ಅಕಾರ ಉಕಾರ ಮಕಾರಗಳಿಗೆ ಮಾತ್ರ ನ್ಯಾಸವನ್ನು ಹೇಳಿದೆ. ನಾದಾದಿಗಳಿಗೆ ನ್ಯಾಸವನ್ನು ಹೇಳಲಿಲ್ಲ. ಇದು ಹೇಗೆ ಕೂಡುತ್ತದೆ ಎಂದರೆ-ಹ್ರಸ್ವಃ ಕೃಪಾಲುಃ ಸೇತುಶ್ಚ ಸ್ವಯಮ್ಯಃ ಸ್ವಯಂ ತಥಾ। ಸತಾರೋಽಷ್ಟಾಕ್ಷರಃ ಸೌರಃ ಕ್ರಮವ್ಯುತ್ಕ್ರಮತಃ ಪದ್ಯೈಃ॥ ಅಂಗಾನಿ (ತಂತ್ರ ಆ. ೪ ಶ್ಲೋ ೯೪) ಎಂಬಲ್ಲಿ ಓಂ ಘೃಣಿಃ ಸೂರ್ಯ ಆದಿತ್ಯಃ ಎಂಬ ಸೂರ್ಯಾಷ್ಟಾಕ್ಷರಮಂತ್ರದಲ್ಲಿ ಓಂಕಾರಕ್ಕೆ ನ್ಯಾಸವನ್ನು ಹೇಳಲಿಲ್ಲ. ಬೇರೆ ೩ ಪದಗಳಿಗೆ ಮಾತ್ರ ಕ್ರಮವ್ಯುತ್ಕ್ರಮಗಳಿಂದ ಷಡಂಗನ್ಯಾಸವನ್ನು ಹೇಳಿದಂತೆ ಇಲ್ಲಿಯೂ ಇಟ್ಟುಕೊಳ್ಳಬೇಕು (18) ಅಥವಾ ಮನುಷ್ಯರಿಗೆ ಅಧಿಕಾರವಿಲ್ಲದಿರುವುದರಿಂದ ನಾದಾದಿಗಳಿಗೆ ನ್ಯಾಸವನ್ನು ಹೇಳಲಿಲ್ಲವೆಂದು ತಿಳಿಯಬೇಕು. (19) ತ್ರಿಮಾತ್ರಮಾದಿತಃ ಕೃತ್ವಾ ಯಾವಚ್ಚಾನಂತ ಮಾತ್ರಕಾ॥ ಪ್ರಣವಾಸ್ತೇ ವಿಭೇದೇನ ಹ್ಯನಂತಾಃ ಪರಿಕೀರ್ತಿತಾ॥ ಏಕಮಾತ್ರೋತ್ತರಾಃ ಸರ್ವೇ (ಪ್ರಣವ ಮಾಹಾತ್ಮ್ಯ) ೩ ಮಾತ್ರೆಗಳನ್ನಾರಂಭಿಸಿ ಉತ್ತರೋತ್ತರ ಒಂದೊಂದು ಮಾತ್ರೆಯು ವೃದ್ಧಿಯಾಗಿ ಪ್ರಣವಗಳು ಚತುರ್ಮಾತ್ರೆ ಪಂಚಮಾತ್ರೆ ಇತ್ಯಾದಿ ಕ್ರಮದಿಂದ ಅನಂತಮಾತ್ರ ಅವಸಾನವಾಗಿ ಉಳ್ಳವುಗಳು. (20) ಅತ ಏವ ಸುಮಧ್ವವಿಜಯದಲ್ಲಿ ಅನಂತಮಾತ್ರಾಂತಮುದಾಹರಂತಿ ಯಂ ತ್ರಿಮಾತ್ರಪೂರ್ವಂ ಪ್ರಣವೋಚ್ಚಯಂ ಬುಧಾ॥ ಎಂದು ಹೇಳಿರುವರು (21) ಸಮಸ್ತ ವೇದಗಳ ಅರ್ಥವೇ ಪ್ರಣವದ ಅರ್ಥವು. (22) ೩ ಅಕ್ಷರಗಳನ್ನಾರಂಭಿಸಿ ಅನಂತ ಅಕ್ಷರಗಳುಳ್ಳ ಪ್ರಣವ ಸಮುದಾಯದಲ್ಲಿ ೩ ಪ್ರಣವಗಳುಳ್ಳ ಮಂತ್ರವನ್ನು ಜಪಿಸುವುದರಲ್ಲಿಯೇ ಮನುಷ್ಯರಿಗೆ ಅಧಿಕಾರವಿದ್ದ ಪ್ರಯುಕ್ತ ಅಕಾರಾದಿ ೩ ವರ್ಣಗಳಿಗೇನೇ ನ್ಯಾಸವನ್ನು ಹೇಳಿರುವರು. (23) ಬೇರೆ ಪ್ರಣವಗಳಲ್ಲಿ ಚತುರ್ಮುಖಾದಿಗಳಿಗೆ ಅಧಿಕಾರವಿರುವುದರಿಂದ ನಾದಾದಿಗಳ ನ್ಯಾಸವನ್ನು ಹೇಳಲಿಲ್ಲ. (24) ನ್ಯಾಸವು ಜಪಕ್ಕೆ ಉಪಯುಕ್ತವಾದ ಕಾರಣ ಜಪಿಸತಕ್ಕ ಮಂತ್ರದ ವರ್ಣಗಳಿಗೇನೇ ನ್ಯಾಸವನ್ನು ಹೇಳಿರುವರು. (25) ಮತ್ತು ಷಡಕ್ಷರ, ಸಪ್ತಾಕ್ಷರ, ಅಷ್ಟಾಕ್ಷರ, ಇತ್ಯಾದಿ ಅನೇಕ ವಿಧಗಳಾದ ಹಂಸ ಮಂತ್ರಗಳ ಮಧ್ಯದಲ್ಲಿ ಸಪ್ತಾಕ್ಷರ ಹಂಸ ಮಂತ್ರದಲ್ಲಿ ತಾರಯೋಗೋಽಪ್ಯೇವ ಮೇವ ಬ್ರಹ್ಮಾದಾವೇವ ವರ್ತತೇ ಎಂದು ಹೇಳಿದಂತೆ ಬ್ರಹ್ಮಾದಿಗಳೇ ಅಧಿಕಾರಿಗಳಾದುದರಿಂದ ಸಪ್ತಾಕ್ಷರ ಹಂಸ ಮಂತ್ರದ ನ್ಯಾಸವನ್ನು ಹೇಳಲಿಲ್ಲ. ಷಡಕ್ಷರ ಅಷ್ಟಾಕ್ಷರ ಹಂಸ ಮಂತ್ರದಲ್ಲಿ ಮನುಷ್ಯರು ಅಧಿಕಾರಿಗಳಾಗಿರುವುದರಿಂದ ಅವುಗಳ ನ್ಯಾಸವನ್ನು ಹೇಳಿಯದೆ ಅದರಂತೆಯೇ ನಾದಾದಿಗಳಲ್ಲಿಯೂ ನ್ಯಾಸವನ್ನು ಹೇಳಲಿಲ್ಲವೆಂದು ಇಟ್ಟುಕೊಳ್ಳಬೇಕು.

(೧) ವಿಶ್ವಾದಿ ಶಬ್ದಗಳ ನಿಷ್ಪತ್ತಿಯು ಹೇಗೆ? ಅವುಗಳ ಅರ್ಥವೇನು? ಎಂದರೆ-ವಿಶ್ವಃ=(1)ತತ್ಸೃಷ್ಟ್ವಾ। ತದೇವಾನುಪ್ರಾವಿಶತ್॥

ಎಂಬ ಶ್ರುತಿಯಿಂದ ವಿಶತಿ ಸರ್ವ ಮಸ್ಮಿನ್ ಎಂಬ ವ್ಯುತ್ಪತ್ತಿಯಿಂದ ಸರ್ವಜಗತ್ತಿನಲ್ಲಿ ಪ್ರವೇಶಿಸುವುದರಿಂದ ಶ್ರೀಹರಿಯು ವಿಶ್ವನು. (2) ಅಥವಾ ಯತ್ಸ್ಮಯಂತ್ಯಭಿಸಂವಿಶಂತಿ ಎಂಬ ವ್ಯುತ್ಪತ್ತಿಯಿಂದ ಸಂಹಾರಕಾಲದಲ್ಲಿ ವಿಶಂತಿ ಭೂತಾನಿ ಯಸ್ಮಿನ್ ಶ್ರೀಹರಿಯಲ್ಲಿ ಸಮಸ್ತ ಪ್ರಾಣಿಗಳು ಪ್ರವೇಶಿಸುವುದರಿಂದ ವಿಶ್ವನೆನಿಸುತ್ತಾನೆ. (3) ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ಶ್ರುತಿಯಿಂದ ವಿಶಂತಿ ಜ್ಞಾನಾನಂದಾದಯೋ ಗುಣಾಃಯಸ್ಮಿನ್ ಎಂಬ ವ್ಯುತ್ಪತ್ತಿಯಿಂದ ಜ್ಞಾನ ಆನಂದಾದಿಗುಣ ಪರಿಪೂರ್ಣನಾದುದರಿಂದ ವಿಶ್ವನೆನಿಸುತ್ತಾನೆ. (4) ವಿಶ್ವನಾಮಕಂ । ಜಾಗ್ರತಾಂ ಸರ್ವಜೀವಾನಾಂ ಸ ವಿಷ್ಣುರ್ದಕ್ಷಿಣಾಕ್ಷಿಗಃ । ಇತಿ ಬೃಹದ್ಭಾಷ್ಯ (5) ತಥಾಚ ಓಂ ಎನಿಸಿಕೊಂಡ ಅಕ್ಷರನೆನಿಸಿದ ಶ್ರೀ ಹರಿಯು ಎಲ್ಲಾ ಜೀವರಿಗೂ ನಿಯಾಮಕನಾಗಿ ಸ ತು ವಿಶ್ವಾದಿರೂಪೇಣ ಆಸ್ತೇ ದೇಹೇ ಸದಾ ಹರಿಃ ॥ (ಗರು. ಬ್ರ ಅಧ್ಯಾ. ೩೯ ಶ್ಲೋ. ೧೦೨) ಎಂಬ ಪ್ರಮಾಣದಿಂದ ಅವರವರ ದೇಹಗಳಲ್ಲಿ ವಿಶ್ವಾದಿ ೪ ರೂಪಗಳಿಂದ ಇರುತ್ತಾನೆ. ಅವರಲ್ಲಿ ವಿಶ್ವನು ಬಲಕಣ್ಣಿನಲ್ಲಿದ್ದು ಜೀವರಿಗೆ ಬಾಹ್ಯ ಪದಾರ್ಥಗಳನ್ನು ವಿಷಯೀಕರಿಸುವ ಜ್ಞಾನವನ್ನು ಹುಟ್ಟಿಸುವನು. ಆದ ಕಾರಣ ಬಹಿಃ ಪ್ರಜ್ಞನೆನಿಸುತ್ತಾನೆ.

(2) ತೈಜಸಃ=ತೇಜೋಮಯವಾದ ಮನಸ್ಸಿನಲ್ಲಿದ್ದುದರಿಂದ ತೈಜಸನಾಮಕನಾಗಿ ಕಂಠ ಪ್ರದೇಶದಲ್ಲಿರುವನು. ಬಾಹ್ಯ ಪದಾರ್ಥಗಳ ಜ್ಞಾನದಿಂದುಂಟಾದ ಸಂಸ್ಕಾರ ಪರಿಣಾಮ ರೂಪಗಳಾದ ಆಂತರ ಅರ್ಥಗಳನ್ನು ದೇಹದೊಳಗೆ ಮನಸ್ಸಿನಿಂದ ಜೀವನಿಗೆ ತಿಳಿಸಿಕೊಡುವವನು. ತಾನೂ ತಿಳಿಯುವವನು. ಆದ ಕಾರಣ ಅಂತಃ ಪ್ರಜ್ಞನೆನಿಸುತ್ತಾನೆ. ಚಿತ್ತಸ್ಥೋ ದರ್ಶಯೇತ್ತಸ್ಮಾತ್ತೈಜಸಃ ಸ್ವಪ್ನಕೃದ್ಧರಿಃ ॥ ಎಂದು ಪ್ರಮಾಣವಿದೆ.

(3) ಪ್ರಾಜ್ಞಃ=ಜ್ಞಾ ಅವಬೋಧನೆ. "ಜ್ಞೋ ಬ್ರಹ್ಮಬುಧವಿದ್ವತ್ಸು", ಎಂಬ ಮೇದಿನೀ ಕೋಶಾನುಸಾರ ಪ್ರಕರ್ಷೇಣ ನ ಜ್ಞಾಪಯತಿ ಎಂಬ ವ್ಯುತ್ಪತ್ತಿಯಿಂದ ಜೀವ ಸ್ವರೂಪ, ಕಾಲ, ಅಜ್ಞಾನಾದಿಗಳಿಂದ ಇತರವಾದ ಯಾವ ಬಾಹ್ಯ ಪದಾರ್ಥಗಳನ್ನಾಗಲೀ, ಸ್ವಾಪ್ನ ಪದಾರ್ಥಗಳನ್ನಾಗಲೀ ತಿಳಿಸಿಕೊಡದಿರುವುದರಿಂದ ಪ್ರಾಜ್ಞನೆನಿಸಿಕೊಂಡವನು. ಅಂದರೆ ಹೃದಯಾಕಾಶದಲ್ಲಿ ಸುಷುಪ್ತಿ ಕಾಲದಲ್ಲಿ ಜೀವಸ್ವರೂಪ ಸುಖ ಅಜ್ಞಾನ ಕಾಲ ಇವುಗಳನ್ನು ಮಾತ್ರ ಜೀವನಿಗೆ ತಿಳಿಸಿಕೊಡುವವನು. ಹೀಗೆ ಅಜ್ಞಾನಯುಕ್ತನಾದ ಜೀವನಿಗೆ ತಿಳಿಸಿಕೊಡುವುದರಿಂದ ಘನಪ್ರಜ್ಞನೆನಿಸುತ್ತಾನೆ. (೪) ದಕ್ಷಿಣಾಕ್ಷಿಸ್ಥಿತೋ ವಿಷ್ಣುರ್ಭುಙ್ಕ್ತೇರ್ಥಾನ್ ಜಾಗ್ರದಾಸ್ಥಿತಾತ್ । ಕಂಠಸಂಸ್ಥಸ್ತಥಾಸ್ವಪ್ನಾನ್ ಜೀವಾನಂದಂ ಚ ಸುಪ್ತಿಗಃ॥ ಬಲಕಣ್ಣಿನಲ್ಲಿರತಕ್ಕ ವಿಶ್ವರೂಪಿ ಶ್ರೀ ಪರಮಾತ್ಮನು ಜಾಗ್ರದಾದಿಗಳಲ್ಲಿರತಕ್ಕ ಪದಾರ್ಥಗಳನ್ನು ಜೀವನಿಗೆ ತೋರಿಸುತ್ತಾನೆ. ಕಂಠದಲ್ಲಿರತಕ್ಕ ತೈಜಸನು ಸ್ವಪ್ನಗಳನ್ನು ತೋರಿಸುತ್ತಾನೆ. ಸುಷುಪ್ತ್ಯವಸ್ಥೆಯಲ್ಲಿ ಹೃದಯದಲ್ಲಿರತಕ್ಕ ಪ್ರಾಜ್ಞರೂಪಿ ಶ್ರೀ ಹರಿಯು ಜೀವನಿಗೆ ಆನಂದವನ್ನುಣ್ಣಿಸುತ್ತಾನೆ. ಹೀಗೆ 'ತತ್ವ'ವೆಂಬ ಗ್ರಂಥದಲ್ಲಿ ಹೇಳಿದೆ (೫) ಚತುರ್ಥಾವಸ್ಥಿತೋ ದೇಹೇ ಪರಮಾತ್ಮಾ ಸನಾತನಃ ॥ ವೈಶ್ವಾನರೋ ಜಾಗರಿತ ಸ್ಥಾನಗೋ ಗಜವಕ್ತ್ರಕಃ ॥ ನಿರ್ಮಾತಾ ಬಾಹ್ಯಸಂವಿತ್ತೇರ್ಜೀವಾನಾಂ ತದಗೋಚರಃ। ಅಷ್ಟಾದಶಮುಖಾನ್ಯಸ್ಯ ಪುಮಾಕಾರಾಣಿ ಸರ್ವಶಃ । ಮಧ್ಯಮಂ ತು ಗಜಾಕಾರಂ ಚತುರ್ಬಾಹುಃ ಪರಃ ಪುಮಾನ್ ॥ ಪಾದೌ ಹಸ್ತಿಕರೋ ಹಸ್ತಾ ಇತಿ ಸಪ್ತಾಂಗ ಈರಿತಃ ॥ ಇತಿ ಮಾಂಡೂಕಭಾಷ್ಯ (೬) ಜಾಗರಿತಸ್ಥಾನೋ ಬಹಿಃಪ್ರಜ್ಞಸ್ಸಪ್ತಾಂಗಃ ಏಕೋನವಿಂಶತಿಮುಖಃ। ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ॥ ಮಾಂಡೂಕೋಪನಿಷತ್॥

(4) ತುರ್ಯಃ=ಚತುರಃ ಛಯತೌ ಆದ್ಯಕ್ಷರಲೋಪಶ್ಚ ಎಂಬ ಸೂತ್ರದಿಂದ ಚತುಶ್ಶಬ್ದದ ಆದ್ಯವಾದ ಚ ಎಂಬ ಅಕ್ಷರಕ್ಕೆ ಲೋಪವೂ ಯತ್ ಪ್ರತ್ಯಯವೂ ಬಂದರೆ ತುರ್ಯ ಎಂಬ ಶಬ್ದವೂ ಸಿದ್ಧವಾಗುವುದು. ಶ್ರೀವಿಷ್ಣುವು ತುರೀಯರೂಪದಿಂದ ಶಿರಸ್ಸಿನ ಮಧ್ಯಪ್ರದೇಶದಲ್ಲಿರುತ್ತಾನೆ. ಭಕ್ತರಿಗೆ ಮುಕ್ತಿಯನ್ನು ಕೊಡುವವನು. ಮುಕ್ತರ ಸರ್ವವ್ಯಾಪಾರಗಳಿಗೂ ಕಾರಣನು ಸಂಸಾರದೆಶೆಯಲ್ಲಿ ಅಮುಕ್ತರಿಂದ ಕಾಣಲ್ಪಡದಿರುವವನು. ಮುಖ್ಯಪ್ರಾಣನ ಪರಮಾನುಗ್ರಹಕ್ಕೆ ಪಾತ್ರರಾದ ಅಪರೋಕ್ಷ ಜ್ಞಾನಿಗಳಾದ ಜೀವನ್ಮುಕ್ತರಿಗೂ ಯಾವಾಗಲೂ ಕಾಣದಿರುವವನು. ಆದರೆ ಪ್ರಾರಬ್ಧ ಕರ್ಮ ಪ್ರತಿಬಂಧಕ ನಿವೃತ್ತಿಯಾದ ಮೇಲೆ ಕಾಣಿಸಿಕೊಳ್ಳುತ್ತಾನೆ. ಸ್ವಪ್ನಾವಸ್ಥೆ, ಜಾಗ್ರದವಸ್ಥೆ, ಸುಷುಪ್ತ್ಯವಸ್ಥೆಗಳನ್ನು ಕೊಡದಿರುವವನು ಸರ್ವದುಃಖಗಳ ನಿವೃತ್ತಿಗೆ ಕಾರಣನು. ಮುಕ್ತರಿಗೆ ಅವರವರ ಯೋಗ್ಯತಾನುಸಾರ ಪೂರ್ಣಜ್ಞಾನವನ್ನು ಕೊಡುವವನು. (೮) ಸರ್ವಜ್ಞಾನ ಪ್ರದಶ್ಚಾಪಿ ಮುಕ್ತಸ್ಯೈವ ತುರೀಯಕಃ। ಸರ್ವಂ ತು ದರ್ಶಯೇನ್ಮುಕ್ತೌ ತುರೀಯಃ ಪರಮೇಶ್ವರಃ ॥ ಮುಕ್ತಸ್ಯ ಸರ್ವವ್ಯಾಪಾರ ಹೇತುರೇವ ತುರೀಯಕಃ ॥ (ಮಭಾ) ಇತ್ಯಾದಿ ಪ್ರಮಾಣಗಳಿಂದ ಮುಮುಕ್ಷುಗಳು ವಿಶ್ವಾದಿ ೪ ರೂಪಗಳುಳ್ಳ ಶ್ರೀಹರಿಯನ್ನು ಅವಶ್ಯವಾಗಿ ತಿಳಿಯಬೇಕು, ಉಪಾಸನಾ ಮಾಡಬೇಕು.

(೧) ಕೃಷ್ಣಃ=(ಕೃಷ ವಿಲೇಖನೇ) ಕರ್ಷತೀತಿ ಕೃಷ್ಣಃ=ಭಕ್ತರ ಮನಸ್ಸನ್ನು ತನ್ನ ಸಮೀಪಕ್ಕೆ ಸೆಳೆಯುವವನು. ದುರ್ಜನರನ್ನು ಅಂಧಂತಮಸ್ಸಿಗೆ ಸೆಳೆಯುವವನು. ಭಕ್ತರನ್ನು ಮುಕ್ತಿಗೆ ಸೆಳೆಯುವವನು. (1) ಕೃಷಿರ್ಭೂವಾಚಕಶ್ಶಬ್ದಃ ಣಶ್ಚ ನಿರ್ವೃತಿವಾಚಕಃ । ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಶಾಶ್ವತಃ ॥ ಇತಿ ಮಹಾಭಾರತೇ ॥ ಕೃಷೇಃ ಣಃ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ಭೂಮಿಗೂ, ಭೂಮಿಯಲ್ಲಿದ್ದ ಜನರಿಗೂ ಸುಖವನ್ನು ಕೊಡುವುದರಿಂದ ಕೃಷ್ಣನೆನಿಸುವನು. (2) ತತೋ ಹರಿಃ ಕೃಷ್ಣರೂಪೋಬಭೂವ ದೇವಕ್ಯಾಂ ವೈ ವಸುದೇವಾಚ್ಚ ವಿಷ್ಣುಃ। ಕಂಸಾದೀನಾಂ ನಿತರಾಂ ಹಂತುಕಾಮೋ ಸಮಕ್ಕರ್ತುಂ ಪಾಂಡವಾನಾಂ ಖಗೇಂದ್ರ ॥ (ಗ. ಬ್ರ ಅಧ್ಯಾ ೧೫॥ ೨೬) ಶ್ರೀ ಹರಿಯು ಕಂಸಾದಿಗಳನ್ನು ಕೊಲ್ಲುವುದಕ್ಕಾಗಿಯೂ ಪಾಂಡವರನ್ನುದ್ಧರಿಸುವುದಕ್ಕಾಗಿಯೂ ದೇವಕೀ ದೇವಿಯಲ್ಲಿ ಶ್ರೀಕೃಷ್ಣ ನಾಮಕನಾಗಿ ಅವತರಿಸಿದನು.

(೨) ರಾಮಃರಮು ಕ್ರೀಡಾಯಾಂಘಞ್ ರಮಂತೇ ಯೋಗಿನಃ ಅಸ್ಮಿನ್ ಅಥವಾ ಅನೇನ ಎಂಬ ವ್ಯುತ್ಪತ್ತಿಯಿಂದ ಯೋಗಿಗಳು ಈತನಲ್ಲಿ ಅಥವಾ ಈತನಿಂದ ಕ್ರೀಡಿಸುವುದರಿಂದ ರಾಮನೆನಿಸುವನು. (1) ರಮಂತೇ ಯೋಗಿನೋಽನಂತೇ ನಿತ್ಯಾನಂದೇ ಚಿದಾತ್ಮನಿ। ಇತಿ ರಾಮಪದೇನಾಸೌ ಪರಬ್ರಹ್ಮಾಭಿಧೀಯತೇ॥ ಎಂದು ಪದ್ಮಪುರಾಣವು (2) ರಮತೇ ಇತಿ ರಃ, ನ ವಿದ್ಯತೇ ಮಾ ಪರಿಚ್ಛೇದೋ ಯಸ್ಯ ಇತ್ಯಮಃ।ರಶ್ಚಾಸೌ ಅಮಶ್ಚೇತಿ ರಾಮಃ। ರಮಯತೀತಿ ವಾ ರಾಮಃ ಆನಂದರೂಪೋ ನಿಷ್ಪರೀಮಾಣ ಏಷ ಲೋಕಶ್ಚೈತಸ್ಮಾದ್ರಮತೇ ತೇನ ರಾಮಃ । ಇತಿ ಶ್ರುತಿಃ । ನಿತ್ಯಾನಂದ ಲಕ್ಷಣೇ ಅಸ್ಮಿನ್ ಯೋಗಿನೋ ರಮಂತೇ ಇತಿ ರಾಮಃ । ಸ್ವೇಚ್ಛಯಾ ರಮಣೀಯಂ ವಪುರ್ವಹನ್ವಾ ರಾಮ (3) ರಾಮಸ್ಸರ್ವಾಭಿರಾಮತ್ವಾದಾತ್ಮಾರಾಮತ್ವತೋಽಪಿವಾ। ದೇವೋ ಮರಕತಶ್ಯಾಮಃ ಇತಿ ವಾ ರಾಮನಾಮಕಃ ॥ ನಿತ್ಯಂ ರಮಾಭಿಸಂಬಂಧಾದ್ವಾನಂ ಶ್ರೀಸ್ತಸ್ಯ ಹೇತಿ ವಾ। ರಾಮಾಣಾಂ ಹೃದ್ಯ ಭಾವಾದ್ವಾ ರಾಮಂ ತಂ ಸಜ್ಜನಾ ವಿದುಃ ॥ (4) ನಿತ್ಯ ಪೂರ್ಣ ಸುಖಜ್ಞಪ್ತಿ, ಸ್ವರೂಪೋಽಸೌಯತೋ ವಿಭುಃ। ಅತೋಽಸ್ಯ ರಾಮ ಇತ್ಯಾಖ್ಯಾ ತಸ್ಯ ದುಃಖಂ ಕುತೋಽಣ್ವಪಿ ॥ ತಥಾಪಿ ಲೋಕಶಿಕ್ಷಾರ್ಥಂ ಅದುಃಖೋ ದುಃಖವರ್ತಿವತ್ ॥ ಅಂತರ್ಹಿತಾಂ ಲೋಕದೃಷ್ಟ್ಯಾ ಸೀತಾಮಾಸೀತ್ಸ್ಮರನ್ನಿವ॥

(೩) ನೃಸಿಂಹಃ=(1) ನೄನಯೇ ನಯತೀತಿ ನಾ ಭಕ್ತರಿಗೆ ಜ್ಞಾನಾನಂದಾದಿಗುಣಗಳನ್ನು ಹೊಂದಿಸಿಕೊಡುವವನು. ನರಃ =ನಾಲ್ಕು ವಿಧ ನಾಶವಿಲ್ಲದವನು. ಸಿಂಚತೀತಿ ಸಿಂಹಃ (ಷಿಚ ಕ್ಷರಣೇ ಸಿಂಚೇಃಸಂಜ್ಞಾಯಾಂ ಹನುಮೌಕಶ್ಚ) ಇಷ್ಟಾರ್ಥದಾಯಕನು ಅಥವಾ ಹಿನಸ್ತೀತಿ ಸಿಂಹಃ (ಹಿಸಿ ಹಿಂಸಾಯಾಂ ಅಚ್‌ಪ್ರತ್ಯಯವು ವರ್ಣವಿಪರ್ಯಯವು) ನಾ ಚಾಸೌ ಸಿಂಹಶ್ಚ. ನೃಸಿಂಹಃ ನರಶ್ಚಾಸೌ ಸಿಂಹಶ್ಚ ನರಸಿಂಹಃ=ನಾಶ ರಹಿತನು. ದುರ್ಜನರ ಸಂಹಾರಕನು ಅಥವಾ ಸಿಂಹೋ ವರ್ಣವಿಪರ್ಯಾತ್ ಎಂಬ ವಚನದಿಂದ ಹಿಂಸಾಶೀಲನು (2) ಚಕ್ರಾಂಭೋಜಗದಾದರಾಂಕಿತ ಚತುರ್ಬಾಹುಃ ನೃಸಿಂಹಃ ಸುಖಂ ದದ್ಯಾತ್ ಎಂದು ಶ್ರೀವಾದಿರಾಜರು (3) ದೇವೋಽನೃಸಿಂಹಶ್ಚಕ್ರಾಜ್ಜಗದಾಶಂಖೀ ನಮಾಮಿ ತಂ ॥ (ಅಗ್ನಿಪು)

(೪) ವರಾಹಃ=(1) ವರಂ ಶ್ರೇಷ್ಠಮಾಹಂತೀತಿ ವರಾಹಃ। (ಹನಹಿಂಸಾಗತ್ಯೋಃ) ವರಾಹೋ ನಾಣಕೇ....ವಿಷ್ಣೌ ಇತಿ ಹೇಮ॥ ಬ್ರಹ್ಮದತ್ತವಾದ ವರವನ್ನು ಲಕ್ಷೀಕರಿಸದೆ ದೈತ್ಯ ಶ್ರೇಷ್ಠನಾದ ಹಿರಣ್ಯಾಕ್ಷನನ್ನು ಸಂಹರಿಸಿದವನು. ಮತ್ತು ಭಕ್ತಾಗ್ರೇಸರರಾದ ಬ್ರಹ್ಮಾದಿಗಳಿಗೆ ಜ್ಞಾನೋಪದೇಶಕನು (2) ಸ ಏವ ವಿಷ್ಣುಃ ಸೂಕರತ್ವಂ ಹ್ಯವಾಪ ಕ್ಷೋಣೀಮುದ್ಧರ್ತುಂ ದೈತವರ್ಯಂ ನಿಹಂತುಂ। ಹಿರಣ್ಯಾಕ್ಷಂ ಸಜ್ಜನಾನಾಂ ಖಗೇಂದ್ರ ತಥಾ ಭೂಮೇಃ ಸ್ಥಾಪನಾಯೈ ಸದೈವ (ಗ. ಪು. ಬ್ರ ಅಧ್ಯಾ ೧೫ ಶ್ಲೋ ೯)।

(೫) ವಿಷ್ಣುಃ=(1) ವೇವೇಷ್ಟಿ=ವ್ಯಾಪ್ನೋತೀತಿ ವಿಷ್ಣುಃವಿಷಲ್, ವ್ಯಾಪ್ತೌ ವಿಷೇಃ ಕಿಚ್ಚ, ಇತಿನುಃ ಸರ್ವತ್ರ ವ್ಯಾಪ್ತನು (2) ಅಥವಾ ವಿಶ ಪ್ರವೇಶನೇ ವಿಶತಿ ಸರ್ವಮಸ್ಮಿನ್ ಇತಿ ವಾ ವಿಷ್ಣುಃ ಸರ್ವವೂ ಇವನಲ್ಲಿ ಪ್ರವೇಶಿಸುವುದರಿಂದ ವಿಷ್ಣುವು (3) ವ್ಯಾಪ್ತೌಮೇ ರೋದಸೀ ಪಾರ್ಥಕಾಂತಿರಭ್ಯಧಿಕಾಸ್ಥಿತಾ। ಕ್ರಮಣಾಚ್ಚಾ ಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತಃ (ಮೋಕ್ಷಧರ್ಮವಚನ ಮಹಾಭಾರತ) (4) ಷಕಾರೋ ಬಲಂ ಣ ಕಾರಃ ಪ್ರಾಣ ಆತ್ಮಾ. ಎಂಬ ಶ್ರುತಿಯಿಂದ ವಿಶೇಷವಾಗಿ ಬಲ ವ್ಯಾಪಾರವಿಶೇಷಗಳಿಂದ ಕೂಡಿದವನು. ಷಣೌ ಬಲ ಪ್ರಾಣ ಪ್ರೇರಕತ್ವಾಖ್ಯಗುಣೌ ಯಸ್ಯ ಸ ವಿಷ್ಣುಃ ॥ ಅಥವಾ ಷಣು ದಾನೇ ವಿಶೇಷೇಣ ಸನೋತಿ ದದಾತಿ ಭಕ್ತಾಭೀಷ್ಟಂ ಎಂಬ ವ್ಯುತ್ಪತ್ತಿಯಿಂದ ವಿಶೇಷವಾಗಿ ಭಕ್ತರಿಗೆ ಅಭೀಷ್ಟವನ್ನು ಕೊಡುವವನು. ಅಥವಾ ವಿಶೇಷೇಣ ಸ್ನೌತಿ=ಪ್ರಸ್ರವತಿ ಫಲಂ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ಭಕ್ತರಿಗೆ ಯಾರಿಂದ ಫಲವುಂಟಾಗುತ್ತದೋ, ಅವನು ವಿಷ್ಣುವು. (ಅಂದರೆ ಭಕ್ತರಿಗೆ ಅಭೀಷ್ಟದಾಯಕನು)

ಅಥವಾ ಸರ್ವವ್ಯಾಪಿತ್ವಾದ್ವಾ ವಿಷ್ಣುಃ॥ ಅಥವಾ ಸರ್ವಸ್ಯ ಹೃದಯೇ ಅಂತರ್ನಿಯಾಮಕತ್ವೇನ ಪ್ರವಿಷ್ಟತ್ವಾದ್ವಾ ವಿಷ್ಣುಃ (5) ಬಹಿರಂತಶ್ಚ ಸರ್ವಶಃ। ವ್ಯಾಪ್ತತ್ವಾದ್ವ್ಯಾಪಕೋ ವಿಷ್ಣುಃ (ಗ ಬ್ರ ೩೯।೭೮) (6) ವಿಷಂ ನದೀಜಲಂ ನುದತಿ ಪ್ರೇರಯತೀತಿ ವಿಷ್ಣುಃ। ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಇತಿಶ್ರುತಿಃ॥ (7) ವಿಷಂ=ಕಾಲೀಯನಾಗಾಖ್ಯವಿಷಂ ನುದತಿ ನಾಶಯತೀತಿ ವಿಷ್ಣುಃ॥ ನುದ ವ್ಯಥನೇ ಇತಿ ಧಾತುಃ॥ (8) ಮೋಕ್ಷದಃ ಶ್ರೀಗದೀ ಪದ್ಮೀ ಶಂಖೀ ವಿಷ್ಣುಶ್ಚ ಚಕ್ರಧೃಕ್॥ (ವಿಷ್ಣುಪು)

(೬) ಪರಂಜ್ಯೋತಿಃ=ಸರ್ವೋತ್ತಮನು ದ್ಯೋತತೇ ಇತಿ ಜ್ಯೋತಿಃ। ಪ್ರಕಾಶಿಸುವವನು. ದ್ಯೋತನಂವಾ ಜ್ಯೋತಿಃ। ಪ್ರಕಾಶಸ್ವರೂಪನು. ದ್ಯೋತ ನಂ ಅನೇನ ಇತಿವಾ ಸೂರ್ಯಾದಿಗಳಿಗೆ ಇವನಿಂದ ಪ್ರಕಾಶವುಂಟಾಗುವುದು. ದ್ಯುತ ದೀಪ್ತೌ. ದ್ಯುತೇರಿಸ್ಸಿನ್ನಾದೇಶ್ಚಜಃ। ಏವಂಚ ಪ್ರಕಾಶರೂಪನು ಅಥವಾ ಜ್ಞಾನರೂಪನು ಮತ್ತು ಜಾತಮೋತಂ ಹರೌಯಸ್ಮಾಜ್ಜ್ಯೋತಿಃ ಎಂಬ ವ್ಯುತ್ಪತ್ತಿಯಿಂದ ಹುಟ್ಟಿದೆಲ್ಲವೂ ಶ್ರೀ ಹರಿಯಲ್ಲಿಯೇ ಆಶ್ರಿತವಾಗಿರುವುದರಿಂದ ಜ್ಯೋತಿಃ ಎನಿಸುತ್ತಾನೆ.

(೭) ಪರಂಬ್ರಹ್ಮ=ಬೃಂಹತೀತಿ ಬ್ರಹ್ಮ=ಪ್ರಜೆಗಳನ್ನು ವೃದ್ಧಿಗೊಳಿಸುವವನು ಬೃಹಿ ವೃದ್ಧೌ ವೃದ್ಧಿ=ಸರ್ವಗುಣ ಪರಿಪೂರ್ಣತ್ವವು ಬೃಂಹೇರ್ನೋಽಚ್ಚ ಎಂಬ ಸೂತ್ರದಿಂದ ಮನಿನ್ ಪ್ರತ್ಯಯವು ಅಥವಾ ಬೃಂಹತಿ ವರ್ಧತೇ ಇತಿ ವಾ ಬ್ರಹ್ಮ ಏವಂಚ ಸರ್ವದಾ ಸರ್ವೋತ್ತಮನಾಗಿಯೂ ಗುಣಪರಿಪೂರ್ಣನಾಗಿಯೂ ಇರುವವನು. (1) ಬೃಹಂತೋ ಹ್ಯಸ್ಮಿನ್ ಗುಣಾಃ ಎಂದು ಶ್ರುತಿಯು (2) ಬೃಹಜ್ಜಾತಿ ಜೀವ ಕಮಲಾಸನ ಶಬ್ದರಾಶಿಷು. (3) ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ (4) ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ॥

(೮) ವಸುದೇವಃ 'ವಸನಿವಾಸೇ' ವಸಂತಿ ಸರ್ವ ಭೂತಾನಿ ಅಸ್ಮಿನ್ನಿತಿ ವಾಸುಃ। ಅಥವಾ ವಸತೀತಿ ವಾಸುಃದಿವು ಕ್ರೀಡಾ ವಿಜಿಗೀಷಾ ವ್ಯವಹಾರದ್ಯುತಿಸ್ತುತಿ ಮೋದ ಮದ ಸ್ವಪ್ನ ಕಾಂತಿಗತಿಷು। ಇತಿಧಾತೋಃ ದೀವ್ಯತೀತಿ ದೇವಃ ವಾಸುಶ್ಚಾಸೌ ದೇವಶ್ಚ ವಾಸುದೇವಃ ವಸನಾತ್ಸರ್ವಭೂತಾನಾಂ (2) ವಸುತ್ವಾದ್ದೇವ ಯೋನಿಷು । ವಾಸುದೇವಸ್ತತೋ ಜ್ಞೇಯ ಯೋಗಿಭಿಸ್ತತ್ವದರ್ಶಿಭಿಃ॥ ಎಂದು ಉದ್ಯೋಗಪರ್ವ (3) ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿ ವೈ ಯತಃ। ತತಸ್ಸವಾಸುದೇವೇತಿ ವಿದ್ವದ್ಭಿಃ ಪರಿಪದ್ಧತೇ। ಸರ್ವಾಣಿ ತತ್ರ ಧೂತಾನಿ ವಸಂತಿ ಪರಮಾತ್ಮನಿ। ಭೂತೇಷು ಚ ಸ ಸರ್ವಾತ್ಮಾ ವಾಸುದೇವ ಸ್ತತಃ ಸ್ಮೃತಃ॥ಇತಿ ವಿಷ್ಣು ಪುರಾಣ (4) ಅಥವಾ ವಕ್ಷಸಿ ಸದಾ ವಸತೀತಿವಾಸುಃ=ವಕ್ಷಃಸ್ಥಳದಲ್ಲಿ ಸದಾ ಆವಾಸ ಮಾಡತಕ್ಕ ಶ್ರೀಲಕ್ಷ್ಮೀದೇವಿಯು ತಯಾ ಸಹ ಸದಾ ದೀವ್ಯತೀತಿ (ಕ್ರೀಡತೇ ಇತಿ) ವಾಸುದೇವಃ॥ಸದಾ ಲಕ್ಷ್ಮೀದೇವಿಯಿಂದ ಕ್ರೀಡಿಸಿಕೊಂಡಿರುವವನು. (ಶೇಷೇ ಇತ್ಯಣ್) (5) ಅಥವಾ ವಸುದೇವೇ=ಶುದ್ಧಾಂತಃ ಕರಣವುಳ್ಳವನಲ್ಲಿ ಪ್ರಕಾಶತೇ=ಶೋಭಿಸಿಕೊಂಡಿರುವವನು. (ಸನ್ನಿಹಿತನಾಗಿರುತ್ತಾನೆ.) (ಶೇಷೇ ಎನ್ನುವುದರಿಂದ ಅಣ್ ಪ್ರತ್ಯಯವು.) (6) ಚತುರ್ದಶಾನಾಂ ಭುವನೇಷು ನಿತ್ಯಂ ವಸತಿ ವಾಸುದೇವಃ। ತತ್ರೈವ ನಿತ್ಯಂ ಕ್ರೀಡತೇ ಸರ್ವದೈವ ಅತೋ ದೇವೇತ್ಯೇವಮಾಹುಶ್ಚ ತಜ್ಜ್ಞಾಃ॥ (ಗ. ಬ ೨೫॥೧೨) (7) ಅತೋ ಹರಿರ್ವಾಸುದೇವೇತಿ ಚಾಹುಃ ಭೋ ವಾಸುದೇವೇತಿ ನನ್ವತುಃ ಸದ್ವೈವ। (8) ಯೋ ಬೀಜಭೂತಃ ಪುರುಷಾಖ್ಯವಿಷ್ಣುಃ ಸ ಏವಾಭೂತ್ ವಾಸುದೇವೇತಿ ಸಂಜ್ಞಃ। ಸೃಷ್ಟಿಂ ಕರ್ತುಂ ಪುರುಷಾಖ್ಯ ವಿರಿಂಚಂ ಮಾಯಾಖ್ಯಾಮಾಂ ಮೂಲರೂಪೀ ಯಥಾಸಃ (ಗ.ಬ .೮.೧೫.೨) (9) ಆಚ್ಛಾದಯತಿ ಸರ್ವಮಿತಿ ವಾಸುಃ।ವಸು ಅಚ್ಛಾದನೇ ಇತ್ಯತಃ ಉಣ್ ಕ್ರೀಡಾದಿಗುಣ ವಿಶಿಷ್ಟತ್ವಾದ್ದೇವಃ ॥ ಛಾದಯಾಮಿ ಜಗತ್ಸರ್ವಂ ಭೂತ್ವಾ (ಪ್ರಾಪ್ಯ) ಸೂರ್ಯ ಇವಾಂಶುಭಿಃ । ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋಽಸ್ಮ್ಯಹಂ ॥ (ಇತಿ ಮೋಕ್ಷ ಧರ್ಮವಚನಂ) (10) ಸೋಗ್ರ್ಯಗದಾ ದರಾರಿ ಕಮಲೀ ಶ್ರೀವಾಸುದೇವೋಽಸ್ತುಮೇ ॥ (ಶ್ರೀ ವಾದಿರಾಜರು) (11) ಸತ್ವಂ ವಿಶುದ್ಧಂ ವಸುದೇವಸಂಜ್ಞಿತಂ ಎಂಬ ಪ್ರಮಾಣದಿಂದ ವಸುದೇವಾಖ್ಯ ಸತ್ವಗುಣ ಪ್ರವರ್ತಕನು. (12) ರಕ್ಷೇದ್ಗದೀ ಶಂಖಿಚಕ್ರೀ ವಾಸುದೇವೋಬ್ಜಭೃಜ್ಜಗತ್॥ (ಅಗ್ನಿಪುರಾಣ) ॥೪-೫-೬॥

ಅವ ॥ ಪ್ರಣವ ಮಂತ್ರಕ್ಕೆಋಷ್ಯಾದಿಗಳನ್ನು ಹೇಳಿ ಧ್ಯಾನ ಪ್ರಕಾರವನ್ನು ಹೇಳುತ್ತಾರೆ.

**ಮೂ ॥ ಏವಮುಕ್ತ್ವಾತು ತದ್ಧ್ಯಾನಂ ಬ್ರೂಯಾದ್ಭಕ್ತಾಯ ಸದ್ಗುರುಃ ॥೬॥ಅಷ್ಟ। ಪತ್ರೇ ತು ಹೃತ್ಪದ್ಮೇ ಮಧ್ಯೇ ಸೂರ್ಯೇಂದುವಹ್ನಿಗಂ। ಪೀಠಂ ತತ್ಪದ್ಮಮಧ್ಯಸ್ಥಂ ನಾರಾಯಣಮನಾಮಯಂ ॥೭॥ ಉದ್ಯದಾದಿತ್ಯಸಂಕಾಶಂ ತೇಜಸಾಽನುಪಮಂ ಸದ್ಭಾಸಹಸ್ರೇಣಾಪಿ ಸೂರ್ಯಾಣಾಂ ಸಜ್ಜ್ಞಾನಾನಂದರೂಪಿಣಂ ॥೮॥ ಅತಿ ರಕ್ತತಲಂಭಾಸ್ವನ್ನಖವ್ರಾತವಿಭೂಷಿತಂ। ವೃತ್ತಜಂಘಂ**

**ವೃತ್ತಬಾಹುಂ ಹಸ್ತಿಹಸ್ತೋರುಮೀಶ್ವರಂ ॥೯॥ ಮಹಾಕಟಿತಟಾಬದ್ಧಕಾಂಚೀಪೀತಾಂಬರೋಜ್ಜ್ವಲಂ । ಸುನಿಮ್ನನಾಭಿಂ ತ್ರಿವಲಿಂ ಸುವೃತ್ತೋದರ ಬಂಧನಂ ॥೧೦॥ ವಿಶಾಲವಕ್ಷಸಂ ಭ್ರಾಜತ್ಕೌಸ್ತುಭಾಮುಕ್ತಕಂಧರಂ । ವನಮಾಲಾಧರಂ ಹಾರವೈಜಯಂತ್ಯಾದಿಭಿರ್ಯುತಂ ॥೧೧॥ ಪೃಥುದೀರ್ಘಚತುರ್ಬಾಹುಂ ಚಕ್ರಶಂಖ ಗದಾಂಬುಜೈಃ । ಯುಕ್ತಮುನ್ನಿದ್ರ ಪದ್ಮಾಕ್ಷಂ ಸ್ಫುರನ್ಮಕರಕುಂಡಲಂ ॥೧೨॥ ಪೂರ್ಣಚಂದ್ರಾಯುತೋದ್ರಿಕ್ತ ಕಾಂತಿ ಮನ್ಮುಖ ಪಂಕಜಂ। ಸುಭ್ರುವಂ ಸುಲಲಾಟಾಂತಂ ಕಿರೀಟಾಬದ್ಧ ಮೂರ್ಧಜಂ ॥೧೩॥ ನಿಶ್ಶೇಷ ದುಃಖದಮನಂ ನಿತ್ಯಾನಂದಂ ಶುಚಿಸ್ಮಿತಂ ॥೧೪॥**

ಅ॥ ಸಮೀಚೀನರಾದ (ಅಂದರೆ ಸದಾಚಾರ ಸಂಪನ್ನರೂ, ವೇದಾಂತ ವಿದ್ಯಾಪಾರಂಗತರೂ ಆದ) ಗುರುಗಳು ಹಿಂದೆ ಹೇಳಿದ ಪ್ರಕಾರ ಋಷ್ಯಾದಿಗಳನ್ನು ಹೇಳಿ ಆ ಪ್ರಣವಾದಿ ಮಂತ್ರಗಳ ಧ್ಯಾನವನ್ನು ಹರಿ ಗುರುಗಳಲ್ಲಿ ಭಕ್ತನೂ, ವಿನಯಾದಿ ಸಂಪನ್ನನೂ ಆದ ಶಿಷ್ಯನಿಗೆ ಹೇಳಬೇಕು (ಉಪದೇಶಿಸಬೇಕು.) ॥೬॥೮ ದಳಗಳುಳ್ಳ ಹೃದಯ ಪದ್ಮದಲ್ಲಿ ಆದರೂ ಮಧ್ಯದಲ್ಲಿ, ಆದಿತ್ಯಮಂಡಲ, ಚಂದ್ರಮಂಡಲ, ವಹ್ನಿಮಂಡಲಗಳಲ್ಲಿರತಕ್ಕದು ಪೀಠವು. ಆ ಪೀಠದಲ್ಲಿರುವ ಪದ್ಮ ಮಧ್ಯದಲ್ಲಿರತಕ್ಕವನು ಲಕ್ಷ್ಮೀಪತಿಯಾದ ಶ್ರೀ ನಾರಾಯಣನು. ಆತನು ದೋಷಲೇಶವಿಲ್ಲದಿರುವವನು. ಉದಯಿಸಿಕೊಂಡು ಬರುವ ಸೂರ್ಯನಿಗೆ ಸದೃಶನು ಸರ್ವದಾ ಪ್ರಕಾಶದಿಂದ ಸೂರ್ಯರ ಸಹಸ್ರಕ್ಕಿಂತಲೂ ಅಸದೃಶನು. (ಅಂದರೆ ಸಾವಿರಾರು ಸೂರ್ಯರಿಗಿಂತಲೂ ಹೆಚ್ಚು ಪ್ರಕಾಶವಿರುವವನು.) ಸಚ್ಚಿದಾನಂದ ಸ್ವರೂಪಿಯು. ಅತ್ಯಂತ ಕೆಂಪಾದ ಪಾದಾದಿತಲಗಳುಳ್ಳವನು. ಪ್ರಕಾಶಮಾನಗಳಾದ (ಅಂದರೆ ದೀರ್ಘಗಳೂ ಕೆಂಪೂ ಆದ) ಉಗುರುಗಳ ಸಮೂಹಗಳಿಂದ ಅಲಂಕೃತನೂ, ವರ್ತುಲಗಳಾದ ಮೊಣಗಂಟುಗಳುಳ್ಳವನು, ವರ್ತುಲಗಳಾದ ಮೊಣಕಾಲುಗಳುಳ್ಳವನು, ಆನೆಯ ಶುಂಡಾದಂಡದಂತೆ ತೊಡೆಗಳುಳ್ಳವನು, ಸರ್ವನಿಯಾಮಕನು ಮತ್ತು ಸರ್ವೇಶ್ವರನು, ಮಹತ್ತಾದ (ಶ್ರೇಷ್ಠವಾದ, ವಿಶಾಲವಾದ) ಕಟಿಪ್ರದೇಶದಲ್ಲಿ ಚೆನ್ನಾಗಿ ಸಂಬದ್ಧವಾದ (ಅಲಂಕೃತವಾದ) ಒಡ್ಯಾಣ, ಪೀತಾಂಬರಗಳಿಂದ ಪ್ರಕಾಶಿಸಿಕೊಂಡಿರುವನು. ಚೆನ್ನಾಗಿ ಆಳವಾದ ಗಂಭೀರವಾದ ಹೊಕ್ಕುಳುಳ್ಳವನು. ೩ ರೇಖೆಗಳುಳ್ಳವನು, ಚೆನ್ನಾಗಿ ವರ್ತುಲವಾದ (ಉರುಟಾದ) ಉದರ ಬಂಧನವುಳ್ಳವನು. ವಿಶಾಲವಾದ, ಉನ್ನತವಾದ ಉರಃ ಪ್ರದೇಶವುಳ್ಳವನು. ಪ್ರಕಾಶಮಾನವಾದ ಕೌಸ್ತುಭಮಣಿಯಿಂದ ಬಿಡಲ್ಪಡದಿರುವ (ಸಂಬದ್ಧವಾದ) ಅಂದರೆ ಅಲಂಕೃತವಾದ ಕುತ್ತಿಗೆಯುಳ್ಳವನು, ಪಾದಪರ್ಯಂತ ಜೋತಾಡಿಕೊಂಡಿರುವ ವನಮಾಲೆಯನ್ನು ಧರಿಸಿರುವವನು, ಮುತ್ತಿನಸರ, ವೈಜಯಂತೀ ಮೊದಲಾದವುಗಳಿಂದ ಕೂಡಿರುವವನು, ಪುಷ್ಪಗಳೂ ದೀರ್ಘ (ಉದ್ದ)ಗಳೂ ಆದ ೪ ಬಾಹುಗಳುಳ್ಳವನು, ಚಕ್ರ ಶಂಖ ಗದಾ ಪದ್ಮಗಳೆಂಬ ಆಯುಧಗಳಿಂದೊಡಗೂಡಿದವನು, ಅರಳಿದ ಕಮಲಗಳಂತೆ ಕಣ್ಣುಗಳುಳ್ಳವನು, ಪ್ರಕಾಶಮಾನಗಳಾದ ಮಕರಕುಂಡಲಗಳುಳ್ಳವನು, ಷೋಡಶಕಲಾ ಪರಿಪೂರ್ಣರಾದ ಅಯುತ (೧೦೦೦೦) ಚಂದ್ರರಿಗಿಂತಲೂ ಅತಿಶಯಿತವಾದ ಕಾಂತಿಯುಳ್ಳ, ನಿರ್ದುಷ್ಟವಾದ ಕಮಲದಂತಿರುವ ಮುಖವುಳ್ಳವನು, ಸುಂದರವೂ, ದೀರ್ಘವೂ ಆದ ಹುಬ್ಬುಗಳುಳ್ಳವನು. ಸುಂದರವಾದ (ಉನ್ನತವಾದ) ವಿಶಾಲವಾದ ಲಲಾಟ (ಹಣೆ) ದ ಅಂತವುಳ್ಳವನು, ಕಿರೀಟದಿಂದ ಸಂಬದ್ಧವಾದ (ಅಲಂಕೃತವಾದ) ಶಿರಸ್ಸುಳ್ಳವನು. ನಿಶ್ಶೇಷವಾಗಿ ದುಃಖವನ್ನು ನಾಶಗೊಳಿಸುವವನು, (ಭಕ್ತರಿಗೆ ದುಃಖಲೇಶವೂ ಇಲ್ಲದಂತೆ ಮಾಡುವವನು.) ಸರ್ವದಾ ಆನಂದ ಭರಿತನು, ನಿರ್ಮಲವಾದ ಮಂದಹಾಸವುಳ್ಳವನು, ಇಂತಹ (ದ್ವಾತ್ರಿಂಶಲ್ಲಕ್ಷಣ ಭರಿತನಾದ) ಶ್ರೀ ನಾರಾಯಣನನ್ನು ಸರ್ವದಾ ಧ್ಯಾನಿಸಬೇಕೆಂದು ಶಿಷ್ಯನಿಗೆ ಉಪದೇಶಿಸಬೇಕು.

ವಿ ॥ (1) ಬಾಲಸಂಘಮಪಿ ಬೋಧಯದ್ಭೃಶಂ ದುರ್ನಿರೂಪವಚನಂ ಚ ಪಂಡಿತೈಃ॥ ಎಂದು ಸುಮಧ್ವವಿಜಯದಲ್ಲಿ ಹೇಳಿದಂತೆ ಸಾಮಾನ್ಯತಃ ಬಾಲಕರಿಗೂ ಅರ್ಥವಾಗುವಂತೆ ತೋರಿದರೂ ಪಂಡಿತರಿಗೂ ದುರವಗಾಹವಾದ ಅರ್ಥವಿಶೇಷಗಳಿಂದ ಭರಿತವಾದುದು ಈ ಗ್ರಂಥವು. ಇದರ ಪ್ರತಿಶಬ್ದಗಳೂ ಅರ್ಥತಃ ಬಹುವಿಸ್ತೃತಗಳಾಗಿವೆ. ಅಲ್ಪಾಕ್ಷರವುಳ್ಳವುಗಳಾದಾಗ್ಯೂ ಬಹ್ವರ್ಥಕಗಳಾಗಿವೆ (2) ಆ ದ್ವಾತ್ರಿಂಶಲ್ಲಕ್ಷಣಗಳು ಯಾವುವು? ಎಂದರೆ ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ। ತ್ರಿಪೃಥುಲಘುಗಂಭೀರೋ ದ್ವಾತ್ರಿಂ ಶಲ್ಲಕ್ಷಣಸ್ಸ್ಮೃತಿ ॥(3) ಭುಜನೇತ್ರಹನೂಕರ್ಣನಾಸಾಸ್ಥಾನೇಷು ಪಂಚದೈರ್ಘ್ಯಾಣಿ । ತಥಾ ತ್ವಕ್ಕೇಶ ನಖಾಂಗುಲೀ ಪರ್ವಸು ಪಂಚ ಸೌಕ್ಷ್ಮ್ಯಾಣಿ ॥ (4) ತಥಾ ಪಾದ ತಲದ್ವಯೇ ನೇತ್ರಾಂತೇ ತಾಲು ಸ್ಥಾನೇ ಜಿಹ್ವಾಯಾಮಧರೋಷ್ಠೇ ನಖೇಷು ಚೇತಿ ಸಪ್ತ ಸ್ಥಾನೇಷು ರಕ್ತಾನಿ॥ ತಥಾ ವಕ್ಷಃ ಕುಕ್ಷ್ಯಲಿಕಾ ಸ್ಕಂಧ ಕರಚರಣೇಷು ಷಟ್ಸು ಸ್ಥಾನೇಷು ಔನ್ನತ್ಯಾನಿ ಷಟ್ । ತಥಾ ಲಲಾಟ ಕಟಿ ವಕ್ಷಸ್ಸು ತ್ರಿಷು ಸ್ಥಾನೇಷು ತ್ರೀಣಿ ಪೃಥುತ್ವಾನಿ॥ ತಥಾ ಜಂಘಾಯಾಂ ಗ್ರೀವಾಯಾಂ ಮೇಢ್ರೇಚ ತ್ರೀಣಿ ಹ್ರಸ್ವಾನಿ ॥ ತಥಾ ನಾಭ್ಯಾದಿತ್ರಿಷು

ಸ್ಥಾನೇಷು ತ್ರೀಣಿ ಗಂಭೀರತ್ವಾನಿ ॥ (5) ಪಂಚಸೂಕ್ಷ್ಮಃ ಪಂಚದೀರ್ಘಃ ಸಪ್ತರಕ್ತಃ ಷಡುನ್ನತಃ । ತ್ರಿಪೃಥುಹ್ರಸ್ವಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವಿತಿ॥(ಇತ್ಯಾದಿ ಸ್ಕಾಂದಪುರಾಣ ಕಾಶೀಖಂಡ) ಹೀಗೆ ೩೨ ಲಕ್ಷಣಗಳು. (6) ಅತಿರಕ್ತತಲಂ=ಪಾಣಿತಲದ್ವಯೇ ಪಾದತಲದ್ವಯೇ ನೇತ್ರಾಂತೇ ತಾಲುಸ್ಥಾನೇ ಜಿಹ್ವಾಯಾಮಧರೋಷ್ಠೇ ನಖೇಷು ಚೇತಿ ಸಪ್ತ ಸ್ಥಾನೇಷು ಸಪ್ತರಕ್ತತ್ವಾನಿ ॥ ಪಾಣ್ಯೋಸ್ತಲೇ ಚ ನೇತ್ರಾಂತೇ ತಾಲುಜಿಹ್ವಾಧರೋಷ್ಠಕಂ । ಸಪ್ತಾರುಣಂ ಚ ಸನಖಂ (ಇತಿ ಸ್ಕಾಂದ, ೨ ಕೈಗಳು ೨ ಪಾದಗಳು ಇವುಗಳ ತಲ, ಕಣ್ಣಿನ ಅಂತ, ತಾಲುಸ್ಥಾನ, ನಾಲಿಗೆ, ಕೆಳ ತುಟಿ, ಉಗುರು ಈ ೭ ಸ್ಥಾನಗಳಲ್ಲಿ ರಕ್ತ ವರ್ಣವಿರಬೇಕು. (2) ಭಾಸ್ವನ್ನಖ ವ್ರಾತ ವಿಭೂಷಿತಂ ವೃತ್ತಾಜಾನುಂ ಭುಜನೇತ್ರ ಹನುಜಾನು ನಖಸ್ಥಾನೇಷು ಪಂಚದೈರ್ಘ್ಯಾಣಿ । ಭುಜೌ ನೇತ್ರೇ ಹನುರ್ಜಾನು ನಾಸಾ, ಪಂಚ ದೀರ್ಘಾಣಿ ಶಸ್ತಾನಿ (ಸ್ಕಾಂದ.) ಬಾಹು, ಕಣ್ಣು, ದವಡೆ, ಮೊಣಕಾಲು, ನಖಸ್ಥಾನ ಈ ಐದು ಉದ್ದವಾಗಿರಬೇಕು. ಅತಏವ ಪ್ರಕಾಶಮಾನವಾದ ನಖಗಳ ಸಮೂಹವು, ಮೊಣಕಾಲು ದೀರ್ಘವೂ, ವರ್ತುಲವೂ ಆಗಿರಬೇಕು. (೮) ವೃತ್ತಜಂಘಂ=ಜಂಘಾಯಾಂ ಗ್ರೀವಾಯಾಂ ಮೇಹನೇ ಚ ತ್ರೀಣಿ ಹ್ರಸ್ವಾನಿ । ಗ್ರೀವಾ ಜಂಘಾ ಮೇಹನೈಶ್ಚ ತ್ರಿಭಿರ್ಹ್ರಸ್ವೋಽಯಮೀಡಿತಃ। (ಎಂದು ಸ್ಕಾಂದ ಮೊಣಗಂಟು, ಕುತ್ತಿಗೆ ಗುಹ್ಯಸ್ಥಾನ ಇವು ಹ್ರಸ್ವವಾಗಿರಬೇಕು (೯) ವಿಶಾಲವಕ್ಷಸಂ=ಲಲಾಟ ಕಟಿ ವಕ್ಷಸ್ಸು ತ್ರಿಷು ಸ್ಥಾನೇಷು ತ್ರೀಣಿ ಪೃಥುತ್ವಾನಿ । ವಕ್ಷಃ ಕುಕ್ಷ್ಯಲಕ ಸ್ಕಂಧ ಕರವಕ್ತ್ರಂ ಷಡುನ್ನತಂ । ಲಲಾಟಕಟಿ ವಕ್ಷೋಭಿಸ್ತ್ರಿವಿಸ್ತೀರ್ಣೋ ಯಥಾ ಹ್ಯಸೌ । ಇತ್ಯಾದಿ ಪ್ರಮಾಣಗಳಿಂದ ಹಣೆ, ಕಟಿಪ್ರದೇಶ, ವಕ್ಷಸ್ಥಳ ಈ ೩ ಸ್ಥಾನಗಳಲ್ಲಿ ವಿಶಾಲತನವೂ, ಔನ್ನತ್ಯವೂ ಇರಬೇಕು. (೧೦) ಸುನಿಮ್ನನಾಭಿಂ=ಸ್ವರೇಣ ಸತ್ವನಾಭಿಭ್ಯಾಂ ತ್ರಿಗಂಭೀತಃ (ಸ್ಕಾಂದ) ಸ್ವರ, ಅಂತಃಕರಣ, ನಾಭಿ ಈ ಮೂರು ಗಂಭೀರವಾಗಿರಬೇಕು. ಹೊಕ್ಕಳು ಆಳವಾಗಿರಬೇಕು. (೧೧) ಅತಿರಕ್ತತಲಂ=ಪಾದೌ ಸುಮಾಂಸಲೌ ರಕ್ತೌ ಸಮೌಸೂಕ್ಷ್ಮೌ ಸುಶೋಭನೌ । ಸಮಗುಲ್ಫೌ ಸ್ವೇದ ಹೀನೌ ಸ್ನಿಗ್ಧೌ. (ಸ್ಕಾಂದ) ಪಾದಗಳು ರಕ್ತಗಳಾಗಬೇಕು. ಇತ್ಯಾದಿ ಪ್ರಮಾಣಗಳಿಂದ ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ ಇಹ ಭವತಿ ಸಪ್ತರಕ್ತಃ ಷಡುನ್ನತಃ ಪಂಚಸೂಕ್ಷ್ಮಃ ದೀರ್ಘೋ ಯಃ । ತ್ರಿವಿಪುಲಲಗಂಭೀರೋ ದ್ವಾತ್ರಿಂಶಲ್ಲಕ್ಷಣಃ ಸ ಪುಮಾನ್ । ೭ರಲ್ಲಿ ರಕ್ತಿಮಾ, ೬ ರಲ್ಲಿ ಔನ್ನತ್ಯ, ೫ರಲ್ಲಿ ಸೂಕ್ಷ್ಮತ್ವ, ೫ರಲ್ಲಿ ದೈರ್ಘ್ಯ, ೩ರಲ್ಲಿ ವಿಶಾಲತನ, ೩ರಲ್ಲಿ ಲಘುತ್ವ, ೩ರಲ್ಲಿ ಗಾಂಭೀರ್ಯ, ಎಂದು ಹೇಳಿದ ದ್ವಾತ್ರಿಂಶಲಕ್ಷಣಗಳೂ ಹೇಳಿದಂತೆ ಆಯ್ತು. (೧೧) ಈ ಗ್ರಂಥವು ಬಹು ಚಿಕ್ಕದಾಗಿ ತೋರಿದರೂ ಬಹ್ವರ್ಥಭರಿತವಾದುದು, ಎಂಬ ಅಭಿಪ್ರಾಯದಿಂದ ಬಹುಪ್ರಮಾಣಗಳನ್ನನುಸರಿಸಿ ಶ್ರೀಮಧ್ವಾಚಾರ್ಯರು ನಿರೂಪಿಸಿರುವರು. (೧೨) ದ್ವಾತ್ರಿಂಶಲ್ಲಕ್ಷಣೈಃಸಮ್ಯಕ್ ಯುಕ್ತಾಃ ವಾಯುತ್ವಯೋಗ್ಯಕಾಃ । ನಿಯಮೇನೈವ ವಿಷ್ಣೋಸ್ತು ಪ್ರಾದುಭಾವಾಃ ವಿಶೇಷತಃ । ಸಹಸ್ರಾರೇಣ ಚಕ್ರೇಣ ಚಿಹ್ನಿತಾ ದಕ್ಷಿಣೇ ಕರೇ । ಗದಯಾಽ ಪ್ಯಾಶ್ರಯಾ ಚೈವ ಶತಾವರ್ತೇನ ಕಂಬುನಾ । ವಾಮೇ ಕರೇ ತಥಾಽಬ್ಜೇನ ಸಹಸ್ರದಲಶೋಭಿನಾ । (ಇತ್ಯಾದಿ ಬೃಹದ್ಭಾಷ್ಯ) (೧೩) ಷಣ್ಣವತ್ಯಂಗುಲೋ ಯಸ್ತು ತಾಲಾಸ್ಯೋ ದಶತಾಲಕಃ । ದಶಪ್ರಾದೇಶಕಃ ಸಪ್ತಪಾದೋ ಹಸ್ತಚತುಷ್ಟಯಃ ॥ ಕಲಮತ್ರಯಾಂಗುಲಶ್ಚೈವ ವಾಗ್ಮೀ ಸಂದೇಹ ವರ್ಜಿತಃ । ವಾಸುದೇವೈಕಶರಣೋ ಗುರುರಿತ್ಯುಚ್ಯತೇ ಬುಧೈಃ ॥ ಗುರು ಲಕ್ಷಣ ಸಂಪೂರ್ಣಃ ಸಾಕ್ಷಾದೇಕಶ್ಚತುರ್ಮುಖಃ ॥ ತತಃ ಶೇಷೇಂದ್ರವಹ್ನ್ಯಾದ್ಯಾಃ ಕ್ರಮೇಣೈವ ಪ್ರಕೀರ್ತಿತಾಃ॥ (ಇತಿ ಶ್ರುತಿಗೀತಾತಾತ್ಪರ್ಯ.) ಸಂಪೂರ್ಣ ಗುರುಲಕ್ಷಣವಿದ್ದವರು ಚತುರ್ಮುಖ ಮುಖ್ಯಪ್ರಾಣರು. ಆ ಮೇಲೆ ಶೇಷ ಗರುಡ ಇಂದ್ರಾದಿಗಳು. ಯಥಾಯೋಗ್ಯವಾಗಿ ಇತರ ಗುರುಗಳನ್ನೂ ಇಟ್ಟುಕೊಳ್ಳಬೇಕು.

ಅಷ್ಟಪತ್ರೇ ತು ಹೃತ್ಪದ್ಮೇ=(ಶ್ರೀಮದಾಚಾರ್ಯರು ಹೃತ್ಪದ್ಮದಲ್ಲಿ ಮಂಟಪವನ್ನು ವರ್ಣಿಸುತ್ತಾ ಭಗವಂತನನ್ನು ಧ್ಯಾನಿಸಬೇಕೆಂದು ಶಿಷ್ಯನಿಗೆ ಉಪದೇಶಿಸಬೇಕು ಎಂದು ಹೇಳಿದರು. ಅದಕ್ಕೆ ಸಂವಾದಿಯಾದ ಪ್ರಮಾಣಗಳು) (೧) ಹೃನ್ಮಧ್ಯೇಽಷ್ಟದಲಂ ಪದ್ಮಕರ್ಣಿಕಾಮಧ್ಯಶೋಭಿತಂ।ಓಂಕಾರನಾದ ವಿಲಸದ್ವೇದಗಂಭೀ(ಧೀ) ರವಿ ಪ್ರಭಂ ॥೧॥ ತನ್ಮಧ್ಯೇ ನವರತ್ನಾಢ್ಯಂ ತಪ್ತಹಾಟಕಸನ್ನಿಭಂ। ತಸ್ಯೋಪರಿಷ್ಟಾಚ್ಚತುರಂ ನಾನಾ ರತ್ನವಿಭೂಷಿತಂ । ॥೨॥ ವಿದ್ರುಮ ಸ್ಫಟಿಕಾಕಾರ ಶತಸ್ತಂಭ ಸಮನ್ವಿತಂ । ಸೂರ್ಯಕೋಟಿ ಪ್ರತೀಕಾಶಂ ವಿಮಾನೇನ ವಿರಾಜಿತಂ ॥೩॥ ಮುಕ್ತಾದಾಮವಿಭೂಷಾಢ್ಯಂ ಚಿತ್ರಧ್ವಜ ಪತಾಕಿನಂ।ಮಲ್ಲಿಕಾಕುಂದ ಮಂದಾರ ಕೇತಕೀ ಚಂಪಕಾದಿಭಿಃ ॥೪॥ ಅನ್ಯೈಶ್ಚ ಗಂಧವತ್ಪುಷ್ಪೈಃಸಮಂತಾದವಕೀರಿತಂ ॥ ಮಂದರಾಖ್ಯಸ್ಯ ರತ್ನಪುಷ್ಪ ಕಲ್ಪವೃಕ್ಷಾಂತರಸ್ಥಿತಂ ॥೫॥ ಏತನ್ಮಂಡಲಮಧ್ಯಸ್ಥ ಸ್ವರ್ಣಪದ್ಮೋಪಶೋಭಿತಂ । ಸಿಂಹಾಸನಸಮಾರೂಢಂ ಸೂರ್ಯಕೋಟಿಸಮಪ್ರಭಂ ॥೬॥ ವಿಷ್ಣುಂ ಚತುರ್ಭುಜಂ ಲಕ್ಷ್ಮೀಭೂಮಿಭ್ಯಾಂ ಪಾರ್ಶ್ವಶೋಭಿತಂ । (ತ್ರಿಸಂಧ್ಯಾಸು ತ್ರಿ ಶ್ರೀ ದುರ್ಗಾ ಭೂಮಿಭ್ಯಾಂ ಪಾರ್ಶ್ವಶೋಭಿತಂ ।)

ಕಿರೀಟಹಾರಕೇಯೂರ ಕುಂಡಲೈರ್ಮಂಡಿತಾಕೃತಿಂ ||೭|| ಕಟಿಸೂತ್ರ ಬ್ರಹ್ಮ ಸೂತ್ರನೂಪುರೈರುಪಶೋಭಿತಂ| ಶ್ರೀವತ್ಸ ವನಮಾಲಾಢ್ಯಂ ತುಳಸೀದಾಮಭೂಷಿತಂ ||೮|| ಅನೇಕದಿವ್ಯಾಭರಣಂ ಕನ (ಟ) ಕಾಭರಣೋಜ್ಜ್ವಲಂ|ವರದಾಭಯಹಸ್ತಾಢ್ಯಂ ಶಂಖಚಕ್ರಸ್ಫುರತ್ಕರಂ ||೯|| ಪೀತಾಂಬರಧರಂ ವಿಷ್ಣುಂ ಪ್ರಸನ್ನವದನಂ ಶುಭಂ| ಮನೋಹರಂ ದಯಾಮೂರ್ತಿಂ ಮಂದಹಾಸ ಮುಖಾಂಬುಜಂ ||೧೦|| ಅಣಿಮಾದ್ಯೈಶ್ವರ್ಯ ಮೂರ್ತಿಮದ್ಭಿರಷ್ಟೈಶ್ವರ್ಯೈರುಪಾಸಿತಂ । ಬದ್ಧಾಂಜಲಿಪುಟೈರ್ಭಕ್ತೈರ್ಬ್ರಹ್ಮರುದ್ರಾದಿಭಿಸ್ಸುರೈಃ ||೧೧|| ಗಾಯದ್ಭಿರ್ನಾರ ದಾದ್ಯೈಶ್ಚ ಸನಕಾದ್ಯೈಶ್ಚ ಸೇವಿತಂ । ಸ್ತು (ಸ್ತು) ತಂ ಪರಮಕಲ್ಯಾಣಂ ಸೂತಮಾಗಧವಂದಿಭಿಃ । ||೧೨|| ಅನೇಕದಿವಾಭ್ಯರಣಂ ಕರಕಂಕಣ ಶೋಭಿತಂ। ದಿವ್ಯಸ್ತ್ರೀಕರಯುಗ್ಮೇನ ಮಂದಂ ಪಾರ್ಶ್ವದ್ವಯೇ ಪರಂ(ಹರಿಂ)||೧೩|| ಸ್ವರ್ಣದಂಡ ವಿಚಿತ್ರಾಭ್ಯಾಂಚಾಮರಾಭ್ಯಾಂ ಸುವೀಜಿತಂ|ಮಾಧವಂ ಪರಮಾತ್ಮಾನಂ ಭಕ್ತವತ್ಸಲಮೀಶ್ವರಂ ||೧೪|| ಧ್ಯಾತ್ವೈವಂ ಹೃದಿಗಂ(ವಾ) ಸೂರ್ಯಮಂಡಲೇ ಮಾಧವಂ (ಇತಿ ವಿಷ್ಣುತೀರ್ಥೀಯ ಸನ್ಯಾಸ ಪದ್ಧತಿ ವ್ಯಾಖ್ಯಾ ಸುರೋತ್ತಮತೀರ್ಥೀಯಾ||) ಈ ಪ್ರಕಾರ ಸುರೋತ್ತಮ ತೀರ್ಥರು ಈ ಪ್ರಮಾಣದಿಂದ ಅಷ್ಟ ಪತ್ರೇತು ಎಂಬ ಮೂಲದ ಅರ್ಥವನ್ನೂ ಚೆನ್ನಾಗಿ ವಿವರಿಸಿ ನಿರೂಪಿಸಿರುವರು. (೨) ಇದೇ ಅಭಿಪ್ರಾಯವು ಸಂಧ್ಯಾ ಭಾಷ್ಯದಲ್ಲಿ ಉದಾಹೃತವಾದ ಅಗ್ನೇಯ ಪುರಾಣದಲ್ಲಿಯೂ ವಿವೃತವಾಗಿದೆ. ಹೇಗೆಂದರೆ ಹೃದಯೇಽಷ್ಟದಲಂ ಪದ್ಮಂ ಕರ್ಣಿಕಾಮಧ್ಯಶೋಭಿತಂ| ಓಂಕಾರನಾಲೇ ವಿಲಸಸ್ವೇದ ಗಂಧೀ ರವಿ ಪ್ರಭಂ ||೧||...... ||೪|| ಅನ್ಯೈಶ್ಚ ಗಂಧಪುಷ್ಪೈಶ್ಚ ಸಮಂತಾದವಕೀರಿತಂ || ಮಂದರಾಖ್ಯಸ್ಫುರತ್ಪುಷ್ಪಕಲ್ಪವೃಕ್ಷಾಂತರಸ್ಥಿತಂ ||೫|| ಸಿಂಹಾಸನೇ ಸಮಾಸೀನಂ ಸೂರ್ಯಕೋಟಿ ಸಮಪ್ರಭಂ || ವಿಷ್ಣುಂ ಚತುರ್ಭುಜಂ ಜ್ಞಪ ಲಕ್ಷ್ಮೀಪ್ರಾಣನಿಯಾಮಕಂ ||೬|| ಇತಿ || (೩|| ವೈಕುಂಠೇ ಪರಮೇ ವ್ಯೋಮ್ನಿ । ದುಗ್ಧಾಬ್ಧೌ ವೈಷ್ಣವೇ ಪದೇ|| ಅನಂತಭೋಗಪರ್ಯಂಕೇ ಸಮಾಸೀನಂ ಶ್ರಿಯಾ ಸಹ ||೧|| ಇಂದ್ರ ನೀಲಮಣಿಶ್ಯಾಮಂ ಶಂಖ ಚಕ್ರಗದಾಧರಂ| ಪೀತಾಂಬರಧರಂ ದೇವಂ ಪದ್ಮಪತ್ರನಿಭೇಕ್ಷಣಂ ||೨|| ಶ್ರೀ ವತ್ಸಕೌಸ್ತುಭೋರಸ್ಕಂ ಸರ್ವಾಭರಣ ಭೂಷಿತಂ| ಚಿಂತಯಿತ್ವಾ ನಮಸ್ಕೃತ್ಯಾ ಕೀರ್ತಯೇದ್ದಿವ್ಯನಾಮಭಿಃ ||೩|| ಇತಿ ವಿಷ್ಣುತೀರ್ಥೀಯ ಸನ್ಯಾಸ ಪದ್ಧತಿಃ|| ಸೂರ್ಯೇಂದು ವಹ್ನಿಗಂ= (೧) ಶ್ವೇತದೀಪಂ ಮಂಟಪಂ ಚ ದಿವ್ಯ ರತ್ನಮಯಂ ಶುಭಂ|ರತ್ನ ಸಿಂಹಾಸನಂ ತತ್ರ ಪೂಜಯೇನ್ಮಂಡಲಾನ್ವಿತಂ|| (೨) ಶ್ವೇತದ್ವೀಪಂ ತಥಾ ರತ್ನಮಂಟಪಂ ಪದ್ಮಮೇವಚ| ಅಮುಂ ಮಂತ್ರಾರ್ಕಸೋಮಂಚ ವಹ್ನಿಮಂಡಲಮೇವಚ ||೧|| ಸಂ ಸತ್ವಂ ರಂ ರಜಶ್ಚೈವ ತಂ ತಮಶ್ಚ ತತಃ ಪರಂ ||೨|| (ಯೋಗದೀಪಿಕಾ) (೩) ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯಂ ಶುಭಂ|| ಪದ್ಮಂ ತನ್ಮಧ್ಯತಃ ಪೂಜ್ಯಂ ಸತಾರಂ ಮಂಡಲತ್ರಯಂ ||೧|| ಗುಣತ್ರಯಾತ್ಮಿಕಾ ಶ್ರೀಶ್ಚ ತಥಾಽತ್ಮಾದಿಚತುಷ್ಟಯಂ| ವಿಮಲಾದ್ಯಾ ಅಷ್ಟದಿಕ್ಷು ಪುರುಷಶ್ಚೇತಿ ಶಕ್ತಯಃ ||೨|| ಮಧ್ಯೇಽನಂತಂ ಯೋಗಪೀಠಸ್ವರೂಪಂ ಮೂಲಮಂತ್ರತಃ|| (ಸನ್ಯಾಸ ಪದ್ಧತಿ) (೩) ಪುರುಷಂ ಶಕ್ತಿಕೂರ್ಮೌ ಚ ಶೇಷಂ ಪೃಥ್ವೀಂ ಚ ಸಾಗರಂ । ಶ್ವೇತದ್ವೀಪಂ ಮಂಟಪಂಚ ದಿವ್ಯರತ್ನಮಯಂ ಶುಭಂ|| ರತ್ನಸಿಂಹಾಸನಂ ತತ್ರ ಪೂಜಯೇನ್ಮಂಡಲಾನ್ವಿತಂ || (೪) ಸಏಷ ಕೂರ್ಮರೂಪೇಣ ವಾಯುರಂಡೋದಕೇಸ್ಥಿತಃ| ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ||೧|| ಅಪ್ಸು ಪಾದಾ ಓ ಚತ್ವಾರೋ ಹ್ಯಂಡೋದೇ ಕೋಣಸಂಸ್ಥಿತಾಃ|ಉರಸ್ತು ಭೂಮಿಸಂಶ್ಲಿಷ್ಟಮತಿರಿಚ್ಯ ಭುವಂಪುನಃ ||೨|| ಪಾರ್ಶ್ವತಃ ಪೃಷ್ಠತಶ್ಚೈವ ಶಿರಶ್ಚೋದಕ ಸಂಸ್ಥಿತಂ||ಆಕಾಶಮುದರೇ ತಸ್ಯದ್ಯೌಃಪೃಷ್ಠೇ ಸಂಸ್ಥಿತಾ ವಿಭೋಃ ಇತಿಪ್ರಭಂಜನೇ|| (೫) ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇಚಾಪ್ಯುದಕಂ ಮಹತ್| ಉದರೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ||೧|| ವಾಯೋಃಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಂ|| ಬಿಭರ್ತಿ ತಸ್ಯಾಂಚ ಜಗದಿದಂ ಸರ್ವಂ ಪ್ರತಿಷ್ಠಿತಂ ||೨|| ಇತಿ ವೈಭವೇ|| (೬) ಪರಂಬ್ರಹ್ಮೈವ ಮಧ್ಯೇಚಕ್ರಮಾಡುತ್ತದಮುತ್ತರಂ|| ಎಂದು ವಿಷ್ಣು ತೀರ್ಥೀಯದಲ್ಲಿ ಹೇಳಿದಂತೆ ಪರಮಪುರುಷಾದಿಗಳನ್ನಾರಂಭಿಸಿ ಶ್ವೇತ ದ್ವೀಪ ಪರ್ಯಂತವಾದವುಗಳನ್ನು ಪೀಠದಿಂದ ಕೆಳಗೆ ಮೇಲೆ ಪೂಜಿಸಬೇಕು. (೭) ಚತುಃ ಕೋಣಂ ತು ಪೀಠಂ ಸ್ಯಾತ್ ಷಟ್‌ಕೋಣಂ ತಸ್ಯ ಮಧ್ಯತಃ। ತನ್ಮಧ್ಯೇಽಷ್ಟದಲಂ ಪದ್ಮಂತತ್ರ ಪದ್ಮೇಶಮರ್ಚಯೇತ್ (ತಂತ್ರತಿಲಕ) || ಪೀಠವು ಚತುರಸ್ರವಾಗಿರಬೇಕು. ಅದರ ಮಧ್ಯದಲ್ಲಿ ಷಟ್‌ಕೋಣವಿರುವುದು. ಅದರ ಮಧ್ಯದಲ್ಲಿ ೮ ದಲಗಳುಳ್ಳ ಪದ್ಮವು, ಆ ಪದ್ಮದಲ್ಲಿ ಲಕ್ಷ್ಮೀ ಪತಿಯಾದ ಶ್ರೀಮನ್ನಾರಾಯಣನನ್ನು ಪೂಜಿಸಬೇಕೆಂದು ತಂತ್ರತಿಲಕಾನುಸಾರವಾಗಿಯೂ ಮೂಲಾರ್ಥವನ್ನು ಇಟ್ಟುಕೊಳ್ಳಬೇಕು. (೧೧) ಅಂದರೆ ಪುರೋಭಾಗದಲ್ಲಿರತಕ್ಕ ಪದ್ಮದಷಟ್‌ಕೋಣಗಳ ಮಧ್ಯದ ಅಗ್ರ ಭಾಗದಲ್ಲಿರತಕ್ಕ ೩ ಪತ್ರಗಳಲ್ಲಿ ಪ್ರದಕ್ಷಿಣಾಕಾರವಾಗಿ ದೀಪ ರೂಪಗಳಾಗಿರುವ ಸೂರ್ಯಮಂಡಲ ಚಂದ್ರಮಂಡಲ ಅಗ್ನಿಮಂಡಲಗಳನ್ನು ಪೂಜಿಸಬೇಕು.

ಪೃಷ್ಠಭಾಗದಲ್ಲಿರತಕ್ಕ ೩ ಪತ್ರಗಳಲ್ಲಿ ಸತ್ವರಜಸ್ತಮೋಗುಣಗಳಿಗೆ ಅಭಿಮಾನಿನಿಯಾದ ಲಕ್ಷ್ಮೀ ದೇವಿಯನ್ನು ಪೂಜಿಸಬೇಕು. ಅದರಲ್ಲಿ ಸತ್ವಗುಣಕ್ಕೆ ಅಭಿಮಾನಿನಿಯು ಶ್ರೀದೇವಿಯು. ರಜೋಗುಣಕ್ಕೆ ಅಭಿಮಾನಿನಿಯು ಭೂದೇವಿಯು, ತಮೋಗುಣಕ್ಕೆ ಅಭಿಮಾನಿನಿಯು ದುರ್ಗಾದೇವಿಯು. ಎಂದು ತಿಳಿಯಬೇಕು. ಮದ್ಯಭಾಗದಲ್ಲಿ ಕೇಸರ ಸಹಿತವಾಗಿ ಕಂದವೇ ಮೂಲವಾಗಿ ಉಳ್ಳ ಪತ್ರವಿದೆ ಎಂದು ತಿಳಿಯಬೇಕು. (೧೪) ಆತ್ಮಾನಮಂತರಾತ್ಮಾನಂ ಪರಮಾತ್ಮಾನಮೇವ ಚ। ಜ್ಞಾನಾತ್ಮಾನಂ ತಥಾ ಪೂಜ್ಯಾಃ ಪದ್ಮೇ ಪೂರ್ವಾದಿಷುಕ್ರಮಾತ್ ॥ ಆ ಹೃತ್ಕಮಲದಲ್ಲಿ ಪೂರ್ವಾದಿ ೪ ದಿಕ್ಕುಗಳಲ್ಲಿ ಕ್ರಮವಾಗಿ ಆತ್ಮಾ, ಅಂತರಾತ್ಮಾ, ಪರಮಾತ್ಮಾ, ಜ್ಞಾನಾತ್ಮಾ ಎಂಬ ೪ ಭಗವದ್ರೂಪಗಳನ್ನು ಪೂಜಿಸಬೇಕೆಂದು ಪಂಚರಾತ್ರಾಗಮದಲ್ಲಿ ಹೇಳಿದೆ. (೧೫) ಆ ೮ ಪತ್ರಗಳುಳ್ಳ ಪದ್ಮದ ೮ ದಳ. ಮಧ್ಯ ಇವುಗಳಲ್ಲಿ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎಂಬ ೯ ಶಕ್ತಿಗಳನ್ನು (ಪೂಜ್ಯರಾದ ದೇವತೆಗಳನ್ನು) ಪೂಜಿಸಬೇಕು. ಹೇಗೆಂದರೆ ಪೂರ್ವಪತ್ರಂ ಸಮಾರಭ್ಯ ತದ್ದಲೇಷು ಯಥಾಕ್ರಮಂ। ವಿಮಲಾದ್ಯಾಸ್ತು ಪೂಜ್ಯಾಃ ಸ್ಯುಃ ಇತ್ಯಾದಿ ಪ್ರಕಾರ ಪೂಜಿಸಬೇಕು. (೧೬) ಹಾಗೆಯೇ ಪೀಠ ಪೂಜೆಯಲ್ಲಿ ಶ್ರೀಬ್ರಹ್ಮವಾಯು (ರುದ್ರ)ಶೇಷ ಗರುಡರನ್ನೂ, ವಿಮಲಾದಿ ೯ ರೂಪಗಳನ್ನೂ ಪೂಜಿಸಬೇಕು. (೧೭) ಇಚ್ಛಾದಿತ್ವೇನ ತ್ರಿವಿಧಾ ವಿಮಲಾದ್ಯಾಸ್ತು ಶಕ್ತಯಃ।ವಿಷ್ಣೋಃ ಸ್ವರೂಪ ಭೂತಾಶ್ಚತಾಭ್ಯಸ್ತನ್ನಾಮಿಕಾಃ ಪರಾಃ ॥೧॥ ಜಾಯಂತೇ ತತ್ಪ್ರಸಾದೇನ ತಾಶ್ಚ ಪೀಠೇ ಪ್ರಪೂಜಯೇತ್ । ತದ್ಭಿನ್ನಜೀವಾಸ್ತಸ್ಯೈವ ಪ್ರಸಾದಾತ್ತತ್ಸಮೀಪಗಾಃ ॥೨॥ ಇತಿ ತಂತ್ರ ನಿರ್ಣಯೇ (೧೮) ಇಚ್ಛಾಜ್ಞಾನ ಪ್ರಯತ್ನ ನಿಯಾಮಕ ರೂಪಗಳು ೩ ವಿಧಗಳು. ಇಚ್ಛಾಜ್ಞಾನ ಕ್ರಿಯೆಗಳು ಇಚ್ಛಾತ್ವಾದಿ ಧರ್ಮಗಳಿಂದ ಭಿನ್ನಗಳಾಗಿವೆ. ವಿಮಲಾದಿಗಳು ೯ ವಿಧ. ಶ್ರೀವಿಷ್ಣುವಿನ ಸ್ವರೂಪ ಭೂತ ಶಕ್ತಿಗಳು. ಆ ಶಕ್ತಿಗಳಿಂದ ರಮಾ ಶಕ್ತಿಗಳು ಭಿನ್ನಗಳು. ಅವುಗಳಿಂದ ಆಯಾವ ನಾಮಗಳುಳ್ಳ ವಿಮಲಾದಿ ಶಕ್ತಿಗಳಿಗೆ ಅಭಿಮಾನಿಗಳಾದ ಬ್ರಹ್ಮ ವಾಯು ಶೇಷ ಗರುಡರೆಂಬ ಜೀವರು ಆ ವಿಷ್ಣುವಿನ ಅನುಗ್ರಹದಿಂದಲೇ ಹುಟ್ಟುತ್ತಾರೆ. ಭಿನ್ನ, ಅಭಿನ್ನ ಎಲ್ಲಾ ಶಕ್ತಿಗಳನ್ನೂ ಪೀಠದಲ್ಲಿ ಪೂಜಿಸಬೇಕು. ಆ ಶ್ರೀ ವಿಷ್ಣುವಿನ ಸ್ವರೂಪ ಭೂತ ಶಕ್ತಿಗಳಿಂದ ಭಿನ್ನರಾದ ಜೀವರು ಶ್ರೀ ಹರಿಯ ಅನುಗ್ರಹದಿಂದಲೇ ಶ್ರೀ ವಿಷ್ಣುವಿನ ಸ್ವರೂಪ ಭೂತಗಳಾದ ವಿಮಲಾದಿ ಶಕ್ತಿಗಳ ಸಮೀಪದಲ್ಲಿರುತ್ತವೆ, ಎಂದು ತಂತ್ರ ನಿರ್ಣಯದಲ್ಲಿದೆ. (೮) ವಿಷ್ಣೋಃ ಶ್ರಿಯೋ ಬ್ರಹ್ಮಣಶ್ಚ ವಾಯೋಃ ಸಂಕರ್ಷಣಸ್ಯ ಚ । ಗರುಡಸ್ಯಚ ಸಂಪ್ರೋಕ್ತಾಃ ಪ್ರತ್ಯೇಕಂ ನವಮೂರ್ತಯಃ ॥೧॥ ಪೂಜ್ಯಾಃಸ್ಸಾತ್ವತತಂತ್ರೇಷು ತತ್ರಾದ್ಯಾ ಮೂರ್ತಯೋ ಹರೇಃ ॥ ಪ್ರಧಾನಾಸ್ತಾಸಿ (ಸ್ತು) ಸರ್ವಾಸಾಂ ಮೂರ್ತೀನಾಂ ಹರಿಮೂರ್ತಯಃ ॥೨॥ ಇತಿ ಸಹಸ್ರಾವರಣೇ ॥ ಶ್ರೀ ವಿಷ್ಣು ಲಕ್ಷ್ಮೀ ಬ್ರಹ್ಮ ವಾಯು ಸಂಕರ್ಷಣ, ಸುಪರ್ಣ, ಇವರಿಗೆ ಪ್ರತಿಒಬ್ಬರಿಗೂ, ೯, ೯, ಮೂರ್ತಿಗಳಿವೆ ಪಂಚರಾತ್ರಾಗಮಗಳಲ್ಲಿ ಪೂಜ್ಯಗಳೆಂದು ಹೇಳಿದ ಲಕ್ಷ್ಮ್ಯಾದಿ ೯ ಮೂರ್ತಿಗಳಿಗೆ ಆದಿ ಭೂತಗಳಾದ ಶ್ರೀ ಹರಿಯ ೯ ಮೂರ್ತಿಗಳು ಪೂಜ್ಯಗಳೂ ಪ್ರಧಾನಗಳೂ ಆಗಿವೆ. ಎಂದು ಸಹಸ್ರಾವರಣ ಎಂಬ ಗ್ರಂಥದಲ್ಲಿ ಹೇಳಿದೆ (೧೯) ಯೋಗದೀಪಿಕಾಯಾಂ ॥ ಅಗ್ನ್ಯಾದಿಕೋಣಗಾನರ್ಚೇತ್ಪೀಠಪಾದಸ್ಥಲೇ ಸ್ಥಿತಾನ್ । ವಿಪಶ್ಚಿದ್ಗರುಡಂ ವ್ಯಾಸಂ ದುರ್ಗಾಂಚೈವ ಸರಸ್ವತೀಂ ॥೧॥ ಧರ್ಮಂ ಜ್ಞಾನಂಚ ವೈರಾಗ್ಯಮೈಶ್ವರ್ಯಂ ಚ ತತಃ ಪರಂ ॥ ತದೂರ್ಧ್ವಗಾನಧರ್ಮಾದೀನ್ ಪೂರ್ವಾದೌ ಫಲಕಾಶ್ರಯಾನ್ ॥೨॥ ಹೀಗೆ ಯೋಗದೀಪಿಕೆಯಲ್ಲಿ ಹೇಳಿದೆ. (೨೦) ಸ್ವರ್ಣಾದಿರಚಿತೇ ಪೀಠೇ ಪೂಜಾಚಕ್ರಂ ಸಮುದ್ಧರೇತ್।ಅಸ್ಮಿನ್ ಸಂಸ್ಥಾಪ್ಯ ದೇವೇಶಂ ಪುಷ್ಪಾದ್ಯೈರಪಿ ಪೂಜಯೇತ್ ॥ ಹೀಗೆ ಸಿದ್ಧತಂತ್ರದಲ್ಲಿ ಹೇಳಿದೆ (೨೧) ಪಂಚರಾತ್ರೇ=ಆದೌ ಸಿಂಹಾಸನಂ ಧ್ಯಾತ್ವಾ ಪೂಜ್ಯಃ ಪರಮ ಪೂರುಷಃ।ಆಧಾರಶಕ್ತಿಃ ಪ್ರಕೃತಿಃ ಕೂರ್ಮೋಽನಂತೋ ವರಾಹಕಃ ॥೧॥ ಪೃಥ್ವೀಕ್ಷೀರಾರ್ಣವಶ್ಚೈವ ಶ್ವೇತದ್ವೀಪಸ್ತಥೈವಚ। ಸುವರ್ಣಮಂಟಪಶ್ಚೈವ ಹೇಮಪ್ರಾಕಾರ ಇಷ್ಯತೇ ॥೨॥ ಸುವರ್ಣವೇದಿಕಾಮಧ್ಯೇ ಮಂತ್ರಸ್ಸಿಂಹಾಸನೇ ಯಜೇತ್ । ಪುರುಷಂ ಶಕ್ತಿಕೂರ್ಮೌಚ ಶೇಷಂ ಪೃಥ್ವೀಂ ಚ ಸಾಗರಂ ॥೩॥ ಶ್ವೇತದ್ವೀಪಂ ಮಂಟಪಂ ಚ ದಿವ್ಯರತ್ನಮಯಂ ಶುಭಂ । ರತ್ನಸಿಂಹಾಸನಂ ತತ್ರ ಪೂಜಯೇನ್ಮಂಡಲಾನ್ವಿತಂ ॥೪॥ (೨೨) ತಲ್ಪಾಕಾರಂ ತತೋಽನಂತಂ ಪೀಠಮಧ್ಯೇ ಸಮರ್ಚಯೇತ್ ॥ (೨೩) ಹೀಗೆ ಶ್ರೀ ಮದಾಚಾರ್ಯರು ಪಂಚರಾತ್ರಾಗಮ ಮೊದಲಾದ ಗ್ರಂಥಗಳ ಅಭಿಪ್ರಾಯವನ್ನನುಸರಿಸಿಯೇ ಅಷ್ಟಪತ್ರೇ ತು ಹೃತ್ಪದ್ಮೇ ಇತ್ಯಾದಿಗಳನ್ನು ನಿರೂಪಿಸಿರುವರು. (೨೪) ತಂತ್ರಸಾರಾದಿಗಳಲ್ಲಿ ಹೇಳಿದ ಪ್ರಕಾರ ಪೀಠಪೂಜೆಯು (೨೫) ಅರ್ಚಯೇದ್ಗಂಧ ಪುಷ್ಪಾದ್ಯೈಃ ಪೀಠಪಾರ್ಶ್ವೇ ತು ಸವ್ಯಕೇ। ವಾಯುಮಾದ್ಯಗುರುಂ ಲೋಕೇ ಪೀಠಪಾರ್ಶ್ವೇತು ದಕ್ಷಿಣೇ ॥೧॥ ಬ್ರಹ್ಮಾಣಂ ವಿಷ್ಣುಮೀಶಂಚ ಸಮಾರಾಧ್ಯ ತಥೋತ್ತರೇ । ಸನತ್ಕುಮಾರಂ ಸನಕಂ ಸನಂದನಸನಾತನೌ ॥೨॥ ಎಂದು ಪಾದ್ಮ ತಂತ್ರದಲ್ಲಿ ಹೇಳಿದಂತೆ ವಾಯ್ವಾದಿಗಳನ್ನು ಪೂಜಿಸಬೇಕು. (೨೬) ಪುರುಷಸಂಹಿತೆಯಲ್ಲಿ ಅವಾಹನ ಪ್ರಕಾರವೂ

ಧ್ಯಾನ ಪ್ರಕಾರಾದಿಗಳೂ ಚೆನ್ನಾಗಿ ನಿರೂಪಿತಗಳಾಗಿವೆ. ಅದನ್ನು ಮೂಲೀಕರಿಸಿ ಅದರ ಅರ್ಥವನ್ನು ಮನಸ್ಸಿನಲ್ಲಿ ಆಕಲ್ಪನೆ ಮಾಡಿಕೊಂಡು ಶ್ರೀಮದಾಚಾರ್ಯರು ಅಷ್ಟಪತ್ರೇ ತು ಹೃತ್ಪದ್ಮೇ ಇತ್ಯಾದಿಗಳನ್ನು ವಿರಚಿಸಿರುವರು. ಹೇಗೆಂದರೆ ಅಷ್ಟೈಶ್ವರ್ಯಸಮಾಯುಕ್ತಂ ಶ್ವೇತಮತ್ಯಂತ ದುರ್ಲಭಂ। ಶ್ವೇತಾಬ್ಜಸ್ಥಂ ಪದ್ಮಕರಂ ಗದಿನಂ ಶಂಖಿಚಕ್ರಿಣಂ ॥೧॥ ಶುದ್ಧಸ್ಫಟಿಕಸಂಕಾಶಂ ಸರ್ವಾಭರಣಭೂಷಿತಂ । ವನಮಾಲಾಧರಂ ದೇವಂ ಧ್ಯಾಯೇನ್ನಾರಾಯಣಂ ಪ್ರಭುಂ ॥ (ಪರಂ) ॥೨॥ ಮಾನಸೈರುಪಚಾರೈಶ್ಚ ಪೂಜಾಂ ಸಮ್ಯಕ್ ಸಮಾಚರೇತ್ । ಬಹಿರ್ಯಾಶಪ್ರಸಿದ್ಧ್ಯರ್ಥಮುಚ್ಚರನ್ ಪ್ರಣವಂ ತಥಾ ॥೩॥ ದೇವಂ ಸುಷುಮ್ನಾಮಾರ್ಗೇಣ ಆನೀಯ ಬ್ರಹ್ಮರಂಧ್ರಕಂ। ವಾಮನಾಸಾಪುಟೇ ಧ್ಯಾತ್ವಾ ನಿರ್ಗತಂ ಸ್ವಾಂಜಲಿಸ್ಥಿತಂ ॥೪॥ ಸಂಪೂಜ್ಯ ಪ್ರತಿಮಾದೌ ತು ಪುಷ್ಪಮಾರೋಪ್ಯ ಮಂತ್ರತಃ । ಸಹಸ್ರಶೀರ್ಷಮಂತ್ರೇಣ ಕುರ್ಯಾದಾವಾಹನಂ ವಿಭೋಃ ॥೫॥ ಅಧೋಮುಖಂ ಹೃತ್ಕಮಲಂ ವಾಯುಬೀಜೇನ ಸನ್ಮುಖಂ । ಪ್ರಣವೇನೋನ್ಮುಖೀಕೃತ್ಯ ಜ್ಞಾನಾರ್ಕೇಣ ವಿಕಾಸಯೇತ್ ॥೬॥ ಅಂದರೆ ಅಧೋಮುಖವಾಗಿರುವ (ಅಂದರೆ ಒಳಗೆ ಸ್ವಲ್ಪ ಕುಂಚಿತವಾದ ಪತ್ರಾಗ್ರವುಳ್ಳ) ನಮ್ಮ ಹೃದಯ ಕಮಲವನ್ನು ವಾಯು ಬೀಜದಿಂದ (ಯಂ ಎಂಬ ಬೀಜಾಕ್ಷರ ಮಂತ್ರದಿಂದ) ಅಭಿಮುಖೀಕರಿಸಿ ಪ್ರಣವ ಮಂತ್ರದಿಂದ ಆ ಪತ್ರಗಳನ್ನು ಊರ್ಧ್ವಮುಖ ಅಗ್ರದಳವುಳ್ಳದ್ದನ್ನಾಗಿ, ಮಾಡಿ ಜ್ಞಾನವೆಂಬ ಸೂರ್ಯನಿಂದ (ಅಂದರೆ ಸರ್ವಸದ್ಗುಣ ಪರಿಪೂರ್ಣಃ ವಿದೋಷಃ ಸರ್ವೇಶಃ ಸ್ವೇಷು ಯಥಾಭಕ್ತಿ ವತ್ಸಲೋ ಹರಿಃ ಎಂಬ ಜ್ಞಾನ ಸೂರ್ಯನಿಂದ) ಅರಳಿಸಬೇಕು. ಹೀಗೆ ಹೇಳಿದ ಪ್ರಕಾರ ವಿಕಸಿತವಾದ ಹೃತ್ಕಮಲದಂತಿರುವ ಅಷ್ಟೈಶ್ವರ್ಯಯುಕ್ತನೂ, ದೋಷಲೇಶರಹಿತನೂ ಶಂಖ

ಚಕ್ರ ಗದಾ ಪದ್ಮಧಾರಿಯೂ ಆದ ಸರ್ವೋತ್ತಮನಾದ ಶ್ರೀನಾರಾಯಣನನ್ನು (ಅಂದರೆ ಬಿಂಬರೂಪದಲ್ಲಿ ಉಪಾಸ್ಯ ಭಗವದ್ರೂಪವನ್ನು) ಅರ್ಘ್ಯ, ಆರಿಘ್ಯ, ಪುಷ್ಪ ಪರ್ಯಂತ ಮಾನಸ ಪೂಜೆ ಮಾಡಿ ಉದ್ಯದ್ಭಾಸ್ವತ್ಸಮಾಭಾಸಃ ಇತ್ಯಾದಿ ಮಂತ್ರಗಳಿಂದ ಧ್ಯಾನ ಮಾಡಿ ಸುಷುಮ್ನಾನಾಡೀ ಮಾರ್ಗವಾಗಿ ಶಿರಸ್ಸಿನಲ್ಲಿರುವ ಬ್ರಹ್ಮರಂಧ್ರಕ್ಕೆ ತಂದು ವಾಮನಾಸಾಪುಟದಿಂದ ಬಹಿರ್ನಿರ್ಗತವಾಗಿ ತಮ್ಮ ಕರಸಂಪುಟದಲ್ಲಿದ್ದಾನೆಂದು ಭಾವಿಸಿ ಪೂಜಿಸಿ ತಂತಮ್ಮ ಪ್ರತಿಮಾದಿಗಳಲ್ಲಿ ಮಂತ್ರಗಳಿಂದ ತುಳಸೀ ಬಿಲ್ವಪತ್ರ ಪುಷ್ಪಗಳನ್ನು ಸಮರ್ಪಿಸಿ, ಪುರುಷಸೂಕ್ತ, ಮೂಲ ಮಂತ್ರ, ಅಷ್ಟಾಕ್ಷರಾದಿ ಮಂತ್ರಗಳಿಂದ ಪ್ರತಿಮಾದಿಗಳಲ್ಲಿ ಆವಾಹನ ಮಾಡಬೇಕು. (ಅಂದರೆ ಪ್ರತಿಮಾದಿಗಳೊಳಗೆ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮ್ಯಂತರ್ಗತ ಶ್ರೀ ಲಕ್ಷ್ಮೀನಾರಾಯಣನನ್ನು ಅನುಸಂಧಾನ ಮಾಡುವುದೇ ಆವಾಹನವು. ಹೀಗೆ ಆವಾಹನ ಮಾಡಿ ವಿಧ್ಯುಕ್ತ ಪ್ರಕಾರ ಪೂಜಿಸಬೇಕು. ಪೂಜೆ ಮುಗಿದ ಮೇಲೆ ತನ್ನ ಉಪಾಸ್ಯ ಭಗವದ್ರೂಪವನ್ನು ಪ್ರತಿಮಾದಿಗಳಿಂದ ಯಥಾಪ್ರಕಾರ ತಂತಮ್ಮ ಹೃದಯದಲ್ಲಿರಿಸುವುದೇ ವಿಸರ್ಜನವು. ಹೀಗೆ ಶಾಸ್ತ್ರೋಕ್ತ ಪ್ರಕಾರ ಪ್ರತಿನಿತ್ಯವೂ ಮಾಡುತ್ತಾ ಬಂದರೆ ಆ ಪ್ರತಿಮಾದಿಗಳಲ್ಲಿ ವಿಶೇಷ ಸನ್ನಿಧಾನವೂ, ವಿಶೇಷ ಶಕ್ತಿಯೂ ಉಂಟಾಗಿ ಅರ್ಚಕರಿಗೆ ಸರ್ವಾಭೀಷ್ಟವೂ ಲಭಿಸುವುದು. [೨೭] ಅದರಲ್ಲಿಯೂ "ಆತ್ಮಾರ್ಥೇ ಹೃದ್ಗತಂ ವಿಷ್ಣುಂ ಪರಾರ್ಥೇ ಸೂರ್ಯಗಂ ಹರಿಂ। ತಥಾ ದೇವಾಲಯೇ ಸೂರ್ಯಮಂಡಲಾಂತರ್ಗತಂ ಹರಿಂ ॥ ಆವಾಹಯೇತ್।" ಎಂಬ ಪ್ರಮಾಣಾನುಸಾರ ತಮಗಾಗಿ ಪೂಜಿಸುವುದಾದರೆ ಹೃದಯದಲ್ಲಿರತಕ್ಕ ಶ್ರೀವಿಷ್ಣುವನ್ನು ಪ್ರತಿಮಾದಿಗಳಲ್ಲಿ ಆತ್ಮಾ ದೇವಾನಾಂ ಭುವನಸ್ಯಗರ್ಭೋ ಯಥಾವಶಂ ಚರತಿ ದೇವ ಏಷಃ। ಘೋಷಾಯದಸ್ಯ ಶೃಣ್ವಿರೇನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ । ಎಂಬ ಮಂತ್ರದಿಂದ ಪ್ರತಿಮೆಯಲ್ಲಿ ಆವಾಹನಮಾಡಿ ಪೂಜಿಸಬೇಕು (೨೮) ಪರಗೃಹದಲ್ಲಿ ಅಥವಾ ಪರಾರ್ಥವಾಗಿ ಅಥವಾ ದೇವಾಲಯಾದಿಗಳಲ್ಲಿ ಪ್ರತಿಮಾರ್ಚನೆ ಮಾಡುವುದಾದರೆ ಮೂಲರೂಪೇಣ ಸಹಿತಾಃ ಸೂರ್ಯಮಂಡಲಸಂಸ್ಥಿತಾಃ। ರಾತ್ರೌ ಶುಕ್ಲೇ ತ್ವಿಂದುಸಂಖ್ಯಾ ಹ್ಯನ್ಯದಾ ವಹ್ನಿ ಮಧ್ಯಗಾಃ॥ ಎಂಬ ಪ್ರಮಾಣಾನುಸಾರ ಪ್ರತಿಮಾದಿಗಳಲ್ಲಿ ಹಗಲಿಗೆ ಸೂರ್ಯಮಂಡಲಾಂತರ್ಗತ ಶ್ರೀಹರಿಯನ್ನೂ, ರಾತ್ರಿಗೆ ಅಗ್ನಿಮಂಡಲಾಂತರ್ಗತ ಶ್ರೀಹರಿಯನ್ನು ಆವಾಹನ ಮಾಡಿ ಪೂಜಿಸಬೇಕು (೨೯) ಏವಂಚ ಅಷ್ಟಪತ್ರೇ ತು ಹೃತ್ಪದ್ಮೇ ಎಂಬ ಮೂಲಕ್ಕೆ ಉಪಯುಕ್ತವಾಗಿ ಹೇಳಿದ ಪ್ರಮಾಣಗಳ ಸಾರಾಂಶವು.

ನಮ್ಮ ಪೀಠದಲ್ಲಿ ಕುಳಿತ ಭಗವಂತನು ಬ್ರಹ್ಮಾಂಡ ಕಟಾಹವನ್ನೇ ಧರಿಸಿಕೊಂಡು ಶೋಭಿಸುತ್ತಿದ್ದಾನೆಂದು ಧ್ಯಾನಿಸಬೇಕು ಹೇಗೆಂದರೆ ಬ್ರಹ್ಮಾಂಡಕಟಾಹದ ಅಡಿಯಲ್ಲಿ ಪರಮಪುರುಷನಾದ ಶ್ರೀನಾರಾಯಣನು, ಜಲಾದಿ ಆವರಣಗಳಿಂದ ಕೂಡಿದ ಬ್ರಹ್ಮಾಂಡವನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ಪದ್ಮಾಸನನಾಗಿ ಪೂರ್ವಾಭಿಮುಖವಾಗಿ ಇರುತ್ತಾನೆ. ಆ ಶ್ರೀ ಹರಿಯನ್ನು ಪೀಠಸ್ಥಾಪನ

ದೇಶದ ಮಧ್ಯಕ್ಕಿಂತ ಸಮಾನವಾದ ಬ್ರಹ್ಮಾಂಡದಿಂದ ಕೆಳಪ್ರದೇಶದಲ್ಲಿ ಪೂಜಿಸಬೇಕು ಅದರ ಮೇಲುಭಾಗದಲ್ಲಿ ಸಾಕ್ಷಾತ್‌ನವಾವರಣಗಳಿಗೆ ಆಧಾರರೂಪಿಣಿಯಾದ ಶಕ್ತಿನಾಮಕ ಲಕ್ಷ್ಮೀ ದೇವಿಯು. ಆ ಆಧಾರಶಕ್ತಿಯ ಮೇಲೆ ಬ್ರಹ್ಮಾಂಡಕ್ಕೆ ಆಧಾರ ಭೂತನಾದ ವಿಷ್ಣುಕೂರ್ಮ, ಆ ವಿಷ್ಣುಕೂರ್ಮನ ಮೇಲೆ ಬ್ರಹ್ಮಾಂಡದ ಒಳಗಿನ ಅಗಾಧ ಜಲಾಧಾರವಾದ ಪರಮ ಪುರುಷಾಯ ನಮಃ ಎಂದು ಹೇಳಿದ ಇನ್ನೊಂದು ವಿಷ್ಣುಕೂರ್ಮವು ಅದರ ಮೇಲೆ ವಾಯುಕೂರ್ಮ ಹೀಗೆ ೩ ಕೂರ್ಮಗಳು. ಆ ವಾಯುಕೂರ್ಮನ ಪುಚ್ಛವನ್ನು ಆಶ್ರಯಿಸಿ ಶೇಷನು, ಶೇಷನ ಮೇಲೆ ಪೃಥಿವಿಯು. ಪೃಥಿವಿಗೆ ಅಭಿಮಾನಿನಿಯಾದ ಭೂದೇವಿಯು ಕೂಡ. ಆ ಪೃಥಿವಿಯ ಮೇಲೆ ಕ್ಷೀರಸಾಗರ ಮತ್ತು ಅಭಿಮಾನಿಯಾದ ವರುಣನು. ಆ ಕ್ಷೀರಸಾಗರದ ಮೇಲೆ ಶ್ವೇತ ದೀಪವು, ಆ ಶ್ವೇತ ದೀಪದ ಮೇಲೆ ದಿವ್ಯ ನಾನಾ ವಿಧ ರತ್ನಗಳಿಂದ ಖಚಿತವಾದ ಸುವರ್ಣಮಂಟಪವು. ಆ ಮಂಟಪದೊಳಗೆ ಸೂರ್ಯ ಮಂಡಲ, ಚಂದ್ರ ಮಂಡಲ, ಅಗ್ನಿಮಂಡಲಗಳಿಂದ ಕೂಡಿದ ರತ್ನ ಸಿಂಹಾಸನವು. ಅದರಲ್ಲಿ ಚತುಷ್ಕೋಣಾಕಾರವಾದ ಪೀಠದ ಮೆಲೆ ಷಟ್‌ಕೋಣ ಪದ್ಮವನ್ನು, ಅದರ ಮಧ್ಯದಲ್ಲಿ ಅಷ್ಟದಲಪದ್ಮವನ್ನು ಧ್ಯಾನಿಸಿ ಆ ಪದ್ಮದಲ್ಲಿ ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನನ್ನು "ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಂ। ತಾವತ್ತ್ವಂಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧೋಭವ" ಎಂದು ಸಂಪ್ರಾರ್ಥಿಸಿ ಪೂಜಿಸಬೇಕು.

(20) ನಾರಾಯಣಂ=(1) ಅರಾಣಾಂ ವಿರುದ್ಧತ್ವಾತ್=ದೋಷಗಳಿಗೆ ವಿರುದ್ಧವಾದ ಪ್ರಯುಕ್ತ ನಾರಾಃ=ಗುಣಗಳು ಗುಣಗಳಿಗೆ ಆಶ್ರಯನು. ಅಥವಾ ನಾರೈಃ ಸಹ ಈಯತೇ ನಾರಾಯಣಃ "ಗುಣಪರಿಪೂರ್ಣನು (2) ಅರಾಣಾಂ ಅಯನಂ ನಭವತಿ=ದೋಷಲೇಶರಹಿತನು (3) ನಾರೇಣ=ಚೇತನ ವಿಶೇಷ ಸಂಬಂಧಿ ಜ್ಞಾನದಿಂದ ಈಯತೇ. ಜ್ಞೇಯನು (4) ನ ರೀಯಂತೇ ಇತಿ ನರಾಃ=ಮುಕ್ತರು. ತೇಷಾಂ ಸಮುದಾಯೋ ನಾರಃ, ತೇನ ಈಯತೇ ಮುಕ್ತರ ಸಮುದಾಯದಿಂದ ಹೊಂದಲ್ಪಡುವವನು. ಗಮ್ಯನು. (5) ಸತ್ ಚಿತ್, ಆನಂದ; ಆತ್ಮಾ ಎಂಬ ೪ ಗುಣಗಳೂ ನಾರಾಯಣ ಶಬ್ದಾರ್ಥವು. (6) ಸಮಸ್ತ ಚೇತನರಿಗೆ ಅಪೇಕ್ಷಿತವಾದ ಜ್ಞಾನ ಆನಂದಾದಿಗಳಿಗೆ ಆಶ್ರಯನಾದುದರಿಂದಲೂ ಸಮಸ್ತ ಚೇತನರ ಸಮೂಹಕ್ಕೆ ಸ್ವಾಮಿಯಾಗಿ ಆಶ್ರಯನಾದುದರಿಂದಲೂ ಶ್ರೀ ನಾರಾಯಣನು.(7) ನರಾಣಾಂ ಯೋಗ್ಯಂ ಜ್ಞಾನಂ ನಾರಂ. ಜ್ಞಾನಕ್ಕೆ ವಿಷಯನಾಗಿ ಆಶ್ರಯನಾದುದರಿಂದ ನಾರಾಯಣನು. (ಅಥವಾ ನ ವಿದ್ಯತೇ ಅರಂ ಅರಮಣಂ ಯೇಷಾಂ ತೇ ನಾರಾಃ=ಮುಕ್ತರು. ಅವರಿಗೆ ಗಮ್ಯನಾಗಿ ಆಶ್ರಯನಾದುದರಿಂದ ನಾರಾಯಣನು. ಅಥವಾ ಅರ= (ದುಃಖ) ರಹಿತವಾದುದರಿಂದ ನಾರಾಃ=ಮುಕ್ತರು. (8) ಅಥವಾ ರ=ನಾಶವು. ನಾಶರಹಿತರಾದವರು ನರಾಃ, ನರಾ ಏವ ನಾರಾಃ=ಮುಕ್ತರು. ಅವರಿಗೆ ಆಶ್ರಯನು. ಮುಕ್ತಗಮ್ಯನು. ಅಥವಾ "ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ। ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ॥ ಇತ್ಯಾದ್ಯರ್ಥಗಳನ್ನು ಇಟ್ಟುಕೊಳ್ಳಬೇಕು. ವನಮಾಲಾಧರಂ=(1) ಆಜಾನುಲಂಬಿನೀಂ (ನಿ) ಮಾಲಾಂ (ಲಾ) ಸರ್ವರ್ತುಕುಸುಮೋಜ್ವಲಾಂ (ಲಾ) । ಮಧ್ಯೇ ಸ್ಥೂಲಕದಂಬಾಢ್ಯಾಂ (ಢ್ಯಾಂ) ವನಮಾಲಾಂ ವಿದುರ್ಬುಧಾಃ (ಲೇತಿ ಕೀರ್ತಿನಾ) ॥ ಆಪಾದಪದ್ಮಂ ಯಾ ಮಾಲಾ ವನಮಾಲೇತಿ ಸಾ ಮತಾ । (2) ಅಥವಾ ಆಪಾದಲಂಬಿನೀ ಮಾಲಾ ವನ ಮಾಲಾಭಿಧಾ ಮತಾ. ಅಥವಾ ಅಮ್ಲಾನಪಂಕಜಾಂ ಮಾಲಾಂ ವನಮಾಲಾಂ ವಿದುರ್ಬುಧಾಃ ॥ (3) ಪಂಚವರ್ಣಮಯೀ ಮಾಲಾ ವೈಜಯಂತೀತಿ ಕಥ್ಯತೇ॥ ॥೫॥೬॥೭॥೮॥೯॥೧೦॥೧೧॥೧೨॥೧೩॥೧೪॥

ಅವ॥ ಶ್ರೀ ನಾರಾಯಣನು ಅನಂತಾನಂತ ಗುಣ ಪರಿಪೂರ್ಣನು, ಅಂತಹ ಶ್ರೀ ನಾರಾಯಣನನ್ನು ಸರ್ವದಾ ಧ್ಯಾನಿಸುತ್ತಿರಬೇಕು. ಎಂದುಪದೇಶಿಸಿ ವಿಶ್ವಾದಿ ಭಗವದ್ರೂಪಗಳೂ ಶ್ರೀ ನಾರಾಯಣನಂತೆ ಅನಂತಾನಂತ ಗುಣ ಪರಿಪೂರ್ಣಗಳು, ಅಭಿನ್ನಗಳೇ ಎಂದು ಉಪದೇಶಿಸುತ್ತಾರೆ.

**ಮೂ ॥ ವಿಶ್ವಾದೀಂಶ್ಚೈವ ಕೃಷ್ಣಾದೀನೇವಂಭೂತಾನ್ ಸನಾತನಾನ್ ॥೧೪॥ಅಭಿನ್ನಾನೇವ ಸತತಂ ತಸ್ಮಾದ್ವಿಷ್ಣೋಃ ಪರಾತ್ಮನಃ। ವರಾಭಯೋದ್ಯತಕರಾನ್ನಿತ್ಯಾನಂದೈಕರೂಪಿಣಃ ॥೧೫॥ ಏವಮುಕ್ತ್ವಾ ಗುರುರ್ಧ್ಯಾನಂ ಶಪಥಂ ಕಾರಯೇತ್ತತಃ। ನ ವಿಷ್ಣುಂ ವೈಷ್ಣವಾಂಶ್ಚೈವ ವಿಸೃಜೇಯಮಿತಿ ತ್ರಿಶಃ ॥೧೬॥ ನ ಚಾನ್ಯದೇವತಾಸಾಮ್ಯಂ ತದೈಕ್ಯಮಥವಾ ಹರೇಃ। ಚಿಂತಯೇಯಂ ಮೃತೋ ವಾಪಿ ನ ಚಾಪ್ಯೇಕತ್ವವಾದಿಭಿಃ ॥೧೭॥ ಸಮತ್ವವಾದಿಭಿರ್ವಾಽಹಂ ಸಂಗಚ್ಛೇಯಂ ಕದಾಚನ। ತನ್ನಿಂದಕೈಶ್ಚ ತದ್ಭಕ್ತನಿಂದಕೈರ್ವಾ ಮಹಾಮುನೇ ॥೧೮॥**

ಅ॥ ಆ ಸರ್ವೋತ್ತಮನೂ ಸರ್ವತ್ರ ವ್ಯಾಪ್ತನೂ ಆದ ಆ ಶ್ರೀನಾರಾಯಣನ ದೆಸೆಯಿಂದ ಹಿಂದೆ ಹೇಳಿದ ವಿಶ್ವ ಮೊದಲಾದ ರೂಪಗಳೂ ಶ್ರೀ ಕೃಷ್ಣ ರಾಮ ಮೊದಲಾದ ರೂಪಗಳೂ ಸರ್ವದಾ ಸರ್ವಥಾ ಭೇದಲೇಶವೂ ಇಲ್ಲದವುಗಳೇ. ಹಿಂದೆ ಹೇಳಿದ ಲಕ್ಷಣಗಳುಳ್ಳವುಗಳೇ. ಶಶ್ವದೇಕ ಪ್ರಕಾರಗಳೇ. ಸಮೀಚೀನವಾದ ವರಮುದ್ರಾ ಅಭಯ ಮುದ್ರಾ ಸನ್ನದ್ಧಗಳಾದ ಕೈಗಳುಳ್ಳವುಗಳು. ನಾಶವಿಲ್ಲದವುಗಳು. ಸರ್ವದಾ ಕೇವಲ ಚಿದಾನಂದ ಸ್ವರೂಪ ಉಳ್ಳವುಗಳು. ॥೧೪॥೧೫॥ ಹೀಗೆ ಗುರುಗಳು ಭಗವದ್ರೂಪಗಳ ಧ್ಯಾನವನ್ನು ಹೇಳಿ (ಉಪದೇಶಿಸಿ) ಆ ಮೇಲೆ ಶಿಷ್ಯರಿಂದ (ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಶಿಷ್ಯರಾದ ಯತಿಗಳಿಂದ) ಶಪಥವನ್ನು (ಪ್ರತಿಜ್ಞೆಯನ್ನು) ಮಾಡಿಸಬೇಕು. (ಹೇಗೆಂದರೆ) ನಾನು ಶ್ರೀ ವಿಷ್ಣುವನ್ನು ವಿಷ್ಣು ಭಕ್ತರನ್ನು ಸರ್ವಥಾ ಬಿಡಲಾರೆನು ಎಂದು ೩ ಸಲ ಶಪಥ ಮಾಡಿಸಬೇಕು. ॥೧೬॥ ಶ್ರೀ ಹರಿಗೆ ಇತರರಾದ ಬ್ರಹ್ಮ ರುದ್ರಾದಿ ದೇವತೆಗಳಿಂದ ಸಾಮ್ಯವನ್ನೂ (ಅಂದರೆ ಶ್ರೀ ಹರಿಯೂ ಬ್ರಹ್ಮರುದ್ರಾದಿ ದೇವತೆಗಳೂ ಸಮಾನಿಕರು ಎಂದಾಗಲೀ) ಅಥವಾ ಶ್ರೀಹರಿಗೆ ಬ್ರಹ್ಮರುದ್ರಾದಿ ದೇವತೆಗಳಿಂದ ಅಭೇದವನ್ನೂ (ಅಂದರೆ ಶ್ರೀಹರಿಗೂ ಬ್ರಹ್ಮರುದ್ರಾದಿ ದೇವತೆಗಳಿಗೂ ಭೇದವಿಲ್ಲ ಎಂದಾಗಲೀ) ಮೃತನಾದರೂ (ಅಂದರೆ ಮರಣ ಬರುವ ಸಂದರ್ಭವುಂಟಾದಾಗ್ಯೂ) ಹೇಳಲಾರೆನು. ಸ್ಮರಿಸಲಾರೆನು. ಎಲೋ ಮಹಾ ಮುನಿಗಳೇ, ಮಹಾ ಜ್ಞಾನಿಗಳಾದ ಗುರುಗಳೇ, ಪರ ಬ್ರಹ್ಮನಿಗೆ ಜೀವರಾದ ಬ್ರಹ್ಮಾದಿಗಳಿಂದ ಐಕ್ಯವು ಎಂದು ಹೇಳುವ ವಾದಿಗಳಿಂದಲೂ ಶ್ರೀ ಹರಿಯೂ ಬ್ರಹ್ಮರುದ್ರಾದಿ ಜೀವರ ಸಮಾನಿಕರು, ಎಂದು ಹೇಳುವ ವಾದಿಗಳಿದಲೂಅಥವಾಭಗವಂತನನ್ನುನಿಂದಿಸುವವರಿಂದಲೂಅಥವಾಭಗವದ್ಭಕ್ತರನ್ನುಯಾರುನಿಂದಿಸುತ್ತಾರೋ, ದ್ವೇಷಿಸುತ್ತಾರೋ ಅಂತಹವರಿಂದಲೂಸರ್ವಥಾಯಾವಾಗಲೂನಾನುಕೂಡಲಾರೆನು. (ಅಂದರೆಅಂತಹವರೊಡನೆಸಹವಾಸವನ್ನುಮಾಡಲಾರೆನು.)

ವಿ ॥ ಅಭಿನ್ನಾನೇವ ಸತತಂ= (೧) ಮೂಲರೂಪಶ್ಚಕಯೋ ವಿಷ್ಣುಃ ಪ್ರಾದುರ್ಭಾವಾದಿಶ್ಚಸಃ। ಗುಣತಃ ಸ್ವರೂಪತೋ ವಾಪಿ ವಿಶೇಷಂ ಯೋಽತ್ರ ಪಶ್ಯತಿ ॥ ಅತ್ಯಲ್ಪಮಪಿ ಮತ್ವಾ ಸಃ ತಮೋಽಂಧಂ ಯಾತ್ಯಸಂಶಯಂ । (ಎಂದು ಕಾಠಕ ಭಾಷ್ಯ.) (೨) ಸರ್ವೇ ಸರ್ವಗುಣೈಃ ಪೂರ್ಣಾಃಸರ್ವೇ ಭೇದವಿವರ್ಜಿತಾಃ। ಅನ್ಯೂನಾನಧಿಕಾಶ್ಚೈವ ಗುಣೈಃ ಸರ್ವೈಶ್ಚ ಸರ್ವತಃ॥ (ಎಂದು ಪ್ರಥಮಸ್ಕಂಧ ತಾತ್ಪರ್ಯ) (೩) ವಿಷ್ಣೋಃಸರ್ವಗುಣೈಃ ಪೂರ್ತಿರಪಿ ಮತ್ಸ್ಯಾದಿರೂಪಿಣಃ॥ ಅಜೇಯತ್ವಮಭೇದ್ಯತ್ವಮಚ್ಛೇದ್ಯತ್ವಂಚ ಸರ್ವಶಃ ॥೧॥ ಸರ್ವಾವತಾರರೂಪಾಣಾಮಪಿ ಚಿತ್ಸುಖರೂಪತಾ। ಅವತಾರಾ ಹಿ ವಿಷ್ಣೋಶ್ಚಸರ್ವೇ ಪೂರ್ಣಾಃ ಪ್ರಕೀರ್ತಿತಾಃ ॥೨॥ ಪೂರ್ಣಂ ಚ ತತ್ಪರಂ ರೂಪಂ ಪೂರ್ಣಾತ್ಪೂರ್ಣಾಃ ಸಮುದ್ಗತಾಃ।ನ ದೇಶಕಾಲ ಸಾಮರ್ಥ್ಯೈ ಪಾರಾವರ್ಯಂ ಕಥಂಚನ ॥೩॥ (ಬೃಹದ್ಭಾಷ್ಯ) ( ) ಸರ್ವದೋಷವಿಹೀನತ್ವಂ ಗುಣೈಸ್ಸರ್ವೈರುದೀರ್ಣತಾ। ಅಭೇದಸ್ಸರ್ವರೂಪೇಷು ಜೀವಭೇದಸ್ಸದೈವ ಹಿ। ॥೧॥ ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ। ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ। ತಸ್ಮಾದೇತದ್ವಿರುದ್ಧಂ ಯನ್ಮೋಹಾರ್ಥಂ ತದುದಾಹೃತಂ ॥॥ ಇತ್ಯಾದಿ॥ ಅಂದರೆ ಎಲ್ಲಾ ಭಗವದ್ರೂಪಗಳು ದೋಷಲೇಶರಹಿತಗಳು. ಸರ್ವಗುಣ ಪರಿಪೂರ್ಣಗಳು. ಭೇದವಿಲ್ಲದವುಗಳು. ಬ್ರಹ್ಮಾದಿಜೀವರಿಂದ ಭಿನ್ನಗಳೇ. ಎಲ್ಲಾ ವೇದಗಳಿಂದಲೂ ಪ್ರತಿಪಾದ್ಯಗಳು, ಇತ್ಯಾದಿ ಪ್ರಮೇಯಗಳು ಬ್ರಹ್ಮಸೂತ್ರಾದಿಗಳಲ್ಲಿ ನಿರೂಪಿತಗಳಾಗಿವೆ. ಇದಕ್ಕೆ ವಿರುದ್ಧವಾದುದು ಅಜ್ಞಜನರನ್ನು ಮೋಹಿಸುವುದಕ್ಕಾಗಿ ಹೇಳಿದ್ದು. (೫) ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋಽನಿರುದ್ಧೋಽಹಂ ಮತ್ಸ್ಯಃಕೂರ್ಮೋ ವರಾಹೋ ನಾರಸಿಂಹೋ ವಾಮನೋ ರಾಮೋ ರಾಮಃ ಕೃಷ್ಣೋ ಬುದ್ಧಃಕಲ್ಕಿರಹಂ ಶತಧಾ ಸಹಸ್ರಧಾಽಹಮಮಿತೋಽಹಮನಂತೋಽಹಂ ನೈವೇತೇ ಜಾಯಂತೇ ನ ಮ್ರಿಯಂತೇ ನೈಷಾಮನುಜ್ಞಾನ ಬಂಧೋನ ಮುಕ್ತಿಃಸರ್ವ ಏತೇಪೂರ್ಣಾಃ ಅಜರಾಃ ಅಮೃತಾಃ ಪರಮಾಃ ಪರಾನಂದಾಃ ಇತಿ ಶ್ರುತಿಃ॥ (೬) ಅಸಂಖ್ಯಾತಾಃ ಜ್ಞಾನಕಾಸ್ತಸ್ಯ ದೇಹಾಃ ಸರ್ವೇ ಪರೀಮಾಣವಿವರ್ಜಿತಾಶ್ಚ॥ (ಗೀತಾಭಾಷ್ಯ.) (೭) ಸ ಏವ ದಶಧಾ ಪ್ರೋಕ್ತೋ ವಿಷ್ಣುರ್ಮತ್ಸ್ಯಾದಿ ರೂಪಕಃ। ಶತಂ ನಾರಾಯಣಾದ್ಯಾತ್ಮಾ ವಿಶ್ವಾದ್ಯಾತ್ಮಾ ಸಹಸ್ರಕಃ ॥೧॥ ಪರಾದಿಬಹುರೂಪೋಸೌ । ಸೋಽಸಂತಾತ್ಮಾಜಿತಾದಿಕಃ। (ಇತಿ ಬೃಹದ್ಭಾಷ್ಯಂ.) (೮) ಅಂಶಿನೋ ಯತ್ತು ಸಾಮರ್ಥ್ಯಂ ಯತ್ಸ್ವ ರೂಪಂ ಯಥಾ ಸ್ಥಿತಿಃ।ಸ ಏವ ಚೇತ್ಸ್ವರೂಪಾಂಶಃ ಪ್ರಾದುರ್ಭಾವಾ ಹರೇರ್ಯಥಾ (ಅನುವ್ಯಾಖ್ಯಾನ) (೯) ಅತೋಽನಂತಗುಣಾತ್ಮೈ ಕೋ ಭಗವಾನೇಕ ಏವ ತು। ಉಚ್ಯತೇ ಸರ್ವವೇದೈಶ್ಚ ತೇ ಚಾಖಿಲವಿಲಕ್ಷಣಾಃ ॥೧॥ ಸರ್ವೇ ಸರ್ವಗುಣಾತ್ಮಾನಃ ಸರ್ವಕರ್ತಾರ ಏವ ಚ । ತಥಾಪಿ ಸವಿಶೇಷಾಶ್ಚ ವಿದ್ವದ್ಯುತ್ಪತ್ತಿತೋಪಿಚ॥ (೧೦) ಕಾಲಕೋಟಿವಿಹೀನತ್ವಂ ಕಾಲಾನಂತ್ಯಂ ವಿದುರ್ಬುಧಾಃ। ದೇಶಕೋಟಿ ವಿಹೀನತ್ವಂ ದೇಶಾನಂತ್ಯಂ ತಥೈವ ಚ ॥೧॥ ಗುಣಾನಾಮಪ್ರಮೇಯತ್ವಂ ವಸ್ತ್ವಾನಂತ್ಯಂ ವಿದೋ ವಿದುಃ॥ ಆನಂತ್ಯಂ ತ್ರಿವಿಧಂ ನಿತ್ಯಂ ಹರೇರ್ನಾನ್ಯಸ್ಯ ಕಸ್ಯಚಿತ್

॥೨॥ ತಸ್ಯ ಸರ್ವಸ್ವರೂಪೇಷ್ವಪ್ಯಾನಂತ್ಯಂ ತು ತ್ರಿಲಕ್ಷಣಂ (ತೃತೀಯ ಸ್ಕಂದ ತಾತ್ಪರ್ಯ.) ಹೀಗೆ ದೇಶತಃ ಕಾಲತಃ ಗುಣತಶ್ಚ ಆನಂತ್ಯವು. (೧೧) ವಿಷ್ಣೋರೇವ ಸ್ವರೂಪಾಣಾಂ ತದ್ಗುಣಾನಾಂ ತಥೈವಚ। ತಸ್ಯೈವ ಶಿರಆದೀನಾಂ ನೈವ ಭೇದೋಽಸ್ತಿ ಕಶ್ಚನ। ॥೧॥ ವಿಷ್ಣೋಃ ಕ್ರಿಯಾಶ್ಚ ಯಾಃ ಕಾಶ್ಚಿತ್ ಅಭೇದಸ್ತೈರಪಿ ಧ್ರುವಂ ॥ (ಬೃಹದ್ಭಾಷ್ಯ.) ಏವಂಚ ಶ್ರೀ ಪರಮಾತ್ಮನಿಗೆ ಮತ್ಸ್ಯ ಮೊದಲಾದ ತನ್ನ ಅವತಾರಗಳಿಂದಲೂ ಕರ ಚರಣಾದ್ಯವಯವಗಳಿಂದಲೂ ಜ್ಞಾನ ಆನಂದಾದಿ ಗುಣಗಳಿಂದಲೂ ಜಗತ್ಸರ್ಜನಾದಿ ಕ್ರಿಯೆಗಳಿಂದಲೂ ಅತ್ಯಂತಾಭೇದವೇ. (೧೨) ಮತ್ಸ್ಯ ಕೂರ್ಮಾದಿರೂಪಾಣಾಂ ಗುಣಾನಾಂ ಕರ್ಮಣಾಮಪಿ । ತಥೈವಾವಯವಾನಾಂ ಚ ಭೇದಂ ಪಶ್ಯತಿ ಯಃಕ್ವಚಿತ್ ॥೧॥ ಭೇದಾಭೇದೌ ಚ ಯಃಪಶ್ಯೇತ್ ಸ ಯಾತಿ ತಮ ಏವ ತು। ಪಶ್ಯೇದಭೇದಮೇವೈಷಾಂ ಬುಭೂಷುಃ ಪುರುಷಸ್ತತಃ ॥೨॥ ಸರ್ವತಃ ಪಾಣಿಪಾದಾದಿಃ ಯತಃ ಪಾಣ್ಯಾದಿ ಶಕ್ತಿಮಾನ್ ॥ ಕೇಶಾದಿಷ್ವಪಿ ಸರ್ವತ್ರ ಕೃಷ್ಣಕೇಶೋ ಹಿ ಯಾದವಃ ॥೩॥ ಅಣೋರಣುತರೈಃ ರೂಪೈಃ ಪಾಣಿಪಾದಾದಿಸಂಯುತೈಃ । ಸರ್ವತ್ರ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್ ॥೪॥ (ಗೀತಾತಾತ್ಪರ್ಯ) (೧೩) ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ।ಏವಂ ಧರ್ಮಾನ್ ಪೃಥಕ್‌ಪಶ್ಯನ್ ತಾನೇವಾನು ವಿಧಾವತಿ ॥ (೧೪) ಮೃತ್ಯೋಃಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ (ಕಾಠಕ) ಮೂಲರೂಪಕ್ಕೂ ಅವತಾರರೂಪಗಳಿಗೂ ಭಗವದ್ಧರ್ಮಗಳಿಗೂ ಅತ್ಯಂತಾಭೇದವೇ. ವಿಶೇಷಬಲದಿಂದ ಭೇದವ್ಯವಹಾರವು, ಇದು ಮೊದಲಾದ ಅನೇಕ ಪ್ರಮಾಣಗಳನ್ನು ಇಟ್ಟು ಕೊಂಡು ಭಗವದ್ರೂಪಗಳಿಗೆ ಅತ್ಯಂತಾಭೇದವೇ ಎಂಬ ಅಭಿಪ್ರಾಯದಿಂದಲೇ ಅಭಿನ್ನಾನೇವ ಸತತಂ ಎಂದು ಆಚಾರ್ಯರು ಉದಾಹರಿಸಿರುವರು.

ವಿಷ್ಣೋಃ ಪರಾತ್ಮನಃ= (1) 'ವ್ಯಾಪ್ತೌ ಮೇ ರೋದಸೀ ಪಾರ್ಥ' ಇತ್ಯಾದಿ ಮೋಕ್ಷಧರ್ಮ ವಚನವು. ಮತ್ತು ಬಹಿರಂತಶ್ಚ ಸರ್ವಶಃ।ವ್ಯಾಪ್ತತ್ವಾದ್ವ್ಯಾಪಕೋ ವಿಷ್ಣುಃ (ಗ.ಪು.೩೯-೭೮) ಸರ್ವತ್ರವ್ಯಾಪ್ತನು. ಪರಾತ್ಮಾ=ಸರ್ವೋತ್ಕೃಷ್ಟನು. ಚೆನ್ನಾಗಿ ವಿಸ್ತ್ರತಗಳಾದ ಪೂರ್ಣಗುಣಗಳುಳ್ಳವನು. ಪರಿಪೂರ್ಣಗಳಾದ ಅಂದರೆ ಪ್ರತ್ಯೇಕವಾಗಿ ನಿರವಧಿಕಗಳೂ, ನಿರತಿಶಯಗಳೂ ಆದ ಅನಂತಾನಂತಗುಣಗಳಿಂದ ಪರಿಪೂರ್ಣನು. (2) ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ। ಗುಣತೋಽನಂತೇ=ಪ್ರತ್ಯೇಕಶೋ ಗುಣಾನಾಂ ತು ನಿಸ್ಸೀಮತ್ವಮುದೀರ್ಯತೇ। ಯದಾನಂತ್ಯಂ ತು ಗುಣತಸ್ತೇ ಚಾನಂತಾ ಹಿ ಸಂಖ್ಯಯಾ ॥ ಅತೋಽನಂತಗುಣೋ ವಿಷ್ಣುರ್ಗುಣತೋಽನಂತ ಏವ ಚ॥ (ಭಾಗವತ, ಷಷ್ಠ ತಾತ್ಪರ್ಯ.) (3) ಪರಾತ್ಮಜ್ಞಾನವು ಲಕ್ಷ್ಮ್ಯಾದಿಗಳ ಜ್ಞಾನಕ್ಕಿಂತಲೂ ಅಪರಿಮಿತವು. ಬಹುಬಲಾ ಚಾತಿವಿಶದಾ ಸ್ಪಷ್ಟಾ ಚೈವ ಶ್ರಿಯೋ ಮತಿಃ।ಮಹಾಶುದ್ಧ ಚಿತಿತ್ವೇನ ತತೋಽಪ್ಯತಿ ಮಹಾ ಚಿತಿಃ।ಅಶೇಷೋರುವಿಶೇಷಾಣಾಮತಿಸ್ಪಷ್ಟತಯಾ ದೃಶಿಃ ।ನಿತ್ಯಮೇಕಪ್ರಕಾರಾಚ ನಾರಾಯಣಮತಿಃ ಪರಾ ॥೨॥ ಸೂರ್ಯಪ್ರಭಾವದಖಿಲಂ ಭಾಸಯಂತೀ ನಿರಂತರಾ। ನಿರ್ಲೇಪಾ ವೀತದೋಷಾ, ಚ ನಿತ್ಯಮೇವಾವಿಕಾರಿಣೀ ॥೩॥ (ಅನುವ್ಯಾಖ್ಯಾನ) (5) ಸುಸೂಕ್ಷ್ಮೈರಪ್ಯಶೇಷೈಶ್ಚ ವಿಶೇಷೈಸ್ಸಹ ಪಶ್ಯತಿ । ಸ್ವಾತ್ಮಾನಂ ಭಗವಾನ್ವಿಷ್ಣುಸ್ಸರ್ವರೂಪೋಽಪಿ ಸರ್ವದಾ ॥೧॥ ಸರ್ವತ್ರ ಚಾನ್ಯದಪ್ಯೇವಂ ತೇನಾದೃಷ್ಟಂ ನ ಹಿ ಕ್ವಚಿತ್ ॥೨॥ (ಅನುವ್ಯಾಖ್ಯಾನ) (6) ವಿಚಿತ್ರಶಕ್ತಿಃ ಪುರುಷಃ ಪುರಾಣಃ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ (7) ವಿಜ್ಞಾನ ಶಕ್ತಿರಹಮಾಸಮನಂತ ಶಕ್ತೇಃ ॥ (ಗೀತಾ ಭಾಷ್ಯ) (8) ಸತ್ಯಂ ಸತ್ಯಂ ಪುನಸ್ಸತ್ಯಂ ಶಪಥೈಶ್ಚಾಪಿ ಕೋಟಿಭಿಃ । ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ ॥೧॥ ಪುನಾಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ । ನೈಕಾಂಶಸಮ ಮಾಹಾತ್ಮ್ಯಾಃ ಶ್ರೀ ಶೇಷಬ್ರಹ್ಮಶಂಕರಾಃ ॥ (9) ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ ॥ (10) ದಕ್ಷಿಣಾಭಿಸ್ಸಹೈವೇತನ್ಮದ ಧಸ್ತಾಜ್ಜಗತ್ಸದಾ । ಧನ್ಯಾಶ್ಚಯೋಽಹಮೇವೈಕೋ ಮಿತ್ರಂ ಮೇ ದಕ್ಷಿಣಾ ರಮಾ।ಇತ್ಯವಾದೀದ್ಧರಿಃ॥ (ನಾರದ ವಚನಂ) (11) ವಿಷ್ಣ್ವಾವಿಷ್ಟಾ ಯಜ್ಞನಾಮ್ನೀ ತದಂಕಸ್ಥಿತಾ ಸೋಚೇ ಕೇಶವೋ ಹ್ಯುತ್ತಮೋಽಲಂ। ನ ತತ್ಸಮಶ್ಚಾಭ್ಯಧಿಕಃ ಕುತಸ್ಸ್ಯಾದ್ಬೃಷೇ ಸತ್ಯಂ ನಾನ್ಯಥೇತಿ ಸ್ಮ ಭೂಪಾಃ ॥೧॥ (12) ನಾಹಂ ನ ಚ ಶಿವೋಽನ್ಯೇಚ ತಚ್ಛಕ್ತ್ಯೈಕಾಂಶಭಾಗಿನಃ ॥ (13) ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾಚ (14) ಕೃಷ್ಣರಾಮಾದಿರೂಪೇಷು ಬಲಕಾರ್ಯೋ ಜನಾರ್ದನಃ । ದತ್ತ ವ್ಯಾಸಾದಿ ರೂಪೇಷು ಜ್ಞಾನಕಾರ್ಯಸ್ತಥಾ ಪ್ರಭುಃ (15) ಮತ್ಸ್ಯ ಕೂರ್ಮವರಾಹಶ್ಚ ಸಿಂಹವಾಮನಭಾರ್ಗವಾಃ ॥ ರಾಘವಃ ಕೃಷ್ಣ ಬುದ್ಧೌ ಚ ಕೃಷ್ಣದ್ವೈಪಾಯನಸ್ತಥಾ। ಕಪಿಲೋ ದತ್ತಋಷಭೌ ಶಿಂಶುಮಾರೋ ರುಚೇಸ್ಸುತಃ ॥ ನಾರಾಯಣೋ ಹರಿಃ ಕೃಷ್ಣಃ ತಾಪಸೋ ಮನುರೇವಚ ॥೨॥ ಮಹಿದಾಸಃ ತಥಾ ಹಂಸಃ ಸ್ತ್ರೀರೂಪೋ ಹಯಶೀರ್ಷವಾನ್। ತಥೈವ ವಡವಾವಕ್ತ್ರಃ ಕಲ್ಕೀ ಧನ್ವಂತರಿಃ ಪ್ರಭುಃ ॥೩॥ ಇತ್ಯಾದ್ಯಾಃ ಕೇವಲೋ ವಿಷ್ಣುಃ ನೈಷಾಂ ಭೇದಃ ಕಥಂಚನ ॥ ನ ವಿಶೇಷೋ ಗುಣೈಸ್ಸರ್ವೈರ್ಬಲಜ್ಞಾನಾದಿಭಿಃ ಕ್ವಚಿತ್ ॥೪॥ (16) ಪ್ರಾದುರ್ಭಾವಾಃ ಹರೇಃ ಸರ್ವೇ ನೈವ ಪ್ರಾಕೃತದೇಹಿನಃ॥

ನಿತ್ಯಾನಂದ್ಯೆಕರೂಪಿಣಃ (೧) ನ ತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋಽಸ್ಥಿಸಂಭವಾ ॥ ಸರ್ವೇ ನಿತ್ಯಾಃಶಾಶ್ವತಾಶ್ಚ ದೇಹಾಸ್ತಸ್ಯ ಪರಾತ್ಮನಃ ॥ (ಭಾ. ತಾತ್ಪರ್ಯ) (೨) ಪಂಚಭೂತಾತ್ಮಕಂ ದೇಹಂ ವಿಷ್ಣೋಃ ಪಶ್ಯಂತ್ಯಯೋಗಿನಃ । ತಥಾನ ಯೋಗಿರಾದ್ಬಾಂತೋ ಜ್ಞಾನದೇಹೋ ಯತೋ ಹರಿಃ॥ (ಚ. ಸ್ಕಂಧ ತಾತ್ಪರ್ಯ) (೩) ಸ್ತಂಭಾದ್ವಾ ನರದೇಹಾದ್ವಾನ ತಸ್ಯ ಪ್ರಾಕೃತೀ ತನುಃ॥ (ಐತ.ಭಾಷ್ಯ) (೪) ಬ್ರಹ್ಮಾ ಶಿವಃ ಸುರೇಶಾದ್ಯಾಃ ಶರೀರಕ್ಷರಣಾತ್ ಕ್ಷರಾಃ।ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ॥ (ತತ್ವ ನಿರ್ಣಯ.) ಅವತಾರಾ ಅಸಂಖ್ಯೇಯಾ ವಿಷ್ಣೋರ್ನಾರಾಯಣಸ್ಯ ಚ। ಸ್ವಯಂ ನಾರಾಯಣಸ್ತ್ವೇತೇ ನಾಣುಮಾತ್ರವಿಭೇದಿನಃ ॥೧॥ ಬಲತಃ ಸ್ವರೂಪತಶ್ಚೈವ ಗುಣತಶ್ಚ ಕಥಂಚನ। ಅನಂತಾನಂತಗುಣತಃ ಪೂರ್ಣೋ ವಿಷ್ಣುರ್ನಚಾನ್ಯಥಾ ॥೨॥ (ಗ.ಪು. ಅಧ್ಯಾ ೧೫. ಶ್ಲೋ. ೩೦ ॥೩೧॥ ಇದು ಮೊದಲಾದ ಪ್ರಮಾಣಗಳಿಂದ ಪ್ರಾದುರ್ಭಾವ ರೂಪಗಳು ಚಿದಾನಂದ ಸ್ವರೂಪಗಳೇ ಸರ್ವಥಾ ಪ್ರಾಕೃತದೇಹವುಳ್ಳವುಗಳಲ್ಲ ಎಂದು ಸಿದ್ಧವಾಯ್ತು.

(೫) ಏವಮುಕ್ತ್ವಾ ಗುರುಃ (1) ನಿಯತಗುರು (2) ಅನಿಯತಗುರು ಎಂದು ೨ ವಿಧ ಗುರುಗಳು. ಅದರಲ್ಲಿ (1) ಶಿಷ್ಯಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡು ಆತನಿಗೆ ಯೋಗ್ಯವಾದ ವಿಶಿಷ್ಟ ಭಗವದ್ರೂಪ ವಿಶೇಷ ವಿಷಯಕ ವಿದ್ಯೆಯನ್ನುಪದೇಶಿಸುವವರು ನಿಯತಗುರುಗಳು. ೧) ದೃಷ್ಟ್ವೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ। ದರ್ಶನೇನಾಂತರೇಣ್ಯಾನ್ಯೇ ದೇವಾಸ್ಸರ್ವತ್ರ ದರ್ಶನಾತ್ ॥೧॥ ತೇಷಾಂ ವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ॥ (ಬೃಹದ್ಭಾಷ್ಯ) (೩) ಅಪರೋಕ್ಷ ದೃಶಿಶ್ಚಾಪಿ ಮಹಾಚಾರ್ಯೋಕ್ತದರ್ಶನಂ। ಸೋಽಪಿ ಯನ್ಮೋಕ್ಷನಿಯತಮನಸಾ ಸಮುದೀರಯೇತ್॥ ತಸ್ಯ ದರ್ಶನತೋಯಾತಿ ಮುಕ್ತಿಂ ನಾಸ್ತ್ಯತ್ರ ಸಂಶಯಃ ॥ (೪) ಮತಿಶ್ರುತಿಧ್ಯಾನಕಾಲ ವಿಶೇಷಂ ಗುರುರುತ್ತಮಃ। ವೇತ್ತಿ ತಸ್ಯೋಕ್ತಿಮಾರ್ಗೇಣ ಕುರ್ವತಃ ಸ್ಯಾದ್ಧಿ ದರ್ಶನಂ ॥೫॥ ಯಯಾ ಯಸ್ಯ ವಿಮುಕ್ತಿಃ ಸ್ಯಾತ್ತದ್ದಾತಾ ಮುಖ್ಯತೋ ಗುರುಃ। ಏಕದೇಶ ಗುರುತ್ವಂ ಸ್ಯಾದನ್ಯವಿದ್ಯಾಪ್ರದಸ್ಯ ತು ॥ (ಬೃಹದ್ಭಾಷ್ಯ (೬) ಧ್ರುವಂ ತಯೈವ ಮುಚ್ಯಂತೇ ಯಾಂ ಮೂರ್ತಿಂ ಪ್ರದಿಶೇದ್ಗುರುಃ । ಶಿಷ್ಯಾಣಾಂ ಯೋಗ್ಯತಾಭಿಜ್ಞಃ ॥ (ಭಾಗವತತಾತ್ಪರ್ಯ) (೭) ಋಷಿಭ್ಯಸ್ತೂತ್ತಮಾ ದೇವಾಃ ದೇವೇಭ್ಯೋ ವಾಯುರುತ್ತಮಃ। ವಾಯೋಶ್ಚ ಭಗವನ್ವಿಷ್ಣುಃನ ತಸ್ಮಾದುತ್ತಮೋ ಗುರುಃ ॥ (ಛಾಂದೋಗ್ಯ, ಭಾಷ್ಯ) (೮) ಸಮ್ಯಕ್ ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಂ ॥ (೯) ಗುರುಪ್ರಸಾದೋ ಬಲವಾನ್ನ ತಸ್ಮಾದ್ಬಲವತ್ತರಂ ॥ (೧೦) ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ । ಯದ್ಗುರುಃ ಸುಪ್ರಸನ್ನಃ ಸನ್ ದದ್ಯಾತ್ತನ್ನಾನ್ಯಥಾ ಭವೇತ್ ॥೧॥ ಲಭೇದ್ಗುರುಪ್ರಸಾದಂ ಚ ತಸ್ಮಾದೇವಚ ತದ್ಭವೇತ್ । (೧೧) ಸಮ್ಯಕ್ ಲಕ್ಷಣಸಂಪನ್ನಃ ಯುದ್ದದ್ಯಾತ್ಸುಪ್ರಸನ್ನಧೀಃ । ಶಿಷ್ಯೇಷು ಸತ್ಯಂ ಭವತಿ ತತ್ಸರ್ವಂ ನಾತ್ರ ಸಂಶಯಃ ॥ ಆಗಮ್ಯತ್ವಾದ್ಧರಿಸ್ತಸ್ಮಿನ್ನಾವಿಷ್ಟೋ ಮುಕ್ತಿದೋ ಭವೇತ್ । ಇತ್ಯಾದಿ ಪ್ರಮಾಣಗಳಿಂದ ಯಥಾಯೋಗ್ಯವಾಗಿ ಹಿಂದೆ ಹೇಳಿದ ಲಕ್ಷಣ ಭರಿತರಾದ ಗುರುಗಳು ಶಿಷ್ಯನಿಗೆ ಭಗವದ್ಧ್ಯಾನವನ್ನುಪದೇಶಿಸಬೇಕು.

ನ ವಿಷ್ಣುಂ ವೈಷ್ಣವಾಂಶ್ಚೈವ= (೧) ಯೇ ವೈಷ್ಣವಾಃ ವೈಷ್ಣವದಾಸವರ್ಯಾಃತೇಷಾಂ ದ್ರೋಹಂ ಸರ್ವಥಾ ನಾಚರೇಯಂ। ಹರಿಪ್ರೀತಿಸ್ತೇನ ಭವೇಚ್ಚ ನಿತ್ಯಮಾನಂದವೃದ್ಧಿಸ್ತೇನ ಭವೇಚ್ಚಮುಕ್ತೌ॥ (ಗ. ಪು. ೩.೩೭)ನ ಚಾನ್ಯ ದೇವತಾ ಸಾಮ್ಯಂ ಇತ್ಯಾದಿ.

(1) ಶ್ರೀಹರಿಯಿಂದ ಐಕ್ಯವನ್ನು ಏಕೆ ಚಿಂತಿಸಬಾರದು ಎಂದರೆ ವಿಷ್ಣುಬ್ರಹ್ಮಾದಿರೂಪಾಣಾಮೈಕ್ಯಂ ಜಾನಂತಿ ಯೇದ್ವಿಜ॥ ತೇ ಯಾಂತಿನರಕಂ ಘೋರಂ ಪುನರಾವೃತ್ತಿವರ್ಜಿತಂ॥ (ಗ.ಪು.೪.೮.) ಐಕ್ಯವನ್ನು ತಿಳಿದರೆ ನರಕಾದ್ಯನರ್ಥವು. (2) ಅಭೇದದರ್ಶನಾದ್ಯಾತಿ ತಮೋ ನಾಸ್ತ್ಯತ್ರ ಸಂಶಯಃ । ರಾಜಾಽಹಂ ವದತೇ ಮಾರ್ಗೇ ಅನರ್ಥಃ ಪ್ರಾಪ್ಯತೇ ಯಥಾ। ತಥಾ ವಿಷ್ಣ್ವಹಮಿತಿ ಚ ವದತಃ ಪಾಪಕರ್ಮಣಃ॥ (3) ಅವೈಷ್ಣವಾನ್ ದೂಷಯಿಷ್ಯೇ ಸದಾಽಹಂ ಸದ್ವೈಷ್ಣವಾನ್ ಪಾಲಯಿಷ್ಯೇ ಮುರಾರೇಃ।ವಿಷ್ಣುದ್ರುಹಾಣಾಂ ಛೇದಯಿಷ್ಯೇಚ ಜಿಹ್ವಾಂ ತಚ್ಛೃಣ್ವತಾಂ ಪೂರಯಿಷ್ಯೇ ತ್ರಪೂರಸಾನ್ ॥ (ಗ.ಪು. ೬.೨೨.೨೩) ಐಕ್ಯಜ್ಞಾನದಿಂದ ಅಂಧಂತಮಸ್ಸು. (4) ನವದ್ವೇಷೈರ್ವಿಧುರೋ ಭಕ್ತಿಯುಕ್ತಃ ನವದ್ವೇಷಾನ್ ಶೃಣುಭದ್ರೇ ಚ ಸಮ್ಯಕ್ । ಜೀವಾಭೇದೋ ಹರಿಣಾಽಪ್ರಾಕೃತೇನ ಸ್ವತಂತ್ರೇಣ ಹ್ಯಸ್ವತಂತ್ರೇಣ ನಿತ್ಯಂ ॥೧॥ ಜ್ಞಾನಾನಂದೇ ಪೂರ್ಣರೂಪೇ ಹರೌ ಚ ಸದಾ ಶೂನ್ಯೇ ಪ್ರಾಕೃತೈರ್ವಾ ಗುಣೈಶ್ಚ । ಜ್ಞಾನಾನಂದ್ಯೈರ್ವಿಧುರತ್ವಾಚ್ಚ ವಿಷ್ಣೋಃ ಸದಾ ಹರಿರ್ನಿರ್ಗುಣೇತಿ ಪ್ರಚಿಂತನಂ ॥೨॥ ಸದಾ ಕಾಮಾದ್ಯೈಃ ಪೂರ್ಣರೂಪೇ ಹರೌಚ ಗುಣೈರಪೂರ್ಣೋ ಹರಿರೇವೇತಿ ಚಿಂತನಂ ॥ ಶ್ರೀ ಬ್ರಹ್ಮರುದ್ರಾದಿ ಸಮಸ್ತದೇವಾಃ ತಥಾ ದ್ವಿಜಾನಾಂ ಸಮ್ಯಕ್ಸ್ವರೂಪಚಿಂತನಂ ॥೩॥ ವಿಷ್ಣೋರಪೇಕ್ಷ್ಯ ಬ್ರಹ್ಮರುದ್ರಾದಿಕಾನಾಂ

ಸದಾಧಿಕ್ಯಂ ಚಿಂತನಂ ದ್ವೇಷ ಏವ । ವಿಷ್ಣೋರ್ದೇಹೇ ಹಸ್ತಪಾದಾದಿಕಾನಾಂ ಭೇದಜ್ಞಾನಂ ದ್ವೇಷಮಾಹುರ್ಮಹಾಂತಃ ೪ ॥ ಅವತಾರಾಣಾಂ ಭೇದ ಭೇದಾದಿಕಂ ಚ ತಥೋತ್ಪತ್ತಿರ್ಮರಣಂ ಚಿಂತನಂ ಚ । ತದ್ಭಕ್ತಾನಾಂ ಚಿಂತನಂ ಚಾಹುರಾರ್ಯಾ ಸದ್ವಾಕ್ಯಾನಾಂ ದೂಷಣಂ ದ್ವೇಷ ಏವ ॥ (5) (೧) ಪಂಚಭೇದಾಂಶ್ಚ ವಿಜ್ಞಾಯ ವಿಷ್ಣೋಃ ಸ್ವಾಭೇದಮೇವ ಚ । ನಿರ್ದೋಷತ್ವಂ ಗುಣೋದ್ರೇಕಂ ಜ್ಞಾತ್ವಾ ಮುಕ್ತಿರ್ನಚಾನ್ಯಥಾ ॥ (ತಥಾಚ ಪಂಚಭೇದ ಜ್ಞಾನದಿಂದ ಮುಕ್ತಿಯು. ಐಕ್ಯ ಜ್ಞಾನದಿಂದ ಅಂಧಂತಮಸ್ಸು) ಆ ಪಂಚಭೇದಗಳು ಯಾವುವು? ಎಂದರೆ (೨) ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ। ಜೀವಭೇದೋ ಮಿಥಶ್ಚೈವ ಜಡ ಜೀವಬಿದಾ ತಥಾ। (೧) ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ । ಸೋಽಯಂ ಸತ್ಯೋ ಹ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ॥೨॥ ನ ಚ ನಾಶಂ ಪ್ರಯಾತ್ಯೇಷಃ ನ ಚಾಸೌ ಭ್ರಾಂತಿಕಲ್ಪಿತಃ (ತತ್ವನಿರ್ಣಯ) (2) ಜೀವೇಶಯೋರ್ಭಿದಾ ಚೈವ ಜೀವಭೇದಃ ಪರಸ್ಪರಂ। ಜಡೇಶಯೋರ್ಜಡಾನಾಂ ಚ ಜಡಜೀವಭಿದಾ ತಥಾ ॥೧॥ ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ನಿತ್ಯಶಃ ॥ (ಆದ ಕಾರಣ ಭೇದ ಜ್ಞಾನವು ಅತ್ಯಾವಶ್ಯಕವು. ಅನಾದಿ ನಿತ್ಯವು.

ತನ್ನಿಂದಕೈಃ = ಭಗವಂತನನ್ನು ನಿಂದಿಸುವವರು ದ್ವೇಷಿಗಳು. ದ್ವೇಷಗಳು ಯಾವುವು? ಎಂದರೆ (1) ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ। ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವಚ ಪ್ರಾದುರ್ಭಾವ ವಿಪರ್ಯಾಸ ಸ್ತದ್ಭಕ್ತದ್ವೇಷ ಏವಚ। ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ (1) ಶ್ರೀಹರಿಗೆ ಜೀವರಿಂದ ಐಕ್ಯಜ್ಞಾನವು. (2) ಶ್ರೀಹರಿಯು ನಿರ್ಗುಣನು. (3) ಪೂರ್ಣ ಗುಣಗಳಿಲ್ಲದವನು. (4) ಬ್ರಹ್ಮ ರುದ್ರಾದಿಗಳೂ ಶ್ರೀಹರಿಯೂ ಸಮಾನಿಕರು. (5) ಶ್ರೀಹರಿಗಿಂತ ಬ್ರಹ್ಮಾದಿಗಳು ಅಧಿಕರು. (6) ಮೂಲರೂಪಕ್ಕೂ ಅವತಾರರೂಪಗಳಿಗೂ ಭೇದಜ್ಞಾನವು. (7) ಅವತಾರಗಳನ್ನು ವ್ಯತ್ಯಾಸವಾಗಿ ತಿಳಿದುಕೊಳ್ಳುವಿಕೆ. (8) ಭಗವದ್ಭಕ್ತರನ್ನು ನಿಂದಿಸುವುದು. (9) ವೇದಾದಿ ಪ್ರಮಾಣಗಳನ್ನು ನಿಂದಿಸುವುದು. ಇವು ೯ ವಿಧ ದ್ವೇಷಗಳು. ಇಂತಹ ದ್ವೇಷವುಳ್ಳವರೊಡನೆ ಸಹವಾಸ ಮಾಡಬಾರದು. ಆದಕಾರಣ ಹಿಂದೆ ಹೇಳಿದ ಪ್ರಮಾಣಗಳಿಂದ ಶ್ರೀಹರಿಯೇ ಸರ್ವೋತ್ತಮನು. ಬ್ರಹ್ಮರುದ್ರಾದಿಗಳು ಶ್ರೀಹರಿಯ ಪರಿವಾರಭೂತರು. ಶ್ರೀಹರಿಗೆ ಅವರಿಂದ ಸಾಮ್ಯವನ್ನಾಗಲೀ, ಐಕ್ಯವನ್ನಾಗಲೀ ಸರ್ವಥಾ ತಿಳಿಯಕೂಡದು. ಏತಕ್ಕೆಂದರೆ. (2) ನ ಹರೇರೀಶ್ವರಃ ಕಶ್ಚಿತ್ಕದಾಚಿತ್ಕ್ವಾಪಿ ವಿದ್ಯತೇ। ನಾನಾಮಾನವಿರುದ್ಧಂ ಹಿ ಸ್ವಾತಂತ್ರ್ಯಂ ಜಗತಸ್ಸದಾ ॥೧॥ ಸ್ವತಂತ್ರೋ ಭಗವಾನ್ವಿಷ್ಣುರೇಕ ಏವ ನ ಸಂಶಯಃ। (ಭಾಗ. ತಾತ್ಪ೧೧ಸ್ಕಂ) (3) ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ॥ (ಗೀತಾ) (4) ಸಾಮ್ಯಂ ನ ಚಾಸ್ಯ ಪರಮೇಣ ಚ ಕೇನ ಚಾಪ್ಯಂ ಮುಕ್ತೇನ ಚ ಕ್ವಚಿದತಸ್ತ್ವಭಿದಾ ಕುತೋಽಸ್ಯ ॥ (ಮುಕ್ತನಿಗೂ ಸಾಮ್ಯವಿಲ್ಲವೆಂದಾದ ಮೇಲೆ ಐಕ್ಯವು ಹೇಗೆ ತಾನೇ ಸಿಗುವುದು?) (5) ನಾಸ್ತಿ ನಾರಾಯಣಸಮಂ ನ ಭೂತಂ ನಭವಿಷ್ಯತಿ ॥ (6) ಯಸ್ಮಿನ್ ಪರೇಽನ್ಯೇಽಪ್ಯಜ ಜೀವಕೋಶಾಃ ನಾಹಂ ಪರಾಯುರ್ನ ಮರೀಚಿಮುಖ್ಯಾಃ। ಜಾನಂತಿ ಯದ್ಗುಣಗಣಾನ್ನ ರಮಾದಯೋಽಪಿ ॥ (7) ಬಲಮಿಂದ್ರಸ್ಯ ಗಿರಿಶಃ ಗಿರಿಶಸ್ಯ ಬಲಂ ಮರುತ್। ಬಲಂ ತಸ್ಯ ಹರಿಃ ಸಾಕ್ಷಾತ್ ನ ಹರೇರ್ಬಲಮನ್ಯತಃ ॥ ಇತ್ಯಾದಿ ಪ್ರಮಾಣಗಳಿಂದ ಶ್ರೀ ಹರಿಯೇ ಸರ್ವೋತ್ತಮನೆಂದು ಸಿದ್ಧಿಸುವುದು. (8) ಬ್ರಹ್ಮಾದ್ಯಭೇದಸ್ಸಾಮ್ಯಂ ವಾ ಕುತಸ್ತಸ್ಯ ಮಹಾತ್ಮನಃ ॥ (9) ಯದೇವಂವಾಚಕಂ ಶಾಸ್ತ್ರಂ ತದ್ಧಿ ಶಾಸ್ತ್ರಂ ಪರಂ ಮತಂ ॥ ಹೀಗೆ ಹರಿಸರ್ವೋತ್ತಮತ್ವಾದಿಗಳನ್ನು ಪ್ರತಿಪಾದಿಸುವುದೇ ಶಾಸ್ತ್ರವು. ಇತರವಾದುದು ಶಾಸ್ತ್ರವೇ ಅಲ್ಲ. ಆದಕಾರಣ ಮಹಾನರ್ಥವಿದ್ದ ಪ್ರಯುಕ್ತ ಭಗವದ್ದ್ವೇಷಿಗಳೊಡನೆ ಸರ್ವಥಾ ಸಹವಾಸ ಮಾಡಬಾರದು. ॥೧೪॥೧೫॥೧೬॥೧೭॥೧೮॥

ಅವ ॥ ಶಿಷ್ಯನು ಪ್ರತಿಜ್ಞಾಪೂರ್ವಕವಾದ ಶಪಥವನ್ನು ಮಾಡಿದ ಮೇಲೆ ಗುರುಗಳು ಏನು ಮಾಡಬೇಕೆಂದರೆ

**ಮೂ ॥ ಏವಂ ಕೃತೇ ತು ಶಪಥೇ ಮಸ್ತಕೇ ಹಸ್ತಪಂಕಜಂ। ನಿಧಾಯೋತ್ತೀರ್ಯ ಸಂಸಾರಾತ್ಸುಖೀ ಭವ ಹರೇಃ ಪ್ರಿಯಃ॥೧೯॥ ಸರ್ವದುಃಖಾದಿಭಿರ್ಮುಕ್ತೋ ನಿತ್ಯಾನಂದೈಕರೂಪಕಃ। ಸಂಪ್ರಾಪ್ಯ ವಿಷ್ಣುಸಾಮೀಪ್ಯಂ ತತ್ರಾಪಿ ಹರಿಭಕ್ತಿಮಾನ್ ॥೨೦॥ ಭಕ್ತಿಮಾಂಶ್ಚಾನ್ಯದೇವೇಷು ತಾರತಮ್ಯಂ ಚ ಸಂಸ್ಮರನ್ । ಸರ್ವೋತ್ಕರ್ಷಂ ಸ್ಮರನ್ವಿಷ್ಣೋ ರ್ಭೂಯಾಶ್ಚೈವ ಸದಾ ಸುಖೀ ॥೨೧॥ ನ ಮುಕ್ತೌ ವಿಷ್ಣುನೈಕ್ಯಂ ವಾ ಮುಕ್ತಾನಾಂ ಸಾಮ್ಯಮೇವ ವಾ। ಸ್ಮರೇಥಾ ಇತಿ ಚೋಕ್ತ್ವಾಽಥ ಸಮಯಾನನು ಶಿಕ್ಷಯೇತ್ ॥೨೨॥**

ಅ॥ ಹಿಂದೆ ಹೇಳಿದ ಪ್ರಕಾರ ಶಿಷ್ಯರಾದ ಯತಿಗಳಿಂದ ಪ್ರತಿಜ್ಞಾರೂಪವಾದ ಶಪಥವು ಮಾಡಲ್ಪಡುತ್ತಿರಲು (ಗುರುಗಳು ಶಿಷ್ಯನ) ಶಿರಸ್ಸಿನಲ್ಲಿ (ತಮ್ಮ) ಹಸ್ತಕಮಲವನ್ನು ಇಟ್ಟು (ಶಿಷ್ಯನೇ) ಸಂಸಾರದಿಂದ ಬಿಡುಗಡೆ ಹೊಂದಿ ಶ್ರೀಹರಿಗೆ ಪ್ರಿಯನಾಗಿ

ಸುಖವುಳ್ಳವನಾಗು ॥೧೯॥ ಎಲ್ಲಾ ದುಃಖ (ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬೀ ತಾಪತ್ರಯ) ದ್ವೇಷ ಮೊದಲಾದುವುಗಳಿಂದ ಬಿಡುಗಡೆ ಹೊಂದಿ ಶ್ರೀವಿಷ್ಣುವಿನ ಸಾಮೀಪ್ಯರೂಪವಾದ ಮೋಕ್ಷವನ್ನು ಹೊಂದಿ ಸರ್ವದಾ ಕೇವಲ ಚಿದಾನಂದ ಸ್ವರೂಪವುಳ್ಳವನಾಗು. ಅಂತಹ ಮುಕ್ತಿಯಲ್ಲಿಯೂ ವಿಷ್ಣುಭಕ್ತಿಯುಳ್ಳವನಾಗು. ॥೨೦॥ ಶ್ರೀವಿಷ್ಣುವಿನಿಂದ ಇತರರಾದ ಬ್ರಹ್ಮ ರುದ್ರಾದಿ ದೇವತೆಗಳಲ್ಲಿಯೂ ಯಥಾಯೋಗ್ಯವಾಗಿ ಭಕ್ತಿಯುಳ್ಳವನಾಗಿ ಅವರಲ್ಲಿ ನೀಚೋಚ್ಚಭಾವವನ್ನು ಸ್ಮರಿಸುತ್ತಾ ಶ್ರೀವಿಷ್ಣುವಿಗೇನೇ ಸರ್ವೋತ್ತಮತ್ವವನ್ನು ಸ್ಮರಿಸುತ್ತಾ ಧ್ಯಾನಿಸುತ್ತಾ ಸದಾ ಸುಖವುಳ್ಳವನಾಗಿಯೇ ಆಗು ॥೨೧॥ ಮೋಕ್ಷದಲ್ಲಿಯೂ ಶ್ರೀವಿಷ್ಣುವಿನಿಂದ ಅಭೇದವನ್ನಾಗಲೀ ಮುಕ್ತರಾದ ಬ್ರಹ್ಮ ಶೇಷ ಗರುಡ ಇಂದ್ರಾದಿ ದೇವತೆಗಳಿಗೆ ಸಾಮ್ಯವನ್ನಾಗಲೀ ಸರ್ವಥಾ ಸ್ಮರಿಸಬಾರದು. ಹೀಗೆ ಹೇಳಿ (ಉಪದೇಶಿಸಿ) ಆಮೇಲೆ ಸದಾಚಾರಗಳನ್ನೂ, ಸಿದ್ಧಾಂತ ಪ್ರಮೇಯಗಳನ್ನೂ ಶಿಷ್ಯನ ಯೋಗ್ಯತೆಯನ್ನನುಸರಿಸಿ ಶಿಕ್ಷಿಸಬೇಕು, ಉಪದೇಶಿಸಬೇಕು. ॥೨೨॥

ವಿ॥ಉತ್ತೀರ್ಯ ಸಂಸಾರಾತ್=(1) ಅಜ್ಞಾನ ದುಃಖ ಭಯ ಮೋಹ ಮೊದಲಾದ ದೋಷಗಳಿಂದ ಕೂಡಿದವರು ಸಂಸಾರಿಗಳು. ಏವಂಚ ಅಜ್ಞಾನಾದಿ ದೋಷ ಯುಕ್ತತ್ವವು ಒಂದು ಲಕ್ಷಣವು. ಅಥವಾ ಸಂಸಾರಿತ್ವವು. ಅಥವಾ ಪ್ರಕೃತಿ ಬಂಧವೇ ಸಂಸಾರವು. ಇದು ಬ್ರಹ್ಮಾದಿ ಸರ್ವಜೀವ ಸಾಧಾರಣವಾದುದು. ಇಂತಹ ಸಂಸಾರದಿಂದ ಬಿಡುಗಡೆ ಹೊಂದುವುದು. (2) ಅತ ಏವ ಭೂತ ಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ॥ಎಂದು ಪ್ರಮಾಣವು ಪಂಚ ಭೂತಗಳ ಸಂಬಂಧವೇ ಸಂಸಾರವು. ಅವುಗಳಿಂದ ಬಿಡುಗಡೆಯೇ ಮುಕ್ತಿಯು. (3) ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರ ಬುದ್ಧಿಜೈಃಇತಿ (4) ಚಿದಾನಂದ ಶರೀರಸ್ತು ಪ್ರವಿಷ್ಟೋಽಂಡೇ ಹರಿಃ ಸ್ವಯಂ।ತನ್ನಾಭೇರ್ಭೂತದೇಹೋಽಭೂತ್ಪದ್ಮಾದಪಿ ಚತುರ್ಮುಖಃ॥ (ಏಕಾದಶಸ್ಕಂಧ ತಾತ್ಪರ್ಯ.) ಇದರಿಂದ ಬ್ರಹ್ಮನ ಶರೀರವೂ ಪಾಂಚಭೌತಿಕವೆಂದುಕ್ತವಾಯ್ತು. (5) ಅಂತಹ ಜೀವನ ಬಂಧವೂ ಶ್ರೀ ಪರಮಾತ್ಮನ ಅಧೀನವೇ. ಈಶ್ವರನ ಇಚ್ಛೆ ಅವಿದ್ಯೆ, ಕಾಮ್ಯಕರ್ಮ, ಲಿಂಗ ಶರೀರ, ತ್ರಿಗುಣಾತ್ಮಕ ಮನಸ್ಸು, ಸ್ಥೂಲ ಶರೀರವು ಇದು ಮೊದಲಾದವುಗಳು ಬಂಧಗಳು. (6) (ಇವುಗಳು ಬಂಧಗಳೆಂದು ಹೇಗೆ ಸಿದ್ಧಿಸುವವು ಎಂದರೆ ಅಶರೀರಸ್ಯ ಜೀವಸ್ಯ ಶರೀರೋತ್ಪತ್ತಿಕಾರಣಂ। ಈಶ್ವರೇಚ್ಛಾ ಪ್ರಾಥಮಿಕೀ ತಾಂ ವಿನಾ ನಹಿ ಕಿಂಚನ ॥೧॥ ದ್ವಿತೀಯಾ ಪ್ರಕೃತಿಃ ಪ್ರೋಕ್ತಾ ತದ್ರೂಪಾ ಹಿ ಗುಣಾಸ್ತ್ರಯಃ। ತೇಷಾಂ ಸಂಪಾತಜೋ ಭಾವೋ ಮಮಾಹಮಿತಿ ಯಾ ಮತಿಃ ॥೨॥ ದೇಹಾತ್ಪರಸ್ಯ ದೇಹಿತ್ವ ಮಹಂ ಭಾವಮೃತೇ ಕುತಃ ॥ (ಇತಿ ಭಾಗವತ ತಾತ್ಪರ್ಯ ೨ನೇ ಸ್ಕಂಧ) (7) ಅನಾದಿಮಾಯಯಾ ವಿಷ್ಣೋರಿಚ್ಛಯಾ ಸ್ವಾಪಿತೋ ಯದಾ। ತಯಾ ಪ್ರಬೋಧಮಾಯಾತಿ ತದಾ ವಿಷ್ಣುಂ ಪ್ರಪಶ್ಯತಿ॥ (ಮಂಡೂಕ ಭಾಷ್ಯ) (8) ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ॥ (ಗೀತಾ) ಈ ಪ್ರಮಾಣಗಳಿಂದ ಈಶ್ವರೇಚ್ಛೆ, ಅವಿದ್ಯೆ, ಇವು ಬಂಧಕಗಳು. (9) ಕರ್ಮಣಾ ಬಧ್ಯತೇ ಜಂತುರ್ವಿದ್ಯಯಾ ಚ ವಿಮುಚ್ಯತೇ (ಕಾಮ್ಯ ಕರ್ಮವೂ ಬಂಧಕವು.) (10) ಅನಾದಿಕರ್ಮಣಾ ಬದ್ಧೋ ಜೀವಸ್ಸಂಸಾರಮಂಡಲೇ । ವಾಸುದೇವೇಚ್ಛಯಾ ನಿತ್ಯಂ ಭ್ರಮತೀತಿ ಹಿ ತದ್ವಚಃ॥ (ಅನುವ್ಯಾಖ್ಯಾನ) (11) ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । (ತ್ರಿಗುಣಾತ್ಮಕ ಮನಸ್ಸೂ ಬಂಧಕವು) (12) ತ್ರಿಗುಣಾತ್ಮಕಂ ಮನೋಽಸ್ತ್ಯೇವ ಯಾವನ್ಮುಕ್ತಿಸ್ಸದಾತನಂ । ಸೂಕ್ಷ್ಮತ್ವೇನ ಲಯೇ ಸಚ್ಚ ಪ್ರಾಕೃತ್ಯೈರುಪಚೀಯತೇ॥ ಸೃಷ್ಟಿಕಾಲೇ ಯದಾ ತನ್ನ ಕುತಸ್ಸಂಸಾರಸಂಸ್ಥಿತಿಃ। (ಅನುವ್ಯಾಖ್ಯಾನವು) (13) ಸ್ಥೂಲಶರೀರವು ನಾನಾ ವಿಧಗಳಾದ ಪುಣ್ಯ ಪಾಪಗಳನ್ನು ಹುಟ್ಟಿಸುವುದರಿಂದ ಬಂಧಕವೆಂದು ಪ್ರತ್ಯಕ್ಷ ಸಿದ್ಧವು. (14) ಜೀವರಿಗೆ ಬಂಧದಿಂದ ಮೋಕ್ಷವೂ ಭಗವದಧೀನವೇ. ಹೇಗೆಂದರೆ ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।ಎಂದು. (15) ಶ್ರೀ ಹರಿಯು ಬಂಧದಿಂದ ಹೇಗೆ ಬಿಡಿಸುವನು ಎಂದರೆ-ಸ್ವೋದಯಾತ್ಫಲದಂ ಜ್ಞಾನಮಾದೇಹಂ ಕರ್ಮ ವಾ ರವೇಃ ॥ ಎಂಬ ಪ್ರಮಾಣದಿಂದ ಅಪರೋಕ್ಷ ಜ್ಞಾನಾನಂತರ ಬಂಧದಿಂದ ಬಿಡಿಸುವನು. (16) ಪ್ರಾರಬ್ಧಕರ್ಮಶೇಷಸ್ತು ವಿರಜಾತರಣಾವಧಿ। ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ॥ (17) ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ। ಸ ತೇಜಸಿ ಸೂರ್ಯೇಸಂಪನ್ನೋ ಯಥಾ ಪಾದೋ ದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ್ಯೇವ ಸ ಪಾಪ್ಮನಾ ವಿನಿರ್ಮುಕ್ತಃ ಸಮಾಪ್ನೋತಿ ವಿರಜಾಂ ನದೀಂ ತತ್ಸುಕೃತದುಷ್ಕೃತೇ ವಿಧೂನತೇ ॥ (18) ವಿಧೇರ್ದೇಹಾಪಗಮೇ ಲಿಂಗಮಾತ್ರಶರೀರಣಃ। ವಿರಜಾಯಾಂ ಕೃತಸ್ನಾನಾಃ ಬ್ರಹ್ಮಣಾ ಸಹ ಸರ್ವಶಃ। ತ್ಯಕ್ತಲಿಂಗಾಸ್ತತಸ್ಸರ್ವೇ ಸ್ವರೂಪೇಣ ವ್ಯವಸ್ಥಿತಾಃ॥ (ವಿಷ್ಣು ರಹಸ್ಯ) (19) ಪ್ರಾಣೇಂದ್ರಿಯಾಂತಃ ಕರಣಭೇದೇನ ತ್ರಿವಿಧಂ ಮತಂ। ಪಂಚ ಪಂಚೈವ ತೇ ಸರ್ವೇ ಪ್ರಾಣಾಃ ಬುದ್ಧೀಂದ್ರಿಯಾಣಿ ಚ ॥೧॥ ಕರ್ಮೇಂದ್ರಿಯಾಣಿ ಚ ತಥಾ

ತಸ್ಮಾತ್ಪಂಚ ವಿಧಂ ಸ್ಮೃತಂ । ಲಿಂಗಂ ಷೋಡಶಕಂ ಪ್ರಾಹುರ್ಮನಸಾ ಸಹ ತತ್ತ್ವನಃ ॥೨॥ ಏವಂಚ ದಶೇಂದ್ರಿಯಗಳು ಸೂಕ್ಷ್ಮರೂಪಗಳು, ಪಂಚ ಪ್ರಾಣಗಳು, ಸೂಕ್ಷ್ಮರೂಪಗಳು, ಮನಸ್ಸು, ಸೂಕ್ಷ್ಮರೂಪವು ಆಹತ್ಯ ಷೋಡಶಕಲೆಗಳಿಂದ ಕೂಡಿದ್ದು ಲಿಂಗಶರೀರವು ಲಿಂಗಶರೀರಕ್ಕೆ ಬಂಗವೆಂದರೆ ಜೀವಸಂಬಂಧ ವಿನಾಶವು. ಆ ಷೋಡಶಕಲೆಗಳು (ಲಿಂಗಶರೀರವು) ವಿರಜಾನಾದೀಸ್ನಾನ ಕಾಲದಲ್ಲಿ ಜೀವರನ್ನು ಬಿಟ್ಟು ವಿರಜಾನದಿಯಲ್ಲಿ ಬೀಳುತ್ತವೆ. ಆ ವಿರಜಾನದಿಯು, ಪ್ರಧಾನ ಅವ್ಯಾಕೃತಾಕಾಶಗಳ ಮಧ್ಯದಲ್ಲಿರುತ್ತದೆ. ಅದು ಲಕ್ಷ್ಮ್ಯಾತ್ಮಕವು. ಆ ನದಿಯಲ್ಲಿಯೇ ತೇಲಾಡುತ್ತಾ ಇರುತ್ತವೆ. ಅಥವಾ ಆ ಲಿಂಗಶರೀರವು ಅನಾದಿಯಾದುದಾಗ್ಯೂ ಪ್ರಾಗಭಾವ ಅವಿದ್ಯಾಧಿಗಳಂತೆಯೇ ಅದಕ್ಕೆ ಸ್ವರೂಪತ ಏವ ನಾಶವು ಅಂದರೆ ಸ್ವರೂಪ ಧ್ವಂಸವೇ.

ಹರೇಃ ಪ್ರಿಯಃ = ಹರಿಃ = ಅನಿರುದ್ಧ ಮೊದಲಾದ ನಾಲ್ಕು ರೂಪಗಳುಳ್ಳವನು. (1) ಪರಮೋ ಹರಿರಾದಿ ರನಂತೋऽನಂತ ಶೀರ್ಷೋನಂತಾಕ್ಷೋऽನಂತ ಬಾಹುರನಂತ ಗುಣಃ ಇತಿಶ್ರುತಿಃ ॥ ಹರತೀತಿ ಹರಿಃಸಮಸ್ತ ಆಪತ್ಪರಿಹಾರಕನು. ಇಷ್ಟಪ್ರದನು. ಸೃಷ್ಟ್ಯಾದಿ ಕ್ರೀಡೆಗಳಿಗೆ ಆಶ್ರಯನು ಜನನ ಮರಣಾದಿರೂಪ ಸಂಸಾರದಿಂದ ಉದ್ಧರಿಸುವವನು. (2) ಪ್ರಾಣ ಬುದ್ಧಿ ಮನಃಖಾತ್ಮ ದೇಹಾಪತ್ಯಧನಾದಯಃ । ಯತ್ಸಂಪರ್ಕಾತ್ಪ್ರಿಯಾ ಆಸನ್‌ತತಃಕೋ ನ್ವಪರಃ ಪ್ರಿಯಃ ॥

ವಿಷ್ಣುಸಾಮಿಪ್ಯಂ = (1) ಸಾಮಿಪ್ಯ ರೂಪ ಮೋಕ್ಷವು. ಇಲ್ಲಿ ಸಾಮೀಪ್ಯವೆಂಬುದು ಉಪಲಕ್ಷಣವು. ಆದಕಾರಣ ನಾಲ್ಕುವಿಧ ಮೋಕ್ಷವನ್ನು ಇಟ್ಟುಕೊಳ್ಳಬೇಕು. ಏತಕ್ಕೆಂದರೆ–ಎಲ್ಲಾ ಮುಕ್ತರಿಗೂ ಮುಕ್ತಿಯಲ್ಲಿ ಒಂದೇ ವಿಧವಾದ ಭೋಗವಲ್ಲ. ಮತ್ತೆ ಅವರವರ ಯೋಗ್ಯತಾನುಸಾರವೇ ಭೋಗವು. ಆದಕಾರಣ ಮುಕ್ತಿಯಲ್ಲಿಯೂ ಪ್ರಭೇದವಿದೆ ಎಂದು ಅವಶ್ಯವಾಗಿ ಅಂಗೀಕರಿಸಲೇಬೇಕು. ಆದಕಾರಣ ಆ ಮೋಕ್ಷದಲ್ಲಿ ನಾಲ್ಕು ಪ್ರಭೇದವಿದೆ. ಅವು ಯಾವುದೆಂದರೆ - (2) ಸಾಲೋಕ್ಯಂ ಚ ಸರೂಪತ್ವಂ ಸಾಮಿಪ್ಯ ಯೋಗ ಏವಚ । ಇಮಾಮಾರಭ್ಯ ಸರ್ವತ್ರ ಯಾವತ್ತು ಕ್ಷೀರಸಾಗರೇ । ಪುರುಷೋऽನಂತಶಯನಃ ಶ್ರೀಮಾನ್ನಾರಾಯಣಾಭಿದಃ ॥ (೧) ಸಾಲೋಕ್ಯ (೨) ಸಾರೂಪ್ಯ (೩) ಸಾಮಿಪ್ಯ(೪) ಸಾಯುಜ್ಯ ಎಂದು ನಾಲ್ಕು ವಿಧ ಮೋಕ್ಷವು. ಅಂತಹ ಮೋಕ್ಷವನ್ನು ಹೊಂದಿದ ಮುಕ್ತರು ನಾಲ್ಕು ವಿಧರಿದ್ದಾರೆ. (೩) ಹಾಗಾದರೆ ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕತ್ವ ಮಿತ್ಯುತ । ಎಂಬೀ ಭಾಗವತ ತೃತೀಯ ಸ್ಕಂದದಲ್ಲಿ ಸಾರ್ಷ್ಟಿ ಎಂಬ ಮೋಕ್ಷವನ್ನು ಪೃಥಕ್ ಹೇಳಿದುದರಿಂದ ಮೋಕ್ಷವು ಐದು ವಿಧವಾಗಬೇಕು. ನಾಲ್ಕು ವಿಧವೆಂದದ್ದು ಹೇಗೆ? ಎಂದರೆ - ಸಮಾನೈಶ್ವರ್ಯ ಭೋಗರೂಪವಾದ ಸಾರ್ಷ್ಟಿಮೋಕ್ಷವು ಸಾಯುಜ್ಯ ಮೋಕ್ಷದ ಪ್ರಭೇದವೇ. ಆದಕಾರಣ ನಾಲ್ಕು ವಿಧವೆಂದದ್ದು ಯುಕ್ತವೇ. (5) ಸಾಯುಜ್ಯವೆಂದರೆ - ಭಗವಂತನನ್ನು ಪ್ರವೇಶಿಸಿ ಭಗವಂತನ ಶರೀರದಿಂದಲೇ ಭೋಗವು. ಅದಕ್ಕೆ ದೇವತೆಗಳು ಅಧಿಕಾರಿಗಳು.(6) ಭೋಗಸ್ತು ಸರ್ವ ದೇವಾನಾಂ ನರಾದೀನಾಂ ಚ ವಿದ್ಯತೇ । ತತ್ರ ಪ್ರವೇಶೋ ದೇವಾನಾಮುತ್ತರೋತ್ತರತಃ ಕ್ರಮಾತ್ ॥ ಸಮಸ್ತ ದೇವತೆಗಳಿಗೂ ಮನುಷ್ಯಾದಿಗಳಿಗೂ ಸ್ವರೂಪಾನಂದಾನುಭವವು ಇದೆ. ಅದರಲ್ಲಿ ದೇವತೆಗಳಿಗೆ ಉತ್ತರೋತ್ತರದಲ್ಲಿ ಕ್ರಮದಿಂದ ಪ್ರವೇಶವು. (ಎಂದು ಅನುವ್ಯಾಖ್ಯಾನವು) ಇಲ್ಲಿ ದೇವತೆಗಳಿಗೆ ಉತ್ತರೋತ್ತರದಲ್ಲಿ ಪ್ರವೇಶದಿಂದಲೂ ಭಗವಂತನ ಶರೀರದಲ್ಲಿ ಪ್ರವೇಶದಿಂದಲೂ ಭೋಗವು. ಚತುರ್ಮುಖನಿಗಾದರೂ ಭಗವಂತನ ಶರೀರದಲ್ಲಿ ಪ್ರವೇಶದಿಂದಲೇ ಭೋಗವು. ಅದು ಹೇಗೆಂದರೆ (7) ಉತ್ತರೇಷೂತ್ತರೇಷ್ವೇವ ಯಾವದ್ವಾಯುಂ ವಿಮುಕ್ತಿಗಾಃ । ಪ್ರವಿಶ್ಯ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ॥ ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾಂಶ್ಚೈವೋತ್ತರೋತ್ತರಂ ॥ ಕರ್ಮಾದಿಬಂಧದಿಂದ ಮುಕ್ತಿಯನ್ನು ಹೊಂದಿದ ಎಲ್ಲಾ ದೇವತೆಗಳೂ ತಂತಮ್ಮ ತಾರತಮ್ಯ ಕ್ರಮಾನುಸಾರವಾಗಿ ತಂತಮಗೆ ಜನಕರಾದ ಉತ್ತಮ ದೇವತೆಗಳಲ್ಲಿ ಪ್ರವೇಶ ಮಾಡಿ ಅವರ ದೇಹದೊಳಗೂ ಹೊರಗೂ ಯೋಗ್ಯಗಳಾದ ಭೋಗಗಳನ್ನೇ ಉಣ್ಣುತ್ತಿರುತ್ತಾನೆ. ಕ್ಲೇಶಗಳನ್ನು ಹೊಂದುವುದಿಲ್ಲ. ಚತುರ್ಮುಖ ಪರ್ಯಂತವಾಗಿಯೇ ಹೀಗೆ ಭೋಗವು. ಚತುರ್ಮುಖನು ಶ್ರೀ ಹರಿಯನ್ನು ಪ್ರವೇಶಿಸಿಯೇ ಶರೀರದೊಳಗೂ ಹೊರಗೂ ಭೋಗಗಳನ್ನು ಅನುಭವಿಸುತ್ತಾನೆ. (ಎಂದು ಅಣುಭಾಷ್ಯ) (8) ಪ್ರವೇಶ ನಿರ್ಗಮಗಳು ತಮ್ಮ ಇಚ್ಛೆಯಿಂದಲೇ ಆಗುವುವು. ಹೇಗೆಂದರೆ - ಪ್ರಾಪ್ನೋತಿ ಪರಮಂ ಬ್ರಹ್ಮ ಪ್ರಲಯೇ ಪ್ರಲಯೇ ಸದಾ । ಅನ್ಯದಾ ಸ್ವೇಚ್ಛಯಾ ವಿಷ್ಣೋಃ ಸ್ವರೂಪಾದ್ಬಹಿರೇಷ್ಯತಿ ॥ ಸ್ವೇಚ್ಛಯಾऽಂತರ್ಬಹಿಶ್ಚೈವ ರಮತೇ ಮುಕ್ತ ಆತ್ಮವಾನ್ ॥ ಎಂದು ಬೃಹದ್ಭಾಷ್ಯ (9) ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ । ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಂ ॥ ತದಂಗಾನುಗ್ರಹೀತ್ವೈಶ್ಚ ಸ್ವಾಂಗೈರೇವ ಪ್ರವರ್ತನಂ ॥ ಕುರ್ವಂತಿ

ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ॥ ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ ॥ (ಎಂದು ಭಾಷ್ಯ) (10) ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ । ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥ ಹೀಗೆ ಸಾಯುಜ್ಯ ಮುಕ್ತಿಯನ್ನು ಹೊಂದಿದವರ ಭೋಗ ಪ್ರಕಾರವು (11) ಪರಮಾತ್ಮನಿಂದ ಕೂಡಿ ಭೋಗವನ್ನು ಅಂಗೀಕರಿಸಿದರೆ ಶ್ರೀ ಪರಮಾತ್ಮನ ಆನಂದಾದಿ ಭೋಗಗಳು ಮುಕ್ತನಿಗೆ ಬರಬೇಕಾಗುವುವು ಎಂದರೆ- ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್ । ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ"। (ಎಂದು ಭಾಷ್ಯ) ಶ್ರೀ ಪರಮಾತ್ಮನ ದೇಹವನ್ನು ಪ್ರವೇಶಿಸಿ ಪರಮಾತ್ಮನ ಆನಂದಾದಿಗಳನ್ನು ಬಿಟ್ಟು ತಂತಮ್ಮ ಸ್ವರೂಪಾನಂದಾದಿಗಳ ಭೋಗವೇ ಇರುವುದು. (12) ಶ್ರೀ ಭಗವಂತನಾದರೂ ಜೀವಭೋಜ್ಯವಾದ ಆನಂದವನ್ನೇ ಭೋಗಿಸುವವನು. ಜೀವನು ಭಗವಂತನ ಭೋಗವನ್ನು ಭೋಗಿಸುವವನಲ್ಲ. ಏಕೆಂದರೆ ಜೀವಭೋಗ್ಯಸ್ಯ ಭೋಕ್ತೇಶಃ । ಜೀವಸ್ತದ್ಭೋಗ ಭುಕ್ನ ತು॥ (ಎಂದು ಬೃಹದ್ಭಾಷ್ಯ)

(1) **ಸಾಲೋಕ್ಯ ಮುಕ್ತಿಯು.** ಭೂಲೋಕ ಸ್ವರ್ಗಾದಿಲೋಕಗಳಲ್ಲಿದ್ದು ತಂತಮಗೆ ಯೋಗ್ಯವಾದ ಯಥೇಷ್ಟ ಭೋಗವೇ ಸಾಲೋಕ್ಯ ಮುಕ್ತಿಯು. ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ, ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇತು ಕೇಚನ ॥ ಕೇಚಿತ್ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಜಾಪರೇ । ಕೇಚಿತ್ಸತ್ಯೇ ಮಹಾಜ್ಞಾನಾಃ ಗಚ್ಛಂತಿ ಕ್ಷೀರಸಾಗರಂ । (ಭಾಷ್ಯ) ಶ್ವೇತದ್ವೀಪಂ ತತೋಗತ್ವಾ ದೃಷ್ಟ್ವಾ ವಿಷ್ಣುಂ ಚ ತೇ ತತಃ । ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸು ಧರಾದಿಷು ॥ ಕೆಲವು ಮನುಷ್ಯರು ಭೂಮಿಯಲ್ಲಿಯೇ ಮುಕ್ತರಾಗಿರುತ್ತಾರೆ. ಅಂದರೆ ಕೆಲವು ಮುಕ್ತರು ಒಂದಾವರ್ತಿ ಶ್ವೇತ ದ್ವೀಪಕ್ಕೆ ಹೋಗಿ ಅಲ್ಲಿರುವ ಭಗವದ್ರೂಪವನ್ನು ನೋಡಿ ಆ ಭಗವಂತನ ಅನುಜ್ಞೆಯಿಂದ ತಿರುಗಿಬಂದು ಈ ಭೂಮಿಯಲ್ಲಿಯೇ ದುಃಖ ವಿರಹಿತರಾಗಿಯೇ ಸ್ವರೂಪಾನಂದವನ್ನು ಅನುಭವಿಸುತ್ತಿರುವರು. ಲೋಕಾಂತರದಲ್ಲಿ ಅಲ್ಲ. ನೋತ್ಕ್ರಾಮಂತಿ ಕದಾಚನ ಅಂದರೆ ಇತರ ಮುಕ್ತರಂತೆ ಒಂದಾವರ್ತಿ ಬ್ರಹ್ಮನಾಡಿಯಿಂದ ಉತ್ಕ್ರಮಣ ಹೊಂದಿ ಮುಕ್ತಿಯಾಗೋಣ. ತಮಗೆ ಯೋಗ್ಯವಾದ ಸ್ಥಾನದಲ್ಲಿದ್ದ ಮೇಲೆ ಪುನಃ ಊರ್ಧ್ವ ಲೋಕಕ್ಕೆ ಹೋಗುವುದಿಲ್ಲವೆಂದಭಿಪ್ರಾಯವು. ಕೆಲವು ಮುಕ್ತರು ಸ್ವರ್ಗ ಮಹರ್ಲೋಕಾದಿಗಳಲ್ಲಿಯೂ ಇರುತ್ತಾರೆ.

**ಸಾಮೀಪ್ಯಮುಕ್ತಿಯು.** ಕೆಲವರು ಭಗವಂತನ ಸಮೀಪದಲ್ಲಿಯೇ ಯಥೇಷ್ಟ ಭೋಗವನ್ನು ಅನುಭವಿಸುತ್ತಾರೆ. (1) ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ಸಮೀಪಗಾಃ ॥ (ಭಾಷ್ಯ) ಋಷ್ಯಾದಿಗಳು ಅಧಿಕ ಜ್ಞಾನದಿಂದ ಭಗವತ್ಸಮೀಪದಲ್ಲಿಯೇ ಇರುತ್ತಾರೆ. (2) ಉಪಾಸನಾಬಲಾನ್ಮುಕ್ತೋ ಭೋಗಾನ್ ಕರ್ಮಫಲಾನ್ಸದಾ ॥ ಭುಂಕ್ತೇ ವಿಷ್ಣೋಃ ಸಮೀಪಸ್ಥಃ (ಬೃಹದ್ಭಾಷ್ಯ) ಮುಕ್ತನು ಶ್ರೀ ವಿಷ್ಣುವಿನ ಸಮೀಪದಲ್ಲಿದ್ದವನಾಗಿ ಭೋಗಗಳನ್ನುಣ್ಣುತ್ತಾನೆ.

**ಸಾರೂಪ್ಯ ಮುಕ್ತಿಯು.** ಜಯ ವಿಜಯಾದಿ ದ್ವಾರಪಾಲಕರು ಭಗವಂತನಂತೆ ನಾಲ್ಕುಭುಜಗಳುಳ್ಳವರೂ ಶಂಖ ಚಕ್ರಾದ್ಯಾಯುಧಧಾರಿಗಳೂ ಆಗಿ ಯಥೇಷ್ಟಭೋಗವುಳ್ಳವರಾಗಿರುತ್ತಾರೆ. (1) ಸರ್ವೇ ಚತುರ್ಬಾಹದ ಉನ್ಮಿಷನ್ಮಣಿ ಪ್ರವೇಕ ನಿಷ್ಕಾಭರಣಾಃ ಸುವರ್ಚಸಃ ॥ (ಭಾಗವತ) ಭೂಮ್ಯಾದಿಗಳಲ್ಲಿ ಮುಕ್ತನು ಇರುವುದಾದರೆ ಅದು ಮೋಕ್ಷವೇ ಆಗದೆ ಹೋಗುವುದು., ಎಂದರೆ - ಭೂಮಿಯನ್ನಾರಂಭಿಸಿ ಅಂತರಿಕ್ಷಾದಿ ಕ್ರಮದಿಂದ ಎಲ್ಲಾ ಲೋಕಗಳಲ್ಲಿಯೂ ಶ್ರೀ ನಾರಾಯಣನು ಇದ್ದಾನೆ. ಆವಾವ ಲೋಕಗಳಲ್ಲಿರತಕ್ಕ ಭಗವದ್ರೂಪವಿಶೇಷದಿಂದ ಕೂಡಿ ಇರೋಣ ಮಾತ್ರದಿಂದಲೇ ಸಾಲೋಕ್ಯಾದಿಗಳಂತೆ ಸಾಲೋಕ್ಯಾದಿಯು ಅಮುಖ್ಯ ಮುಕ್ತಿಯು. ಮುಖ್ಯವಾಗಿ ಸಾಲೋಕ್ಯಾದಿಗಳು ವೈಕುಂಠ, ಶ್ವೇತದ್ವೀಪ, ಅನಂತಾಸನಗಳೆಂಬ ಭಗವಲ್ಲೋಕಗಳಲ್ಲಿರತಕ್ಕ ಮೂರ್ತಿ ವಿಶೇಷಗಳೊಂದಿಗೆ ಇರುವುದೇ ಆಗಿದೆ.

**ತತ್ರಾಪಿ ಹರಿಭಕ್ತಿಮಾನ್.** ಭಗವದ್ವಿಷಯಕ ಭಕ್ತಿಯುಳ್ಳವನಾಗಬೇಕು. (1) ಭಕ್ತಿಯೆಂದರೆ ಮಾಹಾತ್ಮ್ಯ ಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥ (2) ಶ್ರೀಹರಿಯಲ್ಲಿ ಪರಮಭಕ್ತಿಯು. ಪರಮಭಕ್ತಿಯೆಂದರೆ ನಿರವಧಿಕಾನಂತ ಅನವದ್ಯಕಲ್ಯಾಣಗುಣತ್ವಜ್ಞಾನಪೂರ್ವಕಃ ಸ್ವಾತ್ಮಾತ್ಮೀಯ ಸಮಸ್ತವಸ್ತುಭ್ಯೋನೇಕಗುಣಾಧಿಕಃ ಅಂತರಾಯ ಸಹಸ್ರೇಣಾಪ್ಯಪ್ರತಿಬದ್ಧಃ ನಿರಂತರ ಸ್ನೇಹಪ್ರವಾಹಃ ಅಂದರೆ ಭಗವಂತನಲ್ಲಿರುವ ಮಹಿಮೆಗಳನ್ನು ಚೆನ್ನಾಗಿ ತಿಳಿದುಕೊಂಡು ಪುತ್ರ ಮಿತ್ರ ಕಳತ್ರಾದಿ ಬಂಧುಗಳಲ್ಲಿರುವುದಕ್ಕಿಂತಲೂ ಅತ್ಯಧಿಕವಾಗಿದ್ದು ಎಂತಹ ಆಪತ್ತುಗಳು ಬಂದರೂ ಚಲಿಸದೆ ಮಾಡುವ

ಸ್ನೇಹ ವಿಶೇಷವೇ ಪರಮಭಕ್ತಿಯು. (3) ಸರ್ವಸ್ಮಾದುತ್ತಮ ಇತಿ ಸಮ್ಯಕ್ ಸ್ನೇಹಯುತಾ ಮತಿಃ ॥ ಸುಸ್ಥಿರಾ ಭಕ್ತಿರುದ್ದಿಷ್ಟಾ ತಯಾ ಮುಕ್ತಿರ್ನಚಾನ್ಯತಃ ॥ (4) ಬ್ರಹ್ಮರುದ್ರಮಾದಿಭ್ಯೋಽಪ್ಯುತ್ತಮತ್ವಂ ಸ್ವತಂತ್ರತಾಂ ಸರ್ವಸ್ಯ ತದಧೀನತ್ವಂ ಸರ್ವಸದ್ಗುಣ ಪೂರ್ಣತಾಂ ॥೧॥ ನಿರ್ದೋಷತ್ವಂ ಚ ವಿಜ್ಞಾಯ ವಿಷ್ಣೋ ಸ್ತತ್ರಾಖಿಲಾಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ಸರ್ವೋಪಾಯೋತ್ತಮೋತ್ತಮಃ ॥ ಶ್ರೀ ಹರಿಯು ರಮಾಬ್ರಹ್ಮಾದಿಗಳಿಂದಲೂ ಉತ್ತಮನು, ಸರ್ವಸ್ವತಂತ್ರನು, ಸರ್ವವೂ ಭಗವದಧೀನವು, ಸಮಸ್ತ ಸದ್ಗುಣ ಪರಿಪೂರ್ಣನು, ದೋಷ ಲೇಶ ರಹಿತನು, ಎಂದು ತಿಳಿದು ಸರ್ವಾಧಿಕವಾಗಿಯೂ ಎಲ್ಲಾ ಉಪಾಯಗಳಲ್ಲಿ ಅತಿ ಶ್ರೇಷ್ಠವಾಗಿಯೂ, ಇರುವ ನಿರಂತರ ಸ್ನೇಹ ಪ್ರವಾಹವೇ ಭಕ್ತಿಯೆನಿಸುವುದು. (5) ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾಜ್ಞಾನಮನಾಕುಲಂ । ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥ ಇತಿ ಶ್ರುತಿಃ (6) ಅನಿಮಿತ್ತಾ ಭಗವತಿ ಭಕ್ತಿಸ್ಸಿದ್ಧೇರ್ಗರೀಯಸೀ । ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋ ಯಥಾ ॥ (7) ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥ (ಗೀ, ಅಧ್ಯಾ. ೧೧, ಶ್ಲೋ ೫೪) ಎಲ್ಲದಕ್ಕೂ ಭಕ್ತಿಯೇ ಮುಖ್ಯ ಕಾರಣವು. (8) ಅಭ್ಯಾಸ ಪಾಟವಾತ್ಸ್ನೇಹಾದಶ್ರಮತ್ವಾದುಪಾಸನಾ । ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನತು ಸಾಧನಂ ಇತಿ ಶ್ರುತಿಃ ॥ (9) ಮತ್ತು ಭಕ್ತಿಯೇ ಮೋಕ್ಷಕ್ಕೆ ಪ್ರಧಾನ ಕಾರಣವು ಎನ್ನುವುದನ್ನು ಈ ಕೆಳಗಿನ ಪ್ರಮಾಣವು ಸ್ಪಷ್ಟಪಡಿಸುವುದು. ವ್ಯಾಧಸ್ಯಾಚರಣಂ ಧ್ರುವಸ್ಯ ಚ ವಯೋ ವಿದ್ಯಾ ಗಜೇಂದ್ರಸ್ಯ ಕಾ ಕಾ ಜಾತಿರ್ವಿದುರಸ್ಯ ಯಾದವಪತೇರುಗ್ರಸ್ಯ ಕಿಂ ಪೌರುಷಂ । ಕುಬ್ಜಾಯಾಃ ಕಮನೀಯರೂಪಮಪಿ ಕಿಂ ಕಿಂ ತತ್ಸುದಾಮನ್ನೋ ಧನಂ ಭಕ್ತ್ಯಾತುಷ್ಯತಿ ಕೇವಲಂ ನ ತು ಗುಣೈಃ ಭಕ್ತ್ಯೈಕವಶ್ಯೋ ಹರಿಃ ॥ ಇದರಿಂದ ಶ್ರೀ ಹರಿಯು ಕೇವಲ ಭಕ್ತ್ಯಧೀನನು ಎಂದುಕ್ತವಾಯ್ತು. (10) ಇದು ಮೊದಲಾದ ಪ್ರಮಾಣಗಳಿಂದ ಭಕ್ತಿ ಶಬ್ದಾರ್ಥವನ್ನೂ ಭಕ್ತಿಯು ಅತ್ಯಾವಶ್ಯಕ ಎಂಬುದನ್ನೂ ಭಕ್ತಿಯಿಂದಲೇ ಮೋಕ್ಷವೆಂಬುದನ್ನೂ, ಹರಿಭಕ್ತಿಮಾನ್ ಎಂಬುವುದರಿಂದ ವಿವರಿಸಿ ಮೋಕ್ಷದಲ್ಲಿಯೂ ಭಕ್ತಿಯು ಅತ್ಯಾವಶ್ಯಕವು ಎಂಬುದನ್ನು ತತ್ರಾಪಿ ಹರಿ ಭಕ್ತಿಮಾನ್ ಎನ್ನವುದರಿಂದ ವಿವರಿಸಿದರು. (11) ಇಂತಹ ನಿರಂತರ ಪ್ರೇಮ ಪ್ರವಾಹ ರೂಪವಾದ ಭಕ್ತಿಯು ಶ್ರೀ ಹರಿಯ ಸಾಕ್ಷಾತ್ಕಾರವಾಗದೆ ಕೂಡಲಾರದು. ಆ ಮೇಲೆ ಅತ್ಯರ್ಥ ಪ್ರಸಾದವು. ಜಿಜ್ಞಾಸೋತ್ಥಜ್ಞಾನಜಾತ್ತತ್ಪ್ರಸಾದಾದೇವ ಮುಚ್ಯತೇ ॥ ಎಂದು ನಿರೂಪಿಸಿರುವರು.

ಭಕ್ತಿಮಾಂಶ್ಚಾನ್ಯದೇವೇಷು = ಇತರ ದೇವತೆಗಳಲ್ಲಿ ಯಥಾಯೋಗ್ಯವಾಗಿ ಭಕ್ತಿಯುಳ್ಳವನಾಗಬೇಕು. ಹೇಗೆಂದರೆ (1) ವಿಷ್ಣುಭಕ್ತಿರ್ದೇವಭಕ್ತಿಃ ಗುರುಭಕ್ತಿಸ್ತಥೈವಚ । ತತ್ತಜ್ಜ್ಯೈಷ್ಠ್ಯಾನುಸಾರೇಣ ಮುಕ್ತೌ ನಿಯತಸಾಧನಂ ॥ ಭಕ್ತಿಪೂರ್ತೌ ಭವೇನ್ಮುಕ್ತಿಃ ತದಾಭಾವೇಚ ನೋ ಭವೇತ್ ॥ ವಿಷ್ಣುಭಕ್ತಿ, ದೇವಭಕ್ತಿ, ಗುರುಭಕ್ತಿ ಇವುಗಳು ಅವರವರ ಶ್ರೇಷ್ಠತೆಯನ್ನನುಸರಿಸಿ ಮುಕ್ತಿಗೆ ನಿಯಮೇನ ಸಾಧನವು ಭಕ್ತಿಯು ಪೂರ್ಣವಾದರೇನೇ ಮುಕ್ತಿಯು. ಪೂರ್ಣವಾಗದಿದ್ದರೆ ಮುಕ್ತಿಯಾಗಲಾರದು. (2) ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ । ತಸ್ಯೈತೇ ಕಥಿತಾ ಹ್ಯರ್ಥಾ ಪ್ರಕಾಶಂತೇ ಮಹಾತ್ಮನಃ ॥ ಶ್ರೀ ವಿಷ್ಣುವಿನಲ್ಲಿ ಪರಮಭಕ್ತಿಯು. ಬ್ರಹ್ಮಾದಿ ದೇವತೆಗಳಲ್ಲಿ ಯಥಾಯೋಗ್ಯವಾಗಿ ಭಕ್ತಿಯು. ಹಾಗೆಯೇ ಗುರುಗಳಲ್ಲಿಯೂ ತದ್ಯೋಗ್ಯವಾದ ಭಕ್ತಿಯು. ಇಂತಹವರಿಗೆ ಸಮಸ್ತ ಅಭೀಷ್ಟಗಳೂ ಲಭಿಸುತ್ತವೆ. (3) ವಿಷ್ಣೌ ಭಕ್ತಿರ್ವಿಶೇಷೇಣ ಮೋಕ್ಷಾವಾಪ್ತೌ ಹಿ ಕಾರಣಂ । ತದ್ಭಕ್ತೇಷು ಕ್ರಮೇಣೈವ ರಮಾದ್ಯೇಷು ತ್ವನಂತರಂ ॥ ಶ್ರೀ ವಿಷ್ಣುವಿನಲ್ಲಿ ವಿಶೇಷವಾಗಿ ಸರ್ವಾಧಿಕವಾದ ಭಕ್ತಿ. ಭಗವದ್ಭಕ್ತರಾದ ರಮಾದಿಗಳಲ್ಲಿ ಅವರವರ ಆಧಿಕ್ಯ ಕ್ರಮವನ್ನನುಸರಿಸಿ ಭಕ್ತಿಯನ್ನು ಮಾಡಬೇಕು. ಭಗವದ್ಭಕ್ತಿಯೇ ಮುಖ್ಯತಃ ಮುಕ್ತಿಗೆ ಕಾರಣವು (4) ಏವಂಚ ಶ್ರೀ ವಿಷ್ಣುವಿನಲ್ಲಿ ಅವಶ್ಯವಾಗಿ ಮಾಡಬೇಕಾದ ಪರಮಭಕ್ತಿಯು ಯಾರಿಗೂ ತತ್ಕ್ಷಣದಲ್ಲಿ ಹುಟ್ಟಿರಲಾರದು. ಮತ್ತೆ ಅವರವರ ಯೋಗ್ಯತಾನುಸಾರ ಅನಾದಿಕಾಲದಿಂದಲೂ ಅಲ್ಪವಾಗಿದ್ದ ಭಕ್ತಿಯಿಂದ ಭಗವಂತನನ್ನು ಸೇವಿಸಿ ಆ ಸೇವೆಯಿಂದ ಶ್ರೀಪರಮಾತ್ಮನನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಸಂತುಷ್ಟನಾದ ಭಗವಂತನು ಶಾಸ್ತ್ರ ತತ್ವ ಜ್ಞಾನವನ್ನು ಹುಟ್ಟಿಸಿ ಭಗವದ್ಭಕ್ತಿಯನ್ನು ಅಧಿಕವನ್ನಾಗಿ ಮಾಡುವನು. ಅಧಿಕವಾದ ಭಕ್ತಿಯಿಂದ ಸಂತುಷ್ಟನಾಗಿ ತನ್ನ ದರ್ಶನವನ್ನು ಕೊಡುವನು. ಅನಂತರ ನಿಸ್ಸೀಮನಾದ ಫಲೇಚ್ಛಾರಹಿತವಾದ ಭಕ್ತಿಯನ್ನು ಹುಟ್ಟಿಸುತ್ತಾನೆ. ಅಂತಹ ನಿರುಪಾಧಿಕವಾದ ಭಕ್ತಿಯೇ ಮುಕ್ತಿ ಸಾಧನವು. ಮುಕ್ತಿಯನ್ನು ಹೊಂದಿದ ಮೇಲೆಯೂ ಭಗವಂತನ ಅಧೀನನಾಗಿಯೇ ಪರಮಭಕ್ತಿಯುಕ್ತನಾಗಿಯೇ ಇರುವನು, ಇತ್ಯಾದಿ ಪ್ರಮೇಯಗಳನ್ನು ಈ ಪ್ರಮಾಣವು ದೃಢಪಡಿಸುತ್ತದೆ. ಭಕ್ತ್ಯಾ ಪ್ರಸನ್ನಃ ಪರಮೋ ದದ್ಯಾಜ್ಞಾನಮನಾಕುಲಂ । ಭಕ್ತಿಂ ಚ ಭೂಯಸೀಂ ತಾಭ್ಯಾಂ ಪ್ರಸನ್ನೋ ದರ್ಶನಂ ವ್ರಜೇತ್ ॥೧॥

ತತೋऽಪಿ ಭೂಯಸೀಂ ಭಕ್ತಿಂ ದದ್ಯಾತ್ತಾಭ್ಯಾಂ ವಿಮೋಚಯೇತ್ । ಮುಕ್ತೋऽಪಿ ತದ್ವಶೋ ನಿತ್ಯಂ ಭೂಯೋಭಕ್ತಿ ಸಮನ್ವಿತಃ ॥ (3) ಇದು ಶ್ರೀ ಭಗವಂತನಲ್ಲಿ ಪರಮಭಕ್ತಿಯೆಂದೂ, ಉತ್ತಮರಲ್ಲಿ ಭಕ್ತಿಯೆಂದೂ, ಸಮರಲ್ಲಿ ಸ್ನೇಹವೆಂದೂ, ಅಧಮರಲ್ಲಿ ದಯೆಯೆಂದೂ, ಅನ್ನಿಸಿಕೊಳ್ಳುವುದು.

ತಾರತಮ್ಯಂಚ ಸಂಸ್ಮರನ್ = (1) ಎಲ್ಲಾ ಜೀವರೂ ನೀಚೋಚ್ಚ ಭಾವವನ್ನು ಹೊಂದಿರುತ್ತಾರೆ. ಈ ವಿಷಯವು ಎಲ್ಲರಿಗೂ ಅನುಭವ ಸಿದ್ಧವಾಗಿದೆ. ಶ್ರೀ ಪರಮಾತ್ಮನು ಬ್ರಹ್ಮಾದಿದೇವತೆಗಳನ್ನು ಸೃಷ್ಟಿಸಿ ಅವರಲ್ಲಿ ಅಂತರ್ಗತನಾಗಿ ಅವರಿಂದಲೇ ತಾನು ಸೃಷ್ಟಿಸಿದ ೧೪ ಲೋಕಗಳನ್ನೂ ರಕ್ಷಣೆ ಮಾಡಿಸುತ್ತಾನೆ. (2) ಬ್ರಹ್ಮಾದಿಗಳಲ್ಲಿ ತಾರತಮ್ಯವಿದೆ. ಎಂಬೀವಿಷಯವು ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಇತ್ಯಾದಿ ತೈತ್ತಿರೀಯ ಶ್ರುತಿಯಲ್ಲಿಯೂ, ಬೃಹದಾರಣ್ಯಕಾದಿಗಳಲ್ಲಿಯೂ ವಿಶದವಾಗಿ ನಿರೂಪಿತವಾಗಿದೆ. (3) ಹೇಗೆಂದರೆ ತಾಮಸಜೀವರಿಂದ ಮಧ್ಯಮರು, ಅವರಿಂದ ಮುಕ್ತಿಯೋಗ್ಯರು ಉತ್ತಮರು ಅವರಲ್ಲಿ ಸ್ಥಾವರ ಜೀವರು ನಿಕೃಷ್ಟರು. ಅವರಿಂದ ಜಂಗಮಗಳಾದ ಪಶುಪಕ್ಷ್ಯಾದಿಗಳು ಶ್ರೇಷ್ಠಗಳು. ಅವರಿಂದ ಮನುಷ್ಯರು, ಅವರಿಂದ ಬ್ರಾಹ್ಮಣರು, ಅವರಿಂದ ಚಕ್ರವರ್ತಿಗಳು, ಅವರಿಂದ ಮನುಷ್ಯ ಗಂಧರ್ವರು, ಅವರಿಂದ ದೇವಗಂಧರ್ವರು, ಅವರಿಂದ ಚಿರಪಿತೃಗಳು, ಅವರಿಂದ ಅಜಾನಜ ದೇವತೆಗಳು, ಅವರಿಂದ ಪಿತೃದೇವತೆಗಳು ಕರ್ಮಜ ದೇವತೆಗಳು ಉತ್ತಮರು. (4) ಕಾರ್ತವೀರ್ಯ ಪೃಥುಶ್ಚೈವ ದೌಷ್ಯ ತಿರ್ಭರತಸ್ತಥಾ ॥ ಇತ್ಯಾದಿಗಳು ಕರ್ಮಜ ದೇವತೆಗಳು (5) ೯ ಕೋಟಿ ದೇವಗಣಗಳೂ, ಪಾವಕ ಪ್ರಹ್ಲಾದಾದಿಗಳೂ ಕರ್ಮಜ ದೇವತೆಗಳಿಗೆ ಸಮಾನಿಕರು. (6) ಇವರಿಂದ ವಿಷ್ವಕ್ ಸೇನ, ಅಶ್ವಿನೀ ದೇವತೆಗಳು, ಗಣಪತಿ, ಕುಬೇರ, ಸೋಮಾರ್ಹ ೧೦೦ ದೇವತೆಗಳು ಉತ್ತಮರು. (7) ಮರುದ್ರುದ್ರಾದಿತ್ಯ ವಸುವಿಶ್ವೇದೇವಾಃ ಬೃಹಸ್ಪತಿಃ । ಋಭ್ವಶ್ವಿನೌಚ ರೋದಸ್ಯೌ ಪಿತೃಪಾಶ್ಚ ಶತಂ ಸುರಾಃ ॥ ೫೦ ಮರುತ್ ಮೊದಲಾದವರು ಹಿಂದೆ ಹೇಳಿದ ಗಣಪತ್ಯಾದಿಗಳಿಂದ ಉತ್ತಮರು. (8) ಉಷಾಃ ಸ್ವಾಹಾ ಚ ಪರ್ಜನ್ಯೋ ಮಿತ್ರೋಗ್ನಿರ್ವರುಣೋ ವಿಧುಃ ॥ ಪ್ರವಹೋऽನಿರುದ್ಧ ಇಂದ್ರೋಮೇ ರುದ್ರೋ ವಾಣೀಚ ಮಾರುತಃ ॥ ಉತ್ತರೋತ್ತರತಶ್ಚೈತೇ ಗುಣೈಃ ಸರ್ವೈಶ್ಚ ಮುಕ್ತಿಗಾಃ ಹಿಂದೆ ಹೇಳಿದ ಮಿತ್ರಾದಿಗಳಿಂದ ಸೂರ್ಯ ಚಂದ್ರಾದಿಗಳು ಉತ್ತಮರು. ಅವರಿಂದ ಇಂದ್ರ ಕಾಮರು, ಅವರಿಂದ ಪಾರ್ವತೀ ಸೌಪರ್ಣೀ ವಾರುಣಿಯರು, ಅವರಿಂದ ರುದ್ರ ಗರುಡ ಶೇಷರೂ, ಅವರಿಂದ ಭಾರತೀ ಸರಸ್ವತಿಯರು ಅವರಿಂದ ವಾಯು ಬ್ರಹ್ಮರೂ ಅವರಿಂದ ಏತೇಭ್ಯಃ ಶ್ರೀಸ್ತು ಮುಕ್ತೇಭ್ಯೋ ಗುಣೈಃ ಕೋಟಿಗುಣೋತ್ತರಾ ಎಂಬ ಶ್ರುತಿಯಿಂದ ಲಕ್ಷ್ಮೀದೇವಿಯು ಕೋಟಿಗುಣಗಳಿಂದ ಉತ್ತಮಳು. (9) ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿ ರ್ಬುದ್ಧೇರಾತ್ಮಾ ಮಹಾನ್ ಪರಃ ॥೧॥ ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥೨॥ ಎಂಬೀಕಾಠಕ ಶ್ರುತಿಯಿಂದ ಶ್ರೀ ಹರಿಯೇ ಸರ್ವೋತ್ತಮನು. ಉತ್ತಮತ್ವಕ್ಕೆ ಅವಧಿಭೂತನು (10) ತತ್ಸಮೋನಾಸ್ತಿ ಪರಮೋ ಹರಿರೇವ ನ ಚಾಪರಃ ॥ ಶ್ರೀ ಹರಿಗೆ ಸಮಾನಿಕನೇ ಇಲ್ಲ. ಉತ್ತಮರು ಸುತರಾಂ ಇಲ್ಲ. (11) ಮುಕ್ತಾನಾಂ ಪತಯೋ ದೇವಾಃ ದೇವಾನಾಂಚ ಪ್ರಜಾಪತಿಃ । ತಸ್ಯ ವಿಷ್ಣುರ್ನಚೈವೇದಂ ಪಾರಾವರ್ಯಂ ವಿನಶ್ಯತಿ ॥ ಇತಿ ಶ್ರುತಿಃ ॥ ಲೋಕದಲ್ಲಿ ನೀಚೋಚ್ಚ ಭಾವವಿದ್ದಂತೆ ಮುಕ್ತಿಯಲ್ಲಿಯೂ ಸರ್ವದಾ ನೀಚೋಚ್ಚ ಭಾವವು ಇದ್ದೇ ಇದೆ. (12) ವಿಷ್ಣುಮಾಹಾತ್ಮ್ಯಲೇಶಸ್ಯ ವಿಭಕ್ತಸ್ಯ ಚ ಕೋಟಿಧಾ । ಪುನಶ್ಚಾನಂತಧಾ ತಸ್ಯ ಪುನಶ್ಚಾಪಿ ಹ್ಯನಂತಧಾ ॥ ನೈಕಾಂಶ ಸಮಮಾಹಾತ್ಮ್ಯಾಃ ಶ್ರೀ ಶೇಷ ಬ್ರಹ್ಮ ಶಂಕರಾಃ ಇತಿ ಸ್ಮೃತಿಃ ॥ ಶ್ರೀ ಹರಿಯ ಮಹಿಮೆಯ ಲೇಶವೂ ಕೂಡ ಲಕ್ಷ್ಮೀ ಬ್ರಹ್ಮಾದಿಗಳಲ್ಲಿ ಇಲ್ಲ. (13) ಕೃಣ್ವೇ ವೀರ ಉಗ್ರಮುಗ್ರಂ ದಮಾಯನನ್ಯ ಮನ್ಯಮತಿನೇನಿಯಮಾನಃ । ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ಶ್ರುತಿಃ । ಶ್ರೀ ಹರಿಯು ಕ್ರೂರರಾದ ದೈತ್ಯಾದಿಗಳನ್ನು ನರಕಾದಿಗಳಿಗೂ, ದೇವಾದಿಗಳನ್ನು ಉತ್ತಮ ಸ್ಥಾನಕ್ಕೂ ಒಯ್ಯುವನು. ಮನುಷ್ಯರನ್ನು ಸಂಸಾರದಲ್ಲಿಯೇ ತಿರುಗಿಸುತ್ತಿರುತ್ತಾನೆ. ಇದರಿಂದ ದೇವಾದಿಗಳು ಮುಕ್ತಿಯೋಗ್ಯರೆಂದೂ, ದೈತ್ಯಾದಿಗಳು ಅಂಧಂತಮೋಯೋಗ್ಯರೆಂದೂ ನಿತ್ಯ ಸಂಸಾರಿಗಳು ಸಂಸಾರದಲ್ಲಿಯೇ ತೇಲಿಕೊಂಡು ಇರುತ್ತಾರೆಂದೂ ಹೇಳಿರುವುದರಿಂದ ಉತ್ತಮ ಮಧ್ಯಮ ಅಧಮರೆಂದು ತ್ರಿವಿಧ ಜೀವರು ಇದ್ದಾರೆಂದೂ, ತಾರತಮ್ಯವಿದೆ ಎಂದೂ ಸಿದ್ಧವಾಯ್ತು. (14) ಹೀಗೆಯೆ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ । ಜಘನ್ಯ ಗುಣವೃತ್ತಿಸ್ಥಾಃ ಅಧೋಗಚ್ಛಂತಿ ತಾಮಸಾಃ ॥ ಸತ್ವಗುಣ ಪ್ರಧಾನರಾದ ಜೀವರು ಮುಕ್ತಿಯೋಗ್ಯರೆಂದೂ, ರಜೋಗುಣ ಪ್ರಧಾನರಾದ ಮಧ್ಯಮರು ನಿತ್ಯಸಂಸಾರಿಗಳೆಂದೂ, ತಮೋಗುಣ ಪ್ರಧಾನರಾದ ಅಧಮರು ತಮಸ್ಸಿಗೆ ಯೋಗ್ಯರೆಂದೂ, ನಿರೂಪಿಸಿ ಜೀವತ್ರೈವಿಧ್ಯವನ್ನು ಸ್ಪಷ್ಟವಾಗಿ ಉಪಪಾದಿಸಿರುವನು. (15)

ಇಷ್ಟು ಮಾತ್ರವಲ್ಲದೆ ಸ್ವಭಾವತಸ್ತ್ರಿಧಾ ಜೀವಾಃ ಉತ್ತಮಾಧಮಮಧ್ಯಮಾಃ । ಉತ್ತಮಾಸ್ತತ್ರ ದೇವಾದ್ಯಾಃ ಮರ್ತ್ಯಾ ಮಧ್ಯಾಸ್ತು ಮಧ್ಯಮಾಃ ॥ ಅಧಮಾ ಅಸುರಾದ್ಯಾಶ್ಚ ನೈಷಾ ಮಸ್ತ್ಯನ್ಯಥಾಭವಃ ॥ ಎಂದು ತ್ರಿವಿಧ ಜೀವರೆಂದೂ ಸ್ಪಷ್ಟವಾಗಿ ಹೇಳಿದ್ದಲ್ಲದೆ ಆ ತ್ರಿವಿಧ ಜೀವರ ಸ್ವಭಾವಕ್ಕೆ ವ್ಯತ್ಯಾಸವಿಲ್ಲವೆಂದು ಹೇಳಿದ ಕಾರಣ ಮುಕ್ತಿಯಲ್ಲಿಯೂ ತಾರತಮ್ಯವಿದೆ ಎಂದು ಸ್ಪಷ್ಟಪಡಿಸಿದಂತೆಯೇ ಆಯ್ತು. (16) ಋಜುಗಣಸ್ಥ ಜೀವರಿಂದ ರುದ್ರಪದಯೋಗ್ಯರಿಗೆ ತತ್ತ್ವೋಪದೇಶವೂ, ರುದ್ರಪದಯೋಗ್ಯ ಜೀವರಿಂದ ಇಂದ್ರ ಪದಯೋಗ್ಯರಿಗೆ ತತ್ತ್ವೋಪದೇಶವೂ ಶಾಸ್ತ್ರಸಿದ್ಧವಾದ ಪ್ರಯುಕ್ತ ಗುರುಗಳಿಗೆ ಉತ್ತಮತ್ವವೂ, ಶಿಷ್ಯರಿಗೆ ಅಪಕೃಷ್ಟತ್ವವೂ ಲೋಕ ರೀತಿಯಾಗಿಯೂ ಸಿದ್ಧಿಸುವುದಷ್ಟೆ. (17) ತಾರತಮ್ಯೇನ ತಿಷ್ಠಂತಿ ಗುಣೈರಾನಂದ ಪೂರ್ವಕೈಃ । ಭೂಪಾ ಮನುಷ್ಯಗಂಧರ್ವಾ ದೇವಾಃ ಪಿತರ ಏವಚ ॥೧॥ ಆಜಾನೇಯಾಃ ಕರ್ಮದೇವಾಃ ತತ್ವದೇವಾಃ ಪುರಂದರಃ । ಶಿವೋ ವಿರಿಂಚಿರಿತ್ಯೇತೇ ಕ್ರಮಾತ್ ಶತಗುಣೋತ್ತರಾಃ ॥೨॥ ನ ಸಮೋ ಬ್ರಹ್ಮಣಃ ಕಶ್ಚಿತ್ ಮುಕ್ತಾವಪಿ ಕಥಂಚನ ॥೩॥ ಇತ್ಯಾದಿ ಪ್ರಮಾಣಗಳು ಮುಕ್ತಿಯಲ್ಲಿಯೂ ತಾರತಮ್ಯವಿದೆ ಎಂದು ಆಘೋಷಿಸುತ್ತಿರುತ್ತವೆ. (18) ಮುಕ್ತಾನಾಂ ಚ ನ ಹೀಯಂತೇ ತಾರತಮ್ಯಂ ಚ ಸರ್ವದಾ (19) ನಿರ್ದೋಷತ್ವಂ ತಾರತಮ್ಯಂ ಮುಕ್ತಾನಾಮಪಿ ಚೋಚ್ಯತೇ (20) ಮಾನುಷಾದಿ ವಿರಿಂಚಾಂತಂ ಸುಖಂ ಮುಕ್ತೌಶತೋತ್ತರಂ (ಬೃಹದ್ಭಾಷ್ಯ) (21) ವಿಷ್ಣೋಃ ಪ್ರಾಣಸ್ತಥಾ ಶ್ರದ್ಧಾ ಎಂದಾರಂಭಿಸಿ ಕರ್ಮಾತ್ಮಾ ಪುಷ್ಕರಸ್ತತಃ । ಕ್ರಮಾತ್ಪ್ರತ್ಯವರಾ ಏತೇ ಮುಕ್ತಾಃ ಸರ್ವಗುಣೈರಪಿ । (ಷಟ್ಪ್ರಶ್ನಭಾಷ್ಯ) (22) ಮಾನುಷಾದಿ ವಿರಿಂಚಾಂತಂ ತಾರತಮ್ಯಂ ವಿಮುಕ್ತಿಗಂ ॥ (ಈಶಾವಾಸ್ಯಭಾಷ್ಯ) (23) ಕಾಮಃ ಸಂಕಲ್ಪಃ ಆನಂದೋ ಮುಕ್ತಾನಾಂ ತಾರತಮ್ಯತಃ ॥ (ತೈತ್ತಿರೀಯ ಭಾಷ್ಯ) (24) ಮುಕ್ತಾನಾಂ ತಾರತಮ್ಯಂಚ ಮಾನೈರುಕ್ತೈರ್ನ ಚಾಲ್ಯತೇ ॥ (ಅನುವ್ಯಾಖ್ಯಾನ) (25) ಪ್ರಾಪ್ತಾನಾಂ ಪರಮಾನಂದಂ ತಾರತಮ್ಯಂ ಸದೈವ ಹಿ ॥ (ಗೀತಾ ಭಾಷ್ಯ) (26) ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ದೇಹಂ ಸಂಶ್ರಿತಾ ಅಪಿ । ತಾರತಮ್ಯೇನ ಶಿಷ್ಠಂತಿ ಗುಣೈರಾನಂದ ಪೂರ್ವಕೈಃ ॥ (ಗೀತಾ ತಾತ್ಪರ್ಯ) ಇತ್ಯಾದಿ ಪ್ರಮಾಣಗಳಿಂದ ಮುಕ್ತಿಯಲ್ಲಿಯೂ ತಾರತಮ್ಯವಿದೆ ಎಂದು ಸಿದ್ಧವಾಯ್ತು. (27) ಹಾಗಾದರೆ ರಾಮಾನುಜಾಚಾರ್ಯರು "ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಯಿಂದ ಬ್ರಹ್ಮಾದಿ ಜೀವರಿಗೆ ಸಂಸಾರ ದೆಶೆಯಲ್ಲಿಯೇ ತಾರತಮ್ಯವು. ಮುಕ್ತಿಯಲ್ಲಿ ಸರ್ವರೂ ಪರಸ್ಪರವಾಗಿಯೂ ಶ್ರೀ ಪರಮಾತ್ಮನಿಂದಲೂ ಸಮಾನಿಕರೇ ಎನ್ನುತ್ತಾರೆ. ಎಂದರೆ ಹೀಗೆ ಹೇಳಕೂಡದು. ಏಕೆಂದರೆ ಮುಕ್ತಿಯಲ್ಲಿಯೂ ಭೇದವೂ ತಾರತಮ್ಯವೂ ಇದೆ ಎಂದು ಪ್ರತಿಪಾದಿಸುವ ಅನೇಕಾನೇಕ ಪ್ರಮಾಣಗಳಿವೆ. ಸಾಮ್ಯವಚನವು ಪ್ರಾಚುರ್ಯ ವಿಷಯಕವು. ಮತ್ತು ದುಃಖಾಭಾವ ವಿಷಯಕವು. ಅತ ಏವ ದುಃಖಾಭಾವಃ ಪರಾನಂದೋ ಲಿಂಗಭೇದಃ ಸಮಾಮತಾಃ।ತಥಾಪಿ ಪರಮಾನಂದೋ ಜ್ಞಾನಭೇದಾತ್ತು ಭಿದ್ಯತೇ ॥ (ಎಂದು ಗೀತಾಭಾಷ್ಯ) (29) ತಾರತಮ್ಯಾಪರಿಜ್ಞಾನಾದನುತ್ಥಾನಂ ತಮೋ ವ್ರಜೇತ್ ॥ (30) ಏವಂಚ ತಾರತಮ್ಯವನ್ನು ತಿಳಿಯದಿದ್ದರೆ ನರಕಾದ್ಯನರ್ಥಗಳು ಉಂಟಾಗುವುದರಿಂದ ಶ್ರುತ್ಯಾದಿಗಳಲ್ಲಿ ಹೇಳಿದಂತೆ ನೀಚೋಚ್ಚ ಭಾವವನ್ನು ಸರಿಯಾಗಿ ತಿಳಿದುಕೊಂಡು ಭಗವಂತನ ಪ್ರಸಾದದಿಂದ ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಬೇಕು. ಇಷ್ಟು ಅಭಿಪ್ರಾಯದಿಂದ ತಾರತಮ್ಯಂಚ ಸಂಸ್ಮರನ್ ಎಂದು ಶ್ರೀಮದಾಚಾರ್ಯರು ಹೇಳಿರುವರು.

ಸರ್ವೋತ್ಕರ್ಷಂ ಸ್ಮರನ್ ವಿಷ್ಣೋಃ (1) ನ ತೇ ವಿಷ್ಣೋಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ । ನ ತೇ ಮಹಿತ್ವಮನ್ವಶ್ನುವಂತಿ ॥ (2) ಯದಾ ಪಶ್ಯಃಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿ ಇತ್ಯಾದಿ ವೇದಗಳಲ್ಲಿ ವಿಷ್ಣುಸರ್ವೋತ್ತಮತ್ವವು ಸ್ಪಷ್ಟವಾಗಿ ನಿರೂಪಿತವಾಗಿದೆ. (3) ಇಂದ್ರನನ್ನು ಆರಂಭಿಸಿ ಬ್ರಹ್ಮ ಪರ್ಯಂತ ದೇವತೆಗಳು ಪೂರ್ವಾದಿ ದಿಕ್ಕುಗಳಿಗೆ ಅಧಿಪತಿಗಳೆಂದು ಪ್ರಸಿದ್ಧರಾಗಿದ್ದಾರೆ. ಶ್ರೀವಿಷ್ಣು ಯಾವುದೊಂದು ದಿಕ್ಕಿಗೂ ಅಧಿಪತಿಯೆಂದು ಪ್ರಸಿದ್ಧನಾಗದಿರುವುದರಿಂದ ಅಖಂಡಾಧಿಪತಿಯೆಂದು ಸುತರಾಂ ಸಿದ್ಧವಾಗುತ್ತದೆ. (4) ಪಾರ್ವತೀಪತಿಯಾದ ರುದ್ರನು ತನ್ನ ಮಗನಾದ ಷಣ್ಮುಖನಿಗೆ 'ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ' ॥ ತಾನು ಭೋಗವನ್ನು ಕೊಡುವವನು, ಶ್ರೀಪರಮಾತ್ಮನು ಮುಕ್ತಿಯನ್ನು ಕೊಡುವವನು. ಮೋಕ್ಷದಸ್ತು ಸ್ವತಂತ್ರಸ್ಸ್ಯಾತ್ ಮುಕ್ತಿಯನ್ನು ಕೊಡುವವನೇ ಸರ್ವಸ್ವತಂತ್ರನು ಎಂದು ನಿರೂಪಿಸಿರುವನು. (5) ನತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ (ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವ ತತೋ ವೇದಾಸ್ತತ್ಪರಾಸ್ಸರ್ವ ಏವ ॥ ವಿಷ್ಣುವೇ ಸರ್ವೋತ್ಕೃಷ್ಟನು ಎಂದು ತಿಳಿದವನಲ್ಲಿದ್ದಷ್ಟು ಪ್ರೀತಿಯು ಶ್ರೀ ವಿಷ್ಣುವಿಗೆ ಯಾರಲ್ಲಿಯೂ ಇಲ್ಲ. ಆ ಶ್ರೀ ಹರಿಯನ್ನು ಸಂತೋಷಗೊಳಿಸಿರುವುದರಿಂದಲೇ ಮುಕ್ತಿಯಾಗುವುದು. ಆದ

ಕಾರಣ ವೇದಗಳೆಲ್ಲವೂ ಭಗವತ್ಪರಗಳೇ ಎಂದು ಶ್ರುತಿಯು (6) ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹ್ಯೈಃ ಅಜ್ಞಾನಾದಿಗಳಿಲ್ಲದಿರುವ ಮುಕ್ತರಿಂದಲೂ ಮೂಲರೂಪಿ ಶ್ರೀ ನಾರಾಯಣನು ಪೂಜಿಸಲ್ಪಡುತ್ತಾನೆ ಎಂದು ಭಾಗವತದಲ್ಲಿ ಹೇಳಿದ ಕಾರಣ ಮುಕ್ತಿಯಲ್ಲಿಯೂ ಭೇದವಿದೆ ಎಂದು ಸಿದ್ಧವಾಯ್ತು. (7) ಅಲ್ಲದೆ ಸರ್ವಶಾಸ್ತ್ರೋತ್ತಮವಾದ ಭಗವದ್ಗೀತೆಯಲ್ಲಿಯೂ (೧) ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ॥ (೨) ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ। ಯೋಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ॥ (೩) ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷ ಯಃ । (೪) ಮತ್ತಃ ಸರ್ವಂ ಪ್ರವರ್ತತೇ (೫) ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯು ದಾಹೃತಃ । ಇತ್ಯಾದಿಗಳಲ್ಲಿ ತಾನೇ ಸರ್ವೋತ್ತಮನು ಎಂದು ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ಅರ್ಜುನನಿಗೆ ಉಪದೇಶಿಸಿರುವನು. (8) ಹಾಗೆಯೇ ಸರ್ವಶಾಸ್ತ್ರೋತ್ತಮವಾದ ವಿಷ್ಣು ಸಹಸ್ರನಾಮದಲ್ಲಿಯೂ (೧) ಭೂತಭವ್ಯಭವತ್ಪ್ರಭುಃ । (೨) ಪುರುಷೋತ್ತಮಃ (೩) ಮುಕ್ತಾನಾಂ ಪರಮಾಗತಿಃ (೪) ಸುರಾಧ್ಯಕ್ಷಃ ॥ (೫) ಯೋಗೀಶಃ ಸರ್ವಕಾಮದಃ ಇತ್ಯಾದಿಯಾಗಿಯೂ, ಹಾಗೆಯೇ ವಾಸುದೇವಸಹಸ್ರ ನಾಮದಲ್ಲಿಯೂ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ॥ ಎಂದು ಶ್ರೀ ವಿಷ್ಣುವೇ ಸರ್ವೋತ್ತಮನೆಂದು ನಿರೂಪಿತವಾಗಿದೆ. (9) ಹಾಗೆಯೇ ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ । ಎಂದು ಭಾಗವತ, ವೇದಶಾಸ್ತ್ರತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ಎಂದು ಭಾರತ, ಹೀಗೆಯೇ ಶ್ರುತಿಸ್ಮೃತಿ ಇತಿಹಾಸ ಪುರಾಣಾದಿಗಳಲ್ಲಿ ಎಲ್ಲಾ ಗ್ರಂಥಗಳಲ್ಲಿಯೂ ಶ್ರೀ ವಿಷ್ಣುವೇ ಸರ್ವೋತ್ತಮನು, ಬ್ರಹ್ಮರುದ್ರಾದಿ ದೇವತೆಗಳು ಆತನ ಪರಿವಾರ ಭೂತರು, ಸೇವಕರು ಎಂದು ಸ್ಪಷ್ಟವಾಗಿ ನಿರೂಪಿತವಾಗಿದೆ. (10) ಚತುರ್ಮುಖನು ಶ್ರೀ ವಿಷ್ಣುವಿನ ಪಾದಪ್ರಕ್ಷಾಳನೆ ಮಾಡಿದ್ದಾನೆಂಬುವುದೂ, ಶಿವನು ಶ್ರೀ ಹರಿಯ ಪಾದೋದಕವಾದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವನೆಂದೂ ಪುರಾಣಾದಿಗಳಲ್ಲಿ ಪ್ರಸಿದ್ಧ ವಿಷಯ. (11) ಹಾಗೆಯೇ ಅಂಭೃಣೀಸೂಕ್ತದಲ್ಲಿ ಯಂ ಕಾಮಯೇ ತಂತಮುಗ್ರಂಕೃಣೋಮಿತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ ಎಂಬಲ್ಲಿ ಬ್ರಹ್ಮರುದ್ರಾದಿಗಳನ್ನು ಸೃಷ್ಟಿಸತಕ್ಕ ಶಕ್ತಿಯು ತನಗೆ ಇದೆ. ತನಗೆ ಕಾರಣನಾದವನು ಸಮುದ್ರದಲ್ಲಿದ್ದಾನೆಂದು ಲಕ್ಷ್ಮೀದೇವಿಯು ವಿಷ್ಣುವೇ ಸರ್ವೋತ್ತಮನೆಂದು ಸಾಧಿಸಿರುತ್ತಾಳೆ. (12) ಮತ್ತು ಭಾರತಂ ಸರ್ವಶಾಸ್ತ್ರೇಷು ಎಂದು ಹೇಳಿದಂತೆ ಸರ್ವಶಾಸ್ತ್ರೋತ್ತಮವಾದ ಭಾರತದಲ್ಲಿ "ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ", ಎಂದು ಹೇಳಿದೆ. (13) ತ್ವಂ ಮುಕ್ತಿದೋ ಬಂಧದೋಽತೋ ಮತೋ ನಃತ್ವಂಜ್ಞಾನದೋಽಜ್ಞಾನದಶ್ಚಾಸಿ ವಿಷ್ಣೋ ॥ ಇತ್ಯಾದಿ ಶ್ರುತಿಗಳಲ್ಲಿ ಮೋಕ್ಷಾದಿಪುರುಷಾರ್ಥಗಳನ್ನು, ಶ್ರೀವಿಷ್ಣುವೇ ಕೊಡುವವನೆಂದು  ಸಿದ್ಧಿಸುತ್ತದೆ. (14) ಭಾಗವತದಲ್ಲಿ ತ್ರಿಷ್ವಧೀಶೇಷು ಕೋ ಮಹಾನ್ ಎಂದು ಋಷಿಗಳು ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಯಾರು ಶ್ರೇಷ್ಠರು ಎಂದು ವಿಚಾರ ಮಾಡಿ ಭೂಯಾಂಸಂ ಶ್ರದ್ಧದುಃ ರ್ವಿಷ್ಣುಂ ಎಂದು ಶ್ರೀವಿಷ್ಣುವೇ ಸರ್ವೋತ್ತಮನೆಂದು ನಿರ್ಣಯಿಸಿಕೊಂಡಿರುವರು ಎಂದು ಹೇಳಿದೆ. (15) ಹಾಗೆಯೇ ನಾಹಂ ನ ಚ ಶಿವೋಽನ್ಯೇಚ ತಚ್ಛಕ್ತ್ಯೈ ಕಾಂಶಭಾಗಿನಃ । ಎಂದು ಬ್ರಹ್ಮದೇವರು ಶ್ರೀ ಹರಿಯೇ ಸರ್ವೋತ್ತಮನೆಂದು ಸಾಧಿಸಿರುವರು. (16) ಸರ್ವೋತ್ಕರ್ಷೇ ದೇವ ದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ತ್ವೇವಚಾನ್ಯತ್ರ ಸತ್ಯಂ ॥ ವಿಷ್ಣು ಸರ್ವೋತ್ತಮತ್ವದಲ್ಲಿಯೇ ಸಮಸ್ತ ಶಾಸ್ತ್ರಗಳಿಗೂ ಮುಖ್ಯ ತಾತ್ಪರ್ಯವು. (17) ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯ ಭಿಸಂವಿಶಂತಿ ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ (ತೈ. ಉ.) (18) ಬೃಹಂತೋ ಹ್ಯಸ್ಮಿನ್ ಗುಣಾಃ । (19) ಬ್ರಹ್ಮಶಬ್ದಃಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ (20) ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ॥ (ಋಗ್ವೇದ) (21) ಏಕೋ ನಾರಾಯಣ ಆಸೀನ್ನ ಬ್ರಹ್ಮಾನ ಚ ಶಂಕರಃ (22) ನಾರಾಯಣ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ (23) ಪ್ರಾಣೋ ವಾ ಆಶಾ ಯಾ ಭೂಯಾನ್ । ವಿಷ್ಣುರ್ವೈ ದೇವೇಭ್ಯೋ ಭೂಯಾನ್ । (24) ಅಯಂ ಚ ಲೋಕಃ ಪರಶ್ಚ ಲೋಕಃ ವಿಷ್ಣಾವೇವೋತಶ್ಚ ಪ್ರೋತಶ್ಚ ಭವಂತಿ (25) ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ । ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತೀರಶ್ವಿನಾವಿರಾವತ್ । (ಋಗ್ವೇದ) (26) ವಾಸುದೇವೋವಾ ಇದಮಗ್ರ ಆಸೀನ್ನ ಬ್ರಹ್ಮಾನ ಚ ಶಂಕರಃ (27) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । (28) ಯೋ ನಃಪಿತಾ ಜನಿತಾ ಯೋವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ॥ (ಋಗ್ವೇದ) (29) ವಾಸುದೇವಃ ಸಂಕರ್ಷಣಃ.... ಸರ್ವೇ ಹ್ಯೇತ್ಯೇ ಪೂರ್ಣಾಃ ಅಜರಾಃಅಮೃತಾಃ ಪರಮಾಃ ಪರಾನಂದಾಃ ॥ (30) ಏಕಃ ಪುರಸ್ತಾದ್ಯ ಇದಂ ಬಭೂವ ಯತೋ ಬಭೂವ ಭುವನಸ್ಯ ಗೋಪಾಃ । ಯಮಪ್ಯೇತಿ ಭುವನಂ ಸಾಂಪರಾಯೇ ಸ ನೋ ಹರಿರ್ಘೃತಮಿಹಾಯುಷೇಽತ್ತು

ದೇವಃ । (ಯಜು) (31) ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ (32) ಸ ಬ್ರಹ್ಮಣಾ ವಿಸೃಜತಿ ಸ ರುದ್ರೇಣ ವಿಲಾಪಯತಿ ಸೋಽನುತ್ಪತ್ತಿಲಯಃ ಏಕ ಏವ ಹರಿಃ ಪರಃ ಪರಾನಂದಃ । (33) ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ (34) ಏತಸ್ಯೈವಾನಂದಸ್ಯ ಮಾತ್ರಾಮುಪಜೀವಂತಿ । (35) ನ ತತ್ಸ್ವಭಾವ ವ್ಯೃಷಯಶ್ಚ ದೇವಾಃ ವಿದುಃ ಕುತೋಽನ್ಯೇಽಲ್ಪ ಧೃತಿ ಪ್ರಮಾಣಾಃ (36) ಪರಾತ್ಪರಂ ಯನ್ಮಹತೋ ಮಹಾಂತಂ ಯದೇಕಮವ್ಯಕ್ತಮನಂತರೂಪಂ (37) ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀ ಪತೇಃ ಪರಂ । ಉತ್ಕರ್ಷೇತು (38) ಉತ್ಪತ್ತಿಸ್ಥಿತಿ ಸಂಹಾರಾ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್ (39) ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ । ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ (40) ಇತ್ಯಾದಿ ಪ್ರಮಾಣಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಸರ್ವೋತ್ಕರ್ಷಂ ಸ್ಮರನ್ ವಿಷ್ಣೋಃ ಎಂದು ಆಚಾರ್ಯರು ಉಪದೇಶಿಸಿರುವರು. ಈ ಪ್ರಕಾರ ಹಿಂದೆ ಹೇಳಿದ ಶ್ರುತಿ ಸ್ಮೃತಿ ಇತಿಹಾಸ ಪುರಾಣ ಲೌಕಿಕಯುಕ್ತಿ ಇತ್ಯಾದಿಗಳಿಂದ ಶ್ರೀ ವಿಷ್ಣುವೇ ಸರ್ವೋತ್ತಮನೆಂದೂ ಸೃಷ್ಟ್ಯಾದ್ಯಷ್ಟಕರ್ತನೆಂದೂ, ಸಿದ್ಧಿಸುತ್ತದೆ. ಹೀಗೆಯೇ ಇನ್ನೂ ಸಾವಿರಾರು ಶ್ರುತ್ಯಾದಿಗಳು ಜಗಜ್ಜನ್ಮಾದಿಕಾರಣನಾದ ಲಕ್ಷ್ಮೀಪತಿಯಾದ ಶ್ರೀ ನಾರಾಯಣನಿಗೇನೇ ಸರ್ವೋತ್ತಮತ್ವವನ್ನು ಸಾಧಿಸುತ್ತವೆ.

**ನ ಮುಕ್ತೌ ವಿಷ್ಣುನೈಕ್ಯಂ ವಾ ಮುಕ್ತಾನಾಂ ಸಾಮ್ಯಮೇವ ವಾ ॥** ಮುಕ್ತಿಯಲ್ಲಿ ಮುಕ್ತರಿಗೆ ಶ್ರೀ ವಿಷ್ಣುವಿನಿಂದ ಐಕ್ಯವಾಗಲೀ ಸಾಮ್ಯವಾಗಲೀ ಸರ್ವಥಾ ಕೂಡುವುದಿಲ್ಲವೆಂಬುವುದು ಹಿಂದೆ ಉದಾಹರಿಸಿರುವ ಶ್ರುತಿ ಸ್ಮೃತ್ಯಾದಿಗಳಿಂದಲೇ ಸಿದ್ಧವಾಗುವುದು. (1) ಅಲ್ಲದೆ ಭಗವದ್ಗೀತೆಯಲ್ಲಿ ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಎಂದು ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಉಪದೇಶಿಸಿರುವನು. (2) ಮುಕ್ತಾನಾಂ ಪತಯೋ ದೇವಾಃ ದೇವಾನಾಂ ಚ ಪ್ರಜಾಪತಿಃ । ತಸ್ಯ ವಿಷ್ಣುರ್ನಚೈವೇದಂ ಪಾರಾವರ್ಯಂ ವಿನಶ್ಯತಿ ॥ ಮುಕ್ತರಾದ ಮನುಷ್ಯೋತ್ತಮರಿಗೆ ದೇವತೆಗಳು ಅಧಿಪತಿಗಳು. ದೇವತೆಗಳಿಗೆ ಚತುರ್ಮುಖನು. ಚತುರ್ಮುಖನಿಗೆ ವಿಷ್ಣುವು ಅಧಿಪತಿಯು. ಮುಕ್ತಿಯಲ್ಲಿಯೂ ನೀಚೋಚ್ಚಭಾವವು ಇದ್ದೇ ಇದೆ. ನಷ್ಟವಾಗುವುದಿಲ್ಲ. (3) ಹಾಗಾದರೆ ಪರೇಽವ್ಯಯೇ ಸರ್ವ ಏಕೀಭವಂತಿ ಇತ್ಯಾದಿ ಐಕ್ಯಪ್ರತಿಪಾದಕ ಶ್ರುತಿಗಳು ಹೇಗೆ ಉಪಪನ್ನವಾಗುವುದು ಎಂದರೆ - ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯ ಮೇವ ತು । ಏಕಸ್ಥಾನನಿವಾಸೋವಾ ವ್ಯಕ್ತಿಸ್ಥಾನಮಪೇಕ್ಷ್ಯಸಃ ॥ ನ ಸ್ವರೂಪೈಕತಾ ತಸ್ಯ ಮುಕ್ತಸ್ಯಾಪಿ ವಿರೂಪತಃ ॥ ಸ್ವಾತಂತ್ರ್ಯ ಪೂರ್ಣತೇಽಲ್ಪತ್ವಪಾರತಂತ್ರ್ಯೇ ವಿರೂಪತಾ ॥ ಇತಿ ಪರಮಶ್ರುತಿಃ ॥ ಮುಕ್ತರಿಗೆ ಪರಬ್ರಹ್ಮನಿಂದ ಐಕ್ಯವೆಂದರೆ ಬುದ್ಧಿ ಸಾಮ್ಯವೇ ಅಥವಾ ಒಂದೇ ಸ್ಥಾನದಲ್ಲಿ ಆವಾಸವು, ಏತಕ್ಕೆ ಹೀಗೆ ಅರ್ಥಮಾಡಬೇಕೆಂದರೆ ಬ್ರಹ್ಮನಿಗೆ ಸರ್ವಸ್ವಾತಂತ್ರ್ಯ ಸರ್ವಗುಣ ಪರಿಪೂರ್ಣತ್ವಗಳೂ, ಮುಕ್ತರಿಗೆ ಗುಣಾಲ್ಪತ್ವವೂ, ಪರಾಧೀನತ್ವವೂ ಇದ್ದುದರಿಂದ ಪರಬ್ರಹ್ಮನಿಂದ ಸ್ವರೂಪೈಕ್ಯವು ಸರ್ವಥಾ ಕೂಡುವುದಿಲ್ಲ. ಹೀಗೆ ಸಾಮಾನ್ಯತಃ ಐಕ್ಯಪರವಾಗಿ ತೋರುವ ಶ್ರುತಿಗಳಿಗೆ ನಿರವಕಾಶವಾದ ಪ್ರಮಾಣಬಲದಿಂದ ಮುಕ್ತಿಯಲ್ಲಿಯೂ ಭೇದವನ್ನೇ ಹೇಳಬೇಕಲ್ಲದೆ ಐಕ್ಯವನ್ನಾಗಲೀ ಸಾಮ್ಯವನ್ನಾಗಲೀ ಸರ್ವಥಾ ಹೇಳಕೂಡದು. (4) ಸರ್ವೇವೇದಾ ಹರೇರ್ಭೇದಂ ಸರ್ವಸ್ಮಾಜ್ಜ್ಞಾಪಯಂತಿ ಹಿ । ಎಂಬೀ ನಾರಾಯಣ ಶ್ರುತಿಯಲ್ಲಿ ಬ್ರಹ್ಮಾದಿಗಳಿಂದ ಶ್ರೀ ಹರಿಗೆ ಭೇದವೇ ಇರುವುದು ಎಂದು ಸಮಸ್ತ ವೇದಗಳೂ ಸಾರುತ್ತಿವೆ ಎಂದು ನಿರೂಪಿಸಿದೆ (5) ತಸ್ಮಾನ್ನ ಮುಕ್ತಾ ನ ಚ ಸಾ ನ ಕ್ವಚಿದ್ವಿಷ್ಣುವೈಭವಂ । ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ ॥ ಮುಕ್ತರಾದ ಬ್ರಹ್ಮಾದಿಗಳಾಗಲೀ, ಲಕ್ಷ್ಮೀದೇವಿಯಾಗಲೀ ಯಾರೂ ಕೂಡ ಶ್ರೀ ವಿಷ್ಣುವಿನ ಐಶ್ವರ್ಯವನ್ನು ಹೊಂದಲಾರರು. ಆತನೊಬ್ಬನೇ ಸರ್ವಸ್ವತಂತ್ರನು. ಸರ್ವಗುಣ ಪರಿಪೂರ್ಣನು ಎಂದು ಪರಮ ಶ್ರುತಿಯಲ್ಲಿ ನಿರೂಪಿಸಿದೆ. ಇತ್ಯಾದಿ ಪ್ರಮಾಣಗಳಿಂದ ಮುಕ್ತಿಯಲ್ಲಿಯೂ ಮುಕ್ತರಿಗೆ ಶ್ರೀವಿಷ್ಣುವಿನಿಂದ ಐಕ್ಯವನ್ನಾಗಲೀ, ಸಾಮ್ಯವನ್ನಾಗಲೀ ಸರ್ವಥಾ ತಿಳಿಯಕೂಡದು. ॥೧೯॥೨೦॥೨೧॥೨೨॥

ಅವ ॥ ಗುರುಗಳು ಶಿಷ್ಯನಿಗೆ ಸಮಯಗಳನ್ನು ಹೇಗೆ ಶಿಕ್ಷಿಸಬೇಕು ಎಂದರೆ -

**ಮೂ ॥ ನಿತ್ಯಶಶ್ಚ ಹರೇಃ ಪೂಜಾ ಜಪಧ್ಯಾನ ಸಮರ್ಪಣಂ । ಕರ್ತವ್ಯಂ ತು ತ್ವಯಾ ವತ್ಸ ಜಪಶ್ಚ ತ್ರಿಸಹಸ್ರಕಃ ॥೨೩॥ ಮಧ್ಯಮಃ ಪ್ರಣವಸ್ಯೋಕ್ತೋ ಯೋಽವರಸ್ಸ ಸಹಸ್ರಕಃ । ತ್ರಿಸಹಸ್ರಾತ್ಪರೋ ಯಸ್ಸು ಸ ಉತ್ತಮಜಪಃ ಸ್ಮೃತಃ ॥೨೪॥**

ಅ|| ಎಲೋ ಶಿಷ್ಯನೇ, ನಿನ್ನಿಂದ ಪ್ರತಿನಿತ್ಯವೂ ಶ್ರೀಹರಿಯ ಪೂಜೆ ಜಪಧ್ಯಾನಗಳ ಸಮರ್ಪಣೆಯು ಮಾಡಲ್ಪಡತಕ್ಕದು. (ಅಂದರೆ ಭಗವಂತನ ಪೂಜೆ ಜಪಧ್ಯಾನಗಳನ್ನು ಶ್ರೀಹರಿಯಲ್ಲಿ ಸಮರ್ಪಿಸಬೇಕು. (೩೦೦೦) ಮೂರುಸಹಸ್ರ ಪ್ರಣವ ಜಪವು ಮಧ್ಯಮವೆಂದು ಹೇಳಲ್ಪಟ್ಟಿದೆ. ಯಾವುದು ಒಂದು ಸಹಸ್ರ (೧೦೦೦) ಪ್ರಣವ ಜಪವೋ ಅದು ಅವರ (ನಿಕೃಷ್ಟ)ವು ಎನಿಸುತ್ತದೆ. ಯಾವುದು ಮೂರು ಸಹಸ್ರ (೩೦೦೦) ಪ್ರಣವ ಜಪಕ್ಕಿಂತ ಹೆಚ್ಚು ಜಪವೋ ಅದು ಉತ್ತಮ ಜಪವೆಂದು ಸ್ಮೃತವಾಗಿದೆ.

ವಿ|| (೧) ಪೂಜಾ=ಪೂಜ ಪೂಜಾಯಾಂ, ಚಿಂತಿಪೂಜಿ ಇತ್ಯಾದಿಯಿಂದ ಅಙ್ ಪ್ರತ್ಯಯವು. ನಮಸ್ಕರಣವು ಸಾಷ್ಟಾಂಗ ಪ್ರಣಾಮವು. ಅದು ಕಾಯಿಕ, ವಾಚಿಕ, ಮಾನಸಿಕ ಎಂದು ೩ ವಿಧವು. ಕಾಯಿಕ = ದಂಡವತ್ಪ್ರಣಾಮವು. ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ । ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ ಹೀಗೆ ಅಷ್ಟಾಂಗಯುಕ್ತವಾದುದು ನಮಸ್ಕಾರವು. ವಾಚಿಕ = ಹರಯೇ ನಮಃ ಎಂದು ಹೇಳುವುದು. ಮಾನಸಿಕ = ಮನಸ್ಸಿನಿಂದಲೇ ಯೋಚಿಸುವುದು. (೨) ಜಪಃ = ಜಕಾರೋ ಜನ್ಮವಿಚ್ಛೇದಃ ಪಕಾರಃ ಪಾಪನಾಶನಃ । ತಸ್ಮಾಜ್ಜಪ ಇತಿ ಪ್ರೋಕ್ತಃ ಜನ್ಮಪಾಪವಿನಾಶತಃ ॥ ಪುನರ್ಜನ್ಮ ಪಾಪಗಳನ್ನು ವಿನಾಶಗೊಳಿಸುವುದರಿಂದ ಜಪವೆನ್ನಿಸುವುದು. ಜಪಃ ಸ್ವಾಧ್ಯಾಯವು ಬಹ್ವಾವೃತ್ತಿ ಅಧ್ಯಯನವು.

(೩) ಧ್ಯಾನಂ ॥ ದ್ವಿವಿಧಾ ಸಾ ಚ ಸಂಪ್ರೋಕ್ತಾ ವಿಷ್ಣುಶಾಸ್ತ್ರಾವಮರ್ಶನಂ । ಏಕಂ ಧ್ಯಾನಂ ಹರೇರನ್ಯತ್. ಅಂದರೆ ಅಪರೋಕ್ಷಜ್ಞಾನಕ್ಕೆ ಸಾಧನಭೂತವಾದ ಉಪಾಸನೆಯೆಂಬ ನಿದಿಧ್ಯಾಸನವು (1) ವಿಷ್ಣುಶಾಸ್ತ್ರಾವಮರ್ಶರೂಪವಾದುದು (2) ಶ್ರೀ ಹರಿಯ ಧ್ಯಾನರೂಪವಾದುದು ಹೀಗೆ ೨ ವಿಧವು ಅದರಲ್ಲಿ (1) ವಿಷ್ಣುಶಾಸ್ತ್ರಾವಮರ್ಶವೆಂದರೆ ಸಚ್ಛಾಸ್ತ್ರ ಶ್ರವಣಮನನಗಳಿಂದ ಚೆನ್ನಾಗಿ ತತ್ತ್ವ ನಿಶ್ಚಯವಾದ ಮೇಲೆ ಕೇವಲ ಅಪರೋಕ್ಷ ಜ್ಞಾನಕ್ಕಾಗಿಯೇ ತಾನಾಗಿಯೇ ನಿರಂತರದಲ್ಲಿಯೂ ವಿಷ್ಣುಸರ್ವೋತ್ತಮತ್ವ ಪ್ರತಿಪಾದಕವಾದ ಶಾಸ್ತ್ರವನ್ನು ವಿಚಾರ ಮಾಡುವುದು. ಅಥವಾ ಶಿಷ್ಯರಿಗೆ ವಿಷ್ಣುಸರ್ವೋತ್ತಮತ್ವಪ್ರತಿಪಾದಕವಾದ ಶಾಸ್ತ್ರವನ್ನುಪದೇಶಿಸುವುದು. ಅತ ಏವ "ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ" । ಎಂದು ಹೇಳುವರು. (2) ಧ್ಯಾನಂ ॥ ಇತರ ತಿರಸ್ಕಾರಪೂರ್ವಕ ಭಗದ್ವಿಷಯಕ ಅಖಂಡ ಸ್ಮರಣೆಯು ಅಥವಾ ಸಮಾಧಿಯು ಅದುವೇ ಸಾಕ್ಷಾತ್ ಅಪರೋಕ್ಷಜ್ಞಾನಕ್ಕೆ ಸಾಧನವಾದುದು. ಅಥವಾ ಖಂಡಾಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ । ಅಪ್ರಯತ್ನಾತ್ಸಮಾಧಿಶ್ಚ ದರ್ಶನಂ ಚಿರಯಾನಯಾ ॥ ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ ॥ (ಎಂದು ತಂತ್ರಸಾರ) ಸಚ್ಛಾಸ್ತ್ರಶ್ರವಣದರ್ಶನಾದಿಗಳಿಂದುಂಟಾದ ವಾಸನಾ (ಸಂಸ್ಕಾರ) ಮಯವಾದ ವಸ್ತುವನ್ನು ಮನಸ್ಸಿನಿಂದ ನೋಡುವುದು ಸ್ಮೃತಿಯು. ಅಂತಹ ಸ್ಮೃತಿಯು (1) ಖಂಡಸ್ಮೃತಿ (2) ಅಖಂಡ ಸ್ಮೃತಿ ಎಂದು ೨ ವಿಧವು. ಅದರಲ್ಲಿಯೂ ಆ ಅಖಂಡ ಸ್ಮೃತಿಯು (1) ಧ್ಯಾನರೂಪವು (2) ಸಮಾಧಿ ರೂಪವು ಎಂದು ೨ ವಿಧವು. ಅದರಲ್ಲಿ ಖಂಡಸ್ಮೃತಿಯು (ಒಂದೊಂದು ಅವಯವದ ಸ್ಮೃತಿಯು) ಧಾರಣಾ ಎನಿಸುತ್ತದೆ. ಅಖಂಡ ಸ್ಮೃತಿಯು (ಅಂದರೆ ಶ್ರೀ ಭಗವಂತನ ಸಮಸ್ತ ಅವಯವವಿಷಯಕವಾದಸ್ಮೃತಿಯು) ಧ್ಯಾನವೆನಿಸುತ್ತದೆ.ಅಥವಾ ಕೆಲವು ಕಾಲದಲ್ಲಿ ಸ್ಮೃತಿಯು ಕೆಲವುಕಾಲದಲ್ಲಿ ಸ್ಮೃತಿಯಿಲ್ಲದಿರುವುದು ಧಾರಣಾ ಎನಿಸುತ್ತದೆ. ಬಹುಕಾಲದಲ್ಲಿರತಕ್ಕ ಸ್ಮೃತಿಯು ಧ್ಯಾನವೆನಿಸುತ್ತದೆ. ಅತ ಏವ ನೈರಂತರ್ಯಂ ಮನೋವೃತ್ತೇರ್ಧ್ಯಾನಮಿತ್ಯುಚ್ಯತೇ ಬುಧೈಃ ॥ ಎಂದು ಸೂತ್ರ ಭಾಷ್ಯವು. (2) ಧ್ಯಾನಾದಿ ರೂಪವಾದ ಪ್ರಯತ್ನ ಮಾಡದಿದ್ದರೂ ಸರ್ವದಾ ಇರತಕ್ಕ ವಿಶಿಷ್ಟ ಅಂಗಗಳ ಸ್ಮೃತಿಯು ಸಮಾಧಿಯು. ಪ್ರಯತ್ನವಿಲ್ಲದೇನೇ ಬಹುಕಾಲದಲ್ಲಿ ಅನುವೃತ್ತನಾದ ಸಮಾಧಿಯೆಂಬ ಸ್ಮೃತಿಯಿಂದ ಅಪರೋಕ್ಷ ಜ್ಞಾನವುಂಟಾಗುತ್ತದೆ. ಅಥವಾ ಸರ್ವದಾ ವಿಚ್ಛೇದನವಿಲ್ಲದೇನೇ ಶಾಸ್ತ್ರವಿಚಾರದಿಂದ ಅಪರೋಕ್ಷ ಜ್ಞಾನವುಂಟಾಗುತ್ತದೆ. ಧ್ಯಾನವೇ ನಿದಿಧ್ಯಾಸನವು. ಧ್ಯಾನ ಸಮಾಧಿಗಳಿಗೆ ಹೆಚ್ಚು ಭೇದವಿಲ್ಲದಿರುವುದರಿಂದ ಧ್ಯಾನಶಬ್ದದಿಂದ ಸಮಾಧಿಯನ್ನು ಇಟ್ಟುಕೊಳ್ಳಬೇಕು. (3) ಧ್ಯಾನಂ ನಿಶ್ಚಿತತತ್ತ್ವಸ್ಯ ವಿಷ್ಣುಶಾಸ್ತ್ರಾ ವಮರ್ಶನಂ ॥ ಶ್ರವಣ ಮನನಗಳಿಂದ ಅಜ್ಞಾನ ಸಂಶಯ ವಿಪರ್ಯಯಗಳನ್ನು ಕಳಕೊಂಡು ತತ್ತ್ವನಿಶ್ಚಯ ಮಾಡಿಕೊಂಡ ಪುರುಷನಿಗೆ ಧ್ಯಾನ ಮತ್ತು ಶಾಸ್ತ್ರಾಭ್ಯಾಸರೂಪ ನಿದಿಧ್ಯಾಸನೆಯು ಮುಖ್ಯವು. (4) ಸ್ವಾಧ್ಯಾಯೋತಃ ಕೋಟಿಗುಣಸ್ತತೋಽನಂತ ಗುಣಾ ಹರೇಃ । ಪೂಜಾತತ್ತ್ರಿಗುಣಂ ಧ್ಯಾನಮಿತಿ ಧರ್ಮಕ್ರಮಃ ಸ್ಮೃತಃ ॥ ತುಷ್ಟಿಗಿಂತಲೂ ಶಾಸ್ತ್ರಾಧ್ಯಯನವು ಕೋಟಿಪಾಲು ಮಿಗಿಲಾಗಿದೆ. ಅದಕ್ಕಿಂತಲೂ ಶ್ರೀ ಹರಿಯ ಪೂಜೆಯು ಅನಂತಾನಂತ ಗುಣಗಳಿಂದ ಉತ್ತಮವಾಗಿದೆ. ಅಂತಹ ಶ್ರೀ ಹರಿ ಪೂಜೆಗಿಂತಲೂ ಧ್ಯಾನವು ಮೂರು ಪಾಲು ಶ್ರೇಷ್ಠವಾಗಿದೆ. ಧರ್ಮ ಸಾಧನಗಳಾದ

ಪ್ರಾಣಾಯಾಮಾದಿಗಳ ತಾರತಮ್ಯ ಕ್ರಮವು ಈ ರೀತಿಯಾದುದು.

(5) ಅಂತಹಧ್ಯಾನಕ್ಕೆ (1) ಯಮ, (2) ನಿಯಮ (3) ಆಸನ (4) ಪ್ರಾಣಾಯಾಮ, ಎಂದು ೪ ಅಂಗಗಳು. ಅವುಗಳಲ್ಲಿ ಯಮಾಃ = ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳು (೧) ಅಹಿಂಸಾ = ಯಾಜ್ಞವಲ್ಕ್ಯ: ಕರ್ಮಣಾ ಮನಸಾ ವಾಚಾ ಸರ್ವಭೂತೇಷು `ಸರ್ವದಾ । ಅಕ್ಲೇಶಜನನಂ ಪ್ರೋಕ್ತಮಹಿಂಸಾತ್ವೇನ ಯೋಗಿಭಿಃ ॥ (೨) ಸತ್ಯಂ =ಸತ್ಯಂ ಭೂತಹಿತಂ ಪ್ರೋಕ್ತಂ ನ ಯಥಾರ್ಥಾಭಿಭಾಷಣಂ (೩) ಅಸ್ತೇಯಂ = ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಸ್ಪೃಹಃ । ಅಸ್ತೇಯಮಿತಿ ಸಂಪ್ರೋಕ್ತಂ (೪) ಬ್ರಹ್ಮಚರ್ಯ = ಕರ್ಮಣಾ ಮನಸಾ ವಾಚಾ ಪರದ್ರವ್ಯೇಷು ನಿಸ್ಪೃಹಃ । ಅಸ್ತೇಯಮಿತಿ ಸಂಪ್ರೋಕ್ತಂ (೪) ಬ್ರಹ್ಮಚರ್ಯ = ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವಥಾ । ಸರ್ವತ್ರ ಮೈಥುನತ್ಯಾಗಃ ಬ್ರಹ್ಮಚರ್ಯಂ ಪ್ರಚಕ್ಷತೇ ॥ ಅಷ್ಟವಿಧ ಮೈಥುನತ್ಯಾಗವು ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ । ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ॥ ಏತನ್ಮೈಥುನಮಷ್ಟಾಂಗಂ (೫) ಅಪರಿಗ್ರಹಃ = ಲೌಕಿಕ ವಾಗ್ವ್ಯಾಪಾರವಿಲ್ಲದಿರುವಿಕೆ. ಅಂದರೆ ವೈರಾಗ್ಯವು. ಅಥವಾ ಯದ್ವಾ ತದ್ವಾ ಪರದ್ರವ್ಯಮಪಹೃತ್ಯ ಬಲಾನ್ನರಃ । ಅವಶ್ಯಂ ಯಾತಿ ತಿರ್ಯಕ್ತ್ವಂ ಜಗ್ಧ್ವಾಚೆವಾಹುತಂ ಹವಿಃ ॥೧॥ ಕೌಪೀನಾಚ್ಛಾದನಂ ವಾಸಃ ಕಂಥಾಂ ಶೀತನಿವಾರಿಣೀಂ । ಪಾದುಕೇ ಚಾಪಿ ಗೃಹ್ಣೀಯಾ ತ್ಕುಯಾನ್ನಾನ್ಯಸ್ಯ ಸಂಗ್ರಹಂ ॥೨॥ ದೇಹಸ್ಥಿತಿನಿಮಿತ್ತಸ್ಯ ವಸ್ತ್ರಾದೇಃಸ್ಯಾತ್ಪರಿಗ್ರಹಃ । ಶರೀರಂ ಧರ್ಮಸಂಯುಕ್ತಂ ರಕ್ಷಣೀಯಂ ಪ್ರಯತ್ನತಃ ॥ (ಅಗ್ನಿಪುರಾಣ)

2) ನಿಯಮಾಃ = (೧) ಶೌಚಂ (೨) ತಪಃ (೩) ತುಷ್ಟಿಃ (೪) ಸ್ವಾಧ್ಯಾಯಃ (೫) ಹರಿಪೂಜನಂ ಎಂದು ೫ ವಿಧ ನಿಯಮಗಳು. (೧) ಶೌಚಂತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ । ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಮನಶ್ಶುದ್ಧಿಸ್ತಥೋತ್ತರಂ ॥೧॥ ಧರ್ಮದಿಂದಲೂ ವೇದಾಂತ ವಿದ್ಯೆಯಿಂದಲೂ ಮನಶ್ಶುದ್ಧಿಯಾಗುವುದು. (೨) ತಪಃ=ಜಪ ಹೋಮಾತಿಥ್ಯ ತೀರ್ಥಾಟನ ಪರಾರ್ಥ ಚೇಷ್ಟಾರೂಪವು. ಮನಸಶ್ಚೇಂದ್ರಿಯಾಣಾಂಚ ಐಕಾಗ್ರ್ಯಂ ತಪ ಉಚ್ಯತೇ ॥ ಇತಿ (೩) ತುಷ್ಟಿಃ = ವಿಷಯಗಳಲ್ಲಿ ಅಲಂಬುದ್ಧಿಯು ಯಥಾ ಕಥಂ ಚಿತ್ಪ್ರಾಪ್ತ್ಯಾಚ ಸಂತೋಷಸ್ತುಷ್ಟಿರುಚ್ಯತೇ ॥ ಇತಿ (೪) ಸ್ವಾಧ್ಯಾಯಃ = ವೇದಗಳ ಅಧ್ಯಯನವು ಮತ್ತು ಆಚಾರ್ಯಸೇವನವು. ಗುರವಃ ಪಂಚ ಸರ್ವೇಷಾಂ ಚತುರ್ಣಾಂ ಶ್ರುತಿಚೋದಿತಾಃ। ಮಾತಾಪಿತಾ ತಥಾಽಽಚಾರ್ಯೋ ಮಾತುಲಃ ಶ್ವಶುರಸ್ತಥಾ ॥ ಏಷಾಂ ಮುಖ್ಯಾಸ್ತ್ರಯಃ ಪ್ರೋಕ್ತಾಃ ಆಚಾರ್ಯಃಪಿತರೌ ತಥಾ ॥ ಏಷಾಂ ಮುಖ್ಯತಮಸ್ತ್ವೇಕಃ ಆಚಾರ್ಯಃ ಪರಮಾರ್ಥವಿತ್ ॥ ಇತಿದಕ್ಷಃ ॥ (೫) ಹರಿಪೂಜನಂ = (ತಂತ್ರಸಾರದ) ಪ್ರಥಮಾಧ್ಯಾಯದಲ್ಲಿ ಹೇಳಿದ ಪ್ರಕಾರ ಷೋಡಶೋಪಚಾರಗಳಿಂದ ನಿತ್ಯದಲ್ಲಿಯೂ ಶ್ರೀ ಹರಿಯ ಪೂಜೆಯು ಇವು ಐದು ನಿಯಮಗಳು (3) ಆಸನಂ = (೧) ವೀರಾಸನ (೨) ಪದ್ಮಾಸನ (೩) ಸ್ವಸ್ತಿಕಾಸನ (೪) ಸಿದ್ಧಾಸನ (೫) ಭದ್ರಾಸನ ಮೊದಲಾದವುಗಳು ಅಥವಾ ಪದ್ಮಾಸನಂ ಸ್ವಸ್ತಿಕಾಖ್ಯಂ ವಜ್ರಂ ಭದ್ರಾಸನಂ ತಥಾ । ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನಪಂಚಕಂ ॥ ಎಂದು ಐದು ಆಸನಗಳು. ಪ್ರಾಣಾಯಾಮಾಃ (೧) ರೇಚಕ, (೨) ಪೂರಕ, (೩) ಕುಂಭಕ ಎಂದು ಪ್ರಾಣಾಯಾಮವು ಮೂರು ವಿಧವು. ಪ್ರಾಣಸ್ಸ್ವದೇಹಗೋ ವಾಯುಸ್ತಸ್ಯ ವಾಯೋರ್ನಿರೋಧನಂ । ತದ್ರೇಚನಂ ಪೂರಕಂ ಚ ಕುಂಭಕಂ ಚ ತ್ರಿಧೋಚ್ಯತೇ ॥ (5) ಅಂತಹ ಪ್ರಾಣಾಯಾಮವು ಕೆಲವು ಆಗಮಗಳಲ್ಲಿ ನಿಯಮವೆಂದೂ ಕೆಲವೆಡೆ ನಿದಿಧ್ಯಾಸನವೆಂದೂ ಕೆಲವೆಡೆ ಧ್ಯಾನವೆಂದೂ ಉಕ್ತವಾಗಿದೆ. ಹೇಗೆಂದರೆ ವಿಷ್ಣುವಿನ ಸ್ಮರಣೆಯಿಲ್ಲದೆ ಕೇವಲ ಮಂತ್ರೋಚ್ಚಾರಣ ಅಥವಾ ಪಾರಾಯಣಾದಿ ರೂಪವಾದ ಸ್ವಾಧ್ಯಾಯವು ನಿಯಮದಲ್ಲಿಯೂ, ಮಂತ್ರೋಚ್ಚಾರಣ ಮಂತ್ರವಾಚ್ಯದೇವತಾಸ್ಮರಣಗಳಿಂದ ಯುಕ್ತವಾದ ಶಾಸ್ತ್ರಾಧ್ಯಾಯನವು ನಿದಿಧ್ಯಾಸನ ರೂಪವಾದ ಉಪಾಸನೆಯಲ್ಲಿಯೂ ಮಂತ್ರೋಚ್ಚಾರಣವಿಲ್ಲದೆ ಶ್ರೀ ವಿಷ್ಣುಸ್ಮರಣ ಪೂರ್ವಕವೇ ಆದ ಪ್ರಾಣಾಯಾಮವು ಧ್ಯಾನದಲ್ಲಿಯೂ ಅಂತರ್ಗತವಾಗುವುದು.

ಸಮರ್ಪಣವೆಂದರೆ ಪ್ರತಿಕ್ಷಣದಲ್ಲಿ ಕರ್ಮಗಳನ್ನು ಮಾಡುವಾಗ ಶ್ರೀ ಹರಿಯನ್ನು ಸ್ಮರಿಸಿಕೊಂಡು ಶ್ರೀ ಕೃಷ್ಣನು ಇದರಿಂದ ಪ್ರೀತನಾಗಲಿ ಎಂದು ಕೃಷ್ಣಾರ್ಪಣವನ್ನು ಮಾಡುವುದು. (೧) ಕುರ್ವನ್ ಕರ್ಮಫಲತ್ಯಾಗೀ ಕುರ್ವನ್ ವಿಷ್ಣ್ವರ್ಪಣಂತಥಾ । ತತೋಽಂತಃಕರಣಶುದ್ಧಿಃ ತದ್ದ್ವಾರಾ ಜ್ಞಾನಮಾಪ್ನುಯಾತ್ ॥೧॥ ಅನುಷ್ಠಾತಾ ತಪಸ್ವೀಚ ಸರ್ವಧರ್ಮಪರೋಽಪಿ ವಾ ವಿನಾ ಮದರ್ಪಣಂ ಸಮ್ಯಕ್ ಫಲಂ ನಾಪ್ನೋತ್ಯಸಂಶಯಂ ॥೨॥ ದೇಹಿನಾಂ ಯಾಃ ಪ್ರವರ್ತಂತೇ ಪ್ರಾತರಾರಭ್ಯ ಸತ್ಕ್ರಿಯಾಃ । ತಾಶ್ಚ ವಿಷ್ಣ್ವರ್ಪಣಂ ಕುರ್ಯಾತ್ಕರ್ಮಪಾಶಾದ್ವಿಮುಚ್ಯತೇ ॥೩॥ ಇತಿವಾಯುಪುರಾಣೇ (೨) ವಿಷ್ಣೋರರ್ಥೇ ಕರಿಷ್ಯಾಮಿ ಚಾಹರಾಮಿ

ದದಾಮಿ ಚ । ನಾತ್ಮಾರ್ಥಮಿತಿ ವೈ ಕ್ವಾಪಿ ವದನ್ ಕರ್ಮ ಕರೋತಿ ಯಃ ॥೧॥ ಶ್ರುತಿಸ್ಮೃತೀ ಹರೇರಾಜ್ಞಾ ತಸ್ಯಾಹಮನುಗಸ್ಸದಾ । ತಸ್ಯ ಹ್ಯಾಜ್ಞಾಧರೋ ಭೂತ್ವಾ ಯಾವಜ್ಜೀವಂ ವಸಾಮ್ಯಹಂ ॥೨॥ ಇತ್ಥಂ ಜಪನ್ ಸದಾ ಕುರ್ವನ್ ಧ್ಯಾಯೇದ್ವಿಷ್ಣುಮತಂದ್ರಿತಃ ॥ ಇತಿ ವಾಯು ಪುರಾಣೇ ॥ (೩) ನಾಹಂಕರ್ತಾ ಹರಿ ಕರ್ತಾ ತತ್ಪೂಜಾ ಕರ್ಮ ಚಾಖಿಲಂ । ತಥಾಽಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ॥೧॥ ತದ್ಭಕ್ತಿಸ್ತಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ । ಕರ್ಮನ್ಯಾಸೋ ಹರಾವೇವಂ ವಿಷ್ಣೋಸ್ತೃಪ್ತಿಕರಸ್ಸದಾ ॥೨॥ ಆದಕಾರಣ ತಾನು ಮಾಡಿದ ಎಲ್ಲಾ ಯಜ್ಞಾದಿ ಕರ್ಮಗಳನ್ನು ಶ್ರೀವಿಷ್ಣುವಿಗೇನೇ ಸಮರ್ಪಿಸಬೇಕು. ಅಂದರೆ ಎಲೋ ಶ್ರೀಹರಿಯೇ ಎಲ್ಲವೂ ನಿನ್ನದ್ದೇ ಆಗಿರುತ್ತದೆ. ಯಾವುದೊಂದೂ ನನ್ನದಿಲ್ಲ. ಎಂಬೀ ಜ್ಞಾನವು ನಿವೇದನವು. ಏವಂಚ ನಾನು ಮಾಡಿದ ಪೂಜಾದಿಗಳು ಎಲ್ಲವೂ ಆ ಭಗವಂತನ ಪ್ರೇರಣೆಯಿಂದಲೇ ಮಾಡಿದವುಗಳು. ಆ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪ್ರೀತಿಗೇನೇ ಆಗಲಿ, ಎಂಬೀ ಬುದ್ಧಿಯಿಂದ ಅರ್ಪಿಸುವುದು. ॥೨೩+೨೪॥

ಅವ॥ ಧ್ಯಾನಾದಿಗಳನ್ನು ಹೇಗೆ ಮಾಡಬೇಕೆಂದರೆ

**ಮೂ॥ ಆತ್ಮಾನಂ ಪ್ರತಿಬಿಂಬತ್ವೇ ಧ್ಯಾಯನ್ ಬಿಂಬಂ ಜನಾರ್ದನಂ । ಧ್ಯಾಯಸ್ವ ಸತತಂ ವತ್ಸ ಸಪರ್ಯಾಂ ನಿತ್ಯಶಃ ಕುರು ॥೨೫॥**

ಅ॥ ಪ್ರಿಯ ಶಿಷ್ಯನೇ, ತನ್ನನ್ನು ಪ್ರತಿಬಿಂಬತ್ವದಲ್ಲಿ (ಅಂದರೆ ತನ್ನನ್ನು ಪ್ರತಿಬಿಂಬನನ್ನಾಗಿ) ಧ್ಯಾನಿಸುತ್ತಾ ದುರ್ಜನ ಸಂಹಾರಕನಾದ ಶ್ರೀಪರಮಾತ್ಮನನ್ನು ಬಿಂಬರೂಪವನ್ನಾಗಿ ಪ್ರತಿನಿತ್ಯವೂ ಧ್ಯಾನಿಸುತ್ತಿರು. ಮತ್ತು ಶ್ರೀಹರಿಯ ಪೂಜೆಯನ್ನು ನಿತ್ಯದಲ್ಲಿಯೂ ಮಾಡು. ॥೧॥

ವಿ॥ (1) ಯಾರಿಗೆ ಬಾಹ್ಯೋಪಾಸನೆಯಿಂದಲೇ ಮೋಕ್ಷವಾಗುವುದೋ ಅಂತಹವರೂ ಕೂಡ ತಮ್ಮ ಹೃದಯದಲ್ಲಿರತಕ್ಕ ಭಗವದ್ರೂಪದಿಂದ ವಿಶೇಷ ಸಂಬಂಧವಿದೆ ಎಂದು ತೋರಿಸುವುದಕ್ಕಾಗಿ ತಂತಮ್ಮ ಹೃದಯದಲ್ಲಿರತಕ್ಕ ಬಿಂಬರೂಪನಾದ ಶ್ರೀ ಹರಿಯ ಉಪಾಸನವನ್ನು ಸ್ವಲ್ಪ ಮಾಡಲೇಬೇಕು. ಅತ ಏವ ಹೃದ್ಯುಪಾಸ್ಯ ಹರಿಂ ಪುನಃ । ಮುಕ್ತಿಮೇತ್ಯಥ ಯೋ ಬಾಹ್ಯಾನ್ ಮುಕ್ತಿಮೇಷ್ಯತಿ ಸೋಽಪಿತಃ ॥ ಹೃದಿ ಕಿಂಚಿದುಪಾಸ್ಯೈವ ವಿಷ್ಣುಂ ಮುಕ್ತಿಮುಪವ್ರಜೇತ್ ॥ ಎಂದು ಬೃಹದ್ಭಾಷ್ಯದಲ್ಲಿ ಹೇಳಿದಂತೆ ಸರ್ವರೂ ಬಿಂಬರೂಪಭಗವದ್ರೂಪವನ್ನುಪಾಸನಾ ಮಾಡಲೇಬೇಕು. (2) ಹೃದಯದಲ್ಲಿ ಸರ್ವದಾ ಪ್ರಾಜ್ಞರೂಪಿಯಾದ ಶ್ರೀ ಪರಮಾತ್ಮನೇ ನಿಯಾಮಕನಾಗಿಯೂ, ಆಶ್ರಯನಾಗಿಯೂ ಇದ್ದುದರಿಂದ ಪ್ರಾಜ್ಞರೂಪಿಪರಮಾತ್ಮನೇ ಬಿಂಬರೂಪನೆಂದು ಇಟ್ಟುಕೊಳ್ಳಬೇಕೆಂದು ಸಂಪ್ರದಾಯಭಿಜ್ಞರು ಹೇಳುತ್ತಾರೆ. (3) ಹೃದಯೇ ಸರ್ವಶೋವ್ಯಾಪೀ ಪ್ರಾದೇಶಃ ಪುರುಷೋತ್ತಮಃ ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೈವ ಸನಾತನಃ ॥೧॥ ಹೃತ್ತರ್ಣಿಕಾ ಮೂಲಗತಃ ಸೋಂಽಗುಷ್ಠಾಗ್ರ ಪ್ರಮಾಣಕಃ ॥ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥೨॥ ಅಂಗುಷ್ಠಮಾತ್ರೇ ಪುರುಷೇ ಕಣಿಕಾಗ್ರಸ್ಥಿತೇ ಹರೌ ॥ ಪ್ರವಿಶಂತಿ ಸುಷುಪ್ತೌತು ಪ್ರಬುದ್ಧ್ಯಂತೇ ತತಸ್ತಥಾ ॥೩॥ ಸೋಽಯಂ ತ್ರಿರೂಪೋ ಭಗವಾನ್ ಹೃದಯಾಖ್ಯಃಪ್ರಕೀರ್ತಿತಃ ॥ ಎಂದು ಬೃಹದ್ಭಾಷ್ಯ. ಅಂದರೆ ಆ ಬಿಂಬರೂಪವು 1 ಪ್ರಾದೇಶ 2 ಮೂಲೇಶ 3 ಅಗ್ರೇಶ ಹೀಗೆ 3 ವಿಧವು (4) ಕೆಲವರು ಆತ್ಮಾ ಅಂತಾರಾತ್ಮ ಇತ್ಯಾದಿರೂಪವೇ ಬಿಂಬರೂಪವೆನ್ನುತ್ತಾರೆ (5) ಕೆಲವರು ಬಿಂಬನಾಮಕವು ರೂಪಾಂತರವೇ ಇದೆ ಎನ್ನುತ್ತಾರೆ. (6) ಹೃದಯದಲ್ಲಿರತಕ್ಕ ಪ್ರಾದೇಶ ಉಪಾಸನೆಗೆ ಯೋಗ್ಯರು ಕೆಲವರು (7) ಹೃತ್ಕರ್ಣಿಕಾ ಮೂಲದಲ್ಲಿರುವ ಅಂಕುಷ್ಠಾಗ್ರ ಪರಿಮಾಣವುಳ್ಳ ಮೂಲೇಶ ನಾಮಕ ಭಗವದ್ರೂಪೋಪಾಸಕರು ಕೆಲವರು. (8) ಹೃತ್ಕರ್ಣಿಕಾ ಅಗ್ರದಲ್ಲಿರುವ ಅಂಗುಷ್ಠ ಮಾತ್ರ ಪರಿಮಾಣವುಳ್ಳ ಅಗ್ರೇಶ ನಾಮಕ ಭಗವದ್ರೂಪೋಪಾಸಕರು ಕೆಲವರು (9) ಈ ಪ್ರಮೇಯವು ದ್ವಿತೀಯ ಸ್ಕಂದ ಭಾಗವತದಲ್ಲಿ ನಿರೂಪಿತವಾಗಿದೆ. ಕೇಜಿತ್ಸ್ವದೇಹಾಂತರ್ಹೃದಯಾವಕಾಶೇ ಪ್ರಾದೇಶಮಾತ್ರಂ ಪುರುಷಂ ವಸಂತಂ । ಚತುರ್ಭುಜಂ ಕಂಜರಥಾಂಗ ಶಂಖಗದಾಧರಂ ಧಾರಣಯಾ ಸ್ಮರಂತಿ ॥ ಇತ್ಯಾದಿ (10) ದೇಹಾಂಗುಷ್ಠಮಿತೋ ದೇಹೇ ಜೀವಾಂಗುಷ್ಠಮಿತೋ ಹೃದಿ । ಜೀವಸ್ಯ ಸತು ವಿಜ್ಞೇಯೋ ಜೀವಾದ್ಭೇದೇನ ಮುಕ್ತಯೇ ॥ (ಇತಿ ಕಾಠಕ ಭಾಷ್ಯ) (11) ಅಂಗುಷ್ಠ ಮಾತ್ರಃ ಪುರುಷೋಂತರಾತ್ಮ ಸದಾ ಜನಾನಾಂ ಹೃದಯೇ ಸನ್ನಿವಿಷ್ಟ (ಇತ್ಯಾದಿ ಕಾಠಕೋಪನಿಷತ್) (12) ಪ್ರಾದೇಶಾದಿ ಭಗವದ್ರೂಪೋಪಾಸಕರ ಭೇದವು ಬೃಹದಾರಣ್ಯಕ ಭಾವಬೋಧದಲ್ಲಿಯೂ ಉಕ್ತವಾಗಿದೆ. (13) ಸ್ವಾಧ್ಯಾಯೇನೈವ ಮೋಕ್ಷಃ

ಸ್ಮಾದ್ವಿರಕ್ತಸ್ಯ ಹರಿಸ್ಮೃತೇಃ । ಜಪ್ಯೇನೈವ ತು ಸಂಸಿದ್ಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ ॥ ........ ತಸ್ಮಾನ್ನಿತ್ಯಂ ಹರಿಂ ಧ್ಯಾಯನ್ ಕುರ್ಯಾತ್ಸ್ವಾಧ್ಯಾಯಮಂಜಸಾ ॥ಇತಿ॥ (14) ಸಮ್ಯಕ್ ಜ್ಞಾತ್ವಾ ತು ಯೋ ವಿಷ್ಣುಂ ವ್ಯಾಖ್ಯಾಯೀತ ಜಪೇತ ಚ । ನ ತಸ್ಯ ಕಿಂಚಿದಕೃತಂ ॥ (15) ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿ ಸ್ತಥೈವಚ । ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥ (ಇತಿ ಭಾಷ್ಯ) ॥೨೫॥

ಅವ ॥ ಯಾವ ಮಂತ್ರಗಳನ್ನು ಜಪಿಸಬೇಕು. ಹೇಗೆ ಜಪಿಸಬೇಕು. ಎಂದರೆ.....

**ಮೂ॥ ಮಾನಸೈರ್ವಾಥ ಪುಷ್ಪೈರ್ವಾ ಪ್ರಣವೇನ ಸಮಾಹಿತಃ । ಅನ್ಯಾಂಶ್ಚ ವೈಷ್ಣವಾನ್ ಮಂತ್ರಾನ್ ಜಪೇಥಾ ಭಕ್ತಿಪೂರ್ವಕಂ ॥೨೬॥**

ಅ॥ (ಎಲೋ ಪ್ರಿಯ ಶಿಷ್ಯನೇ, ನೀನು) ಪ್ರಣವಮಂತ್ರದಿಂದ ಸಮಾಹಿತಚಿತ್ತನಾಗಿ ಅಹಿಂಸಾ ಮೊದಲಾದ ಮಾನಸಪುಷ್ಪಗಳಿಂದಾಗಲೀ, ಪಾರಿಜಾತಾದಿ ಪುಷ್ಪಗಳಿಂದಾಗಲೀ, ಭಕ್ತಿಪೂರ್ವಕವಾಗಿ ಅಷ್ಟಮಹಾಮಂತ್ರಗಳನ್ನೂ, ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕಗಳಾದ, ಇತರ ಭೂವರಾಹ ಶ್ರೀಕರಾದಿ ಮಂತ್ರಗಳನ್ನೂ ಜಪಿಸು. ಭಕ್ತ್ಯಾ ತುಷ್ಯತಿ ಕೇವಲಂ ನತುಗುಣೈಃ ಭಕ್ತ್ಯೈಕವಶ್ಯೋ ಹರಿಃ ॥ ಎಂಬ ಪ್ರಮಾಣದಿಂದ ಭಕ್ತಿಪೂರ್ವಕವಾಗಿಯೇ ಜಪಿಸಬೇಕು.

ವಿ॥ (೧) ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ । ಸರ್ವಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ತಥೈವಚ ॥೧॥ ಜ್ಞಾನಪುಷ್ಪಂ ತಪಃ ಪುಷ್ಪಂ ಧ್ಯಾನಪುಷ್ಪಂ ತಥೈವ ಚ॥ ವಸತ್ಯಂ ಚೈವಾಷ್ಟಮಂ ಪುಷ್ಪಮೇಭಿಸ್ತುಷ್ಯತಿ ಕೇಶವಃ ॥ (೨) ಈ ಅಭಿಪ್ರಾಯದಿಂದಲೇ ಪದ್ಮಮಾಲೆಯಲ್ಲಿ ಪುಷ್ಪಾಣ್ಯಷ್ಟೌ ಸಮರ್ಪ್ಯಾಥ ಮೂಲಮಂತ್ರೇಣ ವೈಷ್ಣವಃ । ವೇದ ಮಂತ್ರೈಶ್ಚ ಪೌರಾಣೈರರ್ಪಯೇ ತ್ಕುಸುಮಾಂಜಲಿಂ ॥ ಎಂದು ಅಹಿಂಸಾ ದಮ ದಯಾ ಕ್ಷಮಾ ಜ್ಞಾನ ತಪೋ ಧ್ಯಾನ ಸತ್ಯ ಎಂಬೀ ೮ ಪುಷ್ಪಗಳನ್ನು ಸಮರ್ಪಿಸಬೇಕೆಂದು ಹೇಳಿದೆ. (೨) ವೈಷ್ಣವ ಮಂತ್ರ ಪ್ರಣವ ಮೊದಲಾದ ಅಷ್ಟಮಹಾ ಮಂತ್ರಗಳು ಹಿಂದೆ ಹೇಳಲ್ಪಟ್ಟಿವೆ. ಇತರ ವೈಷ್ಣವ ಮಂತ್ರಗಳು (1) ಭೂವರಾಹ ಮಂತ್ರ (2) ಶ್ರೀಕರ (3) ನಾರಸಿಂಹ (4) ಹಂಸಮಂತ್ರ (5) ದಧಿವಾಮನ ಮಂತ್ರ (6) ವಾಮನಾಷ್ಟಾಕ್ಷರ ಮಂತ್ರ (7) ತ್ರಿವಿಕ್ರಮಗಾಯತ್ರೀ (8) ರಾಮಷಡಕ್ಷರ (9) ಪರಶುರಾಮ (10) ದಾಶರಥಿರಾಮ (11) ಶ್ರೀಕೃಷ್ಣ ಮಂತ್ರ (12) ಕೃಷ್ಣ ಷಡಕ್ಷರ (13) ವೇದವ್ಯಾಸ ಮಂತ್ರ (14) ಹಯಗ್ರೀವ ಮಂತ್ರ (15) ಕಪಿಲ ಮಂತ್ರ (16) ದತ್ತಾತ್ರೇಯ ಮಂತ್ರ (17) ವಿಷ್ಣೋರ್ನುಕಂ ಇತ್ಯಾದಿ ವೈದಿಕ ಮಂತ್ರ (18) ಧನ್ವಂತರಿ ಮಹಾ ಮಂತ್ರ ಇದು ಮೊದಲಾದವುಗಳು ವೈಷ್ಣವ ಮಂತ್ರಗಳು.

(1) ಭಕ್ತಿಪೂರ್ವಕಂ (1) ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಸ್ಸರ್ವತೋಽಧಿಕಃ ಸ್ನೇಹೋ ಭಕ್ತಿರಿತಿಪ್ರೋಕ್ತಃ । (2) ಭಕ್ತ್ಯಾಪ್ರಸನ್ನಃ ಪರಮೋ ದದ್ಯಾಜ್ಜ್ಞಾನಮನಾಕುಲಂ । ಭಕ್ತಿಂ ಚ ಭೂಯಸೀಂ ತಾಭ್ಯಾಂ ಪ್ರಸನ್ನೋ ದರ್ಶನಂ ವ್ರಜೇತ್ ॥೨॥ ತತೋಽಪಿ ಭೂಯಸೀಂ ಭಕ್ತಿಂ ದದ್ಯಾತ್ತಾಭ್ಯಾಂ ವಿಮೋಚಯೇತ್ ॥ ಮುಕ್ತೋಽಪಿ ತದ್ವಶೋ ನಿತ್ಯಂ ಭೂಯೋಭಕ್ತಿ ಸಮನ್ವಿತಃ ॥೨॥ ಅಂದರೆ ಬಹುಕಾಲದಲ್ಲಿ ಭಕ್ತಿಪೂರ್ವಕವಾಗಿ ಶ್ರೀ ಪರಮಾತ್ಮನನ್ನು ಸೇವಿಸಿದರೆ ಸೇವೆಯಿಂದ ಸಂತುಷ್ಟನಾದ ಶ್ರೀ ಪರಮಾತ್ಮನು ಶಾಸ್ತ್ರ ತತ್ವಜ್ಞಾನವನ್ನು ಹುಟ್ಟಿಸಿ ಭಕ್ತಿಯನ್ನು ಅಧಿಕವನ್ನಾಗಿ ಮಾಡುವನು. ಅವುಗಳಿಂದ ಸಂತುಷ್ಟನಾದ ಶ್ರೀಹರಿಯು ತನ್ನ ದರ್ಶನವನ್ನು ಕೊಟ್ಟು ನಿರವಧಿಕಭಕ್ತಿಯನ್ನು ಕೊಡುವನು. ಅಂತಹ ಪರಮಭಕ್ತಿಯೇ ಮೋಕ್ಷ ಸಾಧನವು. ಮುಕ್ತಿಯಲ್ಲಿಯೂ ಭಕ್ತಿಯುಕ್ತವಾಗಿಯೇ ಇರುವನು. ಆದ ಕಾರಣ ಸರ್ವರೂ ಭಗವಂತನ ಪ್ರೀತಿಗಾಗಿ ಸರ್ವದಾ ಅತ್ಯಧಿಕವಾದ ಭಕ್ತಿಪೂರ್ವಕವಾಗಿಯೇ ಮಂತ್ರಗಳನ್ನು ಜಪಿಸುತ್ತಾ ಭಗವದನುಗ್ರಹಕ್ಕೆ ಪಾತ್ರರಾಗಬೇಕು. ಈ ಭಕ್ತಿಸ್ವರೂಪವನ್ನು ಹಿಂದೆಯೇ ವಿವರಿಸಿದ್ದರಿಂದ ತಿರುಗಿ ವಿವರಿಸಲಿಲ್ಲ. ॥೨೬॥

ಅವ ॥ ವೈಷ್ಣವ ಮಂತ್ರಗಳನ್ನು ಜಪಿಸುವುದು ಮಾತ್ರವಲ್ಲ, ಮತ್ತೆ ವೈಷ್ಣವ ಶಾಸ್ತ್ರಗಳನ್ನೂ ಕೇಳಿ ಮನನಾದಿಗಳನ್ನು ಮಾಡಬೇಕೆಂದು ಉಪದೇಶಿಸುತ್ತಾರೆ.

**ಮೂ॥ ಶೃಣುಷ್ವ ವೈಷ್ಣವಂ ಶಾಸ್ತ್ರಂ ಸದಾ ವೇದಾರ್ಥತತ್ಪರಃ । ವೇದಾನ್ಮಂತ್ರಾನುಪನಿಷತ್ಸಹಿತಾನ್ ಸರ್ವದಾ ಶೃಣು ॥೨೭॥ ಇತಿಹಾಸ ಪುರಾಣಂ ಚ ಪಂಚರಾತ್ರಂ ತಥೈವ ಚ । ತದರ್ಥಾನ್ ಬ್ರಹ್ಮಸೂತ್ರೈಶ್ಚ ಸಮ್ಯಕ್ ನಿರ್ಣಯ ತತ್ವತಃ ॥೨೮॥ ವಿಷ್ಣೋಃ**

**ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ ॥೨೯॥**

ಅ॥ ಎಲೋ ಶಿಷ್ಯನೇ, ಸರ್ವದಾ ವೇದಾರ್ಥವನ್ನು ವರ್ಣಿಸುವುದರಲ್ಲಿಯೇ ಆಸಕ್ತನಾಗಿ ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕವಾದ ಶಾಸ್ತ್ರವನ್ನು ಕೇಳು. ಉಪನಿಷತ್ತುಗಳಿಂದ ಕೂಡಿದ ವೇದಗಳನ್ನು, ಮಂತ್ರಗಳನ್ನು ಸರ್ವದಾ ಕೇಳು. ಇತಿಹಾಸ ಪುರಾಣಗಳನ್ನು ಹಾಗೆಯೇ ಪಂಚರಾತ್ರಾಗಮನವನ್ನು, ಅವುಗಳ ಅರ್ಥಗಳನ್ನು ಬ್ರಹ್ಮಸೂತ್ರಗಳಿಂದ ಚೆನ್ನಾಗಿ ಯಥಾರ್ಥವಾಗಿ ನಿರ್ಣಯಿಸಿಕೊಂಡು ಸರ್ವದಾ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸು.

ವಿ॥ (೧) ವೈಷ್ಣವ ಶಾಸ್ತ್ರಂ (1) ಋಗ್ಯಜುಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ । ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥ ಯಚ್ಚಾನುಕೂಲ ಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ । ಅತೋಽನ್ಯೋ ಗ್ರಂಥ ವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ ॥ (೭) ಋಗಾದಯಶ್ಚ ಚತ್ವಾರಃ ಪಂಚರಾತ್ರಂ ಚ ಭಾರತಂ । ಮೂಲರಾಮಾಯಣಂ ಬ್ರಹ್ಮಸೂತ್ರಂ ಮಾನಂ ಸ್ವತಃ ಸ್ಮೃತಂ ॥ ಅವಿರುದ್ಧಂ ತು ಯತ್ತ್ವಸ್ಯ ಪ್ರಮಾಣಂ ತಚ್ಚ ನಾನ್ಯಥಾ । ಏತದ್ವಿರುದ್ಧಂ ಯತ್ತು ಸ್ಯಾನ್ ನ ತನ್ಮಾನಂ ಕಥಂಚನ । ವೈಷ್ಣವಾನಿ ಪುರಾಣಾನಿ ಪಂಚರಾತ್ರಾತ್ಮಕತ್ವತಃ । ಪ್ರಮಾಣಾನ್ಯೇವ ಮನ್ವಾದ್ಯಾಃ ಸ್ಮೃತಯೋಽಪ್ಯನುಕೂಲತಃ । ಏತೇಷು ವಿಷ್ಣೋರಾಧಿಕ್ಯ ಮುಚ್ಯತೇ (3) ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ । ಮೂಲರಾಮಾಯಣಂ ಚೈವ ಪುರಾಣಂ ಚೈತದಾತ್ಮಕಂ ॥ ಯೇ ಚಾನುಯಾಯಿನಸ್ತ್ವೇಷಾಂ ಸರ್ವೇ ತೇಚ ಸದಾಗಮಾಃ ॥ ದುರಾಗಮಾಸ್ತದನ್ಯೇ ಯೇ ತೈರ್ನಜ್ಞೇಯೋ ಜನಾರ್ದನಃ ॥ ಜ್ಞೇಯ ಏತೈಸ್ಸದಾ ಯುಕ್ತೈರ್ಭಕ್ತಿಮದ್ಭಿಃ ಸುನಿಷ್ಠಿತೈಃ ॥ ಇದು ಮೊದಲಾದ ಪ್ರಮಾಣ ಪ್ರಕಾರ ಋಗಾದಿ ನಾಲ್ಕು ವೇದಗಳೂ ಭಾರತ, ಪಂಚರಾತ್ರಾಗಮ, ಮೂಲ ರಾಮಾಯಣ, ಬ್ರಹ್ಮಸೂತ್ರ ಇವುಗಳೂ, ಇವುಗಳಿಗೆ ಅನುಸಾರಿಯಾದುದೂ ಅವಿರುದ್ಧವಾದುದೂ, ಶಾಸ್ತ್ರವೆಂದು ಹೇಳಲ್ಪಡುತ್ತದೆ. ಮತ್ತೂ ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಸಾತ್ವಿಕ ಪುರಾಣಗಳೂ, ಮನ್ವಾದಿ ಸ್ಮೃತಿಗಳೂ ಪ್ರಮಾಣಗಳು. ಇವುಗಳೇ ಶಾಸ್ತ್ರಗಳು. ಇವುಗಳಿಗೆ ವಿರುದ್ಧಗಳಾದವುಗಳು ಶಾಸ್ತ್ರಗಳಲ್ಲ. ಪ್ರಮಾಣಗಳು ಅಲ್ಲ.

(೨) ಸದಾ ವೇದಾರ್ಥತತ್ಪರಃ = (1) ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ॥ ಸಮಸ್ತ ವೇದಗಳೂ ತಪಸ್ಸುಗಳು ಎಲ್ಲವೂ ಶ್ರೀ ಪರಮಾತ್ಮನ ಸ್ವರೂಪವನ್ನೇ ಪ್ರತಿಪಾದಿಸುತ್ತವೆ. (2) ನಾನಾವೇದೈರೀತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ ॥ ಸರ್ವವೇದ ಇತಿಹಾಸ ಪುರಾಣಾದಿಗಳಿಂದ ಭಗವಂತನೇ ಪ್ರತಿಪಾದ್ಯನು. ಸುಜ್ಞೇಯನು. (3) ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ಶ್ರೀಹರಿಯು ಇಂದ್ರಿಯಗಳಿಗೂ ಅನುಮಾನಕ್ಕೂ ಗೋಚರನಲ್ಲ. ವೇದಗಳು ಮಾತ್ರ ಶ್ರೀ ಹರಿಯನ್ನು ತಿಳಿಸುತ್ತವೆ. ಆದುದರಿಂದಲೇ ವೇದಾಃ ಎನಿಸುತ್ತವೆ. (೫) ಸರ್ವೇ ವೇದಾಃ ಯುಕ್ತಯಃಸ್ಸು ಪ್ರಮಾಣಾಃ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮವ । ಪ್ರಕಾಶಯಂತೇ ॥ ಸರ್ವವೇದಗಳು, ಸಪ್ರಮಾಣ ಯುಕ್ತಿಗಳೂ ಎಲ್ಲವೂ ಪರಬ್ರಹ್ಮನ ಜ್ಞಾನವನ್ನೇ ಪ್ರಕಾಶಗೊಳಿಸುತ್ತವೆ. (5) ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್। ತತ್ಪ್ರೀಣಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತಾತ್ಪರಾಃ ಸರ್ವಏವ ॥ (ಸೌಪರ್ಣ ಶ್ರುತಿಃ) ಶ್ರೀ ನಾರಾಯಣನೇ ಸರ್ವೋತ್ತಮನು, ಸರ್ವಗುಣ ಪರಿಪೂರ್ಣನು ಎಂದು ತಿಳಿದವನಲ್ಲಿದ್ದಷ್ಟು ಪ್ರೀತಿಯು ಯಾರಲ್ಲಿಯೂ ಇರುವುದಿಲ್ಲ. ಆತನನ್ನು ಸಂತೋಷಗೊಳಿಸಿಯೇ ಮುಕ್ತಿಯನ್ನು ಹೊಂದುವನು. ಆದಕಾರಣ ಎಲ್ಲಾ ವೇದಗಳೂ ಭಗವತ್ಪರಗಳೇ (6) ನಾರಾಯಣ ಪರಾಃ ವೇದಾಃ (7) ವಾಸುದೇವಪರಾಃ ವೇದಾಃ (8) ವೇದೈಶ್ಚ ಸರ್ವೈರಹಮೇವ ವೇದ್ಯಃ (9) ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇಚ ಮಧ್ಯೇಚ ವಿಷ್ಣುಃ ಸರ್ವತ್ರ ಗೀಯತೇ॥ (10) ಕೇವಲಾಗಮವಿಜ್ಞೇಯೋ ಭಕ್ತೈರೇವ ನಚಾನ್ಯಥಾ (11) ಯೋಹಿ ವೇದೇಚ ಶಾಸ್ತ್ರೇಚ ಗ್ರಂಥಧಾರಣತತ್ಪರಃ । ನಚಗ್ರಂಥಾರ್ಥ ತತ್ವಜ್ಞಃತಸ್ಯ ತದ್ಧಾರಣಂ ವೃಥಾ ॥ ವೇದಶಾಸ್ತ್ರಗಳ ಅರ್ಥಗಳನ್ನು ತಿಳಿಯದೆ ಶುಕ ಪಾಠದಂತೆ ಕಲಿತರೆ ಅದು ವ್ಯರ್ಥವು. ಆದಕಾರಣ ವೇದಾರ್ಥ ತತ್ಪರನಾಗಿರಬೇಕು. (12) ಇತ್ಯಾದಿ ಪ್ರಮಾಣಗಳಿಂದ ಶ್ರೀ ಪರಮಾತ್ಮನು ವೇದ್ಯೈಕವೇದ್ಯನು. ಎಲ್ಲಾ ವೇದಗಳೂ ಭಗವಂತನ ಸ್ವರೂಪವನ್ನೇ ಪ್ರತಿಪಾದಿಸುತ್ತವೆ. ಭಗವಂತನೇ ವೇದಾರ್ಥನು. ಹರಿ ಸರ್ವೋತ್ತಮತ್ವಾದಿ ರೂಪ ವೇದಾರ್ಥದಲ್ಲಿಯೇ ಆಸಕ್ತನಾಗಬೇಕು.

**(3) ವೇದಾನ್ ಮಂತ್ರಾನ್ಸ(1) ವೇದಾಸ್ತೇ ನಿತ್ಯವಿನ್ನತ್ವಾತ್ ಶ್ರುತಯಶ್ಚಾಖಿಲೈಃಶ್ರುತೇಃ । ಆಮ್ನಾಯೋಽ ನನ್ಯಥಾ ಪಾಠಾತ್ ।**

ಈಶಬುದ್ಧಿ ಸ್ಥಿತಾಃ ಸದಾ ॥ ಸರ್ವದಾ ಏಕ ಪ್ರಕಾರವಾಗಿಯೇ ಇದ್ದುದರಿಂದ ಅಥವಾ ವೇದಯಂತೀತಿ ವೇದಾಃ ಭಗವಂತನ ಸ್ವರೂಪಾದಿಗಳನ್ನು ತಿಳಿಸಿಕೊಡುವುದರಿಂದ ವೇದಗಳೆನಿಸುತ್ತವೆ. ಸರ್ವರಿಂದಲೂ ಶ್ರುತಗಳೇ ಆಗಿರುವುದರಿಂದ ಶ್ರುತಿಗಳೆನಿಸುತ್ತವೆ. ಸರ್ವರಿಂದಲೂ ಒಂದೇ ಪ್ರಕಾರ ಅಭ್ಯಾಸ ಮಾಡಲ್ಪಡುವುದರಿಂದ ಆಮ್ನಾಯಗಳೆನಿಸುತ್ತದೆ. ಪ್ರಲಯ ಕಾಲದಲ್ಲಿ ಶ್ರೀಹರಿಯ ಬುದ್ಧಿಯಲ್ಲಿಯೇ ಇದ್ದುದರಿಂದ ಸರ್ವದಾ ನಾಶವಿಲ್ಲದವುಗಳು, ಎಂದು ಮಹಾವಾರಾಹದಲ್ಲಿ ಹೇಳಿದೆ. ಅಂತಹ ವೇದಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ನಾಲ್ಕು ವಿಧಗಳು. ಅಂತಹ ವೇದಗಳು ಮಂತ್ರರೂಪ, ಬ್ರಾಹ್ಮಣ ರೂಪ ಎಂದು ೨ ವಿಧವು. ಅದರಲ್ಲಿ ಮಂತ್ರಗಳು ಪ್ರಯೋಗ ಸಮವೇತ ಅರ್ಥ ಸ್ಮಾರಕಗಳು. ಅನುಷ್ಠಾನಕಾಲಿಕ ಅರ್ಥಗಳ ಸ್ಮರಣೆಗೆ ಹೇತುಗಳಾಗಿರುವುದರಿಂದ ಮಂತ್ರಗಳಿಗೆ ಉಪಯೋಗವು. ವಿಧಾಯಕ ವಾಕ್ಯವು ಬ್ರಾಹ್ಮಣವು. ಬ್ರಾಹ್ಮಣ ಶೇಷವು ಅರ್ಥವಾದವು. ಅದು ವಿಧೇಯವು, ಪ್ರಶಸ್ತವು ಎಂಬ ಪ್ರತೀತಿಯನ್ನು ಹುಟ್ಟಿಸುತ್ತಾ ವಿಧಿ ವಾಕ್ಯದಲ್ಲಿಯೇ ಸೇರುವುದು.

(೪) ಉಪನಿಷತ್ = ಉಪ, ನಿ, ಎಂಬ ಉಪಸರ್ಗದ್ವಯ ಪೂರ್ವಕ, ವಿಶರಣ ಗತಿ ಅವಸಾದನಾರ್ಥಕವಾದ ಸದ್ಲ್ ಧಾತುವಿನ ರೂಪವು, ಮೋಕ್ಷೇಚ್ಛುಗಳು ಶಮದಮಾದಿ ಗುಣ ಸಂಪನ್ನರಾಗಿ ಆಚಾರ್ಯರ ಉಪದೇಶದಿಂದ ವಿದ್ಯೆಯನ್ನು ಹೊಂದಿ ಸಂಸಾರ ಕಾರಣವಾದ ಅವಿದ್ಯಾದಿಗಳನ್ನು ಶಿಥಿಲೀಕರಣ ಮಾಡಿ ವಿನಾಶಗೊಳಿಸುವುದರಿಂದ ಬ್ರಹ್ಮವಿದ್ಯೆಯು ಉಪನಿಷತ್ ಎನಿಸುತ್ತದೆ. ಅಥವಾ ಉಪ, ನಿತರಾಂ ಸಾದಯತಿ ಎಂಬ ವ್ಯುತ್ಪತ್ತಿಯಿಂದ ಶಮದಮಾದಿ ಗುಣ ಸಂಪನ್ನರಾದ ಮೋಕ್ಷೇಚ್ಛುಗಳನ್ನು ಪರಬ್ರಹ್ಮನ ಸಮೀಪಕ್ಕೆ (ಮುಕ್ತಿಯನ್ನು) ಹೊಂದಿಸಿಕೊಡುವುದರಿಂದ ಬ್ರಹ್ಮವಿದ್ಯೆಯು ಉಪನಿಷತ್ ಎನ್ನಿಸುತ್ತದೆ. ಐತರೇಯ, ತೈತ್ತೀರಿಯ ಮೊದಲಾದವುಗಳು ಉಪನಿಷತ್ತುಗಳು. ಅವುಗಳಲ್ಲಿ ಐತರೇಯೋಪನಿಷತ್ತು ಋಗ್ವೇದಕ್ಕೂ, ತೈತ್ತಿರೀಯೋಪನಿಷತ್ ಯಜುರ್ವೇದಕ್ಕೂ, ಛಾಂದೋಗ್ಯ ಉಪನಿಷತ್ತು ಸಾಮವೇದಕ್ಕೂ, ಅಥರ್ವಣೋಪನಿಷತ್ತು ಅಥರ್ವವೇದಕ್ಕೂ ಸೇರಿದವುಗಳು. ಹೀಗೆ ಎಲ್ಲವನ್ನೂ ತಿಳಿಯಬೇಕು.

(೫) ಇತಿಹಾಸಃ = ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ । ಇತಿಹಾಸ ಇತಿಪ್ರೋಕ್ತಃ । ಎಂಬ ಪ್ರಮಾಣಾನುಸಾರ ಇತಿಹಾಸ ಶಬ್ದದಿಂದ ಪಂಚರಾತ್ರ, ಭಾರತ, ಮೂಲ ರಾಮಾಯಣಗಳನ್ನು ಅಥವಾ ಭಾರತ, ಮೂಲ ರಾಮಾಯಣಗಳನ್ನು ಇಟ್ಟುಕೊಳ್ಳಬೇಕು.

(೬) ಪುರಾಣಂ = ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಭಾಗವತ ಮೊದಲಾದ ಸಾತ್ವಿಕ ಪುರಾಣಗಳನ್ನು ಇಟ್ಟುಕೊಳ್ಳಬೇಕು. ಇದಕ್ಕೆ ಅವಿರುದ್ಧವಾದುದನ್ನೂ ಇಟ್ಟುಕೊಳ್ಳಬೇಕು.

(೭) ಪಂಚರಾತ್ರಂ = ಪಂಚರಾತ್ರಾಖ್ಯ ಸಂಹಿತೆಗಳು, ಅಥವಾ ಪಂಚರಾತ್ರಾಗಮ

(೮) ತದರ್ಥಾನ್ ಬ್ರಹ್ಮಸೂತ್ರೈಶ್ಚ । ನಿರ್ಣಯಾಯೈವ ಯತ್ಪ್ರೋಕ್ತಂ ಬ್ರಹ್ಮಸೂತ್ರಂ ತು ವಿಷ್ಣುನಾ । ವ್ಯಾಸರೂಪೇಣ ತದ್ಗ್ರಾಹ್ಯಂ ತತ್ರೋಕ್ತಾಸ್ಸರ್ವನಿರ್ಣಯಾಃ ॥ ಯಥಾರ್ಥವಚನಾನಾಂ ಚ ಮೋಹಾರ್ಥಾನಾಂ ಚ ಸಂಶಯಂ । ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್ ॥ ತಸ್ಮಾತ್ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ । ಸರ್ವದೋಷ ವಿಹೀನತ್ವಂ ಗುಣೈಸ್ಸರ್ವೈರುದೀರ್ಣತಾ ॥ ಅಭೇದಸ್ಸರ್ವರೂಪೇಷು ಜೀವಭೇದಸ್ಸದೈವ ಹಿ ॥ ವಿಷ್ಣೋರುಕ್ತಾನಿ ಸೂತ್ರೇಷು ಸರ್ವದೇವೇಡ್ಯತಾ ತಥಾ। ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ॥ ತಸ್ಮಾದೇತದ್ವಿರುದ್ಧಂ ಯನ್ಮೋಹಾರ್ಥಂ ತದುದಾಹೃತಂ ॥ ಆ ವೇದಾದಿಗಳ ಅರ್ಥಗಳನ್ನು ಬ್ರಹ್ಮಸೂತ್ರಗಳಿಂದಲೇ ನಿರ್ಣಯಿಸಿಕೊಳ್ಳಬೇಕು. ಏಕೆಂದರೆ ವ್ಯಾಸರೂಪಿಯಾದ ಶ್ರೀ ವಿಷ್ಣುವು ಸರ್ವಶಾಸ್ತ್ರಾರ್ಥ ನಿರ್ಣಯಕ್ಕಾಗಿಯೇ ಬ್ರಹ್ಮಸೂತ್ರವನ್ನು ಮಾಡಿದ್ದು. ಆದ ಕಾರಣ ಅಲ್ಲಿ ಹೇಳಿದ್ದೇ ಎಲ್ಲಾ ನಿರ್ಣಯಗಳು. ಶ್ರುತಿವಾಕ್ಯಗಳಿಗೆ ಅರ್ಥಭೇದಸಂಶಯವನ್ನು ಪರಿಹರಿಸುವುದಕ್ಕಾಗಿಯೂ ಬ್ರಹ್ಮಸೂತ್ರವನ್ನು ನಿರ್ಮಿಸಿರುವರು. ಆದಕಾರಣ ಸೂತ್ರಾರ್ಥವನ್ನು ಇಟ್ಟುಕೊಂಡೇ ಸಮಸ್ತ ಅರ್ಥಗಳನ್ನೂ ನಿರ್ಣಯಿಸಬೇಕು. ಶ್ರೀಹರಿಯು ದೋಷಲೇಶರಹಿತನು. ಸರ್ವಗುಣ ಪರಿಪೂರ್ಣನು. ಭಗವದ್ರೂಪಗಳಿಗೆ ಸ್ವಲ್ಪವೂ ಭೇದವಿಲ್ಲ. ಜೀವರಿಗೆ ಪರಸ್ಪರ ಭೇದವಿದೆ. ಬ್ರಹ್ಮ ರುದ್ರಾದಿ ದೇವತೆಗಳಿಂದ ಶ್ರೀ ಹರಿಯು ಸರ್ವದಾ ಸೇವಿಸಲ್ಪಡುವವನು. ಸ್ತುತಿಸಲ್ಪಡುವವನು. ಮುಕ್ತರಿಗೂ ತಾರತಮ್ಯವು ಇದೆ. ತತ್ವಜ್ಞಾನದಿಂದಲೇ ಮೋಕ್ಷವು. ಶ್ರೀ ಹರಿಯೇ ಸರ್ವೋತ್ತಮನು. ಇತ್ಯಾದಿ ಪ್ರಮೇಯಗಳು ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಆದಕಾರಣ

ಬ್ರಹ್ಮಸೂತ್ರಗಳಿಂದಲೇ ವೇದಾದಿಗಳ ಅರ್ಥಗಳನ್ನೂ ನಿರ್ಣಯಿಸಿಕೊಳ್ಳಬೇಕು. (೮) ಮತ್ತು ಮಮ ಸ್ವಾಮೀ ಹರಿರ್ನಿತ್ಯಂ ದಾಸೋಽಹಂ ಸರ್ವದಾ ಹರೇಃ ॥ ೧೮॥ ಬ್ರಹ್ಮಾದ್ಯಾಃ ದೇವತಾಸ್ಸರ್ವಾ ಗುರವೋ ಮೇ ಯಥಾಕ್ರಮಂ । ಏತೇಷಾಂ ಹಿ ಹರಿಃಸ್ವಾಮೀ ವೇದೇ ಸರ್ವತ್ರ ಗೀಯತೇ ॥ ಹೀಗೆ ಸರ್ವದಾ ತಿಳಿದುಕೊಳ್ಳಬೇಕು. (ಇದು ಗರುಡ ಪುರಾಣ)

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೋ ಯತಿಪ್ರಣವಕಲ್ಪಃ ಸಂಪೂರ್ಣ॥**

ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ರಚಿಸಿರುವ ಯತಿಪ್ರಣವಕಲ್ಪವು ಸಂಪೂರ್ಣವಾಯಿತು.

ಅಶೇಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟ ಪ್ರದಾಯಿನೇ ॥

ಪ್ರಣಮತ ಪದಪದ್ಮಂ ವ್ಯಾಸ ದೇವಸ್ಯ ವಿಷ್ಣೋರ್ವಿಧಿಮುಖ
ವಿಬುಧಶ್ರೀ ಮೌಲಿ ಸಂಕ್ರಾಂತ ರೇಣು ।

ಗುರುರಯಮಮಿತಾರ್ಥಂ ಯತ್ಪ್ರಸಾದೈಕಬಂಧುಃ
ವ್ಯಧಿತ ಪರಮವಿದ್ಯಾಭಾಷ್ಯಮೀರೋತ್ತಮಮಾಂಶಃ ॥

ನಮಾಮಿ ಲಕ್ಷ್ಮೀರಮಣಂ ನಮಾಮಿ ಹಯಕಂಧರಂ ।
ನಮಾಮಿ ವೇದವ್ಯಾಸಂ ಚ ನಮಾಮಿ ಸುಖಸನ್ಮುನಿಂ ॥

ಭೂಯಾನ್ನಾರಾಯಣಾಖ್ಯಾರ್ಯತಂತ್ರಿಣಾ ಕೃತಿನಾ ಕೃತಾ।
ಯತಿಪ್ರಣವಕಲ್ಪಸ್ಯ ಭಾಷಾವ್ಯಾಖ್ಯಾ ಮುದೇ ಸತಾಂ ॥

ಶ್ರೀಮನ್ಮಧ್ವಮುನಿ ಪ್ರಬರ್ಹವಿಲಸಚ್ಚಿತ್ತಾರವಿಂದಾಲಯಃ
ಸಾಂದ್ರಾನಂದಚಿದಾದಿ ಸದ್ಗುಣತನುರ್ದೋಷಾತಿದೂರಸ್ಸದಾ ।

ಬ್ರಹ್ಮಾಹೀಂದ್ರವರೇಂದ್ರ ಪೂರ್ವವಿಬುಧೈರಾರಾಧಿತಾಂಘ್ರಿದ್ವಯಃ
ಸುಪ್ರೀತೋ ಭವತಾತ್ಸದಾ ಮಮ ಹರಿರ್ಭಕ್ತೇಷ್ಟ ಚಿಂತಾಮಣಿಃ ॥

ವಿದ್ವದ್ವಿರಾಜದುಡುಪಿಸ್ಥಿತ ಪಾಠಶಾಲಾ
ಯಸ್ಯಾಭವದ್ಗುರುಕುಲಂ ಮನನಾನುಕೂಲಂ ॥

ಮಾಧ್ವೀ ಕೃತಿಃ ಸುವಿವೃತಾ ಸಕಲಾ ಹಿ ತೇನ
ನಾರಾಯಣೇನಃ ಮೃದುದೈಶಿಕ ಭಾಷಯಾಽಲಂ ॥

ಶ್ರೀಮದ್ಭಾರ್ಗವಗೋತ್ರೋದ್ಯದೋಕುಣ್ಣಾಯ ಕುಲೋದ್ಭವೇ ।
ಅಧ್ವರ್ಯುಗುರುರಾಯಾರ್ಯಸುತೇ ನಾರಾಯಣೇಽಸ್ತು ಶಮ್ ॥

ಓಂ ನಮೋ ವಾದಿರಾಜಾಯ ದೀರ್ಘದಾರಿದ್ರ್ಯ ಘಾತಿನೇ ।
ರಾಜಭೋಗಪ್ರದಾತ್ರೇ ಚ ನಮೋಽಸ್ತು ಜಯದಾಯಿನೇ ॥

ಅನಯಾ ಸೇವಯಾ ಶ್ರೀಶಃ ಪ್ರೀಯತಾಂ ಮೇ ಹಯಾನನಃ ।
ಹರಿಭಕ್ತಾಗ್ರಣೀರ್ಮಧ್ವೋ ಗುರುಶ್ಚ ಪ್ರೀಯತಾಂ ಮಮ ॥

॥ಓಂ ಶ್ರೀಃ ಓಂ॥

॥ಶ್ರೀ:॥

## ಶ್ರೀಮದಾಚಾರ್ಯರಿಂ ಸರ್ವಮೂಲದೊಳಗಣ ರಹಸ್ಯಾಶೀರ್ವಚನ

# "ಬಿಲ್ವಮಂಗಲಃ ಸಾಧುಃ "

ಎಂಬೀವಾಕ್ಯವು ಶ್ರೀಮದಾನಂದತೀರ್ಥಭಗತ್ಪಾದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥದ ಅಂತ್ಯದಲ್ಲಿದೆ. ಇದು ಸರ್ವಜ್ಞಾಚಾರ್ಯರ ಉಕ್ತಿಯು ಸರ್ವಮೂಲಗ್ರಂಥದಲ್ಲಿಯೇ ಅಂತರ್ಭೂತವಾಗಿದೆ, ಅಂತ್ಯದಲ್ಲಿ ನಿವೇಶಿತವಾಗಿದೆ, ಎಂದು ಸಂಪ್ರದಾಯಾಭಿಜ್ಞರು ಹೇಳುತ್ತಾರೆ. ಅದರ ಅರ್ಥವು.

(೧) ಬಿಲೇ=ಹೃದಯ ಗುಹೆಯಲ್ಲಿ, ವರ್ತತೇ=ನಿಯಾಮಕನಾಗಿರುತ್ತಾನೆ. ಅದ ಕಾರಣ ಬಿಲ್ವಃ=ಸರ್ವನಿಯಾಮಕನಾದ ಶ್ರೀಹರಿಯು, ಬಿಲ್ವಪದದಲ್ಲಿ ಲಕಾರದ ಮೇಲೆ ಇರತಕ್ಕ ಅಕಾರಕ್ಕೆ ಲೋಪವು. ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ। ಎಂಬ ವಾರ್ತಿಕ ವಚನರೂಪನಿರುಕ್ತದಿಂದ ಯುಕ್ತವಾಗುತ್ತದೆ. ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ (೧-೨-೧೧) ಎಂಬ ಸೂತ್ರದಲ್ಲಿ ಶ್ರೀ ಪರಮಾತ್ಮನು ಹೃದಯ ಗುಹೆಯಲ್ಲಿ ನಿಯಾಮಕನಾಗಿದ್ದಾನೆಂದು ಸಮರ್ಥಿತವಾಗಿದೆ. ಮಗಿಗತೌ ಯೇ ಯೇ ಗತ್ಯರ್ಥಕಾಃ ತೇ ತೇ ಜ್ಞಾನಾರ್ಥಕಾಃ । ಗತೇರಲಚ್ ಪ್ರತ್ಯಯವು ಇದಿತೋ ನುಮ್‌ಧಾತೋಃ ಎನ್ನುವುದರಿಂದ ನುಮ್. ತಥಾಚ ಮಂಗಲಃ=ಜ್ಞಾನಸ್ವರೂಪನು. ಅಥವಾ ಮಂಗಲಾನಾಂ ಚ ಮಂಗಲಂ ಮಂಗಲ ವಸ್ತುಗಳಿಗೂ ಮಾಂಗಲ್ಯವನ್ನು ಕೊಡುವವನು ಬಿಲ್ವಶ್ಚಾಸೌ ಮಂಗಲಶ್ಚ ಬಿಲ್ವಮಂಗಲಃ.

(೨) ಮಃ ಶಿವಶ್ಚಂದ್ರಮಾಃ ವೇಧಾಃ ಎಂಬ ವಿಶ್ವಕೋಶಾನುಸಾರವಾಗಿ, ಮಃ=ಚತುರ್ಮುಖ ಬ್ರಹ್ಮನು. ಬ್ರಹ್ಮನಿಂದ ಅಭಿಮನ್ಯ ಮಾನವಾದ ಕೌಸ್ತುಭಮಣಿಯು ಮಶಬ್ದ ವಾಚ್ಯವು. ವಿಜ್ಞಾನತತ್ವಂಮಹತಃ ಸಮುತ್ಪನ್ನಂ ಚತುರ್ಮುಖಾತ್। ಎಂಬಲ್ಲಿ ಮಹತ್ತತ್ವಾಭಿಮಾನಿಯಾದ ಚತುರ್ಮುಖನಿಂದ ವಿಜ್ಞಾನತತ್ವವು ಹುಟ್ಟಿತು ಎಂಬಲ್ಲಿ ಅಭಿಮಾನ್ಯಭಿಮನ್ಯಮಾನಗಳಿಗೆ ಐಕ್ಯವ್ಯಪದೇಶವಿದ್ದಂತೆ. ಇಲ್ಲಿಯೂ ಇಟ್ಟುಕೊಳ್ಳಬೇಕು. ಮಃ ಕೌಸ್ತುಭಮಣಿಯುಗಲೇ ಯಸ್ಯ ಸಃ ಮಂಗಲಃ ಆಧಿಕ್ಯೇಅಧಿಕಂಎಂಬ ಸೂತ್ರಾನುಸಾರವಾಗಿ ಆಕ್ಯಾರ್ಥದಲ್ಲಿ ಅನುಸ್ವಾರವು ತಥಾಚ ಮಂಕೌಸ್ತುಭ ಮಣಿಗೆ ಅಭಿಮಾನಿಯಾದ ಚತುರ್ಮುಖನು ಅಧಿಕ ಪ್ರೀತ್ಯಾಗಲೇ ಯಸ್ಯ ಸಃ ಏವಂಚ ಮಂಗಲಃ=ಚತುರ್ಮುಖನಿಂದ ಅಭಿಮನ್ಯಮಾನವಾದ ಕೌಸ್ತುಭಮಣಿಯನ್ನು ಧರಿಸಿಕೊಂಡಿರುವವನು. ವಿರಿಂಚಃ ಕೌಸ್ತುಭಸ್ತಥಾ ಎಂಬ ಪದ್ಯಮಾಲಾನುಸಾರವಾಗಿ ಚತುರ್ಮುಖನು ಕೌಸ್ತುಭಮಣಿಗೆ ಅಭಿಮಾನಿಯೆಂದು ಸಿದ್ಧವಾಗುತ್ತದೆ.

(೩) ಸಾಧುಃ=ನ ವಿದ್ಯತೇ, ಧುಃ (ಧೂಞ ಕಂಪನೇ) ವೈರಿಕೃತ ಕಂಪನಂ ಯಸ್ಯ ಸಃ ಅಧುಃ=ಸರ್ವಥಾ ವೈರಿಗಳಿಗೆ ಹಂದಾಡಿಸಲಿಕ್ಕೆ ಅಶಕ್ಯನಾದವನು. ಸಕಾರಃ ಸಾರವಾಚೀ ಸ್ಯಾತ್ ಸತ್ಯವಾಚೀ ತಥೈವಚ। ಎಂಬ ಪ್ರಮಾಣಾನುಸಾರ ಸಃ=ಸರ್ವಶ್ರೇಷ್ಠನು. ಸಶ್ಚಾಸೌ ಅಧುಶ್ಚ ತಥಾಚ ಬ್ರಹ್ಮರುದ್ರಾದಿಗಳಿಂದ ಉತ್ಕೃಷ್ಟಚೇತನನು ವೈರಿಗಳಿಗೆ ಹಂದಾಡಿಸಲಶಕ್ಯನು. (ಹೆದರದವನು.)

(೪) ವೈರಿವರ್ಗಕ್ಕೆ, ಆ=ಚೆನ್ನಾಗಿ, ಧುಃ=(ಧೂಞ ಕಂಪನೇ) ಕಂಪನವು ಯಸ್ಮಾತ್, ಸಃ ಆಧುಃ ಸಶ್ಚಾಸೌ ಆಧುಶ್ಚ ಸಾಧುಃ =ಸರ್ವೋತ್ತಮನು, ಭಯವಿಲ್ಲದವನು, ಔಣಾದಿಕಃ=ಡು ಪ್ರತ್ಯಯವು, ಡ ಕಾರಕ್ಕೆ ಇತ್ ಸಂಜ್ಞಾಯಾಂ ಡಿತ್ವ ಸಾಮರ್ಥ್ಯದಿಂದ ಭ ಸಂಜ್ಞೆ ಇಲ್ಲದಿದ್ದರೂ ಟಗೆ ಲೋಪವು.

(೫) ಸಾನಾಂ=ಇಂದ್ರಾದಿ ದೇವತೆಗಳಿಂದುತ್ತಮರಾದ ಬ್ರಹ್ಮರುದ್ರಾದಿ ದೇವತೆಗಳಿಗೆ, ಆ=ಚೆನ್ನಾಗಿ, ಧುಃ=(ಡುಧಾಞಧಾರಣ ಪೋಷಣಯೋಃ) ಧಾರಣ ಪೋಷಣಗಳು, ಯಸ್ಮಾತ್ ಸಃ ಸಾಧುಃ ಬ್ರಹ್ಮಾದಿ ದೇವತೆಗಳ ಧಾರಣ ಪೋಷಣಗಳನ್ನು ಮಾಡುತ್ತಿರುವವನನು.

(೬) ಸಾಧ್ನೋತೀತಿ ಸಾಧುಃ (ರಾಧಸಾಧ ಸಂಸಿದ್ಧೌ) ಸಜ್ಜನರ ಕಾರ್ಯವನ್ನು ಸಾಧಿಸುವವನು (ಕೃ ವಾ ಪಾ ಜಿಮಿ ಸ್ವದಿ ಸಾಧ್ಯ ಶೂಭ್ಯ ಉಣ್)

(೭) ಗೌರಶ್ವಃ ಪುರುಷೋ ಹಸ್ತೀ ಇತ್ಯಾದಿ ವಾಕ್ಯಗಳಂತೆ ಕ್ರಿಯಾಸಂಬಂಧವಿಲ್ಲದಿರುವುದರಿಂದ ಈ ವಾಕ್ಯವು, ವ್ಯಾಖ್ಯಾನ ಮಾಡಲರ್ಹವಲ್ಲ, ಎಂದರೆ ವಿಶ್ವಂ ವಿಷ್ಣುರ್ವಷಟ್ಕಾರಃ, ಸರ್ವತ್ರಾಖಿಲ ಸಚ್ಛಕ್ತಿಃಸ್ವತಂತ್ರೋಽಶೇಷದರ್ಶನಃ ॥ ನಿತ್ಯಾತಾದೃಶ

ಚಚ್ಚೇತ್ಯ ಯಂತೇಷ್ಯೋ ನೋ ರಮಾಪತಿಃ।ತತ್ಯೋದ್ಯೋತ ಮಂಗಲಾಚರಣ) ಇತ್ಯಾದಿಗಳಂತೆ ದೇವತಾ ಸ್ತುತಿ ಮಾತ್ರರೂಪವಾಗಿರುವುದರಿಂದ ಈ ವಾಕ್ಯಕ್ಕೆ ಕ್ರಿಯಾ ಸಂಬಂಧವಿಲ್ಲದಿರುವುದು ದೋಷಾದಾಯಕವಲ್ಲ.

(೮) ಅಥವಾ ಬಿಲೇ=ಪಾತಾಲ ಲೋಕದಲ್ಲಿ ವರ್ತತೇ ಇತಿ, ಬಿಲ್ವಃ=ಪಾತಾಲಲೋಕದಲ್ಲಿರುವ ಬಲಿಚಕ್ರವರ್ತಿಯು. ಬಿಲ್ವಸ್ಯ=ಬಲಿರಾಜನಿಗೆ ಮಂಗಲಂ ಯಸ್ಮಾತ್ಸಃ ಬಿಲ್ವಮಂಗಲಃ=ಬಲಿಚಕ್ರವರ್ತಿಗೆ ಮಂಗಲಕಾರಿಯಾದ ವಾಮನರೂಪಿ ಶ್ರೀಪರಮಾತ್ಮನು.

(೯) ಅಥವಾ ಬಿಲೇ=ಉಚ್ಚೈಃಶ್ರವಃ ಎಂಬ ಕುದುರೆಯಲ್ಲಿ ವರ್ತತೇ ಆರೂಢನಾಗಿರುತ್ತಾನೆ. ಇತಿಬಿಲ್ವಃ=ಇಂದ್ರನು. ಬಿಲ್ವಸ್ಯ ಮಂಗಲಂ ಯಸ್ಮಾತ್ಸಃ ದೇವೇಂದ್ರನಿಗೆ ಸ್ವರ್ಗಾಧಿಪತ್ಯವನ್ನು ಕೊಟ್ಟವನು.

(೧೦) ಅಥವಾ ವಿಶೇಷ ವಾಚಕಶ್ಶಬ್ದಃ ಸಾಮಾನ್ಯೇಪರ್ಯವಸ್ಯತಿ ಎಂಬ ನ್ಯಾಯದಿಂದ ಬಿಲಸ್ಯ=ಹಯರೂಪನಾದ ಕೇಶಿ ನಾಮಕ ದೈತ್ಯನಿಗೆ, ವಃ=(ವಾಗತಿ ಗಂಧನಯೋಃ) ಗಂಧನವು ನಾಶವು ಯಸ್ಮಾತ್ಸಃಬಿಲ್ವಃ=ಶ್ರೀಕೃಷ್ಣನು, ಬಿಲ್ವಶ್ಚಾಸೌ ಮಂಗಲಶ್ಚ.

(೧೧) ಅಥವಾ ವಬಯೋರಭೇದಾತ್, ಬಿ= ವಿ= ವಿಶಿಷ್ಟರಾದ ಸಜ್ಜನರು-ಬೀನ್= ವೀನ್= ಲುನಾತಿ (ಲೂಞ್ಭೇದನೇ) ಬಿಲುಃ ಸಜ್ಜನರಿಗೆ ನಾಶಕವಾದ ದೈತ್ಯ ಸಮುದಾಯವು. ಬಿಲೋಃ ಅಮಂಗಲಂ ಯಸ್ಮಾತ್ಸಃ ದೈತ್ಯ ಸಮೂಹವನ್ನು ನಾಶಗೊಳಿಸುವ ಶ್ರೀಪರಮಾತ್ಮನು.

(೧೨) ಅಥವಾ ಬಿಲಸ್ಯ= ಹಯಗ್ರಿವಾಸುರನಿಗೆ, ವಃ= ನಾಶವು, ಯಸ್ಮಾತ್ಸಃ, ಬಿಲ್ವಃ= ಮತ್ಸ್ಯರೂಪಿ ಶ್ರೀಪರಮಾತ್ಮನು ಅಥವಾ ಹಯಗ್ರೀವರೂಪಿ ಶ್ರೀಪರಮಾತ್ಮನು.

(೧೩) ಅಥವಾ ಬಿಲೆ= ಅಶ್ವದಲ್ಲಿ, ವರ್ತತೇ, ಆರೂಢನಾಗಿರುತ್ತಾನೆ, ಅಶ್ವಾರೂಢನಾಗಿ ದುಷ್ಟ ಸಂಹಾರಕನಾದ ಕಲ್ಕಿರೂಪ ಶ್ರೀಪರಮಾತ್ಮನು.

(೧೪) ಯದ್ವಾ, ಬಿಲಾತ್=ಕಿಷ್ಕಿಂಧಾಖ್ಯ ಬಿಲದಿಂದ ವಾತಿ=ರಾಮನ ಸಮೀಪಕ್ಕೆ ಹೋಗುವುದರಿಂದ ಬಿಲ್ವಃ=ವಾಲಿಯು. ಬಿಲ್ವಸ್ಯ=ವಾಲಿಯ, ಗಲೇ=ಕುತ್ತಿಗೆಯಲ್ಲಿ ಮಂ=ವಿಷವು, ವಿಷ ಸದೃಶವಾದ ಶತ್ರುಗಳನ್ನು ಸಂಹರಿಸುವ ವಿಷಯದಲ್ಲಿ ಸಮರ್ಥವಾದ ಬಾಣವು ಯಸ್ಯ ಸಃ, ಬಿಲ್ವಮಂಗಲಃ=ವಾಲಿ ಸಂಹಾರಕನಾದ ಶ್ರೀರಾಮಚಂದ್ರದೇವರು.

(೧೫) (1) ಬಿಃ= ವಿಃ= ನಿಷೇಧಾರ್ಥಕವು ಲ್ವಃ= ಲವಃ= ಲೇಶಾರ್ಥಕವು ತಥಾಚ ಬಿಲ್ವಃ ಎನ್ನುವುದಕ್ಕೆ ಅಲವಃ= ಲೇಶವಲ್ಲ, (ಪೂರ್ಣವು) ಬಿಲ್ವಂ ಮಂ= ಜ್ಞಾನವು ಯಸ್ಯ ತತ್ ಬಿಲ್ವಮಂ= ಸರ್ವಗುಣಪರಿಪೂರ್ಣನಾದ ಪರಬ್ರಹ್ಮನು. (ಇದರಿಂದ ಗುಣೈಸ್ಸರ್ವೈರುದೀರ್ಣಂ ಎಂಬ ಪ್ರಥಮಾಧ್ಯಾಯದ ಅರ್ಥವು ಉಕ್ತವಾಯ್ತು. (2) ನ ವಿದ್ಯತೇ ಧುಃ= ಕಂಪನವು, (ಉಪಲಕ್ಷಣ ಯಾ ನಿಖಿಲ ದೋಷ ಸಮುದಾಯವು) ಯಸ್ಯ ಸಃ ಅಧುಃ (ಸಮ್ಯಕ್ ಅಧುಃ= ಸಾಧುಃ= ಚೆನ್ನಾಗಿ ದೋಷ ಲೇಶ ರಹಿತನು. (ಇದರಿಂದ ದೋಷ ವರ್ಜಿತಂ ಎಂಬ ದ್ವಿತೀಯಾಧ್ಯಾಯಾರ್ಥವು ಪ್ರತಿಪಾದಿತವಾಯ್ತು. (3) ಗಲಃ ಗಂ= ಜ್ಞಾನವನ್ನು, ಲಾತಿ= ರಾತಿ, ದದಾತೀತಿ (ರಾದಾನೇ) ಗಲಃ= ಭಕ್ತರಿಗೆ ಜ್ಞಾನದಾಯಕನು. (ಇದರಿಂದ ಜ್ಞೇಯಂ ಎಂಬ ತೃತೀಯಾಧ್ಯಾಯಾರ್ಥವು ವಿವೃತವಾಯ್ತು) (೪) ಸಾಧುಃ =ಸಾನಾಂ=ಶ್ರೇಷ್ಠರಾದ ಬ್ರಹ್ಮಾದಿ ಮುಕ್ತರಿಗೆ, ಧುಃ=ಡುಧಾಞ್ ಧಾರಣ ಪೋಷಣಯೋಃ ಧಾರಣ ಪೋಷಣಗಳು ಯಸ್ಮಾತ್ಸಃ ಸಾಧುಃ ಇದರಿಂದ ಗಮ್ಯಂ ಎಂಬುವ ಚತುರ್ಥಾಧ್ಯಾಯಾರ್ಥವು ಉಕ್ತವಾಯ್ತು.

(೧೬) ಅಥವಾ (ಗಲಃ=ಗಮ್ಲ್ ಗತೌ ಭಾವೇಡಃ) ಗಂ=ಜ್ಞಾನವು ರಲಗಳಿಗೆ ಅಬೇಧವಿದ್ದ ಪ್ರಯುಕ್ತ ಲಂ= ರಂ= ಸುಖವು, ಆನಂದವು (ರಮು ಕ್ರೀಡಾಯಾಂ) ಅಂತೂ, ಗಂ ಲಂ ಯಸ್ಯಸಃ ಗಲಃ ಜ್ಞಾನಾನಂದ ಪರಿಪೂರ್ಣನು.

(೧೭) ಬೌ= ವೌ= (ವಿಃ ಪಕ್ಷಿಪರಮಾತ್ಮನೋಃ) ಗರುಡನಲ್ಲಿ, ಲ್ವಃ= ಲವಃ= ವಿಲಾಸವು ಯಸ್ಯಸಃ ಬಿಲ್ವಃ= ಗರುಡಾರೂಢನಾದ ಶ್ರೀಕೃಷ್ಣನು (ಬಿಲಂ ಛಿದ್ರೇ ಗುಹಾಯಾಂಚಬಿಲ ಉಚ್ಚೈಃಸ್ರವೋ ಹಯೇ, ಲವೋ ಲೇಶೇ ವಿಲಾಸೇಚ ಛೇದನೇ ರಾಮನಂದನೇ॥ ಇತಿ ಚ ವಿಶ್ವಃ) ಬಿಲ್ವ ಸ್ಚಾಸೌ ಮಂಗಲಶ್ಚ=ಗರುಡಾರೂಢನಾದ ಶ್ರೀಕೃಷ್ಣನು ಭಕ್ತರಿಗೆ ಮಂಗಲಕರನಾಗುವನು. ಸಾಧುಃ=ಮೋಕ್ಷಾದಿ ಪುರುಷಾರ್ಥಗಳನ್ನು ಸಾಧಿಸಿಕೊಡುವವನು. ಇತ್ಯಾದಿ ಅನೇಕಾರ್ಥಗಳನ್ನು ಇಟ್ಟುಕೊಳ್ಳಬೇಕು.

**ಆಚಾರ್ಯವದನಾಂ ಭೋಜ ನಿಸ್ಸೃತಾ ಯಾ ಸುಧಾಝರೀ।**
**ವಿವೃತಾ ಸಾಭಾಷಯಾ ಚ ಪ್ರೀತ್ಯೈ ಮಾಧವ ಮಧ್ವಯೋಃ॥**

**ಈ ವಿಷಯದಲ್ಲಿ ಹೀಗೆ ಐತಿಹ್ಯವಿದೆ.**

ಬಿಲ್ವ ಮಂಗಲ ಎಂದು ಪ್ರಸಿದ್ಧನಾದವನು ಮಹಾ ಪಂಡಿತನು. ಶ್ರೀಕೃಷ್ಣ ಭಕ್ತನು. ಕೃಷ್ಣಕರ್ಣಾಮೃತಾದಿ ಗ್ರಂಥಗಳನ್ನು ಮಾಡಿ ಶ್ರೀಕೃಷ್ಣನಲ್ಲಿ ಭಕ್ತಿ ಮಾರ್ಗವನ್ನು ಅಭಿವೃದ್ಧೀಕರಿಸಿದವನು.

ಆತನು ಕೃಷ್ಣಕರ್ಣಾಮೃತ ಗ್ರಂಥದಲ್ಲಿ ಶೈವಾ ವಯಂ ನ ಖಲು ತತ್ರ ವಿಚಾರಣಾಽಸ್ತಿ ಪಂಚಾಕ್ಷರೀ ಜಪ ಪರಾ ನಿತರಾಂ ತಥಾಪಿ। ಚೇತೋ ಮದೀಯಮತಸೀಕುಸುಮಾವಕಭಾಸೇ । ಸ್ಮೇರಾನನೇ ಕಿಮಪಿ ಕೌತುಕಮಾತನೋತಿ॥ ಎಂದು ಮಂಗಲಾಚರಣ ಮಾಡಿರುತ್ತಾನೆ. ಆತನು ಆಚಾರ್ಯರಿಗೆ ವಿಶೇಷತಃ ಪ್ರೀತಿ ಪಾತ್ರನಾದುದರಿಂದ ದಕ್ಷಿಣಪ್ರಾಂತ್ಯದಲ್ಲಿ ಲೀಲಾಶುಕನೆಂದೂ ಬಂಗಾಲ ಪ್ರಾಂತ್ಯದಲ್ಲಿ ಬಿಲ್ವಮಂಗಲನೆಂದೂ ತ್ರಿಚೂರಮಠ ಪರಂಪರೆಯಲ್ಲಿ ಮಠಾಧೀಶನೆಂದೂ ಪ್ರಸಿದ್ಧನಾಗಿದ್ದನು. ಕೃಷ್ಣಚೈತನ್ಯನು ತಾನು ದಕ್ಷಿಣಯಾತ್ರೆ ಮಾಡುವಾಗ ಲಬ್ಧವಾದ ಬಿಲ್ವಮಂಗಲನು ಮಾಡಿದ್ದ ಕೃಷ್ಣ ಕರ್ಣಾಮೃತವೆಂಬ ಗ್ರಂಥವನ್ನು ನೋಡಿಯೇ ಶ್ರೀಕೃಷ್ಣನಲ್ಲಿ ಭಕ್ತಿಮಾರ್ಗವನ್ನು ತಾನು ಅಭಿವೃದ್ಧೀಕರಿಸಿಕೊಂಡನು. ಭಕ್ತರಿಗೆ ಅಭಿವೃದ್ಧೀಕರಿಸಿದನು, ಹೀಗೆ ಅಭಿಜ್ಞರು ತಿಳಿಯುತ್ತಾರೆ. ವಸ್ತುಸ್ಥಿತಿಯು ಹೀಗೆ ಇರಲು ಒಂದಾನೊಂದು ದಿನ ಲೀಲಾಶುಕನೆಂದು ಕರೆಯಲ್ಪಡುವ ಬಿಲ್ವಮಂಗಲನು ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥವನ್ನು ಪರಿಶೀಲಿಸಿದನು. ಸ್ವಯಂ ಶ್ರೀಕೃಷ್ಣ ಭಕ್ತನು, ಸಮುದ್ರರಾಜನಿಗೆ ಪೂರ್ಣಚಂದ್ರ ದರ್ಶನವಾದಂತಾಯ್ತು. ತನ್ನ ಅಂತರಂಗದ ಮೇರೆಮೀರಿ ಹರಿಯಲಾರಂಭಿಸಿತು. ಭಕ್ತಿಯ ಸ್ರೋತಸ್ಸು ಶ್ರೀಮನ್ಮಧ್ವಾಚಾರ್ಯರ ಬಳಿಗೆ ಬಂದು ಸೇರಿತು. ಶ್ರೀಮತ್ಸನ್ನಿಧಿಯಲ್ಲಿ ತನ್ನನ್ನು ದಾಸತ್ವೇನ ಪರಿಗ್ರಹಿಸಬೇಕೆಂದು ಬೇಡಿಕೊಂಡ. ಶ್ರೀ ಆಚಾರ್ಯರ ಬಳಿ ಸೇವಕನಾಗಿರುತ್ತಿದ್ದ ತನ್ನ ಜೀವನದ ಕೊನೆಗಳಿಗೆ ಸಮೀಪಿಸಿತೆಂದು ತಿಳಿದ ಆತನು ಶ್ರೀ ಆಚಾರ್ಯರಲ್ಲಿ ತನ್ನ ಹೆಸರು ಸಾಧುಜಗತ್ತಿನಲ್ಲಿ ಉಳಿಯುವಂತೆ ತನ್ನ ಮೇಲೆ ಕೃಪೆ ತೋರಬೇಕೆಂದು ಬೇಡಿಕೊಂಡನು. ದಯಾಳು ಆಚಾರ್ಯರು ತಮ್ಮ ಸರ್ವಮೂಲಗ್ರಂಥವನ್ನು ಅಧ್ಯಯನ ಮಾಡತಕ್ಕ ಮುಮುಕ್ಷುಗಳಿಗೆ ಸ್ವಯಂ ದೇವೋತ್ತಮರಾದುದರಿಂದ ಪರೋಕ್ಷವಾಗಿ ಸ್ವಸ್ತಿವಾಚನಮಾಡಿ ಗ್ರಂಥ ನಿವೇಶವನ್ನು ಮಾಡಬೇಕೆಂದು ಬಗೆದಿದ್ದರು. ಅದಕ್ಕೆ ಸರಿಯಾಗಿ ಬಿಲ್ವಮಂಗಲಃ ಸಾಧುಃ ಎಂದು ಹೇಳಿ ಈ ವಾಕ್ಯವನ್ನು ಸರ್ವಮೂಲದ ಕೊನೆಯಲ್ಲಿ ಸೇರಿಸುವಂತೆ ಶಿಷ್ಯರಿಗೆ ಅಜ್ಞಾಪಿಸಿದರೆಂದೂ ಐತಿಹ್ಯವಿದೆ. ಸ್ವಸ್ತಿವಾಚನವು ಹೇಗೆ ವರ್ಣಿತವಾಗಿದೆ ಎಂಬುದು ಅದರ ಅರ್ಥಾನುವಾದವನ್ನು ಓದುವಲ್ಲಿ ವಾಚಕರಿಗೆ ಗೊತ್ತಾಗದಿರದು.

ತುಳಸೀರಾಮಾಯಣವನ್ನು ಮಾಡಿರುವ ತುಳಸಿದಾಸನಿಗೂ ಬಿಲ್ವಮಂಗಲ ಎಂದು ಪ್ರಸಿದ್ಧಿಯಿದ್ದುದರಿಂದ ಅವನನ್ನು ಇಟ್ಟುಕೊಳ್ಳಬೇಕೆಂದು ಕೆಲವರು ಅನ್ನುವರು. ಆದರೆ ತುಳಸೀದಾಸನು ಸಾಧಾರಣ 1700ನೇ ಇಸವಿಯವನಾದ ಕಾರಣ ಆತನನ್ನು ಇಟ್ಟುಕೊಳ್ಳುವುದು ಯುಕ್ತವಾಗುವುದಿಲ್ಲ.

ಆದ ಕಾರಣ ಹಿಂದೆ ಹೇಳಿದಂತೆ ಅರ್ಥವನ್ನು ಇಟ್ಟುಕೊಂಡು ಆಚಾರ್ಯರ ಅನುಗ್ರಹಕ್ಕೆ ಪಾತ್ರರಾಗಬೇಕು.

**ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ॥ ಸುರಾದ್ಯಾನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ॥ ಶ್ರೀಃ ॥**

**ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।**
**ಗುರುಶ್ಚ ಮಧ್ವನಾಮಾ ಮೇ ವರದೋಸ್ತು ನಿರಂತರಂ ॥**
**ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ಣಾಟಕೀ ಕೃತಾ।**
**ಭೂಯಾತ್ಕುಸುಮ ಮಾಲೇವ ಪ್ರೀತ್ಯೈ ಮಾಧವ ಮಧ್ವಯೋಃ॥**

**-ಅಗ್ರಹಾರ ನಾರಾಯಣ ತಂತ್ರಿ**

|| ಶ್ರೀ ಮಧ್ವನಾಥೋ ವಿಜಯತೇ ||

ಶ್ರೀ ಮನ್ಮಧ್ವಾಚಾರ್ಯರ

ಸರ್ವ ಮೂಲಗ್ರಂಥಗಳ ಮಾಲಿಕೆಯ 22ನೇಯ ಗ್ರಂಥವಾದ

# ಋಗ್ಭಾಷ್ಯ

ದ್ವೈತ ವೇದಾಂತ ವಿದ್ವಾನ್, ದ್ವೈತ ವೇದಾಂತ ಶಿರೋಮಣಿ

ಉಡುಪಿ ಸಂಸ್ಕೃತ ಮಹಾಪಾಠಶಾಲೆ ಮತ್ತು

ಉಡುಪಿ ಆಯುರ್ವೇದ ಕಾಲೇಜಿನ ನಿವೃತ್ತ ಪ್ರಾಚಾರ್ಯ, ವೇದಾಂತ ವಾಚಸ್ಪತಿ

ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

## ಕನ್ನಡ ಟೀಕಾ ಭಾಷಾಂತರ ಸಹಿತ

||ಶ್ರೀ:||

# ಋಗ್ಭಾಷ್ಯ

ನಾರಾಯಣಾಭಿದಂ ಜ್ಯೋತಿಃ ಪ್ರತ್ಯೂಹಧ್ವಾಂತಶಾಂತಿಕೃತ್ ।
ಕಮಲಾಕಮಲಾನಂದಮಂತಃ ಸ್ವಾಂತಮುಪಾಸ್ಮಹೇ ॥
ಅಶೇಷಗುಣಸಂಪೂರ್ಣಂ ಸರ್ವದೋಷವಿವರ್ಜಿತಂ ।
ಅನಂತಾಮ್ನಾಯಸಂವೇದ್ಯಂ ವಂದೇಽಹಂ ಕಮಲಾಪತಿಂ ॥
ಅಶೇಷ ಪ್ರಾಣಿನಾಂ ನೇತಾ ಯೇನ ಸಂಪೂಜ್ಯತೇ ಹರಿಃ ।
ತಸ್ಯ ವಾಯೋಸ್ತೃತೀಯಂ ತದ್ರೂಪಂ ಮಧ್ವಾಭಿಧಂ ಭಜೇ ॥
ಮೂಕೋಽಪಿ ವಾಗ್ಮಿತಾಂ ಯಾಯಾದ್ಯದನುಗ್ರಹಮಾತ್ರತಃ ।
ಸೇವೇ ತಂ ಜಯಯೋಗೀಂದ್ರಂ ಪ್ರತಿವಾದಿಮತಚ್ಛಿದಂ ॥
ಅಥ ತದ್ದಾಸದಾಸೇನ ತಂತ್ರಿನಾರಾಯಣೇನ ಚ
ಋಷಿಛಂದೋ ದೇವತೋಕ್ತಿ ಪದಾರ್ಥಾನ್ವಯಪೂರ್ವಿಕಾ ।
ಋಗ್ಭಾಷ್ಯ ವಿವೃತೇರ್ವ್ಯಾಖ್ಯಾ ಕ್ರಿಯತೇ ಪ್ರೀಯತೇ ಹರೇಃ ॥

ಶ್ರೀ ಮಧ್ವನುಮಧ್ವೀಶಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥

ಭಾಷ್ಯ ॥ ಓಂ ॥ ನಾರಾಯಣಂ ನಿಖಿಲಪೂರ್ಣಗುಣಾರ್ಣಮುಚ್ಚಸೂರ್ಯಮಿತದ್ಯುತಿ ಮಶೇಷನಿರಸ್ತದೋಷಂ । ಸರ್ವೇಶ್ವರಂ ಗುರುಮಜೇಶನುತಂ ಪ್ರಣಮ್ಯ ವಕ್ಷ್ಯಾ ಮ್ಯೃಗರ್ಥಮತಿತುಷ್ಟಿಕರಂ ತದಸ್ಯ ॥

ಅ॥ ನಿಶ್ಶೇಷಗಳೂ, ಪ್ರಪ್ರತ್ಯೇಕ ಪೂರ್ಣಗಳೂ ಆದ ಜ್ಞಾನ ಆನಂದಾದಿ ಗುಣಗಳಿಂದ ಸಮುದ್ರದಂತಿರುವವನೂ, ಸಂಪೂರ್ಣವಾಗಿ ಪ್ರಕಾಶವನ್ನು ಹೊಂದಿರುವ ಅಪರಿಮಿತ ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳವನೂ, ಅಥವಾ ಅಪರಿಮಿತ ಸೂರ್ಯರಿಂದಲೂ ದೃಷ್ಟಾಂತೀಕರಿಸಲಿಕ್ಕೆ ಅಶಕ್ಯವಾದ (ಅಂದರೆ ಅಪರಿಮಿತ ಸೂರ್ಯರಿಗಿಂತಲೂ ಅತಿಶಯವಾದ) ಪ್ರಕಾಶವುಳ್ಳವನೂ, ಸಂಪೂರ್ಣವಾಗಿ ಸರ್ವದಾ ದೋಷಗಳನ್ನು ಹೋಗಲಾಡಿಸುವವನೂ, ಚೇತನಾಚೇತನ ಜಗತ್ತಿಗೆ ನಿಯಾಮಕನೂ, ಜ್ಞಾನೋಪದೇಶಕನೂ, ಬ್ರಹ್ಮರುದ್ರಾದಿದೇವತೆಗಳಿಂದ ನಮಸ್ಕರಿಸಲ್ಪಡುವವನೂ, ಆದ ಶ್ರೀ ನಾರಾಯಣನನ್ನು ಭಕ್ತಿ ಪೂರ್ವಕವಾಗಿ ನಮಸ್ಕರಿಸಿದ ಯಾವ ಕಾರಣದಿಂದ ಋಗರ್ಥವಚನಾದಿಗಳು ಈ ಶ್ರೀ ನಾರಾಯಣನಿಗೆ ಅತಿ ಸಂತೋಷವನ್ನು ಹುಟ್ಟಿಸತಕ್ಕವುಗಳೋ, ಆದ ಕಾರಣ ಕೆಲವು ಋಕ್ಕುಗಳ ಅರ್ಥವನ್ನು ಹೇಳುವೆನು. ಅಥವಾ ಹಿಂದೆ ಹೇಳಿದ ಲಕ್ಷಣಗಳುಳ್ಳ ಬುದ್ಧಿಸನ್ನಿಹಿತನಾದ ಶ್ರೀ ನಾರಾಯಣನಿಗೆ ಪರಮಸಂತೋಷವನ್ನು ಹುಟ್ಟಿಸತಕ್ಕ ಕೆಲವು ಋಕ್ಕುಗಳ ಅರ್ಥವನ್ನು ಹೇಳುವೆನು.

ವಿ॥ ಸಂಸಾರ ಸಮುದ್ರವನ್ನು ದಾಟಲಿಚ್ಛಿಸುವವನು ಭಗವತ್ಪ್ರಸಾದವನ್ನು ಪ್ರಾರ್ಥಿಸಬೇಕು. ಆ ಪ್ರಸಾದವು ಭಗವಂತನ ಜ್ಞಾನವಿಲ್ಲದೆ ಕೂಡಲಾರದು. ಆ ಭಗವಂತನ ಜ್ಞಾನಕ್ಕಾಗಿಯೇ ನಿಖಿ ವೇದಗಳೂ ಪ್ರವೃತ್ತಗಳಾಗಿವೆ. ಅವುಗಳೆಲ್ಲವೂ ಭಗವತ್ಪರಗಳೇ ಎಂದು ತೋರಿಸುವುದಕ್ಕಾಗಿ ಅಂದರೆ ಕೆಲವು ಋಕ್ಕುಗಳು ಭಗವತ್ಪರಗಳೆಂದು ತಿಳಿದರೆ

ಸಮಸ್ತ ವೇದವೂ ಭಗವತ್ಪರವೆಂದು ಬುದ್ಧಿಮಂತರಿಗೆ ವ್ಯಾಖ್ಯಾನ ಮಾಡಲಿಕ್ಕೆ ಶಕ್ಯವಾಗುವುದೆಂಬ ಅಭಿಪ್ರಾಯದಿಂದ ಕೆಲವು ಋಕ್ಕುಗಳಿಗೆ ಮಾತ್ರ ಭಾಷ್ಯವನ್ನು ಮಾಡುತ್ತಾ ಶ್ರೀ ಮದಾಚಾರ್ಯರು ಪ್ರಾರಿಪ್ಸಿತವಾದ ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿಯಾಗುವುದಕ್ಕಾಗಿಯೂ ಲೋಕದಲ್ಲಿ ಪ್ರಸಿದ್ಧಿ ಬರುವುದಕ್ಕಾಗಿಯೂ ಶ್ರೀ ನಾರಾಯಣನಿಗೆ ನಮಸ್ಕಾರಸ್ತೋತ್ರರೂಪಮಂಗಳವನ್ನು ಮಾಡುತ್ತಾ ಪ್ರಯೋಜನವನ್ನು ತೋರಿಸಿದರು. ||೧||

**ಋಕ್ || ಓಂ || ಅಗ್ನಿಮೀಳೇ ಪುರೋಹಿತಂ ದೇವಮೃತ್ವಿಜಂ | ಹೋತಾರಂ ರತ್ನಧಾತಮಮ್** ||೧||

ಅ|| ಪುರೋಹಿತ = ಅನಾದಿಯಿಂದ ಸರ್ವಪ್ರಾಣಿಗಳಿಗೂ ಅನುಕೂಲನಾದವನು, ಸರ್ವರಿಗೂ ಪ್ರಭುವಾದವನು, ಯಜ್ಞಸ್ಯ ಋತ್ವಿಜಂ = ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡುವುದರಿಂದ ಋತ್ವಿಕ್ ಎಂದು ಹೆಸರುಳ್ಳ ಅಧ್ವರ್ಯು ಹೋತೃ ಉದ್ಗಾತೃ ಮೊದಲಾದವರಲ್ಲಿ ನಿಯಾಮಕನಾಗಿ ಇದ್ದುದರಿಂದ ಋತ್ವಿಕ್ ಎಂದು ಹೆಸರುಳ್ಳವನು, ಹೋತಾರಂ = ತದ್ಯೇಯಂ ವಾಕ್‌ಸೋಽಯಮಗ್ನಿಃ ಸ ಹೋತಾ ಎಂಬ ಶ್ರುತಿಯಿಂದ ಹೋತನಿಗೆ ನಿಯಾಮಕನಾಗಿ ಆತನಲ್ಲಿ ವಿಶೇಷತಃ ಸನ್ನಿಹಿತನಾಗಿರುವುದರಿಂದ ಹೋತೃ ನಾಮಕನೂ, ರತ್ನಧಾತಮಂ = ನಿರವಧಿಕ ಆನಂದ ಸ್ವರೂಪನೂ, ಅಥವಾ ಧನಾಢ್ಯನೂ, ದೇವಂ=ಕ್ರೀಡಾದಿಕರ್ತನೂ, ಅಥವಾ ಸರ್ವರಿಂದ ಸ್ತುತ್ಯನೂ, ಆದ ಅಗ್ನಿಂ = ಸಮಸ್ತ ಪೂಜ್ಯರಿಗಿಂತಲೂ ಪ್ರಥಮ ಪೂಜ್ಯನೂ, ಅಥವಾ ಸರ್ವೋತ್ತಮನೂ, ಪ್ರಥಮತಃ ಪ್ರವರ್ತಕನೂ, ಆದ ಅಗ್ನಿನಾಮಕ ಶ್ರೀ ವಿಷ್ಣುವನ್ನೂ, ಆತನಿಗೆ ಅಧಿಷ್ಠಾನಭೂತನಾದ ಪ್ರಸಿದ್ಧಾಗ್ನಿಯನ್ನಾಗಲೀ, ಈಳೇ = ಸ್ತುತಿಸುತ್ತೇನೆ. (ಇಲ್ಲಿ ಹೇಳಿದ ಎಲ್ಲಾ ಗುಣಗಳೂ ಶ್ರೀ ಹರಿಯಲ್ಲಿ ನಿರವಧಿಕಗಳು. ಅಗ್ನಿಯಲ್ಲಿ ಯಥಾಯೋಗ್ಯವಾದುದು) (ಈ ಮಂತ್ರವು ಸರ್ವರಿಂದಲೂ ಅಪೇಕ್ಷಿತವಾದ ಸುಖವನ್ನು ಕೊಡತಕ್ಕ ಶ್ರೀ ಹರಿಯ ಉಪಾಸನೆಗೆ ವಿಷಯಭೂತವಾದ ನಿರತಿಶಯ ಸುಖಸ್ವರೂಪವಾದ ಮಹಾಗುಣವನ್ನು ಪ್ರತಿಪಾದಿಸುವುದರಿಂದ ಈ ಅಗ್ನಿಸೂಕ್ತವನ್ನು ಪ್ರಥಮತಃ ಹೇಳಿದ್ದು. (ಅಧ್ಯಾತ್ಮಪರವಾದ ಅರ್ಥವು) ಪುರೋಹಿತಂ = ಅನಾದಿಯಿಂದ ಸರ್ವರಿಗೂ ಅನುಕೂಲನಾದವನು, ಯಜ್ಞಸ್ಯ=ಜ್ಞಾನಯಜ್ಞಕ್ಕೆ ಪ್ರವರ್ತಕನಾಗಿ, ಋತ್ವಿಜಂ = ಋತ್ವಿಕ್‌ಭೂತರಾದ ಇಂದ್ರಿಯಾಭಿಮಾನಿಗಳಿಗೆ ನಿಯಾಮಕನಾಗಿದ್ದುದರಿಂದ ಋತ್ವಿಕ್ ನಾಮಕನು, ಹೋತಾರಂ = ಇಂದ್ರಿಯಾಖ್ಯ ಅಗ್ನಿಗಳಲ್ಲಿ ವಿಷಯರೂಪ ಹವಿಸ್ಸುಗಳನ್ನು ಹೋಮಿಸುವವನು, (ಅಂದರೆ ವಿಷಯಭೋಗವನ್ನು ಕೊಡುವವನು) ಅಗ್ನಿಂ ಚ = ಸರ್ವರ ಶರೀರಗಳಿಗೆ ಪ್ರವರ್ತಕನು, ಇಂತಹ ಶ್ರೀ ಹರಿಯನ್ನು ಸ್ತುತಿಸುತ್ತೇನೆ.

ಅಧ್ಯಾತ್ಮಂ = (ಶರೀರ ನಿಯಾಮಕ ಭಗವದ್ರೂಪವು) (ಅಧ್ಯಾತ್ಮಜ್ಞಾನ ಯಜ್ಞದಲ್ಲಿ ಸರ್ವತ್ರ ಮೋಕ್ಷ ಸಾಧಕನಾದವನು ಯಾವನೊಬ್ಬ ಸಾತ್ವಿಕನಾದ ಜೀವನೇ ಯಜಮಾನನು) ಜ್ಞಾನಾರ್ಥಿಗೆ ಜ್ಞಾನವನ್ನು ಕೊಡುತ್ತಾ ಸಮಸ್ತ ಇಂದ್ರಿಯಗಳಿಗೆ ಪ್ರೇರಕನೂ ಯಥೋಚಿತ ಭೋಗಪ್ರದನೂ ಆದ ಶ್ರೀವಿಷ್ಣುವಿನ ಸ್ತುತಿಯು ಯುಕ್ತವೆಂದು ಸ್ತುತ್ಯತ್ವವನ್ನು ಪ್ರತಿಪಾದಿಸುವುದೇ ವಿಶೇಷಣಗಳಿಗೆ ಕೃತ್ಯವು ||೧||

ವಿ|| (1) ಋಕ್ಶಾಖೆಯಲ್ಲಿ (೧೦೦೧) ಒಂದು ಸಹಸ್ರದ ಒಂದು ಸೂಕ್ತಗಳು. ಅವುಗಳು ಮಧ್ಯದಲ್ಲಿ ಶ್ರೀ ಭಗವತ್ಪಾದಕರು (1) ಅಗ್ನ್ಯಾದಿ ದೇವತಾ (2) ತದಂತರ್ಗತ ವಿಷ್ಣು (3) ಅಧ್ಯಾತ್ಮ, ಹೀಗೆ ಮೂರು ಅರ್ಥಪರವಾಗಿ (೪೦) ನಲ್ವತ್ತು ಸೂಕ್ತಗಳಿಗೆ ಮಾತ್ರ ವ್ಯಾಖ್ಯಾನ ಮಾಡಿರುವರು.

(2) ಅದರಲ್ಲಿ ಕೆಲವರು ಆಯಾವ ಕರ್ಮಗಳಲ್ಲಿ ವಿನಿಯುಕ್ತಗಳಾದ ಮಂತ್ರಗಳಿಗೆ ಶಬ್ದ ಸಾಮರ್ಥ್ಯ

ರೂಪಲಿಂಗದಿಂದಲೂ ಆವಾವ ಪ್ರಕರಣಗಳಿಂದಲೂ ಆವಾವ ದೇವತಾರೂಪ ಅರ್ಥವೇ ಉಚಿತವು. ವಿಷ್ಣ್ವಾದಿ ರೂಪವಾದ ಅರ್ಥವು ಯೋಗ್ಯವಲ್ಲ. ಏಕೆಂದರೆ - ಆ ವಿಷಯದಲ್ಲಿ (೧) ಪ್ರಮಾಣವಿಲ್ಲ. (೨) ಮತ್ತು ಒಂದು ಶಬ್ದಕ್ಕೆ ಅನೇಕಾರ್ಥ ಹೇಳುವುದು ಅನ್ಯಾಯವೂ ಆಗಿದೆ. (೩) ಅಲ್ಲದೆ ಸರ್ವಸೂಕ್ತಗಳೂ ವಿಷ್ಣುಸೂಕ್ತಗಳೆಂದೇ ಆಗಬೇಕಾಗಿರುವುದರಿಂದ ಇದು ಅಗ್ನೇಯಸೂಕ್ತವು. ಇದು ಐಂದ್ರಸೂಕ್ತವು, ಇತ್ಯಾದಿ ವ್ಯವಸ್ಥೆಯೂ ಕೂಡದೆ ಹೋಗುವುದು (೪) ಮತ್ತು ಒಂದು ಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಿದರೆ ತತ್ಪ್ರಯುಕ್ತ ವಾಕ್ಯಭೇದವೂ ಬರಬೇಕಾಗುವುದು, ಎಂದು ಆಕ್ಷೇಪಿಸುವರು.

(3) ಇದಯುಕ್ತವು ಏಕೆಂದರೆ - ಆ ವಿಷಯದಲ್ಲಿ ಓಗೆ ಸಮಾಧಾನವು. (೧) ಓಮಿತಿ ಬ್ರಹ್ಮ ಇತ್ಯಾದಿ ಶ್ರುತಿ, (೨) ಓಂತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ, ಇತ್ಯಾದಿ ಸ್ಮೃತಿ, (೩) ಓಂಕಾರೋ ಬ್ರಹ್ಮವಾಚೀ ತನ್ನಿಷ್ಠಧರ್ಮ ಪ್ರವೃತ್ತಿಹೇತುಕತ್ವಾತ್, ಇತ್ಯಾದ್ಯನುಮಾನ, ಇವುಗಳಿಂದ ಓಂಕಾರವು ಬ್ರಹ್ಮರೂಪ ಅರ್ಥವನ್ನು ಹೇಳುತ್ತದೆ. ಬ್ರಹ್ಮನು ಗುಣಪರಿಪೂರ್ಣನು. ಬ್ರಹ್ಮನೇ ಶ್ರೀ ವಿಷ್ಣುವು. ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ ಎಂಬ ಛಂದೋಗ ಶ್ರುತಿ, ಇವುಗಳಿಂದ ವೇದಗಳೆಲ್ಲವೂ ಓಂಕಾರದ ವ್ಯಾಖ್ಯಾನವು. ತಥಾ ಚ (೪) ವಿಷ್ಣುಃ ಸರ್ವವೇದಪ್ರತಿಪಾದ್ಯಃ ತದ್ವ್ಯಾಖ್ಯೇಯೋಂಕಾರಾರ್ಥತ್ವಾತ್ ಯೋಯದ್ವ್ಯಾಖ್ಯೇಯಾರ್ಥಃ ಸ ತದ್ವ್ಯಾಖ್ಯಾನಪ್ರತಿಪಾದ್ಯಃ ಯಥಾ ಸಂಮತಃ (೫) ವೇದಾಃ ವಿಷ್ಣುಪರಾಃ ವಿಷ್ಣುಪರೋಂಕಾರವ್ಯಾಖ್ಯಾನತ್ವಾತ್ ಯಃ ಯತ್ಪರಶಬ್ದವ್ಯಾಖ್ಯಾನಂ ಸಃತತ್ಪರಃ ಯಥಾ ಸಂಮತಃ, ಇದು ಮೊದಲಾದ ಅನುಮಾನಗಳಿಂದ ಸಮಸ್ತವೇದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ಸಿದ್ಧಿಸುವ ಪ್ರಯುಕ್ತ (೧) ಪ್ರಮಾಣವಿಲ್ಲವೆಂದದ್ದು ಅಯುಕ್ತವು. (1) ಓಂಕಾರಾರ್ಥವು ವ್ಯಾಹೃತಿಯು, ವ್ಯಾಹೃತ್ಯರ್ಥವು ಗಾಯತ್ರಿಯು. ಗಾಯತ್ರಿಯ ಅರ್ಥವು ಪುರುಷಸೂಕ್ತವು. ಪುರುಷ ಸೂಕ್ತದ ಅರ್ಥವು ಸಮಸ್ತ ವೇದಗಳು. ಈ ರೀತಿಯಾಗಿ, ಆಗಲೀ ಅಥವಾ ಸಾಕ್ಷಾತ್ತಾಗಿಯೇ ವೇದಗಳಿಗೂ ಓಂಕಾರಕ್ಕೂ ವ್ಯಾಖ್ಯಾನ ವ್ಯಾಖ್ಯೇಯಭಾವವನ್ನು ತಿಳಿದುಕೊಳ್ಳಬೇಕು. (2) ಮತ್ತು ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ । ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ಎಂಬ ಪರಮ ಶ್ರುತಿಯಿಂದ ಜೀವರಿಗೆ ಅತ್ಯಂತಿಕದುಃಖ ನಿವೃತ್ತಿರೂಪವಾದ ಬಂಧನಿವೃತ್ತಿರೂಪ ಮೋಕ್ಷಕ್ಕಾಗಿ ವೇದಗಳು ಪ್ರವೃತ್ತಗಳಾಗಿವೆ. (3) ಯಸ್ಯ ಪ್ರಸಾದಾತ್ಪರಮೂರ್ತಿರೂಪಾದಸ್ಮಾತ್ಸಂ ಸಾರಾನ್ಮುಚ್ಯತೇ ನಾಪರೇಣ, ಎಂಬ ನಾರಾಯಣಶ್ರುತಿಯಿಂದ ಶ್ರೀ ಭಗವಂತನ ಪ್ರಸಾದದಿಂದಲೇ ಸತ್ಯವಾದ ಬಂಧಕ್ಕೂ ನಿವೃತ್ತಿಯು ಸಾಧ್ಯವಾಗುವುದು, (4) ಅಂತಹ ಪ್ರಸಾದವು ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಇತ್ಯಾದಿಗಳಿಂದ ಜ್ಞಾನದಿಂದಲೇ ಸಾಧ್ಯವು. ಅಂತಹ ಜ್ಞಾನವು ವೇದಾದಿಶಾಸ್ತ್ರಗಳಿಂದಲೇ ಹುಟ್ಟಬೇಕು. ಆದ ಕಾರಣ ವೇದಗಳು ವಿಷ್ಣುವಿನ ಜ್ಞಾನವನ್ನು ಹುಟ್ಟಿಸುತ್ತವೆಂದು ಸಿದ್ಧವಾಯ್ತು. ತಥಾ ಚ (5) ಸರ್ವೇ ವೇದಾಃ ವಿಷ್ಣುಜ್ಞಾನಜನಕಾಃ ತತ್ಸಾಧ್ಯಮೋಕ್ಷಾರ್ಥಂ ಪ್ರವೃತ್ತತ್ವಾತ್ ಯಃ ಯತ್ಸಾಧ್ಯ ಯದರ್ಥಂ ಪ್ರವೃತ್ತಃ ಸಃ ತಜ್ಜನಕಃ, ಇದು ಮೊದಲಾದ ಅನುಮಾನಗಳಿಂದಾಗಲೀ ಸಮಸ್ತ ವೇದಗಳೂ ವಿಷ್ಣುವಿನ ಜ್ಞಾನವನ್ನು ಹುಟ್ಟಿಸುತ್ತವೆಂದು ಸಿದ್ಧವಾಗುತ್ತದೆ.

(4) ಮತ್ತು ಶ್ರುತಿಗಳಿಗೆ ಅಪಾತತಃ ಪ್ರತೀತವಾದುದೇ ಅರ್ಥವಲ್ಲ. ಏಕೆಂದರೆ ಅಪಾತತಃ ತೋರಿದ್ದೇ ಅರ್ಥವೆಂದು ಇಟ್ಟು ಕೊಂಡರೆ ಕರ್ಮಮೀಮಾಂಸಾ ಶಾಸ್ತ್ರದಲ್ಲಿ ಅಜ್ಯೈಃಸ್ತುವತೇ ಎಂಬ ವಾಕ್ಯದಲ್ಲಿರತಕ್ಕ ಅಜ್ಯಪದಕ್ಕೆ `ಯದಾಜಿಮೀಯುಸ್ತದಾಜ್ಯಾನಾಮಾಜ್ಯ್ವಂ ಎಂಬ ವಾಚಕನಿಕನಿರುಕ್ತ್ಯಾದಿಗಳ ಬಲದಿಂದ ಮಂತ್ರ ಎಂದು ಅರ್ಥ ಹೇಳಿದ್ದು (ಮಂತ್ರಗಳಿಂದ ಸ್ತುತಿಸುತ್ತಾರೆಂದದ್ದು) ಕೂಡದೆ ಹೋಗಬೇಕಾಗುವುದು. ಹಾಗೆಯೇ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಆಕಾಶಾಧಿಕರಣಾದಿಗಳಲ್ಲಿ ಆಕಾಶ ಇತಿ ಹೋವಾಚ ಇತ್ಯಾದಿ ವಾಕ್ಯಗಳಲ್ಲಿರತಕ್ಕ ಆಕಾಶಾದಿ ಶಬ್ದಗಳಿಗೆ ಸ ಏಷ

ಪರೋವರೀಯಾನ್ ಇತ್ಯಾದಿ ವಾಕ್ಯಶೇಷದಲ್ಲಿರತಕ್ಕ ಲಿಂಗಾದಿಬಲದಿಂದ ವಿಷ್ಣು ಎಂದರ್ಥ ಹೇಳಿದ್ದು ಕೂಡದೆ ಹೋಗುವುದು. ಆದಕಾರಣ ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ, ಉಪಕ್ರಮ ಉಪಸಂಹಾರ ಅಭ್ಯಾಸ ಅಪೂರ್ವತಾ ಫಲ ಅರ್ಥವಾದ ಉಪಪತ್ತಿ, ಶ್ರುತಿ, ಲಿಂಗ, ವಾಕ್ಯ ಪ್ರಕರಣ ಸ್ಥಾನ ಸಮಾಖ್ಯೆ ಇವುಗಳಿಗೆ ಆನುಗುಣ್ಯವನ್ನು ಅನುಸಂಧಾನ ಮಾಡಿಕೊಂಡು ಚೆನ್ನಾಗಿ ಮೀಮಾಂಸಾ (ವಿಚಾರ)ದಿಂದ ಲಭ್ಯವಾದ ಅರ್ಥವನ್ನೇ ಹೇಳಬೇಕು. ತಥಾ ಚ ಅಗ್ನ್ಯಾದಿ ಶಬ್ದಗಳಿಗೆ ನಿಗಮ ನಿಘಂಟ್ವಾದಿ ರೂಪವಾದ ಅನುಶಾಸನ ಬಲದಿಂದಲೂ ಆಗ್ನೇಯಾದಿ ಕರ್ಮಾದಿ ಸಿದ್ಧಿರೂಪವಾದ ಪ್ರಯೋಜನ ಬಲದಿಂದಲೂ ಪ್ರಸಿದ್ಧಗಳಾದ ಅಗ್ನ್ಯಾದಿಗಳಲ್ಲಿ ಹೇಗೆ ಶಕ್ತಿಯಿದೆಯೋ ಹಾಗೆಯೇ ವಿಷ್ಣುವಿನಲ್ಲಿಯೂ ಶಕ್ತಿಯು ಇದೆ. ಹೇಗೆಂದರೆ ಚಮಸವದವಿಶೇಷಾತ್ (೧.೪.೯) ಇತ್ಯಾದಿಗಳಲ್ಲಿ ಭಾಷ್ಯದಲ್ಲಿ ಹೇಳಿದ ಪ್ರಕಾರ (1) ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ಎಂದು ಭಾಲ್ಲವೇಯಶ್ರುತಿ) (2) ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನ್ಯ ಭಿವದಂತಿ (ಭಾಷ್ಯ, ಉದಾಶ್ರುತಿ) (3) ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ (ಮ.ಉ.) (4) ಯೋ ದೇವಾನಾಂ ನಾಮಧಾ ಏಕ ಏವ (ಋ.ಮ.೧೦ ಅ೨.೩) ಇತ್ಯಾದಿ ಶ್ರುತಿಗಳಿಂದಲೂ, (5) ಸರ್ವಭಂಧೋಽಭಿದೋ ಹ್ಯೇಷಃ ಸರ್ವದೇವಾಭಿಧೋ ಹ್ಯಸೌ (ವಾಮನ, ಪು) ಇತ್ಯಾದಿ ಸ್ಮೃತಿಗಳಿಂದಲೂ ಸಾಮಾನ್ಯವಾಗಿ, (6) ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ (ಋ. ಮ. ೧, ೧೬೪, ೪೬) (7) ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ (ಅ.ಉ.ಭಾ. ಉದಾ. ) ಇತ್ಯಾದಿ ಶ್ರುತಿಗಳಿಂದಲೂ, (8) ಬೃಂಹಣಾದ್ಬ್ರಹ್ಮ ನಾಮಾಽಸಾವೈಶ್ವರ್ಯಾದಿಂದ್ರ ಉಚ್ಯತೇ । ಏವಂ ನಾನಾವಿಧೈಃ ಶಬ್ದೈರೇಕ ಏವ ತ್ರಿವಿಕ್ರಮಃ । ವೇದೇಷು ಸಪುರಾಣೇಷು ಗೀಯತೇ ಪುರುಷೋತ್ತಮಃ (ಬ್ರಹ್ಮಾ ಪು) ॥ ಇದು ಮೊದಲಾದ ಸ್ಮೃತಿಗಳಿಂದಲೂ ಹೀಗೆ ವಿಶೇಷವಾಗಿ ಅನುಶಾಸನ ರೂಪಗಳಾದ ಈ ಶ್ರುತ್ಯಾದಿಗಳಿಂದ ಶ್ರೀ ವಿಷ್ಣುವಿನಲ್ಲಿಯೂ ಶಕ್ತಿಯು ಸಿದ್ಧವಾಗುವ ಪ್ರಯುಕ್ತ ಅಗ್ನ್ಯಾದಿ ಶಬ್ದಗಳಿಗೆ ವಿಷ್ಣುವೆಂಬ ಅರ್ಥವೂ ಮಂತ್ರಗಳಲ್ಲಿ ನ್ಯಾಯವೇ ಆಗಿದೆ. ಆದ ಕಾರಣ ಒಂದು ಶಬ್ದಕ್ಕೆ ಅನೇಕಾರ್ಥ ಹೇಳುವುದು ಅನ್ಯಾಯವಲ್ಲ.

(5) ಮತ್ತು ಇಂದ್ರ ಅಗ್ನಿ ಮೊದಲಾದ ಶಬ್ದಗಳ ಯೋಗವು ವೇದವ್ಯಾಸ ಕೃತವಾದ ನಿರುಕ್ತಿ ಮೊದಲಾದ ಸ್ಮೃತಿಗಳಿಂದ ಸಿದ್ಧವಾಗುವ ಪ್ರಯುಕ್ತ ಇಂದ್ರ ಅಗ್ನಿ ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತವಾದ ಪರಮೈಶ್ವರ್ಯ ಮೊದಲಾದುದು ಅನನ್ಯಾಧೀನತ್ವ, ನಿರವಧಿಕತ್ವಗಳಿಂದ (೧) ನ ತೇ ವಿಷ್ಣೋ ಜಾಯಮಾನೋ ನ ಜಾತಃ (ಋ, ಮ, ೭.೯೯.೨) ಇದು ಮೊದಲಾದ ಶ್ರುತಿ ಸ್ಮೃತಿಗಳ ಬಲದಿಂದ ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಕೂಡುವುದರಿಂದ ಆ ಯೋಗವು. ಮಹಾಯೋಗರೂಪವಾಗಿರುವುದರಿಂದಲೂ ಶ್ರೀಹರಿಯಲ್ಲಿ ಯೋಗವೂ ಬಲಿಷ್ಠವೇ ಆಗಿದೆ. (1) ಮತ್ತು ಇಂದ್ರಂ ಮಿತ್ರಂ ಇತ್ಯಾದಿ ಶ್ರುತಿಗಳಲ್ಲಿ ಅಹುಃ ಎಂದು ಹೇಳಿದ ಕಾರಣ ಪ್ರಯೋಗಬಾಹುಲ್ಯರೂಪ ಲಿಂಗಬಲದಿಂದ ಶ್ರೀಹರಿಯಲ್ಲಿ ವಿದ್ವದ್ರೂಢಿಯೂ ಇದೆ ಎಂದುಕ್ತವಾಯ್ತು. ಅಜ್ಞರೂಢಿಗಿಂತ ವಿದ್ವದ್ರೂಢಿಯು ಬಲಿಷ್ಠವು. ಮತ್ತು ಐತರೇಯದಲ್ಲಿ ತಂಯಜ್ಞೃತಂ ವರ್ಷಾಣ್ಯಭ್ಯಾರ್ಚತ್ ಇತ್ಯಾದಿಗಳಲ್ಲಿ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚಃ ಇತ್ಯೇವ ವಿದ್ಯಾತ್ ಎಂಬ ಪರ್ಯಂತ ವಾಕ್ಯದಲ್ಲಿ ಬ್ರಹ್ಮನೆಂದು ನಿರ್ಣೀತನಾದ ಪ್ರಾಣೋ ಹ್ಯೇಷ ಯ ಏಷ ತಪತಿ ಎಂಬ ಪೂರ್ವವಾಕ್ಯದಲ್ಲಿದ್ದ ಪ್ರಾಣನನ್ನು ಪರಾಮರ್ಶಮಾಡಿಕೊಂಡು ಪೂರ್ಣಅವಯವಾರ್ಥವನ್ನು ಹೇಳಿ ಮಹಾಯೋಗದಿಂದಲೂ ಅಚಕ್ಷತೇ ಎನ್ನುವುದರಿಂದ ಲಭ್ಯವಾದ ವಿದ್ವದ್ರೂಢಿಯಿಂದಲೂ ಇಂದ್ರಾದಿಗಳಿಗೆ

ಅಜ್ಞರೂಢಿಯಿಂದ ಬಂದ ಮುಖ್ಯತ್ವವನ್ನು ನಿರಾಕರಿಸಿ ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಇದು ಮೊದಲಾದ ಅಭ್ಯಾಸ (ಅಸಕೃದಾವೃತ್ತಿ)ದಿಂದ ತಾತ್ಪರ್ಯಪೂರ್ವಕವಾಗಿ ಶ್ರೀ ವಿಷ್ಣುವಿನಲ್ಲಿಯೇ ಸರ್ವಶಬ್ದಗಳಿಗೂ ಮುಖ್ಯಾರ್ಥತ್ವವನ್ನು ಹೇಳುತ್ತಾ ಸಮಸ್ತವೇದಗಳಿಗೂ ವಿಷ್ಣುಪರತ್ವವನ್ನೇ ಹೇಳಿದೆ, ಎಂದು ಅಚಕ್ಷತ ಇತಿ ಹ್ಯತ್ರ ಸಂತಮಿತ್ಯವಧಾರಣಾತ್ । ಯೋಗಸ್ಯ ರೂಢೇಃಪ್ರಾಬಲ್ಯಂ ವಿದ್ವದ್ರೂಢಿಂ ಚ ತತ್ರಗಾಂ । ಪ್ರಾಬಹುಶೋ ದರ್ಶಯತ್ಯಂಜಃ ತಾತ್ಪರ್ಯಾತ್ಸನಿರುಕ್ತಿಕಂ॥ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ. ಮತ್ತು (1) ಅವಸ್ಯರಾತಿ ಗರ್ಗರೋ ಗೋಧಾ ಇತ್ಯಾದಿಶ್ರುತಿಗಳಲ್ಲಿ ಗರ್ಗರ ಗೋಧಾದಿ ಶಬ್ದಗಳು ಇಂದ್ರನೆನಿಸಿದ ಪರಮೈಶ್ವರ್ಯಸಂಪನ್ನರಾದ ಶ್ರೀ ವಿಷ್ಣುವಿನಲ್ಲಿ ಮಂತ್ರಶಾಸ್ತ್ರಸಿದ್ಧವಾದ ನಾದರೂಪವರ್ಣವನ್ನು ಅಭಿವ್ಯಕ್ತೀಕರಿಸಿ ವಾಚಕಗಳಾಗುತ್ತವೆಂದು ಹೇಳಿ ನಿಖಿಲವೇದಗಳೂ ಭಗವದ್ವಾಚಕಗಳೇ ಎಂದು ಸಮರ್ಥಿತವಾಗಿದೆ. ಮತ್ತೂ (2) ಅ ಇತಿ ಬ್ರಹ್ಮ ಎಂದು ಅಕಾರವು ಪರಬ್ರಹ್ಮವಾಚಕವು ಎಂದು ಹೇಳಿದುದರಿಂದ (3) ಅಕಾರೋ ವೈ ಸರ್ವಾ ವಾಕ್ ಎಂಬ ಐತರೇಯಶ್ರುತಿಯಲ್ಲಿಯೂ (4) ಅಕಾರಸ್ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ (ಗರು. ಪು) ಎಂಬ ಸ್ಮೃತಿಯಲ್ಲಿಯೂ ಸರ್ವಶಬ್ದಗಳೂ ಪರಬ್ರಹ್ಮವಾಚಕಗಳೆಂದು ಸಮರ್ಥಿಸಿಯದೆ. (5) ಮತ್ತು ಸೃಜತೋಹಿ ತೇ ಶ್ರುತಯೋಽನುವರ್ತಂತೇ ನೈವಾಸೃಜತಃ ಕಂ ವಾ ವಿದಧತೇ ಕಂವಾ ನಿಷೇಧಂತಿ ಸ್ತುತಿಮಾತ್ರಾ ಏವ ತೇ ಸ್ಯುಃ ಎಂದು ಶ್ರುತಿಗೀತಾತಾತ್ಪರ್ಯದಲ್ಲಿ ಹೇಳಿದ ಶಾಂಡಿಲ್ಯ ಶ್ರುತಿಯಲ್ಲಿ ವಿಧ್ಯಾದಿ ಭಾಗವೂ ಭಗವಂತನನ್ನೇ ಸ್ತುತಿಸುತ್ತದೆಂದು ಹೇಳಿದೆ. ಮತ್ತು (6) ಯದ್ವ್ಯೈ ಕಿಂ ಚೈತದಧ್ಯಗೀಷ್ಮಾ ನಾಮ್ನೈವೈತನ್ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದಃ ಅಥರ್ವಣಶ್ಚತುರ್ಥ ಎಂದು ಛಾಂದೋಗ್ಯದಲ್ಲಿಯೂ, ಯದ್ವಾಚ ಓಮಿತಿ ಯಚ್ಚನೇತಿಯಚ್ಚಾಸ್ಯಾಃಕ್ರೂರಂ ಯದು ಚೋಲ್ಬಣಿಷ್ಣುತದ್ವಿಯೂಯ ಕವಯೋಽನ್ವವಿಂದನ್ನಾಮಾಯತ್ತಾ ಸಮತೃಪ್ಯನ್ ಛೃತೇಽಧಿ ಎಂಬ ಐತರೇಯದಲ್ಲಿಯೂ ಸಮಸ್ತ ವೈದಿಕ ಶಬ್ದಗಳೂ, ಭಗವಂತನ ನಾಮಗಳೇ ಎಂದು ಹೇಳಿದೆ. ಮತ್ತು (8) ನಾರಾಯಣಪರಾ ವೇದಾಃ ದೇವಾಃ ನಾರಾಯಣಾಂಗಜಾಃ । ಎಂದು ಭಾ 2ನೇ ಸ್ಕಂಧ, ೫ನೇ ಅಧ್ಯಾಯದಲ್ಲಿಯೂ, (9) ವಾಸುದೇವಾಪರಾಃವೇದಾಃ ವಾಸುದೇವಪರಾಮಖಾಃ ಎಂದು ೧ನೇ ಸ್ಕಂಧ, ೨ನೇ ಅಧ್ಯಾಯದಲ್ಲಿಯೂ (10) ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇಚ ಮಧ್ಯೇಚ ವಿಷ್ಣುಃಸರ್ವತ್ರಗೀಯತೇ ಎಂದು ಹರಿವಂಶದಲ್ಲಿಯೂ ಹೀಗೆ ಸರ್ವತ್ರ ವೇದಾದಿಗಳಿಗೆ ವಿಷ್ಣು ಪರತ್ವವನ್ನೇ ಹೇಳಿದೆ. ಮತ್ತು (11) ವೇದೈಶ್ಚ ಸರ್ವೈರಹಮೇವ ವೇದ್ಯಃ ಎಂದು ಶ್ರೀ ಕೃಷ್ಣ ಪರಮಾತ್ಮನು ತಾನೇ ಪರಮ ಮುಖ್ಯ ವೃತ್ತಿಯಿಂದ ಸಮಸ್ತ ವೇದಗಳಿಂದ ಪ್ರತಿಪಾದ್ಯನೆಂದು ಭಕ್ತಾಗ್ರೇಸರನಾದ ಅರ್ಜುನನಿಗೆ ಉಪದೇಶಿಸಿರುವನು. ಮತ್ತು (12) ಸರ್ವೇ ವೇದಾ ಯತ್ಪದ ಮಾಮನಂತಿ ಎಂದು (ಕಾಠ ಪು. 48) ಕಾಠಕದಲ್ಲಿ ಮುಖ್ಯವಾಗಿ ಅಶೇಷವೇದಗಳಿಂದ ವೇದ್ಯನೆಂದು ಹೇಳಿ (13) ತದ್ವಿಷ್ಣೋಃಪರಮಂ ಪದಂ ಎಂದುಪಸಂಹಾರ ಮಾಡಿಯದೆ. ಸಮನ್ವಯಸೂತ್ರದಲ್ಲಿ ಸಮಸ್ತ ವೇದಗಳಿಗೆ ಶ್ರೀ ಹರಿಯಲ್ಲಿಯೇ ಸಮನ್ವಯವನ್ನು ಪ್ರತಿಜ್ಞಾ ಮಾಡಿ ಆನಂದಮಯೋಽಭ್ಯಾಸಾತ್ 1 ಬ್ರ.ಸೂ. ೧.೧.೧೨. ಇತ್ಯಾದಿಗಳಿಂದ ಅದನ್ನೇ ವಿವರಿಸಿರುವರು. ಜ್ಯೋತಿರಧಿಕರಣದಲ್ಲಿ ವಿ ಮೇ ಕರ್ಣಾಪತಯತಃ ಎಂಬ ಅಗ್ನಿಸೂಕ್ತಕ್ಕೆ ಕರ್ಣಾದಿ ವಿದೂರತ್ವಾದಿರೂಪವಾದ ವಿಷ್ಣುಲಿಂಗದಿಂದ ವಿಷ್ಣುಪರತ್ವವನ್ನೇ ಸಮರ್ಥಿಸಿರುವರು. ಇಷ್ಟು ಮಾತ್ರವಲ್ಲದೆ ಸಮಸ್ತ ವೇದಗಳೂ ವಿಷ್ಣು ಪರಗಳೆಂದು ಇಟ್ಟುಕೊಂಡರೆ ವೇದಗಳಿಗೆ ಅಪೂರ್ವತಾರೂಪವಾದ ತಾತ್ಪರ್ಯಲಿಂಗವು ಪ್ರತೀತವಾಗುವುದರಿಂದ ಜ್ಞಾನಿಗಳಿಗೆ ಮೋಕ್ಷವು ಲಭಿಸುವುದು. (14) ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್; ತತ್ಪ್ರೀಣಾನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ

ವೇದಾಸ್ತತ್ಪರಾಃ ಸರ್ವ ಏವ ಎಂಬ ಸೌಪರ್ಣ ಶ್ರುತಿಯಿಂದಲೂ, (15) ಪ್ರಿಯೋಹಿಜ್ಞಾನಿನೋಽತ್ಯರ್ಥ ಎಂಬ ಸ್ಮೃತಿಯಿಂದಲೂ ವಿಷ್ಣುವನ್ನು ಪ್ರತಿಪಾದಿಸಿದರೆ ವಿಷ್ಣುಜ್ಞಾನ ಸಾಧ್ಯವಾದ ಮೋಕ್ಷಾಖ್ಯ ಮಹಾಫಲವು ಲಭಿಸುವುದು. (16) ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಇತ್ಯಾದಿಗಳಿಂದ ಶ್ರೀಹರಿಯನ್ನು ತಿಳಿಯದೆ ಇದ್ದರೆ ನಿಂದಾರೂಪ ಅರ್ಥವಾದವೂ (17) ಯ ಇತ್ತದ್ವಿದುಸ್ತ ಇಮೇ ಸಮಾಸತೇ ಎಂದು ತಿಳಿದರೆ ಸ್ತುತಿರೂಪವಾದ ಅರ್ಥವಾದವೂ ಉಕ್ತವಾಗಿದೆ. ಹಾಗೆಯೇ ಅನುಕ್ರಮಣಿಕೆಯಲ್ಲಿಯೂ (18) ಏಕೈವ ವಾ ಮಹಾನಾತ್ಮಾ ದೇವತಾ ಎಂದು ಸಮಸ್ತ ಸೂಕ್ತಗಳಿಗೂ ಪರಮಾತ್ಮನೇ ದೇವತೆಯೆಂದೂ ಹೇಳಿದೆ.

ಹಾಗಾದರೆ ಸಮಸ್ತ ವೇದಗಳೂ ವಿಷ್ಣುರೂಪವಾದ ಅರ್ಥವನ್ನು ಮಾತ್ರ ಪ್ರತಿಪಾದಿಸುವೆಂದಾಗಲಿ, ಅಗ್ನ್ಯಾದಿರೂಪವಾದ ಅರ್ಥವನ್ನು ಪ್ರತಿಪಾದಿಸದೇನೇ ಇರಲಿ. ಗೌರವವು ಬರುವುದು. ಎಂದರೆ ಹಾಗೆ ಹೇಳಕೂಡದು. ಕಲ್ಪನೋಪದೇಶಾತ್ (೧.೪.೧೧) ಎಂಬ ಸೂತ್ರದ ತಾತ್ಪರ್ಯವನ್ನು ನಿರೂಪಿಸತಕ್ಕ ಅನುವ್ಯಾಖ್ಯಾನದಲ್ಲಿ (1) ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ। ಪ್ರಯೋಜನ ಬಹುತ್ವೇನ ತಸ್ಯತಸ್ಯಾವಿರೋಧತಃ। ಉಪದೇಶಾದಿ ಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ। ಎಂಬಲ್ಲಿ ಅಗ್ನ್ಯಾದಿ ದೇವತಾ ಸ್ವರೂಪ ಸಿದ್ಧಿ ಮೊದಲಾದ ಬಹು ಪ್ರಯೋಜನಗಳು ಲಭಿಸುವುದಕ್ಕಾಗಿ ಅಗ್ನ್ಯಾದಿ ದೇವತಾ ರೂಪವಾದ ಅರ್ಥವೂ ಅವಶ್ಯಕವೆಂದು ಹೇಳಿದೆ. ಮತ್ತು ನಿಗಮ ನಿಘಂಟು ವ್ಯಾಕರಣಾದಿಗಳಿಂದ ಸಿದ್ಧವಾದ ವ್ಯುತ್ಪತ್ತಿಯಿಂದ ಲಭ್ಯವಾದ ಅಗ್ನ್ಯಾದಿ ದೇವತಾರೂಪವಾದ ಅರ್ಥವನ್ನು ಬಿಡುವುದು ಸರ್ವಥಾ ಯುಕ್ತವಲ್ಲ. ಮತ್ತೂ (2) ತ್ರಯೋಽರ್ಥಾ ಸರ್ವವೇದೇಷು ದಶಾರ್ಥಾ ಸರ್ವಭಾರತೇ। ವಿಷ್ಣೋಃ ಸಹಸ್ರ ನಾಮಾಪಿ ನಿರಂತರಶತಾರ್ಥಕಂ। ಎಂಬ ಸ್ಕಾಂದ ಸ್ಮೃತಿಯಿಂದ ವೇದಗಳಿಗೆ ೩ ಅರ್ಥಗಳು ಇವೆ ಎಂದು ಹೇಳಿದೆ. ಅನ್ಯಾರ್ಥಂತು ಜೈಮಿನಿಃ (೧.೪.೧೮) ಇತ್ಯಾದಿಗಳಲ್ಲಿ ಸೂತ್ರಕಾರರು ಪರಬ್ರಹ್ಮನ ಜ್ಞಾನಕ್ಕಾಗಿ ಕರ್ಮ ದೇವತಾ ರೂಪವಾದ ಅರ್ಥಾಂತರವೂ ಅವಶ್ಯಕವೆಂದು ಹೇಳಿರುವರು.

ಹಾಗಾದರೆ - (1 ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಎಂಬ ಭಾಲ್ಲವೇಯ ಶ್ರುತಿಯಲ್ಲಿ ಇಂದ್ರಾದಿಗಳು ವಾಚ್ಯರು ಆಗುವುದೇ ಇಲ್ಲ, ವಿಷ್ಣುವೇ ವಾಚ್ಯನು, ಎಂದು ಹೇಳಿದೆ. ಹಾಗೆಯೇ (2) ವೇದೈಶ್ಚ ಸರ್ವೈರಹಮೇವ ವೇದ್ಯಃ (ಗೀ ೧೫-೧೫) ಎಂಬ ಸ್ಮೃತಿಯಲ್ಲಿಯೂ ನಾನೇ ವೇದ್ಯನು, ಬೇರೆಯವರು ವೇದ್ಯರಲ್ಲ ಎಂದು ಹೇಳಿದೆ. ಹಾಗೆಯೇ ತತ್ತುಸಮನ್ವಯಾತ್ (ಬ್ರ.ಸೂ. ೧.೧.೪) ಎಂಬಲ್ಲಿ ಅವಧಾರಣಾರ್ಥಕ ತು ಶಬ್ದದಿಂದ ವಿಷ್ಣ್ವಾಖ್ಯಬ್ರಹ್ಮನೇ ಸರ್ವಶಾಸ್ತ್ರಪ್ರತಿಪಾದ್ಯನೆಂದು ಪ್ರತಿಜ್ಞಾ ಮಾಡಿ ಇಡೀ ೧ನೇ ಅಧ್ಯಾಯದಿಂದ ಇಂದ್ರಾದಿ ಶಬ್ದವಾಚ್ಯನು ಶ್ರೀ ವಿಷ್ಣುವೇ, ಆಕಾಶ ಪ್ರಾಣ ಜ್ಯೋತಿರಾದಿ ಶಬ್ದವಾಚ್ಯನೂ ಶ್ರೀ ವಿಷ್ಣುವೇ ಎಂದು ಸಪ್ರಮಾಣವಾಗಿ ಸಮಸ್ತ ಶಬ್ದಗಳಿಗೂ ಕೇವಲ ಶ್ರೀ ವಿಷ್ಣುವೇ ಅರ್ಥನೆಂದು ಸಮರ್ಥಿಸಿರುವರು. ಮತ್ತು (3) ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ ಆ. ಉಪನಿಷತ್ತಿನಲ್ಲಿ ಶ್ರೀ ವಿಷ್ಣುವಿಗೇನೇ ಜ್ಞೇಯತ್ವವು, ಇತರರಿಗೆ ಜ್ಞೇಯತ್ವವಿಲ್ಲವೆಂದೂ ಹೇಳಿದೆ. ಆದ ಕಾರಣ ಇತ್ಯಾದಿ ಪ್ರಮಾಣಗಳಿಂದ ವಿರೋಧವು ಬರುವುದು. ಎಂದರೆ, ಹಾಗೆ ಹೇಳಕೂಡದು, ಮುಖ್ಯವೃತ್ತಿಯಿಂದ ಇಂದ್ರಾದಿಗಳು ವಾಚ್ಯರಾದಾಗ್ಯೂ ಪರಮ ಮುಖ್ಯವೃತ್ತಿಯಿಂದ ಇಂದ್ರಾದಿಗಳು ವಾಚ್ಯರಾಗುವುದಿಲ್ಲ. ಶ್ರೀ ಭಗವಂತನೇ ಪರಮ ಮುಖ್ಯ ವೃತ್ತಿಯಿಂದ ವಾಚ್ಯನು. ಪರಮ ಮುಖ್ಯವೃತ್ತಿಯಿಂದಲೇ ಇಂದ್ರಾದಿಗಳಿಗೆ ವಾಚ್ಯತ್ವವನ್ನು ಶ್ರುತಿ ಸೂತ್ರಾದಿಗಳಲ್ಲಿ ನಿರಾಕರಿಸಿದ್ದು. ಹಾಗೆಯೇ ಅನ್ಯಾ ವಾಚೋ ವಿಮುಂಚಥ ಇತ್ಯಾದಿ ಶ್ರುತಿಸೂತ್ರಗಳಲ್ಲಿಯೂ ಸರ್ವೋತ್ತಮರೆಂದು ಇತರರನ್ನು ತಿಳಿಯಬಾರದು ಎಂದದ್ದು.

ಆದುದರಿಂದಲೇ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ (3.3.57) ಎಂಬ ಸೂತ್ರದಲ್ಲಿ ಬ್ರಹ್ಮ ರುದ್ರ ಇಂದ್ರ ಮಿತ್ರ ವರುಣ ಮೊದಲಾದ ಅಂಗದೇವತಾ ವಿಷಯಕಗಳಾದ ಉಪಾಸನಾನಮನ ಪೂಜನ ಮನನಾದಿಗಳನ್ನು ಮಾಡಬೇಕೆಂದು ಹೇಳಿ ಮಂತ್ರಾದಿವದ್ವಾಽವಿರೋಧಃ (3.3.58) ಎಂಬ ಗುಣಸೂತ್ರದಲ್ಲಿ ಹೇಗೆ ಅಧಮ ದೇವತಾ ಪರಗಳಾದ ಮಂತ್ರಗಳು ಉತ್ತಮ ದೇವತೆಗಳಲ್ಲಿ ಇವೆ ಎಂದು ತಿಳಿಯಬೇಕೋ, ಹಾಗೆಯೇ ಅಧಮ ದೇವತೆಗಳ ಗುಣಗಳು ಉತ್ತಮ ದೇವತೆಗಳಲ್ಲಿ ಇವೆ ಎಂದು ತಿಳಿಯಬೇಕು, ಧ್ಯಾನಿಸಬೇಕು, ಆದರೆ ಉತ್ತಮ ದೇವತೆಗಳ ಗುಣಗಳನ್ನು ಅಧಮದೇವತೆಗಳಲ್ಲಿ ಧ್ಯಾನಿಸಬಾರದು. ತಿಳಿಯಬಾರದು. ಉತ್ತಮ ದೇವತಾ ಪರಗಳಾಗಿ ಪ್ರತೀತಗಳಾದ ಮಂತ್ರಗಳನ್ನು ಅಧಮ ದೇವತಾ ಪರಗಳನ್ನಾಗಿ ಹೇಗೆ ತಿಳಿಯಬಾರದೋ, ಹಾಗೆಯೇ ಎಂದು ಹೇಳಿದೆ.

ಹಾಗಾದರೆ ಹೀಗೆ ಅನೇಕಾರ್ಥಗಳನ್ನು ಇಟ್ಟುಕೊಂಡರೆ ವಾಕ್ಯ ಭೇದವು ಬರುವುದೆಂದರೆ ಹಾಗೆ ಹೇಳಕೂಡದು. ಸಮಾಕರ್ಷಾತ್ (೧-೪-೧೬) ಎಂಬಲ್ಲಿ ಹೇಳಿದ ಪ್ರಕಾರ ಪರಮ ಮುಖ್ಯ ವೃತ್ತಿಯಿಂದ ವಿಷ್ಣುರೂಪವಾದ ಅರ್ಥವನ್ನೂ ಮುಖ್ಯ ವೃತ್ತಿಯಿಂದ ಇಂದ್ರಾದಿ ರೂಪವಾದ ಅರ್ಥವನ್ನೂ ಅಂಗೀಕರಿಸುವೆವು. ಒಂದೇ ವೃತ್ತಿಯಿಂದ ಅನೇಕಾರ್ಥಗಳನ್ನು ಇಟ್ಟುಕೊಂಡರೆ ಮಾತ್ರ ವಾಕ್ಯ ಭೇದ ಮೊದಲಾದ ದೋಷಗಳು ಬರಬಹುದಿತ್ತು. ಹಾಗೆ ಅಂಗೀಕರಿಸಲಿಲ್ಲ. ಆದುದರಿಂದಲೇ ತಸ್ಮಾತ್ಪರಮ ಮುಖ್ಯತ್ವಂ ವಿಷ್ಣಾವನ್ಯತ್ರ ಮುಖ್ಯತಾ । ಶ್ರೀ ವಿಷ್ಣುವಿನಲ್ಲಿ ಪರಮ ಮುಖ್ಯ ವೃತ್ತಿಯು ಇಂದ್ರಾದಿಗಳಲ್ಲಿ ಮುಖ್ಯವೃತ್ತಿಯು ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ.

ಆದುದರಿಂದಲೇ ಅಗ್ನಿ ಇಂದ್ರ ಇತ್ಯಾದಿ ಪದಗಳಿಗೆ ಪರಮ ಮುಖ್ಯ ವೃತ್ತಿಯಿಂದ ಶ್ರೀ ವಿಷ್ಣು ಪರತ್ವವಿದ್ದರೂ ಮುಖ್ಯವೃತ್ತಿಯಿಂದ ಅಗ್ನ್ಯಾದಿ ದೇವತಾ ಪರತ್ವವೂ ಇದ್ದುದರಿಂದ ಅಗ್ನಿಸೂಕ್ತ, ಇಂದ್ರಸೂಕ್ತ ಇತ್ಯಾದಿ ವ್ಯವಸ್ಥೆಯು ಕೂಡುತ್ತದೆ. ಆದಕಾರಣ ವ್ಯವಸ್ಥೆಯಿಲ್ಲವೆನ್ನುವ ದೋಷವಿಲ್ಲ. ೨ ಕಡೆಗಳಲ್ಲಿ ತಾತ್ಪರ್ಯವನ್ನು ಕಲ್ಪಿಸಿದರೆ ತಾತ್ಪರ್ಯ ಭೇದವು ಬರುವುದರಿಂದ ತತ್ಪ್ರಯುಕ್ತ ವಾಕ್ಯ ಭೇದ ದೋಷವು ಬರುತ್ತದೆಂದರೆ, ಹಾಗೆ ಹೇಳಕೂಡದು, ಶ್ರೀ ವಿಷ್ಣುವಿನಲ್ಲಿ ಮಾತ್ರ ಮಹಾ ತಾತ್ಪರ್ಯವಿರುವುದು. ಮಹಾತಾತ್ಪರ್ಯ ಒಂದೇ ಆದುದರಿಂದ ವಾಕ್ಯ ಭೇದ ದೋಷವಿಲ್ಲ. (೧) ಸರ್ವೋತ್ಕರ್ಷೇ ದೇವ ದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಂ । ಅವಾಂತರಂ ತತ್ಪರತ್ವಂ ತದನ್ಯತ್ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥ (ಎಂದು ಪೈಂಗಿ ಶ್ರುತಿ) (೨) ಸರ್ವಜ್ಞಂ ಸರ್ವ ಕರ್ತಾರಂ ನಾರಾಯಣಮನಾಮಯಂ । ಸರ್ವೋತ್ತಮಂ ಜ್ಞಾಪಯಂತೀ ಮಹಾ ತಾತ್ಪರ್ಯಮತ್ರಹಿ । ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ । ಪ್ರಮಾಣಾನಾಂಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥ ಇತ್ಯಾದಿ ನಾರದೀಯಪುರಾಣಾದಿಗಳು. ಇತ್ಯಾದಿಗಳಲ್ಲಿ ಮಹಾತಾತ್ಪರ್ಯ ಅವಾಂತರ ತಾತ್ಪರ್ಯ ಭೇದದಿಂದ ಅನೇಕಾರ್ಥಗಳನ್ನು ಹೇಳಿ ಸಮಸ್ತವೇದ, ಇತಿಹಾಸ, ಪುರಾಣ, ಸಮಸ್ತ ಪ್ರಮಾಣಗಳಿಗೂ ಸರ್ವೋತ್ತಮನಾದ ಶ್ರೀ ವಿಷ್ಣುವಿನಲ್ಲಿಯೇ ಮಹಾ ತಾತ್ಪರ್ಯವು. ಇತರರಲ್ಲಿ ಅವಾಂತರ ತಾತ್ಪರ್ಯವು, ಎಂದು ಹೇಳಿದೆ. (3) ಮತ್ತು ಅಗ್ನ್ಯಾದಿ ಸೂಕ್ತಗಳಿಂದ ಭಗವಂತನನ್ನು ಉಪಾಸನೆ ಮಾಡುವವರಿಗೆ ಅಗ್ನಿ ಮೊದಲಾದ ಅಧಿಷ್ಠಾನಗಳಲ್ಲಿಯೇ ಭಗವಂತನನ್ನು ಧ್ಯಾನಿಸಬೇಕು, ಅಲ್ಲಿಯೇ ಅಭಿವ್ಯಕ್ತನಾಗುತ್ತಾನೆ. ಅಲ್ಲಿಯೇ ಪ್ರಾಪ್ಯನಾಗುತ್ತಾನೆ, ಎಂಬ 3 ನಿಮಿತ್ತಗಳಿಂದ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ, ಇತ್ಯಾದಿ ವ್ಯವಸ್ಥೆಯು ಕೂಡುತ್ತದೆಂದು ವೈಶ್ವಾನರಾಧಿಕರಣದಲ್ಲಿ ಸೂತ್ರಕಾರರೇ ಸಮರ್ಥಿಸಿರುವರು. (4) ಅಥವಾ ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿಚ । ಅಗ್ನ್ಯಾದಿ ಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥ ಎಂದು

ಈ ಋಗ್ಭಾಷ್ಯದಲ್ಲಿ ಹೇಳಿದ ಪ್ರಕಾರ ಅಗ್ನ್ಯಾದಿ ನಾಮಭೇದದಿಂದ ಅಗ್ನ್ಯಾದಿ ಸೂಕ್ತ ವ್ಯವಸ್ಥೆಯು ಎಂದೆನ್ನಬೇಕು. (5) ಅಗ್ನಿಸೂಕ್ತ, ವಾಯು ಸೂಕ್ತ ಇತ್ಯಾದಿ ಪ್ರಕಾರವೇ ಪ್ರಸಿದ್ಧಿಯಿರುವುದು. ವಿಷ್ಣುಸೂಕ್ತ ಇತ್ಯಾದಿ ಪ್ರಕಾರ ಪ್ರಸಿದ್ಧಿಯಿಲ್ಲ ಎಂದರೆ ಅದು ಅಜ್ಞಾನ ಮೂಲಕವೆಂದು ಚಂದ್ರಿಕಾದಲ್ಲಿ ಸಮರ್ಥಿಸಿರುವರು. (6) ಏವಂಚ ಸರ್ವೋತ್ತಮನಾದ ಶ್ರೀವಿಷ್ಣುವೇ ಸ್ವರ ವರ್ಣ ಪದಾದಿ ರೂಪ ಸಮಸ್ತ ವೇದಗಳಿಂದಲೂ ಪ್ರತಿಪಾದ್ಯನೆಂದು ಸಿದ್ಧವಾಯ್ತು.

ಋಷಿ ಛಂದೋ ದೈವತಾನಿ ಜ್ಞಾತ್ವಾsರ್ಥಂ ಚೈವ ಭಕ್ತಿತಃ । ಸಾಧ್ಯಾಯೇನ್ನೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥ ಎಂದು ಸ್ಮೃತಿ, ಯೋ ಹ ವಾsವಿದಿತಾರ್ಷ ಛಂದೋ ದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತ್ಯಧ್ಯಾಪಯತಿ ಸ ಸ್ಥಾಣುಂ ವರ್ಚ್ಛತಿ ಗರ್ತೇವಾಪದ್ಯತೇ ಪ್ರವಾಮೀಯತೇ ಎಂದು ಶ್ರುತಿ ಇತ್ಯಾದಿ ಪ್ರಮಾಣಗಳಿಂದ ಋಷ್ಯಾದಿಗಳ ಜ್ಞಾನವಿದ್ದರೇನೇ ಮಂತ್ರಾರ್ಥ ಜ್ಞಾನವು ಸಫಲವಾಗುವುದು. ಇಲ್ಲವಾದರೆ ಅನರ್ಥವುಂಟಾಗುವುದು ಎಂದು ತಿಳಿಯುವುದರಿಂದ ಋಷ್ಯಾದಿಗಳ ಜ್ಞಾನವು ಅವಶ್ಯಕವು. ಹಾಗೆ ಛಂದಸ್ಸು, ಛಂದಸ್ಸುಗಳಿಗೆ ಅಭಿಮಾನಿ ದೇವತೆ, ಇವುಗಳ ಜ್ಞಾನವೂ ಅವಶ್ಯಕವೇ.

ಅದರಲ್ಲಿ ೧ನೇದ್ದು ಅಗ್ನೇಯ ಸೂತ್ರವು. ೨ ವರ್ಗವು. ೯ ಋಕ್ಕುಗಳು. ಗಾಯತ್ರೀಚ್ಛಂದಸ್ಸು, ಅಗ್ನಿಯೂ, ಅಗ್ನ್ಯಂತರ್ಗತ ಅಗ್ನಿನಾಮಕ ಶ್ರೀ ವಿಷ್ಣುವೂ ದೇವತೆಯು. ಅಗ್ನಿಮೀಳೇ ಎಂದಾರಂಭಿಸಿ, ಅಗ್ನಿಂ ದೂತಂ ಎನ್ನುವುದಕ್ಕಿಂತ ಮೊದಲಿನ ೧೧೦ ಋಕ್ಕುಗಳಿಗೆ ಮಧುಛಂದಸರೇ ಋಷಿಗಳು. ಅಗ್ನಿ ಮೀಳೇ ಎಂದಾರಂಭಿಸಿ ಗಾಯಂತಿ ತ್ವಾ ಎನ್ನುವುದಕ್ಕಿಂತ ಮೊದಲಿನ ೯ ಸೂಕ್ತಗಳಲ್ಲಿ ಗಾಯತ್ರೀ ಛಂದಸ್ಸು. ಗಾಯತ್ರೀ ಛಂದಸ್ಸಿಗೆ ಶ್ರೀ ಬ್ರಹ್ಮಾಣೀ ಭಾರತೀ ಗರುಡ, ಸ್ವಾಹಾ, ಎಂಬುವರು ಐದು ಮಂದಿ ಅಭಿಮಾನಿ ದೇವತೆಗಳು ಎಂದು ತಿಳಿಯಬೇಕು. ॥೧॥

ಅವ ॥ ಅಗ್ನ್ಯಾದಿದೇವತೆಗಳನ್ನು ಪ್ರತಿಪಾದಿಸತಕ್ಕ ಋಕ್ಕುಗಳನ್ನು ವ್ಯಾಖ್ಯಾನಮಾಡಿದರೆ ಶ್ರೀ ನಾರಾಯಣನಿಗೆ ಅತಿತುಷ್ಟಿಯಾಗುವುದು. ಹೇಗೆಂದರೆ ಸಕಲವೇದಗಳೂ ಮುಖ್ಯತಃ ಭಗವಂತನ ಜ್ಞಾನವನ್ನೇ ಹುಟ್ಟಿಸುತ್ತವೆ. ಹೇಗೆಂದರೆ-

**ಭಾ ॥ (1) ಓಮಶೇಷಗುಣಾಧಾರ ಇತಿ ನಾರಾಯಣೋsಪ್ಯಸೌ। (2) ಪೂರ್ಣೋಭೂತಿವ ರೋsನಂತಸುಖೋ ಯದ್ವ್ಯಾಹೃತೀರಿತಃ (3) ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ । ಭಾರತಿಜ್ಞಾನರೂಪತ್ವಾದ್ಭರ್ಗೋ ಧ್ಯೇಯೋsಖಿಲೈರ್ಜನೈಃ ॥ ಪ್ರೇರಕೋsಶೇಷಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ ॥೩॥**

ಅ॥ (ಓ ತತ್ವ ವಾಚೀ ಹ್ಯೋಂಕಾರಃ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಕಾರ) ಓಂಕಾರವು ಯಾವ ಕಾರಣದಿಂದ ನಿಖಿಲಗುಣಾಧಾರತ್ವವನ್ನು ಪ್ರತಿಪಾದಿಸುತ್ತದೋ ಶ್ರೀ ವಿಷ್ಣುವು ಸರ್ವಗುಣಗಳಿಗೂ ಆಶ್ರಯನೋ ಆದುದರಿಂದ ಓಂಕಾರವು ಶ್ರೀನಾರಾಯಣನನ್ನೇ ಪ್ರತಿಪಾದಿಸುತ್ತದೆ. ಮತ್ತು ನಾರಾಯಣ ಶಬ್ದವು ಶ್ರೀ ಪರಮಾತ್ಮನಲ್ಲಿಯೇ ಪ್ರಸಿದ್ಧವು, ಅದು ಶ್ರೀ ಹರಿಯು ಸರ್ವಗುಣಗಳಿಂದ ಪರಿಪೂರ್ಣನು ಎಂದು ಹೇಳುವುದು. ಆ ಸಮಾಖ್ಯೆಯಿಂದ ಓಂಕಾರವೂ ಕೂಡ ಶ್ರೀ ನಾರಾಯಣನನ್ನೇ ಪ್ರತಿಪಾದಿಸುತ್ತದೆ ಎಂದು ನಿಶ್ಚಯವಾಗುತ್ತದೆ. (೨) ಯಾವ ಕಾರಣದಿಂದ ಹಿಂದೆ ಹೇಳಿದ ಪ್ರಕಾರ ಶ್ರೀ ಹರಿಯು ಓಂಕಾರದ ಅರ್ಥಭೂತನೋ, ಆದ ಕಾರಣ ಪ್ರಾಣವಾರ್ಥಾ ವಾಹೃತಯೋ ವ್ಯಾಹೃತಿತ್ರಿಗುಣಾ ಪುನಃ ವೇದಮಾತಾ ಚ ಗಾಯತ್ರೀ ಎಂಬ ಸ್ಮೃತಿಯಿಂದ ಭೂಃ ಭುವಃ ಸುವಃ ಎಂಬ ವ್ಯಾಹೃತಿತ್ರಯವು ಓಂಕಾರದಲ್ಲಿದ್ದ ಅ,ಉ,ಮ್, ಎನ್ನುವ ಮೂರು ವರ್ಣಗಳ ವ್ಯಾಖ್ಯಾನ ರೂಪವೆಂದು ತಿಳಿಯುವುದರಿಂದ ಶ್ರೀ ಹರಿಯೇ ವ್ಯಾಹೃತಿಯಿಂದ

ಪ್ರತಿಪಾದ್ಯನು. (ಯಾವ ನಿಮಿತ್ತದಿಂದ ಎಂದರೆ) ಪೂರ್ಣ = ಭೂಬ ಹೌ ಬಹುಃ ಭೂಃ ಎನಿಸುತ್ತಾನೆ. ಭೂಃ = ಪೂರ್ಣತ್ವವು. ಭೂತಿವರಃ = ಐಶ್ವರ್ಯದ ನಿಮಿತ್ತದಿಂದ ಶ್ರೇಷ್ಠನು, ಅಂದರೆ ಮಹೈಶ್ವರ್ಯವುಳ್ಳವನಾದುದರಿಂದ ಭುವಃ ಎನಿಸುತ್ತಾನೆ. (ಭೂಸತ್ತಾಯಾಂ, ವರಶಬ್ದದ ಅಂತ್ಯವಾದ ರ ಕಾರಕ್ಕೆ ಲೋಪವು) ಸುವಃ =ಸು=ಶೋಭನವಾದ (ಅಪರಿಮಿತವಾದ) ವಃ = (ವಃ ಪುಮಾನ್ ವರುಣೇ ಕುಂಭೇ ವಿಕಲ್ಪೇ ಗಗನೇ ಗುರೌ । ಕಲಭೇ ಖಗಗರ್ಭೇ ಚ ಮದೇ (ಹರ್ಷದಲ್ಲಿ) ಬಾಲ್ಯೇಚ ಕರ್ಮಣಿ॥ ಎಂದು ಏಕಾಕ್ಷರಮಾಲಾದಲ್ಲಿ ಹೇಳಿದ ಪ್ರಕಾರ) ಸುಖವು ಯಾರಿಗೋ ಎಂಬ ವ್ಯುತ್ಪತ್ತಿಯಿಂದ ಅಪರಿಮಿತ ಸುಖವುಳ್ಳವನಾದುದರಿಂದ ಸುವಃ ಎನಿಸುತ್ತಾನೆ. ಸ್ವಃ = ಎಂಬ ಕಲ್ಪದಲ್ಲಿ ಸು ಎನ್ನುವಲ್ಲಿದ್ದ ಉ ಕಾರಕ್ಕೆ ಲೋಪವು. ಏವಂಚ ಯಾವ ಕಾರಣದಿಂದ ಗುಣಪೂರ್ಣತ್ವಾದಿಗಳುಳ್ಳವನೇ ವ್ಯಾಹೃತಿ ಪ್ರತಿಪಾದ್ಯನೋ ಅಂತಹನು ಪರಮಾತ್ಮನೇ. ಆದಕಾರಣ ಶ್ರೀ ಹರಿಯೇ ವ್ಯಾಹೃತಿ ಪ್ರತಿಪಾದ್ಯನು. (೩) ಯಾವ ಕಾರಣದಿಂದ ಶ್ರೀ ಹರಿಯೇ ಗಾಯತ್ರಿಯ ಅರ್ಥಭೂತನೆಂದು ಹೇಳಲ್ಪಟ್ಟಿರುತ್ತಾನೆ. ಹೇಗೆಂದರೆ, ಯಾವ ಕಾರಣದಿಂದ ಜ್ಞಾನಾನಂದಾದಿಗುಣಗಳಿಂದ ವ್ಯಾಪ್ತನೋ, ಆದಕಾರಣ ತತ್ ಸರ್ವಜಗತ್ತಿಗೂ ಮುಖ್ಯತಃ ಜನಕನಾದುದರಿಂದ ಸವಿತಾ, ಜ್ಞಾನಾನಂದಾದಿ ಗುಣಾಧಿಕ್ಯನಿಮಿತ್ತದಿಂದ ಸರ್ವರಿಂದ ಭಜಿಸಲರ್ಹನಾದುದರಿಂದ ವರೇಣ್ಯಂ (ಭಾ ದೀಪ್ತೌ, ರಮು ಕ್ರೀಡಾಯಾಂ, ಗಮ್ಲೃ ಗತೌ, ಈ ಧಾತು ಸಮುದಾಯದಿಂದ ಅಸುನ್ ಪ್ರತ್ಯಯವು, ಎಂಬ ವ್ಯುತ್ಪತ್ತಿಯಿಂದ) ಪ್ರಕಾಶವಿಶೇಷ, ಕ್ರೀಡಾ ಜ್ಞಾನಸ್ವರೂಪನಾದುದರಿಂದ ಭರ್ಗ ಎಂದು ಸರ್ವಜನರಿಂದಲೂ ಧ್ಯಾನಾರ್ಹನು. ಯಾವಾತನು ಸರ್ವರಬುದ್ಧಿಗಳಿಗೆ ಪ್ರೇರಕನೋ, ಅಂತಹನೇ ಗಾಯತ್ರಿಯ ಅರ್ಥ ಭೂತನೆಂದು ಹೇಳಲ್ಪಟ್ಟಿರುತ್ತಾನೆ. ಏವಂಚ ಯಃ = ಯಾವಾತನು, ನಃ = ನಮ್ಮ (ಅಂದರೆ ಅಶೇಷ ಜೀವರ) ಧಿಯಃ =ಧರ್ಮಾದಿ ವಿಷಯಕ ಬುದ್ಧಿಗಳನ್ನು ಪ್ರಚೋದಯಾತ್=ಪ್ರೇರೇಪಿಸುವನೋ, ಸಮಿತುಃ ದೇವಸ್ಯ=ಅಂತಹ ಸರ್ವ ಜಗತ್ಸೃಷ್ಟಿಕರ್ತನಾದ ಕ್ರೀಡಾದಿಗುಣ ವಿಶಿಷ್ಟನಾದ ಶ್ರೀ ನಾರಾಯಣನ, ತತ್=ಸರ್ವ ಗುಣಗಳಿಂದ ವ್ಯಾಪ್ತನಾದ, ವರೇಣ್ಯಂ= ಆದುದರಿಂದಲೇ ಸರ್ವರಿಂದಲೂ ಭಜಿಸಲಿಕ್ಕೆ ಅರ್ಹವಾದ ಭರ್ಗ = ಪ್ರಕಾಶ ಕ್ರೀಡಾ ಜ್ಞಾನಸ್ವರೂಪವಾದ ರೂಪವನ್ನು ಧ್ಯಾನಿಸುವೆವು. ||೧||

ಅವ॥ ಶ್ರೀ ಹರಿಯು ಗಾಯತ್ರಿಯಿಂದ ಪ್ರತಿಪಾದ್ಯನಾದಾಗ್ಯೂ ಪ್ರಕೃತ ಏನಾಯಿತೆಂದರೆ -

**ಭಾ॥ (1) ಸ ಪೂರ್ಣತ್ವಾತ್ಪುಮಾನ್ನಾಮ ಪೌರುಷೇ ಸೂಕ್ತ ಈರಿತಃ । (2) ಏವಾಖಿಲ ವೇದಾಥಃ ಸರ್ವಶಾಸ್ತ್ರಾರ್ಥ ಏವಚ ॥**
**(3) ಸ ಏವ ಸರ್ವಶಬ್ದಾರ್ಥ (4) ಇತ್ಯಾಹೋಪನಿಷತ್ಪರಾ ತಾ ವಾ ಏತಾ ಋಚ ಇತಿ (5) ವಿಶೇಷೇಣಾಪ್ಯುಗರ್ಥತಾಂ**
**॥ (6) ಯೋ ದೇವಾನಾಮಿತಿ ಶ್ರುತ್ಯಾ ದೇವನಾಮ್ನಾಂ ವಿಶೇಷತಃ । ಸ್ಪಷ್ಟತ್ವಾತ್ತದ್ಗ ತತ್ತೇನ ॥೨॥**

ಅ॥ (1) ಯಾವ ಕಾರಣದಿಂದ ಶ್ರೀ ಹರಿಯು ಗಾಯತ್ರೀಪ್ರತಿಪಾದ್ಯನೋ, ಆದ ಕಾರಣ ಶ್ರೀ ಹರಿಯು ಗಾಯತ್ರೀ ಪ್ರತಿಪಾದ್ಯನಾದುದರಿಂದ ಶ್ರೀ ಹರಿಯೇ ಪುರುಷ ಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟಿರುತ್ತಾನೆ. (ಹಾಗಾದರೆ ಪುರುಷಸೂಕ್ತದಲ್ಲಿ ಪುರುಷನಾಮಕ ಪಶುವು ಪ್ರತಿಪಾದ್ಯವು. ಶ್ರೀ ವಿಷ್ಣುವು ಪ್ರತಿಪಾದ್ಯನಲ್ಲ. ಎಂದರೆ ಹಾಗೆ ಹೇಳಕೂಡದು) (ಏಕೆಂದರೆ) ಸರ್ವಗುಣ ಪರಿಪೂರ್ಣನಾದುದರಿಂದ ಪುಮಾನ್=ಪುರುಷನೆಂದರೆ ಆ ವಿಷ್ಣುವೇ. (2) (ಆದಾಗ್ಯೂ ಪ್ರಕೃತವೇನಾಯಿತೆಂದರೆ) ಯಾವ ಕಾರಣದಿಂದ ಶ್ರೀ ಹರಿಯು ಪುರುಷ ಸೂಕ್ತ ಪ್ರತಿಪಾದ್ಯನೋ, ಆದ ಕಾರಣ ವೇದಾಃ ಪುರುಷ ಸೂಕ್ತಗಾಃ ಎಂಬ ಪ್ರಮಾಣದಿಂದ ಎಲ್ಲಾ ವೇದಗಳು ಪುರುಷ ಸೂಕ್ತದ ಅರ್ಥಗಳಾಗಿರುವುದರಿಂದ) ಆ ಶ್ರೀ ಹರಿಯೇ ಸಮಸ್ತ ವೇದಗಳಿಂದ ಪ್ರತಿಪಾದ್ಯನು (ಆದುದರಿಂದ ಸ್ಮೃತಿಗಳೆಲ್ಲವೂ ಶ್ರುತಿ ಮೂಲಕಗಳಾಗಿರುವುದರಿಂದ) ಆ ಶ್ರೀ ಹರಿಯೇ ಸಮಸ್ತ

ಶಾಸ್ತ್ರಗಳಿಂದಲೂ ಪ್ರತಿಪಾದ್ಯನು. (3) (ಸರ್ವಶಾಸ್ತ್ರ ಪ್ರತಿಪಾದ್ಯನಾದುದರಿಂದ) ಆ ಶ್ರೀ ಹರಿಯೇ ಸರ್ವ ಶಬ್ದಗಳಿಂದಲೂ ವಾಚ್ಯನು. (ಏಕೆಂದರೆ ಸರ್ವಶಬ್ದಗಳೂ ವೇದ ಪ್ರತಿಪಾದ್ಯಗಳೇ.) (ಇಲ್ಲಿ ಶ್ರೀ ವಿಷ್ಣುವು ಸಮಸ್ತ ವೇದ ಪ್ರತಿಪಾದ್ಯನು ಎನ್ನುವುದೇ ಪ್ರಕೃತ ಉಪಯುಕ್ತವಾಗಿರುವುದರಿಂದ ಸರ್ವಶಾಸ್ತ್ರ ಪ್ರತಿಪಾದ್ಯನು. ಸರ್ವಶಬ್ದ ಪ್ರತಿಪಾದ್ಯನು ಎನ್ನುವುದು ಎರಡು ಪ್ರಸಂಗಸಂಗತಿಯಿಂದ ಹೇಳಿದ್ದು) (4) ಈಶ್ವರಃ ಸರ್ವವೇಧಾರ್ಥ ತದ್ವ್ಯಾಖ್ಯೇಯ ಪುರುಷಸೂಕ್ತಾರ್ಥತ್ವಾತ್ ಯೋ ಯದ್ವ್ಯಾಖ್ಯೇಯಾರ್ಥ ಸಃ ವ್ಯಾಖ್ಯಾನ ರೂಪ ಗ್ರಂಥಾರ್ಥ, ಯಥಾ ರಾಮಾಯಣಾರ್ಥೋ ರಾಮಃ ತಟ್ಟೀಕಾರ್ಥ) ಎನ್ನುವ ಅನುಮಾನದಿಂದ ಶ್ರೀಹರಿಯು ಸಮಸ್ತವೇದಗಳಿಂದಲೂ ವಾಚ್ಯನೆಂದು ಸಾಧಿಸಿ ಶ್ರುತಿಯಿಂದಲೂ ಸಾಧಿಸುತ್ತಾರೆ) ಶ್ರೀ ಹರಿಯೇ ಸಮಸ್ತ ವೇದಗಳ ಅರ್ಥಭೂತನು ಎಂದು ಹೇಳಿದ ಅರ್ಥವನ್ನು `ತಾವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಎಂದು ಉತ್ಕೃಷ್ಟವಾದ (ವಿಸ್ಪಷ್ಟವಾಗಿ ಪ್ರತಿಪಾದಿಸುವ) ಐತರೇಯೋಪನಿಷತ್ತೂ ಕೂಡ ಹೇಳುತ್ತದೆ. (5) (ಹಾಗಾದರೆ ಸಮಸ್ತವೇದಗಳೂ ಭಗವತ್ಪರಗಳಾಗಿರುವುದರಿಂದ ಯಾವುದಾದರೊಂದು ವೇದದ ವ್ಯಾಖ್ಯಾನಾದಿಗಳೂ ಶ್ರೀ ಹರಿಗೆ ತುಷ್ಟಿಯನ್ನುಂಟು ಮಾಡುತ್ತವೆ. ಆದ ಕಾರಣ ಋಕ್ಕುಗಳನ್ನೇ ವ್ಯಾಖ್ಯಾನ ಮಾಡುವುದು ಏತಕ್ಕೆ? ಎಂದರೆ) ಋಕ್ಕುಗಳು ವೇದಗಳಲ್ಲಿಯೇ ಅಡಕವಾಗಿರುವುದರಿಂದ ಸರ್ವೇ ವೇದಾಃ ಎಂದು ಹೇಳಿ, ಸರ್ವಾ ಋಚಃ ಎಂದು ತಿರುಗಿ ಹೇಳಿದುದರಿಂದ ವಿಶೇಷತಃ ಶ್ರೀ ಹರಿಯು ಋಕ್ಕುಗಳಿಂದ ಪ್ರತಿಪಾದ್ಯನೆಂದು ಉಪನಿಷತ್ತೂ ಹೇಳುತ್ತದೆಂದು ತಿಳಿಯುತ್ತೇವೆ. (ಇಲ್ಲವಾದರೆ ಸರ್ವಾ ಋಚಃ ಎಂದು ಪ್ರತ್ಯೇಕ ಹೇಳಿದ್ದೂ ವ್ಯರ್ಥವಾಗುವುದು. ಆದ ಕಾರಣ ಋಕ್ಕುಗಳ ವ್ಯಾಖ್ಯಾನಾದಿಗಳು ಶ್ರೀ ಹರಿಗೆ ಅತಿತುಷ್ಟಿಯನ್ನುಂಟು ಮಾಡುವುದರಿಂದ ಋಕ್ಕುಗಳ ವ್ಯಾಖ್ಯಾನಾದಿಗಳನ್ನೇ ಮಾಡುತ್ತೇವೆ.) (6) (ಇತರ ವೇದಗಳಿಗಿಂತ ವಿಶೇಷತಃ ಋಕ್ಕುಗಳು ಪರಮೇಶ್ವರ ಪ್ರತಿಪಾದಕಗಳ ಎನ್ನುವುದು ಹೇಗೆಂದರೆ) ಯೋ ದೇವಾನಾಂ ನಾಮಧಾ ಏಕ ಏವ ಎನ್ನುವ ಶ್ರುತಿಯಿಂದ ಅಗ್ನಿ ಸೂರ್ಯ ಮೊದಲಾದ ದೇವತೆಗಳ ನಾಮಗಳು ಭಗವದ್ವಾಚಕಗಳಾಗಿರುವ ಕಾರಣ ಋಕ್ಕುಗಳುಭಗವದ್ವಾಚಕಗಳೆನ್ನುವುದು ವಿಶೇಷತಃ ಸ್ಪಷ್ಟವಾಗಿರುವುದರಿಂದ ವಿಶೇಷವಾಗಿಯೂ ಈಶ್ವರನು ಋಕ್ಕುಗಳಿಂದ ಪ್ರತಿಪಾದ್ಯನು ಎಂದು ಉಪನಿಷತ್ತು ಹೇಳುತ್ತದೆ.

ವಿ॥ (1) ವಸಂತೇ ವಸಂತೇ ಜ್ಯೋತಿಷಾ ಯಜೇತ ಇತ್ಯಾದಿ ವೇದಗಳು ಆಪಾತತಃ ಕರ್ಮ ಕಾಲಾದಿಗಳನ್ನು ಬೋಧಿಸುವುದರಿಂದ ಅಜ್ಞರಿಗೆ ಭಗವಂತನನ್ನು ಬೋಧಿಸುತ್ತವೆ ಎಂಬ ಜ್ಞಾನವು ಬರುವುದಿಲ್ಲ. ಅಗ್ನಿಮೀಳೇ ಇತ್ಯಾದಿ ಋಕ್ಕುಗಳು ಅಗ್ನ್ಯಾದಿ ದೇವತೆಗಳ ಗುಣಗಳನ್ನು ಪ್ರತಿಪಾದಿಸುವುದರಿಂದ ಅಗ್ನ್ಯಾದಿ ದೇವತಾಶಬ್ದವು ಭಗವತ್ಪರವೆಂದು ಹೇಳೋಣ. ಆ ಮಂತ್ರೋಕ್ತ ಗುಣಗಳು ಭಗವತ್ಪರಗಳೆಂದು ಸುತರಾಂ ಸಿದ್ಧವಾಗುತ್ತವೆ. ಆದ ಕಾರಣ ಋಕ್ಕುಗಳು ಭಗವತ್ಪರಗಳೆನ್ನುವಲ್ಲಿ ಅತಿಪ್ರಯತ್ನವಿಲ್ಲ. ಆದ ಕಾರಣ ಋಕ್ಕುಗಳು ವಿಶೇಷತಃ ಭಗವದ್ವಾಚಕಗಳೆಂದು ಹೇಳಿದ್ದು. (2) ಋಚಸ್ತು ವಿಶೇಷತಃ ಇಂದ್ರಾದಿ ನಾಮವತೋ ವಿಷ್ಣೋರ್ಗುಣಾನಲ್ಪಜ್ಞಾನಾನಪಿ ಪ್ರಕಾಶಯಂತೀತಿಪ್ರಾಣೇ ನಾರಾಯಣ ಏವೇತಿ ವಿದ್ಯಾತ್ ಋಕ್ಕುಗಳಾದರೂ ಅಲ್ಪ ಜ್ಞಾನಿಗಳಿಗೂ ಇಂದ್ರ ಸೂರ್ಯ ಮೊದಲಾದ ನಾಮವುಳ್ಳ ಶ್ರೀ ವಿಷ್ಣುವಿನ ಗುಣಗಳನ್ನು ವಿಶೇಷತಃ ಪ್ರಕಾಶಗೊಳಿಸುತ್ತವೆ, ಎಂದು ಋಕ್ಕುಗಳು ನಾರಾಯಣನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿಯಬೇಕು ಎಂದು ಐತರೇಯಭಾಷ್ಯದಲ್ಲಿ ಹೇಳಿದೆ. (3) ಹುಂಕಾರೇಣ ಸದ್ಯೆವಾಬ್ಧಿಃ ಸರ್ವಾಭಿಭವಶಕ್ತತಾಂ। ವಿಷ್ಣೋರ್ವಕ್ತಿ ಯತೊ ಹುಂ ಹಿ ಪರಾಭಿಭವವಾಚಕಃ। ಓಮಿತಿ ಸ್ವರತೇ ನಿತ್ಯಂ ವಾಯುರ್ಮೇಘೇಷು ಸಂಸ್ಥಿತಃ। ಬಲವನ್ನಾದ ಸಂಯುಕ್ತೋ ಹ್ಯವಿಕೋಽಚ್ಛತ್ವಮಸ್ಕತು।ಓಂಕಾರಸ್ಯಾರ್ಥಉದ್ದಿಷ್ಟಃ ಉಕ್ತಾರ್ಥಾಧಿಕ್ಯಮೇವಚ।ನಾದೋ ಬಲೀ ಪ್ರವದತಿ ತಥಾ।ಭೇರೀ

ಧ್ವನಿಃ ಪ್ರಭೋಃ।ಅನುದಾತ್ತಸ್ವರೂಪತ್ವಾದೌದಾರ್ಯಂ ವದತೀಶಿತುಃ।ತದಪೇಕ್ಷಯಾ ಹ್ಯನೀಚತ್ವಂ ಘಂಟಾಯಾಃ ಸ್ವರಿತಾತ್ಮತಃ ।ಉಚ್ಛ್ರಿತಿಮುದಾತ್ತಸ್ತು ಸ್ವರ್ಣಚಂಚ್ವಾದಿಕಃ ಸ್ವರಃ। ವಿಷ್ಣೋರ್ವಕ್ತಿ ತಥಾ ಮಂದ್ರಃ ಶ್ವಾಸಾದಿಪ್ರಥನಾತ್ಮಕಃ। ಏಕಪ್ರಕಾರತಾಂ ವಿಷ್ಣೋಃ ಸದಾಽಚಾಲ್ಯಾಂ ವದತ್ಯಪಿ ॥ ಎಂದು ಬೃಹತ್ಸಂಹಿತೆಯಲ್ಲಿ ಹೇಳಿದ ಪ್ರಕಾರ ಸಮುದ್ರಾದಿ ಘೋಷಗಳೂ ಕೂಡ ಭಗವದ್ವಾಚಕಗಳೆಂದು ಸಿದ್ಧಿಸುತ್ತವೆ. ॥೨॥

ಅವ ॥ ಹೀಗೆ ವ್ಯಾಖ್ಯಾನ ಮಾಡಲಿಕ್ಕೆ ಅವಶ್ಯಕವಾದ ಋಗ್ವೇದದ ೨೪ ಪ್ರಭೇದಗಳಲ್ಲಿ ಇದು ಶಾಕಲ ಶಾಖೆಯು. ಇದರಲ್ಲಿ ೬೪ ಅಧ್ಯಾಯಗಳು. ೧೦ ಮಂಡಲಗಳು. ೨೦೦೬ ವರ್ಗಗಳು, ೧೦೦೧ ಸೂಕ್ತಗಳು ಇಂತಹ ಶಾಕಲ ಶಾಖೆಯ ೧ ನೇ ಮಂಡಲದ ೧ ನೇ ಅಧ್ಯಾಯದ ೧ನೇ ಅನುವಾಕದ ೩ ಸೂಕ್ತಗಳಲ್ಲಿ ೧ನೇ ಸೂಕ್ತವು ವ್ಯಾಖ್ಯಾನಾರ್ಹವಾಯ್ತು. ಹೀಗೆ ಇಂತಹ ಋಕ್ಕುಗಳ ಅರ್ಥವನ್ನು ಅವಶ್ಯವಾಗಿ ಹೇಳಬೇಕೆಂದು ಉಪಪಾದಿಸಿ ಈಗ ೧ನೇ ಸೂಕ್ತದ ತಾತ್ಪರ್ಯವನ್ನು ಹೇಳುತ್ತಾರೆ.

ಭಾ ॥ (೧) ತತ್ರಾಹಾಗ್ರೇಽಗ್ನಿನಾಮಕಂ । ಅಗ್ರಣೇತ್ವಂ ಯದಗ್ನಿತ್ವಮಿತ್ಯಗ್ರೇ ನಾಮ ತದ್ಭವೇತ್ ॥ (೨) ಏವಮೇವಾಹ ಭಗವಾನ್ನಿರುಕ್ತಿಂ ಬಾದರಾಯಣಃ ॥ (೩) ಯಥೈವಾಗ್ನ್ಯಾದಯಶ್ಶಬ್ದಾಃ ಪ್ರವರ್ತಂತೇ ಜನಾರ್ದನೇ ॥ ತಥಾ ನಿರುಕ್ತಿಂ ವಕ್ಷ್ಯಾಮೋ ಜ್ಞಾನಿನಾಂ ಜ್ಞಾನಸಿದ್ಧಯೇ ॥ ಇತಿ ತೇನ ॥೩॥

ಅ॥ (೧) ಆ ಋಕ್ಕುಗಳಲ್ಲಿ ಪ್ರಥಮ ಸೂಕ್ತದಲ್ಲಿ ಅಗ್ನಿನಾಮಕ ಭಗವಂತನನ್ನು ವೇದವು ಪ್ರತಿಪಾದಿಸುತ್ತದೆ. (ಅಗ್ನಿನಾಮಕ ಭಗವಂತನನ್ನು ಪ್ರಥಮತಃ ಪ್ರತಿಪಾದಿಸಲಿಕ್ಕೆ ಏನು ಕಾರಣವು ಎಂದರೆ) ಯಾವ ಕಾರಣದಿಂದ ಅಗ್ನಿ ಶಬ್ದವಾಚ್ಯನು ಋಕ್ಸ್ತುತಿ ಪಾದ್ಯಸ್ತುತ್ಯಾದಿಗಳಲ್ಲಿ ಸರ್ವರಿಗಿಂತ ಪ್ರಥಮದಲ್ಲಿ ಸ್ತುತಿಸಲ್ಪಡುತ್ತಾನೋ, (ಅಂದರೆ ಸರ್ವರಿಗಿಂತ ಪ್ರಥಮತಃ ಪೂಜ್ಯನಾಗಿರುತ್ತಾನೋ) ಆದ ಕಾರಣ ಆತನೇ ಅಗ್ರಣೀಃ ಎನ್ನಿಸುತ್ತಾನೆ. ಆದ ಕಾರಣ ಅಗ್ನಿ ಎಂಬ ನಾಮವು ಪ್ರಥಮ ಸೂಕ್ತದಲ್ಲಿ ಪ್ರಯುಕ್ತವಾಗಿದೆ. (ಅಂತಹ ಗುಣವನ್ನೇ ಅಗ್ನಿಶಬ್ದವು ಶ್ರೀ ಹರಿಗೆ ಪ್ರತಿಪಾದಿಸುತ್ತದೆ.) (ಆದ ಪ್ರಯುಕ್ತ ಅಗ್ನಿ ಎಂಬ ನಾಮದಿಂದಲೇ ಪ್ರಥಮತಃ ಶ್ರೀ ಹರಿಯನ್ನು ಸ್ತುತಿಸಿದ್ದು ಯುಕ್ತವು.) (೨) (ಈ ವಿಷಯವಲ್ಲಿ ವೃದ್ಧಸಂಮತಿಯನ್ನು ಹೇಳುತ್ತಾರೆ) ಈ ಅಭಿಪ್ರಾಯದಿಂದಲೇ ಅಗ್ನಿಶಬ್ದವನ್ನು ಆದಿಯನ್ನಾಗಿ ಮಾಡಿ ಷಡ್ಗುಣ ಪರಿಪೂರ್ಣರಾದ ವೇದವ್ಯಾಸರು, ಸರ್ವಶಬ್ದಗಳೂ ಭಗವತ್ಪರಗಳು ಎಂಬ ಅಭಿಪ್ರಾಯದಿಂದ ನಿರ್ವಚನವನ್ನು ಹೇಳಿರುವರು. (೩) ಯಾವ ರೀತಿಯಾಗಿ ನಿರ್ವಚನ ಮಾಡಿದರೆ ಅಗ್ನಿ ಮೊದಲಾದ ಶಬ್ದಗಳು ಶ್ರೀ ಪರಮಾತ್ಮನಲ್ಲಿ ಪ್ರವೃತ್ತಗಳಾಗುತ್ತವೋ, ವಾಗೆ ನಿರುಕ್ತಿಯನ್ನು ಜ್ಞಾನಿಗಳಿಗೆ ಜ್ಞಾನವು ಸಿದ್ಧಿಯಾಗುವುದಕ್ಕಾಗಿ ಹೇಳುವೆವು. (ಹೀಗೆ ಪ್ರತಿಜ್ಞಾ ವಾಕ್ಯದಿಂದ ಅಗ್ನಿ ಶಬ್ದವನ್ನು ಆದಿಯನ್ನಾಗಿ ಮಾಡಿ ನಿರುಕ್ತಿಯನ್ನು ವೇದವ್ಯಾಸರು ಮಾಡಿರುವರು ಎಂದು ತಿಳಿಯುತ್ತದೆ) (ನಿರವಧಿಕ ಜ್ಞಾನಾದಿಗಳುಳ್ಳ ವೇದವ್ಯಾಸರು ಪ್ರಮಾದದಿಂದ ಹೇಳಿರುವರು ಎಂದು ಹೇಳಲಾಗುವುದಿಲ್ಲ. ಮತ್ತು ಇದನ್ನು ಬಿಟ್ಟು ಕಾರಣಾಂತರವನ್ನು ಕಲ್ಪಿಸಲಿಕ್ಕೆ ಪ್ರಮಾಣವಿಲ್ಲ.) (ಯಾವ ಕಾರಣದಿಂದ ಹೀಗೆ ಅಗ್ನಿ ಶಬ್ದವನ್ನು ಪ್ರಥಮದಲ್ಲಿ ಪ್ರಯೋಗಿಸಿದ್ದು ಯುಕ್ತವೋ) ಆ ಕಾರಣದಿಂದ ಆ ಋಕ್ಕುಗಳಲ್ಲಿ ಪ್ರಥಮ ಸೂಕ್ತದಲ್ಲಿ ಅಗ್ನಿನಾಮಕ ಭಗವಂತನನ್ನು ವೇದವು ಪ್ರತಿಪಾದಿಸಿವೆಯದೆ. (ಅತಿ ಪ್ರಾಚೀನ ನಿರುಕ್ತಿ, ಮಹಾವ್ಯಾಕರಣಾದಿಗಳನ್ನು ಅನುಸರಿಸಿಯೇ ನಾವು ವ್ಯಾಖ್ಯಾನ ಮಾಡಿರುವುದರಿಂದ ಯಾಸ್ಕನಿರುಕ್ತಿ ಪಾಣಿನಿವ್ಯಾಕರಣ ಇತ್ಯಾದಿಗಳಿಂದ ವಿರೋಧವು ಅನಾದರಣೀಯವೆಂದು ಸೂಚಿತವಾಯ್ತು. ॥೩॥

ಹರಿಃ ಓ ೩ ಮ್ ॥ ಅಗ್ನಿ ಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ । ಹೋತಾರಂ ರತ್ನಧಾತಮಮ್ ॥
(ಇದು ವ್ಯಾಖ್ಯಾತವಾಗಿದೆ.॥) ॥೧॥

ಅವ॥ ಅಗ್ನಿಮೀಳೇ ಇತ್ಯಾದಿ ಋಕ್ಕುಗಳ ಅರ್ಥವು (೧) ಪ್ರಸಿದ್ಧ ಅಗ್ನ್ಯಾದಿ ಪರವಾದುದು. (೨) ಅಗ್ನ್ಯಂತರ್ಗತ ಅಗ್ನಿಶಾಮಕ ಭಗವತ್ಪರವಾದುದು. (೩) ಶರೀರದಲ್ಲಿರತಕ್ಕ ಭಗವತ್ಪರವು. ಹೀಗೆ ೩ ವಿಧವು. ಆ ೩ ಅರ್ಥಗಳನ್ನು ಭಾಷ್ಯದಲ್ಲಿ ಶ್ರೀ ಮದಾಚಾರ್ಯರು ನಿರೂಪಿಸಿರುವರು. ಅದರಲ್ಲಿ ಅಗ್ನಿಮೀಳೇ ಎಂಬ ೧ನೇ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾ ಅಗ್ನಿಶಬ್ದಾರ್ಥವನ್ನು ನಿರ್ವಚನ ಮಾಡುತ್ತಾರೆ.

ಭಾ ॥ (೧) ಅಗ್ನಿಶಬ್ದೋಽಯಮಗ್ರ ಏವಾಭಿಪೂಜ್ಯತಾಂ । ಅಗ್ರ್ಯತ್ವಮಗ್ರನೇತೃತ್ವಮತ್ತಿ (ತೃ) ಮಂಗಾಗನೇತೃತಾಂ। ಅಹ ತಂ ಸೌತ್ಯಮೃತೇಷಸ್ಯ ಪೂರ್ವಮೇವ ಹಿತಂ ಪ್ರಭುಂ (೨) ಯತ್ವಿಜ್ಞಯಾಮಕತ್ವೇನ ಯಜ್ಞಾನಾಮೃತ್ವಿಜಂ ಸದಾ ॥ (೩) ದ್ಯೋತ (ಜ) ನಾದ್ವಿ ಜಯಾತ್ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ । ಗತ್ಯಾ ರತ್ಯಾ ಚ ದೇವಾಖ್ಯಂ (೪) ಹೋತೃ ಸಂಸ್ಥಂ ವಿಶೇಷತಃ ॥ ಅಗ್ನಿಸಂಸ್ಥೇನ ರೂಪೇಣ ಯತೋಽಗ್ನಿರ್ಹೋತೃದೇವತಾ ॥ (೫) ಇಂದ್ರಿಯಾಗ್ನಿಷು ಚಾರ್ಥಾನಾಂ ಯದ್ಹೋತಾ ಹೋತೃನಾಮಕಃ ॥ (೬) ರತಿ ಧಾರಕೋತ್ತಮತ್ವಾತ್ಸ ರತ್ನಧಾತಮ ಈರಿತಃ ॥೧॥

ಅ॥ (೧) ಆದಿಯಲ್ಲಿ ಪ್ರಯುಕ್ತವಾದ ಅಗ್ನಿಶಬ್ದವು (ಬಾಹ್ಯ ಯಜ್ಞದಲ್ಲಿ) ಅಗ್ನಿಗೂ ಅಗ್ನಿಯಲ್ಲಿ ಅಂತರ್ಗತನಾದ ಅಗ್ನಿನಾಯಕ ಶ್ರೀ ಹರಿಗೂ, ಆಧ್ಯಾತ್ಮದಲ್ಲಿ ಶ್ರೀ ಹರಿಗೆ ಜ್ಞಾನಯಜ್ಞದಲ್ಲಿ ಮುಖ್ಯ ಅಮುಖ್ಯಗಳಾಗಿ ಪೂಜ್ಯರಾದ ಸರ್ವರಿಗಿಂತಲೂ) ಮೊದಲೇ ಚೆನ್ನಾಗಿ ಭಕ್ತಿಪೂರ್ವಕವಾಗಿ ಪೂಜಿಸಲ್ಪಡುವಿಕೆಯನ್ನು ಹೇಳುತ್ತದೆ. ಹಾಗೆಯೇ ಸರ್ವರಿಗಿಂತಲೂ ಪ್ರಥಮದಲ್ಲಿರುವಿಕೆಯನ್ನು (ಅಂದರೆ ಸರ್ವೋತ್ತಮತ್ವವನ್ನು) ಹಾಗೆಯೇ ಪ್ರಥಮತಃ ಸರ್ವ ಪ್ರವರ್ತಕತ್ವವನ್ನೂ, ಅಧ್ಯಾತ್ಮಾಪೇಕ್ಷಯಾ ಬಾಹ್ಯಾರ್ಥದಲ್ಲಿ ಶ್ರೀ ಹರಿಯಲ್ಲಿ ಸಂಹರ್ತೃತ್ವವನ್ನೂ, ಅಗ್ನಿಯಲ್ಲಿಯೂ ಅಗ್ನ್ಯಂತರ್ಗತ ಶ್ರೀ ಹರಿಯಲ್ಲಿಯೂ ಹವಿಸ್ಸುಗಳ ಭೋಕ್ತೃತ್ವವನ್ನೂ, ಅಧ್ಯಾತ್ಮದಲ್ಲಿ (ಶರೀರದಲ್ಲಿ) ವಿಷಯಗಳ ಭೋಕ್ತೃತ್ವವನ್ನೂ, ಹಾಗೆಯೇ ಶರೀರದಲ್ಲಿ ಶ್ರೀ ವಿಷ್ಣುವಿಗೂ ಅಗ್ನಿಯೂ ಸರ್ವ ಶರೀರಗಳ ಪ್ರವರ್ತಕತ್ವವನ್ನೂ, ಹಾಗೆಯೇ ಸ್ವತಃ ಪ್ರವೃತ್ತಿಯಿಲ್ಲದಿರುವ ಸಮಸ್ತ ಜಗತ್ತಿನ ಪ್ರವರ್ತಕತ್ವವನ್ನೂ, ಅಗ್ನಿ ಶಬ್ದವು ಪ್ರತಿಪಾದಿಸುತ್ತದೆ. ಅಂತಹ ಅಗ್ನಿನಾಮಕ ಶ್ರೀ ಪರಮಾತ್ಮನನ್ನು ಸ್ತುತಿಸುತ್ತೇನೆ. ನಮಸ್ಕರಿಸುತ್ತೇನೆ. (ಏಕೆಂದರೆ) ಆತನು ನಿಖಿಲ ಜಗತ್ತಿಗಾಗಿ ಅನಾದಿಕಾಲದಿಂದಲೇ ಹಿತಕರನು. ಸರ್ವರಿಗೂ ಸ್ವಾಮಿಯು, (ಸರ್ವೋತ್ಕೃಷ್ಟನು.) (೨) ಮತ್ತು ಸರ್ವದಾ ಋತ್ವಿಕ್‌ಗಳಲ್ಲಿ ನಿಯಾಮಕನಾಗಿರುವುದರಿಂದ ಬಾಹ್ಯ ಯಜ್ಞಗಳಿಗೂ ಆಧ್ಯಾತ್ಮಿಕರಾದ ಋತ್ವಿಕ್ ಎನಿಸಿಕೊಂಡ ಇಂದ್ರಿಯಾಭಿಮಾನಿ ದೇವತೆಗಳಿಗೂ ಜ್ಞಾನರೂಪ ಆಧ್ಯಾತ್ಮಿಕ ಯಜ್ಞಗಳಿಗೂ ನಿಯಾಮಕನಾಗಿ ಋತ್ವಿಕ್ ಎನಿಸಿಕೊಂಡವನು. ಅಥವಾ ತದಧೀನಸತ್ವಾದರ್ಥಮ್ ಎಂಬ ಸೂತ್ರದಲ್ಲಿ ಇತರರಲ್ಲಿರುವ ದುಃಖಾದಿಗಳು ಶ್ರೀ ಪರಮಾತ್ಮನ ಅಧೀನಗಳಾಗಿರುವುದರಿಂದ ಶ್ರೀ ಪರಮಾತ್ಮನಿಗೆ ದುಃಖ್ಯಾದಿ ಶಬ್ದವಾಚ್ಯತ್ವವಿದ್ದಂತೆಯೇ ಪ್ರಕೃತದಲ್ಲಿಯೂ ಅಗ್ನಿಯಲ್ಲಿರತಕ್ಕ ಋತುಯ ಜನಕರ್ತೃತ್ವರೂಪವಾದ ಋತ್ವಿಕ್ತ್ವವು ಶ್ರೀ ಪರಮಾತ್ಮನ ಅಧೀನವಾಗಿರುವ ಪ್ರಯುಕ್ತ ಶ್ರೀ ಹರಿಯೂ ಋತ್ವಿಕ್ ಎನ್ನಿಸುತ್ತಾನೆ. (ಅಂದರೆ ಋತ್ವಿಗಾದಿಗಳು ಶ್ರೀ ವಿಷ್ಣುವಿನ ಅಧೀನರಾಗಿರುವುದರಿಂದ ಶ್ರೀ ವಿಷ್ಣುವು ಋತ್ವಿಗಾದಿಶಬ್ದವಾಚ್ಯನು. (ಆಧ್ಯಾತ್ಮ ಜ್ಞಾನಯಜ್ಞದಲ್ಲಿ ಇಂದ್ರಿಯಾಭಿಮಾನಿ ದೇವತೆಗಳೇ ಋತ್ವಿಜರು. ಬಾಹ್ಯಯಜ್ಞದಲ್ಲಿ ಆದರೂ ಋತ್ವಿಜರು ಪ್ರಸಿದ್ಧರೆ. (ಋತ್ವಿಜರು ಶಸ್ತ್ರ ಶಂಸನಾದಿ ಕರ್ಮಗಳನ್ನು ಮಾಡುವವರು, ಋಕ್ಕುಗಳು ಕರ್ಮಗಳಿಗೆ ಅಂಗಗಳು, ಕರ್ಮಗಳಿಗೆ ಅಂಗಭೂತಗಳಾದ ಮಂತ್ರಗಳನ್ನು ಋತ್ವಿಜರು ಪ್ರಯೋಗಿಸುವುದರಿಂದ

ಋತ್ವಿಜರ ವಾಕ್ಯಗಳೆಂದಾಗೋಣ ಋತ್ವಿಜರ ವಾಕ್ಯರೂಪಗಳಾದ ಋಕ್ಕುಗಳಿಗೆ ಬಾಹ್ಯಯಜ್ಞದಲ್ಲಿ ಹೋತ್ರಾದಿಗಳಿಗೆ ನಿಯಾಮಕನೂ. ಆಧ್ಯಾತ್ಮಿಕ ಯಜ್ಞದಲ್ಲಿ ಜ್ಞಾನಾರ್ಥಿಗೆ ಆ ವಾಕ್ಯಗಳ ಪ್ರಯೋಗಕ್ಕೆ ಕಾರಣನೂ ಆದ ಶ್ರೀ ಪರಮಾತ್ಮನು ಎಂಬ ಅನುಸಂಧಾನ ರೂಪಜ್ಞಾನವನ್ನು ಕೊಡುವವನೂ ಆದ ಅಗ್ನಿಶಬ್ದವಾಚ್ಯನಾದ ಶ್ರೀ ಹರಿಯ ಸ್ತುತಿಯು ಯುಕ್ತವೇ ಆಗಿದೆ.) (೩) ಪ್ರಕಾಶ ವಿಜಯ ಕಾಂತಿ, ವ್ಯವಹಾರ, ಗತಿ, ರಮಣ, ಮದ, ಸ್ವಪ್ನ, ಇವುಗಳಿಗೆ ಕರ್ತನಾಗಿರುವುದರಿಂದಲೂ ಸ್ತೋತ್ರಕ್ಕೆ ವಿಷಯನಾದುದರಿಂದಲೂ ದೇವನೆನ್ನಿಸಿಕೊಂಡವನು. (೪) ಅಗ್ನಿಯಲ್ಲಿರತಕ್ಕ ರೂಪದಿಂದ ಋತ್ವಿಜರಿಗಿಂತ ವಿಶೇಷತಃ ಹೋತೃವಿನಲ್ಲಿದ್ದಾನೆ. (ಅಂದರೆ - ಋತ್ವಿಜರಲ್ಲಿ ಋತ್ವಿಜರಿಗೆ ನಿಯಾಮಕನಾದ ಋತ್ವಿಕ್ ಶಬ್ದವಾಚ್ಯನಾದ ಶ್ರೀ ಪರಮಾತ್ಮನು ಸನ್ನಿಹಿತನೇ ಆಗಿರುತ್ತಾನೆ. ಹೋತೃವಿನಲ್ಲಿ ಆದರೂ ಅಗ್ನಿ ಮೀಳೇ ಇತ್ಯಾದಿಗಳಲ್ಲಿ ಸ್ತುತ್ಯವಾದದ್ದು ಅಗ್ನಿಯಲ್ಲಿರತಕ್ಕುದು ಅಗ್ನಿಗೆ ನಿಯಾಮಕವಾದುದು ಅಗ್ನಿನಾಮಕವಾದುದು ಯಾವುದು ಭಗವದ್ರೂಪವಿದೆಯೋ ಆ ರೂಪವೇ ಋತ್ವಿಜರಿಗಿಂತ ವಿಶೇಷವಾಗಿ ಸನ್ನಿಹಿತವಾಗಿರುತ್ತದೆ. (ಆದ ಕಾರಣ ಋತ್ವಿಜಂ ಹೋತಾರಂ ಎಂಬವುಗಳಿಗೆ ಪುನರುಕ್ತಿಯಿಲ್ಲ) (ಅಗ್ನಿನಾಮಕ ಶ್ರೀ ವಿಷ್ಣುವು ಹೋತೃವಿನಲ್ಲಿದ್ದಾನೆಂಬುವುದು ಯಾವುದರಿಂದ ಎಂದರೆ) ಹೋತ್ರಿಗೆ ಅಭಿಮಾನಿ ದೇವತೆಯಾಗಿ ಪ್ರಸಿದ್ಧನಾದ ಅಗ್ನಿಯು ಯಾವ ಕಾರಣದಿಂದ ಹೋತನಲ್ಲಿದ್ದಾನೋ ಆದ ಕಾರಣ ಅಗ್ನಿಯಲ್ಲಿರತಕ್ಕ ಶ್ರೀ ವಿಷ್ಣುವು ಹೋತೃವಿನಲ್ಲಿದ್ದಾನೆಂಬುವುದು ಯುಕ್ತವು. (ಹೀಗೆ ಶ್ರೀವಿಷ್ಣುವಿನಲ್ಲಿ ಹೋತೃ ಶಬ್ದವನ್ನು ವ್ಯಾಖ್ಯಾನ ಮಾಡಿ ಅಗ್ನಿಯಲ್ಲಿಯೂ ವ್ಯಾಖ್ಯಾನ ಮಾಡುತ್ತಾರೆ) ಯಾವ ಕಾರಣದಿಂದ ಅಗ್ನಿಯು ಹೋತೃವಿಗೆ ಅಭಿಮಾನಿ ದೇವತೆಯೋ, ಆದ ಕಾರಣ ಅಗ್ನಿಯು ಹೋತಾ ಎನಿಸಿಕೊಳ್ಳುತ್ತಾನೆ. (ಹೇಗೆಂದರೆ ತದ್ಯೇಯಂ ವಾಕ್ ಸೋಽಯಮಗ್ನಿಃ ಸ ಹೋತಾ ಯಾವುದು ವಾಗಿಂದ್ರಿಯವೋ ಅದಕ್ಕೆ ಅಗ್ನಿಯು ಅಭಿಮಾನಿಯು. ಹೋತೃವಿಗೂ ಅಭಿಮಾನಿಯು, ಎಂದು ಶ್ರುತಿಯು) ಋಗ್ವೇದಿಗಳು ಹೋತೃತ್ವವನ್ನು ಅಪೇಕ್ಷಿಸುವವರು. ಆದ ಕಾರಣ ಹೋತೃವಿನಲ್ಲಿರತಕ್ಕ ಭಗವದ್ರೂಪವನ್ನು ಸ್ತುತಿಸಿದ್ದು ಯುಕ್ತವೇ (೫) (ಆಧ್ಯಾತ್ಮದಲ್ಲಿ ಹೋತೃ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ) ಯಾವ ಕಾರಣದಿಂದ ಇಂದ್ರಿಯಾಖ್ಯ ಅಗ್ನಿಗಳಲ್ಲಿ ಆಯಾವ ಇಂದ್ರಿಯಗಳಿಗೆ ವಿಷಯಗಳಾದ ಹವಿಸ್ಸುಗಳನ್ನು ಶ್ರೀ ಹರಿಯು ಹೋಮಿಸುವವನೋ, ಆದುದರಿಂದಲೂ ಹೋತನೆಂದು ಹೆಸರುಳ್ಳವನು, (೬) ಇಂದ್ರಿಯ ವಿಷಯ ಸಂಬಂಧ ಸಂಪಾದನದ್ವಾರಾ ವಿಷಯಾನುಭವರೂಪ ಭೋಗವನ್ನು ಯಾರು ಕೊಡುತ್ತಾರೋ, ಅವರ ಸ್ತುತಿಯನ್ನು ಮಾಡಲೇಬೇಕು. ಶ್ರೀ ಹರಿಯು ಪರಮ ಸುಖಸ್ವರೂಪನಾದುದರಿಂದ ಸುಖಾರ್ಥಿಗಳು ಆ ಶ್ರೀ ಹರಿಯನ್ನು ಸ್ತುತಿಸುವುದು ಯುಕ್ತವೆನ್ನುವ ಅಭಿಪ್ರಾಯದಿಂದ ರತ್ನಧಾತನು ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ರತಿಯನ್ನು (ಸುಖವನ್ನು) ಧರಿಸುವವರಲ್ಲಿ ಉತ್ತಮೋತ್ತಮನಾದುದರಿಂದಲೂ ರಮಣೀಯಗಳಾದ ಧನಗಳನ್ನು ಭಕ್ತರಿಗೆ ಸರ್ವಾಪೇಕ್ಷಯಾ ವಿಶೇಷತಃ ಕೊಡುವವನಾದುದರಿಂದಲೂ ಶ್ರೀ ಹರಿಯು ರತ್ನಧಾತಮಃ ಎನಿಸುತ್ತಾನೆ. (1) ರತ್ನಂ ರತಿಂ ಧತ್ತೇ ಇತಿ ರತ್ನಧಾಃ । ಅತಿಶಯೇನ ರತ್ನದಾಃರತ್ನಧಾತಮಃ ಎಂದು. (2) ನವಾ ಏಕೇ ನಾಕ್ಷ ರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ ಒಂದೆರಡು ಅಕ್ಷರಗಳು ನ್ಯೂನಗಳಾದರೂ ಅಧಿಕವಾದರೂ ದೋಷವಿಲ್ಲ, ಎಂಬ ಪ್ರಮಾಣದಿಂದ ರತಿಧಾರಕೋತ್ತಮತ್ವಾತ್ಸಃ ಎಂಬ ಭಾಷ್ಯದಲ್ಲಿ ವರ್ಣಾಧಿಕ್ಯವು ದೋಷಾಧಾಯಕವಲ್ಲ.) ||೧||

ಅವ|| ಆಚಾರ ಬಲದಿಂದಲೂ ಅಗ್ನಿಯನ್ನು ಸ್ತುತಿಸುವುದು ಯುಕ್ತವೆನ್ನುವ ಅಭಿಪ್ರಾಯದಿಂದ ಆಚಾರವೂ ಇದೆ ಎನ್ನುತ್ತಾರೆ.

**ಋಕ್ । ಅಗ್ನಿಃ ಪೂರ್ವೇಭಿಋಷಿಭಿರೀಡ್ಯೋ ನೂತನೈರುತ । ಸ ದೇವಾ ಏಹ ವಕ್ಷತಿ ॥೨॥**

ಅ॥ ಅಗ್ನಿಃ =ಅಗ್ನಿಯು, ಪೂರ್ವೇಭಿಃ=ಪುರಾತನರೂ ನೂತನೈಃ =ವರ್ತಮಾನಕಾಲಿಕರೂ, ಉತ=ಭವಿಷ್ಯತ್ಕಾಲಿಕರೂ ಆದ. ಋಷಿಭಿಃ =ಜ್ಞಾನಿಗಳಾಗಿರುವುದರಿಂದ ಋಷಿಗಳೆನಿಸಿಕೊಂಡ ದೇವಾದಿಗಳಿಂದ ಈಡಃ =ಸ್ತುತ್ಯನು ಸಃ=ಸ್ತುತ್ಯನಾದ ಅಗ್ನಿಯೂ, ಅಗ್ನಿಯಲ್ಲಿರತಕ್ಕ ಆಧ್ಯಾತ್ಮದಲ್ಲಿರತಕ್ಕ ಶ್ರೀ ಹರಿಯೂ, ಇಹ=ಈ ಬಾಹ್ಯಯಜ್ಞದಲ್ಲಿ, ದೇವಾನ್=ಹವಿಸ್ಸನ್ನು ಭಜಿಸುವ ದೇವತೆಗಳನ್ನು ಅವಕ್ಷತಿ = ತರಿಸಲಿ. ಜ್ಞಾನಯಜ್ಞದಲ್ಲಿ ಇಂದ್ರಿಯಾಭಿಮಾನಿಗಳಾದ ದೇವತೆಗಳನ್ನು ತರಿಸಲಿ. (ಅಂದರೆ ವಿಶೇಷವಾಗಿ ನಮಗೆ ಉಪಕಾರಿಗಳನ್ನಾಗಿ ಮಾಡಲಿ.) ॥೨॥

ಅವ॥ ಅಗ್ನ್ಯಂತರ್ಗತ ಅಧ್ಯಾತ್ಮಗತ ಅಗ್ನಿನಾಮಕ ಶ್ರೀ ಹರಿಯ ಸ್ತೋತ್ರದಲ್ಲಿ ಆಚಾರವೂ ಇದೆ ಎಂದು ಹೇಳುತ್ತಾರೆ.

**ಭಾ ॥ ಸ ಪೂರ್ವೈರ್ನೂತನೈರೇಷ್ಯೈರ್ವಿಜ್ಞಾನಾದೃಷಿನಾಮಕೈಃ । ಈಡ್ಯೋ ದೇವಾದಿ ಭಿಸ್ಸರ್ವೈಸ್ಸಚ ದೇವಾನಿಹಾನಯೇತ್ ॥೨॥**

ಅ॥ ಆ ಅಗ್ನಿಯೂ ಅಗ್ನಿಯಲ್ಲಿರತಕ್ಕ ಅಧ್ಯಾತ್ಮಗತವಾದ ಶ್ರೀ ಹರಿಯೂ ಕೂಡ, ಪುರಾತನರೂ, ವರ್ತಮಾನ ಕಾಲಿಕರೂ, ಭವಿಷ್ಯತ್ಕಾಲಿಕರೂ ವಿಶಿಷ್ಟ ಜ್ಞಾನವಿದ್ದುದರಿಂದ ಋಷಿನಾಮಕರೂ ಆದ ದೇವಾದಿಗಳಿಂದೆಲ್ಲರಿಂದಲೂ ಸ್ತುತ್ಯನಾದವನು. ಸ್ತುತಿಸಲ್ಪಟ್ಟ ಆ ಅಗ್ನಿಯು, ಶ್ರೀ ಹರಿಯೂ ಸ್ತುತಿ ಮಾಡಿದ ಋಷಿಗಳ ಸಂಬಂಧಿಯಾದ ಬಾಹ್ಯ ಯಜ್ಞದಲ್ಲಿ ದೇವತೆಗಳನ್ನು ಹವಿಸ್ಸುಗಳನ್ನು ಭೋಜಿಸುವುದಕ್ಕಾಗಿ ತರಿಸಲಿ. ಜ್ಞಾನಯಜ್ಞದಲ್ಲಿ ಆದರೂ ಇಂದ್ರಿಯಾಭಿಮಾನಿ ದೇವತೆಗಳು ಸದಾ ಇದ್ದರೂ ಅವರನ್ನು ಸ್ತಾವಕರಾದ ಋಷಿಗಳಿಗೆ ಜ್ಞಾನಭಕ್ತ್ಯಾದಿ ವಿಶೇಷಗಳನ್ನು ಕೊಟ್ಟು ಉಪಕಾರಿಗಳನ್ನಾಗಿ ಮಾಡಲಿ. ॥೨॥

ಅವ ॥ ಅಗ್ನಿಯು ಅಭೀಷ್ಟವನ್ನು ಕೊಡುವವನಾದುದರಿಂದ ಆತನ ಸ್ತೋತ್ರವು ಯುಕ್ತವೆಂಬ ಅಭಿಪ್ರಾಯದಿಂದ, ಆತನು ಅಭೀಷ್ಟವನ್ನು ಕೊಡುವವನೆಂದು ಹೇಳುತ್ತಾರೆ.

**ಋಕ್ ॥ ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇ ದಿವೇ । ಯಶಸಂ ವೀರವತ್ತಮಂ ॥೩॥**

ಅವ ॥ (ಸ್ತುತಿ ಮಾಡುವವನು) ಅಗ್ನಿನೈವ=ಅಗ್ನಿಯ ಮತ್ತು ಅಗ್ನ್ಯಂತರ್ಗತ ಶ್ರೀ ಪರಮಾತ್ಮನ ಪ್ರಸಾದದಿಂದಲೇ, ರಯಿಂ =ಬಾಹ್ಯ ಯಜ್ಞದಲ್ಲಿ ಧನಾತ್ಮಕ ವಿತ್ತವನ್ನೂ, ಆಧ್ಯಾತ್ಮದಲ್ಲಿ ಜ್ಞಾನಾಖ್ಯವಿತ್ತವನ್ನು ಅಶ್ನವತ್ = ಹೊಂದುತ್ತಾನೆ. ದಿವೇ ದಿವೇ =ದಿವಸ ದಿವಸದಲ್ಲಿ (ನಿತ್ಯದಲ್ಲಿಯೂ) ಪೋಷಮೇವ = (ಪ್ರಾಪ್ತವಾದ ದ್ರವ್ಯದ) ಪುಷ್ಟಿಯನ್ನೇ ಹೊಂದುತ್ತಾನೆ. (ಲೋಕದಂತೆ ಹೀನತ್ವವನ್ನು ಹೊಂದುವುದಿಲ್ಲ.) ವೀರವತ್ತಮಂ = (ಭಾಹ್ಯದಲ್ಲಿ) ಅತಿಶಯತ ಪುತ್ರನುಳ್ಳ (ಸದ್ಗುಣ ಭರಿತನಾದ ಪುತ್ರನಿಂದ ಯುಕ್ತವಾದ) ಯಶಸಂ =ಕೀರ್ತಿಯನ್ನು, ಆಧ್ಯಾತ್ಮದಲ್ಲಿ ವೀರ್ಯವತ್ತಾದ ಯಶಸ್ಸು ಜ್ಞಾನ ಸುಖ

ಇವುಗಳನ್ನು ಅಶ್ನವತ್ =ಹೊಂದುತ್ತಾನೆ. ||೩||

ಭಾ ॥ ತೇನೈವ ರಯಿಮಾಪ್ನೋತಿ ವಿತ್ತಂ ವಿದ್ಯಾಧನಾತ್ಮಕಂ । ದಿವಸೇ ದಿವಸೇ ನಿತ್ಯಂ ಪುಷ್ಟಿಮೇವ ನ ಹೀನತಾಂ ಯಶಶ್ಚ ಪುತ್ರಸಂಯುಕ್ತಂ ವೀರ್ಯವತ್ತಮ ಮೇವ ವಾ ||೩||

ಅ । ಸ್ತುತಿಸುವವನು ಅಗ್ನಿಯ ಪ್ರಸಾದದಿಂದಲೇ, ಬಾಹ್ಯದಲ್ಲಿ ಧನಾತ್ಮಕವಾದ ವಿತ್ತವನ್ನು, ಆಧ್ಯಾತ್ಮದಲ್ಲಿ ವಿದ್ಯಾರೂಪ ವಿತ್ತವನ್ನೂ, ಹೊಂದುತ್ತಾನೆ. ಪ್ರತಿ ದಿವಸಗಳಲ್ಲಿಯೂ ನಿತ್ಯದಲ್ಲಿಯೂ ಹೊಂದಿದ ದ್ರವ್ಯದ ಪುಷ್ಟಿಯನ್ನೇ ಹೊಂದುತ್ತಾನೆ. ಪುನಃ ಲೋಕದಂತೆ ಹೀನತ್ವವನ್ನು ಹೊಂದುವುದಿಲ್ಲ. ಬಾಹ್ಯದಲ್ಲಿ ಸದ್ಗುಣಭರಿತರಾದ ಪುತ್ರರಿಂದ ಕೂಡಿರುವ ಕೀರ್ತಿಯನ್ನೂ, ಆಧ್ಯಾತ್ಮದಲ್ಲಿ ವೀರ್ಯವತ್ತಾದ ಯಶಸ್ಸು, ಜ್ಞಾನಸುಖಗಳನ್ನು, ವೀರ್ಯವತ್ತಾದ ಅಪರೋಕ್ಷ ಜ್ಞಾನವನ್ನು ಮೌಕ್ತ ಸುಖವನ್ನು ಹೊಂದುತ್ತಾನೆ. (ದ್ರವ್ಯ ಪುತ್ರ ಕೀರ್ತಿಗಳ ಪ್ರಾಪ್ತಿಯು ಬಾಹ್ಯಾಗ್ನಿ ಅಗ್ನಿಯಲ್ಲಿರತಕ್ಕ ಶ್ರೀ ವಿಷ್ಣುವಿನ ಪ್ರಸಾದದಿಂದಲೇ, ರಯಿಶಬ್ದೋಕ್ತವಾದ ಪರೋಕ್ಷಜ್ಞಾನ ಅಪರೋಕ್ಷಜ್ಞಾನ ಮುಕ್ತಿಸುಖ ಇವುಗಳನ್ನು ಆಧ್ಯಾತ್ಮದಲ್ಲಿರತಕ್ಕ ಶ್ರೀ ವಿಷ್ಣುವಿನ ಪ್ರಸಾದದಿಂದಲೇ) ಎಂದು ವಾ=ವ್ಯವಸ್ಥಿತ ವಿಕಲ್ಪವು. ||೩||

ಅವ॥ ಹೀಗೆ ೩ ದಿಕ್ಕುಗಳಿಂದ ಸ್ತೋತ್ರವು ಯುಕ್ತವೆಂದು ಹೇಳಿ ಈಗ ಅಗ್ನಿಯನ್ನು ಸ್ತುತಿಸುತ್ತಾರೆ.

ಋಕ್ । ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ||೪||

ಅ॥ ಅಗ್ನೇ =ಎಲೋ ಅಗ್ನಿಯೇ, (ನೀನು) ಅಧ್ವರಂ =ವಿಧಿಮಾರ್ಗದಲ್ಲಿರತಕ್ಕ, (ಶಾಸ್ತ್ರದಲ್ಲಿ ವಿಹಿತಪ್ರಕಾರವಾಗಿಯೇ ಅನುಷ್ಠಿತವಾದ) ಯ ಯಜ್ಞಂ =ಯಾವ ಬಾಹ್ಯ ಅಂತರವಾದ ಯಾಗವನ್ನು ವಿಶ್ವತಃ ಸರ್ವ ಕಾಲದಲ್ಲಿ (ಯಾವಾಗಲೂ) ಪರಿಭೂಃ ಅಸಿ =ಸುತ್ತಲೂ ಇದ್ದು ರಕ್ಷಿಸುತ್ತಿಯೋ, ಸ ಇತ್ =ಅಂತಹ ಯಜ್ಞವೇ, ದೇವೇಷು ಗಚ್ಛತಿ =ದೇವತೆಗಳನ್ನು ಹೊಂದುತ್ತದೆ. (ಭಗವಂತನಿಂದ ರಕ್ಷಿತವಾದ ಯಜ್ಞವನ್ನೇ ದೇವತೆಗಳು ಸ್ವೀಕರಿಸುತ್ತಾರೆ.) (ಅಂತಹ ಜ್ಞಾನ ಯಜ್ಞಕ್ಕೇನೇ ದೇವಾದಿಗಳು ವಿಷಯರಾಗುತ್ತಾರೆ.) ಎಂದು ಆಧ್ಯಾತ್ಮಾರ್ಥವು.

ಭಾ ॥ ಯಂ ಯಜ್ಞಂ ಪರಿತೋ ಭೂತ್ವಾ ರಕ್ಷಸಿ ತ್ವಂ ಸದೈವ ಚ । ವಿಧಿಮಾರ್ಗ ಸ್ಥಿತಂ ದೇವಾನ್ಸ ಏವಾಪ್ನೋತ್ಯಸಂಶಯಂ ||೪||

ಅ॥ (ಎಲೋ ಅಗ್ನಿಯೇ) ನೀನು ಶಾಸ್ತ್ರೋಕ್ತಪ್ರಕಾರ ಅನುಷ್ಠಿತವಾದ ಬಾಹ್ಯ ಅಂತರ ಯಾವ ಯಜ್ಞವನ್ನು ಯಾವಾಗಲೂ ಸುತ್ತಮುತ್ತಲೂ ರಕ್ಷಿಸುತ್ತಿಯೋ, ಅಂತಹ ಯಜ್ಞವೇ, ನಿಶ್ಶಂಸಯವಾಗಿ ದೇವತೆಗಳನ್ನು ಹೊಂದುತ್ತದೆ, (ಪರಮೇಶ್ವರನಿಂದ ರಕ್ಷಿತವಾದ ಯಜ್ಞವನ್ನೇ ದೇವತೆಗಳು ಸ್ವೀಕರಿಸುತ್ತಾರೆ. ಅಂತಹ ಜ್ಞಾನಯಜ್ಞಕ್ಕೇನೇ ದೇವಾದಿಗಳು ವಿಷಯರಾಗುತ್ತಾರೆ)

ಋಕ್ ॥ ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ । ದೇವೋ ದೇವೇಭಿರಾಗಮತ್ ||೫||

ಅ॥ ಹೋತಾ = ಹೋತನಿಗೆ ಪ್ರೇರಕನಾಗಿ ಹೋತೃವಿನಲ್ಲಿದ್ದುದರಿಂದ ಹೋತಾ ಎನಿಸಿಕೊಂಡ ಕವಿಕ್ರತುಃ =ಸರ್ವವಿಷಯಕ ಜ್ಞಾನಕ್ಕಾಗಿ ವಿಶೇಷ ಪ್ರಜ್ಞೆಯುಳ್ಳ, ಸತ್ಯಃ=ನಿರ್ದುಷ್ಟಗಳಾದ ಗುಣಗಳಿಂದ ವ್ಯಾಪ್ತನೂ ಸರ್ವನಿಯಾಮಕನೂ, ಚಿತ್ರಶ್ರವಸ್ತಮಃ=ಅದ್ಭುತವಾದ (ಉತ್ತಮವಾದ) ಕೀರ್ತಿಯುಳ್ಳ ಪುರುಷರ ಮಧ್ಯದಲ್ಲಿ ಉತ್ತಮನು, ದೇವಃ=ಕ್ರೀಡಾದಿ ಗುಣ ವಿಶಿಷ್ಟನು, ಸ್ತುತಿವಿಷಯನು, ಇಂತಹ, ಅಗ್ನಿಃ =ಅಗ್ನಿಯು, ದೇವೇಭಿಃ=ಯಜ್ಞಭಾಗಿಗಳಾದ ದೇವತೆಗಳಿಂದ ಆಧ್ಯಾತ್ಮದಲ್ಲಿ ಇಂದ್ರಿಯಾಭಿಮಾನಿಗಳಾದ ದೇವತೆಗಳಿಂದ ಆಗಮತ್ =ಯಜ್ಞಸ್ಥಾನವನ್ನು ಭಕ್ತರ ಶರೀರವನ್ನಾಗಲೀ, ಹೊಂದುತ್ತಾನೆ. (ಇಂತಹ ಶ್ರೀ ಹರಿಯು ಭಕ್ತರ ಬಾಹ್ಯ ಆಧ್ಯಾತ್ಮಿಕ ಪೂಜೆಗಳನ್ನು ಸ್ವೀಕರಿಸುವುದರಲ್ಲಿ ಆಸಕ್ತನಾಗಿ ಭಕ್ತರಲ್ಲಿ ವಿಶೇಷತಃ ಸನ್ನಿಹಿತನಾಗಿರುತ್ತಾನೆ.) ॥೫॥

**ಭಾ ॥ ಸೋಽಖಿಲಗ್ರಹಣಪ್ರಜ್ಞಃ ಸದ್ಗುಣೈಸ್ಸಂತೋಽಖಿಲಂ ।**
**ಯಮಯತ್ಯಗ್ರ್ಯಕೀರ್ತಿನಾಮುತ್ತಮೋ ವಿಬುಧೈಸ್ಸಹ॥**
**ಆಗಂತಾಽಖಿಲಭಕ್ತಾನಾಂ ಪೂಜಾಸ್ವೀಕಾರತತ್ಪರಃ ॥೫॥೧॥**

ಅ॥ ಆ ಅಗ್ನಿಯು ಸಮಸ್ತ ಜ್ಞಾನಕ್ಕಾಗಿ ಪ್ರಜ್ಞೆಯುಳ್ಳವನು, ಜಗತ್ಸೃಷ್ಟಿಕರ್ತತ್ವ ಮೊದಲಾದ ಧರ್ಮಗಳಿಂದ ವ್ಯಾಪ್ತನು, ಮತ್ತು ಸಮಸ್ತ ಜಗತ್ತಿಗೂ ಪ್ರೇರೇಪಕನು, ಉತ್ತಮ ಕೀರ್ತಿಯುಳ್ಳ ಪುರುಷರ ಮಧ್ಯದಲ್ಲಿ ಉತ್ತಮೋತ್ತಮನು, ಇಂತಹ ಶ್ರೀ ಹರಿಯು ಸಮಸ್ತ ಭಕ್ತರ ಬಾಹ್ಯ ಆಧ್ಯಾತ್ಮಿಕ ಪೂಜೆಗಳನ್ನು ಸ್ವೀಕರಿಸುವುದರಲ್ಲಿ ಆಸಕ್ತನಾಗಿ ಯಜ್ಞ ಭೋಕ್ತೃಗಳಾದ ದೇವತೆಗಳಿಂದಲೂ ಇಂದ್ರಿಯಾಭಿಮಾನಿಗಳಾದ ದೇವತೆಗಳಿಂದಲೂ ಒಡಗೂಡಿ ಭಕ್ತರಿಗೆ ಪ್ರೀತಿಯನ್ನುಂಟು ಮಾಡುವುದಕ್ಕಾಗಿಯೇ (ಹವಿರಾದಿಗಳನ್ನು ತಿನ್ನುವ ಆಶಯದಿಂದ ಅಲ್ಲ) ಯಜ್ಞಸ್ಥಾನವನ್ನು ಕುರಿತು ಮತ್ತು ಭಕ್ತರ ಶರೀರವನ್ನು ಕುರಿತು ಬರುತ್ತಾನೆ. ಅಂದರೆ ಅಲ್ಲಿ ವಿಶೇಷತಃ ಸನ್ನಿಹಿತನಾಗುತ್ತಾನೆ. ॥೫॥೧॥

**೧ನೇ ವರ್ಗವು ಸಮಾಪ್ತವಾಯಿತು.**

**ಋಕ್ ॥ ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ ॥೬॥**

ಅ॥ ಅಂಗ = ಸಜ್ಜನರಿಗೆ ಪ್ರಿಯನಾದ, ಅಂಗಿರಃ ಅಂಗಿರ ಋಷಿಯ ಪುತ್ರನಾದುದರಿಂದ ಅಂಗಿರಃ ಎನಿಸಿಕೊಂಡವನೇ, ಮತ್ತು ಆತನಲ್ಲಿ ಶ್ರೀ ಹರಿಯು ನಿಯಾಮಕನಾಗಿದ್ದುದರಿಂದ ಅಂಗಿರಃ ಎನಿಸಿಕೊಂಡವನೇ (ಆಧ್ಯಾತ್ಮದಲ್ಲಿ) ಸರ್ವರ ಶರೀರಗಳಿಗೆ ಪ್ರೇರಕನೂ ಆದ ಅಗ್ನೆ (=ಎಲೋ ಅಗ್ನಿಯೇ ತ್ವ =ನೀನು, ದಾಶುಷೇ - ದಕ್ಷಿಣಾದಿಗಳನ್ನು ಕೊಡತಕ್ಕ ಯಜಮಾನನಿಗಾಗಿ, ಭದ್ರ =ಮಂಗಲವನ್ನು, ಕರಿಷ್ಯಸೀತಿ ಯತ್ =ಮಾಡಲಿಕ್ಕೆ ಇಚ್ಛಿಸುತ್ತಿ ಎನ್ನುವುದು ಯಾವುದೋ, ತತ್=ಅದು, ತವ ಇತ್ =ನಿನಗೇನೇ, ಸತ್ಯಂ=ಯಥಾರ್ಥವು. (ಅಂದರೆ ಈತನಿಗೆ ಇಂತಹ ಅಭೀಷ್ಟವನ್ನು ಕೊಡುತ್ತೇನೆಂದು ಇಚ್ಛಿಸಿದರೆ ನಿಶ್ಚಯವಾಗಿಯೂ ಕೊಡುತ್ತಿ.) ॥೬॥

**ಭಾ ॥ ಯಜಮಾನಾಯ ಯದ್ಭದ್ರಂ ಕರ್ತುಮಿಚ್ಛಸಿ ಸತ್ಪ್ರಿಯ । ತ್ವ(ಯ)ಚ್ಛೇಷ್ಟ್ಯೈವ ಕರ್ಮಾಣಿ ವರ್ತಯಿತ್ವಾ ತದೀಹಸಂ॥**
**ತವೈವ ಸತ್ಯಮಂಗಾನಾಂ ರಸ ಯದ್ವಹ್ನಿಗೋ ಹರಿಃ ॥ ಅಂಗಿರಾಃ ಅಂಗಿರಃಪುತ್ರೋ ಯತೋಽಗ್ನಿರಭವತ್ಕ್ವಚಿತ್ ॥೬॥**

ಅ॥ ಸಜ್ಜನರಿಗೆ ಪ್ರಿಯನಾದ ಅಗ್ನಿಯೇ ಹವಿಸ್ಸು ಮೊದಲಾದುದನ್ನು ಕೊಡತಕ್ಕ ಯಜಮಾನನಿಗಾಗಿ, ಮಂಗಲಕಾರ್ಯವನ್ನೇ ಮಾಡಬೇಕೆಂದು ಯಾವುದು ಇಚ್ಛಿಸುತ್ತಿಯೋ, ಅಂತಹ ಇಚ್ಛಾರೂಪವ್ಯಾಪಾರವು ನಿನಗೇನೇ ಸತ್ಯವು - (ಅಂದರೆ ಇಂತಹ ಫಲವನ್ನು ಕೊಡುತ್ತೇನೆಂದು ಇಚ್ಛಿಸಿದರೆ ಕೊಡುವಿಯೇ.) (ಮತ್ತು ಯಜಮಾನನು ಪೂಜಿಸುತ್ತಾನೆ. ತಾನು ಫಲವನ್ನು ಕೊಡುತ್ತೇನೆಂದು ವಿನಿಮಯವಲ್ಲ. (ಉಪಕಾರಕ್ಕೆ ಪ್ರತ್ಯುಪಕಾರವಲ್ಲ, ಮತ್ತೆ) ಅಂಗಾನಾಂ ರಸ=ಸರ್ವರ ಶರೀರ ಪ್ರವರ್ತಕನೇ, ಯಾವ ನಿನ್ನ ಚೇಷ್ಟೆಯಿಂದಲೇ ಯಜಮಾನನಿಂದ ಸತ್ಕರ್ಮವನ್ನು ಮಾಡಿಸಿಕೊಂಡೇ ಇರುತ್ತಿ. (ಅಂದರೆ ಪೂಜಾದಿಕರ್ಮಗಳಿಗೆ ಪ್ರವರ್ತಕನೂ ನೀನೇ) ಕಾರಣ ಅಂಗಿರಾಃ ಎನಿಸುತ್ತಾನೆ. (ಶ್ರೀ ಹರಿಯು ವಹ್ನಿಯಲ್ಲಿದ್ದರೂ ಹೇಗೆ ಅಂಗಿರಾಃ ಎನಿಸಿಕೊಳ್ಳುತ್ತಾನೆಂದರೆ) ಯಾವ ಕಾರಣದಿಂದ ಕೆಲವು ಕಾಲದಲ್ಲಿ ಅಗ್ನಿಯು ಅಂಗಿರ ಋಷಿಯ ಪುತ್ರನಾಗಿರುವನೋ, ಆದ ಕಾರಣ ಗೋಭಿಃಶ್ರೀಣೀತ ಮತ್ಸರಂ ಮದಜನಕವಾದ ಸೋಮವನ್ನು ಗೋವಿನ ವಿಕಾರಗಳಾದ ಪಯಸ್ಸುಗಳಿಂದ ಮಿಶ್ರೀಕರಿಸಬೇಕು. ಇತ್ಯಾದಿಗಳಲ್ಲಿ ಕಾರ್ಯಕಾರಣಗಳಿಗೆ ಅಭೇದವು ಕಂಡದ್ದರಿಂದಲೂ ಯತ್ರ ವಾ ಪಿತುಃ ತದ್ವಾ ಪುತ್ರಸ್ಯ ಎಂಬ ಶ್ರುತಿಯಿಂದ ಅಗ್ನಿಯು ಅಂಗಿರಸ ಋಷಿಗಳ ಪುತ್ರನಾದುದರಿಂದ ಅಂಗಿರಾಃ ಎನಿಸುತ್ತಾನೆ. ಅಗ್ನಿಯಲ್ಲಿ ನಿಯಾಮಕನಾಗಿದ್ದುದರಿಂದ ಶ್ರೀ ಹರಿಯೂ ಕೂಡಾ ತದಧೀನತ್ವಾದರ್ಥವತ್ ಎಂಬ ನ್ಯಾಯದಿಂದ ಅಂಗಿರಾಃ ಎನಿಸುತ್ತಾನೆ. ॥೬॥

ಋ॥ ಉಪ ತ್ವಾಽಗ್ನೇ ದಿವೇ ದಿವೇ ದೋಷಾವಸ್ತರ್ಧಿಯಾ ವಯಂ । ನಮೋ ಭರಂತ ಏಮಸಿ ॥೭॥

ಅ॥ ಅಗ್ನೇ =ಎಲೋ ಅಗ್ನಿಯೇ, ಧಿಯಾ=ಬುದ್ಧ್ಯಾದಿಗುಣಗಳಿಂದ, ವಯಂ=ನಾವು (ಅತ್ಯಲ್ಪರಾದಾಗ್ಯೂ) ದಿವೇ ದಿವೇ ದಿನದಿನವೂ (ಪ್ರತಿನಿತ್ಯವೂ) ದೋಷಾವಸ್ತಃ=ಹಗಲು ರಾತ್ರಿಯಲ್ಲಿ, ಸರ್ವದಾ, ನಮಃ=ನಿನ್ನ ನಮಸ್ಕಾರವನ್ನು, ಭರಂತಃ=ಧರಿಸಿದವರಾಗಿ, (ಮಾಡುತ್ತಾ) ತ್ವಾ=ನಿನ್ನನ್ನು (ಉಚ್ಚ ಗುಣಗಳುಳ್ಳವನನ್ನಾಗಿಯೂ) ಉಪ ಆ ಇಮಸಿ=ಶರಣು ಹೊಂದುವೆವು.

ಭಾ॥ ವಸ್ತರ್ದಿನಮಹೋರಾತ್ರಮಭೀಷ್ಟಪ್ರಾಣಿನಾಂ ಸದಾ।
ಅಲ್ಪಾ ಅಪಿ ವಯಂ ಬುದ್ಧ್ಯಾ ತ್ವಾಮುಚ್ಚಗುಣಮೀಶ್ವರಂ।
ಉಪಯಾಮ ಮನಃಕರ್ಮ ವಾಗ್ಭಿಸ್ತ್ವನ್ನಮಸಂಭರಾಃ ॥೭॥

ಅ॥ ಯಾವಾಗಲೂ ಪ್ರಾಣಿಗಳಿಗೆ ಅಭೀಷ್ಟದಾಯಕನೇ ಬುದ್ಧ್ಯಾದಿ ಗುಣಗಳಿಂದ ನಾವು ಅತ್ಯಲ್ಪರಾದಾಗ್ಯೂ ವಸ್ತಃ =ಹಗಲು (ಹಗಲು ರಾತ್ರಿ) ಸರ್ವದಾ ಮನಸ್ಸು ಕರ್ಮವಚನಗಳಿಂದ ನಿನ್ನ ನಮಸ್ಕಾರವನ್ನು ಭಕ್ತಿಪೂರ್ವಕ ಧರಿಸಿದವರಾಗಿ (ಮಾಡುವವರಾಗಿ) ಸರ್ವೋತ್ಕೃಷ್ಟ ಗುಣಗಳುಳ್ಳವನೂ, ಸರ್ವನಿಯಾಮಕನೂ ಆದ ನಿನ್ನನ್ನು ಕೇವಲ ಭಕ್ತ್ಯತಿಶಯವಶದಿಂದಲೇ ಶರಣು ಹೊಂದುತ್ತೇವೆ. ॥೭॥

ಋ॥ ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ । ವರ್ಧಮಾನಂ ಸ್ವೇ ದಮೇ ॥೮॥

ಅ॥ ಅಧ್ವರಾಣಾಂ=ಯಜ್ಞಗಳಿಗೆ, ರಾಜಂತಂ=ನಿಯಾಮಕನು, (ಅಂದರೆ -ಬಾಹ್ಯ ಆಧ್ಯಾತ್ಮಿಕ ಯಜ್ಞಗಳಿಗೆ ಸ್ವಾಮಿಯು) ಋತಸ್ಯ=ಯಥಾರ್ಥಜ್ಞಾನಕ್ಕೆ, ಗೋಪಾಂ=ರಕ್ಷಕನು, ಸ್ವೇ ದಮೇ=(ಬಾಹ್ಯವಿವಕ್ಷೆಯಿಂದ) ಸ್ವರ್ಗ ಮೊದಲಾದ ತನ್ನ ಮಂದಿರದಲ್ಲಿಯೂ, (ಅಧ್ಯಾತ್ಮವಿವಕ್ಷೆಯಿಂದ) ಹೃದಯದಲ್ಲಿಯೂ, ದೀದಿವಿಂ=ವಿಶೇಷತಃ ಪ್ರಕಾಶಿಸಿಕೊಂಡಿರುವವನು, ವರ್ಧಮಾನಂ=ಸದಾ ಸರ್ವಗುಣಪರಿಪೂರ್ಣನು ಇಂತಹ ನಿನ್ನನ್ನು ಶರಣು ಹೊಂದುವೆವು. ॥೮॥

ಭಾ॥ **ದೇದೀಪ್ಯಮಾನಂ ಸ್ವೇ ಸದ್ಮನ್ಯಧ್ವರೇಶಂ ಸದಾವೃಧಂ ।**

**ಯಥಾರ್ಥಜ್ಞಾನ ಗೋಪಂ ತ್ವಾಮುಪೇಮಸಿ** ॥೮॥

ಅ॥ ಬಾಹ್ಯ ಆಧ್ಯಾತ್ಮಿಕ ಯಜ್ಞಗಳಿಗೆ ಸ್ವಾಮಿಯು, ಯಥಾರ್ಥಜ್ಞಾನವನ್ನು ರಕ್ಷಿಸುವವನು, ಸ್ವರ್ಗಾದಿಗಳಲ್ಲಿಯೂ ಹೃದಯದಲ್ಲಿಯೂ ವಿಶೇಷತಃ ಪ್ರಕಾಶಿಸಿಕೊಂಡಿರುವವನು, ಯಾವಾಗಲೂ ಸರ್ವಗುಣ ಸಂಪೂರ್ಣನು, ಇಂತಹ ನಿನ್ನನ್ನು ಶರಣು ಹೊಂದುವೆವು. ॥೮॥

ಋ॥ **ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ ।**

**ಸಚಸ್ವಾ ನಃ ಸ್ವಸ್ತಯೇ** ॥೯॥೩॥

ಅ॥ ಅಗ್ನೇ=ಎಲೋ ಅಗ್ನಿಯೇ, ಸಃ=ಹಿಂದೆ ಹೇಳಿದ ಪ್ರಕಾರ ನಮ್ಮಿಂದ ಶರಣು ಹೊಂದಲ್ಪಟ್ಟ ನೀನು, ಸೂನವೇ=ಪುತ್ರನಿಗೆ, ಪಿತೇವ=ತಂದೆಯಂತೆ, ನಃ=ನಮಗೆ ಸೂಪಾಯನಃ=ಶೋಭನಕರ್ಮಗಳಿಗೆ ಮುಖ್ಯಾಶ್ರಯನೂ, ಭವ=ಆಗು, ನಃ=ನಮ್ಮನ್ನು ಸ್ವಸ್ತಯೇ=ನಿರಂತರದಲ್ಲಿಯೂ ಸೌಖ್ಯಕ್ಕಾಗಿ, ಅಥವಾ ಸದಾ ಚೆನ್ನಾಗಿ ಬಲಕ್ಕಾಗಿ, ಸಚಸ್ವ=ರಕ್ಷಿಸು. (ಅಂದರೆ ಹೇಗೆ ರಕ್ಷಣದಿಂದ ನಮಗೆ ಸರ್ವದಾ ಸೌಖ್ಯಾದಿಗಳು ಆಗುತ್ತವೋ, ಹಾಗೆ ರಕ್ಷಿಸು) ॥೯॥

ಭಾ ॥ **ಪಿತೇವ ನಃ ಸೂಪಾಶ್ರಯೋ ಭವ ತ್ವಂ ಚ ಯದ್ವದೌರಸಸೂನವೇ ।**

**ರಕ್ಷ ಸಂತತಸೌಖ್ಯಾಯ ಸಮ್ಯಕ್ಸತ್ವಾಯ ವಾ ಸದಾ** ॥೯॥೨॥೧॥

ಅ॥ ಎಲೋ ಅಗ್ನಿಯೇ ನೀನು ಮಕ್ಕಳಿಗೆ ತಂದೆಯಂತೆ ನಮಗೆ ಶುಭಕರ್ಮಾದಿಗಳಿಗೆ ಮುಖ್ಯಾಶ್ರಯನಾಗು. (ಕೇವಲ ಸರ್ವಸಾಮಾನ್ಯ ಮಕ್ಕಳಿಗೆ ತಂದೆಯಂತೆ ಅಲ್ಲ. ಮತ್ತೆ) ಸಾಕ್ಷಾತ್ ಔರಸಮಕ್ಕಳಿಗೆ ತಂದೆಯು ಹೇಗೆ ಆಶ್ರಯನೋ. ಹಾಗೆ ಆಶ್ರಯನಾಗು. ಅಥವಾ ತಂದೆಯು ದತ್ತಪುತ್ರಾದಿಗಳಿಗೆ ಆಶ್ರಯನು ಹೇಗೆ ಆಗುತ್ತಾನೋ ಹಾಗೆ ನಮಗೆ ಆಶ್ರಯನಾಗು. ಔರಸ ಪುತ್ರನಿಗೆ ಹೇಗೆ ಆಶ್ರಯನಾಗುತ್ತಾನೋ ಹಾಗೂ ನಮಗೆ ಆಶ್ರಯನಾಗು (ಎನ್ನುವ ಅಭಿಪ್ರಾಯದಿಂದ ಯದ್ವದೌರಸಸೂನವೇ ಎಂದದ್ದು) ಮತ್ತು ಸದಾ ದುಃಖವಿಲ್ಲದಿರುವ ಸಂತೋಷಕ್ಕಾಗಿಯೂ, ಚೆನ್ನಾಗಿ ಸಾಮರ್ಥ್ಯಕ್ಕಾಗಿಯೂ ರಕ್ಷಿಸು. (ಹೇಗೆ ರಕ್ಷಿಸಿದರೆ ಸರ್ವದಾ ಸೌಖ್ಯಾದಿಗಳುಂಟಾಗುವವೋ ಹಾಗೆ ರಕ್ಷಿಸು.) ॥೯॥೨॥೧॥

ಅವ॥ ಹೀಗೆ ವ್ಯಾಖ್ಯಾನ ಮಾಡಿದ ಸೂಕ್ತ, ಮುಂದೆ ವ್ಯಾಖ್ಯಾನ ಮಾಡುವ ಸೂಕ್ತ ಇವುಗಳ ಜ್ಞಾನಾದಿಗಳು

ಋಷ್ಯಾದಿಗಳ ಜ್ಞಾನವು ಇದ್ದರೇನೇ ಸಫಲವಾಗುತ್ತವೆ. ಇಲ್ಲದಿದ್ದರೆ ಸಫಲವಾಗಲಾರದು. ಏಕೆಂದರೆ ಯೋ ಹವಾ ಅವಿದಿತಾರ್ಷೇಯಚ್ಛಂದೋ ದೈವತ ಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ವಾಽಧ್ಯಾಪಯತಿ ಸ್ಥಾಣುಂ ವರ್ಚ್ಛತಿ ಗರ್ತೇ ವಾ ಪದ್ಯತೇ ಪ್ರಮೀಯತೇವಾ ಯಾವಾತನು, ಮಂತ್ರದ್ರಷ್ಟೃ, ಗಾಯತ್ರ್ಯಾದಿ ಛಂದಸ್ಸು, ಮಂತ್ರ ಪ್ರತಿಪಾದ್ಯ ದೇವತೆ, ವ್ಯಾಖ್ಯೇಯ ಮಂತ್ರಾರ್ಥ, ಮಂತ್ರಗಳಿಗೆ ಆವಾವ ಕರ್ಮಗಳಲ್ಲಿ ವಿನಿಯೋಗ, (ಮಂತ್ರ ಪ್ರತಿಪಾದ್ಯ ಅರ್ಥ) ಇವುಗಳನ್ನು ತಿಳಿಯದೆ ಮಂತ್ರ ಸಮೂಹದಿಂದ ಪೂಜೆಯನ್ನು ಮಾಡುತ್ತಾನೋ, ಶಿಷ್ಯರಿಗೆ ಜ್ಞಾನೋಪದೇಶ ಮಾಡುತ್ತಾನೋ, ದೇವತೆಗಳಿಗೆ ಹವಿಸ್ಸು ಮೊದಲಾದುದನ್ನು ಕೊಡುತ್ತಾನೋ, ಅಧ್ಯಯನಾದಿಗಳನ್ನು ಮಾಡಿಸುತ್ತಾನೋ, ಅಂತಹನು ವೃಕ್ಷಾದಿ ಸ್ಥಾವರ ಜಾತಿಯನ್ನು ಹೊಂದುತ್ತಾನೆ. ಭೂಗರ್ತ ರೂಪವಾದ ನರಕದಲ್ಲಿ ಬೀಳುತ್ತಾನೆ. ಅಲ್ಪಾಯುಷ್ಯವುಳ್ಳವನಾಗುತ್ತಾನೆ. ಪಾಪೀಯಾನ್ ಭವತಿ ಪಾಪಿಷ್ಠನಾಗುತ್ತಾನೆ. ತನ್‌ಸ್ಮಾದೇತಾನಿ ಮಂತ್ರೇ ಮಂತ್ರೇ ವಿದ್ಯಾತ್, ಆದ ಕಾರಣ ಇವುಗಳನ್ನು ಪ್ರತಿ ಮಂತ್ರದಲ್ಲಿಯೂ ತಿಳಿಯಬೇಕು, ಎಂದು ಶ್ರುತಿಯು, ಆದ ಕಾರಣ ಋಷ್ಯಾದಿಗಳನ್ನು ತಿಳಿಸುತ್ತಾ ಋಷಿಯನ್ನು ಹೇಳುತ್ತಾರೆ.

**ಭಾ ॥ (೧)ಮುನಿಸ್ತು ಸರ್ವವಿದ್ಯಾನಾಂ ಭಗವಾನ್ಪುರುಷೋತ್ತಮಃ। ವಿಶೇಷತಶ್ಚ ವೇದಾನಾಂ ಯೋ ಬ್ರಹ್ಮಾಣಮಿತಿ ಶ್ರುತಿಃ॥ (೨) ಋಗ್ವೇದಾದಿಕಮಸ್ಯೈವ ಶ್ವಸಿತಂ ಪ್ರಾಹಚಾಪರಾ ॥ (೩) ವಾಚೋ ಬಭೂವುರುಶತೀರ್ಹಯಗ್ರೀವಾದಿತಿ ಸ್ಫುಟಂ । ವಚೋ ಭಾಗವತೇಽಪ್ಯಸ್ತಿ (೪) ಬ್ರಹ್ಮಾಂಡೇಽಪಿ ತಥಾ ಪರಂ। ಹಯಗ್ರೀವಾದಿಮಾ ವಿದ್ಯಾಃ ಶ್ವಸಿತತ್ವೇನ ನಿಸ್ಸೃತಾಃ। ಬ್ರಹ್ಮಣಾ ಸ್ವೀಕೃತಾಸ್ತಾಶ್ಚ ರುದ್ರಶೇಷವಿಪಾ ಅಪಿ। ದಕ್ಷಾದ್ಯಾಃ ಸನಕಾದ್ಯಾಶ್ಚ ಶಕ್ರಾದ್ಯಾ ಮನವಸ್ತಥಾ। ಜಗೃಹಸ್ತೇ ಚ ವಿಶ್ವಸ್ಮಿನ್ ಚಕ್ರರ್ವ್ಯಾಪ್ತಾತೋಽಖಿಲಾಃ॥ (೫) ಉಕ್ತಂ ಪಾದ್ಮಪುರಾಣೇಚ ಕಪಿಲೋ ಭಗವಾನಜಃ। ಪ್ರೋವಾಚ ಬ್ರಹ್ಮಣೇ ವಿದ್ಯಾಃ (೬) ಹೃದಿಸ್ಥೋ ಬಾದರಾಯಣಃ। ಓಂಕಾರಪೂರ್ವಿಕಾ ವಿದ್ಯಾಃ ಪ್ರೇರಯತ್ಯಖಿಲೇಷ್ವಪಿ। ಸದೈವ ಬ್ರಹ್ಮಣೇ ಪೂರ್ವ ಮಿತಿ ಸಾತ್ವತ ಸಂಹಿತಾ ॥೧॥**

ಅ॥ (೧) ಷಡ್ಗುಣ ಪರಿಪೂರ್ಣನೂ ಕ್ಷರಾಕ್ಷರ ಪುರುಷರಿಂದುತ್ತಮನೂ ಆದ ಶ್ರೀ ಪರಮಾತ್ಮನು ಸಮಸ್ತ ವಿದ್ಯೆಗಳಿಗೂ ಋಷಿಯು (ಮಂತ್ರದ್ರಷ್ಟನು.) ವಿಶೇಷವಾಗಿ ವೇದಗಳಿಗೆ ಶ್ರೀ ಪರಮಾತ್ಮನು ಮಂತ್ರದ್ರಷ್ಟನು. (ಅಧ್ಯಾಪಕನಿಲ್ಲದಿರುವುದರಿಂದ ಅಧ್ಯಯನವಿಲ್ಲದೇನೇ ವೇದಾದಿಗಳಿಗೆ ದ್ರಷ್ಟನಾಗಿ ಯಾವನು ತಾನೇ ವಾಕ್ಯವನ್ನು ನೋಡುತ್ತಾನೋ, ಆತನು ಆ ವಾಕ್ಯಕ್ಕೆ ಋಷಿಯು ಎಂದು ತಿಳಿಯಬೇಕು) (ಪೌರುಷೇಯ ವಾಕ್ಯಗಳು ಹುಟ್ಟಿದ ಮೇಲೆಯೇ ಅವುಗಳ ದರ್ಶನವು. ವೇದಗಳನ್ನಾದರೂ ಸರ್ವದಾ ನೋಡುತ್ತಲೇ ಇರುವನು.) (ಇದು ಹೇಗೆಂದರೆ) ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ಎಂಬ ಶ್ರುತಿಯು (ಶ್ವೇತಾಶ್ವತರೋಪನಿಷತ್ತು ಚತುರ್ಮುಖ ಬ್ರಹ್ಮನನ್ನು ಶ್ರೀ ಪರಮಾತ್ಮನು ಆದಿಯಲ್ಲಿ ಸೃಷ್ಟಿಸಿ ಆತನಿಗೆ ವೇದಾದಿ ಸರ್ವ ವಿದ್ಯೆಗಳನ್ನುಪದೇಶಿಸಿದನು ಎಂದು ಹೇಳುತ್ತದೆ. (ಇದರಿಂದ ಶ್ರೀ ಪರಮಾತ್ಮನೇ ಸಮಸ್ತ ವಿದ್ಯೆಗಳಿಗೂ ಋಷಿಯೆಂದು ತಿಳಿಯುತ್ತದೆ.) (೨) ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತದ್ಯ ದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಽಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಶ್ವಸಿತಾನಿ ಎಂದು ಇನ್ನೊಂದು ಶ್ರುತಿಯು. ಋಗ್ವೇದ ಮೊದಲಾದ ಅವಾಂತರ ವೇದಗಳು, ಭಾರತ, ರಾಮಾಯಣವೂ, ಸಮಸ್ತ ಪುರಾಣಗಳೂ, ಮೂಲ ವೇದರಾಶಿಯು, ವಿಶೇಷತಃ ಭಗವತ್ಪ್ರತಿಪಾದಕಗಳಾದ ಉಪನಿಷತ್ತುಗಳು, ಪಂಚರಾತ್ರಾಗಮಗಳು, ಬ್ರಹ್ಮಸೂತ್ರಗಳು, ವೇದವ್ಯಾಖ್ಯಾನಕ್ಕೂ

ವ್ಯಾಖ್ಯಾನರೂಪ ಗ್ರಂಥ ವಿಶೇಷಗಳು, ವೇದಾರ್ಥ ಪ್ರತಿಪಾದಕ ಗ್ರಂಥಗಳು ಇವುಗಳೆಲ್ಲವೂ ಶ್ರೀ ಹರಿಯಿಂದಲೇ ಹೊರಟವುಗಳು, ಎನ್ನುವ ಬೃಹದಾರಣ್ಯಕೋಪನಿಷತ್ತು, ಋಗ್ವೇದಾದಿಗಳೆಲ್ಲವೂ ಶ್ರೀ ಪರಮಾತ್ಮನಿಂದಲೇ ಅನಾಯಾಸದಿಂದಲೇ ಉಚ್ಚರಿತಗಳ (ಆವಿರ್ಭೂತಗಳು) ಎಂದು ಹೇಳುತ್ತವೆ. ಇದರಿಂದಲೂ ಶ್ರೀ ಹರಿಯೇ ಋಷಿಯೆಂದು ತಿಳಿಯುತ್ತದೆ. (೩) ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ಶ್ವಾಸವನ್ನು ಬಿಡತಕ್ಕ ಹಯಗ್ರೀವ ದೇವರ ಮೂಗಿನಿಂದ ಪ್ರಕಾಶಮಾನಗಳಾದ ವೇದಾದಿ ವಚನಗಳು ಆವಿರ್ಭೂತಗಳಾದವು, ಎಂದು ಭಾಗವತದಲ್ಲಿಯೂ ಸ್ಪಷ್ಟವಾಗಿ ಈ ಅರ್ಥವನ್ನು ಪ್ರತಿಪಾದಿಸತಕ್ಕ ವಚನವಿದೆ. (೪) ಬ್ರಹ್ಮಾಂಡ ಪುರಾಣದಲ್ಲಿಯೂ ಇಂತಹ ಅರ್ಥವನ್ನು ಪ್ರತಿಪಾದಿಸತಕ್ಕ ಉತ್ಕೃಷ್ಟವಾದ ವಚನವಿದೆ. (ಆ ವಚನವು ಯಾವುದೆಂದರೆ) ಹಯಗ್ರೀವ ದೇವರಿಂದ ಈ ಋಗಾದಿ ವಿದ್ಯೆಗಳು ಶ್ವಾಸರೂಪದಿಂದ ಹೊರಟಿವೆ. ಆ ವಿದ್ಯೆಗಳು ಚತುರ್ಮುಖನಿಂದ ಸ್ವೀಕರಿಸಲ್ಪಟ್ಟವು. ಬ್ರಹ್ಮ ದೇವರಿಂದ ರುದ್ರ ಶೇಷ ಗರುಡರೂ, ಅವರಿಂದ ಇಂದ್ರಾದಿ ದೇವತೆಗಳೂ, ಅವರಿಂದ ದಕ್ಷ ಪ್ರಜಾಪತಿ ಮೊದಲಾದವರೂ, ಅವರಿಂದ ಸನಕ, ಸನಂದನ ಮೊದಲಾದ ಋಷಿಗಳೂ ಹಾಗೆಯೇ ಮನುಗಳೂ ಕೂಡ ಆ ವಿದ್ಯೆಗಳನ್ನು ಸ್ವೀಕರಿಸಿದರು. ಅಭ್ಯಾಸ ಮಾಡಿದರು. ಅವರಾದರೂ ಸರ್ವ ಜಗತ್ತಿನಲ್ಲಿ ಉಪದೇಶಿಸಿದರು. ಅವರ ಉಪದೇಶದಿಂದ ಚತುರ್ಮುಖನಿಗೆ ವೇದಾದಿ ವಿದ್ಯೆಗಳನ್ನು ಉಪದೇಶಿಸಿದನು, ಎಂದು ಪಾದ್ಮ ಪುರಾಣದಲ್ಲಿ (ಬಾಹ್ಯ ಪುರಾಣದಲ್ಲಿಯೂ) ಹೇಳಿದೆ. (೬) ಹೃದಯದಲ್ಲಿರತಕ್ಕ ವೇದವ್ಯಾಸ ದೇವರು ಓಂ ಕಾರವೇ ಆದಿಯಾಗಿ ಉಳ್ಳ ಎಲ್ಲಾ ವಿದ್ಯೆಗಳನ್ನು ಯಾವಾಗಲೂ ಸರ್ವರಿಗೂ ಉಪದೇಶಿಸುತ್ತಾರೆ. ಅದರಲ್ಲಿಯೂ ಮೊದಲು ಬ್ರಹ್ಮನಿಗೆ ಉಪದೇಶಿಸಿದರು ಎಂದು ಸಾಸ್ವತ ಸಂಹಿತೆಯು.

ವಿ॥ (1) ಋಷಿಛಂದೋದೈವತಾನಿ ಬ್ರಾಹ್ಮಣಾರ್ಥಸ್ವರಾದ್ಯಪಿ । ಅವಿದಿತ್ವಾ ಪ್ರಯುಂಜಾನೋ ಮಂತ್ರಕಂಟಕಉಚ್ಯತೇ ॥ (2) ಸ್ವರೋ ವರ್ಣಾಕ್ಷರಮಾತ್ರಾದಿನಿಯೋಗೋಕ್ಷರ ಏವಚ । ಮಂತ್ರಂ ಜಿಜ್ಞಾಸ ಮಾನೇನ ವೇದಿತವ್ಯಂ ಪದೇ ಪದೇ ॥ ಎಂದು ಸ್ಮೃತಿಗಳು. (3) ಅಥ ಋಗ್ವೇದಾಮ್ನಯೇ ಶಾಕಲಕೇ ಸೂಕ್ತಪ್ರತೀಕ ಋಕ್ಸಂಖ್ಯರ್ಷಿದೈವತಛಂದಾಂಸ್ಯನುಕ್ರಮಿಷ್ಯಾಮೋ ಯಥೋಪದೇಶಂ ನ ಹ್ಯೇತಜ್ಜ್ಞಾನಮೃತೇ ಶ್ರೌತ ಸ್ಮಾರ್ತಕರ್ಮಪ್ರಸಿದ್ಧಿರ್ಮಂ ತ್ರಾಣಾಂ ಬ್ರಾಹ್ಮಣಾರ್ಷೇಯ ಛಂದೋ ದೈವತ ವಿದ್ಯಾರ್ಜನಾಧ್ಯಾಪನಾಭ್ಯಾಂ ಶ್ರೇಯೋಽಧಿಗಚ್ಛತಿ ॥ ಎಂದು ಅನುಕ್ರಮಣಿಕೆಯು, ಅಂತೂ ಋಷ್ಯಾದಿಗಳ ಜ್ಞಾನವಿಲ್ಲದೆ ಕರ್ಮವು ಸಫಲವಾಗುವುದಿಲ್ಲ. ಯಾವನು ಇವುಗಳ ಜ್ಞಾನವನ್ನು ಹೊಂದುತ್ತಾನೋ, ಆತನು ಅಧ್ಯಾಪನಾದಿಗಳಿಂದ ಶ್ರೇಯಸ್ಸನ್ನು ಹೊಂದುತ್ತಾನೆ.॥೧॥

ಅವ ॥ ಶ್ರೀ ಹರಿಯು ಸಮಸ್ತ ವಿದ್ಯೆಗಳಿಗೂ ಮುಖ್ಯ ಋಷಿಯು, ಎಂದುಪಪಾದಿಸಿ ಆ ಮೇಲೆ ಚತುರ್ಮುಖ ಬ್ರಹ್ಮನೂ ಋಷಿಯೆಂದುಪಪಾದಿಸುತ್ತಾರೆ.

ಭಾ ॥ (೧) ಸಕೃನ್ನಿಗದಮಾತ್ರೇಣ ಗೃಹೀತಂ ಬ್ರಹ್ಮಣಾಽಖಿಲಂ । ಅಂತರ್ಗತಸ್ಯ ವ್ಯಾಸಸ್ಯಪ್ರಸಾದಾನ್ನಿತ್ಯಶಕ್ತಿತಃ । ತೇನ ಚಾನಂತಶಕ್ತಿತ್ವಾದ್ಯುಗಪತ್ಸಮುದೀರಿತಂ । ಪ್ರಥಮ ಪ್ರತಿಪತ್ತೃತ್ವಾನ್ಮುನಿರ್ಬ್ರಹ್ಮಾಽಖಿಲಸ್ಯ ಚ ॥ ॥೨॥

ಅ॥ ಯಾವ ಕಾರಣದಿಂದ ಶ್ರೀ ಹರಿಗೆ ಅನಂತಾನಂತ ಶಕ್ತಿಯಿದ್ದ ಪ್ರಯುಕ್ತ ಏಕಕಾಲದಲ್ಲಿಯೇ ಶ್ರೀ ಹರಿಯು ಉಪದೇಶಿಸಿದ ಸಮಸ್ತ ವಿದ್ಯಾಸಮೂಹಗಳನ್ನು ಆದಿಕಾಲದಲ್ಲಿ ಒಂದು ಸಲ ಹೇಳೋಣ ಮಾತ್ರದಿಂದಲೇ ಚತುರ್ಮುಖ ಬ್ರಹ್ಮನು ತನ್ನಲ್ಲಿ ಅಂತರ್ಗತರಾದ ಶ್ರೀ ವೇದವ್ಯಾಸರ ಅನುಗ್ರಹದಿಂದ ಶ್ರೀ ಭಗವತ್ಪ್ರಸಾದಾಧೀನವಾದ ನಿತ್ಯಶಕ್ತಿಯಿಂದ

ಗ್ರಹಿಸಿರುವನೋ ಆದ ಕಾರಣ ಹೀಗೆ ಸಮಸ್ತ ವಿದ್ಯೆಗಳನ್ನು ಪ್ರಥಮತಃ ತಿಳಿದವನಾದುದರಿಂದ ಬ್ರಹ್ಮನೂ ಕೂಡ ಸಮಸ್ತ ವಿದ್ಯಾಸಮೂಹಕ್ಕೂ ರುದ್ರಾದಿಗಳಿಗಿಂತ ಪ್ರಥಮ ಋಷಿಯು ಎಂದು ತಿಳಿಯಬೇಕು. ||೩||

ಅವ || ಹೀಗೆ ಸಮಸ್ತ ವಿದ್ಯೆಗಳಿಗೂ ಶ್ರೀ ಹರಿಯು ಮುಖ್ಯಋಷಿಯು. ಆ ಮೇಲೆ ಚತುರ್ಮುಖನೂ ಋಷಿಯು ಎಂದು ಹೇಳಿ ಈಗ ವಿದ್ಯಾಪ್ರಭೇದಗಳಿಗೆ ಬೇರೆ ಬೇರೆ ಋಷಿಗಳನ್ನು ಹೇಳುತ್ತಾರೆ.

**ಭಾ || ಸುಪರ್ಣೋಽಖಿಲವೇದಾನಾಂ ಪಂಚರಾತ್ರಸ್ಯ ನಾಗರಾಟ್ । ದ್ವಿತೀಯ ಪ್ರತಿಪತ್ತೃತ್ವಾನ್ಮುನಿತ್ವೇ ಸಂಪ್ರಕೀರ್ತಿತೌ ||೩||**

ಅ|| ಅಖಿಲ ವೇದಗಳಿಗೆ ಗರುಡನೂ, ಪಂಚರಾತ್ರಾಗಮಕ್ಕೆ (ಪೌರುಷೇಯ ಸಮಸ್ತ ವಿದ್ಯೆಗಳಿಗೂ) ಶೇಷನು ಋಷಿಯು. ಇವರಿಬ್ಬರು ೨ನೇ (ಬ್ರಹ್ಮನಿಗಿಂತ ಮೇಲೆ) ತಿಳಿಯುವವರಾದುದರಿಂದ ಋಷಿತ್ವ ವಿಷಯದಲ್ಲಿ ೨ನೆಯವರಾಗಿ ಹೇಳಲ್ಪಡುತ್ತಾರೆ.

ಅವ|| ಶ್ರೀ ಹರಿಯು ಸ್ವಯಮೇವ ಸಮಸ್ತ ವಿದ್ಯೆಗಳನ್ನು ತಿಳಿದವನಾಗಿರುವುದರಿಂದ ಋಷಿಯಾಗಲಿ, ಶ್ರೀ ಹರಿಯಿಂದ ಉಪದೇಶಿಸಿಕೊಂಡ ಬ್ರಹ್ಮಾದಿಗಳು ಹೇಗೆ ಋಷಿಗಳಾಗುವರು. ಎಂದರೆ

**ಭಾ || ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ । ಅರ್ವಾಕ್ತು ದ್ವಾದಶಾ ವೃತ್ತೇರಧೀತ್ಯಾಪ್ಯೃಷಿರೇವ ಸಃ ||೪||**

ಅ|| ಯಾವಾತನು ತಾನು ಗುರುಗಳ ದ್ವಾರಾ ಅಧ್ಯಯನ ಮಾಡದೇನೇ ಯಾವ ವಾಕ್ಯವನ್ನು ಸ್ವತ ಏವ ತಿಳಿಯುತ್ತಾನೋ ಆತನು ಆ ವಾಕ್ಯಕ್ಕೆ ಋಷಿಯೆಂದು ಹೇಗೆ ಹೇಳಲ್ಪಡುತ್ತಾನೋ, ಹೀಗೆಯೇ ಯಾವಾತನು ೧೨ ಸಲಕ್ಕಿಂತ ಕಡಿಮೆ ಗುರುಗಳ ಮುಖದಿಂದ ಅಧ್ಯಯನ ಮಾಡಿಯಾದರೂ ಸಮಸ್ತ ವಿದ್ಯೆಗಳನ್ನು ತಿಳಿದು ಕೊಳ್ಳುತ್ತಾನೋ, ಆತನೂ ಋಷಿಯೇ ಎನ್ನಿಸುತ್ತಾನೆ. (ಅಂದರೆ ಅಂತಹನೂ ತಾನಾಗಿಯೇ ಸಮಸ್ತ ವಿದ್ಯೆಗಳನ್ನು ತಿಳಿದುಕೊಂಡವನಿಗೆ ಸದೃಶನೇ ಆಗುವನು. ಅಷ್ಟು ಯೋಗ್ಯತೆಯಿಲ್ಲದವನು ಇಷ್ಟು ಮಾತ್ರ ಅಧ್ಯಯನದಿಂದ ಸಮಸ್ತ ವಿದ್ಯೆಗಳನ್ನು ತಿಳಿಯಲು ಶಕ್ತನಾಗಲಾರನು.) (ಏವಂಚ ದ್ವಾದಶಾವೃತ್ತೇರರ್ವಾಕ್ ಅಧ್ಯಯನೇನಾಪಿ ಸರ್ವವಿದ್ಯಾಪ್ರತಿಪತ್ತಾ ಋಷಿಃ ಅಂದರೆ ೧೨ ಸಲಕ್ಕಿಂತ ಕಡಿಮೆ. ಗುರುಗಳ ಮುಖದಿಂದ ಅಧ್ಯಯನ ಮಾಡಿಯಾದರೂ ಸಮಸ್ತವಿದ್ಯೆಗಳನ್ನು ತಿಳಿದವನೂ ಋಷಿಯೆನ್ನಿಸುತ್ತಾನೆಂದುಕ್ತವಾಯ್ತು.) ಬ್ರಹ್ಮಾದಿಗಳಾದರೂ ಭಗವತ್ಪ್ರಸಾದದಿಂದ ಸಮಸ್ತ ವಿದ್ಯೆಗಳನ್ನು ತಾವಾಗಿಯೇ ತಿಳಿದುಕೊಂಡು ಒಂದು ಸಲ ಅಧ್ಯಯನ ಮಾಡಿರುವರು. ಆದ ಕಾರಣ ಋಷಿಗಳೆನ್ನುವುದು ಯುಕ್ತವು. ||೪||

ಅವ || ಹೀಗೆ ಬ್ರಹ್ಮಾದಿಗಳು ಸ್ವತ ಏವ ವೇದಾದಿ ವಿದ್ಯೆಗಳನ್ನು ತಿಳಿದುಕೊಂಡು ಋಷಿಗಳೆಂದಾದರೆ ಅವರಿಗೆ ಅಧ್ಯಯನವು ಏತಕ್ಕೆಂದರೆ -

**ಭಾ || ಯತ್ಸ್ವಯಂ ಪ್ರತಿಭಾತಸ್ಯ ಸಂಶಯಾರ್ಥಂ (ನಿಶ್ಚಯಾರ್ಥಂ) ಗುರುರ್ವಚಃ । ಸುಪರ್ಣಾದೇರ್ವಿರಿಂಚಸ್ಯ ಕೇವಲಂ ಧರ್ಮಕಾರಣಂ ||೫||**

ಅ॥ ಗರುಡ ಶೇಷಾದಿಗಳು ಸ್ವತ ಏವ ವೇದಾದಿಗಳನ್ನು ತಿಳಿದುಕೊಂಡು ಅವುಗಳ ಪಾಠ ರೂಪವಾದ ಯಾವುದು ಗುರುಗಳ ವಚನವೋ, ಅದು ನಾವು ಕಂಡದ್ದು ವೇದವೋ ಅಥವಾ ಬೇರೆ ಯಾವುದಾದರೂ ವಾಕ್ಯವೋ ಎನ್ನುವ ಸಂಶಯ ನಿವೃತ್ತಿಯಾಗಿ ಇದು ವೇದವೇ ಎಂದು ನಿಶ್ಚಯ ಜ್ಞಾನಕ್ಕಾಗಿ ಸಫಲವಾಗುತ್ತದೆ. ಚತುರ್ಮುಖನಿಗಾದರೂ ಸಂಶಯವೇ ಇಲ್ಲವಿರುವುದರಿಂದ ಕೇವಲ ಧರ್ಮಕ್ಕೇನೇ ಕಾರಣವಾಗುತ್ತದೆ. (ಇತರರಿಗಾದರೂ ಗುರುಗಳ ವಚನವು ಧರ್ಮಗಳಿಗೆ ಕಾರಣವು) (ಪರಮೇಶ್ವರನಿಂದಲೇ ಅಧ್ಯಯನವು ಮಹಾಧರ್ಮಕ್ಕೆ ಕಾರಣವು.) ॥೫॥

ಅವ॥ ಹೀಗೆ ಪೌರುಷೇಯ ಅಪೌರುಷೇಯ ಸಮಸ್ತ ವಿದ್ಯೆಗಳಿಗೆ ಋಷಿಭೇದವನ್ನು ಹೇಳಿ ವೇದಗಳಲ್ಲಿಯೇ ಅವಾಂತರ ಭೇದದಿಂದ ಋಷಿ ಭೇದವನ್ನು ಹೇಳುತ್ತಾರೆ.

**ಭಾ ॥ (೧) ಋಚಾಮೃಷಿಸ್ತತಃ ಶಕ್ರೋ ಯಜುಷಾಂ ಸೂರ್ಯ ಏವಚ । ಸೋಮಸ್ಸಾಮ್ನಾಂ ತೃತೀಯಾಸ್ತೇ ಪ್ರತಿಪತ್ತಾರ ಈರಿತಾಃ (೨) ಅಥರ್ವಾಂಗಿರಸಾಮಗ್ನಿರೇಕರ್ಷಿಶ್ಚಾಪ್ಯ ಥರ್ವಣಾಂ ॥ ಇತ್ಯುಕ್ತಾಸ್ಸಮುದಾಯಸ್ಯ ಸಂತ್ಯನ್ಯೇ ಚ ಪೃಥಕ್ ಪೃಥಕ್ ॥೬॥**

ಅ॥ (೧) ಗರುಡ ಶೇಷಾದಿಗಳ ಅನಂತರದಲ್ಲಿ ಋಗ್ವೇದಾದಿಗಳಿಗೇನೇ ದೇವೇಂದ್ರನೂ, ಋಜುರ್ವೇದಗಳಿಗೇನೇ ಸೂರ್ಯನಾದರೂ ಸಾಮವೇದಗಳಿಗೇನೇ ಸೋಮನಾದರೂ ಋಷಿಯು. ಆ ಮೂವರು ಗರುಡಾದ್ಯನಂತರದಲ್ಲಿಯೇ ಮೂರನೆಯವರಾಗಿ ತಿಳಿಯುವರೆಂದು ಹೇಳಲ್ಪಡುತ್ತಾರೆ. ಅಥರ್ವ, ಅಂಗಿರಸ ಎಂದು ಎರಡು ಪ್ರಭೇದಗಳುಳ್ಳ ಅಥರ್ವ ವೇದಕ್ಕೂ ಅಗ್ನಿಯು ಋಷಿಯು. ಅಥರ್ವಣ ವೇದದ ಪ್ರಭೇದಗಳಾದ ಅಥರ್ವಗಳಿಗಾದರೂ ಅಗ್ನಿಯೂ ಏಕರ್ಷಿಯೂ ಕೂಡ ಋಷಿಯು. ॥೬॥

ಅವ ॥ ಅವರಿಗಿಂತ ಕೆಳಗಿನವರಾದ ಋಷಿಗಳನ್ನು ಹಿಂದಿನವರನ್ನು ಅನುವಾದ ಮಾಡುತ್ತಾ ಹೇಳುತ್ತಾರೆ.

**ಭಾ ॥ ಇತ್ಯುಕ್ತಾಸ್ಸಮುದಾಯಸ್ಯ ಸಂತ್ಯನ್ಯೇಚ ಪ್ರಥಕ್ ಪೃಥಕ್ ॥೭॥**

ಅ॥ ಈ ಹಿಂದೆ ಹೇಳಿದವರು ಪ್ರಾಯಶಃ ಅವಿಭಕ್ತ ವಿದ್ಯಾ ಸಮುದಾಯಗಳಿಗೆ ಋಷಿಗಳು ಮೂರು ವಿಧರೆಂದು ಹೇಳಲ್ಪಟ್ಟರು. ಇವರಿಂದ ಇತರರಾದ ಶಾಖಲ ಅಶ್ವಲಾರ್ಯ ಅಪಸ್ತಂಬ ಮಧುಚ್ಛಂದ ಶುನಃಶೇಪ ಮೊದಲಾದವರು ನಾಲ್ಕನೆಯವರೂ ಪ್ರಪ್ರತ್ಯೇಕ ಒಂದೊಂದೂ ಯುಗಾದಿ ಸಮುದಾಯದ ಅವಾಂತರ ಭೇದಗಳಾದ ಶಾಖಾದಿಗಳಿಗೆ ಋಷಿಗಳು ಇರುತ್ತಾರೆ. (ಅವರನ್ನು ಚರಣವ್ಯೂಹ ಅನುಕ್ರಮಣಿಕಾದಿ ಶಾಸ್ತ್ರಾಂತರಗಳಿಂದ ತಿಳಿದುಕೊಳ್ಳಬೇಕು.)

ವಿ॥ (೧) ವಿಷ್ಣು ಬ್ರಹ್ಮರು ಸಂಕೋಚವಿಲ್ಲದೆ ಸರ್ವವಿದ್ಯೆಗಳಿಗೂ ಋಷಿಗಳು. (೨) ಗರುಡನು ಅಪೌರುಷೇಯಕ್ಕೂ ಶೇಷನು ಪೌರುಷೇಯಕ್ಕೂ ಋಷಿಯು. (೩) ಇಂದ್ರಾದಿಗಳು. ಋಗಾದಿ ವಿದ್ಯೆಗಳಿಗೆ ಋಷಿಗಳು, ಎಂದು ಹೇಳಿದರೂ ಋಗಾದಿಗಳಲ್ಲಿ ಅವಾಂತರಭೇದ ಶಾಖಾ ಉಪಶಾಖಾ ಸೂಕ್ತಾದಿಗಳನ್ನು ವಿವಕ್ಷಾ ಮಾಡಿಕೊಳ್ಳದೆ ಸಮುದಾಯಸ್ಯ ಎಂದದ್ದೂ. ॥೭॥

ಅವ॥ (೧) ಶ್ರೀ ವಿಷ್ಣು ಚತುರ್ಮುಖರು ಸಮಸ್ತ ವಿದ್ಯೆಗಳಿಗೂ ಮುಖ್ಯ ಋಷಿಗಳು. (೨) ಗರುಡನು ಅಪೌರುಷೇಯ

ವೇದಗಳಿಗೂ, ಶೇಷನು ಪೌರುಷೇಯ ಭಾರತಾದಿಗಳಿಗೂ ಋಷಿಯು. (೩) ಋಗಾದಿಗಳಿಗೆ ಪ್ರಪ್ರತ್ಯೇಕ ಇಂದ್ರಾದಿಗಳು ಋಷಿಗಳು. (೪) ಋಗಾದಿಗಳ ಶಾಖಾದಿಗಳಿಗೆ ಇತರರಾದ ಶಾಕಲಾದಿಗಳು ಋಷಿಗಳು, ಹೀಗೆ ನಾಲ್ಕು ವಿಧರಾದ ಋಷಿಗಳನ್ನು ಹೇಳಿ ಅವರನ್ನು ಸ್ಮರಿಸುವುದಕ್ಕೆ ಫಲ ಹೇಳುತ್ತಾರೆ.

**ಭಾ ॥ (೧) ಏತಜ್ಜ್ಞಾನಾದದೃಷ್ಟಸ್ಯ ಫಲಸ್ಯಾಪ್ತಿಃ ಸ್ಫುಟಂ ಭವೇತ್ । ದೃಷ್ಟ್ಯಣಾಂತು ಚತುರ್ಥಾನಾಂ ಜ್ಞಾನಾದಪ್ಯೈಹಿಕಂ ಭವೇತ್ ॥ (೨) ತೇ ಚೈಕಸ್ಯಾಪಿ ಬಹವಃ ಸ್ಯುಃ ಸೂಕ್ತಸ್ಯರ್ಚ ಏವ ವಾ ॥ (೩) ತಸ್ಯಾಂ ತಸ್ಯಾಮವಸ್ಥಾಯಾಂ ತತ್ತತ್ಪ್ರಾಪ್ತಿ ವಿಶೇಷತ ॥ ತೇಷಾಂ ವಾಕ್ಯಸ್ವರೂಪೇಣ ಪ್ರಾರ್ಥನಾದಿಷು ಪಶ್ಯತಿ (೪) ವಿಷ್ಣುರ್ಬ್ರಹ್ಮಾ ಸುಪರ್ಣೋ ವಾ ತತ್ತದ್ಯೋಗ್ಯಾರ್ಥಭೇದತಃ ॥೮॥**

ಅ॥ ನಾಲ್ಕು ವಿಧ ಋಷಿಗಳ ಮಧ್ಯದಲ್ಲಿ ಪ್ರಥಮ ಮೂರು ವಿಧ ಋಷಿಗಳ ಜ್ಞಾನದಿಂದ ಅದೃಷ್ಟವಾದ ಫಲದಪ್ರಾಪ್ತಿಯು ಸ್ಪಷ್ಟವಾಗಿ ಆಗುವುದು. (ಅದೃಷ್ಟ ಪ್ರಾಪ್ತಿಯು ಸ್ಪಷ್ಟವಾಗಿ ಆಗುತ್ತದೆಂದು ಯಾವಾಗ ಆಯ್ತೋ ಆಗ ದೃಷ್ಟ ಫಲವು ಸಿಗುವುದೆಂದು ಸುತರಾಂ ಸಿದ್ಧ) ನಾಲ್ಕನೇ ಪ್ರತಿಪತ್ತ್ಯಗಳ ಜ್ಞಾನದಿಂದಲೂ ಫಲವಾಗುವುದು. ಆದಾದರೂ ಐಹಿಕ ಫಲವು. (೨) (ಋಗಾದಿಗಳ ಅವಾಂತರ ಭೇದಗಳಾದ ಸೂಕ್ತಾದಿಗಳಿಗೆ ನಾಲ್ಕು ಪ್ರಕಾರ ಋಷಿಗಳು ಇರುತ್ತಾರೆಂದು ಹೇಳಿತು. ಅದರಲ್ಲಿ ಒಂದೊಂದು ಋಕ್ಕಿಗೂ ಅನೇಕ ಋಷಿಗಳೇ ಇರುವರು. (೪) (ಹಾಗಾದರೆ - ವಿಷ್ಣ್ವಾದಿಗಳೇ ಸಮಸ್ತ ವಿದ್ಯೆಗಳಿಗೂ ಋಷಿಗಳು ಎಂದಾದರೆ - ಆ ವಿದ್ಯೆಗಳು ವಿಷ್ಣ್ವಾದಿಗಳ ವಾಕ್ಯಗಳಾಗಬೇಕಾಗುವುದು. ಯಸ್ಯ ವಾಕ್ಯಂ ಸ ಋಷಿಃ ಎಂದು ಅನುಕ್ರಮಣಿಕಾದಲ್ಲಿ ಹೇಳಿದೆ. ಆತ ಕಾರಣ ತ್ರಿಷ್ವಾದಿತ್ಯಂ ದ್ರುಪದೇಷುಃ ಬದ್ಧಃ ಅವೈನಂ ರಾಜಾ ವರುಣಃ ಸೃಜ್ಯಾತ್, ಸನೋ ಹಿರಣ್ಯ ರಥಂ, ವೃಕ್ಷದ ಅಥವಾ ಯೂಪದ ಮೂರು ಸ್ಥಾನಗಳಲ್ಲಿ ಅಥವಾ ಸತ್ವಾದಿಗುಣಗಳಿಂದ ಬದ್ಧನಾದ ಶುನಶ್ಶೇಪನು ಯಾವ ಆದಿತ್ಯನನ್ನು (ಸರ್ವರಿಂದಲೂ ಆದಿಯಲ್ಲಿರತಕ್ಕ ಶ್ರೀ ಹರಿಯನ್ನು ಕರೆಯುತ್ತಾನೋ, ಅಂತಹ ಭಕ್ತರಿಂದ ಭಜನೀಯನಾದುದರಿಂದ ವರುಣನೆನಿಸಿಕೊಂಡ ಶ್ರೀ ಹರಿಯು ಈ ಶುನಶ್ಶೇಪನನ್ನು ಸಂಸಾರದಿಂದ ಬಿಡುಗಡೆ ಮಾಡಲಿ. ಇಂದ್ರನು ನಮಗೆ ಹಿರಣ್ಯ ರಥವನ್ನು ಕೊಟ್ಟನು. ಇದು ಮೊದಲಾದುದು ಆಯುಕ್ತನಾಗಬೇಕಾಗುವುದು. ಏಕೆಂದರೆ ಸಂಸಾರ ಬಂಧದಿಂದ ಮೋಕ್ಷವಾಗಬೇಕೆಂದು ವಿಷ್ಣ್ವಾದಿಗಳ ಪ್ರಾರ್ಥನೆಯೂ, ಇಂದ್ರನಿಂದ ರಥ ಪ್ರಾಪ್ತಿಯೂ, ವರುಣನಿಂದ ಜ್ಞಾನವುಂಟಾಗಬೇಕೆಂದು ಪ್ರಾರ್ಥನೆಯೂ ಸಂಪೂರ್ಣ ಆಯುಷ್ಯವುಂಟಾಗಬೇಕೆಂಬ ಪ್ರಾರ್ಥನೆಯೂ ಇತ್ಯಾದಿಗಳು ಕೂಡದೆ ಹೋಗುವುದು ಎಂದರೆ) ಪ್ರಾರ್ಥನಾದಿ ವಾಕ್ಯಗಳು ವಿವಕ್ಷಿತಗಳಾಗುವಾಗ ಶ್ರೀ ವಿಷ್ಣುವು ಆ ವಾಕ್ಯವನ್ನು ಆವಾವ ಸಂಸಾರ ಬಂಧಾದ್ಯವಸ್ಥೆಗಳಲ್ಲಿ ಆವಾವ ರಥಾದಿ ರೂಪಫಲ ಪ್ರಾಪ್ತಿ ವಿಶೇಷದೆ ಎನ್ನುವುದು ಆ ಶುನಶ್ಶೇಪಾದಿಗಳ ವಾಕ್ಯಗಳೆಂದು ಶ್ರೀ ವಿಷ್ಣುವು ತಿಳಿಯುತ್ತಾನೆ. (ಹೇಗೆಂದರೆ ಯೂಪೇಽಹಂ ಬದ್ಧೋಽಸ್ಮಿ. ಬದ್ಧಂ ಮಾಂ ವರುಣೋ ಮೋಚಯತು. ಇಂದ್ರಪ್ರಸಾದಾದಹಂ ಹಿರಣ್ಯರಥಂ ಪ್ರಾಪ್ತೋಽಸ್ಮಿ, ಯೂಪದಲ್ಲಿ ನಾನು ಬದ್ಧನಾಗಿರುತ್ತೇನೆ. ಬದ್ಧನಾದ ನನ್ನನ್ನು ವರುಣನು ಬಿಡಿಸಲಿ. ಇಂದ್ರನ ಅನುಗ್ರಹದಿಂದ ನಾನು ಹಿರಣ್ಯರಥವನ್ನು ಹೊಂದಿರುತ್ತೇನೆ. ಇತ್ಯಾದಿಗಳನ್ನು ಶುನಶ್ಶೇಪನು ಅತೀತ ಕಲ್ಪದಲ್ಲಿ ಹಾಗೆ ಹೇಳಿರುವನು. ಅಥವಾ ಮುಂದಿನ ಕಲ್ಪದಲ್ಲಿ ಹೇಳುವನು ಎಂದು ಶ್ರೀ ವಿಷ್ಣುವು ತಿಳಿಯುತ್ತಾನೆ. ತನ್ನ ವಾಕ್ಯಗಳೆಂದು ತಿಳಿಯುವುದಿಲ್ಲ. ) (೫) ಹೀಗೆಯೇ ಬ್ರಹ್ಮನೂ ಗರುಡನೂ, ಇಂದ್ರಾದಿಗಳೂ ಋಷಿಗಳಾಗಲೀ ತಂತಮಗೆ ಅಯೋಗ್ಯವಾದ ಅರ್ಥವನ್ನು ಪ್ರತಿಪಾದಿಸುವ ವಾಕ್ಯಗಳು ಯಾರು ಯಾರಿಗೆ ಯೋಗ್ಯಗಳೋ ಅವರವರ ವಾಕ್ಯಗಳೆಂದೇ ತಿಳಿಯುತ್ತಾರೆ. (ವಿರೋಧಲೇಶವೂ ಇಲ್ಲ. ಹೀಗೆಯೇ ಅಧಮರಾದ ಇಂದ್ರಾದಿ

ಋಷಿಗಳೂ ಉತ್ತಮರಿಗೆ (ಲಕ್ಷ್ಮ್ಯಾದಿಗಳಿಗೆ) ಯೋಗ್ಯಗಳಾದ ಅರ್ಥಗಳನ್ನು ಹೇಳುವ ಅಹಂ ರುದ್ರಾಯ ಧನುರಾತ ನೋಮಿ ಇತ್ಯಾದಿ ವಾಕ್ಯಗಳನ್ನು ಲಕ್ಷ್ಮ್ಯಾದಿಗಳ ವಾಕ್ಯಗಳೆಂದೇ ತಿಳಿಯುತ್ತಾರೆ.) (ಹೇಗೆ ಒಂದೊಂದು ವಾಕ್ಯವು ಅನೇಕಾನೇಕ ಋಷಿಗಳಿಂದ ಯಾರಿಗೆ ದೃಷ್ಟವಾಗಿದೆಯೋ ಹಾಗೆ ಅದರ ಅರ್ಥವು ಸರ್ವಸಾಧಾರಣವೋ ಎಂದರೆ ಅಲ್ಲ ಎನ್ನುತ್ತಾರೆ.) ಯಾರು ಯಾರಿಗೆ ಯಾವ ಯಾವ ಭಗವನ್ಮಹಿಮಾದಿಗಳನ್ನು ಹೇಳತಕ್ಕ ವಾಕ್ಯಗಳ ಅರ್ಥವು ತಿಳಿಯಲು ಯೋಗ್ಯವೋ ಆವಾವ ಅರ್ಥಗಳನ್ನು ಹೇಳುವವುಗಳೆಂದೇ ಆವಾವ ವಾಕ್ಯಗಳನ್ನು ಅವರವರು ತಿಳಿಯುತ್ತಾರೆ. ||೮||

ಅವ || ಹೀಗೆ ಪುರುಷರಾದ ಋಷಿಗಳನ್ನು ಹೇಳಿ ಸ್ತ್ರೀ ಋಷಿಗಳನ್ನು ಹೇಳುತ್ತಾರೆ.

**ಭಾ || (೧) ಸರ್ವವೇದಾಭಿಮಾನಿತ್ವಾಚ್ಛ್ರೀರ್ಬ್ರಹ್ಮಾಣೀ ಚ ಭಾರತೀ । ದ್ರಷ್ಟ್ರ್ಯಶ್ಚ ಸರ್ವ ವಿದ್ಯಾನಾಂ (೨) ವ್ಯಾಖ್ಯಾತೋ ಬ್ರಹ್ಮಣಾ ಮರುತ್ || (೩) ಸ್ವಭರ್ತ್ರನಂತರಂ ದ್ರಷ್ಟ್ರ್ಯಸ್ತೇಭ್ಯಸ್ತ್ವನ್ಯೋದಿತಾ ಹಿರುಕ್ || (೪) ತಾ ಸ್ತುವಂತಿ ಹರಿಂ ನಿತ್ಯಂ ವಿದ್ಯಾಭಿಸ್ತೇ ಚ ಸರ್ವಶಃ । (೫) ಛಂದಸ್ತ್ವೇನ ಮುನಿತ್ವೇನ ತಾಸಾಂ ಸ್ಮೃತಿರುದೀರಿತಾ । ಸ್ಮರ್ತ ವ್ಯಾಸ್ತೇ ಚ ಸರ್ವೇಽಪಿ ಮುನಿತ್ವೇನ ಪೃಥಕ್ ಪೃಥಕ್ ||೯||**

ಅ|| (೧) ಸಮಸ್ತ ವಿದ್ಯೆಗಳಿಗೆ ಅಭಿಮಾನಿಗಳಾಗಿರುವುದರಿಂದ ಲಕ್ಷ್ಮೀದೇವಿ, ಸರಸ್ವತೀ ಭಾರತಿಯೂ ಕೂಡ ಸರ್ವ ವಿದ್ಯೆಗಳನ್ನು ಕಂಡವರು (ಅವರೂ ಋಷಿಗಳು) (೨) ಬ್ರಹ್ಮವಾಯುಗಳ ಗುಣಗಳು ಸ್ವರೂಪತಃ ಸಮಗಳಾಗಿರುವುದರಿಂದ ಚತುರ್ಮುಖ ಬ್ರಹ್ಮನು ಋಷಿಯು ಎಂದು ಹೇಳಿದುದರಿಂದ ಮುಖ್ಯಪ್ರಾಣನೂ ಕೂಡ ಸಮಸ್ತ ವಿದ್ಯೆಗಳಿಗೆ ಋಷಿಯೆಂದು ಹೇಳಿದಂತೆಯೇ ಆಯ್ತು. (ಹೀಗೆಯೇ ಶೇಷನಿಂದ ರುದ್ರನೂ, ಇಂದ್ರನಿಂದ ಕಾಮನೂ, ಅಗ್ನಿಯಿಂದ ಭೃಗು ಋಷಿ ಮೊದಲಾದವರು ಹೇಳಲ್ಪಟ್ಟರು) (೩) ಲಕ್ಷ್ಮ್ಯಾದಿಗಳಿಗೂ ಸಮಸ್ತ ವಿದ್ಯೆಗಳ ದೃಷ್ಟೃತ್ವವಿದ್ದರೆ ಶಾಸ್ತ್ರಗಳಲ್ಲಿ ವಿಷ್ಣ್ವಾದಿಗಳೇ ಋಷಿಗಳೆಂದು ಹೇಳಿದ್ದೂ ಹೇಗೆ ? ಲಕ್ಷ್ಮ್ಯಾದಿಗಳನ್ನು ಏಕೆ ಹೇಳಲಿಲ್ಲ, ಎಂದರೆ) ಲಕ್ಷ್ಮ್ಯಾದಿಗಳು ತಂತಮ್ಮ ಪತಿಗಳ ನಂತರದಲ್ಲಿ ಸಮಸ್ತ ವಿದ್ಯೆಗಳಿಗೂ ದ್ರಷ್ಟೃಗಳು ಎಂದು ತಂತಮ್ಮ ಪತಿಗಳನ್ನು ಹೇಳಿದುದರಿಂದಲೇ ಯಾವ ಕಾರಣದಿಂದ ಸಿದ್ಧವಾಗುತ್ತದೋ, (ಯಾವ ಕಾರಣದಿಂದ ಪ್ರಾಯಶಃ ಹೆಂಡಂದಿರು ಭರ್ತೃಸಮಾನ ಧರ್ಮವುಳ್ಳವರಾಗಿರುತ್ತಾರೋ.) ಆದ ಕಾರಣ ಸ್ತ್ರೀಯರಿಗೆ ಋಷಿತ್ವವಿದ್ದರೂ ಅರ್ಥಾತ್ ಸಿದ್ಧವಾಗುವುದರಿಂದ ತಂತಮ್ಮ ಭರ್ತೃಗಳಿಗಿಂತ ಪ್ರಪ್ರತ್ಯೇಕ ಸ್ತ್ರೀಯರನ್ನು ಋಷಿಗಳೆಂದು ಹೇಳಲಿಲ್ಲ. (೪) ಋಷಿಗಳಾದ ಆ ಸ್ತ್ರೀಯರ ಮತ್ತು ಪುರುಷರ ವ್ಯಾಪಾರವನ್ನು ಹೇಳುತ್ತಾರೆ. ಆ ಸ್ತ್ರೀಯರೂ, ಆ ಪುರುಷರೂ ಎಲ್ಲರೂ ನಿತ್ಯದಲ್ಲಿಯೂ ಶ್ರೀಹರಿಯನ್ನು ವಿದ್ಯೆಗಳಿಂದ ಸ್ತುತಿಸುತ್ತಿರುತ್ತಾರೆ.

(೫) ಆ ಸ್ತ್ರೀಯರನ್ನು ಮುನಿಗಳೆಂದು ಸ್ಮರಿಸಬೇಕು. ಎಂದು ಹೇಳಿಯದೆ, ಮತ್ತು (ದೃಷ್ಟಾದೃಷ್ಟ ಫಲಗಳಿಗೆ ಕಾರಣವಾಗಿರುವುದರಿಂದ) ಆ ಸ್ತ್ರೀಯರ ಭರ್ತೃಗಳನ್ನು ಸ್ತ್ರೀಯರಿಗಿಂತಲೂ ವಿಶೇಷವಾಗಿ ಮುನಿಗಳೆಂದು ಪ್ರಪ್ರತ್ಯೇಕ ಸ್ಮರಿಸಲೇಬೇಕು. (ಹೀಗೆ ಋಷಿಗಳನ್ನು ಹೇಳಿ ಅವರನ್ನು ಸ್ಮರಿಸಬೇಕೆಂದೂ ವಿಧಿಸಿ ಈಗ ಛಂದಸ್ಸುಗಳನ್ನು ಸ್ಮರಿಸಬೇಕೆಂದು ವಿಧಿಸುತ್ತಾರೆ.) ಮತ್ತು ಲಕ್ಷ್ಮೀ ಸರಸ್ವತ್ಯಾದಿಗಳನ್ನು ಗಾಯತ್ರ್ಯಾದಿ ಛಂದಸ್ಸುಗಳಿಗೆ ದೇವತೆಗಳೆಂದೂ ಸ್ಮರಿಸಬೇಕು ಎಂದು ಹೇಳಿದೆ. ||೯||

ಅವ || ಅದರಲ್ಲಿ ಯಾವ ಯಾವ ಛಂದಸ್ಸಿಗೆ ಯಾವ ಯಾವ ದೇವತೆಯು ಎಂದರೆ

**ಭಾ ॥ (೧) ಗಾಯತ್ರೀ ಬೃಹತೀ ಚೈವ ತಾಸ್ಸರ್ವಾ ಗರುಡಸ್ತಥಾ । ಬ್ರಹ್ಮಾಣ್ಯನುಷ್ಟು ಬಿಂದ್ರಾಣೀ ತ್ರಿಷ್ಟುಪ್‌ಸಆಹೇತಿ ಚೋಚ್ಯತೇ ॥ ಗಾಯತ್ರೀ ಜಗತೀ ಚೈವ ವಾರುಣೀ ರೋಹಿಣೀ ತಥಾ । ಅನುಷ್ಟುಬ್ಬೃಹತೀ ಚೈವ ತಾರಾ ಪಙ್ತ್ತಿಃಶಚೀ ತಥಾ ॥ ಉಷ್ಣಿಕ್ ಸೌರೀ ಜಗತ್ಯಶ್ಚ ಸರ್ವದೇವಸ್ತ್ರೀಯೋ ಮತಾಃ ॥ ವಿರಾಣ್ಮಿತ್ರಾವರುಣಯೋರ್ಭಾರ್ಯೇ ಇತಿ ಚ ಕೀರ್ತಿತೇ । ಅತಿಛಂದಾಂಸಿ ಸರ್ವಾಣಿ ಸರ್ವದೇವ್ಯಃ ಪ್ರಕೀರ್ತಿತಾಃ ॥ ವಿರಾಡಿತಿ ಚ ನಾಮಾಸಾಂ ॥ ॥೧೦॥**

ಅ॥ (೧) ಹಿಂದೆ ಹೇಳಿದ ಲಕ್ಷ್ಮೀ ಸರಸ್ವತೀ ಭಾರತಿಯರೂ ಹಾಗೆಯೇ ಗರುಡನೂ ಕೂಡ ಗಾಯತ್ರೀ ಛಂದಸ್ಸು. (ಗಾಯತ್ರಿ ಛಂದಸ್ಸಿಗೆ ದೇವತೆಯರು.) ಮತ್ತು ಬೃಹತೀ ಛಂದಸ್ಸು. ಸರಸ್ವತಿಯು. ಅನುಷ್ಟುಪ್ ಛಂದಸ್ಸಿಗೆ (ಇಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ ಎಂಬ ಶ್ರುತ್ಯರ್ಥ ಹೇಳುತ್ತಾರೆ.) ಇಂದ್ರನ ಪತ್ನಿಯಾದ ಶಚೀದೇವಿಯು ತ್ರಿಷ್ಟುಪ್ ಛಂದಸ್ಸು. ಅಗ್ನೇರ್ಗಾಯತ್ರ್ಯಭವತ್ಸಯುಗ್ವಾ ಎನ್ನುವುದರ ಅರ್ಥ ಹೇಳುತ್ತಾರೆ. (ಲಕ್ಷ್ಮ್ಯಾದಿಗಳು ಮಾತ್ರ ಗಾಯತ್ರೀ ಎನಿಸುವುದಲ್ಲ ಮತ್ತೆ) ಸ್ವಾಹಾದೇವಿಯೂ ಗಾಯತ್ರೀ ಎನಿಸುತ್ತಾಳೆ. (ಸಮಸ್ತ ದೇವ ಸ್ತ್ರೀಯರೂ) ವಾರುಣೀ ದೇವಿಯೂ ಕೂಡ ಜಗತೀ ಛಂದಸ್ಸು. ಏವ=ಅಗ್ನಿಃ ಸವಿತಾ ಸೋಮೋ ಬೃಹಸ್ಪತಿಃ ಮಿತ್ರಾವರುಣಾವಿಂದ್ರೋ ವಿಶ್ವೇದೇವಾಃ ದೇವತಾಃ ಎಂದು ಅನ್ಯಥಾ ಹೇಳಿದ್ದೂ ಪ್ರಮಾಣ ವಿರುದ್ಧವಾದ ಪ್ರಯುಕ್ತ ಆಯುಕ್ತವು. ಸರಸ್ವತಿಯು ಮಾತ್ರ ಅನುಷ್ಟುಪ್ ಛಂದಸ್ಸಲ್ಲ. ಮತ್ತೆ ರೋಹಿಣೀ ದೇವಿಯೂ (ಚಂದ್ರನ ಹೆಂಡತಿಯು) ಕೂಡ ಅನುಷ್ಟುಪ್ ಛಂದಸ್ಸು. ಮತ್ತು ಇಂದ್ರಾಣೀ ತ್ರಿಷ್ಟುಪ್ ಎಂದು ಹೇಳಿದುದರಿಂದ ತ್ರಿಷ್ಟುಪ್ ಛಂದಸ್ಸಿಗೂ ದೇವತೆಯು. ಮತ್ತು ವಿರಾಟ್ ಛಂದಸ್ಸು. ಸೌರೀ ದೇವಿಯು (ಆದಿತ್ಯನ ಭಾರ್ಯೆಯಾದ ಸಂಜ್ಞಾದೇವಿಯು) ಉಷ್ಣಿಕ್ ಛಂದಸ್ಸು. ಸಮಸ್ತ ದೇವ ಸ್ತ್ರೀಯರೂ ವಾರುಣೀ ದೇವಿಯೂ ಕೂಡ ಜಗತೀಛಂದಸ್ಸು. ಮಿತ್ರಾ ವರುಣರ ಹೆಂಡಂದಿರೂ ಸರ್ವದೇವ ಸ್ತ್ರೀಯರೂ ಶಚೀ ದೇವಿಯೂ ಕೂಡ ವಿರಾಟ್ ಎಂದು ಅನ್ನಿಸಿಕೊಳ್ಳುತ್ತಾರೆ. ಸಮಸ್ತ ದೇವತಾ ಸ್ತ್ರೀಯರೂ ಎಲ್ಲಾ ಅತಿ ಛಂದಸ್ಸುಗಳು ಎಂದು ಹೇಳಲ್ಪಡುತ್ತಾರೆ. ಈ ದೇವತಾ ಸ್ತ್ರೀಯರಿಗೂ ವಿರಾಟ್ ಎಂದು ನಾಮಧೇಯವು ಇದೆ. ಎಲ್ಲರೂ ಆವಾವಛಂದಸ್ಸುಗಳಿಗೆ ಅಭಿಮಾನಿಗಳೆಂದರ್ಥವು.

ವಿ॥ (೧) ಯದ್ಯಪಿ ಲೋಕದಲ್ಲಿ ಉಕ್ತಾಽತ್ಯುಕ್ತಾ ತಥಾ ಮಧ್ಯಾ ಪ್ರತಿಷ್ಠಾ ಸುಪ್ರತಿಷ್ಠಿತಾ ಇತ್ಯಾದಿ ಪ್ರಕಾರ ೨೬ ಛಂದಸ್ಸುಗಳನ್ನು ಛಂದೋಗ್ರಂಥಗಳಲ್ಲಿ ಹೇಳಿರುವರು. ಆದರೂ ಋಗ್ವೇದದಲ್ಲಿ ಅನುಕ್ರಮಣಿಕಾರರು (1) ಗಾಯತ್ರೀ (2) ಉಷ್ಣಿಕ್ (3) ಅನುಷ್ಟುಪ್ (4) ಬೃಹತೀ (5) ಪಂಙ್ತಿ (6) ತ್ರಿಷ್ಟುಪ್ (7) ಜಗತೀ ಎಂದು ೭ ಛಂದಸ್ಸುಗಳನ್ನೂ (1) ಅತಿ ಜಗತೀ, (2) ಶಕ್ವರೀ, (3) ಅತಿ ಶಕ್ವರೀ, (4) ಅಷ್ಟಿ (5) ಅತ್ಯಷ್ಟೀ (6) ಧೃತಿ (7) ಅತಿಧೃತಿ ಎಂದು ೭ ಅತಿ ಛಂದಸ್ಸುಗಳನ್ನೂ ಹೇಳಿರುವರು. (೨) ಹೀಗೆಯೇ ಗಾಯತ್ರ್ಯಾದಿಗಳಿಗೆ ಲಕ್ಷಣಗಳನ್ನು ಅಲ್ಲಿಯೇ ಹೇಳಿರುವರು. ಗಾಯತ್ರೀ ಛಂದಸ್ಸಿಗೆ ೨೪ ಅಕ್ಷರಗಳು. ಉಷ್ಣಿಕ್ ಮೊದಲಾದ ೧೩ ಛಂದಸ್ಸುಗಳಿಗೆ ಕ್ರಮವಾಗಿ ೪, ೪, ಅಕ್ಷರಗಳು ವೃದ್ಧಿಯಾಗುತ್ತಾ ಅಂತಿಮದ ಅತಿಧೃತಿ ಛಂದಸ್ಸಿಗೆ ೭೬ ಅಕ್ಷರಗಳು ಆಗುತ್ತವೆ. (೩) ಹೀಗೆಯೇ ಅದರ ಮೇಲಿನ (1) ಕೃತಿ, (2) ಪ್ರಕೃತಿ (3) ಆಕೃತಿ (4) ವಿಕೃತಿ (5) ಸಂಕೃತಿ (6) ಅತಿಕೃತಿ (7) ಉತ್ಕೃತಿ, ಛಂದಸ್ಸುಗಳಿಗೆ ೪, ೪ ಅಕ್ಷರಗಳು ವೃದ್ಧಿಯಾಗಿ ಕೊನೆಗೆ ೧೦೪ ಅಕ್ಷರಗಳು ಆಗುತ್ತವೆ. ಇವುಗಳನ್ನೆಲ್ಲಾ ತೆಗೆದುಕೊಳ್ಳಬೇಕೆಂಬ ಅಭಿಪ್ರಾಯದಿಂದಲೇ ಭಾಷ್ಯದಲ್ಲಿ ಅತಿಛಂದಾಂಸಿ ಸರ್ವಾಣಿ, ಎನ್ನುವಲ್ಲಿ ಸರ್ವಾಣಿ ಎಂದು ಹೇಳಿರುವರು. ॥೧೦॥

ಅವ॥ ಹೀಗೆ ಛಂದಸ್ಸುಗಳಿಗೆ ದೇವತೆಗಳನ್ನು ಹೇಳಿ ಆ ಛಂದಸ್ಸುಗಳ ಅವಾಂತರ ಭೇದಗಳನ್ನೂ, ಆ ಅವಾಂತರ

**ಭೇದಗಳ ದೇವತೆಗಳನ್ನೂ, ಹೇಳುತ್ತಾರೆ.**

**ಭಾ ॥ (೧) ತಾಸ್ತಾ ಊನಾಧಿಕೇಷ್ವಪಿ । (೨) ನಿಚೃದ್ಭುರಿಗ್ವಿರಾಟ್ ಸಂಜ್ಞಾ (೩) ಪ್ರಸ್ತಾರೇತ್ಯಾದಿ ನಾಮ ಚ ॥೧೧॥**

ಅ॥ (೧) ಯಾವ ಯಾವ ಛಂದಸ್ಸುಗಳಿಗೆ ಎಷ್ಟು ಎಷ್ಟು ವರ್ಣಗಳಿರಬೇಕೋ, ಅವುಗಳಿಗಿಂತ ಕಡಿಮೆ ಇದ್ದರೆ ಅಥವಾ ಹೆಚ್ಚು ವರ್ಣಗಳಿದ್ದರೆ ಪಾದಗಳ ವಿನ್ಯಾಸಭೇದದಿಂದ ಅವಾಂತರ ಭೇದಗಳಲ್ಲಿಯೂ ಆಯಾವ ಛಂದಸ್ಸುಗಳ ದೇವತೆಗಳೇ ದೇವತೆಗಳೆಂದು ತಿಳಿಯಬೇಕು. (೨) ೧ ಅಕ್ಷರ ಕಡಿಮೆಯಾದರೆ ನಿಚೃತ್. ೧ ಅಕ್ಷರ ಹೆಚ್ಚಾದರೆ ಭುರಿಕ್, ೨ ಅಕ್ಷರಗಳು ಕಡಿಮೆಯಾದರೆ ವಿರಾಟ್, ೨ ಅಕ್ಷರಗಳು ಹೆಚ್ಚಾದರೆ ಸ್ವರಾಟ್, ಹೀಗೆಯೇ ನ್ಯೂನಾದಿಕ್ಯಾದಿಗಳಿಂದ ಗಾಯತ್ರ್ಯಾದಿ ಛಂದಸ್ಸುಗಳು ನಿಚೃತ್ ಮೊದಲಾದ ಸಂಜ್ಞೆಯುಳ್ಳವುಗಳಾಗುತ್ತವೆ. (ಅಂದರೆ ೨ ವರ್ಣಗಳು ಅಧಿಕವಾಗಿ ಯಾವುವು ಸ್ವರಾಟ್ ಗಾಯತ್ರಿಯು ಅದೆಯೋ, ಅದೇವೇ ೨೮ ಅಕ್ಷರಗಳುಳ್ಳ ಉಷ್ಣಿಕ್ ಛಂದಸ್ಸಿಗಿಂತ ೨ ಅಕ್ಷರಗಳು ನ್ಯೂನವಾಗಿರುವುದರಿಂದ ಉಷ್ಣಿಕ್ ವಿರಾಟ್ ಎನಿಸುತ್ತದೆ. ಹೀಗೆ ೩೦ ಅಕ್ಷರಗಳುಳ್ಳ ಸ್ವರಾಟ್ ಉಷ್ಣಿಕ್ ಛಂದಸ್ಸೇ ವಿರಾಟನುಷ್ಟುಪ್ ಎನಿಸುತ್ತದೆ. ಹೀಗೆ ಮೇಲಿನ ಛಂದಸ್ಸುಗಳನ್ನು ತಿಳಿಯಬೇಕು. (೩) ವಿನ್ಯಾಸ ಭೇದದಿಂದ ಅವಾಂತರ ಭೇದಗಳಿಗೆ ಪ್ರಸ್ತಾರ (ಪಙ್ಕ್ತಛಂದೋ ವಿಶೇಷ) ಸಂಸ್ತಾರ, ಆಸ್ತಾರ, ವಿಷ್ಟಾರ ಎಂಬ ನಾಮಗಳನ್ನು ತಿಳಿದುಕೊಳ್ಳಬೇಕು. (ಇವುಗಳನ್ನು ಪಿಂಗಲ ಸೂತ್ರ ಅನುಕ್ರಮಣಿಕಾ ಮೊದಲಾದ ಛಂದೋ ಗ್ರಂಥಗಳಿಂದ ತಿಳಿದುಕೊಳ್ಳಬೇಕು.) ॥೧೧॥

ಅವ॥ ೧ ಗಾಯತ್ರಿಗೆ ಅನೇಕರಾದ ಲಕ್ಷ್ಮೀ ಸರಸ್ವತ್ಯಾದಿಗಳಿಂದ ಅಭೇದವು ಕೂಡದಿರುವ ಪ್ರಯುಕ್ತ ತಾಃ ಸರ್ವಾ ಗಾಯತ್ರೀ ಇತ್ಯಾದಿಗಳು ಕೂಡಲಾರವು ಎಂದರೆ -

**ಭಾ ॥ (೧) ಬಹ್ವೀನಾಮೇಕಮಾನೇನ ತ್ವೇಕಂ ನಾಮ ಚ ಯುಜ್ಯತೇ ॥ (೨) ಸರ್ವಾಭಿಮಾನಿ ತಾ ಚೈವ ತಿಸ್ರಣಾಂತು ಯಥಾಕ್ರಮಂ ॥ (೩) ದೇವತಾ ಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ ॥ (೪) ಋತೇ ತತ್ರಪ್ರಸಿದ್ಧಾಶ್ಚ ದೇವತಾ ಶ್ರೀಸ್ತಥಾಽತ್ರ ಚ । ಋತೇ ಪ್ರಸಿದ್ಧಾ ಬ್ರಹ್ಮೈರ್ವ ಶತಸ್ತೇನ ಕ್ರಮೇಣ ಚ । ಪೂರ್ವಪ್ರಸಿದ್ಧವರ್ಜಂತು ಶಕ್ರಾಂತಾ ದೇವತಾ ಮತಾಃ ॥ ॥೧೨॥**

ಅ॥ (೧) (ಇಲ್ಲಿ ಲಕ್ಷ್ಮ್ಯಾದಿ ದೇವತೆಗಳಿಗೂ ಗಾಯತ್ರ್ಯಾದಿ ಛಂದಸ್ಸುಗಳಿಗೂ ಐಕ್ಯ ಹೇಳುವುದಲ್ಲ. ಮತ್ತೆ ಗಾಯತ್ರ್ಯಾದಿ ಛಂದಸ್ಸುಗಳಿಗೆ ಲಕ್ಷ್ಮ್ಯಾದಿಗಳು ಅಭಿಮಾನಿಗಳಾಗಿರುವುದರಿಂದ ಲಕ್ಷ್ಮ್ಯಾದಿಗಳಿಗೆ ಆಯಾವ ಗಾಯತ್ರೀ ಮೊದಲಾದ ನಾಮಗಳು) ಲಕ್ಷ್ಮೀ ಮೊದಲಾದ ಅನೇಕ ದೇವತಾ ಸ್ತ್ರೀಯರು ಗಾಯತ್ರೀ ಮೊದಲಾದ ಒಂದೊಂದು ಛಂದಸ್ಸಿಗೆ ಅಭಿಮಾನಿಗಳಾಗಿರುವುದರಿಂದಲೇ ಅವರಿಗೆ ಗಾಯತ್ರೀ ಮೊದಲಾದ ಒಂದೊಂದು ನಾಮವು ಕೂಡುತ್ತದೆ. (ವಿರುದ್ಧವಾಗುವುದಿಲ್ಲ) (ಇದರಿಂದ ಅಗ್ನೇರ್ಗಾಯತ್ರ್ಯ ಭವತ್ ಅಗ್ನಿಯಿಂದ ಗಾಯತ್ರ್ಯಭಿಮಾನಿನಿಯು ಪ್ರಕಟಳಾದಳು. ಸವಿತಾ ಉಷ್ಣಿಹಯಾ ಸೂರ್ಯನು ಉಷ್ಣಿಕ್ ಛಂದಸ್ಸಿಗೆ ಅಭಿಮಾನಿನಿಯಾದ ತನ್ನ ಹೆಂಡತಿಯಿಂದ ಕೂಡಿ ಅಗ್ನಿಹೋತ್ರಾದಿ ಸತ್ಕರ್ಮಗಳಿಂದ ಯುಕ್ತನಾದನು, ಇತ್ಯಾದಿಗಳಲ್ಲಿ ಹೀಗೆಯೇ ಅರ್ಥವನ್ನು ತಿಳಿಯಬೇಕೆಂದುಕ್ತವಾಯ್ತು.) (೨) (ಗಾಯತ್ರೀ ಬೃಹತೀ ಛಂದಸ್ಸುಗಳಿಗೆ ಲಕ್ಷ್ಮ್ಯಾದಿಗಳು ದೇವತೆಗಳು ಎಂದುಕ್ತವಾಯ್ತು. ಆದರೆ ಗಾಯತ್ರೀ ಬೃಹತೀ ಛಂದಸ್ಸುಗಳಿಗೆ ಮಾತ್ರ ಲಕ್ಷ್ಮ್ಯಾದಿಗಳು ದೇವತೆಗಳು ಎಂದಲ್ಲ. ಮತ್ತೆ) ಲಕ್ಷ್ಮೀ ಸರಸ್ವತೀ ಭಾರತೀಯರು ಯಥಾಕ್ರಮವಾಗಿ ಸಮಸ ಛಂದಸ್ಸುಗಳಿಗೂ ಅಭಿಮಾನಿಗಳಾಗಿರುತ್ತಾರೆ. (ಹಾಗಾದರೆ ಗಾಯತ್ರೀ ಬೃಹತೀ ಚೈವ ತಾಸ್ಸರ್ವಾ ಬ್ರಹ್ಮಾಣ್ಯನುಷ್ಟುಪ್

ಎಂದು ಹೇಳಿದ್ದು ವ್ಯರ್ಥವೆಂದರೆ, ಗಾಯತ್ರ್ಯಾದಿ ಛಂದಸ್ಸುಗಳಲ್ಲಿ ಲಕ್ಷ್ಮ್ಯಾದಿಗಳಿಗೆ ಉಷ್ಣಿಗಾದಿ ಛಂದಸ್ಸುಗಳಿಗಿಂತ ವಿಶೇಷತಃ ಅಭಿಮಾನವಿದೆ ಎಂದು ತೋರಿಸುವುದಕ್ಕಾಗಿ ಹೇಳಿದ್ದು.) (೩) (ಹೀಗೆ ಋಷಿ ಛಂದಸ್ಸುಗಳನ್ನು ಹೇಳಿ ದೇವತೆಯನ್ನೂ ಹೇಳುತ್ತಾರೆ.) ಸರ್ವ ಸಮರ್ಥನಾದ ಶ್ರೀ ನಾರಾಯಣನೇ ಸಮಸ್ತ ವಿದ್ಯೆಗಳಿಗೂ ಸಾಕ್ಷಾತ್ ಪರಮ ಮುಖ್ಯ ವೃತ್ತಿಯಿಂದ ದೇವತೆಯು. (ಅಂದರೆ ನಿರುಪಚರಿತ ಸರ್ವಸ್ವಾಮಿಯಾದುದರಿಂದಲೂ ಸಮಸ್ತ ವಸ್ತುಗಳಲ್ಲಿರತಕ್ಕ ಪ್ರವೃತ್ತಿ ನಿಮಿತ್ತಗಳು ಶ್ರೀ ವಿಷ್ಣುವಿನ ಅಧೀನಗಳಾಗಿರುವುದರಿಂದಲೂ ಶ್ರೀ ನಾರಾಯಣನೇ ಸಮಸ್ತ ವಿದ್ಯೆಗಳಲ್ಲಿ ಪ್ರತಿಪಾದ್ಯನು) (೪) ಶ್ರೀ ಪರಮಾತ್ಮನಲ್ಲಿಯೇ ಪ್ರಸಿದ್ಧಗಳಾದ ಪುರುಷ ಸೂಕ್ತ, ವಿಷ್ಣು ಸೂಕ್ತ, ಹರಿಸೂಕ್ತ ಮೊದಲಾದ ವಿದ್ಯೆಗಳನ್ನು ಬಿಟ್ಟು ಬೇರೆ ವಿದ್ಯೆಗಳಿಗೆ ಶ್ರೀ ಲಕ್ಷ್ಮಿ ದೇವಿಯೂ ದೇವತೆಯು. ಹಾಗೆಯೇ ಶ್ರೀ ದೇವಿಯಲ್ಲಿಯೇ ಪ್ರಸಿದ್ಧಗಳಾದ ಅಂಭೃಣೀ ಸೂಕ್ತ, ಶ್ರೀ ಸೂಕ್ತ ಮೊದಲಾದವುಗಳನ್ನು ಬಿಟ್ಟು ಬಿಟ್ಟು ಬೇರೆ ವಿದ್ಯೆಗಳಿಗೆ ಚತುರ್ಮುಖ ಬ್ರಹ್ಮನೇ ದೇವತೆಯು. ಆ ಮೇಲೆ ಮುಂದೆ ಹೇಳುವ ತಾರತಮ್ಯ ಕ್ರಮದಿಂದಲೇ ಪೂರ್ವ ದೇವತೆಗಳಲ್ಲಿ ಅಂದರೆ ಬ್ರಹ್ಮನಲ್ಲಿಯೂ ವಾಯುವಿನಲ್ಲಿಯೂ ಪ್ರಸಿದ್ಧಗಳಾದ, ಹಿರಣ್ಯ ಗರ್ಭ ಇತ್ಯಾದಿ ಬಳಿತ್ಥೇತ್ಯಾದಿ ವಿದ್ಯೆಗಳನ್ನು ಬಿಟ್ಟು ಬೇರೆ ವಿದ್ಯೆಗಳಿಗೆ ಸರಸ್ವತಿ ಭಾರತಿಯರು ದೇವತೆಯರು. ಹೀಗೆ ಇಂದ್ರ ಪರ್ಯಂತರಾದವರು ದೇವತೆಗಳೆಂದು ಸಂಮತರಾಗಿರುತ್ತಾರೆ.

ಅವ ॥ ದೇವತೆಗಳ ತಾರತಮ್ಯ ಕ್ರಮವನ್ನು ಹೇಳುತ್ತಾರೆ. ॥೧೨॥

**ಭಾ ॥ (೧) ಬ್ರಹ್ಮವಾಯೂ ಗಿರೌ ವೀಂದ್ರಶೇಷರುದ್ರಾಶ್ಚ ತತ್ಸ್ತ್ರಿಯಃ। ಶಕ್ರಕಾಮೌ ಕಾಮ ಪುತ್ರಮನುದಕ್ಷಾಂಗಿರಸ್ಸುತಾಃ॥ (೨) ತದ್ವಚ್ಚಚೀ ರತಿಃ ಸೂರ್ಯ ಸೋಮ ಧರ್ಮಾದಿ ತತ್ಸ್ತ್ರಿಯಃ। ಪ್ರಧಾನ ಮರುತೋ ವಾರಿಪತಿರಗ್ನಿಶ್ಚ ಮಾರುತಾಃ ॥ (೩) ನಿಋತಿಃ ಸ್ತ್ರಿಯಶ್ಚ ಸೂರ್ಯಾದೇರಶ್ವಿನಾವಿತರೇ ತಥಾ ॥ ಅನಂತಕೋಟಿ ಶತಕ ದಶಾರ್ಧಾದ್ಯಂಶತಃ ಕ್ರಮಾತ್। (೪) ಜ್ಞಾನ ಭಕ್ತಿ ಬಲೈಶ್ವರ್ಯ ಪೂರ್ವಾಖಿಲ ಗುಣೈರಪಿ। ಮುಕ್ತಾವಪಿ ಕ್ರಮೋ ಹ್ಯೇಷ ದೇವತಾ ಉದಿತಾ ಇಮಾಃ ॥೧೩॥**

ಅ ॥ (೧) ಬ್ರಹ್ಮವಾಯುಗಳು, ಸರಸ್ವತೀ ಭಾರತಿಯರು, ಗರುಡ ಶೇಷ ರುದ್ರರು, ಅವರ ಪತ್ನಿಯರಾದ ಸೌಪರ್ಣೀ ವಾರುಣೀ ಪಾರ್ವತಿಯವರೂ ದೇವೇಂದ್ರ ಮನ್ಮಥರು, ಕಾಮನ ಮಗನಾದ ಅನಿರುದ್ಧ, ಮನು, ದಕ್ಷ ಪ್ರಜಾಪತಿ, ಅಂಗಿರಋಷಿಯ ಮಗನಾದ ಬೃಹಸ್ಪತಿ ಇವರು, (೨) ಕಾಮ ಪುತ್ರನಾದ ಅನಿರುದ್ಧಾದಿಗಳಂತೆ ಚಂದ್ರ, ಧರ್ಮಾದಿಗಳು, ಮನ್ವಾದಿಗಳ ಸ್ತ್ರೀಯರು, ಪ್ರವಹ (ಸೂರ್ಯಾದಿಗಳಿಗಿಂತ ಉತ್ತಮನಾದುದರಿಂದ ಅವರಿಗಿಂತ ಮೊದಲು ಹೇಳಬೇಕು.) ಮೊದಲಾದ ಮರುತ್‌ಗಳು, (ಆದಿಪದ ಗೃಹೀತರಾದ ದಕ್ಷ ಪತ್ನೀ ಮೊದಲಾದವರು ಸೂರ್ಯಾದಿಗಳಿಗಿಂತ ಕಡಿಮೆಯವರು) ಜಲಾಧಿಪತಿಯಾದ ವರುಣನು, ಅಗ್ನಿಯೂ, ಪ್ರವಾಹಾದಿಗಳಿಗಿಂತ ಇತರರಾದ ವಾಯುಗಳೂ ನಿರ್ಋತಿಯೂ ಸೂರ್ಯ ಸೋಮ ಧರ್ಮರ ಸ್ತ್ರೀಯರೂ ಸ್ವಾಯಂಭುವ ಮನುವಿನ ಪತ್ನಿಯಾದ ಶತರೂಪೆಯೂ ಅಶ್ವಿನೀ ದೇವತೆಗಳೂ ಹಾಗೆಯೇ ಇತರ ದೇವತೆಗಳೂ ಅನಂತ, ಕೋಟಿ, ೧೦೦, ೧೦, ೫, ಮೊದಲಾದ ಅಂಶಗಳಿಂದ ನ್ಯೂನರಾಗಿ ಈ ಕ್ರಮದಿಂದ ಇರುತ್ತಾರೆ. (ಅಂದರೆ - ನಾರಾಯಣ ಲಕ್ಷ್ಮೀ ಬ್ರಹ್ಮ ವಾಯು, ಮೊದಲಾದವರ ಮಧ್ಯದಲ್ಲಿ ಶ್ರೀ ನಾರಾಯಣನಿಗಿಂತ ಲಕ್ಷ್ಮೀದೇವಿಗೆ ಅನಂತ ಗುಣಹೀನತ್ವವು. ಲಕ್ಷ್ಮೀದೇವಿಗಿಂತ ಬ್ರಹ್ಮವಾಯುಗಳಿಗೆ ಕೋಟಿ ಗುಣಗಳಿಂದ ಅಧಮತ್ವವು. ಅವರಿಗಿಂತ ಸರಸ್ವತೀ ಭಾರತಿಯವರಿಗೆ ಶತ ಗುಣಗಳಿಂದ ಅಧಮತ್ವವು. ಇವರಿಗಿಂತ ಗರುಡ ಶೇಷ ರುದ್ರರಿಗೆ ೧೦೦

ಗುಣಗಳಿಂದ ಅಧಮತ್ವವು. ಇವರಿಗಿಂತ ಅವರ ಸ್ತ್ರೀಯರಿಗೆ ೧೦೦ ಗುಣಗಳಿಂದ ಅಧಮತ್ವವು. ಪಾರ್ವತಿಗಿಂತ ಇಂದ್ರ ಕಾಮರಿಗೆ ೧೦೦ ಗುಣಗಳಿಂದ ಅವರತ್ವವು. ಕಾಮ ಪುತ್ರಾದಿಗಳನ್ನಾರಂಭಿಸಿ ಪಂಚ ರತಿ ಪರ್ಯಂತರಾದವಿಗೆ ಇಂದ್ರನಿಗಿಂತ ೧೦೦ ಗುಣಗಳಿಂದ ಅಧಮತ್ವವು. ಪ್ರವಹನಿಗೆ ಕಾಮ ಪುತ್ರಾದಿಗಳಿಗಿಂತ ಪಂಚ ಗುಣಗಳಿಂದ ಅಧಮತ್ವವು. ಇತ್ಯಾದಿ ಕ್ರಮಗಳನ್ನು ಪ್ರಮಾಣಾನುಸಾರವಾಗಿ ತಿಳಿಯಬೇಕು.) (೪) ಜ್ಞಾನ ಭಕ್ತಿ ಬಲ ಐಶ್ವರ್ಯ ಮೊದಲಾದ ಎಲ್ಲಾ ಗುಣಗಳಿಂದಲೂ ಕ್ರಮವಾಗಿ ನ್ಯೂನರಾಗಿರುತ್ತಾರೆ. ಮುಕ್ತಿಯಲ್ಲಿಯೂ ಇದೇ ಕ್ರಮವು. ಈ ಕ್ರಮವಾಗಿ ಹೇಳಲ್ಪಟ್ಟ ಈ ದೇವತೆಗಳು ಯಥಾಯೋಗ್ಯವಾಗಿ ಸಮಸ್ತ ವಿದ್ಯೆಗಳಿಗೆ ದೇವತೆಗಳೆಂದು ತಿಳಿಯಬೇಕು.

ವಿ॥ (1) ಪ್ರಾಯಶಃ ಇಲ್ಲಿ ದ್ವಂದ್ವ ಸಮಾಸದಿಂದ ಗೃಹೀತರಾದವರು (ಬ್ರಹ್ಮ ವಾಯೂ ಇತ್ಯಾದಿಗಳು) ಸಮಾನಿಕರು. (2) ಪ್ರಧಾನ ವಾಯುಗಳಲ್ಲಿ ಪ್ರವಹನೆಂಬ ವಾಯುವು ಸೂರ್ಯ ಸೋಮಾದಿಗಳಿಗಿಂತ ಶ್ರೇಷ್ಠನು (3) ಸೂರ್ಯ ಚಂದ್ರ ಯಮರಿಗೂ ಮನು ಪತ್ನಿಗೂ ಸಾಮ್ಯವು. ಪ್ರಸೂತ್ಯಾದಿ ಸ್ತ್ರೀಯರು, ಸೂರ್ಯಾದಿಗಳಿಗಿಂತ ಅಧಮರು. ಹೀಗೆ ತಿಳಿಯಬೇಕು. ॥೧೩॥

ಅವ ॥ ಇವರೆಲ್ಲರೂ ವಿದ್ಯಾಭಿಮಾನಿ ದೇವತೆಗಳೆಂದಾದರೆ ಶಕ್ರಾಂತಾ ದೇವತಾ ಮತಾಃ ಎಂದದ್ದು ಹೇಗೆ? ಎಂದರೆ-

ಭಾ ॥ ಇಂದ್ರಾವರಾ ವಿಶೇಷೇಣ ಲಿಂಗೇನೈವ ಪೃಥಕ್ ಪೃಥಕ್ । ದೇವತಾಸ್ತತ್ರ ತತ್ರ ಸ್ಯುರೇಷ ಏವ ಪರೋ ವಿಧಿಃ ॥೧೪॥

ಅ॥ (ಯದ್ಯಪಿ ಇವರೆಲ್ಲರೂ ವಿದ್ಯಾಭಿಮಾನಿಗಳಾಗಿ ಆಗಿಯೇ ಆಗುತ್ತಾರೆ. ಆದಾಗ್ಯೂ) ಪ್ರಪ್ರತ್ಯೇಕ ವ್ಯಾವರ್ತಕವಾದ ಶ್ರುತಿಲಿಂಗಾದಿ ಜ್ಞಾಪಕವಿದ್ದರೇನೇ ಇಂದ್ರನಿಗಿಂತ ಕೆಳಗಿನವರು ಆವಾವ ವಿದ್ಯೆಗಳಲ್ಲಿ ಅಭಿಮಾನಿ ದೇವತೆಗಳಾಗುವರು. (ಶ್ರುತಿ ಲಿಂಗಾದಿಗಳು ಇಲ್ಲವಾದರೆ ಇಂದ್ರನಿಗಿಂತ ಕೆಳಗಿನವರು ಅಭಿಮಾನಿ ದೇವತೆಗಳು ಆಗಲಾರರು. ಇಂದ್ರ ಪರ್ಯಂತ ದೇವತೆಗಳಾದರೂ ಶ್ರುತ್ಯಾದಿಗಳು ಇಲ್ಲದಿದ್ದರೂ, ಪೂರ್ವಪ್ರಸಿದ್ಧವರ್ಜಂತು ಶಕ್ರಾಂತಾಃ ದೇವತಾಃ ಎಂದು ಹೇಳಿದ ಪ್ರಕಾರ ಇಂದ್ರ ಪರ್ಯಂತರಾದವರು ದೇವತೆಗಳಾಗುವರು ಎಂದದ್ದು.) (ಆವಾವ ಶ್ರುತ್ಯಾದಿಗಳಿಂದಲೇ ವಿಷ್ವಾದಿಗಳೂ ಕೂಡ ದೇವತೆಗಳಾಗುವರು ಎಂದು ಇತರರು ಹೇಳುತ್ತಾರೆ. ಎಂದರೆ ಅದು ಅಯುಕ್ತವೆನ್ನುತ್ತಾರೆ.) ಪ್ರಮಾಣ ಸಿದ್ಧವಾದ ಪ್ರಯುಕ್ತ ಇದೆ. ದೇವತಾ ಸ್ಥಿತಿಃ ಅಂದರೆ ದೇವತಾ ಸರ್ವವಿದ್ಯಾನಾಂ ಸ್ವಯಂ ನಾರಾಯಣಃ ಪ್ರಭುಃ । ಎಂದಾರಂಭಿಸಿ ಪೂರ್ವ ಪ್ರಸಿದ್ಧವರ್ಜಂ ತು ಶಕ್ರಾಂತಾ ದೇವತಾ ಮತಾಃ ಎಂದು ಹೇಳಿದ ದೇವತಾತ್ವ ವ್ಯವಸ್ಥಿತಿ ರೂಪವಾದ ಪ್ರಕಾರವು. ಬೇರೆ ಪ್ರಕಾರವಲ್ಲ. ॥೧೪॥

ಅವ ॥ ವಿಷ್ವಾದಿಗಳು ವಿದ್ಯಾ ದೇವತೆಗಳು ಎಂದು ಹೇಳಿದುದನ್ನು ವಿವರಿಸುತ್ತಾರೆ.

ಭಾ ॥ ವೇದಾದಿವರ್ಣ ಪರ್ಯಂತೈಃ ಮೂರ್ತಯಃ ಕೇಶವಸ್ಯತು । ಸಮಾಸ ವ್ಯಾಸಯೋಗೇನ ವಾಚ್ಯಾಸ್ತಾತ್ಪರ್ಯತಃ ಕ್ವಚಿತ್ । ಯಥಾಯೋಗಂ ಯಥಾನ್ಯಾಯಮನ್ಯಾ ಸಾಮಪಿ ಮೂರ್ತಯಃ ॥೧೫॥

ಅ॥ ವೇದಗಳನ್ನಾರಂಭಿಸಿ ವರ್ಣ ಪರ್ಯಂತ ಶಬ್ದಗಳಿಂದ ಸಂಕ್ಷೇಪ ವಿಸ್ತರಗಳಿಂದ ಪ್ರತ್ಯೇಕವಾಗಿ ಪರಮಮುಖ್ಯ ವೃತ್ತಿಯಿಂದ ಭಗವನ್ಮೂರ್ತಿಗಳು ವಾಚ್ಯಗಳು. (ಸಂಕ್ಷೇಪ ವಿಸ್ತಾರಗಳು ಹೇಗೆಂದರೆ ಸಮಸ್ತ ವೇದಗಳಿಂದ ಒಂದು

ಭಗವನ್ಮೂರ್ತಿಯೂ, ವೇದ ಪ್ರಭೇದಗಳಿಂದ ಅಷ್ಟು ಭಗವನ್ಮೂರ್ತಿಗಳೂ, ಅವುಗಳ ಅವಾಂತರ ಪ್ರಭೇದಗಳಿಂದಲೂ ಅಷ್ಟು ಭಗವನ್ಮೂರ್ತಿಗಳು ಈ ಪ್ರಕಾರ ವಾಚ್ಯಗಳಾಗುತ್ತವೆ)ಅದೂ ಕೂಡ ಯೋಗ ವೃತ್ತಿಯನ್ನು ಅತಿಕ್ರಮಿಸದೆ, ಅವಾವ ಭಗವನ್ಮೂರ್ತಿಗಳಿಗೆ ಜ್ಞಾಪಕವಾದ ಲಿಂಗವನ್ನು ಅತಿಕ್ರಮಿಸದೆ ವಾಚ್ಯಗಳೆಂದು ತಿಳಿಯಬೇಕು. ಹಾಗೆಯೇ ಲಕ್ಷ್ಮ್ಯಾದಿ ದೇವತೆಗಳೂ ಸರ್ವ ವಿದ್ಯೆಗಳಲ್ಲಿ ವಾಚ್ಯರೆಂದು ತಿಳಿಯಬೇಕು. ||೧೫||

ಅವ। ಹಿಂದೆ ಹೇಳಿದ ಪ್ರಕಾರ ಋಷಿ ಛಂದಸ್ಸು ದೇವತೆ ಇವುಗಳ ಸ್ವರೂಪವನ್ನು ಹೇಳಿ ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ.

**ಭಾ ॥ ಋಕ್ಸಂಹಿತಾಯಾಂ ಸ್ವಾಧ್ಯಾಯೇ ನಿರುಕ್ತೇ ವ್ಯಾಸನಿರ್ಮಿತೇ। ಪ್ರವೃತ್ತೇ ಚೈತದಖಿಲ ಮುಕ್ತಂಹಿ ಪ್ರಭುಣಾ ಸ್ವಯಂ ||೧೬||**

ಅ॥ ಋಕ್ಸಂಹಿತೆಯಲ್ಲಿಯೂ ಸ್ವಾಧ್ಯಾಯೇ ನಿರುಕ್ತೇ ವ್ಯಾಸನಿರ್ಮಿತೇ। ಪ್ರವೃತ್ತೇ ಚೈತದಖಿಲ ಮುಕ್ತಂಹಿ ಪ್ರಭುಣಾ ಸ್ವಯಂ ||೧೬||

ಅ॥ ಋಕ್ಸಂಹಿತೆಯಲ್ಲಿಯೂ ಸ್ವಾಧ್ಯಾಯ ಗ್ರಂಥದಲ್ಲಿಯೂ ವೇದವ್ಯಾಸರು ನಿರ್ಮಿಸಿದ ನಿರುಕ್ತದಲ್ಲಿಯೂ ಪ್ರವೃತ್ತ ಎನ್ನುವ ಗ್ರಂಥದಲ್ಲಿಯೂ ಇದೆಲ್ಲವೂ ಸಾಕ್ಷಾತ್ ಪ್ರಭುವಾದ ಶ್ರೀನಾರಾಯಣನಿಂದ ಹೇಳಲ್ಪಟ್ಟಿದೆ. ||೧೬||

ಅವ ॥ ಶ್ರೀ ವಿಷ್ಣುವು ಸರ್ವ ವಿದ್ಯೆಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿದ್ದಾನೆನ್ನುವಲ್ಲಿ ಶ್ರುತಿಗಳನ್ನು ಹೇಳುತ್ತಾರೆ.

**ಭಾ ॥ ಸರ್ವೇ ವೇದಾಶ್ಚ ನಾಮಾನಿ ತಾವಾ ಏತಾ ಋಚಸ್ತಥಾ । ಇಂದ್ರಂ ಮಿತ್ರಂ ವರುಣ ಮಿತ್ಯಾದ್ಯತ್ರಚ ಪ್ರಮಾಪರಾ ||೧೭||**

ಅ॥ (1) ಸರ್ವೇ ವೇದಾ ಯತ್ಪದಮಾಮನಂತಿ (ಕಾಠ) ಸಮಸ್ತ ವೇದಗಳೂ ಯಾವ ಶ್ರೀ ಹರಿಯ ಸ್ವರೂಪವನ್ನೇ ಪ್ರತಿಪಾದಿಸುತ್ತವೋ (2) ನಾಮಾನಿ ಸರ್ವಾಣಿ ಯಮಾವಿಶಂತಿ (ಭಾಲ್ಲವೇಯ ಶ್ರುತಿ) ಇಂದ್ರಾದಿ ಸಮಸ್ತ ನಾಮಗಳೂ ಯಾವ ಶ್ರೀ ಹರಿಯನ್ನೇ ಪ್ರತಿಪಾದಿಸುತ್ತವೋ (3) ತಾವಾ ಏತಾಃ ಸರ್ವಾಋಚಃ ಆ ಈ ಯುಗಾದಿಗಳೆಲ್ಲವೂ ಶ್ರೀ ವಿಷ್ಣುವನ್ನೇ ಮುಖ್ಯತಃ ಪ್ರತಿಪಾದಿಸುತ್ತವೆ. (೪) ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ (ಋ, ೨, ೩, ೨೨) ಬ್ರಹ್ಮಜ್ಞಾನಿಗಳು ಯಾವ ಶ್ರೀ ವಿಷ್ಣುವನ್ನೇ ಇಂದ್ರಾದಿ ಶಬ್ದಗಳಿಂದವಾಚ್ಯನನ್ನಾಗಿ ಹೇಳುತ್ತಾರೋ (ಅಂತಹ ಶ್ರೀ ವಿಷ್ಣುವೇ ಸುಪರ್ಣಗರುಡಾದಿ ಶಬ್ದಗಳಿಂದ ವಾಚ್ಯನು, ಆದ ಕಾರಣ ಆತನು ಕ್ರೀಡಾದಿ ಗುಣ ವಿಶಿಷ್ಟನು. ಆದುದರಿಂದ ಸರ್ವರಿಗಿಂತಲೂ ಪ್ರಧಾನನೂ ನಿರ್ದುಷ್ಟನೂ ಆದ ಶ್ರೀ ವಿಷ್ಣುವನ್ನು ಬಹು ರೂಪಗಳುಳ್ಳವನೆಂದು ಹೇಳುತ್ತಾರೆ.) ಇದು ಮೊದಲಾದುದು ಶ್ರೀ ವಿಷ್ಣುವೇ ಸಮಸ್ತ ವಿದ್ಯೆಗಳಿಂದಲೂ ಮುಖ್ಯತಃ ವೇದ್ಯನು ಎನ್ನುವ ವಿಷಯದಲ್ಲಿ ಋಕ್ ಸಂಹಿತಾದಿಗಳಿಗಿಂತ ಇತರವಾದ ಪ್ರಮಾಣವಿದೆ. ||೧೭||

ಅವ॥ ಶ್ರೀ ವಿಷ್ಣುವು ಸರ್ವೋತ್ತಮನಾದುದರಿಂದ ಮುಖ್ಯತಃ ಸಮಸ್ತ ವಿದ್ಯೆಗಳಿಂದಲೂ ತಿಳಿಯಲ್ಪಡುವವನು, ಲಕ್ಷ್ಮ್ಯಾದಿಗಳೂ ಕೂಡ ಅಧಿಕ್ಯ ತಾರತಮ್ಯಾನುಸಾರವಾಗಿ ವಿದ್ಯೆಗಳಿಂದ ತಿಳಿಯಲ್ಪಡುವವರು, ಎಂದುಕ್ತವಾಯ್ತು. ಅಂತಹ

ತಾರತಮ್ಯವನ್ನು ಪ್ರಮಾಣಗಳಿಂದ ಸಾಧಿಸುತ್ತಾ ಪ್ರಥಮತಃ ಶ್ರೀ ವಿಷ್ಣುಸರ್ವೋತ್ತಮವನ್ನು ಸಾಧಿಸುತ್ತಾರೆ.

**ಭಾ || ದೇವತಾ ತಾರತಮ್ಯಂ ಚ ಸರ್ವೋತ್ಕೃಷ್ಟಂ ಚ ಕೇಶವಂ |ಜ್ಞಾತ್ವೈವ ಮುಚ್ಯತೇ ಹ್ಯಸ್ಮಾನ್ನಾನ್ಯಥಾ ತು ಕಥಂಚನ || ಇತಿ ಪೈಂಗಿಶ್ರುತಿಶ್ಚಾಹ ದೃಶ್ಯತೇ ತ್ರ ಚ ಸರ್ವಶಃ ||೧೮||**

ಅ|| ದೇವತೆಗಳ ತಾರತಮ್ಯವನ್ನೂ, ಸರ್ವೋತ್ತಮನು ಕೇಶವನೇ ಎನ್ನುವುದನ್ನೂ ತಿಳಿದುಕೊಂಡೇ ಈ ಸಂಸಾರದಿಂದ ಮುಕ್ತನಾಗುತ್ತಾನೆ. ಇಲ್ಲವಾದರೆ ಯಾವ ಪ್ರಕಾರದಿಂದಲೂ ಮುಕ್ತನಾಗಲಾರನು. ಹೀಗೆ ಪೈಂಗಿಶ್ರುತಿಯು ಹೇಳುತ್ತದೆ. ಈ ಶಾಖೆಯಲ್ಲಿಯೂ ಶ್ರೀ ವಿಷ್ಣು ಸರ್ವೋತ್ತಮತ್ವಾದಿಗಳು ಪ್ರತಿಪಾದಿತಗಳಾಗಿವೆ. (ಈ ಶಾಖೆಯಲ್ಲಿ ಪ್ರಾಯಃ ಇಂದ್ರಾದಿ ನಾಮಗಳುಳ್ಳ ಶ್ರೀ ಪರಮಾತ್ಮನಿಗೆ ಸರ್ವೋತ್ತಮತ್ವಾದಿಗಳೇ ಸ್ಪಷ್ಟವಾಗಿ ತೋರುತ್ತವೆ. ಶಾಖಾಂತರಗಳಂತೆ ಆಪಾತತಃ ಕರ್ಮಾದಿಗಳು ಪ್ರತೀತಗಳಾಗುವುದಿಲ್ಲ ಎನ್ನುವ ಅಭಿಪ್ರಾಯದಿಂದ ಅತ್ರ ಚ ಎಂದದ್ದು. ಅಥವಾ ಈ ಶಾಖೆಯಲ್ಲಿಯೂ ಪ್ರಸಿದ್ಧಗಳಾದ ಸ್ಪಷ್ಟಾರ್ಥವುಳ್ಳ ಶ್ರುತಿಗಳಲ್ಲಿಯೂ ಶ್ರೀ ವಿಷ್ಣು ಸರ್ವೋತ್ತಮತ್ವಾದಿಗಳೇ ಪ್ರತಿಪಾದಿತಗಳಾಗಿವೆ. ||೧೮||

ಅವ || ಅವುಗಳನ್ನೇ ಪ್ರತಿಪಾದಿಸುತ್ತಾರೆ.

**ಭಾ || (೧) ನ ತೇ ಮಹಿತ್ವಮಿತ್ಯಾದಿನೈಶ್ವರಾನೇವ ಕೇವಲಾನ್ | ಗುಣಾನ್ವಿಷ್ಣೋಃ ಶ್ರುತಿರ್ಹ್ಯಾಹ ನೈವ ದೋಷಾನ್‌ಕಥಂಚನ || (೨) ಜಾತಾ ಪರಿಬಭೂವೇತಿ ಮರ್ಯಾದಾಂ ಬ್ರಹ್ಮಣೋಽಪಿಹಿ || (೩) ನೈವ ರೇಮೇ ಬಿಭೇದ್ಬ್ರಹ್ಮಾ ನಾಸೀದಿತ್ಯಾದಿಕಾನಪಿ | ದೋಷಾನ್ ರುದ್ರೇ ಚ ತಾನೇವ ನ ಮಿನಂತೀತಿ ಪೂರ್ವಕಾನ್ || (೪) ಯಂ ಕಾಮಯೇ ತಂತಮುಗ್ರಂ ರುದ್ರಾಯ ಧನುರಿತ್ಯಪಿ | ಅಸ್ಯ ದೇವಸ್ಯ ಮಾಶಿಶ್ನ ದೇವಾ ಅಪಿಗುರಿತ್ಯಪಿ | ಘ್ನನ್ ಶಿಶ್ನದೇವಾನಿತ್ಯಾದ್ಯಾ ದೋಷಾ ಬಹವ ಈರಿತಾಃ || (೬) ತತೋ ವಿತಿಷ್ಠೇ ಯೋನಿಃ ಸಃ ಪಿತಾವತ್ಯಹಮಿತ್ಯಪಿ | ಅನ್ಯಾಶ್ರಯತ್ವಂ ದೇವ್ಯಾಶ್ಚ ಕಥಿತಂ ಬಹುಶೋಽಪಿ ಹಿ ||೧೯||**

ಅ|| (೧) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ = (ಋ. ಅಷ್ಟ ೫, ಅ. ೬, ವ. ೨೪) ತನ್ನ ದೇಹದಿಂದಲೇ ಅಭಿವೃದ್ಧನಾದ ಶ್ರೀ ವಿಷ್ಣುವೇ ನೀನು ಜ್ಞಾನಕ್ಕೆ ಅವಿಷಯನು. (ತನ್ನ ಮೂರ್ತಿಯಿಂದಲೇ ಅಪರಿಚ್ಛಿನ್ನನು) ಅದು ಕಾರಣ ನಿನ್ನ ಸರ್ವೋತ್ತಮತ್ವಾದಿ ಮಹಿಮೆಯನ್ನು ಯಾರೂ ಹೊಂದಲಾರರು, ಇತ್ಯಾದಿ ಪ್ರಮಾಣಗಳಿಂದ ಶ್ರುತಿಯು ಸರ್ವೋಮತ್ವಾದಿ ಮಹಿಮೆಯನ್ನು ಯಾರೂ ಹೊಂದಲಾರರು, ಇತ್ಯಾದಿ ಪ್ರಮಾಣಗಳಿಂದ ಶ್ರುತಿಯು ಸರ್ವೋತ್ತಮತ್ವಾದಿ ಗುಣಗಳನ್ನು ಶ್ರೀ ವಿಷ್ಣುವಿಗೆ ಹೇಳುತ್ತದೆ. ಆ ಗುಣಗಳು ಶ್ರೀ ವಿಷ್ಣುವಿನಲ್ಲಿ ಮಾತ್ರ ಇರತಕ್ಕವುಗಳು ಎಂದೂ ಹೇಳುತ್ತದೆ. ಆತನಿಗೆ ಯಾವುದೊಂದು ಶ್ರುತಿಯು ದೋಷಗಳನ್ನಾದರೂ ಹೇಳುವುದೇ ಇಲ್ಲ. (ಆದುದರಿಂದ ಇತರರಲ್ಲಿ ಸರ್ವಥಾ ಇಲ್ಲದಿರುವ ಅತ್ಯುತ್ತಮಗಳಾದ ಅನಂತಾನಂತ ಗುಣಗಳು ಇದ್ದುದರಿಂದಲೂ ದೋಷಲೇಶರಹಿತನಾದುದರಿಂದಲೂ ಶ್ರೀ ವಿಷ್ಣುವೇ ಸರ್ವೋತ್ತಮನೆಂದು ತಿಳಿಯುತ್ತದೆ.) (೨) (ಇಂತಹದು ಬ್ರಹ್ಮರುದ್ರಾದಿಗಳಿಗೆ ಇಲ್ಲವೆನ್ನುತ್ತಾರೆ.) ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ | ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ || (ಋ. ೮.೭.೪.) (ಎಲೋ ಚತುರ್ಮುಖನೇ ನೀನು ಹುಟ್ಟತಕ್ಕ ಎಲ್ಲಾ ವಸ್ತುಗಳಿಗೂ ಸ್ವಾಮಿಯಾಗಿರುತ್ತಿ. ನೀನು ಹೊರತು ಬೇರೆ ಯಾರೂ ಸರ್ವ ವಸ್ತುಗಳಿಗೆ ಸ್ವಾಮಿಯಾಗಿ

ಇಲ್ಲ. ಯಾವ ಅಭೀಷ್ಟಕ್ಕಾಗಿ ನಾವು ನಿನ್ನ ಪ್ರೀತಿಗಾಗಿ ಹೋಮಿಸುತ್ತೇವೋ ಅಂತಹ ಅಭೀಷ್ಟವು ನಮಗೆ ಆಗಲಿ. ಮತ್ತು ನಾವು ನಿನ್ನ ಅನುಗ್ರಹದಿಂದ ದ್ರವ್ಯವುಳ್ಳವರೂ ಒಳ್ಳೇ ಜ್ಞಾನವುಳ್ಳವರೂ ಆಗುವೆವು) ಎಂಬ ಶ್ರುತಿಯು ಚತುರ್ಮುಖನಿಗೂ ಐಶ್ವರ್ಯಕ್ಕೆ ಇಯತ್ತಾವನ್ನು ಹೇಳಿದೆ. (ಜಾತಾ = ಹುಟ್ಟಿದವುಗಳು ಎಂದು ಹೇಳಿದುದರಿಂದ ಹುಟ್ಟದಿರುವ ನಿತ್ಯಗಳಾದ ವಸ್ತುಗಳಿಗೆ ಚತುರ್ಮುಖನು ಅಧಿಪತಿಯಲ್ಲವೆಂದುಕ್ತವಾಯ್ತು.) (೨) ಸ ವೈ ನೈವ ರೇಮೇ ಸೋಽಬಿಭೇತ್ । ಏಕೋ ನಾರಾಯಣ ಆಸೀತ್ ನ ಬ್ರಹ್ಮಾ =(ಚತುರ್ಮುಖ ಬ್ರಹ್ಮನು ಆದಿಸೃಷ್ಟಿಯಲ್ಲಿ ಒಬ್ಬನೇ ಆದುದರಿಂದ ಸಂತುಷ್ಟನಾಗಲಿಲ್ಲ. ಆಗ ಭಯಗ್ರಸ್ತನಾದನು. ನಾರಾಯಣನೊಬ್ಬನೇ ಇದ್ದನು. ಪ್ರಲಯ ಕಾಲದಲ್ಲಿ ಬ್ರಹ್ಮಾದಿಗಳಿರಲಿಲ್ಲ) ಇತ್ಯಾದಿ ಶ್ರುತಿಗಳಿಂದ ಚತುರ್ಮುಖನಿಗೆ ದುಃಖ ಭಯ ಪ್ರಲಯಕಾಲದಲ್ಲಿ ಅಭಾವ ಮೊದಲಾದ ದೋಷಗಳನ್ನು ಶ್ರುತಿಯು ಹೇಳುತ್ತದೆ. (ಆದ ಕಾರಣ ಚತುರ್ಮುಖನಿಗೆ ಶ್ರೀ ಹರಿಯಿಂದ ಸಾಮ್ಯವು ಸರ್ವಥಾ ಇಲ್ಲ.) (೪) (ರುದ್ರನಿಗೂ ಭಗವತ್ಸಾಮ್ಯವಿಲ್ಲ. ಏಕೆಂದರೆ) ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ । ನಾರಾತಯಸ್ತಮಿದಂ ಸ್ವಸ್ತಿ ಹುವೇ ದೇವಂ ಸವಿತಾರಂ ನಮೋಭಿಃ ॥ (ಋ. ೨. ೮. ೩. ) ಯಾವ ಶ್ರೀ ವಿಷ್ಣುವಿನ ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಇಂದ್ರನು, ವರುಣನು, ಮಿತ್ರನು, ಅರ್ಯಮಾ ಎಂಬ ಸೂರ್ಯನು, ರುದ್ರನು, ಯಾರೊಬ್ಬರೂ ತಿಳಿಯುವುದಿಲ್ಲ. ಶತ್ರುಗಳಾದ ದೈತ್ಯರೂ ತಿಳಿಯುವುದಿಲ್ಲವೋ, ಅಂತಹ ಸರ್ವಜಗತ್ಸೃಷ್ಟಿಕರ್ತನಾದ ಶ್ರೀ ನಾರಾಯಣನನ್ನು ನಮಸ್ಕಾರಗಳಿಂದ ಐಹಿಕಾಮುಷ್ಮಿಕ ಸುಖದ ಉದ್ದಿಶ್ಯ ಪೂಜಿಸುವೆವು.) ಎಂದು ಶ್ರುತಿಯು ರುದ್ರನಲ್ಲಿಯೂ ಆ ಅಜ್ಞಾನ ಮೊದಲಾದ ದೋಷಗಳನ್ನೇ ಹೇಳುತ್ತದೆ. (೫) ಆ ದೋಷಗಳನ್ನೇ ರುದ್ರನಲ್ಲಿ ಸ್ಪಷ್ಟೀಕರಿಸುತ್ತಾರೆ. ) (1) ಯಂ ಕಾಮಯೇ ತಂತ್ರಮುಗ್ರಂ ಕೃಣೋಮಿ (ಋ. ೮.೭.೧೨.) (2) ಅಹಂ ರುದ್ರಾಯ ಧನುರಾತನೋಮಿ (ಋ. ೮.೭.೧೧.) (3) ಅಸ್ಯ ದೇವ್ಯ ಮೀಳ್ಹುಷಃ (ಋ. ೫.೪.೭) (4) ಮಾ ಶಿಶ್ನದೇವಾ ಅಪಿಗುಋತಂ ನಃ (ಋ. ೫.೩.೩.೩.) (5) ಘ್ನನ್ ಶಿಶ್ನ ದೇವಾನ್ ಅಭಿವರ್ಪಸಾಽಭೂತ್। (ಋ. ೮. ೫. ೧೪) (1) ಯಾರನ್ನು ರುದ್ರನನ್ನಾಗಿ ಮಾಡಲಿಕ್ಕೆ ಇಚ್ಛಿಸುತ್ತೇನೋ ಆತನನ್ನು ರುದ್ರನನ್ನಾಗಿ ಮಾಡುತ್ತೇನೆ. (ಇದರಿಂದ ರುದ್ರನ ಪದಪ್ರಾಪ್ತಿಯು ಪರಾಧೀನವೆಂದುಕ್ತವಾಯ್ತು. (2) ನಾನು ಚತುರ್ಮುಖನ ಐದನೇ ಮುಖವನ್ನು ಛೇದಿಸಿದ ಹಿಂಸಕನಾದ ರುದ್ರನನ್ನು ಕೊಲ್ಲುವುದಕ್ಕಾಗಿಯೇ ಧನುಸ್ಸನ್ನು ವಿಸ್ತರಿಸುತ್ತೇನೆಂದು ಲಕ್ಷ್ಮೀದೇವಿಯ ಆಯುಧಕ್ಕೆ ರುದ್ರನು ವಿಷಯನೆಂದುಕ್ತವಾಯ್ತು. (ಇವು ಎರಡು ಲಕ್ಷ್ಮೀದೇವಿಯ ವಾಕ್ಯಗಳು.) (3) ಈ ಕ್ರೀಡಾದಿಗುಣವಿಶಿಷ್ಟನಾದ ಭಕ್ತರಿಗೆ ಅಭಿಲಷಿತವನ್ನು ಸೇಚಿಸುವ ಶ್ರೀ ವಿಷ್ಣುವಿಗೆ ರುದ್ರನು ಪೂಜೆ ಮಾಡಿ ತನ್ನ ಪದವಿಯನ್ನು ಹೊಂದಿದನು ಎಂದು ಇದರಿಂದ ರುದ್ರನಿಗೆ ಪದವಿಪ್ರಾಪ್ತಿಯು ಶ್ರೀ ವಿಷ್ಣುವಿನ ಭಜನಾಧೀನವೆಂದುಕ್ತವಾಯ್ತು. (4) ಶಿಶ್ನಾಭಿಮಾನಿಗಳಾದ ರುದ್ರರೂ ಕೂಡ ನಮಗೆ ಉಪಾಸ್ಯನಾದ ಸ್ವಾಮಿಯಾದ ಜ್ಞಾನರೂಪಿಯಾದ ಶ್ರೀ ವಿಷ್ಣುವನ್ನು ಸಂಪೂರ್ಣ ತಿಳಿಯಲಿಲ್ಲ. (ಇದರಿಂದ ರುದ್ರರಿಗೆ ಅಜ್ಞಾನವುಕ್ತವಾಯ್ತು) (5) (ಶಿಶ್ನಾಭಿಮಾನಿಗಳಾದ ರುದ್ರರನ್ನೂ ಸಂಹರಿಸುವ ಶ್ರೀ ವಿಷ್ಣುವು ಸಾಮರ್ಥ್ಯದಿಂದ ಸರ್ವರನ್ನು ತಿರಸ್ಕರಿಸಿ ಸರ್ವರಿಗೂ ಅಧಿಪತಿಯಾದನು.) ಇದು ಮೊದಲಾದ ಶ್ರುತಿಗಳಲ್ಲಿ ರುದ್ರನಿಗೆ ಪರಾಧೀನ ಪದಪ್ರಾಪ್ತ್ಯಾದಿರೂಪಗಳಾದ ಬಹುದೋಷಗಳು ಹೇಳಲ್ಪಟ್ಟಿವೆ. (೬) (1) ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿರಪ್ಸ್ವಂ ತಃಸಮುದ್ರೇ । ತತೋ ವಿತಿಷ್ಠೇ ಭುವನಾನು ವಿಶ್ವೋತಾ ಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ । (ಋ.೮.೭.೧೧) (೩) ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ । (1) ಲಕ್ಷ್ಮಿಯಾದ ನಾನು ಜಗತ್ಸರ್ಜಕನಾದ ಚತುರ್ಮುಖನನ್ನು ರುದ್ರಾದಿಗಳಿಗಿಂತ ಉತ್ಕೃಷ್ಟನನ್ನಾಗಿ ಹುಟ್ಟಿಸುತ್ತೇನೆ. ಯಾವ ಕಾರಣದಿಂದ ನಾನು ಅಂತಹ ಪರಮಾತ್ಮನಿಂದ ಹುಟ್ಟಿರುವೆನೋ ಆದ ಕಾರಣ ಅಂತಹ ನನಗೂ ಸ್ಥಿತ್ಯಾದಿಗಳಿಗೆ

ಕಾರಣನಾದ ಶ್ರೀ ವಿಷ್ಣುವು ಸಮುದ್ರೋದಕದ ಮಧ್ಯದಲ್ಲಿ ಮಲಗಿರುತ್ತಾನೆ. ಅನಂತರ ನಾನು ಸಮಸ್ತ ಲೋಕಗಳನ್ನೂ ಸ್ವರ್ಗಲೋಕವನ್ನೂ ಬಲದಿಂದ ವಶೀಕರಿಸಿಕೊಳ್ಳುತ್ತೇನೆ. ಶರೀರದಿಂದ ವ್ಯಾಪಿಸುತೇನೆ. (2) ಯಾವ ವಿಷ್ಣುವು ಸ್ವರ್ಗಲೋಕದಿಂದಲೂ ಶ್ರೀ ಪೃಥಿವಿಗಿಂತಲೂ ಮೀರಿರುವನೋ ಅಂತಹ ಶ್ರೀ ವಿಷ್ಣುವಿನ ಪ್ರಸಾದದಿಂದ ನಾನು ಮಹಿಮೆಯಿಂದ ಬ್ರಹ್ಮರುದ್ರಾದಿಗಳನ್ನು ಜನಿಸುವ ವಿಷಯದಲ್ಲಿ ಸಾಮರ್ಥ್ಯಯುಕ್ತಳಾಗಿ ಆಗಿರುವೆನು) ಇತ್ಯಾದಿ ಶ್ರುತಿಗಳಲ್ಲಿ ಲಕ್ಷ್ಮೀದೇವಿಯೂ ಕೂಡ ಭಗವಂತನನ್ನು ಆಶ್ರಯಿಸಿರುತ್ತಾಳೆಂದು ಅಹಂ ರುದ್ರೇಭಿಃ ಎಂಬ ಸೂಕ್ತದಲ್ಲಿಯೇ ಬಹುಧಾ ಸ್ಫುಟವಾಗಿ ಹೇಳಲ್ಪಟ್ಟಿದೆ. (ಆದ ಕಾರಣ ಆ ಲಕ್ಷ್ಮಿಯೂ ಕೂಡ ಶ್ರೀ ಹರಿಗೆ ಸಮಾನಳಲ್ಲ.)

ಅವ ॥ ಹೀಗೆ ಶ್ರೀ ವಿಷ್ಣುವಿಗೆ ಸರ್ವೋತ್ತಮತ್ವವನ್ನು , ಲಕ್ಷ್ಮ್ಯಾದಿಗಳಿಗೆ ಶ್ರೀ ವಿಷ್ಣುವಿಗಿಂತ ಅಧಮತ್ವವನ್ನೂ ಸಾಧಿಸಿ ಲಕ್ಷ್ಮೀದೇವಿಗೆ ಬ್ರಹ್ಮಾದಿಗಳಿಗಿಂತ ಉತ್ತಮತ್ವವನ್ನು ಸಾಧಿಸುತ್ತಾರೆ.

**ಭಾ ॥ (೧) ತದಾಶ್ರಯತ್ವಮನ್ಯೇಷಾಮಪಿ ತತ್ರ್ಯೈವ ನಿಶ್ಚಯಾತ್ ॥ (೨) ಬ್ರಹ್ಮೈವಾಗ್ರ ಇತಿ ಹ್ಯುಕ್ತ್ವಾ ರುದ್ರಾದೀನಾಂ ತತೋ ಜನಿಃ । ಉಕ್ತಾ (೩) ಜಾತಾನಿ ವಿಶ್ವಾನಿ ಸ ಪರ್ಯಭವದಿತ್ಯಪಿ ॥ (೪) ಯಸ್ಯ ಛಾಯಾಮೃತಂ ಮೃತ್ಯುರಿತಿಚಾದರತೋಽಬ್ರವೀತ್ ॥೨೦॥**

ಅ॥ (೧) ಬ್ರಹ್ಮರುದ್ರಾದಿ ದೇವತೆಗಳೂ ಕೂಡ ಲಕ್ಷ್ಮೀದೇವಿಯನ್ನು ಆಶ್ರಯಿಸಿಕೊಂಡಿದ್ದಾರೆಂದು ಅಹಂರುದ್ರೇಭಿಃ ಎನ್ನುವ ಸೂಕ್ತದಲ್ಲಿಯೇ ಸ್ಪಷ್ಟವಾಗಿ ಹೇಳಿದೆ. (೨) (ಬ್ರಹ್ಮನಿವ ರುದ್ರಾದಿಗಳಿಗಿಂತ ಉತ್ತಮತ್ವವನ್ನು ಸಾಧಿಸುತ್ತಾರೆ.) ಹಿರಣ್ಯ ಗರ್ಭ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥ (ಋ. ೮. ೭. ೩) ಚತುರ್ಮುಖನೊಬ್ಬನೇ ಜಗತ್ತು ಹುಟ್ಟುವುದಕ್ಕಿಂತ ಮೊದಲು ಹುಟ್ಟಿ ಭಗವದ್ಭಜನಾದಿಗಳಿಂದ ಚೆನ್ನಾಗಿದ್ದನು. ಹುಟ್ಟಿದ ವಸ್ತುಗಳಿಗೆ ಅಧಿಪತಿಯಾಗಿದ್ದನು. ಆತನು ಪೃಥಿವಿಯನ್ನು ಸ್ವರ್ಗಾದಿಗಳನ್ನು ಧರಿಸಿಕೊಂಡಿದ್ದಾನೆ. ಆದ ಕಾರಣ ಆ ಬ್ರಹ್ಮದೇವರಿಗಾಗಿ ಹವಿಸ್ಸನ್ನು ಕೊಟ್ಟೆವು.) ಎಂಬ ಸೂಕ್ತದಲ್ಲಿ ಚತುರ್ಮುಖನಿಗೆ ಎಲ್ಲರಿಗಿಂತ ಮೊದಲು ಉತ್ಪತ್ತಿಯನ್ನು ಹೇಳಿ (ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ । ಪ್ರಶಿಷಂ ಯಸ್ಯ ದೇವಾಃ ಋ. ೮.೭.೩) ಯಾವ ಚತುರ್ಮುಖನು ತನ್ನ ಶಿಷ್ಯರಿಗಾಗಿ ಶ್ರೀ ಪರಮಾತ್ಮನನ್ನುಪದೇಶಿಸಿರುವನೋ, ಬಲದೇವತೆಯಾದ ಶ್ರೀ ವಾಯುವಿಗೂ ಉಪದೇಶಕನೋ, ವಿಶ್ವೇದೇವತೆಗಳು ಯಾವ ಚತುರ್ಮುಖನಿಂದ ಉತ್ಪತ್ತಿಯನ್ನು ಹೊಂದುತ್ತಾರೋ, ಹಾಗೆಯೇ ಮಾ ನೋ ಹಿಂಸೀಜ್ಜನಿತಾಯಃ ಪೃಥಿವ್ಯಾಯೋ ವಾ ದಿವಂ ಸತ್ಯಧರ್ಮಾ ಜಜಾನ । ಯಶ್ಚಾಪಶ್ಚಂದ್ರಾ ಬೃಹತೀರ್ಜಜಾನ (ಋ. ೮.೭.೪) ಯಾವ ಚತುರ್ಮುಖನು ನಮ್ಮನ್ನು ಕೊಲ್ಲಲಿಲ್ಲವೋ, ಪೃಥಿವಿಗೆ ಉತ್ಪಾದಕನೋ, ಸತ್ಯಧರ್ಮವುಳ್ಳವನೋ, ಸ್ವರ್ಗಾಭಿಮಾನಿದೇವತೆಗಳನ್ನು ಕರ್ಮಾಭಿಮಾನಿ ದೇವತೆಗಳನ್ನು ರುದ್ರ ಗರುಡ ಶೇಷ ಮೊದಲಾದ ಶ್ರೇಷ್ಠ ದೇವತೆಗಳನ್ನು ಹುಟ್ಟಿಸಿರುವನೋ) ಇತ್ಯಾದಿ ಶ್ರುತಿಗಳಿಂದ ರುದ್ರಾದಿ ದೇವತೆಗಳಿಗೆ ಚತುರ್ಮುಖನಿಂದ ಉತ್ಪತ್ತಿಯು ಹೇಳಲ್ಪಟ್ಟಿದೆ. (2) ವಿಶ್ವಾಜಾತಾನಿ ಪರಿತಾಬಭೂವ (ಋ.೮.೭.೪) ಎನ್ನುವ ಶ್ರುತಿಯಲ್ಲಿ ಹುಟ್ಟಿದ ರುದ್ರಾದಿಗಳು ಚತುರ್ಮುಖನ ಅಧೀನದಲ್ಲಿಯೇ ಇರುತ್ತಾರೆಂದೂ ಹೇಳಿದೆ. (೪) ಜಗತ್ಪಾಲನಾರ್ಥವಾಗಿ ಅಮೃತ ಪ್ರಾಶನ ಮಾಡಿರುವ ಇಂದ್ರಾದಿ ದೇವತೆಗಳ ಸಮುದಾಯವೂ ಸಂಹಾರಕನಾದ ರುದ್ರನೂ ಯಾವ ಚತುರ್ಮುಖನಿಗೆ ಪ್ರತಿಬಿಂಬ ರೂಪನೋ ಎನ್ನುವ ಶ್ರುತಿಯಲ್ಲಿ ಜಗತ್ಪಾಲಕರಾದ ಇಂದ್ರಾದಿ ದೇವತೆಗಳೂ ಸಂಹಾರಕರಾದ ರುದ್ರಾದಿಗಳೂ ಚತುರ್ಮುಖನ

**ಪ್ರತಿಬಿಂಬರೆಂದು ಅತ್ಯಾದರದಿಂದ ಹೇಳಿದೆ.** ॥೨೦॥

ಅವ ॥ ವಾಯುದೇವರು ವಿಷ್ಣ್ವಾದಿಗಳಿಂದ ಅವರ (ಕೆಳಗಿನವ)ರೆಂದೂ, ರುದ್ರಾದಿಗಳಿಂದ ಉತ್ತಮರೆಂದೂ ಸಾಧಿಸುತ್ತಾರೆ.

**ಭಾ ॥ (೧) ಅನಂತಾದವರೇಶಾನಾ ತಸ್ಯಾಃ ಪ್ರಾಣಸ್ತತಶ್ಚ ವಾಕ್ । ತಸ್ಯಾ ! ರುದ್ರ ಉಮಾ ತಸ್ಮಾದಿಂದ್ರಸ್ತಸ್ಯಾಸ್ತತೋಽಪರೇ ॥ ಸೌಪರ್ಣ ಶ್ರುತಿರಿತ್ಯಾಹ (೨) ಸಪ್ತಾಕ್ಷಿತಯ ಇತ್ಯಪಿ ॥ (೩) ವಾಯುರಸ್ಮಾ ಉಪಾಮಂಥತ್ (೪) ವಿಶ್ವದೇವಾಯ ವಾಯವೇ । (೫) ವಿಶ್ವೈರ್ದೇವೈಃ ಸ ಇತ್ಯಾದ್ಯಾಃ ಪ್ರಮಾ ಅತ್ರಾಪರಾ ಅಪಿ** ॥೨೧॥

ಅ॥ (೧) ಶ್ರೀ ನಾರಾಯಣನಿಂದ ಲಕ್ಷ್ಮೀದೇವಿಯು ಅವರಳು. ಶ್ರೀ ನಾರಾಯಣ ಲಕ್ಷ್ಮೀದೇವಿಯರಿಗಿಂತ ಮುಖ್ಯಪ್ರಾಣನು ಅವರನ್ನು ಮುಖ್ಯಪ್ರಾಣನಿಗಿಂತ ಸರಸ್ವತೀ ಭಾರತಿಯರು ಅವರರು. ಅವರಿಗಿಂತ ರುದ್ರನೂ ರುದ್ರನಿಗಿಂತ ಪಾರ್ವತಿಯೂ, ಪಾರ್ವತಿಗಿಂತ ಇಂದ್ರನೂ, ಇಂದ್ರನಿಗಿಂತ ಇತರರೂ ಅವರರು. ಹೀಗೆ ಸೌಪರ್ಣಶುತ್ರಿಯು ವಾಯುವಿಗೆ ವಿಷ್ಣುಲಕ್ಷ್ಮೀಯವರಿಂದ ಅವರತ್ವಾದಿಗಳನ್ನು ಹೇಳಿದೆ. (೨) ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ ತದ್ಯಾ ಇಮಾ ಅಕ್ಷಂಲ್ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತಃ ಬಲಕಣ್ಣಿಗೆ ನಿಯಾಮಕನಾಗಿರುವ ಮುಖ್ಯಪ್ರಾಣನನ್ನು ಕ್ಷೀಣವಾಗದ ಜ್ಞಾನ ಮನಸ್ಸುಗಳುಳ್ಳ ಸದಾಶಿವರುದ್ರ, ಪರ್ಜನ್ಯ, ಆದಿತ್ಯ, ಅಗ್ನಿ, ಇಂದ್ರ, ಪೃಥಿವೀ, ದ್ಯೋರೂಪರಾದ ೭ ಮಂದಿ ದೇವತೆಗಳು ಸೇವಿಸುತ್ತಿರುತ್ತಾರೆ. ಅದರಲ್ಲಿ ಕಣ್ಣಿನಲ್ಲಿ ಕೆಂಪಾದ ಯಾವ ರೇಖೆಗಳು ಇರುತ್ತಾವೋ, ಅವುಗಳ ಅಧಿಷ್ಠಾನದಿಂದ ರುದ್ರನು ಮುಖ್ಯಪ್ರಾಣನ ಅಧೀನನಾಗಿರುತ್ತಾನೆ. (೩) ವಾಯುರಸ್ಮಾ ಉಪಾಮಂಥತ್ಪಿನಷ್ಟಿ ಸ್ಮಾಕುನನ್ನಮಾ॥ ಕೇಶೀ ವಿಪಸ್ಯ ಪಾತ್ರೇಣ ಯದ್ರುದ್ರೇಣಾಪಿಬತ್ಸಹ ॥ ಪಾಪ ಕರ್ಮದಿಂದಲೇ ಸಂತೋಷಗೊಳ್ಳುವ ದೈತ್ಯಾದಿಗಳನ್ನು ಬಗ್ಗಿಸುವ (ಅಥವಾ ಕುತ್ಸಿತರನ್ನು ಸಂಹರಿಸುವ) ಪ್ರಶಸ್ತಕೇಶಗಳುಳ್ಳ ವಾಯುದೇವರು ಯಾವಾಗ ರುದ್ರನಿಂದ ಕೂಡಿಕೊಂಡು ಪಾತ್ರದಿಂದ ವಿಷವನ್ನು ಕುಡಿದಿರುವರೋ ಆಗ ರುದ್ರನಿಗೆ ಅನುಗ್ರಹಿಸುವ ಇಚ್ಛೆಯಿಂದ ಆ ವಿಷವನ್ನು ಮಥನಮಾಡಿದನು. ಮತ್ತೂ ಚೆನ್ನಾಗಿ ಚೂರ್ಣೀಕರಿಸಿದನು. (ಅಂತೂ ವಾಯುದೇವರು ತಾನು ಕುಡಿದು ವಿಷವನ್ನು ಮಥಿಸಿ ರುದ್ರನಿಗೆ ಕೊಟ್ಟರು) (೪) ಪೂಷಣ್ವತೇ ಮರುತ್ವತೇ ವಿಶ್ವೇದೇವಾಯ ವಾಯವೇ । ಪೂಷಾಖ್ಯಸೂರ್ಯನು ಸೇವಕನಾಗಿ ಉಳ್ಳವನು, ಅಹಂಕಾರಿಕ ಪ್ರಾಣಾದಿಮರುತುಗಳು ಸೇವಕರಾಗಿ ಉಳ್ಳವನು, ರುದ್ರಾದಿ ದೇವತೆಗಳಿಗೆ ಅಧಿಪತಿಯು, ಇಂತಹ ವಾಯುವಿಗೆ ನಮಸ್ಕಾರವು. (೫) (1) ವಿಶ್ವೈರ್ದೇವೈಸಃ (2) ವಿಶ್ವೈರ್ದೇವೈಃ ಪಿತೃಭಿರ್ಗುಪ್ತಮನ್ನಂ (1) ಆ ವಾಯುವು ರುದ್ರಾದಿ ದೇವತೆಗಳಿಂದ ಆಶ್ರಿತನಾಗಿರುತ್ತಾನೆ. (2) ಅನ್ನಾಭಿಮಾನಿಯಾದ ಮುಖ್ಯಪ್ರಾಣನು ರುದ್ರಾದಿ ದೇವತೆಗಳಿಂದಲೂ ಪಿತೃದೇವತೆಗಳಿಂದಲೂ ರಕ್ಷಿಸಲ್ಪಟ್ಟಿದ್ದಾನೆ. (ಅಂದರೆ ರುದ್ರಾದಿಗಳು ಮುಖ್ಯಪ್ರಾಣನಿಗೆ ಪರಿವಾರಭೂತರಾಗುತ್ತಾರೆ. ಇದು ಮೊದಲಾದ ಪ್ರಮಾಣಗಳೂ, ಬೇರೆ ಪ್ರಮಾಣಗಳೂ ಕೂಡ ವಾಯು ದೇವರು ರುದ್ರಾದಿಗಳಿಗಿಂತ ಉತ್ತಮರೆಂದು ಪ್ರತಿಪಾದಿಸುತ್ತವೆ. ॥೨೧॥

ಅವ ॥ ವಾಯುದೇವರು ಇಂದ್ರದೇವರ ಪರಿವಾರರಾದುದರಿಂದ ಇಂದ್ರದೇವರಿಗಿಂತ ಉತ್ತಮರೆನ್ನುವುದು ಹೇಗೆ? ಎಂದರೆ -

**ಭಾ ॥ (೧) ನಾರಾಯಣೋಽದಿತಿರ್ವಾಯುರ್ವಾಣೀ ರುದ್ರ ಉಮಾ ವಿಭುಃ । ಇತರೇ ಚ ಕ್ರಮಾದ್ದೀನಾಃ**

**ಶತಾಂಶಾದ್ವಾಯುತೋಽವರಾಃ ॥ ಇತಬರ್ಕ(ಟ್ಕ) ಶ್ರುತಿಶ್ಚಾಹ (೨) ಶಕ್ರಾತ್ ಸಪ್ತಾಕ್ಷಿತಿಶ್ರುತಿಃ । (೩) ಅಯಂತ ಏಮಿ ತನ್ವೇತಿ ಪೂರ್ವಾ ಅನ್ಯಾ ಅಪಿ ಸ್ಫುಟಂ । ವಾಯೋರಾಧಿಕ್ಯಮಪ್ಯಾಹುಃ (೪) ಇಂದ್ರಂ ಸೋಮಂ ಹುತಾಶನಂ । ಸೂರ್ಯಂ ರುದ್ರಮಿಮಾನ್ ಪಂಚ ದೇವಾನೇಕೋ ಮಹಾತ್ಮನಃ । ಸೃಜತ್ಯತ್ತಿ ಮಹಾನ್ ಪ್ರಾಣ ಇತಿಚಾಹ ತುರಶ್ರುತಿಃ ॥೨೨॥**

ಅ॥ (೧) ಶ್ರೀ ನಾರಾಯಣನು, ಅಖಂಡಿತಳಾದ (ದೇಹಾದಿಗಳಿಗೂ ನಾಶವಿಲ್ಲದಿರುವ ಲಕ್ಷ್ಮೀದೇವಿಯು, ವಾಯುವು, ಸರಸ್ವತಿಯು, ರುದ್ರನು, ಪಾರ್ವತಿಯು, ಇಂದ್ರನು, ಇತರರೂ ಕೂಡ ಕ್ರಮವಾಗಿ ಕಡಿಮೆ ಕಡಿಮೆ ಗುಣಾದಿಗಳುಳ್ಳವರು. ವಾಯುದೇವರಿಗಿಂತ ೧೦೦-೧೦೦ ಅಂಶಕ್ಕಿಂತ ಅವರರು. (ಅಂದರೆ ವಾಯುದೇವರಿಂದ ಅವರರಾದ ಯಾರು ಸರಸ್ವತ್ಯಾದಿಗಳೋ, ಅವರು ಕ್ರಮದಿಂದ ೧೦೦-೧.೦ ಅಂಶ ಗುಣ ಕಡಿಮೆಯುಳ್ಳವರು ಎಂಬ ವಚನದಿಂದ ವಾಯುವು ಲಕ್ಷ್ಮೀದೇವಿಗಿಂತ ಕೋಟ್ಯಂಶ ಗುಣ ಕಡಿಮೆಯುಳ್ಳವನು. ಲಕ್ಷ್ಮೀ ದೇವಿಯು ಶ್ರೀ ನಾರಾಯಣನಿಗಿಂತ ಅನಂತಾನಂತ ಗುಣ ಕಡಿಮೆಯುಳ್ಳವಳು, ಎಂದು ಸೂಚಿತವಾಯ್ತು.) ಎಂದು ಬರ್ಕ ಶ್ರುತಿಯು ಹೇಳುತ್ತದೆ. (೨) ತಮೇತಾಃ ಸಪ್ತಾಕ್ಷಿತಯಃ ಉಪತಿಷ್ಠಂತೇ । ಯಚ್ಛುಕ್ಲಂ ತೇನೇಂದ್ರಃ ಅನ್ವಾಯತ್ತಃ । ರುದ್ರಾದಿ ೭ ಮಂದಿ ದೇವತೆಗಳು ಮುಖ್ಯಪ್ರಾಣನನ್ನು ಆಶ್ರಯಿಸಿರುತ್ತಾರೆ. ಕಣ್ಣಿನಲ್ಲಿ ಯಾವುದು ಶುಕ್ಲರೂಪವಿದೆಯೋ, ಅದರಿಂದ ಇಂದ್ರನು ವಾಯುವನ್ನು ಆಶ್ರಯಿಸಿಸುತ್ತಿರುತ್ತಾನೆ. (ಅಂದರೆ ವಾಯುವಿನ ಅಧೀನನು.) ಎಂಬ ಶ್ರುತಿಯು ಇಂದ್ರನಿಂದ ವಾಯುವಿಗೆ ಅಧಿಕ್ಯವನ್ನು (ಉತ್ತಮತ್ವವನ್ನು) ಹೇಳುತ್ತದೆ. (೩) ಅಯಂತ ಏಮಿ ತನ್ವಾ ಪುರಸ್ತಾದ್ವಿಶ್ವೇದೇವಾ ಅಭಿಮಾಯಂತಿ ಪಶ್ಚಾತ್ । ಯದಾ ಮಹ್ಯಂ ಧೀಘರೋ ಭಾಗಮಿಂದ್ರಾದಿನ್ಮಯಾಕೃಣವೋ ವೀರ್ಯಾಣಿ = (ಯಾವುದೋ ಒಂದು ಯುದ್ಧಕಾಲದಲ್ಲಿ ಇಂದ್ರನೊಡನೆ ವಾಯುದೇವರ ವಚನವು) ಎಲೋ ಇಂದ್ರನೇ ಈ ನಾನು ಆಯುಧಾದಿಗಳ ಅಪೇಕ್ಷೆಯಿಲ್ಲದೇನೇ ಶರೀರದಿಂದ ನಿನ್ನ ಇದಿರು ರಣಭೂಮಿಯನ್ನು ಪ್ರವೇಶಿಸುವೆನು. ನೀನೇ ಮೊದಲಾದ ಎಲ್ಲಾ ದೇವತೆಗಳು ನನ್ನ ಅಂತರದಲ್ಲಿ ಬರಲಿ. ನೀನಾದರೂ ಯಾವ ಕಾರಣದಿಂದ ನನ್ನ ಪ್ರೇರಣೆಯಿಂದಲೇ ನನ್ನ ಉದ್ದಿಶ್ಯ ಯಜ್ಞಭಾಗವನ್ನು ಧರಿಸಿರುತ್ತೀಯೋ, (ಅಂದರೆ ನನ್ನನ್ನು ಪೂಜಿಸಿರುತ್ತೀಯೋ) ಆದುದರಿಂದಲೇ ನಾವಿಬ್ಬರೂ ಒಟ್ಟಿಗೇನೇ ಸಾಮರ್ಥ್ಯಗಳನ್ನು ತೋರಿಸುವ, ಎನ್ನುವ ಶ್ರುತಿಯೂ, ಇದೇ ಮೊದಲಾದ ಬೇರೆ ಶ್ರುತಿಗಳೂ ಕೂಡ ಇಂದ್ರನಿಂದಲೂ ಸ್ಪಷ್ಟವಾಗಿ ವಾಯುದೇವರಿಗೆ ಉತ್ತಮತ್ವವನ್ನು ಹೇಳುತ್ತವೆ. (೪) ಮಹತ್ತತ್ವಾಭಿಮಾನಿಯಾದ ಪ್ರಧಾನನಾದ ಮುಖ್ಯಪ್ರಾಣನು ಮಹಾನುಭಾವರಾದ ಇಂದ್ರ, ಚಂದ್ರ, ಅಗ್ನಿ, ಸೂರ್ಯ, ರುದ್ರ, ಈ ೫ ಮಂದಿ ದೇವತೆಗಳನ್ನು ಸೃಷ್ಟಿಸುತ್ತಾನೆ. ಸಂಹರಿಸುತ್ತಾನೆ ಎಂಬ ತುರಶ್ರುತಿಯೂ ಕೂಡ ವಾಯುದೇವರಿಗೆ ದೇವೇಂದ್ರನಿಗಿಂತ ಉತ್ತಮತ್ವವನ್ನು ಹೇಳುತ್ತದೆ. ॥೨೨॥

ಅವ ॥ ಶ್ರೀ ವಿಷ್ಣುವು ಉಪೇಂದ್ರ ರೂಪದಿಂದ ಇಂದ್ರನ ಭೃತ್ಯನಾದುದರಿಂದ ಶ್ರೀ ವಿಷ್ಣುವಿಗೆ ಇಂದ್ರನಿಗಿಂತ ಅಧಿಕ್ಯವು ಹೇಗೆ? ಎಂದರೆ

**ಭಾ॥ (೧) ವಿಹಿಸೋತೋರಸೃಕ್ಷತ ನೇಂದ್ರಂ ದೇವಮಮಂಸತ ॥ (೨) ನ ಯಸ್ಯೇಂದ್ರ ಇತಿ ಹ್ಯಾಹ ವಿಷ್ಣೋರಿಂದ್ರಸ್ಯ ಹೀನತಾಂ ॥೨೩॥**

ಅ|| (೧) ವಿಹಿಸೋತೋರಸೃಕ್ಷತ ನೇಂದ್ರಂ ದೇವಮಮಂಸತ । ಯತ್ರಾಮದದ್ವೃಷಾಕ ಪಿರರ್ಯ ಪುಷ್ಟೇಷು ಮತ್ಸಖಾ ವಿಶ್ವಸ್ಮಾದಿಂದ್ರ ಉತ್ತರಃ || (ಋ. ಅಷ್ಟ. ೮. ೬ ೪ ವ. ೧) ಯಾವ ಯಜ್ಞಗಳಲ್ಲಿ ಪೂರ್ಣರಾದ ವಾಯ್ವಾದಿಗಳಿಗೂ ಸ್ವಾಮಿಯಾದ, ನನಗೆ ಸಖಿಯಾದ ಷಡ್ಗುಣ ಪರಿಪೂರ್ಣನೂ, ನಿರವಧಿಕ ಸುಖವುಳ್ಳವನೂ ಆದುದರಿಂದ ವೃಷಾಕಪಿಯೆನಿಸಿಕೊಂಡ ಶ್ರೀ ವಿಷ್ಣುವು ಸುಖಿಯಾಗಿಯೇ ಇರುವನೋ, ಆದುದರಿಂದಲೇ ಚೇತನಾಚೇತನ ಜಗತ್ತಿನಿಂದ ಸರ್ವೋತ್ಕೃಷ್ಟನೂ, ಮುಖ್ಯತಃ ಇಂದ್ರಶಬ್ದವಾಚ್ಯನೂ ಆಗಿರುತ್ತಾನೋ ಅಂತಹ ಯಜ್ಞಗಳಲ್ಲಿ ಸೋಮರಸವನ್ನು ಓಂಡುವುದಕ್ಕಾಗಿ ಅಥವಾ ಸೋಮವನ್ನು ಹೋಮಿಸುವುದಕ್ಕಾಗಿ ಸಮರ್ಥರಾದ ಋತ್ವಿಜರು ಪ್ರೇರಿತರಾದರು. ಆ ಋತ್ವಿಜರು ಇಂದ್ರ ದೇವರನ್ನು ದ್ಯೋತನಾದಿ (ಪ್ರಕಾಶಾದಿ) ಗುಣಗಳಿಂದ ಪರಿಪೂರ್ಣನನ್ನಾಗಿ ತಿಳಿಯಲಿಲ್ಲವಷ್ಟೇ, (೨) ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ || ನಾರಾತಯಃ (ಋ.ಅ.೨. ಅಧ್ಯಾ ೮ ವ. ೩) ಯಾವ ಶ್ರೀ ಪರಮಾತ್ಮನ ಸತ್ಯಜಗತ್ಸರ್ಜನಾದಿ ರೂಪವಾದ ಕರ್ಮವನ್ನು ಇಂದ್ರನು ವರುಣನು ಸೂರ್ಯನು ರುದ್ರನೂ ಶತ್ರುಗಳೂ ಯಾರೂ ಕೂಡ ಸಂಪೂರ್ಣ ತಿಳಿಯಲಾರರು. ಈ ೨ ಶ್ರುತಿಗಳೂ ಶ್ರೀ ವಿಷ್ಣುವಿನಿಂದ ಇಂದ್ರನಿಗೆ ಅವರತ್ವವನ್ನು ಹೇಳುತ್ತವೆ. ||೨೩||

ಅವ || ಈ ೨ ಶ್ರುತಿಗಳಲ್ಲಿ ವಿಷ್ಣು ವಾಚಕವಾದ ಪದವು ಸ್ಪಷ್ಟವಾಗಿಲ್ಲದಿರುವುದರಿಂದ ಶ್ರುತ್ಯಂತರವನ್ನು ಹೇಳುತ್ತಾರೆ.

**ಭಾ || (೧) ವೇಧಾ ಅಜಿನ್ವದಿತ್ಯಾದಿ ವಚನಂ ವಿಷ್ಣುನಾಮತಃ । ಅನಂದಶ್ರುತಿರಪ್ಯಸ್ಯ ಜೀವತಾಮೇವ ದರ್ಶಯೇತ್ || (೩) ಅಹ ಸೂರ್ಯದಪೀಂದ್ರಸ್ಯ ವಾಯೋರ್ವಿಷ್ಣೋರಪೀಶತಾಂ । ಯಃ ಸೂರ್ಯಂ ಯ ಉಷಸಂ (೪) ಮ್ರಿಯಂತೇ ಪಂಚ ದೇವತಾಃ । (೫) ಚಕ್ಷುಷಾ ದ್ಯೌಶ್ಚಾದಿತ್ಯಶ್ಚ (೬) ಚಕ್ಷೋಃಸ್ಸೂರ್ಯೋಽಜಾಯತ । (೭) ಯಮಾದಿತ್ಯೋ ನ ವೇದೇತಿ ಪೂರ್ವಾ ಶ್ರುತಿರಥಾಪರಾಃ ||೨೪||**

ಅ|| (೧) ಅಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ । ವೇಧಾ ಅಜಿನ್ವತ್ರಿಷಧಸ್ಥ ಅರ್ಯಮೃತಸ್ಯ ಭಾಗೇ ಯಜಮಾನಮಾಭಜತ್ || (ಋ. ಅಷ್ಟ ೨.೨.೨೬) ಸತ್ಕರ್ಮಕಾರಿಯಾದ ಇಂದ್ರನಿಗೆ ಪರಮದೇವತೆಯೂ, ಅತಿಶಯವಾಗಿ ಸತ್ಕರ್ಮಕಾರಿಯೂ, ವಿಶೇಷವಾಗಿ ಧಾರಣಪೋಷಣ ಕರ್ತನೂ, ಶ್ವೇತದ್ವೀಪ ಅನಂತಾಸನ ವೈಕುಂಠಗಳೆಂಬ ೩ ಸ್ಥಾನಗಳಲ್ಲಿರುವವನೂ ಆದ ಶ್ರೀ ವಿಷ್ಣುವು, ವಾಮನಾವತಾರದಲ್ಲಿ ಜ್ಯೇಷ್ಠನಾದ ಅಶ್ವಮೇದ ಯಜ್ಞಮಾಡಿದ ದೇವೇಂದ್ರನನ್ನು ಸುಖದಿಂದ ಇರುವುದಕ್ಕಾಗಿ ದೈತ್ಯಾದಿಗಳ ಉಪದ್ರವವು ಬಾರದಿರುವಂತೆ ರಕ್ಷಿಸುವುದಕ್ಕಾಗಿ ಸರ್ವದಿಕ್ಕುಗಳಲ್ಲಿ ವ್ಯಾಪಿಸಿದನು ಮತ್ತು ಇಂದ್ರನು ಸುಖದಿಂದ ಇರುವುದಕ್ಕಾಗಿ ಸುಖ ಸಾಧನಗಳನ್ನುಂಟು ಮಾಡಿದನು. ಯಜ್ಞದ ಭಾಗದಲ್ಲಿ ಸೇವಿಸಿದನು. (ಯಜ್ಞದಲ್ಲಿ ಕೊಟ್ಟ ಹವಿರಾದಿಗಳನ್ನು ಸ್ವೀಕರಿಸಿದನು.) ಎಂದು ವಿಷ್ಣುನಾಮದಿಂದೊಡಗೂಡಿದ ಶ್ರುತಿಯು ಇಂದ್ರನಿಗಿಂತ ಶ್ರೀ ವಿಷ್ಣುವಿಗೆ ಉತ್ತಮತ್ವವನ್ನು ಸ್ಪಷ್ಟವಾಗಿ ಹೇಳುತ್ತದೆ. (೨) ತೇ ಯೇ ಶತಮಿಂದ್ರಸ್ಯಾ ನಂದಾಃ । ಸ ಏಕೋ ಬೃಹಸ್ಪತೇರಾನಂದಃ || (ತೈ.ಉ.) ಇಂದ್ರನ ೧೦೦ ಆನಂದಗಳು ರುದ್ರನಿಗೆ ೧ ಆನಂದವು, ಎಂದು ಜೀವರ ಆನಂದಗಳಿಗೆ ತಾರತಮ್ಯವನ್ನು ಹೇಳತಕ್ಕತೈತ್ತಿರೀಯ ಶ್ರುತಿಯು ಈ ಇಂದ್ರನಿಗೆ ಜೀವತ್ವವನ್ನೇ ತೋರಿಸುತ್ತದೆ. (ಆದರಿಂದ ಇಂದ್ರನು ಶ್ರೀಹರಿಗಿಂತ ಅವರನೆಂದು ಸ್ಪಷ್ಟವಾಗಿ ತಿಳಿಯುತ್ತದೆ. (೩)

(ಸೂರ್ಯನು ಸರ್ವೋತ್ತಮನೆಂದು ಕೆಲವರು ಅಂಗೀಕರಿಸಿರುವರು. ಆದಯುಕ್ತವು, ಸೂರ್ಯನಿಗಿಂತ ಇಂದ್ರಾದಿಗಳಿಗೆ ಅಧಿಕ್ಯವಿದೆ ಎಂದು ಸಾಧಿಸುತ್ತಾರೆ) ಸೂರ್ಯನಿಗಿಂತ ಇಂದ್ರನಿಗೂ ವಾಯುವಿಗೂ ಶ್ರೀವಿಷ್ಣುವಿಗೂ ಉತ್ತಮತ್ವವನ್ನು ಶ್ರುತಿಯು ಹೇಳುತ್ತದೆ. (ಹೇಗೆಂದರೆ) ಯಃ ಸೂರ್ಯಂ ಯ ಉಷಸಂ ಜಜಾನ ಯೋ ಅಪಾಂ ನೇತಾ ಸಜನಾಸ ಇಂದ್ರಃ ಯಾವ ಇಂದ್ರನು ಸೂರ್ಯನನ್ನು ಹುಟ್ಟಿಸಿರುವನೋ? ಉಷೋದೇವತೆಯನ್ನು ಹುಟ್ಟಿಸಿರುವನೋ ಯಾವನು ಅಹಿದೈತ್ಯನಿಂದ ಜಲಾಭಿಮಾನಿಗಳು ತಡೆಯಲ್ಪಟ್ಟರೂ ಆ ದೈತ್ಯನನ್ನು ಸಂಹರಿಸಿ ಆ ಜಲಾಭಿಮಾನಿಗಳಿಗೆ ಪ್ರವರ್ತಕನೋ, ಅಂತಹ ಇಂದ್ರನು ಜನರನ್ನು ಹುಟ್ಟಿಸಿರುವನು, ಎಂಬ ಶ್ರುತಿಯು ದೇವೇಂದ್ರನಿಗೆ ಸೂರ್ಯನಿಗಿಂತ ಉತ್ತಮತ್ವವನ್ನು ಹೇಳುತ್ತದೆ. (೪) ಏಷ ಹ ವೈ ಬ್ರಹ್ಮಯೋಽಯಂ ಪವತೇ ತಮೇತಾಃ ಪಂಚದೇವತಾಃ ಪರಿಮ್ರಿಯಂತೇ ವಿದ್ಯುದ್ವೃಷ್ಟಿಶ್ಚಂದ್ರಮಾ ಅದಿತ್ಯೋಗ್ನಿಃ ಯಾವ ವಾಯುವು ದೇವಾದಿಗಳಿಗೆ ಜ್ಞಾನೋಪದೇಶಕೊಟ್ಟು ಪವಿತ್ರೀಕರಿಸುತ್ತಾನೋ, ಈ ವಾಯುವೇ ಭಾವಿಚತುರ್ಮುಖನು. ಆ ವಾಯುವಿನಿಂದ ವಿದ್ಯುದಭಿಮಾನಿನಿಯಾದ ಭಾರತಿಯೂ, ವೃಷ್ಟಿಗೆ ಅಭಿಮಾನಿಯಾದ ಇಂದ್ರನೂ, ಚಂದ್ರನೂ, ಆದಿತ್ಯನೂ, ಅಗ್ನಿಯೂ, ಈ ಪ್ರಕಾರ ಈ ಐದು ಮಂದಿ ದೇವತೆಗಳು ಸಂಹೃತರಾಗುತ್ತಾರೆ, ಎಂಬ ಶ್ರುತಿಯು ವಾಯುವಿಗೆ ಸೂರ್ಯಾದಿಗಳಿಗಿಂತ ಉತ್ತಮತ್ವವನ್ನು ಹೇಳುತ್ತದೆ. (೫) ಚಕ್ಷುಷಾ ಸೃಷ್ಟೌ ದ್ಯೌಶ್ಚಾದಿತ್ಯಶ್ಚ ದ್ಯುಲೋಕಾಭಿಮಾನಿಯೂ ಸೂರ್ಯನೂ ಕೂಡ ಶ್ರೀ ವಿಷ್ಣುವಿನ ಕಣ್ಣಿನಿಂದ ಸೃಷ್ಟಿಸಲ್ಪಟ್ಟರು. (೬) ಶ್ರೀ ವಿಷ್ಣುವಿನ ಕಣ್ಣಿನಿಂದ ಸೂರ್ಯನು ಹುಟ್ಟಿದನು ಎಂದು ಹೇಳಿದುದರಿಂದಲೂ (೭) ಸೂರ್ಯನು ಯಾವ ಶ್ರೀ ಹರಿಯನ್ನು ತಿಳಿಯುವುದಿಲ್ಲ ಎಂದು ಸೂರ್ಯನಿಂದ ತಿಳಿಯಲ್ಪಡದಿರುವಿಕೆ, (೮) ಯ ಆದಿತ್ಯ ಮಂತರೋ ಯಮಯತಿ, ಯಾವ ಶ್ರೀ ಹರಿಯು ಆದಿತ್ಯನೊಳಗೆ ಇದ್ದು ಪ್ರೇರೇಪಿಸುತ್ತಾನೋ (ಎಂದು ಸೂರ್ಯ ನಿಯಾಮಕತ್ವವನ್ನು ಹೇಳಿದೆ. ಇದು ಮೊದಲಾದ ಶ್ರುತಿಗಳು ಸೂರ್ಯನಿಗಿಂತ ಶ್ರೀ ವಿಷ್ಣುವಿಗೆ ಅಧಿಕ್ಯವನ್ನು ಹೇಳುತ್ತದೆ. ಇಂದ್ರನಿಗೆ ಸೂರ್ಯನಿಗಿಂತ ಅಧಿಕ್ಯ, ವಾಯುವಿಗೆ ಸೂರ್ಯನಿಗಿಂತ ಅಧಿಕ್ಯ, ಶ್ರೀ ವಿಷ್ಣುವಿಗೆ ಸೂರ್ಯನಿಗಿಂತ ಅಧಿಕ್ಯ, ಈ ಮೂರು ಅರ್ಥಗಳಲ್ಲಿ ಬೇರೆ ಶ್ರುತಿಗಳೂ ಇವೆ.||೨೪||

ಅವ || ಅ ೩ ಅರ್ಥಗಳನ್ನು ಹೇಳತಕ್ಕ ಶ್ರುತಿಗಳನ್ನು ಹೇಳುತ್ತಾರೆ.

**ಭಾ || (೧) ವಿಷ್ಣೋರ್ವಾತೋ ಅಜನಿಷ್ಟ ವಾತಾದಿಂದ್ರಸ್ತತೋ ರವಿಃ । ಸೋಮಶ್ಚೇತಿ ಲಯೋಽಪ್ಯೇವಂ ಪೂರ್ವೇ ಪೂರ್ವೇ ಗುಣಾಧಿಕಾಃ || (೨) ವಿಷ್ಣೋಃ ಪ್ರಾಣೋ ಅಜನಿಷ್ಟ ಪ್ರಾಣಾದಿಂದ್ರೋರವಿರ್ವಿಧುಃ । ಲಯೋಽಪ್ಯೇತಾದೃಶಸ್ತೇಷಾಂ ಪೂರ್ವ ಪೂರ್ವೋ ಗುಣಾಧಿಕಃ || ತುರಶ್ರುತಿಶ್ಚ ಸೌಪರ್ಣೀ ಪಿಂಗಶ್ರುತಿರಪೀದೃಶೀ || (೩) ಅತಸ್ಸರ್ವಾಧಿಕೋ ವಿಷ್ಣುರ್ನಿರ್ಣೀತಃ ಶ್ರುತಿಸಂಚಯಾತ್ ||೨೫||**

ಅ|| (೧) ಶ್ರೀ ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟಿದನು. ಆತನಿಂದ ಇಂದ್ರನೂ, ಇಂದ್ರನಿಂದ ಸೂರ್ಯನೂ, ಚಂದ್ರನೂ ಹುಟ್ಟಿದರು. ಹೀಗೆಯೇ ಲಯವೂ ಕೂಡ. ಮೊದಲು ಮೊದಲಿನವರು ಹೆಚ್ಚು ಹೆಚ್ಚು ಗುಣಗಳುಳ್ಳವರು, ಎಂದು ತುರಶ್ರುತಿಯು. (೨) ಶ್ರೀ ವಿಷ್ಣುವಿನಿಂದ ಪ್ರಾಣನೂ, ಪ್ರಾಣನಿಂದ ಇಂದ್ರನೂ, ಇಂದ್ರನಿಂದ ಸೂರ್ಯ ಚಂದ್ರರೂ ಹುಟ್ಟಿದರು. ಲಯವೂ ಇಂತಹುದೇ, (ಆದರೆ ಲಯವು ವಿಪರೀತವಾಗಿ ಎಂದು ತಾತ್ಪರ್ಯವು) ಅವರಲ್ಲಿ ಮೊದಲು ಮೊದಲಿನವರು ಹೆಚ್ಚು ಹೆಚ್ಚು ಗುಣಗಳುಳ್ಳವರು. ಹೀಗೆ ಸೌಪರ್ಣ ಶ್ರುತಿಯು. ಪಿಂಗ ಶ್ರುತಿಯೂ ಈ ರೀತಿಯಾದುದೇ.

(ಆದ ಕಾರಣ ಪ್ರತ್ಯೇಕ ಪಠಿತವಾಗಲಿಲ್ಲ. (೩) ಆದ ಕಾರಣ ಶ್ರೀ ವಿಷ್ಣುವು ಬ್ರಹ್ಮಾದಿಗಳಿಂದೆಲ್ಲಾ ಉತ್ತಮನೆಂದು ಶ್ರುತಿಗಳ ಸಮುದಾಯದಿಂದ ನಿರ್ಣೀತನಾಗಿರುತ್ತಾನೆ. (ಲಕ್ಷ್ಮ್ಯಾದಿಗಳ ತಾರತಮ್ಯವೂ ನಿರ್ಣೀತವಾಯ್ತು.) ತುರ ಶ್ರುತಿ, ಸೌಪರ್ಣೀ ಶ್ರುತಿ, ಪಿಂಗ ಶ್ರುತಿ, ಈ ಮೂರು ಶ್ರುತಿಗಳು.

ವಿ॥ ಶ್ರೀ ವಿಷ್ಣುವಿಗೆ ವಾಯು ಇಂದ್ರ ಸೂರ್ಯರಿಗಿಂತಲೂ ವಾಯುವಿಗೆ ಇಂದ್ರ ಸೂರ್ಯರಿಗಿಂತಲೂ ಇಂದ್ರನಿಗೆ ಸೂರ್ಯನಿಗಿಂತಲೂ ಅಧಿಕ್ಯ, ಹೀಗೆ ಪ್ರಪ್ರತ್ಯೇಕ ಸರ್ವಾರ್ಥಗಳನ್ನೂ ಪ್ರತಿಪಾದಿಸುತ್ತವೆ. ವಿಹಿಸೋತೋ ಇತ್ಯಾದಿಗಳಂತೆ ಒಬ್ಬೊಬ್ಬನಿಗೆ ಒಬ್ಬೊಬ್ಬನಿಂದ ಅಧಿಕ್ಯವು ಹೇಳಲ್ಪಡುವುದಲ್ಲ, ಎಂದು ಸೂಚಿಸುವುದಕ್ಕಾಗಿ ಅಥಾಪರಾಃ ಎಂದು ಪೃಥಕ್ ಹೇಳಿದ್ದು. ॥೨೫॥

ಅವ ॥ ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಽಗ್ನೇರ್ಜ ನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ (ಋ. ೭.೪.೬) ಇತ್ಯಾದಿಗಳಲ್ಲಿ ಶ್ರೀ ವಿಷ್ಣುವಿಗೂ ಜನನಾದಿದೋಷಗಳು ಪ್ರತೀತಗಳಾಗಿರುವುದರಿಂದ ಗುಣಾನ್ವಿಷ್ಣೋಃ ಶ್ರುತಿಃ ಪ್ರಾಹ ನೈವ ದೋಷಾನ್ ಎಂದದ್ದು ಅಯುಕ್ತವು ಎಂದರೆ -

**ಭಾ ॥ (೧) ಅತೋ ದೋಷವಚೋ ಯತ್ರ ತದ್ವಾಕ್ಯಮವರಂ ವದೇತ್ ॥ (೨) ನಿರ್ದೋಷತ್ವೈವ ವಿಷ್ಣೋಸ್ತು ಕ್ರಮಾನ್ಮಧ್ಯಗತೇಷ್ವಪಿ ॥ (೩) ತ್ರಯೋಽರ್ಥಾ ಸರ್ವವೇದೇಷು ದಶಾರ್ಥಾ ಸರ್ವಭಾರತೇ । ವಿಷ್ಣೋಸ್ಸಹಸ್ರನಾಮಾಪಿ ನಿರಂತರಶತಾರ್ಥಕಂ ॥ ಇತಿ ಸ್ಕಾಂದ ವಚೋ ಯಸ್ಮಾದರ್ಥಭೇದವ್ಯಪೇಕ್ಷಯಾ । ನಿರ್ದೋಷತ್ವಂ ಹರೇರ್ವಕ್ತಿ ದೋಷಮನ್ಯೇಷ್ವಪಿ ಕ್ರಮಾತ್ ॥೨೬॥**

ಅ॥ (೧) ಯಾವ ವಾಕ್ಯದಲ್ಲಿ ಶ್ರೀ ವಿಷ್ಣುವಿಗೆ ದೋಷಗಳನ್ನು ಹೇಳುವುದಾಗಿ ತೋರುತ್ತದೋ, ಮತ್ತು ತಮಗಿಂತ ಅವರರ ಸೃಷ್ಟ್ಯಾದಿಕರ್ತೃತ್ವ ಮೊದಲಾದ ಗುಣಗಳು ಯಾವುವು ಮೊದಲು ಹೇಳಲ್ಪಟ್ಟಿವೆಯೋ, ಅವುಗಳಿಗಿಂತ ಅಲ್ಪಗುಣಗಳನ್ನು ಹೇಳುವುದಾಗಿ ತೋರುತ್ತದೋ ಆ ವಾಕ್ಯವು ದೋಷವಿರಲು ಸಂಭಾವಿತವಾದ ಯಜ್ಞರೂಪವಾದ ವಸ್ತುವನ್ನು ಹೇಳುತ್ತದೆ. ಶ್ರೀ ವಿಷ್ಣುವನ್ನು ಹೇಳುವುದಿಲ್ಲ. (ಹಾಗಾದರೆ ಲಕ್ಷ್ಮೀ ಮೊದಲಾದವರದ್ದು ಯಾವುದು ಸ್ವರೂಪವು ಹೇಳಿಯದೋ ಅದೂ ಅಯುಕ್ತವು. ಏಕೆಂದರೆ ಕೆಲವರಲ್ಲಿ ಅಧಿಕದೋಷವು ಶ್ರುತವಾಗಿದೆ, ಎಂದರೆ) ಯಾವ ವಾಕ್ಯದಲ್ಲಿ ಲಕ್ಷ್ಮ್ಯಾದಿಗಳಿಗೆ ಅಧಿಕದೋಷಗಳನ್ನು ಹೇಳುವುದಾಗಿಯೂ, ಅವರಲ್ಲಿ ಯಾವ ಗುಣಗಳು ಇರಲು ಯೋಗ್ಯಗಳೋ ಅವುಗಳಿಗಿಂತ ಅಲ್ಪಗುಣಗಳನ್ನು ಹೇಳುವುದಾಗಿ ತೋರುತ್ತವೋ, ಆ ವಾಕ್ಯವೂ ದೋಷವಿರಲು ಸಂಭಾವಿತವಾದ ನಿಕೃಷ್ಟವಾದ ಯಜ್ಞರೂಪವಾದ ವಸ್ತುವನ್ನು ಹೇಳುತ್ತದೆ. (೨) (ವಿಷ್ಣುಪಕ್ಷದಲ್ಲಿಯೂ ಲಕ್ಷ್ಮ್ಯಾದಿ ಪಕ್ಷದಲ್ಲಿಯೂ ಹೇಳಿದ ಹೇತುವನ್ನು ತೋರಿಸುತ್ತಾರೆ.) ಯಾವ ಕಾರಣದಿಂದ ಶ್ರೀ ವಿಷ್ಣುವಿಗೆ ಸರ್ವಥಾ ನಿರ್ದೋಷತ್ವವೂ ಸರ್ವಗುಣ ಪರಿಪೂರ್ತಿಯೂ ಪ್ರಮಾಣಗಳಿಂದ ನಿರ್ಣೀತವಾಗಿದೆಯೋ, ಮಧ್ಯಸ್ಥರಾದ ಲಕ್ಷ್ಮ್ಯಾದಿಗಳಲ್ಲಿಯೂ ತಾರತಮ್ಯ ಕ್ರಮವಾಗಿ ನಿರ್ದೋಷತ್ವವೂ ಗುಣಪೂರ್ತಿಯೂ ಪ್ರಮಾಣಗಳಿಂದ ನಿರ್ಣೀತವಾಗಿದೆಯೋ, ಆದ ಕಾರಣ ದೋಷವಚನವು ಯಜ್ಞರೂಪ ನಿಕೃಷ್ಟಾರ್ಥವನ್ನು ಹೇಳುತ್ತದೆ. (೩) (ದೋಷಗಳನ್ನು ಹೇಳತಕ್ಕ ವಾಕ್ಯವು ಯಜ್ಞಾದಿಪರವಾದರೆ ವಿಷ್ಣ್ವಾದಿಗಳು ಸಮಸ್ತ ವೇದಾದಿಗಳಿಂದ ವೇದ್ಯರಾಗುತ್ತಾರೆನ್ನುವುದು ಕೂಡದೆ ಹೋಗುವುದು ಎಂದರೆ) ಸಮಸ್ತ ವೇದಗಳಲ್ಲಿ ೩ ಅರ್ಥಗಳು. ಇಡೀ ಭಾರತದಲ್ಲಿ ೧೦ ಅರ್ಥಗಳು. ವಿಷ್ಣು ಸಹಸ್ರ ನಾಮದ ಪದಗಳೂ ೧೦೦, ೧೦೦, ಅರ್ಥವುಳ್ಳವುಗಳು, ಹೀಗೆ ಸ್ಕಾಂದಪುರಾಣವಚನವು ಯಾವ ಕಾರಣದಿಂದ ವೇದಗಳಿಗೆ

ಅನೇಕಾರ್ಥಗಳಿವೆ ಎಂದು ಹೇಳುತ್ತದೋ, ಆದ ಕಾರಣ ಅರ್ಥಭೇದವನ್ನು ಇಟ್ಟುಕೊಂಡು ಯೋಜನಾ ವಿಶೇಷ ವಿವಕ್ಷೆಯಿಂದ ಒಂದೇ ವಾಕ್ಯವು ಶ್ರೀ ಹರಿಗೆ ನಿರ್ದೋಷತ್ವವನ್ನೂ ಇತರರಲ್ಲಿ ಕ್ರಮವಾಗಿ ದೋಷವನ್ನೂ ಹೇಳುತ್ತದೆ. ಹೀಗೆ ಅಂಗೀಕರಿಸಿದುದರಿಂದ ದೋಷವಿಲ್ಲ.

ವಿ (1) ಅರ್ಥಭೇದವ್ಯಪೇಕ್ಷಾ ಹೇಗೆಂದರೆ ಜನಿತೋತ ವಿಷ್ಣೋಃ ಎಂಬಲ್ಲಿ ಸೋಮಃ ಪವತೇ ಇತ್ಯಾದಿ ಶ್ರುತಿಯು. ಸೋಮಲತೆಯು ಶ್ರೀ ವಿಷ್ಣುವಿಗೆ ಉತ್ಪಾದಕವು ಎಂದರ್ಥ ಇಟ್ಟುಕೊಂಡರೆ ಶ್ರೀ ವಿಷ್ಣುವಿಗೆ ಉತ್ಪತ್ತಿರೂಪದೋಷವು ತೋರುತ್ತದೆ. ವಿಷ್ಣುವಿಗೆ ದೋಷ ಪ್ರತಿಪಾದಕ ವಚನದಂತೆ ತೋರಿದರೆ ಅನ್ಯಾರ್ಥವನ್ನು ಹೇಳಬೇಕು. ಹೇಗೆಂದರೆ - ವಿಷ್ಣುರಿತಿ ಯಜ್ಞಸ್ಯ ಯಜಮಾನಸ್ಯ ವಾ ನಾಮ ಎಂದು ಹೇಳಿದ ಪ್ರಕಾರ, ಸೋಮವು ವಿಷ್ಣು ಅಂದರೆ ಯಜ್ಞವನ್ನು ನಿರ್ವಹಿಸುವುದರಿಂದ ಯಜ್ಞೋತ್ಪಾದಕವು, ಅಥವಾ ಸಂಸ್ಕಾರ ದ್ವಾರಾ ಯಜಮಾನನನ್ನು ಪುಷ್ಟೀಕರಿಸುತ್ತದೆಂದಂಗೀಕರಿಸಿದರೂ ದೋಷವಿಲ್ಲ. (2) ಅಥವಾ ಜನಿತಾ ಅಂದರೆ ಜನೀಪ್ರಾದುರ್ಭಾವೇ ಎಂಬ ಧಾತು ವ್ಯಾಖ್ಯಾನದಿಂದ ಸೋಮವು ಶ್ರೀ ವಿಷ್ಣುವಿಗೆ ಪ್ರಾದುರ್ಭಾವವನ್ನು ಮಾಡಿಸುವುದು. ಅಂದರೆ ಯಜ್ಞದಲ್ಲಿ ಅಭಿವ್ಯಕ್ತನಾಗುವಂತೆ ಮಾಡಿಸುತ್ತದೆ. ಹೀಗೆ ಇಟ್ಟುಕೊಂಡರು. ಉತ್ಪತ್ತಿರೂಪ ದೋಷ ಪ್ರತಿಪಾದಕವಾಗುವುದಿಲ್ಲ. (3) ಅಥವಾ ಸೋಮಃ = ಉ=ಸರ್ವೋತ್ಕೃಷ್ಟಳಾದ, ಮಾ=ಲಕ್ಷ್ಮೀದೇವಿಯು, ಉಮಾ. ಉಮಯಾ ಸಹಿತಃ =ಶ್ರೀ ಲಕ್ಷ್ಮೀದೇವಿಯಿಂದ ಕೂಡಿರುವ ಶ್ರೀ ಹರಿಯು ಸೋಮನು, ಎಂಬ ಅರ್ಥವನ್ನು ವಿವಕ್ಷಾ ಮಾಡಿದರೆ, ಸೋಮಃ = ಶ್ರೀ ವಿಷ್ಣುವು, ಶ್ರೀ ವಿಷ್ಣುವಿಗೆ ಪ್ರಾದುರ್ಭಾವವನ್ನು ಮಾಡಿಸುತ್ತಾನೆ.

ಏವಂಚ ಒಂದು ಭಗವದ್ರೂಪದಿಂದ ರೂಪಾಂತರಕ್ಕೆ ಅಭಿವ್ಯಕ್ತಿಯು. ಹೀಗಾದರೂ ಉತ್ಪತ್ತಿರೂಪ ದೋಷ ಪ್ರತಿಪಾದಕವಾಗುವುದಿಲ್ಲ. (4) ಯೋಜನಾ ವಿಶೇಷ ವಿವಕ್ಷಾ ಹೇಗೆಂದರೆ ಆತ್ಮಾವಾ ಇದಮೇಕ ಏವಾಗ್ರ ಆಸೀತ್ ಎಂಬ ಬೃಹದಾರಣ್ಯಕಶ್ರುತಿಯು ಪ್ರಲಯ ಕಾಲದಲ್ಲಿ ಒಬ್ಬನೇ ಆತ್ಮನು ಈ ಜಗತ್ತಾಗಿದ್ದನು ಎಂದು ಯೋಜನಾ ಮಾಡಿದರೆ ಶ್ರೀ ವಿಷ್ಣುವಿಗೆ ಜಗತ್ತಿನಿಂದ ಅಭೇದ ಬರುವುದರಿಂದ ಅಜ್ಞಾನ ಪಾರತಂತ್ರ್ಯಾದಿ ದೋಷಗಳನ್ನು ಹೇಳುತ್ತದೆ. ಈ ಜಗತ್ತಿನ ಪೂರ್ವದಲ್ಲಿ (ಪ್ರಲಯಕಾಲದಲ್ಲಿ) ಆತ್ಮನೊಬ್ಬನೇ ಇದ್ದನು. ಬ್ರಹ್ಮಾದಿ ಜಗತ್ತು ಪ್ರವೃತ್ತಿಯಿಂದ ಯುಕ್ತವಾಗಿರಲಿಲ್ಲ. ಸ್ವರೂಪತಃ ಇತ್ತು ಎಂದು ಯೋಜನಾ ಮಾಡಿದರೆ ಶ್ರೀ ವಿಷ್ಣುವಿಗೆ ನಿರ್ದೋಷತ್ವವೂ, ಲಕ್ಷ್ಮ್ಯಾದಿಗಳಿಗೆ ವಿಷ್ಣುವಿನ ಅಧೀನತ್ವವೂ ಪ್ರಲಯ ಕಾಲದಲ್ಲಿ ಅವಿದ್ಯಮಾನತ್ವವೂ ಕ್ರಮದಿಂದ ವಿಷ್ಣು ಜನ್ಯತ್ವ ಮೊದಲಾದ ದೋಷಗಳನ್ನು ಹೇಳುತ್ತದೆ. ||೨೬||

ಅವ || ದೋಷಗಳನ್ನು ಹೇಳಿದರೆ ಪ್ರಯೋಜನವಿಲ್ಲದಿರುವುದರಿಂದ ಶ್ರೀ ವಿಷ್ಣುವಿನಲ್ಲಿ ದೋಷಗಳನ್ನು ಹೇಳತಕ್ಕ ವಾಕ್ಯಗಳಿಗೆ ಅನ್ಯಾರ್ಥವನ್ನು ಕೂಡಿಸಿದಂತೆಯೇ ಇತರ ದೇವತೆಗಳಲ್ಲಿಯೂ ದೋಷಗಳನ್ನು ಹೇಳತಕ್ಕ ವಾಕ್ಯಗಳಿಗೆ ಅನ್ಯಾರ್ಥವನ್ನು ಏಕೆ ಇಟ್ಟುಕೊಳ್ಳಬಾರದು, ಎಂದರೆ -

ಭಾ || (೧) ತಾರತಮ್ಯಸ್ಯ ವಿಜ್ಞಪ್ತ್ಯೈ ವಚೋ ದೋಷಸ್ಯ ಚಾರ್ಥವತ್ । (೨) ಗುಣಾಃ ಶ್ರುತಾ ಇತಿಹ್ಯಾಹ ಗುಣ್ಯೈ ಕನಿಯತಿಂ ಹರೌ । (೩) ನಿರ್ದೋಷ ಗುಣಪೂರ್ಣಶ್ಚ ವಿಷ್ಣೋರೇಕೋ ನ ಚಾಪರಃ । ಅಪೂರ್ಣಾ ದೋಷರಹಿತಾ ಮಾಯೈಕಾ ತದ್ವಶೈವ ಚ || (೪) ಅದೋಷಃ ಪ್ರಾಯಶೋ ಬ್ರಹ್ಮಾ ದೋಷವಂತಃ ಕ್ರಮಾತ್ಪರೇ । ಇತಿಮಾನ್ಯಶ್ರುತಿಶ್ಚಾಹ ಭೇದೋಽಥಾನಾಂ ತತೋ ಮತಃ ||೨೭||

ಅ॥ (೧) ದೇವತೆಗಳ ತಾರತಮ್ಯ ಜ್ಞಾನಕ್ಕಾಗಿ ದೋಷ ವಚನವೂ ಸಾರ್ಥಕವು. (ಅಂದರೆ ಅವಾವ ದೇವತೆಗಳಲ್ಲಿ ರತಕ್ಕ ದೋಷಗಳನ್ನು ಹೇಳದಿದ್ದರೆ ದೇವತೆಗಳ ತಾರತಮ್ಯವು ತಿಳಿಯದೆ ಹೋಗುವುದು. ಮೋಕ್ಷೇಚ್ಛುವಿಗೆ ದೇವತಾ ತಾರತಮ್ಯ ಜ್ಞಾನವು ಅಗತ್ಯವಾಗಿ ಅಪೇಕ್ಷಿತವು. ಆದುದರಿಂದ ತಾರತಮ್ಯವನ್ನು ತಿಳಿಸಿಕೊಡುವುದಕ್ಕಾಗಿ ದೋಷ ವಚನವು ಸಾರ್ಥಕವು) (೨) (ಅತೋ ದೋಷವಚೋ ಯತ್ರ ಎಂದು ಹಿಂದೆ ಹೇಳಿದುದನ್ನು ದೃಢೀಕರಿಸುತ್ತಾರೆ.) ಗುಣಾಃ ಶ್ರುತಾಃ ಎಂಬ ಶ್ರುತಿಯು ಶ್ರೀ ಹರಿಯಲ್ಲಿ ಕೇವಲ ಗುಣಗಳ ನಿಯಮವನ್ನೇ ಹೇಳುತ್ತದೆ. (೩) ದೋಷಲೇಶರಹಿತನಾಗಿ ಸರ್ವಗುಣ ಪರಿಪೂರ್ಣನಾದವನು ಶ್ರೀ ವಿಷ್ಣು ಒಬ್ಬನೇ. ಬೇರೆ ಯಾರೊಬ್ಬರೂ ಇಲ್ಲವೇ ಇಲ್ಲ. ಸರ್ವಗುಣ ಪರಿಪೂರ್ಣಳಾಗದೆ ಇದ್ದು ದೋಷಲೇಶರಹಿತಳಾದವಳು ಲಕ್ಷ್ಮೀ ದೇವಿಯೊಬ್ಬಳು. ಶ್ರೀ ಹರಿಯ ಅಧೀನಳೇ ಆದವಳು. (೪) ಚತುರ್ಮುಖ ಬ್ರಹ್ಮನು ಪ್ರಾಯಶಃ ದೋಷವಿರಹಿತನು. ಇತರರು ಕ್ರಮವಾಗಿ ದೋಷಾಧಿಕ್ಯವುಳ್ಳವರು. ಹೀಗೆ ನಿರ್ದೋಷೇತ್ಯಾದಿ ಮಾನ್ಯ ಶ್ರುತಿಯೂ ಕೂಡ ಶ್ರೀ ಹರಿಗೆ ಕೇವಲ ಗುಣಗಳ ನಿಯಮನವನ್ನೇ ಹೇಳುತ್ತದೆ. ಹೀಗೆ ಶ್ರೀ ಹರಿಯು ನಿರ್ದೋಷ ಗುಣ ಪರಿಪೂರ್ಣನಾದುದರಿಂದಲೂ ಇತರರು ಯಥಾಯೋಗ್ಯವಾಗಿ ದೋಷಗಳುಳ್ಳವರಾದುದರಿಂದಲೂ ಯೋಜನಾ ಭೇದದಿಂದ ಅರ್ಥಗಳಿಗೆ ವೈಲಕ್ಷಣ್ಯವೇ ಸಮ್ಮತವಾಗಿದೆ. ॥೨೭॥

ಅವ॥ ಯಥಾಯೋಗಂ ಯಥಾನ್ಯಾಯಂ ಎಂಬುವುದರಿಂದ ಯೋಗ ವೃತ್ತಿಯಿಂದ ಶ್ರೀ ವಿಷ್ಣುವು ನಿಖಿಲವೇದಗಳಿಂದ ವೇದ್ಯನೆಂದು ಹೇಳಿದೆ. ಅದು ಅಯುಕ್ತವು. ಸರ್ವಜ್ಞ॥ ಸರ್ವವಿತ್ ಇತ್ಯಾದಿ ಶ್ರುತಿಗಳಲ್ಲಿ ಸರ್ವ ಮೊದಲಾದ ಶಬ್ದಗಳು ಅನ್ಯಪರಗಳಾದರೆ ಶ್ರೀ ಹರಿಯು ಸರ್ವಶಬ್ದಗಳಿಂದ ವಾಚ್ಯನೆಂಬುವುದು ವ್ಯಾಹತವಾಗುವುದು. ಭಗವಂತನನ್ನೇ ಹೇಳುತ್ತವೆ ಎಂದಾದರೆ ಭಗವನ್ನಾಮಗಳನ್ನೇ ಆವೃತ್ತಿ ಮಾತ್ರ ಮಾಡುವುದರಿಂದ ಯೋಗವು ಕೂಡಲಾರದು, ಎಂಬ ಆ ಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ.

**ಭಾ ॥ (೧) ರೂಢಿಮೇವ ಸಮಾಶ್ರಿತ್ಯ ವಿಭಜ್ಯಾರ್ಥಾನ್ಯಥಾಕ್ರಮಂ । ನಿರ್ದೋಷಗುಣ ಪೂರ್ತ್ಯರ್ಥಂ ವಿಷ್ಣೌ ಯೋಗಾರ್ಥಮಾನಯೇತ್ । ಪಶ್ಚಾದೇವ ಯಥಾಯೋಗ ಮಿತರೇಷ್ವಪಿ ಸಂನಯೇತ್ । ಋಗ್ವೇದ ಸಂಹಿತಾಯಾಂ ಚ ಪ್ರಭುಣೈವಂ ಸಮೀರಿತಂ ॥ (೨) ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ (ನಿ)ಚ । ಅಗ್ನ್ಯಾದಿಸೂಕ್ತ ವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥೨೮॥**

ಅ॥ (೧) ಸರ್ವಾದಿ ಶಬ್ದಗಳಿಗೆ ರೂಢಿವೃತ್ತಿಯನ್ನೇ ಚೆನ್ನಾಗಿ ಆಶ್ರಯಿಸಿ ನಿಖಿಲ ಮೊದಲಾದ ಅರ್ಥಗಳನ್ನು ವಿಸ್ಪಷ್ಟವಾಗಿ ತಿಳಿದುಕೊಂಡು ಆ ಮೇಲೆ ಶಬ್ದಾನುಶಾಸನಾದಿ ಕ್ರಮಗಳನ್ನು ಅಂಗೀಕರಿಸಿ ಶ್ರೀ ವಿಷ್ಣುವು ನಿರ್ದೋಷ ಗುಣಪರಿಪೂರ್ಣನೆಂದು ಸಿದ್ಧಿಯಾಗುವುದಕ್ಕಾಗಿ ಸರ್ವಜ್ಞ ಮೊದಲಾದ ಶಬ್ದಗಳಿಗೆ ಯೋಗಾರ್ಥವನ್ನು ಹೊಂದಿಸಿಕೊಡಬೇಕು. ಆ ಮೇಲೆ ಸರ್ವಾದಿ ಶಬ್ದಗಳಿಗೂ ಸರವಾದಿ ಶಬ್ದಗಳ ರೂಢಾರ್ಥಗಳನ್ನು ತೆಗೆದುಕೊಂಡೇ ಶ್ರೀ ವಿಷ್ಣುವಿನಲ್ಲಿ ಸರವಃ =ಸರ್ವ=ವೈದಿಕ ಶಬ್ದದಿಂದ ಸಹಿತನು (ಅಂದರೆ ವೈದಿಕ ಶಬ್ದಗಳಿಂದ ಪ್ರತಿಪಾದ್ಯನು) ಇತ್ಯಾದಿ ರೂಪವಾದ ರಃ ಸ್ಯಾತ್ಪುಮಾನ್ ಶಿವೇ ವಹ್ನೌ ಎಂಬ ಕೋಶದಿಂದ ರಂ=ಶಿವನನ್ನು ಅಗ್ನಿಯನ್ನಾಗಲೀ ವರ್ತಯತಿ=ಪ್ರವರ್ತಿಸುವವನು, ರವಃ ಎಂಬ ಯೋಗವೃತ್ತಿಯನ್ನು ಹೊಂದಿಸಿ ಕೊಡಬೇಕು. (ರೂಢಿಯಿಂದಲೇ ಶ್ರೀ ಹರಿಯು ಸಮಸ್ತ ವೇದಗಳಿಂದಲೂ ವೇದ್ಯನೆಂದಾಗಲಿ ಯೋಗ ಏತಕ್ಕೆ, ಎಂದರೆ ಶ್ರೀ ಹರಿಯು ನಿರ್ದೋಷನು ಗುಣಪರಿಪೂರ್ಣನು ಎಂದು ತಿಳಿಯುವುದಕ್ಕಾಗಿಯೇ

ಸಮಸ್ತ ವೇದಗಳು ಪ್ರವೃತ್ತಗಳಾಗಿವೆ. ರೂಢಿಮಾತ್ರದಿಂದ ಚೆನ್ನಾಗಿ ನಿರ್ದೋಷತ್ವಾದಿಗಳು ಸಿದ್ಧಗಳಾಗಲಾರವು. ಆದ ಕಾರಣ ಯೋಗವನ್ನೇ ಆಶ್ರಯಿಸಬೇಕು.) ಆ ಮೇಲೆಯೇ ಶ್ರೀ ವಿಷ್ಣುವಿನಿಂದ ಅತಿರಿಕ್ತರಾದ ದೇವತೆಗಳಲ್ಲಿಯೂ ಕೂಡ ಆವಾವ ದೇವತೆಗಳ ಯೋಗ್ಯತೆಯನ್ನನುಸರಿಸಿಯೇ ಯೋಗವೃತ್ತಿಯನ್ನು ಹೊಂದಿಸಿಕೊಡಬೇಕು. ಋಗ್ವೇದಸಂಹಿತೆಯಲ್ಲಿಯೂ ಕೂಡ ಪ್ರಭುವಾದ ಶ್ರೀಹರಿಯಿಂದ ಹೀಗೆಯೇ ಹೇಳಲ್ಪಟ್ಟಿದೆ. (೨) (ಸಮಸ್ತ ವೇದಗಳೂ ಭಗವತ್ಪರಗಳೆಂದಾದರೆ, ಇದು ಅಗ್ನಿಸೂಕ್ತವು, ಇದು ವಾಯುಸೂಕ್ತವು, ಇತ್ಯಾದಿ ಸೂಕ್ತಭೇದವು ಹೇಘೆ ಕೂಡುತ್ತದೆ ಎಂದರೆ) ಅಗ್ನಿಸೂಕ್ತ ಮೊದಲಾದ ಸೂಕ್ತಗಳಿಂದ ವಾಚ್ಯಗಳಾದ ಭಗವದ್ರೂಪಗಳು. (1) ಅಗ್ನ್ಯಾದಿ ದೇವತೆಗಳಲ್ಲಿ ಅಂತರ್ಗತಗಳು, (2) ಅಗ್ನ್ಯಾದಿ ದೇವತೆಗಳಲ್ಲಿ ಅಂತರ್ಗತಗಳಾಗದೆ ಇದ್ದವುಗಳು ಎಂದು ಎರಡು ವಿಧಗಳು. (ಎಲ್ಲವೂ ಅಗ್ನ್ಯಾದಿ ನಾಮವುಳ್ಳವುಗಳೇ) (ಅವುಗಳಲ್ಲಿ ಅಗ್ನ್ಯಾದಿದೇವತೆಗಳಲ್ಲಿ ಅಂತರ್ಗತಳಾದ ಭಗವದ್ರೂಪಗಳನ್ನು ಪ್ರತಿಪಾದಿಸುವುದೆಂಬ ಪಕ್ಷದಲ್ಲಿ ಸಮಸ್ತ ವೇದಗಳೂ ಭಗವತ್ಪರಗಳಾದುದಾಗ್ಯೂ ಆಯಾಯ ದೇವತೆಗಳಲ್ಲಿ ಅಂತರ್ಗತಗಳಾದ ಆಯಾಯ ನಾಮವುಳ್ಳ ಭಗವದ್ರೂಪ ವಿಶೇಷಗಳನ್ನು ಪ್ರತಿಪಾದಿಸುವುದರಿಂದಲೂ ಭಿನ್ನಗಳಾದ, ಆವಾವ ನಾಮವುಳ್ಳ ಭಗವದಧಿಷ್ಠಾನಭೂತರಾದ ಅಗ್ನ್ಯಾದಿಗಳನ್ನು ಪ್ರತಿಪಾದಿಸದೆ ಇರುವುದರಿಂದಲೂ) ತನ್ನ ನಾಮದಿಂದಲೂ ಅಧಿಷ್ಠಾನ ನಾಮದಿಂದಲೂ ಅಗ್ನ್ಯಾದಿ ಸೂಕ್ತಭೇದವು ಆಗುವುದು. (ಅಂತರ್ಗತಳಾಗದೆ ಇದ್ದ ಭಗವದ್ರೂಪಗಳನ್ನು ಪ್ರತಿಪಾದಿಸುವುದೆಂಬ ಪಕ್ಷದಲ್ಲಿ) ತನ್ನದ್ದಾದ ಅಗ್ನ್ಯಾದಿ ನಾಮದಿಂದಲೇ ಸೂಕ್ತಾದಿಭೇದವು ಬರುವುದು. ಅಧಿಷ್ಠಾನ ನಾಮದಿಂದ ಅಲ್ಲ.) ॥೨೮॥

ಅವ ॥ ಹೀಗೆ ಋಷಿ ಛಂದೋ ದೇವತಾ ಸ್ವರೂಪವನ್ನು ಕ್ರಮ ಪ್ರಕಾರ ಉಪಪಾದಿಸಿ ಈಗ ಕೆಲವು ಋಕ್ಕುಗಳ ವ್ಯಾಖ್ಯಾನವನ್ನು ಮಾತ್ರ ಪ್ರತಿಜ್ಞಾ ಮಾಡಿದುದರಿಂದ ಭಾಷ್ಯಕಾರರು ವ್ಯಾಖ್ಯಾನ ಮಾಡದಿದ್ದ ಋಕ್ಕುಗಳ ವ್ಯಾಖ್ಯಾನ ಪ್ರಕಾರವನ್ನು ಶಿಕ್ಷಿಸುತ್ತಾರೆ.

**ಭಾ ॥ (೧) ನ ಕಿರ್ಮಾಕಿಃ ಸ್ಮಸೀತ್ಯಾದಿ ಪ್ರೋಕ್ತಾಧಿಕ್ಯವಿವಕ್ಷಯಾ ॥ (೨) ಅಧಿಕ್ಯೇಽಧಿ ಕಮಿತ್ಯೇವ ಹರಿಣಾ ಸೂತ್ರಮೀರಿತಂ ॥ (೩) ಕೃತ್ವೀ ಹತ್ವೀತಿ ಪೂರ್ವಾಶ್ಚ (೪) ತೃತೀಯೋಽತಿಶಯೇ ಯತಃ । (೫) ವಿಶ್ಲಿಷ್ಟಾರ್ಥೇಚ ವಿಶ್ಲಿಷ್ಟಮೂನಾರ್ಥೇ ಚೋನಮಿಷ್ಯತೇ ॥ (೬) ವ್ಯತ್ಯಯೋಽಭೇದಕರಣಸ್ವಾತಂತ್ರ್ಯೇಷು ಸಮೀರಿತಃ ॥ (೭) ಅಭೇದೋ ಹರಿರೂಪಾಣಾಂ ಗುಣಾನಾಂ ಚ ಕ್ರಿಯಾ ಸು ಚ । ತಸ್ಯ ವಾಯಯವಾನಾಂ ಚ । (೮) ಭೇದಃ ಶ್ರೀ ಬ್ರಹ್ಮಪೂರ್ವಕೈಃ ॥ ಮುಕ್ತೈರಪಿ ಜಡೈರ್ಭೇದಃ ಕೈಮುತ್ಯಾದೇವ ದೃಶ್ಯತೇ ॥ ಋಗ್ವೇದಸಂಹಿತಾಯಾಂಚ ಪ್ರೋಕ್ತಮೇತತ್ಸಮಸ್ತಶಃ ॥೨೯॥**

ಅ॥ (೧) (1) ನ ಕಿರಿಂದ್ರ ತ್ವದುತ್ತರೋನ ಜ್ಯಾಯಾ ಅಸ್ತಿ ವೃತ್ರಹನ್ । (ಋ.೩.೬.೧೯) ಎಲೋ ಪರಮೇಶ್ವರನೇ ನಿನ್ನಿಂದ ಉತ್ತಮನು ಸರ್ವಥಾ ಇಲ್ಲ. ವೃತ್ರಾಸುರಸಂಹಾರಕನೇ ನಿನಗಿಂತ ಇನ್ನೊಬ್ಬನೂ ಶ್ರೇಷ್ಠನೂ ಹೊಗಳಿಸಿಕೊಳ್ಳಲು ಯೋಗ್ಯನೂ ಇಲ್ಲವೇ ಇಲ್ಲ. (2) ಮಾಕಿರ್ನೇಶತ್ ಮಾಕೀಂ ರಿಷನ್ ಮಾಕೀಂ ಸಂಶಾರಿ । ಕೇವಟೇ । ಅಥಾರಿಷ್ಟಾಭಿರಾಗಹಿ = (ಋ. ೪.೮.೨೦) ಪೂಷನ್ = ಭಗವಂತನೇ ನೀನು ಭಕ್ತರ ಹೃದಯದಿಂದ ಯಾವಾಗಲೂ ಹೊರಟು ಹೋಗುವುದಿಲ್ಲ. (ಅಂದರೆ ಸದಾ ಭಕ್ತರ ಹೃದಯದಲ್ಲಿ ಸನ್ನಿಹಿತನಾಗಿರುತ್ತಿ.) ನ ಮೇ ಭಕ್ತಃ ಪ್ರಣಶ್ಯತಿ ಎಂಬುವ ಪ್ರಮಾಣದಿಂದ) ಭಕ್ತವರ್ಗವನ್ನು ಯಾವಾಗಲೂ ನಾಶಗೊಳಿಸುವುದಿಲ್ಲ. ಹಾಗೆಯೇ ತಾನು (ಅಚ್ಛೇದ್ಯೋಽಯಮದಾಹ್ಯೋಽಯಂ ಎಂಬ ಪ್ರಮಾಣದಿಂದ) ಯಾವ ಪುರುಷನಿಂದಲೂ ಬಾವಿಯಲ್ಲಿ (ಯಾವುದೊಂದು ಸ್ಥಾನದಲ್ಲಿಯೂ) ಸಂಹರಿಸಿಕೊಳ್ಳಲ್ಪಡುವುದಿಲ್ಲ.

ಆದ ಕಾರಣ ನೀನು ಸ್ತ್ರೀಯರಿಂದ ಕೂಡಿ ಬಾ. (3) ತ್ವಾವತಃ ಪುರೂವಸೋ ವಯಮಿಂದ್ರ ಪ್ರಣೇತಃ । ಸ್ಮಸಿ ಸ್ಥಾತರ್ಹರೀಣಾಂ॥ (ಋ. ೬.೪.೧.) ಉತ್ಕೃಷ್ಟ ಧನವುಳ್ಳವನೂ, ಸರ್ವಜಗತ್ಪ್ರವರ್ತಕನೂ, ಅಶ್ವಗಳಿಗೆ ಸ್ಥಾಪಕನೂ ಆದ ಇಂದ್ರನೇ ನಾವು ನಿನ್ನವರು. (ನಿನ್ನ ಭಕ್ತರು) ಆಗಿರುತ್ತೇವೆ, ಇತ್ಯಾದಿಗಳಲ್ಲಿ ಅಮಾನೋನಾಃ ಪ್ರತಿಷೇಧೇ ಎಂಬ ಸೂತ್ರದಿಂದ ಪ್ರಾಪ್ತಗಳಾದ ನ ಮಾ ಶಬ್ದಗಳಿಂದ ಅಧಿಕವಾದ ಕಿಃ ಎಂಬ ಶಬ್ದರೂಪವೂ, ತಿಪ್ತಸಿ ಇತ್ಯಾದಿ ಸೂತ್ರದಿಂದ ಪ್ರಾಪ್ತವಾದ ಅಧಿಕವಾದ ಮಸಿ ಸ್ಮಸಿ ಎಂಬ ಶಬ್ದರೂಪವೂ ಕೀಂ ಎಂಬ ಶಬ್ದರೂಪವೂ ಅಲ್ಲಿ ಹೇಳಿದ ಅರ್ಥಕ್ಕೆ ಅಧಿಕ್ಯವನ್ನು ವಿವಕ್ಷಾ ಮಾಡಿಕೊಂಡು ಅಂದರೆ ನ ಕಿಃ ಮಾ ಕಿಃ ಇತ್ಯಾದಿ ನಿಷೇಧದಲ್ಲಿ ಸರ್ವದೇಶಕಾಲ ಸಂಬಂಧಿತ್ವವನ್ನೂ ಸ್ಮಸಿ ಇತ್ಯಾದಿ ವಿಧಿಯಲ್ಲಿ ವಿಧೇಯಾಧಿಕ್ಯವನ್ನೂ ವಿವಕ್ಷಾ ಮಾಡಿಕೊಂಡು ಪ್ರಯೋಗಿಸಿದ್ದೆಂದು ತಿಳಿಯಬೇಕು. (೨) ಅಧಿಕ್ಯೇಽಧಿಕಂ=ಅರ್ಥಾಧಿಕ್ಯವು ವಿವಕ್ಷಿತವಾಗೋಣ ಅಧಿಕವಾದ ಶಬ್ದರೂಪವು ಆಗುತ್ತದೆ, ಎಂದೇ ಸೂತ್ರವು ಶ್ರೀ ಹರಿಯಿಂದ ಹೇಳಲ್ಪಟ್ಟಿದೆ. (೩) ಪುನರ್ದಾಯ ಬ್ರಹ್ಮ ಜಾಯಾಂ ಕೃತ್ವೀ ದೇವೈರ್ನಿಕಿಲ್ಬಿಷಂ । ಊರ್ಜಂ ಪೃಥಿವ್ಯಾ ಭಕ್ತ್ವಾಯೋರುಗಾಯಮುಪಾಸತೇ ॥ (ಋ. ೮.೬.೭.) ಹರಿ ಭಕ್ತರಿಂದ ಸ್ನೇಹವನ್ನು ಮಾಡುತ್ತಿರುವ ಜನಕರಾಜನೇ ಮೊದಲಾದ ರಾಜರು ಪರಬ್ರಹ್ಮರೂಪಿಯಾದ ರಾಮಾದಿಗಳಿಗೆ ಸೀತಾದಿರೂಪವುಳ್ಳ ಸ್ತ್ರೀಯರನ್ನು ತಿರುಗಿಕೊಟ್ಟು (ಸೀತಾದಿಗಳು ಲಕ್ಷ್ಮೀಸ್ವರೂಪವಾಗಿರುವುದರಿಂದ ಮೊದಲೇ ವಿಷ್ಣುಪತ್ನಿಯರೆಂದು ಸಿದ್ಧವಾಗಿರುವುದರಿಂದ ಪುನಃ ಎಂದದ್ದು) ಯಜ್ಞಾದಿಗಳಿಂದ ಇಂದ್ರಾದಿ ದೇವತೆಗಳಿಗೆ ಪ್ರೀತಿಯನ್ನು ಅತ್ಯಂತವಾಗಿ ಮಾಡಿ ಪೃಥಿವೀ ಸಂಬಂಧಿಯಾದ ಸಂಪೂರ್ಣ ಅನ್ನವನ್ನು ಬ್ರಾಹ್ಮಣರಿಗೆ ದಾನ ಮಾಡಿ ಶ್ರೇಷ್ಠರಾದ ಬ್ರಹ್ಮಾದಿಗಳಿಂದ ಗಾನ ಮಾಡಲ್ಪಡತಕ್ಕ ಶ್ರೀ ವಿಷ್ಣುವನ್ನು ಧ್ಯಾನಿಸುತ್ತಾರೆ. ಹಿರಣ್ಯಯಮುತ ಭೋಗಂ ಸಸಾನ ಹತ್ವೀ ದಸ್ಯೂನ್ ಪ್ರಾರ್ಯಂ ವರ್ಣಮಾವತ್ = (ಋ. ೩.೨.೧೫) (ಪರಮೈಶ್ವರ್ಯಸಂಪನ್ನನಾದ ಶ್ರೀ ಹರಿಯು ಸುವರ್ಣಮಯವಾದ ಶರೀರವನ್ನು ಅಥವಾ ಸುವರ್ಣಸದೃಶ ಶರೀರವನ್ನು ಅಥವಾ ಸುವರ್ಣಾಲಂಕೃತ ಶರೀರವನ್ನು ಅಥವಾ ಸುವರ್ಣ ಪ್ರಾಚುರ್ಯನಿಮಿತ್ತವಾದ ಸುಖಾನುಭವವನ್ನು ಹೊಂದಿರುವನು. ಮತ್ತು ಚೋರರಾದ ದೈತ್ಯಾದಿಗಳನ್ನು ನಿಶ್ಶೇಷವಾಗಿ ಸಂಹರಿಸಿ ಸರ್ವರಿಂದಲೂ ಪ್ರಾರ್ಥ್ಯನಾದ ದೇವ ಶ್ರೇಷ್ಠನಾದ ಚತುರ್ಮುಖನನ್ನು ಅಥವಾ ಜ್ಞಾನಿಯನ್ನು ಅಥವಾ ಉತ್ತಮವಾದ ಬ್ರಾಹ್ಮಣ ಜಾತಿಯನ್ನು ರಕ್ಷಿಸಿದನು. ಇದು ಮೊದಲಾದ ವರ್ಣವಿಕಾರಗಳು (ಕೃತ್ವಾ ಎನ್ನುವುಕ್ಕೆ ಕೃತ್ವೀ ಎಂದೂ ಹತ್ವಾ ಎನ್ನುವುದಕ್ಕೆ ಹತ್ವೀ ಎಂದೂ ವರ್ಣ ವಿಕಾರಗಳು ಅರ್ಥಾಧಿಕ್ಯವನ್ನು ವಿವಕ್ಷಾ ಮಾಡಿಕೊಂಡು ಪ್ರಯುಕ್ತಗಳೆಂದು ತಿಳಿಯಬೇಕು. (೪) ಏಕೆಂದರೆ - ತೃತೀಯೋಽತಿಶಯೇ, ಅರ್ಥಾಧಿಕ್ಯವು ವಿವಕ್ಷಿತವಾಗೋಣ ಪ್ರಾಪ್ತವಾದ ಅಕ್ಷರದ ಸ್ಥಾನದಲ್ಲಿ ಅದಕ್ಕಿಂತ ೩ನೇ ವರ್ಣವು ಬರುತ್ತದೆ. ಉದಾ = ಹತ್ವಾ = ಎನ್ನುವ ಆಕಾರಕ್ಕೆ ಹತ್ವೀ = ಎಂದು ಈ ಕಾರವು. ಕ್ವಚಿತ್ ಈ ಕಾರಕ್ಕೆ ಆ ಕಾರವು. (೫) ಅಃ ಇತಿಬ್ರಹ್ಮ ಇದು ಮೊದಲಾದ, ವರ್ಣಗಳಿಗೆ ಅತಿಶಯಿತ ಸಂಧಿಯಿಲ್ಲದೆ ನಿರ್ದೇಶ ಮಾಡಿದ ಶಬ್ದ ಸ್ವರೂಪವು ವಿಶ್ಲಿಷ್ಟಾರ್ಥದಲ್ಲಿ (ಅಂದರೆ ಆ ಅರ್ಥವು ಇತರ ವಸ್ತುಗಳಿಂದ ಭಿನ್ನವಾಗಿದೆ, ಎಂಬ ಅರ್ಥದಲ್ಲಿದೆ.) (ಅಂದರೆ - ಅಕಾರವಾಚ್ಯನಾದ ಪರಬ್ರಹ್ಮನು ಇತರ ಸಕಲ ಪದಾರ್ಥಗಳಿಂದಲೂ ಭಿನ್ನನು ಎಂದು ತಿಳಿಯಲ್ಪಡುತ್ತಾನೆ. ಎಂದಭಿಪ್ರಾಯವು) ತಮ ಆಸೀತ್ತಮಸಾ ಗೂಳ್ಹಮಗ್ರೇ ಪ್ರಕ್ರೇತಂ ಸಲಿಲಿಂ ಸರ್ವಮಾ ಇದಂ (ಋ. ೮.೭.೧೭) (ಪ್ರಲಯ ಕಾಲದಲ್ಲಿ ಅಂಧಕಾರವೂ ಅಥವಾ ಅದಕ್ಕೆ ಅಭಿಮಾನಿನಿಯಾದ ದುರ್ಗಾದೇವಿಯಾಗಲೀ, ಇರುತ್ತಿದ್ದಳು. ಹಾಗೆಯೇ ಪ್ರಲಯ ಕಾಲದಲ್ಲಿ ಅಗಾಧವಾದ ಈ ಎಲ್ಲಾ ನೀರೂ (ಅಂದರೆ ಪ್ರಲಯೋದಕವು) ತಮಸ್ಸಿನಿಂದ ವ್ಯಾಪ್ತವಾಗಿ ಆ=ಇತ್ತು.) ಎನ್ನುವಲ್ಲಿ ಅಸೀತ್ ಎಂದು ಹೇಳುವ ಬದಲಿಗೆ ಆ =ಇತ್ಯಾದಿ ಊನವಾಗಿ ಹೇಳಿದ್ದಕ್ಕೆ ಅರ್ಥವು ಊನವಾಗಿದೆ ಎಂದರ್ಥವು, ವಿವಕ್ಷಿತವೆಂದು ತಿಳಿಯಬೇಕು.

(ಅಂದರೆ ಪ್ರಲಯ ಕಾಲದಲ್ಲಿರತಕ್ಕ ಪರಮಾತ್ಮನಿಗಿಂತ ನ್ಯೂನವಾಗಿತ್ತು, ಎಂದು ಶ್ರುತ್ಯರ್ಥವು) (೬) (ಸುಪ್‌ತಿಙ್ ವಿಕರಣ ಲಿಂಗ ಪುರುಷ ಕಾಲ ಹಲಚ್ ಸ್ವರ ಕೃತ್ತದ್ಧಿತ ಸಮಾಸ ಸನ್ಯಜಾದಿ ವ್ಯತ್ಯಯಸ್ತು ಸುಪ್‌ತಿಙ್, ವಿಕರಣ, ಪುಲ್ಲಿಂಗಾದಿಗಳು, ಪ್ರಥಮಪುರುಷಾದಿಗಳು, ಭೂತಾದಿಕಾಲವು, ಹಲ್‌ವರ್ಣ, ಅಜ್ವರ್ಣ, ಸ್ವರ, ಕೃತ್, ತದ್ಧಿತಮಾಸ, ಸನ್ನಂತ, ಯಜಾದಿಗಳು, ಇವುಗಳ ವ್ಯತ್ಯಾಸವಾದರೂ ಅಭೇದಕರಣ ಸ್ವಾತಂತ್ರ್ಯ ಎಂಬ ಅರ್ಥಗಳಲ್ಲಿದೆ ಎಂದು ತಿಳಿಯಬೇಕು. (೭) (ಅಭೇದವನ್ನು ಎಲ್ಲಿ ವ್ಯಾಖ್ಯಾನ ಮಾಡಬೇಕೆಂದರೆ) ಭಗವಂತನಿಂದ ಆತನ ರೂಪಗಳಿಗೂ ಗುಣಗಳಿಗೂ ಕ್ರಿಯೆಗಳಿಗೂ ಆತನ ಅವಯವಗಳಿಗೂ ಪರಸ್ಪರವಾಗಿ ಅಭೇದವೇ. (೮) ಲಕ್ಷ್ಮೀಬ್ರಹ್ಮಾದಿದೇವತೆಗಳಿಂದಲೂ ಮುಕ್ತರಿಂದಲೂ ಶ್ರೀ ಪರಮಾತ್ಮನಿಗೆ ಭೇದವು. ಶ್ರೀ ಹರಿಗೆ ಜಡಗಳಿಂದ ಭೇದವು ಸುತರಾಂ ಸಿದ್ಧವಾಗುತ್ತದೆ. ಇದೆಲ್ಲವೂ ಹಿಂದೆ ಹೇಳಿದ ಸೂತ್ರಗಳಿಂದ ಸಿದ್ಧವಾಗುವುದು ಮಾತ್ರವಲ್ಲ. ಮತ್ತೆ ಋಗ್ವೇದ ಸಂಹಿತೆಯಲ್ಲಿಯೂ ಹೇಳಿದ ಪ್ರಕಾರ ಅದರಿಂದಲೂ ಸಿದ್ಧವಾಗುತ್ತದೆ. ||೨೯||

ಅವ || ಸ್ಥಳಾಂತರಗಳಲ್ಲಿಯೂ ಅಭೇದವನ್ನು ತೋರಿಸುತ್ತಾರೆ.

**ಭಾ || (೧) ಅಭೇದಃ ಸ್ವಗುಣಾದ್ಯೈಶ್ಚ ಮುಕ್ತಾನಾಮಪಿ ಸರ್ವಶಃ । ಭೇದಾ ಭೇದಸ್ತು ಭೇದಶ್ಚ ಗುಣೈಃ ಸಂಸಾರಿಣಾಮಪಿ ||**
**(೨) ಜಡಾನಾಮಂಶತೋ ಭೇದಃ ಸಮುದಾಯೇನ ಚೋಭಯಂ । ಮನುಷ್ಯ ಗಂಧರ್ವ ಪಿತೃಗಣ ಕಾರ್ಮಿಕ ತಾತ್ವಿಕಾಃ । ದೇವಾಃ ಶಕ್ರಃ ಶಿವೋ ಬ್ರಹ್ಮಾಮುಕ್ತೌ ಸೌಖ್ಯಾದಿಭಿರ್ಗುಣೈಃ । ಶತಾಯುತೋತ್ತರಾ ನಿತ್ಯಮನ್ಯೋನ್ಯ ಪ್ರೀತಿಸಂಯುತಾಃ । ಇತಿ ಸಿದ್ಧಾಂತಗಂ ವಾಕ್ಯಂ ಸ್ವಯಂ ಭಗವತೇರಿತಂ । (೩) ಸ್ವಾಧ್ಯಾಯಸ್ತತ್ವವಿಜ್ಞಾನಂ ವಿಷ್ಣುಭಕ್ತಿರ್ವಿರಾಗತಾ । ನಿಷಿದ್ಧ ಕರ್ಮಸಂತ್ಯಾಗೋ ವಿಹಿತಸ್ಯ ಸದಾ ಕ್ರಿಯಾ । ಸದಾ ವಿಷ್ಣುಸ್ಮೃತಿಶ್ಚೈವ ಕೇವಲಂ ಮೋಕ್ಷಸಾಧನಂ । ಏತೈರ್ವಿನಾ ನ ಮೋಕ್ಷಃ ಸ್ಯಾತ್ ಭವೇದೇತೈರಪಿ ಧ್ರುವಂ ||೩೦||**

ಅ|| (೧) ಎಲ್ಲಾ ಮುಕ್ತರಿಗೂ ಸ್ವರೂಪಭೂತಗಳಾದ ಜ್ಞಾನಾದಿಗುಣಗಳಿಂದ ಅತ್ಯಂತಾಭೇದವು (ಯಾವ ಅಮುಕ್ತ ಕ್ರಿಯೆಗಳಿಗೆ ಮುಕ್ತಿಯಲ್ಲಿ ಉಚ್ಛೇದವು, (ನಾಶವು) ಭೇದಾಭೇದವು ಎಂದರೆ) ಚಿಂತನಾದಿಕ್ರಿಯಾಣಾಂತು ಮುಕ್ತಾವುಚ್ಛೇದತಸ್ಸದಾ। ಕಿಂ ಮಯಾ ಕಾರ್ಯಮಾದೀನಾಂ ಭೇದಾಭೇದ ಉದಾಹೃತಃ ಕಿಂ ಮಯಾ ಕಾರ್ಯಂ ಇತ್ಯೇವಮಾದಿರೂಪಗಳಾದ ಚಿಂತನಾದಿ ಕ್ರಿಯೆಗಳಿಗೆ ಮುಕ್ತಿಯಲ್ಲಿ ಉಚ್ಛೇದವಾಗುವುದರಿಂದ ಸಂಸಾರಿಗಳಿಗೆ ಸದಾ ಭೇದಾಭೇದವು. (ಅಂದರೆ ಕಿಂ ಮಯಾ ಕಾರ್ಯಂ ಇತ್ಯಾದಿ ರೂಪಗಳಾದ ಚಿಂತನಾದಿ ಕ್ರಿಯೆಗಳಿಂದ ಹುಟ್ಟತಕ್ಕ ನೀಚೋಚ್ಚತ್ವಾದಿಗಳು ಮುಕ್ತಿಯಲ್ಲಿ ಸರ್ವಥಾ ನಾಶಹೊಂದುತ್ತದೆ. ಕಾಮದಿಂದ ಸಂಸಾರದಲ್ಲಿ ಹುಟ್ಟುತ್ತವೆ. ಆದ ಕಾರಣ ಭೇದಾಭೇದವು.) ಸಂಸಾರಿಗಳಿಗೂ ಸ್ವರೂಪಭೂತಗಳಾದ ಜ್ಞಾನಾದಿ ಗುಣಗಳಿಂದ ಅಭೇದವು. ಮುಕ್ತರಿಗೆ ಹೀಗೆ ಅಲ್ಲ ಎಂದು ತಿಳಿಸುವುದಕ್ಕಾಗಿ ತು ಶಬ್ದವು (೨) ಜಡಗಳಾದ ಘಟಾದಿ ಅವಯವಗಳಿಗೆ ಒಂದೊಂದು ಅಂಶದಿಂದಲೂ ಸಂಸ್ಥಾನ ವಿಶೇಷ ರಹಿತವಾದ ಅಂಶ ಸಮುದಾಯದಿಂದಲೂ ಭೇದಾಭೇದಗಳು. ಸಂಸ್ಥಾನ ವಿಶೇಷ ವಿಶಿಷ್ಟಗಳಾದ ಸರ್ವಾಂಶಗಳಿಂದ ಅಭೇದವು. ಮನುಷ್ಯೋತ್ತಮರು, ಮನುಷ್ಯ ಗಂಧರ್ವರು, ದೇವ ಗಂಧರ್ವರು, ಪಿತೃದೇವತೆಗಳು, ಕರ್ಮದೇವತೆಗಳು, ತತ್ವಾಭಿಮಾನಿ ದೇವತೆಗಳು, ದೇವೇಂದ್ರನು, ರುದ್ರನು, ಬ್ರಹ್ಮನು - ಇವರು ಮುಕ್ತಿಯಲ್ಲಿ ಆನಂದಾದಿಗುಣಗಳಿಂದ ಕೆಲವರು (ಸರಸ್ವತ್ಯಾದಿಗಳು ರುದ್ರಾದಿ ದೇವತೆಗಳಿಗಿಂತ) ನೂರುಗುಣ ಹೆಚ್ಚುಳ್ಳವರು. ಬ್ರಹ್ಮಾದಿಗಳಾದರೂ ಆಯತ ಗುಣ

ಹೆಚ್ಚು ಉಳ್ಳವರು. ನಿತ್ಯದಲ್ಲಿಯೂ ಪರಸ್ಪರ ಪ್ರೀತಿಯುಳ್ಳವರು, ಎಂದು ಸಿದ್ಧಾಂತ ಎಂಬ ಗ್ರಂಥದಲ್ಲಿರತಕ್ಕ ವಾಕ್ಯವು ಸಾಕ್ಷಾತ್ ಪರಮಾತ್ಮನಿಂದ ಹೇಳಲ್ಪಟ್ಟಿದ್ದು. (೩) ಹೀಗೆ ಹಿಂದೆ ಹೇಳಿದ ಋಷಿ ಛ(ಶ್ರಿ)ದಸ್ಸು ದೇವತಾದಿ ಜ್ಞಾನಪೂರ್ವಕವಾಗಿ ವೇದಾಧ್ಯಯನಾದಿಗಳಿಗೆ ಫಲವನ್ನೂ ಫಲ ಆಗ ತಕ್ಕ ಪ್ರಕಾರವನ್ನೂ ಪ್ರಮಾಣಗಳಿಂದ ತೋರಿಸುತ್ತಾರೆ.) ವೇದಾಧ್ಯಯನವು, ತತ್ವವಿಜ್ಞಾನವು, ವಿಷ್ಣು ವಿಷಯಕ ಭಕ್ತಿಯು, ವೈರಾಗ್ಯವು, ಶಾಸ್ತ್ರನಿಷಿದ್ಧ ಕರ್ಮಗಳ ಪರಿತ್ಯಾಗವು ಶಾಸ್ತ್ರಗಳಲ್ಲಿ ವಿಹಿತಗಳಾದ ಕರ್ಮಗಳನ್ನು ಸದಾ ಮಾಡುವಿಕೆ, ಯಾವಾಗಲೂ ಭಗವಂತನ ಸ್ಮರಣೆಯು, ಇವುಗಳೇ ಮುಖ್ಯವಾಗಿ ಮುಕ್ತಿಗೆ ಸಾಧನಗಳು, ಸ್ವಾಧ್ಯಾಯಾದಿಗಳನ್ನು ಮಾಡದೆ ಮುಕ್ತಿಯು ಆಗಲಾರದು. ಇವುಗಳಿಂದಲೇ ನಿಶ್ಚಯವಾಗಿಯೂ ಮೋಕ್ಷವಾಗುವುದು.॥೩೦॥

**ಭಾ ॥ ಋಷಿ ಛಂದೋ ದೈವತಾನಿ ಜ್ಞಾತ್ವಾಽರ್ಥಂ ಚೈವ ಭಕ್ತಿತಃ । ಸ್ವಾಧ್ಯಾಯೇನೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥೩೧॥**

ಅ॥ (ಇದು ಪ್ರಮಾಣಾಂತರವು. ಆದ ಕಾರಣ ಪುನರುಕ್ತಿಯಿಲ್ಲ.) ವಿರಕ್ತನಾಗಿ ಸರ್ವದಾ ಭಗವದ್ವಿಷಯಕ ಸ್ಮರಣೆಯುಳ್ಳವನಿಗೆ ಋಷಿ ಛಂದಸ್ಸು ದೇವತೆಗಳನ್ನು ಅರ್ಥ (ಪ್ರಯೋಜನ)ವನ್ನು ಭಕ್ತಿಯಿಂದ ತಿಳಿದೇ ವೇದಾಧ್ಯನದಿಂದಲೇ ಮೋಕ್ಷವಾಗುವುದು. (ಛಂದಸ್ಸಿನ ಜ್ಞಾನಕ್ಕೆ ಫಲವಿದೆ, ಎಂದು ಹೇಳಿದುದರಿಂದ ಛಂದಸ್ಸಿನ ಜ್ಞಾನದಿಂದುಪಯೋಗವಿಲ್ಲವೆಂಬ ಮತವು ನಿರಾಕೃತವಾಯ್ತು.)

**ಭಾ ॥ ಜಪ್ಯೇನೈವ ತು ಸಂಸಿದ್ಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯಃ । ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥೩೨॥**

ಅ॥ ಬ್ರಾಹ್ಮಣನು, ಋಷಿ ಛಂದಸ್ಸು ದೇವತೆಗಳ ಜ್ಞಾನಪೂರ್ವಕವಾಗಿ ಜಪಿಸತಕ್ಕ ಮಂತ್ರದಿಂದಲೇ ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ಇತರ ಮಂತ್ರಗಳನ್ನು ಜಪಿಸಿದರೂ ಜಪಿಸದಿದ್ದರೂ ಮಿತ್ರ (ಸೂರ್ಯ) ದೇವತಾಕವಾದ ಗಾಯತ್ರೀ ಜಪದಿಂದಲೇ ಫಲವಿದ್ದ ಪ್ರಯುಕ್ತ ಗಾಯತ್ರೀ ಮಂತ್ರವನ್ನು ಜಪಿಸುವವರು ಬ್ರಾಹ್ಮಣರೆನಿಸುತ್ತಾರೆ. ( ಪ್ರಮಾಣಾಂತರವು) ॥೩೨॥

**ಭಾ ॥ ತಸ್ಮಾನ್ನಿತ್ಯಂ ಹರಿಂ ಧ್ಯಾಯನ್ ಕುರ್ಯಾತ್ಸ್ವಾಧ್ಯಾಯಮಂಜಸಾ । ಐಹಿಕಾ ಮುಷ್ಮಿಕಾ ಭೋಗಾ ರಕ್ತಸ್ಯಾನ್ಯಾಸ್ತು ಮುಚ್ಯತೇ ॥ ಇತಿ ಸ್ವಾಧ್ಯಾಯವಚನಂ ಸ್ವಯಂ ಭಗವತೋದಿತಂ ॥೩೩॥**

ಅ॥ (ತಸ್ಮಾದಿತ್ಯಾದಿ ವಾಕ್ಯವು ಸ್ವಾಧ್ಯಾಯಾಖ್ಯ ಗ್ರಂಥದಲ್ಲಿರತಕ್ಕ ವಾಕ್ಯವು) ಯಾವ ಕಾರಣದಿಂದ ಐಹಿಕ ಆಮುಷ್ಮಿಕ ಭೋಗಗಳು ಆ ಭೋಗಗಳಲ್ಲಿಯೇ ಆಸಕ್ತನಾದ ಕಾಮುಕನಿಗೆ ಆಗುತ್ತವೋ ಕಾಮುಕನಿಂದ ಭಿನ್ನನಾದವನು ಮುಕ್ತನಾಗುತ್ತಾನೋ ಆದುದರಿಂದ ನಿತ್ಯದಲ್ಲಿಯೂ ಶ್ರೀ ಹರಿಯನ್ನು ಧ್ಯಾನಿಸುತ್ತಾ ಚೆನ್ನಾಗಿ ವೇದಾಧ್ಯಯನವನ್ನು ಮಾಡಬೇಕು. ಹೀಗೆ ವೇದಾಧ್ಯಯನ ಮಾಡಬೇಕೆಂಬ ವಚನವು ಸಾಕ್ಷಾತ್ ಭಗವಂತನಿಂದಲೇ ಹೇಳಲ್ಪಟ್ಟಿದೆ. ॥೩೩॥

**ಭಾ ॥ (೧) ಸ್ವಾಧ್ಯಾಯಾತ್ತು ಪ್ರವಚನೇ ಸಹಸ್ರ ಗುಣಿತಂ ಫಲಂ । (೨) ಅರ್ಥದ್ರಷ್ಟುಃ ಕೋಟಿಗುಣಂ ತತೋಽನಂತಂ ನಿಯಾಮಕೇ ॥ (೩) ತರ್ಕಾಗಮಾಭ್ಯಾಂ ನಿಯತಿಂಯಃ ಕರೋತ್ಯಧಿಕಂ ತತಃ । (೪) ಪೂರ್ಣಂ ವೇದಾಖಿಲದ್ರಷ್ಟುರ್ಬ್ರಹ್ಮಣಃ ಫಲಮುಚ್ಯತೇ ॥೩೪॥**

ಅ॥ (೧) ಕೇವಲ ವೇದಪಾಟಕ್ಕಿಂತ (ಅರ್ಥಜ್ಞಾನವು ಅಧಿಕವಾದ ಪ್ರಯುಕ್ತ) ಪ್ರವಚನವನ್ನು (ಗುರುಗಳ ಮುಖದಿಂದ ಯಾವುದು ಶ್ರುತವಾಗಿದೆಯೋ ಹೇಗೆ ಶ್ರುತವಾಗಿದೆಯೋ ಅಷ್ಟು ಮಾತ್ರ ವ್ಯಾಖ್ಯಾನವನ್ನು) ಮಾಡಿದರೆ ಸಹಸ್ರ ಗುಣಿತ (ಹೆಚ್ಚು) ಫಲವು. ಗುರುಗಳ ಮುಖದಿಂದ ಹೇಗೆ ಶ್ರುತವಾಗಿದೆಯೋ ಅಷ್ಟು ಮಾತ್ರ ವ್ಯಾಖ್ಯಾನ ಮಾಡುವವನಿಗಿಂತಲೂ ತಾನಾಗಿಯೇ ಅರ್ಥದ್ರಷ್ಟ್ಯನಿಗೆ (ತನ್ನ ಬುದ್ಧಿ ಬಲದಿಂದಲೆ ಗುರು ಮೊದಲಾದವರು ಹೇಳದಿದ್ದ ಅರ್ಥವನ್ನು ತಾನಾಗಿಯೇ ತಿಳಿಯುವವನಿಗೆ) ಕೋಟಿ ಗುಣಿತವಾದ ಫಲವು. ಅರ್ಥ ದ್ರಷ್ಟೃವಿಗಿಂತಲೂ ನಿಯಾಮಕನಿಗೆ (ತಾನು ತಿಳಿದ ಅರ್ಥವನ್ನು ಇತರರಿಗೆ ಉಪದೇಶ ಮಾಡುವವನಿಗೆ) ಅನಂತ ಗುಣಿತವಾದ ಫಲವು. (೩) ಆಪ್ತಿಮಾತ್ರದಿಂದ ಉಪದೇಶಿಸುವವನಿಗಿಂತಲೂ ಯುಕ್ತಿ ಆಗಮಗಳಿಂದ ಉಪಪಾದನೆಯನ್ನು ಯಾರು ಮಾಡುತ್ತಾನೋ, ಆತನಿಗೆ ಹೆಚ್ಚು ಫಲವು. (೪) ಹೀಗೆ ಕೇವಲ ವೇದಾರ್ಥವನ್ನು ನೋಡುವವರಿಗೇನೇ ಮಹಾಫಲವಿದೆವೆಂದಾದ ಮೇಲೆ ಚತುರ್ಮುಖ ಬ್ರಹ್ಮನಿಗೆ ಪೂರ್ಣ ಫಲವಿದೆ ಎಂದು ಏನು ಹೇಳಬೇಕು. ಆದ ಕಾರಣ ನಿಖಿಲವೇದಗಳನ್ನೂ ಅವುಗಳ ಅರ್ಥವನ್ನೂ ಸರ್ವದಾ ನೋಡುತ್ತಿರುವ, ಮತ್ತು ಪರರಿಗೆ ಉಪದೇಶಿಸುತ್ತಿರುವ ಚತುರ್ಮುಖ ಬ್ರಹ್ಮನಿಗೇನೇ ಪೂರ್ಣಫಲವು ॥೩೪॥

ಅವ ॥ ವೇದಾರ್ಥ ಜ್ಞಾನಕ್ಕೆ ಮಹಾಫಲವಿದೆ ಎಂದುಕ್ತವಾಯ್ತು. ವೇದವು ಸ್ವರವರ್ಣಾತ್ಮಕವು. ಅದರಲ್ಲಿ ಸ್ವರಗಳು ನಿರರ್ಥಕಗಳು ಎಂದು ಕೆಲವರ ಮತವು. ಅದು ಅಯುಕ್ತವು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಭಾ ॥ (೧) ದಾರ್ಢ್ಯಮೇವಾನುದಾತ್ತಾರ್ಥ ಉದಾತ್ತಸ್ಯೋಚ್ಚತಾರ್ಥತಾ । ನೀಚತಾ ಸ್ವರಿತ ಸ್ಯಾರ್ಥ ಪ್ರಚಯಸ್ಯ ಯಥಾಸ್ಥಿತಿಃ**
**। ಸಮಾಹಾರೇಽಖಿಲಾ ಅರ್ಥಾ ಸ್ವರಾರ್ಥಾನಾ ಮಿ ಯಂ ಸ್ಥಿತಿಃ ॥೩೫॥**

ಅ॥ (೧) ಅನುದಾತ್ತ ಸ್ವರಸಹಿತ ವರ್ಣಗಳಿಗೆ ಯಾವುದು ಅರ್ಥವಿದೆಯೋ, ಅದಕ್ಕೆ ದಾರ್ಢ್ಯರೂಪ ಅರ್ಥವೆಂದು ತಿಳಿಯಬೇಕು. ಉದಾತ್ತ ಸ್ವರ ವಿಶಿಷ್ಟ ವರ್ಣಗಳ ಅರ್ಥವು ಉಚ್ಚತ್ವವು. ಉದಾತ್ತ ಶ್ರುತಿರೂಪ ಸ್ವರಿತಯುಕ್ತವಾದ ವರ್ಣಗಳ ಅರ್ಥವು ನೀಚತ್ವವು. ಪ್ರಚಯ ವಿಶಿಷ್ಟಗಳಾದ ವರ್ಣಗಳ ಅರ್ಥವು ವಿಕಾರವಿಲ್ಲದಿರುವಿಕೆ. (ದಾರ್ಢ್ಯದಿಂದ ಬೇರೆ) (ಪತಂಜಲಿ ಶಿಷ್ಯರು ಉದಾತ್ತಾದಿ ೭ ಸ್ವರಗಳನ್ನು ಅಂಗೀಕರಿಸಿರುವುದರಿಂದ ಸಮಾಹಾರವೆಂದರೆ ಸ್ವರವಿಶೇಷವು (ಉದಾತ್ತಾನುದಾತ್ತ ಸಮುದಾಯರೂಪವಾದ ಸ್ವರಿತ ಭೇದವು) ಎಂದು ಹೇಳಿರುವರು) ಆ ಸಮಾಹಾರಕ್ಕೆ ಎಲ್ಲಾ ಅರ್ಥಗಳೂ ಇವೆ. (ಪ್ರಕರಣಾದಿಗಳನ್ನು ನೋಡಿ ಆವಾವ ವಿಶೇಷಾರ್ಥಗಳನ್ನು ತೆಗೆದುಕೊಳ್ಳಬೇಕು.) ಅಥವಾ ಅನೇಕಾಕ್ಷರಗಳುಳ್ಳ ಪದದಲ್ಲಿ ಸ್ವರಗಳು ಒಟ್ಟಿಗೆ ಸೇರಿದಾಗ ಅಲ್ಲಿ ಎಲ್ಲಾ ಅರ್ಥಗಳನ್ನು ತಿಳಿಯಬೇಕು. ಹೀಗೆ ಸ್ವರಾರ್ಥಗಳ ಸ್ಥಿತಿಯು. (ಸಪ್ತಸ್ವರಗಳ ಉದಾಹರಣೆಗಳನ್ನು ಅನ್ಯತ್ರ ತಿಳಿದುಕೊಳ್ಳಬೇಕು.)

ಅವ ॥ ಹಾಗಾದರೆ ಅಲ್ಲಿ ವಿರೋಧವು ಬರುವುದು. ಒಂದು ಪದಕ್ಕೆ ಒಂದರ್ಥವಷ್ಟೆ. ಅಕ್ಷರಗಳು ಅನೇಕಗಳಿದ್ದ ಪ್ರಯುಕ್ತ ಸ್ವರಗಳು ಅನೇಕಗಳು. ಒಂದರ್ಥಕ್ಕೆ ಅನೇಕಾರ್ಥಗಳಿಂದ ವಿಶೇಷಣವು ಯುಕ್ತವಾಗಲಾರದು ಎಂದರೆ -

**ಭಾ ॥ (೧) ಸ್ತುತ್ಯಧರ್ಮಸ್ಯ ಭೇದೇನ ಪದಾದ್ಯಾದಿ ಸ್ವರೇ ಭಿದಾ ॥ (೨) ಸಾಧಾರಣೋ ವಿಧಿಸ್ತ್ವೇಷ ವಿಶೇಷೋ ಯತ್ರ ಯತ್ರ**
**ಚ॥ (೩) ಕ್ರಮಾದೇವ ತದನ್ಯೇಷಾಮೃಷ್ಯಾ ದೀನಾಂ ಸ್ವಯೋಗ್ಯತಃ ॥೩೬॥**

ಅ॥ (೧) ವಾಯೋ ಇದು ಮೊದಲಾದ ಒಂದೇ ಪದದಲ್ಲಿಯೂ, ವ, ಆಯು ಇದು ಮೊದಲಾದ ಅನೇಕ

ವರ್ಣಗಳಿಂದ ಸ್ತುತ್ಯಗಳಾದ (ವ ಶಬ್ದದಿಂದ ವಿಷ್ಣುವಿನಲ್ಲಿ ಬಲವೂ, ಆಯುಶಬ್ದದಿಂದ ಗಮನ ಕರ್ತೃತ್ವವೂ ಹೇಳಲ್ಪಡುತ್ತದೆ.) ಭಗವದ್ಧರ್ಮಗಳು ಅನೇಕಗಳಾಗಿರುವುದರಿಂದ ಆವಾವ ವಿಶೇಷಕ್ಕಾಗಿ ವಾಯೋ ಇತ್ಯಾದಿ ಪದಗಳ ಆದಿ ಮಧ್ಯ ಅಂತ ಸ್ವರಗಳಿಗೆ ಬೇರೆ ಬೇರೆ ಅರ್ಥವು ವಿರುದ್ಧವಲ್ಲ. (ಅಂದರೆ ವ ಶಬ್ದವು ಉದಾತ್ತವಾಗಿರುವುದರಿಂದ ಉಚ್ಚವಾದ ಬಲವೆಂದೂ ಆಯೋ ಎನ್ನುವುದು ಅನುದಾತ್ತವಾಗಿರುವ ಪ್ರಯುಕ್ತ ದಾರ್ಢ್ಯಾರ್ಥಕವಾದುದರಿಂದ ದೃಢಗಮನ ಕರ್ತೃತ್ವವೆಂದೂ ಅರ್ಥವಾಗುವುದು. ಆದ ಕಾರಣ ಒಂದೇ ಪದದಲ್ಲಿಯೂ ಅನೇಕ ಸ್ವರಾರ್ಥಗಳಿಗೆ ವಿರೋಧವಿಲ್ಲ) (೨) (ಹೀಗೆ ಹೇಳಿದ್ದಕ್ಕೆ ಸರ್ವತ್ರ ಒಂದೇ ರೀತಿಯೆಂದು ನಿಯಮವಿಲ್ಲ. ಮತ್ತೆ) ಇದು ಸ್ವರಾರ್ಥಗಳದ್ದು ಸಾಧಾರಣವಾದ ಪ್ರಕಾರವು. ಆದ ಕಾರಣ ಎಲ್ಲಿ ಎಲ್ಲಿ ವಿಶೇಷವು ಹೇಳಲ್ಪಡುತ್ತದೋ, ಅಲ್ಲಿ ಅಲ್ಲಿ ಹೇಳಲ್ಪಟ್ಟ ಆ ವಿಶೇಷವನ್ನು ಇಟ್ಟುಕೊಳ್ಳಬೇಕು. (ಅಂದರೆ ಯಾವ ಪದದಲ್ಲಿ ಭಗವದ್ಧರ್ಮಗಳಿಂದ ಅತಿರಿಕ್ತಗಳಾದ ಅವಯವಾರ್ಥಗಳು ಹೇಳಲ್ಪಡುತ್ತವೋ ಅಲ್ಲಿ ಅವಯವಾರ್ಥವಾಗಿ ಭಗವದ್ಧರ್ಮಗಳನ್ನೂ ಭಗವದ್ಧರ್ಮಾತಿರಿಕ್ತಗಳಾದ ಅರ್ಥಗಳನ್ನೂ ಇಟ್ಟುಕೊಳ್ಳಬೇಕು. ಹೇಗೆಂದರೆ - ಅಗ್ರ್ಯತ್ವ ಮಗ್ರ ನೇತೃತ್ವಂ ಎಂದು ಅಗ್ನಿಶಬ್ದದ ಅವಯವಾರ್ಥಗಳಾದ ಅಂಗನೇತೃತ್ವಾದಿಗಳು ಭಗವದ್ಧರ್ಮಗಳಿಂದ ಬೇರೆಯಾದವುಗಳನ್ನು ಹೇಳಿದುದರಿಂದ ಅಲ್ಲಿ ಅಗ್ ಎನ್ನುವುದು ದಾರ್ಢ್ಯಾರ್ಥವಾದ ಅನುದಾತ್ತವಾಗಿದೆ ನಿ ಎನ್ನುವುದು ಉಚ್ಚಾರ್ಥಕವಾದ ಉದಾತ್ತವಾಗಿದೆ. ಆದ ಕಾರಣ ದೃಢಗಳಾದ ಅಂಗಗಳಿಗೆ ಉತ್ಕೃಷ್ಟ ಪ್ರೇರಕನು ಎಂಬ ಸ್ವರಾರ್ಥದಿಂದ ಅನ್ವಯವಿದ್ದರೆ ವಿರೋಧವಿಲ್ಲ) (೩) (ಉತ್ತಮರಾದ ಋಷಿಗಳು ವಿಶೇಷಾರ್ಥಗಳನ್ನು ತಿಳಿಯುತ್ತಾರೆ) ಅವರಿಗಿಂತ ಇತರರಾದ ಋಷಿಗಳಿಗೆ ಯಾವ ಯಾವ ಅರ್ಥವು ನೋಡಲು ಯೋಗ್ಯವೋ, ಆವಾವ ಅರ್ಥವನ್ನೇ ಆವಾವ ಋಷಿಗಳು ಕಂಡದ್ದೆಂದು ತಿಳಿಯಬೇಕು. ವ್ಯತ್ಯಾಸವಾಗಿ ತಿಳಿಯಕೂಡದು. ಹೀಗೆಯೇ ಉತ್ತಮ ದೇವತೆಯಲ್ಲಿ ಸರ್ವ ವೇದೋಕ್ತಮಾಹಾತ್ಮ್ಯವೂ, ಇತರ ದೇವತೆಗಳಲ್ಲಿ ತತ್ತದ್ಯೋಗ್ಯತಾನುಸಾರವಾಗಿ ವೇದೋಕ್ತ ಮಾಹಾತ್ಮ್ಯವಿದೆ ಎಂದು ತಿಳಿಯತಕ್ಕುದು) ||೩೬||

ಅವ || ಯಥಾಯೋಗ್ಯವಾಗಿ ವೇದಾರ್ಥಗಳನ್ನು ವ್ಯಾಖ್ಯಾನ ಮಾಡಿದರೇನೇ ಹಿಂದೆ ಹೇಳಿದ ಫಲವು ಲಭಿಸುವುದು. ಇಲ್ಲವಾದರೆ ಲಭಿಸುವುದಿಲ್ಲ ಎನ್ನುತ್ತಾರೆ.

**ಭಾ | (೧) ವಿಪರ್ಯಯಾರ್ಥಕಥನೇ ವಿಪರೀತಂ ತಥಾ ತಮಃ || (೨) ಯಾವತ್ಪ್ರಯೋಜಕವೋ ಜ್ಞಾನೇ ತಾವತ್ತಾವಚ್ಚುಭಾಧಿಕಃ || ತಥೈವ ವಿಪರೀತೇಽಪಿ ಸ್ಮೃತೌ ಜ್ಞಾನೇಚ ತತ್ಸಮಂ || (೩) ತಮೋನಿರಯ ಮಾನುಷ್ಯ ಸ್ವರ್ಗಮೋಕ್ಷಾತಿರೇಕತಃ| ಯೋಗ್ಯತಾ ತಾರತಮ್ಯೇನ ಫಲಂ ಸರ್ವೇಷು ಚೋಚ್ಯತೇ | ಇತಿ ಪ್ರವೃತ್ತವಚನಂ ವಿವೇಕಃಸ್ಯೇತದೀರಿತಂ ||೩೭||**

ಅ|| (೧) ವ್ಯತ್ಯಾಸವಾಗಿ ವೇದಾರ್ಥಗಳನ್ನು ಹೇಳಿದರೆ ವಿಪರೀತವಾದ ಫಲವುಂಟಾಗುತ್ತದೆ. (ಯಾವುದೆಂದರೆ) ವಿಪರೀತ ಫಲವಾದುದು ಅಂಧಂತಮಸ್ಸು (೨) (ಸಿದ್ಧಾಂತಕ್ಕೆ ಅವಿರುದ್ಧ ವಿರುದ್ಧ ವ್ಯಾಖ್ಯಾನಗಳನ್ನು ಮಾಡಿದರೆ ಅವುಗಳು ಅವವುಗಳ ಅಧಿಕ್ಯಾನುಸಾರವಾಗಿ ಫಲಪ್ರದಗಳಾಗುತ್ತವೆ, ಎನ್ನುತ್ತಾರೆ) ಸುಜ್ಞಾನ ಉಂಟಾಗಲಿಕ್ಕೆ ಎಷ್ಟೆಷ್ಟು ಪ್ರಯೋಜಕವಿದೆಯೋ ವಿಪರೀತ ಜ್ಞಾನದಲ್ಲಿಯೂ ಯಥಾರ್ಥ ಸ್ಮೃತಿಯಲ್ಲಿಯೂ ವಿಪರೀತವಾದ ಸ್ಮೃತಿಯಲ್ಲಿಯೂ ಯಥಾಯೋಗ್ಯವಾಗಿ ಫಲವು, (೩) ಮೋಕ್ಷಾದಿಗಳು ಅವುಗಳ ಫಲವು, ಅವು ಏಕಪ್ರಕಾರವಾದುದು. (ವ್ಯತ್ಯಾಸವು ಹೇಗೆಂದರೆ) ತಮಸ್ಸು, ನರಕ, ಭೂಲೋಕ, ಸ್ವರ್ಗ, ಮೋಕ್ಷಗಳಿಗೆ, ತಾರತಮ್ಯವಿದ್ದುದರಿಂದ ಯೋಗ್ಯತಾ ತಾರತಮ್ಯವಾಗಿ ಹಿಂದೆ ಹೇಳಿದ ವ್ಯಾಖ್ಯಾತ್ರಾದಿಗಳಲ್ಲಿ ಫಲವು ಹೇಳಲ್ಪಡುತ್ತದೆ. ಹೀಗೆ ಸ್ವಾಧ್ಯಾಯಾತ್ತು ಪ್ರವಚನೇ ಇತ್ಯಾದಿಗಳು ಪ್ರವೃತ್ತವಚನವು.

ವಿವೇಕವೆಂಬ ಗ್ರಂಥದಲ್ಲಿಯೂ ಈ ಪ್ರಮೇಯವು ಹೇಳಲ್ಪಟ್ಟಿದೆ. ||೩೭||

ಅವ || ಹೀಗಾದರೆ ಯೋಗ್ಯ ಅಯೋಗ್ಯ ಅರ್ಥಗಳನ್ನು ವಿವೇಚಿಸಲಿಕ್ಕೆ ಅಶಕ್ಯವಾದುದರಿಂದ ವೇದ ವ್ಯಾಖ್ಯಾನವನ್ನೇ ಬಿಟ್ಟು ಬಿಡಬೇಕಾಗುವುದೆಂಬ ಅಶಂಕೆಯನ್ನು ಸ್ಮೃತಿಯಿಂದ ಪರಿಹರಿಸುತ್ತಾರೆ.

**ಭಾ|| (೧) ಯಾದೃಶೋ ಯೋಗ್ಯತಾಂ ಯಾಯಾತ್ಸ ಜ್ಞೇಯೋಽರ್ಥಸ್ತಥಾ ಸ್ಫುಟಂ | (೨) ಅನಂತ ನಿಯಮೈರ್ಯುಕ್ತಾ ಅನಂತಾರ್ಥ ವಿಶೇಷಿಣಃ || ವೇದಾ ಇತಿ ಸಮಾಸೇನ ನಿಯಮೋಽಯಂ ಸಮೀರಿತಃ || ಋಕ್ಸಂಹಿತಾಗತಂ ವಾಕ್ಯಮಿತಿಚಾನ್ಯನ್ನಿಯಾಮಕಂ || (೩) ತಸ್ಮಾದ್ವಂದ್ಯಾಶ್ಚ ಪೂಜ್ಯಾಶ್ಚ ಬ್ರಹ್ಮಾದ್ಯಾ ಜ್ಞಾನಯೋಜಕಾಃ || ಗುರುತ್ವೇನ ಕ್ರಮಾದೇವ ವಿಶೇಷೇಣೈವ ಕೇಶವಃ | (೪) ಆರಭ್ಯ ಸ್ವಗುರುಂ ಯಾವದ್ವಿಷ್ಣುರೇವೋತ್ತರೋತ್ತರಾಃ | ಕ್ರಮಾನ್ನಿಷ್ಫಲತಾಽನ್ಯತ್ರ ಗುರುತತ್ವೇ ಸಮೀರಿತಾ ||೩೮||**

ಅ|| (೧) ಯಾವ ಅರ್ಥವು ಯೋಗ್ಯತೆಯನ್ನು (ಅಂದರೆ ಪ್ರಮಾಣಗಳಿಂದೊಡಗೂಡುವಿಕೆ, ಪ್ರಮಾಣದಿಂದ ಬಾಧವಿಲ್ಲದಿರುವಿಕೆ, ಆ ವೇದ ವಾಕ್ಯ ಪ್ರತಿಪಾದ್ಯಗಳಾದ ಅರ್ಥಗಳಿಂದೊಡಗೂಡುವಿಕೆ, ಪರಸ್ಪರ ಸಂಬಂಧವಿರುವಿಕೆ, ಇವುಗಳನ್ನು) ಹೊಂದುವುದೋ, ಅಂತಹ ಅರ್ಥವು ಯೋಗ್ಯವೆಂತ ಸ್ಪಷ್ಟವಾಗಿ ತಿಳಿಯಬೇಕು. (೨) (ಹಾಗಾದರೆ ಹೀಗೆ ಸಂಕ್ಷೇಪವಾಗಿ ಏಕೆ ಹೇಳುವುದು? ಇಲ್ಲಿ ಇದು ಯೋಗ್ಯವಾದ ಅರ್ಥವು ಎಂದು ಪ್ರಪ್ರತ್ಯೇಕ ವಿಸ್ತಾರವಾಗಿಯೇ ಹೇಳಬಹುದಷ್ಟೆ ಎಂದರೆ) ವೇದಗಳು ವ್ಯಾಖ್ಯಾನ ಮೊದಲಾದ ಕರ್ತವ್ಯ ಬೋಧಕ ಅನಂತ ಪ್ರಕಾರಗಳಿಂದೊಡಗೂಡಿವೆ. ಅನಂತಾನಂತ ಅರ್ಥ ವಿಶೇಷಗಳುಳ್ಳವುಗಳು. ಹೀಗೆ ಸಂಕ್ಷೇಪವಾಗಿ ಯೋಗ್ಯಾಯೋಗ್ಯ ಅರ್ಥ ವ್ಯವಸ್ಥೆಯು ಹೇಳಲ್ಪಟ್ಟಿದೆ. ಹೀಗೆ ಋಕ್ಸಂಹಿತೆಯಲ್ಲಿರತಕ್ಕ ವಾಕ್ಯವು ವಿವಕ್ಷಿತವಾದ ಅರ್ಥವನ್ನು ಪ್ರತಿಪಾದಿಸತಕ್ಕುದು ಇನ್ನೊಂದು ಪ್ರಮಾಣವಿದೆ. (೩) (ಯಾವ ಕಾರಣದಿಂದ ಹೀಗೆ ಅಯೋಗ್ಯಾರ್ಥವನ್ನು ಹೇಳಿದರೆ ಮಹಾನರ್ಥವಿದೆಯೋ ಆದ ಕಾರಣ ಪ್ರಮಾದದಿಂದುಂಟಾದ ಅಪರಾಧವನ್ನು ಪರಿಹರಿಸುವುದಕ್ಕಾಗಿ ಪ್ರಾಚೀನರಾದ ವ್ಯಾಖ್ಯಾತೃಗಳ ವಂದನಾದಿಗಳನ್ನು ಮಾಡಲೇಬೇಕೆನ್ನುತ್ತಾರೆ) ಆದ ಕಾರಣ ಜ್ಞಾನದಾಯಕರಾದ ಬ್ರಹ್ಮಾದಿಗಳನ್ನು ಕ್ರಮವಾಗಿಯೇ ಗುರುಗಳೆಂದು ನಮಸ್ಕರಿಸಬೇಕು. ಪೂಜಿಸಬೇಕು. ಸರ್ವರಿಗಿಂತಲೂ ವಿಶೇಷವಾಗಿಯೇ ಶ್ರೀ ಹರಿಯು ವಂದ್ಯನೂ ಪೂಜ್ಯನೂ ಆಗಿರುತ್ತಾನೆ. (೪) ತನ್ನ ಗುರುವನ್ನಾರಂಭಿಸಿ ಶ್ರೀ ವಿಷ್ಣುಪರ್ಯಂತವಾಗಿಯೇ ಉತ್ತಮೋತ್ತಮರು ತಾರತಮ್ಯ ಕ್ರಮವಾಗಿಯೇ ನಮ್ಯರೂ ಪೂಜ್ಯರೂ ಆಗಿರುತ್ತಾರೆ. ಇಲ್ಲವಾದರೆ ಫಲವಿಲ್ಲವೆಂದು ಮಾತ್ರವಲ್ಲ, ಮತ್ತೆ ವಿರುದ್ಧ ಅನರ್ಥಫಲವೂ ಲಭಿಸುವುದು, ಎಂದು ಗುರುತತ್ವವೆಂಬ ಗ್ರಂಥದಲ್ಲಿಯೂ ಹೇಳಲ್ಪಟ್ಟಿದೆ ||೩೮||

ಅವ|| ಪರರು ಹೇಳಿರುವ ಅಗ್ನ್ಯಾದಿ ದೇವತೆಗಳೂ ಮಧುಛಂದಃ ಮೊದಲಾದ ಋಷಿಗಳೂ ಅಂಗೀಕಾರಾರ್ಹರಾಗುವರೋ ಇಲ್ಲವೋ ಎಂಬ ಅಶಂಕೆಯನ್ನು ಪರಿಹರಿಸುತ್ತಾ ಮೊದಲನೆಯ ೧೦೦ ಋಕ್ಕುಗಳಿಗೆ ದೇವತೆಯನ್ನೂ ಅವಾಂತರಋಷಿಯನ್ನೂ ಹೇಳುತ್ತಾರೆ.

**ಭಾ || ಏವಂ ಸ್ಥಿತೇಽಗ್ನಿಗಂ ವಿಷ್ಣುಮಗ್ನಿನಾಮಾನಮೇವ ಚ | ಮಧುಚ್ಛಂದಾ ಋಕ್ಯ್ತೇನ ವಾಯ್ವಾದಿಗತಮೇವ ಚ | ಸಾಗ್ನ್ಯಾದಿಂ ಸ್ತೌತಿ ಸದ್ಭಕ್ತ್ಯಾ ತತ್ತನ್ನಾಮಾನ ಮೇವ ಚ ||೩೯||**

ಅ|| ಹೀಗೆ ಪ್ರಮಾಣಗಳಿಂದ ನಿಶ್ಚಿತವಾಗುತ್ತಿರಲು ಅಗ್ನಿಯಲ್ಲಿ ನಿಯಾಮಕನಾಗಿರತಕ್ಕ ಶ್ರೀ ವಿಷ್ಣುವನ್ನು ಅಗ್ನಿನಾಮಕನನ್ನಾಗಿಯೂ ಹಾಗೆಯೇ ವಾಯು ಇಂದ್ರ ಮೊದಲಾದವರಲ್ಲಿರತಕ್ಕ, ಅಗ್ನಿ ವಾಯು ಇತ್ಯಾದಿಗಳಿಂದ ಕೂಡಿರುವ ಶ್ರೀ ವಿಷ್ಣುವನ್ನು, ವಾಯು ಇಂದ್ರ ಮೊದಲಾದ ಆವಾವ ನಾಮವುಳ್ಳವನನ್ನಾಗಿಯೂ ಮಧುಚ್ಛಂದರೆಂಬ ಋಷಿಗಳು ೧೦೦ ಋಕ್ಕುಗಳಿಂದ ಸಮೀಚೀನಭಕ್ತಿಯಿಂದ ಸ್ತುತಿಸುತ್ತಾರೆ. (ಅಂದರೆ ಅಗ್ನಿ ವಾಯು ಇತ್ಯಾದಿಗಳಲ್ಲಿ ಅಂತರ್ಗತನಾದ ಶ್ರೀ ಹರಿಯನ್ನು ಅಗ್ನಿ ವಾಯು ಇತ್ಯಾದಿ ನಾಮವುಳ್ಳವನನ್ನಾಗಿಯೂ, ಹಾಗೆಯೇ ಅಧಿಷ್ಠಾನವಾದ ಪ್ರಸಿದ್ಧ ಅಗ್ನಿ ವಾಯು ಇತ್ಯಾದಿಗಳನ್ನು ಸ್ತುತಿಸುತ್ತಾರೆ.) ||೩೯||

ಅವ || ಹೀಗೆ ಅಗ್ನಿಮೀಳೇ ಮೊದಲಾದ ೯ ಋಕ್ಕುಗಳುಳ್ಳ ಅಗ್ನೇಯ ಸೂಕ್ತವನ್ನು ವ್ಯಾಖ್ಯಾನ ಮಾಡಿ ಅದಕ್ಕೆ ಉಪಯುಕ್ತವಾದ ಪ್ರಮೇಯವನ್ನು ಹೇಳಿ ಈಗ ವಾಯುವಾಯಾಹಿ ಇತ್ಯಾದಿ ೯ ಋಕ್ಕುಗಳುಳ್ಳ ಸೂಕ್ತವನ್ನು ವ್ಯಾಖ್ಯಾನ ಮಾಡುತ್ತಾರೆ. ಅದರಲ್ಲಿ ಆದಿಯ ೩ ಋಕ್ಕುಗಳು ವಾಯುದೇವತಾಕಗಳು. ೨ನೇ ೩ ಋಕ್ಕುಗಳು ಇಂದ್ರ ವಾಯು ದೇವತಾಕಗಳು. ೩ನೇ ೩ ಋಕ್ಕುಗಳು ಮಿತ್ರ ವರುಣ ದೇವತಾಕಗಳು. ಅದರಲ್ಲಿ ವಾಯು ಮೊದಲಾದ ಶಬ್ದಗಳಿಗೆ ಶ್ರೀ ವಿಷ್ಣುವಿನಲ್ಲಿ ಮಹಾಯೋಗ ವಿದ್ವದ್ರೂಢಿಗಳಿಂದ ಪರಮಮುಖ್ಯ ವೃತ್ತಿಯು. ವಾಯು ಮೊದಲಾದ ಪ್ರಸಿದ್ಧ ದೇವತೆಗಳಲ್ಲಿ ಆದರೂ ಮುಖ್ಯ ವೃತ್ತಿಯು. ಯೋಗವೆಂದರೆ ಅವಯವ ಶಕ್ತಿಯಿಂದ ಅರ್ಥವನ್ನು ತಿಳಿಸಿಕೊಡುವಿಕೆಯು

ಋ || (೧೦) ವಾಯುವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ । ತೇಷಾಂ ಪಾಹಿ ಶ್ರುಧೀ ಹವಂ ||೧||

ಅ|| ದರ್ಶತ = (ದಶಿರ್ ಪ್ರೇಕ್ಷಣೇ) ಸರ್ವಜ್ಞನಾದ ವಾಯೋ =ಬಲರೂಪನೂ ಸರ್ವಾಶ್ರಯನೂ ಆದ ವಾಯುವೇ ಆಯಾಹಿ = ಆಧ್ಯಾತ್ಮಯಜ್ಞವನ್ನು ಕುರಿತು ಮತ್ತು ಬಾಹ್ಯವಾದ ಯಜ್ಞವನ್ನು ಕುರಿತು ಬಾ. (ಬರಬೇಕೆಂದು ಏಕೆ ಪ್ರಾರ್ಥಿಸುವುದೆಂದರೆ) ಇಮೇ ಸೋಮಾಃ ಅರಂಕೃತಾಃ =ಅಧ್ಯಾತ್ಮದಲ್ಲಿ ಮನೋವ್ಯಾಪಾರಗಳು ಭಕ್ತ್ಯಾದಿಗಳಿಂದ ಅಲಂಕೃತಗಳಾಗಿವೆ. ಬಾಹ್ಯಯಜ್ಞದಲ್ಲಿ ಈ ಪ್ರಸಿದ್ಧ ಸೋಮಗಳು ಹಿರಣ್ಯದಿಂದ ಅಲಂಕೃತಗಳಾಗಿವೆ. ತೇಷಾಂ ಪಾಹಿ = ಅಧ್ಯಾತ್ಮದಲ್ಲಿ ಮನೋ ವ್ಯಾಪಾರಗಳನ್ನು ಕುಡಿ. (ಅಂದರೆ ಪ್ರೀತಿಯುಕ್ತಗಳನ್ನಾಗಿ ಮಾಡು.) ಬಾಹ್ಯಯಜ್ಞದಲ್ಲಿ ನಿನ್ನದ್ವೇ ಆದ ಸೋಮಗಳನ್ನು ಕುಡಿ (ಅಂದರೆ ಅಪ್ರಾಕೃತ ದಿವ್ಯ ದೇಶ ಇಂದ್ರಿಯಗಳಿಂದ ಕೂಡಿರುವುದರಿಂದ ಸಾರಗಳನ್ನು ಭೋಗಿಸು). ಹವಂ=ನಿನ್ನ ಆಹ್ವಾನವನ್ನು ಶ್ರುಧಿ=ಕೇಳು. (ಆಗಮನದಿಂದ ಆಹ್ವಾನಶ್ರವಣವನ್ನು ಸಫಲವನ್ನಾಗಿ ಮಾಡು. ಅಂದರೆ - ಆಹ್ವಾನವನ್ನು ಕೇಳು. ಕೇಳಿದ ಮೇಲೆ ಬಾ. ಬಂದು ಸೋಮವನ್ನು ಕುಡಿ) ||೧||

ಭಾ || (೧) ಬಲತ್ವಾದಯನಾಚ್ಚೈವ ವಾಯುರಿತ್ಯಭಿಧೀಯತೇ (೨) ವಾತ್ಯಾಯುರಿತಿ ವಾಜ್ಞಾನಾದ್ವರಣಾದಾಶ್ರಯತ್ವತಃ || (೩) ವಯ ಬಂಧನ ಇತ್ಯಸ್ಮಾತ್ಸಂಸಾರದೇರ್ವ್ಯಯಾದಪಿ । (೪) ವ್ಯೇತ್ಯಸ್ಮಿನ್ನಿತಿ ವಾ ವಾಯುರ್ವಯ ಶ್ರೇಷ್ಠತ್ವ ಇತ್ಯಪಿ। (೫) ಮುಖ್ಯತೋ ವಾಸುದೇವೇ ತೇ ಗುಣಾಃ ಸಂತ್ಯೇವ ಸರ್ವಶಃ । ಅನಿಷಿದ್ಧಾಸ್ತದನ್ಯೇಷು ಯಥಾಯೋಗ್ಯತಯಾ ಮತಾಃ ||೧||

ಅ|| (೧) (ನಪುಂಸಕೇ ಬಲೇ ವಂ ಸ್ಯಾತ್ ಎಂಬ ಕೋಶದಿಂದ ವಃ=ಬಲರೂಪನು, ಏತೀತ್ಯಾಯುಃ =ಗಮನಕರ್ತನು,

ವಕ್ಷಾಸೌಅಯುಶ್ಚವಾಯುಃ), ಬಲಾತ್ಮಾಕನಾದುದರಿಂದಲೂ ಗಮನಾಶ್ರಯನಾದುದರಿಂದಲೂ ವಾಯುಃ ಎನಿಸಿಕೊಳ್ಳುತ್ತಾನೆ. (೨) ಅಥವಾ ವಾತಿ ಗಚ್ಛತೀತಿ ವಃ = ಗಮನಾಶ್ರಯನು, ಆಯುಃ=ಜಗತ್ತಿಗೆ ಆಯುಷ್ಯವನ್ನು ಕೊಡುವವನು, ಅಂದರೆ ಜಗತ್ತಿನ ಪ್ರಾಣಧಾರಣಕ್ಕೆ ಕಾರಣನಾದವನು, ವಕ್ಷ್ಯಾಸೌ ಆಯುಶ್ಚ ವಾಯುಃ =ಅಥವಾ ವಾತೀತಿ ; ವಾಯುಃ =ಜ್ಞಾನೋತ್ಪಾದಕನಾದುದರಿಂದ ವಾಯುಃ ಎನಿಸುತ್ತಾನೆ. ಅಥವಾ ವೃಣೋತಿ ವ್ರಿಯತೇ ಇತಿ ವಾ ಭಕ್ತರೆಂದು ಸ್ವೀಕರಿಸುವುದರಿಂದಲೂ ಭಕ್ತರಿಂದ ಸ್ವೀಕರಿಸಲ್ಪಡುವುದರಿಂದಲೂ ವಾಯುಃ ಎನಿಸುತ್ತಾನೆ. ಅಥವಾ ವಾಂತಿ, ಗಚ್ಛಂತಿ ಪ್ರವರ್ತಂತೇ ಆಸ್ಮಿನ್ ಎಂಬ ವ್ಯುತ್ಪತ್ತಿಯಿಂದ ಸರ್ವರಿಗೂ ಆಶ್ರಯನಾದುದರಿಂದ ವಾಯು=ಎನಿಸುತ್ತಾನೆ. (೩) ವಯ ಬಂಧನೇ ಎನ್ನುವ ಧಾತುವಿನಿಂದ, ವಯತೀತಿ ವಾಯುಃ, ಭವ ಪಾಶದಿಂದ ಬಂಧಿಸುವುದರಿಂದ ವಾಯುಃ, ಎನಿಸುತ್ತಾನೆ. ಅಥವಾ ವ್ಯಯತೇ ವಿನಶ್ಯತ್ಯನೇನ ಎಂಬ ವ್ಯುತ್ಪತ್ತಿಯಿಂದ ಸಂಸಾರಾದಿಗಳನ್ನು ವಿನಾಶಗೊಳಿಸುವುದರಿಂದ ವಾಯುಃ ಎನಿಸುತ್ತಾನೆ. (೪) ವ್ಯೇತಿ ಅಸ್ಮಿನ್=ಈತನಲ್ಲಿ ಲಯ ಹೊಂದುವ ಪ್ರಯುಕ್ತವೂ ವಾಯುಃ ಎನಿಸುತ್ತಾನೆ. ಅಥವಾ ವಯ ಶ್ರೇಷ್ಠತ್ವೇ ಎನ್ನುವ ಧಾತುವಿನಿಂದ ವಯತೀತಿ ಶ್ರೇಷ್ಠನಾದ ಪ್ರಯುಕ್ತವೂ (ಅಂದರೆ ಶ್ರೇಷ್ಠತ್ವೋಪಯೋಗಿ ಭಕ್ತ ಸಂರಕ್ಷಣಾದಿರೂಪವ್ಯಾಪಾರವಿದ್ದುದರಿಂದಲೂ) ವಾಯುಃ ಎನಿಸುತ್ತಾನೆ. (೫) (ಭಗವಂತನಲ್ಲಿ ಹೇಗೋ ಹಾಗೆಯೇ ಇತರ ದೇವತೆಗಳಲ್ಲಿಯೂ ಈ ವ್ಯಾಖ್ಯಾನವನ್ನು ತಿಳಿಯಬೇಕೋ ಎಂದರೆ) ಪರಮಮುಖ್ಯವೃತ್ತಿಯಿಂದ ಆ ಎಲ್ಲಾ ಗುಣಗಳೂ ಶ್ರೀ ವಾಸುದೇವನಲ್ಲಿಯೇ ಇರುತ್ತವೆ. ಯಾವುವು ಶ್ರೀ ಪರಮಾತ್ಮನಿಗೆ ಲಕ್ಷಣಗಳಾಗುವುದಿಲ್ಲವೋ, ಅಂತಹುಗಳೂ ಶ್ರೀ ಪರಮಾತ್ಮನಿಗಿಂತ ಇತರರಾದವರಲ್ಲಿ ಯಥಾಯೋಗ್ಯಗಳಾಗಿಯೇ ಇರುತ್ತವೆ. (ನಿರತಿಶಯಗಳಾದವುಗಳಲ್ಲ. ಏಕೆಂದರೆ ನಿರತಿಶಯಜ್ಞಾನ ಆನಂದಾದಿಗಳು ಭಗವಂತನ ಲಕ್ಷಣಗಳಾಗಿವೆ.) ||೧||

**ಭಾ || (೧) ದರ್ಶತಸ್ತ್ವದೃಷ್ಟಿತ್ವಾತ್ಸರ್ವಜ್ಞೋಽಸೌ ಯತ್ತೋ ವಿಭುಃ || (೨) ಭಕ್ಷ್ಯಾದ್ಯಲಂಕೃತಾಃ ಸೋಮಾ ಮನಾಂಸ್ಯನ್ಯೇ ಹಿರಣ್ಯತಃ | ಹಿರಣ್ಯಾಲಂಕೃತಾ ಯಸ್ಮಾದ್ಧೂಯಂತೇ ವಾಯವೇ ಸುತಾಃ ||೩|| ತಾನ್ಪಾಹಿ ಶ್ರುಧಿ ಚಾಹ್ವಾನಂ ಸ್ವಾತಂತ್ರ್ಯೇ ವ್ಯತ್ಯಯೋಽಪ್ಯಯಂ || (೪) ಮನೋಽಪಿ ಭೋಗ್ಯಮೀಶಸ್ಯ ಪ್ರೀತಿಮಾತ್ರೇಣ ಕೇವಲಂ || (೫) ಗುಣಾಧಿಕ್ಯಂ ಯೇನ ಭವೇದ್ವೇದಸ್ಯಾರ್ಥ ಸ ಏವ ಹಿ | ಪ್ರಯೋಜಕತ್ವಾನ್ನಾನ್ಯಸ್ಯ ಫಲಾಭಾವಾತ್ತದರ್ಥತಾ || (೬) ಉಪಕ್ರಮಾದಯೋ ಯತ್ರ ತಾತ್ಪರ್ಯಾರ್ಥಸ್ಸ ಏವ ಹಿ ||೧||**

ಅ|| (೧) ಯಾವ ಕಾರಣದಿಂದ ಈ ಶ್ರೀ ಹರಿಯು ಸರ್ವತ್ರ ವ್ಯಾಪ್ತವಾದ ದೃಷ್ಟಿಯಿರುವುದರಿಂದ ಸರ್ವಜ್ಞನಾಗಿರುತ್ತಾನೋ, ಆದ ಕಾರಣ ದರ್ಶತಃ = ಜ್ಞಾನದಿಂದ ವ್ಯಾಪ್ತನು. (೨) ಅಧ್ಯಾತ್ಮದಲ್ಲಿ ಮನಸ್ಸಿನ ವ್ಯಾಪಾರಗಳು ಭಕ್ಷ್ಯಾದಿಗಳಿಂದ ಅಲಂಕೃತಗಳಾಗಿವೆ. ಪ್ರಸಿದ್ಧ ಬಾಹ್ಯ ಯಜ್ಞದಲ್ಲಿ ಇತರಗಳಾದ (ಒಹಿಷ್ಯಗಳಾದ) ಈ ಪ್ರಸಿದ್ಧ ಸೋಮಗಳು ಹಿರಣ್ಯದಿಂದ. ಅಂದರೆ ಹಿರಣ್ಯದಿಂದ ಅಲಂಕೃತಗಳಾಗಿವೆ. ಯಾವ ಕಾರಣದಿಂದ ಸೋಮಗಳು ಹೋಮಿಸಲ್ಪಡುತ್ತವೋ. (೩) (ಆ ಸೋಮಗಳ ರಸವನ್ನು ಕುಡಿ. ನಿನ್ನ ಆಹ್ವಾನವನ್ನು ಕೇಳು. (ತಾನ್ ಎಂದು ಹೇಳದೆ ತೇಷಾಂ ಎಂದು ವಿಭಕ್ತಿ ವ್ಯತ್ಯಾಸವಾಗಿ ಹೇಳಲು ಕಾರಣವೇನೆಂದರೆ) ತೇಷಾಂ ಎಂದು ವಿಭಕ್ತಿ ವ್ಯತ್ಯಾಸವಾಗಿ ಹೇಳಿದುದು ಸ್ವಾತಂತ್ರ್ಯವೆಂಬ ಅರ್ಥದಲ್ಲಿ. (ತಥಾಚ ನಿನ್ನದ್ದೇ ಆದ ಸೋಮಗಳನ್ನು ನೀನು ಕುಡಿ ಎಂದರ್ಥವು.) (ವ್ಯತ್ಯಯೋಽಪ್ಯಯಂ ಎಂಬಲ್ಲಿದ್ದ ಅಪಿಪದವು ಸಂಹಿತಾಯಾಂ ಯತ್ರದೈರ್ಘ್ಯಂ ಪದಕಾಲೇ ನ ವಿದ್ಯತೇ | ಉಕ್ತಾರ್ಥಸ್ಯ ಮಹಾಧಿಕ್ಯಂ ಶ್ರುತೇಸ್ತತ್ರ ವಿವಕ್ಷಿತಂ|| ಎಂಬ ಪ್ರಮಾಣದಿಂದ ಶ್ರುಧಿ ಎಂದು ಹೇಳದೆ ಸಂಹಿತೆಯಲ್ಲಿ ಶ್ರುಧೀ ಎಂದು ದೀರ್ಘ ಹೇಳಿದ್ದೂ ಉಕ್ತವಾದ ಅರ್ಥಕ್ಕೆ

ಆಧಿಕ್ಯವನ್ನು ತಿಳಿಸುವುದು.) (೪) (ಆಧ್ಯಾತ್ಮದಲ್ಲಿ ಮನಸ್ಸು ಸೋಮವಲ್ಲವೆಂದಾದರೆ ಮನಸ್ಸಿಗೆ ಪಾನವು ಹೇಗೆ ಕೂಡುತ್ತದೆಂದರೆ) ಶ್ರೀ ಹರಿಗೆ ಕೇವಲ ಪ್ರೀತಿ ಮಾತ್ರದಿಂದಲೇ ಮನಸ್ಸೂ (ಪ್ರೀತಿಯುಕ್ತ ಮನೋವ್ಯಾಪಾರಗಳು) ಭೋಗ್ಯವಾಗುತ್ತವೆ. (೫) (ತೇಷಾಂ ಪಾಹಿ ಎನ್ನುವಲ್ಲಿ ತಾನ್ ಪಾಹಿ ಎಂದು ವಿಭಕ್ತಿ ವ್ಯತ್ಯಾಸವನ್ನು ಅಂಗೀಕರಿಸಿ ಸ್ವಾತಂತ್ರ್ಯರೂಪ ಅರ್ಥದಲ್ಲಿ ವ್ಯಾಖ್ಯಾನ ಮಾಡುವುದಕ್ಕಿಂತಲೂ ಸೋಮಗಳ ರಸವನ್ನು ಪಾನಮಾಡು ಎಂಬ ವ್ಯಾಖ್ಯಾನವೇ ಶ್ರೇಷ್ಠವು, ಎಂದರೆ ಸಮಾಧಾನ ಹೇಳುತ್ತಾರೆ.) ಯಾವ ಅರ್ಥವನ್ನು ವ್ಯಾಖ್ಯಾನ ಮಾಡಿದರೆ ಗುಣಾಧಿಕ್ಯವು ದೇವತೆಯಲ್ಲಿ ಜ್ಞಾಪಿತವಾಗುತ್ತದೋ, ಫಲವಿದ್ದುದರಿಂದ ವೇದಕ್ಕೆ ಆ ಅರ್ಥವೇ ಆಗುವುದು. ಗುಣಾಧಿಕ್ಯಕ್ಕೆ ವಿರೋಧಿಯಾದ ಅರ್ಥಕ್ಕೆ ಫಲವಿದ್ದುದರಿಂದ ಅದು ವೇದಾರ್ಥವಾಗುವುದೇ ಇಲ್ಲ. (ಅಂದರೆ ಶ್ರೀ ಹರಿಗೆ ಗುಣಾಧಿಕ್ಯವಿದೆ ಎಂದು ತಿಳಿದರೇನೇ ಆತನು ಫಲವನ್ನು ಕೊಡುತ್ತಾನೆ. ವಿಭಕ್ತಿ ವ್ಯತ್ಯಾಸವಿದ್ದರೇನೇ ಗುಣಾಧಿಕ್ಯವು ಲಭಿಸುತ್ತದೆ.) (೬) (ಫಲವಿದ್ದರೂ ಈ ಅರ್ಥವೇ ಆಗಬೇಕು ಎಂಬಲ್ಲಿ ನಿಯಾಮಕವೇನು ಎಂದರೆ) ಎಲ್ಲಿ ಯಾವ ಅರ್ಥಕ್ಕೆ ಉಪಕ್ರಮಾದಿಗಳು ಅನುಕೂಲವಾಗಿವೆಯೋ ಅದೇವೇ ತಾತ್ಪರ್ಯಾರ್ಥವು. (ಅಂದರೆ ಉಪಕ್ರಮಾದಿಗಳು ತಾತ್ಪರ್ಯಾರ್ಥಕ್ಕೆ ನಿರ್ಣಾಯಕಗಳಷ್ಟೆ. ತಾತ್ಪರ್ಯಾರ್ಥವನ್ನು ತಿಳಿದರೇನೇ ಸ್ವರ್ಗಾದಿಸರ್ವಫಲಗಳಿಗಿಂತ ಅಧಿಕವಾದ ಮೋಕ್ಷರೂಪ ಫಲವು ಆಗುತ್ತದೆ.) (ಅಥವಾ ಉಪಕ್ರಮಾದಿಗಳಲ್ಲಿ ಉತ್ತರೋತ್ತರವು ಪ್ರಬಲವಾಗಿರುವುದರಿಂದ ಫಲವತ್ತ್ವರೂಪವಾದ ತಾತ್ಪರ್ಯಲಿಂಗವು ಉಪಕ್ರಮಾದಿಗಳು ಎಲ್ಲಕ್ಕಿಂತಲೂ ಶ್ರೇಷ್ಠವು) ॥೧॥

ಋ ॥ (೧೧) ವಾಯ ಉಕ್ಥೇಭಿರ್ಜರಂತೇ ತ್ವಾಮಚ್ಛಾಜರಿತಾರಃ । ಸುತ ಸೋಮಾ ಅಹರ್ವಿದಃ ॥೨॥

ಅ ॥ ವಾಯೋ=ಎಲೋ ವಾಯುವೇ, ಸುತಸೋಮಾಃ = ಸೋಮಗಳನ್ನು ಭೇದಿಸಿರುವ, ಅಚ್ಛ ಅಹರ್ವಿದಃ = (ಯಾವ ದಿನದಲ್ಲಿ ಸೋಮವನ್ನು ಹಿಂಡುತ್ತೇವೋ ಆ ದಿನಕ್ಕೆ ಅಹಃ ಎಂದು ಹೆಸರು. ಅದರಿಂದ ಯಜ್ಞವನ್ನು ಇಟ್ಟುಕೊಳ್ಳಬೇಕು.) ಸುತ್ತಮುತ್ತಲೂ ಯೋಗ್ಯ ರೀತಿಯಿಂದ ಯಜ್ಞಗಳನ್ನು ತಿಳಿದಿರುವ, ಜರಿತಾರಃ=ಸ್ತೋತೃಗಳು, ಉಕ್ಥೇಭಿಃ = ಶಸ್ತ್ರಗಳಿಂದ, ತ್ವಾಂ=ನಿನ್ನನ್ನು, ಜರಂತೇ=ಸ್ತುತಿಸುತ್ತಾರೆ. ॥೨॥

ಭಾ ॥ ಸ್ತುವಂತಿ ಶಸ್ತ್ರೈಃ ಸ್ತೋತಾರೋ ಯಥಾವದ್ಯಜ್ಞವೇದಿನಃ ॥೨॥

ಅ॥ ಯಥಾಯೋಗ್ಯವಾಗಿ ಯಜ್ಞಗಳನ್ನು ತಿಳಿದಿರುವ ಸ್ತೋತೃಗಳು ಶಸ್ತ್ರ ಮಂತ್ರಗಳಿಂದ ಸ್ತುತಿಸುತ್ತಾರೆ. ॥೨॥

ಋ॥ (೧೨) ವಾಯೋ ತವ ಪ್ರಪೃಂಚತೀ ಧೇನಾ ಜಿಗಾತಿ ದಾಶುಷೇ ಉರೂಚೀ ಸೋಮ ಪೀತಯೇ ॥೩॥

ಅ॥ ವಾಯೋ=ಎಲೋ ವಾಯುವೇ, ತವ=ನಿನ್ನನ್ನು, ಪ್ರಪೃಂಚತೀ= (ಪೃಚೀಸಂಪರ್ಕೇ) ಸ್ಪರ್ಶಿಸುವ (ನಿನ್ನ ಸಂಪರ್ಕವುಳ್ಳ) (ನಿನ್ನ ಸ್ತುತಿರೂಪವಾದ) ಉರೂಚೀ=ಅತಿ ಮಹತ್ತಾದ, ಧೇನಾ=ವಚನವು, ಸೋಮಪಿತಯೇ = ಸೋಮಪಾನ ಮಾಡತಕ್ಕ, ದಾಶುಷೇ=ಯಜಮಾನನಿಗೋಸ್ಕರ, ಜಿಗಾತಿ=(ಇಷ್ಟವನ್ನು) ಹೊಂದಿಸಿ ಕೊಡುತ್ತದೆ. (ಅಂದರೆ ನಿನ್ನ ಸ್ತೋತ್ರವು

ಯಜಮಾನನಿಗೆ ಇಷ್ಟವನ್ನು ಸಾಧಿಸಿಕೊಡುತ್ತದೆ. ಆದ ಕಾರಣ ಸ್ತೋತ್ರ ಮಾಡತಕ್ಕ ನಮಗೆ ಇಷ್ಟವನ್ನು ಮಾಡು.)॥೩॥

**ಭಾ ॥ ವಾಕ್ ತ್ವತ್ಸಂಪರ್ಕಿಣೀ ಯಜ್ವಕೃತೇ ಪ್ರಾಪಯತೀಪ್ಸಿತಂ ।**
**ಸೋಮಪಾಯಾತಿಮಹತೀ ಮಹಾರ್ಥತ್ವಾತ್ತ್ವದರ್ಥತಃ ॥೩॥**

ಅ॥ (ನೀನು ಸರ್ವರಿಗಿಂತಲೂ ಅತಿ ಶ್ರೇಷ್ಠನು, ಆದ ಕಾರಣ) ನಿನ್ನನ್ನುದ್ದೇಶೀಕರಿಸಿರುವುದರಿಂದ ಅತಿಶ್ರೇಷ್ಠವಾದ ಅರ್ಥವುಳ್ಳದ್ದಾದ ಕಾರಣ ಅತಿ ಶ್ರೇಷ್ಠವಾದ, ನಿನ್ನನ್ನು ಸ್ತುತಿಸುವ, ವಚನವು, ಸೋಮ ಪಾನ ಮಾಡತಕ್ಕ, ಮತ್ತು ಯಾಗ ಮಾಡತಕ್ಕ ಯಜಮಾನನಿಗೋಸ್ಕರ, ಇಷ್ಟಾರ್ಥವನ್ನು ಹೊಂದಿಸಿಕೊಡುತ್ತದೆ. ॥೩॥

**ಋ॥ (೧೩) ಇಂದ್ರವಾಯೂ ಇಮೇ ಸುತಾ ಉಪ ಪ್ರಯೋಭಿರಾ ಗತಂ । ಇಂದವೋ ವಾಯುಶಂತಿ ಹಿ ॥೪॥**

ಅ॥ ಇಂದ್ರವಾಯೂ = (ಇದಿ ಪರಮೈಶ್ವರ್ಯೇ ಎಂಬ ಧಾತುವಿನಿಂದ) ಪರಮೈಶ್ವರ್ಯ ಸಂಪನ್ನನಾದುದರಿಂದ ಇಂದ್ರ ಎನಿಸಿಕೊಂಡವನು, ಅಥವಾ ವಿಷಯಗಳ ಸಮುದಾಯವನ್ನು ಕುರಿತು ಓಡುವುದರಿಂದಲೂ ಸಮಸ್ತ ವಿಷಯಗಳನ್ನು ಪ್ರಭೋಗಿಸುವುದರಿಂದಲೂ, ಈ ಎಲ್ಲಾ ವಸ್ತುಗಳನ್ನು ನೋಡುವುದರಿಂದಲೂ, (ಇಂಧೀದಿಪ್ತೌ) ವಿಶೇಷತಃ ಪ್ರಕಾಶವಿರುವುದರಿಂದಲೂ (ರಾದಾನೇ) ಸರ್ವಾಭೀಷ್ಟವನ್ನು ಕೊಡುವುದರಿಂದಲೂ, ಪ್ರಸಿದ್ಧನಾದ ಇಂದ್ರನೇ ಮತ್ತು ವಾಯುವೇ ಮತ್ತು ಇಂದ್ರ ವಾಯುಗಳಲ್ಲಿ ಅಂತರ್ಗತರಾದ ಉಪೇಂದ್ರ ಸಂಕರ್ಷಣರೇ, ಇಮೇ ಸುತಾಃ = ಈಸೋಮಗಳು, (ಸಂಪಾದಿತಗಳಾಗಿವೆ.) ಇಂದವಃ=ಆ ಸೋಮಗಳು, (ಅಂದರೆ ಬಾಹ್ಯ ಯಜ್ಞದಲ್ಲಿ ಸೋಮದಲ್ಲಿರತಕ್ಕ ಸೋಮಾಭಿಮಾನಿಗಳಾದ ದೇವತೆಗಳು, ಅಧ್ಯಾತ್ಮದಲ್ಲಿ ನಮ್ಮ ಮನೋವೃತ್ಯಭಿಮಾನಿಗಳು) ಹಿ=ಯಾವ ಕಾರಣದಿಂದ, ವಾಂ =ನಿಮ್ಮಿಬ್ಬರನ್ನು, ವಿಶಂತಿ= (ವಶ ಕಾಂತೌ) ನಿಮ್ಮಿಬ್ಬರ ಆಗಮನವನ್ನು ಇಚ್ಛಿಸುತ್ತಾರೋ, (ಆ ಕಾರಣದಿಂದ) ಪ್ರಯೋಭಿಃ =ಅತ್ಯಂತ ಪ್ರಿಯರಾದವರಿಂದೊಡಗೂಡಿ, ಉಪಆಗತಂ =ಬನ್ನಿರಿ ॥೪॥

**ಭಾ ॥ (೧) ಇಂದ್ರಃ ಸ ಪರಮೈಶ್ವರ್ಯಾದಿದಮುದ್ದಿಶ್ಯ ಚ ದ್ರುತೇಃ । ದದರ್ಶೇದಂ ದೀಪ್ತಿ ಮತ್ತ್ವಾದ್ದಿದಂ ರಾತೀತಿ ವಾ ಭವೇತ್ ॥ (೨) ಸೋಮಾಭಿಮಾನಿನೋ ದೇವಾ ವಾಮಿಚ್ಛಂತಿ ಹಿ ಸೋಮಗಾಃ ॥ (೩) ಪ್ರಿಯೈರುಪಾಗತಂ ತೇನೋಪೇಂದ್ರಃ ಸಂಕರ್ಷಣೋ ಹರಿಃ ॥ (೪) ದ್ವಿರೂಪತ್ವಾದ್ಬಹುತ್ವಂಚ ವಿಶೇಷಾದೇವ ಕೇವಲಂ । ಏಕ ಸ್ಯೈವ ಹರೇರ್ನಾತ್ರ ಭೇದಃ ಶಂಕ್ಯಃ ಕಥಂಚನ ॥ (೫) ಏಕಮೇವಾದ್ವಿತೀಯಂ ತನ್ನೇಹ ನಾನಾಸ್ತಿ ಕಿಂಚನ । ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ । ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನು ವಿಧಾವತಿ ॥ (೬) ಉಕ್ತ್ವಾದ್ಧರ್ಮಾನ್ ಪೃಥಕ್ತ್ವಸ್ಯ ನಿಷೇಧಾದೇವಮೇವ ಹಿ । ವಿಶೇಷೋ ಜ್ಞಾಯತೇ ಶ್ರುತ್ಯಾ ಭೇದಾ ದನ್ಯಶ್ಚ ಸಾಕ್ಷಿತಃ ॥೪॥**

ಅ॥ (೧) (ಇಂದ್ರ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಆ ಶ್ರೀಹರಿಯು (1) ಪರಮೈಶ್ವರ್ಯ ಸಂಪನ್ನನಾದುದರಿಂದಲೂ, (2) ಅಥವಾ ಈ ವಿಷಯ ಸಮುದಾಯವನ್ನುದ್ದೇಶಿಸಿ ಓಡುವುದರಿಂದಲೂ (ಅಂದರೆ ಸರ್ವ ವಿಷಯಗಳನ್ನು ಪ್ರಭೋಗಿಸುವುದರಿಂದಲೂ) (3) ಇದಮದರ್ಶಮಿತೀ ತಸ್ಮಾದಿದಂದ್ರೋನಾಮ ಇತ್ಯಾದಿ ಶ್ರುತ್ಯುಕ್ತ ಪ್ರಕಾರ

ವಿಶೇಷತಃ ಪ್ರಕಾಶವುಳ್ಳವನಾದುದರಿಂದಲೂ (5) ಭಕ್ತರಿಗೆ ಅಭೀಷ್ಟವನ್ನು ಕೊಡುವುದರಿಂದಲೂ ಇಂದ್ರನೆನಿಸುತ್ತಾನೆ. (೨) ಇಂದ್ರವಾಯುಗಳೇ ಸೋಮದಲ್ಲಿರತಕ್ಕ ಸೋಮಾಭಿಮಾನಿಗಳಾದ ದೇವತೆಗಳು ನಿಮ್ಮಿಬ್ಬರನ್ನು (ನಿಮ್ಮ ಆಗಮನವನ್ನು) ಯಾವ ಕಾರಣದಿಂದ ಇಚ್ಛಿಸುತ್ತಾರೋ, (೩) ಆ ಕಾರಣದಿಂದ ಅತಿಪ್ರಿಯರಾದವರಿಂದ ಕೂಡಿ ಬನ್ನಿರಿ. ಇಲ್ಲಿ ಇಂದ್ರ ವಾಯು ಶಬ್ದಗಳಿಂದ ಪ್ರಸಿದ್ಧ ಇಂದ್ರವಾಯುಗಳೂ, ನಾಮಗ್ರಹಣೇ ತದೇಕದೇಶಗ್ರಹಣಂ ಎಂಬ ನ್ಯಾಯದಿಂದ ಇಂದ್ರ ಶಬ್ದದಿಂದ ಪ್ರಸಿದ್ಧ ಇಂದ್ರವಾಯುಗಳೂ, ನಾಮಗ್ರಹಣೇ ತದೇಕದೇಶಗ್ರಹಣಂ ಎಂಬ ನ್ಯಾಯದಿಂದ ಇಂದ್ರ ಶಬ್ದದಿಂದ ಇಂದ್ರಾಂತರ್ಗತ ಉಪೇಂದ್ರನೂ, ಬಲಜ್ಞಾನ ಸ್ವರೂಪತ್ವಾದ್ವಾಯುನಾಮಾ ಸ ಏವಚ । ವಾಯೌ ಸಂಕರ್ಷಣೋ ನಿತ್ಯಂ ಸ್ಥಿತಃ ಎಂಬ ಎಂಬ ಪ್ರಮಾಣದಿಂದ ವಾಯು ಶಬ್ದದಿಂದ ವಾಯುವಿನಲ್ಲಿ ಅಂತರ್ಗತನಾದ ಸಂಕರ್ಷಣ ರೂಪಿಯಾದ ಶ್ರೀ ಹರಿಯೂ ಹೇಳಲ್ಪಡುತ್ತಾನೆ. (೪) ಭೇದರಹಿತನೇ ಆದ ಶ್ರೀಹರಿಗೆ ಎರಡು ರೂಪಗಳು ಇದ್ದುದರಿಂದ (ಇಂದ್ರವಾಯೂ ಇತ್ಯಾದಿ ದ್ವಿವಚನಾಂತ ಶಬ್ದವಾಚ್ಯತ್ವವು ಕೂಡುತ್ತದೆ.) (ಯತ್ರ ದ್ವಿತ್ವಂ ತತ ಭೇದಃ ಎಂಬ ನ್ಯಾಯದಿಂದ ದ್ವಿತ್ವವಿದ್ದರೆ ಭೇದವು ಅವಶ್ಯವಾಗಿ ಇರಬೇಕಾದುದರಿಂದ ಭೇದವೇ ಇಲ್ಲದಿರುವ ಶ್ರೀ ಹರಿಗೆ ಎರಡು ರೂಪಗಳು ಹೇಗೆ ಕೂಡುತ್ತವೆ ಎಂದರೆ) ವಸ್ತುತಃ ಭೇದವಿಲ್ಲದಿದ್ದರೂ ಭೇದ ಕಾರ್ಯನಿರ್ವಾಹಕರಾದ ಭೇದ ಪ್ರತಿನಿಧಿ ಸ್ವರೂಪ ಸಾಮರ್ಥ್ಯರೂಪವಾದ ವಿಶೇಷದಿಂದಲೇ ಕೇವಲವಾಗಿ ಬಹುತ್ವವೂ ದ್ವಿತ್ವವೂ ಕೂಡುತ್ತದೆ. ಈ ವಿಷಯದಲ್ಲಿ ಭಗವದ್ರೂಪಗಳಲ್ಲಿ ಯಾವ ಪ್ರಕಾರದಿಂದಲೂ ಭೇದವಾಗಲೀ, ಅಭೇದಸಹಿತವಾದ ಭೇದವಾಗಲೀ ಶ್ರುತಿವಿರೋಧ ಬರುವ ಪ್ರಯುಕ್ತವೇ ಶಂಕಿಸಕೂಡದು. (೫) (ಶ್ರುತಿಗಳು ಯಾವುದು ಎಂದರೆ) ತತ್ =ಆ ಬ್ರಹ್ಮನು ಏಕಂ =ತನ್ನ ದೇಹ ಗುಣಕ್ರಿಯಾದಿಗಳಿಂದ ಭೇದವಿಲ್ಲದಿರುವವನು ಏವ = ಭೇದಾಭೇದವಿಲ್ಲದಿರುವವನು, ಅದ್ವಿತೀಯಂ = ಸಮಾಧಿಕ ರಹಿತನೂ ಆದ, ಇಹ=ಬ್ರಹ್ಮನಲ್ಲಿ, ಕಿಂಚನ=ಅವಯವ ಗುಣಕ್ರಿಯಾ ಪ್ರಾದುರ್ಭಾವಾದಿಗಳು, ನಾನಾ=ಭಿನ್ನವಾದುದು, ನಾಸ್ತಿ=ಇಲ್ಲ, ಯಃ=ಯಾವಾತನು, ಇಹ=ಬ್ರಹ್ಮನಲ್ಲಿ, ನಾನೇವ=ಭಿನ್ನಾಭಿನ್ನವನ್ನು ಯಾವುದನ್ನಾದರೂ, ಪಶ್ಯತಿ=ನೋಡುತ್ತಾನೋ, ಸಃ =ಆತನು, ಮೃತ್ಯೋಃ=ಮರಣಾನಂತರದಲ್ಲಿ, ಮೃತ್ಯು=ಅಂಧಂ, ತಮಸ್ಸನ್ನು ಅಪ್ನೋತಿ=ಹೊಂದುತ್ತಾನೆ. ಯಥಾ=ಹೇಗೆ ಪರ್ವತೇಷು=ಪರ್ವತಗಳಲ್ಲಿ, ದುರ್ಗೇ=ಶಿಖರಗಳಲ್ಲಿ, ವೃಷ್ಟಂ=ವರ್ಷಿಸಲ್ಪಟ್ಟ, ಉದಕಂ=ನೀರು, ವಿಧಾವತಿ=ಕೆಳಗೆ ಓಡಿ ಹೋಗುತ್ತದೋ, ಏವಂ=ಹೀಗೆಯೇ, ಧರ್ಮಾನ್=ವಿಷ್ಣು ಧರ್ಮಗಳನ್ನು, ಪೃಥಕ್ ಪಶ್ಯನ್=ಶ್ರೀ ವಿಷ್ಣುವಿಗೂ ಧರ್ಮಗಳಿಗೂ ಪರಸ್ಪರವಾಗಿ ಭೇದವಿದೆ ಎಂದು ತಿಳಿದುಕೊಂಡ ಪುರುಷನು, ತಾನೇವ ಅನು=ಹಾಗೆ ಕಂಡವರನ್ನು ಅನುಸರಿಸಿಯೇ, ವಿಧಾವತಿ=ಕೆಳಗೆ ಹೋಗುತ್ತಾನೆ. (ಅಂಧಂತಮಸ್ಸನ್ನು ಹೊಂದುತ್ತಾನೆ) (ಈ ಪ್ರಮಾಣ ಸಮೂಹದಲ್ಲಿ ಶ್ರೀ ಹರಿಯ ಪ್ರಾದುರ್ಭಾವರೂಪಗಳಿಗೂ ಅವಯವಗಳಿಗೂ ಭೇದವನ್ನು ನಿರಾಕರಿಸಿರುವುದರಿಂದ ಶರೀರ ಭೇದವನ್ನು ನಿಷೇಧ ಮಾಡಿದ ಕಾರಣ ಆತನು ದ್ವಿವಚನ ವಿಷಯನಾಗುವುದಿಲ್ಲ.) (೬) (ಭೇದವಿಲ್ಲದೆ ವಿಶೇಷ ಮಾತ್ರದಿಂದಲೇ ದ್ವಿವಚನಾದಿಗಳು ಕೂಡುತ್ತವೆಂದದ್ದು ಅಯುಕ್ತವು. ಭೇದದಿಂದ ಇತರವಾದ ವಿಶೇಷವಿದೆ ಎನ್ನುವಲ್ಲಿಯೇ ಪ್ರಮಾಣವಿಲ್ಲ ಎಂದರೆ) ತಂದುರ್ದರ್ಶಂ ಗೂಢಮನುಪ್ರವಿಷ್ಟಂ, ಸ್ವಪ್ನಾಂತಂ ಜಾಗರಿತಾಂತಂ ಚ ಇತ್ಯಾದಿ ಪ್ರಮಾಣಗಳಿಂದ ಕಾಠಕದಲ್ಲಿ ಶ್ರೀ ಪರಮಾತ್ಮನಿಗೆ) ಅನೇಕ ಧರ್ಮಗಳನ್ನು ಹೇಳಿ, ಏಕಮೇವಾದ್ವಿತೀಯಂ ಎಂದು ಪುನಃ ಭೇದವನ್ನು ನಿಷೇಧ ಮಾಡಿರುವುದರಿಂದ ಭೇದದಿಂದ ಇತರವಾದ ವಿಶೇಷವು ಶ್ರೀ ಭಗವಂತನಲ್ಲಿ ಶ್ರುತ್ಯುಕ್ತವಾದ ಅರ್ಥಾಪತ್ತಿಯಿಂದಲೇ ತಿಳಿಯಲ್ಪಡುತ್ತದೆ. (ನಿರ್ವಿಶೇಷನೆಂದಾಗಿದ್ದರೆ ಧರ್ಮಗಳನ್ನು ಹೇಳಿದ್ದು ಕೂಡದೆ ಹೋಗಬೇಕಾಗುವುದು. ಭೇದವಿದ್ದರೆ ನಿಷೇಧವೇ ಕೂಡದೆ ಹೋಗುವುದು.) ಮತ್ತು ಘಟಾದಿಗಳಲ್ಲಿ ಜಾತಿ ಪರಿಮಾಣಗಳಿಂದ ಭೇದದಿಂದ ಇತರವಾದ ವಿಶೇಷವು ಸಾಕ್ಷಿಪ್ರತ್ಯಕ್ಷದಿಂದಲೇ ತಿಳಿಯುತ್ತದೆ. (ಆದುದರಿಂದಲೇ

ಪ್ರತ್ಯಕ್ಷದಿಂದ ಘಟ ಘಟ ಧರ್ಮಗಳಿಗೆ ಅಭೇದವು ಜ್ಞಾತವಾದಾಗ್ಯೂ ಪುರುಷನು ಸಾಕ್ಷಿಯಿಂದ ವಿಶೇಷವನ್ನು ತಿಳಿದು ಘಟೇ ಘಟತ್ವಂ ಇತ್ಯಾದಿ ಪ್ರಕಾರ ವ್ಯವಹರಿಸುತ್ತಾನೆ.)

ವಿ॥ ಮೂಲರೂಪಶ್ಚ ಯೋ ವಿಷ್ಣುಃ ಪ್ರಾದುರ್ಭಾವಾದಿಕಶ್ಚ ಸಃ। ಗುಣತಃ ಸ್ವರೂಪತೋ ವಾಪಿ ವಿಶೇಷಂ ಯೋಽತ್ರ ಪಶ್ಯತಿ । ಅತ್ಯಲ್ಪಮಪಿ ಮತ್ವಾ ಸಃ ತಮೋಽಧಂಯಾತ್ಯಸಂಶಯಂ ॥ ಇತ್ಯಾದಿ ಪ್ರಮಾಣಗಳಿಂದ ಭಗವದ್ರೂಪಗಳಿಗೆ ಅತ್ಯಲ್ಪ ಭೇದವೂ ಇಲ್ಲವೆಂದುಕ್ತವಾಯ್ತು. ॥೪॥

ಋ ॥ (೧೪) ವಾಯವಿಂದ್ರಶ್ಚ ಚೇತಥಃ ಸುತಾನಾಂ ವಾಜಿನೀವಸೂ । ತಾವಾಯಾತಮುಪದ್ರವತ್ ॥೫॥೩॥

ಅ॥ ವಾಯೋ=ಎಲೋ ವಾಯುವೇ, ವಾಜಿನೀವಸೂ = ವೃಷ್ಟ್ಯಾದಿಗಳಿಂದ ವಿಶೇಷವಾಗಿ ಅನ್ನವನ್ನು ಪ್ರವರ್ತಿಸುವ ಸೂರ್ಯನಲ್ಲಿ ಆವಾಸ ಮಾಡುವ, (ಅಂದರೆ ಅನ್ನಪತಿಯಾದ ಸೂರ್ಯನಲ್ಲಿ ಸದಾ ಇರುವ) ಇಂದ್ರಶ್ಚ=ಇಂದ್ರನು, ನೀನೂ ಕೂಡ, ಸುತಾನಾಂ = ಸೋಮಗಳನ್ನು, ಮನೋವೃತ್ತಿಗಳನ್ನಾಗಲೀ, ಚೇತಥಃ = (ಚಿತೀಸಂಜ್ಞಾನೇ) ತಿಳಿದಿರುವಿರಿ. (ಅಂದರೆ ಈ ಸೋಮಗಳು ನಮಗೆ ಸ್ವೀಕಾರ ಮಾಡಲಿಕ್ಕೆ ಯೋಗ್ಯಗಳಾಗುತ್ತವೆ, ಎಂದು ನೀವಿಬ್ಬರು ತಿಳಿದಿರುವಿರಿ.) (ಆದ ಕಾರಣ) ದ್ರವತ್=ಶೀಘ್ರವಾಗಿ, ತೌ = ಆ ನೀವಿಬ್ಬರು, ಉಪ ಆಯಾತಂ =ಬನ್ನಿರಿ. ಅಥವಾ ನಿಮ್ಮನ್ನು ತಿಳಿದಿರುವ ಯಜಮಾನನ ಸೋಮಗಳನ್ನು ಸ್ವೀಕರಿಸುವುದಕ್ಕಾಗಿ ಬನ್ನಿರಿ. ॥೫॥

ಭಾ॥ ವಿಜಾನತಃ ಸುತಾನನ್ನಪತೌ ಸೂರ್ಯೇ ಸದಾ ಸ್ಥಿತೌ ।
ದ್ರವದ್ದ್ರುತಂ ಸುತಾಶ್ಚರ್ಯದ್ಯೋತಕೋಽಭ್ಯಾಸ ಇಷ್ಯತೇ ॥೫॥

ಅ॥ ಅನ್ನಪತಿಯಾದ ಸೂರ್ಯನಲ್ಲಿ ಸದಾ ಇರುವ ನೀವಿಬ್ಬರು ಸೋಮಗಳನ್ನು ತಿಳಿದಿರುವಿರಿ. ದ್ರವತ್ ಅಂದರೆ ಶೀಘ್ರವಾಗಿ ಬನ್ನಿರಿ. ವಾಯುವಾಯಾಹಿ, ಉಪಪ್ರಯೋಭಿರಾಗತಂ ತಾವಾಯಾತಂ ಎಂದು ಅಭ್ಯಾಸವು (ಪುನಃ ಪುನರುಕ್ತಿಯು ಮುಖ್ಯತಾತ್ಪರ್ಯವನ್ನು ತೋರಿಸಿಕೊಡುತ್ತದೆಂದು ಸಂಮತವು ॥೫॥೩॥

ಋ॥ (೧೫) ವಾಯುವಿಂದ್ರಶ್ಚ ಸುನ್ವತ ಆಯಾತಮುಪ ನಿಷ್ಕೃತಂ । ಮಕ್ಷ್ವಿತ್ಥಾ ಧಿಯಾ ನರಾ ॥೬॥

ಅ॥ ವಾಯೋ =ಎಲೋ ವಾಯುವೇ, ನರಾ= (ಲಾ ಪರಿವರ್ತನೇ ರಿಜ ಕ್ಷಯೇ. ಅಥವಾ ರಿಷಹಿಂಸಾ ಯಾ) ನಿರ್ವಿಕಾರರಾದ, ಅಥವಾ ವಿನಾಶವಿಲ್ಲದಿರುವ, ಇಂದ್ರಶ್ಚ=ಇಂದ್ರನು, ಮತ್ತು ನೀನು ಹೀಗೆ ನೀವಿಬ್ಬರು, ಸುನ್ವತಃ =ಯಜ್ಞಮಾಡತಕ್ಕವನ, ನಿಷ್ಕೃತಂ=ಪೂಜಾನುಸಾರಿ ಫಲ ದಾನವನ್ನು ಕುರಿತು (ಅಂದರೆ ಯಜಮಾನನಿಂದ ಮಾಡಲ್ಪಟ್ಟ ಪೂಜೆಗೆ ಅನುಸಾರಿಯಾದ ಫಲವನ್ನು ಕೊಡುವುದಕ್ಕಾಗಿ) ಇತ್ಥಾ=ಈತನಿಗೆ ಫಲವನ್ನು ನಿಶ್ಚಯವಾಗಿಯೂ ಕೊಡುವೆನು, ಎನ್ನುವ ಪ್ರಕಾರವಾದ, ಧಿಯಾ=ಬುದ್ಧಿಯಿಂದ, ಮಕ್ಷು=ಅತಿ ಶೀಘ್ರವಾಗಿ, ಉಪ ಆಯಾತಂ = ಬನ್ನಿರಿ. ॥೬॥

ಭಾ|| (೧) ಯಜನ್ ಸುನ್ವನ್ ಕೃತಸ್ಯಾನುಸಾರಿ ಕರ್ಮೈವ ನಿಷ್ಕೃತಂ । ಅದರ್ಥಂ ಕ್ಷಿಪ್ರಮಾಯಾತಂ ಧಿಯೇತ್ಥಂ ಭೂತಯಾಽಚಲೌ ॥ (") ನರೌ ತಾವವಿನಾಶಿತ್ವಾದುಪಚಾರಃ ಕ್ವಚಿದ್ಭವೇತ್ । ಅಮರತ್ವವದ್ಯತೋ ಮೋಕ್ಷೋ ದೇವತಾನಾಂ ಸುನಿಶ್ಚಿತಃ ||೬||

ಅ|| (೧) ಋತ್ವಿಜರು ಮಾಡತಕ್ಕ ಯಾಗವೂ ಯಜಮಾನನ ಉದ್ದಿಶ್ಯವಾಗಿರುವುದರಿಂದ) ಯಜನ್ = ಯಜಮಾನನು ಸುನ್ವನ್ ಎನಿಸುತ್ತಾನೆ. ಯಜಮಾನನು ಮಾಡತಕ್ಕ ಪೂಜೆಗೆ ಅನುಸಾರಿಯಾದ ಕರ್ಮವೇ, ನಿಷ್ಕೃತವೆನಿಸುತ್ತದೆ. ಪೂಜಾನುಸಾರಿ ಫಲವನ್ನು ಕೊಡುವುದಕ್ಕಾಗಿ ಈತನಿಗೆ ಫಲವನ್ನು ಕೊಡುತ್ತೇನೆಂಬ ಬುದ್ಧಿಯಿಂದ ನರೌ = ಅಚಲರಾದ, ನಿರ್ವಿಕಾರರಾದ ನೀವಿಬ್ಬರು ಶೀಘ್ರವಾಗಿ ಬನ್ನಿರಿ. ಆ ವಿಷ್ಣುರೂಪರಾದ ಉಪೇಂದ್ರ ಸಂಕರ್ಷಣರು ನಿರ್ವಿಕಾರರಾದುದರಿಂದಲೂ ವಿನಾಶವಿಲ್ಲದವರಾದುದರಿಂದಲೂ ಮುಖ್ಯತಃ ನರಶಬ್ದವಾಚ್ಯರು. ಪ್ರಸಿದ್ಧ ವಾಯುವಿನಲ್ಲಿಯೂ ಇಂದ್ರನಲ್ಲಿಯೂ ಅಮರತ್ವದಂತೆಯೇ ಅಮುಖ್ಯವೃತ್ತಿಯು. (ಅಂದರೆ ನರಪದದಿಂದ ಹೇಳಲ್ಪಟ್ಟ ಅವಿಕಾರ ಅವಿನಾಶಿತ್ವಗಳು ಅಮುಖ್ಯಗಳು. ಶ್ರೀ ವಿಷ್ಣುವಿನಲ್ಲಿಯೇ ಮುಖ್ಯಗಳು)ದೇವತೆಗಳಿಗೆ ಮುಖ್ಯವಾಗಿ ಮರಣವೆಂದಿಲ್ಲ) ಯಾವ ಕಾರಣದಿಂದ ದೇವತೆಗಳಿಗೆ ಮೋಕ್ಷವು ಸುಶಿಕ್ಷಿತವಾಗಿದೆಯೋ (ಅಂದರೆ ಮುಕ್ತಿಯಲ್ಲಿ ಅವಿನಾಶಿತ್ವಾದಿಗಳು ನಿಶ್ಚಿತಗಳಾಗಿರುವುದರಿಂದ ಮುಕ್ತಿಗಿಂತ ಮೊದಲೂ ಹಾಗೆಯೇ ಅಮುಖ್ಯತಃ ಇರುತ್ತವೆಂದು ಹೇಳಲ್ಪಡುತ್ತವೆ.) ||೬||

ಋ|| (೧೬) ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ । ಧಿಯಂ ಘೃತಾಚ್ಯೇಂ ಸಾಧಂತಾ|| ||೭||

ಅ|| ಮಿತ್ರಂ = ರಕ್ಷಿಸಲಿಕ್ಕೆ ಯೋಗ್ಯನನ್ನು ತಿಳಿದುಕೊಂಡು ರಕ್ಷಿಸುವುದರಿಂದ ಮಿತ್ರನೆನಿಸಿಕೊಂಡವನು, ವರುಣಂ = ಉತ್ಕೃಷ್ಟ ಆನಂದವುಳ್ಳವನು, ಪೂತದಕ್ಷಂ = ಯಜಮಾನರನ್ನು ಪವಿತ್ರೀಕರಿಸಿದವನು, ರಿಶಾದಸಂ = ಅತಿಶಯಿತ ಸುಖವನ್ನು ಅನುಭವಿಸುವವನು, ಇಂತಹ ಮಿತ್ರಂ=ಮಿತ್ರ ದೇವತೆಯನ್ನೂ, ಮಿತ್ರಾಂತರ್ಗತ ಶ್ರೀ ಹರಿಯನ್ನೂ, ನರುಣ=ವರುಣ ದೇವತೆಯನ್ನೂ, ವರುಣಾಂತರ್ಯಾಮಿ ಶ್ರೀ ಹರಿಯನ್ನೂ, ಹುವೇ=ಕರಿಯುತ್ತೇನೆ. ಘೃತಾಚೀಂ = ಶ್ರೀ ವಿಷ್ಣು ವಿಷಯಕವಾದ ಧಿಯಂ =ಬುದ್ಧಿಯನ್ನೂ ಸಾಧಂತಾ = ಯಾವ ಕಾರಣದಿಂದ ನೀವಿಬ್ಬರು ಸಾಧಿಸುವಿರೋ, (ಆದ ಕಾರಣ ಕರಿಯುತ್ತೇನೆ.) ||೭||

ಭಾ || (೧) ಮಿತ್ವಾ ತ್ರಾತೀತಿ ಮಿತ್ರೋಽಯಂ ಮಿತಮಹ್ನಾ ಕರೋತಿ ವಾ । ಮಿತಂ ರಾತೀತಿ ವಾ ನಿತ್ಯಂ ಮಿತಂ ರಮಯತೀತಿ ವಾ । (೨) ಆವೃಣೋತೀತಿ ವರುಣಸ್ತಮಸಾಽಜ್ಞಾನತೋಽಪಿವಾ ॥ ವರಮುನ್ನಯತೀತ್ಯಸ್ಮಾದ್ವರಾನಂದತ್ವತೋಽಪಿವಾ (೩) ಪೂತಾ ದಕ್ಷಾ ಅನೇನೇತಿ ಪೂತದಕ್ಷ ಇತೀರಿತಃ (1) (೪) ತಮಾಹ್ವಯಾಮಿ ಸುಖಿನಂ ಶಮದನ್ರಮತೇ ಯತಃ ॥ (೫) ಅನೂನಸುಖಭೋಕ್ತೃತ್ವಾದ್ರಿಶಾದಾ ಇತಿಕೀರ್ತಿತಃ । (೬) ಹರಿರ್ಘೃತಃ ಸುಶುದ್ಧತ್ವಾದ್ಘೃತಾಚೀ ಚ ತದಂಚನಾತ್ । ಸ್ವಧೀತಿ ಸಾಧಕೋ ವಿಷ್ಣುರ್ಭಕ್ತಾನಾಂ ಚ ಯಥಾರ್ಥತಃ ||೭||

ಅ|| (೧) (ಮಾಜಮಾನೇ, ತ್ರೈಜಪಾಲನೇ, ಮಾತಿ ತ್ರಾತಿಚ ಮಿತ್ರಃ) ರಕ್ಷಿಸಲು ಯೋಗ್ಯನಾದವನನ್ನು ತಿಳಿದು ರಕ್ಷಿಸುವುದರಿಂದ ಈ ವಿಷ್ಣುವು ಮಿತ್ರನೆನಿಸುತ್ತಾನೆ ಅಥವಾ ಹಗಲಿನಿಂದ ವಸ್ತುಗಳ ಸಮುದಾಯವನ್ನು ಮಿತಂ ರಾತಿ =

ತಿಳಿಯಲ್ಪಟ್ಟದ್ದನ್ನಾಗಿ ಮಾಡುವುದರಿಂದ ಮಿತ್ರನೆನಿಸುತ್ತಾನೆ. ಅಥವಾ ಮಿತಂ ರಾತಿ ಪರಿಮಿತವಾದುದನ್ನು ಯಥಾಯೋಗ್ಯವಾಗಿಯೇ ಕೊಡುತ್ತಾನೆ. ಅಥವಾ ಮಿತಂ ರಮಯತಿ = ನಿತ್ಯದಲ್ಲಿಯೂ ಪರಿಮಿತವಾಗಿಯೇ ರಮಿಸುವುದರಿಂದಲೂ, ಮಿತ್ರಾಖ್ಯ ಸೂರ್ಯನೂ ಮಿತ್ರಾಂತರ್ಗತ ಶ್ರೀ ಹರಿಯೂ ಮಿತ್ರನೆನಿಸುತ್ತಾನೆ. (೨) ಹೊರಗೆ ತಮಸ್ಸಿನಿಂದಲೂ, ಒಳಗೆ ಅಜ್ಞಾನದಿಂದಲೂ ಆವರಿಸುವುದರಿಂದಲೂ ಉತ್ತಮ ಜೀವನನ್ನು ಮೇಲೆ ಒಯ್ಯುವುದರಿಂದಲೂ, ಉತ್ಕೃಷ್ಟ ಆನಂದವಿರುವುದರಿಂದಲೂ, ವರುಣನೆನಿಸುತ್ತಾನೆ (೩) ಶ್ರೀ ಹರಿಯಿಂದ ಯಜಮಾನರು ಪವಿತ್ರರಾಗುವುದರಿಂದ ಶ್ರೀ ಹರಿಯು ಪೂತದಕ್ಷನೆನಿಸುತ್ತಾನೆ. (೪) ಯಾವ ಕಾರಣದಿಂದ ಸುಖಿಯಾದವನಿಗೆ ಸುಖವನ್ನು ಕೊಡುತ್ತಾ ಕ್ರೀಡಿಸುತ್ತಾನೋ, ಆದ ಕಾರಣ ಆ ಶ್ರೀಹರಿಯನ್ನು ಕರಿಯುತ್ತೇನೆ. (೫) ಪೂರ್ಣ ಸುಖವನ್ನು ಭೋಗಿಸುವುದರಿಂದ ರಿಶಾದಾಃ ಎನಿಸುತ್ತಾನೆ. ಅತಿಶುದ್ಧನಾದ ಪ್ರಯುಕ್ತ ಶ್ರೀ ಹರಿಯು ಘೃತನೆನಿಸುತ್ತಾನೆ. ಶ್ರೀ ವಿಷ್ಣುವನ್ನು ವಿಷಯೀಕರಿಸುವುದರಿಂದ ಬುದ್ಧಿಯು ಘೃತಾಚೀ ಎನಿಸುತ್ತದೆ. ಯಥಾರ್ಥವಾಗಿ ಶ್ರೀ ವಿಷ್ಣುವು ಭಕ್ತರಿಗೆ ಸ್ವವಿಷಯಕ ಧ್ಯಾನವನ್ನು ಸಾಧಿಸಿಕೊಡುವವನು.॥೭॥

**ಋ ॥ (೧೭) ಋತೇನ ಮಿತ್ರಾವರುಣಾ ವೃತಾವೃಧಾ ವೃತಸ ಶಾ । ಕ್ರತುಂ ಬೃಹಂತಮಾತಾಥೇ ॥೮॥**

ಅ॥ ಋತಾವೃಧೌ = ಭಗವಂತನಿಂದ ಅಭಿವೃದ್ಧರಾದವರು, ಋತೇನ=ಯಾವಾಗಲೂ ಋತಸ್ಪಶೌ=ವಿಷ್ಣುವಿನ ಸಂಬಂಧಿಗಳೂ, ಆದ ಮಿತ್ರಾವರುಣಾ=ಮಿತ್ರವರುಣನೆಂಬ ದೇವತೆಗಳೇ, ಮತ್ತೂ ಋತಾವೃಧೌ=ನಿತ್ಯದಲ್ಲಿಯೂ ಅಭಿವೃದ್ಧರಾದ, ಋತೇನ-ಸತ್ಯವಾಗಿಯೇ (ಔಪಚಾರಿಕವಾಗಿಯಲ್ಲ) ಋತಸ್ಪೃಶಾ=ವೇದ ಪ್ರತಿಪಾದ್ಯಗಳಾದ, ಮಿತ್ರಾವರುಣೌ=ಮಿತ್ರ ವರುಣರಲ್ಲಿ ಅಂತರ್ಗತಗಳಾದ ಭಗವದ್ರೂಪ ವಿಶೇಷಗಳೇ, ಬೃಹಂತಂ ಕ್ರತುಂ=ಮಹಾಜ್ಞಾನವನ್ನು ಅಥವಾ ಪೂರ್ಣ ಸುಖವನ್ನು, ಅಶಾಥೇ-ಪ್ರೇರೇಪಿಸುತ್ತೀರಿ. ॥೮॥

ಭಾ ॥ (೧) ನಿತ್ಯವೃದ್ಧಃ ಸ ಭಗವಾನ್ನೃತೇನಾನುಪಚಾರಕಃ । **ಋತಸ್ಪೃಗ್ವೇದವಾಚ್ಯತ್ವಾ (೨) ದನ್ಯೌಚೇದ್ಭಗವಾನ್ನತಃ ॥ ಋಗತಾವಿತ್ಯತಃ ಸರ್ವವಸ್ತುಷ್ಪನುಗತತ್ವತಃ ॥ (೩) ತೇನ ವೃದ್ಧೌ ತತ್ಸ್ಪೃಶೌ ಚ ಸರ್ವದಾ ಮಿತ್ರವಾರಿಪೌ ॥ (೪) ಸಂಹಿತಾಯಾಂತು ದೈರ್ಘ್ಯಾದಿರುಕ್ತ್ವಾಧಿಕ್ಯೇ ಪದೇಽನ್ಯಥಾ । ಅನನ್ಯಾರ್ಥತ್ವವಿಜ್ಞಪ್ತ್ಯ್ಯ ಈಶಾಥೇ ಚ ಮಹಾಕ್ರತುಂ ಮಹತ್ಸುಖಂ ವಾ ॥೮॥**

ಅ॥ (೧) ಆ ಶ್ರೀ ಹರಿಯು (ಯಾವ ಕಾರಣದಿಂದ) ಸರ್ವದಾ ಅಭಿವೃದ್ಧನೇ ಆಗಿರುತ್ತಾನೋ, (ಆದ ಕಾರಣ ಋತವೃಧಃ ಎನಿಸುತ್ತಾನೆ) ಸತ್ಯವಾಗಿಯೇ, ಸರ್ವಥಾ ಔಪಚಾರಿಕವಲ್ಲ. ಸಮಸ್ತ ವೇದಗಳಿಂದ ಪ್ರತಿಪಾದ್ಯನಾದುದರಿಂದ ಋತಸ್ಪೃಕ್ (ವೇದ ಸಂಪರ್ಕವಿರುವವನು) ಎನ್ನಿಸುತ್ತಾನೆ. (೨) ಶ್ರೀ ಪರಮಾತ್ಮನಿಂದ ಭಿನ್ನರಾದ ಮಿತ್ರ ವರುಣರೆಂಬ ದೇವತೆಗಳು ವಿವಕ್ಷಿತರಾದರೆ (೨ನೇ, ೩ನೇ ಋತ ಶಬ್ದಗಳಿಂದ ಶ್ರೀಹರಿಯು ಹೇಳಲ್ಪಡುತ್ತಾನೆ. ಹೇಗೆಂದರೆ) ಋ ಗತೌ ಎಂಬ ಧಾತುವಿನಿಂದ ಸರ್ವ ವಸ್ತುಗಳಲ್ಲಿ ಅನುಗತನಾಗಿರುವುದರಿಂದ (ಅಂದರೆ ಸರ್ವ ವಸ್ತುಗಳಲ್ಲಿ ನಿಯಾಮಕನಾಗಿದ್ದುದರಿಂದ) ಋತಃ=ಭಗವಂತನು. (೩) ಮಿತ್ರ ವರುಣರು ಸರ್ವದಾ ಆ ಶ್ರೀಹರಿಯಿಂದ ಅಭಿವೃದ್ಧರಾದುದರಿಂದ ಋತ ವೃಧೌ ಎಂದೂ, ಆ ಶ್ರೀ ಹರಿಯ ಸಂಬಂಧಿಗಳಾದುದರಿಂದ ಋತ ಸ್ಪೃತಾ ಎಂದೂ

ಅನ್ನಿಸುತ್ತಾರೆ. (೪) ಸಂಹಿತೆಯಲ್ಲಿ ಋತಾವೃಧೌ ಎಂದು ದೈರ್ಘ್ಯ, ವರ್ಣ ವಿಕಾರ ಮೊದಲಾದುದೂ, ಪದಲ್ಲಿ ಬೇರೆ ರೀತಿಯಾಗಿ ಅಂದರೆ ಋತ ಎಂದು ಹ್ರಸ್ವವೂ ಇದ್ದರೆ ಅದು ಹಿಂದೆ ಹೇಳಿದ ಅರ್ಥಕ್ಕೆ ಅಧಿಕ್ಯವನ್ನು ತಿಳಿಸುವುದಕ್ಕಾಗಿಯೂ, ಅವಧಾರಣ (ನಿಶ್ಚಯವನ್ನು ತಿಳಿಸುವುದಕ್ಕಾಗಿಯೂ ಹಾಗೆ ಹೇಳುವುದು. ಮಹಾಜ್ಞಾನವನ್ನು ಮಹಾಸುಖವನ್ನಾಗಲೀ, ಪ್ರೇರೇಪಿಸುತ್ತೀರಿ. ||೮||

**ಋ । (೧೮) ಕವೀನೋ ಮಿತ್ರಾವರುಣಾ ತುವಿಜಾತಾ ಉರುಕ್ಷಯಾ । ದಕ್ಷಂ ದಧಾತೇ ಅಪಸಂ ॥ ||೯|| ೪||೨||**

ಅ|| ಕವೀ=ಸರ್ವಜ್ಞರಾದ, ತುವಿಜಾತೌ =ಸರ್ವ ಗುಣ ಪರಿಪೂಣರಾಗಿರುವ, ಪೂರ್ಣ ಬ್ರಹ್ಮನಿಂದ ಹುಟ್ಟಿರುವ, ಉರುಕ್ಷಯಾ=ಸರ್ವತ್ರ ವ್ಯಾಪ್ತರಾದ, ನಿತ್ಯದಲ್ಲಿಯೂ ಗಮನಾಗಮನವುಳ್ಳ, ಮಿತ್ರಾವರುಣೌ=ಭಗವದ್ರೂಪವಿಶೇಷಗಳೇ, ಮಿತ್ರ ವರುಣರೆಂಬ ದೇವತೆಗಳೇ ನಃ =ನಮಗಾಗಿ, ದಕ್ಷಂ =ಯಜಮಾನನನ್ನು ಕುರಿತು, ಅಪಸಂ=ಕರ್ಮವನ್ನು ದಧಾತೇ = ಮಾಡುವಿರಿ. (ಅಂದರೆ ಯಜಮಾನನನ್ನು ಕರ್ಮಕರ್ತನನ್ನಾಗಿ ಮಾಡುವಿರಿ.) ಅಥವಾ ನಃ = ನಮ್ಮವನಾದ (ಋತ್ವಿಜರ ಸಂಬಂಧಿಯಾದ) ಅಪಸಂ =ಕರ್ಮಕರ್ತನಾದ ಯಜಮಾನನನ್ನು, ದಕ್ಷಂ = ಸಮರ್ಥನನ್ನಾಗಿ ಮಾಡುವಿರಿ. ||೯||

**ಭಾ ॥ (೧) ತುವಿಜೌ ಬ್ರಹ್ಮ ಚಾತೌ ತಥಾವಿಧೌ । ಹರಿಸ್ತಥೈವ ಭೂತತ್ವಾ ತ್ಸ್ಥಾನಂ ಕ್ಷಯ ಇಹೋಚ್ಯತೇ (೨) ಕರ್ಮಾಪಸಂ ಚ ಕರ್ತಾರಂ ದಕ್ಷಂ ಕರ್ತಾರಮೇವ ವಾ । ಅಸ್ಮದರ್ಥೇ ದಧಾತೇ ತೌ ನಿತ್ಯಂ ಬುದ್ಧೌ ಗತಾಗತೌ ||೯||೪||೨||**

ಅ|| (೧) ತುವಿಜೌ =ಸರ್ವಗುಣ ಪರಿಪೂರ್ಣನಾದ ಪರಬ್ರಹ್ಮನಿಂದ ಹುಟ್ಟಿದವರು. ಮತ್ತು ಸರ್ವದಾ ಸರ್ವಗುಣ ಪರಿಪೂರ್ಣರಾಗಿಯೇ ಇರುವವರು, (ಹೇಗೆಂದರೆ) ಸರ್ವಗುಣ ಪರಿಪೂರ್ಣನಾಗಿಯೇ ಸದಾ ಇರುವುದರಿಂದ ಶ್ರೀ ಹರಿಯು ತುವಿಜಾತನೆನಿಸುತ್ತಾನೆ. (ಮಿತ್ರಾ ವರುಣರು ಬ್ರಹ್ಮನಿಂದ ಹುಟ್ಟಿರುವುದರಿಂದ ತುವಿಜಾತರೆನಿಸುತ್ತಾರೆ.) ಉರುಕ್ಷಯೌ ಎನ್ನುವಲ್ಲಿ ಸ್ಥಾನವು ಕ್ಷಯವೆನಿಸುತ್ತದೆ. (೨) ಅಪಸವೆಂದರೆ ಕರ್ಮವು. ನಮಗಾಗಿ ಯಜಮಾನನನ್ನು ಕರ್ಮಕರ್ತನನ್ನಾಗಿಯೂ, ಅಥವಾ ಯಜಮಾನನನ್ನು ಸಮರ್ಥನನ್ನಾಗಿಯೂ, ಮಾಡುವಿರಿ. ಆ ಮಿತ್ರಾ ವರುಣರು ನಿತ್ಯದಲ್ಲಿಯೂ ತಿಳಿದವರು, (ಅಂದರೆ ಸರ್ವಜ್ಞರು) ಮತ್ತೂ ಗಮನಾಗಮನವುಳ್ಳವರು. ||೯||೪||೨||

ಅವ ॥ ೧೨ ಋಕ್ಕುಗಳು, ೨ ವರ್ಗಗಳು, ಮೊದಲಿನ ೩ ಋಕ್ಕುಗಳು ಅಶ್ವಿನೀ ದೇವಾತಾಕಗಳು. ೨ನೇ ೩ ಋಕ್ಕುಗಳು ಇಂದ್ರ ದೇವತಾಕಗಳು. ಮೂರನೇ ೩ ಋಕ್ಕುಗಳು ವಿಶ್ವೇದೇವ ದೇವತಾಕಗಳು. ನಾಲ್ಕನೆ ೩ ಋಕ್ಕುಗಳು ಸರಸ್ವತೀ ದೇವತಾಕಗಳು.

**ಋ ॥ (೧೯) ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ । ಪುರುಭುಜಾ ಚನಸ್ಯತಂ ||೧||**

ಅ|| ದ್ರವತ್ಪಾಣೀ=ಶೀಘ್ರಹಸ್ತವುಳ್ಳ, (ಔದಾರ್ಯವುಳ್ಳ) ಅಥವಾ ಶೀಘ್ರವಾಗಿ ಅಭೀಷ್ಟಪ್ರದಗಳಾದ, ಶುಭಸ್ಪತೀ=ಶುಭಗಳಿಗೆ ಅಧಿಪತಿಗಳಾದ, ಪುರುಭುಜಾ=ಬಹುಜಗತ್ತನ್ನು ರಕ್ಷಿಸುವ, ಅಥವಾ ಬಹುಭೋಕ್ತೃಗಳಾದ ಅಶ್ವಿನಾ=

ಅಶ್ವಿಪದವಾಚ್ಯ ಭಗವದ್ರೂಪ ವಿಶೇಷಗಳೇ, ಅಥವಾ ಅಶ್ವಿನೀ ದೇವತೆಗಳೇ, (ನೀವಿಬ್ಬರು) ಯಜ್ವರೀಃ =ಯಜ್ಞ ಸಾಧನಗಳಾದ, ಇಷಃ=ಹವಿಸ್ಸುಗಳನ್ನು, ಚನಸ್ಯತಂ=ಕೊಡಿರಿ. ಅಥವಾ ಯಜ್ವರೀಃ=ಯಜ್ಞದಲ್ಲಿ ಕೊಡಲ್ಪಟ್ಟ, ಇಷಃ =ಸ್ವಭಾಗಗಳನ್ನು ಚನಸ್ಯತಂ =ಸ್ವೀಕರಿಸಿರಿ (ಇಚ್ಛಿಸಿರಿ) ॥೧॥

ಭಾ ॥ (೧) ಅನ್ನಾನಿ ಯಜ್ಞಯೋಗ್ಯಾನಿ ಕ್ಷಿಪ್ರಹಸ್ತೌ ಶುಭಾಧಿಪೌ । ಬಹುಗೋಪೌ ಬಹುಭುಜೌ ನೋ ಯೋಜಯತಮಶ್ವಿನೌ ॥
(೨) ಯಜ್ಞೇ ವೃತಾನ್ ಸ್ವಭಾಗಾನ್ವಾ ಸಂಯೋಜಯತಮಾಶು ವೈ ॥ (೩) ಆಶುವಾನಾದ್ಗತೇರಶ್ವೀ ಕ್ಷಿಪ್ರಾವಗತಿತೋಽಥವಾ । ಅಶ್ನುತೇಽಖಿಲಮಿತ್ಯೇವಾಪ್ಯತ್ವಜತ್ವಾತ್ತಥಾಽಶ್ವಿನೌ ॥೧॥

ಅ॥ (೧) ಶೀಘ್ರವಾಗಿ ಅಭೀಷ್ಟಪ್ರದಗಳಾದ, ಶುಭಗಳಿಗೆ ಅಧಿಪತಿಗಳಾದ ಸರ್ವ ಜಗತ್ತನ್ನು ರಕ್ಷಿಸುವ ಬಹುಭೋಕ್ತೃಗಳಾದ ಅಶ್ವಿನೀ ದೇವತೆಗಳಿರಾ, ಯಜ್ಞಕ್ಕೆ ಯೋಗ್ಯಗಳಾದ (ಯಜ್ಞ ಸಾಧನಗಳಾದ) ಹವಿರಾದಿಗಳನ್ನು ನಮಗೆ ಕೊಡಿರಿ. (೨) ಅಥವಾ ಯಜ್ಞದಲ್ಲಿ ಕೊಡಲ್ಪಟ್ಟ ತಮ್ಮ ಭಾಗಗಳನ್ನು ಶೀಘ್ರವಾಗಿಯೇ ಸ್ವೀಕಾರ ಮಾಡಿರಿ. (೩) ಶೀಘ್ರದಲ್ಲಿ ಗಮನವಿದ್ದ ಪ್ರಯುಕ್ತ ಅಥವಾ ಶೀಘ್ರವಾಗಿ ತಿಳಿದುಕೊಳ್ಳುವುದರಿಂದ ಅಥವಾ (ಅಶೂವ್ಯಾಪ್ತೌ) ಸರ್ವ ಜಗತ್ತನ್ನು ವ್ಯಾಪಿಸುವುದರಿಂದ ಶ್ರೀ ಹರಿಯು ಅಶ್ವೀ (ಎಂದು ಎನಿಸಿಕೊಳ್ಳುತ್ತಾನೆ. ಹಾಗೆಯೇ ಅಶ್ವಿನೀ ದೇವತೆಗಳು ಅಶ್ವರೂಪನಾದ ಸೂರ್ಯನಿಂದ ಹುಟ್ಟುವುದರಿಂದ ಅಶ್ವಿನೌ ಎನಿಸಿಕೊಳ್ಳುತ್ತಾರೆ. ॥೧॥

ಋ॥ (೨೦) ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ । ಧಿಷ್ಣ್ಯಾ ವನತಂ ಗಿರಃ ॥೨॥

ಅ॥ ಪುರುದಂಸಸಾ = ಬಹು ಕರ್ಮಗಳನ್ನು ಮಾಡುವ, ನರಾ =ನಿರ್ವಿಕಾರರಾದ, ಅಥವಾ ವಿನಾಶವಿಲ್ಲದಿರುವ, ದಿಷ್ಣ್ಯಾ=ಸರ್ವದಾ ಸರ್ವರಿಗೂ ಆಶ್ರಯರಾದ, ಅಶ್ವಿನಾ =ಭಗವದ್ರೂಪ ವಿಶೇಷಗಳೇ ಅಶ್ವಿನೀ ದೇವತೆಗಳಿರಾ, (ನೀವಿಬ್ಬರು) ಶವೀರಯಾ =ಸುಖವೀರ್ಯಾತ್ಮಕವಾದ, ಧಿಯಾ=ಬುದ್ಧಿಯಿಂದ, ಗಿರಃ =ನಮ್ಮ ಸ್ತುತಿರೂಪ ವಚನಗಳನ್ನು, ವನತಂ = (ವನ ಸಂಭಕ್ತೌ) ಸ್ವೀಕರಿಸಿರಿ. ॥೨॥

ಭಾ । ಬಹುಕರ್ಮಕೃತೌ ಸೌಖ್ಯವೀರ್ಯಾತ್ಮಿಕ್ಯಾ ಧಿಯಾ ಗಿರಃ । ಅಸ್ಮದೀಯಾಃ ಸಂಭಜತಂ ಧಿಷ್ಣ್ಯೌ ಸರ್ವಾಶಯೌ ಸದಾ ॥೨॥

ಅ॥ ಬಹುಕರ್ಮಗಳನ್ನು ಮಾಡುತ್ತಿರುವ ಯಾವಾಗಲೂ ಸರ್ವರಿಗೂ ಆಶ್ರಯರಾದ ಭಗವದ್ರೂಪಗಳೇ ಅಶ್ವಿನೀದೇವತೆಗಳಿರಾ ನೀವಿಬ್ಬರು ಸುಖವೀರ್ಯಸ್ವರೂಪವಾದ ಬುದ್ಧಿಯಿಂದ ನಮ್ಮ ಸ್ತುತಿರೂಪಗಳಾದ ವಚನಗಳನ್ನು ಸ್ವೀಕರಿಸಿರಿ. ॥೨॥

ಋ ॥ (೨೧) ದಸ್ರಾ ಯುವಾಕವಃ ಸುತಾ ನಾಸತ್ಯಾ ವೃಕ್ತಬರ್ಹಿಷಃ । ಆಯಾ ತಂ ರುದ್ರವರ್ತನೀ ॥ ॥೩॥

ಅ॥ ರುದ್ರವರ್ತನೀ = ರುಜ್‌ಶಬ್ದೇ ಉಪಪದೇ, ದ್ರುಗತೌ ) (ವೃತು ವರ್ತನೇ) ರೋಗಾದಿ ದುಃಖವನ್ನು

ಓಡಿಸುವುದರಿಂದ ರುದ್ರನೆನಿಸಿಕೊಂಡ ವಾಯು ದೇವರನ್ನು ಸ್ನೇಹದಿಂದ ಅನುಸರಿಸುವ, (ರುದ್ರಂ ಅನುವರ್ತನಿರ್ಯಯೋಃ ಎಂದು ವಿಗ್ರಹವು) ಅಥವಾ ಭೃತ್ಯರಾಗಿ ಅನುಸರಿಸುವ, ನಾಸತ್ಯಾ=ಅಸಮೀಚೀನ ಗುಣಗಳಿಲ್ಲದಿರುವ (ಅಂದರೆ ಸದ್ಗುಣಗಳುಳ್ಳ) ಅಥವಾ ನಾಸಿಕಾಭಿಮಾನಿಗಳಾಗಿ ಮೂಗಿನಲ್ಲಿರುವ, ದಸ್ರಾ= (ದಸು ವಿಭೇದನೇ) ಸರ್ವ ಶತ್ರುಗಳನ್ನು ಭೇದಿಸುವ, ಭಗದ್ರೂಪ ವಿಶೇಷಗಳೇ, ಅಥವಾ ಪ್ರಸಿದ್ಧ ಅಶ್ವಿನೀ ದೇವತೆಗಳಿರಾ, ವೃಕ್ತಬರ್ಹಿಷಃ ವೃಕ್ತಂ=ವಿಸ್ತೃತಂ ಬರ್ಹಿರ್ಯೇನ) ವಿಸ್ತೃತವಾದ ಬರ್ಹಿಸ್ಸುಳ್ಳ, ಯಜಮಾನನ ಸಂಬಂಧಿಗಳಾದ ಸುತಾಃ =ಸೋಮಗಳು, ಯುವಾಕವಃ = ನಿಮಗಾಗಿ ಸಂಪಾದಿಸಲ್ಪಟ್ಟಿವೆ. (ಆದ ಕಾರಣ) ಆಯಾತಂ = ಬನ್ನಿರಿ ||೩||

**ಭಾ || (೧) ಭೇದಕೌ ಸರ್ವಶತ್ರೂಣಾಂ ದಸ್ರೌ ಸಂಬಂದಿನೌ ಹಿ ವಾಂ || ಸುತಾ ಯುವಾಕವಃ ಸೋಮಾ ಯಜ್ವನಃ ಸ್ವತಬರ್ಹಿಷಃ । ನಾಸತ್ಯೌ ನಾಸಿಕಾಸಂಸ್ಥಾ ನೈವ ಚಾಸದ್ಗುಣೌ ಕ್ವಚಿತ್ । (೨) ರುಜಾಂ ದ್ರಾವಣತೋ ರುದ್ರೋ ವಾಯುಸ್ತದನು ವರ್ತನಾತ್ ಸ್ನೇಹತೋಽನುವಾಶತ್ವಾದ್ವಾ ತನ್ಮಾರ್ಗಗತಿತೋಽಥವಾ । (೩) ಕಸ್ಮಿನ್ವಹಮಿತಿ ಶ್ರುತ್ವಾ ವಾಸುದೇವೋಽಶ್ವಿನಾವಪಿ । ರುದ್ರವರ್ತನಿಶಬ್ದೋಕ್ತಾಃ ||೩||**

ಅ|| (೧) ದಸ್ರೌ = ಅಂದರೆ ಸರ್ವಶತ್ರುಗಳನ್ನು ನಾಶಗೊಳಿಸುವ ದೇವತೆಗಳಿರಾ, ವಿಸ್ತೃತ ಬರ್ಹಿಸ್ಸುಳ್ಳ ಯಜಮಾನನ ಸಂಬಂಧಿಗಳಾದ, ಸುತಾಃ =ಸೋಮಗಳು, ಯುವಾಕವಃ = ನಿಮ್ಮ ಸಂಬಂಧಿಗಳಾಗಿ ಸಂಪಾದಿತಗಳಾಗಿವೆ. ನಾಸತ್ಯೌ=ಅಶ್ವಿನೀ ದೇವತೆಗಳು ನಾಸಿಕಾಭಿಮಾನಿಗಳಾಗಿ ನಾಸಿಕಾದಲ್ಲಿ ಇರುವವರು. ಭಗವದ್ರೂಪಗಳು ಎಲ್ಲಿಯೂ ಅಸದ್ಗುಣಗಳುಳ್ಳವುಗಳಲ್ಲ. (೨) ರೋಗಗಳನ್ನು ಪರಿಹರಿಸುವುದರಿಂದ ರುದ್ರಃ=ವಾಯುವು. ಆ ವಾಯುವನ್ನು ಸ್ನೇಹದಿಂದ ಅನುಸರಿಸುವುದರಿಂದ ವಾಸುದೇವನು ರುದ್ರವರ್ತನೆನಿಸುತ್ತಾನೆ. ಅಶ್ವಿನೀ ದೇವತೆಗಳು ವಾಯುವನ್ನು ಭೃತ್ಯರಾಗಿ (ವಾಯುವಿನ ಅಧೀನರಾಗಿ) ಅನುಸರಿಸುವುದರಿಂದ ರುದ್ರವರ್ತರೆನಿಸುತ್ತಾರೆ. ಅಥವಾ ವಾಯುದೇವರ (ಭೃತ್ಯರಾದ ಪ್ರಯುಕ್ತ ಅವರ) ಮಾರ್ಗದ ಗತಿಯುಳ್ಳವರಾದುದರಿಂದ ಅಥವಾ ವಾಯುದೇವರ ಮಾರ್ಗವುಳ್ಳವರಾದುದರಿಂದ ರುದ್ರವರ್ತನಿ ಎನಿಸುತ್ತಾರೆ. (೩) (ಅಶ್ವಿನೀ ದೇವತೆಗಳು ವಾಯುದೇವರ ಭೃತ್ಯರಾದುದರಿಂದ ಅವರಿಗೆ ವಾಯುದೇವರ ಮಾರ್ಗದ ಗತಿಯು ಇರಲಿ. ಶ್ರೀ ಹರಿಗೆ ಹೇಗೆಂದರೆ) ಕಸ್ಮಿನ್ವಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ, ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣ ಮಸೃಜತ ನಾನು ಯಾವನು ದೇಹದಿಂದ ಹೊರಟು ಹೋದೊಡನೆ ಹೊರಟು ಹೋಗುವೆನು, ಯಾವನು ಪ್ರವೇಶ ಮಾಡಿದೊಡನೆ ಪ್ರವೇಶಿಸುವೆನು, ಎಂದು ವಿಚಾರ ಮಾಡಿ ಇಂತಹವನು ಮುಖ್ಯವಾಯುವೇ ಎಂದು ನಿಶ್ಚಯಿಸಿ ಶ್ರೀ ಹರಿಯು ಪ್ರಾಣನನ್ನು ಸೃಷ್ಟಿಸಿದನು, ಎಂಬ ಶ್ರುತಿಯಿಂದ ಶ್ರೀ ಹರಿಯು ಅಶ್ವಿನೀ ದೇವತೆಗಳೂ ಕೂಡ ರುದ್ರವರ್ತನಿ ಎನಿಸುತ್ತಾರೆ. ||೩||

**ಋ || (೨೨) ಇಂದ್ರಾಯಾಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ । ಅಣ್ವೀ ಭಿಸ್ತನಾ ಪೂತಾಸಃ ||೪||**

ಅ|| ಚಿತ್ರಭಾನೋ = ಆಶ್ಚರ್ಯಕರಗಳಾದ ಜ್ಞಾನಗಳು ಅಥವಾ ತೇಜಸ್ಸುಗಳುಳ್ಳ ಇಂದ್ರ= ಎಲೋ ವಿಷ್ಣುವೇ, ಎಲೋ ಇಂದ್ರನೇ, ಅಣ್ವೀಭಿಃ = ಸೂಕ್ಷ್ಮ ತಂತುಗಳುಳ್ಳ, ಚೆನ್ನಾಗಿ ಶೋಧನೆಗೆ ಸಾಧನಗಳಾದ ವಸ್ತ್ರಗಳಿಂದ, ತನಾ ವಿಸ್ತರಿಸಿ ಪೂತಾಸಃ = (ಅಭಿಮನ್ಯಮಾನದ್ವಾರಾ ಪವಿತ್ರಗಳಾದ, ಶೋಧಿತಗಳಾದ, ಇಮೇ ಸುತಾಃ = ಈ ಸೋಮರಸಗಳು

(ಸೋಮರಸಾಭಿಮಾನಿಗಳು) ತ್ವಾಯವಃ =ನಿಮ್ಮನ್ನು ಇಚ್ಛಿಸತಕ್ಕವುಗಳಾಗಿ ಇವೆ. ಅಂದರೆ ಇಂದ್ರನು ಯಾವಾಗ ರಸಗಳನ್ನು ಆಸ್ವಾದನ ಮಾಡುವನು ಎಂದು ಇಚ್ಛಿಸುವವಗಳಾಗುತ್ತವೆ. (ಆಧ್ಯಾತ್ಮ ರೂಪ ಅರ್ಥದಲ್ಲಿ) ಸೂಕ್ಷ್ಮಾರ್ಥಗಳನ್ನು ಗ್ರಹಿಸತಕ್ಕ ಜ್ಞಾನಗಳಿಂದ ವಿಸ್ತರಿಸಿ ನಿರ್ಮಲವಾಗಿ ಮಾಡಲ್ಪಟ್ಟ ಮನಸ್ಸು ಮನೋಭಿಮಾನಿಗಳು (ಸೋಮಾಭಿಮಾನಿಗಳೇ ಮನೋಭಿಮಾನಿಗಳು) ನಿಮ್ಮನ್ನು ಇಚ್ಛಿಸುತ್ತಾರೆ. ಆದ ಕಾರಣ ಆಯಾಹಿ = ಬನ್ನಿರಿ.

**ಭಾ ॥ (೧) ಚಿತ್ರಂ ಭದ್ರಂ ರತಂ ಚಿತೌ । ಚಿತ್ರತೇಶ್ಚಾ ಯನೀಯತ್ವಾದದನಾದ್ಯಾ ಚಿತೋ (೨)ಽಭಿದಾ ॥ ತಾದೃಶಾ ರಶ್ಮಯೋ ಜ್ಞಾನಮಸ್ಯೇತಿ ಭಗವಾನ್ಪರಃ । ಚಿತ್ರಭಾನುರಿತಿ ಪ್ರೋಕ್ತಸ್ತೇಜೋ ವಾ ತಾದೃಶಂ ಪ್ರ(ವಿ)ಭೋಃ ॥ (೩) ತ್ವದಿಚ್ಛವ ಇಮೇ ಸೋಮಾಃ ಪಟೀಭಿಃ ಸೂಕ್ಷ್ಮತಂತುಭಿಃ । ವಿಸ್ತ್ರತ್ಯ ಶೋಧಿತಾಃ ಸೂಕ್ಷ್ಮಪ್ರಮಾಭಿರ್ವಾ(ಶ್ವ)ಮನಾಂಸಿ ಚ ॥ (೪) ಸೋಮಾನಾಂ ಮನಸಾಂ ಚೈವ ದೇವತಾಃ ಸೋಮರಶ್ಮಿಗಾಃ । ಸೋಮಬೃತ್ಯಾಃ ಸಮಸ್ತಸ್ಯ ಸೋಮ ಏವಾಧಿಪೋ ಹರಿಃ ॥೪॥**

ಅ॥ (೧) (ಚಿತ್ರಭಾನು ಶಬ್ದವನ್ನು ವ್ಯಾಖ್ಯಾನ ಮಾಡಲಿಕ್ಕಾಗಿ ಚಿತ್ರ ಶಬ್ದಾರ್ಥವನ್ನು ಹೇಳುತ್ತಾರೆ.) ಚಿತ್ರಂ = ಮಂಗಲವು ಶ್ರೇಷ್ಠವು. ಅಥವಾ ಚಿತೌ = ಸಮಸ್ತ ಜೀವ ಚೈತನ್ಯದಲ್ಲಿ, ರತಂ= ನಿಯಾಮಕವಾಗಿ ಆಸಕ್ತವಾದುದು. ಅಥವಾ ಚಿದ್ರತೇಃ = ಜಡ ಭಿನ್ನ ಸುಖ ಸ್ವರೂಪವಾಗಿರುವುದರಿಂದ ಚಿಚ್ಚಸಾ ರತಿಶ್ಚ ಇತಿ ಚಿತ್ರಂ ಅಥವಾ ಚಾಯನೀಯತ್ವಾತ್ = ನೋಡಲರ್ಹವಾಗಿರುವುದರಿಂದ, ಅಥವಾ ಪೂಜಿಸಿಕೊಳ್ಳಲಿಕ್ಕೆ ಯೋಗ್ಯವಾದುದರಿಂದ ಚಿತ್ರಂ, ಚಿತಃ ಅದನಾದ್ಯಾ=ಚೈತನ್ಯವನ್ನು ಸ್ವರೂಪವನ್ನಾಗಲೀ ಅನುಭವಿಸುವುದರಿಂದ ಚಿತ್ರಂ ಎನ್ನಿಸುತ್ತದೆ. (೨) (ಈಗ ಚಿತ್ರಭಾನು ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ) ಅಭೇದ ರೂಪಕಾರಣದಿಂದ ಅಂತಹ ರಶ್ಮಿಗಳು ಚಿತ್ರಗಳೆನಿಸುತ್ತವೆ. ಚಿತ್ರಗಳಾದ ಭಾನವಃ=ರಶ್ಮಿಗಳು. ಅಂದರೆ ಚಿತ್ರಜ್ಞಾನವು ಶ್ರೀ ಹರಿಗೆ ಇದ್ದ ಪ್ರಯುಕ್ತ ಸರ್ವೋತ್ತಮನಾದ ಶ್ರೀ ಹರಿಯು ಚಿತ್ರಭಾನುಃ ಎನಿಸುತ್ತಾನೆ. (ಸರ್ವಜೀವ ಚೈತನ್ಯದಲ್ಲಿ ರತತ್ವ ಮೊದಲಾದ ಭಗವದ್ಧರ್ಮಗಳು ಜ್ಞಾನ ತೇಜಸ್ಸುಗಳ ಧರ್ಮವಾಗುವುದು. ಹೇಗೆ ಎಂದರೆ) ಜ್ಞಾನ ತೇಜಸ್ಸುಗಳಿಗೆ ಪರಮಾತ್ಮನಿಂದ ಅಬೇದವಿದ್ದ ಪ್ರಯುಕ್ತ ಹೇಳಿದ್ದು ಯುಕ್ತವು. ಅಥವಾ ಶ್ರೀ ಪರಮಾತ್ಮನ ಅಸದೃಶ ತೇಜಸ್ಸು ಭಾನವಃ ಎನಿಸುತ್ತದೆ. ೩) ಸೂಕ್ಷ್ಮತಂತುಗಳುಳ್ಳ ಚೆನ್ನಾಗಿ ಶೋಧಿಸಲಿಕ್ಕೆ ಸಾಧನಗಳಾದ ವಸ್ತ್ರಗಳಿಂದ ವಿಸ್ತಾರಮಾಡಿ ಶೋಧಿತಗಳಾದ ಸೋಮಗಳು ಈ ಸೋಮಾಭಿಮಾನಿಗಳು ನಿನ್ನನ್ನು ಇಚ್ಛಿಸುತ್ತವೆ (ಆಧ್ಯಾತ್ಮದಲ್ಲಿ) ಸೂಕ್ಷ್ಮಾರ್ಥ ವಿಷಯಕ ಜ್ಞಾನಗಳಿಂದ, ಮನೋಭಿಮಾನಿಗಳು ನಿರ್ಮಲವಾಗಿ ಮಾಡಲ್ಪಡುತ್ತವೆ. (೪) ಬಾಹ್ಯಸೋಮ ಸ್ಥಾನದಲ್ಲಿ ಆಧ್ಯಾತ್ಮದಲ್ಲಿ ಮನಸ್ಸನ್ನು ತೆಗೆದುಕೊಳ್ಳಲಿಕ್ಕೆ ಏನು ಕಾರಣವು ? ಎಂದರೆ ಸೋಮಶಬ್ದವಾಚ್ಯ ಅಭಿಮಾನಿ ದೇವತೆಗಳ ಐಕ್ಯವು.) ಸೋಮಗಳಿಗೂ ಮನಸ್ಸುಗಳಿಗೂ ಚಂದ್ರರಶ್ಮಿಯಲ್ಲಿರುವ ಸೋಮಭೃತ್ಯರು ದೇವತೆಗಳು. (ಅಂದರೆ ಸೋಮನ ರಶ್ಮಿಗಳಲ್ಲಿದ್ದ ಪ್ರಯುಕ್ತವೂ ಸೋಮಭೃತರಾದ ಪ್ರಯುಕ್ತವೂ ಅಭಿಮಾನಿ ದೇವತೆಗಳಲ್ಲಿ ಸೋಮ ಶಬ್ದ ಪ್ರವೃತ್ತಿಯು. ಸೋಮ ಸಂಬಂಧದಿಂದಲೇ ಸೋಮರಸಗಳಲ್ಲಿಯೂ ಮನಸ್ಸುಗಳಲ್ಲಿಯೂ ಸೋಮಶಬ್ದ ಪ್ರವೃತ್ತಿಯು.) ಸೋಮಗಳಿಗೂ ಮನಸ್ಸುಗಳಿಗೂ ಸೋಮನೇ ಅಭಿಮಾನಿ ದೇವತೆಯು, ಶ್ರೀ ಹರಿಯು ಅಧಿಪತಿಯೇ ಆಗಿರುತ್ತಾನೆ. (ಸರ್ವಥಾ ಅಭಿಮಾನಿಯಲ್ಲ.) ॥೪॥

**ಋ ॥ (೨೩) ಇಂದ್ರಾಯಾಹಿ ಧಿಯೇಷಿತೋ ವಿಪ್ರಜೂತಃ ಸುತಾವತಃ । ಉಪಬ್ರಹ್ಮಾಣಿ ವಾಘತಃ ॥೫॥**

ಅ॥ ಇಂದ್ರ=ಇಂದ್ರನೇ, ಧಿಯಾ = ನಮ್ಮ ಬುದ್ಧಿಯಿಂದ, ಇಷಿತಃ = (ಇಷು ಇಚ್ಛಾಯಾಂ) ಪ್ರಾರ್ಥಿಸಲ್ಪಟ್ಟ ಅಥವಾ (ಇಷ ಗತೌ) ತನ್ನ ಬುದ್ಧಿಯಿಂದ ಪ್ರೇರೇಪಿಸಲ್ಪಟ್ಟ. ವಿಪ್ರಜೂತಃ = (ಜೂನ್ ಗತೌ). ಋತ್ವಿಜ ಬ್ರಾಹ್ಮಣರಿಂದ ಭಕ್ತಿಯಿಂದ ಪ್ರೇರೇಪಿಸಲ್ಪಟ್ಟ ನೀನು, ವಾಘತಃ = ವಾಶೃಶಬ್ದೇ) (ವಚಪರಿಭಾಷಣೇ) ಸ್ತುತಿಸುವ ಹೋತೃವಿನ, ಬ್ರಹ್ಮಾಣಿ = ಸ್ತುತಿ ವಾಕ್ಯಗಳನ್ನು, ಸುತವತಃ=ಸೋಮವುಳ್ಳ ಯಜಮಾನನ, ಅಂದರೆ ಹೋತೃವಿನ ಸ್ತುತಿ ವಾಕ್ಯಗಳನ್ನೂ, ಯಜಮಾನ ಸಂಬಂಧಿ ಸೋಮಗಳನ್ನು ಕುರಿತು ಉಪ ಆಯಾಹಿ = ಬಾ. (ಆಧ್ಯಾತ್ಮದಲ್ಲಿ) ಇಚ್ಛಾರೂಪ ಮನೋವೃತ್ತಿಯುಳ್ಳ (ಅಂದರೆ ನಿನ್ನ ಆಗಮನವನ್ನು ಇಚ್ಛಿಸುವ) ಮೋಕ್ಷ ಸಾಧಕ ಯಜಮಾನನ ಮನೋವೃತ್ತಿಗಳನ್ನು ಕುರಿತು ಮತ್ತು ಮಂತ್ರಗಳಿಂದ ಸ್ತುತಿಸುವ ಹೊತ್ರವಿನ ಸ್ತುತಿ ವಾಕ್ಯಗಳನ್ನು ಕುರಿತು ಬಾ. ಏವಂಚ ಆಹ್ವಾನ ರೂಪವಾದ ಇಂದ್ರ ವಿಷಯಕವಾದ ಸ್ತೋತ್ರವು ವಾಚಕ ಯಜ್ಞವು. ಇಂದ್ರ ವಿಷಯಕವಾದ ಮನೋವೃತ್ತಿಯು ಮಾನಸಿಕ ಯಜ್ಞವು. ॥೫॥

**ಭಾ ॥ (೧) ಅಸ್ಮದ್ಬುಧ್ಯಾ ಪ್ರಾರ್ಥಿತೋ ವಾ ಸ್ವಬುಧ್ಯಾ ಪ್ರೇರಿತೋಽಪಿ ವಾ । ಬ್ರಾಹ್ಮಣೈಃ ಪ್ರೇರಿತೋ ಭಕ್ತ್ಯಾ ವದತೋ ಹೋತುರಂಜಸಾ ॥ ಬ್ರಹ್ಮಾಣಿ ಸೋಮಯುಕ್ತಾನಿ ಯಜಮಾನಸ್ಯ ವೇಚ್ಛತಃ । ಉಪಾಯಾಹ್ಯಪಿ ಯಃ ಕೋಽಪಿ ಸಾಧಕೋ ಯಜ್ಞಕೃನ್ಮತಃ । ಮಾನಸೋ ವಾಚಿಕೋ ವಾ ಸ್ಯಾದ್ಯಜ್ಞೋ ಹೋತಾಽಽಹ್ವಯನ್ ಸ ಚ ॥೫॥**

ಅ॥ (೧) ನಮ್ಮ ಬುದ್ಧಿಯಿಂದ ಪ್ರಾರ್ಥಿಸಲ್ಪಟ್ಟ ಅಥವಾ ತನ್ನ ಬುದ್ಧಿಯಿಂದ ಪ್ರೇರೇಪಿಸಲ್ಪಟ್ಟ ಋತ್ವಿಜರಿಂದ ಭಕ್ತಿಯಿಂದ ಪ್ರೇರೇಪಿಸಲ್ಪಟ್ಟ ನೀನು ಚೆನ್ನಾಗಿ ಸ್ತೋತ್ರ ಮಾಡತಕ್ಕ ಹೋತೃವಿನ ಅಥವಾ ಇಚ್ಛಿಸತಕ್ಕ ಯಜಮಾನನ ಸೋಮಯುಕ್ತಗಳಾದ ಸ್ತುತಿವಾಕ್ಯಗಳನ್ನು ಕುರಿತು ಬರಬೇಕು. (ಹಾಗಾದರೆ ಆಧ್ಯಾತ್ಮದಲ್ಲಿ ಯಜಮಾನನು ಯಾರು? ಯಜ್ಞವು ಯಾವುದು? ಹೋತೃ ಯಾರು? ಎಂದರೆ) ಯಾವನಾದರೂ ಮೋಕ್ಷಕ್ಕೆ ಸಾಧಕನಾದವನು ಯಜ್ಞವನ್ನು ಮಾಡುವವನು ಯಜಮಾನನೆಂದು ಸಮ್ಮತನು. ಇಂದ್ರ ವಿಷಯಕ ಮನೋವ್ಯಾಪಾರವು ಮಾನಸಿಕ ಯಜ್ಞವು. ಆಹ್ವಾನರೂಪ ಇಂದ್ರ ವಿಷಯಕ ಸ್ತೋತ್ರವು ವಾಚಿಕಯಜ್ಞವು ಮೋಕ್ಷವನ್ನು ಸಾಧಿಸುವವನೇ ಯಾವಾಗ ಪರಮಾತ್ಮನನ್ನು ಕರೆಯುವನೋ, ಆಗ ಹೋತಾ ಎನಿಸುತ್ತಾನೆ ॥೫॥

**ಋ ॥ (೨೪) ಇಂದ್ರಾಯಾಹಿ ತೂತುಜಾನ ಉಪ ಬ್ರಹ್ಮಾಣಿ ಹರಿವಃ । ಸುತೇ ದಧಿಷ್ವ ನ ಶ್ಚನಃ ॥೬॥**

ಅ॥ ಹರಿವಃ = (ಹೃಞಹರಣೇ) (ವೃತುವರ್ತನೇ) ಭಕ್ತರ ಜನನ ಮರಣಾದಿ ಸಂಸಾರ ಕ್ಲೇಶವನ್ನು ಪರಿಹರಿಸುತ್ತಾ ಇರುವ ಇಂದ್ರ = ವಿಷ್ಣುವೇ, ಹರಿವಃ = ಹರಿನಾಮಕ ಅಶ್ವಗಳಿಂದ ಕೂಡಿ ಇರುವ, ಅಥವಾ ಶ್ರೀ ವಿಷ್ಣುವಿನಿಂದ ಪ್ರೇರಿತನಾಗಿರುವ ಇಂದ್ರ = ಪುರಂದರನೇ, (ಆಧ್ಯಾತ್ಮದಲ್ಲಿ) ವಿಷಯಗಳನ್ನು ಅಪಹರಿಸುವುದರಿಂದ ಹರಿ ಎನಿಸಿಕೊಂಡ ಇಂದ್ರಿಯಗಳಲ್ಲಿರುವವನೇ, ನಃ=ನಮ್ಮ, ಬ್ರಹ್ಮಾಣಿ = ಸ್ತುತಿ ವಾಕ್ಯಗಳನ್ನು ಕುರಿತು, ತೂತುಜಾನಃ = (ತುಜ ಗತೌ) ವೇಗವುಳ್ಳವನಾಗಿ, ಉಪ ಆಯಾಹಿ = ಬಾ, ಬಂದು, ನಃ = ನಮ್ಮ, ಸುತೇ = ಸೋಮದಲ್ಲಿ, ಚನಃ = (ಮನು ಅವಬೋಧನೇ) ಮನಸ್ಸನ್ನು ದಧಿಷ್ವ= ಮಾಡು. (ಅಂದರೆ ನಮ್ಮದಾದ ಸೋಮರಸವನ್ನು ಕುಡಿಯಲಿಕ್ಕೆ ಇಚ್ಛೆಯನ್ನು ಮಾಡು.)॥೬॥ ೫॥

**ಭಾ ॥ (೧) ವೇಗವಾನ್ ತೂತುಜಾನಃ ಸ್ಯಾತ್ ಸಂಸಾರಮುಪಸಂಹರನ್ । ವರ್ತತೇ ಯೇನ ಹರಿವಾ ಹರಿಭಿರ್ವರ್ತತೇಽಥವಾ।**

**ಹರಣಾದ್ವಿಷಯಾಣಾಂ ಚ ಪ್ರಾಣಾ ಹರಯ ಈರಿತಾಃ || ತೇಷು ವರ್ತತ ಇತ್ಯಸ್ಮಾತ್ತಾಸ್ವಾಥ ಗಮಯೇದಸೌ। ಹರಿವಾ ಹರಿವಾ ನ್ವಾಪಿ ವಿಷ್ಣುವಾ ವರ್ತತೇಽಥವಾ । ಚನೋ ಮನ ಇಹ ಪ್ರೋಕ್ತಂ ಸುಖಂ ಚ ಕ್ವಚಿದೀರ್ಯತೇ ||೬|| ೫||**

ಅ|| (೧) ವೇಗವುಳ್ಳವನು ತೂತುಜಾನಃ ಎನಿಸುವನು. ಯಾವ ಕಾರಣದಿಂದ ಭಕ್ತರ ಸಂಸಾರವನ್ನು ಉಪಸಂಹಾರ (ವಿನಾಶ) ಮಾಡುತ್ತಾ ಇರುತ್ತಾನೋ, ಆ ಕಾರಣ ಶ್ರೀ ಹರಿಯು ಹರಿವಾಃ ಎನಿಸುತ್ತಾನೆ. ಅಥವಾ ಹರಿನಾಮಕ ಕುದುರೆಗಳಿಂದ ಕೂಡಿ ಇರುವ ಪ್ರಯುಕ್ತ ದೇವೇಂದ್ರನು ಹರಿವಾಃ ಎನಿಸುತ್ತಾನೆ. (ಆಧ್ಯಾತ್ಮ) ಇಂದ್ರಿಯಾಣಿ ವಿಷಯಾಣಾಂ ಹರಣಾತ್ ಗ್ರಹಣಾನ್ನಿಮಿತ್ತಾತ್‌ಹರಯಃ) ವಿಷಯಗಳನ್ನು ಅಪಹರಿಸುವ ಪ್ರಯುಕ್ತ (ವಿಷಯಗಳ ಕಡೆಗೆ ಓಡುವ ಪ್ರಯುಕ್ತ) ಇಂದ್ರಿಯಗಳು ಹರಯಃ ಎನಿಸುತ್ತವೆ. ಆ ಇಂದ್ರಿಯಗಳಲ್ಲಿ ನಿಯಾಮಕವಾಗಿರುವುದರಿಂದ ಶ್ರೀ ಹರಿಯು ಹರಿವಾಃ ಎನಿಸುತ್ತಾನೆ. ಅಥವಾ ಇಂದ್ರಿಯಗಳನ್ನು ಆವಾವ ವಿಷಯಗಳಲ್ಲಿ ಪರಿವರ್ತಿಸುವ ಪ್ರಯುಕ್ತ ಶ್ರೀ ಹರಿಯು ಹರಿವಾಃ ಎನಿಸುತ್ತಾನೆ. ಅಥವಾ ಹರಿನಾಮಕ ಅಶ್ವಗಳುಳ್ಳವನು ಹರಿವಃ ಎಂಬ ಶಬ್ದದಿಂದ ಹೇಳಿಸಿಕೊಳ್ಳಲ್ಪಡುತ್ತಾನೆ. ಅಥವಾ ಶ್ರೀ ವಿಷ್ಣುವಿನಿಂದ ಪ್ರೇರಿತನಾಗಿ ಇರುವ ಪ್ರಯುಕ್ತ ದೇವೇಂದ್ರನು ಹರಿವಾಃ ಎನಿಸುತ್ತಾನೆ. ಚನಃ ಎಂದರೆ ಮನಸ್ಸು ಎಂದು ಇಲ್ಲಿ ಹೇಳಲ್ಪಟ್ಟಿದೆ. ಕ್ವಚಿತ್ ಸುಖವು ಹೇಳಲ್ಪಡುತ್ತದೆ. ||೬|| ೫||

**ಋ || (೨೫) ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆ ಗತ । ದಾಶ್ವಾಂ ಸೋ ದಾಶುಷಃ ಸುತಂ ||೭||**

ಅ|| ಓಮಾಸಃ = (ಅ=ಸಮಂತಾತ್, ಊ=ಊರೀಕೃತಾ, ಮಾ = ಪ್ರಮಾ, ಯೈಸ್ತೇ, ಓಮಾಃ) ಚೆನ್ನಾಗಿ ಸ್ವೀಕರಿಸಲ್ಪಟ್ಟ ಜ್ಞಾನವುಳ್ಳವರು ಅಂದರೆ ಸರ್ವ ವಿಷಯಕ ಜ್ಞಾನವುಳ್ಳವರು, ಅಥವಾ (ಓ ಶಬ್ದೋಪಪದಾತ್, ಮಾ ನಿರ್ಮಾಣೇ) ಓಂಕಾರ ವಾಚ್ಯನಾದ ಶ್ರೀ ವಿಷ್ಣುವಿನಿಂದ ನಿರ್ಮಿತರಾದ, ಚರ್ಷಣೀಧೃತಃ = ಪ್ರಜೆಗಳಿಗೆ ಧಾರಕರಾದ, ದಾಶ್ವಾಂಸಃ = (ದಾಶೃದಾನೇ) ಅಭೀಷ್ಟಪ್ರದರಾದ, ವಿಶ್ವೇದೇವಾಸಃ = (ವಿಶಪ್ರವೇಶನೇ) ಸರ್ವತ್ರ ಪ್ರವಿಷ್ಟರಾದುದರಿಂದ ವಿಶ್ವೇ ಎನಿಸಿಕೊಂಡ ಕ್ರೀಡಾದಿ ಗುಣ ವಿಶಿಷ್ಟಗಳಾದ ಭಗವದ್ರೂಪ ವಿಶೇಷಗಳೇ, ವಿಶ್ವೇ ದೇವತೆಗಳೇ, ದಾಶುಷಃ = ಹೋಮಕರ್ತನಾದ ಅಧ್ವರ್ಯುವಿನ ಅಥವಾ ಯಜಮಾನನ, ಸುತಂ = ಸೋಮವನ್ನು ಕುರಿತು, ಆ ಗತ = ಬನ್ನಿರಿ.

**ಭಾ || (೧) ಆ ಸಮಂತಾತ್ಸ್ವೀಕೃತಾ ಮಾ ಓಮಾ ಇತಿ ಚ ಶಬ್ದಿತಾಃ || (೨) ಓಂ ನಾಮಾ ಭಗವಾನ್ವಿಷ್ಣುಸ್ತೇನ ವಾ ನಿರ್ಮಿತಾಃ ಸುರಾಃ || (೩) ಓತಾ ಮಾನೇಷು ಮಾ ಯೇಷು ಪ್ರೋತಾ ಓಮಾ ಇತೀರಿತಾಃ || (೪) ಪ್ರಜಾಶ್ಚರ್ಷಣಯಃ ಪ್ರೋಕ್ತಾ ವಿಶ್ವೇ ತೇಽಚ ಪ್ರವೇಶನಾತ್ । ಸರ್ವೇವಾಽಥ ವಿಶಾಂ ವಾನಾಚ್ಛಬ್ದಃ (೫) ಕಸ್ಮೈ ಯಥಾ ಭವೇತ್ । (೬) ದಾತಾರೋ ಯಜಮಾನಾ ವಾ ||೭||**

ಅ|| (೧) ಅ= ಚೆನ್ನಾಗಿ ಸ್ವೀಕರಿಸಲ್ಪಟ್ಟ ಪ್ರಮೆ (ಯಥಾರ್ಥ ಜ್ಞಾನ)ವುಳ್ಳವರು ಓಮಾಃ ಎನಿಸುತ್ತಾರೆ. ಸರ್ವ ವಿಷಯಕ ಜ್ಞಾನವುಳ್ಳವರು (ಇದು ಶ್ರೀ ಹರಿಯಲ್ಲಿ ಮುಖ್ಯವು ದೇವತೆಗಳಲ್ಲಿ ಅಮುಖ್ಯವು) ಅಥವಾ ಷಡ್ಗುಣ ಭರಿತನಾದ ಶ್ರೀ ವಿಷ್ಣುವು ಓಂ ಶಬ್ದ ಸಮಾನಾರ್ಥವುಳ್ಳ ಓ ಎಂದು ಹೆಸರುಳ್ಳವನು ಓ ಎಂದು ಹೆಸರುಳ್ಳ ಶ್ರೀ ವಿಷ್ಣುವಿನಿಂದ ನಿರ್ಮಿಸಲ್ಪಟ್ಟ

ಉತ್ಪನ್ನರಾದ ದೇವತೆಗಳು ಓಮಾಃ ಎನಿಸುತ್ತಾರೆ. (೩) ಅಥವಾ ಪ್ರಮಾಣಗಳಲ್ಲಿ ಪ್ರತಿಪಾದ್ಯರಾಗಿ ಪ್ರವಿಷ್ಟರಾದವರು, ಓಮಾಃ ಎನಿಸುತ್ತಾರೆ ಅಥವಾ ಯಥಾರ್ಥ ಜ್ಞಾನಗಳು ಯಾರಲ್ಲಿ ಪ್ರತಿಪಾದಕಗಳಾಗಿ ಪ್ರವಿಷ್ಟಗಳಾಗಿರುತ್ತವೋ ಅವರು ಓಮಾಃ ಎನಿಸುತ್ತಾರೆ. (೪) ಚರ್ಷಣಿಗಳೆಂದರೆ ಪ್ರಜೆಗಳು. ಹೀಗೆ ನೈಘಂಟುಕರಿಂದ ಹೇಳಲ್ಪಟ್ಟಿವೆ. ಆ ಭಗವದ್ರೂಪ ವಿಶೇಷಗಳೂ ದೇವತೆಗಳೂ ಕೂಡ ಪ್ರೇರಕರಾಗಿ ಸರ್ವತ್ರ ಪ್ರವೇಶ ಮಾಡಿದುದರಿಂದ ವಿಶ್ವೇ ಎನಿಸುತ್ತಾರೆ. ಅಥವಾ ಸಮಸ್ತ ದೇವತೆಗಳು ವಿಶ್ವೇ ಎನಿಸುತ್ತಾರೆ. ಅಥವಾ ಪ್ರಜೆಗಳ ಗಮನಕ್ಕೆ ಕಾರಣರಾದುದರಿಂದ ವಾ ಪ್ರಜೆಗಳನ್ನೂ ಚೆನ್ನಾಗಿ ತಿಳಿದವರಾದುದರಿಂದ ವಿಶೋ ವಾಂತಿ ಎಂಬ ವ್ಯುತ್ಪತ್ತಿಯಿಂದ ವಿಶ್ವೇ ಎನಿಸುತ್ತಾರೆ. (೫) (ಸರ್ವ ಶಬ್ದ ಪರ್ಯಾಯವಾದ ವಿಶ್ವ ಶಬ್ದಕ್ಕೇನೇ ಸರ್ವನಾಮ ಸಂಜ್ಞೆಯಿರುವುದು. ಸರ್ವನಾಮ ಸಂಜ್ಞೆಯುಳ್ಳ ಶಬ್ದಕ್ಕೇನೇ ಜಸ್ ಪ್ರತ್ಯಯಕ್ಕೆ ಶೀ (ಈ) ಭಾವವನ್ನು ವಿಧಿಸುವುದರಿಂದ ಪ್ರವೇಶನ, ವಿಶೋ ಶಾಂತಿ ಎಂಬ ಹಿಂದಿನ ಕಲ್ಪಗಳಲ್ಲಿಯೂ ವಿಶ್ವೇ ಎಂಬ ರೂಪವು ಸಿದ್ಧಿಸುವುದಿಲ್ಲ ಎಂದರೆ) ಕಸ್ಮೈ ದೇವಾ ಹವಿಷಾ ವಿಧೇಮ ಎನ್ನುವಲ್ಲಿ ಚತುರ್ಮುಖ ಪರ್ಯಾಯವಾದ ಕ ಶಬ್ದಕ್ಕೆ ಸರ್ವನಾಮ ಸಂಜ್ಞೆಯು ಇಲ್ಲವಾದರೂ ಸರ್ವೇವಿಧಯಃ ಛಂದಸಿ ಬಹುಲಂ ಭವಂತಿ ಎಂದು ಸರ್ವ ನಾಮ್ನಃ ಸ್ಮೈ ಎಂದು ಸರ್ವನಾಮ ಶಬ್ದದ ಕಾರ್ಯವು ಕಾಣುತ್ತದೋ, ಹೀಗೆಯೇ ಇಲ್ಲಿಯೂ ವಿಶ್ವ ಶಬ್ದಕ್ಕೆ ಸರ್ವನಾಮ ಸಂಜ್ಞೆಯಿಲ್ಲವಾದರೂ ಸರ್ವನಾಮ ಕಾರ್ಯವು ಜಸ್ ಪ್ರತ್ಯಯಕ್ಕೆ ಈ ಕಾರವು ಬರುವುದು. ಆದ ಕಾರಣ ವಿಶ್ವೇ ಎಂಬ ರೂಪವು ಯುಕ್ತವು. (೬) ದಾಶ್ವಾಂಸಃ = ಅಭೀಷ್ಟವನ್ನು ಕೊಡುವವರು ಅಥವಾ ಯಜಮಾನರು. (ಫಲಕ್ಕಾಗಿ ಯಜ್ಞ ಮಾಡತಕ್ಕದು ಶ್ರೀ ವಿಷ್ಣುವಿನಲ್ಲಿ ಬಾಧಿತವಾದ) ಪ್ರಯುಕ್ತ ಯಜಮಾನರು ಎನ್ನುವುದು ದೇವತಾಂತರ ವಿಷಯಕವು.) ||೭||

**ಋ || (೨೬) ವಿಶ್ವೇ ದೇವಾಸೋ ಅಪ್ತುರಃ ಸುತಮಾಗಂತ ತೂರ್ಣಯಃ ಉಸ್ರಾ ಇವ ಸ್ವಸರಾಣಿ ||೮||**

ಅ|| ಅಪ್ತುರಃ=(ತುರ ತ್ವರಣೇ) (ಅಪಃಕರ್ಮಾಣಿ, ತುತುರತಿ, ತ್ವರಯಂತಿ ಫಲೋನ್ಮುಖೀಕುರ್ವಂತಿ, ಇತಿ ಅಪ್ತುರಃ) ಕರ್ಮಗಳಲ್ಲಿ ವೇಗವುಳ್ಳ, ವಿಶ್ವೇ ದೇವಾಸಃ =ವಿಶ್ವೇದೇವತೆಗಳೇ, ಸ್ವಸರಾಣಿ=ದಿನಗಳನ್ನು ಕುರಿತು ಉಸ್ರಾ ಇವ=ರಶ್ಮಿಗಳಂತೆ, ತೂರ್ಣಯಃ = (ಇತ್ವರಾ ಸಂಭ್ರಮೇ) ವೇಗವುಳ್ಳವರಾಗಿ, ಸುತಂ = ನಮ್ಮದಾದ ಸೋಮವನ್ನು ಕುರಿತು, ಅಗಂತ = ಬನ್ನಿರಿ. ||೮||

**ಭಾ || ಅಪ್ತುರಃ || ಕರ್ಮವೇಗಿನಃ । ಉಸ್ರಾಸ್ತು ರಶ್ಮಯಶ್ಚೈವ ಸ್ವಸರಾಣಿ ದಿನಾನಿಚ ||೮||**

ಅ|| ಅಪ್ತುರಃ = ಕರ್ಮವೇಗವುಳ್ಳವರು, ಉಸ್ರಾಃ =ರಶ್ಮಿಗಳು. ಸ್ವಸರಾಣಿ = ದಿನಗಳು ||೮||

**ಋ || (೨೭) ವಿಶ್ವೇದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ । ಮೇಧಂ ಜುಷಂತ ವಹ್ನಯಃ ||೯||**

ಅ|| ಅಸ್ರಿಧಃ = ಅಹಿಂಸ್ಯರಾದ, ಏಹಿ ಮಾಯಾಸಃ = (ಇಷು ಇಚ್ಛಾಯಾಂ) ಆ= ಚೆನ್ನಾಗಿ, ಇ=ಇಚ್ಛಾದೀನವಾದ, ಹಿ=ನಿಶ್ಚಿತವಾದ, ಮಾಯಾಸಃ=ಜ್ಞಾನವುಳ್ಳ, (ಅಂದರೆ ಸರ್ವವಿಷಯಕವಾದ ಸ್ವತಂತ್ರವಾದ ನಿಶ್ಚಿತ ಜ್ಞಾನವುಳ್ಳ) ಅದ್ರುಹಃ =(ದ್ರುಹ ಕ್ಲೇಶೇ) ದುಃಖವಿಲ್ಲದಿರುವ, ವಹ್ನಯ=(ವಹ ಪ್ರಾಪಣೇ) ಜಗತ್ಪ್ರವರ್ತಕರಾದ, ವಿಶ್ವೇದೇವಾಸಃ=ವಿಶ್ವೇದೇವತೆಗಳೇ,

ಮೇಧ=ನಮ್ಮ ಯಜ್ಞವನ್ನು, ಜುಷಂತ = (ಜುಷೀಪ್ರೀತಿ ಸೇವನನಯೋಃ ಸೇವಿಸಿರಿ. ಅವರು ಸೇವಿಸಲಿ ಎಂದು ತಾತ್ಪರ್ಯವು. ||೯||

ಭಾ || (೧) ಅಸಂಸಾರಾದಸ್ರಿಧಸ್ತೇ ದೇವಾಶ್ಚೇನ್ಮೋಕ್ಷ ನಿಶ್ಚಯಾತ್ | ಯಥೇಷ್ಟನಿಶ್ಚಿತ ಜ್ಞಾನಾ ಏಹಿಮಾಯಾಃ ಸಮಂತತಃ | ಅದುಃಖತ್ವಾದದ್ರುಹಸ್ತೇ ಮೇಧಂ ಯಜ್ಞಂ ಜುಷಂತು ನಃ | ವಹ್ನಯೋ ವಹನಾದಸ್ಯ ||೯||

ಅ|| (೧) ಭಗವದ್ರೂಪಗಳು ಸಂಸಾರವಿಲ್ಲದಿರುವುದರಿಂದ, (ನಿತ್ಯಮುಕ್ತಕಗಳಾದ ಪ್ರಯುಕ್ತ) ಅಸ್ರಿಧಃ =ಅಹಿಂಸ್ಯರು. ದೇವತೆಗಳಾದರೆ, ನಿಶ್ಚಿತಮೋಕ್ಷವುಳ್ಳವರಾದುದರಿಂದ ಔಪಚಾರಿಕವಾಗಿ ಅಸ್ರಿಧಃ=ಅಹಿಂಸ್ಯರು. ಸರ್ವವಿಷಯಕ ಸ್ವತಂತ್ರ ನಿಶ್ಚಯ ಜ್ಞಾನವುಳ್ಳವರು ಏಹಿಮಾಯಾಃ ಎನಿಸುತ್ತಾರೆ. ದುಃಖವಿಲ್ಲದಿರುವುದರಿಂದ ಅದ್ರುಹಃ ಎನಿಸುತ್ತಾರೆ. ಅಂತಹ ದೇವತೆಗಳು ನಮ್ಮ ಯಜ್ಞವನ್ನು ಸೇವಿಸಲಿ. ಜಗತ್ಪ್ರವರ್ತಕರಾದುದರಿಂದ ವಹ್ನಯಃ ಎನಿಸುತ್ತಾನೆ. ||೯||

ಋ || (೨೮) ಪಾವಕಾ ನಸ್ಸರಸ್ವತೀ ವಾಜೇಭಿರ್ವಾಜಿನೀವತೀ | ಯಜ್ಞಂ ವಷ್ಟು ಧಿಯಾವಸುಃ ||೧೦||

ಅ|| ಪಾವಕಾ =(ಪೂಞ್‌ಪವನೇ) ಶೋಧಕವಾದ, ವಾಜಿನೀವತೀ = ಶ್ರೀ ವಿಷ್ಣುವಿಗೂ ಸರಸ್ವತಿಗೂ ಅನ್ನಾಧಿಪತಿಯಾದ ಸೂರ್ಯನು ಪುತ್ರನಾಗಿದ್ದಾನೆ. ಆದ ಕಾರಣ ಸೂರ್ಯನು ಪುತ್ರನಾಗಿ ಉಳ್ಳ, ಅಥವಾ ಅನ್ನವಿದ್ದ ಪ್ರಯುಕ್ತವೂ ಜ್ಞಾನಯುದ್ಧವಿದ್ದ ಪ್ರಯುಕ್ತವೂ ವಾಜಿನೀ ಎನಿಸಿಕೊಂಡ ಮಾತಿಗೆ ಅಭಿಮಾನಿನಿಯಾದ ಪಾರ್ವತಿಯು ಪುತ್ರಿಯಾಗಿ ಉಳ್ಳ, ಧಿಯಾವಸುಃ= ಬುದ್ಧಿಯಿಂದ ಕೂಡಿ ವಾಸಿಸುವ, (ನಿತ್ಯಜ್ಞಾನವುಳ್ಳ) ಸರಸ್ವತೀ=(ಸೃಗತೌ) ವ್ಯಾಪ್ತ್ಯಾದಿ ಗುಣಗಳುಳ್ಳ ಸ್ತ್ರೀರೂಪನಾದ ಶ್ರೀ ಹರಿಯು, ಅಥವಾ ವ್ಯಾಪ್ತನಾದ ಸರ್ವಜ್ಞನಾದ ಶ್ರೀ ಹರಿಯು ಪ್ರಿಯನಾಗಿ ಉಳ್ಳ ವಾಯುವಿನ ಹೆಂಡತಿಯಾದ ಭಾರತಿಯ ನಃ=ನಮ್ಮ, ಯಜ್ಞಂ=ಬಾಹ್ಯಯಜ್ಞವನ್ನು (ಆಧ್ಯಾತ್ಮದಲ್ಲಿ) ಜ್ಞಾನಯಜ್ಞವನ್ನೂ, ವಾಜೇಭಿಃ = ಅಶನಗಳಿಂದ (ಆಧ್ಯಾತ್ಮದಲ್ಲಿ) ಜ್ಞಾನ ಯುದ್ಧಗಳಿಂದ, (ಅಂದರೆ ಅಶನಾದಿಗಳನ್ನು ಕೊಟ್ಟು) ವಷ್ಟು = (ವಹ ಪ್ರಾಪಣೇ) ಪ್ರವರ್ತಿಸಲಿ. ||೧೦||

ಭಾ || (೧) ಶೋಧಕತ್ವಾತ್ತು ಪಾವಕಾ (೨) ಸರಣಾತ್ಸರ್ವಗತ್ವೇನ ಸರ್ವಜ್ಞೋ ವಾಸೆರೋ ಹರಿಃ | ಸರಸಃ ಸರತಿತ್ವಾದ್ವಾ ತದ್ವತ್ವೇವ ಸರಸ್ವತೀ || (೩) ಹರೌ ಗುಣಾಃ ಸರತ್ವಬ್ದಾಃ (೪) ದೇವೀ ತು ಹರಿವಾಚಿನೀ | ಹರಿಪ್ರಿಯತತ್ವತೋ ವಾಯುಃ ಸರಸ್ವಾರಸ್ತತ್ಪ್ರಿಯಾಽಥವಾ || (೫) ಗುಣಸ್ತೇನ ತತತ್ವಾದ್ವಾ ಭಗವಾಂಸ್ತು ಸರಸ್ವತೀ || (೬) ಸ್ತ್ರೀರೂಪಶ್ಚೈವ ಪುಂರೂಪೋ ಭಗವಾನ್ನನಪುಂಸಕಃ || (೭) ಸ್ತ್ರೀಪುಂದೋಷವಿಹೀ ನತ್ವಾದಪಿ ತಚ್ಛಬ್ದಗೋಚರಃ || (೮) ಅನ್ನೇನೋ ವಾಜಿನಾಮೀಶೋ ವಾಜಿನೀಃ || (೯) ಛಂದಾಂಸ್ಯಶ್ವಾ ಯತಸ್ತಸ್ಯ ತೇಚೇನಾ ಅನ್ಯವಾಜಿನಾಂ | (೧೦) ಅನ್ನವತ್ತ್ವಾತ್ತದ್ವಾಜಿನೀ ವಾಗ್ಜ್ಞಾನಯುದ್ಧತ್ವತೋಽಪಿವಾ || (೧೧) ಸಪುತ್ರೋ ವಾಗುಮಾತಸ್ಯಾಃ ಪುತ್ರೀ ತದ್ವಾಜಿನೀವತೀ| ಸರಸ್ವತೀ ಹರಿರ್ಞಾಪಿ ಯಜ್ಞಂ ವಹತು ನೋಽಶನೈಃ | (೧೨) ಅನ್ನದಾ ಹಿ ಸದಾ ದೇವೀ ಧಿಯಾ ಸಹ ವಸೇದ್ಯತಃ | ಧಿಯಾವಸುರ್ನಿತ್ಯ ಬೋಧಾ ||೧೦||

ಅ|| (೧) ಸಮಸ್ತ ವಸ್ತುಗಳಿಗೆ ಶೋಧಕನಾದುದರಿಂದ ಸ್ತ್ರೀರೂಪನಾದ ಶ್ರೀ ಹರಿಯೂ ಭಾರತಿಯೂ ಪಾವಕಾ ಎನಿಸುತ್ತಾರೆ. (೨) (ಸರಸ್ವತೀ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಸರ್ವತ್ರ ವ್ಯಾಪ್ತನಾಗಿದ್ದು ಸರ್ವತ್ರ ಸಂಚರಿಸುವುದರಿಂದ

ಶ್ರೀ ಹರಿಯು ಸರಃ ಎನಿಸುತ್ತಾನೆ. (ಸರಂತಿ ಸರ್ವತ್ರ ಗಚ್ಛಂತಿ ಸರ್ವಂ ಜಾನಂತಿ) ಅಥವಾ ಸರತೀತಿ ಸರಃ ಎಂಬ ವ್ಯುತ್ಪತ್ತಿಯಿಂದ ಸರ್ವಜ್ಞನಾದುದರಿಂದ ಸರಃ ಎನಿಸುತ್ತಾನೆ. ಅಥವಾ (ರಸೇನ ಬಲೇನ ಸಹಿತಃ ರಸಾ ರತ್ಯಾ ಚ ಸಹಿತಃ ಬಲದಿಂದ ಕೂಡಿರುವುದರಿಂದ ಸರಃ ಎನಿಸುತ್ತಾನೆ. ಅಥವಾ (ರಸೇನ ಬಲೇನ ಸಹಿತಃ, ರಸಾ ರತ್ಯಾ ಚ ಸಹಿತಃ ಬಲದಿಂದ ಕೂಡಿರುವುದರಿಂದ ಅಂದರೆ ಬಲಿಷ್ಠನಾದುದರಿಂದ ಅಥವಾ ಸುಖದಿಂದ ಕೂಡಿರುವುದರಿಂದ ಅಥವಾ ಕ್ರೀಡಾದಿ ಗುಣಗಳಿಂದ ಕೂಡಿರುವುದರಿಂದ ಸರಃ ಎನಿಸುತ್ತಾನೆ. ಹೀಗೆ ಸರಶ್ಶಬ್ದವಾಚ್ಯನಾದ ಶ್ರೀ ಹರಿಯು ಭಾರತಿಯಲ್ಲಿ ನಿಯಾಮಕನಾಗಿದ್ದುದರಿಂದ ಭಾರತಿಯು ಸರಸ್ವತೀ ಎನಿಸುತ್ತಾಳೆ. (ಈ ವ್ಯಾಖ್ಯಾನವು ಇತರ ದೇವತಾ ವಿಷಯಕವು.) (೩) ಸರಸ್ವತೀ ಶಬ್ದದಿಂದ ಶ್ರೀ ಹರಿಯು ವಿವಕ್ಷಿತನಾದರೆ, ಸರಂತಿ = ಸರ್ವತ್ರ ಗಚ್ಛಂತ್ರಿ, ಸರ್ವಂ ಜಾನಂತಿ, ರಸೇನ = ಬಲದಿಂದ ಕೂಡಿದವುಗಳೂ ಸುಖದಿಂದ ಕೂಡಿದವುಗಳು, ಎಂಬ ವ್ಯುತ್ಪತ್ತಿಯಿಂದ ವ್ಯಾಪ್ತಿ ಜ್ಞಾನಾದಿಗುಣಗಳು ವಾಚಕಗಳಾಗಿ ಸರಶ್ಶಬ್ದವುಳ್ಳವುಗಳು. ಏವಂಚ ಜ್ಞಾನಾದಿ ಗುಣಗಳಿಗೆ ಸರ್ವಜ್ಞಾತ್ವಾದಿಗುಣಗಳಿಂದ ಕೂಡಿದ ಶ್ರೀ ಹರಿಯಿಂದ ಅಭೇದವಿದ್ದ ಪ್ರಯುಕ್ತ ಅವುಗಳಿಗೂ ಸರ್ವಜ್ಞಾತ್ವಾದಿಗಳು. ತಥಾಚ ಸರಃ ಎನಿಸಿಕೊಂಡ ವ್ಯಾಪ್ತ್ಯಾದಿ ಗುಣಗಳು ಶ್ರೀ ಹರಿಗೆ ಇದ್ದ ಪ್ರಯುಕ್ತ ಸ್ತ್ರೀರೂಪನಾದ ಶ್ರೀ ಹರಿಯು ಸರಸ್ವತೀ ಎನಿಸುತ್ತಾನೆ. (೪) ಬ್ರಹ್ಮಪತ್ನಿಯಾದ ಸರಸ್ವತಿಯು ಭಗವದ್ವಾಚಕಗಳಿಂದ ವೇದಗಳಿಗೆ ಅಭಿಮಾನಿನಿಯಾದುದರಿಂದ ಸರಃ ಎನಿಸಿಕೊಂಡ ಶ್ರೀ ಹರಿಯನ್ನು ಹೇಳುವವಳು, (ಅಂದರೆ ಸಮಸ್ತ ವೇದಗಳಿಂದ ವಾಚ್ಯನಾದ ಶ್ರೀ ಹರಿಯುಳ್ಳವಳು. ಶ್ರೀ ಹರಿಯು ವಾಚ್ಯನು. ವೇದಗಳು ವೇದಾಭಿಮಾನಿನಿಗಳೂ ವಾಚಕಗಳು.) ಸರಃ ಎನಿಸಿಕೊಂಡ ಶ್ರೀ ಹರಿಗೆ ಪ್ರಿಯರಾದುದರಿಂದ ವಾಯುದೇವರು ಸರಸ್ವಾನ್ ಎನಿಸುತ್ತಾರೆ. ಆ ವಾಯುದೇವರ ಹೆಂಡತಿಯು ಸರಸ್ವತೀ ಎನಿಸುತ್ತಾಳೆ. (೫) ಸರಃ ಎನಿಸಿಕೊಂಡ ಜ್ಞಾನಾದಿ ಗುಣಗಳೆಂಬ ದ್ರವ್ಯದಿಂದ ವ್ಯಾಪ್ತನಾದ ಪ್ರಯುಕ್ತ ಶ್ರೀ ಹರಿಯು ಸರಸ್ವತಃ ಎನಿಸುತ್ತಾನೆ. ಶ್ರೀ ಹರಿಯ ಸ್ತ್ರೀರೂಪವು ಸರಸ್ವತೀ ಎನಿಸುತ್ತದೆ. (೬) (ಶ್ರೀ ಹರಿಯಲ್ಲಿ ಸ್ತ್ರೀಲಿಂಗ ಪ್ರಯೋಗವು ಹೇಗೆ ? ಶ್ರೀ ಹರಿಗೆ ಸ್ತ್ರೀತ್ವವಿದ್ದ ಪ್ರಯುಕ್ತ ಎಂದರೆ ಅಗ್ನಿ ಮೊದಲಾದ ಪುಲ್ಲಿಂಗ ಪ್ರಯೋಗವು ಹೇಗೆ ? ಎಂದರೆ) ಶ್ರೀ ಹರಿಯು ಸ್ತ್ರೀ ರೂಪನೂ ಪುರುಷ ರೂಪನೂ ಆಗಿರುತ್ತಾನೆ. (ಹೀಗಾದರೆ ಶ್ರೀಹರಿಯಲ್ಲಿ ಬ್ರಹ್ಮ ಮೊದಲಾದ ನಂಪುಂಸಕ ರೂಪವುಳ್ಳವನು ಆಗುವುದೇ ಇಲ್ಲ. (೭) ಪುರುಷೇಚ್ಛಾ ಮೊದಲಾದ ಸ್ತ್ರೀದೋಷಗಳು ಸ್ತ್ರೀಯರಲ್ಲಿ ಇಚ್ಛಾ ಸ್ತ್ರೀವಶತ್ವ ಮೊದಲಾದ ಪುರುಷ ದೋಷಗಳು ಇವುಗಳಿಂದ ವಿರಹಿತನಾದಾಗ್ಯೂ ಸ್ತ್ರೀಲಿಂಗ ಪುಲ್ಲಿಂಗ ಶಬ್ದಗಳಿಗೆ ವಿಷಯನಾಗುತ್ತಾನೆ. (೮) (ವಾಜಿನೀವತೀ) ಶಬ್ದವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ವಾಜಿನೀ ಶಬ್ದಾರ್ಥವನ್ನು ಹೇಳುತ್ತಾರೆ.) ವಾಜಂ = ಅನ್ನವು. ಅತಿಶಯಾರ್ಥದಲ್ಲಿ ಇಕಾರವು. ವಾಜಿ=ಅನ್ನವನ್ನು ನಯತೀತಿ ಎಂಬ ವ್ಯುತ್ಪತ್ತಿಯಿಂದ ವಾಜಿನೀ=ಸೂರ್ಯನು. ಅಂದರೆ ಅನ್ನೇನಃ = ಅನ್ನಕ್ಕೆ ಸ್ವಾಮಿಯು. ಅಥವಾ ವಾಜಸ್ಯ ಇನಃ = ಅನ್ನಕ್ಕೆ ಸ್ವಾಮಿಯು. ವಾಜೇನ ಏವ ವಾಜಿನೀ = ಸೂರ್ಯನು. ಅಥವಾ ವಾಜಿನಾಂ - ಕುದುರೆಗಳಿಗೆ, ಅಥವಾ ಅನ್ನವುಳ್ಳವರಿಗೆ, ಇನಃ = ಸ್ವಾಮಿಯು ಹೀಗೆ ವಾಜಿನೀ ಶಬ್ದದಿಂದ ಸೂರ್ಯನು ಹೇಳಿಸಿ ಕೊಳ್ಳಲ್ಪಡುತ್ತಾನೆ. ಅಥವಾ ವಾಜಿನಾಂ = ಅಶ್ವಗಳಿಗೆ, ಇನಾನಿ = ಸ್ವಾಮಿಗಳು. ಏಳು ಛಂದಸ್ಸುಗಳು. ವಾಜಿನಾನಿ ಅಸ್ಯಸಂತಿ ಎಂಬ ವ್ಯುತ್ಪತ್ತಿಯಿಂದ, ಏಳು ಛಂದಸ್ಸುಗಳಿಗೆ ಸ್ವಾಮಿಯು, (೯) ಸೂರ್ಯನು ಛಂದಸ್ಸುಗಳಿಗೆ ಸ್ವಾಮಿಯು ಹೇಗೆ ಛಂದಸ್ಸುಗಳು ಅಶ್ವಗಳಿಗೆ ಸ್ವಾಮಿಯು ಹೇಗೆ ? ಎಂದರೆ ) ಸೂರ್ಯನ ಕುದುರೆಗಳು ಯಾವ ಕಾರಣದಿಂದ ಛಂದೋಭಿಮಾನಿಗಳೋ, ಅಂತಹ ಕುದುರೆಗಳು ಇತರ ಕುದುರೆಗಳಿಗೆ ಸ್ವಾಮಿಗಳು. (೧೦) (ವಾಜಿನೀ ಶಬ್ದಕ್ಕೆ ಅನ್ನಾರ್ಥವನ್ನು ಹೇಳುತ್ತಾರೆ.) ಅನ್ನವಿರುವುದರಿಂದಲೂ (ಅಂದರೆ ಮಾತಿಗೆ ಅನ್ನ ಭೋಜನದಿಂದ ಪುಷ್ಟಿಯಿರುವುದರಿಂದಲೂ) ಜ್ಞಾನಕ್ಕಾಗಿ ಯುದ್ಧವಿರುವುದರಿಂದಲೂ, (ಅಂದರೆ ವಾಗಿಂದ್ರಿಯವು ವಾದ ಜಲ್ಪ

ಮೊದಲಾದವುಗಳನ್ನು ಹುಟ್ಟಿಸುವುದರಿಂದಲೂ) ವಾಕ್ಕು, ವಾಜಿನೀ ಎನಿಸುತ್ತದೆ. (೧೧) ಆ ಸೂರ್ಯನು ವಿಷ್ಣುವಿನ, ಮತ್ತು ಪ್ರಸಿದ್ಧಳಾದ ಸರಸ್ವತಿಯ ಪುತ್ರನು. ವಾಗಭಿಮಾನಿನಿಯಾದ ಪಾರ್ವತಿಯು ಮಗಳು. ಹೀಗೆ ಎರಡೂ ಇದ್ದ ಪ್ರಯುಕ್ತ (ವಾಜಿನೀ ಶಬ್ದವಾಚ್ಯರಾದ ಸೂರ್ಯ ಪಾರ್ವತಿಯರು ಇದ್ದ ಪ್ರಯುಕ್ತ) ಸರಸ್ವತಿಯು ವಾಜಿನೀವತೀ ಎನ್ನಿಸುತ್ತಾಳೆ. ಇಂತಹ ಸರಸ್ವತಿಯು ಶ್ರೀ ಹರಿಯಾಗಲೀ, ನಮ್ಮ ಬಾಹ್ಯಯಜ್ಞವನ್ನು ಅನ್ನಾದಿಗಳನ್ನು ಕೊಟ್ಟು ಅಧ್ಯಾತ್ಮದಲ್ಲಿ ಜ್ಞಾನ ಯುದ್ಧಗಳಿಂದಲೂ (ಜ್ಞಾನಕ್ಕಾಗಿ ಯುದ್ಧ ಮಾಡಿ ಆಧ್ಯಾತ್ಮಿಕ ಜ್ಞಾನ ಯುದ್ಧವನ್ನು) ಪ್ರವರ್ತಿಸಲಿ. (೧೨) ಸರಸ್ವತೀ ದೇವಿಯು ಸದಾ ಅನ್ನವನ್ನು ಕೊಡುವವಳು. ಯಾವ ಕಾರಣದಿಂದ ಸರ್ವದಾ ಬುದ್ಧಿಯಿಂದ ಕೂಡಿಯೇ ಆವಾಸ ಮಾಡುವವಳೋ ಆದ ಕಾರಣ ಧಿಯಾವಸುಃ ಎನಿಸುತ್ತಾಳೆ. ಅಂದರೆ ನಿತ್ಯಜ್ಞಾನವುಳ್ಳವಳು. ||೧೦||

**ಋ|| (೨೯) ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ । ಯಜ್ಞಂ ದದೇ ಸರಸ್ವತೀ ||೧೧||**

ಅ|| ಸೂನೃತಾನಾಂ = (ಸುಷ್ಠುನೃತ್ಯಂತಿ ಅನೇನ ಎಂಬ ವ್ಯುತ್ಪತ್ತಿಯಿಂದ) ಒಳ್ಳೆ ವಚನಗಳಿಗೆ, ಚೋದಯಿತ್ರೀ = ಪ್ರೇರಕಳಾದ, ಸುಮತೀನಾಂ = ಒಳ್ಳೇ ಬುದ್ಧಿಗಳನ್ನು, ಚೇತಂತಿ = ತಿಳಿಸಿಕೊಡುವ (ಒಳ್ಳೆ ಬುದ್ಧಿಗಳನ್ನು ಜ್ಞಾಪಿಸಿಕೊಡುವ) ಸರಸ್ವತೀ = ಶ್ರೀ ಹರಿಯು, ಸರಸ್ವತಿಯೂ ಕೂಡ, ಯಜ್ಞಂ = ಯಾಗವನ್ನು ದಧೇ = ಧರಿಸುತ್ತಾರೆ. (ಅಂದರೆ - ಸಮಸ್ತ ಕರ್ಮಗಳಿಗೆ ವಾಕು, (ಮಾತು) ಮತ್ತೂ ಬುದ್ಧಿಗಳು ಮೂಲಕಾರಣಗಳಾಗಿರುವ ಪ್ರಯುಕ್ತ ವಾಕ್ ಬುದ್ಧಿಗಳಿಗೆ ಪ್ರವರ್ತಕರಾದುದರಿಂದ ಯಜ್ಞಾದಿಗಳನ್ನು ಧರಿಸುವವರು, ಎಂದು ಸ್ತುತಿಯು.) ||೧೧||

**ಭಾ || ಸುವಾಚಾಂ ಪ್ರೇರಕಾ ಸದಾ । ಸುಬುದ್ಧಿ ಜ್ಞಾಪಿಕಾ ಸೈವ ಸ್ವಾತಂತ್ರ್ಯಾಲ್ಲುಪ್ತಯೋಭವೇತ್ । ಅನೇನೈವ ಪ್ರಕಾರೇಣ ಸೈವ ಯಜ್ಞಾದಿಧಾರಿಣೀ ||೧೧||**

ಅ|| ಆ ಸರಸ್ವತಿಯೇ ಒಳ್ಳೇ ವಚನಗಳಿಗೆ ಸದಾ ಪ್ರೇರಕಳು, ಸ್ವತಂತ್ರವಾಗಿ ಒಳ್ಳೇ ಬುದ್ಧಿಗಳನ್ನು ತಿಳಿಸಿಕೊಡುವವಳು, ಪ್ರವರ್ತಿಸುವವಳು (ಸ್ವಾತಂತ್ರ್ಯ ಸ್ನೇಹಯೋರಂತರ್ಣೀತಣಿಚ್' ಎಂಬ ಸೂತ್ರದಿಂದ ಚೇತಂತೀ ಶಬ್ದವು) ಸ್ವಾತಂತ್ರ್ಯ ವಿವಕ್ಷೆಯಿಂದ ಲುಪ್ತವಾದ ಯಕಾರ (ಣಿಚ್)ವುಳ್ಳದ್ದೂ ಆಗುವುದು. ಇದೇ ಪ್ರಕಾರವಾಗಿ ವಾಕ್ ಬುದ್ಧಿಗಳಿಗೆ ಪ್ರವರ್ತಕಳಾದುದರಿಂದ ಯಜ್ಞಾದಿಗಳನ್ನು ಧರಿಸುವವಳು. (ಕರ್ಮಸ್ವರೂಪಾದಿಗಳನ್ನು ತಿಳಿದುಕೊಂಡು ಮಂತ್ರ ವ್ಯವಹಾರ ಪೂರ್ವಕವಾಗಿ ಮಾಡಿದ ಕರ್ಮಗಳು ಸಫಲಗಳಾಗಿರುವುದರಿಂದ ಯಜ್ಞಾದಿಗಳನ್ನು ಧರಿಸುವವಳು) ||೧೧||

**ಋ || (೩೦) ಮಹೋ ಅರ್ಣ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿರಾಜತಿ ||೧೨ ||೬||೩||೧||**

ಅ|| ಸರಸ್ವತೀ = ಹಿಂದೆ ಹೇಳಿದ ಪ್ರಕಾರ ಸರಸ್ವತೀ ಎನಿಸಿಕೊಂಡ ಸ್ತ್ರೀ ರೂಪನಾದ ಶ್ರೀ ಹರಿಯು, ಮಹಃ = ತೇಜೋ ರೂಪನಾದುದರಿಂದ ಸರ್ವಶ್ರೇಷ್ಠನಾದುದರಿಂದಲೂ ಮಹಃ ಎನಿಸಿಕೊಂಡ, ಅರ್ಣ = ಚೆನ್ನಾಗಿ ಆನಂದ ಸ್ವರೂಪನಾಗಿರುವುದರಿಂದ ಅರ್ಣ ಎನಿಸಿಕೊಂಡ ಪರಬ್ರಹ್ಮನನ್ನು (ತನ್ನನ್ನೇ) ಕೇತುನಾ = ಭಕ್ತರಿಗೆ ಜ್ಞಾನ ಸಾಮರ್ಥ್ಯವನ್ನು ಕೊಟ್ಟು, ಪ್ರಚೇತಯತಿ = ಚೆನ್ನಾಗಿ ಮಹತ್ತರ ಜ್ಞಾನದಿಂದ ಪ್ರಕಾಶಿಸಬೇಕು. (ವಾಣೀ ಪಕ್ಷದಲ್ಲಿ ಮಹೋ ಅರ್ಣ = ಶ್ರೀ

ಹರಿಯನ್ನು ಭಕ್ತರಿಗೆ ಜ್ಞಾನವನ್ನು ಕೊಟ್ಟು ಪ್ರಕಾಶಗೊಳಿಸಬೇಕು. ಒಳ್ಳೆ ಜ್ಞಾನವನ್ನು ಕೊಡುವುದರಿಂದಲೇ, ವಿಶ್ವಾಃ = ಎಲ್ಲಾ (ಭಕ್ತರ) ಧಿಯಃ=ಬುದ್ಧಿಗಳನ್ನೂ, ವಿರಾಜತಿ ಪ್ರಕಾಶಗೊಳಿಸುತ್ತಾನೆ. (ಜ್ಞಾನವುಳ್ಳವರ ಬುದ್ಧಿಯು ಪ್ರಕಾಶಿಸುತ್ತದೆ.) ||೧೨||

**ಭಾ || (೧) ಮಹೋ ಅರ್ಣ ಪರಂಬ್ರಹ್ಮ ತೇಜಸ್ತ್ವಾಚ್ಚ ಮಹತ್ವತಃ।ಅರಮಾನಂದ ರೂಪತ್ವಾಹ್ಣೋ ಹಿ ನಿರ್ವೃತಿವಾಚಕಃ। ತಜ್ಞ್ಜಾಪಯತಿ ಸಾ ದೇವೀ ಜ್ಞಾನಂ ದತ್ವಾ ಮಹತ್ತರಂ । ಮಹೋ ಅರ್ಣಸ್ವಯಂ ದೇವಃ ಸ್ವಮಾತ್ಮಾನಂ ಪ್ರಕಾಶಯೇತ್ || ವಿರಾಜಯೇತ್ || ವಿರಾಜಯತಿ ವಿಶ್ವಾಶ್ಚ ಧಿಯಃ ಸುಜ್ಞಾನದಾನತಃ ||೧೨||**

ಅ|| (೧) ತೇಜೋರೂಪನಾದುದರಿಂದಲೂ ಶ್ರೇಷ್ಠನಾದುದರಿಂದಲೂ ಮಹಃ ಎನಿಸಿಕೊಂಡವನು, ಅರ್ಣ = ಪರಬ್ರಹ್ಮನು, ಅರಂ=ಅತ್ಯಂತವಾಗಿ ಪೂರ್ಣವಾಗಿ ಆನಂದ ಸ್ವರೂಪನಾಗಿರುವುದರಿಂದ ಅರ್ಣ, ಎನಿಸಿಕೊಂಡವನು. ಣಃ ಎಂಬ ಪದವು ಸುಖ ಪರಿಪೂರ್ಣತ್ವವನ್ನು ಹೇಳುತ್ತದೆ. ಆ ಸರಸ್ವತೀ ದೇವಿಯು ಭಕ್ತರಿಗೆ ಮಹತ್ತರವಾದ ಜ್ಞಾನವನ್ನು ಕೊಟ್ಟು ಆ ಪರಬ್ರಹ್ಮನನ್ನೂ ತಿಳಿಸುತ್ತಾಳೆ. ಅಥವಾ ಸಾಮಾನ್ಯ ಜ್ಞಾನವನ್ನು ಕೊಟ್ಟು ವಿಶೇಷವಾಗಿ ತಿಳಿಸುತ್ತಾಳೆ. (ಇದು ಇತರ ದೇವತಾ ವಿಷಯಕವು) (ಭಗವದ್ವಿಷಯದಲ್ಲಿ ಆದರೂ) ಸರಸ್ವತೀ ಶಬ್ದವಾಚ್ಯನಾದ ಶ್ರೀ ಹರಿಯು ಸಾಕ್ಷಾತಾಗಿ ಮಹಃ ಅರ್ಣ ಎನಿಸುತ್ತಾನೆ. ಆತನು ತನ್ನ ಸ್ವರೂಪವನ್ನೇ ಪ್ರಕಾಶಗೊಳಿಸುವನು. ಶ್ರೀ ಹರಿಯು ಒಳ್ಳೆ ಜ್ಞಾನವನ್ನು ಕೊಡೋಣದರಿಂದ ಭಕ್ತರ ಎಲ್ಲಾ ಬುದ್ಧಿಗಳನ್ನು ಪ್ರಕಾಶಗೊಳಿಸುತ್ತಾನೆ. ||೧೨|| ೬|| ೧||೬ ವರ್ಗ ೩ ಸೂಕ್ತ ೧ ಅನುವಾಕ ಅವ ೧೦, ಋಕ್ಕು, ೨ ವರ್ಗ, ಐಂದ್ರಸೂಕ್ತವು.

**ಋ || (೩೧) ಸುರೂಪಕೃತ್ನುಮೂತಯೇ ಸುದುಘಾಮಿವ ಗೋದುಹೇ । ಜುಹೂಮಸಿ ದ್ಯವಿ ದ್ಯವಿ ||೧||**

ಅ|| ದ್ಯವಿ ದ್ಯವಿ = ಪ್ರತಿ ದಿವಸದಲ್ಲಿಯೂ, ಗೋದುಹೇ = (ದುಹ ಪ್ರಪೂರಣೇ) ಗೋವುಗಳ ದೋಹನಕ್ಕಾಗಿ ಸುಮಘಾಮಿವ = ಚೆನ್ನಾಗಿ ಕರೆಯುವ ಕಾಮಧೇನುವನ್ನೆಂಬಂತೆ, ಊತಯೇ = ಯಜಮಾನನಿಗೆ ಇಷ್ಟವಾದ ಅರ್ಥವು ಸಿದ್ಧಿಸುವುದಕ್ಕಾಗಿ, ಅಥವಾ ಯಜಮಾನನ ರಕ್ಷಣೆಗಾಗಿ, ಸುರೂಪ ಕೃತ್ನುಂ = ಸಾಧು ರೂಪಗಳನ್ನು ಸೃಷ್ಟಿಸುವ, ಶ್ರೀ ವಿಷ್ಣುವನ್ನು ಇಂದ್ರನನ್ನು ಕೂಡ, ಜುಹೂಮಸಿ = (ಹ್ವೇಞ ಶಬ್ದೇ) ಚೆನ್ನಾಗಿ ಕರೆಯುತ್ತೇವೆ. ||೧||

**ಭಾ || (೧) ಸೂಕ್ತಂ ತ್ವನಾರತಂ ರೋಕ್ತಮನುವಾಗೇಕಕಾಲಿಕಾ || ಅನ್ಯಥಾತ್ವಂ ಚ ತತ್ರ ಸ್ಯಾದಾವಾಪೋದ್ವಾಪತಸ್ತ್ವಚಾಂ|| (೨) ವೇದಾನಂತತ್ವವಿಜ್ಞಪ್ತ್ಯೈ ತೌ ಚಕ್ರೇ ಬಾದರಾಯಣಃ । (೩) ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ। ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ || ಏವಂ ಪುರಾಣವಚನಾದುದ್ಧೃತಾ ಹಿ ತತಸ್ತತಃ। ಋಚಃ ಶಾಖಾತ್ವಮಾಪನ್ನಾಃ ಶಿಷ್ಯ ತಚ್ಛಿಷ್ಯಕೈರಿಮಾಃ।(೪) ಮಾನಸ್ತೇನೇತಿ ಪೂರ್ವಾಸು ಹ್ಯೂನತಾ ದೃಶ್ಯತೇಽರ್ಥತಃ || (೫) ಶುನಃಶೇಪೋದಿತಾಭ್ಯಶ್ಚ ಪರ್ಯಂತೇಽನ್ಯತ್ರ ಕಾಶ್ಚನ । ಅತ್ರಾಪ್ಯ ಕ್ರಮತೋ ದೃಷ್ಟಿರಿತಿ ನೈಕಕ್ರಮೋ ಭವೇತ್। (೬) ಅನಂತತ್ವಾತ್ತು ವೇದಾನಾಂ ಪ್ರಾಯಃ ಕರ್ಮಾನುಸಾರತಃ । ಸಂಕ್ಷೇಪಂ ಕೃತವಾನ್ ದೇವಃ ಶಿಷ್ಯಾಶ್ಚ ತದನುಜ್ಞಯಾ|| ಅಷ್ಟಕಾಧ್ಯಾಯ ವರ್ಗಾದಿ ಭೇದಂ ಚ ಕೃತವಾನ್ ಪ್ರಭುಃ (ಸ್ವಯಂ)। ಸ್ವಾಧ್ಯಾಯ ವಿಶ್ರಮಾರ್ಥಾಯ ತಸ್ಮಾತ್ತ್ವಮ ವಿಪರ್ಯಯಃ । ತತ್ರ ತತ್ರೈಷಾಂತರಿತಾಃ ದೃಶ್ಯಂತೇ ಚ ಖಿಲಾ ಅಪಿ || (೮) ಯತ್ರಾರ್ಥೇ ನ**

**ವಿಶೇಷೋऽಸ್ತಿ ಪದಾಂತರಿತಾರಿತ್ರ ಚ । ಯತ್ರಾಲ್ಪೋऽಪಿ ವಿಶೇಷೋऽಸ್ತಿ ಪದಂ ನಾಂತರಿತಂ ಭವೇತ್ ॥೧॥**

ಅ॥ (೧) ನಿರಂತರವಾಗಿ ಪಠಿತವಾದುದು ಸೂಕ್ತವು. (ಅಂದರೆ - ಮೂಲ ವೇದದಲ್ಲಿ ಋಕ್ಕುಗಳದ್ದೂ ಯಾವುದು ಕ್ರಮವೋ, ಅದರಲ್ಲಿ ಅದೇ ಕ್ರಮದಿಂದ ಋಕ್ಕುಗಳನ್ನು ಅವ್ಯವಹಿತಗಳನ್ನಾಗಿ ಮಾಡಿ ಎಷ್ಟು ಋಕ್ಸಮುದಾಯವು ಉಪವೇದದಲ್ಲಿ ಪಠಿತವಾಗುತ್ತದೋ, ಅಷ್ಟು ಉಪವೇದದಲ್ಲಿ ಸೂಕ್ತವೆನಿಸುತ್ತದೆ.) ಋಷಿಗಳು ನೋಡುವ ಸಮಯದಲ್ಲಿ ನಿರಂತರ ಕಾಲದಲ್ಲಿ ಎಷ್ಟು ಕಾಣುತ್ತದೋ, ಅದು ಅನುವಾಕ ಎನಿಸುತ್ತದೆ. ಅಥವಾ ವಿರಾಮ (ವರ್ಣಗಳ ವಿಚ್ಛೇದ) ಮಾಡದೆ ಒಂದು ಕಾಲದಲ್ಲಿ ಹೇಳಲರ್ಹವಾದುದು. ಉದಾ = ಇಷೇ ತ್ವಾ ಎಂದಾರಂಭಿಸಿ ಪಶೂನ್ಪಾಹಿ ಎಂಬುವ ಪರ್ಯಂತ ಅಥವಾ ಋಗ್ವೇದಾದಿಗಳ ಬ್ರಾಹ್ಮಣ ಅರಣ್ಯಕಗಳ ಖಂಡಗಳು ವಿಚ್ಛೇದವಿಲ್ಲದೆ ಏಕಕಾಲದಲ್ಲಿಯೇ ಪಠಿತಗಳಾಗುತ್ತವೆ. ಅಂತಹುದು ಅನುವಾಕವು. (೨) (ಹಿಂದೆ ಹೇಳಿದುದಕ್ಕೆ ಅಪವಾದ ಹೇಳುತ್ತಾರೆ.) (ಋಕ್ ನಿಗದ ಮೊದಲಾದುದು ರಾಶಿರೂಪವಾದುದು ಮೂಲ ವೇದವು. ಅದರಿಂದ ಉದ್ಧೃತಗಳಾಗಿ ಪ್ರಥಕ್ಕೃತಗಳಾದ ಋಕ್ ನಿಗದ ಸಾಮ ಅಥರ್ವ ನಾಮಕಗಳು ಉಪವೇದಗಳು. (ಅವುಗಳಿಂದ ಉದ್ಧೃತಗಳಾದ ಋಗ್ವೇದಾದಿ ನಾಮವುಳ್ಳವುಗಳು ಅವಾಂತರ ವೇದಗಳು. ಅವುಗಳಿಂದ ಉದ್ಧೃತಗಳಾದವುಗಳು ಶಾಕಲಾದಿ ಶಾಖೆಗಳು.) ಉಪವೇದದಲ್ಲಿ ಅವ್ಯವಹಿತವಾಗಿ ಹೇಳಲ್ಪಟ್ಟದ್ದು ಸೂಕ್ತವೆನಿಸುತ್ತದೆ.) ಆ ಸೂಕ್ತದಲ್ಲಿದ್ದ ಕ್ರಮಕ್ಕೆ ಉಪವೇದಗಳಿಂದ ಉದ್ಧೃತಗಳಾದ ಋಗ್ವೇದಾದಿ ನಾಮಗಳುಳ್ಳ ಅವಾಂತರ ವೇದಗಳಲ್ಲಿ ವೈಪರೀತ್ಯವೂ ಬರಬಹುದು. ಹೇಗೆಂದರೆ ಋಕ್ಕುಗಳ ಆವಾಪ (ಪ್ರಕ್ಷೇಪ) ಉದ್ವಾಪ ಕ್ರಮದಿಂದ. (ಅಂದರೆ ಮೂಲ ವೇದದಲ್ಲಿದ್ದ ಕ್ರಮದಿಂದ ೧೦ ಋಕ್ಕುಗಳು ಉಪವೇದದಲ್ಲಿ ಪಠಿತಗಳಾಗಿವೆ. ಅವುಗಳಿಗೆ ಉಪವೇದದಲ್ಲಿ ಸೂಕ್ತಗಳೆಂದು ಹೆಸರು. ಅವುಗಳ ಮಧ್ಯದಲ್ಲಿ ೨ ಋಕ್ಕುಗಳನ್ನು ಬಿಟ್ಟು ಅವಾಂತರ ವೇದದಲ್ಲಿ ಪಾಠ ಮಾಡಿದರೆ ೮ ಋಕ್ಕುಗಳದ್ದೂ ಸೂಕ್ತವಾಗುವುದು. ಇದು ಉದ್ವಾಪವು. ಬೇರೆ ಕಡೆಗಳಲ್ಲಿದ್ದ ೨ ಋಕ್ಕುಗಳನ್ನು ಆ ಸೂಕ್ತಕ್ಕೆ ಸೇರಿಸಿದರೆ ೧೨ ಋಕ್ಕುಗಳದ್ದು ಸೂಕ್ತವಾಗುವುದು. ಇದು ಆವಾಪವು.) (ಅವಾಂತರ ವೇದದಲ್ಲಿ ಸೂಕ್ತವೆಂಬ ಸಂಜ್ಞೆಗೆ ಕಾರಣವೇನೆಂದರೆ ಉಪವೇದದಲ್ಲಿರತಕ್ಕುದು ಯಾವುದು ಸೂಕ್ತವೋ, ಅದರಲ್ಲಿ ಸೇರಿರುವ ಋಕ್ಕುಗಳ ಸಂಬಂಧವೇ ಅವಾಂತರ ವೇದದಲ್ಲಿ ಸೂಕ್ತವೆಂಬ ಸಂಜ್ಞೆಗೆ ನಿಮಿತ್ತವು) (೨) (ಆವಾಪ ಉದ್ವಾಪ ಮಾಡಲಿಕ್ಕೆ ಕಾರಣವೇನೆಂದರೆ) ವೇದವ್ಯಾಸರು ವೇದಗಳು ಅನಂತಗಳಾದುದರಿಂದ ಆವಾವ ಅಧಿಕಾರಿಗಳು ಅವರವರ ಶಕ್ತ್ಯನುಸಾರವಾಗಿ ಕರ್ಮಗಳನ್ನು ಮಾಡಬೇಕೆಂದು ತಿಳಿಸುವುದಕ್ಕಾಗಿ ಆವಾಪೋದ್ವಾಪಗಳನ್ನು ಮಾಡಿದರು. (ಅಂದರೆ ವೇದಗಳು ಅನಂತಗಳಾಗಿರುವುದರಿಂದ ಸರ್ವರಿಗೆ ಸಮಸ್ತ ವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ ಮೂಲ ವೇದದಿಂದ ಋಕ್ ನಿಗದ ಮೊದಲಾದ ಉಪವೇದಗಳು ಉದ್ಧೃತಗಳಾಗಿವೆ. ಉಪವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡಲಿಕ್ಕೆ ಅಶಕ್ತರಾದವರನ್ನು ಕುರಿತು ಅವರಿಗೆ ಶಕ್ಯಗಳಾದ ಕರ್ಮಗಳನ್ನು ಮಾಡಲಿಕ್ಕಾಗಿ ಉಪವೇದಗಳಿಂದ ಉದ್ಧೃತಗಳಾದ ಋಗ್ವೇದ ಮೊದಲಾದ ಅವಾಂತರ ವೇದಗಳಲ್ಲಿ ಉಪವೇದಗಳಲ್ಲಿರತಕ್ಕ ಸೂಕ್ತಗಳಲ್ಲಿ ಸೇರಿದ ಋಕ್ಕುಗಳ ಆವಾಪ ಉದ್ವಾಪಗಳನ್ನು ಮಾಡಿದರು) (ಅಥವಾ ವೇದಗಳು ಅನಂತಗಳಾಗಿರುವುದರಿಂದ ಅಲ್ಲಲ್ಲಿ ಹೇಳಿದ ಬಹು ಕರ್ಮಗಳನ್ನು ಆವಾವ ವಾಕ್ಯಗಳನ್ನು ಪರ್ಯಾಲೋಚಿಸುತ್ತಾ ತಿಳಿಯಲು ಅಶಕ್ಯಗಳಾಗಿರುವುದರಿಂದ ಕರ್ಮ ಕ್ರಮಾದಿಗಳನ್ನು ತಿಳಿಸುವುದಕ್ಕಾಗಿ ಅಲ್ಲಿ ಅಲ್ಲಿ ಉಪಯುಕ್ತಗಳಾದ ಋಕ್ಕುಗಳ ಆವಾಪವನ್ನು ಅನುಪಯುಕ್ತಗಳಾದ ಋಕ್ಕುಗಳ ಉದ್ಧಾರವನ್ನು ಮಾಡಿದರು. ಏವಂಚ ಆವಾಪ ಉದ್ವಾಪಗಳನ್ನು ಮಾಡಲಿಕ್ಕೆ ವೇದಗಳು ಅನಂತಗಳಾಗಿರುವ ಕಾರಣ ಕರ್ಮಗಳ ಜ್ಞಾನವೇ ಕಾರಣವು, ಎಂದು ಕೆಲವು ಅನ್ನುತ್ತಾರೆ. (೩) ಮೂಲವೇದದಿಂದ ಉಪವೇದಗಳನ್ನು

ಅವುಗಳಿಂದ ಅವಾಂತರವೇದಗಳನ್ನು ತ್ಯಾರಮಾಡಿ ಪ್ರಬಂಧ ನಿರ್ಮಾಣ ಮಾಡಿದ್ದೆಂಬುದರಲ್ಲಿ ಏನು ಪ್ರಮಾಣವೆಂದರೆ-) ವೇದವ್ಯಾಸ ದೇವರು ಮೂಲವೇದದಿಂದ ಉದ್ಧೃತವಾದ ಉಪವೇದ ರೂಪವಾದ ಋಗ್ರಾಶಿಯಿಂದ ಕೆಲವು ಋಕ್ಕುಗಳನ್ನುದ್ಧರಿಸಿ ಋಗ್ವೇದದಿಂದ ಅವಾಂತರವೇದವನ್ನು ಮೂಲವೇದದಿಂದ ಉದ್ಧೃತವಾದ ನಿಗದದಿಂದ ಯಜಸ್ಸುಗಳನ್ನುದ್ಧರಿಸಿ ಯಜುರ್ವೇದವನ್ನೂ ಹಾಗೆಯೇ ಸಾಮದಿಂದ ಸಾಮಗಳನ್ನುದರಿಸಿ ಸಾಮವೇದವನ್ನು (ಅಥರ್ವದಿಂದ ಅಥರ್ವಣವೇದವನ್ನು) ಮಾಡಿದರು. ಮೂಲವೇದದಿಂದ ಉಪವೇದಗಳೂ, ಅವುಗಳಿಂದ ಅವಾಂತರ ವೇದಗಳೂ ಉದ್ಧೃತಗಳಾಗಿವೆ ಎಂದು ಪುರಾಣ ವಚನದಿಂದ ತಿಳಿಯುತ್ತದೆ. ಈ ಋಕ್ಕುಗಳು ಶಿಷ್ಯ ಪ್ರತಿಷ್ಯಾದಿಗಳಿಂದ ಉಪಶಾಖಾರೂಪತ್ವವನ್ನು ಹೊಂದಿದವು, ಶಾಖೆಗಳಾದವು. (ಅಂದರೆ ಉಪವೇದಾದಿಗಳು ಹೇಗೆ ಕೃತ್ರಿಮಗಳೋ ಹೀಗೆಯೇ ಶಾಖಾ ಪ್ರಭೇದಗಳೂ ಕೃತ್ರಿಮಗಳು) (೪) (ಹೀಗೆ ಆವಾಪ ಉದ್ವಾರಗಳನ್ನು ಪಪಾದಿಸಿ ಅವುಗಳಲ್ಲಿ ಲಿಂಗವನ್ನು ತೋರಿಸುತ್ತಾರೆ.) (1) ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ (ಋ. ೨.೬.೩೨ (2) ಅದೇವಾನಾಮೋಹತೇ ವಿವ್ರಯೋಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ (ಋ. ೨.೬.೩.೯) ॥ ಇದು ವಿದ್ಯಾದೇವಿಯು ವಾಯುವನ್ನು ಪ್ರಾರ್ಥಿಸುವುದು. (1) ಯಾರು ಮುಖ್ಯತಃ ದ್ರೋಹಕ್ಕೆ ಆಸ್ಪದವಾದ ಅಂಧತಮಸ್ಸಿನಲ್ಲಿರಲು ಯೋಗ್ಯರೋ, ಸುಖವಿರುದ್ಧರೋ, ವೈರಿಗಳಾಗಿ ಭೋಗಗಳಲ್ಲಿಯೇ ಆಕಾಂಕ್ಷವುಳ್ಳವರೋ, ಅಂತಹ ಕಳ್ಳರಿಗೆ ನಮ್ಮನ್ನು ಹೇಳಬೇಡಿರಿ. (2) ಎಲೋ ವಾಯುವೇ ದೇವತೆಗಳಿಗೆ ವಿಶೇಷತಃ ಶ್ರೇಷ್ಠನೂ ನಿಯಾಮಕನೂ ಆದ ಬ್ರಹ್ಮನನ್ನು ಹೃದಯದಲ್ಲಿ ಚೆನ್ನಾಗಿ ಯಾರು ಧರಿಸಿಕೊಳ್ಳುತ್ತಾರೋ, ಅಂತಹರು ಸಾಮಾನಾಮಕ ಶ್ರೀ ವಿಷ್ಣುವಿನಿಂದ ಇತರವಾದುದನ್ನು ಉತ್ಕೃಷ್ಟವೆಂದು ತಿಳಿಯುವುದಿಲ್ಲ' ಈ ಋಕ್ಕಿನಲ್ಲಿ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಅಸಂಬದ್ಧ ಅರ್ಥಗಳು ಕಾಣುವುದರಿಂದ ಅರ್ಥತಃ ನ್ಯೂನತೆಯು ತೋರಿಬರುತ್ತದೆ. (ಆದ ಕಾರಣ ಪೂರ್ವಾರ್ಧ ಉತ್ತರಾರ್ಧಗಳ ಮಧ್ಯದಲ್ಲಿ ವಾಕ್ಯಾಂತರವಿದೆ ಎಂದು ತಿಳಿಯುತ್ತದೆ. ಆ ಮಧ್ಯಸ್ಥವಾಕ್ಯವು (1) "ಯೇಷಾಂ ನೈತನ್ನಾಪರಂ ಕಿಂಚನೈಕಂ ಬ್ರಹ್ಮಣಸ್ಪತೇ ಬ್ರೂಹಿ ತ್ಯೇಭ್ಯಃ ಕದಾಚಿತ್ । (ಋ. ೨.೬.) (2) ಅಥೋ ಶಮೇನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ ॥ (ಋ. ೨.೬) ಯಾರ ಮತದಲ್ಲಿ ಪರಬ್ರಹ್ಮನಿಲ್ಲವೋ ಅಧಮವಾದ ಜಗತ್ತೂ ಇಲ್ಲವೋ, ಬ್ರಹ್ಮನನ್ನು ನಿರ್ಗುಣನನ್ನಾಗಿಯೂ ಅನಿರ್ವಾಚ್ಯನನ್ನಾಗಿಯೂ ಹೇಳುತ್ತಾರೋ, ಅಂತಹ ಸ್ತೇನರಿಗೆ ನಮ್ಮನ್ನು ಹೇಳಬೇಡಿರಿ ಎನ್ನುವುದಕ್ಕೆ ಪೂರ್ವಾರ್ಧದಿಂದ ಅನ್ವಯವಿದ್ದ ಪ್ರಯುಕ್ತ ಇದೊಂದು ಋಕ್ಕು. (3) ಮತ್ತೆ ಯಾರು ಶ್ರೀ ವಿಷ್ಣುವಿನಲ್ಲಿಯೇ ಆಸಕ್ತರಾಗಿರುತ್ತಾರೋ ಧರ್ಮಿಷ್ಠರಾದ ಮನುಷ್ಯರೋ, ದೇವತೆಗಳಿಗೂ ನಿಯಾಮಕನಾದ ಪರಬ್ರಹ್ಮನನ್ನು ಹೃದಯದಲ್ಲಿ ಧರಿಸಿರುತ್ತಾರೋ, ಪರಬ್ರಹ್ಮನಿಗಿಂತ ಇತರವಾದುದನ್ನು ಯಾವುದನ್ನು ಶ್ರೇಷ್ಠವೆಂದು ತಿಳಿಯುವುದಿಲ್ಲವೋ, ಅಂತಹವರಿಗಾಗಿ ನಮ್ಮನ್ನು ಹೇಳು. ಎನ್ನುವುದಕ್ಕೆ ಉತ್ತರಾರ್ಧದಿಂದ ಅನ್ವಯವಿದ್ದ ಪ್ರಯುಕ್ತ ಅಥೋ ಶಮೇನ ಎನ್ನುವುದರಿಂದ ಕೂಡಿ ಆ ದೇವಾನಾಂ ಎನ್ನುವುದು ಒಂದು ಋಕ್ಕು.) (ಹೀಗೆ ಉಭಯಾರ್ಥಮಧ್ಯದಲ್ಲಿರತಕ್ಕ ವಾಕ್ಯವನ್ನು ಯೋಜನೆ ಮಾಡಿ ನ್ಯೂನತೆಯನ್ನು ಪರಿಹರಿಸಿಕೊಳ್ಳಬೇಕು.) ಹೀಗೆಯೇ ಭದ್ರಂ ನೋ ವಾಯತಮನಃ ಇತ್ಯಾದಿಗಳಲ್ಲಿಯೂ ಅರ್ಥತಃ ನ್ಯೂನತೆಯು ಕಾಣುವುದರಿಂದ ವಾಕ್ಯಾಂತರದಿಂದ ನ್ಯೂನತೆಯನ್ನು ಪರಿಹರಿಸಿಕೊಂಡು ಅರ್ಥಪೂರ್ತಿಯಾಗುವಂತೆ ಮಾಡಿಕೊಳ್ಳಬೇಕು.) (೫) ಮತ್ತು ಶುನಶ್ಶೇಪನು ೧೦೦ ಋಕ್ಕುಗಳನ್ನು ಕ್ರಮವಾಗಿ ಕಂಡನು ಎಂದು ಬ್ರಾಹ್ಮಣವು (ಇದು ವಿಶ್ವಾಮಿತ್ರಃ ಹೋತಾಸೀತ್ ಎಂಬ ಖಂಡದಲ್ಲಿ ಅಥಹ ಶುನಶ್ಶೇಪಃ ಈಕ್ಷಾಂ ಚಕ್ರೇ ಎಂದಾರಂಭಿಸಿ ನಿದಿತಂ ಸಹಸ್ರಾತ್ ಎಂಬತನಕ ಬ್ರಾಹ್ಮಣವನ್ನು ಅರ್ಥತಃ (ಸಂಗ್ರಹಿಸಿ ಹೇಳಿದ್ದು) ಆ ಋಕ್ಕುಗಳ ಅವಾಂತರ ವೇದದಲ್ಲಿ ನ್ಯೂನವಾದ ೧೦೦ ಋಕ್ಕು ೨ನೇ ಅಧ್ಯಾಯದಲ್ಲಿ ಕಾಣುತ್ತದೆ. ಹೀಗೆ ಶುನಃ

ಕ್ಷೇಪನಿಂದ ಹೇಳಲ್ಪಟ್ಟ ಋಕ್ಕುಗಳಿಂದ ಇತರಗಳಾದ ಕೆಲವು ಋಕ್ಕುಗಳು ಇತರತ್ರ ಪಠಿತಗಳಾಗುತ್ತವೆ. ಮತ್ತು ಇದರಿಂದ ಋಕ್ಕುಗಳಿಗೆ ಇಲ್ಲಿಂದ ಉದ್ವಾಪವೂ ಅನ್ಯತ್ರ ಅವಾಪವೆಂದು ತಿಳಿಯುತ್ತವೆ. ಮಧುಛಂದಸರಿಂದ ದೃಷ್ಟಗಳಾದ ಋಕ್ಕುಗಳಲ್ಲಿಯೂ ಅವಾಂತರವೇದದಲ್ಲಿ ಯಾವ ಕ್ರಮವೋ ಆ ಕ್ರಮವನ್ನುಲ್ಲಂಘಿಸಿಯೇ ಮಧುಛಂದಸರು ಕಂಡದ್ದು. ಅಥವಾ ಮೂಲವೇದ ಉಪವೇದಗಳದ್ದು ಯಾವ ಕ್ರಮವೋ, ಆಕ್ರಮವನ್ನುಲಂಘಿಸಿಯೇ ಅವಾಂತರ ವೇದದಲ್ಲಿ ಮಾಧುಛಂದಸ ಪ್ರಕರಣದಲ್ಲಿ ಋಕ್ಕುಗಳು ಕಾಣುತ್ತವೆ. ಆದ ಕಾರಣ ಮೂಲವೇದ ಉಪವೇದ ಅವಾಂತರ ವೇದಗಳಲ್ಲಿ ಒಂದೇ ಕ್ರಮವು ಆಗಲಾರದು. (೬) (ವೇದಗಳಿಗೆ ಅನಂತ್ಯವನ್ನು ತಿಳಿಸುವುದಕ್ಕಾಗಿ ಆವಾಪ ಉದ್ವಾಪಗಳಿಂದ ಸಂಕ್ಷೇಪ ಮಾಡಿದ್ದು ಎಂದದ್ದು ಅಯುಕ್ತವು. ಅನಂತಾ ವೈವೇದಾಃ ಇತ್ಯಾದಿ ಪ್ರಮಾಣಗಳಿಂದಲೇ ಅನಂತ್ಯವನ್ನು ತಿಳಿಯಬಹುದು ಎಂದರೆ) ವೇದಗಳು ಅನಂತಗಳಾಗಿರುವುದರಿಂದ (ಅವುಗಳಲ್ಲಿ ಹೇಳಿದ ಪ್ರಕಾರ ಬ್ರಹ್ಮರುದ್ರಾದಿಗಳಿಗಿಂತ ಇತರರಿಗೆ ಸಂಪೂರ್ಣ ಕರ್ಮಗಳನ್ನು ಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ) ಪ್ರಾಯಶಃ ಅಧಿಕಾರಿಗಳಿಗೆ ಕರ್ಮಗಳನ್ನು ಮಾಡಲಿಕ್ಕೆ ಎಷ್ಟು ಶಕ್ತಿಯಿದೆಯೋ, ಅವರ ಶಕ್ತಿಯನ್ನು ಅನುಸರಿಸಿ ಶ್ರೀ ವೇದವ್ಯಾಸರು ಕರ್ಮಗಳ ಜ್ಞಾನಕ್ಕಾಗಿ ಆವಾಪ ಉದ್ಧಾರಗಳಿಂದ ಸಂಕ್ಷೇಪ ಮಾಡಿದರು. ಶಿಷ್ಯರೂ ವೇದವ್ಯಾಸರ ಆಜ್ಞೆಯಿಂದ ಸಂಕ್ಷೇಪ ಮಾಡಿದರು.

ವಿ॥ ಹೇಗೆಂದರೆ - ಮೂಲವೇದಶ್ಚೋಪವೇದ । ತಥಾಽವಾಂತರ ಏವಚ। ಶಾಖೋಪಶಾಖಾ ಭೇದೇನ ವೇದೋಽನೇಕವಿಧೋ ಮತಃ ।

(1) ಋಗಾದಿ ಸಂಜ್ಞೆಯಿಲ್ಲದೆ ಯಾವಾಗ ಸಮಸ್ತವೇದಗಳೂ ಒಂದೆಯಾಗಿದ್ದವೋ, ಆಗ ಕೃತಯುಗದಲ್ಲಿ ಮೂಲವೇದ ಎಂದೇನಾಮವು. ಪಂಚರಾತ್ರಮೃಗಾದ್ಯಾಶ್ಚ ಸರ್ವಮೇಕಂ ಪುರಾಽಭವತ್ ಮೂಲವೇದ ಇತಿ ಹ್ಯಾಖ್ಯಾ ಕಾಲೇ ಕೃತಯುಗೇ ತದಾ । ನೈವರ್ಕ್ಸಾಮಾದಿನಾಮಾನಿ ತದಾ ವೇದಸ್ಯ ಚಾಭವನ್ । ಎಂದು ಪ್ರಮಾಣವು. ಅಂತೂ ಅವಿಭಕ್ತವಾದುದು ಮೂಲವೇದವು.

(2) ಆ ಮೂಲವೇದವೇ ತ್ರೇತಾಯುಗದಲ್ಲಿ ಋಕ್ ನಿಗದ ಸಾಮ=ಅಥರ್ವ ಎಂದು ಪ್ರವಿಭಕ್ತವಾಗಿ ಉಪವೇದವೆನಿಸುತ್ತದೆ. ಏಕೋ ವೇದಃ ಕೃತೇ ಹ್ಯಾಸೀತ್ತ್ರೇತಾಯಾಂ ಸ ತ್ರಿದಾಽಭವತ್ ಎಂದು. (3) ಆ ಉಪವೇದವೇ ದ್ವಾಪರಯುಗದಲ್ಲಿ ಗೌತಮರ ಶಾಪಾದಿಗಳಿಂದ ಉತ್ಸನ್ನ (ನಷ್ಟ)ವಾಯ್ತು. ಆ ಋಕ್ ನಿಗದಾದಿರೂಪದಿಂದ ಮೊದಲೇ ವಿಭಕ್ತವಾದ ಉಪವೇದ ದೆಶೆಯಿಂದ ದ್ವಾಪರದಲ್ಲಿ ವೇದವ್ಯಾಸರು ಆ ಉತ್ಸನ್ನವಾದ ವೇದವನ್ನು ಒಂದೊಂದು ಋಗಾದಿಗಳಿಂದ ಒಂದೊಂದು ಋಗಾದಿಗಳನ್ನು ಏಕೈಕದೇಶದಿಂದ ಉದ್ಧರಿಸಿ ಋಗ್ವೇದ ಮೊದಲಾದ ಒಂದೊಂದು ಋಗಾದಿಗಳಿಂದ ಒಂದೊಂದು ಋಗಾದಿಗಳನ್ನು ಏಕೈಕದೇಶದಿಂದ ಉದ್ಧರಿಸಿ ಋಗ್ವೆದ ಮೊದಲಾದ ನಾಲ್ಕು ವೇದಗಳನ್ನು ಮಾಡಿದರು. ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತ ವಾನ್ಪ್ರಭು॥ಯ ಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ॥ ಎಂದು. ಇಲ್ಲಿ ಅರ್ಥರ್ವಣ ವೇದವನ್ನು ನಿಗಮದಲ್ಲಿಯೇ ಸೇರಿಸಿರುವರು) ಈ ವಿಭಕ್ತವಾದ ಋಗ್ವೇದಾದಿಗಳಿಗೆ ಅವಾಂತರ ವೇದಗಳೆಂದು ಹೆಸರು.

(4) ಪುನಃ ಆ ನಾಲ್ಕು ವೇದಗಳಲ್ಲಿ ಋಗ್ವೇದವನ್ನು ೨೪ ಪ್ರಕಾರ, ಋಜುರ್ವೇದವನ್ನು ೧೦೧ ಪ್ರಕಾರ, ಸಾಮವೇದವನ್ನು ೧೦೦೦ ಪ್ರಕಾರ, ಅಥರ್ವಣ ವೇದವನ್ನು ೧೨ ಪ್ರಕಾರವಾಗಿಯೂ, ಆ ವೇದವ್ಯಾಸರೇ ವಿಭಜಿಸಿದರು. ವಿಭಕ್ತವೇದಗಳಿಗೆ ಶಾಖಾವೇದವೆಂದು ಹೆಸರು.

(5) ಚತುರ್ವಿಂಶತ್ಯಾದಿ ಭೇದದಿಂದ ಶ್ರೀ ವೇದವ್ಯಾಸರಿಂದಲೇ ವಿಭಕ್ತಗಳಾದ ಶಾಖೆಗಳಲ್ಲಿಯೂ ಋಷಿಗಳಿಂದ ಶಿಷ್ಯ ಪ್ರಶಿಷ್ಯಾದಿಗಳಿಂದ ಪುನಃಪುನಃ ವಿಭಕ್ತವಾದುದು ಅವಾಂತರ ಶಾಖಾವೇದವೆನಿಸುತ್ತದೆ. ಹೀಗೆ ವೇದವು ಐದು ವಿಧವು. ಇನ್ನೂ ಇತರಗಳೂ ಅವಾಂತರ ಶಾಖಾ ವೇದಗಳಿವೆ. ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಂ । ಋಗ್ಯಸ್ಸಾಮಾಥರ್ವಾಶ್ಚವೇದಾಶ್ಚತ್ವಾರ ಉದ್ಧೃತಾಃ ।ತ ಏವಮ್ಮುಷಯೋ ವೇದಂ ಸ್ವಂಸ್ವಂ ವ್ಯಸ್ಯನ್ನನೇಕಧಾ । ಶಿಷ್ಯೈಃ ಪ್ರಶಿಷ್ಯೈಃವೇದಾಸ್ತೇ ಶಾಖಿನೋಽಭವನ್ ॥ ಎಂದು ಭಾಗವತವು.) (೩) (ಮೂಲ ವೇದಾದಿಗಳಲ್ಲಿ ಇಲ್ಲದೇನೇ ಇರುವ) ಅಷ್ಟಕ, ಅಧ್ಯಾಯ, ವರ್ಗ ಮೊದಲಾದ ಪಂಚಿಕಾ, ಪ್ರಪಾಠಾದಿ ಭೇದವನ್ನು ವೇದಾಧ್ಯಯನವನ್ನೂ ಮಧ್ಯೇ ನಿಲ್ಲಿಸುವುದಕ್ಕಾಗಿ ಮಾಡಿದರು. ಆದ ಕಾರಣ ಕ್ರಮ ವ್ಯತ್ಯಾಸವು. (ಆದ ಕಾರಣ ಮೂಲ ವೇದಾದಿಗಳಲ್ಲಿ ಒಂದೇ ಪ್ರಕಾರವಲ್ಲ.) ಸಿತಾಸಿತೇ ಸರಿತೇ ಯತ್ರ ಸಂಗಥೇ ಇದು ಮೊದಲಾದ ಪರಿಶಿಷ್ಟಗಳೂ ಕೂಡ ಅಲ್ಲಿ ಅಲ್ಲಿಯೇ ಅಂತರ್ಹಿತಗಳಾದುವುಗಳೇ ಕಾಣುತ್ತವೆ. (೮) (ಈ ಉದ್ಧಾರವು ಹೇಗೆ ತಿಳಿಯುತ್ತದೆ ? ಎಂದರೆ ಜ್ಞಾಪಕವನ್ನು ಲೇಶತಃ ತೋರಿಸುತ್ತಾರೆ.) ಎಲ್ಲಿ ೨ ವಾಕ್ಯಗಳ ಅರ್ಥದಲ್ಲಿ ವಿಶೇಷವು ಇಲ್ಲವೋ ಅಲ್ಲಿ ಯಾವ ಪದದಿಂದ ಆ ಪುನರುಕ್ತಿಯು ಪರಿಹೃತವಾಗುತ್ತದೋ ಆ ಪದವು ಅಂತರಿತವೆಂದು ತಿಳಿಯಬೇಕು. ಎಲ್ಲಿ ಪದಾಂತರವಿಲ್ಲದಿದ್ದರೂ ಅಲ್ಪವಾದ ವಿಶೇಷ ಶ್ರವಣದಿಂದಲೇ ಪುನರುಕಿ ಪರಿಹಾರವಾಗುತ್ತದೋ ಅಲ್ಲಿ ಪದವು ಅಂತರಿತವಾಗಿದೆ ಎಂದು ಕಲ್ಪಿಸಕೂಡದು. (ಹೀಗೆಯೇ ಆವಾಪ ಉದ್ವಾಪಗಳಲ್ಲಿ ಇತರ ಲಿಂಗಗಳನ್ನು ಹುಡುಕಬೇಕು.) ॥೧॥

**ಭಾ ॥ ವಿಷ್ಣುಂ ಸುರುಪಕರ್ತಾರಮಭಿಪ್ರೇತಾರ್ಥ ಸಿದ್ಧಯೇ ॥ ತ್ರಾಣಾಯ ವಾ ಕಾಮಧೇನು ಮಿವ ದೋಹಾಯ ತತ್ಸ್ಥಿತೇಃ । ದಿನೇ ದಿನೇ ಸ್ವಾಹ್ವಯಾಮೋ ॥೧॥**

ಅ॥ ನಾವು ಪ್ರತಿ ದಿವಸದಲ್ಲಿಯೂ, ಗೋವನ್ನು ಕರೆಯುವುದಕ್ಕಾಗಿ ಕಾಮಧೇನುವನ್ನೆಂಬಂತೆ ಶ್ರೀ ಭಗವಂತನನ್ನು ಆಶ್ರಯಿಸಿರುವ ಯಜಮಾನನ ಇಷ್ಟಾರ್ಥ ಸಿದ್ಧಿಗಾಗಿ, ಅಥವಾ ರಕ್ಷಣೆಗಾಗಿ ಸಾಧುರೂಪಗಳನ್ನುಂಟುಮಾಡುವ ಶ್ರೀ ವಿಷ್ಣುವನ್ನು ಇಂದ್ರನನ್ನು ಕರೆಯುತ್ತೇವೆ ॥ (ಇದು ಸುರೂಪಕೃತ್ನುಂ ಎಂಬುವುದರ ಭಾಷ್ಯವು ॥೧॥

**ಋ ॥ (೩.೨) ಉಪನಃ ಸವನಾಽಽಗಹಿ ಸೋಮಸ್ಯ ಸೋಮಪಾಃ ಪಿಬ । ಗೋದಾ ಇದ್ರೇವತೋ ಮದಃ ॥**

ಅ॥ ಸೋಮಪಾಃ = ಇಂದ್ರನೇ, (ಯಾವ ನೀನು) ರೇವತಃ ಇತ್ = (ಅಧ್ಯಾತ್ಮ) ಜ್ಞಾನಾಖ್ಯ ದ್ರವ್ಯದಿಂದ ಕೂಡಿರುವ, (ಬಾಹ್ಯಾರ್ಥ) ನಿನ್ನ ಪೂಜೆಗಾಗಿ ಹಿರಣ್ಯಾದಿಗಳುಳ್ಳ ಯಜಮಾನನಿಗೇನೇ ಗೋದಾಃ =ಜ್ಞಾನದಾಯಕನೂ, ಮದಃ =(ಮದೀಹರ್ಷೇ) ಸುಖಕಾರಿಯೂ, (ಆಗುತ್ತಿಯೋ,) (ಅಂತಹ ನೀನು) ನಃ =ನಮ್ಮ ಸೋಮಸ್ಯ = ಸೋಮದ, ಸವನಾ =ಯಜ್ಞಗಳನ್ನು ಉಪ ಆಯಾಹಿ = ಬಾ, ಪಿಬ = ಬಂದು ಸೋಮವನ್ನು ಕುಡಿ ॥೨॥

**ಭಾ ॥ ಜ್ಞಾನದೋಽಸ್ಯೈವ ಚಾಧಿಕಂ । ಜ್ಞಾನಾಖ್ಯರಯಿಯುಕ್ತಸ್ಯ ಹಿರಣ್ಯಾದಿಮತೋಽಪಿ ವಾ । ಸುಖಕಾರೀ ಭವಾನ್॥೨॥**

ಅ॥ ಎಲೋ ಇಂದ್ರನೇ ಯಾವ ನೀನು ಜ್ಞಾನಾಖ್ಯದ್ರವ್ಯದಿಂದ ಕೂಡಿರುವ, ಅಥವಾ ಬಾಹ್ಯದಲ್ಲಿ ನಿನ್ನ ಪೂಜೆಗಾಗಿ ಹಿರಣ್ಯಾದಿಗಳುಳ್ಳ ಈ ಯಜಮಾನನಿಗೇನೇ ಅಧಿಕವಾಗಿ ಜ್ಞಾನದಾಯಕನೂ ಸುಖಕಾರಿಯೂ ಆಗುತ್ತಿಯೋ, ಅಂತಹ ನೀನು

ಬಂದು ಸೋಮವನ್ನು ಕುಡಿ. ||೨||

ಋ || (೩೩) ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಂ | ಮಾನೋ ಅತಿ ಖ್ಯ: ಆ ಗಹಿ ||೩||

ಅ|| ಅಥ = ನೀನು ಜ್ಞಾನಾದಿಗಳುಳ್ಳವರಿಗೆ ಇಷ್ಟಾರ್ಥವನ್ನು ಕೊಡುವ ಸ್ವಭಾವವುಳ್ಳವನಾದುದರಿಂದ (ನಾವು) ಅಂತಮಾನಾಂ = ಉತ್ತಮೋತ್ತಮಗಳನ್ನು ಗಣನೆ ಮಾಡುವಾಗ ಅಂತ್ಯದಲ್ಲಿ ಪ್ರಮಿತಗಳಾದ, (ಅಂದರೆ ಉತ್ತಮೋತ್ತಮಗಳಾದ) ತೇ=ನಿನ್ನ ವಿಷಯಕಗಳಾದ, ಯಾವ ಸುಮತಿಗಳೋ, ಅಂತಹ ಸುಮತೀನಾಂ =ಒಳ್ಳೇ ಬುದ್ಧಿಗಳನ್ನು, ವಿದ್ಯಾಮ = ಹೊಂದುವೆವು. (ನೀನು) ನಮ್ಮನ್ನು, ಅತಿ = ಅತಿಕ್ರಮಿಸಿ, ಅಸ್ಮಾನ್=ಇತರರನ್ನು, ಮಾಖ್ಯಃ = ಯಾವಾಗಲೂ ನೋಡಲೇಬೇಡ. (ಅಂದರೆ ದಯಾರ್ದ್ರದೃಷ್ಟಿಯಿಂದ ನಮ್ಮನ್ನೇ ನೋಡು) ಆಗಹಿ = ಬಾ ||೩||

ಭಾ || ತಸ್ಮಾಲ್ಲಭೇಮ ಸುಮತೀಸ್ತವ | ಅಂತೇ ಮಿತಾಸ್ತ್ವದ್ವಿಷಯಾ ಮತಯೋ ಹ್ಯುತ್ತಮೋತ್ತಮಾಃ || ಅಸ್ಮಾನತೀತ್ಯ ಮಾ ಪಶ್ಯ ಕರುಣಾರ್ದ್ರದೃಶಾ ಸದಾ ||೩||

ಅ|| ನೀನು ಜ್ಞಾನಾದಿ ಗುಣವುಳ್ಳವರಿಗೆ ಇಷ್ಟಾರ್ಥವನ್ನು ಕೊಡತಕ್ಕ ಸ್ವಭಾವವುಳ್ಳವನಾದುದರಿಂದ ಉತ್ತಮೋತ್ತಮ ಗಣನೆಯ ಅಂತ್ಯದಲ್ಲಿ ಪ್ರಮಿತಗಳಾದ (ಅಂದರೆ ಉತ್ತಮೋತ್ತಮಗಳಾದ) ನಿನ್ನ ವಿಷಯಕಗಳಾದವುಗಳು ಒಳ್ಳೇ ಬುದ್ಧಿಗಳು. ಅಂತಹ ನಿನ್ನ ಬುದ್ಧಿಗಳನ್ನು ಹೊಂದುವೆವು. ನೀನು ನಮ್ಮನ್ನು ಅತಿಕ್ರಮಿಸಿ ಯಾವಾಗಲೂ ಕರುಣಾರ್ದ್ರದೃಷ್ಟಿಯಿಂದ ಇತರರನ್ನು ನೋಡಬೇಡ. (ನಮ್ಮನ್ನೇ ನೋಡು.) ||೩||

ಋ || (೩೪) ಪರೇಹಿ ವಿಗ್ರಮಸ್ತೃತಮಿಂದ್ರಂ ಪೃಚ್ಛಾವಿಪಶ್ಚಿತಂ | ಯಸ್ತೇ ಸಖಿಭ್ಯ ಆವರಂ ||೪||

ಅ|| (ಋಷಿಯು ತನ್ನ ಅಂತಃಕರಣವನ್ನು ಕುರಿತು ಹೇಳುತ್ತಾನೆ.) (ಎಲೋ ಮನಸ್ಸೇ, ಯದ್ಯಪಿ ನೀನು ಇಂದ್ರನ ದೆಶೆಯಿಂದ) ಪರಾ= ದೂರದಲ್ಲಿರುತ್ತಿ. (ಅಂದರೆ ಸಂಪೂರ್ಣವಾಗಿ ಇಂದ್ರನನ್ನು ಗ್ರಹಣ ಮಾಡಲಿಕ್ಕೆ ಅಸಮರ್ಥವಾದುದು.) ಅಥವಾ ಶ್ರೀ ಹರಿಯು ಸ್ವತಃ ದೂರದಲ್ಲಿರುತ್ತಾನೆ. (ನಿನಗೆ ವಿಷಯನಾಗುವುದಿಲ್ಲ.) (ಆದಾಗ್ಯೂ ನೀನು) ಯಃ = ಯಾವ ಇಂದ್ರನು, ತೇ = ನಿನ್ನ ಸಖಿಭ್ಯಃ = ಚಕ್ಷುರಾದಿಗಳಿಗೆ ಪ್ರೇರಕರಾಗಿ ಉಪಕಾರಿಗಳಾದ ದೇವತೆಗಳ ದೆಶೆಯಿಂದ ಅವರಂ = ನಿತ್ಯದಲ್ಲಿಯೂ ಉತ್ತಮನೋ, (ಅಂತಹ) ವಿಗ್ರಂ =ಅಗ್ರಾಹ್ಯನೂ, ಅಸ್ತೃತಂ =ಅನಷ್ಟನೂ, ವಿಪಶ್ಚಿತಂ =ವ್ಯಾಪ್ತವಾದ ಮನಸ್ಸುಳ್ಳವನೂ, ಆದ, ಇಂದ್ರಂ = ಪರಮೇಶ್ವರನನ್ನು, ಇಹಿ =ಹೋಗು. ಅಥವಾ ಶರಣು ಹೊಂದು. ಅಥವಾ ತಿಳಿದು ಕೋ. ಪೃಚ್ಛ = ಅದಕ್ಕಾಗಿ ಗುರುಗಳನ್ನು ಕೇಳು ||೪||

ಭಾ || ಮನ್ಮನೋ ವಾಽಥ ಶಕ್ರೋ ವಾ ದೂರೇಽಪಿ ಪರಮೇಶ್ವರಂ | ಗಚ್ಛಾಗ್ರಾಹ್ಯಮನಷ್ಟಂ ಚ ವ್ಯಾಪ್ತ ಚಿತ್ತಂ ಯ ಏವೇಚ | ಸಖಿಭ್ಯ ಉತ್ತಮೋ ನಿತ್ಯಂ ||೪||

ಅ|| ಎಲೋ ನನ್ನ ಮನಸ್ಸೇ, ನೀನು ಪರಮೇಶ್ವರನಿಗಿಂತ ದೂರದಲ್ಲಿರುತ್ತಿ. (ಸಂಪೂರ್ಣ ಶ್ರೀ ಹರಿಯನ್ನು

ಗ್ರಹಿಸಲಿಕ್ಕೆ ಅಸಮರ್ಥವು) ಅಥವಾ ಶ್ರೀ ಹರಿಯು ನಿನಗಿಂತ ದೂರದಲ್ಲಿರುತ್ತಾನೆ. (ನಿನಗೆ ವಿಷಯನಾಗುವುದಿಲ್ಲ) (ಅಪಿ=) ಆದಾಗ್ಯೂ ಯಾವ ಇಂದ್ರನು ನಿನಗೆ ಸಖಿಗಳಾದ ಚಕ್ಷುರಾದಿಗಳಿಗೆ ಪ್ರೇರಕರಾಗಿ ಉಪಕಾರಿಗಳಾದ ದೇವತೆಗಳದ್ವೆಶೆಯಿಂದ ಸರ್ವದಾ ಉತ್ತಮೋತ್ತಮನೋ, (ನೀನು) ಅಂತಹ ಸಾಕಲ್ಯೇನ ಅಗ್ರಾಹ್ಯನೂ ಸರ್ವಥಾ ನಾಶವಿಲ್ಲದವನೂ, ವ್ಯಾಪ್ತವಾದ ಮನಸ್ಸುಳ್ಳವನೂ ಆದ ಶ್ರೀ ಪರಮೇಶ್ವರನನ್ನು ಶರಣು ಹೊಂದು. ||೪||

**ಋ|| (೩೫) ಉತ ಬ್ರುವಂತು ನೋ ನಿದೋ ನಿರನ್ಯತಶ್ಚಿದಾರತ | ದಧಾನಾ ಇಂದ್ರ ಇದ್ದುವಃ ||೫ || ೭ ||**

ಅ|| ನಿದಃ = ಜಗತ್ಸೃಷ್ಟ್ಯಾದಿ ಕಾರ್ಯ ಮಾಡಲಿಕ್ಕೆ ಸಹಾಯಕರಾಗಿ ಇಂದ್ರನೆನಿಸಿಕೊಂಡ ಶ್ರೀ ವಿಷ್ಣುವಿನ ಸಮೀಪದಲ್ಲಿಯೇ ಇರುವ ಬ್ರಹ್ಮಾದಿ ದೇವತೆಗಳೋ, ಉತ=ಅವರೂ ಕೂಡ, ನಃ = ನಮ್ಮನ್ನು ಕುರಿತು, ಬ್ರುವಂತು = ಪರಮೇಶ್ವರನ ಸ್ವರೂಪವನ್ನು ಯಥಾಯೋಗ್ಯವಾಗಿ ವ್ಯಾಖ್ಯಾನ ಮಾಡಲಿ. ಚಿತ್ = ಯಾರು, ಅನ್ಯತಃ = ಸ್ಥಾನಾಂತರದಿಂದ, ಸಂಸಾರಕ್ಕೆ ಕಾರಣವಾದ ಅಜ್ಞಾನದಿಂದ, ನಿಃ =ಹೊರಟು, ಅರತ=ಶ್ರೀ ಪರಮಾತ್ಮನನ್ನು ಹೊಂದಿರುತ್ತಾರೋ (ಅವರೂ ಕೂಡ ನಮ್ಮನ್ನು ಕುರಿತು ಶ್ರೀ ಪರಮಾತ್ಮನ ಸ್ವರೂಪವನ್ನು ಉಪದೇಶಿಸಲಿ.) (ಯಾರು) ಇಂದ್ರೇ ಇತ್ =ಶ್ರೀ ಪರಮಾತ್ಮನಲ್ಲಿಯೇ, ದುವಃ = ಆತ್ಮನಿಗೆ ವಿಷಯಗಳನ್ನು ಪೂರ್ಣೀಕರಿಸುವ ಇಂದ್ರಿಯಗಳನ್ನು, ದಧಾನಾಃ =ಧರಿಸುವವರಾಗಿರುತ್ತಾರೋ, (ಅಂದರೆ ಶ್ರೀ ಪರಮಾತ್ಮನ ಪ್ರಾಪ್ತಿಗಾಗಿ ಶ್ರೀ ಹರಿಯನ್ನು ಪಾಸನೆ ಮಾಡುತ್ತಿರುತ್ತಾರೋ) (ಅವರೂ ಕೂಡ ಪರಮಾತ್ಮನನ್ನು ನಮಗಾಗಿ ಉಪದೇಶಿಸುತ್ತಾರೆಯೇ ಸರಿ.) ||೫||೭||

**ಭಾ || ನಿದಸ್ತಸ್ಯ ಸಮೀಪಗಾ:|ತೇಽಪಿ ಬ್ರುವಂತು ನೋ ದೇವಂ ಪ್ರಾಪುರ್ಯೇ ಚಾನ್ಯತೋಽಪಿ ತಂ||**
**ನಿರ್ಗತ್ಯಾಜ್ಞಾನತಸ್ತಸ್ಮಾದ್ದಧಾನಾ ಈಶ ಏವ ಚ||ದುವಃ ಪ್ರಾಣಾನ್ ರುವಂತ್ಯೇವ ತೇಽಪಿ ನಃ ಪರಮೇಶ್ವರಂ ||೫||**

ಅ || ನಿದಃ - ಯಾರು ಶ್ರೀ ಹರಿಯ ಸಮೀಪದಲ್ಲಿಯೇ ಇರುವವರೋ, ಅಂದರೆ ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಮಾಡುವಾಗ ಸಹಾಯಕರಾಗಿ ಯಾವ ಬ್ರಹ್ಮಾದಿಗಳು ಸಮೀಪದಲ್ಲಿರುತ್ತಾರೋ, ಅವರೂ ಕೂಡ ನಮ್ಮನ್ನು ಕುರಿತು ಭಗವತ್ಸ್ವರೂಪವನ್ನು ಯಥಾಯೋಗ್ಯವಾಗಿ ಉಪದೇಶಿಸಲಿ. ಯಾರು ಸಂಸಾರಕ್ಕೆ ಕಾರಣವಾದ ಅಜ್ಞಾನದಿಂದ ಹೊರಟೇ ಶ್ರೀ ಹರಿಯನ್ನು ಹೊಂದಿರುತ್ತಾರೋ, ಅವರೂ ಕೂಡ (ಸಮೀಪದಲ್ಲಿರತಕ್ಕ ಬ್ರಹ್ಮಾದಿಗಳಿಂದ ಅತಿರಿಕ್ತವಾದ ಅಪರೋಕ್ಷ ಜ್ಞಾನಿಗಳೂ ಕೂಡ) ಭಗವತ್ಸ್ವರೂಪವನ್ನು ಯಥಾಯೋಗ್ಯವಾಗಿ ಉಪದೇಶಿಸಲಿ. ಯಾವ ಪರೋಕ್ಷಜ್ಞಾನಿಗಳು ಪರಮೈಶ್ವರ್ಯ ಸಂಪನ್ನನಾದ ಶ್ರೀ ಹರಿಯಲ್ಲಿಯೇ, ತನಗೆ ರೂಪಾದಿ ವಿಷಯಗಳನ್ನು ಹೊಂದಿಸಿಕೊಡತಕ್ಕ ಇಂದ್ರಿಯಗಳನ್ನು ಧರಿಸುವವರಾಗಿರುತ್ತಾರೋ (ಶ್ರೀ ಪರಮಾತ್ಮನ ಪ್ರಾಪ್ತಿಗಾಗಿ ಶ್ರೀ ಹರಿಯನ್ನು ವಾಸನೆ ಮಾಡುತ್ತಾರೋ.) ಅವರೂ ಕೂಡ ನಮಗಾಗಿ ಶ್ರೀ ಪರಮಾತ್ಮನ ಸ್ವರೂಪವನ್ನು ಯಥಾಯೋಗ್ಯವಾಗಿ ವ್ಯಾಖ್ಯಾನ ಮಾಡಲಿ. ||೫||೭||

**ಋ || (೩೬) ಉತ ನಃ ಸುಭಗಾ ಅರಿರ್ವೋಚೇಯುರ್ದಸ್ಮ ಕೃಷ್ಟಯಃ | ಸ್ಯಾಮೇಂದಿಂದ್ರಸ್ಯ ಶರ್ಮಣಿ ||೬||**

ಅ॥ ದಸ್ಮ = (ದಂಸು ವಿಭೇದನೇ) ಶತ್ರು ನಾಶಕನೇ, ಅರಿರುತ = ಶತ್ರುಗಳು ಮಿತ್ರರು ಉದಾಸೀನರೂ ಕೂಡ, ಕೃಷ್ಟಯಃ = ಪ್ರಜೆಗಳಾದ, ನಃ = ನಮ್ಮನ್ನು, ಸುಭಗಾನ್ = ಒಳ್ಳೇ ಸಂಪತ್ತುಳ್ಳವರನ್ನಾಗಿ, ವೋಚೇಯುಃ = (ವಚ ಪರಿಭಾಷನೇ) ಯಾವಾಗಲೂ ಹೇಳುವರು. (ನಾವು) ಇಂದ್ರಸ್ಯ =ಪರಮೈಶ್ವರ್ಯ ಸಂಪನ್ನನಾದ ನಿನ್ನ, ಅನುಗ್ರಹವಾಗೋಣ) ಶರ್ಮಣಿ =ಸುಖ ವಿಷಯದಲ್ಲಿ, ಸ್ಯಾಮಇತ್ =ಆಗುವೆವು. (ನಿನ್ನ ಅನುಗ್ರಹವಾದಾಗ ಸುಖಿಗಳು ಆಗಿಯೇ ಆಗುವೆವು) ॥೬॥

ಭಾ ॥ ಅರಯೋಽಪಿ ಪ್ರಜಾ ಅಸ್ಮಾನ್ ವೇಚೇಯುಃ ಸುಭಗಾನ್ ಸದಾ । ಶತ್ರುಭೇದಿನ್ ತವೇಂದ್ರಸ್ಯ ಸ್ಯಾಮ್ಯೈವಾನುಗ್ರಹೇ ಸುಖೇ ॥೬॥

ಅ॥ ಶತ್ರು ಸಂಹಾರಕನೇ ಶತ್ರುಗಳೂ ಕೂಡ ಪ್ರಜೆಗಳಾದ ನಮ್ಮನ್ನು ಯಾವಾಗಲೂ ಒಳ್ಳೇ ಐಶ್ವರ್ಯವುಳ್ಳವರನ್ನಾಗಿ ಹೇಳುವರು. (ಮತ್ತು ನಾವು) ಇಂದ್ರನಾದ ನಿನ್ನ ಅನುಗ್ರಹವಾದಾಗ ಸುಖಿಗಳಾಗಿ ಆಗಿಯೇ ಆಗುವೆವು. ॥೬॥

ಋ ॥ (೩.೭) ಏಮಾಶುಮಾಶವೇ ಭರ ಯಜ್ಞಶ್ರಿಯಂ ನೃಮಾದನಂ । ಪತಯನ್ಮಂದಯತ್ಸಖಂ ॥೭॥

ಅ॥ ಅಶವೇ = ಶೀಘ್ರವಾಗಿ ಮಾಡತಕ್ಕ ಸಾಮರ್ಥ್ಯವುಳ್ಳವನೇ, ಅಶುಂ =ದ್ರವದ್ರವ್ಯವಾಗಿರುವುದರಿಂದ ವೇಗವುಳ್ಳ, ಯಜ್ಞಶ್ರಿಯಂ = ಯಾಗಕ್ಕೆ ಭೂಷಣವಾದ, ನೃಮಾದನಂ = ಪುರುಷರಿಗೆ ಮದವನ್ನುಂಟು ಮಾಡುವ (ಅಂದರೆ ಪಾಪ ಮಾಡಿದ ಪುರುಷರಿಗೆ ಹರ್ಷವನ್ನುಂಟು ಮಾಡುವ) ಪತಯತ್ = ಪಾನ ಮಾಡುವವರಿಗೆ ಮದವನ್ನುಂಟು ಮಾಡಿ ಉತ್ಪತನಾದಿ ವ್ಯಾಪಾರಗಳಿಗೆ ಕಾರಣವಾದ, ಮಂದಯತ್ಸಖಂ = ಯಾರು ಸೋಮಪಾನ ಮಾಡುತ್ತಾನೋ, ಅವನ ಸಖಿಗಳಿಗೆ ಮಂದರಾಗಲಿಕ್ಕೆ ಕಾರಣವಾದ, (ಅಂದರೆ = ಸೋಮವನ್ನು ಪಾನ ಮಾಡುವವರಿಗೆ ಧಾವನಾದಿಗಳಲ್ಲಿ ಬಲವುಂಟಾಗುವುದರಿದ, ಪಾನ ಮಾಡದಿರುವ ಸಖಿಗಳು ಪಾನ ಮಾಡದಿರುವವನ ಮುಂದೆ ಹೋಗುವುದರಿಂದ ಅವರಿಗೆ ಮಂದತ್ವವನ್ನುಂಟು ಮಾಡುತ್ತದೆ. ಈಂ = ನಿನ್ನ ಅಧೀನವೇ ಆದ, ಸೋಮವನ್ನು (ತನ್ನ ಉದರದಲ್ಲಿ) ಆ ಭರ = ಧರಿಸು. (ಆಧ್ಯಾತ್ಮದಲ್ಲಿ) ಇಂತಹ ಮನಸ್ಸನ್ನು ಸಂತೋಷದಿಂದ ಹೃದಯದಲ್ಲಿ ಇದು ಸಾಧುವೆಂದು ಧರಿಸು. (ಮನಸ್ಸು ಚಂಚಲವಾಗಿರುವುದರಿಂದ ಅಶುತ್ವವು. (ಶೀಘ್ರತನವು.) (ಸೋಮರಸ ಪಾನದಿಂದುಂಟಾದ ಬಲಾತಿಶಯದಿಂದಲಾಗಲೀ ಮನಸ್ಸು ಚಂಚಲವಾಗಿರುವುದರಿಂದ ಕೇವಲ ಈಶ್ವರನಲ್ಲಿಲ್ಲದಿರುವ ಪ್ರಯುಕ್ತ ಮನಸ್ಸಿನಿಂದ ಹುಟ್ಟತಕ್ಕ ಅಹಂಕಾರಾದ್ಯುದ್ರೇಕದಿಂದಲಾಗಲೀ ಪುರುಷರಿಗೆ ಮದಾದಿಗಳು ಹುಟ್ಟುತ್ತವೆ.) ॥೭॥

ಭಾ ॥ (೧) ಅಶುವೀರ್ಯ ತವೈವಾಶುಂ ಸೋಮಂ ಕ್ಷಿಪ್ರಂ ಮನೋಽಪಿ ವಾ । ಆರಭಸ್ವೋದರೇ ತುಷ್ಟ್ಯಾ ಹೃದಿ ವಾ ಯಜ್ಞಭೂಷಣಂ । ಈಮೇವ ಪುಂಮದಕರಂ ಮದಾದುತ್ಪತನಾದಿಕೇ । ಹೇತುಂ ಮಂದತ್ವಹೇತುಂ ಚ ತತ್ಸಖೀನಾಂ ಪುರೋಗತೇಃ ॥೭॥

ಅ॥ ಶೀಘ್ರವಾಗಿ ಮಾಡತಕ್ಕ ಸಾಮರ್ಥ್ಯವುಳ್ಳವನೇ, ದ್ರವದ್ರವ್ಯವಾಗಿರುವುದರಿಂದ ವೇಗವುಳ್ಳ, ಯಜ್ಞಕ್ಕೆ ಅಲಂಕಾರಭೂತವಾದ ಪಾನ ಮಾಡಿದ ಪುರುಷರಿಗೆ ಹರ್ಷವನ್ನುಂಟು ಮಾಡುವ ಮದವನ್ನುಂಟು ಮಾಡಿ ಉತ್ಪತನ

ಮೊದಲಾದ ವ್ಯಾಪಾರಗಳಿಗೆ ಕಾರಣಭೂತವಾದ, ಧಾವನಾದಿಗಳಲ್ಲಿ ಪಾನ ಮಾಡಿದವರಿಗೆ ಬಲವುಂಟಾಗುವುದರಿಂದ ಪಾನ ಮಾಡದಿರುವವರಿಗಿಂತ ಮುಂದೆ ಹೋಗುವುದರಿಂದ ಸೋಮಪಾನ ಮಾಡಿದವರ ಸಖಿಗಳು ಸೋಮಪಾನ ಮಾಡದಿರುವುದರಿಂದ ಅವರ ಮಂದತ್ವಕ್ಕೆ ಕಾರಣವಾದ ನಿನ್ನ ಅಧೀನವೇ ಆದ ಸೋಮವನ್ನು ತನ್ನ ಉದರದಲ್ಲಿ ಧರಿಸು. (ಆಧ್ಯಾತ್ಮದಲ್ಲಿ ಆದರೂ ಇಂತಹ ಮನಸ್ಸನ್ನು ಸಂತೋಷದಿಂದ ಹೃದಯದಲ್ಲಿ ಇದು ಸಾಧುವು ಎಂತ ಧರಿಸು, ಹೀಗೆ ವ್ಯವಸ್ಥಿತ ವಿಕಲ್ಪವು ||೭||

ಋ || (೩೮) ಅಸ್ಯ ಪೀತ್ವಾ ಶತಕ್ರತೋಘನೋ ವೃತ್ರಾಣಾಮಭವಃ | ಪ್ರಾವೋ ವಾಜೇಷು ವಾಜಿನಂ ||೮||

ಅ|| ಶತಕ್ರತೋ = ಎಲೋ ಅಪರಿಮಿತ ಜ್ಞಾನವುಳ್ಳ ಶ್ರೀ ವಿಷ್ಣುವೇ, ಅಥವಾ ೧೦೦ ಆವರ್ತಿ ಅಶ್ವಮೇಧ ಯಜ್ಞಮಾಡಿದ ಪುರಂದರನೇ, ಅಸ್ಯಪೀತ್ವಾ = ನಿನ್ನ ಅಧೀನವೇ ಆದ ಈ ಸೋಮವನ್ನು ಪಾನ ಮಾಡಿ, ವೃತ್ರಾಣಾಂ = (ಯದಿಮಾನ್ ಲೋಕಾನ್ ಆವೃನೋತ್ ತದ್ವೃತ್ರಸ್ಯ ವೃತ್ರತ್ವಂ' ಎಂಬ ಶ್ರುತಿಯಿಂದ ಸಮಸ್ತ ಜೀವರಿಗೆ ಆವರಕವಾದುದರಿಂದ, ವೃತಪದ ವಾಚ್ಯಗಳಾದ ಅಜ್ಞಾನಗಳಿಗೆ ಘನಃ = ಅಭೇದ್ಯನು, ಅಭವಃ = ಆಗಿರುವಿ. (ಅಂದರೆ ಅಜ್ಞಾನಗಳಿಂದ ಅನಾವೃತನಾಗಿರುತ್ತಿ.) (ವಿಷ್ಣುಪಕ್ಷದಲ್ಲಿ, ಯಾವ ಯಜ್ಞದಲ್ಲಿ ಭಗವಂತನಿದ ಸೋಮವು ಪಾನಮಾಡಲ್ಪಟ್ಟಿದೋ, ಆ ಯಜ್ಞದಿಂದ ಅವಿರ್ಭೂತನಾದ ಶ್ರೀ ವಿಷ್ಣುವಿನ ಪ್ರಸಾದದಿಂದ ಆ ಮುಕ್ತರಲ್ಲಿ ಅಜ್ಞಾನ ಸ್ಪರ್ಶವನ್ನು ಸಹಿಸುವುದಿಲ್ಲ. (ಮುಕ್ತರಿಗೆ ಅಜ್ಞಾನವಿಲ್ಲ.) (ನೀನು) ವಾಜಿನಂ = ಅನ್ನವನ್ನು ಕೊಡತಕ್ಕ ಮನುಷ್ಯನನ್ನು, ವಾಜೇಷು = ಅನ್ನಾದಿ ಸಮಸ್ತ ಭೋಗ ವಿಷಯದಲ್ಲಿ, ಪ್ರಾವಃ = ರಕ್ಷಿಸಿರಿ ಅಥವಾ, ವಾಜಿನಂ = ಜ್ಞಾನಾದಿ ವಿಷಯದಲ್ಲಿ ಯುದ್ಧ ಮಾಡುವವನನ್ನು, ವಾಜೇಷು = ಜ್ಞಾನಾದಿ ಯುದ್ಧಗಳಲ್ಲಿ ಪ್ರಾವಃ = ರಕ್ಷಿಸಿರಿ ||೮||

ಭಾ || (೧) ಏನಂ ಪೀತ್ವಾ ಬಹುಜ್ಞಾನಾಽಭೂಸ್ತಮೋಭಿರನಾವೃತಃ | ಪ್ರಸಾದಾದೇವ ಮುಕ್ತೇಷು ತಮೋಽಸಹ್ಯತಯಾ ಘನಃ || ಆವೃತೇರೇವ ವೃತಾಣಿ ಹ್ಯಜ್ಞಾನಾನ್ಯನ್ನದಂ ನರಂ | ಪ್ರಾವೋ ಯುದ್ದೇಷು ಯೋದ್ಧಾರಂ ಭಕ್ತಂ ಜ್ಞಾನಿನಮೇವ ಚ ||೮||

ಅ|| (೧) ಬಹುಜ್ಞಾನವುಳ್ಳವನೇ ಈ ಸೋಮವನ್ನು ಪಾನಮಾಡಿ, ತಮಸ್ಸುಗಳಿಂದ ಅನಾವೃತನಾಗಿರುತ್ತಿ. ಯಾವ ಯಾಜ್ಞಿಕರ ಸೋಮವು ಶ್ರೀ ಹರಿಯಿಂದ ಪಾನಮಾಡಲ್ಪಟ್ಟಿದೋ ಆ ಯಾಜ್ಞಿಕರು ಆ ಯಜ್ಞದಿಂದುಂಟಾದ ಭಗವತ್ಪ್ರಸಾದದಿಂದಲೇ ಮುಕ್ತರಾಗಲು ಭಗವತ್ಪ್ರಸಾದದಿಂದಲೇ ಅಸಹ್ಯಂ ತಮೋ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಶ್ರೀ ಹರಿಯು ತಮಸ್ಸನ್ನು ಸಹಿಸುವುದಿಲ್ಲ. (ತಮಸ್ಸು ಅವನ ಹತ್ತಿರ ಬರುವುದಿಲ್ಲ.) ಮುಕ್ತರಿಗೆ ಅಜ್ಞಾನ ಸಂಪರ್ಕವನ್ನು ಸಹಿಸುವುದಿಲ್ಲ. ಆದ ಕಾರಣ ಸೋಮವನ್ನು ಪಾನಮಾಡಿ ವೃತಾಣಾಂ ಘನಃ ಅಭವಃ ಎನ್ನಿಸುತ್ತಾನೆ. (ನಿರನಿಷ್ಟೋ ನಿರವದ್ಯಃ ಎಂಬ ಪ್ರಮಾಣದಿಂದ ಸರ್ವಥಾ ಅಜ್ಞಾನಾದಿ ದೋಷಗಳಿಲ್ಲವೆಂದು ಹೇಳಿದುದರಿಂದ ಸೋಮಪಾನ ಸಾಮರ್ಥ್ಯದಿಂದ ಶ್ರೀಹರಿಗೆ ಅಜ್ಞಾನಾವರಣವಿಲ್ಲವೆಂಬುದು ಪ್ರಮಾಣ ವಿರುದ್ಧವು) (೨) ಸಮಸ್ತ ಜೀವರನ್ನು ಆವರಿಸುವುದರಿಂದ ಅಜ್ಞಾನಗಳು ವೃತ್ರಾಣಿ ಎನಿಸುತ್ತವೆ. (ಹ್ಯೇವ) ಈ ನಿರ್ವಚನವು `ಯದಾವೃಣೋತ್ತದ್ವೃತ್ರಸ್ಯ ವೃತ್ರತ್ವಂ | ಇತ್ಯಾದಿ ಶ್ರುತಿ ಪ್ರಸಿದ್ಧವಾದುದರಿಂದ

ಪ್ರಬಲವು. ಮತ್ತೂ ಅನ್ನದಾನ ಮಾಡತಕ್ಕ ಮನುಷ್ಯನನ್ನು ಸರ್ವ ಭೋಗ ವಿಷಯದಲ್ಲಿ ರಕ್ಷಿಸಿದಿ. (ಸರ್ವಭೋಗಗಳನ್ನು ಕೊಡುತ್ತಿ.) ಅಥವಾ ಯುದ್ಧ ಮಾಡತಕ್ಕವನನ್ನು ಯುದ್ಧಗಳಲ್ಲಿ ರಕ್ಷಿಸಿದಿ. (ಅನ್ನದಾನಾದಿ ಮಾತ್ರದಿಂದ ಶ್ರೀ ಹರಿಯು ರಕ್ಷಿಸುವುದಿಲ್ಲ. ಮತ್ತೆ) ಭಕ್ತನೂ ಜ್ಞಾನಿಯೂ ಆದವನನ್ನೇ ರಕ್ಷಿಸುತ್ತಾನೆ. ||೮||

**ಋ || (೩೯) ತಂತ್ವಾ ವಾಜೇಷು ವಾಜಿನಂ ವಾಜಯಾಮಃ ಶತಕ್ರತೋ | ಧನಾನಾಮಿಂದ್ರ ಸಾತಯೇ ||೯||**

ಅ|| ಶತಕ್ರತೋ = ಇಂದ್ರ = ಇಂದ್ರನೇ ತಂ = ಹಿಂದೆ ಹೇಳಿದ ಗುಣಗಳುಳ್ಳ, ವಾಜಿನಂ = ಯುದ್ಧ ಮಾಡತಕ್ಕ ತ್ವಾ = ನಿನ್ನನ್ನು ಧನಾನಾಂ = ಜ್ಞಾನಾದಿದ್ರವ್ಯಗಳನ್ನು ಸಾತಯೇ = ಹೊಂದುವುದಕ್ಕಾಗಿ, ವಾಜೇಷು = ಯುದ್ಧಗಳಲ್ಲಿ ವಾಜಯಾಮಃ = (ಅಜ್ಞಾನ ಮೊದಲಾದ ನಮ್ಮ ಶತ್ರುಗಳಿಂದಲೂ, ಬಾಹ್ಯ ಶತ್ರುಗಳಿಂದಲೂ ಕೂಡಿಕೊಂಡು) ಯುದ್ಧ ಮಾಡುತ್ತೇವೆ || ||೯||

**ಭಾ || ಯೋಧಯಾಮೋ ವಯಂ ತಂ ತ್ವಾಂ ಜ್ಞಾನಾಧಿನಲಬ್ಧಯೇ | ಅಜ್ಞಾನಾದ್ಯಸ್ಮದರಿಭಿಃ ||೯||**

ಅ|| ಎಲೋ ಇಂದ್ರನೇ ಹಿಂದೆ ಹೇಳಿದ್ದ ಗುಣಗಳುಳ್ಳ ಯುದ್ಧಮಾಡತಕ್ಕ ನಿನ್ನನ್ನು ಜ್ಞಾನ ಮೊದಲಾದ ದ್ರವ್ಯಗಳನ್ನು ಹೊಂದುವುದಕ್ಕಾಗಿ ಯುದ್ಧಗಳಲ್ಲಿ ಅಜ್ಞಾನ ಮೊದಲಾದ ನಮ್ಮ ಶತ್ರುಗಳಿಂದ ಕೂಡಿಕೊಂಡು ಯುದ್ಧ ಮಾಡು (ಬಾಹ್ಯಾರ್ಥದಲ್ಲಿ) ನಿನ್ನನ್ನು ಪ್ರಸಿದ್ಧ ಧನ ಪ್ರಾಪ್ತಿಗಾಗಿ ನಮ್ಮ ಬಾಹ್ಯ ಶತ್ರುಗಳಿಂದೊಡಗೂಡಿ ಯುದ್ಧ ಮಾಡುತ್ತೇವೆ. (ಅಂದರೆ ನಮಗೆ ಜ್ಞಾನ ಪ್ರಸಿದ್ಧ ಧನಗಳಿಗೆ ಪ್ರತಿಬಂಧಕರಾದ ಉಭಯ ವಿಧ ವೈರಿಗಳನ್ನು ಕೊಂದರೆ ನೀನು ಕೊಟ್ಟ ಜ್ಞಾನಾದಿಗಳು ನಮ್ಮಲ್ಲಿ ಸ್ಥಿರವಾಗುವುದು ಎಂದು ತಾತ್ಪರ್ಯವು) ||೯||

**ಋ || (೪೦) ಯೋ ರಾಯೋ ಽವನಿರ್ಮಹಾನ್ ಸುಪಾರಃ ಸುನ್ವತಃ ಸಖಾ | ತಸ್ಮಾ ಇಂದ್ರಾಯ ಗಾಯತ ||೧೦||೮||೪||**

ಅ|| ಯಃ = ಯಾವ ಇಂದ್ರನು, ರಾಯಃ = ಸಮಸ್ತ ದ್ರವ್ಯಗಳಿಗೆ, ಅವನಿಃ = ಭೂಮಿಯಂತೆ ಆಶ್ರಯನೋ, ಮಹಾನ್ = ಉತ್ತಮನೋ, ಸುಪಾರಃ = ಸುಖವನ್ನು ಕೊಡುವವನೋ, ಸಂಸಾರದಿಂದ ದಾಟಿಸುವವನೋ, ಸುನ್ವತಃ = ಯಜಮಾನನಿಗೆ, ಸಖಾ = ಗೆಳೆಯನೋ ತಸ್ಮೈ ಇಂದ್ರಾಯ = ಆ ಇಂದ್ರನಿಂದಾಗಿ, ಗಾಯತ = (ಕೈ ಗೈ ರೈ ಶಬ್ದೇ) (ಎಲೋ ಉದ್ಗಾತೃಗಳೇ) ಸಾಮಗಾನ ಮಾಡಿರಿ ಅಥವಾ ಋತ್ವಿಜರೇ ಸ್ತುತಿ ಶಬ್ದಗಳನ್ನು ಮಾಡಿರಿ ||೧೦||

**ಭಾ (೧) ಯೋಽಶೇಷದ್ರವಿಣಾವನಿಃ | ಸುಖದಃ ಸಂಸೃತೇಃ ಪಾರಸ್ತಸ್ಮಾ ಇಂದ್ರಾಯ ಗಾಯತ || (೨) ಕಂಪೋಽಶೇಷಗ್ರಹೇ ಕ್ವಾಪಿ ಲಜ್ಜಾಯಾಂ ವಾ ಪುರಾತನೇ | ಪೃಥಕ್ತ್ವೇಽಧೃಷ್ಯತಾಯಾಂ ವಾ ಹರಿಣರ್ಕ್ಸಂಹಿತೋದಿತಃ || ||೧೦||೮||೪||**

ಅ|| (೧) ಯಾವ ಇಂದ್ರನು ಸಮಸ್ತ ದ್ರವ್ಯಗಳಿಗೆ ಪೃಥಿವಿಯಂತೆ ಆಶ್ರಯನೋ, ಸುಖವನ್ನು ಕೊಡುವವನೋ, ಸಂಸಾರದಿಂದ ದಾಟಿಸುವವನೋ, ಅಂತಹ ಇಂದ್ರನನ್ನು ಪ್ರಸನ್ನೀಕರಿಸುವುದಕ್ಕಾಗಿ ಇಂದ್ರನಿಗಾಗಿ ಗಾನ ಮಾಡಿರಿ. (೨) (ಅಶೇಷ ಎನ್ನುವುದರಿಂದ ಕಂಪಾರ್ಥವು ಹೇಳಲ್ಪಟ್ಟಿತು. ಕಂಪಕ್ಕೆ ಅಶೇಷ ಎಂಬ ಅರ್ಥವಿದೆ ಎಂಬಲ್ಲಿ ಪ್ರಮಾಣ

ಹೇಳುತ್ತಾರೆ.) ಅಶೇಷ ಎಂಬ ಅರ್ಥದಲ್ಲಿಯೂ, ಲಜ್ಜಾ ಎಂಬ ಅರ್ಥದಲ್ಲಿಯೂ, ಪುರಾತನ ಎಂಬ ಅರ್ಥದಲ್ಲಿಯೂ, ಅದರಿಂದ ಇದು ಬೇರೆ ಎಂಬ ಅರ್ಥದಲ್ಲಿಯೂ ಸಹಿಸಲಿಕ್ಕೆ ಶಕ್ಯವಾಗುವಿಕೆ ಎಂಬ ಅರ್ಥದಲ್ಲಿಯೂ, ಕಂಪವು ಇದೆ ಎಂದು (ಉದಾತ್ತಾನುದಾತ್ತ ಸಮಾಹಾರ ರೂಪವಾದ ಸ್ವರಿತದ ತ್ರಿಮಾತ್ರಾ ಚತುರ್ಮಾತ್ರಾಕಾಲದಿಂದ ಉಚ್ಚಾರಣವು ಶ್ರೀಹರಿಯಿಂದ ಋಕ್ಸಂಹಿತೆಯಲ್ಲಿ ಹೇಳಲ್ಪಟ್ಟಿದೆ. ||೧೦||೮||೪||

ಅವ || ೧೦ ಋಕ್ಕು, ೨ ವರ್ಗ, ಐಂದ್ರಸೂಕ್ತವು.

**ಋ || (೪೧) ಆತ್ವೇತಾ ನಿಷೀದತೇಂದ್ರಮಭಿ ಪ್ರಗಾಯತ ।**

**ಸಖಾಯಃ ಸ್ತೋಮವಾಹಸಃ ||೧||**

ಅ || ಸಖಾಯಃ = ಸಖಿಭೂತರಾದ, ಸ್ತೋಮವಾಹಸಃ = ಸಾಮವಿಶೇಷಗಳನ್ನು ಗಾನ ಮಾಡುವ ಉದ್ಗಾತೃಗಳೇ ಆ ಇತ = ಬನ್ನಿರಿ. ಅನಿಷೀದತ = ಬಂದು ಕೂತುಕೊಳ್ಳಿರಿ. ಇಂದ್ರಂ = ಇಂದ್ರನನ್ನು ಅಭಿಪ್ರಗಾಯತ ತು=ಗಾನ ಮಾಡಿರಿ. ಬಂದ ಮೇಲೆ ಕೂತುಕೊಳ್ಳುವುದು ಎಂಬ ಅರ್ಥವನ್ನು ಸೂಚಿಸುವುದಕ್ಕಾಗಿ ತು ಶಬ್ದವು. || (ಸ್ಪಷ್ಟಾರ್ಥಕವಾದುದರಿಂದ ಈ ಋಕ್ಕನ್ನು ಬಾಷ್ಯಕಾರರು ವ್ಯಾಖ್ಯಾನ ಮಾಡಲಿಲ್ಲ.) ||೧||

**ಋ || (೪೨) ಪುರೂತಮಂ ಪುರೂಣಾಮೀಶಾನಂ ವಾರ್ಯಾಣಾಂ । ಇಂದ್ರಂ ಸೋಮೇ ಸಚಾ ಸುತೇ ||೨||**

ಅ|| ಪುರೂಣಾಂ = (ಪೄ ಪಾಲನ ಪೂರಣಯೋಃ) ಸಂಪೂರ್ಣರಾದವರ ಮಧ್ಯದಲ್ಲಿ ಪುರುತಮಂ = ಪೂರ್ಣತಮನು, (ಶ್ರೇಷ್ಠರಾದ ದೇವತೆಗಳ ಮಧ್ಯದಲ್ಲಿ ಶ್ರೇಷ್ಠರಾದ ವಾಯು ದೇವರಿಗಿಂತಲೂ ಅತಿ ಶ್ರೇಷ್ಠನೂ ಅಥವಾ ಶ್ರೇಷ್ಠರಿಂದಲೂ ಇಚ್ಛಿಸಲ್ಪಡತಕ್ಕವನೂ, ಪುರೂಣಾಂ = ಉತ್ತಮಗಳಾದ ವಾರ್ಯಾಣಾಂ = (ವೃಞ್ವರಣೇ) ಉಪಾದೇಯಗಳಾದ ವಸ್ತುಗಳಿಗೆ ಈಶಾನಾಂ = ಅಧೀಶ್ವರನೂ ಆದ. ಇಂದ್ರಂ = ಇಂದ್ರನನ್ನು. ಸೋಮೇ ಸುತೇ = ಸೋಮವು ಹಿಂಡಲ್ಪಡುತ್ತಿರಲಿ, ಸಚಾ = ಸುಖವಾಗಿಯೇ, (ಮನಃಪ್ರಸಾದ ಪೂರ್ವಕವಾಗಿ) ಗಾನ ಮಾಡಿರಿ) ||೨||

**ಭಾ || ಸುಪೂರ್ಣಾನಾಂ ಪೂರ್ಣತಮಂ ವರೇಣ್ಯಾನಾಮಧೀಶ್ವರಂ । ಸುತೇ ಸೋಮೇ ಸುಖೇನೈವ ಸ ಚಾಗಾಯತ ತಂ ಪ್ರಭುಂ ||೨||**

ಅ|| ಅತಿ ಪೂರ್ಣಗಳಾದ ವಸ್ತುಗಳ ಮಧ್ಯದಲ್ಲಿ ಅತಿ ಪೂರ್ಣನು, ಉಪಾದೇಯ ವಸ್ತುಗಳಿಗೆ ನಿಯಾಮಕನೂ ಆದ ಆ ಸರ್ವರಿಗೂ ಪ್ರಭುವಾದ ಶ್ರೀ ಹರಿಯನ್ನು ಸೋಮವು ಹಿಂಡಲ್ಪಡುತ್ತಿರಲು ಮನಃಪ್ರಸಾದ ಪೂರ್ವಕವಾಗಿಯೇ ಗಾನಮಾಡಿರಿ. ||೨||

**ಋ || (೪೩) ಸ ಘಾ ನೋ ಯೋಗ ಆ ಭುವತ್ಸ ರಾಯೇ ಸ ಪುರಂಧ್ಯಾಂ ಗಮದ್ವಾಜೇಭಿರಾ ಸ ನಃ ||೩||**

ಅ॥ ಸಃ ಘ = ಆ ಪರಮೇಶ್ವರನೇ, ನಃ = ನಮಗೆ, ಆ=ಚೆನ್ನಾಗಿ, ಯೋಗೇ=ಸಾಯುಜ್ಯರೂಪವಾದ ಮುಕ್ತಿಗಾಗಿ, ಭುವತ್ =ಆದನು, ಸಃ = ಆ ಶ್ರೀ ಹರಿಯೇ, ರಾಯೇ = ಜ್ಞಾನದ್ರವಿಣರೂಪ ದ್ರವ್ಯಕ್ಕಾಗಿ ಆದನು. ಸಃ = ಆ ಶ್ರೀ ಹರಿಯೇ ಪುರಂಧ್ಯಾಂ = (ಉಪಾಸಕನಿಂದ ಪರಮೇಶ್ರ ಸಂಬಂಧಿಯಾದ ಶರೀರವು ಬುದ್ಧಿಯಲ್ಲಿ ಧರಿಸಲ್ಪಡುವುದರಿಂದ ಬುದ್ಧಿಯು ಪುರಂಧೀ ಎನಿಸುತ್ತದೆ.) ಸರ್ವ ಬುದ್ಧಿಯಲ್ಲಿರುತ್ತಾನೆಂದು ಆಧ್ಯಾತ್ಮಾರ್ಥವು. ಬಾಹ್ಯಾರ್ಥದಲ್ಲಿ (ಪುರಂಧಿರ್ಯೋಷೇತ್ಯಾಹ ಯೋಷಿತ್ಯೇವ ರೂಪಂ ದಧಾತಿ, ಇತ್ಯಾದಿಗಳಿಂದ ಶ್ರೀ ಹರಿಯು ಯಾವ ಸ್ತ್ರೀಯಲ್ಲಿ ಗಂಡನಿಗೆ ಪ್ರಿಯವಾದ ವೇಷವನ್ನು ಧರಿಸುತ್ತಾನೋ ಅವಳು ಪುರಂಧಿಃ ಎನಿಸುತ್ತಾಳೆ.) ಪತ್ನೀ ಪ್ರಾಪ್ತಿಗಾಗಿ ಶ್ರೀ ಹರಿಯೇ ಆದನು. ಆ ಶ್ರೀ ಹರಿಯೇ ಅನ್ನಗಳನ್ನು ಕೊಡುವುದಕ್ಕಾಗಿ, ನಃ = ನಮ್ಮನ್ನು ಕುರಿತು ಆ ಗಮತ್ = ಬರಲಿ. ॥೩॥

ಭಾ ॥ ಮುಕ್ತೌ ಯೋಗಾಯಾಸಮಂತಾತ್ ಭವೇನ್ನೋ ಘೋऽವಧಾರಣೇ । ಸ ಏವ ಭಗವಾನ್ ಜ್ಞಾನವಿತ್ತಾಯ ಸಚ ಬುದ್ಧಿಗಃ । ಬುದ್ಧಿಃ ಪುರಾಶ್ರಯತ್ವೇನ ಪುರಂಧಿಃ ಪತ್ನ್ಯಥಾಪಿವಾ । ಪತ್ನ್ಯರ್ಥತ್ವೇತು ತಾದರ್ಥ್ಯಂ ಸೋऽನ್ನೈಃ ಸಹ ನ ಆ ವ್ರಜೇತ್ ॥೩॥

ಅ ॥ ಆ ಭಗವಂತನೇ, ನಮಗೆ ಚೆನ್ನಾಗಿ ಮುಕ್ತಿಯಲ್ಲಿ ಸಾಯುಜ್ಯ ರೂಪವಾದ ಮುಕ್ತಿ ಸಂಬಂಧಕ್ಕಾಗಿ ಆಗಬೇಕು. ಘ ಶಬ್ದವು ಅವಧಾರಣ ಎಂಬ ಅರ್ಥದಲ್ಲಿದೆ. ಆ ಶ್ರೀ ಹರಿಯೇ (ಆಧ್ಯಾತ್ಮದಲ್ಲಿ) ಜ್ಞಾನರೂಪವಾದ ದ್ರವ್ಯಕ್ಕಾಗಿ (ಆಗಬೇಕು.) ಆ ಶ್ರೀ ಹರಿಯೇ ಸರ್ವರ ಬುದ್ಧಿಗೆ ನಿಯಾಮಕನಾಗಿದ್ದಾನೆ. (ಉಪಾಸಕನಿಂದ ಪರಮಾತ್ಮನ ಸಂಬಂಧಿಯಾದ ಶರೀರವು ಬುದ್ಧಿಯಲ್ಲಿರಿಸಲ್ಪಡುವುದರಿಂದ ಬುದ್ಧಿಯು ಪುರಂಧಿಃ ಎನಿಸುತ್ತದೆ. ಪವಂಚ) ಶರೀರಕ್ಕೆ ಆಶ್ರಯವಾಗಿರುವುದರಿಂದ ಬುದ್ಧಿಯು ಪುರಂಧಿಃ ಎನಿಸುತ್ತದೆ. ಅಥವಾ (ಬಾಹ್ಯದಲ್ಲಿ) ಪತ್ನಿಯೂ ಕೂಡ ಪುರಂಧೀಃ ಎನಿಸುತ್ತಾಳೆ. ಪುರಂಧಿ ಶಬ್ದಕ್ಕೆ ಪತ್ನೀ ಎಂದು ಅರ್ಥವಾಗುವಾಗ ಪತ್ನೀ ಪ್ರಾಪ್ತಿಗಾಗಿ ಆದನು. (ಪರಮಾತ್ಮನು ಯಾವ ಸ್ತ್ರೀಯಲ್ಲಿ ಗಂಡನಿಗೆ ಪ್ರಿಯವಾದ ವೇಷವನ್ನು ಧರಿಸುತ್ತಾನೋ, ಆ ಸ್ತ್ರೀಯು ಪುರಂಧಿಃ ಎನಿಸುತ್ತಾಳೆ.) ಆ ಶ್ರೀ ಹರಿಯು ಅನ್ನಗಳನ್ನು ಕೊಡುವುದಕ್ಕಾಗಿ ನಮ್ಮನ್ನು ಕುರಿತು ಬರಬೇಕು. ॥೩॥

ಋ ॥ (೪೪) ಯಸ್ಯ ಸಂಸ್ಥೇ ನ ವೃಣ್ವತೇ ಹರೀ ಸಮತ್ಸು ಶತ್ರವಃ । ತಸ್ಮಾ ಇಂದ್ರಾಯ ಗಾಯತ ॥೪॥

ಅ॥ ಯಾವ ಇಂದ್ರನು ಇರುತ್ತಿರಲು, (ಯಾವ ಶ್ರೀ ಹರಿಯು ರಥದಲ್ಲಿರುತ್ತಿರಲು) ಸಮತ್ಸು = ಯುದ್ಧಗಳಲ್ಲಿ ಶತ್ರವಃ = ಶತ್ರುಗಳೂ, ಹರೀ = ೨ ಕುದುರೆಗಳ ಅಗ್ರ ಭಾಗವನ್ನೂ ಕೂಡ, ನ ವೃಣ್ವತೇ = ಹೊಂದುವುದಿಲ್ಲವೋ ತಸ್ಮಾ ಇಂದ್ರಾಯ = ಆ ಶ್ರೀ ಹರಿಗಾಗಿ, ಗಾಯತ = ಗಾನ ಮಾಡಿರಿ. (ಇಂದ್ರನ ಅಶ್ವಗಳು ಸಾವಿರಾರು ಇದ್ದರೂ ಇದಿರು ಓಡುವವುಗಳು ಎರಡೇ ಪ್ರಧಾನಗಳಾಗಿರುವುದರಿಂದ ಎರಡನ್ನೇ ಹೇಳಿದ್ದು.) (ಆಧ್ಯಾತ್ಮರೂಪ ಅರ್ಥದಲ್ಲಿ) ಯಾವ ಶ್ರೀ ಹರಿಯು ವಿಶೇಷವಾಗಿ ಭಕ್ತರ ಶರೀರದಲ್ಲಿ ಸನ್ನಿಹಿತವಾಗುತ್ತಿರಲು ಜ್ಞಾನ ಯುದ್ಧಗಳಲ್ಲಿ ಅಜ್ಞಾನ ಮೊದಲಾದ ಶತ್ರುಗಳ ವಿಷಯಗಳ ಕಡೆಗೆ ಓಡುವುದರಿಂದ ಹರಿ ಎನಿಸಿಕೊಂಡ ಮನಸ್ಸು ಬುದ್ಧಿಗಳು, ಇರುವುದಿಲ್ಲ. ಅಂದರೆ ಮನಸ್ಸು ಬುದ್ಧಿಗಳು ಅಜ್ಞಾನಾದಿಗಳಿಂದ ಆವೃತಗಳಾಗುವುದಿಲ್ಲ. ॥೪॥

**ಭಾ ॥ ಯಸ್ಯ ಸ್ಥಿತೌ ನ ವೃಣುತೇ ಹರ್ಯಗ್ರ ಮಪಿ ಶತ್ರವಃ । ಮನಃ ಪುರೋ ವಾ ವಿಷಯ ಹರಣಾನ್ಮನ ಏವಚ । ಬುದ್ಧಿಶ್ಚ ಹರಿಶಬ್ದೋಕ್ತೇ ತಮ ಆದೀನಿ ಶತ್ರವಃ ॥೪॥**

ಅ ॥ ಯಾವ ಶ್ರೀ ಹರಿಯು ರಥದಲ್ಲಿರುತ್ತಿರಲು ಯುದ್ಧಗಳಲ್ಲಿ ಶತ್ರುಗಳು ಅಶ್ವಗಳ ಇದಿರೂ ಹೋಗಲಿಕ್ಕೆ ಸಮರ್ಥರಾಗಿರುತ್ತಾರೆ. (ಆಧ್ಯಾತ್ಮದಲ್ಲಿ) ಮನಸ್ಸು ಬುದ್ಧಿಗಳು ವಿಷಯಗಳ ಕಡೆಗೆ ಓಡುವುದರಿಂದ ಮನಸ್ಸು ಬುದ್ಧಿಗಳು ಹರಿ ಶಬ್ದದಿಂದ ಹೇಳಲ್ಪಡುತ್ತವೆ. ತಮಸ್ಸು ಮೊದಲಾದವುಗಳು ಶತ್ರುಗಳು. (ಯಾವ ಶ್ರೀ ಹರಿಯು ವಿಶೇಷವಾಗಿ ಭಕ್ತರ ಶರೀರದಲ್ಲಿ ಸನ್ನಿಹಿತವಾಗುತ್ತಿರಲು ಜ್ಞಾನ ಯುದ್ಧಗಳಲ್ಲಿ ತಮಸ್ಸು ಮೊದಲಾದ ಶತ್ರುಗಳು ಮನಸ್ಸು ಬುದ್ಧಿಗಳ ಇದಿರು ಅಂಗೀಕರಿಸುವುದಿಲ್ಲ. (ಅಂದರೆ ಹೋಗುವುದಿಲ್ಲ) (ಅಂದರೆ ಮನಸ್ಸು ಬುದ್ಧಿಗಳು ಅಜ್ಞಾನಾದಿಗಳಿಂದ ಆವೃತಗಳಾಗುವುದಿಲ್ಲ.) ॥೪॥

**ಋ ॥ (೪೫) ಸುತಪಾವ್ನೇ ಸುತಾಃ ಇಮೇ ಶುಚಯೋ ಯಂತಿ ವೀತಯೇ । ಸೋಮಾಸೋ ದಧ್ಯಾಶಿರಃ ॥೫॥**

ಅ॥ ಶುಚಯಃ - ಶುದ್ಧಗಳಾದ, ಸುತಾಃ = ಹಿಂಡಲ್ಪಟ್ಟ ದಧ್ಯಾಶಿರಃ = ದಧಿಯಿಂದ ಮಿಶ್ರಿತಗಳಾದ, ಇಮೇ ಸೋಮಾಸಃ = ಈ ಸೋಮಗಳು, ವೀತಯೇ = (ವೀಗತೌ) ಯಜಮಾನನಿಗೆ ಇಂದ್ರನ ಪ್ರಾಪ್ತಿಗಾಗಿ, ಸುತಪಾವ್ನೇ = (ಪಾಪಾನೇ) ಸೋಮಪಾನ ಮಾಡತಕ್ಕ ಇಂದ್ರನಿಗಾಗಿ, ಯಂತಿ = (ಇಣ್‌ಗತೌ) ಹೋಗುತ್ತವೆ. (ಆಧ್ಯಾತ್ಮದಲ್ಲಿ) ಸುತಾಃ = ವೇದ ವಾಕ್ಯಗಳ ಸಂಘರ್ಷವುಳ್ಳ, ಶುಚಯಃ = ರಾಗಾದಿ ದೋಷಗಳಲ್ಲಿದಿರುವ, ದಧ್ಯಾಶಿರಃ = (ಡುಧಾಞ್‌ಧಾರಣೇ) ಭಗವದ್ಧ್ಯಾನದಿಂದ ಮಿಶ್ರಿತಗಳಾದ, ಇಮೇ ಸೋಮಾಸಃ = ಈ ಮನಸ್ಸುಗಳು, ಸುತಪಾನ್ನ್ಯೇ ವೀತಯೇ = (ವೀಗತಿ ಪ್ರಜನನ ಕಾಂತ್ಯನನ ಖಾದನೇಷು) ಮನಸ್ಸಿನಿಂದ ಸೇವ್ಯನಾದ ಶ್ರೀ ಹರಿಯ ಪ್ರಾಪ್ತಿಗಾಗಿ ಯಂತಿ =ಸರ್ವದಾ ಹೋಗುತ್ತವೆ. (ಯದ್ಯಪಿ ಅಶಿರ ಶಬ್ದವು ಅಹೋರಾತ್ರಾಂತರಿತವಾದ ದಧಿಯನ್ನು ಹೇಳುತ್ತದೆ. ಆದಾಗ್ಯೂ ಪ್ರತ್ಯೇಕ ದಧಿ ಶಬ್ದವು ಶ್ರುತವಾಗಿರುವುದರಿಂದ ಅಹೋರಾತ್ರಾಂತರಿತ ಎಂಬುವ ಅರ್ಥವನ್ನು ಮಾತ್ರ ಹೇಳುತ್ತದೆ.) ॥೫॥

**ಭಾ ॥ ಸೋಮಪೇ ತುಚಯಸ್ಸೋಮಾಃ ಪ್ರಾಪ್ತ್ಯೈದಧಿಮಿಮಿಶ್ರಿತಾಃ ಮನಾಂ ಸಿಧ್ಯಾನ ಯುಕ್ತಾನಿ ವಾ ಯಾಂತಿ ಹರಯೇ ಸದಾ ॥ ॥೫॥೯॥**

ಅ॥ ಶುದ್ಧಗಳಾದ ದಧಿಯಿಂದ ಮಿಶ್ರಿತಗಳಾದ ಸೋಮಗಳು ಯಜಮಾನನಿಗೆ ಇಂದ್ರನ ಪ್ರಾಪ್ತಿಗಾಗಿ ಸೋಮಪಾನ ಮಾಡಿದ ಇಂದ್ರನ ಸಮೀಪವನ್ನು ಹೊಂದುತ್ತವೆ. (ಆಧ್ಯಾತ್ಮ ರೂಪದಲ್ಲಿ) ಭಗವದ್ಧ್ಯಾನದಿಂದ ಯುಕ್ತಗಳಾದ ಮನಸ್ಸುಗಳು ಮನಸ್ಸಿನಿಂದ ಸೇವ್ಯವಾದ ಶ್ರೀ ಹರಿಯ ಪ್ರಾಪ್ತಿಗಾಗಿ ಸದಾ ಯಾಂತಿ = (ಯಾ ಪ್ರಾಪಣೇ.) ಹೋಗುತ್ತದೆ. ॥೫॥೯॥

**ಋ । (೪೬) ತ್ವಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ ಅಜಾಯಥಾಃ ಇಂದ್ರಜ್ಯೈಷ್ಠ್ಯಾಯ ಸುಕ್ರತೋ ॥೯॥**

ಅ॥ ಸುಕ್ರತೋ =ಶೋಭನ ಜ್ಞಾನವುಳ್ಳ ಇಂದ್ರನೇ ಸದ್ಯಃ ವೃದ್ಧಃ = ಯಾವ ದಿವಸದಲ್ಲಿ ತಾನು ಇರುತ್ತಾನೋ, ಆ

ದಿವಸದಲ್ಲಿ ಯಾವಾಗಲೂ ಇರುತ್ತಾನೆ. ಆದ ಕಾರಣ ಸದ್ಯಃವೃದ್ಧಃ = ಎನಿಸುತ್ತಾನೆ. ಸದಾ ವೃದ್ಧನು ನಿತ್ಯಪೂರ್ಣನೂ ಆದ, ತ್ವಂ =ನೀನು, ಸುತಸ್ಯ ಪೀತಯೇ =ಸೋಮಪಾನ ಮಾಡುವುದಕ್ಕಾಗಿ (ಸೋಮವನ್ನು ಹೊಂದುವುದಕ್ಕಾಗಿ) (ಯಜ್ಞದಲ್ಲಿ ಯಾವ ಕಾರಣದಿಂದ) ಅಜಾಯಥಾಃ = ಅಭಿವ್ಯಕ್ತನಾಗಿಉತ್ತಿಯೋ ಆದ ಕಾರಣ, ಅದು, ಜ್ಯೈಷ್ಠ್ಯಾಯ=ಸಮಸ್ತ ದೇವತೆಗಳಿಗಿಂತ, ಅತಿಶಯವಾಗಿ ಸೋಮಪಾನಾದಿಗಳಿಂದ ಜ್ಯೇಷ್ಠತ್ವವನ್ನು ಪ್ರಕಟೀಕರಿಸುವುದಕ್ಕಾಗಿಯೇ, (ಕ್ಷುತ್=ಹಸಿವೆ, ಮೊದಲಾದ ನಿಮಿತ್ತದಿಂದ ಅಲ್ಲ.) ||೬||

**ಭಾ || ಸದಾ ಪೂರ್ಣ ಶುಭಜ್ಞಾನಜ್ಯೈಷ್ಠ್ಯವ್ಯಕ್ತ್ಯೈ ಸುತಾಪ್ತಯೇ | ನ ಕ್ಷುದಾದೇ ರಭಿವ್ಯಕ್ತೋಽಭವೋ ||೬||**

ಅ|| ಶೋಭನಜ್ಞಾನವುಳ್ಳವನೇ ಸದಾ ಪೂರ್ಣನಾದ ನೀನು ಸೋಮಪ್ರಾಪ್ತಿಗಾಗಿ ಯಜ್ಞದಲ್ಲಿ ಅಭಿವ್ಯಕ್ತಿಯನ್ನು ಹೊಂದಿದ್ದು ಸಮಸ್ತ ದೇವತೆಗಳಿಗಿಂತ ಹೆಚ್ಚು ಸೋಮಪಾನಾದಿಗಳಿಂದ ತನ್ನ ಶ್ರೈಷ್ಠ್ಯವನ್ನು ಪ್ರಕಟೀಕರಿಸುವುದಕ್ಕಾಗಿಯೇ. ಹಸಿವೆ ಮೊದಲಾದದು ನಿವೃತ್ತಿಯಾಗಬೇಕೆನ್ನುವ ನಿಮಿತ್ತದಿಂದ ಅಲ್ಲ ||೬||

**ಋ || (೪೭) ಆ ತ್ವಾ ವಿಶಂತ್ವಾಶವಃ ಸೋಮಾಸ ಇಂದ್ರ ಗಿರ್ವಣಃ | ಶಂತೇ ಸಂತು ಪ್ರಚೇತಸೇ ||೭||**

ಅ|| ಗಿರ್ವಣಃ = (ವನ ಸಂಭಕ್ತೌ) ವೇದವಚನಗಳಿಂದ ಭಜಿಸಲು ಯೋಗ್ಯನಾದ, ಇಂದ್ರ=ಪರಮೈಶ್ವರ್ಯ ಸಂಪನ್ನನಾದ ಶ್ರೀ ಹರಿಯೇ, ಅತವಃ -ದ್ರವ್ಯದ್ರವ್ಯವಾದುದರಿಂದ ಶೀಘ್ರವಾಗಿ ಹೋಗುವ, ಸೋಮಾಸಃ -ಸೋಮಗಳು, ತ್ವಾ=ನಿಮ್ಮನ್ನು, ಆ ವಿಶಂತು-ಪ್ರವೇಶಿಸಲಿ. ತೇ - ಆವಿಷ್ಟಗಳಾದ ಆ ಸೋಮಗಳು, ಪ್ರಚೇತನೇ ಪ್ರಕೃಷ್ಟ ಚಿತ್ತವುಳ್ಳ, ತೇ = ನಿನ್ನ ಭೃತ್ಯನಾದ ಯಜಮಾನನಿಗೆ, ಶಂಸಂತ = ಸುಖಕರಗಳಾಗಲಿ ||೭||

**ಭಾ || ಗೀರ್ಭಿರ್ವೃತ ಪ್ರಭೋ | ಪ್ರಕೃಷ್ಟಚೇತಾಸ್ತ್ವದ್ಭೃತ್ಯೋ ಯೋಽಸ್ಮೈಸ್ಯುಃ ಶಂಕರಾಃ ಸುತಾಃ ||೭||**

ಅ|| ವೇದ ವಾಕ್ಯಗಳಿಂದ ಭಜಿಸಲು ಯೋಗ್ಯನಾದ ಶ್ರೀ ಹರಿಯೇ, ಇಂದ್ರನೇ, ಪ್ರಕೃಷ್ಟವಾದ ಮನಸ್ಸುಳ್ಳ ನಿನ್ನ ಭೃತ್ಯನಾದ ಯಾವ ಯಜಮಾನನೋ ಆ ಯಜಮಾನನಿಗೆ ಸೋಮಗಳು ಸುಖಕರವಾಗಲಿ ||೭||

**ಋ || (೪೮) ತ್ವಾಂ ಸ್ತೋಮಾ ಅವೀವೃಧನ್ ತ್ವಾಮುಕ್ಥಾ ಶತಕ್ರತೋ | ತ್ವಾಂ ವರ್ಧಂತು ನೋ ಗಿರಃ ||೮||**

ಅ|| ಶತಕ್ರತೋ = ಸಂಪೂರ್ಣ ಜ್ಞಾನವುಳ್ಳ ಶ್ರೀ ಹರಿಯೇ ೧೦೦ ಅಶ್ವಮೇಧ ಯಾಗ ಮಾಡಿದ ಇಂದ್ರನೇ ತ್ವಾಂ = ನಿನ್ನನ್ನು ಸ್ತೋಮಾಃ = ಸಾಮ ವಿಶೇಷಗಳು, ಅವೀವೃಧನ್ = ಅಭಿವ್ಯಕ್ತೀಕರಿಸಿದವು. (ಪ್ರಕಟೀಕರಿಸಿದವು.) ತ್ವಾಂ =ನಿನ್ನನ್ನು, ಉಕ್ಥಾ =ಋಕ್ಕುಗಳಲ್ಲಿರತಕ್ಕ ಮಂತ್ರ ವಿಶೇಷಗಳು, (ವ್ಯಕ್ತೀಕರಿಸಿದವು.) (ಆದ ಕಾರಣ) ನಃ=ನಮ್ಮ, ಗಿರಃ = ಮಾತುಗಳು, ತ್ವಾಂ ವರ್ಧಂತು = ನಿನ್ನನ್ನು ಮಹಾಗುಣಗಳಿಂದ ಯುಕ್ತನನ್ನಾಗಿ ಪ್ರಕಟೀಕರಿಸಲಿ. ||೮||

**ಭಾ || (೧) ವ್ಯಂಜಯಂತ್ಯಧಿಕಂ ಸ್ತೋಮಾಃ ಸಾಮ್ನ್ಯುಕ್ಥಾನ್ಯೃಕ್ಷು ಚೈವ ಹಿ | ಮಹಾಗುಣೈರ್ವ್ಯಂಜಯಂತು ಗಿರೋಽಸ್ಮಾಕಮಪಿ**

**ಪ್ರಭೋ॥ (೨) ಆಕಾಶವೃದ್ಧಿವದ್ವೃದ್ಧಿರ್ವಿಷ್ಣೋಃ ಸ್ಯಾನ್ನೈವ ಚಾನ್ಯಥಾ॥ (೩)ನ ವರ್ಧತೇ ನೋ ಕನೀಯಾನಿತಿ ಹ್ಯೇನಂ ಶ್ರುತಿರ್ಜಗೌ॥ (೪) ಮಹಾತಾತ್ಪರ್ಯರೋಧಾಚ್ಚ ಶ್ರುತ್ಯರ್ಥೋ ನಾಪರೋ ಭವೇತ್। (೫) ಯದ್ಯನ್ಯಾಪೇಕ್ಷಯಾ ವೃದ್ಧಿರೀಶತ್ವಂ ಸ್ಯಾತ್ಕುತೋಽಸ್ಯ ಚ। (೬) ಅಕ್ಷಿತೋತಿರಿತಿ ಹ್ಯಸ್ಮಾತ್ಪೂರ್ಣಾಭಿಪ್ರಾಯತೋದಿತಾ ॥೮॥**

ಅ॥ (೧) ಸರ್ವ ಸಮರ್ಥನೇ, (ಸಾಮ್ನಿ, ಸ್ತೋಮಾಃ =) ಸಾಮ ಸಮುದಾಯಗಳ ಮಧ್ಯದಲ್ಲಿ ಯಾವ ಸಾಮ ವಿಶೇಷಗಳೋ ಅವುಗಳು, ನಿನ್ನನ್ನು ಅತ್ಯಧಿಕವಾಗಿ ವ್ಯಕ್ತೀಕರಿಸಿದವು. ಹೀಗೆಯೇ ಋಕ್ಕುಗಳಲ್ಲಿರತಕ್ಕ ಮಂತ್ರ ವಿಶೇಷಗಳೂ ವ್ಯಕ್ತೀಕರಿಸಿದವು. ನಮ್ಮ ಮಾತು ನಿನ್ನನ್ನು ಸರ್ವ ಸ್ವಾತಂತ್ರ್ಯ ಮೊದಲಾದ ಮಹಾಗುಣಗಳಿಂದೊಡಗೂಡಿದವನನ್ನಾಗಿ ವ್ಯಕ್ತೀಕರಿಸಲಿ. (೨) ಘಟಾದಿಗಳ ಅಪಸರಣಾದಿಗಳಿಂದ ಆಕಾಶವು ಅಭಿವ್ಯಕ್ತವಾಗುತ್ತಿರಲಿ ಆಕಾಶಃ ವೃದ್ಧಃ ಎಂದು ಪ್ರಯೋಗವಿದ್ದಂತೆಯೇ ಶ್ರೀ ವಿಷ್ಣುವಿನಲ್ಲಿಯೂ ವೃದ್ಧಿ ಶಬ್ದ ಪ್ರಯೋಗವು. (ಅವಯವಗಳು ಉಪಚಯಗಳಾದವು ಎಂಬ ಅಭಿಪ್ರಾಯದಿಂದ ವೃದ್ಧಿ ಶಬ್ದ ಪ್ರಯೋಗವಲ್ಲ.) (೩) (ಆಕಾಶದಲ್ಲಿ ಹಾಗೆ ಅರ್ಥ ಮಾಡಲಿಕ್ಕೆ ಅನಾದಿರ್ವಾ ಅಯಾಮಾಕಾಶಃ ಎಂದು ಬಾಧಕವಿದ್ದ ಪ್ರಯುಕ್ತ ಔಪಚಾರಿಕ ಅರ್ಥವನ್ನು ಅಂಗೀಕರಿಸುತ್ತೇವೆಂದರೆ ಪ್ರಕೃತದಲ್ಲಿಯೂ ಹಾಗೆಯೇ ಎನ್ನುತ್ತಾರೆ) ಶ್ರೀ ಹರಿಯು ಅಭಿವೃದ್ಧನೂ ಆಗುವುದಿಲ್ಲ. ಚಿಕ್ಕವನೂ ಆಗುವುದಿಲ್ಲ ಎಂಬುದು ಶ್ರುತಿಯು ಶ್ರೀಹರಿಯನ್ನು ವೃದ್ಧಿಕ್ಷಯ ರಹಿತನನ್ನಾಗಿ ಹೇಳುತ್ತದೆ. (೪) ಶ್ರೀ ಹರಿಯು ಸರ್ವರಿಗೂ ನಿಯಾಮಕನು ಎಂಬ ವಿಷಯದಲ್ಲಿ ಸಮಸ್ತ ವೇದಗಳಿಗೂ ಮಹಾ ತಾತ್ಪರ್ಯವಿದೆ. ಆದರಿಂದ ವಿರೋಧವು ಬರುವುದರಿಂದ ಬೇರೆ ಯಾವುದೂ ಶ್ರುತ್ಯರ್ಥವಾಗಲಾರದು. (ಅಂದರೆ ಶ್ರೀ ಹರಿಗೆ ವೃದ್ಧಿಯಿದೆ ಎಂಬುವುದು ಶ್ರುತ್ಯರ್ಥವಾಗಲಾರದು) (೫) ಶ್ರೀ ಹರಿಗೆ ಅನ್ಯಾಪೇಕ್ಷೆಯಿಂದ (ಅಂದರೆ ಸ್ತೋಮಾದ್ಯಧೀನವಾದ) ವೃದ್ಧಿಯು ಆಗುವುದಾದರೆ ಶ್ರೀ ಹರಿಗೆ ಈಶ್ವರತ್ವವು ಯಾವುದರಿಂದ ಆಗುವುದು. (ಅಂದರೆ ಈಶ್ವರತ್ವವೇ ಇಲ್ಲದೆ ಹೋಗುವುದು. ಪರಾಧೀನನು, ಈಶ್ವರನೆಂಬುವುದು ವಿರುದ್ಧಗಳು. ಅಂತೂ ವೇದಗಳಿಗೆ ಮಹಾತಾತ್ಪರ್ಯವಿದೆ ಎನ್ನುವುದೂ ವಿರುದ್ಧವಾಗುವುದು.) (೬) (ಶ್ರೀ ಹರಿಗೆ ವೃದ್ಧ್ಯಾದಿಗಳನ್ನು ಅಂಗೀಕರಿಸಿದರೆ ಉತ್ತರ ವಾಕ್ಯ ವಿರೋಧವೂ ಇದೆ ಎನ್ನುತ್ತಾರೆ) ವೃದ್ಧ್ಯಾದಿಗಳಿಲ್ಲದೆ ಸರ್ವ ಸ್ವಾತಂತ್ರ್ಯವಿರುವುದರಿಂದಲೇ ಶ್ರೀ ವಿಷ್ಣುವಿಗೆ ಅಕ್ಷಿತೋತಿಃ=(ಅಕ್ಷೀಣವಾದ (ಪೂರ್ಣವಾದ ಅಭಿಪ್ರಾಯವುಳ್ಳವನು) ಎಂದು ಹೇಳಲ್ಪಟ್ಟ ಪೂರ್ಣಾಭಿಪ್ರಾಯವುಳ್ಳತನವು (ಇಷ್ಟವಾದ ಅಖಿಲ ಪೂರ್ತಿಯು) ಕೂಡುತ್ತದೆ. (ಅನ್ಯಥಾ ಕೂಡಲಾರದು) ॥೮॥

**ಋ ॥ (೪೯) ಅಕ್ಷಿತೋತಿಃ ಸನೇದಿಮಂ ವಾಜಮಿಂದ್ರಃ ಸಹಸ್ರಿಣಂ । ಯಸ್ಮಿನ್ ವಿಶ್ವಾನಿ ಪೌಂಸ್ಯಾ ॥೯॥**

ಅ॥ ಅಸ್ಮಿನ್ =ಯಾವ ಇಂದ್ರನಲ್ಲಿ, ವಿಶ್ವಾನಿ ಪೌಂಸ್ಯಾ = ಸಮಸ್ತ ಸಾಮರ್ಥ್ಯಗಳು (ಇರುತ್ತವೋ) ಸಃ ಅಕ್ಷಿತೋತಿಃ =ಆ ಪೂರ್ಣಾಭಿಪ್ರಾಯವುಳ್ಳ, (ನಿಖಿಲ ಇಷ್ಟಾರ್ಥಪೂರ್ತಿಯುಳ್ಳ) ಇಂದ್ರಃ =ಶ್ರೀ ಹರಿಯೂ ಸಹಸ್ರಿಣಂ=ಅನಂತ ಫಲವನ್ನು ಕೊಡತಕ್ಕ, ಇಮಂ ವಾಜಂ =ಈ ಹವಿಸ್ಸನ್ನು ಸನೇತ್ =(ವನಷಣ ಸಂಭಕ್ತೌ) ನಮ್ಮಿಂದ ಹೊಂದಲಿ. ಅಥವಾ ಭಗವಂತನ ಪೂಜೆಗಾಗಿ ಇತರರಿಗೆ ಹವಿಸ್ಸನ್ನು ನಮ್ಮಿಂದ ಹೊಂದಿಸಲಿ. (ಅಂದರೆ ನಮಗೆ ಯಥೇಷ್ಟವಾಗಿ ಹವಿಸ್ಸನ್ನು ಕೊಡಲಿ.) ॥೯॥

**ಭಾ ॥ (೧) ಅನಂತಫಲದಂ ವಾಜಮಸ್ಮತ್ತೋ ಲಭತಾಂ ಸ ಚ। ದದಾತು ವಾ ಪೌರುಷಾಣಿ ಶಕ್ತಯೋ ಯತ್ರ ಚಾಖಿಲಾಃ॥(೨) ಅತಶ್ಚಾನಂತಶಕ್ತಿತ್ವಾನ್ನ ವೃದ್ಧ್ಯಾದ್ಯಾಃ ಕಥಂಚನ॥(೩) ಸರ್ವೋಪೇತೇತಮರ್ಥಮಭಿಪ್ರೇತ್ಯಾಹ ವೇದರಾಟ್ ॥೯॥**

ಅ॥ (೧) ಯಾವ ಶ್ರೀ ಹರಿಯಲ್ಲಿ ಸರ್ವ ಶಕ್ತಿಗಳೂ ಇರುತ್ತವೋ ಅಂತಹ ಶ್ರೀ ಹರಿಯು ಅನಂತ ಫಲವನ್ನು ಕೊಡತಕ್ಕ ಅನ್ನವನ್ನು ನಮ್ಮಿಂದ ಹೊಂದಲಿ. ಅಥವಾ ನಮಗೆ ಯಥೇಚ್ಛವಾಗಿ ಕೊಡಲಿ. (೨) ಆದ ಕಾರಣ ಅನಂತ ಶಕ್ತಿಗಳು ಇದ್ದುದರಿಂದ ಶ್ರೀ ಹರಿಗೆ ಯಾವ ರೀತಿಯಿಂದಲೂ ವೃದ್ಧ್ಯಾದಿಗಳು ಕೂಡಲಾರವು. (೩) ಶ್ರೀ ಹರಿಗೆ ಸಂಪೂರ್ಣ ಶಕ್ತಿಯಿದ್ದ ಪ್ರಯುಕ್ತ ವೃದ್ಧ್ಯಾದಿಗಳಿಲ್ಲ ಎಂಬ ಈ ಅರ್ಥವನ್ನು ಇಟ್ಟುಕೊಂಡೇ ವೇದವ್ಯಾಸರು ಸರ್ವೋಪೇತಾ ಚ ತದ್ದರ್ಶನಾತ್ ಎಂಬ ಸೂತ್ರದಲ್ಲಿ ಶ್ರೀ ಹರಿಯು ಸಮಸ್ತಶಕ್ತಿಗಳಿಂದ ಕೂಡಿದವನು, ಚ ಶಬ್ದದಿಂದ ವೃದ್ಧ್ಯಾದಿ ದೋಷಗಳಿಲ್ಲದವನು, ಎಂದು `ಸರ್ವೈಯುಕ್ತಾ ಶಕ್ತಿಭಿರ್ದೇವತಾ ಸಾ' ಇತ್ಯಾದಿ ಶ್ರುತಿಗಳಿಂದ ಸಮರ್ಥಿಸಿರುತ್ತಾರೆ. ॥೯॥

**ಋ॥ (೫೦) ಮಾ ನೋ ಮರ್ತಾ ಅಭಿ ದ್ರುಹನ್ತನೂನಾಮಿಂದ್ರ ಗಿರ್ವಣಃ ಈಶಾನೋ ಯವಯಾ ವಧಂ ॥೧೦॥೧೦॥೫॥೫॥**

ಅ॥ ಗಿರ್ವಣಃ = ವೇದವಾಕ್ಯಗಳಿಂದ ಭಜಿಸಲು ಯೋಗ್ಯನಾದ, ಇಂದ್ರ =ಶ್ರೀ ಹರಿಯೇ, ಮರ್ತಾ = (ಮೃಜಪ್ರಾಣತ್ಯಾಗೇ) ಮನುಷ್ಯರು, ನಃ =ನಮ್ಮ, ತನೂನಾಂ =ಶರೀರಗಳಿಗೋಸ್ಕರ, ಮಾ ಅಭಿ ದ್ರುಹನ್ = (ದ್ರುಹಜಿಘಾಂಸಾಯಾಂ) ಯಾವ ರೀತಿಯಿಂದಲೂ ದ್ರೋಹ ಮಾಡುವವರು ಆಗಬಾರದು. ಈಶಾನಃ = (ಯಾವ ಕಾರಣದಿಂದ ನೀನು) ಸಮರ್ಥನೋ, (ಆ ಕಾರಣದಿಂದ) ನಃ = ನಮ್ಮ, ವಧಂ =ಸಂಹಾರವನ್ನು, ಯವಯ = (ಯು ಮಿಶ್ರಣಾಮಿಶ್ರಣಯೋಃ) ಹೋಗಲಾಡಿಸು. ಅಥವಾ ನಮ್ಮ ಶರೀರಗಳಿಗೆ ಮನುಷ್ಯರು ದ್ರೋಹ ಮಾಡುವವರು ಆಗಬಾರದು. (ಅಂದರೆ ಮನುಷ್ಯರಿಂದ ವಿಪತ್ತುಗಳು ಸರ್ವಥಾ ಬರಬಾರದು) ಸರ್ವಸಮರ್ಥನಾದ ನೀನು ಶ್ರೇಷ್ಠವಾದ ವಧವನ್ನು ಹೊಂದಿಸಿಕೊಡು. (ಅಂದರೆ ದುರ್ಜನರು ಮಾಡತಕ್ಕ ಉಪದ್ರವಕ್ಕಿಂತ ದೈವಾಧೀನವಾದ ಮರಣವೇ ಶ್ರೇಷ್ಠವು. ಆದ ಕಾರಣ ಉಪದ್ರವ ಪರಿಹಾರವನ್ನು ಮಾಡು.) ॥೧೦॥

**ಭಾ (೧) ಮಾ ಮರ್ತಾ ನಸ್ತನೂನಾಂ ತು ದ್ರೋಗ್ಧಾರಃ ಸ್ಯುಃ ಕಥಂಚನ । ಈಶೋಽಸ್ಯಪಾ ಕುರು ವಧಂ ತೇನ ನೋ ಮುಕ್ತಿದಾನತಃ ॥ (೨) ಮಾನುಷೇಭ್ಯಸ್ತನೂನಾಂಚ ನೈವ ನಃ ಸ್ಯುರ್ವಿಪತ್ತಯಃ । (೩) ಕಾಲೇನ ದೈವತಃ ಪ್ರಾಪ್ತಃ ಸ್ಯಾದದೇಹತ್ವತೋ ವಧಃ ॥೧೦ ॥೫॥೫॥**

ಅ॥ (೧) ಮನುಷ್ಯರು ನಮ್ಮ ಶರೀರಗಳಿಗೋಸ್ಕರ ಯಾವ ಪ್ರಕಾರದಿಂದಲೂ ದ್ರೋಹ ಮಾಡುವವರು ಆಗಬಾರದು. ಯಾವ ಕಾರಣದಿಂದ ಸಮರ್ಥನು ಆಗಿರುತ್ತಿಯೋ ಆ ಕಾರಣ ನಮಗೆ ಮುಕ್ತಿಯನ್ನು ಕೊಡೋಣದರಿಂದ ನಮ್ಮ ಸಂಹಾರವನ್ನು ಹೋಗಲಾಡಿಸು. (೨) (ಈ ಋಕ್ಕನ್ನು ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) (ನಮ್ಮ ಶರೀರಗಳಿಗೆ ಮನುಷ್ಯರಿಂದ ಆಪತ್ತುಗಳು ಸರ್ವಥಾ ಬರಬಾರದು. (೩) ಮರಣ ಕಾಲದಿಂದ ದೈವವಶಾತ್ ನಿನ್ನಿಂದ ಪ್ರಾಪ್ತವಾದದ್ದೂ ದೇಹಾಭಾವ ರೂಪದಿಂದ ವಧವು ಬರಲಿ (ದುರ್ಜನರು ಮಾಡತಕ್ಕ ಉಪದ್ರವಕ್ಕಿಂತ ದೈವಾಧೀನವಾದ

ಮರಣವೇ ಶ್ರೇಷ್ಠವು. ಆದ ಕಾರಣ ಉಪದ್ರವ ಪರಿಹಾರವನ್ನು ಮಾಡು ಎಂದು ಋಕ್ಕಿನ ಅಭಿಪ್ರಾಯವು)

||೧೦||೧೦||೫||

ಅವ || ಈ ಸೂಕ್ತದಲ್ಲಿ ೧೦ ಋಕ್ಕುಗಳು. ೧, ೨, ೪ ಇವುಗಳಿಗೆ ಮರುತ್ ಎನಿಸಿಕೊಂಡ ಬ್ರಹ್ಮಾದಿ ದೇವತೆಗಳು, ೩, ೫ ಇವುಗಳಿಗೆ ಇಂದ್ರ ಮರುತ್‌ಗಳು, ಇತರ ಋಕ್ಕುಗಳಿಗೆ ಇಂದ್ರನು ದೇವತೆಯು.

**ಋ || (೫೧) ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ | ರೋಚಂತೇ ರೋಚನಾ ದಿವಿ ||೧||**

ಅ || (ಬ್ರಹ್ಮಾದಿ ಸಮಸ್ತ ದೇವತೆಗಳು) ಅರುಷಂ =ಅರುಣ ವರ್ಣವುಳ್ಳ, ತಸ್ಥುಷಃ =ಸ್ಥಾವರಗಳಾದ ಪರ್ವತಗಳ, ಪರಿ=ಸುತ್ತಲೂ, ಚರಂತಂ=ಸಂಚರಿಸುವ, ಬ್ರಧ್ನಂ=(ವೃಧು ವೃದ್ಧೌ) ವೃದ್ಧನಾಗಿದ್ದುದರಿಂದ ಬ್ರಧ್ನ ಶಬ್ದವಾಚ್ಯನಾದ ಸೂರ್ಯನನ್ನು, ಯುಂಜಂತಿ ಪ್ರವರ್ತಿಸುತ್ತಾರೆ. ಆ (ದೇವತೆಗಳಿಂದಲೇ ಸೂರ್ಯನಿಗಿಂತ ಇತರಗಳಾದ ಚಂದ್ರ ಮೊದಲಾದ) ರೋಚನಾ =ಪ್ರಕಾಶಮಾನಗಳಾದ ಜ್ಯೋತಿಸ್ಸುಗಳು, ದಿವಿ=ಸ್ವರ್ಗಲೋಕದಲ್ಲಿ, ರೋಚಂತೇ =ಪ್ರಕಾಶಿಸುತ್ತವೆ. ಇತರ ವಸ್ತುಗಳು ಪ್ರಕಾಶಗೊಳಿಸುತ್ತವೆ. (ವಿಷ್ಣುಪಕ್ಷದಲ್ಲಿ) ಯಾವ ಶ್ರೀ ಹರಿಯ ಸಾಮರ್ಥ್ಯಗಳು ಅರುಣ ವರ್ಣವುಳ್ಳ, ಸೂರ್ಯನನ್ನು ಪರ್ವತಗಳ ಸುತ್ತಲೂ ಸಂಚರಿಸುವವನನ್ನಾಗಿ ಪ್ರೇರೇಪಿಸುತ್ತವೋ, ಆ ಸಾಮರ್ಥ್ಯ ನಿಮಿತ್ತದಿಂದಲೇ ಪ್ರಕಾಶಮಾನಗಳಾದ ಜ್ಯೋತಿಸ್ಸುಗಳು ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತವೆ. ಇತರ ವಸ್ತುಗಳನ್ನು ಪ್ರಕಾಶಗೊಳಿಸುತ್ತವೆ.

||೧||

**ಭಾ || ಪೌಂಸ್ಯಾನಿ ವಾಸುದೇವಸ್ಯ ಬ್ರಧ್ನಂ ವೃದ್ಧಂ ದಿವಾಕರಂ | ಅರುಣಂ ಚರಂತಂ ಪರಿತೋ ಗಿರೀನ್ಯುಂಜಂತಿ ಸರ್ವದಾ| ತೈರೇವಾನ್ಯಾನಿ ಚಂದ್ರಾದಿರೋಚನಾನಿ ತ್ರಿವಿಷ್ಟಪೇ || ರೋಚಯಂತಿ ||೧||**

ಅ|| (ಶ್ರೀ ಹರಿ ವಿಷಯದಲ್ಲಿ ವ್ಯಾಖ್ಯಾನ ಮಾಡುತ್ತಾರೆ) ಶ್ರೀ ವಾಸುದೇವನ ಸಾಮರ್ಥ್ಯಗಳು ಅರುಣವರ್ಣವುಳ್ಳ, ಸ್ಥಾವರಗಳಾದ ಮೇರು ಮೊದಲಾದ ಪರ್ವತಗಳ ಸುತ್ತಲೂ ಸಂಚರಿಸುವ, ವೃದ್ಧನಾಗಿರುವುದರಿಂದ ಬ್ರಧ್ನನೆನಿಸಿಕೊಂಡ ಸೂರ್ಯನನ್ನು ಯಾವಾಗಲೂ ಪ್ರೇರೇಪಿಸುತ್ತವೆ. ಆ ವಾಸುದೇವನ ಸಾಮರ್ಥ್ಯ ನಿಮಿತ್ತದಿಂದಲೇ ಸೂರ್ಯನಿಗಿಂತ ಇತರಗಳಾದ ಚಂದ್ರ ಮೊದಲಾದ ಜ್ಯೋತಿಸ್ಸುಗಳು ಸ್ವರ್ಗಲೋಕದಲ್ಲಿ ಪ್ರಕಾರಗೊಳ್ಳುತ್ತವೆ. ಇತರಗಳಾದ ಘಟ ಪಟ ಮೊದಲಾದ ವಸ್ತುಗಳನ್ನು ಪ್ರಕಾಶಗೊಳಿಸುತ್ತವೆ. ||೧||

**ಋ || (೫೨) ಯುಂಜಂತ್ಯಸ್ಯ ಕಾಮ್ಯಾ ಹರೀ ವಿಪಕ್ಷಸಾ ರಥೇ | ಶೋಣಾ ಧೃಷ್ಣೂ ನೃವಾಹಸಾ ||೨||**

ಅ|| (ಬ್ರಹ್ಮಾದಿ ದೇವತೆಗಳು) (ವಾಸುದೇವನ ಸಾಮರ್ಥ್ಯಗಳು) ಅಸ್ಯ=ಇಂದ್ರನ, ರಥೇ=ರಥದಲ್ಲಿ ಕಾಮ್ಯಾ =ಹೆಚ್ಚು ಗುಣಗಳಿದ್ದುದರಿಂದ ಇಚ್ಛಾವಿಷಯಗಳಾದ, ವಿಪಕ್ಷಸಾ =ಉತ್ತಮ ರೆಕ್ಕೆಗಳಿಂದೊಡಗೂಡಿದ ಹಕ್ಕಿಗಳಂತೆ ಶೀಘ್ರ ಗಮನಗಳುಳ್ಳ, ಶೋಣಾ=ಕುದುರೆಗಳು ಶ್ಯಾಮವರ್ಣಗಳಾದಾಗ್ಯೂ ಇದಿರು ಓಡುವ ಕುದುರೆಗಳ ಶಿರಸ್ಸಿನಲ್ಲಿ ರಕ್ತ ಬಣ್ಣ

ಸಂಬಂಧವಿದ್ದುದರಿಂದ ಶೋಣೌ ಎನಿಸಿಕೊಂಡ, ಧೃಷ್ಣೂ=ಧೈರ್ಯೋಪೇತಗಳಾದ, ನೃವಾಹಸಾ =ಮನುಷ್ಯರನ್ನುದ್ದೇಶಿಸಿ, ಇಂದ್ರನನ್ನು ಯಾ ವಿಷ್ಣುವನ್ನೊ ಹೊರುವ, ಅಥವಾ ಇಂದ್ರನನ್ನು ಯಾ ವಿಷ್ಣುವನ್ನು ಭಕ್ತರ ಸಮೀಪಕ್ಕೆ ಹೊರುವ, ಹರೀ = ಇಂದ್ರನ ರಥದ ಇದಿರು ಹೋಗುವ ೨ ಕುದುರೆಗಳನ್ನು ಯುಂಜಂತಿ = (ಯುಜಿರ್ ಯೋಗೇ) ಪ್ರವರ್ತಿಸುತ್ತಾರೆ. ಅಥವಾ ಅಸ್ಯ =ಭಕ್ತರ ಸಮುದಾಯದ ರಥೇ=ದೇಹ ಸುಖವನ್ನು ಹೊಂದಿರುವ, (ಅವ್ಯಾಕುಲಗಳಾದ) ಧೃಷ್ಣೂ =ಧೈರ್ಯಯುಕ್ತಗಳಾದ, ನೃವಾಹಸಾ =ಶ್ರೀ ಹರಿಯನ್ನು ಹೊರುವ, ಹರೀ=ವಿಷಯಗಳ ಕಡೆಗೆ ಓಡುವುದರಿಂದ ಹರೀ ಎನ್ನಿಸಿಕೊಂಡ ಮನಸ್ಸು ಬುದ್ಧಿ ಇವುಗಳನ್ನು, ಭಕ್ತರ ದೇಹದಲ್ಲಿ ಯುಂಜಂತಿ = ಪ್ರೇರೇಪಿಸುತ್ತಾರೆ.) (ಅಂದರೆ ತನ್ನ ಮನೋಬುದ್ಧಿಗಳನ್ನು ಭಕ್ತರ ದೇಹದಲ್ಲಿ ಪ್ರೇರೇಪಿಸುವುದಕ್ಕಾಗಿ ಪ್ರವರ್ತಿಸುತ್ತಾರೆ.) ಅಂದರೆ ಭಕ್ತರನ್ನು ಪ್ರಶಸ್ತ ಮನಸ್ಸುಳ್ಳವರನ್ನಾಗಿಯೂ ಬುದ್ಧಿಯುಳ್ಳವರನ್ನಾಗಿಯೂ ಮಾಡುತ್ತಾರೆ. ||೨||

**ಭಾ || (೧) ಹರೀ ಚಾಸ್ಯ ಮನೋಬುದ್ಧೀ ಸ್ವಶಕ್ತ್ಯಯಃ । ಯುಂಜಂತ್ಯಧಿಗುಣತ್ವೇನ ಕಾಮ್ಯಾವಶ್ವಾವಥಾಪಿ ವಾ । ವಿಶಿಷ್ಟಪಕ್ಷಸಂಯುಕ್ತಾವಿವ ಕ್ಷಿಪ್ರತರೌ ಸದಾ । ರಥೇ ದೇಹೇಽಪಿ ವಾ ದೇವಾಃ ಸ್ವಮನೋಬುದ್ಧಿಮೇವ ಚ । ಅಸ್ಯ ದೇಹೇ ಪ್ರಯುಂಜಂತಿ ಸೂರ್ಯದೀನ್ ಸ್ಥಾಪಯಂತಿ ಚ। ಸೂರ್ಯಾದಿ ಸ್ಥಾಪಕತ್ವಂ ಚ ಬ್ರಹ್ಮಾದೀನಾಂ ಭವೇತ್ಸದಾ । ಶೋಣೌ ಚ ಶಮಣೌ ಪ್ರೋಕ್ತೌ ಸುಖಪ್ರಾಪ್ತೌ ಯತಸ್ಸದಾ । (೨) ಶ್ಯಾಮೌ ಮೂರ್ಧನಿ ಶೋಣೌ ಚ ಶಕ್ರಾಶ್ವಾವಗ್ರಗೌ ಸ್ಮೃತೌ || (೩) ಧೃಷ್ಣೌ ನೄನ್ ಪ್ರತಿ ತಂ ವೇಶಂ ವಹಂತೌ ತಾವು ಭಾವಪಿ ||೨||**

ಅ|| (೧) ಶ್ರೀ ವಾಸುದೇವನ ಸ್ವರೂಪಭೂತಗಳಾದ ಶಕ್ತಿಗಳು ಶ್ರೀ ವಿಷ್ಣುವಿನ ಅಧೀನಗಳಾದ ವಿಷಯಗಳ ಕಡೇಗೆ ಓಡುವುದರಿಂದ ಹರೀ ಎನಿಸಿಕೊಂಡ ಮನಸ್ಸು ಬುದ್ಧಿಗಳನ್ನು ಭಕ್ತರ ದೇಹದಲ್ಲಿ ಪ್ರೇರೇಪಿಸುತ್ತಾರೆ. (ಅಂದರೆ ಆ ಭಕ್ತರನ್ನು ಪ್ರಶಸ್ತ ಮನಸ್ಸುಳ್ಳವರನ್ನಾಗಿಯೂ ಪ್ರಶಸ್ತ ಬುದ್ಧಿಯುಳ್ಳವರನ್ನಾಗಿಯೂ ಮಾಡುತ್ತಾರೆ.) (ಈ ಋಕ್ಕನ್ನು ಮರುದ್ವಿಷಯಕವನ್ನಾಗಿ ವ್ಯಾಖ್ಯಾನ ಮಾಡುತ್ತಾರೆ.) ಅಥವಾ ದೇವತೆಗಳು ಮರುತ್‌ಗಳಾಗಲೀ, ಇಂದ್ರನ ಅಶ್ವಗಳನ್ನು ಇಂದ್ರನದ್ದೇ ಆದ ರಥದಲ್ಲಿ ಪ್ರೇರೇಪಿಸುತ್ತಾರೆ. ಅಥವಾ ದೇವತೆಗಳು ತಮ್ಮ ಮನೋಬುದ್ಧಿಗಳನ್ನು ಈ ಜೀವರ ಸಮುದಾಯದ ದೇಹದಲ್ಲಿ ಪ್ರೇರೇಪಿಸುತ್ತಾರೆ. (ಅಂದರೆ) (ಆ ಜೀವರ ಸಮುದಾಯದ ದೇಹ ಪ್ರೇರಣೆಗಾಗಿ ಪ್ರೇರೇಪಿಸುತ್ತಾರೆ.) (ಮರುದ್ವಿಷಯಕವಾಗಿ ಯುಂಜಂತಿ ಬ್ರಧ್ನಂ ಎಂಬ ಹಿಂದಿನ ಋಕ್ಕಿನದ್ದೂ ತಾತ್ಪರ್ಯ ಹೇಳುತ್ತಾರೆ.) ದೇವತೆಗಳು ಸೂರ್ಯಾದಿ ದೇವತೆಗಳನ್ನು ಸ್ಥಾಪಿಸುತ್ತಾರೆ. ಅಂದರೆ ತತ್ತತ್ಕಾರ್ಯಗಳಲ್ಲಿ ನಿಯಮಿಸುತ್ತಾರೆ. (ಆ ಸೂರ್ಯಾದಿಸ್ಥಾಪಕತ್ವವು ಸರ್ವದೇವತೆಗಳಲ್ಲಿ ಮುಖ್ಯತಃ ಇಲ್ಲವೆನ್ನುತ್ತಾರೆ.) ಬ್ರಹ್ಮರುದ್ರಾದಿ ದೇವತೆಗಳು, ಸದಾ ಸೂರ್ಯಾದಿ ದೇವತೆಗಳನ್ನು ಆವಾವ ಕಾರ್ಯಗಳಲ್ಲಿ ನಿಯೋಜಿಸುತ್ತಾ ಅವರಿಗೆ ನಿಯಾಮಕರಾಗಿರುತ್ತಾರೆ. (ಸ್ಥಾಪಕರಾಗದೆ ಇದ್ದ ಇತರ ದೇವತೆಗಳಲ್ಲಿ ಸ್ಥಾಪಕರಾದ ಬ್ರಹ್ಮಾದಿಗಳ ಸಾಹಚರ್ಯದಿಂದ ಲಕ್ಷಣಯಾ ಸ್ಥಾಪಕ ಶಬ್ದ ಪ್ರಯೋಗವು) (ಈ ೨ನೇ ಋಕ್ಕಿನಲ್ಲಿ ಕಾಮ್ಯಾದಿ ವಿಶೇಷಣಗಳನ್ನು ಮನಸ್ಸು ಬುದ್ಧಿಗಳಲ್ಲಿಯೂ ಅಶ್ವಗಳಲ್ಲಿಯೂ ಅಧಿಗುಣತ್ವೇನ ಇತ್ಯಾದಿಗಳಿಂದ ಕೂಡಿಸುತ್ತಾರೆ.) ಅಧಿಕ ಗುಣಗಳಿದ್ದುದರಿಂದ ಇಚ್ಛೆಗೆ ವಿಷಯಕಗಳಾಗಿವೆ. ಅಶ್ವಗಳು, ಅಥವಾ ಮನಸ್ಸು ಬುದ್ಧಿಗಳು. ಉತ್ತಮ ರೆಕ್ಕೆಗಳಿಂದೊಡಗೂಡಿದ ಹಕ್ಕಿಗಳಂತೆಯೇ ಸದಾ ಅತಿವೇಗದಿಂದ ಓಡುವವುಗಳು. ಯಾವ ಕಾರಣದಿಂದ ಸದಾ ಮುಖವನ್ನು ಹೊಂದಿರುತ್ತವೋ, ಆದ ಕಾರಣ ಶಂ=ಸುಖವನ್ನು, ಅಣೌ=ಹೊಂದಿದವುಗಳು, ಅವುಗಳೇ ಶೋಣೌ ಎಂದು ಹೇಳಲ್ಪಟ್ಟಿವೆ. (ಶ=ಸುಖ, ಉ =ಚೆನ್ನಾಗಿ ಯಾವಾಗಲೂ, ಣಂ=ಹೊಂದಿದವುಗಳು) (೨) (ಮನೋಬುದ್ಧಿಗಳಲ್ಲಿ ಹೀಗೆ ವ್ಯಾಖ್ಯಾನವಾದಾಗ್ಯೂ ಅಶ್ವಗಳಲ್ಲಿ ಶೋಣತ್ವವು

ಪ್ರಸಿದ್ಧವೇ ಆಗಿದೆ. ಎಂದರೆ) ಇಂದ್ರನ ಕುದುರೆಗಳು ಶ್ಯಾಮವರ್ಣವುಳ್ಳವುಗಳೆಂದೇ ಪ್ರಮಿತಗಳಾಗಿವೆ. (ಆದ ಕಾರಣ ಶೋಣತ್ವವು ಅಸಂಭಾವಿತವಾದ ಪ್ರಯುಕ್ತ ಅಲ್ಲಿಯೂ ಯೋಗಾರ್ಥವನ್ನು ಅನುಸರಿಸಲೇಬೇಕು.) (ಪ್ರಕಾರಾಂತರದಿಂದ ಶೋಣಶಬ್ದವನ್ನು ಅಶ್ವಗಳಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಶೋಣಗುಣವು ಉತ್ತಮಾಂಗವಾದ ಶಿರಸ್ಸಿನಲ್ಲಿದ್ದ ಪ್ರಯುಕ್ತ ಸರ್ವಾಂಗಗಳಿಂದ ಕೂಡಿದ ಅಶ್ವಗಳೂ, ಲಕ್ಷಣಯಾ ಶೋಣಗಳೆನಿಸುತ್ತವೆ. (ಇಂದ್ರನಿಗೆ ೧೦೦೦ ಕುದುರೆಗಳಿದ್ದ ಪ್ರಯುಕ್ತ ಎರಡೇ ಅಶ್ವಗಳನ್ನು ತೆಗೆದುಕೊಳ್ಳಲು ಕಾರಣವೇನೆಂದರೆ) (ಸಹಸ್ರ ಕುದುರೆಗಳಲ್ಲಿ ಎರಡೇ ಕುದುರೆಗಳು) ಇದಿರು ಓಡುವುದರಿಂದ (ಅವುಗಳೇ ಪ್ರಧಾನಗಳಾಗಿರುವ ಪ್ರಯುಕ್ತ ಆ ಎರಡನ್ನೇ ತೆಗೆದುಕೊಂಡದ್ದು) (೩) ದಾರ್ಷ್ಟ್ಯ (ಧೈರ್ಯ)ವುಳ್ಳವುಗಳು. ಮನುಷ್ಯರನ್ನುದ್ದೇಶಿಸಿ ಇಂದ್ರನನ್ನು ಯಾ ವಿಷ್ಣುವನ್ನು ಹೊರುವವುಗಳು. ಅಥವಾ ನಿಯಾಮಕನಾದ ಇಂದ್ರನನ್ನು ಶ್ರೀ ವಿಷ್ಣುವನ್ನಾಗಲೀ ಭಕ್ತರ ಸಮೀಪಕ್ಕೆ ಹೊರುವವುಗಳು. ಮನೋಬುದ್ಧಿಗಳು ಅಶ್ವಗಳೂ ಆ ಎರಡೂ ಕೂಡ ಹೀಗೆ ಇರುವವುಗಳು. ||೨||

ಋ || (೫೩) ಕೇತುಂ ಕೃಣ್ವನ್ನಕೇತವೇ ಪೇಶೋ ಮರ್ಯಾ ಅಪೇಶಸೇ | ಸಮುಷದ್ಭಿರಜಾಯಥಾಃ ||೩||

ಅ|| (ಎಲೋ ಶ್ರೀ ಹರಿಯೇ ನೀನು) ಅಕೇತವೇ = ಅಜ್ಞನಿಗೆ, ಕೇತುಂ =ಸಜ್ಞಾನವನ್ನು, ಕೃಣ್ವನ್ ಮಾಡುತ್ತಾ, ಅಪೇಶಸೇ =ಸುವರ್ಣವಿಲ್ಲದವನಿಗೆ, ಪೇಶಃ =ಸುವರ್ಣವನ್ನು ಕೃಣ್ವನ್ ಮಾಡುತ್ತಾ, ಉಷದ್ಭಿಃ=ವಶಕಾಂತೌ, ಚೆನ್ನಾಗಿ ಪ್ರಕಾಶಮಾನಗಳಾದ ಸಾಮರ್ಥ್ಯಾತಿಶಯಗಳಿಂದ ಕೂಡಿ, ಅಜಾಯಥಾಃ=ಯಜ್ಞದಲ್ಲಿ ಅಭಿವ್ಯಕ್ತನಾಗಿರುತ್ತಿ. (ನೀನು ಮಾತ್ರವಲ್ಲ, ಮತ್ತೆ) ಮರ್ಯಾ =ದೇಹಹಾನಿ ರೂಪಮರಣವುಳ್ಳ ದೇವತೆ ಗಳೂ ಕೂಡ ಅಜ್ಞರಿಗೆ ಸಜ್ಞಾನನ ಕೊಡಲಿಕ್ಕೂ ಸುವರ್ಣವಿಲ್ಲದವರಿಗೆ ಸುವರ್ಣ ಕೊಡಲಿಕ್ಕಾಗಿಯೂ ಯಜ್ಞದಲ್ಲಿ ಅಭಿವ್ಯಕ್ತರಾದರು. ||೩||

ಭಾ || ಅಜ್ಞಾಯ ಕುರ್ವನ್ ಸಜ್ಞಾನಂ ಹೇಮಾಹೇಮಾಯ ಚೇಶ್ವರ | ಉಷದ್ಭಿಃ ಸಂಪ್ರಕಾಶದ್ಭಿಃ
ಶಕ್ತಿಭಿರ್ವ್ಯಕ್ತತಾಮಗಾಃ| ಮರ್ಯಾ ಮರಣವಂತೋಽಪಿ ದೇವಾ ಏವಂ ||೩||

ಅ|| ಎಲೋ ಇಂದ್ರನೇ, ನೀನು ಅಜ್ಞರಿಗೆ ಸಜ್ಞಾನವನ್ನೂ ಸುವರ್ಣವಿಲ್ಲದವರಿಗೆ ಸುವರ್ಣವನ್ನೂ ಮಾಡುತ್ತಾ (ಕಾಶ್ಯದೀಪ್ತೌ) ಚೆನ್ನಾಗಿ ಪ್ರಕಾಶಿಸಿಕೊಂಡಿರತಕ್ಕ ಸಾಮರ್ಥ್ಯಗಳಿಂದ ಅಭಿವ್ಯಕ್ತಿಯನ್ನು ಯಜ್ಞದಲ್ಲಿ ಹೊಂದಿರುತ್ತಿ. (ನೀನು ಮಾತ್ರವಲ್ಲ. ಮತ್ತೆ) ಮರಣವುಳ್ಳ ದೇವತೆಗಳೂ ಕೂಡ ಹೀಗೆಯೇ ಯಜ್ಞದಲ್ಲಿ ಅಭಿವ್ಯಕ್ತಿಯನ್ನು ಹೊಂದಿರುತ್ತಾರೆ. ||೩||

ಋ || (೫೪) ಆದಹ ಸ್ವಧಾಮನು ಪುನರ್ಗರ್ಭತ್ವಮೇರಿರೇ | ದಧಾನಾ ನಾಮ ಯಜ್ಞಿಯಂ || ||೪||

ಅ|| ಯಜ್ಞಿಯಂ = ಯಜ್ಞದಲ್ಲಿ ವಾಚ್ಯವಾದ, (ಯಾಗದಲ್ಲಿ ಉಚ್ಚಾರಣ ವಿಷಯವಾಗಿ ಇರತಕ್ಕ ನಾಮ =ಹೆಸರನ್ನು ದಧಾನಾಃ =ಧರಿಸಿರುವ, ಶ್ರೀ ಹರಿಯ ಶಕ್ತಿಗಳು, ಅಥವಾ ದೇವತೆಗಳು, ಅತ್ =ಅಕಾರ ವಾಚ್ಯನಾದ ಶ್ರೀ ವಿಷ್ಣುವಿನ ಇಚ್ಛೆಯಿಂದ, ಅಹ =ಯಜ್ಞದಲ್ಲಿ ಅಭಿವ್ಯಕ್ತಿಯಾದ ಮೇಲೆಯೇ ಸ್ವಧಾಂ (ಸ್ವಂ ಆತ್ಮಾನಂ, ದಧಾತಿ = ಪುಷ್ಣಾತೀತಿ ಸ್ವಧಾಂ (ಅನು=ಸುಖದಿಂದಲೇ, (ಭಯದಿಂದ ಅಲ್ಲ) ಪುನಃ=ತಿರುಗಿ ಗರ್ಭತ್ವಂ =ಗೂಢತ್ವವನ್ನು, ಏರಿರೇ = (ಆಙ್‌ಪೂರ್ವಾತ್

ಈರಗತೌ, ಕಂಪನೇಚ) ಹೊಂದಿದರು. ||೪||

**ಭಾ || ಹರೇರ್ವಶಾತ್ | ತದೈವ ಸುಖಮನ್ವೇವ ಪುನರ್ಗೂಢತ್ವಮಾಪಿರೇ | ಸ್ವೇಚ್ಛಯೆ ವ ಪರೇಶಸ್ಯ ಶಕ್ತಯೋ ದೇವತಾ ಅಪಿ || ಯಜ್ಞೇ ವಾಚ್ಯಂ ವಧಾನಾಶ್ಚ ನಾಮ || ||೪||**

ಅ|| ಶ್ರೀ ಹರಿಯ ಅಧೀನವಾಗಿ, ಯಜ್ಞದಲ್ಲಿ ಉಚ್ಚಾರಣ ವಿಷಯವಾಗಿರತಕ್ಕ ಹೆಸರನ್ನು ಧರಿಸಿರುವ ಶ್ರೀ ಹರಿಯ ಶಕ್ತಿಗಳು, ದೇವತೆಗಳೂ ಕೂಡ ಅಕಾರವಾಚ್ಯನಾದ ಶ್ರೀ ವಿಷ್ಣುವಿನ ನಿಮಿತ್ತದಿಂದ ಸ್ವೇಚ್ಛೆಯಿಂದಲೇ ಯಜ್ಞದಲ್ಲಿ ಅಭಿವ್ಯಕ್ತಿಯಾದ ಮೇಲೆಯೇ ಸುಖದಿಂದಲೇ (ಭಯದಿಂದ ಅಲ್ಲ) ಪುನಃ ಗೂಢತ್ವವನ್ನು ಹೊಂದಿರುತ್ತಾರೆ. ||೫||

**ಋ || (೫೫) ವೀಳು ಚಿದಾರುಜತ್ನುಭಿರ್ಗುಹಾ ಚಿಂದಿದ್ರ ವಹ್ನಿಭಿಃ | ಅವಿಂದ ಉಸ್ರಿಯಾ ಅನು|| ||೫||೧೧||**

ಅ|| ಎಲೋ ಇಂದ್ರನೇ, ಗುಹಾಚಿತ್ =ಗುಹೆಯಲ್ಲಿದ್ದವನಾದಾಗ್ಯೂ, (ಜನರಿಗೆ ಗೋಪ್ಯನಾಗಿದ್ದವನಾದಾಗ್ಯೂ ನೀನು, ವೀಳು =ದೃಢವಾಗಿ, ಚಿತ್=ದೃಢವಾದಾಗ್ಯೂ, (ಬ್ರಹ್ಮಾಂಡಾದಿಗಳನ್ನು) ಆರುಜನ್ನುಭಿಃ (ರುಜೋಭಂಗೇ) ಸಂಹರಿಸುವ, ವಹ್ನಿಭಿಃ=ಲೋಕವನ್ನು ಹೊರುವ ತನ್ನ ಸಾಮರ್ಥ್ಯದಿಂದ ಕೂಡಿಕೊಂಡು, ಉಸ್ರಿಯಾಃ =ನಾನಾ ವಿಧ ಪ್ರಾಕಟ್ಯವನ್ನು, ಅನು =ಸ್ವೇಚ್ಛಾನುಸಾರವಾಗಿ, ಅವಿಂದಃ = (ವಿದ್ಲೃಲಾಭೇ) ಹೊಂದಿರುತ್ತಿ, (ಸ್ವಪ್ರಕಾಶನಾಗಿರುತ್ತಿ) ಅಥವಾ ವೀಳುಚಿತ್ =ದೃಢವಾದಾಗ್ಯೂ, ಬ್ರಹ್ಮಾಂಡಾದಿಗಳನ್ನು, ಅರುಜನ್ನುಭಿಃ = ಸಂಹರಿಸುವ, ವಹ್ನಿಭಿಃ =ಲೋಕಗಳನ್ನು ಹೊರುತ್ತಿರುವ ದೇವತೆಗಳಿಂದ ಕೂಡಿಕೊಂಡು ನೀನು, ಉಸ್ರಿಯಾಃ =ನಾನಾ ವಿಧಪ್ರಾಕಟ್ಯಗಳನ್ನು, ಅನು=ಅನುಕೂಲವಾಗಿ, ಅವಿಂದಃ =ಹೊಂದಿರುತ್ತಿ. ||೫||

**ಭಾ || ವೀಳು ದೃಢಂ ಹ್ಯಪಿ | ಆರುಜದ್ಭಿಃ ಸ್ವಸಾಮರ್ಥ್ಯೈರ್ಗುಹಾಯಾಂ ಸಂಸ್ಥಿತೋಽಪಿಸನ್ | ವಹದ್ಭಿರಖಿಲಂ ಲೋಕಂ ಪ್ರಕಾಶತ್ವಾನಿ ಲಬ್ಧವಾನ್ | ದೇವೈರ್ವೈತಾದೃಶೈಃ ಸಾಕಮಾನು ಕೂಲ್ಯೇನ ಲಬ್ಧವಾನ್ ||೫|| ೧೧||**

ಅ|| ಎಲೋ ಇಂದ್ರನೇ ಲೋಕಸ್ಥ ಜನರಿಗೆ ಗೋಪ್ಯನಾಗಿದ್ದವನಾದಾಗ್ಯೂ ನೀನು ದೃಢನಾದಾಗ್ಯೂ ಬ್ರಹ್ಮಾಂಡಾದಿಗಳನ್ನು ಸಂಹರಿಸುವ, ಸಮಸ್ತ ಲೋಕಗಳನ್ನು ಹೊರುತ್ತಿರುವ ತನ್ನ ಸಾಮರ್ಥ್ಯಗಳಿಂದೊಡಗೂಡಿ ನಾನಾ ವಿಧ ಪ್ರಾಕಟ್ಯವನ್ನು ಸ್ವೇಚ್ಛಾನುಸಾರವಾಗಿ ಹೊಂದಿರುತ್ತಿ. (ಸ್ವಪ್ರಕಾಶನಾಗಿರುತ್ತಿ.) ಅಥವಾ ಹಿಂದೆ ಹೇಳಿದ ಗುಣಗಳಿಂದ ಕೂಡಿದ ದೇವತೆಗಳಿಂದೊಡಗೂಡಿ ಅನುಕೂಲವಾಗಿ ಹೊಂದಿರುತ್ತಿ. ||೫|| ೧೧||

**ಋ || (೫೬) ದೇವಯಂತೋ ಯಥಾ ಮತಿಮಚ್ಛಾ ವಿದದ್ವಸುಂ ಗಿರಃ | ಮಹಾಮನೂಷತ ಶ್ರುತಂ ||೬||**

ಅ|| ಅಚ್ಛ ದೇವಯಂತಃ = (ದಿವ್‌ಧಾತುವು ದ್ಯುತ್ಯರ್ಥಕವು.) ಚೆನ್ನಾಗಿ ಪ್ರಕಾಶಿಸಿಕೊಂಡಿರುವ, ಗಿರಃ = (ಗೄನಿಗರಣೇ) ವೇದರೂಪಗಳಾದ ವಚನಗಳು, ಅಥವಾ ವೇದರೂಪವಾದ ವಚನವನ್ನುಚ್ಚರಿಸುವ ಪುರುಷರು, ಯಥಾ=ಯಥಾಸ್ಥಿತವಾಗಿರುವ (ನಿರ್ವಿಕಾರನಾದ) ಮತಿಂ =ಮತಿರೂಪನಾದ, ವಿದದ್ವಸುಂ =ದ್ರವ್ಯವನ್ನು ಹೊಂದಿರುವ,

ಮಹಾಂ = ಶ್ರೇಷ್ಠನಾದ, ಶ್ರುತಂ =ಶ್ರುತ್ಯಾದಿಗಳಲ್ಲಿ ಪ್ರಸಿದ್ಧನಾದ, ಈ ಇಂದ್ರನನ್ನು ಅನೂಷತ =ಣು ಸ್ತುತೌ) ಸ್ತೋತ್ರ ಮಾಡಿದರು. ||೬||

**ಭಾ || ಸಮ್ಯಕ್ ಪ್ರದ್ಯೋತಯಂ ತೋಕಮುಂ ಮತಿರೂಪಂ ಯಥಾಸ್ಥಿತಂ । ವಿದದ್ವಿತ್ತಂ ಮಹಾಂತಂ ಚ ವಿಶ್ರುತಂ ಸುಗಿರೋಽಸ್ತುವನ್ ||೬||**

ಅ|| ಚೆನ್ನಾಗಿ ಪ್ರಕಾಶಿಸಿಕೊಂಡಿರುವ ವೇದರೂಪ ವಚನಗಳು. ಅಥವಾ ವೇದಗಳನ್ನುಚ್ಚರಿಸುವ ಪುರುಷರು, ನಿರ್ವಿಕಾರನೂ, ಮತಿರೂಪನೂ, ದ್ರವ್ಯವನ್ನು ಹೊಂದಿರುವವನೂ, ಶ್ರೇಷ್ಠನೂ, ಪ್ರಸಿದ್ಧನೂ ಆದ ಇಂದ್ರನನ್ನು ಸ್ತುತಿಸಿದರು. ||೬||

**ಋ || (೫೭) ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಬಿಭ್ಯುಷಾ । ಮಂದೂ ಸಮಾನವರ್ಚಸಾ ||೭||**

ಅ|| ಮಂದೂ =ಮುಖಸ್ವರೂಪರಾದುದರಿಂದ ಸುಖವನ್ನು ಕೊಡುವ ಶಂಕರ ಪುರಂದರರು, ಸುಖ ಸ್ವರೂಪರಾದುದರಿಂದ ಶ್ರೀಭೂಮಿಗಳಾಗಲೀ, ಸಂದೃಕ್ಷಸೇ =ಭಕ್ತಿಪೂರ್ವಕವಾಗಿ ಪರಮಾತ್ಮನನ್ನು ನೋಡುವುದಕ್ಕಾಗಿ, ಅಬಿಭ್ಯುಷಾ = (ಞಭಿಭಯೇ) ನಿರ್ಭಯನಾದ, ಸಮಾನವರ್ಚಸಾ = ನಿರ್ವಿಕಾರ ತೇಜಸ್ಸುಳ್ಳ, ಇಂದ್ರೇಣ = ಪರಮಾತ್ಮನಿಂದ, ಸಂಜಗ್ಮಾನಃ = (ಗಮ್ಲೃಗತೌ) ಸಂಗತರಾದರು. ಹಿ=ಪ್ರಸಿದ್ಧವು. (ಇಂದ್ರನ ವಿಷಯದಲ್ಲಿ ಆದರೂ) ಮಂದೂ = ಸುಖಕ್ಕೆ ಕಾರಣರಾದುದರಿಂದ ದ್ಯಾವಾ ಪೃಥವಿಗಳು, (ಎಂದು ಇಟ್ಟುಕೊಳ್ಳಬೇಕು. ||೭||

**ಭಾ || ತಸ್ಯ ಸಂದರ್ಶನಾಯೈವ ಸಂಗತಸ್ತೇನ ಶಂಕರಃ । ಮುಖಾತ್ಮಾಪುರುಹೂತೋ ವಾ ಶ್ರೀ ಭೂಮೀ ಚ ಸುಖಾತ್ಮಿಕೇ ||೭||**

ಅ|| ಮುಖಸ್ವರೂಪಿಯಾದ ಶಂಕರನೂ, ದೇವೇಂದ್ರನೂ ಸುಖಸ್ವರೂಪಗಳಾದ ಶ್ರೀ ಭೂಮಿಗಳಾಗಲೀ ಶ್ರೀ ಪರಮಾತ್ಮನನ್ನು ನೋಡುವುದಕ್ಕಾಗಿಯೇ ಆ ಪರಮಾತ್ಮನಿಂದ ಸಂಗತರಾದರು. ||೭||

**ಋ || (೫೮) ಅನವದ್ಯೈರಭಿದ್ಯುಭಿರ್ಮಖಃ ಸಹಸ್ವದರ್ಚತಿ । ಗಣೈರಿಂದ್ರಸ್ಯ ಕಾಮ್ಯೈ || ||೮||**

ಅ|| ಮುಖ್ಯಾ =ಯಜ್ಞಾಭಿಮಾನಿಯಾದ ದೇವೇಂದ್ರನು ಅನವದ್ಯೈಃ = ನಿರ್ದೋಷರಾದ, ಅಭಿದ್ಯುಭಿಃ =ಮಹಾಜ್ಞಾನಿಗಳಾದ, ಇಂದ್ರಸ್ಯ =ಪರಮೇಶ್ವರನಿಗೆ ಕಾಮ್ಯೈ=ಪ್ರಿಯರಾದ, ಗಣೈಃ =ದೇವತೆಗಳ ಸಮೂಹಗಳಿಂದೊಡಗೂಡಿ, ಸಹಸ್ವತ್ =ವಾಯುವಿನಂತೆ) ವಾಯುವು ಹೇಗೆ ಆಗುತ್ತಾನೋ ಹಾಗೆ, (ಅಂದರೆ ವಾಯುವಿನಿಂದ ಕೂಡಿಕೊಂಡು) ಇಂದ್ರಸ್ಯ = ಶ್ರೀ ಪರಮಾತ್ಮನನ್ನು ಅರ್ಚತಿ =ಪೂಜಿಸುತ್ತಿರುತ್ತಾನೆ. ಅಂದರೆ ವಾಯುವು, ಇಂದ್ರನು, ದೇವತೆಗಳು ಕೂಡ, ಮಹಾಜ್ಞಾನಿಗಳಾಗಿರುವುದರಿಂದಲೂ, ನಿರ್ದುಷ್ಟರಾದುದರಿಂದಲೂ, ಮುಖಾಭಿಮಾನಿಗಳಾಗಿರುವುದರಿಂದಲೂ, ಅತಿಪ್ರಿಯರಾದುದರಿಂದಲೂ ಶ್ರೀ ಪರಮೇಶ್ವರನನ್ನು ಪೂಜಿಸುತ್ತಿರುತ್ತಾರೆ. (ಪ್ರಸಿದ್ಧನಾದ ಇಂದ್ರನ ವಿಷಯದಲ್ಲಿಯಾದರೂ

ಇಂದ್ರನಿಗೆ ಪ್ರಿಯರಾದ ಋತ್ವಿಜರ ಸಮೂಹಗಳಿಂದ ಮಾಡಲ್ಪಡತಕ್ಕಯಾಗವು ಬಲಿಷ್ಠನಾದ ಇಂದ್ರನನ್ನು ಅತಿಶಯವಾಗಿ ಪೂಜಿಸುತ್ತದೆ.॥) ಯಜಮಾನನು ಕರ್ತನು ಯಾಗವು ಕರಣವಾದಾಗ್ಯೂ ಔಪಚಾರಿಕವಾಗಿ ಕರ್ತೃತ್ವವ್ಯಪದೇಶವು) ॥೮॥

**ಭಾ ॥ ಅನವದ್ಯೈರ್ಮಹಾಜ್ಞಾನೈಃ ಪ್ರಿಯೈರ್ದೇವಗಣೈಸ್ಸಹ । ವಾಯುನಾ ಚ ಸಹಾರ್ಚಂತಿ ಸುಧೀತ್ವಾತ್ಪರಮೇಶ್ವರಂ॥೮॥**

ಅ॥ ವಾಯು ಇಂದ್ರ ಸಮಸ್ತ ದೇವತೆಗಳೂ ಕೂಡ ದೋಷವಿಲ್ಲದವರೂ ಮಹಾಜ್ಞಾನಿಗಳೂ ಶ್ರೀ ಹರಿಗೆ ಪ್ರಿಯರೂ ಆದ ದೇವ ಸಮೂಹಗಳಿಂದಲೂ ವಾಯುದೇವರಿಂದಲೂ ಕೂಡಿಕೊಂಡು ಮಹಾಜ್ಞಾನಿಗಳಾದುದರಿಂದ ಶ್ರೀ ಪರಮೇಶ್ವರನನ್ನು ಪೂಜಿಸುತ್ತಾರೆ. ॥ (ವಾಯು, ಇಂದ್ರ ಸಮಸ್ತ ದೇವತೆಗಳೂ ಕೂಡ ಶ್ರೀ ಹರಿಯನ್ನು ಪೂಜಿಸುತ್ತಿರುತ್ತಾರೆ.) ॥೮॥

**ಋ ॥ (೫೯) ಅತಃ ಪರಿಜ್ಮನ್ನಾಗಹಿ ದಿವೋ ವಾ ರೋಚನಾದಧಿ । ಸಮಸ್ಮಿನ್ನೃಂಜತೇ ಗಿರಃ ॥೯॥**

ಅ॥ ಪರಿಜ್ಮನ್ = (ಜು ಗತೌ) (ಪರಿತಃ ಸರ್ವತ್ರಜವತೇ ಗಚ್ಛತಿ,) ಭೂಮಿಯ ಸುತ್ತು ಮುತ್ತಲೂ ಇರುವವನೇ, (ಸರ್ವಗತನೇ) ಅತಃ = ಸರ್ವಯಜ್ಞಭೋಕ್ತೃತ್ವವಿದ್ದ ಪ್ರಯುಕ್ತವೇ ದಿವಃ =ಸ್ವರ್ಗಲೋಕದಿಂದ, ರೋಚನಾತ್ ವಾ ॥ (ರುಚದೀಪ್ತೌ) ಪ್ರಕಾಶಮಾನವಾದ ಸೂರ್ಯ ಮಂಡಲದಿಂದಾಗಲೀ ಅಧಿ = ನಮ್ಮ ಪೂಜೆಯನ್ನು ಅಧಿಕರಿಸಿ, ಇಹ =ಯಜ್ಞ ಸ್ಥಾನವನ್ನು ಕುರಿತು, ಆಗಹಿ =ಬಾ, ಅಸ್ಮಿನ್ =ಈ ಯಜ್ಞ ಸ್ಥಾನದಲ್ಲಿ ಗಿರಃ = ಸ್ತುತಿಸ್ವರೂಪಗಳಾದ ವಚನಗಳು, ಸಮ್ = ಪರಮ ಮುಖ್ಯ ವೃತ್ತಿಯಿಂದ, ತ್ವಾಂ =ನಿನ್ನನ್ನು, ಋಂಜತೇ =ಹೊಂದುತ್ತವೆ. ಸ್ತುತಿಸುತ್ತವೆ. (ಆದುದರಿಂದಲೂ ಬರಬೇಕು.) ॥೯॥

**(ಭಾ)** **(೧) ಅತೋ ಹೇತೋರಿಹಾಯಾಹಿ ದಿವೋ ವಾ ಸೂರ್ಯಮಂಡಲಾತ್ । ಪರಿಜ್ಮನ್ ಸರ್ವಗಾಸ್ಮಾಕಮಧಿಕೃತ್ಯ ಸಮರ್ಹಣಂ ॥ (೨) ಅಸ್ಮಿನ್ ಗಿರಃ ಪ್ರಾಪ್ನುವಂತಿ ಸಮ್ಯಕ್ ಪರಮ ಮುಖ್ಯತಃ ॥ (೩) ಯುಂಜಂತೀತ್ಯತ್ರ ಬಾಹುಲ್ಯಾದ್ದೇವಯಂತೋಽತ ಇತ್ಯಪಿ । ಬಾಹುಲ್ಯಾದ್ವ್ಯ (ದ್ಯಾ)ಪ್ತಿತೋ ಗೀರ್ಭಿರ್ವಿನಾಽರ್ಥೋ ನಾನ್ಯ ಇಷ್ಯತೇ ॥೯॥**

ಅ॥ (೧) ಭೂಮಿಯ ಸುತ್ತಲೂ ಇರುವವನೇ ಅಂದರೆ ಸರ್ವತ್ರವ್ಯಾಪ್ತನೇ, ಸಮಸ್ತ ಯಜ್ಞಗಳನ್ನು ಭೋಗಿಸುವುದರಿಂದಲೇ ಸ್ವರ್ಗದಿಂದಲಾಗಲೀ ಸೂರ್ಯ ಮಂಡಲದಿಂದಾಗಲೀ, ನಮ್ಮ ಪೂಜೆಯನ್ನು ಅಧಿಕರಿಸಿ (ಉದ್ದೇಶಿಸಿ) ಈ ಯಜ್ಞ ಸ್ಥಾನಕ್ಕೆ ಬಾ. (೨) ಈ ಯಜ್ಞ ಸ್ಥಾನದಲ್ಲಿ ಸ್ತುತಿ ರೂಪಗಳಾದ ವೇದವಚನಗಳು ಚೆನ್ನಾಗಿ ಅಂದರೆ ಪರಮ ಮುಖ್ಯವೃತ್ತಿಯಿಂದ ನಿನ್ನನ್ನು ಹೊಂದುತ್ತವೆ. ಸ್ತುತಿಸುತ್ತವೆ. ಆದುದರಿಂದಲೂ ಬಾ. (೩) (ಈ ಸೂಕ್ತದಲ್ಲಿ ಪ್ರಾಥಮಿಕ ೩ ಋಕ್ಕುಗಳಿಗೆ ಕೇವಲ ಇಂದ್ರನು ದೇವತೆಯು, ಅದಹ ಮೊದಲಾದ ೬ ಋಕ್ಕುಗಳಿಗೆ ಇಂದ್ರನೂ ದೇವತೆಯು. ೧೦ನೇ ಋಕ್ಕಿಗೆ ಇಂದ್ರನು ದೇವತೆಯು, ಎಂದು ಅನುಕ್ರಮಣಿಕೆಕಾರರು ಹೇಳುತ್ತಾರೆ. ಅದರಲ್ಲಿ ೧೦ನೇ ಋಕ್ಕಿನಲ್ಲಿ ಬಹುವಚನಾದಿ ಲಿಂಗಗಳಿಲ್ಲದಿರುವ ಪ್ರಯುಕ್ತ ಇಂದ್ರನು ಮಾತ್ರ ವಿಷಯನೆಂದು ನಾವೂ ಅಂಗೀಕರಿಸಿರುವುದರಿಂದ ೧೦ನೇ ಋಕ್ಕಿನಲ್ಲಿ ವಿಪ್ರತಿಪತ್ತಿಯಿಲ್ಲದಿರುವ ಕಾರಣ ಅದನ್ನು ವ್ಯಾಖ್ಯಾನ ಮಾಡುವುದಕ್ಕಿಂತ ಮೊದಲೇ ಅನುಕ್ರಮಣಿಕೆಯಲ್ಲಿ ಹೇಳಿದುದನ್ನು ನಿರಾಕರಿಸುತ್ತಾರೆ. ) (1) ಯುಂಜಂತಿ ಬ್ರಧ್ನಂ (2) ಯುಂಜಂತ್ಯಸ್ಯ ಎಂಬ ೨ ಋಕ್ಕುಗಳಲ್ಲಿ ಬಹುವಚನವು

ಶ್ರುತವಾದ ಪ್ರಯುಕ್ತ ಸಮಸ್ತ ದೇವತೆಗಳಿಂದ ಭಿನ್ನವಾದ ಕೇವಲ ಇಂದ್ರನೆನ್ನುವ ಅರ್ಥವನ್ನು ಪ್ರಾಮಾಣಿಕರು ಅಂಗೀಕರಿಸುವುದಿಲ್ಲ. ಮತ್ತೆ ಮರುತ್ ಶಬ್ದಿತರಾದ ಸಮಸ್ತ ಬ್ರಹ್ಮಾದಿ ದೇವತೆಗಳು. (ಯಥಾಕಥಂಚಿತ್ ಕೇವಲ ಇಂದ್ರನೆಂದು ವ್ಯಾಖ್ಯಾನ ಮಾಡಿದರೆ, ಬ್ರಧ್ನಂ =ಇಂದ್ರನನ್ನೂ, ಪರಿತಸ್ಥುಷಃ =ಸುತ್ತಲೂ ಇರುವ ಸೇವಕರಾದ ಬ್ರಹ್ಮಾದಿ ದೇವತೆಗಳು, ಯುಂಜಂತಿ = ಅನುಸರಿಸಿ ಸಂಚರಿಸುತ್ತಾರೆ, ಎಂದು ವ್ಯಾಖ್ಯಾನ ಮಾಡಿದರೆ ಭಾಸ್ಕರಾಹಸ್ಕರ ಬ್ರಧ್ನ ಎನ್ನುವ ಕೋಶದಿಂದ ಬ್ರಧ್ನ ಶಬ್ದಕ್ಕೆ ಆದಿತ್ಯನಲ್ಲಿರುವ ರೂಢಿಯು ವಿರುದ್ಧವಾಗುವುದು. ಯುಂಜಂತಿ ಬ್ರಧ್ನಮಿತ್ಯಾಹ ಅಸೌವಾ ಆದಿತ್ಯೋ ಬ್ರಧ್ನಃ ಎಂದು ಬ್ರಾಹ್ಮಣದಲ್ಲಿ ಬ್ರಧ್ನ ಶಬ್ದಕ್ಕೆ ಆದಿತ್ಯನೆಂದು ಅರ್ಥಮಾಡಿರುವುದರಿಂದ ಆ ಬ್ರಾಹ್ಮಣವಾಕ್ಯದಿಂದಲೂ ವಿರೋಧವು ಬರುವುದು. ಮತ್ತು ಕೇತುಂ ಕೃಣ್ವನ್ ಎಂಬ ಋಕ್ಕಿನಲ್ಲಿ ಕೃಣ್ವನ್ ಇತ್ಯಾದ್ಯೇಕವಚನವೂ, ಮರ್ಯಾ ಎಂದು ಬಹುವಚನವೂ ಶ್ರುತವಾದ ಪ್ರಯುಕ್ತ ದೇವತೆಗಳಿಂದ ಭಿನ್ನವಾದ ಕೇವಲ ಇಂದ್ರ ರೂಪವಾದ ಅರ್ಥವು ಅಂಗೀಕರಿಸಲಾಗುವುದಿಲ್ಲ. ಆದಹ ಎನ್ನುವ ೪ನೇ ಋಕ್ಕಿನಲ್ಲಿ ಮರುತ್ ದೇವತೆಯೆಂದೂ, ವೀಳುಚಿತ್ ಎಂಬ ೫ನೇ ಋಕ್ಕಿನಲ್ಲಿ ಇಂದ್ರ, ಮರುತ್‌ಗಳು ದೇವತೆಗಳೆಂದು ಇಬ್ಬರೂ ಅಂಗೀಕರಿಸಿರುವುದರಿಂದ ಅವುಗಳಲ್ಲಿ ವಿಪ್ರತಿಪತ್ತಿಯಿಲ್ಲ.) (ದೇವಯಂತಃ =ಮೊದಲಾದ ೪ ಋಕ್ಕುಗಳಲ್ಲಿ ಪ್ರತಿಪಾದ್ಯವಾದ ವಸ್ತುವಿನಲ್ಲಿ) ಬಹುವಚನವು ಶ್ರುತವಾಗದಿರುವುದರಿಂದ ಇಂದ್ರನೆಂಬ ಅರ್ಥಕ್ಕಿಂತ ಬೇರೆಯಾದ ದೇವತೆಗಳೆಂಬ ಅರ್ಥವನ್ನು ಅಂಗೀಕರಿಸಲಾಗುವುದಿಲ್ಲ. (ಇಂದ್ರ ಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಅಧ್ಯಾಹಾರ ಮಾಡಿ ಕಥಂಚಿತ್ ಯೋಜನಾ ಮಾಡುವುದು ಅತಿಕ್ಲಿಷ್ಟವಾಗುವುದು.) (ದೇವಯಂತಃ ಎಂಬ ೬ನೇ ಋಕ್ಕಿನಲ್ಲಿಯೂ ಅತಃಪರಿಜ್ಮನ್ ಎಂಬ ೯ನೇ ಋಕ್ಕಿನಲ್ಲಿಯೂ ಬಹುವಚನವು ಶ್ರುತವಾದ ಪ್ರಯುಕ್ತ ಬಹುವಚನವು ಕಾಣುವುದಿಲ್ಲ. (ಅಂದರೆ ಆ ೨ ಋಕ್ಕುಗಳಲ್ಲಿ ಗಿರಃ ಎಂಉ ವಚನಗಳಿಗೇನೇ ಬಹುವಚನ ವಿಷಯತ್ವವು. (ಪ್ರತಿಪಾದ್ಯವಾದ ಅರ್ಥಕ್ಕೆ ಬಹುತ್ವವಿಲ್ಲ.) ಬಾಹುಲ್ಯಾತ್ ದೃಷ್ಟಿತಃ ಎಂದು ಕ್ವಚಿತ್ ಪಾಠವು. ( ಆ ಪಾಠದಲ್ಲಿ ಯುಂಜಂತಿ ಎಂಬಲ್ಲಿ ಬಹುವಚನವಿದ್ದ ಪ್ರಯುಕ್ತ ದೇವತೆಗಳೆಂಬ ಅರ್ಥವನ್ನೇ ಇಟ್ಟುಕೊಳ್ಳಬೇಕು. ಇಂದ್ರನೆಂಬ ಅರ್ಥವನ್ನು ಅಂಗೀಕರಿಸುವುದಿಲ್ಲ, ಎಂದು ಹೇಳಿದರೆ ದೇವಯಂತಃ ಎಂಬುವಲ್ಲಿಯೂ ಅತಃ ಪರಿಜ್ಮನ್ ಎಂಬುವಲ್ಲಿಯೂ ಬಹುವಚನವಿದ್ದ ಪ್ರಯುಕ್ತ ದೇವತೆಗಳೆಂಬ ಅರ್ಥವನ್ನೇ ಇಟ್ಟುಕೊಳ್ಳಬೇಕು. ಇಂದ್ರನೆಂಬ ಅರ್ಥವನ್ನು ಅಂಗೀಕರಿಸಬಾರದೆಂದರೆ.) ದೇವಯಂತಃ ಅತಃ ಪರಿಜ್ಮನ್ ಎಂಬಲ್ಲಿಯೂ ಗಿರಃ ಎಂದು ವೇದರೂಪ ವಚನಗಳಲ್ಲಿ ಬಹುವಚನವು ಹೊರತು ಬೇರೆ ಪ್ರತಿಪಾದ್ಯವಾದ ದೇವತಾ ರೂಪವಾದ ಅರ್ಥದಲ್ಲಿ ಬಹುವಚನವಿಲ್ಲ. ಗಿರಃ ಎನ್ನುವುದು ವಿಷಯಗಳೆಂದು ಸ್ಪಷ್ಟವಾಗಿ ತೋರುತ್ತದೆ. (ಏವಂಚ ೧, ೨, ೪, ಋಕ್ಕುಗಳು ಮರುತ್ ದೇವತಾಕಗಳು. ಇಲ್ಲಿ ಮರುತ್ ಶಬ್ದದಿಂದ ಬ್ರಹ್ಮಾದಿ ಸಮಸ್ತ ದೇವತೆಗಳನ್ನು ಇಟ್ಟುಕೊಳ್ಳಬೇಕು. ೩, ೫, ಋಕ್ಕುಗಳು ಇಂದ್ರ ಮರುತ್ ದೇವತಾಕಗಳು. ಇತರ ಋಕ್ಕುಗಳು ಇಂದ್ರ ದೇವತಾಕಗಳು.) ||೯||

**ಋ || (೬೦) ಇತೊ ವಾ ಸಾತಿಮೀಮಹೇ ದಿವೋ ವಾ ಪಾರ್ಥಿವಾದಧಿ । ಇಂದ್ರಂ ಮಹೋ ವಾ ರಜಸಃ ||  ||೧೦||೧೨||೬||**

ಅ|| ನಾವು) ಇತಃ = ವೈಕುಂಠಲೋಕಕ್ಕಿಂತ ದಿವೋ ವಾ = ಕೆಳಗಿನದ್ದಾದ ದ್ಯುಲೋಕಕ್ಕಿಂತಲಾಗಲಿ ಪಾರ್ಥಿವಾತ್ =ಪೃಥಿವೀ ಸಂಬಂಧಿಯಾದ ಪಾತಾಲಲೋಕಕ್ಕಿಂತವಾಗಲೀ, ಮಹಃ ಶ್ರೇಷ್ಠವಾದ, ಅಥವಾ ಶ್ರೇಷ್ಠರಾದ ಬ್ರಹ್ಮಾದಿಗಳನ್ನು, ರಜಸಃ = ವಾ ಅನುರಂಜಿಸುವ ವಿಷ್ಣುಲೋಕದಿಂದಾಗಲೀ, (ಅಂದರೆ ಈ ಲೋಕಗಳಲ್ಲಿ ನಿಯಾಮಕನಾಗಿರುವ) ಸಾತಿಂ

=ಷಣ ಸಂಭಕ್ತೌ) ಲಾಭ ಸ್ವರೂಪನಾದ, ಇಂದ್ರಂ - ಪರಮೇಶ್ವರನನ್ನು ಅಧಿ ಈಮಹೇ = (ಇಕ್‌ಸ್ಮರಣೇ) (ಇಬ್ ಅಧ್ಯಯನೇ) (ಅಥವಾ ಯಾಚ್ಞಾ ಕರ್ಮಸು ಪಾಠಃ) ಚೆನಾಗಿ ಸ್ಮರಿಸುತ್ತೇವೆ. ಸ್ತುತಿಸುತ್ತೇವೆ. ಬೇಡುತ್ತೇವೆ. ॥೧೦॥

**ಭಾ ॥ ಇತೋ ದಿವೋ ಪಾ ಪಾತಾಲಾತ್ ಸಾತಿಂ ಲಾಭ ಸ್ವರೂಪಿಣಂ । ಮಹತೋ ರಂಜಕಾದ್ವಿಷ್ಣೋರ್ಲೋಕಾದ್ವಾ ತಮಧೀಮಹೇ ॥೧೦॥೧೨॥೬॥**

ಅ ॥ ನಾವು ವೈಕುಂಠಲೋಕಕ್ಕಿಂತ ಕೆಳಗಿನದ್ವಾದದ್ಯುಲೋಕದಿಂದ ಪಾತಾಲಲೋಕದಿಂದಲಾಗಲಿ ಶ್ರೇಷ್ಠರನ್ನು ರಂಜಿಸುವ ವಿಷ್ಣುಲೋಕದಿಂದಲಾಗಲೀ, (ಅಂದರೆ ಆ ಲೋಕಗಳಲ್ಲಿ ನಿಯಾಮಕನಾಗಿರುವ ಶ್ರೀ ಭಗವಂತನೇ ಏಕಾಂತ ಭಕ್ತರಿಗೆ ಲಾಭ ಸ್ವರೂಪನು, ಹೀಗೆ ಲಾಭ ಸ್ವರೂಪನಾದ ಆ ಶ್ರೀ ಹರಿಯನ್ನು ಸ್ಮರಿಸುತ್ತೇವೆ. ಸ್ತುತಿಸುತ್ತೇವೆ ಅಥವಾ ಬೇಡುತ್ತೇವೆ. ॥೧೦॥೧೨॥೬॥

ಅವ ॥ ೧೦ ಋಕ್ಕು ೨ ವರ್ಗ, ಐಂದ್ರ ಸೂಕ್ತವು

**ಋ ॥ (೬೧) ಇಂದ್ರಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ । ಇಂದ್ರಂ ವಾಣೀರನೂಷತ ॥೧॥**

ಅ॥ ಬೃಹತ್ = ಸರ್ವಗುಣ ಪರಿಪೂರ್ಣನಾದ, ಇಂದ್ರಮಿತ್ =ಶ್ರೀ ಪರಮೇಶ್ವರನನ್ನೇ, ಗಾಥಿನಃ = (ಗೈಶಬ್ದೇ) ಗಾನವುಳ್ಳ ಸಾಮವೇದಿಗಳಾದ ಉದ್ಗಾತೃಗಳು. (ಸಾಮವೇದದಿಂದ) ಅನೂಷತ = (ಣುಸ್ತುತೌ) ಸ್ತುತಿಸಿದರು. (ಸದಾ ಸ್ತುತಿಸುತ್ತಿರುತ್ತಾರೆ.) ಅರ್ಕಿಣಃ =ಋಕ್ಕುಗಳುಳ್ಳ ಬಹ್ವೃಚರು. ಹೋತೃಗಳೂ ಕೂಡ ಅರ್ಕೇಭಿಃ =ಅರ್ಚ್ಯಂತ್ಯೇಭಿರಿತಿ ಅರ್ಕಾ) (ಅರ್ಚ ಪೂಜಾಯಾಂ ಅರ್ಕ ಎನಿಸಿಕೊಂಡ ಋಕ್ಕುಗಳಿಂದ, (ಇಂದ್ರಂ =ಶ್ರೀ ಹರಿಯನ್ನು ) ಸರ್ವದಾ ಸ್ತುತಿಸುತ್ತಿರುತ್ತಾರೆ. ವಾಣೀಃ = ಯಜುರಾದಿವಾಣಿಗಳು, ಅನೂಷತ = ಸರ್ವದಾ ಸ್ತುತಿಸುತ್ತಿರುತ್ತಾರೆ. (ಅಥವಾ ಅಧ್ವರ್ಯು ಮೊದಲಾದವರು ಯಜುರಾದಿವಾಣಿಗಳಿಂದ ಸರ್ವದಾ ಸ್ತುತಿಸುತ್ತಾರೆ.)

**ಭಾ ॥ ತಮೇವ ಗಾಥಿನಃ ಸಾಮ್ನಾ ಸಮ್ತುಂತ್ಯೃಗ್ಭಿಶ್ಚ ಬಹ್ವೃಚಾಃ ।
ಬೃಹಂತಮನ್ಯವಾಣೀಭಿರಪಿ ॥೧॥**

ಅ॥ ಆ ಪೂರ್ಣನಾದ ಶ್ರೀ ಹರಿಯನ್ನೇ ಸಾಮವೇದಿಗಳು ಸಾಮದಿಂದಲೂ, ಬಹ್ವೃಚರು ಋಕ್ಕುಗಳಿಂದಲೂ, ಅಧ್ವರ್ಯು ಮೊದಲಾದವರು ಯಜುರ್ವೇದಾದಿಗಳಿಂದಲೂ ಸದಾ ಸ್ತುತಿಸುತ್ತಿರುತ್ತಾರೆ. ॥೧॥

**ಋ ॥ (೬೨) ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ । ಇಂದ್ರೋ ವಜ್ರೀ ಹಿರಣ್ಯಯಃ ॥೨॥**

ಅ॥ ಇಂದ್ರ ಇತ್ =ಇಂದ್ರನೇ, ವಚೋಯುಜಾ =ವಾಙ್ಮಾತ್ರದಿಂದಲೇ ಕೂಡಿರುವ, ಹರ್ಯೋಃ=ಅಶ್ವಗಳ (ರಥದಲ್ಲಿ) ಸಚಾ =ಸುಖದಿಂದಲೇ, ಆ =ಚೆನ್ನಾಗಿ, ಸಂಮಿಶ್ಲ =ವಿಮಿಶ್ರಿತನಾದನು. (ಅಂದರೆ ಸಾರಥಿಯ ಅತಿ ಪ್ರಯತ್ನವಿಲ್ಲದೇನೇ ರಥದ ಸಂಬಂಧವುಳ್ಳ ಕುದುರೆಗಳಿಂದ ಕೂಡಿದ ರಥವನ್ನು ಏರಿದನು.) (ಆಧ್ಯಾತ್ಮ ರೂಪ ಅರ್ಥದಲ್ಲಿ)

ಶ್ರೀ ಹರಿಯೇ (ಭಕ್ತರ ದೇಹದಲ್ಲಿ) ವೇದವಾಕ್ಯಗಳನ್ನನುಸರಿಸುವ ಮನೋ ಬುದ್ಧ್ಯಾಖ್ಯ ಅಶ್ವಗಳ ದೇಹಾಖ್ಯ ರಥದಲ್ಲಿ ಸುಖದಿಂದಲೇ ಆ=ಚೆನ್ನಾಗಿ ಮಿಶ್ರಿತನಾದನು. (ಅಂದರೆ ಮನೋಬುದ್ಧಿಗಳಿಂದ ಕೂಡಿದ ಆವಾವ ದೇಹಾಖ್ಯ ರಥವನ್ನು ವಿಶೇಷತಃ ಏರಿದನು.) ಮತ್ತು ಇಂದ್ರಃ = ಆ ಇಂದ್ರನು, ವಜ್ರೀ = ವಜ್ರಾಯುಧವುಳ್ಳವನು, ಶ್ರೀ ಹರಿಯು ವಜ್ರೀ = (ವಜ್ರಗತೌ, ರಮುಕ್ರೀಡಾಯಾಂ) ಜ್ಞಾನಾನಂದವುಳ್ಳವನು. ಹಿರಣ್ಯಯಃ = ಹಿತಕರನೂ ರಮಣೀಯನೂ (ರಮುಕ್ರೀಡಾಯಾಂ) ಆಗಿರುತ್ತಾನೆ. ||೨||

ಭಾ || (೧) ಹರ್ಯೋರ್ವಿಮಿಶ್ರಿತಃ। ರಥೇಽಥವಾ ಮನೋ ಬುದ್ಧ್ಯೋರ್ವಾಜ್ಮಾತ್ರೇಣೈವ ಯೋಗಿನೋಃ। ಸಚಾ ಸುಖೇನ ವಜ್ರೀ ಚ ಜ್ಞಾನಾನಂದೋ ಹಿ ಧಾತುತಃ || ಹಿತಶ್ಚ ರಮಣೀಯಶ್ಚ ಹಿರಣ್ಯಯ ಇತೀರಿತಃ ||೨||

ಅ|| ಇಂದ್ರನೇ ವಾಜ್ಮಾತ್ರದಿಂದಲೇ ಸಂಬಂಧವುಳ್ಳ, ಕುದುರೆಗಳ ರಥದಲ್ಲಿ (ಸಚಾ=) ಸುಖದಿಂದಲೇ, ಚೆನ್ನಾಗಿ ಮಿಶ್ರಿತನಾದನು. (ಅಂದರೆ ಸಾರಥಿಯ ಅತಿ ಪ್ರಯತ್ನವಿಲ್ಲದೇನೇ ರಥ ಸಂಬಂಧವುಳ್ಳ ಅಶ್ವಗಳಿಂದ ಕೂಡಿದ ರಥವನ್ನು ಏರಿದನು.) ಅಥವಾ ಶ್ರೀ ಪರಮೇಶ್ವರನು ಭಕ್ತರ ಶರೀರದಲ್ಲಿ ವೇದವಾಕ್ಯಗಳನ್ನನುಸರಿಸುವ ಮನೋಬುದ್ಧಿಗಳಿಂದ ಮಿಶ್ರಿತನಾದನು. (ಮನೋಬುದ್ಧಿಗಳಿಂದ ಕೂಡಿದ ಶರೀರದಲ್ಲಿ ವಿಶೇಷತಃ ಸನ್ನಿಹಿತನಾದನು.) ಪ್ರಸಿದ್ಧ ಇಂದ್ರನಲ್ಲಿ ವಜ್ರೀ=ವಜ್ರಾಯುಧವಿದ್ದ ಪ್ರಯುಕ್ತ ವಜ್ರೀ ಎಂದು ಸ್ಪಷ್ಟವು. ಶ್ರೀ ವಿಷ್ಣುವು ವಜ್ರೀ = ವಜ್ರಾಯುಧವಿದ್ದ ಪ್ರಯುಕ್ತ ವಜ್ರೀ ಎಂದು ಸ್ಪಷ್ಟವು. ಶ್ರೀ ವಿಷ್ಣುವು ವಜ್ರೀ =ಜ್ಞಾನಾನಂದವುಳ್ಳವನು. ಹೇಗೆಂದರೆ ವಜ ಗತೌ, ರಮುಕ್ರೀಡಾಯಾಂ ಎಂಬ ಧಾತುಗಳಿಂದ ಭಾವಾರ್ಥದಲ್ಲಿ ಡ ಪ್ರತ್ಯಯವು. ಜ್ಞಾನ ಆನಂದಗಳುಳ್ಳವನು ವಜ್ರೀ ಎನಿಸುತ್ತಾನೆ. ಹಿತಕರನೂ ರಮಣೀಯನೂ ಆಗಿರುವುದರಿಂದ ಹಿರಣ್ಯಯಃ ಎನಿಸುತ್ತಾನೆ. ||೨||

ಋ|| (೬೩) ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ದಿವಿ। ವಿ ಗೋಭಿರದ್ರಿಮೈರಯತ್ ||೩||

ಅ || ಇಂದ್ರಃ = ಪುರಂದರನು, ಅಥವಾ ಪರಮೇಶ್ವರನು ದೀರ್ಘಾಯ ಚಕ್ಷಸೇ =ಜನರಿಗೆ ಹಗಲು ಎಂಬ ದೀರ್ಘಕಾಲದಲ್ಲಿ ಪದಾರ್ಥಗಳನ್ನು ನೋಡುವುದಕ್ಕಾಗಿ, ಸೂರ್ಯಂ=ಸೂರ್ಯನನ್ನು, ದಿವಿ=ಆಕಾಶದಲ್ಲಿ, ಆರೋಹಯತ್ = (ರುಹಬೀಜ ಜನ್ಮನಿ ಪ್ರಾದುರ್ಭಾವೇ) ಆರೋಪಿಸಿದನು. (ಏರಿಸಿದನು.) ಮತ್ತು, ಇಂದ್ರಃ =ಪುರಂದರನು. ಗೋಭಿಃ = ವಜ್ರಗಳಿಂದ, ಅದ್ರಿಂ = (ದೃಜ್ ಆದರೆ) (ಆದ್ರಿಯತೇ ಇತ್ಯದ್ರಿಃ) ಪರ್ವತವನ್ನು ವಿಐರಯತ್ = (ಈರಕ್ಷೇಪೇ) ಕೊಂದನು. (ಅಂದರೆ ಪರ್ವತದಳ ರೆಕ್ಕೆಗಳನ್ನು ಛೇದಿಸಿದನು.) ಅಥವಾ ಗೋಭಿಃ = ಉದಕಗಳಿಂದ, (ವೃಷ್ಟಿಯಿಂದ) ಪರ್ವತವನ್ನು ಕೊಂದನು. (ಅತಿವೃಷ್ಟಿಯಿಂದ ಪರ್ವತವನ್ನು ಮುಳುಗಿಸಿದನು.) ಅಥವಾ ಗೋಭಿಃ =ಉದಕ ನಿಮಿತ್ತವಾಗಿ, ಅದ್ರಿಂ = ಮೇಘವನ್ನು ವಿ ಐರಯತ್ = ಮಿಶ್ರೀಕರಿಸಿದನು. (ನಿಯಮಿಸಿದನು) ಇಂದ್ರಃ = ಪರಮೇಶ್ವರನಾದರೂ ಅದ್ರಿಂ= (ಆದ್ರಿಯತೇ ಇತ್ಯದ್ರಿಃ) ಆದರಣ ಯೋಗ್ಯನಾದ ಮುಖ್ಯ ವಾಯುವನ್ನು, ಗೋಭಿಃ = ಜ್ಞಾನಗಳಿಂದ, ವಿ ಐರಯತ್ = ಜ್ಞಾನಯುಕ್ತನನ್ನಾಗಿ ಪ್ರವರ್ತಿಸಿದನು ||೩||

ಭಾ || ದೀರ್ಘಕಾಲಂ ದರ್ಶನಾಯ ಸೂರ್ಯಮಾರೋಹಯದ್ದಿವಿ । ಜ್ಞಾನೈರಾದರ ಯೋಗ್ಯಂಚ ಪ್ರಾಣಾತ್ಮನಂ ಸಮೈರಯತ್ ||೩||

ಅ॥ ಇಂದ್ರನು ಅಹೋರೂಪ ದೀರ್ಘ ಕಾಲದಲ್ಲಿ (ಹಗಲಲ್ಲಿ) ಪದಾರ್ಥಗಳನ್ನು ನೋಡುವುದಕ್ಕಾಗಿ ಸೂರ್ಯನನ್ನು ಆಕಾಶಕ್ಕೆ ಏರಿಸಿದನು. ಆದರಕ್ಕೆ ಯೋಗ್ಯನಾದ ಮಹಾಪ್ರಾಣನನ್ನೂ ಜ್ಞಾನಯುಕ್ತನನ್ನಾಗಿ ಪ್ರವರ್ತಿಸಿದನು. ॥೩॥

**ಋ ॥ (೬೪) ಇಂದ್ರ ವಾಜೇಷು ನೋಽವ ಸಹಸ್ರ ಪ್ರದನೇಷು ಚ । ಉಗ್ರ ಉಗ್ರಾಭಿರೂತಿಭಿಃ ॥೪॥**

ಅ॥ ಇಂದ್ರ =ಇಂದ್ರನೇ, ಉಗ್ರಃ=ದುಷ್ಟರಿಗೆ ಕ್ರೂರನಾದ ನೀನು, ವಾಜೇಷು = ಯುದ್ಧಗಳಲ್ಲಿ, ಸಹಸ್ರ ಪ್ರಧನೇಷು ಚ = ಸಹಸ್ರದಿಂದ ಯುದ್ಧವುಳ್ಳವರಾಗಿರಲು (ಅಂದರೆ ನಾವು ಬಹುಮಂದಿಯಿಂದ ಯುದ್ಧ ಮಾಡಿದಾಗ್ಯೂ) ನಃ=ನಮ್ಮನ್ನು ಉಗ್ರಾಭಿಃ = ದುಷ್ಟರಿಗೆ ಕರ್ಮವಶಾತ್ ಕ್ರೂರಗಳಾದ, ಸ್ವಭಾವತಃ ಉಗ್ರಗಳಾಗದೇನೆ ಇರುವ ಊತಿಭಿಃ = ಸದಭಿಪ್ರಾಯಗಳಿಂದ ಅವ=ಸರ್ವದಾ ರಕ್ಷಿಸು ॥೪॥

**ಭಾ ॥ ಬಹುಭಿರ್ಯುಧ್ಯಮಾನೇಷು ಯುದ್ಧೇಷ್ವಪಿ ಸದಾಽವ ನಃ । ದುಷ್ಟೋಗ್ರೈಃ ಸದಭಿ ಪ್ರಾಯೈ ॥೪॥**

ಆ ಬಹುಮಂದಿಯಿಂದ ಕೂಡಿ ಯುದ್ಧಗಳಲ್ಲಿ ನಾವು ಯುದ್ಧ ಮಾಡಿದಾಗ್ಯೂ ನಮ್ಮನ್ನು ದುಷ್ಟರಿಗೆ ಕ್ರೂರಗಳಾದ ಸ್ವತಃ ಕ್ರೂರಗಳಾಗದೆ ಇರುವ ಅಭಿಪ್ರಾಯಗಳಿಂದ ನಮ್ಮನ್ನು ಸದಾ ರಕ್ಷಿಸುತ್ತಿರು. ॥೪॥

**ಋ ॥ (೬೫) ಇಂದ್ರಂ ವಯಂ ಮಹಾಧನ ಇಂದ್ರಮರ್ಭೇ ಹವಾಮಹೇ । ಯುಜಂ ವೃತ್ರೇಷು ವಜ್ರಿಣಂ ॥ ॥೫॥**

ಅ ॥ ವೃತ್ರೇಷು = ವೃತ್ರ ಶಬ್ದ ವಾಚ್ಯಗಳಾದ ಅಜ್ಞಾನಗಳಲ್ಲಿ, ಯುಜಂ =ವಿರೋಧಿಯಾಗಿ ಕೂಡಿಸುವ (ಇಂದ್ರಪಕ್ಷದಲ್ಲಿ) ವೃತ್ರೇಷು=ವೃತ್ರಾದ್ಯಸುರರಲ್ಲಿ, ಯುಜಂ = ವಿರೋಧಿಯಾಗಿರುವ, ವಜ್ರಿಣಂ = (ವೃಜೀವರ್ಜನೇ) ಶತ್ರುಗಳಿಂದ ಬಿಡಲ್ಪಟ್ಟ, (ಅಂದರೆ ಭಯದಿಂದ ಶತ್ರುಗಳು ಇಂದ್ರನ ಸಮೀಪಕ್ಕೇನೇ ಬರುವುದಿಲ್ಲ) ಇಂದ್ರಂ = ಇಂದ್ರನನ್ನು, ಮಹಾಧನೇ = ಮೋಕ್ಷರೂಪ ಮಹಾ ಪುರುಷಾರ್ಥ ಸಿದ್ಧಿಗಾಗಿ, ಇಂದ್ರಂ = ಇಂದ್ರನನ್ನು ಅರ್ಭೇ = (ಋಗತೌ) ಅಲ್ಪಧನಕ್ಕಾಗಿಯೂ, (ಅಂದರೆ ಸಾಂಸಾರಿಕ ಪುರುಷಾರ್ಥಕ್ಕಾಗಿಯೂ) ವಯಂ =ಮಹಾ ಧನ ಅಲ್ಪ ಧನಗಳನ್ನು ಅರ್ಥಿಸುವ ನಾವು, ಹವಾಮಹೇ = ಕರೆಯುತ್ತೇವೆ. ॥೫॥

**ಭಾ ॥ ಮಹದಲ್ಪಧನಾರ್ಥಿನಃ । ಹವಾಮಹೇಽರಿವರ್ಜಂ ತಂ ತಮಸಾಂ ಪ್ರತಿಯೋಗಿನಂ ॥೫॥೧೩॥**

ಅ॥ ಮಹಾಧನ ಅಲ್ಪಧನಗಳನ್ನು ಅರ್ಥಿಸುವ ನಾವು ಅಜ್ಞಾನಗಳಿಗೆ ವಿರೋಧಿಯಾದ ಭಯದಿಂದ ಶತ್ರುಗಳಿಂದ ಬಿಡಲ್ಪಟ್ಟ (ಅಂದರೆ ದೈತ್ಯರೇ ಮೊದಲಾದ ಶತ್ರುಗಳು ಇದ್ದರೂ ಆ ದೈತ್ಯರು ತಮಗೆ ಮರಣ ಬಂದೀತು ಎಂಬ ಹೆದರಿಕೆಯಿಂದ ಇಂದ್ರನ ಸಮೀಪಕ್ಕೇನೇ ಬರುವುದಿಲ್ಲ) ಅಂತಹ ಇಂದ್ರನನ್ನು ಕರೆಯುತ್ತೇವೆ. ॥೫॥೧೩॥

**ಋ ॥ (೬೬) ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾವೃಧಿ । ಅಸ್ಮಭ್ಯಮಪ್ರತಿಷ್ಕುತಃ ॥೬॥**

ಅ॥ ವೃಷನ್ = (ವೃಷ ಶಕ್ತಿ ಬಂಧನೇ (ವೃಷ ಸೇಚನೇ) (ವೃಷ್ಟಿಕರ್ತನು) ಅಭೀಷ್ಟವನ್ನು ಕೊಡುವವನೇ ಸರ್ವಶ್ರೇಷ್ಠನೇ, ಸತ್ರಾದಾವನ್ = ಡುದಾಞ ದಾನೇ) ಸಮಸ್ತವನ್ನು ಕೊಡುವವನೇ, (ಸರ್ವೇಷ್ಟಂಸ್ವೇಚ್ಛಯಾದದಾತಿ) ಸಃ =ಅಂತಹ ನೀನು, ನಃ=ನಮ್ಮದಾದ ಅಮುಂ=ಪರೋಕ್ಷವಾದ, (ಮೋಕ್ಷದಲ್ಲಿರುವ) ಚರುಂ = (ಚರಗತಿಭಕ್ಷಣಯೋಃ ಭಕ್ಷಣೀಯವಾದ, ಅನುಭವಿಸಲು ಯೋಗ್ಯವಾದ ಆನಂದವನ್ನು, ಅಸ್ಮಭ್ಯಂ =ನಮ್ಮ ಅನುಭವಕ್ಕಾಗಿ, ಅಪಾವೃಧಿ=ಅವಿಧ್ಯೆಯಿಂದ ಆವೃತವಾಗಿರುವುದರಿಂದ ಆವರಣವನ್ನು ತೆಗೆ. (ಏಕೆಂದರೆ ನೀನೇ) ಅಪ್ರತಿಷ್ಕುತಃ = (ಸ್ಕುಞ ಅಪ್ರವಣೇ) (ಆಗಮನವು) ವೈರಿಗಳಿಂದ ಯುದ್ಧದಲ್ಲಿ ಇದಿರಾಗಿ ಬರಲ್ಪಟ್ಟವನಲ್ಲ. (ಅಂದರೆ ನಿನ್ನ ಇದಿರು ಯುದ್ಧಕ್ಕಾಗಿ ಶತ್ರುಗಳು ಬರುವುದೇ ಇಲ್ಲ.) ಅಸದೃಶನು. (ಪ್ರಸಿದ್ಧ ಇಂದ್ರ ಪಕ್ಷದಲ್ಲಿ) ಚರುಂ=ಹವಿಸ್ಸನ್ನು ಅಪಾವೃಧಿ=ಸ್ವೀಕರಿಸಿ ಸಫಲವನ್ನಾಗಿ ಮಾಡು. ಅಥವಾ ಚರುಂ=ಮೇಘವನ್ನೂ ಪರೋಪಕಾರಕ್ಕಾಗಿಯೇ ಈಶ್ವರನು ಸೃಷ್ಟಿಸಿರುವುದರಿಂದ ನಃ =ನಮಗಾಗಿಯೇ ಹುಟ್ಟಿದ್ದನ್ನು ಅಸ್ಮಭ್ಯಂ = ನಮಗಾಗಿ, ಅಪಾವೃಧಿ = ತೆರೆ (ಪರೋಪಕಾರಾಯ ಸತಾಂ ವಿಭೂತಯಃ ಎಂಬ ಉಕ್ತಿಯಿಂದ) (ವೃಷ್ಟಿ ಬರುವಂತೆ ಮಾಡು) ॥೬॥

ಭಾ ॥ **ಅಸ್ಮದೀಯಂ ಚರುಂ ಭೋಜ್ಯಮಾನಂದಂ ತಮಪಾವೃಣು। ಮೋಕ್ಷಗಂ ಸರ್ವದಾಽ ತಸ್ತ್ವಮಪ್ರತಿದ್ವಂದ್ವ ನೋ ವೃಷನ್** ॥೬॥

ಅ॥ ಭಕ್ತರಿಗೆ ಅಭೀಷ್ಟವನ್ನು ಕೊಡುವವನೇ, ಅಸದೃಶನಾದ ನೀನು, ನಮ್ಮದಾದ, ಮೋಕ್ಷದಲ್ಲಿರುವ, (ಚರುಂ=) ಭೋಜ್ಯವಾದ ಆನಂದವನ್ನು ಸರ್ವದಾ ಅವಿದ್ಯೆಯಿಂದ ಆವೃತವಾಗಿರುವುದರಿಂದ ನಮ್ಮ ಅನುಭವಕ್ಕಾಗಿ ಆವರಣವನ್ನು ತೆಗೆ. ॥೬॥

ಋ ॥ **(೬೭) ತುಂಜೇ ತುಂಜೇಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ । ನ ವಿಂಧೇ ಅಸ್ಯ ಸುಷ್ಟುತಿಂ** ॥೭॥

ಅ॥ ಎಲೋ ಇಂದ್ರನೇ, ತುಂಜೇ ತುಂಜೇ = ತುಜಿ ಗತೌ ದಾನೇವಾ) ನಿನ್ನಿಂದ ಗಮನ ಮಾಡಲ್ಪಡುತ್ತಿರಲು (ವ್ಯಾಪಾರವನ್ನು ಹೊಂದಿಸುತ್ತಿರಲು) ದಾನ ಮಾಡಲ್ಪಡುತ್ತಿರಲು ನಿನ್ನಿಂದಲೇ ಸ್ತೋತೃಗಳಿಗೆ ಪ್ರೇರಣೆಯುಂಟಾಗುತ್ತಿರಲಿ (ದೇಶಾಂತರ ಪ್ರಾಪ್ತಿಯಾಗಲೀ, ದಾನವಾಗಲೀ (ನಿನ್ನ ಪ್ರೇರಣೆಯಿದ್ದರೇನೇ ಆಗುತ್ತದೆ. ಯೇ=ಯಾವ ಪ್ರವೃತ್ತಗಳಾದ, ಉತ್ತರೇ-ಉತ್ತಮಗಳಾದ, ಸ್ತೋಮಾಃ - ಸ್ತುತಿ ವಿಶೇಷಗಳೋ, (ಅವುಗಳೂ ಕೂಡ) ಅಸ್ಯ ವಜ್ರಿಣಃ ಇಂದ್ರಸ್ಯ - ಈ ವಜ್ರಧಾರಿಯಾದ ಇಂದ್ರನಾದ ನಿನ್ನ, ಸುಷ್ಟುತಿಂ - ಶೋಭನವಾದ ಸ್ತುತಿತ್ವವನ್ನು, ನ ವಿಂಧೇ - (ವಿದ್ಲ್ಟ ಲಾಭೇ) ಹೊಂದುವುದಿಲ್ಲ. (ಅಂದರೆ ಭಗವಂತನಿಗೆ ಅನಂತ ಗುಣಗಳಿದ್ದುದರಿಂದ ಸಮಸ್ತವನ್ನು ವಿಷಯೀಕರಿಸುವುದರಿಂದ ಅಥವಾ ಸಮಸ್ತ ಗುಣಗಳನ್ನು ವರ್ಣಿಸದಿರುವುದರಿಂದ ಹೊಂದುವುದಿಲ್ಲ. ॥೭॥

ಭಾ ॥ **ತ್ವಯ್ಯೈವ ಪ್ರೇರಣೇ ಜಾತೇ ತತ್ರತತ್ರಯ ಉತ್ತರಾಃ । ತೇಽಪಿ ಸ್ತೋಮಾಃ ಸುಷ್ಟುತಿ ತ್ವಮಸ್ಯಾನಂತ್ಯಾನ್ನ ಚಾಪ್ನುಯುಃ** ॥೭॥

ಅ॥ ಆವಾವ ಸ್ತೋತ್ರಗಳಲ್ಲಿ ನಿನ್ನಿಂದಲೇ ಪ್ರೇರಣೆಯುಂಟಾಗುತ್ತಿರಲು (ನೀನೇ ಪ್ರೇರೇಪಿಸುತ್ತಿರಲು) ಪ್ರವೃತ್ತಗಳಾದ

ಉತ್ತಮಗಳಾದ ಸ್ತುತಿ ವಿಶೇಷಗಳಿದ್ದಾವೋ, ಅವುಗಳೂ ಕೂಡ ಇಂದ್ರನಾದ ನಿನ್ನ (ಗುಣಗಳು) ಅನಂತಗಳಾದುದರಿಂದ (ಸಂಪೂರ್ಣವಾಗಿ ಪ್ರತಿಪಾದಿಸದಿರುವುದರಿಂದ) ಶೋಭನವಾದ ಸ್ತುತಿತ್ವವನ್ನು ಹೊಂದುವುದಿಲ್ಲ. ||೭||

**ಋ || (೬೮) ವೃಷಾ ಯೂಥೇವ ವಂಸಗಃ ಕೃಷ್ಟೀರಿಯರ್ತ್ಯೋಜಸಾ । ಈಶಾನೋ ಅಪ್ರತಿಷ್ಕುತಃ ||೮||**

ಅ|| ವಂಸಗಃ = ಒಂದು ವೃಷಭಕ್ಕೆ ಇದಿರು ಯುದ್ಧ ಮಾಡುವ ಇನ್ನೊಂದು ವೃಷಭವು ವಂಸ ಎನಿಸುತ್ತದೆ. ಅದನ್ನು ಕುರಿತು ನಿರ್ಭಯವಾಗಿ ಯುದ್ಧಕ್ಕಾಗಿ ಯಾವ ವೃಷಭವು ಹೋಗುತ್ತದೋ, ಆ ವೃಷಭವು ವಂಸಗಃ ಎನಿಸುತ್ತದೆ. ಅಂತಹ ವೃಷಾ = ವೃಷಭವು, ಯೂಥೇವ =ಎತ್ತುಗಳ ಸಮೂಹವನ್ನು ಹೇಗೆ ಸೆಳೆಯುತ್ತದೋ ಹೀಗೆಯೇ ಈಶಾನಃ = ಪ್ರಭುವಾದ, ಅಪ್ರತಿಷ್ಕುತಃ = ಪ್ರತಿಭಟನಿಲ್ಲದಿರುವ ಇಂದ್ರನು, ಕೃಷ್ಟೀಃ = ಪ್ರಜೆಗಳನ್ನು ಓಜಸಾ = ಸಾಮರ್ಥ್ಯದಿಂದ, ಇಯರ್ತಿ = (ಋಗತೌ) ಪ್ರೇರೇಪಿಸುತ್ತಾನೆ. ||೮||

**ಭಾ || (೧) ಪ್ರತಿವೀರೋ ವೃಷಾ ವಂಸಸ್ತದ್ಗಂತಾ ವಂಸಗೋ ವಿಭೀಃ । ಯೂಥಾನ್ಯಾಕರ್ಷತಿ ಯಥಾ ಪ್ರಜಾಃ ಪ್ರೇರಯತಿ ಪ್ರಭುಃ || (೨) ಅಲ್ಪಸ್ಯಾಪಿ ಪ್ರಸಿದ್ಧ್ಯೈವ ದೃಷ್ಟಾಂತತ್ವಂ ತು ಯುಜ್ಯತೇ ||೮||**

ಅ|| (೧) ಪ್ರತಿಭಟವಾದ ಎತ್ತು ವಂಸ ಎನಿಸುತ್ತದೆ. ಅಂತಹ ಪ್ರತಿಭಟ ವೃಷಭವನ್ನು ಕುರಿತು ನಿರ್ಭಯವಾಗಿ ಯುದ್ಧಕ್ಕೆ ಹೋಗತಕ್ಕುದು ವಂಸಗ ಎನಿಸುತ್ತದೆ. ಅದು ಗೋವುಗಳ ಸಮೂಹಗಳನ್ನು ಹೇಗೆ ಸೆಳೆಯುತ್ತದೋ ಹಾಗೆಯೇ ಸರ್ವ ಸಮರ್ಥನಾದ ಶ್ರೀ ಹರಿಯು ಪ್ರಜೆಗಳನ್ನು ಪ್ರೇರೇಪಿಸುತ್ತಾನೆ. (೨) ಹಾಗಾದರೆ ಸರ್ವೇಶ್ವರನಿಗೆ ಅಲ್ಪವಾದ ವೃಷಭವು ದೃಷ್ಟಾಂತವೆಂದು ಹೇಗೆ ಹೇಳುವುದೆಂದರೆ (ವಿಶ್ವಾಸವು ಹುಟ್ಟುವುದಕ್ಕಾಗಿ ದೃಷ್ಟಾಂತವನ್ನು ಹೇಳಬೇಕು. ಅದು ಪ್ರಸಿದ್ಧವಾದುದೇ ಆಗಬೇಕು. ವಿವಕ್ಷಿತ ಧರ್ಮಗಳನ್ನು ತಿಳಿಸಿ ಕೊಡುವುದೇ ದೃಷ್ಟಾಂತದ ಕಾರ್ಯವು. ದೃಷ್ಟಾಂತಕ್ಕೆ ಅಲ್ಪತ್ವಾದಿಗಳು ಅಪ್ರಯೋಜಕವು ಆದ ಕಾರಣ) ಲೋಕದಲ್ಲಿ ಪ್ರಸಿದ್ಧಿಗೊಳಿಸುವುದಕ್ಕಾಗಿ ಅಲ್ಪವಾದುದಕ್ಕೂ ದೃಷ್ಟಾಂತತ್ವವು ಕೂಡುತ್ತದೆ. (ಅಲ್ಪವಾದುದೂ ದೃಷ್ಟಾಂತವಾಗುವುದು) ||೮||

**ಋ || (೬೯) ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯತಿ । ಇಂದ್ರಃ ಪಂಚಕ್ಷಿತೀನಾಂ ||೯||**

ಅ|| ಯಾವ ಇಂದ್ರನೊಬ್ಬನೇ ಚರ್ಷಣೀನಾ=ಪ್ರಜೆಗಳನ್ನು, ವಸೂನಾಂ = ದ್ರವ್ಯಗಳನ್ನು ಪಂಚಕ್ಷಿತೀನಾಂ = ದೇವತೆಗಳು ಗಂಧರ್ವರು, ದೈತೇಯರು, ಪಿತೃಗಳು, ಮನುಷ್ಯರು ಎಂಬ ಐದು ವಿಧ ಪ್ರಜೆಗಳನ್ನು ಇರಜ್ಯತಿ (ಇರಜ್ ಐಶ್ವರ್ಯೇ ) ನಿಯಮಿಸುತ್ತಾನೋ, (ಆತನು ಪ್ರಜೆಗಳನ್ನು ಪ್ರೇರೇಪಿಸುತ್ತಾನೆ) ||೯||

**ಭಾ|| ರಾಜಾ ಭವತಿ ವಿತ್ತಾನಾಂ ಪ್ರಜಾನಾಂಚೈಕ ಏವ ಯಃ । ದೇವಗಂಧರ್ವ ದೈತೇಯ ಪಿತೃಮಾನುಷ ಭೇದತಃ । ಪ್ರಜಾನಾಮಪಿ ಪಂಚಾನಾಂ ಸಾಮಾನ್ಯಾಚ್ಚ ವಿಶೇಷತಃ ||೯||**

ಅ|| ಯಾವ ಇಂದ್ರನೊಬ್ಬನೇ, ದ್ರವ್ಯಗಳಿಗೂ ಪ್ರಜೆಗಳಿಗೂ ದೇವತೆಗಳು ಗಂಧರ್ವರು ದೈತ್ಯರು ಪಿತೃಗಳು

ಮನುಷ್ಯರು ಎಂಬ ಭೇದದಿಂದ ಐದು ವಿಧ ಪ್ರಜೆಗಳಿಗೂ ರಾಜನಾಗಿರುತ್ತಾನೋ, ಚರ್ಷಣೀನಾಂ ಎಂದು ಸಾಮಾನ್ಯವಾಗಿ ಹೇಳಿದ್ದು. ವಿಶೇಷವನ್ನು ವಿಧಿಸುವುದಕ್ಕಾಗಿ ಪಂಚಕ್ಷಿತೀನಾಂ ಎಂದು ವಿಶೇಷವಾಗಿ ಹೇಳಿದ್ದು (ಆದ ಕಾರಣ ಪುನರುಕ್ತಿಯಿಲ್ಲ) ||೯||

**ಋ || (೭೦) ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ | ಅಸ್ಮಾಕಮಸ್ತು ಕೇವಲಃ ||೧೦||೧೪||೭||೨||**

ಅ|| (ಎಲೋ ಜನರೇ) ವಿಶ್ವತಃ = ಸರ್ವಗತನಾದ ಇಂದ್ರಂ = ಶ್ರೀ ಹರಿಯನ್ನು ಇಂದ್ರನನ್ನು, ಜನೇಭ್ಯಃವಃ = ಋತ್ವಿಕ್ ಯಜಮಾನರಾದ ನಿಮ್ಮ ಪ್ರಯೋಜನಕ್ಕಾಗಿ, ಪರಿ=ಚೆನ್ನಾಗಿ, ಹವಾಮಹೇ = ಸರ್ವರಿಗೆ ತೋರುವ ಹಾಗೆ ಚಕ್ರ ನಿಲ್ಲುವುದಕ್ಕಾಗಿ ಕರೆಯುತ್ತೇವೆ. ಕೇವಲಃ = ಕರೆಯಲ್ಪಟ್ಟ ಕೇವಲ ಈ ಇಂದ್ರನು, ಅಸ್ಮಾಕಂ = ನಮಗೆ, ಅಸ್ತು = ಇಷ್ಟ ಪ್ರದನಾಗಲಿ. ||೧೦||

**ಭಾ || ಸಮ್ಯಗ್ಘವಾಮಹೇ ಸರ್ವಗತಂಚ ವ್ಯಕ್ತರೂಪತಃ | ಸ್ಥಾತುಮೇಕತ್ರ ವೋಽರ್ಥಾಯ ಜನಾ ನೋಽಸ್ತು ಸ ಕೇವಲಃ ||೧೦||೧೪||೭||೨||**

ಅ|| ಎಲೋ ಜನರೇ, ಸರ್ವತ್ರ ವ್ಯಾಪ್ತನಾದ ಇಂದ್ರನನ್ನು ಋತ್ವಿಜರು, ಯಜಮಾನರೂ ಆದ ನಿಮ್ಮ ಪ್ರಯೋಜನಕ್ಕಾಗಿ ಚೆನ್ನಾಗಿ, ಅಭಿವ್ಯಕ್ತ ಮಧ್ಯಮ ಪರಿಣಾಮ ರೂಪದಿಂದ ಏಕತ್ರ ನಿಲ್ಲುವುದಕ್ಕಾಗಿ ಕರೆಯುತ್ತೇವೆ. ಕರೆಯಲ್ಪಟ್ಟ ಅಸಹಾಯಕನಾದ ಇಂದ್ರನು ನಿಮಗೂ ನಮಗೂ ಎಲ್ಲರಿಗೂ ಇಷ್ಟಪ್ರದನಾಗಲಿ ||೧೦||೧೪||೭||೨||

**ಅವ || ೧೦ ಋಕ್ಕು ೨ ವರ್ಗ - ಐಂದ್ರ ಸೂಕ್ತವು |**

**ಋ || (೭೧) ಏಂದ್ರ ಸಾನಸಿಂ ರಯಿಂ ಸಜಿತ್ವಾನಂ ಸದಾಸಹಂ | ವರ್ಷಿಷ್ಠಮೂತಯೇ ಭರ ||೧||**

ಅ|| ಇಂದ್ರ = ಇಂದ್ರನೇ, ಸಾನಸಿಂ = (ವನ ಷಣ ಸಂಭಕ್ತೌ) (ಷಣು ದಾನೇ) ಸತ್ಪಾತ್ರದಾನ ಹರಿಭಜನಾದಿ ರೂಪವಾದ ಲಾಭದಿಂದ ಕೂಡಿರುವ, ಸಜಿತ್ವಾನ - (ಜಿಜಯೇ) ಜಯಿಸುವ ಪುತ್ರಾದಿಗಳಿಂದ ಕೂಡಿರುವ ಸದಾ ಸಹಂ ಸರ್ವದಾ ಬಲವುಳ್ಳ, ವರ್ಷಿಷ್ಠಂ =ಅತಿ ವೃದ್ಧವಾದ, (ಅತಿ ಮಹತ್ತಾದ) ಊತಯೇ =ರಕ್ಷಾ ನಿಮಿತ್ತವಾಗಿ, ರಯಿಂ = ಜ್ಞಾನದ್ರವಿಣ ರೂಪವಾದ ದ್ರವ್ಯವನ್ನು, ಅಭರ - (ಹೃಞ ಹರಣೇ) ತೆಗೆದುಕೊಂಡು ಬಾ. (ಕೊಡು) ||೨||

**ಭಾ || ಜಯಿನಾ ಸಹಿತಂ ಲಾಭಯುಕ್ತಂ ಸದಾ ಬಲಂ | ವರ್ಷಿಷ್ಠಂ ಸುಮಹದ್ರಕ್ಷಾ ನಿಮಿತ್ತಂ ನಿತ್ಯದಾ ಭರ ||೧||**

ಅ|| ಇಂದ್ರನೇ, ಜಯಿಸುವ ಪುತ್ರಾದಿಗಳಿಂದ ಕೂಡಿರುವ, ಸತ್ಪಾತ್ರ ದಾನಾದಿ ಲಾಭಗಳಿಂದೊಡಗೂಡಿದ, ಸದಾ ಬಲವುಳ್ಳ, ವರ್ಷಿಷ್ಠಂ ಅಂದರೆ ಅತಿ ಮಹತ್ತಾದ, ರಕ್ಷಾನಿಮಿತ್ತವಾದ ದ್ರವ್ಯವನ್ನು ಸರ್ವದಾ ಕೊಡು. ||೧||

ಋ ॥ (೭೨) ನಿ ಯೇನ ಮುಷ್ಟಿಹತ್ಯಯಾ ನಿ ವೃತ್ರಾ ರುಣಧಾಮಹೈ । ತ್ವೋತಾಸೋ ನ್ಯರ್ವತಾ ॥೨॥

ಅ ॥ ಯೇನ =ಯಾವ ದ್ರವ್ಯ ನಿಮಿತ್ತದಿಂದ, ತ್ವೋತಾಸಃ =ನಿನ್ನಿಂದ ಪ್ರೇರಿತರಾದ ನಾವು, ಮುಷ್ಟಿ ಹತ್ಯಯಾ = ಮುಷ್ಟಿ ಪ್ರಹಾರದಿಂದ, (ಅರೀನ್ = ಬಾಹ್ಯ ಶತ್ರುಗಳನ್ನು) ನಿರುಣಧಾಮಹೈ =ತಡೆಯುತ್ತೇವೋ, ಮತ್ತು ಯಾವ ದ್ರವ್ಯ ನಿಮಿತ್ತದಿಂದ, ವೃತ್ರಾ = ಅಜ್ಞಾನಗಳನ್ನು ನಿರುಣಧಾಮ ಹೈ =ರುಧಿರ್ ಆವರಣೇ) ತಡೆಯುತ್ತೇವೋ, ಯಾವ ದ್ರವ್ಯ ನಿಮಿತ್ತದಿಂದ, ಅರ್ವತಾ =ಅಶ್ವಾದಿಗಳಿಂದ , (ಕೆಲವು ಶತ್ರುಗಳನ್ನು) ನಿರುಣಧಾಮಹೈ = ತಡೆಯುತ್ತೇವೋ, (ಅಂತಹ ದ್ರವ್ಯವನ್ನೇ ಕೊಡು.) ॥೨॥

ಭಾ ॥ ಯೇನಾರೀನ್ಮುಷ್ಟಿಯುದ್ಧೇನ ತಮಾಂಸಿ ಜ್ಞಾನಯುದ್ಧತಃ।ತ್ವತ್ಪ್ರೇರಿತಾ ನಿರುಂಧಾಮಃ ಕಾಂಶ್ಚಿದ್ವಾ ತುರಗಾದಿಭಿಃ।
ಆವೃತ್ತ್ಯೈವೋಪಸರ್ಗಸ್ಯ ಕ್ರಿಯಾವೃತ್ತಿರ್ಭವಿಷ್ಯತಿ ॥೨॥

ಅ॥ ಯಾವ ಜ್ಞಾನಾಖ್ಯ ದ್ರವ್ಯ ನಿಮಿತ್ತದಿಂದ ನಿನ್ನಿಂದ ಪ್ರೇರಿತರಾದ ನಾವು ಮುಷ್ಟಿಘಾತದಿಂದ ಬಾಹ್ಯ ಶತ್ರುಗಳನ್ನು ಜ್ಞಾನಯುದ್ಧದಿಂದ ಅಜ್ಞಾನಗಳನ್ನೂ, ಅಶ್ವಾದಿಗಳಿಂದ ಕೆಲವು ಶತ್ರುಗಳನ್ನೂ ತಡೆಯುತ್ತೇವೋ, (ಅಂತಹ ದ್ರವ್ಯವನ್ನು ಕೊಡು) ನಿ ಎಂಬ ಉಪಸರ್ಗವು (೩ ಸಲ ಇದ್ದ ಪ್ರಯುಕ್ತ ರುಣ ಧಾಮಹೈ ಎಂಬ ಕ್ರಿಯೆಗೂ ಮೂರಾವೃತ್ತಿಯನ್ನು ಅಂಗೀಕರಿಸಲೇಬೇಕು. (ಉಪಸರ್ಗಾ ಕ್ರಿಯಾಯೋಗೇ ಎಂದು ಕ್ರಿಯಾ ಸಂಬಂಧವಿದ್ದರೇನೇ ಉಪಸರ್ಗಗಳೆನಿಸುವುದು.) ॥೨॥

ಋ ॥ (೭೩) ಇಂದ್ರ ತ್ವೋತಾಸ ಆ ವಯಂ ವಜ್ರಂ ಘನಾ ದದೀಮಹಿ । ಜಯೇಮ ಸಂ ಯುಧಿ ಸ್ಪೃಧಃ ॥೩॥

ಅ॥ ಇಂದ್ರ=ಇಂದ್ರನೇ, ತ್ವೋತಾಸಃ =ನಿನ್ನಿಂದ ಪ್ರೇರಿತರಾದ ನಾವು, ವಜ್ರಂ = (ವಜಗತೌ, ರಮುಕ್ರೀಡಾಯಾಂ) ಜ್ಞಾನಾನಂದಗಳನ್ನು, ಅಥವಾ ಜ್ಞಾನ ವಿಷಯಕ ರತಿಯನ್ನು, ಅಥವಾ ಜ್ಞಾನ ನಿಮಿತ್ತವಾದ ಆನಂದವನ್ನು ಘನಾ=ದೃಢವಾಗಿ, ಆ ದದೀಮಹಿ =(ಡುದಾಞ ದಾನೇ) ಹೊಂದುವೆವು. (ಅಂದರೆ ನಿನ್ನ ಪ್ರೇರಣೆಯಿಂದಲೇ ಜ್ಞಾನ ಆನಂದಗಳುಳ್ಳವರಾಗುವೆವು.) ನಿನ್ನಿಂದ ಪ್ರೇರಿತವಾಗಿಯೇ, ಯುಧಿ-ಯುದ್ಧದಲ್ಲಿ ಸ್ಪೃಧಃ = ಸ್ಪರ್ಧ ಸಂಘರ್ಷೇ) ಸ್ಪರ್ಧೆಯುಳ್ಳವರನ್ನು (ಇತರರನ್ನು ತಿರಸ್ಕರಿಸುತ್ತೇವೆಂದು ಇಚ್ಛೆಯುಳ್ಳವರನ್ನು) ಅಥವಾ ಯುದ್ಧವು ಪ್ರಾಪ್ತವಾಗಲು, ಸ್ಪೃಧಃ = ಸ್ಪರ್ಧೆಯಿಂದ ಆಗತಕ್ಕ ಯುದ್ಧಗಳನ್ನು ಸಂಜಯೇಮ=ಚೆನ್ನಾಗಿ ಗೆಲ್ಲುವೆವು. (ಅಂದರೆ ಯುದ್ಧದಲ್ಲಿ ಸಂಪೂರ್ಣ ಜಯವುಳ್ಳವರಾಗುವೆವು.) ॥೩॥

ಭಾ ॥ ತ್ವತ್ಪ್ರೇರಿತಾ ಜ್ಞಾನರತಿಂ ದೃಢಶ್ಚೇನಾದದೀಮಹಿ ॥೩॥

ಅವ ॥ ಇಂದ್ರನೇ ನಾವು ನಿನ್ನಿಂದ ಪ್ರೇರಿತರಾಗಿಯೇ ಜ್ಞಾನಾನಂದಗಳನ್ನು ದೃಢವಾಗಿ ಹೊಂದುವೆವು. (ಅಂದರೆ ನಿನ್ನ ಪ್ರೇರಣೆಯಿಂದಲೇ ಜ್ಞಾನ ಆನಂದಗಳುಳ್ಳವರಾಗುವೆವು) ॥೩॥

**ಋ ॥ (೭೪) ವಯಂ ಶೂರೇಭಿರಸ್ತೃಭಿರಿಂದ್ರ ತ್ವಯಾ ಯುಜಾ ವಯಂ । ಸಾಸಹ್ಯಾಮ ಪೃತನ್ಯತಃ ॥** ॥೪॥

ಅ॥ ಇಂದ್ರ=ಇಂದ್ರನೇ, ತ್ವಯಾ ಯುಜಾ = ನೀನು ಸಖನಾಗಿರುವಾಗ, (ನಿನ್ನ ಪ್ರಸಾದದಿಂದಲೇ) ಶೂರೇಭಿಃ = ಶೂರರಾದ, ಅಸ್ತೃಭಿಃ = (ಅಸು ಕ್ಷೇಪಣೇ) ಅಸ್ತ್ರಗಳುಳ್ಳ (ಮಂತ್ರ ಅಥವಾ ಆಯುಧಗಳುಳ್ಳ) ಅಥವಾ ಆಯುಧವನ್ನು ಪ್ರಯೋಗಿಸುವ ಸ್ವಭಾವವುಳ್ಳ, ಚೆನ್ನಾಗಿ ಯುದ್ಧ ಮಾಡುವ ಭೃತ್ಯರಿಂದೊಡಗೂಡಿ, ಪೃತನ್ಯತಃ = (ಯುಧ ಸಂಪ್ರಹಾರಣೇ) ಯುದ್ಧ ಮಾಡುವ ಶತ್ರುಗಳನ್ನು ವಯಂ = ನಾವು, ಸಾಸಹ್ಯಾಮ = ಅತಿಶಯವಾಗಿ ಪುನಃ ಪುನಃ ಸಹಿಸುವೆವು. ಮತ್ತು ಅವರಿಗೆ ಅಭಿಮುಖರೇ ಆಗುವೆವು ಮತ್ತು ವಯಂ = ನಾವು, ತ್ವಯಾ ಏವ = ನಿನ್ನ ಅಧೀನವಾದ ಸತ್ತಾವುಳ್ಳವರೇ ಆಗಿರುತ್ತೇವೆ. ॥೪॥

**ಭಾ ॥ ತ್ವಯಾ ಪೃತನ್ಯತಃ ಶತ್ರೂನಭಿಷ್ಯಾಮ ಸುಯೋದ್ಧೃಭಿಃ** ॥೪॥

ನಿನ್ನ ಪ್ರಸಾದದಿಂದಲೇ ಚೆನ್ನಾಗಿ ಯುದ್ಧಮಾಡುವ ಭೃತ್ಯರಿಂದೊಡಗೂಡಿ ಯುದ್ಧ ಮಾಡುವ ಶತ್ರುಗಳನ್ನು ಇದಿರಾಗಿ ಹೋಗುವೆವು. ॥೪॥

**ಋ ॥ (೭೫) ಮಹಾಇಂದ್ರಃ ಪರಶ್ಚನು ಮಹಿತ್ವಮಸ್ತು ವಜ್ರಿಣೇ । ದ್ಯೌರ್ನ ಪ್ರಥಿನಾ ಶವಃ** ॥೫॥೧೫॥

ಅ॥ ನು = ಯಾವ ಕಾರಣದಿಂದ, ಇಂದ್ರಃ = ಈ ಶ್ರೀವಿಷ್ಣುವು ಮಹಾನ್ = ಅನಂತ ಗುಣಗಳುಳ್ಳವನೋ, ಪರಶ್ಚ = ಅನಾದಿಯೋ, (ಸರ್ವ ಕಾಲದಿಂದಲೂ ನಾಶವಿಲ್ಲದವನೋ) (ಸರ್ವದಾ ಇರುವವನೋ) ಪ್ರಥಿನಾ= ವ್ಯಾಪ್ತಿಯಿಂದ, ದ್ಯೌರ್ನ=ಆಕಾಶದಂತೆ, ದೇಶದಿಂದಲೂ ನಾಶವಿಲ್ಲದವನೋ, (ಸರ್ವತ್ರವ್ಯಾಪ್ತನೋ) ಶವಃ = ಸುಖ ಸ್ವರೂಪನೂ ಬಲಸ್ವರೂಪನೂ ಆಗಿರುತ್ತಾನೋ, (ಆದ ಕಾರಣ) ಮಹಿತ್ವಂ =ಸರ್ವೋತ್ತಮವಾದ ಬ್ರಹ್ಮತ್ವವು ವಜ್ರಿಣೇ = ವಜ್ರೀ ಎನಿಸಿಕೊಂಡ, ಶ್ರೀ ವಿಷ್ಣುವಿಗೇನೇ ಅಸ್ತು = ಇರಲಿ. (ಆತನಿಗೇನೇ ಬ್ರಹ್ಮತ್ವವನ್ನು ತಿಳಿಯಬೇಕು) ಜೀವನಿಗೆ ಬ್ರಹ್ಮತ್ವವನ್ನು ಸ್ಮರಿಸಬಾರದು. ॥೫॥

**ಭಾ ॥ (೧) ಯಸ್ಮಾನ್ಮಹಾನನಾದಿಶ್ಚ ವಿಷ್ಣುರ್ಜೀವೋಽವರಸ್ತಥಾ । ತಸ್ಮೈ ವಾಸ್ತು ಮಹತ್ತ್ವಂ ತನ್ನ ಜೀವ ಬ್ರಹ್ಮತಾಂ ಸ್ಮರೇತ್ ॥ ಆಕಾಶವತ್ಪ್ರಥಿಮ್ನಾಽಸೌ ಶವಃ ಸುಖಬಲೇ ತಥಾ** ॥೫॥೧೫॥

ಅ॥ ಯಾವ ಕಾರಣದಿಂದ ಶ್ರೀ ವಿಷ್ಣುವು ಸರ್ವಶ್ರೇಷ್ಠನೋ, ದೇಶ ಕಾಲಗಳಿಂದ ಅನಾದಿಯೋ, ವ್ಯಾಪ್ತಿಯಿಂದ ಆಕಾಶದಂತೆ ಇರುವವನೋ, ಹಾಗೆಯೇ, (ಶವಃ =ನಿತ್ಯಾಭಿವ್ಯಕ್ತವಾದ ಸುಖ ಬಲ ಸ್ವರೂಪನೋ ಹಾಗೆಯೇ ಜೀವನು ಗುಣಾದಿಗಳಿಂದ ಅವರನೋ ಆದ ಕಾರಣ ಅಂತಹ ಶ್ರೀ ವಿಷ್ಣುವಿಗೇನೇ ಸರ್ವಗುಣ ಪರಿಪೂರ್ಣತ್ವರೂಪವಾದ ಬ್ರಹ್ಮತ್ವವು ಇರಲಿ (ಬ್ರಹ್ಮತ್ವವನ್ನು ತಿಳಿಯಬೇಕು) ಅಧಮರಾದ ಜೀವರಿಗೆ ಬ್ರಹ್ಮತ್ವವನ್ನು ಸರ್ವಥಾ ಸ್ಮರಿಸಬಾರದು (ತಿಳಿಯಬಾರದು) ॥೫॥೧೫॥

**ಋ ॥ (೭೬) ಸಮೋಹೇ ವಾ ಯ ಆಶತ ನರಸ್ತೋಕಸ್ಯ ಸನಿತೌ । ವಿಪ್ರಾಸೋ ವಾ ಧಿಯಾಯವಃ ॥೬॥**

ಅ ॥ ಯೇ=ಯಾರು, ಸಮೋಹೇ = (ವಹಪ್ರಾಪಣೇ) ಅನ್ಯರ ಪ್ರೇರಣೆಯಿಂದಲೂ, (ಅಂದರೆ ಇತರರಿಂದ ಪ್ರೇರಿರಾದಾಗ್ಯೂ) ತೋಕಸ್ಯ =ಜ್ಞಾನವೆಂಬ ಅಪತ್ಯದ, ಸನಿತೌ =ಲಾಭವಾಗುತ್ತಿರಲು, ಆಶತ= (ಅಶೂ ವ್ಯಾಪ್ತೌ ಸಂಘಾತೇಚ) (ಶ್ರೀ ವಿಷ್ಣುವನ್ನು ಶರಣು) ಹೊಂದಿದರೋ, (ಅವರೇ) ನರಃ = ಪುರುಷರು. (ಇತರರು ಪಶುಗಳು) ಮತ್ತು, ಧಿಯಾಯವಃ =ಯಾರು ಬುದ್ಧಿಯುಕ್ತರೋ, (ಭಗವಜ್ಜ್ಞಾನಿಗಳೋ,) (ಅವರೇ) ವಿಪ್ರಾಸಃ =ವಿಪ್ರರು. (ಬ್ರಾಹ್ಮಣರು) ಭಗವಜ್ಜ್ಞಾನಿಗಳು. (ಭಗವಜ್ಜ್ಞಾನವಿಲ್ಲದವರು ತಾವೇ ಪಂಡಿತರೆಂದು ತಿಳಿದವರು ಯಾರು ಮೂರ್ಖರೋ, ಅವರು ಶೂದ್ರರಿಗೆ ಸಮಾನರು.) ॥೬॥

**ಭಾ ॥ ಅನ್ಯಸಂವಹನೇನಾಪಿ ಯೇ ತಂ ಪ್ರಾಪ್ತಾ ಜನಾರ್ದನಂ । ಜ್ಞಾನಲಾಭೇನತು ನರಸ್ತ ಏವ ಪಶವೋಽಪರೇ ॥**
**ವಿಪ್ರಾಶ್ಚೈವ ಧಿಯಾ ಯುಕ್ತಾ: ಮೂರ್ಖಾ: ಶೂದ್ರ ಸಮಾ ಮತಾಃ ॥೬॥**

ಅ॥ ಯಾರು ಅನ್ಯರ ಪ್ರೇರಣೆಯಿಂದಲೂ, (ಅನ್ಯರಿಂದ ಪ್ರೇರಿತರಾದಾಗ್ಯೂ) ಜ್ಞಾನವೆಂಬ ಮಗುವಿನ ಪ್ರಾಪ್ತಿಯಿಂದ (ಸತ್ಪುತ್ರನು ನರಕದಿಂದ ಉದ್ಧರಿಸುವನು, ಜ್ಞಾನವಾದರೂ ಸ್ವರೂಪವನ್ನೇ ಉದ್ಧರಿಸುವುದರಿಂದ ಜ್ಞಾನವೇ ಮುಖ್ಯ ಸತ್ಪುತ್ರನು.) ಯಾರು ಆ ಜನಾರ್ದನನನ್ನು ಶರಣು ಹೊಂದುತ್ತಾರೋ, ಅವರೇ ಪುರುಷರು. ಇತರರು ಪಶುಪ್ರಾಯರು. ಯಾರು ಭಗವಜ್ಜ್ಞಾನಿಗಳೋ, ಅವರೇ ವಿಪ್ರರು. ಯಾರು ತಾವೇ ಪಂಡಿತರು ಎಂದು ತಿಳಿದ ಮೂರ್ಖರೋ, ಅವರು ಶೂದ್ರರಿಗೆ ಸಮಾನಿಕರು. ॥೬॥

**ಋ ॥ (೭೭) ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ । ಉರ್ವೀರಾಪೋ ನ ಕಾಕುದಃ ॥೭॥**

ಅ॥ (ಅ ಶ್ರೀ ಹರಿಯ) ಯಃ ಕುಕ್ಷಿಃ =ಯಾವ ಕುಕ್ಷಿಯು ಸೋಮಪಾತಮಃ = ಅತಿಶಯವಾಗಿ ಸೋಮಪಾನ ಮಾಡತಕ್ಕುದೋ, ಅದು, ಸಮುದ್ರ ಇವ =ರತ್ನಾಕರದಂತೆ, ಪಿನ್ವತೇ = (ಪಿವಿ ಸೇಚನೇ) ಯಾವ ಯಾಜ್ಞಿಕನ ಸೋಮವನ್ನು ಪಾನ ಮಾಡುತ್ತದೋ ಆತನಿಗೆ ಸಮಸ್ತ ಕಾಮಗಳನ್ನು ಸುರಿಸುತ್ತದೆ. ಕೊಡುತ್ತದೆ. (ಆ ಶ್ರೀ ಹರಿಯ) ಕಾಕುದಃ = ನಾಲಿಗೆಗಳು, ಉರ್ವೀ = ಬಹಳಗಳಾದ, ಆಪೋನ =ಮಹಾ ಜಲಗಳಂತೆಯೇ. (ಭಕ್ತರಿಗೆ ತೃಪ್ತಿಯನ್ನು ಹೊಂದಿಸುವವುಗಳು.) (ಶ್ರೀ ಹರಿಗೆ ಬಹುಮುಖಗಳಲ್ಲಿ ಬಹು ನಾಲಗೆಗಳು ಇದ್ದುದರಿಂದ ಕಾಕುದಃ ಎಂದು ಬಹುವಚನವು ಕೂಡುತ್ತದೆ.) ॥೭॥

**ಭಾ ॥ ಯಃ ಕುಕ್ಷಿಸ್ತಸ್ಯ ದೇವಸ್ಯ ಸಮುದ್ರ ಇವ ಸೋಃ ಖಿಲಾನ್ । ಕಾಮಾನ್ ಕ್ಷರತಿ ಭಕ್ತಾಯ ಮಹಾಪ ಇವ ತರ್ಪಕಾಃ॥**
**ಕಾಕುದಪ್ತಸ್ಯ ಜಿಹ್ವಾಃ ಸ್ಯುರ್ಬಹ್ವ್ಯೋ ಬಹುಮುಖೇಷು ಯಾಃ ॥೭॥**

ಅ॥ ಅತಿಶಯವಾಗಿ ಸೋಮಪಾನ ಮಾಡತಕ್ಕುದು ಅಥವಾ ಪಾನ ಮಾಡಲ್ಪಟ್ಟ ಸೋಮವನ್ನು ರಕ್ಷಿಸತಕ್ಕುದು ಯಾವುದು ಶ್ರೀ ಹರಿಯ ಕುಕ್ಷಿಯು (ಹೊಟ್ಟೆಯು) ಇದೆಯೋ, ಅದು ರತ್ನಾಕರದಂತೆಯೇ ಶ್ರೀ ಹರಿಯ ಕುಕ್ಷಿಯಲ್ಲಿ ಸೋಮವನ್ನು ಸಮರ್ಪಿಸಿರತಕ್ಕ ಭಕ್ತರಿಗೆ ಸಮಸ್ತ ಕಾಮಗಳನ್ನೂ ಸರ್ವದಾ ಕೊಡುತ್ತಿರುತ್ತದೆ. ಮತ್ತು (ಕಕುದ್ ತಾಲು

(ದವಡೆ)ಯಲ್ಲಿ ಹುಟ್ಟತಕ್ಕ) ಆ ಶ್ರೀ ಹರಿಯ ನಾಲಗೆಗಳು ಕಾಕುದಃ ಎನಿಸುತ್ತವೆ. ಅವುಗಳು ಮಹಾ ಜಲಗಳಂತೆಯೇ ಭಕ್ತರಿಗೆ ತೃಪ್ತಿಯನ್ನು ಹುಟ್ಟಿಸುತ್ತವೆ. (ಶ್ರೀ ಹರಿಯೂ ಒಬ್ಬನೇ. ಆತನ ನಾಲಿಗೆಯೂ ಒಂದೇ. ಆದ ಕಾರಣ ಕಾಕುದಃ ಎಂದು ಬಹುವಚನವು ಹೇಗೆ ಕೂಡುತ್ತದೆ ಎಂದರೆ) ಸಹಸ್ರಶೀರ್ಷಾ ಪುರುಷಃ ಇತ್ಯಾದಿ ಉಕ್ತರೀತಿಯಾಗಿ ಶ್ರೀ ಹರಿಗೆ ಬಹುಮುಖಗಳು ಇದ್ದುದರಿಂದ ಅವುಗಳಲ್ಲಿ ನಾಲಿಗೆಗಳೂ ಬಹಳ ಇದ್ದ ಪ್ರಯುಕ್ತ, ಅವುಗಳು ಮಹಾ ಜಲಗಳಂತೆಯೇ ಭಕ್ತರಿಗೆ ತೃಪ್ತಿಯನ್ನು ಹೊಂದಿಸುತ್ತವೆ. ||೭||

**ಋ || (೭೮) ಏ ವಾ ಹ್ಯಸ್ಯ ಸೂನೃತಾ ವಿರಪ್ಶೀ ಗೋಮತೀ ಮಹೀ | ಪಕ್ವಾ ಶಾಖಾ ನ ದಾಶುಷೇ ||೮||**

ಅ || (ಯಾವ ನೀನು) ವಿರಪ್ಶೀ=ವಿಶಿಷ್ಟ ಬಲವುಳ್ಳವನೋ, `ಬಲಿಷ್ಠವಾದ ವಾಣಿಯನ್ನು ಪ್ರತಿಪಾದಿಸುವವನೋ' ಅಸ್ಯ = ಬಲಿಷ್ಠನಾದ ನಿನ್ನ ಸಂಬಂಧಿಯಾದ, ಗೋಮತೀ =ವಚನಗಳಿಂದ ಕೂಡಿದ (ವೇದಗಳಿಂದ ಕೂಡಿದ (ಸ್ತುತ್ಯವಾದ,) ಮಹೀ=ಮಹತ್ತಾದ, ಸೂನೃತಾ =ಯಾವುದು ಸಾಧುವಾದ ವಾಣಿಯೋ (ಅದೂ ಕೂಡ) ಏವಹಿ = ಹೀಗೆಯೇ ಕುಕ್ಷ್ಯಾದಿಗಳಂತೆಯೇ, ದಾಶುಷೇ = ಯಜಮಾನನಿಗೆ ಪಕ್ವಾ =ಪಕ್ವಫಲವುಳ್ಳ, ಶಾಖಾನ =ಕಲ್ಪತರು ಶಾಖೆಯಂತೆ, ಅಭೀಷ್ಟವನ್ನು ಕೊಡುತ್ತದೆ.) ||೮||

**ಭಾ || ಏವಮೇವಾಸ್ಯ ವಾಣೀ ಚ ವೇದೇತಾ ಮಹತೀ ತಥಾ | ಪಕ್ವಶಾಖೇವ ಯಜತೇ ವರದಾತ್ರೀ ವಿರಪ್ಶಿನಃ | ಬಲಿಷ್ಠಸ್ಯ ಹಿ ತೇ ||೮||**

ಅ|| ವಿರಪ್ಶಿನಃ =ವಿಶಿಷ್ಟ ಬಲವುಳ್ಳ ಈ ನಿನ್ನ ಸಂಬಂಧಿಯಾದ ವೇದಗಳಿಂದ ಸ್ತುತ್ಯವಾದ ಅತಿಶ್ರೇಷ್ಠವೂ ಪ್ರಶಸ್ತವೂ ಮಂಗಲ ರೂಪವೂ ಸತ್ಯವೂ ಪ್ರಿಯವೂ ಆದ ಮಾತು ಇದೆಯೋ, ಅದೂ ಕೂಡ ಕುಕ್ಷ್ಯಾದಿಗಳಂತೆಯೇ ಯಜಮಾನನಿಗೆ ಕಲ್ಪವೃಕ್ಷದ ಶಾಖೆಯಂತೆ ಸರ್ವಾಭೀಷ್ಟದಾಯಕವಾಗುತ್ತದೆ. ||೮||

**ಋ || (೭೯) ಏವಾ ಹಿ ತೇ ವಿಭೂತಯ ಊತಯ ಇಂದ್ರ ಮಾವತೇ | ಸದ್ಯಶ್ಚಿತ್ಸಂತಿ ದಾಶುಷೇ ||೯||**

ಅ|| ಇಂದ್ರ =ಇಂದ್ರನೇ, ತೇ ದಾಶುಷೇ =ನಿನ್ನನ್ನುದ್ದೇಶಿಸಿ (ಹವಿಸ್ಸು ಮೊದಲಾದುದನ್ನು ಕೊಡುವ ಮಾವತೇ = (ಮಾಜ್ ಮಾನೇ) ಜ್ಞಾನಿಗೆ ಕೊಡುವುದಕ್ಕಾಗಿ, ತೇ=ನಿನ್ನ ವಿಭೂತಯಃ =ಐಶ್ವರ್ಯಗಳು, ಊತಯಃ =ರಕ್ಷಣೆಗಳೂ ಕೂಡ, ಸದ್ಯಶ್ಚಿತ್ = ಈಗಲೂ ಕೂಡ, ನಿತ್ಯದಲ್ಲಿಯೂ ಸಂತ್ಯೇವ ಹಿ = ನಿಶ್ಚಯವಾಗಿಯೂ ಇವೆ. ||೯||

**ಭಾ || ಸಂತಿ ಸದ್ಯೋಽಪಿ ಯಜತೇ ಹಿ ತೇ | ಮಾವತೇ ಜ್ಞಾನಿನೇ ನಿತ್ಯಮೂತಯಶ್ಚ ವಿಭೂತಯಃ ||೯||**

ಅ|| ಎಲೋ ಇಂದ್ರನೇ, ನಿನ್ನನ್ನು ಕುರಿತು ಯಜ್ಞಮಾಡುವ (ಮಾವತೇ =)ಜ್ಞಾನಿಯಾದವನಿಗೆ ಕೊಡಲಿಕ್ಕಾಗಿ ನಿನ್ನ ಅಧೀನಗಳಾದ, ನೀನೇ ಸ್ವಾಮಿಯಾಗಿ ಉಳ್ಳ ಐಶ್ವರ್ಯಗಳೂ ನೀನು ಮಾಡತಕ್ಕ ರಕ್ಷಣೆಗಳೂ ಕೂಡ, ಸದ್ಯದಲ್ಲಿಯೂ ಅಂದರೆ ನಿತ್ಯದಲ್ಲಿಯೂ ನಿಶ್ಚಯವಾಗಿಯೂ ಭಕ್ತರ ವಿಷಯಕಗಳೇ ಆಗಿವೆ. ಭಕ್ತರಿಗೆ ಕೊಡುವುದಕ್ಕಾಗಿಯೇ ಇವೆ. (ತಾನು

ನಿತ್ಯದಲ್ಲಿಯೂ ಆನಂದ ಪೂರ್ಣನಾದುದರಿಂದ ತನ್ನ ಅನುಭವಕ್ಕಾಗಿ ಸರ್ವಥಾ ಅಲ್ಲ.) ||೯||

**ಋ || (೮೦) ಏವಾ ಹ್ಯಸ್ಯ ಕಾಮ್ಯಾ ಸ್ತೋಮ ಉಕ್ಥಂಚ ಶಂಸ್ಯಾ | ಇಂದ್ರಾಯ ಸೋಮಪೀತಯೇ ||೧೦||೧೬||೮||**

ಅ|| ಅಸ್ಯ = ಈ ಪರಮೇಶ್ವರನಿಗೆ, ಕಾಮ್ಯಾ = ಇಚ್ಛೆಗೆ ವಿಷಯಗಳಾದ, (ಪ್ರಿಯಗಳಾದ) ಉಕ್ಥಂ - ಉಕ್ಥಗಳು, (ಋಗ್ರೂಪಗಳು) ಸೋಮಪೀತಯೆ =ಸೋಮಪಾನಕ್ಕಾಗಿ, ಇಂದ್ರಾಯ ಇಂದ್ರನನ್ನುದ್ದೇಶಿಸಿ ಶಂಸ್ಯಾ = ಏವಹಿ = ಹೂಗಳಲರ್ಹಗಳೇ ಆಗಿವೆ. ಸ್ತೋಮಶ್ಚ =ಸಾಮ ವಿಶೇಷಗಳೂ ಕೂಡ, (ಇಂದ್ರನನ್ನುದ್ದೇಶಿಸಿ ಸೋಮಪಾನಕ್ಕಾಗಿ ಗಾನಾರ್ಹಗೇಳ ಆಗಿವೆ.) (ಸ್ತುತಿಯಿಂದ ಪ್ರಸನ್ನನಾದವನೇ ಸೋಮಪಾನ ಮಾಡುತ್ತಾನೆ. ಅಭಿಲಾಷೆಯಿಂದ ಸೋಮಪಾನ ಮಾಡುವುದಲ್ಲ.) ಅಪ್ತಕಾಮಸ್ಯ ಕಾಸ್ಪೃಹಾ ಎಂದು ಪ್ರಮಾಣವು) ||೧೦||

**ಭಾ || ಸ್ತೋಮಾ ಉಕ್ಥಾನಿ ಚೈವಾಸ್ಯ ತಸ್ಯೈ ಕಾಮ್ಯಾನಿ ಸರ್ವದಾ | ಗೇಯಾಃ ಶಂಸ್ಯಾನಿ ಸೋಮಸ್ಯ ಪೀತಯೇ ನಾನ್ಯಥಾ ಪಿಬೇತ್ ||೧೦||೧೬||೮||**

ಅ|| ಈ ಪರಮೇಶ್ವರನಿಗೆ ಪ್ರಿಯಗಳಾದ ಉಕ್ಥಗಳು (ಋಗ್ರೂಪ್ರಗಳು) ಸೋಮಪಾನಕ್ಕಾಗಿ ಇಂದ್ರನನ್ನುದ್ದೇಶಿಸಿ ಸರ್ವದಾಸ್ತುತ್ಯಗಳೇ ಆಗಿವೆ. ಸ್ತೋಮಗಳೂ (ಸಾಮವಿಶೇಷಗಳೂ) ಕೂಡ ಇಂದ್ರನನ್ನುದ್ದೇಶಿಸಿ ಗಾನಾರ್ಹಗಳೇ ಆಗಿವೆ. (ಸ್ತುತಿಯಿಂದ ಪ್ರಸನ್ನನಾಗಿಯೇ ಸೋಮಪಾನ ಮಾಡುತ್ತಾನೆ.) (ನಿತ್ಯದಲ್ಲಿಯೂ ಆನಂದ ಪೂರ್ಣನಾದುದರಿಂದ) ಆಪ್ತಕಾಮಸ್ಯ ಕಾಸ್ಪೃಹಾ ಇತ್ಯಾದಿ ಶ್ರುತಿಗಳಿಂದ ಅಭಿಲಾಷೆಯಿಂದ ಸೋಮಪಾನ ಮಾಡುವುದಲ್ಲ. ||೧೦||೧೬||೮||

ಅವ || ೧೦ ಋಕ್ಕು. ಐಂದ್ರಸೂಕ್ತವು.

**ಋ || (೮೧) ಇಂದ್ರೇಹಿ ಮತ್ಸ್ಯಂಧಸೋ ವಿಶ್ವೇಭಿಃ ಸೋಮಪರ್ವಭಿಃ | ಮಹಾ ಅಭಿಷ್ಟಿರೋಜಸಾ ||೧||**

ಅ|| (ಇಂದ್ರ ಆ ಇಹಿ ಎಂದು ವಿಭಾಗವು) ಇಂದ್ರ = ಪರಮೇಶ್ವರನೇ, ಓಜಸಾ = ಸಾಮರ್ಥ್ಯದಿಂದ, ಅಭಿಷ್ಟಿಃ - ಸರ್ವ ವಿಷಯದಲ್ಲಿಚ್ಛೆಯುಳ್ಳವನು. (ಸರ್ವ ಸಾಮರ್ಥ್ಯದಿಂದ ಸಮಸ್ತ ಜಗತ್ತು ಇಚ್ಛಾಧೀನನಾಗಿ ಉಳ್ಳವನು.) ಮಹಾನ್=ಸರ್ವೋತ್ತಮನು. (ಅಂತಹ ನೀನು) ವಿಶ್ವೇಭಿಃ = ಎಲ್ಲಾ, ಸೋಮಪರ್ವಭಿಃ = ಸೋಮಪಾನ ಮಾಡತಕ್ಕ ದೇವತೆಗಳಿಂದ ಕೂಡಿಕೊಂಡು, ಆ ಇಹಿ = ಬಾ. (ಬಂದು) ಅಂಧಸಃ = ನಾನು ಕೊಟ್ಟ ಹವಿಸ್ಸು ಮೊದಲಾದ ಅನ್ನ ಭೋಜನದಿಂದ, ಮತ್ಸಿ =ಸುಖವನ್ನು ಹೊಂದುವಿ ||೧||

**ಭಾ || (೧) ಸೋಮಪಾಃ ಸೋಮಪರ್ವಾಣಃ (೨) ಸರ್ವಂ ಯಸ್ಮಾತ್ಮದಿಚ್ಛಯಾ | ಅಭಿಷ್ಟಿ ರೋಜಸಾ ನಿತ್ಯಂ (೩) ಮದಂ ಸುಖಮವಾಪ್ಸ್ಯಸಿ ||೧||**

ಅ|| (೨) ಸೋಮಪಾನ ಮಾಡಿದವರು ಸೋಮಪರ್ವಾಣಃ ಎನಿಸುತ್ತಾರೆ. ಅಥವಾ ಸೋಮಸ್ಯ ಪರ್ವಾಣಿ ಅವದಾನಾನಿ ಯೇಷಾಂ ಎಂಬ ವ್ಯುತ್ಪತ್ತಿಯಿಂದ ಸೋಮವನ್ನು ಖಂಡಿಸುವವರು. (ಯಾರಿಗೆ ಯಾವುದು ಆಹಾರವೋ ಅದು

ಅವರದ್ದು ಆಗುತ್ತದೆ. ಆದ ಕಾರಣ ಸೋಮವು ಭೋಜ್ಯವು. ದೇವತೆಗಳು ಭೋಕ್ತೃಗಳು. ಹೀಗೆ ದೇವತೆಗಳು ಭೋಜ್ಯ ಭೋಕ್ತೃತ್ವರೂಪವಾದ ಸಂಬಂಧವುಳ್ಳವರಾದುದರಿಂದ ಸೋಮಪಾಃ ಎನಿಸುತ್ತಾರೆ. (೨) ಸರ್ವ ಸಾಮರ್ಥ್ಯದಿಂದ ಸಮಸ್ತ ಜಗತ್ತು ಯಾವ ಕಾರಣದಿಂದ ಶ್ರೀ ಹರಿಯ ಇಚ್ಛೆಯಿಂದಲೇ ಇರುತ್ತದೋ ಆದ ಕಾರಣ ಶ್ರೀ ಹರಿಯು ಅಭಿಷ್ಟಿಃ = ಎನಿಸುತ್ತಾನೆ. ಅಭಿತಃ = ಸರ್ವವಿಷಯದಲ್ಲಿ, ಇಷ್ಟಿಃ = ಇಚ್ಛೆಯುಳ್ಳವನು. (೩) ಮತಇ = (ಮದೀಹರ್ಷೇ) ನಿತ್ಯದಲ್ಲಿಯೂ ಮದಂ=ಸುಖವನ್ನು ಹೊಂದುವಿ ||೧||

ಋ || (೮೨) ಏಮೇನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ | ಚಕ್ರಿಂವಿಶ್ವಾನಿ ಚಕ್ರಯೇ ||೨||

ಅ|| (ಆ ಈಂ ಏನಂ ಎಂದು ಪದ ಚ್ಛೇದವು) (ಎಲೋ ಋತ್ವಿಜರೇ) ಏನಂ ಮಂದಿಂ =ಮದೀಹರ್ಷೇ) ಈ ಮದ (ಹರ್ಷ)ಕ್ಕೆ ಕಾರಣನಾದ, ಆ ಚಕ್ರಿಂ =ಚೆನ್ನಾಗಿ (ಜಗತ್ಸೃಷ್ಟ್ಯಾದಿ ಕರ್ಮಕ್ಕೆ ಸಾಧನನಾದ ಶ್ರೀ ವಿಷ್ಣುವನ್ನು ಮಂದಿನೇ = ಮದ ಸ್ವಭಾವವುಳ್ಳ, ವಿಶ್ವಾನಿಚಕ್ರಯೇ =ಜಗತ್ಸೃಷ್ಟ್ಯಾದಿ ಸಮಸ್ತ ಕಾರ್ಯಗಳನ್ನು ಮಾಡತಕ್ಕ ಇಂದ್ರಾಯ =ವಿಷ್ಣುವಿಗೋಸ್ಕರ, (ಶ್ರೀ ವಿಷ್ಣುವಿಗೆ ಪಾನಕ್ಕಾಗಿ) ಸುತೇ = ಚಂದ್ರನಿಂದ ಅಭಿಮನ್ಯಮಾನವಾದ ಸೋಮಲತೆಯಲ್ಲಿ ಅಸೃಜತ ಈಂ =ಅಭಿಮಂತ್ರಣಾದಿಗಳಿಂದಲೂ ಅನುಸಂಧಾನದಿಂದಲೂ ಸನ್ನಿಹಿತನನ್ನಾಗಿ ಮಾಡಲೇಬೇಕು. (ಅಂದರೆ ತನ್ನ ಸನ್ನಿಧಾನದಿಂದ ಪವಿತ್ರವಾಗಿಯೇ ಮಾಡಲ್ಪಟ್ಟ ಸೋಮವನ್ನು ಶ್ರೀ ಹರಿಯು ಪಾನ ಮಾಡುತ್ತಾನೆ. ಆದ ಕಾರಣ ಶ್ರೀ ಹರಿಯ ಸನ್ನಿಧಾನವು ಹೇಗೆ ಆಗುವುದೋ, ಹಾಗೆ ಮಾಡಿರಿ. ||೨||

ಭಾ || ಏನಮಾಸೃಜತೇಂದೌ ಚ ವಿಷ್ಣುಂ ತಂ ಮದಕಾರಿಣಂ | ಮಂದಿನೇ ವಿಷ್ಣವೇ ಸಮ್ಯ ಕ್ಕರ್ಮಿಣಂ ಸರ್ವಕರ್ಮಿಣೇ ||೨||

ಅ|| ಎಲೋ ಋತ್ವಿಜರೇ, ಈ ಮಂದಕಾರಿಯಾದ, ಚೆನ್ನಾಗಿ ಜಗತ್ಸೃಷ್ಟ್ಯಾದಿ ಸಮಸ್ತ ಕರ್ಮಗಳನ್ನು ಮಾಡತಕ್ಕ, ಆ ಈ ಶ್ರೀ ವಿಷ್ಣುವನ್ನು ಮದ ಸ್ವಭಾವವುಳ್ಳ ಜಗತ್ಸೃಷ್ಟ್ಯಾದಿ ಸಮಸ್ತ ಕರ್ಮಗಳನ್ನು ಮಾಡತಕ್ಕ ವಿಷ್ಣುವಿಗೆ ಪಾನಕ್ಕಾಗಿ ಚಂದ್ರನಿಂದ ಅಭಿಮನ್ಯಮಾನವಾದ ಸೋಮಲತೆಯಲ್ಲಿ ಸನ್ನಿಹಿತನನ್ನಾಗಿ ಮಾಡಲೇಬೇಕು. (ತನ್ನ ಸನ್ನಿದಾನದಿಂದ ಪವಿತ್ರಿತವಾದ ಸೋಮವನ್ನೇ ಶ್ರೀ ಹರಿಯು ಪಾನಮಾಡುತ್ತಾನೆ. ||೨||

ಋ || (೮೩) ಮತ್ಸ್ವಾ ಸುಶಿಪ್ರ ಮಂದಿಭಿಃ ಸ್ತೋಮೇಭಿರ್ವಿಶ್ವಚರ್ಷಣೇ | ಸಚೈಷು ಸವನೇಷ್ವಾ ||೩||

ಅ|| ಸುಶಿಪ್ರ = ಶೋಭನ ಆನಂದವುಳ್ಳ, ವಿಶ್ವಚರ್ಷಣೇ =ಸರ್ವಜೀವ ನಿಯಾಮಕನೇ, ಏಷು ಸವನೇಷು = ಪ್ರಾತಸ್ಸವನ ಮೊದಲಾದ ಈ ಮೂರು ಸವನಗಳಲ್ಲಿ, ಸಚಾ = (ನಮ್ಮ ರಕ್ಷಣೆಯಿಂದ) ಒಡಗೂಡಿ, (ನಮ್ಮ ರಕ್ಷಣೆಯನ್ನು ಮಾಡುತ್ತಾ) ಮಂದಿಭಿಃ = ಮದ ಹೇತುಗಳಾದ, ಸ್ತೋಮೇಭಿಃ =ನಾವು ಮಾಡತಕ್ಕ ಸ್ತೋಮ (ಸ್ತುತಿ)ಗಳಿಂದ, ಆ ಮತ್ಸ್ವ=ಚೆನ್ನಾಗಿ ಸುಖವನ್ನು ಹೊಂದು. ||೩||

**ಭಾ || ಸ್ವಾನಂದ ವಿಶ್ವಜೀವೇಶ ಮತ್ಸ್ವಾಽಸ್ಮದ್ರಕ್ಷಯಾ ಸಹ ||೩||**

ಅ|| ಸ್ವರೂಪಭೂತ ಶೋಭನ ಆನಂದವುಳ್ಳ, ಸಮಸ್ತ ಜೀವರಿಗೆ ನಿಯಾಮಕನಾದ ಶ್ರೀ ಹರಿಯೇ, ನಮ್ಮ ರಕ್ಷಣೆಯನ್ನು ಮಾಡುತ್ತಾ ಚೆನ್ನಾಗಿ ಸುಖವನ್ನು ಹೊಂದು. ||೩||

**ಋ || (೮೪) ಅಸೃಗ್ರಮಿಂದ್ರ ತೇ ಗಿರಃ ಪ್ರತಿ ತ್ವಾಮುದಹಾಸತ । ಅಜೋಷಾ ವೃಷಭಂ ಪತಿಂ ||೪||**

ಅ|| ಇಂದ್ರ =ಎಲೋ ಶ್ರೀ ಹರಿಯೇ, ಅಜೋಷಾಃ = (ಜುಷೀಪ್ರೀತಿ ಸೇವನಯೋಃ) ನೀನು ಹೊರತು ಇನ್ನೊಬ್ಬರು ಸ್ತುತ್ಯರೂಪನಾಗಿ (ಇನ್ನೊಬ್ಬನು ಸ್ತುತ್ಯನು ಎಂಬ ನಿಮಿತ್ತದಿಂದ) ಎಲ್ಲಿಯೂ ಸರ್ವಥಾ ಸೇವ್ಯಗಳಾಗದಿರುವ, (ಅಂದರೆ ನೀನೇ ವೇದಗಳಿಂದ ಸ್ತುತ್ಯನು ಎಂಬ ಬುದ್ಧಿಯಿಂದ ಭಕ್ತರಿಂದ ವೇದಗಳು ಸೇವ್ಯಗಳು, ನಿನಗಿಂತ ಇನ್ನೊಬ್ಬನು ಸ್ತುತ್ಯನು ಎಂಬ ಬುದ್ಧಿಯಿಂದ ಸರ್ವಥಾ ಸೇವ್ಯಗಳಾಗದಿರುವ) ತೇ = ನಿನ್ನಿಂದ ಹೊರಟಿರುವ, ಗಿರಃ =ವೇದವಚನಗಳು, ಅಸೃಗ್ರಂ = ಯಾವಾಗಲೂ, ವೃಷಭಂ =ಸರ್ವಶ್ರೇಷ್ಠನಾದ, ಪತಿಂ =ತನಗೆ ಪತಿಯಾದ, ತ್ವಾಂ ಪ್ರತಿ =ನಿನ್ನನ್ನೇ, ಉತ್=ಚೆನ್ನಾಗಿ (ಸರ್ವರಿಗಿಂತಲೂ) ಮುಖ್ಯನನ್ನಾಗಿಯೇ, ಆಹಾ ಸತ (ಓಹಾಙ್ಗತೌ (ಹೊಂದಿದವು. (ಅಂದರೆ ನಿನ್ನಿಂದ ಉಚ್ಚರಿಸಲ್ಪಟ್ಟ ವೇದವಚನಗಳು ನಿನ್ನನ್ನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುವುದಕ್ಕಾಗಿಯೇ ನಾವು ಅವುಗಳನ್ನು ಉಚ್ಚರಿಸಿದ್ದು, ಎಂದು ತಾತ್ಪರ್ಯವು) ||೪||

**ಭಾ || ತನ್ನಿಃಸೃತಾ ವೇದವಾಚಸ್ತ್ವಾಂ ಪ್ರತ್ಯೇವಾಪ್ಯನಾರತಂ । ಉಚ್ಚೈರ್ಮುಖ್ಯತಯಾ ಸಮ್ಯಗ್ವಿಸೃಷ್ಟಾಃ ಸ್ವಪತಿಂ ಪ್ರತಿ ||**
**ಅಜೋಷಾಃ ಸ್ತುತ್ಯರೂಪೇಣ ತ್ವತ್ಸೇವ್ಯಾಸ್ತ್ವದೃತೇ ಕ್ವಚಿತ್ ||೪||**

ಅ|| ಶ್ರೀ ಹರಿಯೇ ನೀನು ಹೊರತು ಇನ್ನೊಬ್ಬನು ಸ್ತುತ್ಯನು ಎಂಬ ನಿಮಿತ್ತದಿಂದಲಾದರೂ ಎಲ್ಲಿಯೂ ಸರ್ವಥಾ ಸೇವಿಸಲ್ಪಡದಿರುವ ನಿನ್ನಿಂದ ಉಚ್ಚರಿಸಲ್ಪಟ್ಟಿರುವ ವೇದ ವಚನಗಳು ಯಾವಾಗಲೂ ತನಗೆ ಪತಿಯಾದ ನಿನ್ನನ್ನೇ ಸರ್ವೋತ್ತಮನನ್ನಾಗಿಯೇ ಮುಖ್ಯ ವೃತ್ತಿಯಿಂದ ಪ್ರತಿಪಾದಿಸುವುದಕ್ಕಾಗಿಯೇ ನಮ್ಮಿಂದ ಚೆನ್ನಾಗಿ ಉಚ್ಚರಿಸಲ್ಪಟ್ಟಿವೆ. ||೪||

**ಋ || (೮೫) ಸಂಚೋದಯ ಚಿತ್ರಮರ್ವಾಗ್ರಾಧ ಇಂದ್ರ ವರೇಣ್ಯಂ । ಅಸದಿತ್ತೇ ವಿಭು ಪ್ರಭು ||೫||೧೭||**

ಅ || ಇಂದ್ರ = ಶ್ರೀ ಹರಿಯೇ, ಅರ್ವಾಕ್ =ಕೆಳಗಿರತಕ್ಕ ನಮ್ಮನ್ನು ಕುರಿತು, ಚಿತ್ರಂ =ಮಂಗಲಕರವಾದ, ವರೇಣ್ಯಂ = ಅಂಗೀಕರಿಸಲರ್ಹವಾದ, ರಾಧಃ =ಐಶ್ವರ್ಯವನ್ನು ಸಂಚೋದಯ = (ನಮಗೆ) ಚೆನ್ನಾಗಿ ಪ್ರೇರೇಪಿಸು. (ನಮಗೆ ಕೊಡು) (ಕೊಡಲಿಕ್ಕೆ) ತೇ = ನಿನಗೆ, ವಿಶಿಷ್ಟವಾಗಿರುವ, ಪ್ರಭು =ವಿಶೇಷತಃ ಅತಿಪ್ರಕೃಷ್ಟವಾಗಿರುವ ನಾಶವಿಲ್ಲದಿರುವ ಮಂಗಲವು, (ಸಾಮರ್ಥ್ಯವು) ಅಸದಿತ್ = (ಅಸಭುವಿ) ಉಂಟೇ ಉಂಟು ||೫||

**ಭಾ || ಅರ್ವಾಙ್ನೀಚಾನ್ಪ್ರತಿ ತ್ವಸ್ಮಾನ್ ಭದ್ರಂ ರಾಧಃ ಪ್ರಚೋದಯ । ಅಸ್ತ್ಯೇವ ತೇ ವಿಶೇಷೇಣ ಪ್ರಕೃಷ್ಟಂ ಶುಭಮಚ್ಯುತಂ ||೫||**

ಅ|| ಶ್ರೀ ಹರಿಯೇ ಕೇಳಗಿರತಕ್ಕ ನಮ್ಮನ್ನು ಕುರಿತು ಮಂಗಲಕರವಾದ ಐಶ್ವರ್ಯವನ್ನು ನಮಗೆ ಕೊಡು. ಕೊಡುವುದಕ್ಕಾಗಿ ನಿನಗೆ ವಿಶೇಷವಾಗಿ ಪ್ರಕೃಷ್ಟವಾದ ಬಹಳವಾದ ಸದಾ ಅಭಿವೃದ್ಧವಾದ ನಾಶವಿಲ್ಲದಿರುವ ಮಂಗಲವು (ಸಾಮರ್ಥ್ಯವು) ಉಂಟೇ ಉಂಟು. ||೫||೧೭||

ಋ || (೮೬) ಅಸ್ಮಾನ್ಸು ತತ್ರ ಚೋದಯೇಂದ್ರ ರಾಯೇ ರಭಸ್ವತಃ | ತುವಿದ್ಯುಮ್ನ ಯಶಸ್ವತಃ ||೬||

ಅ|| ತುವಿದ್ಯುಮ್ನ = ಮಹಾಕೀರ್ತಿಯುಳ್ಳ, ಇಂದ್ರ = ಇಂದ್ರನೇ, ರಭಸ್ವತಃ = (ರೇಭಶಬ್ದೇ) ಶಬ್ದವುಳ್ಳ (ಸ್ತುತಿಸುವ,) ಯಶಸ್ವತಃ =ಕೀರ್ತಿಯುಳ್ಳ, ಅಸ್ಮಾನ್ =ನಮ್ಮನ್ನು, ರಾಯೇ = (ರೈಶಬ್ದೇ) ಮಹೈಶ್ವರ್ಯ ಸ್ವರೂಪನಾದ, ತತ್ರ = ಅಂತಹ ನಿನ್ನಲ್ಲಿ, ಸು ಚೋದಯ = (ಚಂದಪ್ರೇರಣೇ) ಚೆನ್ನಾಗಿ ಪ್ರೇರೇಪಿಸು. (ನಿನ್ನಲ್ಲಿಯೇ ಬುದ್ಧ್ಯಾದಿಗಳು ಇರುವ ಹಾಗೆ ನಮ್ಮನ್ನು ಮಾಡು.) ||೬||

ಭಾ || ರಭಸ್ವತಃ ಶಬ್ದವತಃ ಸ್ತೋತ್ರ್ಯಾನಸ್ಮಾನ್ಯಶಸ್ವತಃ | ತತ್ರತ್ವಯಿ ಮಹಾರಾಯೇ ಮಹಾಕೀರ್ತೇ ಸು ಚೋದಯ|| ||೬||

ಅ|| ಮಹಾ ಕೀರ್ತಿಯುಳ್ಳ ಶ್ರೀ ಹರಿಯೇ, ರಭಸ್ವತಃ =ಶಬ್ದವುಳ್ಳ, ಅಂದರೆ ಸ್ತೋತ್ರ ಮಾಡುವ, ಕೀರ್ತಿಯುಳ್ಳ, ನಮ್ಮನ್ನು ಮಹೈಶ್ವರ್ಯ ಸ್ವರೂಪನಾದ, (ತತ್ರ=) ಅಂತಹ ನಿನ್ನಲ್ಲಿ ಪ್ರೇರೇಪಿಸು. (ನಿನ್ನ ವಿಷಯಕ ಬುದ್ಧ್ಯಾದಿಗಳಿಂದ ಕೂಡಿದವರನ್ನಾಗಿ ಮಾಡು) ||೭||

ಋ || (೮೭) ಸಂಗೋಮದಿಂದ್ರ ವಾಜವದಸ್ಮೇ ಪೃಥು ಶ್ರವೋ ಬೃಹತಂ | ವಿಶ್ವಾಯುರ್ಧೇಹ್ಯಕ್ಷಿತಂ ||೭||

ಅ|| ಇಂದ್ರ =ಇಂದ್ರನೇ, ವಿಶ್ವಾಯುಃ =ಸಂಪೂರ್ಣವಾದ ಆಯುಷ್ಯವುಳ್ಳ, ನಿತ್ಯನಾದ ನೀನು ಅಸ್ಮೇ=ನಮ್ಮಲ್ಲಿ, ಗೋಮತ್ =ಗೋವುಗಳಿಂದ ಕೂಡಿದ, ವಾಜವತ್ ಅನ್ನಾದಿಗಳಿಂದ ಕೂಡಿದ, ಅಕ್ಷಿತಂ -ನಾಶವಿಲ್ಲದಿರುವ, ಪೃಥು=ಅತಿಶಯವಾಗಿ ಬಹಳವಾದ, ಶ್ರವಃ=ಶ್ರವಣೇಂದ್ರಿಯದಿಂದ ಉಂಟಾದ ಜ್ಞಾನವನ್ನು ಸಂಧೇಹಿ = (ಡುದಾಞದಾನೇ) ಚೆನ್ನಾಗಿ ಕೊಡು. ||೭||

ಭಾ || ಅಸ್ಮಾಸ್ವತಿ ಬೃಹಜ್ಜ್ಞಾನಂ ನಿತ್ಯಂ ಸಂಧೇಹಿ ಜಾಕ್ಷಯಂ | ||೭||

ಅ || ಎಲೋ ಇಂದ್ರನೇ, ನಮ್ಮಲ್ಲಿ ನಾಶವಿಲ್ಲದಿರುವ ಅತಿ ಮಹತ್ತಾದ ಜ್ಞಾನವನ್ನು ಸರ್ವದಾ ಇಡು (ಕೊಡು).

ಋ || (೮೮) ಅಸ್ಮೇ ಧೇಹಿ ಶ್ರವೋ ಬೃಹದ್ದ್ಯುಮ್ನಂ ಸಹಸ್ರಸಾತಮಂ | ಇಂದ್ರ ತಾ ರಥಿನೀರಿಷಃ ||೮||

ಅ || ಇಂದ್ರ =ಇಂದ್ರನೇ, ಅಸ್ಮೇ = ನಮ್ಮಲ್ಲಿ, ಬೃಹತ್ ಶ್ರವಃ =ಮಹಾವಿದ್ಯೆಯನ್ನು, ಸಹಸ್ರ ಸಾತಮಂ = (ಸಹಸ್ರಪದೋಪಪದಾತ್ ವನಷಣ ಸಂಭಕ್ತೌ) ಅತಿಶಯವಾಗಿ ಸಹಸ್ರ ಲಾಭದಿಂದ ಕೂಡಿದ, (ಬಹುಲಾಭವನ್ನು

ಕೊಡತಕ್ಕ) ದ್ಯುಮ್ನ=ಕೀರ್ತಿಯನ್ನೂ, ರಥಿನೀ =ದೇಹವುಳ್ಳ, ಇಷಃ -ಅನ್ನಗಳನ್ನು, (ಅಂಗವೈಕಲ್ಯವಿಲ್ಲದಿರುವ ಆರೋಗ್ಯಯುಕ್ತವಾದ ದೇಹದಿಂದ ಕೂಡಿದ ಅನ್ನವನ್ನು) ಧೇಹಿ ಕೊಡು. ||೮||

**ಭಾ || (೧) ವಿದ್ಯಾಂ ಕೀರ್ತಿಂ ಸದೇಹಾನ್ನಂ ಬಹುಲಾಭಯುತಂ ಬೃಹತ್ (೨) ಪ್ರಾರ್ಥನೇ ಪೌನರುಕ್ತ್ಯಂ ನ ಚೋದಯೇತಿ ತತಃ ಪುನಃ ||೮||**

ಅ|| (೧) ಎಲೋ ಇಂದ್ರನೇ, ಮಹಾ ಜ್ಞಾನವನ್ನು ಬಹುಲಾಭಪ್ರದವಾದ ಶ್ರೇಷ್ಠವಾದ ಆರೋಗ್ಯವಿರುವ ದೇಹದಿಂದ ಕೂಡಿದ ಅನ್ನವನ್ನೂ, ಕೀರ್ತಿಯನ್ನೂ ಕೊಡು. (೨) ಸಂಚೋದಯಚಿತ್ರಂ ಚೋದಯ ಇತ್ಯಾದಿಗಳಿಂದ ಹೇಳಿದುದನ್ನೇ ತಿರುಗಿ ಸಂಧೇಹಿ ಇತ್ಯಾದಿಗಳನ್ನು ಹೇಳಿದುದರಿಂದ ಪುನರುಕ್ತಿ ದೋಷವು (ಎಂದರೆ ಪ್ರಾರ್ಥಿಸುವಾಗ ಪೌನರುಕ್ತ್ಯ ದೋಷವು) ಯಾವ ಕಾರಣದಿಂದ ಇಲ್ಲವೋ, ಆದ ಕಾರಣ ಚೋದಯ ಎಂದು ಹೇಳಿ ಪುನಃ ಸಂಧೇಹಿ ಇತ್ಯಾದಿ ವಚನವು ಕೂಡುತ್ತದೆ. (ಪುನಃ ಪುನಃ ಹೇಳಿದರೂ ಪ್ರಾರ್ಥನಾ ರೂಪವಾಗಿರುವುದರಿಂದ ಪುನರುಕ್ತಿ ದೋಷವಿಲ್ಲ) ||೮||

**ಋ || (೮೯) ವಸೋರಿಂದ್ರಂ ವಸುಪತಿಂ ಗೀರ್ಭಿರ್ಗೃಣಂತ ಋಗ್ಮಿಯಂ | ಹೋಮ ಗಂತಾರಮೂತಯೇ ||೯||**

ಅ|| ವಸೋಃ =ದೇವತೆಗಳಿಗೆ, ವಸುಪತಿಂ = (ವಸಂತಿ ದೇವಾಃ ಶರೀರೇಂದ್ರಿಯಾದಿಷು ಇತಿ ವಸವಃ ಎಂಬ ವ್ಯುತ್ಪತ್ತಿಯಿಂದ) ಯಾರು ದೇವತೆಗಳೋ ಅವರಿಗೆ ಅಧಿಪತಿಯಾದ, (ದೇವದೇವೇಶ್ವರನಾದ) ಋಗ್ಮಿಯಂ = (ಮಾ ಮಾನೇ) ಋಕ್ಕುಗಳಿಂದ ತಿಳಿಯಲರ್ಹನಾದ, ಇಂದ್ರಂ =ಶ್ರೀ ಹರಿಯನ್ನು ಗಂತಾರಂ =ಭಕ್ತರನ್ನು ಕುರಿತು ಹೋಗುವವನನ್ನಾಗಿ (ಭಕ್ತರಿಗೆ ಅಭೀಷ್ಟದಾಯಕನನ್ನಾಗಿ) ಗೀರ್ಭಿ= ವೇದ ವಚನಗಳಿಂದ ಗೃಣಂತಃ =ಸ್ತುತಿಸುವ ನಾವು, ಊತಯೇ =ಅಭೀಷ್ಟ ಸಿದ್ಧಿಗಾಗಿ, (ಶ್ರೀ ಹರಿಯನ್ನು) ಹೋಮ = (ಹ್ವೇಞ್‌ಶಬ್ದೇ) ಕರೆಯುತ್ತೇವೆ ||೯||

**ಭಾ || ವಸೋರ್ವಸೂನಾಂ ಚ ಪತಿಂ ದೇವದೇವೇಶ್ವರಂ ಪ್ರಭುಂ | ಋಜ್ಮೇಯಮಾಹ್ವಯಾ ವೋಽತ್ರ ಗೃಣಂತೋಽಭೀಷ್ಟಸಿದ್ಧಯೇ ||೯||**

ಅ|| ದೇವತೆಗಳಿಗೂ ಯಾರು ದೇವತೆಗಳೋ ಅವರಿಗೂ ಅಧಿಪತಿಯಾದ ಅಂದರೆ ದೇವದೇವೇಶ್ವರನೂ, ಋಕ್ಕುಗಳಿಂದ ಜ್ಞೇಯನೂ ಆದ ಶ್ರೀ ಹರಿಯನ್ನು ಅಭೀಷ್ಟ ಸಿದ್ಧಿಗಾಗಿ ನಾವು ಸ್ತುತಿಸುತ್ತಾ ಇಲ್ಲಿ ಕರೆಯುತ್ತೇವೆ. ||೯||

**ಋ || (೯೦) ಸುತೇ ಸುತೇ ನ್ಯೋಕಸೇ ಬೃಹದ್ಬೃಹತ ಏದರಿಃ | ಇಂದ್ರಾಯ ಶೂಷಮರ್ಚತಿ ||೧೦||೧೮||೯||**

ಅ|| ಅರಿಃ = (ರಿಜಕ್ಷಯೇ) ಅಥವಾ (ರಿಷಹಿಂಸಾಯಾಂ) (ನರಷ್ಯತಿ ನರೀಯತೇ ವಾ ಎಂಬ ವ್ಯುತ್ಪತ್ತಿಯಿಂದ) ಯಾವನು ನಾಶವಿಲ್ಲದವನೋ, (ತನಗೆ ಅವಿನಾಶವನ್ನು ಇಚ್ಛಿಸುವ ಪುರುಷನೋ) (ಆತನು) ಬೃಹತ್=ಬಹಳವಾದ, ಶೂಷಂ =ಸುಖವನ್ನುದ್ದೇಶಿಸಿ, ಸುತೇ ಸುತೇ =ಪ್ರತಿ ಸೋಮಸವನದಲ್ಲಿಯೂ, ಓಕಸೇ =ಸಜ್ಜನರಿಗೆ ಆಶ್ರಯನಾದ, ಬೃಹತೇ =ಸರ್ವಗುಣಪರಿಪೂರ್ಣನಾದ, ಇಂದ್ರಾಯ ಇತ್ =ಪರಮೇಶ್ವರನಿಗೋಸ್ಕರವೇ, ಆ ನಿ ಅರ್ಚತಿ =ಚೆನ್ನಾಗಿ

ಭಕ್ತಿಪೂರ್ವಕವಾಗಿ ಪೂಜಿಸುತ್ತಾನೆ. (ಅಂದರೆ ಇಷ್ಟಪ್ರಾಪ್ತಿ ಅನಿಷ್ಟ ಪರಿಹಾರಗಳನ್ನು ಇಚ್ಛಿಸುತ್ತಾ ಶ್ರೀ ಪರಮೇಶ್ವರನನ್ನೇ ಚೆನ್ನಾಗಿ ಪೂಜಿಸಬೇಕು.) ||೧೦||೧೪||೯||

ಭಾ || **ಅವಿನಾಶ್ಯರಿರುದ್ದಿಷ್ಟೋಽಬೃಹಚ್ಛೂಷಂ ಸುಖಂ ಪ್ರತಿ । ಸುತೇ ಸುತೇ ಸದ್ವ್ಯಹಾಯ ದೇವಾಯ ಭೃಪತೇಽರ್ಚತಿ ||೧೦||೧೪||೯||**

ಅ|| ತನಗೆ ಅವಿನಾಶವನ್ನು ಇಚ್ಛಿಸುವ ಪುರುಷನು ಅಥವಾ ದುರ್ಬುದ್ಧ್ಯಾದಿ ದೋಷಗಳಿಲ್ಲದಿರುವ ಪುರುಷನು ಅರಿಃ ಎನಿಸುತ್ತಾನೆ. ಬೃಹಚ್ಛೂಷಂ =ಮಹಾ ಸುಖವನ್ನುದ್ದೇಶಿಸಿ ಪ್ರತಿಸೋಮಸವನದಲ್ಲಿ, ಸಜ್ಜನರಿಗೆ ಆಶ್ರಯನಾದ, ಗುಣಪೂರ್ಣನಾದ, ಶ್ರೀ ಪರಮಾತ್ಮನನ್ನೇ ಇಷ್ಟಾನಿಷ್ಟ ಪ್ರಾಪ್ತಿ ಪರಿಹಾರಗಳನ್ನು ಇಚ್ಛಿಸುವ ಪುರುಷನು ಪೂಜಿಸಬೇಕು. ||೧೦||೧೪||೯||

ಅವ || ೧೨ ಋಕ್ಕು ಐಂದ್ರಸೂಕ್ತ, ಅನುಷ್ಟುಭ್ ಛಂದಸ್ಸು. ಅನುಷ್ಟುಪ್ ಛಂದಸ್ಸಿಗೆ ಬ್ರಹ್ಮಾಣೀ ರೋಹಿಣಿಯರು ಅಭಿಮಾನಿಯರು

ಋ || **(೯೧) ಗಾಯಂತಿ ತ್ವಾ ಗಾಯತ್ರಿಣೋಽರ್ಚಂತ್ಯರ್ಕಮರ್ಕಿಣಃ ।**

**ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ||೯||**

ಅ|| ಶತಕ್ರತೋ =ಬಹುಜ್ಞಾನವುಳ್ಳವನೇ, ಅರ್ಕಂ =ಅತಿಶಯವಾಗಿ ಸುಖರೂಪನಾದ, ತ್ವಾ = ನಿನ್ನನ್ನು ಗಾಯತ್ರಿಣಃ =ಗಾಯತ್ರ ಸಾಮವುಳ್ಳ ಸಾಮವೇದಿಗಳು ಗಾಯಂತಿ =ಗಾನಮಾಡುತ್ತಾರೆ. ಅರ್ಕಿಣಃ ಋಕ್ಕುಗಳುಳ್ಳ ಋಗ್ವೇದಿಗಳು, ತ್ವಾ =ನಿನ್ನನ್ನು ಅರ್ಚಂತಿ = (ಋಚಸ್ತುತೌ) ಋಕ್ಕುಗಳಿಂದ ಹೊಗಳುತ್ತಾರೆ. ಬ್ರಹ್ಮಾಣಃ = ಚತುರ್ಮುಖ ಬ್ರಹ್ಮರು, ಉತ್‌ವಂಶವಿರುವ - (ರಾಜಾದಿಗಳು ಬರುವ ಕಾಲದಲ್ಲಿ ಎತ್ತರವಾದ ಬಿದಿರಿಗೆ ವಸ್ತ್ರವನ್ನು ಜೋತಾಡಿಸಿ ಅದನ್ನು (ಅಂದರೆ ಮಕರ ತೋರಣವನ್ನು) ಪ್ರಾಸಾದಕ್ಕಿಂತಲೂ ಊರ್ಧ್ವದೇಶದಲ್ಲಿ ಸ್ಥಾಪಿಸುತ್ತಾರೆ. ಅಂತಹ ವಂಶಕ್ಕೆ ಶಕ್ರಕೇತುವೆಂದು ಹೆಸರು) ಶಕ್ರಕೇತುವನ್ನೆಂಬಂತೆ ಎತ್ತರನಾದವನನ್ನಾಗಿ (ಸರ್ವೋಚ್ಚನನ್ನಾಗಿ) ತ್ವಾ = ನಿನ್ನನ್ನು, ಯೇಮಿರೇ - ತಿಳಿದರು. ಅಥವಾ ಉತ್ ಯೇಮಿರೇ =ಸರ್ವೋತ್ತಮನೆಂದು ತಿಳಿದರು. ||೧||

ಭಾ || **ಗಾಯಂತಿ ಸಾಮಗಾಸ್ತ್ವೃಗ್ಭಿಃ ಶಂಶಂತ್ಯೃಗ್ವೇದಿನೋಽತಿಕಂ । ವಿರಿಂಚಾಸ್ತ್ವಾಂ ಬಹುಜ್ಞಾನ ಶಕ್ರಕೇತುಮಿವೋಚ್ಛ್ರಿತಂ। ವ್ಯಜಾನನ್ ||೧||**

ಅ|| ಬಹುಜ್ಞಾನವುಳ್ಳವನೇ, ಅತಿಶಯರೂಪನಾದ ನಿನ್ನನ್ನು, ಸಾಮವೇದಿಗಳು ಸಾಮಗಳಿಂದ ಗಾನ ಮಾಡುತ್ತಾರೆ. ಋಗ್ವೇದಿಗಳು ಋಕ್ಕುಗಳಿಂದ ಹೊಗಳುತ್ತಾರೆ. ಚತುರ್ಮುಖರು ಶಕ್ರಕೇತುವನ್ನೆಂಬಂತೆ ಉಚ್ಛ್ರಿತನನ್ನಾಗಿ (ಸರ್ವೋತ್ತಮನನ್ನಾಗಿ) ತಿಳಿದರು ||೧||

**ಋ ॥ (೯೨) ಯತ್ಸಾನೋಃ ಸಾನುಮಾರುಹದ್ಭೂರ್ಯಸ್ಪಷ್ಟ ಕರ್ತ್ವಂ ।**

**ತದಿಂದ್ರೋ ಅರ್ಥಂ ಚೇತತಿ ಯೂಥೇನ ವೃಷ್ಣಿರೇಜತಿ ॥೨॥**

ಅ ॥ ಅಸ್ಪಷ್ಟ=ಗೂಢ ಶಕ್ತಿಯುಳ್ಳವನೇ, ಯತ್=ಯಾವ ಕಾರಣದಿಂದ, (ನಿನಗೆ) ಕರ್ತ್ವಂ=ಕರಣದಲ್ಲಿ ಸಾಮರ್ಥ್ಯವು (ಸಾಮರ್ಥ್ಯ ಲಾಭವು.) ಕರ್ತೃತ್ವವು ಸಾನೋಃ ಸಾಮಂ ಆ ಅರುಹತ್=ಉತ್ತಮಕ್ಕಿಂತಲೂ ಉತ್ತಮವಾಯ್ತೋ, ಭೂರಿ=ಅದಕ್ಕಿಂತಲೂ ಅಧಿಕವಾದುದೂ ಆಯ್ತೋ, ತತ್=ಆ ಕಾರಣದಿಂದ, ವೃಷ್ಣಿಃ=ಅಭೀಷ್ಟಸೇಚಕನಾದ, ಇಂದ್ರಃ =ಇಂದ್ರನೆನಿಸಿದ ನೀನು, ಅರ್ಥಂ=ಸರ್ವ ಪದಾರ್ಥಗಳನ್ನು, ಚೇತತಿ=(ಚಿತೀಸಂಜ್ಞಾನೇ) ತಿಳಿಯುತ್ತಿ. ಯೂಥೇನ=ಮುಕ್ತಾಮುಕ್ತ ಸಮೂಹದಿಂದ, ಏಜತಿ= (ಏಜ್‌ದೀಪ್ತೌ) (ಏಜ್‌ಭ್ರೇಜ್ ಭ್ರಾಜ್ ದೀಪ್ತೌ) ಶೋಭಿಸುತ್ತಿ. (ಪೂರ್ಣ ಶಕ್ತಿಯಿಲ್ಲದೆ ಸರ್ವಜ್ಞತ್ವವೂ ಸರ್ವ ಸೇವ್ಯತ್ವವೂ ಕೂಡಲಾರದು.) ಅಥವಾ ಯತ್=ಯಾವ ಕಾರಣದಿಂದ, ಕರ್ತ್ವಂ=ಶ್ರೀಹರಿಯ ಕರ್ತೃತ್ವವು, ಸಾನೋಃ ಸಾನುಂ=ಉತ್ತಮಕ್ಕಿಂತಲೂ ಉತ್ತಮವಾದ, ಬ್ರಹ್ಮಾದಿ ದೇವತಾ ಸಮುದಾಯವನ್ನು, ಆ ಅರುಹತ್=ಹೊಂದಿತೋ. (ಶ್ರೀಹರಿಯು ಅವರಲ್ಲಿದ್ದು ನಿಖಿಲ ಕಾರ್ಯಗಳನ್ನು ಮಾಡುತ್ತಾನೋ) ತತ್=ಆ ಕಾರಣದಿಂದ, ತತ್=ಕರ್ತೃತ್ವವು, ಭೂರಿ ಅಸ್ಪಷ್ಟ=(ಸ್ಪಶ ಅಜ್ಞಾತ ದೃಶೌ) ನಿಸ್ಸಂಶಯವಾಗಿ ಸ್ಪಷ್ಟವಾಯ್ತು. (ಮೊದಲು ಅಜ್ಞಾತವಾದುದು ಈಗ ಜ್ಞಾತವಾಯ್ತು.) (ಶ್ರೀಹರಿಯು ಇತರರಲ್ಲಿ ಅಂತರ್ಗತನಾಗಿದ್ದನೆಂಬುದನ್ನು ಬಿಟ್ಟುಸಾಕ್ಷಾತ್ತಾಗಿ ಶ್ರೀಹರಿಯೇ ಕರ್ತನೆಂಬುವುದನ್ನು (ಅಂದರೆ ಈಶ್ವರಗತ ಕರ್ತೃತ್ವವನ್ನು) ಮಂದಮತಿಗಳು ತಿಳಿಯಲಾರರು.) ತತ್=ಶ್ರೀಹರಿಯು ಸರ್ವಕರ್ಮಗಳಿಗೆ ಕರ್ತನಾದುದರಿಂದಲೇ, ಇಂದ್ರಃ=ಶ್ರೀಹರಿಯು, ಅರ್ಥಂ=ಅಶೇಷಾರ್ಥಗಳನ್ನು, ಚೇತತಿ=ತಿಳಿಯುತ್ತಾನೆ. ವೃಷ್ಣಿಃ-ಅಭೀಷ್ಟ ಸೇಚಕನಾದ ಶ್ರೀಹರಿಯು, ಯೂಥೇನ=ಮತ್ಸ್ಯ ಮೊದಲಾದ ತನ್ನ ರೂಪಗಳ ಮಹಾ ಸಮೂಹದಿಂದ, ಏಜತಿ-(ಏಜ್ ಕಂಪನೇ) ವ್ಯಾಪಾರ ಮಾಡುತ್ತಾನೆ. (ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಾನೆ.)

**ಭಾ ॥ (೧) ಉಚ್ಚತೋಽಪ್ಯುಚ್ಚಂ ಸಾಮರ್ಥ್ಯಂ ಕರಣೇ ತವ । ತತೋಽಪಿ ಭೂರಿಯತ್ತೇನ ಚೇತತ್ಯರ್ಥಮತೋ ಭವಾನ್॥ ಮುಕ್ತಾಮುಕ್ತಸಮೂಹೇನ ಶೋಭತೇ ಗೂಢ ಶಕ್ತಿ (ಮ) ಮಾನ್ ॥ (೨) ಉಚ್ಚಾದುಚ್ಚಂ ವಿರಿಂಚಾದಿಗತಂ ಕರ್ತೃತ್ವಮೇವ ಯತ್ । ಭೂರಿಸ್ಪಷ್ಟಮಭೂತ್ತೇನ ಪರೇಶಸ್ಯ ತತಶ್ಚ ಸಃ । ಚೇತತ್ಯಾರ್ಥಾನಶೇಷಾಂಶ್ಚ ಮಹಾಯೂಥೇನ ಚೇಷ್ಟತೇ ॥೨॥**

ಅ ॥ (೧) ಗೂಢ ಶಕ್ತಿಯುಳ್ಳ ಶ್ರೀಹರಿಯೇ, ಯಾವ ಕಾರಣದಿಂದ ನಿನಗೆ ಸಾಮರ್ಥ್ಯ ಲಾಭವು ಉಚ್ಚವಾದ ಬ್ರಹ್ಮಾದಿಗಳ ಕರ್ತೃತ್ವಕ್ಕಿಂತಲೂ ಉಚ್ಚವಾಯ್ತೋ, (ಅಂದರೆ ಅದಕ್ಕಿಂತಲೂ ವಿಷ್ಣು ಕರ್ತೃತ್ವವು ಉತ್ತಮವೋ) ಬ್ರಹ್ಮಾದಿಗಳ ಕರ್ತೃತ್ವಕ್ಕಿಂತಲೂ ಅಧಿಕವೂ ಆಗಿಯದ್ದೋ, ಆದಕಾರಣ ಅತ್ಯುಚ್ಚವಾದ ಕರ್ತೃತ್ವವಿದ್ದ ಪ್ರಯುಕ್ತ ಭಕ್ತರಿಗೆ ಅಭೀಷ್ಟ ಸೇಚಕನಾದ ನೀನು ಸಮಸ್ತ ಪದಾರ್ಥಗಳನ್ನು ತಿಳಿಯುತ್ತಿ. ಆದುದರಿಂದಲೇ ಮುಕ್ತಾಮುಕ್ತರ ಸಮೂಹದಿಂದ ಶೋಭಿಸುತ್ತಿ. (ಅಂದರೆ ನಿರವಧಿಕ ಪೂರ್ಣ ಶಕ್ತಿಯಿಲ್ಲದೆ ಸರ್ವಜ್ಞತ್ವವೂ ಸರ್ವಸೇವ್ಯತ್ವವೂ ಕೂಡಲಾರದು.) (೨) (ಋಕ್ಕನ್ನು ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಯಾವ ಕಾರಣದಿಂದ ಶ್ರೀಹರಿಯ ಕರ್ತೃತ್ವವೇ, ಉತ್ತಮರಾದ

ಇಂದ್ರಾದಿಗಳಿಗಿಂತ ಉತ್ತಮರಾದ ಬ್ರಹ್ಮರುದ್ರಾದಿ ದೇವತಾ ಸಮೂಹಗಳನ್ನು ಹೊಂದಿತೋ, (ಅಂದರೆ, ಶ್ರೀಹರಿಯು ಬ್ರಹ್ಮಾದಿ ದೇವತೆಗಳಲ್ಲಿದ್ದು ಸೃಷ್ಟ್ಯಾದಿ ಕಾರ್ಯಗಳನ್ನು ಮಾಡುತ್ತಾನೋ,) ಆ ಕಾರಣದಿಂದಲೇ, ಶ್ರೀಹರಿಯ ಕರ್ತೃತ್ವವು ಅತಿಶಯವಾಗಿ ಸ್ಪಷ್ಟವಾಯ್ತು. (ಮೊದಲು ಅಜ್ಞಾತವಾದುದು ಈಗ ಜ್ಞಾತವಾಯ್ತು.) (ಅಂದರೆ-ಶ್ರೀಹರಿಯು ಬ್ರಹ್ಮಾದಿಗಳಲ್ಲಿ ಅಂತರ್ಗತನಾಗಿಯೇ ಕಾರ್ಯ ಮಾಡುವುದು ಹೊರತು ಸಾಕ್ಷಾತ್ ಶ್ರೀಹರಿಯೇ ಕರ್ತನೆಂಬುವುದನ್ನು (ಈಶ್ವರಗತ ಕರ್ತೃತ್ವವನ್ನು) ಮಂದರು ತಿಳಿಯಲಾರರು.) ಅಂತೂ ಸರ್ವಕಮಗ ಕರ್ತೃತ್ವವಿದ್ದ ಪ್ರಯುಕ್ತವೇ ಆ ಶ್ರೀಹರಿಯು ಅಶೇಷಾರ್ಥಗಳನ್ನು ತಿಳಿಯುತ್ತಾನೆ. ಮತ್ಸ್ಯ ಮೊದಲಾದ ಸ್ವಕೀಯ ರೂಪಗಳ ಸಮೂಹದಿಂದಲೇ ಸೃಷ್ಟ್ಯಾದಿ ವ್ಯಾಪಾರ ಮಾಡುತ್ತಾನೆ. ||೨||

ಋ || (೯೩) ಯುಕ್ಷ್ವಾ ಹಿ ಕೇಶಿನಾ ಹರೀ ವೃಷಣಾ ಕಕ್ಷ್ಯಪ್ರಾ ।
ಅಥಾ ನ ಇಂದ್ರ ಸೋಮಪಾ ಗಿರಾಮುಪಶ್ರುತಿಂ ಚರ ||೩||

ಅ || ಸೋಮಪಾಃ=ಸೋಮಪಾನ ಮಾಡತಕ್ಕ, ಇಂದ್ರ=ಇಂದ್ರನೇ, ಕೇಶಿನಾ=ಜೋತಾಡತಕ್ಕ ಕೇಶಗಳುಳ್ಳ, ವೃಷಣಾ=ರೇತಸ್ಸನ್ನು ಸೇಚಿಸುವ, (ತರುಣಗಳಾದ) ಕಕ್ಷ್ಯಪ್ರಾ= (ಪ್ರಾಪಾಲನ ಪೂರಣಯೋ?) (ಕಕ್ಷಗಳಲ್ಲಿರತಕ್ಕದ್ದು ಕಕ್ಷ್ಯಾ. ಯಾವ ಹಗ್ಗದಿಂದ ಅಶ್ವವು ಉರಃ ಪ್ರದೇಶದಲ್ಲಿ ಕಟ್ಟಲ್ಪಡುತ್ತದೋ, ಆ ಹಗ್ಗವು ಕಕ್ಷ್ಯಾ ಎನಿಸಿಕೊಳ್ಳುತ್ತದೆ. ಪುಷ್ಟವಾಗಿರುವುದರಿಂದ) ಕಕ್ಷ್ಯೆಯನ್ನು ಪೂರ್ಣಗೊಳಿಸತಕ್ಕ, (ಅಂದರೆ ತರುಣಗಳಾಗಿರುವುದರಿಂದ ಪುಷ್ಟದೇಹವುಳ್ಳ) ಹರೀ=ಅಶ್ವಗಳನ್ನು ಯುಕ್ಷ್ವಹಿ=ರಥದಲ್ಲಿ ಯೋಜಿಸಲೇಬೇಕು. ಅಥ= ಆಮೇಲೆ, (ಇಲ್ಲಿಗೆ ಬಂದು) ನಃ=ನಮ್ಮ, ಗಿರಾಂ=ಸ್ತುತಿರೂಪಗಳಾದ ವಚನಗಳ, ಉಪಶ್ರುತಿಂ=ಉಪಶ್ರವಣವನ್ನು ಚರ=ಮಾಡು. (ಸ್ತುತಿರೂಪಗಳಾದ ನಮ್ಮ ಮಾತನ್ನು ಕೇಳು.) ||೩||

ಭಾ || ಕಕ್ಷ್ಯಾಭಿಪೂರಕೌ ಪುಷ್ಟ್ಯಾ ಯುಂಕ್ಷ್ವತ್ವಂ ಕೇಶಿನೌ ಹರೀ। ಅಥೋಪಗಮ್ಯ ಶೃಣುನೋ ಗಿರಃ ||೩||

ಅ || ಜೋತಾಡತಕ್ಕ ಕೇಶಗಳುಳ್ಳ, ಪುಷ್ಟತ್ವ ನಿಮಿತ್ತದಿಂದ ಕಕ್ಷ್ಯೆಯನ್ನು ಪೂರ್ಣಗೊಳಿಸತಕ್ಕ, ಕುದುರೆಗಳನ್ನು, ರಥದಲ್ಲಿ ಯೋಜಿಸು ಆ ಮೇಲೆ ಇಲ್ಲಿಗೆ ಬಂದು ನಮ್ಮ ಸ್ತುತಿರೂಪಗಳಾದ ಮಾತುಗಳನ್ನು ಕೇಳು. ||೩||

ಋ || (೯೪) ಏಹಿ ಸ್ತೋಮಾ ಅಭಿಸ್ವರಾಭಿಗೃಣೀಹ್ಯಾರುವ ।
ಬ್ರಹ್ಮ ಚ ನೋ ವಸೋ ಸಚೇಂದ್ರ ಯಜ್ಞಂ ಚ ವರ್ಧಯ ||೪||

ಅ || ಇಂದ್ರ=ಇಂದ್ರನೇ, ಆ ಇಹಿ=ಬಾ ಸ್ತೋಮಾನ್=ಸ್ತುತಿಯನ್ನು, ಅಭಿಸ್ವರ=ಸೋಮವನ್ನು ಸ್ವೀಕಾರ ಮಾಡಿದ್ದನ್ನು ಅನುಸರಿಸಿ ಧ್ವನಿ ಮಾಡು. ಅಭಿಗೃಣೀಹಿ=(ಗೃಶಬ್ದೇ) ಎಲೈ ಸ್ತೋತೃಗಳಿರಾ ನೀವು ಚೆನ್ನಾಗಿ ಮಾಡಿದಿರಿ,

ಎಂದು ನಮ್ಮ ಪ್ರಶಂಸೆ ವಾಕ್ಯವನ್ನುಚ್ಚರಿಸು. (ನಮ್ಮನ್ನು ಸ್ತುತಿಸು.) ಆರುವ=(ರುಶಬ್ದೇ) ಪುನಃ ಹರ್ಷದಿಂದ ಮಹತ್ತರವಾದ ಶಬ್ದವನ್ನು ಮಾಡು. ಹೇವಸೋ=ಸರ್ವತ್ರ ಆವಾಸ ಮಾಡುವವನೇ, ಸರ್ವ ವಸ್ತುಗಳ ಹೊರಗೂ ಒಳಗೂ ಇರುವವನೇ, ನಃ=ನಮ್ಮ, ಬ್ರಹ್ಮ ಚ=ವೇದವನ್ನು, ಸ್ತುತಿಯನ್ನು, ಯಜ್ಞಂ ಚ=ಯಾಗವನ್ನು, ಸಚಾ=(ಷಚಸೇಚನೇ, ಸೇವನೇಚ) ಕೂಡಿಕೊಂಡೇ, ಸುಖವೇ ಮುಖ್ಯ ಸೇವ್ಯವಾಗಿರುವುದುಂದ ಸುಖದಿಂದಲೇ, ವರ್ಧಯ=ಪ್ರವರ್ತಿಸು. ||೪||

ಭಾ || ಅಭಿಸ್ವರ ಚ ಸ್ತುತಿಂ । ಪ್ರಶಂಸಾಂ ಕುರು ಶಬ್ದಂ ಚ ಪುನರ್ಹರ್ಷಾನ್ಮಹತ್ತರಂ । ಬ್ರಹ್ಮ ಯಜ್ಞಂ ಚ ನೋಽಂತಸ್ಥೋ ಬಹಿಷ್ಮಶ್ಚೈವ ವರ್ಧಯ ||೪||

ಅ || ಸ್ತುತಿಯನ್ನು ಮಾಡು. (ಸೋಮದ ಸ್ವಾಕಾರಾನುಸಾರವಾಗಿ ಧ್ವನಿಮಾಡು.) ಚೆನ್ನಾಗಿ ಮಾಡಿದಿರಿ ಎಂದು ನಮ್ಮ ಪ್ರಶಂಸೆಯನ್ನು ಮಾಡು. ಪುನಃ ಹರ್ಷದಿಂದ ಮಹತ್ತರವಾದ ಶಬ್ದವನ್ನು ಮಾಡು. ಸಮಸ್ತ ವಸ್ತುಗಳ ಒಳಗೂ ಹೊರಗೂ ಇದ್ದವನಾಗಿ ನಮ್ಮ ವೇದವನ್ನು ಸ್ತುತಿಯನ್ನು ಯಜ್ಞವನ್ನು ಕೂಡ ಪ್ರವರ್ತಿಸು. ||೪||

ಋ || (೯೫) ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಃಷಿಧೇ ।

ಶಕ್ರೋ ಯಥಾ ಸುತೇಷು ಣೋ ರಾರಣತ್ಸಖ್ಯೇಷು ಚ ||೫||

ಅ || ಪುರುನಿಃ ಷಿಧೇ=(ನಿಸ್ ಶಬ್ದಾತ್ ಷಿಧುಗತ್ಯಾಂ) ಶತ್ರುಗಳನ್ನು ಬಹಳವಾಗಿ ನಿಷೇಧಿಸುವವನು (ಅಂದರೆ ದನುಜರನ್ನು ಸಂಹರಿಸುವವನು ಇಂತಹ) ಇಂದ್ರಾಯ ಪರಮೇಶ್ವರನಿಗೋಸ್ಕರ, ವರ್ಧನಂ=ಶ್ರೀಹರಿಗೇನೆ ವೃದ್ಧಿಯನ್ನು ಮಾಡುವ, ವೃದ್ಧಿಸಾಧನವಾದ (ಅಂದರೆ ಪ್ರಕಾಶವನ್ನು ಮಾಡುವ ಗುಣಗಳನ್ನು ತೋರಿಸುವ) ಉಕ್ಥಂ=ಉಕ್ಥನಾಮಕ ಋಕ್ಕುಗಳ ಸಮುದಾಯವನ್ನು ಶಂಸ್ಯಂ=ಹೊಗಳಬೇಕು. ಶಕ್ರಃ=ಆ ಇಂದ್ರನು, ಯಥಾ=ಹೇಗೆ, ಸುತೇಷು=ಸೋಮಗಳು ಹಿಂಡಲ್ಪಡುತ್ತಿರಲು, ರಾರಣತ್=(ರಣಶಬ್ದೇ) ಶಬ್ದ ಮಾಡುತ್ತಾನೋ, (ಅಂದರೆ ಋತ್ವಿಕ್‌ಗಳಲ್ಲಿದ್ದವನಾಗಿ ಸ್ತುತಿಯನ್ನು ಪ್ರವೃತ್ತಿಮಾಡುಸುತ್ತಾನೋ) ಹೀಗೆಯೇ) ನಃ ಸಖ್ಯೇಷು=ನಮ್ಮ ಮೈತ್ರ್ಯಕ್ಕಾಗಿ, (ರಾರಣತ್=(ರಣಶಬ್ದೇ) ಶಬ್ದ ಮಾಡಿದನು. (ಅಂದರೆ ನಮ್ಮಲ್ಲಿದ್ದು ನಾನು ಸಖನಾಗಿರುತ್ತೇನೆಂದು ಮಾಡಿದನು.) ||೫||

ಭಾ || (೧) ನಿತ್ಯವೃದ್ಧತ್ವತೋಽವಿಷ್ಣೋರ್ವರ್ಧನಂ ತು ಪ್ರಕಾಶನಂ || (೨) ಬಹುಶತ್ರೂನ್ನಿಷ್ಕಿದಸೌ ಹರಿರ್ದನುಜಘಾತ್ಸಕಃ|| (೩) ಅಸ್ಸತಖ್ಯಾಯ ಶಬ್ದಂಚ ಚಕಾರಾಸ್ಮಾಸು ಸಂಸ್ಥಿತಃ । ಯಥಾ ಸುತೇಷು ಸೋಮೇಷು ಕರೋತ್ಯೃತ್ವಿಕ್ಷು ಚ ಸ್ಥಿತಃ ||೫||

ಅ || (೧) ಶ್ರೀ ಹರಿಯು ನಿತ್ಯದಲ್ಲಿಯೂ ಅಭಿವೃದ್ಧನೇ ಆಗಿರುವುದರಿಂದ ಅವನಿಗೆ ವರ್ಧನವೆಂದರೆ ಪ್ರಕಾಶನವು. (ಪ್ರಕಾಶಕರವು) ಗುಣಗಳನ್ನು ಪ್ರಕಾಶ ಗೊಳಿಸುವುದು) (೨) ಶ್ರೀಹರಿಯು ಬಹು ಶತ್ರುಗಳನ್ನು ನಿಷೇಧಿಸಿರುವನು. (ಅಂದರೆ) ದಾನವರನ್ನು ನಾಶಗೊಳಿಸಿರುವನು (೩) ಹೇಗೆ ಸೋಮಗಳು ಹಿಂಡಲ್ಪಡುತ್ತಿರಲು ಋತ್ವಿಜರಲ್ಲಿದ್ದವನಾಗಿ ಸ್ತುತಿಗಳನ್ನು ಪ್ರವೃತ್ತಿಮಾಡಿಸುತ್ತಾನೋ, ಹೀಗೆಯೇ ನಮ್ಮ ಸಖ್ಯಕ್ಕಾಗಿ ನಮ್ಮಲ್ಲಿದ್ದವನಾಗಿ ನಾನು ಗೆಳೆಯನಾಗಿರುತ್ತೇನೆಂದು ಶಬ್ದ ಮಾಡಿದನು. ||೫||

ಋ ॥ (೯೬) ತಮಿತ್ಸಖಿತ್ವ ಈಮಹೇ ತಂ ರಾಯೇ ತಂ ಸುವೀರ್ಯೇ ।

ಸ ಶಕ್ರ ಉತನಃ ಶಕದಿಂದ್ರೋವಸು ದಯಮಾನಃ ॥೬॥ ೧೯॥

ಅ॥ ತಮಿತ್ = ಆ ಇಂದ್ರನನ್ನೇ, ಸಖಿತ್ವೇ = ಮೈತ್ರ್ಯಕ್ಕಾಗಿ, ಈಮಹೇ = (ಈಜ ಗತೌ) (ನಿತ್ಯದಲ್ಲಿಯೂ ಶರಣು) ಹೊಂದುತ್ತೇವೆ. ರಾಯೇ = ದ್ರವ್ಯಕ್ಕಾಗಿಯೂ ಶರಣು ಹೊಂದುವೆವು. ಸುವಿರ್ಯೇ = ಸಾಧುವೀರ್ಯಕ್ಕಾಗಿಯೂ ಶರಣು ಹೊಂದುತ್ತೇವೆ. ಸ ಶಕ್ರಃ = (ಶಕ್ಲೃಶಕ್ತೌರಮು ಕ್ರೀಡಾಯಾಂ) ಆತನು, ಶಕ್ತಿ ಸುಖರೂಪನಾಗಿರುವುದರಿಂದ ಶಕ್ರನೆನಿಸಿಕೊಂಡವನು. ಉತ = ಆದುದರಿಂದ, ಶಕತ್ = (ಶಕ್ಲೃಶಕ್ತೌ) ಸರ್ವತ್ರ ಅವರವರಿಂದ ಪ್ರಾರ್ಥಿತವಾದುದನ್ನು ಸಂಪಾದಿಸುವ ವಿಷಯದಲ್ಲಿ ಶಕ್ತನಾಗಿಯೇ ಇರುತ್ತಾನೆ. ಇಂದ್ರಃ = ಆ ಇಂದ್ರನು, ನಃ = ನಮಗಾಗಿ, ವಸು = ದ್ರವ್ಯವನ್ನು ದಯಾಮಾನ ಇತ್ = (ದಯ,ದಾನ ಗತಿ ರಕ್ಷಣ ಹಿಂಸಾದಾನೇಷು) ಕೊಡುವವನಾಗಿಯೇ, ಸರ್ವದಾ ಇರುತ್ತಾನೆ. (ಆದುದರಿಂದಲೂ ಶರಣು ಹೊಂದುತ್ತೇವೆ.) ॥೬॥

ಭಾ ॥ ತಮೇವ ಶರಣಂ ನಿತ್ಯಂ ಸಖಿತ್ವಾದ್ಯರ್ಥಮೀಮಹೇ । ಶಕ್ತ್ಯಾನಂದ ಸ್ವರೂಪತ್ವಾಚ್ಛಕ್ರಃ ಸರ್ವತ್ರ ಚಾಶಕತ್ ।
ಅಸ್ಮಾಕಂಚ ಸದಾ ವಿತ್ತಂ ದದದೇವ ಪ್ರವರ್ತತೇ ॥೬॥

ಅ॥ ನಾವು ಸಖಿತನ ಇತ್ಯಾದಿಗಳಿಗಾಗಿ ಆ ಶ್ರೀ ಹರಿಯನ್ನೇ ನಿತ್ಯದಲ್ಲಿಯೂ ಶರಣು ಹೊಂದುವೆವು. ಆತನು ಶಕ್ತಿ ಆನಂದ ಸ್ವರೂಪನಾದುದರಿಂದ ಶಕ್ರ ಶಬ್ದ ವಾಚ್ಯನು. ಶ್ರೀ ಹರಿಯು ಸರ್ವದಾ ಸುಖರೂಪನಾಗಿರುವುದರಿಂದ ತನಗೆ ಪ್ರಯೋಜನವಿಲ್ಲದಿರುವುದರಿಂದಲೂ ಶಕ್ತಿರೂಪನಾಗಿರುವುದರಿಂದಲೂ ಸರ್ವತ್ರ ಅವರವರು ಪ್ರಾರ್ಥಿಸಿದುದನ್ನು ಸಂಪಾದಿಸುವ ವಿಷಯದಲ್ಲಿ ಶಕ್ತನಾಗಿಯೇ ಆಗುತ್ತಾನೆ. ಮತ್ತು ಆ ಇಂದ್ರನು ನಮಗೆ ದ್ರವ್ಯವನ್ನು ಕೊಡುವವನಾಗಿಯೇ ಸದಾ ಪ್ರವರ್ತಿಸುತ್ತಾನೆ. (ಆದುದರಿಂದಲೂ ಶ್ರೀ ಹರಿಯನ್ನು ಶರಣು ಹೊಂದುವೆವು) ॥೬॥೧೯॥

ಋ ॥ (೯೭) ಸುವಿವೃತಂ ಸುನಿರಜಮಿಂದ್ರ ತ್ವಾದಾತಮಿದ್ಯಶಃ ।

ಗವಾಮುಪವ್ರಜಂ ವೃಧಿ ಕೃಣುಷ್ವ ರಾಧೋ ಅದ್ರಿವಃ ॥೭॥

ಅ॥ ಅದ್ರಿವಃ = (ಅಜ್‌ಪೂರ್ವಾತ್ ದೃಜ್‌ಧಾತೋಃ ; ವೃತು ವರ್ತನೇ) ಮುಖ್ಯಪ್ರಾಣನಿಗೂ, ಪ್ರವರ್ತಕನಾದ, ಇಂದ್ರ=ವಿಷ್ಣುವೇ, ಅದ್ರಿವಃ =(ಅದ್ರಿಶಬ್ದೋಪಪದಾತ್ ವೃಶ್ಚ ಛೇದನೇ) ಪರ್ವತಗಳನ್ನು ಛೇದಿಸಿದ, ಇಂದ್ರ=ಪುರಂದರನೇ, ತ್ವಾದಾತಮಿತ್ = (ದಾಣದಾನೇ) ನಿನ್ನಿಂದ ಕೊಡಲ್ಪಟ್ಟದ್ದೇ ಆದ, ಯಶಃ =ಕೀರ್ತಿಯು, ಸುವಿವೃತಂ =ವಿಸ್ಪಷ್ಟವಾಯ್ತು. (ಜಗತ್ತಿನಲ್ಲಿ ವಿಖ್ಯಾತವಾಯ್ತು.) ಸುನಿರಜಂ = (ಅಜಗತಿಕ್ಷೇಪಣಯೋತ) ಚೆನ್ನಾಗಿ ಅತ್ಯಾಜ್ಯವು. ಯಾರಿಂದಲೂ ಅಪಹಾರ್ಯವಲ್ಲ. (ಅಂದರೆ ಇತರರಿಂದ ಸರ್ವಥಾ ಅಪ್ರಾಪ್ಯವು.) (ಯಾವ ಕಾರಣದಿಂದ ನಿನ್ನ ದಾನವು ಈ ರೀತಿಯಾಗಿರತಕ್ಕದೋ ಆದ ಕಾರಣ ನೀನು) ಗವಾಂ = ಜ್ಞಾನಗಳ, ವ್ರಜಂ = ಸಮೂಹವನ್ನು, (ಸ್ವರೂಪ ಭೂತವಾದುದನ್ನು)

ಅಪ ವೃಧಿ =ಹೋಗಲ್ಪಟ್ಟ ಆವರಣವನ್ನು ಮಾಡು. (ವಿವರಿಸು), (ನಮಗೆ) ರಾಧಃ =ವೃದ್ಧಿಯನ್ನು ಕೂಡ, ಕೃಷಣುಷ್ವ = ಮಾಡು ||೭||

**ಭಾ || (೧) ವಿಸ್ಪಷ್ಟಂ ಸುಷ್ಮ್ಟಕಾಲ್ಯಂ ಚ ಯಶಸ್ತ್ವದ್ದತ್ತಮೇವಹಿ | ಗೂಢಂ ಜ್ಞಾನ ಸಮೂಹಂ ತ್ವಂ ವಿವೃಣ್ವುದ್ಧಿಂ ಚ ನಃ ಕುರು || (೨) ಅದ್ರಿರಾದರಣೀಯತ್ವತ್ಪ್ರಾಣಸ್ತದ್ವರ್ತಕೋಽದ್ರಿವಾಃ | ಹರಿಃ ಶಕ್ರಸ್ತಥಾಽದ್ರೀಣಾಂ ಭೇದನಾದ್ವಾರಣಾದಪಿ ||೭||**

ಅ|| (೧) ಎಲೋ ಇಂದ್ರನೇ ನಿನ್ನಿಂದ ಕೊಡಲ್ಪಟ್ಟದ್ದೇ ಆದ ಕೀರ್ತಿಯು, ವಿಸ್ಪಷ್ಟವು. (ಜಗತ್ಪ್ರಸಿದ್ಧವು) ಸರ್ವಥಾ ತ್ಯಾಜ್ಯವಲ್ಲ. (ಕಲಬಿಲಕ್ಷೇಪೇ) ಮತ್ತು ಇತರರಿಂದ ಸರ್ವಥಾ ಪ್ರಾಪ್ಯವಲ್ಲ. ಗೋಪ್ಯವಾದ ಜ್ಞಾನ ಸಮೂಹವನ್ನು ನೀನು ವಿವರಿಸು. ನಮಗೆ ಸಮೃದ್ಧಿಯನ್ನೂ ಕೂಡ ಮಾಡು. (ಡುಕೃಞ ಕರಣೇ) (೨) ಸರ್ವನಾದುದರಿಂದ ಶ್ರೀ ಹರಿಯು ಅದ್ರಿವಾಃ ಎನಿಸುತ್ತಾನೆ. ಹಾಗೆಯೇ ಪರ್ವತಗಳ ಪಕ್ಷ (ರೆಕ್ಕೆ)ವನ್ನು ಭೇದಿಸಿರುವುದರಿಂದಲೂ ತನ್ನ ಪತನವನ್ನು ಸರ್ವಲೋಕಗಳ ನಾಶವನ್ನು ನಿವಾರಿಸಿದುದರಿಂದಲೂ ಇಂದ್ರನು ಅದ್ರಿವಾಋೂ ಎನಿಸುತ್ತಾನೆ. ||೭||

**ಋ || (೯೮) ನಹಿ ತ್ವಾ ರೋದಸೀ ಉಭೇ ಋಘಾಯಮಾಣಮಿನ್ವತಃ |**

**ಜೇಷಃ ಸ್ವರ್ವತೀರಪಃ ಸಂಗಾ ಅಸ್ಮಭ್ಯಂ ಧೂನುಹಿ ||೮||**

ಅ|| (ಶ್ರೀ ಹರಿಯೇ, ಇಂದ್ರನೇ) ಋಘಾಯಮಾಣಂ (ಋೂಘುವೃದ್ಧೌ) ಅಭಿವೃದ್ಧಿಯನ್ನು ಹೊಂದಿದ, (ಸರ್ವಗತನಾದ) ತ್ವಾ = ನಿನ್ನನ್ನು, ರೋದಸೀ = ದ್ಯಾವಾ ಪೃಥಿವಿಗಳು, ತದಭಿಮಾನಿಗಳಾದ ಶ್ರೀ ಭೂಮಿಗಳೂ ಕೂಡ, ಉಭೇ =ಸಹಿತರಾಗಿ ನಹಿ ಇನ್ವತಃ = (ಇವಿ ವ್ಯಾಪ್ತೌ) ಹೊಂದುವುದೇ ಇಲ್ಲವಷ್ಟೆ. (ನಿನ್ನ ಅನುಗ್ರಹವಿಲ್ಲದೆ ನಿನ್ನನ್ನು ಹೊಂದುವುದಿಲ್ಲ.) (ಮತ್ತು ನೀನು ಸ್ವರ್ವತೀಃ = ಸುಖವುಳ್ಳ, ಅಪಃ = ಪ್ರಜೆಗಳನ್ನು (ಸ್ವರ್ಗಸ್ಥರನ್ನೂ ಮುಕ್ತರನ್ನೂ ಕೂಡ) ಜೇಷ್ಯ = (ಜಿಜಯೇ) ಗೆದ್ದಿರುತ್ತಿ. (ವಶೀಕರಿಸಿರುತ್ತಿ.) ಇಂತಹ ನೀನು ತಾನಾಗಿಯೇ) ಅಸ್ಮಭ್ಯಂ = ನಮಗಾಗಿ, ಗಾಃ = ಜ್ಞಾನಗಳನ್ನು, ಸಂಧೂನುಹಿ = (ಧೂಞ ಕಂಪನೇ) ಚೆನ್ನಾಗಿ ಹೊಂದಿಸಿಕೊಡು, (ಎಂದು ವಿಷ್ಣುವಿನಲ್ಲಿ) (ಪುರಂದರನಲ್ಲಿ ಆದರೂ,) ಎಲೋ ಶಚೀಪತಿಯೇ ದ್ಯಾವಾಪೃಥಿವ್ಯಭಿಮಾನಿ ದೇವತೆಗಳು ಐಶ್ವರ್ಯಾದಿಗಳಿಂದ ಅಭಿವೃದ್ಧನಾದ ನಿನ್ನನ್ನು ಹೊಂದುವುದಿಲ್ಲ. (ಅಂದರೆ ನಿನಗೆ ಸದೃಶವಾದ ಐಶ್ವರ್ಯವನ್ನು ಹೊಂದುವುದೇ ಇಲ್ಲ) ಮತ್ತು ಸ್ವರ್ಗಸ್ಥ ಪ್ರಜೆಗಳನ್ನು ನಿನ್ನ ಅಧೀನರನ್ನಾಗಿ ಮಾಡುತ್ತಿ. ಆದ ಕಾರಣ ನಮಗಾಗಿ ಪ್ರಸಿದ್ಧ ಪಶುಗಳನ್ನು ಕೊಡು. ||೮||

**ಭಾ || (೧) ನ ತ್ವಾಮೃಘಾಯಮಾಣಂ ಹಿ ವರ್ಧಮಾನಂ ತು ರೋದಸೀ | ಸಂಪ್ರಾಪ್ನುತಃ ಶ್ರೀ ಭೂಮೀ ಚ ಸಹಿತೇ ವಾಽಪ್ರಸಾದತಃ || (೨) ಅಪಃ ಪ್ರಜಾಃ ಸುಖವತೀ ರಜಯಸ್ತ್ವದ್ವಶತ್ವತಃ | ಜ್ಞಾನಾನಿ ಸಂಧೂನುಹಿ ಚ ಪ್ರಾಪಯೋಚ್ಚಾ ಅಪಿ ಸ್ವಯಂ ||೮||**

ಅ|| (೧) ಎಲೋ ಇಂದ್ರನೇ ಋಘಾಯಮಾಣಂ ಅಂದರೆ ಅಭಿವೃದ್ಧಿಯನ್ನು ಹೊಂದಿರುವ, ಅಂದರೆ ಸರ್ವಗತನಾದ, ನಿನ್ನನ್ನು ದ್ಯಾವಾಪೃಥಿವಿಗಳೂ ಅವುಗಳಿಗೆ ಅಭಿಮಾನಿಗಳಾದ ಶ್ರೀ ಭೂಮಿಯರೂ ಕೂಡ, ಇಬ್ಬರೂ ಸಹಿತರಾಗಿ ಆಗಲೀ,

ನಿನ್ನ ಅನುಗ್ರಹವಿಲ್ಲದೆ ಹೊಂದಲಾರರು. (೨) ಸುಖವುಳ್ಳ, ಅಪಃ = ಪ್ರಜೆಗಳನ್ನು (ಸ್ವರ್ಗಸ್ಥರನ್ನು ಮುಕ್ತರನ್ನು ಕೂಡ) ಮುಕ್ತಾದಿ ಪ್ರಜೆಗಳು ನಿನ್ನ ಅಧೀನರೇ ಆಗಿರುವುದರಿಂದ ಗೆದ್ದಿರುತ್ತಿ. (ವಶೀಕರಿಸುತ್ತಿ.) ನಮಗೆ ಜ್ಞಾನಗಳನ್ನು ಸಂಧೂನುಹಿ =ಹೊಂದಿಸಿಕೊಡು. (ಇಂದ್ರನಲ್ಲಿ ಆದರೂ) (ಎಲೋ ಪುರಂದರನೇ ದ್ಯಾವಾಪೃಥಿವ್ಯಭಿಮಾನಿ ದೇವತೆಗಳೂ ಕೂಡ ಐಶ್ವರ್ಯಾದಿಗಳಿಂದ ಅಭಿವೃದ್ಧಿಯನ್ನು ಹೊಂದಿದ ನಿನಗೆ ಸದೃಶವಾದ ಐಶ್ವರ್ಯವನ್ನು ಹೊಂದಲಾರರು. ಸ್ವರ್ಗದಲ್ಲಿರುವ ಪ್ರಜೆಗಳನ್ನು ನೀನು ವಶೀಕರಿಸಿಕೊಂಡಿರುತ್ತಿ. ಆದ ಕಾರಣ ನಮಗಾಗಿ ಪ್ರಸಿದ್ಧಗಳಾದ ಉತ್ತಮಗಳಾದ ಪಶುರೂಪಗಳಾದ ಗೋವುಗಳನ್ನು ತಾನಾಗಿಯೇ ಹೊಂದಿಸಿ ಕೊಡು. ||೮||

ಋ || (೯೯) ಅಶ್ರುತ್ಕರ್ಣ ಶ್ರುಧೀ ಹವಂ ನೂಚಿದ್ದಧಿಷ್ವ ಮೇ ಗಿರಃ ।
ಇಂದ್ರ ಸ್ತೋಮಮಿಮಂ ಮಮಕೃಷ್ವಾ ಯುಜಶ್ಚಿದಂತರಂ ||೯||

ಅ || ಅಶ್ರುತ್ಕರ್ಣ = ಚೆನ್ನಾಗಿ ಕೇಳತಕ್ಕ ಕಿವಿಗಳುಳ್ಳವನೇ (ಬಹಳ ಕೇಳತಕ್ಕ ಕಿವಿಗಳುಳ್ಳವನೇ) ಹವಂ = ನಮ್ಮ ಆಹ್ವಾನವನ್ನು ಶ್ರುಧಿ = (ಶ್ರು ಶ್ರವಣೇ) ಕೇಳು. ನುಚಿತ್ =ಈಗಲೇ, ಮೇ =ನನ್ನಲ್ಲಿ, ಗಿರಃ = ವೇದರೂಪಗಳಾದ ವಚನಗಳನ್ನು, ದಧಿಷ್ವ = (ದಧ ಧಾರಣೇ) ಕೊಡು (ನನ್ನನ್ನು ವೇದಜ್ಞನನ್ನಾಗಿ ಮಾಡು.) ಇಂದ್ರ=ಇಂದ್ರನೇ, ಇಮಂ ಮಮ ಸ್ತೋಮಂ = ಈ ನಾನು ಮಾಡಿದ ಸ್ತುತಿವಿಶೇಷವನ್ನು, ಯುಜಶ್ಚಿತ್ = ಸಮಾಧಿರೂಪವಾದ ಯೋಗಕ್ಕಿಂತಲೂ, ಅಂತರಂ = ತನ್ನ ಮನಸ್ಸಿಗೆ ಸನ್ನಿಕೃಷ್ಟವನ್ನಾಗಿ (ಪ್ರಿಯವನ್ನಾಗಿ) ಕೃಷ್ವ = (ಕೃಜ್‌ಕರಣೇ) ಮಾಡು. ||೯||

ಭಾ || ಬಹುಶ್ರವಣಕರ್ಣಾಸ್ಮದಾಹ್ವಾನಂ ಶೃಣು ಚಾದರಾತ್ । ಅದ್ಯೈವ ಚ ಗಿರೋ ಧೇಹಿ ಮಯಿ ಸ್ತೋಮಂ ಚ ಮತ್ಕೃತಂ । ಪ್ರಿಯಂ ಯೋಗಾದಪಿ ಕುರು ||೯||

ಅ|| ಬಹು ವಿಧವಾದುದನ್ನು ಕೇಳತಕ್ಕ ಕಿವಿಗಳುಳ್ಳವನೇ ನಮ್ಮ ಆಹ್ವಾನವನ್ನು ಅತ್ಯಾದರದಿಂದ ಕೇಳು. ಅಷ್ಟು ಮಾತ್ರವಲ್ಲದೆ ಈಗಲೇ ನನ್ನಲ್ಲಿ ವೇದರೂಪ ವಚನಗಳನ್ನು ಇಡು. (ನನ್ನನ್ನು ವೇದಜ್ಞನನ್ನಾಗಿ ಮಾಡು.) ಮತ್ತು ನಾನು ಮಾಡಿದ ಸ್ತುತಿವಿಶೇಷವನ್ನು ಸಮಾಧಿ ರೂಪಯೋಗಕ್ಕಿಂತಲೂ ಪ್ರಿಯವನ್ನಾಗಿ ಮಾಡು. ||೯||

ಋ || (೧೦೦) ವಿದ್ಮಾ ಹಿ ತ್ವಾ ವೃಷಂತಮಂ ವಾಜೇಷು ಹವನಶ್ರುತಂ ।
ವೃಷಂತಮಸ್ಯ ಹೂಮಹ ಊತಿಂ ಸಹಸ್ರಸಾತಮಾಂ ||೧೦||

ಅ|| ಹಿ = ಯಾವ ಕಾರಣದಿಂದ, ವೃಷಂತಮಂ = (ವೃಷು ಸೇಚನೇ) ಸರ್ವರಿಗಿಂತಲೂ ಅತಿಶಯವಾಗಿ ಶಕ್ತಿಯುಳ್ಳವನೂ, ವಾಜೇಷು = ಯುದ್ಧಗಳಲ್ಲಿ (ಯುಧ ಸಂಪ್ರಹಾರೇ) ಹವನ ಶ್ರುತಂ = ಆಹ್ವಾನವನ್ನು ಕೇಳುವವನೂ ಆದ, ತ್ವಾ = ನಿನ್ನನ್ನು, ವಿದ್ಮ = ತಿಳಿಯುತ್ತೇವೋ, (ಆ ಕಾರಣ) ವೃಷಂತಮಸ್ಯ =ಅತಿಶಯವಾಗಿ ಬಹುಲಾಭವನ್ನು ಮಾಡತಕ್ಕ, ಊತಿಂ = ರಕ್ಷಣೆಯನ್ನು, ಹೂಮಹೇ = (ಹ್ವೇ ಈಶಬ್ದೇ) ಕರೆಯುತ್ತೇವೆ. (ಪ್ರಾರ್ಥಿಸುತ್ತೇವೆ.) ||೧೦||

ಭಾ || (೧) ವಿದ್ಮ ತ್ವಾಂ ಶಕ್ತಿಮತ್ತಮಂ । ಶ್ರೋತಾರಂ ಯುತ್ಸು ಚಾಹ್ವನ ಮಾಹ್ವಯಾಮಸ್ತ್ವಾವಸಂ । ಬಹುಲಾಭೋತ್ತಮಮಿತಿ ||೧೦|| (೨) ಸ್ಥಾನಾಂತರಗತೇ ಋಚೌ (೩) ದೃಷ್ಟ್ವೇಂದ್ರಂ ಯಜ್ಞಗಂ ಯಾಭ್ಯಾಂ ಮಧುಚ್ಛಂದಾಃ ಸಮಸ್ತುವತ್ । ಆತೂನ ಇತಿ ತೇನೈವ ನ ವಿರುದ್ಧಾ ಶತರ್ಚಿತಾ ||೧೦||

ಅ|| (೧) ನಿನ್ನನ್ನು ಸರ್ವರಿಗಿಂತ ವಿಶೇಷವಾಗಿ ಶಕ್ತಿಯುಳ್ಳವನನ್ನಾಗಿಯೂ ಯುದ್ಧಗಳಲ್ಲಿ ಭಕ್ತರ ಆಹ್ವಾನವನ್ನು ಕೇಳುವವನನ್ನಾಗಿಯೂ ತಿಳಿಯುತ್ತೇವೆ. ನಿನಗೆ ಅತಿ ಲಾಭದಿಂದ ಕೂಡಿದ ರಕ್ಷಣೆಯನ್ನು ಪ್ರಾರ್ಥಿಸುತ್ತೇವೆ. (ಇತಿ=) ಹೀಗೆ ೧೦೦ (ನೂರು) ಋಕ್ಕುಗಳ ವ್ಯಾಖ್ಯಾನವು ಸಮಾಪ್ತವಾಯ್ತು. ||೧೦||

(೨) (ಹಾಗಾದರೆ ಇದಕ್ಕಿಂತ ಮೇಲಿನ ೨ ಋಕ್ಕುಗಳು ಹೆಚ್ಚು ಇದ್ದ ಪ್ರಯುಕ್ತ ಮಧು ಛಂದಸರಿಗೆ ಶತರ್ಚಿ ಎಂಬ ನಾಮವು ಹೇಗೆ ಕೂಡುತ್ತದೆ ಎಂದರೆ) ಯಾವ ಕಾರಣದಿಂದ ಆತೂನಃ ಇತ್ಯಾದಿ ೨ ಋಕ್ಕುಗಳು ಸ್ಥಾನಾಂತರದಲ್ಲಿರುವವುಗಳೋ, ಆ ಕಾರಣದಿಂದ ಮಧು ಛಂದಸರಿಗೆ ಶತರ್ಚಿ ಎಂಬ ಹೆಸರು ವಿರುದ್ಧವಲ್ಲ. ಒಂದೇ ಭಾಗದಲ್ಲಿರತಕ್ಕ ೧೦೦ ಋಕ್ಕುಗಳನ್ನು ಕಂಡ ಪ್ರಯುಕ್ತವೇ ಶತರ್ಚಿ ಎಂಬ ಹೆಸರು (ಅಂದರೆ ಮಧುಛಂದಸರು ಉಪವೇಧದ ಏಕಭಾಗದಲ್ಲಿ ಋಕ್ಕುಗಳದ್ದು ಯಾವುದು ಕ್ರಮವಿದೆಯೋ ಅಕ್ರಮದಿಂದಲೇ ೧೦೦ ಋಕ್ಕಗಳನ್ನು ಕಂಡಿರುವರು ಆತೂನಃ ಇತ್ಯಾದಿ ೨ ಋಕ್ಕುಗಳನ್ನು ಅವರೇ (ಭಾಗಾಂತರದಲ್ಲಿ ಕಂಡದ್ದು.) (೩) (ದೇಶಾಂತರದಲ್ಲಿ ಕಾಲಾಂತರದಲ್ಲಿ ಅವಸ್ಥಾಂತರದಲ್ಲಿಯೂ ಈ ೨ ಋಕ್ಕುಗಳನ್ನು ಕಂಡಿರುವುದರಿಂದ ಈ ಮಧುಛಂದಸರಿಗೆ ಶತರ್ಚಿ ಎಂಬ ನಾಮವು ಬಾಧಿತವಲ್ಲವೆನ್ನುತ್ತಾರೆ.) ಮಧುಛಂದಸರು ಯಜ್ಞದಲ್ಲಿರತಕ್ಕ ಇಂದ್ರನನ್ನು ನೋಡಿ ಆತೂನ ಇತ್ಯಾದಿ ಯಾವ ಋಕ್ಕುಗಳಿಂದ ಸ್ತೋತ್ರ ಮಾಡಿರುವನೋ ಆ ಕಾರಣದಿಂದಲೇ ಶತರ್ಚಿ ಎಂಬ ನಾಮವು ವಿರುದ್ಧವಲ್ಲ. (ಅಂದರೆ ಯಜ್ಞ ಭೂಮಿಯಲ್ಲಿ ಯಜಮಾನನು ಕೊಟ್ಟ ಆಹುತಿಯನ್ನು ತೆಗೆದುಕೊಳ್ಳುವುದಕ್ಕಾಗಿ ಬಂದಿರುವ ಇಂದ್ರನನ್ನು ನೋಡುವ ಸಮಯದಲ್ಲಿ ಯಜಮಾನತ್ವಾದ್ಯವಸ್ಥೆಯಲ್ಲಿ ಅತೂನಃ ಇತ್ಯಾದಿ ೨ ಋಕ್ಕುಗಳನ್ನು ಕಂಡದ್ದು. ೧೦೦ ಋಕ್ಕುಗಳನ್ನು ಅನ್ಯತ್ರ ಕಂಡದ್ದು ಶತರ್ಚಿ ಎಂಬ ನಾಮಕ್ಕೆ ದೇಶೈಕ್ಯಾದಿಗಳು ನಿಮಿತ್ತವಾಗಿರುವುದರಿಂದ ಈ ಋಕ್ಕುಗಳನ್ನು ಮಧುಛಂದಸರೇ ಅನ್ಯತ್ರ ನೋಡಿರುವುದರಿಂದ ಶತರ್ಚಿ ಎಂಬ ನಾಮವು ವಿರುದ್ಧವಾಗುವುದಿಲ್ಲ. ||೦||

ಋ || (೧೦೧) ಆತೂ ನ ಇಂದ್ರ ಕೌಶಿಕ ಮಂದಸಾನಃ ಸುತಂ ಪಿಬ ।
ನವ್ಯಮಾಯುಃ ಪ್ರಸೂತಿರ ಕೃಧೀ ಸಹಸ್ರಸಾಮೃಷಿಂ ||೧೧||

ಅ|| ಕೌಶಿಕ = (ಕೋಶೇಭವಃ ಕೌಶಕಃ ಎಂದು ವ್ಯುತ್ಪತ್ತಿಯು) ಬ್ರಹ್ಮಾಂಡ ಕೋಶದಲ್ಲಿರತಕ್ಕ, ಇಂದ್ರ=ಶ್ರೀ ವಿಷ್ಣುವೇ, ಕೌಶಿಕ=ಇಂದ್ರನು ಹುಟ್ಟುವ ಕಾಲದಲ್ಲಿ ಅದಿತಿ ದೇವಿಯು ಕುಶಗಳಿಂದ ಗ್ರಹಣ ಮಾಡಿರುವುದರಿಂದ ಕೌಶಿಕ ಎನಿಸಿಕೊಂಡ, ಅಥವಾ ಇಂದ್ರನ ಸ್ವರೂಪಭೂತನಾದ ಗಾಧಿರಾಜನು ಕುಶಿಕರಾಜನ ಮಗನಾಗಿರುವುದರಿಂದ ಕೌಶಿಕ ಎನಿಸಿಕೊಂಡ ಇಂದ್ರ=ಪುರಂದರನೇ, ಮಂದಸಾನಃ = (ಮದೀಹಷ್ಣೇ) (ಮದಿಸ್ತುತಿ ಮೋದ ಮದ ಸ್ವಪ್ನಕಾಂತಿಗತಿಷು) ನಿತ್ಯಸುಖದ ಲಾಭವುಳ್ಳ: (ವನಷಣ ಸಂಭಕ್ತೌ) (ನಿತ್ಯ ಸುಖಿಯಾದ) ನೀನು, ನಃ =ನಮ್ಮ ಸುತಂ =ಸೋಮವನ್ನು,

ತು=ಶೀಘ್ರವಾಗಿ, ಆ ಪಿಬ=(ಪಾಪಾನೇ) ಪಾನಮಾಡು. ನವ್ಯಂ= (ಣುಸ್ತುತೌ) ಸ್ತುತ್ಯವಾದ, ಆಯುಃ=ಆಯುಷ್ಯವನ್ನು ಕೂಡ, ನಃ=ನಮಗಾಗಿ, ಪ್ರಸುತಿರ= (ತ್ಯಾಪ್ಲವನ ತರಣಯೋಃ) ಅತಿ ಪ್ರಕೃಷ್ಟವಾಗಿ ಕೊಡು. (ನನ್ನನ್ನು) ಸಹಸ್ರನಾಮ್ =ಸಹಸ್ರ ಲಾಭದಿಂದ ಕೂಡಿದವನ್ನಾಗಿಯೂ ಋಷಿಂ=ಜ್ಞಾನಿಯನ್ನಾಗಿಯೂ, ಕೃಧಿ= (ಡುಕೃಞಕರಣೇ) ಮಾಡು ||೧೧||

ಭಾ || ಮಾತ್ರಾ ಕುಶೈರ್ಗೃಹೀತತ್ವಾಜ್ಜನ್ಮನಾಸೀತ್ಸಕೌಶಿಕಃ । ಗಾಧಿತ್ವಾದ್ವಾ ಹಿರಣ್ಯಾಂಡ ಕೋಶಸ್ಥತ್ವಾದ್ಧರಿಸ್ತಥಾ । ಮಂದಿಸಾನೋ ನಿತ್ಯಸುಖೀ ಸ್ತುತ್ಯಮಾಯುಶ್ಚ ನಸ್ತಿರ । ಋಷಿಂ ಸಹಸ್ರ ಲಾಭಂ ಮಾಂ ಕುರು ಚ ||೧೧||

ಅ|| ತಾಯಿಯಾದ ಅದಿತಿಯಿಂದ, =ಜನ್ಮ ಸಮಯದಲ್ಲಿ, ದರ್ಭೆಗಳಿಂದ, ಸ್ವೀಕರಿಸಲ್ಪಟ್ಟಿರುವುದರಿಂದಲೂ, ಇಂದ್ರ ಸ್ವರೂಪನಾದ ಗಾಧಿರಾಜನು ಕುಶಿಕರಾಜನ ಮಗನಾಗಿರುವುದರಿಂದಲೂ, ಆ ಇಂದ್ರನು ಕೌಶಿಕನೆನಿಸುತ್ತಾನೆ. ಹಾಗೆಯೇ ಶ್ರೀ ಹರಿಯೂ ಹಿರಣ್ಮಯವಾದ ಬ್ರಹ್ಮಾಂಡ ಕೋಶದಲ್ಲಿದ್ದ ಪ್ರಯುಕ್ತ ಕೌಶಿಕ ಎನಿಸುತ್ತಾನೆ. ಮಂದಸಾನಃ ಅದರೆ ನಿತ್ಯ ಸುಖವುಳ್ಳ, ಅಥವಾ ಸುಖವನ್ನೇ ನಿತ್ಯದಲ್ಲಿಯೂ ಅನುಭವಿಸುತ್ತಿರುವ, ನೀನು ಸ್ತುತ್ಯವಾದ ಆಯುಷ್ಯವನ್ನು ಆತ್ಕುರ್ಷದಿಂದ ಕೊಡು. (ದೀರ್ಘಾಯುಷ್ಮಂತನನ್ನಾಗಿ ಮಾಡು) ನಿನ್ನನ್ನು ಸಹಸ್ರ ಲಾಭಗಳಿಂದ ಕೂಡಿದವನನ್ನಾಗಿಯೂ ಜ್ಞಾನಿಯನ್ನಾಗಿಯೂ ಮಾಡು. ||೧೧||

ಋ || (೧೦೨) ಪರಿ ತ್ವಾ ಗಿರ್ವಣೋ ಗಿರಃ ಇಮಾ ಭವಂತು ವಿಶ್ವತಃ ||

ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ||೧೨||೨೦||೧೦||

ಅ|| ಗಿರ್ವಣಃ =ವೇದ ವಚನಗಳಿಂದ ಭಜಿಸಲು ಯೋಗ್ಯನೇ, ಇಮಾಃ =ನನ್ನದ್ದಾದ, ಗಿರಃ =ಸ್ತುತಿರೂಪಗಳಾದ ವಚನಗಳು, ವಿಶ್ವತಃ=ಸರ್ವಕಾಲದಲ್ಲಿ, (ಸರ್ವದಾ) ವೃದ್ಧಾಯುಂ=ಪೂರ್ಣ (ಸರ್ವ) ಲಾಭವುಳ್ಳ ತ್ವಾ=ನಿನ್ನನ್ನು, ಪರಿಭವಂತು =ಸುತ್ತ ಮುತ್ತಲೂ ಇರಲಿ. (ಅಂದರೆ ಅತಿಶಯವಾಗಿ ನಿನ್ನನ್ನೇ ವಿಷಯೀಕರಿಸಲಿ) ವೃದ್ಧಯಃ=ವೃದ್ಧಿರೂಪಗಳಾದ (ನಿನ್ನ ವೃದ್ಧಿಯನ್ನು ಪ್ರಕಾಶಗೊಳಿಸುವ) ಜುಷ್ಟಾಃ = ಸೇವ್ಯಗಳಾದ, ನಮ್ಮ ಮಾತುಗಳು, ಜುಷ್ಟಯಃ ಅನುಭವಂತು = ನಿನ್ನ ಸೇವಾನುರೂಪಗಳೂ ಆಗಲಿ ||೧೨||೨೦||೧೦||

ಭಾ || ತ್ವಾ ಇಮಾ ಗಿರಃ || ಸರ್ವದಾ ಪರಿತಃ ಸಂತು ಮದೀಯಾಸ್ಸರ್ವಲಾಭಿನಂ । ವೃದ್ಧಿ ರೂಪಾ ಗಿರೋ ಜುಷ್ಟಾಃ ಸೇವಾರೂಪಾಶ್ಚ ಸಂತು ನಃ ||೧೨||೨೦||೧೦||

ಅ|| ನನ್ನ ಈ ಸ್ತುತಿ ರೂಪಗಳಾದ ವಚನಗಳು, ಸರ್ವಲಾಭವುಳ್ಳ, ನಿನ್ನನ್ನು ಅತಿಶಯವಾಗಿ ವಿಷಯೀಕರಿಸಿಕೊಂಡಿರಲಿ. ನಿನ್ನ ವೃದ್ಧಿಯನ್ನು ಪ್ರಕಾಶಗೊಳಿಸುವ (ವೃದ್ಧಿಂ ರೂಪಯಂತಿ ನಿರೂಪಯಂತಿ ಪ್ರಕಾಶಯಂತೀತಿ ವೃದ್ಧಿರೂಪಾಃ) ಸರ್ವಸೇವ್ಯಗಳಾದ, ನಮ್ಮ ಮಾತು ನಿಮ್ಮ ಸೇವೆಗೆ ಅನುರೂಪಗಳಾಗಲಿ ||೧೨||೨೦||೧೦||

ಅವ || ೮ ಋಕ್ಕು. ೧ ವರ್ಗ - ಐಂದ್ರಸೂಕ್ತ. ಅನುಷ್ಟುಪ್ ಛಂದಸ್ಸು.

ಋ || (೧೦೩) ಇಂದ್ರಂ ವಿಶ್ವಾ ಅವೀವೃಧನ್ ಸಮುದ್ರವ್ಯಚಸಂ ಗಿರಃ

ರಥೀತಮಂ ರಥೀನಾಂ ವಾಜಾನಾಂ ಸತ್ಪತಿಂ ಪತಿಂ ||೧೫||

ಅ|| ಸಮುದ್ರವ್ಯಚಸಂ = (ರಿಚವಿಯೋಜನ ಸಂಪರ್ಕಯೋಃ) ಚೆನ್ನಾಗಿ ಉತ್ಕೃಷ್ಟಗಳಾದ ಗುಣಗಳ ವ್ಯಕ್ತಿಯುಳ್ಳ, ರಥೀನಾಂ = ರಥವುಳ್ಳವರಲ್ಲಿ, ರಥಿತಮಂ =ಮುಖ್ಯ ರಥವುಳ್ಳವನೂ, ವಾಜಾನಾಂ =ಅನ್ನಗಳಿಗೆ, ಪತಿಂ =ಸ್ವಾಮಿಯೂ, (ಯಥೇಷ್ಟ ಭೋಜ್ಯ ವಸ್ತುಗಳನ್ನು ಕೊಡುವವನೂ) ಸತ್ಪತಿಂ=ಸಜ್ಜನರಿಗೆ ಸ್ವಾಮಿಯೂ ಆದ ಇಂದ್ರಂ = ಇಂದ್ರನನ್ನು, ವಿಶ್ವಾಃ ಗಿರಃ = ಸಮಸ್ತವೇದ ವಚನಗಳು, ಅವೀವೃಧನ್ (ವೃಧವೃದ್ಧೌ) ಪ್ರಕಾಶಗೊಳಿಸಿದವು. (ಭಗವದ್ಗುಣಗಳನ್ನು ಪ್ರಕಾಶಗೊಳಿಸಿದವು) (ಶ್ರೀ ಹರಿಯು ನಿತ್ಯದಲ್ಲಿಯೂ ಅಭಿವೃದ್ಧನೇ ಆಗಿರುವುದರಿಂದ ತಿರುಗಿ ವೃದ್ಧಿಯು ಕೂಡದಿರುವುದರಿಂದ ಇಲ್ಲಿ ವೃದ್ಧಿಯೆಂದರೆ ಪ್ರಕಾಶವೆಂದರ್ಥವನ್ನು ಇಟ್ಟುಕೊಳ್ಳಬೇಕು.) ||೧||

ಭಾ || (೧) ಅಷ್ಟಾವೃಚಃ ಪುನಸ್ತೇನ ದೃಷ್ಟಾ ಅನ್ಯತ್ರಗಾಸ್ತಪಃಕುರ್ವತಾ (೨) ಸಮ್ಯಗುದ್ರಿಕ್ತಗುಣವ್ಯಕ್ತಿಸ್ತಥಾಽಭಿದಃ ||೧||

ಅ|| (೧) ಪುನಃ ತಪಸ್ಸನ್ನು ಮಾಡತಕ್ಕ ಮಧುಛಂದಸ ಋಷಿಗಳಿಂದಲೇ ಮುಂದಿನ ೮ ಋಕ್ಕುಗಳು ಸ್ಥಳಾಂತರದಲ್ಲಿ (ಅನುಪೂರ್ವ್ಯಂತರದಲ್ಲಿರತಕ್ಕವುಗಳಾಗಿ ದೃಷ್ಟಗಳಾಗಿವೆ. (ಈ ೮ ಋಕ್ಕುಗಳಿಗೆ ಮಾಧುಛಂದಸರು ಋಷಿಗಳಲ್ಲವೆಂದಾದರೆ ಪ್ರಮಾಣ ವಿರೋಧವು. ಅಪ್ರಾಮಾಣಿಕವೂ ಆಗುವುದು) ಆದ ಕಾರಣ ಶತರ್ಚಿ ಎಂಬ ನಾಮವು ಯುಕ್ತವೇ ಸರಿ.) (೨) ಚೆನ್ನಾಗಿ ಉತ್ಕೃಷ್ಟಗಳಾದ ಗುಣಗಳ ಅಭಿವ್ಯಕ್ತಿಯುಳ್ಳವನು ಸಮುದ್ರವ್ಯಚಾಃ ಎನಿಸುತ್ತಾನೆ. ||೧||

ಋ || (೧೦೪) ಸಖ್ಯೇ ತ ಇಂದ್ರ ವಾಜಿನೋ ಮಾಭೇಮ ಶವಸಸ್ಪತೇ ।

ತ್ವಾಮಭಿ ಪ್ರ ಣೋನುಮೋ ಜೇತಾರಮಪರಾಜಿತಂ ||೨||

ಅ|| ಶವಸಸ್ಪತೇ = ಸುಖಕ್ಕೆ ಅಥವಾ ಬಲಕ್ಕೆ ಸ್ವಾಮಿಯಾದ, ಇಂದ್ರ =ಇಂದ್ರನೇ, ತೇ ಸಖ್ಯೇ = ನಿನ್ನ ಸಖ್ಯವಾಗುತ್ತಿರಲು, (ನಿನ್ನ ಅನುಗ್ರಹವಾಗುತ್ತಿರಲು) ವಾಜಿನಃ=ಯುದ್ಧವುಳ್ಳ, ನಾವು, ಮಾಭೇಮ=(ಞಿಭೀಭಯೇ) ಭಯ ಹೊಂದುವುದಿಲ್ಲ. (ಶತ್ರುಗಳನ್ನು ಗೆಲ್ಲುವೆವು.) ಜೇತಾರಾಂ =(ನಮಗೆ ಅನುಗ್ರಹಿಸುವುದಕ್ಕಾಗಿ ನಮ್ಮಲ್ಲಿದ್ದು) ಪರರನ್ನು ಗೆಲ್ಲುವ, ಅಪರಾಜಿತಂ = ಸ್ವತಃ ಪರಾಜಯವಿಲ್ಲದಿರುವ, ತ್ವಾಂ = ನಿನ್ನನ್ನು, ಅಭಿ ಪ್ರನೋನುಮಃ = (ಣು ಸ್ತುತೌ) ಚೆನ್ನಾಗಿ ಮತ್ತು ಮತ್ತು ಸ್ತುತಿಸುತ್ತೇವೆ. ||೨||

ಋ || (೧೧೫) ಪೂರ್ವೀರಿಂದ್ರಸ್ಯ ರಾತಯೋ ನ ವಿದಸ್ಯಂತ್ಯೂತಯಃ ।

ಯದೀ ವಾಚಸ್ಯ ಗೋಮತಃ ಸ್ತೋತೃಭ್ಯೋ ಮಂಹತೇ ಮಘಂ ||೩||

ಅ|| ಯದಿ = ಯಾವ ಪಕ್ಷದಲ್ಲಿ, (ಇಂದ್ರನು) ಗೋಮತಃ ವಾಜಸ್ಯ = ಗೋವುಗಳಿಂದ ಕೂಡಿದ ಅನ್ನವನ್ನು, ಮಘಂ=ಧನವನ್ನು ಯಶಸ್ಸನ್ನು, ಸ್ತೋತೃಭ್ಯಃ =ಸ್ತುತಿಸುವವರಿಗೋಸ್ಕರ, ಮಂಹತೇ = (ಮಂಹ ದಾನೇ) ಕೊಡುತ್ತಾನೋ, ಹಾಗಾದರೆ (ಧನ, ಯಶಸ್ಸು, ಅನ್ನ ಗೋವು ಇವುಗಳನ್ನುಕೊಡುವುದಾದರೆ) ಇಂದ್ರಸ್ಯ = ಇಂದ್ರನಾದ ನಿನ್ನ, ರಾತಯ = (ರಾದಾನೇ) ದಾನಗಳು, ಊತಯಃ = ರಕ್ಷಣೆಗಳೂ ಕೂಡ, ಪೂರ್ವೀ = ಮಹತ್ತ್ವ ಕಾರಣದಿಂದ ಶ್ರೇಷ್ಠಗಳು. ಮತ್ತು ನ ವಿದಸ್ಯಂತಿ = (ದಸು ವಿಭೇದನೇ.) ಭೇದಿಸಲ್ಪಡುವುದಿಲ್ಲ. ಅಥವಾ (ದಸು ಕ್ಷಯೇ) ನಾಶಹೊಂದುವುದಿಲ್ಲ. ||೩||

ಭಾ || **ಪ್ರಥಮಾನಿ ಮಹತ್ತ್ವೇನ ತೇ ದಾನಾನ್ಯವನಾನಿ ಚ । ನ ಭಿದ್ಯಂತೇ ನ ನಶ್ಯಂತಿ ಗೋಮದನ್ನಂ ಯಶಸ್ತಥಾ । ಯದಿ ಮಂಹತೇ ದದಾತೀಶೋ** ||೩||

ಅ|| ಶ್ರೀಹರಿಯು ಗೋವುಗಳಿಂದ ಕೂಡಿದ ಅನ್ನವನ್ನು ಹಾಗೆಯೇ ಯಶಸ್ಸನ್ನು (ಮಂಹತೇ=) ಕೊಡುತ್ತಾನೋ, ಹಾಗಾದರೆ ನಿನ್ನ ದಾನಗಳೂ ರಕ್ಷಣೆಗಳೂ ಕೂಡ ಮಹತ್ತ್ವ (ಇತರರಿಗೆ ಅಸಾಧ್ಯವಾಗಿರುವುದರಿಂದ ಶ್ರೇಷ್ಠತ್ವ) ಕಾರಣದಿಂದ ಶ್ರೇಷ್ಠಗಳು. ಮತ್ತು ಅವುಗಳು ಭೇದಿಸಲ್ಪಡುವುದಿಲ್ಲ. ಅಥವಾ ನಾಶಹೊಂದುವುದಿಲ್ಲ. ಸರ್ವದಾ ಇರುತ್ತದೆ. ಏವಂಚ ಶ್ರೀ ಹರಿಯು ಸ್ತೋತ್ರ ಮಾಡುವವರಿಗೆ ಧನ ಯಶಸ್ಸು ಅನ್ನ ಗೋವು ಮೊದಲಾದವುಗಳನ್ನು ಕೊಡುವುದಾದರೆ ಅಂತಹ ರಕ್ಷಣೆಗಳೇ ಮುಖ್ಯಗಳು. ||೩||

ಋ || **(೧೦೬) ಪುರಾಂ ಭಿಂದುರ್ಯುವಾ ಕವಿರಮಿತೌಜಾ ಅಜಾಯತ ।**
**ಇಂದ್ರೋ ವಿಶ್ವಸ್ಯ ಕರ್ಮಣೋ ಧರ್ತಾ ವಜ್ರೀ ಪುರುಷ್ಟುತಃ** ||೪||

ಅ || ಪುರಾಂ = (ವಿಷ್ಣುಪಕ್ಷದಲ್ಲಿ) ಶರೀರಾಖ್ಯಪುರಗಳ ಮತ್ತು (ಇಂದ್ರಪಕ್ಷದಲ್ಲಿ) ಶಂಬರಾಸುರನ ಪುರ (ಪಟ್ಟಣ)ಗಳನ್ನು, ಭಿಂದುಃ = (ಭಿದಿರ ವಿದಾರಣೇ) ಭೇದಿಸಿರುವ (ಪಾಂಚ ಭೌತಿಕ ಶರೀರವನ್ನು ನಾಶಗೊಳಿಸಿ ಮೋಕ್ಷವನ್ನು ಕೊಡುವ) ಯುವಾ=ತರುಣನಾದ, ಕವಿಃ = ಸರ್ವಜ್ಞನಾದ, ಅಮಿತೌಜಾಃ =ಬಹುಸಾಮರ್ಥ್ಯವುಳ್ಳ, ವಿಶ್ವಸ್ಯ ಕರ್ಮಣಃ ಧರ್ತಾ=ಸಮಸ್ತ ಕರ್ಮಗಳಿಗೆ ಪ್ರೇರಕನಾದ, ವಜ್ರೀ = ಜ್ಞಾನಾನಂದಗಳುಳ್ಳ ಅಥವಾ ವಜ್ರಾಯುಧವುಳ್ಳ, ಪುರುಷ್ಟುತಃ =ಬಹುಮಂದಿ ದೇವತೆಗಳಿಂದ ಸ್ತುತಿಸಲ್ಪಟ್ಟ, ಇಂದ್ರಃ = ಇಂದ್ರನು, ಅಜಾಯತ = (ಜನೀ ಪ್ರಾದುರ್ಭಾವೇ) ಯಜ್ಞದಲ್ಲಿ ಅಭಿವ್ಯಕ್ತನಾದನು. ||೪||

ಋ || **(೧೦೭) ತ್ವಂ ವಲಸ್ಯ ಗೋಮತೋಽಪಾವರದ್ರಿವೋ ಬಿಲಂ ।**
**ತ್ವಾಂ ದೇವಾ ಅಬಿಭ್ಯುಷಸ್ತುಜ್ಯಮಾನಾಸ ಆವಿಷುಃ** ||೫||

ಅ|| ಅದ್ರಿವಃ =ಮುಖ್ಯಪ್ರಾಣನಿಗೆ ಪ್ರವರ್ತಕನಾದ ಶ್ರೀ ವಿಷ್ಣುವೇ ತ್ವಂ=ನೀನು, ಗೋಮತಃ =ಗೋ ಸಂಬಂಧಿಯಾದ (ಭೂವಾಗ್ವ್ಯಂರಿಷು ಗೌರ್ಮತಃ ಎಂಬ ಪ್ರಮಾಣದಿಂದ ವೇದವಚನ ಸಂಬಂಧಿ) ವಲಸ್ಯ=ಮಿಥ್ಯಾಜ್ಞಾನಕ್ಕೆ (ವೇದ

ವಚನಗಳ ಅನ್ಯಾರ್ಥ ಜ್ಞಾನಕ್ಕೆ ಅಥವಾ ಅರ್ಥವನ್ನು ವಿಪರೀತವಾಗಿ ವಿಷಯೀಕರಿಸುವ ಜ್ಞಾನಕ್ಕೆ) (ಯಾವುದು) ಬಿಲಂ=ಮೂಲಕಾರಣವಾದ ಅಜ್ಞಾನವೋ, (ಅದನ್ನು) ಅಪಲವಃ =(ಅಪಪೂರ್ವಾತ್ ವೃಞ್ವರಣೇ) ತಿರಸ್ಕರಿಸುತ್ತಿ. (ಅಂದರೆ ತತ್ವಜ್ಞಾನವನ್ನು ಹುಟ್ಟಿಸಿ ಅಜ್ಞಾನವನ್ನು ಹೋಗಲಾಡಿಸುತ್ತಿ.) (ಅಂತೂ ಅಜ್ಞಾನ ಮಿಥ್ಯಾಜ್ಞಾನಗಳು ನಾಶವಾಗೋಣ) ದೇವಾಃ =ಸತ್ವಸ್ವಭಾವವುಳ್ಳ ಪುರುಷರು, ಅಬಿಭ್ಯುಷಃ =ಸಂಸಾರ ಭಯರಹಿತರಾಗಿ, ತುಜ್ಯಮಾನಾಸಃ =ನಿನ್ನಿಂದಲೇ ಪ್ರೇರೇಪಿಸಿಕೊಳ್ಳಲ್ಪಟ್ಟವರಾಗಿಯೂ, ತ್ವಾಂ=ನಿನ್ನನ್ನು, ಆವಿಷುಃ =ದೈತ್ಯರಿಂದ ಕೆಟ್ಟ ಮಾತಿನಿಂದ ಅಚ್ಛಾದಿತನಾದವನನ್ನು ನಿರ್ದುಷ್ಟವಾದ ವಚನಗಳಿಂದ ರಕ್ಷಣೆ ಮಾಡಿದವರಂತೆ ಆದರು. (ಪ್ರಕಾಶಗೊಳಿಸಿದರು.) (ಪುರಂದರ ಪಕ್ಷದಲ್ಲಿ) ಅದ್ರಿವಃ = ಪರ್ವತಗಳನ್ನು ಭೇದಿಸತಕ್ಕ ಪುರಂದರನೇ, ತ್ವಂ =ನೀನು, ಗೋಮತಃ =ಗೋವುಗಳಿಂದ ಕೂಡಿದ, ವಲಸ್ಯ =ಬಲ ಎಂಬ ದೈತ್ಯನ. ಬಿಲಂ=ಗಿರಿ ಕೂಟದ ಕೆಳಗಿನ ವಿವರವನ್ನು ಅಪಲವಃ = ತಿರಸ್ಕರಿಸಿರುತ್ತಿ. (ಆಗ) ದೇವಾ=ದೇವತೆಗಳು, ತುಜ್ಯಮಾನಾಸಃ =ನಿನ್ನಿಂದಲೇ ಪ್ರೇರೇಪಿಸಲ್ಪಟ್ಟರವರಾಗಿ, ಅಬಿಭ್ಯುಷಃ =ಭಯರಹಿತರಾಗಿ, ತ್ವಾಂ=ನಿನ್ನನ್ನು, ಆವಿಷುಃ = (ಅವರಕ್ಷಣೆ) ಭಯವಿಲ್ಲದೆನೇ ನಿನ್ನನ್ನು ಸುತ್ತಮುತ್ತಲೂ ರಕ್ಷಣೆ ಮಾಡಿದರು. ||೫||

ಭಾ || (೧) ವಲಸ್ತ್ವಿರ್ಯಗ್ಗತಿರ್ಧಯಃ || (೨) ವಾಚಾಮನ್ಯಾರ್ಥಬುದ್ಧೇಸ್ತು ಬಿಲಂ ಮೂಲಂ ತಮೋ ಹಿ ಯತ್ । ತದಪಾವೃತವಾಂಸ್ತ್ವಂ ಚ ಪ್ರದರ್ಶ್ಯ ವಿನಿವಾರ್ಯ ಚ|| (೩) ತ್ವಾಂ ಹಿ ದೇವಾ ಭಯಾಪೇತಾಃ ಪ್ರೇರ್ಯಮಾಣಾಸ್ತ್ವಯೈವ ಚ । ಛಾದ್ಯಮಾನಂ ಗಿರಾ ದೈತ್ಯೈರರಕ್ಷನ್ನಿವ ಸದ್ಗಿರಾ ಇಂದ್ರಸ್ಯ ಗೋಸವಾರ್ಥೇ ಚ ಸಮುತ್ಸೃಷ್ಟಾ ಜಗತ್ಯಪಿ । ಚತುರ್ಥಂ ಗಾವೋ ಹೃತಾ ದೈತ್ಯೈಃ ಸರಮಾ ರಕ್ಷಿತಾಃ ಪುರಾ । ತಸ್ಯಾಃ ಸ್ವಸೃತ್ವಮುಕ್ತ್ವೈವ ತಯೋಚ್ಛಿಷ್ಟಂ ಚ ಗೋಪಯಃ । ತದರ್ಥಂ ಪಣಯೋ ನಾಮ ತೇ ದೈತ್ಯಾ ಬಲಪೂರ್ವಕಾಃ । ಇಂದ್ರೇಣ ನಿಹತಾಃ ಪಶ್ಚಾಜ್ಜ್ಞಾತ್ವಾ ಚ ಸರಮಾಕೃತಂ । ತಾಡಯಿತ್ವಾ ಪದಾ ವಕ್ತ್ರಾತ್ಸ್ಯತೇ ಪಯಸಿ ತಾಂ ಭಯಾತ್ । ಶರಣಾಗತಾಂ ಪ್ರೇಷಯಿತ್ವಾ ದೂತ್ಯೇನ ಪಣೀನಾಂ ಪುನಃ । ಭಿತ್ವಾ ಗಿರಿವ್ರಜಂ ತಂ ಚ ಗಾವೋ ಯತ್ರ ಪ್ರತಿಷ್ಠಿತಾಃ । ನಿಃಸಾರಿತಾಃ ಪುನಸ್ತ್ರಾತ್ವಃ ಗೋಸವೇನೇಷ್ಟಮೇವ ಚ। ತದಾ ದೇವಾಃ ಅಭೀತ್ಯೈವ ಪರಿತೋ ಜುಗುಪುಃ ಪತಿಂ ||೫||

ಅ|| (೧) ಮನಸ್ಸು ಅಥವಾ ಜ್ಞಾನವು ಯಾವುದಕ್ಕಾಗಿ ವಿಷಯಗಳನ್ನು ವಿಪರೀತವಾಗಿ ವಿಷಯೀಕರಿಸುತ್ತದೋ, ಅದು ವಲವೆನ್ನಿಸುತ್ತದೆ. ಅಂದರೆ ಯಥೇಷ್ಟ ಪ್ರವೃತ್ತಿಯು, ವಿಷಯಗಳಲ್ಲಿ ವಿಪರೀತವಾಗಿ ಪ್ರವೃತ್ತಿಯು. ಅಂದರೆ ವಿಪರೀತ ಜ್ಞಾನವು. (೨) ವೇದವಚನಗಳ ಅನ್ಯಾರ್ಥ ಬುದ್ಧಿಗೆ ಯಾವುದು ಮೂಲ ಕಾರಣವಾದ ಅಜ್ಞಾನವೋ ಆ ಅಜ್ಞಾನವನ್ನು ತತ್ವಾರ್ಥವನ್ನು ತೋರಿಸಿ ಆ ಅನ್ಯಾರ್ಥವನ್ನು ನಿರಾಕರಿಸುತ್ತಾ ನಾಶಗೊಳಿಸುತ್ತಿ. (ಅಂದರೆ ತತ್ವಮಸ್ಯಾದಿವೇದ ವಾಕ್ಯಗಳಿಗೆ ಅದ್ವೈತಾದ್ಯರ್ಥ ಜ್ಞಾನಕ್ಕೆ ಕಾರಣವಾದ ಅಜ್ಞಾನದ ನಾಸವು ಯಾವುದರಿಂದ ಆಗುವುದು ? ಯಾವುದರಿಂದಲೂ ಆಗಲಾರದು. ಉಪಕ್ರಮಾದಿ ಲಿಂಗಗಳಿಂದ ಅದ್ವೈತ ಜ್ಞಾನವೇ ದೃಢವಾಗಿದೆ. ಎಂದರೆ ತತ್ತ್ವಮಸ್ಯಾದಿ ವೇದ ವಾಕ್ಯಗಳಿಗೆ ಭೇದಾದಿ ರೂಪವಾದ ತತ್ವಾರ್ಥದಲ್ಲಿ ಉಪಕ್ರಮಾದ್ಯಾನುಕೂಲ್ಯವಿದೆ ಎಂದು ತೋರಿಸಬೇಕು. ಅಭೇದಾದ್ಯರ್ಥಕ್ಕೆ ಅನುಕೂಲ್ಯವಿಲ್ಲವೆಂದೂ ತೋರಿಸಿ ಅದ್ವೈತಾದ್ಯರ್ಥವನ್ನು ನಿರಾಕರಿಸಿದರೆ ಅಜ್ಞಾನವು ನಾಶಗೊಳ್ಳುತ್ತದೆ.) (೩) ವೇದಗಳಿಗೆ ಅನ್ಯಾರ್ಥವನ್ನು ನಿರಾಕರಿಸಿದುದರಿಂದ ಅಜ್ಞಾನ ಮಿಥ್ಯಾಜ್ಞಾನಗಳು ನಾಶ ಹೊಂದೋಣ. ಸಾತ್ವಿಕ ಪುರುಷರು ಸಂಸಾರ ಭಯರಹಿತರಾಗಿ ನಿನ್ನಿಂದಲೇ ಪ್ರೇರೇಪಿಸಲ್ಪಟ್ಟವರಾಗಿ ದೈತ್ಯರಿಂದ ಕೆಟ್ಟ ವಚನಗಳಿಂದ ಮರೆಯಾದವನನ್ನು ಸದ್ವಚನಗಳಿಂದ ಪ್ರಕಾಶಗೊಳಿಸಿದರು. (೪) (ಈ ಋಕ್ಕನ್ನು ಇಂದ್ರ ಪರವಾಗಿ ವ್ಯಾಖ್ಯಾನ ಮಾಡುತ್ತಾ ಈ ಋಕ್ಕು ಇತಿ ಹಾಸ ಗರ್ಭಿತವಾದ

ಪ್ರಯುಕ್ತ ಇತಿಹಾಸವನ್ನು ಹೇಳುತ್ತಾರೆ.) ಇಂದ್ರದೇವರು ಮಾಡತಕ್ಕ ಗೋಸವ ಎನ್ನುವ ಯಜ್ಞ ವಿಶೇಷದಲ್ಲಿ ಕ್ಲಪ್ತಗಳಾದ ಗೋವುಗಳನ್ನು (ಅಶ್ವಮೇಧ ಯಾಗದಲ್ಲಿ ಅಶ್ವದಂತೆಯೇ) ಜಗತ್ತಿನಲ್ಲಿ ಸಂಚರಿಸುವುದಕ್ಕಾಗಿ ಇಂದ್ರ ದೇವರು ಬಿಟ್ಟರು. ಅಂತಹ ಗೋವುಗಳನ್ನು ಮೊದಲು ದೇವತೆಗಳ ಆಜ್ಞೆಯನ್ನು ಪರಿಪಾಲಿಸಿಕೊಂಡಿರುವ ಸರಮಾ ಎನ್ನುವ ದೇವತೆಗಳ ನಾಯಿಯು ಇಂದ್ರ ದೇವರ ಅಜ್ಞಾನುಸಾರವಾಗಿ ರಕ್ಷಿಸುತ್ತಿದ್ದಿತು. ಗೋರಕ್ಷಣಾರ್ಥವಾಗಿ ನಿಯಕ್ತವಾದ ಸರಮಾ ಎಂಬ ದೇವತೆಗಳ ನಾಯಿಯೊಡನೆ ಸ್ವಸೃತ್ವಾದಿಗಳನ್ನು (ಸರಮೆಯೇ ನೀನು ನಮ್ಮ ತಂಗಿ ಇತ್ಯಾದಿಗಳನ್ನು) ದೈತ್ಯರು (ಮಿಥ್ಯೆಯಾದುದನ್ನೇ) ಹೇಳಿ (ಅಸರಮೆಯನ್ನು ವಂಚಿಸಿ ಅದನ್ನು ಅದನ್ನು ಬಿಟ್ಟು ಮಹಾ ಸಮರ್ಥರಾದ ಇಂದ್ರ ದೇವರ) ಗೋಪುಗಳನ್ನು ಕೂಡ ಅಪಹರಿಸಿಬಿಟ್ಟರು. (ಇಷ್ಟು ಮಾತ್ರವಲ್ಲದೆ ತನ್ಮಧ್ಯೆ ಗೋವುಗಳ ಹಾಲನ್ನು ಸರಮೆಯು ಕುಡಿದಿದೆ. ಆದಕಾರಣ) ಗೋವುಗಳ ಹಾಲು ಸರಮೆಯ ಉಚ್ಛಿಷ್ಟವೂ ಆಯ್ತು. (ಪಣಿಗಳಿಗಾಗಿ ಸರಮೆಯು ಗೋವುಗಳನ್ನು ಬಿಟ್ಟು ಬಿಟ್ಟಿದೆ. ಹೀಗೆ ದೈತ್ಯರು ಗೋವುಗಳನ್ನು ಅಪಹರಿಸಿ ಪರ್ವತದ ಕೆಳಗಿನ ಬಿಲದಲ್ಲಿ ಆ ಗೋವುಗಳನ್ನು ಇರಿಸಿದರು.) (ಇಂದ್ರ ದೇವರು ಸರಮೆಯ ಸಮೀಪಕ್ಕೆ ಬಂದು ಗೋವುಗಳು ಕಾಣದಿರಲು ಸರಮೆಯ ಹತ್ತಿರ ಗೋವುಗಳು ಎಲ್ಲಿ ಎಂದು ಕೇಳಿದಾಗ ಸುಮ್ಮನೆ ಇರಲು ಸಿಟ್ಟಿನಿಂದ ಸರಮೆಗೆ) ತನ್ನ ಕಾಲಿನಿಂದ ಒದ್ದಿದಾಗ ಸರಮೆಯ ಮುಖದಿಂದ ಹಾಲು ಹೊರಡುತ್ತಿರಲು (ಆ ಮೇಲೆ ಆ ಗೋವುಗಳ ಹಾಲು ಸರಮೆಯ ಉಚ್ಛಿಷ್ಟವೆಂದೂ ಸರಮೆಯು ಪಣಿನಾಮಕ ದೈತ್ಯರಿಗೆ ಗೋವುಗಳನ್ನು ಬಿಟ್ಟುಕೊಟ್ಟಿದೆ ಎಂದೂ, ಹೀಗೆ) ಸರಮೆಯು ಮಾಡಿದ ಪಯಃ ಪಾನಾದಿರೂಪ ವ್ಯಾಪಾರವನ್ನು ತಿಳಿದಾಗ ತನ್ನನ್ನು ಇಂದ್ರದೇವರು ಕೊಲ್ಲುತ್ತಾರೆಂಬ ಭಯದಿಂದ ಸ್ವಾಮಿಯೇ ತನ್ನನ್ನು ರಕ್ಷಿಸಬೇಕೆಂದು ಸರಮೆಯು ಇಂದ್ರ ದೇವರನ್ನು ಶರಣು ಹೊಂದಲು ಆ ಸರಮೆಯನ್ನೇ ದೈತ್ಯರ ಸ್ಥಲ ವಿಚಾರಕ್ಕಾಗಿ ಪಣಿಗಳ ಸಕಾಶಕ್ಕೆ ದೂತಭಾವದಿಂದ ಇಂದ್ರ ದೇವರು ಕಳುಹಿಸಿಕೊಟ್ಟು ಆ ಸರಮೆಯಿಂದ ಆ ದೈತ್ಯರ ಸ್ಥಳವನ್ನು ತಿಳಿದು ಎಲ್ಲಿ ಗೋವುಗಳು ಇರಿಸಲ್ಪಟ್ಟಿದ್ದಾವೋ, ಅಂತಹ ಗಿರಿರಾಶಿಯನ್ನು ಭೇದಿಸಿ ಇಂದ್ರ ದೇವರು ಗೋವುಗಳ ಅಪಹಾರ ನಿಮಿತ್ತವಾಗಿ ಪಣಿಗಳೆಂದು ಪ್ರಸಿದ್ಧರಾದ ಬಲನೇ ಮೊದಲಾದ ಆ ದೈತ್ಯರನ್ನು ಸಂಹರಿಸಿದರು. ಆ ಮೇಲೆ ಆ ಗೋವುಗಳ್ನು ಇಂದ್ರ ದೇವರು (ಬಿಲದಿಂದ) ಹೊರಡಿಸಿದ ಮೇಲೆ ಗೋಸವಾಖ್ಯ ಯಜ್ಞವನ್ನು ಮಾಡಿ ಅದರಿಂದ ಇಷ್ಟವನ್ನೇ ಮಾಡಿದರು. ಆಗ ದೇವತೆಗಳು ದೈತ್ಯರ ಭಯವಿಲ್ಲದವರಾಗಿಯೇ ತಮಗೆ ಸ್ವಾಮಿಯಾದ ಇಂದ್ರನೆನಿಸಿಕೊಂಡ ನಿನ್ನನ್ನು ಸುತ್ತಮುತ್ತಲೂ ರಕ್ಷಿಸಿದರು. (ಸ್ತೋತ್ರಾದಿಗಳನ್ನು ಮಾಡುತ್ತಿದ್ದರು.) ||೫||

ಋ || (೧೦೮) ತವಾಹಂ ಶೂರ ರಾತಿಭಿಃ ಪ್ರತ್ಯಾಯಂ ಸಿಂಧುಮಾವದನ್ ।

ಉಪಾತಿಷ್ಠಂತ ಗಿರ್ವಣೋ ವಿದುಷ್ಟೇ ತಸ್ಯ ಕಾರವಃ ||೬||

ಅ|| ಶೂರ =ಇಂದ್ರನೇ, ಅಹಂ =ನಾನು, ತವ=ನಿನ್ನ ರಾತಿಭಿಃ =ದಾನ ನಿಮಿತ್ತಗಳಿಂದ, (ಯಜ್ಞದೀಕ್ಷೆಗಾಗಿ ಉದ್ಯುಕ್ತನಾಗಿ) ಸಿಂಧುಂ = ನದಿಯನ್ನು ಕುರಿತು, ಪ್ರತ್ಯಾಯಂ= ಬಂದಿರುವೆನು. (ಬಂದು ಪುನಃ) ಅವದನ್=ಸ್ತುತಿ ರೂಪಗಳಾದ ವೇದ ಪದಗಳಿಂದ ನಿನ್ನನ್ನು ಚೆನ್ನಾಗಿ ಸ್ತುತಿಸುತ್ತಿರುತ್ತೇನೆ. ಅಥವಾ ಸರ್ವದಾ ನಿನ್ನನ್ನು ಸ್ತುತಿಸುತ್ತಾ ನಾನು ನದಿಯನ್ನು ಕುರಿತು ಬಂದಿರುವೆನು. ಗಿರ್ವಣಃ = (ಗಿರ್‌ಶಬ್ದೋಪಪದಾತ್ ತಿಳಿಯುತ್ತಾರೋ, (ಅವರು) ಕಾರವಃ

=ಕರ್ತೃಗಳಾದ ಋತ್ವಿಜರು. (ಅಂತಹ ನಿನ್ನನ್ನು) ಉಪಾತಿಷ್ಮಂತ =ಮಂತ್ರಗಳಿಂದ ನಿನ್ನನ್ನು ಪೂಜಿಸಿದರು. ||೬||

ಭಾ || **ತವ ದಾನ್ಯೈರಹಂ ಸಿಂಧುಂ ನದೀಂ ಪ್ರತ್ಯಾಗಮಂ ಪುನಃ । ತ್ವಾಮಾವದನ್ ಸ್ತುತಿ ಪದ್ಯೈರ್ಯಜ್ಞದೀಕ್ಷಾರ್ಥಮುತ್ಕೃತಾಃ । ಉಪಾತಿಷ್ಮಂತ ಕರ್ತಾರೋ ವಿದುಸ್ತ್ವಾಂ ಯೇ ಗಿರೋದಿತ** ||೬||

ಅ|| ಎಲೋ ಇಂದ್ರನೇ, ನಾನು ನಿನ್ನ ದಾನ ನಿಮಿತ್ತದಿಂದ ಯಜ್ಞದೀಕ್ಷೆಗೆ ಉದ್ಯುಕ್ತನಾಗಿ ಸಿಂಧುಂ = ನದಿಯನ್ನು ಕುರಿತು ಬಂದಿರುವೆನು. (ಅಂದರೆ ನೀನು ಭಕ್ತರಿಗೆ ಬಹಳವಾಗಿ ಕೊಡುತ್ತಿದ್ದಿ ಎಂಬ ನಿಮಿತ್ತದಿಂದ ನಾನು ಕೂಡ ಬಹು ಹೊಂದಬೇಕೆನ್ನುವ ಅಭಿಪ್ರಾಯದಿಂದ ಯಜ್ಞಮಾಡಲಿಕ್ಕೆ ಬಂದಿರುವೆನು) ಬಂದು ಪುನಃ- ಸ್ತುತಿರೂಪಗಳಾದ ವೇದ ಪದಗಳಿಂದ ಚೆನ್ನಾಗಿ ಸ್ತುತಿಸುವವನಾಗಿರುತ್ತೇನೆ. ಅಥವಾ ಸರ್ವದಾ ನಿನ್ನನ್ನು ಸ್ತುತಿಸುವ ನಾನು ಪುನಃ ಯಜ್ಞ ಮಾಡಲಿಕ್ಕಾಗಿ ನದಿಗೆ ಬಂದಿರುವೆನು. ವೇದ ವಾಕ್ಯಗಳಿಂದ ಪ್ರತಿಪಾದಿತನೇ ಆದ ನಿನ್ನನ್ನು ಯಾರು ತಿಳಿಯುತ್ತಾರೋ, ಅಂತಹ ಕರ್ತೃಗಳಾದ ಋತ್ವಿಜರು ಮಂತ್ರಗಳಿಂದ ನಿನ್ನನ್ನು ಪೂಜಿಸಿದರು. ||೬||

ಋ || **(೧೦೯) ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।**
**ವಿದುಷ್ಟೇ ತಸ್ಯ ಮೇಧಿರಾಸ್ತೇಷಾಂ ಶ್ರವಾಂಸ್ಯುತ್ತಿರ** ||೭||

ಅ|| ಇಂದ್ರ=ಶ್ರೀ ಪರಮೇಶ್ವನೇ, ತ್ವಂ =ನೀನು, ಮಾಯಿನಂ =ಶಕ್ತಿಯುಳ್ಳ ಶುಷಂ = (ಶುಷ ಶೋಷನೇ) ಶೋಷಕನಾದ ವೃತಾಸುರನನ್ನು, (ಅಧ್ಯಾತ್ಮಾರ್ಥದಲ್ಲಿ) ತಮಸ್ಸನ್ನು, ಮಾಯಾಭಿಃ =ಶಕ್ತಿಗಳಿಂದ, ಆವಾತಿರ । =(ತಿರವೇಧೇ) ಸಂಹರಿಸಿರುತ್ತಿ. ಮೇಧಿರಾಃ =ಯಾರು ಅತಿಶಯವಾಗಿ ಯಜ್ಞದಲ್ಲಿಯೇ ಆಸಕ್ತರಾಗಿ, ತಸ್ಯತೇ =ಅಂತಹ ನಿನ್ನನ್ನು, ವಿದುಃ =ತಿಳಿಯುತ್ತಾರೋ, ತೇಷಾಂ = ಅಂತಹವರಿಗೆ, ಶ್ರವಾಂಸಿ = (ಶ್ರು ಶ್ರವಣೇ ಶ್ರೂಯಂತೇ ಇತಿ ಶ್ರವಾಂಸಿ.) ವಿದ್ಯೆಗಳನ್ನು, ಉತ್ತಿರ =ಅತಿಶಯವಾಗಿ ಕೊಡು. ||೭||

ಭಾ || **ಶಕ್ತಿಭಿಃ ಶಕ್ತಿಮಂತಂ ತ್ವಾಂ ಶೋಷಕಂ ವೃತ್ರಮಾತಿರಃ । ತಮೋ ವಾ ತ್ವಾಂ ವಿದುರ್ಮೇಧಾರತಾಸ್ತೇಷಾಂ ಶ್ರವಾಂಸಿ ಚ । ವಿದ್ಯಾ ಉಚ್ಚೈಸ್ತರಾಂ ದೇಹಿ** ||೭||

ಅ|| ಇಂದ್ರನೇ ಶಕ್ತಿಯುಳ್ಳ, ಶೋಷಕನಾದ ವೃತ್ರನನ್ನು (ಆಯಾತ್ಮಾರ್ಥ) ಅಜ್ಞಾನವನ್ನು ಸಾಮರ್ಥ್ಯಗಳಿಂದ ತಿರಸ್ಕರಿಸಿರುತ್ತಿ. ಯಾಗದಲ್ಲಿಯೇ ಅತಿಶಯವಾಗಿ ಆಸಕ್ತರಾಗಿ ಯಾರು ನಿನ್ನನ್ನೇ ತಿಳಿಯುತ್ತಾರೋ ಅಂತಹವರಿಗೆ ಶ್ರವಾಂಸಿ=ವಿದ್ಯೆಗಳನ್ನು ಅತಿಶಯವಾಗಿ ಕೊಡು. ||೭||

ಋ || **(೧೧೦) ಇಂದ್ರಮೀಶಾನಮೋಜಸಾಽಭಿ ಸ್ತೋಮಾ ಅನೂಷತ ।**
**ಸಹಸ್ರಂ ಯಸ್ಯ ರಾತಯ ಉತ ವಾ ಸಂತಿ ಭೂಯಸೀಃ ||** ||೮||೨೧||೧೧||೩||

ಅ|| ಯಸ್ಯ = ಯಾವ ಇಂದ್ರನಿಗೆ, ಸಹಸ್ರಂ = ಸಹಸ್ರ ಸಂಖ್ಯಾಕಗಳಾದ, ಉತ ವಾ =ಅವುಗಳಿಗಿಂತಲೂ ಭೂಯಸೀಃ =ಬಹಳಗಳಾದ, ರಾತಯಃ =ಅಭೀಷ್ಟ ದಾನಗಳು, ಸಂತಿ=ಇರುತ್ತವೋ, ಈಶಾನಂ =ಅಂತಹ ಸರ್ವಸ್ವಾಮಿಯಾದ, ಇಂದ್ರಂ=ಪರಮೈಶ್ವರ್ಯ ಸಂಪನ್ನನಾದ ನಿನ್ನನ್ನು, ಓಜಸಾ =ಶಕ್ತಿ ಮೊದಲಾದ ಗುಣಗಳಿಂದ, ಕೂಡಿ ಸ್ತೋಮಾಃ=ಸ್ತುತಿ ವಿಶೇಷಗಳು, ಅಭಿ ಅನೂಷತ = (ಣು ಸ್ತುತೌ.) ಸರ್ವದಾ ಸ್ತುತಿಸುತ್ತವೆ ||೮||

**ಭಾ || ಸ್ತುವಂತಿ ತ್ವಾಂ ಸಹೌಜಸಾ** **||೮||**

ಅ|| ನಿನ್ನನ್ನು ಶಕ್ತಿ ಮೊದಲಾದ ಗುಣಗಳಿಂದ ಕೂಡಿದವನನ್ನಾಗಿ ಸ್ತುತಿಸುತ್ತವೆ. ||೮||೨೧||೧೧||೩||

ಅವ|| ಶತರ್ಚಿತ್ವಕ್ಕೆ ಗತಿಯನ್ನು (ಶತರ್ಚಿ ಎಂಬ ನಾಮಕ್ಕೆ ಸಮರ್ಪಕ ಕಾರಣವನ್ನು) ಹೇಳಿದಾಗ್ಯೂ ಈ ಋಕ್ಕುಗಳಿಗೆ ಮಧುಛಂದಸರು ಋಷಿಗಳೆಂದು ಏಕೆ ಹೇಳುವುದು ? ಮಾಧುಛಂದಸೋ ಜೇತಾ ಎಂಬ ಋಷಿಯು ಏಕೆ ಆಗಲಾರದೆಂದರೆ-

**ಭಾ || (೧) ಋಕ್ಸಂಹಿತಾಯಾಃ ಸ್ವಾಧ್ಯಾಯಾತ್ ಪ್ರಬಂಧಾದ್ವ್ಯಾಸನಿರ್ಮಿತಾತ್। ಬ್ರಾಹ್ಮಣೇಭ್ಯಸ್ತಥಾ ಮಾನಾತ್ತ್ವೋಕ್ತಾಃ ಸ್ಯುರ್ಮುನಯೋಽತ್ರ ಯೇ॥ (೨) ಶ್ರುತ್ಯ ಭಾವಾದಲಿಂಗಾಚ್ಚ ಮುನಿರ್ನಾನ್ಯಃ ಪ್ರತೀಯತೇ। (೩) ಶ್ರುತಿಲಿಂಗಾನ್ಯತಾ ಯಾವ ತ್ತಾವತ್ಪೂರ್ವಾ ಪ್ರಮಾ ಭವೇತ್ ॥**

ಅ|| (೧) ಋಕ್ಸಂಹಿತಾಪ್ರಮಾಣದಿಂದಲೂ, ವೇದದಿಂದಲೂ, ವೇದ ವ್ಯಾಸರು ಮಾಡಿದ ಪ್ರಬಂಧದಿಂದಲೂ, ಬ್ರಾಹ್ಮಣಗಳಿಂದಲೂ (ಜ್ಯೋತಿಷ್ಟೋಮೇನ ಸ್ವರ್ಗ ಕಾಮೋ ಯಜೇತ ಇದು ಮೊದಲಾದ ವಿಧಾಯಕ ವಾಕ್ಯವು ಬ್ರಾಹ್ಮಣವು.) ಇಂತಹ ಪ್ರಮಾಣಗಳಿಂದ, ಅಥವಾ ಇತರ ಪ್ರಮಾಣಗಳಿಂದಲೂ, ಯಾರು ಈ ಗ್ರಂಥದಲ್ಲಿ ಋಷಿಗಳೆಂದು ನಮ್ಮಿಂದ ಹೇಳಲ್ಪಟ್ಟಿದ್ದಾರೋ, ಅವರು ಋಕ್ಸಂಹಿತಾದಿ ಪ್ರಮಾಣಗಳ ಅನುಸಾರವಾಗಿಯೇ ಅವರೇ ಋಷಿಗಳಾಗುವರು. ಅಥವಾ ಋಕ್ಸಂಹಿತಾ ಮೊದಲಾದ ಪ್ರಮಾಣಗಳಿಂದ ಯಾರು ಈ ಗ್ರಂಥದಲ್ಲಿ ಋಷಿಗಳೆಂದು ಹೇಳಲ್ಪಟ್ಟಿರುವರೋ ಅವರನ್ನೇ ಋಷಿಗಳೆಂದು ಸ್ವೀಕರಿಸಬೇಕು. (ಸಾಯಣ ಮೊದಲಾದ ಮನುಷ್ಯರು ರಚಿಸಿದ ಗ್ರಂಥದಲ್ಲಿ ಹೇಳಿದವರನ್ನು ಋಷಿಗಳೆಂದು ಸರ್ವಥಾ ಸ್ವೀಕರಿಸಬಾರದು. (೨) ಯುಕ್ತ್ಯಂತರವನ್ನು ಹೇಳುತ್ತಾರೆ. (ಲಿಂಗ ಶಬ್ದ ಸಮಭಿವ್ಯಾಹಾರದಿಂದ ಶ್ರುತಿ ಶಬ್ದವು ನಾಮಧೇಯ ಪರವು ವೇದಪರವಲ್ಲ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.) (1) ಶುನಶ್ಶೇಪೋ ಹ್ಯಷ್ವತ್ ಇತ್ಯಾದಿಗಳಂತೆ ಮಧು ಛಂದಸರಿಗಿಂತ ಇತರರಾದ ಮುನಿಗಳ ನಾಮವು ಇಲ್ಲ. (೨ನೇ ಋಕ್ಕಿನಲ್ಲಿದ್ದ ಜೇತಾರಮಪರಾಜಿತಂ ಎನ್ನುವುದು ಜೇತೃವೆಂಬ ಋಷಿಯ ನಾಮವಲ್ಲ, ಏಕೆಂದರೆ -ಜೇತಾರಂ ಎನ್ನುವುದು ಆ ಋಕ್ಕಿನಲ್ಲಿಯೇ ಇದ್ದ ತ್ವಾಂ ಎನ್ನುವ ಶಬ್ದದಿಂದ ಹೇಳಲ್ಪಟ್ಟ ಇಂದ್ರನಿಗೆ ವಿಶೇಷಣವಾಗಿದೆ. ಆದಕಾರಣ ಮಾಧುಛಂದಸ ಜೇತೃವನ್ನು ಪ್ರತಿಪಾದಿಸುತ್ತದೆನ್ನುವುದು ಕೂಡುವುದಿಲ್ಲ.) (೩) ತ್ರಿಷ್ವಾದಿತ್ಯಂ ದ್ರುಪದೇಷು ಬದ್ಧಃ ಇತ್ಯಾದಿಗಳಂತೆ ಬೇರೆ ಋಷಿಗಳ ಲಿಂಗವಿಲ್ಲ. (ಅಂದರೆ ಸ್ಥಾನತ್ರಯದಲ್ಲಿ ಬಂಧನವು ಶುನಃಶೇಪನ ಚಿಹ್ನೆಯು. (ಲಿಂಗವು) ಅಂತಹ ಚಿಹ್ನೆಯು ಮಾಧುಛಂದಸ ಜೇತೃ ಋಷಿಗೆ ಹೇಳಲಿಲ್ಲ.) (ಮತ್ತು ಬೇರೆ ಋಷಿಗಳನ್ನು ಜ್ಞಾಪಿಸುವ ವಾಕ್ಯ ಪ್ರಕರಣ ಮೊದಲಾದ ಪ್ರಮಾಣಗಳು ಇಲ್ಲ. ಆದುದರಿಂದಲೂ) ಮಧುಛಂದಸ ಋಷಿಗಳಿಂದ ಇತರರಾದ ಋಷಿಗಳು ತೋರುವುದಿಲ್ಲ. (ಮತ್ತು ಗಾಯತ್ರಂ ಪ್ರಉಗಂ ಕುರ್ಯಾದಿತ್ಯಾಹುಃ ಇತ್ಯಾದಿಗಳಿಂದ ಪ್ರುಗ ಶಸ್ತ್ರ ಸ್ವರೂಪಗಳಾದ ಗಾಯತ್ರೀ ಉಷ್ಣಿಕ್ ಮೊದಲಾದ ಛಂದಸ್ಸುಳ್ಳ ಋಕ್ಕುಗಳಿಗೆ ಪ್ರತ್ಯೇಕ ಫಲ ಹೇಳಿ ತದು ಗಾಯತ್ರಮೇವ ಕುರ್ಯಾತ್ ಎಂದು ಗಾಯತ್ರಕ್ಕೆ ಬ್ರಹ್ಮಪ್ರಾಪ್ತಿರೂಪವಾದ ವಿಶೇಷ ಫಲವನ್ನು ಹೇಳೋಣ

ಅಂತಹ ಗಾಯತ್ರವು ಯಾವುದು? ಎಂದರೆ ತದು ಮಾಧುಛಂದಸಂ ಗಾಯತ್ರವೇ ಮಾಧುಛಂದಸವು ಎಂದು ಮಧುಛಂದಸರು ಕಂಡ ಸೂಕ್ತ ಸಮುದಾಯವನ್ನು ಹೇಳಿ ವಾಯುವಾಯಾಹಿ ಎಂಬ ಉತ್ತರ ಖಂಡದಲ್ಲಿ ವಾಯವಾಯಾಹಿ ಅಶ್ವಿನಾ ಯಜ್ವರೀಃ ಎಂದು ೨ ಸೂಕ್ತಗಳನ್ನು ಗ್ರಹ ಮಾಡಿದುದರಿಂದ ಪೂರ್ವೋತ್ತರ ಸೂಕ್ತಗಳನ್ನು ಮಧುಛಂದಸರೇ ಕಂಡದ್ದು ಎಂದು ಹೇಳಬೇಕು. ಆದುದರಿಂದಲೂ ಮಧುಛಂದಸರೇ ಇಂದ್ರಂ ವಿಶ್ವಾ ಎಂಬ ಸೂಕ್ತದಲ್ಲಿಯೂ ದ್ರಷ್ಟ್ರುಗಳೆಂದು ಅಂಗೀಕರಿಸಲೇಬೇಕು) (೩) (ಹೀಗಾದರೆ ಅಗ್ನಿಂ ದೂತಂ ಇತ್ಯಾದಿಗಳಲ್ಲಿಯೂ ಮಧುಛಂದಸರೇ ದ್ರಷ್ಟ್ರುಗಳೆಂದಾಗಲಿ, ಎಂದರೆ) ಇತರ ವಿಷಯವನ್ನು ಸಾಮಾನ್ಯ ಪ್ರಮಾಣವು ಜ್ಞಾಪಕವು ಆಗುವುದು. 'ಅಂದರೆ ತದು ಮಾಧುಛಂದಸಂ ಎನ್ನುವುದು ಸಾಮಾನ್ಯ ವಚನವು. ಅಪವಾದವಿಲ್ಲವಾದರೆ ಅದು ಪ್ರಮಾಣವೇ. ಅಪವಾದವಿದ್ದರೆ ಸಂಕೋಚ ಮಾಡಬೇಕು. ಇಲ್ಲಿ ಅಪವಾದಕವಾದ ಶ್ರುತ್ಯಾದಿ ಪ್ರಮಾಣಗಳಿಲ್ಲ. ಅಗ್ನಿಂದೂತಂ ಇತ್ಯಾದಿಗಳಲ್ಲಿ ಆದರೂ ಸ್ವಾಧ್ಯಾಯ ಮೊದಲಾದ ಅಪವಾದಕ ಪ್ರಮಾಣವಿದೆ. ಆದ ಕಾರಣ ಅಲ್ಲಿ ಮಧುಛಂದಸರು ಋಷಿಗಳಲ್ಲ. ॥೨೧॥

ಅವ ॥ ವ್ಯಾಖ್ಯಾನ ಮಾಡಲಿಕ್ಕೆ ಇಷ್ಟಗಳಾದ ಋಕ್ಕುಗಳಿಗೆ ಋಷಿಯನ್ನು ಹೇಳುತ್ತಾರೆ.

ಭಾ॥ **(೧) ಶತರ್ಚಿರುತ್ತಾರಾಭಿಸ್ತು ವಹ್ನಿನಾಮಾನಮಚ್ಯುತಂ । ಅಸ್ತೌನ್ಮೇಧಾತಿಥಿಸ್ತಾಭ್ಯಃ ಉತ್ತರಾ ಅಪಿ ತದ್ದೃಶಃ ॥ (೨) ಅನ್ಯತ್ರಗಾಸ್ತಪಸ್ಯನ್ಸಃ ತಾ ದದರ್ಶ ಕದಾಚನ ॥ (೩) ಕಾಲಸ್ಥಾನಾಂತರತ್ವಂಚೇತ್ಸಂಖ್ಯಾತೋಽಭ್ಯಧಿಕಂ ಭವೇತ್। (೪) ಅನ್ಯಸ್ಥಾನಗತಾ ಅನ್ಯದೃಷ್ಟಾ ಅಪ್ಯತ್ರಗಾ ಯದಿ । ಸಂಖ್ಯಾಂತರ್ಭಾವಮೇಷ್ಯಂತಿ ತಾ ಇತೋಽಪಗತಾಯತಃ ॥**

॥ (೧) (ಶತಂ ಚತಾಃ ಋಚಶ್ಚ) ಮೇಲಿನ ೧೦೦ ಋಕ್ಕುಗಳಿಂದಲಾದರೂ ವಹ್ನಿ ಇತ್ಯಾದಿ ನಾಮಗಳುಳ್ಳ, ಶ್ರೀ ಪರಮಾತ್ಮನನ್ನು ಮೇಧಾತಿಥಿ ಋಷಿಗಳು ಸ್ತುತಿಸಿದರು. (ಹೀಗಾದರೆ ಕಸ್ಯ ನೂನಂ ಎನ್ನುವುದಕ್ಕಿಂತ ಹಿಂದಿನ ಯಾವಾಂಕಶಾಮಧುಮತೀ ಇದು ಮೊದಲಾದವುಗಳಿಗೆ ಬೇರೆ ಋಷಿಗಳನ್ನು ಹೇಳಬೇಕಾಗುವುದು ಎಂದರೆ) ಆ ೧೦೦ ಋಕ್ಕುಗಳ ದೆಶೆಯಿಂದ ಮೇಲಿನ ೩೯ ಋಕ್ಕುಗಳೂ ಕೂಡ ಮೇಧಾತಿಥಿ ಋಷಿಗಳೇ ದೃಷ್ಟ ಆಗಿ ಉಳ್ಳವುಗಳು. (ಆ ೩೯ ಋಕ್ಕುಗಳನ್ನು ಅವರೇ ಕಂಡದ್ದು.) (೨) (ಹಾಗಾದರೆ ಅವರಿಗೆ ಶತರ್ಚಿ (೧೦೦ ಋಕ್ಕುಗಳನ್ನು ಕಂಡವರು) ಎಂಬ ನಾಮವು ಹೇಗೆ? ಎಂದರೆ) ಆಮೇಧಾತಿಥಿ ಋಷಿಗಳೇ ತಪಸ್ಸು ಮಾಡಿಕೊಂಡಿರುವವರು ಒಂದಾನೊಂದು ಸಮಯದಲ್ಲಿ ಬೇರೆ ಅನುಪೂರ್ವಿಗಳಲ್ಲಿರತಕ್ಕ ೩೯ ಋಕ್ಕುಗಳನ್ನು ಕಂಡದ್ದು. (ಅನ್ಯತ್ರಗಾಃ ಎನ್ನುವುದರಿಂದ ಬೇರೆ ಅನು ಪೂರ್ವಿಯೆಂದೂ ತಪಸ್ಯನ್ ಎನ್ನುವುದರಿಂದ ಅವಸ್ಥಾಂತರವೆಂದೂ, ಕದಾಚನ ಎನ್ನುವುದರಿಂದ ಕಾಲಾಂತರವೆಂದೂ ಉಕ್ತವಾಯ್ತು.) (೩) (ಪ್ರಕೃತವೇನಾಯಿತೆಂದರೆ) ಕಾಲಾಂತರದಲ್ಲಿ ವೇದದಲ್ಲಿಯೇ ಬೇರೆ ಪ್ರದೇಶಗಳಲ್ಲಿ (ಅನ್ಯಸ್ಥಾನದಲ್ಲಿ) (ಇತರರು ಕಂಡದ್ದನ್ನು) ನೋಡಿದ್ದು ಎಂದಾದರೆ - ೧೦೦ ಸಂಖ್ಯೆಗಳಿಂದ ಅಭ್ಯಧಿಕವಾದುದೂ ೧೦೦ ಸಂಖ್ಯೆಗಳಲ್ಲಿ ಅಂತರ್ಭೂತವೇ ಆಗುವುದು. (ಅದರಲ್ಲಿಯೇ ಸೇರುವುದು) (೪) (ಈ ವಿಷಯದಲ್ಲಿ ಯುಕ್ತಿಯನ್ನು ಹೇಳುತ್ತಾರೆ.) ಬೇರೆ ಸ್ಥಾನಗಳಲ್ಲಿ (ವೇದದಲ್ಲಿಯೇ ಬೇರೆ ಪ್ರದೇಶದಲ್ಲಿ) ಬೇರೆ ಕಾಲಗಳಲ್ಲಿ, ಬೇರೆ ಅವಸ್ಥೆಗಳಲ್ಲಿ ಇರತಕ್ಕವುಗಳು, ಇತರರಿಂದ ಕಾಣಲ್ಪಟ್ಟವುಗಳೂ ಇಲ್ಲಿ ಇರುವವುಗಳೆಂದಾದರೆ, ಅವುಗಳು (ಅಂದರೆ ಕಾಲಾಂತರದಲ್ಲಿ ದೇಶಾಂತರದಲ್ಲಿ ಅವಸ್ಥಾಂತರದಲ್ಲಿಯೂ ಕಾಣಲ್ಪಟ್ಟವುಗಳೂ ಬೇರೆ ಋಷಿಗಳಿಂದ ಕಾಣಲ್ಪಟ್ಟವುಗಳೂ ಬೇರೆ ಅನುಪೂರ್ವಿಗಳಲ್ಲಿ ಇರತಕ್ಕವುಗಳೂ) ಇಲ್ಲಿ ಇದ್ದರೂ, ಯಾವ

ಕಾರಣದಿಂದ ಇಲ್ಲದವುಗಳಿಗೆ ಸದೃಶಗಳೋ, ಆದ ಕಾರಣ ಅವುಗಳು ೧೦೦ ಸಂಖ್ಯೆಗಳಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆ. (ಅಂದರೆ ಆ ೩೯ ಋಕ್ಕುಗಳು ಹೆಚ್ಚು ಇದ್ದರೂ ೧೦೦ ನೂರು ಎಂದೇ ಹೇಳಲ್ಪಡುತ್ತದೆ.) (ಏವಂಚ ಒಂದೇ ದೇಶ, ಒಂದೇ ಕಾಲ, ಒಂದೇ ಅವಸ್ಥೆಗಳಲ್ಲಿ ಅಮೇಧಾತಿಥಿ ಋಷಿಗಳೇ ಕಂಡದ್ದು ಮೂಲವೇದದಲ್ಲಿ ಅಂದರೆ ಉಪವೇದದಲ್ಲಿಯೂ ಒಂದೇ ಅನುಪೂರ್ವಿಯಲ್ಲಿರತಕ್ಕುದೇ ಆದ ಕಾರಣ ೧೦೦ ಋಕ್ಕುಗಳನ್ನು ಕಂಡದ್ದೆ ಶತರ್ಚಿ ಎಂದು ನಾಮ ಬರಲಿಕ್ಕೆ ಕಾರಣವು) (ಆ ೩೯ ಋಕ್ಕುಗಳು ಬೇರೆ ಕಡೆ ಇದ್ದುದ್ದು.) ||೧||

ಋ || (೧೧೧) ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ । ಅಸ್ಯ ಯಜ್ಞಸ್ಯ ಸುಕ್ರತುಂ ||೧||

ಅ|| (ಈ ಋಕ್ಕನ್ನು ಆರಂಭಿಸಿ ಮೇಲಿನ ೩೯ ಋಕ್ಕಗಳಿಗೆ ಕೇವಲ ಮೇಧಾತಿಥಿ ಋಷಿಗಳು. ಅದರಲ್ಲಿ ಅಗ್ನಿಂ ದೂತಂ ಎನ್ನುವುದು ಅಗ್ನೇಯ ಸೂಕ್ತವು. ೧೨ ಋಕ್ಕುಗಳು. ಗಾಯತ್ರೀ ಛಂದಸ್ಸು) ವಿಶ್ವವೇದಸಂ = (ವಿದ ಜ್ಞಾನೇ) ಸರ್ವವನ್ನು ತಿಳಿದಿರುವ, ಅಸ್ಯ=ಪ್ರಮಾಣ ಪ್ರಮಿತವಾದ, ಯಜ್ಞಸ್ಯ=ಯಾಗ ಸಮುದಾಯದ ಸುಕ್ರತುಂ =ಚೆನ್ನಾಗಿ ಜ್ಞಾನವುಳ್ಳ. ದೂತಂ =ದೇವತೆಗಳ ಪ್ರಾರ್ಥನೆಯನ್ನು ಮಾಡುವುದರಿಂದ ದೂತನೆನಿಸಿಕೊಂಡ ದೇವತೆಗಳಿಗೆ ಹವಿರ್ಭಾಗವನ್ನು ತಂದುಕೊಡುವುದಕ್ಕಾಗಿ ದೇವತೆಗಳಿಂದ ಕಳುಹಿಸಲ್ಪಡುವುದರಿಂದ ದೂತರೆಂದು ಪ್ರಸಿದ್ಧನಾದ ಹೋತಾರಂ =ಹೋತನಲ್ಲಿ ನಿಯಾಮಕನಾಗಿದ್ದುದರಿಂದ ಹೋತೃ ಎನಿಸಿಕೊಂಡ, ಅಗ್ನಿಂ=ಅಗ್ನಿಯಲ್ಲಿರತಕ್ಕ ಅಗ್ನಿನಾಮಕನಾದ ಪರಶುರಾಮನನ್ನು ಅಗ್ನಿಯನ್ನು (ನಾವು) ವೃಣೀಮಹೇ (ವೃಜಿಸಂಭಕ್ತೌ) = ಪ್ರಾರ್ಥಿಸುತ್ತೇವೆ. ||೧||

ಭಾ || (೧) ಯಜ್ಞಭಾಗಾರ್ಥಮತ್ರಸ್ಥೋ ದೇವೈಃ ಸಂಪ್ರೇಷಿತೋ ಯತಃ । ದೂತೋಽಗ್ನಿರ್ವಾಸುದೇವಶ್ಚ ತತ್ರತ್ಯಾರ್ಥಿತಕೃದ್ಯತಃ || (೨) ವಿಶ್ವವೇದಾಃ ಸ ಸರ್ವಜ್ಞೋ ಯಜ್ಞಜ್ಞೋ ಯಜ್ಞಸುಕ್ರತುಃ ||೧||

ಅ|| (೧) ಯಾವ ಕಾರಣದಿಂದ ಅಗ್ನಿಯು ಯಜ್ಞಭಾಗವನ್ನು ತೆಗೆದುಕೊಳ್ಳುವುದಕ್ಕಾಗಿ ದೇವತೆಗಳಿಂದ ಕಳುಹಿಸಲ್ಪಡುತ್ತಾನೋ, ಆದ ಕಾರಣ ದೂತನೆನಿಸುತ್ತಾನೆ. (ಆಜ್ಞೆ ಮಾಡಿ ಕಳುಹಿಸಲ್ಪಡುವವನು ದೂತನೆನಿಸುತ್ತಾನೆ.) ಅಗ್ನಿಯಲ್ಲಿ ನಿಯಾಮಕನಾಗಿರತಕ್ಕ ಶ್ರೀ ವಾಸುದೇವನು ಆವಾವ ದೇವತೆಗಳ ಪ್ರಾರ್ಥನೆಯನ್ನು ಮಾಡುವವನೋ, ಆದ ಕಾರಣ ದೂತನಾದ ಅಗ್ನಿಗೆ ಅಂತಃಪ್ರೇರೇಪಿಸುವುದಕ್ಕಾಗಿ ಇದ್ದು ಅಗ್ನಿದ್ವಾರಾ ಅವರವರ ಇಷ್ಟವನ್ನು ಮಾಡುವುದರಿಂದ ದೂತನಂತೆ ಇರುವವನು. (೨) ಆ ಶ್ರೀ ವಿಷ್ಣುವು ವಿಶ್ವವನ್ನು ತಿಳಿದವನು. ಅಂದರೆ ಸರ್ವಜ್ಞನು, ಯಜ್ಞಸುಕ್ರತುಃ ಯಜ್ಞ ಸಮುದಾಯವನ್ನು ತಿಳಿದವನು. ||೧||

ಋ || (೧೧೨) ಅಗ್ನಿಮಗ್ನಿಂ ಹವೀಮಭಿಃ ಸದಾ ಹವಂತ ವಿಶ್ಪತಿಂ । ಹವ್ಯವಾಹಂ ಪುರುಪ್ರಿಯಂ ||೨||

ಅ|| (ಋತ್ವಿಜರು) ವಿಶ್ಪತಿಂ = ಪ್ರಜೆಗಳಿಗೆ ಅಧಿಪತಿಯಾದ, ಹವ್ಯವಾಹಂ = (ವಹ ಪ್ರಾಪಣೇ) ಹವಿರ್ಭಾಗವನ್ನು ಸ್ವೀಕರಿಸುವ, ಪುರುಪ್ರಿಯ=ಪೂರ್ಣಸುಖವುಳ್ಳ, ಅಗ್ನಿಮಗ್ನಿಂ =ಅಗ್ನಿನಾಮಕ ಬಹು ಭಗವದ್ರೂಪಗಳನ್ನು, ಗಾರ್ಹಪತ್ಯಾದಿ ಅಗ್ನಿಗಳನ್ನು, ಹವೀಮಭಿಃ=ಋಗ್ರೂಪ ಆಹ್ವಾನಗಳಿಂದ, ಸದಾ=ಯಾವಾಗಲೂ, ಹವಂತ =ಕರೆದರು (ಪ್ರಾರ್ಥಿಸಿದರು.) ||೨||

**ಭಾ ॥ (೧) ಅಗ್ನಿನಾಮಾ ಜಾಮದಗ್ನ್ಯೋ ಭಗವಾನ್ ಸಂಪ್ರಕೀರ್ತಿತಃ । ತಸ್ಯ ರೂಪ ಬಹುತ್ವೇನ ವೀಪ್ಸಾ ಚೈವೋಪಪದ್ಯತೇ ॥ (೨) ಹವೀಮಭಿರ್ಯಗಾಹ್ವಾನೈರಾಹ್ವಯಂತಃ ಪ್ರಜಾಪತಿಂ ॥೨॥**

ಅ॥ (೧) ಗಾರ್ಹಪತ್ಯಾದಿ ರೂಪಗಳಿಂದ ಅಗ್ನಿಗಳು ಅನೇಕಗಳಾದ ಪ್ರಯುಕ್ತ ಅಗ್ನಿಮಗ್ನಿಂ ಎಂದು ವೀಪ್ಸಾದಲ್ಲಿ ದ್ವಿರುಕ್ತಿಯು ಕೂಡುತ್ತದೆ. ಶ್ರೀ ಹರಿಯು ಒಬ್ಬನೇ ಆದ ಪ್ರಯುಕ್ತ ದ್ವಿರುಕ್ತಿಯು ಹೇಗೆ ಕೂಡುತ್ತದೆ? ಎಂದರೆ ಅಗ್ನಿಯಲ್ಲಿರತಕ್ಕವನು ಅಗ್ನಿಯೆಂದು ಹೆಸರುಳ್ಳವನು ಷಡ್ಗುಣೈಶ್ವರ್ಯ ಸಂಪನ್ನನಾದ ಪರಶುರಾಮನು ಹೇಳಿಸಿಕೊಳ್ಳಲ್ಪಡುತ್ತಾನೆ. ಶ್ರೀ ಹರಿಗೆ ಬಹುರೂಪಗಳಿದ್ದುದರಿಂದ ವೀಪ್ಸಾ ಮೂಲಕವಾದ ದ್ವಿರುಕ್ತಿಯೂ ಕೂಡುತ್ತದೆ. (೨) ಪ್ರಜೆಗಳಿಗೆ ಅಧಿಪತಿಯಾದ ಶ್ರೀ ಹರಿಯನ್ನು ಹವೀಮಭಿಃ = ಋಗ್ರೂಪಗಳಾದ ಆಹ್ವಾನಗಳಿಂದ (ಋತ್ವಿಜರು) ಕರೆದರು. (ಪ್ರಾರ್ಥಿಸಿದರು) ॥೨॥

**ಋ ॥ (೧೧೩) ಅಗ್ನೇ ದೇವಾ ಇಹಾ ವಹ ಜಜ್ಞಾನೋ ವೃಕ್ತಬರ್ಹಿಷೇಃ ಅಸಿ ಹೋತಾ ನ ಈಡ್ಯಃ ॥ ॥೩॥**

ಅ॥ ಅಗ್ನೇ = ಎಲೋ ಅಗ್ನಿಯೇ, ಜಜ್ಞಾನಃ = (ಜನೀಪ್ರಾದುರ್ಭಾವೇ) ಹುಟ್ಟತಕ್ಕ (ನಮ್ಮ ಯಜ್ಞದಲ್ಲಿ ಅಭಿವ್ಯಕ್ತವಾದ ನೀನು) ವೃಕ್ತಬರ್ಹಿಷೇ =ವಿಸ್ತೃತವಾದ ಬರ್ಹಿಸುಳ್ಳ ಯಜಮಾನನ ಪ್ರಯೋಜನಕ್ಕಾಗಿ, ದೇವಾನ್=ದೇವತೆಗಳನ್ನು ಇಹ=ಯಜ್ಞದಲ್ಲಿ ಆ ವಹ=ಚೆನ್ನಾಗಿ ಹೊಂದಿಸಿಕೊಡು. ಹೋತಾ ಅಸಿ = (ಯಾವ ಕಾರಣದಿಂದ ನೀನು) ಹೋತೃ ಆಗಿರುತ್ತಿಯೋ (ಆದ ಕಾರಣ) ನಃ= ನಮಗೆ, ಈಡ್ಯಶ್ಚಾಸಿ =ಸ್ತುತ್ಯನೂ ಆಗಿರುತ್ತಿ. ॥೩॥

**ಭಾ ॥ ಜಜ್ಞಾನೋ ವ್ಯಜ್ಯಮಾನಸ್ತು ವೃಕ್ತಂ ಪ್ರಸೃತಮುಚ್ಯತೇ । ಯಜಮಾನೋ ವೃಕ್ತಬರ್ಹಿ ॥೩॥**

ಅ॥ ಜಜ್ಞಾನಃ = ನಮ್ಮ ಯಜ್ಞದಲ್ಲಿ ಅಭಿವ್ಯಕ್ತನಾದವನು. ವೃಕ್ತಂ =ಚೆನ್ನಾಗಿ ವಿಸ್ತೃತವಾದುದು, ಹೇಳಲ್ಪಡುತ್ತದೆ. ಚೆನ್ನಾಗಿ ವಿಸ್ತೃತವಾದ ಬರ್ಹಿಸ್ಸುಳ್ಳವನು (ಬರ್ಹಿಸ್ಸನ್ನು ವಿಸ್ತರಿಸುವವನು) ಯಜಮಾನನು ॥೩॥

**ಋ ॥ (೧೧೪) ತಾ ಉಶತೋ ವಿ ಬೋಧಯ ಯದಗ್ನೇ ಯಾಸಿ ದೂತ್ಯಂ । ದೇವೈರಾಸತ್ಸಿ ಬರ್ಹಿಷಿ ॥೪॥**

ಅ॥ ಅಗ್ನೇ = ಶ್ರೀ ಹರಿಯೇ, ಯತ್ =ಯಾವ ಕಾರಣದಿಂದ, ದೂತ್ಯಂ = ದೂತತ್ವವನ್ನು ಅಥವಾ ದೂತನ ಕರ್ಮವನ್ನು, ಯಾಸಿ = (ಯಾ ಪ್ರಾಪಣೇ) ಹೊಂದಿರುತ್ತಿಯೋ, (ದೇವತೆಗಳ ಪ್ರಾರ್ಥನೆಯನ್ನು ಮಾಡುವುದರಿಂದ ಯಾವ ಕಾರಣದಿಂದ ದೇವತೆಗಳ ದೂತನಾಗಿರುತ್ತಿಯೋ) (ಆದ ಕಾರಣ) ಉಶತಃ = (ವಶಕಾಂತೌ) ಯಜ್ಞವನ್ನು ಕುರಿತು ಬರಲಿಕ್ಕೆ ಇಚ್ಛಿಸುವ, ತಾನ್ = ಆ ದೇವತೆಗಳನ್ನು ವಿಬೋಧಯ = ಈತನ ಯಜ್ಞಕ್ಕೆ ನೀವು ಬರಬೇಕೆಂದು ವಿಜ್ಞಾಪಿಸಿಕೊಳ್ಳು. ದೇವೈಃ =ದೇವತೆಗಳಿಂದ ಕೂಡಿಕೊಂಡು, ಬರ್ಹಿಷಿ = ಬರ್ಹಿಸ್ಸಿನಲ್ಲಿ ಆ ಸತ್ಸಿ = (ಸದ್ಯಲ್ ವಿಶರಣಗತ್ಯವಸಾದನೇಷು) ಕೂತುಕೊಳ್ಳುತ್ತಿ. ಕೂತುಕೊಳ್ಳುವಿ. ॥೪॥

**ಭಾ ॥ ಬೋಧಯೇಶೇಚ್ಛತಃ ಸುರಾನ್ । ದೇವೈಃ ಸಹೋಪವಿಶಸಿ ॥೪॥**

ಅ॥ ಬರಲು ಇಚ್ಛಿಸತಕ್ಕ ದೇವತೆಗಳನ್ನು ಈ ಯಜ್ಞಕ್ಕೆ ಬಂದು ನೀವು ಅನುಗ್ರಹಿಸಬೇಕು ಎಂದು ವಿಜ್ಞಾಪಿಸಿಕೊಳ್ಳು. ದೇವತೆಗಳಿಂದ ಕೂಡಿಕೊಂಡು ಕೂತುಕೊಳ್ಳುತ್ತಿ. ॥೪॥

ಋ ॥ (೧೧೫) ಘೃತಾಹವನ ದೀದಿವಃ ಪ್ರತಿ ಷ್ಮ ರಿಷತೋ ದಹ । ಅಗ್ನೇ ತ್ವಂ ರಕ್ಷಸ್ವಿನಃ ॥೫॥

ಅ ॥ ಘೃತಾಹವನ = ಶುದ್ಧವಾದ, (ಯಜ್ಞಕ್ಕೆ ಯೋಗ್ಯವಾದ) ಪ್ರಸಕ್ತ ತುಪ್ಪವು ಹವಿಸ್ಸಾಗಿ ಉಳ್ಳ, ದೀದಿವಃ =ಅತಿಶಯವಾಗಿ ಪ್ರಕಾಶಿಸಿಕೊಂಡಿರತಕ್ಕ, ಅಗ್ನೇ = ಅಗ್ನಿಯೇ, ತ್ವಂ =ನೀನು, ರಿಷತಃ = (ರಿಷಹಿಂಸಾಯಾಂ) ನಾಶಕರಾದ, ರಕ್ಷಸ್ವಿನಃ =ರಾಕ್ಷಸರಿಗೆ ಸಂಬಂಧಪಟ್ಟ ಯಜ್ಞಗಳನ್ನು ಕೆಡಿಸುವ ಜನರನ್ನು, ಪ್ರತಿದಹಸ್ಮ = (ದಹಭಸ್ಮೀಕರಣೇ) ಸುಡಲೇಬೇಕು. (ನಾಶಗೊಳಿಸಲೇಬೇಕು.) ॥೫॥

ಭಾ ॥ ಯಸ್ಯ ತೇ ಸುಘೃತಂ ಹವಿಃ । ರಿಷತೋ ನಾಶಕಾನ್ರಕ್ಷೋ ಜನಾನ್ ಪ್ರತಿದಹ್ಯೆವ ಚ ॥೫॥

ಅ ॥ ಎಲೋ ಅಗ್ನಿಯೇ ಯಾವ ನಿನಗೆ ಶುದ್ಧವಾದ ಘೃತರೂಪ ಹವಿಸ್ಸು ಇದೆಯೋ, ಅಂತಹ ನೀನು, ರಿಷತಃ =ಯಜ್ಞನಾಶಕರಾದ ಸ್ವಾಮಿಭೂತರಾದ ಶ್ರೇಷ್ಠ ರಾಕ್ಷಸರನ್ನು ನಾಶಗೊಳಿಸಲೇಬೇಕು ॥೫॥

ಋ ॥ (೧೧೬) ಅಗ್ನಿನಾऽಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ಜುಹ್ವಾಸ್ಯಃ ॥೬॥೨೨॥

ಅ॥ ಜುಹ್ವಾಸ್ಯಃ = ಜುಹು=ಹವನಕ್ಕೆ ಅಧಿಕರಣವಾದ, ಅಸ್ಯಃ = ಮುಖವುಳ್ಳ, ಕವಿಃ ಸರ್ವಜ್ಞನಾದ, ಗೃಹಪತಿಃ =ಮಂದಿರಗಳಿಗೆ ಅಧಿಪತಿಯಾದ, ಯುವಾ =ತರುಣನಾದ, ಹವ್ಯವಾಟ್ =ಅಗ್ನಿಯು, ಅಗ್ನಿನಾ =ಸರ್ವೋತ್ತಮನಾದ ನಿನ್ನಿಂದ, ಸಮಿಧ್ಯತೇ = (ಇಂಧೀ ದೀಪ್ತೌ) ಚೆನ್ನಾಗಿ ಪ್ರಕಾಶಿಸಲ್ಪಡುತ್ತಾನೆ. (ಅಂದರೆ ಎಲೋ ಶ್ರೀ ಹರಿಯೇ ನೀನು ಅಗ್ನ್ಯಾದಿಗಳಿಗೆ ಪ್ರಕಾಶಾದಿಗಳನ್ನು ಕೊಡತಕ್ಕವನು) (ಪ್ರಸಿದ್ಧಾಗ್ನಿ ಪಕ್ಷದಲ್ಲಿ) ಹೋಮಾಧಾರಕನಾಗಿರುವುದರಿಂದ ಅಹವನೀಯಾಗ್ನಿಯು ಮಥಿತವಾದ ಗಾರ್ಹಪತ್ಯಾದ್ಯಗ್ನಿಯಿಂದ ಚೆನ್ನಾಗಿ ಪ್ರಕಾಶಿತನಾಗುತ್ತಾನೆ.) ॥೬॥೨೨॥

ಭಾ ॥ ಯಸ್ಯಾಸ್ಯೇ ಹೂಯತೇ ಸೋऽಗ್ನಿಃ ಪರೇಶೇನ ಸಮಿಧ್ಯತೇ ।
ಅಥವಾऽऽಹವನೀಯೋऽಗ್ನಿರ್ಮಥಿತೇನ ಸಮಿಧ್ಯತೇ ॥೬॥೨೨॥

ಅ॥ ಯಾರ ಮುಖದಲ್ಲಿ ಹವಿಸ್ಸು ಹೋಮಿಸಲ್ಪಡುತ್ತದೋ ಆ ಅಗ್ನಿಯು ಜುಹ್ವಾಸ್ಯನು. ಆತನು ಸರ್ವೋತ್ತಮನಾದ ನಿನ್ನಿಂದ ಚೆನ್ನಾಗಿ ಪ್ರಕಾಶಿತನಾಗುತ್ತಾನೆ. (ಅಂದರೆ ಅಗ್ನ್ಯಾದಿಗಳಿಗೆ ಪ್ರಕಾಶಾದಿ ಗುಣಗಳನ್ನು ಕೊಡತಕ್ಕವನು ನೀನು) ಅಥವಾ ಪ್ರಸಿದ್ಧ ಅಗ್ನಿ ವಿಷಯದಲ್ಲಿ ಅಹವನೀಯಾಖ್ಯ ಅಗ್ನಿಯು ಮಥಿತವಾದ ಗಾರ್ಹಪತ್ಯಾಗ್ನಿಯಿಂದ ಕೂಡಿಕೊಂಡು ಪ್ರಕಾಶಿತವಾಗುತ್ತದೆ. (ಅಂದರೆ ಗಾರ್ಹಪತ್ಯ ಮೊದಲಾದ ೩ ಅಗ್ನಿಗಳು ಹೋಮಕಾಲದಲ್ಲಿ ಒಟ್ಟಿಗೇನೇ ಪ್ರಕಾಶಿಸುತ್ತವೆ.) (ಕವ್ಯಾದಿ ಶಬ್ದಾರ್ಥಗಳು ಹಿಂದಿನಂತೆಯೇ) ॥೬॥೨೨॥

ಋ ॥ (೧೧೭) ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಂ ॥೭॥

ಅ॥ ಕವಿಂ=ಸರ್ವಜ್ಞನೂ, ಸತ್ಯ ಧರ್ಮಾಣಂ =ಯಥಾರ್ಥಗಳಾದ ಗುಣಗಳುಳ್ಳವನು, ಅಮೀವಚಾತ ನಂ = ದುಃಖವನ್ನು ನಾಶಗೊಳಿಸುವವನು, ಅಥವಾ ದುಃಖವನ್ನು ಹೋಗಲಾಡಿಸುವವನು ಇಂತಹ, ಅಗ್ನಿಂದೇವ=ಅಗ್ನಿನಾಮಕ ಶ್ರೀ ಪರಶುರಾಮನನ್ನು ಅಧ್ವರೇ=ಯಜ್ಞದಲ್ಲಿ, ಉಪಸ್ತುಹಿ=ಸ್ತೋತ್ರಮಾಡು. (ಎಂದು ತನ್ನನ್ನು ಕುರಿತು, ಅಥವಾ ತನ್ನ ಅಂತರ್ಯಾಮಿಯನ್ನು ಕುರಿತು ಅಥವಾ ಹೋತೃವಿನಲ್ಲಿರತಕ್ಕ ಶ್ರೀ ಹರಿಯನ್ನು ಕುರಿತು ಹೇಳಿದ್ದು.) ॥೭॥

ಭಾ ॥ ಸತ್ಯಧರ್ಮಾ ಸದ್ಗುಣಭೃದ್ದುಃಖಘ್ನೋಽಮೀವಚಾತನಃ । ಚಾತನಂ ಕಾಲನಂ ವಾ ಸ್ಯಾತ್ ॥೭॥

ಆ ॥ ಸತ್ಯಧರ್ಮಾ =ಸದ್ಗುಣಗಳನ್ನು ಧರಿಸಿರುವವನು. ಅಮೀನಚಾತನಃ =ದುಃಖಗಳನ್ನು ನಾಶಗೊಳಿಸುವವನು .ಅಥವಾ ಚಾತನಂ-ಕಾಲನವು ಅಂದರೆ ಅಪಸರಣವು (ದೂರಕ್ಕೆ ಮಾಡುವುದು) ಅಂತೂ ಅಮೀವಚಾತನಃ=ದುಃಖಗಳನ್ನು ದೂರಕ್ಕೆ ಹೋಗಲಾಡಿಸುವವನು ॥೭॥

ಋ ॥ (೧೧೮) ಯಸ್ತ್ವಾಮಗ್ನೇ ಹವಿಷ್ಪತಿರ್ದೂತಂ ದೇವ ಸಪರ್ಯತಿ । ತಸ್ಯ ಸ್ಮ ಪ್ರಾವಿತ ಭವ ॥ ॥೮॥

ಅ॥ ಅಗ್ನೇ =ಶ್ರೀ ಹರಿಯೇ, ಯಃ=ಯಾವ, ಹವಿಷ್ಪತಿ = ಯಜಮಾನನು, ದೂತಂತ್ವಾ= ಪ್ರಾರ್ಥನೆಯನ್ನು ಮಾಡುವುದರಿಂದ ದೂತನೆನಿಸಿಕೊಂಡ ನಿನ್ನನ್ನು, ಸಪರ್ಯಂತಿ = (ಸಪರ ಪೂಜಾಯಾಂ) ಪೂಜಿಸುತ್ತಾನೋ, ಪೂಜಿಸಿದವನೋ, ತಸ್ಯ = ಅಂತಹ ಯಜಮಾನನನ್ನು ಪ್ರಾವಿತಾ ಭವ = ಚೆನ್ನಾಗಿ ರಕ್ಷಿಸತಕ್ಕವನು ಆಗು ॥೮॥

ಋ ॥ (೧೧೯) ಯೋ ಅಗ್ನಿಂ ದೇವವೀತಯೇ ಹವಿಷ್ಮಾ ಆ ವಿವಾಸತಿ । ತಸ್ಮೈ ಪಾವಕ ಮೃಳಯ ॥೯॥

ಅ॥ ದೇವ ವೀತಯೇ = (ವೀಗತಿ ವ್ಯಾಪ್ತಿಪ್ರಜನ ಕಾಂತ್ಯಸನ ಖಾದನೇಷು) ದೇವತೆಗಳು ಬರುವುದಕ್ಕಾಗಿ, ಅಥವಾ ದೇವತೆಗಳ ಪ್ರಾಪ್ತಿ ಫಲಕ್ಕಾಗಿ, ಯಃ ಹವಿಷ್ಮಾನ್ = ಯಾವ ಯಜಮಾನನು ಅಗ್ನಿಂ = ಸರ್ವಾಂಗಗಳಿಗೆ ಪ್ರೇರಕನಾದ ನಿನ್ನನ್ನು, ಆವಿವಾಸಯತಿ = (ವಸನಿವಾಸೇ) ಆವಾಸಗೊಳಿಸುತ್ತಾನೋ, ಅಥವಾ ಶ್ರುತ್ಯುಕ್ತ ಆಗ್ನ್ಯಾಧಾನ ಮಾಡುತ್ತಾನೋ, ಅಥವಾ ಪೂಜಿಸುತ್ತಾನೋ, ಪಾವಕ =ಪವಿತ್ರೀಕರಿಸತಕ್ಕ ಶ್ರೀ ಹರಿಯೇ, (ನೀನು) ತಸ್ಮೈ=ಅಂತಹ ಯಜಮಾನನನ್ನು ಮೃಳಯ = ಸರ್ವದಾ ರಕ್ಷಿಸು ॥೯॥

ಭಾ ॥ ದೇವವೀತಿಸ್ತು ತದ್ಗತಿಃ । ಆವಾಸಯತಿ ಯಸ್ತ್ವಾಂಚ ತಂ ತ್ವಂ ಮೃಳಯ ಸರ್ವದಾ ॥೯॥

ಅ॥ ದೇವವೀತಿಯೆಂದರೆ = ದೇವತೆಗಳ ಗತಿಯು. ಅಂದರೆ ಯಜ್ಞಕ್ಕೆ ದೇವತೆಗಳ ಆಗಮನವು. ಅಥವಾ ದೇವತೆಗಳ ಪ್ರಾಪ್ತಿರೂಪವಾದ ಫಲವು. ಯಾವ ಯಜಮಾನನು ನಿನ್ನನ್ನು ಆವಾಸಗೊಳಿಸುತ್ತಾನೋ, ಅಥವಾ ಶ್ರುತ್ಯುಕ್ತವಾದ ಅಗ್ನ್ಯಾಧಾನ ಮಾಡುತ್ತಾನೋ, ಅಥವಾ ಪೂಜಿಸುತ್ತಾನೋ, ಅಂತಹ ಯಜಮಾನನನ್ನು, ನೀನು ಸರ್ವದಾ ಸುಖಪಡಿಸು. ॥೯॥

ಋ ॥ (೧೨೦) ಸ ನಃ ಪಾವಕ ದೀದಿವೋऽಗ್ನೇ ದೇವಾ ಇಹಾ ವಹ । ಉಪ ಯಜ್ಞಂ ಹವಿಶ್ಚ ನಃ ॥೧೦॥

ಅ ॥ ಪಾವಕ = (ಪೂಇಪವನೇ) (ಪುನಾತಿ ಪವಿತ್ರಯತೀತಿ ಪಾವಕಃ) ಪವಿತ್ರೀಕರಿಸತಕ್ಕ, ದೀದಿವಃ = (ದೀವು ಕ್ರೀಡಾ ವಿಜಿಗೀಷಾವ್ಯವಹಾರದ, ದ್ಯುತಿಸ್ತುತಿ ಮೋದಮದ ಸ್ವಪ್ನಕಾಂತಿ ಗತಿಷು) ಪ್ರಕಾಶಿಸಿಕೊಂಡಿರುವ, ಅಗ್ನೇ=ಶ್ರೀಹರಿಯೇ, ಸಃ =ಅಂತಹ ನೀನು, ಇಹ=ಇಲ್ಲಿಗೆ, ನಃ=ನಮ್ಮ, ಯಜ್ಞಂ=ಯಾಗವನ್ನು ಕುರಿತು, ನಃ=ನಮ್ಮ, ಹವಿಶ್ಚ=ಹವಿಸ್ಸನ್ನು ಕೂಡ ಕುರಿತು, ದೇವಾನ್=ದೇವತೆಗಳನ್ನು ಉಪ ಆ ವಹ=ಬರುವಂತೆ ಮಾಡು. (ವಿಶೇಷತಃ ಸನ್ನಿಹಿತರನ್ನಾಗಿ ಮಾಡು.) (ಆಧ್ಯಾತ್ಮರೂಪ ಅರ್ಥದಲ್ಲಿ) ಇಹ = ಈ ಶರೀರದಲ್ಲಿ ದೇವಾನ್=ತತ್ವಾಭಿಮಾನಿಗಳಾದ ದೇವತೆಗಳನ್ನು ನಮ್ಮ ಯಜ್ಞ, ನಮ್ಮ ಹವಿಸ್ಸುಗಳನ್ನು ಕುರಿತು (ಅಂದರೆ -ನಿನ್ನ ಪೂಜಾರೂಪವಾದ ಯಜ್ಞಾದಿ ವಿಷಯಗಳ ಸಿದ್ಧಿಗಾಗಿ) ಉಪಾವಹ =ವಿಶೇಷತಃ ಸನ್ನಿಹಿತರನ್ನಾಗಿ ಮಾಡು. ॥೧೦॥

ಭಾ ॥ ತತ್ಪೂಜಾವಿಷಯೇ ದೇವಾನಾವಹೇಂದ್ರಿಯಮಾನಿನಃ ॥೧೦॥

ಅ॥ (ಬಾಹ್ಯಾರ್ಥವು ಸ್ಪುಟವಾಗಿರುವುದರಿಂದ ಅಧ್ಯಾತ್ಮಾರ್ಥವನ್ನು ಹೇಳುತ್ತಾರೆ.) ನಿನ್ನ ಪೂಜಾರೂಪ ಯಜ್ಞಾದಿ ವಿಷಯಗಳ ಸಿದ್ಧಿಗಾಗಿ (ಅಂದರೆ ಯಜ್ಞಾದಿಗಳಿಗೆ ಫಲವನ್ನು ಕೊಡಲಿಕ್ಕೆ ಉದ್ಯುಕ್ತರಾಗುವುದುಕ್ಕೆ) ಚಕ್ಷುರಾದೀಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಈ ಶರೀರದಲ್ಲಿ ವಿಶೇಷತಃ ಸನ್ನಿಹಿತರನ್ನಾಗಿ ಮಾಡು ॥೧೦॥

ಋ ॥ (೧೨೧) ಸ ನಃ ಸ್ತವಾನ ಆ ಭರ ಗಾಯತ್ರೇಣ ನವೀಯಸಾ । ರಯಿಂ ವೀರವತೀಮಿಷಂ ॥ ॥೧೧॥

ಅ॥ (ಎಲೋ ಅಗ್ನಿಯೇ) ನವೀಯಸಾ = ಅತಿ ನೂತನವಾಗಿ ಕಾಣಲ್ಪಡುವ (ಈಗಲೇ ಅಭಿವ್ಯಕ್ತವಾಗುವ) ಗಾಯತ್ರೇಣ =ಗಾಯತ್ರ ಎಂಬ ಸಾಮದಿಂದ, ಸ್ತವಾನಃ = (,ಟು ಇಸ್ತುತೌ) ಸ್ತುತಿಸಲ್ಪಡತಕ್ಕ, ಸಃ =ಅಂತಹ ನೀನು, ನಃ =ನಮಗೆ, ರಯಿಂ=ವಿತ್ತವನ್ನು, ವೀರವತೀಂ=ಪುತ್ರ (ಸತ್ಸಂತಾನ) ಯುಕ್ತವಾದ, ಅಥವಾ ವೀರ್ಯಯುಕ್ತವಾದ, ಇಷಂ=ಅನ್ನವನ್ನು ಕೂಡ, ಆ ಭರ =ಕೊಡು. ॥೧೧॥

ಭಾ ॥ ಗಾಯತ್ರೇಣ ಸ್ತೂಯಮಾನೋ ದೃಶ್ಯಮಾನೇನ ನೋ ರಯಿಂ । ಪುತ್ರಯುಕ್ತಾಮಿಷಂ ಚೈವ ವೀರ್ಯಯುಕ್ತಾಮಥಾವಹ ॥೧೧॥

ಅ ॥ (ವೇದವು ಅಪೌರುಷೇಯವಾದುದರಿಂದ ಈಗಲೇ) ಕಾಣಲ್ಪಡತಕ್ಕ, (ಅಭಿವ್ಯಕ್ತವಾಗುವ, ಗಾಯತ್ರ ಎಂಬ ಸಾಮದಿಂದ, ಸ್ತುತಿಸಲ್ಪಡತಕ್ಕ ನೀನು ನಮಗೆ ದ್ರವ್ಯವನ್ನೂ, ಪುತ್ರರಿಂದ ಕೂಡಿದ, ಅಥವಾ ವೀರ್ಯದಿಂದ ಕೂಡಿದ, ಅನ್ನವನ್ನೂ ಕೂಡ ಕೊಡು ॥೧೧॥

ಋ ॥ (೧೨೨) ಅಗ್ನೇ ಶುಕ್ರೇಣ ಶೋಚಿಷಾ ವಿಶ್ವಾಭಿರ್ದೇವಹೂತಿಭಿಃ । ಇಮಂ ಸ್ತೋಮಂ ಜುಷಸ್ವ ನಃ ॥೧೨॥೨೪॥೧೨॥

ಅ॥ ಅಗ್ನೇ=ಎಲೋ ಅಗ್ನಿಯೇ, ಶುಕ್ರೇಣ=ಶುಭ್ರವಾದ, (ಜ್ವಲಿಸಿ ಕೊಂಡಿರುವ) ಶೋಚಿಷಾ =ತೇಜಸ್ಸಿನಿಂದ, (ಕೂಡಿದ ನೀನು) ವಿಶ್ವಾಭಿಃ =ಎಲ್ಲಾ ದೇವಹೂತಿಭಿಃ =ದೇವತೆಗಳ ಆಹ್ವಾನಗಳಿಂದ ಕೂಡಿಕೊಂಡು, ನಃ =ನಮ್ಮ, ಇಮಂ ಸ್ತೋಮಂ=ಈ ಸ್ತುತಿಯನ್ನು ಜುಷಸ್ವ (ಜುಷೀಪ್ರೀತಿಸೇವನಯೋಃ) ಪ್ರೀತಿಯಿಂದ ಅಂಗೀಕರಿಸು. (ದೇವತೆಗಳು ಆಹ್ವಾನವನ್ನು ನಿಮ್ಮ ಸ್ತುತಿಯನ್ನು ಕೂಡ ನಮ್ಮಲ್ಲಿ ದಯೆಯಿಂದ ಕೇಳು) ॥೧೨॥

ಭಾ ॥ ಜ್ವಲತಾ ತೇಜಸಾ ವಿಶ್ವದೇವಾಹ್ವಾನೈರ್ವೃಣು ಸ್ತುತಿಂ ॥೧೨॥೨೩॥೧೨॥

ಅ ॥ ಜ್ವಲಿಸಿ ಕೊಂಡಿರತಕ್ಕ ತೇಜಸ್ಸಿನಿಂದ ಕೂಡಿದ ನೀನು ಎಲ್ಲಾ ದೇವತಾಹ್ವಾನಗಳಿಂದಲೂ ಕೂಡಿಕೊಂಡು ನಮ್ಮ ಸ್ತೋತ್ರವನ್ನು ಅಂಗೀಕರಿಸು. (ಅಂದರೆ ದೇವತೆಗಳ ಆಹ್ವಾನಗಳನ್ನೂ, ನಿನ್ನ ಸ್ತೋತ್ರವನ್ನು ಕೂಡ ನಮ್ಮಲ್ಲಿ ದಯೆಯಿಂದ ಕೇಳು) ॥೧೨॥೧೨॥೧೨॥

ಅವ ॥೧. ಋಕ್ಕು, ೨ ವರ್ಗ, ಅಪ್ರೀಸೂಕ್ತವು. (ಆ ಸಮ್ಯಕ್ ಪ್ರೀಯತೆ (ಯಾಭಿಃ ಋಗ್ಭಿಃ ಅಥವಾ ಯೇನ ವಿಷ್ಣುಃ =ಯಾವ ಋಕ್ಕುಗಳಿಂದ ಯಾವ ಸೂಕ್ತದಿಂದ ಶ್ರೀ ವಿಷ್ಣುವು ಚೆನ್ನಾಗಿ ಪ್ರೀತನಾಗುತ್ತಾನೋ ಆ ಸೂಕ್ತವು ಅಥವಾ ಆ ಋಕ್ಕುಗಳು, ಸಮಿದ್ಧ ಅಗ್ನ್ಯಾದಿ ದೇವತೆಗಳುಳ್ಳದ್ದು ಆ ಪ್ರೀ ಎನಿಸುತ್ತದೆ.) ಗಾಯತ್ರೀ ಛಂದಸ್ಸು. ಪ್ರತಿ ಋಕ್ಕುಗಳಿಗೂ ಬೇರೆ ಬೇರೆ ದೇವತೆಗಳು. ಪ್ರಥಮ ಋಕ್ಕಿಗೆ ಇಧ್ಮಾಗ್ನಿಯು, ಸಮಿದ್ಧಾಗ್ನಿಯಾಗಲೀ ದೇವತೆಯು. (ಏವಂಚ ಯಾವ ಋಕ್ಕುಗಳಿಂದ ಶ್ರೀ ವಿಷ್ಣುವು ಪ್ರೀತನಾಗುತ್ತಾನೋ ಆ ಋಕ್ಕುಗಳು ಆಪ್ರಿಯಃ ಎನಿಸುತ್ತವೆ. ಅಂತಹ ಋಕ್ಕುಗಳಿಂದ ಯುಕ್ತವಾದ ಸೂಕ್ತವು ಅಪ್ರೀಸೂಕ್ತವೆನಿಸುತ್ತದೆ.)

ಋ ॥ (೧೨೩) ಸುಸಮಿದ್ಧೋ ನ ಆ ವಹ ದೇವಾ ಅಗ್ನೇ ಹವಿಷ್ಮತೇ । ಹೋತಃ ಪಾವಕ ಯಕ್ಷಿ ಚ ॥೧॥

ಅ॥ ಹೋತಃ ಪಾವಕ ಅಗ್ನೇ =ಎಲೋ ಅಗ್ನಿಯೇ, ಸುಸಮಿದ್ಧಃ=ಅತಿ ಪ್ರಕಾಶಿತನಾದ ನೀನು, ನಃ ಹವಿಷ್ಮತೇ =ನಮ್ಮ ಯಜಮಾನನ ಉದ್ದಿಶ್ಯ, ದೇವಾನ್=ದೇವತೆಗಳನ್ನು ಆ ವಹ=ಕರೆ. ಯಕ್ಷಿಚ=ಕರೆಯ ಅವರ ಅದ್ದಿಶ್ಯ ಯಜ್ಞ ಕೊಡು. (ಪೂಜಿಸು) (ದೇವಾನ್ ಆ ವಹ ಎಂದು ಬಹ್ವಾವರ್ತಿ ಹೇಳಿದ್ದು ಅತ್ಯಾದರದಿಂದ) ॥೧॥

ಭಾ ॥ ಅಸ್ಮದ್ಧವಿಷ್ಮತೇ ದೇವಾನಾಹೂಯ ಯಜ ಚಾದರಾತ್ ॥೧॥

ಅ॥ ನಮ್ಮ ಯಜಮಾನನ ಉದ್ದಿಶ್ಯ ದೇವತೆಗಳನ್ನು ಕರೆದು ಅತ್ಯಾದರದಿಂದ ಯಜ್ಞ ಮಾಡು. (ಪೂಜಿಸು)॥೧॥

ಋ ॥ (೧೨೪) ಮಧುಮಂತಂ ತನೂನಪಾದ್ಯಜ್ಞಂ ದೇವೇಷು ನಃ ಕವೇ । ಅದ್ಯಾ ಕೃಣುಹಿ ವೀತಯೇ ॥ ॥೨॥

ಅ॥ (ಈ ಋಕ್ಕಿಗೆ ತನೂನಪಾತ್ ದೇವತೆಯು) ಕವೇ=ಸರ್ವಜ್ಞನೇ, ತನೂನಪಾತ್=ತನೂನಪಾತ್ ಎಂಬ ನೀನು, ವೀತಯೇ =ಯಜಮಾನನಿಗೆ ದೇವತಾಪ್ರಾಪ್ತಿಗಾಗಿ, ನಃ = ನಮ್ಮದ್ದಾದ, ಮಧುಮಂತಂ =ಸ್ವಾದುವಾದ ಹವಿರಾದಿಗಳುಳ್ಳ ಯಜ್ಞಂ=ಯಜ್ಞವನ್ನು, ಅದ್ಯ=ಈಗಲೇ ದೇವೇಷು=ದೇವತೆಗಳಲ್ಲಿ ಕೃಣುಹಿ (ಕೃವಿ ಹಿಂ ಸಾಯಾಂ ಕರಣೇಚ) ಮಾಡು

(ದೇವತೆಗಳನ್ನು ಹೊಂದಿಸಿ ಕೊಡು.) ||೨||

**ಭಾ || ತನೂಭ್ಯೋ ವಾಕ್ತತೋ ದೇವೋ ವ್ಯಕ್ತ (ಜ್ಞೇಯ) ಸ್ತೇನ ತನೂನಪಾತ್ ||೨||**

ಅ|| ಅಗ್ನಿಗೆ ಸಮಿತ್ ತನೂನಪಾತ್ ಇಳೋ ಬರ್ಹಿ ಸ್ವಾಹಾಕಾರಃ ಇತ್ಯಾದಿ ಬಹುವಿಧ ನಾಮಗಳಿದ್ದುದರಿಂದ) ತನೂನಪಾತ್ ಎನ್ನುವುದು ಅಗ್ನಿ ವಿಶೇಷಕ್ಕೆ ಪ್ರಸಿದ್ಧ ನಾಮವು. (ಶ್ರೀ ವಿಷ್ಣುವಿಗಾದರೂ ಶರೀರಗಳ ದೆಸೆಯಿಂದ ವಾಕ್ ಹುಟ್ಟಿತು. ಶರೀರಾಶ್ರಯತ್ವವಿದ್ದ ಪ್ರಯುಕ್ತ ವಾಗಿಂದ್ರಿಯದಿಂದ ಪರಮೇಶ್ವರನು ವ್ಯಕ್ತನು. (ಅಂದರೆ ಜ್ಞೇಯನು) ಆದ ಕಾರಣ ಶ್ರೀ ಹರಿಯು ವಾಕ್ಕಿನ ಪುತ್ರನೆನಿಸುತ್ತಾನೆ. ಅಂದರೆ ತನ್ನ ಉತ್ಪತ್ತಿಯಿಂದ ಪಿತೃಕುಲವನ್ನು ನ ಪಾತಯತಿ ಕೆಡಿಸುವುದಿಲ್ಲ ಎಂಬ ವ್ಯುತ್ಪತ್ತಿಯಿಂದ ನಪಾತ್ ಅಂದರೆ ಪೌತ್ರನು. ತನು=ಶರೀರಗಳಿಂದ ಹುಟ್ಟಿದ ವಾಗಿಂದ್ರಿಯದಿಂದ ಶ್ರೀ ಹರಿಯು ವ್ಯಕ್ತನಾಗುವ ಪ್ರಯುಕ್ತ ಶರೀರಗಳ ಪೌತ್ರನೆನಿಸುತ್ತಾನೆ. ಏವಂಚ ದೇಹದಿಂದ ಹುಟ್ಟಿದ ವಾಗಿಂದ್ರಿಯದಿಂದ ಜ್ಞೇಯನಾದುದರಿಂದ ತನೂನ ಪಾತ್ ಎನ್ನುವುದು ಶ್ರೀ ಹರಿಯ ನಾಮವು ||೨||

**ಋ || (೧೨೫) ನರಾಶಂಸಮಿಹ ಪ್ರಿಯಮಸ್ಮಿನ್ ಯಜ್ಞ ಉಪಹ್ವಯೇ | ಮಧುಜಿಹ್ವಂ ಹವಿಷ್ಕೃತಂ ||೩||**

ಅ || (ಈ ಋಕ್ಕಿಗೆ ನರಾಶಂಸನು ದೇವತೆಯು) ಇಹ = ಸಮಸ್ತ ಪ್ರಾಣಿಗಳಿಗೆ, ಪ್ರಿಯಂ = ಪ್ರಿಯನಾದ ಮಧುಜಿಹ್ವಂ= ಸ್ವಾದುವಾದ ನಾಲಿಗೆವುಳ್ಳ, ಹವಿಷ್ಕೃತಂ = ಹವಿಸ್ಸನ್ನು ಮಾಡುವ, ನರಾಶಂಸಂ = (ಶಂಸಸ್ತುತೌ, ಅಶಂಸ್ಯತೇ ಇತಿ ಅಶಂಸಃ | ನರಾಣಾಮಾಶಂಸಃ ಎಂಬ ವ್ಯುತ್ಪತ್ತಿಯಿಂದ ಮನುಷ್ಯಾದಿಗಳಿಂದ ಚೆನ್ನಾಗಿ ಸ್ತುತಿಸಲ್ಪಡುವುದರಿಂದ ನರಾಶಂಸನಾಮಕ ಅಗ್ನಿ ವಿಶೇಷವನ್ನೂ ಶ್ರೀ ಹರಿಯನ್ನೂ ಕೂಡ, ಅಸ್ಮಿನ್ ಯಜ್ಞೇ = ಈ ಯಜ್ಞದಲ್ಲಿ, ಉಪಹ್ವಯೇ = (ನಾನು) ಕರೆಯುತ್ತೇನೆ. (ಪ್ರಾರ್ಥಿಸುತ್ತೇನೆ) ||೩||

**ಭಾ || ನರೈಃ ಸ್ತುತ್ಯೋ ನರಾಶಂಸೋ ವಹ್ನೇರನ್ಯಾऽಥವಾ ತನೂಃ ||೩||**

ಅ || ಮನುಷ್ಯಾದಿಗಳಿಂದ ಚೆನ್ನಾಗಿ ಸ್ತುತಿಸಲ್ಪಡುವವನು ನರಾಶಂಸನು ಶ್ರೀ ಹರಿಯು. ಅಥವಾ ಅಗ್ನಿಯ ಇತರವಾದ ಶರೀರವು. (ವಹ್ನಿಃ ಎಂದು ಹೇಳದೆ ವಹ್ನೇರನ್ಯಾತನೂಃ ಎಂದು ಹೇಳಿದುದರಿಂದ ಈ ಸೂಕ್ತದಲ್ಲಿ ಸುಸಮಿದ್ಧ ಮೊದಲಾದವರು ಪ್ರತ್ಯೇಕ ಅಗ್ನಿ ವಿಶೇಷಗಳಿವೆ ಎಂದು ಸೂಚಿತವಾಯ್ತು. ||೬||

**ಋ || (೧೨೬) ಅಗ್ನೇ ಸುಖತಮೇ ರಥೇ ದೇವಾ ಈಳಿತ ಆ ವಹ | ಅಸಿ ಹೋತಾ ಮನುರ್ಹಿತಃ ||೪||**

ಅ || (ಈ ಋಕ್ಕಿಗೆ ಇಳೋ ದೇವತೆಯು) ಅಗ್ನೇ = ಶ್ರೀ ಹರಿಯೇ, ಈಳಿತಃ (ಈಡ ಸ್ತುತೌ. ಸ್ತುತಿಸಲ್ಪಟ್ಟ, ನೀನು, ಸುಖತಮೇರಥೇ=ಅತಿಶಯವಾಗಿ ಸುಖವನ್ನು ಮಾಡತಕ್ಕ ರಥದಿಂದ, ದೇವಾನ್ =ದೇವತೆಗಳನ್ನು ಆವಹ=ಕರೆ. (ಯಾವ ಕಾರಣದಿಂದ ನೀನು) ಹೋತಾ ಅಸಿ =ಹೋತೃ ಆಗಿರುತ್ತಿಯೋ, ಮನುರ್ಹಿತಃ =ದೇವತೆಗಳಿಗೆ ಹಿತನೂ, ಅಸಿ=ಆಗಿರುತ್ತಿಯೋ, (ಆಧ್ಯಾತ್ಮದಲ್ಲಿ) ಇಂದ್ರಿಯಾಭಿಮಾನಿ ದೇವತೆಗಳನ್ನು ಅತಿಶಯ ಸುಖಕಾರಿಯಾದ ದೇಹದಲ್ಲಿ ಬರುವಂತೆ ಕರೆ

(ಬಾಹ್ಯಾಗ್ನಿಪಕ್ಷದಲ್ಲಿಯೂ ವಿಷ್ಣುಪಕ್ಷದಲ್ಲಿಯೂ ಯಜ್ಞಕ್ಕಾಗಿ ದೇವತೆಗಳನ್ನು ಕರೆದುಕೊಂಡು ಬರಲಿಕ್ಕೆ ರಥವು ಕರಣವಾಗಿರುವುದರಿಂದ ಸಪ್ತಮೀ ವಿಭಕ್ತಿಯನ್ನು ರಥದಿಂದ ಎಂದು ತೃತೀಯಾಂಕವಾಗಿ ವಿಪರಿಣಾಮ ಮಾಡಿರುತ್ತಾರೆ. ಅಧ್ಯಾತ್ಮಾರ್ಥದಲ್ಲಿ ಆದರೂ ದೇಹದಲ್ಲಿಯೇ ಸಮಸ್ತ ದೇವತೆಗಳ ಸಾನ್ನಿಧ್ಯವು ಅಪೇಕ್ಷಿತವಾದ ಪ್ರಯುಕ್ತ ವ್ಯತ್ಯಾಸ ಮಾಡಲಿಲ್ಲ) ||೪||

ಭಾ || ಮನೂನಾಂ ಚ ಹಿತತ್ವೇನ ಮನುರ್ಹಿತ ಇತೀರಿತಃ ||೪||

ಅ || ಜ್ಞಾನಿಗಳಾದ ದೇವತೆಗಳಿಗೆ ಹಿತಕರನಾಗಿರುವುದರಿಂದ ಶ್ರೀ ಹರಿಯು ಮನುರ್ಹಿತನೆನಿಸುತ್ತಾನೆ. ||೪||

ಋ || (೧೨೭) ಸ್ತೃಣೀತ ಬರ್ಹಿರಾನುಷಗ್ಘೃತಪೃಷ್ಠಂ ಮನೀಷಿಣಃ | ಯತ್ರಾಮೃತಸ್ಯ ಚಕ್ಷಣಂ ||೫||

ಅ|| (ಈ ಋಕ್ಕಿಗೆ ಬರ್ಹಿದೇವತೆಯು) ಮನೀಷಿಣಃ =ಬುದ್ಧಿಯುಳ್ಳ ಋತ್ವಿಜರೇ, ಯತ್ರ =ಯಾವ ಸ್ಥಾನದಲ್ಲಿ, ಅಮೃತಸ್ಯ =ದೇವತಾ ಸಮುದಾಯದ, ಚಕ್ಷಣಂ =ದರ್ಶನವು (ಆಗುತ್ತದೋ) (ಅಂತಹ) ಘೃತಪೃಷ್ಠಂ =(ಅಹವನೀಯಾಗ್ನಿಯ ಪಶ್ಚಿಮ ಭಾಗದಲ್ಲಿ ಘೃತಸ್ಥಾನವು. ಅದಕ್ಕಿಂತ ಪಶ್ಚಿಮ ಭಾಗದಲ್ಲಿ ದೇವತೆಗಳು ಇರುತ್ತಾರೆ.) ಘೃತಸ್ಥಾನ ದೆಶೆಯಿಂದ ಪಶ್ಚಿಮ ಭಾಗದಲ್ಲಿರುವ ದೇವಸ್ಥಾನದಲ್ಲಿ ಅನುಷಕ್ = (ಅಜ್ ಅನುಪೂರ್ವಾತ್ ಷಂಜಸಂಗೇ) (ಆ ಸಮಂತಾತ್ ಅನುಸಂಜನಂ ಸಂಬಂಧಃ) ಸರ್ವ ಪ್ರದೇಶದಲ್ಲಿಯೂ ಸುತ್ತಲೂ ಬರ್ಹಿ =ಬರ್ಹಿಸ್ಸನ್ನು, ಸ್ತೃಣೀತ=ವಿಸ್ತರಿಸಿರಿ. (ಅಧ್ಯಾತ್ಮದಲ್ಲಿ) ದೇವತೆಗಳಿರಾ, ಯತ್ರ=ಯಾವ ಮನಸ್ಸಿನಲ್ಲಿ, ಅಮೃತಸ್ಯ=ಮರಣವಿಲ್ಲದಿರುವ, ಶ್ರೀ ವಿಷ್ಣುವಿನ, ಚಕ್ಷಣಂ =(ಚಕ್ಷದರ್ಶನೇ) ದರ್ಶನವಾಗುತ್ತದೋ, ಅಂತಹ, ಘೃತಪೃಷ್ಠಂ=(ಘೃ ಕ್ಷರಣದೀಪ್ತ್ಯೋ) ಘೃತ=ಶುದ್ಧನಾದ ಶ್ರೀ ವಿಷ್ಣುವು, ಪೃಷ್ಠೇ ಯಸ್ಯ=ಯಾವ ಮನಸ್ಸಿನ ಮೇಲು ಭಾಗದಲ್ಲಿ ಇದ್ದಾನೋ ಎಂಬ ವ್ಯುತ್ಪತ್ತಿಯಿಂದ) ಮನಸ್ಸಿನಲ್ಲಿ, ಅನುಷಕ್ = ಸರ್ವಪ್ರದೇಶದಲ್ಲಿಯೂ, ಬರ್ಹಿ =(ಬೃಹ ಬೃಹಿ ವೃದ್ಧೌ) ಶ್ರೇಷ್ಠವಾಗಿರುವುದರಿಂದ ಬರ್ಹಿ ಎನಿಸಿಕೊಂಡ ವೇದವಾಕ್ಯವನ್ನು, ಸ್ತೃಣೀತ = (ಸ್ತೃಞ ಆಚ್ಛಾದನೇ) ವೇದಿಕೆಯಲ್ಲಿ ವಿಸ್ತರಿಸಿರಿ. (ಅಂದರೆ ವೇದವಾಕ್ಯದಿಂದ ಮನಸ್ಸನ್ನು ಕೂಡಿಸಿರಿ. (ಈ ಋಕ್ಕಿನಲ್ಲಿ ಮನೀಷಿಣಃ ಎನ್ನುವುದಕ್ಕೆ ದೇವತಾತ್ವವು ಸಂದಿಗ್ಧವಾದ ಪ್ರಯುಕ್ತ ಈ ಋಕ್ಕಿನಲ್ಲಿ ಬರ್ಹಿ =ಬರ್ಹಿರ್ನಾಮಕ ಅಗ್ನಿಯು ದೇವತೆಯು ಎಂದದ್ದು. ||೫||

ಭಾ || (೧) ಅನುಷಕ್ ಸರ್ವತೋ ದೇವಸ್ಥಾನಂ ಬರ್ಹಿ ಸ್ತೃಣೀತ ಚ || (೨) ಶುದ್ಧಸ್ಯ ವಿಷ್ಣೋರ್ಯತ್ಸ್ಥಾನಂ ಘೃತಪೃಷ್ಠಂ ಹಿ ತನ್ಮನಃ | ಯತ್ರ ಸ್ಯಾದ್ದರ್ಶನಂ ವಿಷ್ಣೋರ್ನಿತ್ಯಾಮರಣಧರ್ಮಿಣಃ ||೫||

ಅ|| (೧) ಘೃತಸ್ಥಾನ ದೆಶೆಯಿಂದ ಪಶ್ಚಿಮ ದಿಕ್ಕಿನಲ್ಲಿರತಕ್ಕ ದೇವತೆಗಳಿರುವ ಸ್ಥಾನದಲ್ಲಿ ಅನುಷಕ್=ಸುತ್ತಮುತ್ತಲೂ ಬರ್ಹಿಸ್ಸನ್ನು ವಿಸ್ತರಿಸಿ. (೨) (ಅಧ್ಯಾತ್ಮದಲ್ಲಿ) ನಿದುಷ್ಟನಾದ ಶ್ರೀ ವಿಷ್ಣುವಿಗೆ ಯಾವ ಮನಸ್ಸು ಸ್ಥಾನವಾಗಿದೆಯೋ, ಅಂತಹ ಮನಸ್ಸು ಘೃತಪೃಷ್ಠವೆನಿಸುತ್ತದೆ. ಸರ್ವದಾ ಮರಣದಿಲ್ಲದಿರುವ ಶ್ರೀ ವಿಷ್ಣುವಿಗೆ ಯಾವ ಮನಸ್ಸಿನಲ್ಲಿ ದರ್ಶನವಾಗುತ್ತದೋ, ಅಂತಹ ಮನಸ್ಸು ಘೃತಪೃಷ್ಠವೆನಿಸುತ್ತದೆ. ||೫||

ಋ ॥ (೧೨೮) ವಿ ಶ್ರಯಂತಾಮೃತಾವೃಧೋ ದ್ವಾರೋ ದೇವೀರಸಶ್ಚತಃ । ಅದ್ಯಾನೂನಂ ಚ ಯಷ್ಟವೇ । ॥೬॥೨೪॥

ಅ॥ (ಈ ಋಕ್ಕಿಗೆ ದ್ವಾರೋ ದೇವಿಯರು ದೇವತೆಯರು) ಋತವೃಧಃ =ಯಥಾರ್ಥ ಜ್ಞಾನರೂಪಿಯಾದ ಶ್ರೀ ಹರಿಯಿಂದ ಸಮೃದ್ಧರಾದ, ಅಸಶ್ಚತಃ = (ಸಶ್ಚಗತೌ) ವಿಷಯಗಳ ಕಡೆಗೆ ಹೋಗುವಿಕೆ (ಅಂದರೆ ವಿಷಯಗಳ ಸಂಗ)ವಿಲ್ಲದಿರುವ, ದ್ವಾರಃ ದೇವೀಃ=ಲಕ್ಷ್ಮೀದೇವಿಯ ದ್ವಾರಭೂತರಾದ (ಉಪಸರ್ಜನ ಭೂತರಾದ) ದೇವಿಯರು, ಅದ್ಯ=ಈ ದಿವಸದಲ್ಲಿ, ನೂನಂ =ನಿಶ್ಚಿತವಾಗಿ (ಈ ದಿವಸದಲ್ಲಿಯೇ) ಯಷ್ಟವೇಚ=ಯಾಗ ಮಾಡುವುದಕ್ಕಾಗಿ, ಯಜನರೂಪ ಪ್ರಯೋಜನಕ್ಕಾಗಿಯೂ ವಿಶ್ರಯಂತಾಂ=ನಮ್ಮ ಮಾನಸ ಯಜ್ಞದಲ್ಲಿಯೂ ಬಾಹ್ಯಯಜ್ಞದಲ್ಲಿಯೂ ಇರಲಿ. (ಭಗವದ್ವಿಷಯದಲ್ಲಿ ಆದರೂ) ಋತವೃಧಃ = (ಋತಂ=ಅನುಗತಂ ಸರ್ವಕಾಲೇ) ನಿತ್ಯದಲ್ಲಿಯೂ ವೃದ್ಧಗಳು (ಪೂರ್ಣಗಳು) ಅಥವಾ ಜ್ಞಾನರೂಪಗಳೂ ಸರ್ವಗುಣ ಸಮೃದ್ಧಗಳೂ, ದ್ವಾರಃ = ಮುಮುಕ್ಷುಗಳಿಗೆ ಮುಖ್ಯವಾಗಿ ದ್ವಾರ ಭೂತಗಳೂ (ಮುಕ್ತಿಗೆ ಮುಖ್ಯ ಸಾಧನಗಳೂ) ಅಸಶ್ಚತಃ = ಯಾವುದೊಂದು ವಸ್ತುವಿನ ಸಂಗವೂ ಇಲ್ಲದಿರುವ, ಇಂತಹ ದೇವೀಃ =ಕ್ರೀಡಾದಿ ಗುಣಗಳುಳ್ಳ ಶ್ರೀ ಹರಿಯ ಸ್ತ್ರೀರೂಪ ವಿಶೇಷಗಳು, ಅದ್ಯ=ಈಗಲೇ, ಯಷ್ಟವೇಚ=ಯಾಗ ಮಾಡಲಿಕ್ಕೂ ಯಜನ ರೂಪ ಪ್ರಯೋಜನಕ್ಕಾಗಿಯೂ, ವಿಶ್ರಯಂತಾಂ=ನಮ್ಮ ಬಾಹ್ಯಾಭ್ಯಂತರಯಜ್ಞದಲ್ಲಿ ಸನ್ನಿಹಿತರಾಗಿರಲಿ ॥

ವಿ ॥ (1) ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ । ಎಂಬಲ್ಲಿ ಹೇಳಿದ ಪ್ರಕಾರ `ವ್ಯವಧಾನವಿಲ್ಲದೆ ಪ್ರಸೂತಿಗೆ ಕಾರಣತ್ವ ರೂಪವಾದ ಸ್ತ್ರೀತ್ವವು ಇದ್ದ ಪ್ರಯುಕ್ತ ದ್ವಾರಃ ದೇವೀಃ ಎಂದ ಸ್ತ್ರೀಲಿಂಗ ಪ್ರಯೋಗವೂ. (2) ಗುಹಾಂ ಪ್ರವಿಷ್ಟೌ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ಶ್ರೀ ಹರಿಗೆ ಬಹುರೂಪಗಳಿದ್ದುದರಿಂದ ಬಹು ವಚನವೂ, (3) ಫಲಮತ ಉಪಪತ್ತೇಃ ಎಂಬಲ್ಲಿ ಹೇಳಿದ ನ್ಯಾಯದಿಂದ ಶ್ರೀ ಹರಿಯೇ ಮೋಕ್ಷವನ್ನು ಕೊಡುವನೆಂಬುವುದೂ ಉಪಪನ್ನವಾಗುತ್ತದೆ. ಮತ್ತು (1) ಬಂಧಕೋ ಭವಪಾಶೇನ ಭವಪಾತಾಚ್ಚ ಮೋಚಕಃ (2) ಏಷ ಏವ ಸದಾಪಂಥಾಃ ಭಗವಾನ್ ಪುರುಷೋತ್ತಮಃ । ನಿತ್ಯಂ ಸ್ವಪ್ರಾಪ್ತಿ ಹೇತುತ್ವಾತ್ ಇತ್ಯಾದಿ ಪ್ರಮಾಣಗಳಿಂದ ಭಗವತ್ಪ್ರಾಪ್ತಿರೂಪ ಮೋಕ್ಷಕ್ಕೆ ಭಗವಂತನೇ ಮುಖ್ಯೋಪಾಯನು. ಮುಖ್ಯ ಸಾಧನನು ಎಂದು ಸಿದ್ಧವಾಗುತ್ತದೆ. ॥೬॥

ಭಾ ॥ ಋತರೂಪೇಣ ಹರಿಣಾ ಸಮೃದ್ಧಾಃ ಯಾ ಋತಾವೃಧಃ । ದ್ವಾರೋ ದೇವ್ಯಃಶ್ರಿಯೋ ದಾಸ್ಯಃ ಶ್ರಯಂತಾಮಿಹ ನೋ ಮಖೇ । ಮಾನಸೇ ಬಾಹ್ಯಯಜ್ಞೇ ವಾ ಹ್ಯಸಂಗ ತ್ವಾದಸಶ್ಚತಃ । ಅದ್ಯಾಹನಿ ತಥಾ ನೂನಮದ್ಯೈವ ಯಜನಾರ್ಥತಃ ॥ (೨) ದ್ವಾರಭೂತಃ ಸ ಭಗವಾನಪಿ ಸಾಕ್ಷಾನ್ಮುಮುಕ್ಷತಃ । ಸ್ತ್ರೀರೂಪಶ್ಚ ಸಃ ॥೬॥ ೨೪॥

ಅ॥ (೧) ಯಥಾರ್ಥ ಜ್ಞಾನರೂಪನಾದ ಶ್ರೀಹರಿಯಿಂದ ಸಮೃದ್ಧಗಳಾದವರು ಯಾವ ದೇವಿಯರೋ ಅವರು ಋತಾವೃಧಃ ಎನಿಸುತ್ತಾರೆ. ವಿಷಯಗಳ ಸಂಬಂಧವಿಲ್ಲದಿರುವುದರಿಂದ ಅಸಶ್ಚತಃ ಎನಿಸುತ್ತಾರೆ. ದ್ವಾರೋ ದೇವೀಃ = ಧ್ವಾರಃ = ದ್ವಾರ ಭೂತರಾದ (ಉಪಸರ್ಜನ ಭೂತರಾದ ಅಂದರೆ ಅಮುಖ್ಯರಾದ) ದೇವಿಯರು (ದಾಸಿಯರು) ಏವಂಚ ಲಕ್ಷ್ಮೀ ದೇವಿಯ ದಾಸಿಯರು, ಅದ್ಯ=ಈ ದಿವಸದಲ್ಲಿ ಹಾಗೆಯೇ, ನಿಶ್ಚಯವಾಗಿ. ಅಂದರೆ ಈಗಲೇ, ಯಜನ ರೂಪ ಪ್ರಯೋಜನಕ್ಕಾಗಿ ನಮ್ಮ ಮಾನಸ ಯಜ್ಞದಲ್ಲಿಯೂ, ನಮ್ಮ ಬಾಹ್ಯ ಯಜ್ಞದಲ್ಲಿಯೂ, ಸನ್ನಿಹಿತರಾಗಿರಲಿ. (೨)

(ಭಗವದ್ವಿಷಯದಲ್ಲಿ ಆದರೂ ಶ್ರೀ ಭಗವಂತನೂ ಮುಮುಕ್ಷುಗಳಿಗೆ ಮುಖ್ಯವಾಗಿ ದ್ವಾರಭೂತನು. ಅಂದರೆ ಮೋಕ್ಷಕ್ಕೆ ಮುಖ್ಯ ಸಾಧನನು ಆ ಶ್ರೀ ಹರಿಯು ಸ್ತ್ರೀರೂಪನೂ ಬಹು ರೂಪಗಳುಳ್ಳವನೂ ಆಗಿರುತ್ತಾನೆ. (ಆದ ಕಾರಣ ಬಹು ವಚನವೂ ಕೂಡುತ್ತದೆ.) ||೬||೨೪||

**ಋ || (೧೨೯) ನಕ್ತೋಷಾಸಾ ಸುಪೇಶಸಾಽಸ್ಮಿನ್ಯಜ್ಞ ಉಪಹ್ವಯೇ। ಇದಂ ನೋ ಬರ್ಹಿರಾಸದೇ ||೭||**

ಅ || (ನಕ್ತಾ ಉಷಾಸಾ ಎಂಬುವರು ದೇವತೆಯರು) ಸುಪೇಶಸಾ =ಶೋಭನ ರೂಪಗಳಿಂದ ಕೂಡಿರುವ, ನಕ್ತೋಷಸಾ = ರಾತ್ರಿಗೆ ಅಭಿಮಾನಿನಿಯಾದ ದುರ್ಗಾದೇವಿಯೂ, ಅಪರ ರಾತ್ರಿಯನ್ನು ಮಾಡುವಜ್ಯೋತಿಸ್ಸಿಗೆ ದೇವತೆಯಾದ ಅಂದರೆ ಉಷಃಕಾಲಕ್ಕೆ ಅಭಿಮಾನಿನಿಯಾದ ಅಶ್ವಿನೀ ದೇವತೆಗಳ ಹೆಂಡತಿಯಾದ ಉಷಾದೇವಿಯೂ, ಅಥವಾ ಪಾಪ ಭಯ ದುಃಖಾದಿಗಳ ಸಂಬಂಧವಿಲ್ಲದಿರುವಿಕೆ, ಪ್ರಕಾಶ ಸ್ವರೂಪತ್ವ ನಿಮಿತ್ತಗಳಿಂದ ಭಗವತ್ಸಂಬಂಧಿಗಳಾದ ಸ್ತ್ರೀರೂಪ ವಿಶೇಷಗಳು, ನಃ = ನಮ್ಮ, ಅಸ್ಮಿನ್ಯಜ್ಞೇ=ಈ ಯಜ್ಞದಲ್ಲಿ, ಇದಂ ಬರ್ಹಿ=ಈ ಬರ್ಹಿಸ್ಸಿನಲ್ಲಿ, ಆಸದೇ =ನಿಲ್ಲುವುದಕ್ಕಾಗಿ, ಉಪಹ್ವಯೇ =ಕರೆಯುತ್ತೇನೆ. ||೭||

**ಭಾ || (೧) ನಕ್ತಾ ಸ್ಯಾನ್ನಾಕ್ತೋ ಯಸ್ಮಾತ್ಸ ಸರ್ವತಃ || (೨) ಉಷಾಃ ಪ್ರಕಾಶರೂಪತ್ವಾತ್ಸು ಭದ್ರೇ ತೇ ಉಪಹ್ವಯೇ || ಅಸ್ಮಿನ್ ಬರ್ಹಿಷಿ ಸಂಸ್ಥಿತ್ಯೈ ||೭||**

ಅ|| (೧) (ಈ ಮಂತ್ರಕ್ಕೆ ನಕ್ತಾ, ಉಷಾಸಾ ಎಂಬುವರು ದೇವತೆಯರು) (ನಕ್ತಾ=ರಾತ್ರಿಗೆ ಅಭಿಮಾನಿನಿಯಾದ ದುರ್ಗಾದೇವಿಯು, ಉಷಾಸಾ=ಅಪರ ರಾತ್ರಿಯನ್ನು ಮಾಡುವ ಜ್ಯೋತಿಸ್ಸಿಗೆ ದೇವತೆಯಾದ ಉಷಃಕಾಲಕ್ಕೆ ಅಭಿಮಾನಿನಿಯಾದ ಅಶ್ವಿನೀ ದೇವತೆಗಳ ಹೆಂಡತಿಯಾದ ಉಷಾದೇವಿಯು.) (ಈ ಶಬ್ದಗಳನ್ನು ಶ್ರೀ ವಿಷ್ಣುವಿನಲ್ಲಿ ಯೋಜನಾ ಮಾಡುತ್ತಾರೆ.) ಯಾವ ಕಾರಣದಿಂದ ಆ ಶ್ರೀ ವಿಷ್ಣುವು (ಶ್ರೀ ವಿಷ್ಣುವಿನ ಸ್ತ್ರೀರೂಪವು) ಪಾಪ ಭಯ ದುಃಖಾದಿಗಳಿಂದ ಸಂಬಂದ್ಧ ವಿಲ್ಲವೋ, (ಪಾಪಾದಿಗಳಿಂದ ರಹಿತವಾದುದೋ) ಆದ ಕಾರಣ (ಅಂಜೂ ವ್ಯಕ್ತಿ ಮ್ಲಕ್ಷ್ಣ ಕಾಂತಿ ಗತಿಷು ಎಂಬುವಲ್ಲಿ ಮ್ಲಕ್ಷ್ಣ ಶಬ್ದದಿಂದ ಸಂಬಂಧವನ್ನು ಹೇಳಿ) ನ ಅಕ್ತಃ =ಪಾಪಾದಿಗಳಿಂದ ಸಂಬದ್ಧನಾಗುವುದಿಲ್ಲ. ಆದ ಪ್ರಯುಕ್ತ ಪರರೂಪವಾಗಿ ನಕ್ತಾ ಎನಿಸುಕ್ತಾನೆ. ಎನಿಸುತ್ತದೆ. (೨) (ವಶ ಕಾಂತೌ ಕಾಂತಿಃ=ಪ್ರಕಾಶವು. ವಾ. ಕಾಂತಿಃ =ಇಚ್ಛೆಯು ಎಂಬ ವ್ಯುತ್ಪತ್ತಿಯಿಂದ) ಪ್ರಕಾಶ ಸ್ವರೂಪವಾಗಿರುವುದರಿಂದ ಉಷಾಃ ಎನಿಸುತ್ತದೆ. ಈ ಯಜ್ಞದಲ್ಲಿ ಈ ಬರ್ಹಿಸ್ಸಿನಲ್ಲಿ ಚೆನ್ನಾಗಿ ಸ್ಥಿತಿಗಾಗಿ ಅತಿ ಮಂಗಲ ಸ್ವರೂಪರಾದ ಭಗವಂತನ ಸ್ತ್ರೀರೂಪ ವಿಶೇಷಗಳನ್ನು ಕರೆಯುತ್ತೇನೆ. ಪ್ರಾರ್ಥಿಸುತ್ತೇನೆ. ||೭||

ಅವ || ಈ ಋಕ್ಕಿಗೆ ಪ್ರಚೇತಸರೆಂದು ಹೆಸರುಳ್ಳ ದೇವತೆಗಳ ದೂತರಾದ ಹೋತೃಗಳು ದೇವತೆಗಳು. ಪೂರ್ವಮಂತ್ರದಲ್ಲಿ ಹೇಳಲ್ಪಟ್ಟ ನಕ್ತೋಷಸರು ಮಾತ್ರವಲ್ಲ.

**ಋ || (೧೩೦) ತಾ ಸುಜಿಹ್ವಾ ಉಪಹ್ವಯೇ ಹೋತಾರಾ ದೈವ್ಯಾ ಕವೀ। ಯಜ್ಞಂ ನೋ ಯಕ್ಷತಾಮಿಮಂ ||೮||**

ಅ || ಸುಜಿಹ್ವೌ = ಶೋಭನವಾದ ನಾಲಿಯುಳ್ಳ, ಕವೀ =ಸರ್ವಜ್ಞಗಳಾದ, ದೈವ್ಯಾ = ದೂತರಾಗಿ ದೇವತೆಗಳಿಗೆ

ಸಂಬಂಧಿಗಳಾದ, (ದೇವತೆಗಳಿಗೆ ಆಹುತಿಗಳನ್ನು ತಂದುಕೊಡುವ) (ಮತ್ತು ದೇವತೆಗಳ ಪ್ರಾರ್ಥನೆಯನ್ನು ಮಾಡುವುದರಿಂದ ದೂತರೆನಿಸಿಕೊಂಡ) ಹೋತಾರೌ ಗಾರ್ಹಪತ್ಯ ಆವಹನೀಯಾಗ್ನಿಗಳನ್ನು, ಅಥವಾ ಆ ಹೋತೃಗಳಾದ ಗಾರ್ಹಪತ್ಯ ಅಹವನೀಯಾಗ್ನಿಗಳಲ್ಲಿರತಕ್ಕ ಭಗವದ್ರೂಪವಿಶೇಷಗಳನ್ನು ಉಪಹ್ವಯೇ=ಕರೆಯುತ್ತೇನೆ (ಬರುವಂತೆ ಮಾಡುತ್ತೇನೆ) (ಬಂದು) ತಾ=ಅವರು, ನಃ =ನಮ್ಮದಾದ, ಇಮಂ ಯಜ್ಞಂ =ಈ ಯಜ್ಞವನ್ನು ಯಕ್ಷತಾಂ =ದೇವತೆಗಳಲ್ಲಿ ಸದಾ ಯಜ್ಞ ಮಾಡಲಿ. (ದೇವತೆಗಳಿಗೆ ತಂದು ಕೊಡಲಿ.) ||೮||

**ಭಾ || ಹೋತಾರೌ ದೇವಗಾವಪಿ । ಮಥ್ಯಮಾನೋಽಪರಶ್ಚೈವ ವಹ್ನೀ ತದ್ಗೋಽಥವಾಹರಿಃ । ಆತ್ಮಾಂತರಾತ್ಮರೂಪೇಣ ದ್ವಿರೂಪೋ ವಾ ವ್ಯವಸ್ಥಿತಃ । ದೇವೇಷು ಯಜತಾಂ ಯಜ್ಞಮಸ್ಮದೀಯಮಿಮಂ ಸದಾ ||೮||**

ಅ || (ಪೂರ್ವಮಂತ್ರದಲ್ಲಿ ಹೇಳಿದ ನಕ್ತೋಷಸರನ್ನು ಮಾತ್ರ ದೇವತ್ವೇನ ಕರೆದದ್ದಲ್ಲ ಮತ್ತೆ) ದೂತರಾಗಿ ದೇವತೆಗಳ ಸಂಬಂಧಿಗಳಾದ, ಗಾರ್ಹಪತ್ಯ ಅಹವನೀಯಗಳೆಂದು ಹೋತೃಗಳೆನಿಸಿಕೊಂಡ ವಹನಿಗಳನ್ನು ಕರೆಯುತ್ತೇನೆ. ಆ ೨ ವಹ್ನಿಗಳಲ್ಲಿರತಕ್ಕ ಶ್ರೀ ಹರಿಯು ಆತ್ಮಾ ಅಂತರಾತ್ಮ ಎಂಬ ೨ ರೂಪಗಳುಳ್ಳವನಾಗಿ ಇರುತ್ತಾನೆ. ಅವರು ಬಂದು ನಮ್ಮ ಯಜ್ಞವನ್ನು ದೇವತೆಗಳಲ್ಲಿ ಸದಾ ಕೊಡಲಿ. ||೮||

**ಋ || (೧೩೧) ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ । ಬರ್ಹಿ ಸೀದಂತ್ವಸ್ರಿಧಃ ||೯||**

ಅ || (ಈ ಋಕ್ಕಿಗೆ ಸರಸ್ವತೀ, ಇಳಾ ಭಾರತಿಯರು ೩ ದೇವಿಯರು ದೇವತೆಗಳು) ಇಳಾ = ಬ್ರಹ್ಮಾದಿಗಳಿಂದ ಸ್ತುತ್ಯಳಾದುದರಿಂದ ಇಳಾ ಎನಿಸಿಕೊಂಡ ಶ್ರೀದೇವಿಯು, ಸರಸ್ವತೀ =ಸರಸ್ವತೀದೇವಿಯು, ಮಹೀ = ಶ್ರೈಷ್ಠ್ಯನಿಮಿತ್ತದಿಂದ ಮಹೀ ಎನಿಸಿಕೊಂಡ ಶ್ರೀ ದೇವಿಯ ಸ್ವರೂಪಭೂತಗಳಾದ ಭೂದೇವಿಯು, ಅಥವಾ ವಾಯುಪತ್ನಿಯಾದ ಭಾರತೀದೇವಿಯು, ಮತ್ತು ಈ ಮೂವರಲ್ಲಿ ನಿಯಾಮಕರಾಗಿರುವ ಈಡಸ್ತುತೌ ಎಂಬ ಧಾತುವ್ಯಾಖ್ಯಾನದಿಂದ ಸ್ತುತ್ಯಳಾದುದರಿಂದ ಇಳಾ ಮೊದಲಾದ ನಾಮಗಳುಳ್ಳ ಭಗವಂತನ ಸ್ತ್ರೀರೂಪ ವಿಶೇಷಗಳೂ, ಮಯೋಭುವಃ =ಸುಖಾಶ್ರಯ ಭೂತಗಳು, ಅಸ್ರಿಧಃ ವಿನಾಶವಿಲ್ಲದಿರುವವುಗಳು. ತಿಸ್ರಃ ದೇವೀಃ =ಹಿಂದೆ ಹೇಳಿದ ಈ ಲಕ್ಷ್ಮೀ ಸರಸ್ವತೀ ಭಾರತೀ ಮೂರು ದೇವಿಯರು ಬರ್ಹಿ = ಬರ್ಹಿಸ್ಸಿನಲ್ಲಿ, ಸೀದಂತು = ಕೂತುಕೊಳ್ಳಲಿ. (ಸನ್ನಿಹಿತರಾಗಿರಲಿ.) ||೯||

**ಭಾ || (೧) ಇಳೇಡ್ಯತ್ವಾದ್ಧರಿಃ ಶ್ರೀ ರ್ವಾ ಭೂರೂಪಾ ಸೈವ ಚಾಪರಾ । ಮಹೀ ತು ಭಾರತೀ ನಾಮ ವಾಯವ್ಯಾ ಬ್ರಹ್ಮಣೋಽಪರಾ || (೨) ತದ್ಗತಸ್ತ್ವಾದೃಶೈರೂಪೈಃ ಪೃಥಕ್ಸ್ತ್ರೀ ವಾ ಹರಿಸ್ತಥಾ ||೯||**

ಅ || (೧) (ಸರಸ್ವತೀ ಶಬ್ದವನ್ನು ವ್ಯಾಖ್ಯಾನ ಮಾಡಿಯಾಗಿದೆ. ಮಹೀಶಬ್ದವನ್ನು ವ್ಯಾಖ್ಯಾನ ಮಾಡುವರು. ಆದ ಕಾರಣ ಪ್ರಕೃತ ಇಳಾ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) (ಈಡ ಸ್ತುತೌ) ಬ್ರಹ್ಮಾದಿಗಳಿಂದ ಸ್ತುತ್ಯನಾದುದರಿಂದ ಶ್ರೀ ಹರಿಯು ಇಳಾ ಎನಿಸುತ್ತಾನೆ. ಸ್ತುತ್ಯಳಾದುದರಿಂದಲೇ ಶ್ರೀ ದೇವಿಯೂ ಇಳಾ ಎನಿಸುತ್ತಾಳೆ. ಇಳಾ ಸರಸ್ವತಿಯರಿಂದ ಇತರಳಾದ ಶ್ರೇಷ್ಠತ್ವ ನಿಮಿತ್ತದಿಂದ ಮಹೀ ಎನಿಸಿಕೊಂಡವಳು. ಭೂರೂಪಳಾದ ಲಕ್ಷ್ಮೀದೇವಿಯೇ. ವಾಯುದೇವರ ಹೆಂಡತಿಯಾದ ಭಾರತೀ ದೇವಿಯೂ ಕೂಡ ಮಹೀ ಎಂದು ಪ್ರಸಿದ್ಧಳು. ಬ್ರಹ್ಮದೇವರ ಹೆಂಡತಿಯು ಇಳಾ ಮಹೀ

ಇವರಿಂದ ಇತರಳಾದವಳು ಸರಸ್ವತೀ ಶಬ್ದದಿಂದ ಹೇಳಲ್ಪಡುತ್ತಾಳೆ. (೨) ಲಕ್ಷ್ಮ್ಯಾದಿಗಳಲ್ಲಿರತಕ್ಕ ಶ್ರೀ ಹರಿಯೂ ಸ್ತ್ರೀ ಆಕಾರವುಳ್ಳ ರೂಪವಿಶೇಷಗಳಿಂದ ಸ್ತ್ರೀಲಿಂಗ ಬಹುವಚನಗಳಿಗೆ ವಿಷಯನು ಅಥವಾ ಪ್ರತ್ಯೇಕವಾಗಿರತಕ್ಕ ಶ್ರೀ ಹರಿಯೂ ಸ್ತ್ರೀಲಿಂಗ ಬಹುವಚನಗಳಿಗೆ ವಿಷಯನು. ॥೯॥

ಋ ॥ (೧೩.೨) ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ । ಅಸ್ಮಾಕಮಸ್ತು ಕೇವಲಃ ॥೧೦॥

ಅ॥ (ಈ ಋಕ್ಕಿಗೆ ತ್ವಷ್ಟ್ಯ ದೇವತೆಯು) ತ್ವಷ್ಟಾರಂ = (ತ್ವಿಷ ದೀಪ್ತೌ) ತೇಜಸ್ಸುಳ್ಳ ಅಥವಾ ಬಲವುಳ್ಳ, ಅಗ್ರಿಯಂ = (ಸರ್ವರಿಗಿಂತ ಪ್ರಥಮದಲ್ಲಿರುವ) ಪ್ರಧಾನನಾದ, ವಿಶ್ವರೂಪಂ =ಸರ್ವ ವಸ್ತುಗಳನ್ನು ಸೃಷ್ಟಿಸತಕ್ಕ ಅಥವಾ ಪೂರ್ಣರೂಪವುಳ್ಳ, ಶ್ರೀ ಹರಿಯನ್ನು ಇಹ=ಯಜ್ಞದಲ್ಲಿ ಉಪಹ್ವಯೇ=ಕರೆಯುತ್ತೇನೆ. (ಅಂತಹ ಶ್ರೀ ಹರಿಯು) ಅಸ್ಮಾಕಂ ಕೇವಲಃ ಅಸ್ತು=ನಮಗೇನೇ ರಕ್ಷಕನಾಗಲಿ. ॥೧೦॥

ಭಾ॥ ತ್ವಷ್ಟಾ ತೇಜಸ್ತ್ವತೋ ವಿಷ್ಣುರ್ಬಲತ್ವಾದ್ವಾ ಸಮೀರಿತಃ । ವಿಶ್ವರೂಪಕರತ್ವಾಚ್ಚ
ವಿಶ್ವರೂಪೋಽಥ ಪೂರ್ತಿತಃ ॥೧೦॥

ಅ ॥ ದೀಪ್ತಿಃ =ತೇಜಸ್ಸು, ಮತ್ತು ಬಲವು (ತ್ವಿಷದೀಪ್ತೌ ಎಂಬ ಧಾತು ವ್ಯಾಖ್ಯಾನದಿಂದ) ತೇಜಸ್ಸುಳ್ಳವನಾದುದರಿಂದಲೂ ಬಲಿಷ್ಠನಾದುದರಿಂದಲೂ ಶ್ರೀ ಹರಿಯು ತ್ವಷ್ಟಾ ಎನಿಸುತ್ತಾನೆ. ಸಮಸ್ತ ವಸ್ತುಗಳನ್ನು ಸೃಷ್ಟಿ ಸುವವನಾದುದರಿಂದ ಅಥವಾ ಸರ್ವ ಗುಣಪರಿಪೂರ್ಣನಾದುದರಿಂದ ವಿಶ್ವರೂಪಃ ಎನಿಸುತ್ತಾನೆ. ॥೧೦॥

ಋ (೧೩.೩) ಅವ ಸೃಜಾ ವನಸ್ಪತೇ ದೇವ ದೇವೇಭ್ಯೋ ಹವಿಃ । ಪ್ರ ದಾತುರಸ್ತು ಚೇತನಂ ॥೧೧॥

ಅ ॥ (ಈ ಋಕ್ಕಿಗೆ ವನಸ್ಪತಿಯು ದೇವತೆಯು) ವನಸ್ಪತೇ = ಭಜಿಸಿಕೊಳ್ಳಳು ಯೋಗ್ಯರಾದವರರಿಗೆ ಅಧಿಪತಿಯಾದ, ದೇವ=ಶ್ರೀ ಹರಿಯೇ (ನೀನು) ದೇವೇಭ್ಯಃ = ದೇವತೆಗಳಿಗಾಗಿ, ಹವಿಃ = ಹವಿಸ್ಸನ್ನು ಅವಸೃಜ= (ಸೃಜವಿಸರ್ಗೇ)=ಕೊಡು (ವಿಸರ್ಗವು ತ್ಯಾಗರೂಪವು. ದಾನವೂ ತ್ಯಾಗರೂಪವೇ ಅದರಿಂದ) ಪ್ರದಾತುಃ =ಯಜಮಾನನಿಗೆ, ಚೇತನಂ = (ಚಿತೀ ಸಂಜ್ಞಾನೇ) ಜ್ಞಾನವು, ಅಸ್ತು =ಆಗಲಿ (ಉಂಟಾಗಲಿ). ॥೧೧॥

ಅ॥ (ಈ ಋಕ್ಕಿಗೆ ವನಸ್ಪತಿಯು ದೇವತೆಯು) ವನಸ್ಪತೇ=ಭಜಿಸಿಕೊಳ್ಳಲು ಯೋಗ್ಯರಾದವರಿಗೆ ಅಧಿಪತಿಯಾದ, ದೇವ=ಶ್ರೀ ಹರಿಯೇ (ನೀನು) ದೇವೇಭ್ಯಃ = ದೇವತೆಗಳಿಗಾಗಿ, ಹವಿಃ = ಹವಿಸ್ಸನ್ನು ಅವಸೃಜ= (ಸೃಜವಿಸರ್ಗೇ) = ಕೊಡು (ವಿಸರ್ಗವು ತ್ಯಾಗರೂಪವು, ದಾನವೂ ತ್ಯಾಗರೂಪವೇ ಆದರಿಂದ) ಪ್ರದಾತುಃ = ಯಜಮಾನನಿಗೆ, ಚೇತನಂ = (ಚಿತೀ ಸಂಜ್ಞಾನೇ) ಜ್ಞಾನವು, ಅಸ್ತು=ಆಗಲಿ (ಉಂಟಾಗಲಿ). ॥೧೧॥

ಭಾ ॥ ವನನೀಯಪತಿತ್ವೇನ ವನಸ್ಪತಿರಿತೀರಿತಃ । ಜ್ಞಾನಂ ತು ಚೇತನಂ ॥೧೧॥

ಅ॥ (ವನಸಂಭಕ್ತೌ) ಭಜಿಸಿಕೊಳ್ಳಲು ಯೋಗ್ಯರಾದವರಿಗೆ ಅಧಿಪತಿಯಾಗಿರುವುದರಿಂದ ಶ್ರೀ ಹರಿಯು ವನಸ್ಪತಿ ಎನಿಸುತ್ತಾನೆ. (ಅದರಿಂದ ಯಜಮಾನನಿಗೆ) ಚೇತನಂ = ಜ್ಞಾನವುಂಟಾಗಲಿ ॥೧೧॥

ಋ ॥ (೧೩೪) ಸ್ವಾಹಾ ಯಜ್ಞಂ ಕೃಣೋತನೇಂದ್ರಾಯ ಯಜ್ವನೋ ಗೃಹೇ । ತತ್ರ ದೇವಾ ಉಪಹ್ವಯೇ ॥೧೨॥೨೫॥೧೩॥

ಅ ॥ (ಈ ಋಕ್ಕಿಗೆ ಸ್ವಾಹಾಕೃತಿಗಳು ದೇವತೆಗಳು) ಸ್ವಾಹಾ = ತನ್ನ ಭಾಗವನ್ನು ತೆಗೆದುಕೊಳ್ಳುವುದಕ್ಕಾಗಿ ಬರುವುದರಿಂದ ಸ್ವಾಹಾ ಎನಿಸಿಕೊಂಡವನು, ಅಥವಾ ಸುಷ್ಠು ಆ ಸಮಂತಾನ್ನ ಹೀಯತೇ = ಚೆನ್ನಾಗಿ ಸರ್ವರಿಂದಲೂ ಬಿಡಲ್ಪಡದೆ ಇದ್ದವನು (ಭಜಿಸಲ್ಪಡುವವನು) ಅಥವಾ ಸುಷ್ಠು ಆ ಸಮಂತಾತ್ ನಹ್ರಿಯತೇ =ಚೆನ್ನಾಗಿ ಸರ್ವಥಾ ಯಾರಿಂದಲೂ ಅಪಹರಿಸಲ್ಪಡುವವನು (ಅಂದರೆ ಸರ್ವಥಾ ತಿರಸ್ಕಾರ ಅಪಹಾರಾದಿಗಳಿಗೆ ಶಕ್ಯನು) ಎಂಬ ವ್ಯುತ್ಪತ್ತಿಯಿಂದ ಸ್ವಾಹಾ ಎನಿಸಿಕೊಂಡ ಸ್ತ್ರೀರೂಪನಾದ ಶ್ರೀ ಹರಿಯು, ಯಜ್ವನಃ ಯಜಮಾನನ, ಗೃಹೇ = ಮನೆಯಲ್ಲಿ, (ಇರತಕ್ಕ) ಯಜ್ಞಂ = ಯಾಗವನ್ನು, ಇಂದ್ರಾಯ=ಇಂದ್ರನಿಗೋಸ್ಕರ ಕೃಣೋತನ = (ಕೃವಿ ಹಿಂಸಾಕರಣಯೋಃ) ಮಾಡಲಿ. (ಇಂದ್ರನನ್ನು ಹೊಂದಿಸಿ ಕೊಡಲಿ) (ಸ್ವಾಹಾಕಾರಂ ಯಜತಿ ಎಂಬ ವಾಕ್ಯೋಕ್ತವಾದ ಉತ್ತಮ ಪ್ರಯಾಜಾಖ್ಯ ಯಜ್ಞದಲ್ಲಿ ಸ್ವಾಹಾದೇವಿಯು ಹೋಮಿಸಲ್ಪಡತಕ್ಕವಳು, ಅಲ್ಲಿ ಇಂದ್ರನ ಸಂಬಂಧವಿಲ್ಲದಿರುವುದರಿಂದ ಇದು ಹೇಗೆ ಕೂಡುತ್ತದೆ ಎಂದರೆ) ಇಂದ್ರಾಯ = ಇಂದ್ರ ಸಂಬಂಧಿ ಯಾದ ಯಜಮಾನನ =ಮನೆಯಲ್ಲಿರತಕ್ಕ ಯಜ್ಞವನ್ನು, ಕೃಣೋತನ =ಪ್ರವರ್ತಿಸಲಿ. ಮತ್ತು ತತ್ರ = ಆ ಯಜ್ಞದಲ್ಲಿ, ದೇವಾನ್ = ದೇವತೆಗಳನ್ನು ಉಪಹ್ವಯೇ ಕರೆಯುತ್ತೇನೆ (ತೃಪ್ತಿಗೊಳಿಸುತ್ತೇನೆ) ॥೧೨॥೨೫॥೧೩॥

ಭಾ ॥ ಸ್ವಾಹಾ ಸ್ವಭಾಗಗತಿಮಾನ್ ಸ್ಮೃತಃ । ಅವ್ಯಯತ್ವಾದಮೋಷಶ್ಚ ॥೧೨॥೨೫॥೧೩॥

ಆ ॥ (ಸ್ವಾಹಾ ಶಬ್ದವನ್ನು ಶ್ರೀ ಹರಿಯಲ್ಲಿ ಮೂರು ಪ್ರಕಾರ ವ್ಯಾಖ್ಯಾನ ಮಾಡುತ್ತಾರೆ.) (೧) ಶ್ರೀ ಹರಿಯು ತನ್ನ ಭಾಗವನ್ನು ಹೊಂದಲಿಕ್ಕಾಗಿ ಗತಿಯುಳ್ಳವನು (ಅಜಪೂರ್ವಾತ್ ಓಹಾಜಗತೌ) (೨) ಸುಷ್ಠು ಆ ಸಮಂತಾನ್ನ ಹೀಯತೇ = ಸರ್ವಥಾ ನಾಶಮಾಡಲ್ಪಡುವುದಿಲ್ಲ (ಓಹಾಕ್‌ತ್ಯಾಗೇ) ಅಂದರೆ ಅನಿತ್ಯತ್ವಂ ದೇಹ ಹಾನಿಃ ದುಃಖಪ್ರಾಪ್ತಿರಪೂರ್ಣತಾ । ಎಂಬ ನಾಲ್ಕು ವಿಧ ನಾಶವೂ ಇಲ್ಲದಿರುವವನು, (೩) ಸುಷ್ಠು ಆ ಸಮಂತಾನ್ನಹ್ರಿಯತೇ (ಸ್ವಾಜಪೂರ್ವಕಾತ್‌ಹೃಜಹರಣೇ) ಸರ್ವಥಾ ಯಾರಿಂದಲೂ ಅಪಹರಿಸಲ್ಪಡದಿದ್ದವನು (ಎಂಬ ವ್ಯುತ್ಪತ್ತಿಯಿಂದ ಸ್ವಾಹಾ ಎಂದು ಹೇಳಲ್ಪಟ್ಟವನು ಸ್ತ್ರೀರೂಪವಾದ ಶ್ರೀ ಹರಿಯು) ಪ್ರಸಿದ್ಧ ಸ್ವಾಹಾ ದೇವಿಯಲ್ಲಿಯೂ ಯಥಾ ಯೋಗ್ಯವಾಗಿ ಅವಯವಾರ್ಥವನ್ನು ಇಟ್ಟುಕೊಳ್ಳಬೇಕು. ॥೧೨॥೨೫॥೧೩॥

ಅವ ॥ ೧೨ ಋಕ್ಕು. ೨ ವರ್ಗ, ಗಾಯತ್ರೀ ಛಂದಸ್ಸು. ವೈಶ್ವದೇವ ಸೂಕ್ತವು. ವಿಶ್ವೇ ದೇವತೆಗಳು ದೇವತೆಗಳು.

ಋ ॥ (೧೩೫) ಏಭಿರಗ್ನೇ ದುವೋ ಗಿರೋ ವಿಶ್ವೇಭಿಃ ಸೋಮಪೀತಯೇ । ದೇವೇಭಿರ್ಯಾಹಿ ಯಕ್ಷಿ ಚ ॥ ॥೧॥

ಅ ॥ ಅಗ್ನೇ = ಎಲೋ ಅಗ್ನಿಯೇ, ದುವಃ = (ದುಹ ಪ್ರಪೂರಣೇ) ಸರ್ವಕಾಮಗಳನ್ನು ಹೊಂದಿಸಿಕೊಡುವ ಗಿರಃ = ನಮ್ಮ ಸ್ತುತಿರೂಪಗಳಾದ ವಚನಗಳನ್ನು ಕುರಿತು, ಸೋಮಪೀತಯೇ =ಸೋಮಪಾನ ಮಾಡುವುದಕ್ಕಾಗಿ ಏಭಿಃ ವಿಶ್ವೇಭಿಃ ದೇವೇಭಿಃ =ಈ ವಿಶ್ವೇ ದೇವತೆಗಳಿಂದ ಕೂಡಿಕೊಂಡು, ಆಯಾಹಿ =ಬಾ, ಯಕ್ಷಿ ಚ = ಬಂದು ಯಜ್ಞಮಾಡು. ಪೂಜಿಸು. ॥೧॥

ಭಾ ॥ **ಕಾಮದೋಹಾಃ ದುವಃ ಸ್ಮೃತಾಃ** ॥೧॥

ಅ॥ ದುವಃ = ಸರ್ವಾಭೀಷ್ಟಗಳನ್ನು ಹೊಂದಿಸಿ ಕೊಡತಕ್ಕವುಗಳು, ಎಂದು ಸ್ಮೃತಗಳಾಗಿವೆ. ॥೧॥

ಋ ॥ **(೧೩.೭) ಆತ್ವಾ ಕಣ್ವಾ ಅಹೂಷತ ಗೃಣಂತಿ ವಿಪ್ರ ತೇ ಧಿಯಃ । ದೇವೇಭಿರಗ್ನ ಆ ಗಹಿ** ॥೨॥

ಅ ॥ ವಿಪ್ರ = ಮೇಧಾವುಳ್ಳ, ಅಗ್ನೇ =ಅಗ್ನಿಯೇ, ಕಣ್ವಾ = ಪ್ರತಿಭೆಯುಳ್ಳ ಅಥವಾ ಕಣ್ವಗೋತ್ರದಲ್ಲಿ ಹುಟ್ಟಿದ (ಕಣ್ವ ಸಂಬಂಧಿಗಳಾದ)ವರು (ನಾವು,) ತ್ವಾ = ನಿನ್ನನ್ನು ಆ ಅಹೂಷತ = (ಹ್ವೇ ಞ ಶಬ್ದೇ) ಕರೆದರು. (ಕರೆದೆವು) (ಪ್ರಾರ್ಥಿಸಿದರು) ಪ್ರಾರ್ಥಿಸಿದೆವು. ತೇ=ಅಂತಹವರು ತೇ = ನಿನ್ನ, ಧಿಯಃ = ಬುದ್ಧಿಗಳನ್ನು ಗೃಣಂತಿ = (ಗೈಶಬ್ದೇ) ನೀನು ಅತಿಶಯಿತ ಬುದ್ಧಿಯುಳ್ಳವನು ಇತ್ಯಾದಿ ರೂಪದಿಂದ ನಿನ್ನನ್ನು ಸ್ತುತಿಸುತ್ತಾರೆ. (ಅಂತಹ ನೀನು) ದೇವೇಭಿಃ = ದೇವತೆಗಳಿಂದ ಕೂಡಿಕೊಂಡು, ಅಗಹಿ = (ಗಮ್ಲೃ ಗತೌ) ಸ್ಪಷ್ಟವಾದುದರಿಂದ ಆಚಾರ್ಯರು ವ್ಯಾಖ್ಯಾನ ಮಾಡಲಿಲ್ಲ.) (ನಾವು ನಿನ್ನನ್ನು ಪ್ರಾರ್ಥಿಸಿದೆವು ಎಂದು ತಾತ್ಪರ್ಯವು) ॥೨॥

ಋ ॥ **(೧೩.೮) ಇಂದ್ರ ವಾಯೂ ಬೃಹಸ್ಪತಿಂ ಮಿತ್ರಾಽಗ್ನಿಂ ಪೂಷಣಂ ಭಗಂ । ಆದಿತ್ಯಾನ್ಮಾರುತಂ ಗಣಂ** ॥೩॥

ಅ ॥ ಇಂದ್ರ ವಾಯೂ =ಇಂದ್ರ ವಾಯು ಶಬ್ದ ವಾಚ್ಯಗಳಾದ ಗವದ್ರೂಪವಿಶೇಷಗಳನ್ನು, ಬೃಹಸ್ಪತಿಂ ಸರ್ವೋತ್ತಮನೂ, ಸರ್ವಸ್ವಾಮಿಯೂ ಆದ ಶ್ರೀ ಹರಿಯನ್ನು ಅಥವಾ ವಾಗಭಿಮಾನಿನಿಯಾದ ಸರಸ್ವತೀ ಪತಿಯಾದ ಬ್ರಹ್ಮನನ್ನು ಮಿತ್ರಾ=ಮಿತ್ರಾ ವರುಣ ಶಬ್ದವಾಚ್ಯಗಳಾದ ಭಗವದ್ರೂಪವಿಶೇಷಗಳನ್ನು, ಅಗ್ನಿ=ಅಗ್ನಿ ಎನಿಸಿಕೊಂಡ ಶ್ರೀ ಹರಿಯನ್ನು ಪೂಷಣ=(ಪುಷಪುಷ್ಟೌ) (ಪೋಷಯತಿ ಅಥವಾ ಪೂರ್ಣತ್ವಾತ್) ಸರ್ವರನ್ನು ಪೋಷಿಸುವುದರಿಂದ ಅಥವಾ ಸರ್ವಗುಣ ಪರಿಪೂರ್ಣನಾದುದರಿಂದ ಪೂಷಾ ಎನಿಸಿಕೊಂಡ ಶ್ರೀ ಹರಿಯನ್ನು ಭಗಂ = ಪೂರ್ಣ ಐಶ್ವರ್ಯಾದಿಗಳಿದ್ದುದರಿಂದ ಭಗ ಎನಿಸಿಕೊಂಡ ಶ್ರೀ ಹರಿಯನ್ನು = ಆದಿತ್ಯಾನ್ = (ಅಜಪೂರ್ವಕಾತ್ ದಾಣ್ ದಾನೇ ಆದಿತ್, ಯಾ ಪ್ರಾಪಣೇ ಆದಿತ್ ಚಾಸೌ ಯಶ್ಚ) ಎಲ್ಲರಿಗಿಂತಲೂ ಆದಿಯಲ್ಲಿದ್ದುದರಿಂದ, ಅಥವಾ ಸರ್ವವನ್ನು (ಪೃಥೀರಸವನ್ನು) ತೆಗೆದುಕೊಂಡು ಹೋಗುವುದರಿಂದ ಆದಿತ್ಯರೆನಿಸಿಕೊಂಡ ಭಗವದ್ರೂಪಗಳನ್ನು, ಮಾರುತಂ (ಮಾಭಿಃ=ರುತಂ=(ರು ಶಬ್ದೇ) ಪ್ರತಿಪಾದಿತಂ =ವೇದರೂಪ ಪ್ರಮಾಣಗಳಿಂದ ಪ್ರತಿಪಾದಿಸಲ್ಪಟ್ಟ ಭಗವಂತನನ್ನು ಗಣಂ =ಇತರ ದೇವತಾ ಸಮೂಹದಲ್ಲಿ ನಿಯಾಮಕ ಭಗವದ್ರೂಪವನ್ನು (ಕಾಣ್ವರು) ಆ ಅಹೂಷತ ಕರೆದರು. (ಪ್ರಾರ್ಥಿಸಿದರು) (ಅವಾಚ್ಯ ಶಬ್ದವಾಚ್ಯರಾದ ಇಂದ್ರಾದಿ ದೇವತೆಗಳನ್ನು ಯಥಾಯೋಗ್ಯವಾಗಿ ಇಟ್ಟುಕೊಳ್ಳಬೇಕು) ॥೩॥

ಭಾ ॥ **(೧) ಬೃಹನ್ಮತಿರ್ಬೃಹತ್ವಾ ವಾ ವಾಚ ಏವ ಬೃಹಸ್ಪತಿಃ ॥ (೨) ಮಿತ್ರೇತಿ ಮಿತ್ರಾ ವರುಣೌ ಪೂಷಾನಾಮ ಸ ಪೋಷಣಾತ್ । ಪೂರ್ಣತ್ವಾದ್ವಾ (೩) ಭಗಃ ಪ್ರೋಕ್ತಃ ಪೂರ್ಣೈಶ್ವರ್ಯಾದಿಕತ್ವತಃ । (೪) ಆದಿಸ್ಥತ್ವಾತ್ಸ ಆದಿತ್ಯಃ ಆದದಾನಃ ಪ್ರಯಾತಿ ವಾ । ಬಹುರೂಪತ್ವತಶ್ಚೈವ ಮಾನೋಕ್ತತ್ವಾತ್ತು ಮಾರುತಃ** ॥೩॥

ಅ॥ (೧) (ಮೊದಲು ವ್ಯಾಖ್ಯಾನ ಮಾಡದಿರುವುದರಿಂದ ಬೃಹಸ್ಪತ್ಯಾದಿ ಶಬ್ದಗಳನ್ನು ಭಗವತ್ಪರಗಳನ್ನಾಗಿ ವ್ಯಾಖ್ಯಾನ ಮಾಡುತ್ತಾರೆ.) ಸರ್ವಶ್ರೇಷ್ಠನೂ ಸರ್ವಸ್ವಾಮಿಯೂ ಆದುದರಿಂದ ಶ್ರೀ ವಿಷ್ಣುವೇ ಬೃಹಸ್ಪತಿಃ ಎನಿಸಿಕೊಂಡವನು. ಅಥವಾ ಬೃಹತ್ಯಾಃ =ವಾಕಿಗೆ ಸ್ವಾಮಿಯಾದುದರಿಂದ ಬೃಹಸ್ಪತಿಃ ಎನಿಸುತ್ತಾನೆ. (೨) ಒಬ್ಬ ಮಿತ್ರನೆಂಬ ದೇವತೆಯಲ್ಲಿ ಮಿತ್ರೌ ಎಂದು ದ್ವಿವಚನವು ಹೇಗೆ (ಯಜ್ಞಾದಿಗಳಲ್ಲಿ ಮಿತ್ರಾವರುಣರು ಹವಿಸ್ಸನ್ನು ತೆಗೆದುಕೊಳ್ಳಲಿಕ್ಕೆ ಒಟ್ಟಿಗೆ ಹೋಗುವುದರಿಂದ ಇಬ್ಬರಿಗೆ ಒಂದೇ ನಾಮವು. ಆದ ಕಾರಣ) ಮಿತ್ರಪದದಿಂದ ವರುಣನನ್ನು ತೆಗೆದುಕೊಳ್ಳಬೇಕು. ಆ ಶ್ರೀ ಹರಿಯು (ಪುಷ ಪುಷ್ಟೌ) ಸರ್ವರನ್ನು ಪೋಷಿಸುವುದರಿಂದ ಅಥವಾ ಸರ್ವಗುಣ ಪರಿಪೂರ್ಣನಾದುದರಿಂದ ಪೂಷಾ ಎನಿಸುತ್ತಾನೆ. (೩) ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯಯತಸಃ ಶ್ರೀಯಃ । ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥ ಎಂಬ ಪ್ರಮಾಣದಿಂದ) ಪೂರ್ಣ ಐಶ್ವರ್ಯ, ಪೂರ್ಣವೀರ್ಯಾದಿ ಗುಣಗಳುಳ್ಳವನಾದುದರಿಂದ ಶ್ರೀ ಹರಿಯು ಭಗಃ ಎನಿಸುತ್ತಾನೆ. (೪) ಸರ್ವರಿಗಿಂತ ಆದಿಯಲ್ಲಿದ್ದುದರಿಂದ ಅಥವಾ ಪೃಥಿವೀಜಲವನ್ನು ತೆಗೆದುಕೊಂಡು ಹೋಗುವುದರಿಂದ ಶ್ರೀ ಹರಿಯು ಆದಿತ್ಯನೆನಿಸುತ್ತಾನೆ. ಏತೇ ಹೀದಂ ಸರ್ವಮಾದದಾನಾ ಯಂತಿ = ಈ ಸೂರ್ಯರು ಯಾವ ಕಾರಣದಿಂದ ಈ ಸಮಸ್ತ ಜಗತ್ತನ್ನು (ಪೃಥಿವೀ ಜಲವನ್ನು) ತೆಗೆದುಕೊಳ್ಳುತ್ತಾ ಹೋಗುತ್ತಾರೋ, ಆದ ಕಾರಣ ಆದಿತ್ಯನೆನಿಸುತ್ತಾರೆ.) ಶ್ರೀ ಹರಿಗೆ ಬಹುರೂಪಗಳಿದ್ದುದರಿಂದ ಆದಿತ್ಯಾನ್ ಇತ್ಯಾದಿಯೂ, ದೇವತಾಂತರ ಸಮೂಹವನ್ನು ಹೇಳುವ ಗಣಂ ಇತ್ಯಾದಿಯೂ ಎರಡು ರೂಪಗಳಿದ್ದುದರಿಂದ ಮಿತ್ರಾ ಇತ್ಯಾದಿಯೂ ಯುಕ್ತವಾಗುತ್ತದೆ. ಅಂತಹೆ ಒಂದು ಹವಿಸ್ಸನ್ನು ತೆಗೆದುಕೊಳ್ಳಲಿಕ್ಕೆ ಮಾತ್ರ ಮಿತ್ರ ವರುಣರು ಒಟ್ಟಿಗೆ ಹೋಗುವುದರಿಂದ ದಸ್ರರಂತೆ ಮಿತ್ರ ವರುಣರಿಗೆ ಮಿತ್ರೌ ಎಂದು ಒಂದು ನಾಮವು. ನಾಸತ್ಯ, ದಸ್ರ, ಎಂದು ನಾಮಗಳುಳ್ಳ ಅಶ್ವಿನೀ ದೇವತೆಗಳಿಗೆ ಸಮಸ್ತ ವ್ಯಾಪಾರಗಳಲ್ಲಿಯೂ ಸಾಹಚರ್ಯವಿದ್ದುದರಿಂದ ದಸ್ರ ಎಂಬ ನಾಮದಿಂದ ನಾಸತ್ಯನೂ ಹೇಳಿಸಲ್ಪಡುತ್ತಾನೆ. ಮಿತ್ರ ವರುಣನಿಗಾದರೂ ಯಜ್ಞಾಗಳಲ್ಲಿ ಮಾತ್ರ ಸಾಹಚರ್ಯವಿದ್ದುದರಿಂದ ವರುಣನಲ್ಲಿ ಮಿತ್ರ ಶಬ್ದಕ್ಕೆ ಲಕ್ಷಣಯಾ ಕ್ವಚಿತ್ಪ್ರಯೋಗವು. ನಾಸತ್ಯದಸ್ರರಿಗಾದರೂ ಸರ್ವ ವ್ಯಾಪಾರಗಳಲ್ಲಿಯೂ ಸಾಹಚರ್ಯವಿದ್ದುದರಿಂದ ಆ ಎರಡು ಶಬ್ದಗಳಿಂದಲೂ ಪ್ರಪ್ರತ್ಯೇಕ ಇಬ್ಬರೂ ವಾಚ್ಯರಾಗುತ್ತಾರೆ. ಆದುದರಿಂದಲೇ ನಾಸತ್ಯಾವಶ್ವಿನೌ ದಸ್ರಾವಾಶ್ವಿನೇಯೌಚ ತಾವುಭೌ ॥ ಎಂದು ಅಮರವು) ವೇದಾದಿ ಪ್ರಮಾಣಗಳಿಂದ ಪ್ರತಿಪಾದಿಸಲ್ಪಡುವುದರಿಂದ, ಶ್ರೀ ಹರಿಯು ಮಾರುತಃ ಎನಿಸುತ್ತಾನೆ. ॥೩॥

ಋ ॥ (೧೩೪) ಪ್ರವೋ ಭ್ರಿಯಂತ ಇಂದವೋ ಮತ್ಸರಾ ಮಾದಯಿಷ್ಣವಃ । ದ್ರಪ್ಸಾ ಮಧ್ವಶ್ಚಮೂಷದಃ ॥೪॥

ಅ॥ (ಎಲೋ ದೇವತೆಗಳೇ) ಮತ್ಸರಾಃ = ಮದಕಾರಿಗಳಾದ (ಮದವನ್ನು ಹೊಂದಿಸಿ ಕೊಡುವ) ಮತ್ = ಮದಂ ಸರಂತಿ ಸಾರಯಂತಿ ಗಮಯಂತಿ, ಮತ್‌ಪೂರ್ವಾತ್ ಸೃಗತೌ) ಮಾದಯಿಷ್ಣವಃ = (ಮದೀಹರ್ಷೇ) ಮದವನ್ನು ಹೊಂದಿಸಿಕೊಡುವ ಸ್ವಭಾವವುಳ್ಳ, (ಸೋಮಕ್ಕೆ ಮದವನ್ನು ಹುಟ್ಟಿಸುವುದು ಸ್ವಭಾವವು ಎಂಬುವುದನ್ನು ಅಧಿಕವಾಗಿ ಹೇಳುವುದಕ್ಕಾಗಿ ಈ ಪದವನ್ನು ಹೇಳಿದ್ದು. ಆದುದರಿಂದ ಮತ್ಸರಾಃ ಎನ್ನುವ ಪೂರ್ವಪದದಿಂದ ಪುನರುಕ್ತಿಯಿಲ್ಲ.) ದ್ರಪ್ಸಾಃ = (ದ್ರುಗತೌ) ದ್ರವಣ ರೂಪಗಳಾದ (ಹರಿದುಕೊಂಡು ಹೋಗುವಿಕೆ) ಮಧ್ವಃ = ರುಚಿಕರಗಳಾದ, ಚಮೂಷದಃ =(ಷದ್ಲೃ ವಿಶರಣಗತ್ಯವಸಾದನೇಷು) ಚಮಸ (ಪಾನಭಾಜನ) ದಲ್ಲಿರುವ, ಇಂದವಃ=ಸೋಮಗಳು, ವಃ=ನಿಮಗಾಗಿ, ಪ್ರಭ್ರಿಯಂತೇ = (ಭೃಞ ಭರಣೇ) ಸಂಪಾದಿಸಲ್ಪಡುತ್ತವೆ. (ಅವುಗಳನ್ನು ಕುಡಿಯಿರಿ.) (ಅಧ್ಯಾತ್ಮಾರ್ಥದಲ್ಲಿ) (ಎಲೋ ತತ್ವ ದೇವತೆಗಳೇ)

ಮತ್ಸರಾಃ ಮಾದಯಿಷ್ಣವಃ, ದ್ರಪ್ಸಾಃ = ಚಂಚಲಗಳಾದ, ಚಮೂಷದಃ =ಶಿರೋರೂಪಚಮಸದಲ್ಲಿರತಕ್ಕ, ಇಂದವಃ = ಇಷ್ಟವನ್ನು ಹೊಂದಿಸಿ ಕೊಡುವ ಮನೋ ವೃತ್ತಿಗಳು, ವಃ =ನಿಮಗಾಗಿ, ಪ್ರಭ್ರಿಯಂತೇ = ಸಮಾಧಾನ ಮಾಡಲ್ಪಡುತ್ತವೆ. (ಅಂದರೆ ನಿಮ್ಮ ವಿಷಯದಲ್ಲಿ ಸಾವಧಾನವಾಗಿ ಮಾಡಲ್ಪಡುತ್ತವೆ.) ||೪||

ಭಾ || (೧)ಮತ್ಸರಾ ಮದಕಾರಿತ್ವಾತ್ತಾಚ್ಛೀಲ್ಯಾದುತ್ತರಂ ಪದಂ ||(೨)ದ್ರಪ್ಸಾಸ್ತೇ ದ್ರವಣಾಚ್ಚೈವ ಚಮಸಸ್ಥಾಶ್ಚಮೂಷದಃ || (೩) ಶಿರಶ್ಚ ಚಮಸಂಪ್ರೋಕ್ತಮಿಷ್ಟದಾನಾತ್ತಥೇಂದವಃ ||೪||

ಅ|| (೧) (ಮತ್‌ಮದಂ ಸರಂತಿ ಸಾರಯಂತಿ ಗಮಯಂತಿ ಎಂಬ ವ್ಯುತ್ಪತ್ತಿಯಿಂದ) ಮದವನ್ನು ಹೊಂದಿಸಿಕೊಡುವುದರಿಂದ ಮತ್ಸರಾಃ ಎನಿಸುತ್ತವೆ. ಮದಕಾರಿತ್ವವು ಸೋಮದ ಸ್ವಭಾವವು ಎಂದು ಅಧಿಕವಾಗಿ ಹೇಳುವುದಕ್ಕಾಗಿ ಮಾದಯಿಷ್ಣವಃ ಎಂಬುವ ಉತ್ತರ ಪದವನ್ನು ಹೇಳಿದ್ದು (೨) ಆ ಸೋಮಗಳು ದ್ರವಣರೂಪ (ಹರಿದು ಹೋಗುವಿಕೆ) ಅರ್ಥದಿಂದಲೇ ದ್ರಪ್ಸಾಃ ಎನಿಸುತ್ತವೆ. (ಏವ ಶಬ್ದದಿಂದ ದ್ರಪ್ಸಾಃ =ರಸವುಳ್ಳದ್ದು ಎಂಬ ವ್ಯಾಖ್ಯಾನವು ಅಪ್ರಾಮಾಣಿಕವು) ಚಮೂಷದಃ = (ಚಮೂಷು ಸೀದಂತಿ) ಚಮಸದಲ್ಲಿರುವವುಗಳು. (೩) (ಆಧ್ಯಾತ್ಮ ರೂಪವಾದ ಅರ್ಥದಲ್ಲಿ ಆದರೂ) (ಮತ್ಸರಾದಿ ಶಬ್ದಗಳಿಗೆ ಮನೋ ವೃತ್ತಿಗಳಲ್ಲಿ ಅರ್ಥವು ಸುಲಭವಾಗಿರುವುದ ರಿಂದ ಅವುಗಳನ್ನು ಹೇಳದೆ ಮನೋ ವೃತ್ತಿಗಳಿಗೆ ಚಮಸವು ಸ್ಥಾನವು ಎನ್ನುವುದನ್ನು ಕೊಡಿಸುತ್ತಾರೆ.) ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ ಎಂಬ ಶ್ರುತಿಯಿಂದ ಚಮೂ ಎನಿಸಿದ ಚಮಸ ಶಬ್ದವು ಶಿರಸ್ಸು ಎಂಬ ಅರ್ಥವನ್ನು ಹೇಳುತ್ತದೆ. ತಾ ಏತಾ ಶೀರ್ಷನ್ ಶ್ರಿಯಃ ಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ಪ್ರಾಣಃ ಎಂಬ ಶ್ರುತಿಯಿಂದ ಮನಸ್ಸು ಶಿರಸ್ಸಿನಲ್ಲಿರುತ್ತದೆ. (ಅಂದರೆ ಮನಸ್ಸಿಗೆ ಶಿರಸ್ಸು ಸ್ಥಾನವು) ಮನೋ ವೃತ್ತಿಗಳೂ ಸೋಮವೂ ಕೂಡ ಅಭೀಷ್ಟವನ್ನು ಕೊಡತಕ್ಕವುಗಳಾದುದರಿಂದ ಇಂದವಃ ಎನಿಸುತ್ತವೆ. ||೪||

ಋ || (೧೩೯) ಈಳತೇ ತ್ವಾಮವಸ್ಯವಃ ಕಣ್ವಾಸೋ ವೃಕ್ತಬರ್ಹಿಷಃ | ಹವಿಷ್ಮಂತೋ ಅರಂಕೃತಃ ||೫||

ಅ|| (ಎಲೋ ಅಗ್ನಿಯೇ) ಹವಿಷ್ಮಂತಃ = ಭೂಮನಿಂದಾ ಪ್ರಶಂಸಾಸು ನಿತ್ಯಯೋಗೇಽತಿಶಾಯನೇ| ಸಂಬಂಧೇಽಸ್ತಿವಿವಕ್ಷಾಯಾಂ ಭವಂತಿ ಮತುಬಾದಯಃ ಎಂಬ ವಚನದಿಂದ ಪ್ರಶಸ್ತವಾದ ಹವಿಸ್ಸಿನಿಂದ ಕೂಡಿರುವ ಅವಸ್ಯವಃ =ತಮಗೆ ರಕ್ಷಣೆಯನ್ನು ಇಚ್ಛಿಸುವ, ವೃಕ್ತ ಬರ್ಹಿಷಃ = ಚೆನ್ನಾಗಿ ವಿಸ್ತೃತವಾದ ಬರ್ಹಿಸುಳ್ಳ, ಅರಂಕೃತಃ =ಅತ್ಯಂತ ಅತಿಶಯವಾದ ಕರ್ಮಗಳನ್ನು ಮಾಡುವ, ಅಥವಾ ದೇವಾದಿಗಳಿಗೆ ಅಲಂಕಾರವನ್ನು ಮಾಡುವ, ಕಣ್ವಾಸಃ = ಕಣ್ವರೆನಿಸಿಕೊಂಡ ನಾವು ಅಥವಾ ಕಣ್ವ ಋಷಿಗಳೇ ಮೊದಲಾದ ಋಷಿಗಳು ತ್ವಾಂ =ನಿನ್ನನ್ನು ಈಳತೇ = (ಈಡಸ್ತುತ್). ಸ್ತುತಿಸುತ್ತಾರೆ. ||

ವಿ|| ಕಣ್ವಾಃ ಎನ್ನುವುದಕ್ಕೆ ವಯಂ ಎನ್ನುವುದು ತಾತ್ಪರ್ಯಾರ್ಥವನ್ನು ಹೇಳಿದ್ದು ವಯಂ ಎನ್ನುವುದು ಅಧ್ಯಾಹಾರವಲ್ಲ. ಹಾಗಿದ್ದರೆ ಸ್ತುವಂತಿ ಎಂಬ ಉಕ್ತಿಯು ಆಗದೆ ಹೋಗಬೇಕಿತ್ತು ಸ್ತುಮಃ ಎಂದು ಹೇಳಬೇಕಿತ್ತು. ||೫||

ಭಾ|| (೧)ಅವಸ್ಯುರ್ಯಜಮಾನಃಸ್ಯಾದವನಾರ್ಥಪ್ರವೃತ್ತಿತಃ||(೨)ಆತ್ಮಸ್ಥಂ ವಾ ಬಹುವಚೋ ಬಹವೋ ಮುನಯೋಽತ್ರ ವಾ(೩)ಉತ್ತರಾಣಾಂ ವಚಸ್ತ್ವೇನಸ್ವಯಂ ವದತಿ ಚೇಶ್ವರಃ|| ಅರಂಕೃತೋಽತಿಕರ್ತಾರಸ್ತ್ವಲಂಕರ್ತಾರ ಏವ ವಾ ||೫||

ಅ ॥ (೧) (ಅವಃ = ಅವನಂ. ಆತ್ಮನ ಇಚ್ಛತಿ ಎಂಬ ವ್ಯುತ್ಪತ್ತಿಯಿಂದ) ತನ್ನ ರಕ್ಷಣೆಯನ್ನು ಇಚ್ಛಿಸುವುದರಿಂದ (ಅಂದರೆ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಪ್ರವೃತ್ತಿ ಮಾಡುವುದರಿಂದ) ಅವಸ್ಯುಃ ಅಂದರೆ ಯಜಮಾನನಾಗುವನು. (೨) (ಮೇಧಾತಿಥಿಯೆಂಬ ಒಬ್ಬ ಯಜಮಾನನಲ್ಲಿ ಕಣ್ವಾಸಃ ಎಂಬ ಬಹುವಚನವು ಹೇಗೆ ಕೂಡುತ್ತದೆ ? ಎಂದರೆ) ಅಸ್ಮದೋ ದ್ವಯೋಶ್ಚ = ಅಸ್ಮತ್ ಶಬ್ದಕ್ಕೆ ಏಕತ್ವ ಅಥವಾ ದ್ವಿತ್ವವು ವಿವಕ್ಷಿತವಾದರೆ ಆತ್ಮವಾಚಿಯಾದ ಅಸ್ಮಚ್ಛಬ್ದಕ್ಕೆ ಬಹುವಚನವು ವಿಕಲ್ಪವಾಗಿ ಬರುತ್ತದೆ, ಎಂಬ ಸೂತ್ರದಿಂದ ಕಣ್ವಾಸಃ ಎಂಬ ಶಬ್ದವು ಸ್ವಾತ್ಮವನ್ನು ವಿಷಯೀಕರಿಸುವುದರಿಂದ ಮೇಧಾತಿಥಿಗೂ ಮೇಧಾತಿಥಿಯ ಇಂದ್ರಿಯಗಳಿಗೂ ಸ್ವತಂತ್ರವಾಗಿ ಪರೋಕ್ಷವಾಗಿ ಕರ್ತೃತ್ವವನ್ನು ವಿವಕ್ಷಾ ಮಾಡುವಾಗ ಬಹುತ್ವವಿದ್ದ ಪ್ರಯುಕ್ತ ಬಹುವಚನವು ಕೂಡುತ್ತದೆ. ಅಥವಾ ಕಣ್ವ ಮೊದಲಾದ ಬಹು ಋಷಿಗಳಿದ್ದ ಪ್ರಯುಕ್ತ ಕಣ್ವ ಮೊದಲಾದ ಬಹು ಋಷಿಗಳೇ ಈ ಋಕ್ಕಿನಲ್ಲಿ ಕಣ್ವಾಸಃ ಎಂಬ ಪದದಿಂದ ವಿವಕ್ಷಿತರು. (೩) (ಹಾಗಾದರೆ ಈವಾಕ್ಯಕ್ಕೆ ವಿಷ್ಣು ಮೊದಲಾದವರೂ ಋಷಿಗಳಾಗುತ್ತಾರೆ. ಆದ ಕಾರಣ ಕಣ್ವಾ ವಯಂ ಎಂದೂ ವಿಷ್ಣ್ವಾದಿಗಳು ರಕ್ಷಣೆಯನ್ನು ಇಚ್ಛಿಸುವುದು ಸ್ತುತಿಸುವುದು ಇತ್ಯಾದಿಗಳು ಹೇಗೆ ಕೂಡುತ್ತವೆ ? ಎಂದರೆ) ಮೇದಾತಿಥ್ಯಾದಿಗಳು ಶ್ರೀ ವಿಷ್ಣು ಮೊದಲಾದ ಋಷಿಗಳಿಗಿಂತ ಅತ್ಯಂತ ಮೇಲಿನವರಾದುದರಿಂದ ಆ ಮೇಧಾತಿಥ್ಯಾದಿಗಳ ವಚನವೆಂದು ಶ್ರೀ ಹರಿಯೂ ಬ್ರಹ್ಮಾದಿಗಳೂ ತಾವಾಗಿಯೇ ಹೇಳುತ್ತಾರೆ. (ಅಲ್ಲದೆ ಅವರೇ ತಮ್ಮ ರಕ್ಷಣಾದಿಗಳನ್ನು ಇಚ್ಛಿಸುವುದಿಲ್ಲ.) ಉತ್ತರಾಣಾಂ ಎಂಬಲ್ಲಿ ಊರ್ಧ್ವ ಎಂಬ ಅರ್ಥವುಳ್ಳ ಉತ್ ಶಬ್ದದಿಂದ ತರಬ್ ಪ್ರತ್ಯಯವು. ಅಖಂಡ ಪ್ರಾತಿಪದಕವಲ್ಲ. ಆದ ಕಾರಣ ಸರ್ವನಾಮಸಂಜ್ಞೆಯಿಲ್ಲದಿರುವುದರಿಂದ ಉತ್ತರಾಣಾಂ ಎಂದು ಯುಕ್ತವು. ಇಲ್ಲವಾದರೆ ಉತ್ತರೇಷಾಂ ಎಂದಾಗ ಬೇಕಿದ್ದಿತು. ವಿಷ್ಣ್ವಾದಿ ಋಷ್ಯಂತರರನ್ನು ವಿವಕ್ಷಾ ಮಾಡಿಕೊಂಡು ಮೇಧಾತಿಥ್ಯಾದಿಗಳು ಮೇಲಿನವರಾದ ಪ್ರಯುಕ್ತ ತರಬ್ ಪ್ರತ್ಯಯವು ಕೂಡುತ್ತದೆ. ತಸ್ಯಾಂ ತಸ್ಯಾಮವಸ್ಥಾಯಾಂ ತತ್ತತ್ಪ್ರಾಪ್ತಿ ವಿಶೇಷತಃ । ತೇಷಾಂ ವಾಕ್ಯಸ್ವರೂಪೇಣ ಪಾರ್ಥನಾದಿಷು ಪಶ್ಯತಿ । ವಿಷ್ಣುರ್ಬ್ರಹ್ಮಾಸುಪರ್ಣೋ ವಾ ಎಂದು ಹಿಂದೆ ಪರಿಹಾರ ಮಾಡಿದ್ದರಿಂದ ಇಲ್ಲಿ ಪುನಃ ಪರಿಹಾರ ಮಾಡಿದರೆ ಪುನರುಕ್ತಿಯು ಬರುವುದು ಎಂದರೆ ಸ್ತುತಿಸುತ್ತಾರೆ ಇತ್ಯಾದ್ಯವಸ್ಥೆಯಲ್ಲಿ ವಿಷ್ಣುಬ್ರಹ್ಮ ಮೊದಲಾದವರು ಕಣ್ವಾದಿ ಋಷಿಗಳ ವಾಕ್ಯವೆಂದು ನೋಡುತ್ತಾರೆ ಎಂದು ತಸ್ಯಾಂ ತಸ್ಯಾಮವಸ್ಥಾಯಾಂ ಎಂದು ಹೇಳಿದುದಕ್ಕೆ ಉದಾಹರಣವನ್ನು ತೋರಿಸುವುದಕ್ಕಾಗಿ ಇದನ್ನು ಹೇಳಿದ್ದು. (೪) ಅರಂಕೃತಃ = ಅತಿಶಯವಾಗಿ ಕರ್ಮಗಳನ್ನು ಮಾಡುವವರು. ಅಥವಾ ದೇವಾದಿಗಳಿಗೆ ಅಲಂಕಾರ ಮಾಡುವವರು (ಲಕಾರಕ್ಕೆ ರೇಫಾದೇಶವು) ॥೫॥

ಋ ॥ (೧೪೦) ಘೃತಪೃಷ್ಠಾ ಮನೋಯುಜೋ ಯೇ ತ್ವಾ ವಹಂತಿ ವಹ್ನಯಃ । ಆ ದೇವಾನ್ ಸೋಮಪೀತಯೇ ॥೬॥೨೮॥

ಋ ॥ (೧೪೧) ತಾನ್ಯಜತ್ರಾ ಋತಾವೃಧೋಽಗ್ನೇ ಪತ್ನೀವತಸ್ಕೃಧಿ । ಮಧ್ವಃ ಸುಜಿಹ್ವ ಪಾಯಯ ॥೭॥

ಅ॥ (ಎಲೋ ಅಗ್ನಿಯೇ) ಯೇ = ಯಾವ, ಘೃತಪೃಷ್ಠಾಃ = (ಕುದುರೆಯು ಉತ್ತಮವಾಗಿರುವುದರಿಂದಲೂ, ಪುಷ್ಟಗಳಾದ ಅಂಗಗಳು ಇದ್ದುದರಿಂದಲೂ,) ಘೃತದಂತೆ ಸ್ನಿಗ್ಧವಾದ (ಮೆತ್ತಗೆಯಾದ) ಬೆನ್ನುಳ್ಳವುಗಳು, ಅಥವಾ ಶುದ್ಧನಾದ (ನಿರ್ದೋಷನಾದ) ಶ್ರೀ ಹರಿಯು ಪೃಷ್ಠದಲ್ಲಿ ಉಳ್ಳವುಗಳು, ಅಂದರೆ ದೋಷಲೇಶರಹಿತನಾದ ಶ್ರೀ ಹರಿಯಿಂದ

ಆರೂಢಗಳಾದವುಗಳು) ಮನೋಯುಜಃ =ಸಾರಥಿಯ ಕೇವಲ ಮನಸ್ಸಿನಿಂದ ರಥದಲ್ಲಿ ಕಟ್ಟಲ್ಪಡತಕ್ಕವುಗಳು, ಇಂತಹ, ವಹ್ನಯಃ = (ವಹಪ್ರಾಪಣೇ ವಾಹಕತ್ವಾತ್ ರಥವನ್ನು ಸೆಳೆಯುವುದರಿಂದ ವಹ್ನಯಃ ಎನಿಸಿಕೊಂಡ) ಕುದುರೆಗಳು, ಸೋಮಪೀತೇ = ಸೋಮಪಾನ ಮಾಡುವುದಕ್ಕಾಗಿ, ತ್ವಾ=ನಿನ್ನನ್ನು, ದೇವಾನ್ = ದೇವತೆಗಳನ್ನು ಕೂಡ, ಆ ವಹಂತಿ = (ಯಜ್ಞವನ್ನು ಕುರಿತು) ಹೊತ್ತುಕೊಂಡು ಹೋಗುತ್ತಾವೋ ||೬||

ಅ || ಅಗ್ನೇ = ಎಲೋ ಅಗ್ನಿಯೇ, ತಾನ್ =ಅಂತಹ ಕುದುರೆಗಳಿಂದ, ಯಜತ್ರಾನ್ = ವಿಷ್ಣುವನ್ನುದ್ದೇಶಿಸಿ ಯಜ್ಞ ಮಾಡುವ, ಪೂಜಿಸುವ, ಅಥವಾ ಸ್ತೋತ್ರ ಮಾಡುವ, (ವಿಷ್ಣುವು ಯಾಗವನ್ನು ಸ್ತುತಿಸುತ್ತಾನೆನ್ನುವುದು ಕೂಡದಿರುವುದರಿಂದ ಆ ಪಕ್ಷದಲ್ಲಿ) ಪೂಜಿಸಲ್ಪಡತಕ್ಕ ಋತವೃಧಃ =ಚೆನ್ನಾಗಿ ಜ್ಞಾನ ಸ್ವರೂಪನಾದ ಶ್ರೀ ಹರಿಯಿಂದ ಅಭಿವೃದ್ಧರಾದ, ಅಥವಾ ವೇದಾದಿ ಪ್ರಮಾಣಗಳಿಂದ ಚೆನ್ನಾಗಿ ತಿಳಿಯಲ್ಪಟ್ಟ ಶ್ರೀ ಹರಿಯಿಂದ ಪುಷ್ಟರಾದ, ತಾನ್ = ಆ ದೇವತೆಗಳನ್ನು ಪತ್ನೀವತಃ =ಪತ್ನಿಯುಳ್ಳವರನ್ನಾಗಿ, ಕೃಧಿ = ಮಾಡು. (ಅಂದರೆ ಯಜ್ಞವನ್ನು ಕುರಿತು ಬರಲಿಕ್ಕೆ ಅವರವರ ಪತ್ನಿಯರಿಂದೊಡಗೂಡಿಸು. ಅಂತೂ ಸಪತ್ನೀಕರಾದ ದೇವತೆಗಳನ್ನು ಹಿಂದೆ ಹೇಳಿದ ಕುದುರೆಗಳಿಂದ (ಕುದುರೆಗಳಲ್ಲಿ ಕೂಡ್ರಿಸಿ) ಇಲ್ಲಿಗೆ ಕರಕೊಂಡು ಬಾ.) (ಕರಕೊಂಡು ಬಂದು) ಸುಜಿಹ್ವ =ಶೋಭನವಾದ ನಾಲಿಗೆಯುಳ್ಳ ಅಗ್ನಿಯೇ, ಮಧ್ವಃ =ರುಚಿಕರವಾದ ಸೋಮವನ್ನು ಪಾಯಸ=ಕುಡಿಸು. ||೭||

**ಭಾ || (೧) ಸ್ನಿಗ್ಧಪೃಷ್ಠಾಸ್ಸಮಾರೂಢಾ ಹರಿಣಾ ವಾ ವಿದೋಷಿಣಾ || (೨) ಮನೋ ಮಾತ್ರೇಣ ಯೋಜ್ಯಾಶ್ಚ ತ್ವಾಂ ದೇವಾಶ್ಚ ವಹಂತಿ ಯೇ ||೬|| ೨೬||**

ಅ || (೧) ಘೃತದಂತೆ ಸ್ನಿಗ್ಧವಾದ ಬೆನ್ನುಳ್ಳವುಗಳು, ಅಥವಾ ನಿರ್ದೋಷನಾದ ಶ್ರೀ ಹರಿಯಿಂದ ಚೆನ್ನಾಗಿ ಏರಲ್ಪಟ್ಟವುಗಳು, (ಎಂದು ಘೃತಪೃಷ್ಠಾಃ ಎನ್ನುವುದರ ಅರ್ಥವು) (೨) ಸಾರಥಿಯ ಕೇವಲ ಮನಸ್ಸಿನಿಂದಲೇ ರಥದಲ್ಲಿ ಸಂಬಂಧಿಸಲ್ಪಡತಕ್ಕವುಗಳೂ ಇಂತಹ ಯಾವ ಅಶ್ವಗಳು ನಿನ್ನನ್ನು ದೇವತೆಗಳನ್ನು (ಯಜ್ಞವನ್ನು ಕುರಿತು) ಹೊರುತ್ತವೋ ||೬||೨೬||

**ಭಾ || ತೈರ್ದೇವಾನ್ಯಜತಃ ಸ್ತೋತೃನ್ ಜ್ಞಾನೇನ ಬ್ರಹ್ಮಣ್ಯೈಧಿತಾನ್ । ಪತ್ನೀಭಿರ್ಯೋಜಯ ಯಾಗಂತುಂ ಸಹ ಮಧ್ವಶ್ಚ ಪಾಯಯ ||೭||**

ಅ || ಅಂತಹ ಕುದುರೆಗಳಿಂದ ಶ್ರೀ ವಿಷ್ಣುವನ್ನು ಪೂಜಿಸುವ, ಅಥವಾ ಸ್ತುತಿಸುವ, ಜ್ಞಾನ ಸ್ವರೂಪನಾದ ಬ್ರಹ್ಮನಿಂದ ಅಭಿವೃದ್ಧರಾದ, ದೇವತೆಗಳನ್ನು ಯಜ್ಞಕ್ಕೆ ಬರಲಿಕ್ಕಾಗಿ ಅವರವರ ಪತ್ನಿಯರಿಂದೊಡಗೂಡಿಸು. (ಅಂದರೆ ಸಪತ್ನೀಕರಾದ ದೇವತೆಗಳನ್ನು ಇಲ್ಲಿಗೆ ಕರೆಸು) ಸ್ವಾದುವಾದ ಸೋಮವನ್ನೂ ಕೂಡ ಪಾನ ಮಾಡಿಸು. ||೭||

**ಋ || (೧೪೨) ಯೇ ಯಜತ್ರಾಃ ಯ ಈಡ್ಯಾಸ್ತೇ ತೇ ಪಿಬಂತು ಜಿಹ್ವಯಾ । ಮಧೋರಗ್ನೇ ವಷಟ್ಕೃತಿ ||೮||**

ಅ || ಅಗ್ನೇ = ಎಲೋ ಅಗ್ನಿಯೇ, ಯಜತ್ರಾಃ = (ಯಜ ದೇವಪೂಜಾಸಂಗತಿ ಕರಣದಾನೇಷು) ಯಜ್ಞ ಮಾಡುವ, ಅಥವಾ ಪೂಜಿಸಲ್ಪಡುವ, ಈಡ್ಯಾಃ = (ಈಡಸ್ತುತೌ) ಸ್ತುತ್ಯರೂ ಆದ, ಯೇ ಯೇ = ಯಾವ ಯಾವ ದೇವತೆಗಳು,

(ಇರುತ್ತಾರೋ) ತೇ ತೇ = ಅವರೆಲ್ಲರೂ, ವಷಟ್ಕೃತಿ =ವಷಟ್ ಎಂದು ಉಚ್ಚಾರಣ ಮಾಡುವಾಗ, ತೇ =ನಿನ್ನದ್ದಾದ, ಜಿಹ್ವಯಾ=ನಾಲಿಗೆಯಿಂದ, ಮಧೋಃ=ಮಧುವನ್ನು, ಪಿಬಂತು =ಕುಡಿಯಲಿ. ||೮||

**ಭಾ || (೧) ತೇ ಷಷ್ಠ್ಯಂತೋಽನುದಾತ್ತಃ ಸ್ಯಾದುದಾತ್ತೋ ಬಹುವಾಚಕಃ || (೨) ಆವೃತ್ತಸ್ತು ಭ (ವೇದ) ವತ್ಯರ್ಥಸ್ತೇ ಪಿಬಂತು ವಷಟ್ಕೃತೌ ||೮||**

ಅ|| (೧) (ಇಲ್ಲಿಯೇ ಯೇ ಎಂದು ದ್ವಿರುಕ್ತಿಯು ಕಾಣುತ್ತದೆ. ಅದರಿಂದ ತೇ ತೇ ಎನ್ನುವುದೂ ದ್ವಿರ್ವಚನವೆಂದು ಪ್ರತೀತಿಯು ಬರುವುದು. ಅದನ್ನು ನಿರಾಕರಿಸುತ್ತಾರೆ.) ಇಲ್ಲಿ ೨ನೇದ್ದಾದ ತೇ ಎಂಬ ಶಬ್ದವು ಷಷ್ಠ್ಯಂತವು. (ಷಷ್ಠ್ಯೇಕವಚನಾಂತವಾದ ಯುಷ್ಮತ್ ಶಬ್ದಕ್ಕೆ. ತೇಮಯಾವೇಕವಚನಸ್ಯ ಎನ್ನುವುದರಿಂದ ತೇ ಎಂದಾದೇಶವು) (ಷಷ್ಠ್ಯಂತವಾದ ಯುಷ್ಮತ್ ಶಬ್ದಕ್ಕೆ ತೇ ಎನ್ನುವುದು ಆದೇಶವಾಗಿರುವುದರಿಂದಲೇ ತೇ ಎನ್ನುವುದಕ್ಕೆ ಅನುದಾತ್ತರೂಪವಾದ ಸ್ವರವು ಆಗುವುದು. ಅನುದಾತ್ತಂ ಸರ್ವಮಪಾದಾದೌ ಎಂದು ಆದೇಶಕ್ಕೇನೇ ಅನುದಾತ್ತತ್ವವು ಸ್ಮೃತವಾಗಿದೆ.) ೧ನೇ ತೇ ಶಬ್ದವು ಪ್ರಥಮಾಬಹುವಚನಾಂತವಾದ ತತ್ ಶಬ್ದದ ರೂಪವು. ತಚ್ಛಬ್ದವಾಗಿರುವುದರಿಂದಲೇ ಉದಾತ್ತಸ್ವರವು. (ಅಂತೂ ಉದಾತ್ತವಾಗಿರುವುದರಿಂದ ತೇ ಎನ್ನುವುದು ತತ್ ಶಬ್ದದ ರೂಪವು) (ಇಲ್ಲವಾದರೆ ೧ನೇ ತೇ ಎಂಬ ಶಬ್ದವೂ ಅನುದಾತ್ತವಾಗಬೇಕಾಗುವುದು.) (೨) (ಹಾಗಾದರೆ ಯೇ ಯೇ ಎನ್ನುವುದರಿಂದ ಅನ್ವಯವು ಬಾರದೆ ಹೋಗುವುದು ಎಂದರೆ) ಯಾವುದು ಬಹುವಚನಾಂತವಾದ ತೇ ಶಬ್ದವೋ, ಅದನ್ನು ೨ ಸಲ ಇಟ್ಟುಕೊಳ್ಳಬೇಕು. ಅದರಿಂದ ಅರ್ಥವು ಅನ್ವಿತವಾಗುವುದು. ಅವರೆಲ್ಲರೂ ನಿನ್ನ (ನಾಲಿಗೆಯಿಂದ) ವಷಟ್ ಎಂದುಚ್ಚಾರಣ ಮಾಡುವಾಗ ಮಧುವನ್ನು ಪಾನ ಮಾಡಲಿ. ||೮||

**ಋ || (೧೪೩) ಆಕೀಂ ಸೂರ್ಯಸ್ಯ ರೋಚನಾದ್ವಿಶ್ವಾನ್ ದೇವಾ ಉಷರ್ಬುಧಃ | ವಿಪ್ರೋ ಹೋತೇಹ ವಕ್ಷತಿ ||೯||**

ಅ || ಹೋತಾ ವಿಪ್ರಃ = ಅಗ್ನಿಯು, ಉಷರ್ಬುಧಃ = (ಉಷಃ = ಬುಧ್ಯಂತಿ ಎಂಬ ವ್ಯುತ್ಪತ್ತಿಯಿಂದ ) ಪ್ರಕಾಶ ಸ್ವರೂಪನಾದುದರಿಂದ ಉಷಃ=ಎನಿಸಿಕೊಂಡ ಪರಬ್ರಹ್ಮನ ಜ್ಞಾನಿಗಳಾದ, ವಿಶ್ವಾನ್ ದೇವಾನ್ =ಎಲ್ಲಾ ದೇವತೆಗಳನ್ನು, ಸೋಮಪಾನ ಮಾಡುವವರನ್ನಾಗಿ, ಸೂರ್ಯಸ್ಯ ರೋಚನಾತ್ = ಸೂರ್ಯನ ಸಂಬಂಧದಿಂದ ಅತಿ ಪ್ರಕಾಶಮಾನವಾಗಿರುವುದರಿಂದ ರೋಚನ ಎನಿಸಿಕೊಂಡ ಸ್ವರ್ಗದೇಶೆಯಿಂದ ಇಹ=ಯಜ್ಞವನ್ನು ಕುರಿತು, ಆಕೀಂ ವಕ್ಷತಿ = (ವಹಪ್ರಾಪಣೆ) ಬರುವಂತೆ ಮಾಡಬೇಕು. ||೯||

**ಭಾ || ಸೂರ್ಯಸ್ಯ ರೋಚನಾಸ್ಸ್ವರ್ಗಾದಾವಕ್ಷತ್ಯಗ್ನಿರಿಂದುಪಾನ್ | ಉಷಃ ಪ್ರಕಾಶನಾದ್ಬ್ರಹ್ಮ ತದ್ವಿದಸ್ತ ಉಷರ್ಬುಧಃ ||೯||**

ಅ|| ಪ್ರಕಾಶ ಸ್ವರೂಪನಾದುದರಿಂದ ಉಷಃ=ಶಬ್ದದಿಂದ ಪರಬ್ರಹ್ಮನು ಹೇಳಲ್ಪಡುತ್ತಾನೆ. ಆ ಪರಬ್ರಹ್ಮ ಜ್ಞಾನಿಗಳಾದ ದೇವತೆಗಳು ಉಷರ್ಬುಧಃ ಎನಿಸುತ್ತಾರೆ. ಅಂತಹ ವಿಶ್ವೇದೇವತೆಗಳನ್ನು ಸೋಮಪಾನ ಮಾಡುವವರನ್ನಾಗಿ ಅಗ್ನಿಯು ಸೂರ್ಯನ ಸಂಬಂಧದಿಂದ ಪ್ರಕಾಶಮಾನವಾದ ಸ್ವರ್ಗದಿಂದ (ಈ ಯಜ್ಞಕ್ಕೆ) ಬರುವಂತೆ ಮಾಡಲಿ ||೯||

ಋ ॥ (೧೪೪) ವಿಶ್ವೇಭಿಃ ಸೋಮ್ಯಂ ಮಧ್ವಗ್ನ ಇಂದ್ರೇಣ ವಾಯುನಾ । ಪಿಬಾ ಮಿತ್ರಸ್ಯ ಧಾಮಭಿಃ ॥೧೦॥

ಅ ॥ ಅಗ್ನೇ = ಎಲೋ ಅಗ್ನಿಯೇ, ಮಿತ್ರಸ್ಯ =ಮಿತ್ರನಾಮಕ ಶ್ರೀ ವಿಷ್ಣುವಿಗೆ, ಧಾಮಭಿಃ = ಅಧಿಷ್ಠಾನಭೂತರಾದ, ವಿಶ್ವೇಭಿಃ = ವಿಶ್ವೇದೇವತೆಗಳಿಂದಲೂ, ಇಂದ್ರೇಣ = ಇಂದ್ರ ದೇವರಿಂದಲೂ, ವಾಯುನಾ = ವಾಯುದೇವರಿಂದಲೂ ಕೂಡಿಕೊಂಡು, ಸೋಮ್ಯಂ =ಸೋಮ ಸ್ವರೂಪವಾದ, ಮಧು=ಮಧುವನ್ನು, ಪಿಬ =ಕುಡಿ. (ವಾಯುದೇವರು ಸರ್ವಾಧಿಕಾರಿಗಳಲ್ಲಿ ಉತ್ತಮರಾದುದರಿಂದಲೂ, ಇಂದ್ರದೇವರು ಸ್ವರ್ಗದಲ್ಲಿರುವ ದೇವತೆಗಳಲ್ಲಿ ಉತ್ತಮರಾದುದರಿಂದಲೂ ಸ್ವರ್ಗಪಾಲಕರಾದುದರಿಂದಲೂ ಅವರಿಬ್ಬರನ್ನು ಪ್ರತ್ಯೇಕ ಹೇಳಿದ್ದು) ॥೧೦॥

ಅ॥ ಆ ದೇವತೆಗಳು ಶ್ರೀ ವಿಷ್ಣುವಿಗೆ ಅಧಿಷ್ಠಾನಭೂತರಾದುದರಿಂದ ಮಿತ್ರಧಾಮಾನಃ ಎನಿಸುತ್ತಾರೆ. ॥೧೦॥

ಋ ॥ (೧೪೫) ತ್ವಂ ಹೋತಾ ಮನುರ್ಹಿತೋಽಗ್ನೇ ಯಜ್ಞೇಷು ಸೀದಸಿ । ಸೇಮಂ ನೋ ಅಧ್ವರಂ ಯಜ ॥೧೧॥

ಅ ॥ ಅಗ್ನೇ = ಅಗ್ನಿಯೇ, ಮನುರ್ಹಿತ = ದೇವತೆಗಳಿಗೆ ಹಿತಕರನಾದುದರಿಂದ, ಹೋತಾ ತ್ವಂ = ಹೋತನಾದ ನೀನು, ಯಜ್ಞೇಷು =ಯಜ್ಞಗಳಲ್ಲಿ (ಳಿಗೆ) ಸೀದಸಿ = (ದೇವತೆಗಳಿಗೋಸ್ಕರ) ಅಧಿಷ್ಠಾತನು ಆಗಿರುತ್ತಿ. (ಆದ ಕಾರಣ) ಸಃ =ಅಂತಹ ನೀನು, ನಃ = ನಮ್ಮ, ಇಮಂ ಅಧ್ವರಂ = ಈ ಯಾಗವನ್ನು, ಯಜ=ದೇವತೆಗಳಿಗೆ ಕೊಡು. (ಅಂದರೆ - ದೇವತೆಗಳಿಗೆ ಹಿತಕರನಾದುದರಿಂದ ಯಜ್ಞದಲ್ಲಿ ದೇವತೆಗಳ ಉದ್ದಿಶ್ಯ ಅಧಿಷ್ಠಾತನು ಆಗಿ ಯಜ್ಞವನ್ನು ದೇವತೆಗಳಿಗೆ ಕೊಡು) (ಸೋಽಚಿ ಲೋಪೇಚೇತ್ಪಾದ ಪೂರಣಂ, ಎನ್ನುವುದರಿಂದ ಸೇಮಂ ಎನ್ನುವುದು ಸೂಕ್ತವು) ॥೧೧॥

ಋ ॥ (೧೪೬) ಯುಕ್ಷ್ವಾ ಹ್ಯರುಷೀ ರಥೇ ಹರಿತೋ ದೇವ ರೋಹಿತಃ । ತಾಭಿರ್ದೇವಾ ಇಹಾವಹ ॥೧೨॥೨೬॥೧೪॥

ಅ ॥ ದೇವ = ಎಲೋ ಅ್ನಯೇ, (ನೀನು) ಹಿ ರಥೇ =ಪ್ರಸಿದ್ಧ ರಥದಲ್ಲಿ, ಅರುಷೀಃ =ಅರುಣಗಳಾದ, (ಸ್ವಲ್ಪ ಕೆಂಪು ಬಣ್ಣವುಳ್ಳ) (ಅಗ್ನಿಗೆ ಸಮಾನವಾದ ಪ್ರಭೆಯುಳ್ಳ) ಅಶ್ವತರಿಗಳನ್ನು, (ಗರ್ದಭ ಜಾತಿ ವಿಶೇಷ ಹಾಸರಕತ್ತೆ ಮಹಾರಾಷ್ಟ್ರ ಭಾಷೆಯಿಂದ ವೇಸರು) ಯುಕ್ಷ್ವ=ಕೂಡಿಸು. ಅಥವಾ ಕೆಂಪಾದ ಹೆಣ್ಣು ಕುದುರೆಗಳನ್ನು ಕೂಡಿಸು. ಹರಿತಃ =ಹಸುರು ಬಣ್ಣವುಳ್ಳ, (ದೂರ್ವಾಕ್ಕೆ (ಗರಿಕೆಗೆ) ಸಮಾನವಾದ ಪ್ರಭೆಯುಳ್ಳ) ಅಶ್ವತರಿಗಳನ್ನು ಕೂಡಿಸು. ರೋಹಿತಃ =ರೋಹಿನ್ಮೃಗಗಳನ್ನು (ಚುಕ್ಕೆ ಇದ್ದ ಜಿಂಕೆ) ಕೂಡಿಸು. ತಾಭಿಃ=ಆ ಹೆಣ್ಣು ಕುದುರೆಗಳಿಂದ, ಅಶ್ವತರಿಗಳಿಂದ, ಅಥವಾ ರೋಹಿನ್ಮೃಗಗಳಿಂದ, (ಯುಕ್ತವಾದ ರಥದಿಂದ) ದೇವಾನ್ ದೇವತೆಗಳನ್ನು ಇಹ =ಈ ಯಜ್ಞದಲ್ಲಿ. ಆ ವಹ =ಹೊಂದಿಸಿ ಕೊಡು, (ಕರೆದುಕೊಂಡು ಬಾ) ॥೧೨॥೨೬॥೧೪॥

ಭಾ ॥ ಅಗ್ನಿವಾಹಾ ಅಶ್ವತರ್ಯೋ ದೂರ್ವಾಪದ್ಮಾಗ್ನಿಸಪ್ರಭಾಃ । ಲೋಹಿತಾಃ ಕ್ವಚಿ ದಶ್ವಾಶ್ಚ ರೋಹಿನ್ಮೃಗ್ಯೋಽಪಿ ಕುತ್ರಚಿತ್ ॥೧೨॥೨೬॥೧೪॥

ಅ|| (ಅನುಷೀಃ ಇತ್ಯಾದಿಗಳಿಂದ ಅಗ್ನಿಯ ವಾಹನಗಳು ಹೇಳಲ್ಪಡುತ್ತವೆ. ಅದನ್ನು ವಿವರಿಸುತ್ತಾರೆ.) ಅಗ್ನಿಂ ವಹಂತೀತಿ ಅಗ್ನಿವಾಹಾಃ =ಅಗ್ನಿಯನ್ನು ಹೊರುವವುಗಳು (ಎಂದು ಯೌಗಿಕ ಶಬ್ದವು, ರೂಢವಲ್ಲ) ಅಶ್ವತರಿಗಳು. ಕೆಲವು ದೂರ್ವೆಗೆ (ಗರಿಕೆಗೆ) ಸಮಪ್ರಭೆಯುಳ್ಳವುಗಳು. ಕೆಲವು ಕಮಲಕ್ಕೆ ಸಮಪ್ರಭೆಯುಳ್ಳವುಗಳು. (ಇವು ಪ್ರಸಂಗ ಸಂಗತಿಯಿಂದ ಸ್ಥಲಾಂತರದಲ್ಲಿ ಹೇಳಿದ್ದ ರಕ್ತಾದಿ ಪದಗಳ ವಿವರಣವು.) ಕೆಲವು ಅಶ್ವತರಿಗಳು ಅಗ್ನಿಗೆ ಸಮಪ್ರಭೆಯುಳ್ಳವುಗಳು. ಕೆಲವು ಕಡೆ ಕೆಂಪು ಬಣ್ಣವುಳ್ಳ ಕುದುರೆಗಳೂ ಕೆಲವು ಕಡೆ ರೋಹಿತ್ ಮೃಗಗಳೂ ಅಗ್ನಿಗೆ ವಾಹನಗಳು. ||೧೨||೨೭||೧೪||

ಅವ || ೧೨ ಋಕ್ಕು ೨ ವರ್ಗ, ಋತುದೇವತಾಕವು, ಋತವ್ಯ ಸೂಕ್ತವು, ಗಾಯತ್ರೀ ಛಂದಸ್ಸು.

ಋ || (೧೪೭) ಇಂದ್ರ ಸೋಮಂ ಪಿಬ ಋತುನಾಽಽತ್ವಾ ವಿಶಂತ್ವಿಂದವಃ | ಮತ್ಸರಾಸಸ್ತದೋಕಸಃ ||೧||

ಅ|| ಇಂದ್ರಂ =ಶ್ರೀ ಹರಿಯೇ ಋತುನಾ =(ಋ ಗತಿ ಪ್ರಾಪಣಯೋಃ ಎಂಬ ಧಾತು ವ್ಯಾಖ್ಯಾನದಿಂದ ಅರ್ಯತೇ ಗಮ್ಯತೇ ಅನೇನ ಎಂಬ ವ್ಯುತ್ಪತ್ತಿಯಿಂದ ಋತುಃ =ಮಾರ್ಗವು) ಗಮನಕ್ಕೆ ಕಾರಣವಾಗಿರುವುದರಿಂದ ಋತು ಎನಿಸಿಕೊಂಡ ಮಾರ್ಗದಿಂದ (ಗತಿಯಿಂದ) (ಅಂದರೆ ಸೂರ್ಯನಿಗೆ ಮಾರ್ಗಭೂತವಾದ ವಸಂತಾದಿ ಋತುವಿನಿಂದ) (ಬಂದು) (ಏವಂಚ ಋತು ಶಬ್ದಗಳು ಮಾರ್ಗ, ಪಾತ್ರ, ದೇವತಾರೂಪಗಳಾದ ೩ ಅರ್ಥಗಳನ್ನು ಪ್ರತಿಪಾದಿಸುವವುಗಳು) ಋತುನಾ =ಪುಷ್ಪಗಳ ಉದ್ಭವಾದಿರೂಪ ಸ್ವಲಿಂಗಗಳನ್ನು ತಿಳಿದುಕೊಳ್ಳುವುದಕ್ಕೆ ಕಾರಣವಾಗಿರುವುದರಿಂದ ಋತು ಎಂದು ಹೆಸರುಳ್ಳ ಋತುದೇವತೆಯಿಂದ ಕೂಡಿಕೊಂಡು, ಋತುನಾ=ಋತು ಸಂಬಂಧಿ ಪಾತ್ರದಿಂದ ಸೋಮಂ=ಸೋಮವನ್ನು ಪಿಬ=ಕುಡಿ. ತದೋಕಸಃ=ಆ ಋತು ಪಾತ್ರವೇ ಸ್ಥಾನವಾಗಿ ಉಳ್ಳ (ಋತು ಪಾತ್ರದಲ್ಲಿರುವ (ಮದಂ ಸರಂತಿ) ಸಾರಯಂತಿ ಗಮಯಂತಿ ಎಂಬ ವ್ಯುತ್ಪತ್ತಿಯಂದು ಮತ್ಸರಾಸಃ =ಮದವನ್ನು ಹುಟ್ಟಿಸುವ, ಇಂದವಃ =ಇಷ್ಟವನ್ನು ಕೊಡುವ ಸೋಮಗಳು, ತ್ವಾ=ನಿನ್ನನ್ನು ಆ ವಿಶಂತು = (ವಿಶಪ್ರವೇಶನೇ) ಹೊಂದಲಿ. (ನಿನ್ನ ಉದರದಲ್ಲಿರತಕ್ಕವುಗಳಾಗಲಿ) ||೧||

ಋ || (೧೪೮) ಮರುತಃ ಪಿಬತ ಋತುನಾ ಪೋತ್ರಾದ್ಯಜ್ಞಂ ಪುನೀತನ | ಯೂಯಂ ಹಿಷ್ಠಾ ಸುದಾನವಃ ||೨||

ಅ|| ಮರುತಃ = ಎಲೋ ಮರುತ್‌ಗಳೇ, ಋತುನಾ = (ಹಿಂದಿನಂತೆ ಅರ್ಥ) ಪೋತ್ರಾತ್ = ಪಾವಿತ್ರ್ಯಕ್ಕೆ ಕಾರಣವಾಗಿರುವುದರಿಂದಲೂ, ಹೋತನಿಗೆ ದೇವತೆಯಾಗಿರುವುದರಿಂದಲೂ, ಪೋತ್ರ ಎಂದು ಹೆಸರುಳ್ಳ ನಿಮ್ಮ ಸಂಬಂಧಿಯಾದ, ಪೋತ್ರಪಾತ್ರದಿಂದ, ಪಿಬತ =ಸೋಮವನ್ನು ಕುಡಿಯಿರಿ. ಯಜ್ಞಂ ಪುನೀತನ = (ಪೂಞಪವನೇ (ಸೋಮಪಾನ ಮಾಡಿ) ಯಾಗವನ್ನು ಪವಿತ್ರೀಕರಿಸಿರಿ (ಅಂತೂ) ಯೂಯಂ=ನೀವು, ಹಿ = ಯಾವ ಕಾರಣದಿಂದ ಸುದಾನವಃ =ಶೋಭನದಾನ ಸ್ವಭಾವವುಳ್ಳವರ, ಸ್ಥಃ =ಆಗಿರುತ್ತೀರೋ (ಆದ ಕಾರಣ ನಮಗೆ ಅಭಿಮತವಾದುದನ್ನು ಕೊಡಿರಿ) ||೨||

ಋ || (೧೪೯) ಅಭಿ ಯಜ್ಞಂ ಗೃಣೀಹಿನೋ ಗ್ನಾವೋ ನೇಷ್ಟಃಪಿಬ ಋತುನಾ| ತ್ವಂ ಹಿ ರತ್ನಧಾಃ ಅಸಿ ||೩||

ಅ|| ನೇಷ್ಟಃ =ನ ವಿದ್ಯತೇ ಈಷ್ಟಾ ಯಸ್ಯ ಎಂಬ ವ್ಯುತ್ಪತ್ತಿಯಿಂದ ನಿಯಾಮಕ ನಿಲ್ಲದಿರುವುದರಿಂದಲೇ ನೇಷ್ಟ

ಎನಿಸಿಕೊಂಡ ಶ್ರೀ ವಿಷ್ಣುವೇ ನೇಷ್ಟಃ =ಹೊಂದಿಸಿಕೊಡುವುದರಿಂದಲೂ, ನೇಷ್ಟ್ರ ಎಂಬ ಋತ್ವಿಜನಿಗೆ ದೇವತೆಯಾದುದರಿಂದಲೂ ನೇಷ್ಟ್ರ ಎನಿಸಿಕೊಂಡ ಇಂದ್ರನೇ, ಅಗ್ನಿಯೇ, ತ್ವಷ್ಟೃದೇವತೆಯೇ, ಗ್ನಾವಃ =ಗಮನಶೀಲಗಳಾದ ನದಿಗಳುಳ್ಳವನೇ, (ನದ್ಯಭಿಮಾನಿ ದೇವಿಯರಿಂದ ಸಹಿತನಾದವನೇ) ಋತುನಾ =ಋತು ಪಾತ್ರದಿಂದ ಪಿಬ = (ಸೋಮವನ್ನು, ಕುಡಿ. (ಪಾನ ಮಾಡಿ) ನಃಯಜ್ಞ =ನಮ್ಮ ಯಜ್ಞದಿಂದ, ಅಭಿಗೃಹಿಣೀಹಿ=ಸ್ತುತಿಸು (ಈ ಯಜ್ಞವು ಸಾಧುವಾಗಿದೆ ಎಂದು ಪ್ರಶಂಸಾ ವಾಕ್ಯವನ್ನು ಹೇಳು.) ತ್ವಂ=ನೀನು, ಹಿ=ಯಾವ ಕಾರಣದಿಂದ, ರತ್ನಧಾಃ =ರತಿ (ಸುಖ) ಧಾರಕನು, ಅಸಿ=ಆಗಿರುತ್ತಿಯೋ, (ಆದ ಕಾರಣ ನಮಗೆ ಸುಖವನ್ನು ಕೊಡು.) ॥೩॥

ಲವ ॥ ಈ ಸೂಕ್ತವನ್ನು ೧೨ ಋಕ್ಕುಗಳು, ಅವಾಂತರ ದೇವತಾ ಭೇದವನ್ನು ಅಲ್ಲಿ ಅಲ್ಲಿ ಹೇಳುವ ಪ್ರಕಾರ ತಿಳಿಯಬೇಕು. ಈ ಸೂಕ್ತದಲ್ಲಿ ಋತು ಶಬ್ದವು ಬಹುಧಾಶ್ರುತವಾಗುತ್ತದೆ. ಸಾಮಾನ್ಯವಾಗಿ ಅದರ ಅರ್ಥವನ್ನು ಹೇಳುತ್ತಾರೆ.

ಭಾ ॥ (೧) ಋತು ಮಾರ್ಗಸ್ತು (೨) ನೇತೃತ್ವಾನ್ನೇಷ್ಟಾಽಗ್ನಿರ್ಹರಿರೇವವಾ। ಈಷ್ಟೇ ನ ಕಶ್ಚಿದಸ್ಯೇತಿ (೩) ಗ್ನಾ ನದ್ಯಶ್ಚ ಸಮೀರಿತಾಃ ॥ ಗತಿಶೀಲತ್ವತೋ ಗ್ನಾಸ್ತಾ ಜ್ಞಾತೃನೇತೃತ್ವತೋ ಹರಿಃ । ಗಮನಾನ್ನಯನಾದ್ವಾ ಗ್ನಾ (೪) ಋತುಪಾತ್ರಮೃತುಸ್ತಥಾ ।

ಸೋಮಾಸ್ತದೋಕಸಃ ಪ್ರೋಕ್ತಾ ಋತು ಪಾತ್ರಸ್ಥಿತಾ ಯತಃ । (೫) ಪತ್ನೀನೇತೃತ್ವತೋ ನೇಷ್ಟಾ ನೇಷ್ಟೃತ್ವಿಕ್ಸಂಪ್ರಕೀರ್ತಿತಃ ॥ (೬) ಜ್ಞಾಪಯಂತಿ ಸ್ವಲಿಂಗಾನೀತ್ಯೃ ತವಃ ಸಂ ಪ್ರಕೀರ್ತಿತಾಃ ॥ (೭) ಪಾವನಾಚ್ಚೈವ ಪೋತಾರೋ ಮರುತಃ ಮರುತಃ ಪೋತೃದೇ ವತಾಃ ॥ (೮) ಅಗ್ನಿಸ್ತು ದೇವತಾ ನೇಷ್ಟುಸ್ತ್ವಷ್ಟೇಂದ್ರೋ ವಿಷ್ಣುರೇವ ವಾ ॥೧॥೨॥೩॥

ಅ ॥ (೧) ಅರ್ಯತೇ ಗಮ್ಯತೇ ಅನೇನ ಎಂಬ ವ್ಯುತ್ಪತ್ತಿಯಿಂದ ಋತುಃ = ಮಾರ್ಗವು ಅಂತೂ ಆದಿತ್ಯ ಮಾರ್ಗದಲ್ಲಿರತಕ್ಕ ಕಾಲಾಭಿಮಾನಿ ದೇವತೆಗಳು ಋತುಶಬ್ದ ವಾಚ್ಯರು (ಈ ಋತವ್ಯಸೂಕ್ತದಲ್ಲಿ (೧) ಐಂದ್ರೀ (೨) ಮಾರುತೀ (೩) ತ್ವಾಷ್ಟ್ರೀ (೪) ಅಗ್ನೇಯೀ (೫) ಐಂದ್ರೀ (೬) ಮೈತ್ರಾವರುಣೀ (೭.೮.೯.೧೦) ದ್ರಾವಿಣೋದಸೀ (೧೧) ಆಶ್ವಿನೀ (೧೨) ಆಗ್ನೇಯೀ ಈ ದೇವತೆಗಳುಳ್ಳವುಗಳಾದಾಗ್ಯೂ ಈ ಎಲ್ಲಾ ಋಕ್ಕುಗಳೂ ಋತುದೇವತೆಯಾಗಿಯೂ ಉಳ್ಳವುಗಳು) (೨) (ಅಭಿಯಜ್ಞಂ ಎಂಬ ೩ನೇ ಋಕ್ಕಿನಲ್ಲಿ ನೇಷ್ಟವನ್ನು ಕುರಿತು ಪಿಬ ಎಂದು ಹೇಳುತ್ತದೆ. ಋತ್ವಿಗ್ವಿಶೇಷನಾದ ನೇಷ್ಟನನ್ನು ಕುರಿತು ಸೋಮವನ್ನು ಪಾನ ಮಾಡು ಎಂದು ಪ್ರಾರ್ಥಿಸುವುದು ಸಂಗತವಲ್ಲ ಎಂದರೆ) ಪ್ರೇರಕನಾಗಿರುವುದರಿಂದ ನೇಷ್ಟಾ=ಅಗ್ನಿಯು ಮತ್ತು ಸರ್ವರಿಗೂ ಆಯಾವ ಕಾರ್ಯಗಳಲ್ಲಿ ಪ್ರೇರೇಪಿಸುವುದರಿಂದಲೂ, ಶ್ರೀ ಹರಿಗೆ ಯಾರೊಬ್ಬನೂ ನಿಯಾಮಕನು, ಪ್ರೇರೇಪಿಸುವವನು ಇಲ್ಲ, ಎಂಬ ವ್ಯುತ್ಪತ್ತಿಯಿಂದ ನಿಯಾಮಕನಿಲ್ಲದಿರುವುದರಿಂದಲೂ ನೇಷ್ಟಾ=ಶ್ರೀ ಹರಿಯೇ. (ನವಿದ್ಯತೇ ಈಷ್ಟಾ=ಈಶಿತಾ, ಯಸ್ಯಾಸೌ ಯಾರಿಗೆ ನಿಯಾಮಕನಿಲ್ಲವೋ ಅವನು ನೇಷ್ಟಾ, ಎಂದು ವಿಗ್ರಹವು. ಈಷ್ಟೇನ ಕಶ್ಚಿತ್ ಅಸ್ಯ ಇವನಿಗೆ ಯಾರೊಬ್ಬರೂ ನಿಯಾಮಕನಿಲ್ಲ ಎಂದು ತಾತ್ಪರ್ಯವು.) (೩) (ಗ್ನಾ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ) ಗಮನ ಸ್ವಭಾವವುಳ್ಳವುಗಳಾದುದರಿಂದ ಗ್ನಾಃ ಎಂಬ ಪದದಿಂದ ನದಿಗಳು, ಹೇಳಲ್ಪಡುತ್ತವೆ ಮತ್ತು ತತ್ವಜ್ಞಾನವುಳ್ಳವರನ್ನು ಉತ್ತಮ ಲೋಕಕ್ಕೆ ಒಯ್ಯುವುದರಿಂದಲೂ ಅಥವಾ ಸರ್ವಜ್ಞನಾದುದರಿಂದಲೂ, ಸರ್ವ ಪ್ರೇರಕನಾದುದರಿಂದಲೂ ಗ್ನಾಃ = ಶ್ರೀ ಹರಿಯು. (ಶ್ರೀ ಭಗವಂತನಿಗೆ ಸ್ತ್ರೀರೂಪವಿದ್ದುದರಿಂದಲೂ ಬಹುರೂಪಗಳು

ಇದ್ದುದರಿಂದಲೂ ಗ್ನಾಃ ಎಂಬ ಪದದಿಂದ ನದಿಗಳು, ಹೇಳಲ್ಪಡುತ್ತವೆ ಮತ್ತು ತತ್ವಜ್ಞಾನವುಳ್ಳವರನ್ನು ಉತ್ತಮ ಲೋಕಕ್ಕೆ ಒಯ್ಯುವುದರಿಂದಲೂ ಅಥವಾ ಸರ್ವಜ್ಞನಾದುದರಿಂದಲೂ, ಸರ್ವ ಪ್ರೇರಕನಾದುದರಿಂದಲೂ ಗ್ನಾಃ=ಶ್ರೀ ಹರಿಯು, ಅಥವಾ ಜ್ಞಾನರೂಪನಾದುದರಿಂದಲೂ ಆವಾವ ಕಾರ್ಯಗಳಲ್ಲಿ ಪ್ರೇರೇಪಿಸುವವನಾದುದರಿಂದಲೂ ಗ್ನಾಃ = ಶ್ರೀಹರಿಯು (ಶ್ರೀ ಭಗವಂತನಿಗೆ ಸ್ತ್ರೀರೂಪವಿದ್ದುದರಿಂದಲೂ ಬಹುರೂಪಗಳು ಇದ್ದುದರಿಂದಲೂ ಗ್ನಾಃ ಎಂದು ಸ್ತ್ರೀಲಿಂಗವೂ ಬಹುವಚನವೂ ಕೊಡುತ್ತದೆ.) (೪) (ಋತು ಶಬ್ದದಿಂದ ದೇವತೆಗಳನ್ನು ಇಟ್ಟುಕೊಳ್ಳುವುದಾದರೆ ಮತ್ಸರಾಸಃ ತದೋಕಸಃ ಎಂಬುವುದು ಸರ್ವಥಾ ಕೂಡಲಾರದು, ಎಂದರೆ) ಋತುಃ = ಋತುಪಾತ್ರವು. (ಅಂದರೆ ಋತು ಶಬ್ದದಿಂದ ದೇವತೆಯು ಹೇಳಲ್ಪಡುತ್ತದೆ ಎಂಬುವುದು ಸತ್ಯವೇಹೌ ಆದರೆ ಉಪಲಕ್ಷಣಯಾ ಋತು ಶಬ್ದದಿಂದ ಋತುದೇವತಾ ಪಾತ್ರವನ್ನು ಇಟ್ಟುಕೊಳ್ಳಬೇಕು.) ತಥಾ = ಋತು ಶಬ್ದದಿಂದ ಋತುಪಾತ್ರವನ್ನು ಇಟ್ಟುಕೊಂಡರೆ, ಯಾವ ಕಾರಣದಿಂದ ಸೋಮಗಳು ಋತು ಪಾತ್ರದಲ್ಲಿರುತ್ತಾವೋ, ಆದ ಕಾರಣ ಸೋಮಗಳು ಋತು ಪಾತ್ರವೇ ಸ್ಥಾನವಾಗಿ ಉಳ್ಳವುಗಳು ಎಂದು ಹೇಳಿದ್ದು ಯುಕ್ತವೇ. (೫) (ನೇಷ್ಟ್ರ ಎಂಬ ಋತ್ವಿಜನಿಗೆ ಅಗ್ನಿಯು ದೇವತೆಯು ಎಂಬ ಅಭಿಪ್ರಾಯದಿಂದ ನೇಷ್ಟಾಽಗ್ನಿಃ ಎಂದದ್ದು. ಅದರಲ್ಲಿ ನೇಷ್ಟ್ರ ಎಂಬ ನಾಮವು ಬರಲು ಕಾರಣವೇನೆಂದರೆ) ಪತ್ನೀ ಶಾಲೆಯನ್ನು ಕುರಿತು ಯಜಮಾನನ ಪತ್ನಿಯನ್ನು ಕರೆದುಕೊಂಡು ಹೋಗುವ ಪ್ರಯುಕ್ತ ನೇಷ್ಟನು ನೇಷ್ಟ್ರ ಋತ್ವಿಜನು ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. (೬) (ಋತು ಶಬ್ದಕ್ಕೆ ಮಾರ್ಗವೆಂದು ಅರ್ಥವು. ಲಕ್ಷಣ ಯಾ ಋತು ಶಬ್ದದಿಂದ ಋತುದೇವತೆಗಳನ್ನು ಇಟ್ಟುಕೊಳ್ಳಬೇಕು ಎಂದು ಹೇಳಿದೆ. ಈಗ ಋತು ಶಬ್ದವನ್ನು ದೇವತೆಗಳಲ್ಲಿಯೇ ನಿರ್ವಚನ ಮಾಡುತ್ತಾರೆ) ಕುಸುಮೋದ್ಭವ (ಪುಷ್ಪಗಳ ಹುಟ್ಟುವಿಕೆ) ಮೊದಲಾದ ಋತು ಲಿಂಗಗಳನ್ನು ತಿಳಿಸಿಕೊಡುವುದರಿಂದ ಋತವಃ =ಆರು ಋತ್ವಭಿಮಾನಿ ದೇವತೆಗಳು ಎಂದು ಹೇಳಿಸಿಕೊಳ್ಳಲ್ಪಡುತ್ತಾರೆ. ಅಥವಾ ಋಚ್ಛಂತಿ ಜಾನಂತ್ಯನೇನ ಋತುದೇವೇನ ಕುಸುಮೋದ್ಭವಾದಿಕಂ ಸಃ ಋತುಃ ಎಂದು ವಿಗ್ರಹವು. ಜ್ಞಾಪಯಂತಿ ಎನ್ನುವುದು ತಾತ್ಪರ್ಯಾರ್ಥವು. ಅಥವಾ ಪೂರ್ವದಲ್ಲಿ ಋತು ಶಬ್ದವನ್ನು ಮಾರ್ಗ ಎಂಬ ಅರ್ಥದಲ್ಲಿ ನಿರ್ವಚನ ಮಾಡಿರುತ್ತಾರೆ. ಈಗಲಾದರೂ ಋತು ದೇವತೆಗಳಲ್ಲಿ ನಿರ್ವಚನ ಮಾಡಿದ್ದು (೭) (ಮರುತಃ ಪಿಬತ ಎಂಬಲ್ಲಿ ಮಾರುತೇನ ಪಾತ್ರೇಣ ಎಂದನ್ನಬೇಕಿತ್ತು. ಪರಕೀಯ ಪಾತ್ರದಿಂದ ಪಾನವು ನಿಷಿದ್ಧವಾದುದರಿಂದ ಪೋತ್ರಾತ್ =ಪೋತ್ರಪಾತ್ರದಿಂದ ಎಂದದ್ದು ಹೇಗೆಂದರೆ) ಮರುತ್‌ಗಳು ಸರ್ವಜಗತ್ತನ್ನು ಪವಿತ್ರೀಕರಿಸುವುದರಿಂದಲೇ ಪೋತಾರಃ ಎನಿಸುತ್ತಾರೆ. ಅವರು ಪೋತ್ರ ಎಂಬ ಯತ್ವಿಜನ ದೇವತೆಗಳು. ಪೋತೃನಾಮಕ ಋತ್ವಿಜನಿಗೆ ದೇವತೆಗಳಾದುದರಿಂದಲೇ ಮರುತ್‌ಗಳು ಪೋತೃಗಳೆನಿಸುತ್ತಾರೆ. ಪೋತೃಪಾತ್ರವೇ ಮರುತ್‌ಗಳ ಪಾತ್ರವು. (೮) ನೇಷ್ಟ್ರ ಎಂಬ ಋತ್ವಿಜನಿಗೆ ಶ್ರೀ ವಿಷ್ಣುವು ಇಂದ್ರನು ಅಗ್ನಿಯು ಅಥವಾ ತ್ವಷ್ಟ್ರ ಇವರು ದೇವತೆಗಳು. (ಏವಂಚ ಎಲೋ ಇಂದ್ರನೇ ಋತು ಮಾರ್ಗದಿಂದ ಬಂದು ಋತು ಪಾತ್ರದಿಂದ ಋತು ದೇವತೆಯಿಂದ ಕೂಡಿಕೊಂಡು ಸೋಮವನ್ನು ಕುಡಿ.) ||೧||೨||೩||

**ಋ || (೧೫೦) ಅಗ್ನೇ ದೇವಾ ಇಹಾ ವಹ ಸಾದಯಾ ಯೋನಿಷು ತ್ರಿಷು । ಪರಿ ಭೂಷ ಪಿಬ ಋತುನಾ ||೪||**

ಅ || ಅಗ್ನೇ =ಎಲೋ ಅಗ್ನಿಯೇ, ದೇವಾನ್=ದೇವತೆಗಳನ್ನು, ಇಹ=ಈ ಯಜ್ಞದಲ್ಲಿ, ಆ ವಹ =ಹೊಂದಿಸಿ ಕೊಡು (ಬಂದವರನ್ನು) ತ್ರಿಷು ಯೋನಿಷು = ಉತ್ತರವೇದಿ, ಸದಃ ಪ್ರಾಗ್ವಂಶ ಎಂಬ ೩ ಸ್ಥಾನಗಳಲ್ಲಿ, ಸಾದಯ = ಕುಳ್ಳಿರಿಸು. ಪರಿಭೂಷ=ದೇವತೆಗಳನ್ನು ಕುಳ್ಳಿರಿಸುವುದರಿಂದ ನಮ್ಮ ಯಜ್ಞವನ್ನು ಅಲಂಕರಿಸು. ||೪||

ಭಾ ॥ ವೇದ್ಯುತ್ತರಾ ಸದಶ್ಚೈವ ಪ್ರಾಗ್ವಂಶೋ ಯೋನಯಃ ಸ್ಮೃತಾಃ । ಭೂಷ ಭೂಷಯ ನೋ ಯಜ್ಞಂ ॥೪॥

ಅ ॥ (ಆ ಯೋನಿಗಳು ಯಾವುವು ಎಂದರೆ) ಉತ್ತರವೇದಿ, ಸದಃ, ಪ್ರಾಗ್ವಂಶ, ಎಂಬ ಮೂರು ಸ್ಥಾನಗಳೇ ಯೋನಿಗಳೆನಿಸುತ್ತವೆ. (ಏವ=ಪ್ರಾತಸ್ಸವನಾದಿ ಮೂರು ಸದನಗಳಲ್ಲ.) ನಮ್ಮ ಯಜ್ಞವನ್ನು ಭೂಷ =ಅಲಂಕರಿಸು. ॥೪॥

ಋ ॥ (೧೫೧) ಬ್ರಾಹ್ಮಣಾದಿಂದ್ರ ರಾಧಸಃ ಪಿಬಾ ಸೋಮಮೃತೂರನು । ತವೇದ್ಧಿ ಸಖ್ಯಮಸ್ತೃತಂ ॥೫॥

ಅ ॥ ಎಲೋ ಇಂದ್ರನೇ, ನಮ್ಮ ಇಷ್ಟಸಿದ್ಧಿಗಾಗಿ, ಋತು ದೇವತೆಗಳನ್ನು ಅನುಸರಿಸಿ, ನಿನ್ನನ್ನು (ಅಂದರೆ ಋತು ದೇವತೆಗಳಿಂದ ಕೂಡಿಕೊಂಡು ಬ್ರಾಹ್ಮಣಾಂಛಂಸಿ ಪಾತ್ರದಿಂದ ಸೋಮವನ್ನು ಕುಡಿ) (ಋತುಂ ದೇವತೆಗಳನ್ನು ಅನುಸರಿಸಿ. ಎಂದು ಇಲ್ಲಿ ಋತು ದೇವತೆಗಳಿಗೂ ಇಂದ್ರನಿಗೂ ಸಾಹಿತ್ಯ ಮಾತ್ರವು ವಿವಕ್ಷಿತವು ಇಂದ್ರನಿಗೆ ಅಪ್ರಾಧ್ಯಾನ್ಯವಲ್ಲ, ಎಂಬ ಅಭಿಪ್ರಾಯದಿಂದ ತ್ವಾಂ ಅನು ಋತು ದೇವತಾಃ ಎಂದು ವ್ಯತ್ಯಾಸವಾಗಿ ವ್ಯಾಖ್ಯಾನವಾಗಿದೆ. ಋತು ದೇವತೆಗಳಿಂದ ಕೂಡಿಕೊಂಡು ಎಂದು ತಾತ್ಪರ್ಯವು.) ಸ್ತೃತಂ ಎಂದರೆ ಭಿನ್ನವು (ನಷ್ಟವು) ಎಂದು ಹೇಳಲ್ಪಟ್ಟಿದೆ. (ಅಸ್ತ್ರತಂ=ಅಚ್ಛಿನ್ನವು) (ನಿತ್ಯವು. ಸಾರ್ವಕಾಲಿಕವು) ॥೫॥

ಋ ॥ (೧೫೨) ಯುವಂ ದಕ್ಷಂ ಧೃತವ್ರತ ಮಿತ್ರಾವರುಣ ದೂಳಭಂ । ಋತುನಾ ಯಜ್ಞಮಾಶಾಥೇ ॥೬॥೨೮॥

ಅ ॥ ಮಿತ್ರಾವರುಣಾ=ಮಿತ್ರಾವರುಣರೇ, ಧೃತವ್ರತಾ =ಧೃತಂವ್ರತಂ ಜಗದ್ರಕ್ಷಣಾದಿಕರ್ಮ ಯಾಭ್ಯಾಂ= ಯಾವ ಭಗವದ್ರೂಪಗಳಿಂದ ಜಗದ್ರಕ್ಷಣಾದಿರೂಪವಾದ ಕರ್ಮವು ಧರಿಸಲ್ಪಡುತ್ತದೋ ಎಂಬ ವ್ಯುತ್ಪತ್ತಿಯಿಂದ ಜಗದ್ರಕ್ಷಣಾದಿ ಕರ್ಮಗಳನ್ನು ಮಾಡುತ್ತಿರುವ, ಯುವಂ=ನೀವಿಬ್ಬರೇ, ಋತುನಾ =ಋತುಪಾತ್ರದಿಂದ, (ಸೋಮಪಾನ ಮಾಡಿ) (ಋತುದೇವತೆಗಳಿಂದ ಕೂಡಿಕೊಂಡು, ದೂಳಭಂ =ಹಂದಾಡಿಸಲಿಕ್ಕಾಗಿ ಅಶಕ್ಯನಾದ, (ತನ್ನ ಕರ್ಮಾಚರಮೆಯಲ್ಲಿಯೇ ಆಸಕ್ತನಾದ) ದಕ್ಷಂ =ದಕ್ಷನೆನಿಸಿದ ಯಜಮಾನನನ್ನು, ಯಜ್ಞಂ ಚ =ಯಾಗವನ್ನು ಕೂಡ, ಅಶಾಥೇ=ನಿಯಮಿಸುತ್ತೀರಿ. (ಆದ ಕಾರಣ ಸೋಮಪಾನದಿಂದ ಪ್ರಸನ್ನರಾಗಿ ಪುನಃ ಆತನನ್ನು ಪ್ರವರ್ತಿಸುತ್ತೀರಿ.)

ವಿ ॥ (1) ಧೃತವ್ರತ, ಮಿತ್ರಾವರುಣ, ಇತ್ಯಾದಿಗಳಲ್ಲಿ ಸಂಹಿತೆಯಲ್ಲಿ ಹ್ರಸ್ವತ್ವವು. ದೀರ್ಘಾಂತವಾಗಿ ಪದಚ್ಛೇದವು, ಅವರಿಗೆ ಐಕ್ಯವನ್ನು ತೋರಿಸುವುದಕ್ಕಾಗಿ, ಅದರಲ್ಲಿ ವಿಷ್ಣುರೂಪಗಳಿಗೆ ಸ್ವರೂಪೈಕ್ಯವು. ಮಿತ್ರಾ ವರುಣರಿಗಾದರೂ ಮತ್ಯೈಕ್ಯವು ಎಂದು ತಿಳಿಯಬೇಕು. ॥೬॥

ಭಾ ॥ ಅಸ್ತ್ರಭ್ಯಂ ದುರ್ದಭಂ ಸ್ಮೃತಂ । ದಕ್ಷಾಖ್ಯಂ ಯಜಮಾನಂ ಚಾಪೀಶಾಥೇ ಯಜ್ಞ ಮೇವ ಚ । ಸೋಮಂ ಪೀತ್ವರ್ತುಪಾತ್ರೇಣ ಸಹ ವಾ ತೇನ ಚರ್ತುನಾ ॥೬॥ ೨೮॥

ಅ॥ (ದೂಳಭಂ) ದುರ್ದಭವೆಂದರೆ ಹಂದಾಡಿಸಲಿಕ್ಕೆ ಅಶಕ್ಯನು, ಅಂದರೆ ನಮ್ಮ ಕರ್ಮದಲ್ಲಿಯೇ ಇರುವವನು, ದಕ್ಷಾಖ್ಯ ಯಜಮಾನನನ್ನು, ಯಾಗವನ್ನು ಕೂಡ, ಋತುಪಾತ್ರದಿಂದ ಸೋಮವನ್ನು ಪಾನಮಾಡಿ ಅಥವಾ ಋತುದೇವತೆಯಿಂದ

ಕೂಡಿಕೊಂಡು ನಿಯಮಿಸುತ್ತೀರಿ. (ಅಂದರೆ ಸೋಮಪಾನದಿಂದ ಪ್ರಸನ್ನರಾಗಿ ಪ್ರವರ್ತಿಸುತ್ತೀರಿ.

ವಿ।। ಸೋಮಂ ಪೀತ್ವಾ ಎಂದು ಅಧ್ಯಾಹಾರ ಮಾಡಿ ಋತುನಾ ಎನ್ನುವುದಕ್ಕೆ ಯೋಜನಾ ಮಾಡಿದರು. (ಅಧ್ಯಾಹಾರ ಮಾಡದೇನೇ ವ್ಯಾಖ್ಯಾನ ಮಾಡುತ್ತಾರೆ) ಋತುನಾ=ಋತುದೇವತೆಯಿಂದ ಕೂಡಿಕೊಂಡು ಎಂದು. ಋತುದೇವತೆಯೂ ಕೂಡ ಯಜಮಾನನಿಗೆ ಅಭೀಷ್ಟ ಕೊಡಲು ಸಮರ್ಥವಾಗಿದೆ. ||೬||೨೮||

ಋ || (೧೫೩) ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ । ಯಜ್ಞೇಷು ದೇವಮೀಳತೇ ||೭||

ಅ || (ಈ ೪ ಋಕ್ಕುಗಳಿಗೆ ದ್ರವಿಣೋದಾ ಎಂಬವಳು ದೇವತೆಯು) ದ್ರವಿಣೋದಾಃ = (ದ್ರವಿಣೋಭ್ಯೋ ವದಾತಿ) ದ್ರವ್ಯವನ್ನು ಇಚ್ಛಿಸುವವರಿಗೆ ಕೊಡುವ ಹೋತನು, ದ್ರವಿಣಸಃ -ದ್ರವ್ಯವನ್ನು ಇಚ್ಛಿಸುವ ಹೋತ್ರಗಳೂ ಕೂಡ, ಅಧ್ವರೇ=ವಿಧಿಪ್ರಕಾರ ಅನುಷ್ಠಾನ ಮಾಡಲ್ಪಟ್ಟ ಯಜ್ಞೇಷು= ಯಾಗಗಳಲ್ಲಿ, ಗ್ರಾವಹಸ್ತಾಸಃ=ಸೋಮ ಸವನಕ್ಕಾಗಿ ಪಾಷಾಣವೇ ಕೈಯಲ್ಲಿ ಉಳ್ಳವರಾಗಿ, ದೇವಂ= ಶ್ರೀ ವಿಷ್ಣುವನ್ನೂ ಅಗ್ನಿಗಳಿಂದ ಕೂಡಿದ ಪ್ರಧಾನಾಗ್ನಿಯನ್ನೂ ಕೂಡ, ಈಳತೇ = (ಈಡಸ್ತುತೌ) ಸ್ತುತಿಸುತ್ತಾರೆ ||೭||

ಭಾ || (೧) ಹೋತಾಚ ಹೋತ್ರಕಾಶ್ಚೈವ ದ್ರವಿಣೋದಾ ದ್ರವೀಣಸಃ || (೨) ಅಗ್ನಿಶ್ಚೈವಾ ಗೃಯಸ್ತೇಷಾಂ ದೇವತಾ ವಿಷ್ಣುಮೀಳತೇ ||೭||

ಅ|| (೧) ದ್ರವಿಣೋದಾಃ =ದ್ರವ್ಯವನ್ನಿಚ್ಛಿಸುವವರಿಗೆ ಕೊಡುವ ಹೋತನು. ದ್ರವೀಣಸಃ =ದ್ರವ್ಯಾಭಿಲಾಷೆಯುಳ್ಳ ಹೋತ್ರಗಳು. (ಏವ ಶಬ್ದದಿಂದ ದ್ರವಿಣೋದಾಃ ಎಂಬ ಪ್ರಥಮಾಂತವನ್ನು ದ್ವಿತಿಯಾ ವಿಭಕ್ತಿಯಾಗಿ ವಿಪರಿಣಮಿಸಿಕೊಂಡು ಅಗ್ನಿಯನ್ನು ಎಂದು ವ್ಯಾಖ್ಯಾನ ಮಾಡಿದ್ದೂ ಆಯುಕ್ತವು.) (೨) (ಇಲ್ಲಿ ದ್ರವಿಣೋದಾಃ ಎನ್ನುವುದರಿಂದ ಹೋತನು ವಿವಕ್ಷಿತನಾದರೆ ದ್ರವಿಣೋದಾ ದದಾತು ನಃ ಇತ್ಯಾದಿಗಳು ಆಯುಕ್ತವಾಗಬೇಕಾಗುವುದು ಎಂದರೆ) ಯದ್ಯಪಿ ಇಲ್ಲಿ ಹೋತನೇ ದ್ರವಿಣೋದಾಃ ಎನಿಸುತ್ತಾನೆ. ಆದಾಗ್ಯೂ ಹೋತನಿಗೆ ದೇವತೆಯಾದುದರಿಂದ ಅಗ್ನಿಯೂ ದ್ರವಿಣೋದಾಃ ಎನಿಸುತ್ತಾನೆ. ಅಗ್ನಿ ಪುತ್ರರೂ ಕೂಡ ಆ ಮಂತ್ರಗಳಿಗೆ ದೇವತೆಗಳು. ಶ್ರೀ ವಿಷ್ಣುವನ್ನೂ, ಅಗ್ನಿ ಪುತ್ರರಿಂದ ಕೂಡಿದ ಪ್ರಧಾನಾಗ್ನಿಯನ್ನೂ ಸ್ತುತಿಸುತ್ತಾರೆ. ||೭||

ಋ || (೧೫೪) ದ್ರವಿಣೋದಾ ದದಾತು ನೋ ವಸೂನಿ ಯಾನಿ ಶೃಣ್ವಿರೇ । ದೇವೇಷು ತಾ ವನಾಮಹೇ ||೮||

ಅ || ದ್ರವಿಣೋದಾಃ = ಹೋತ್ರದೇವತೆಯಾದ ಅಗ್ನಿಯೂ, ಯಾನಿ ವಸೂನಿ =ಯಾವ ದ್ರವ್ಯಗಳು, ಶೃಣ್ವಿರೇ=ಶ್ರುತಗಳಾಗಿವೆಯೋ, (ಪ್ರಸಿದ್ಧಗಳಾಗಿವೆಯೋ) ತಾಃ =ಅವುಗಳನ್ನು, ನಃ =ನಮಗೆ, ದದಾತು=ಕೊಡಲಿ. ತಾ=ಅವುಗಳನ್ನು, (ನಾವು) ದೇವೇಷು=ದೇವತೆಗಳ ನಿಮಿತ್ತವಾಗಿಯೇ, ವನಾಮಹೇ=(ವನಷಣ ಸಂಭಕ್ತೌ) ವಿಭಾಗಿಸುತ್ತೇವೆ. (ತಮ್ಮ ದೇಹ ಪೋಷಣಕ್ಕಾಗಿ ಅಲ್ಲ.) ಅಥವಾ ಅವುಗಳನ್ನು, (ನಾವು) ದೇವೇಷು=ದೇವತೆಗಳಿಗಾಗಿ, ವನಾಮಹೇ=ಕೊಡುತ್ತೇವೆ. ||೮||

ಋ ॥ (೧೫೫) ದ್ರವಿಣೋದಾಃ ಪಿಪೀಷತಿ ಜುಹೋತ ಪ್ರಚತಿಷ್ಠತ । ನೇಷ್ಟ್ರಾದೃತುಭಿರಿಷ್ಯತ ॥೯॥

ಅ॥ ದ್ರವಿಣೋದಾಃ =ಅಗ್ನಿಯು, ಪಿಪೀಷತಿ= (ಪೀಜ್‌ಪಾನೇ) ಪಾನಮಾಡಲು ಇಚ್ಛಿಸುತ್ತಾನೆ. (ಸೋಮಗಳು ಕೂಡ ಅವನಿಗಾಗಿ) ಪ್ರತಿಷ್ಠತ =ಇರುತ್ತವೆ. (ಆತನ ಉದ್ದೇಶದಿಂದಲೇ ಪ್ರತಿಷ್ಠಿತಗಳಾಗುತ್ತವೆ.) (ಆದ ಕಾರಣ ಅವುಗಳನ್ನು ಆತನಿಗಾಗಿ ) ಜುಹೋತ =ಹೋಮಿಸಿರಿ. (ಮತ್ತು) ನೇಷ್ಟ್ರಾತ್=ಪತ್ನಿಯನ್ನು ಕರೆದುಕೊಂಡು ಹೋಗುವುದರಿಂದ ನೇಷ್ಟೃ ಎಂದು ಹೆಸರುಳ್ಳ ಋತ್ವಿಜನ ಸಂಬಂಧಿಯಾದ ನೇಷ್ಟೃ ಪಾತ್ರದಿಂದ, ಋತುಭಿಃ =ಋತು ಪಾತ್ರಗಳಿಂದ, ಅಥವಾ ಋತು ದೇವತೆಗಳಿಂದ ಕೂಡಿಕೊಂಡು. (ಈ ಅಗ್ನಿಯನ್ನು) ಇಷ್ಯತ = (ಇಷು ಇಚ್ಛಾಯಾಂ) ಪೂಜ್ಯನನ್ನಾಗಿ ಇಚ್ಛಿಸಿದರು. ॥೯॥

ಭಾ ॥ ಪಾತುಮಿಚ್ಛತಿ ಸೋಮಂ ಸ ಸೋಮಾಸ್ತಸ್ಮೈ ಪ್ರತಿಷ್ಠಿತಾಃ । ಋತುಪಾತ್ರೈರ್ದೇವ ತಾಭಿಋೂ ಸಹೈವೈನಮಭೀಪ್ಸತ ॥೯॥

ಅ॥ ಅಗ್ನಿಯು ಸೋಮವನ್ನು ಪಾನ ಮಾಡಲಿಕ್ಕೆ ಇಚ್ಛಿಸುತ್ತಾನೆ. ಸೋಮಗಳು ಅಗ್ನಿಯ ಉದ್ದೇಶದಿಂದಲೇ ಸ್ಥಾಪಿತಗಳಾಗುತ್ತವೆ. ನೇಷ್ಟೃ ಪಾತ್ರದಿಂದಲೂ, ಋತು ಪಾತ್ರಗಳಿಂದಲೂ, ಅಥವಾ ಋತು ದೇವತೆಗಳಿಂದ ಕೂಡಿಕೊಂಡೇ ಈ ಅಗ್ನಿಯನ್ನು ಪೂಜ್ಯನನ್ನಾಗಿ ಇಚ್ಛಿಸುವಿರಿ. ॥೯॥

ಋ ॥ (೧೫೬) ಯತ್ತ್ವಾ ತುರೀಯಮೃತುಭಿರ್ದ್ರವಿಣೋದೋ ಯಜಾಮಹೇ । ಅಧ ಸ್ಮಾ ನೋ ದದಿರ್ಭವ ॥೧೦॥

ಅ ॥ ದ್ರವಿಣೋದಃ=ಅಗ್ನಿಯೇ, ಋತುಭಿಃ=ಋತುಪಾತ್ರಗಳಿಂದ, ಅಥವಾ ಋತುದೇವತೆಗಳಿಂದ, ಕೂಡಿಕೊಂಡು ತುರೀಯಂ=ನಾಲ್ಕು ಆವರ್ತಿಯೂ, ಯತ್=ಯಾವ ಕಾರಣದಿಂದ, ತ್ವಾ=ನಿನ್ನನ್ನು ಯಜಾಮಹೇ=ಪೂಜಿಸುತ್ತೇವೋ, ಆದ=ಆ ಕಾರಣದಿಂದ, ನಃ=ನಮಗಾಗಿ, ದದಿ= (ದದದಾನೇ) ಕೊಡುವವನು, ಭವ=ಆಗು. ಸ್ಮ=ಪ್ರಸಿದ್ಧ ॥೧೦॥

ಭಾ ॥ ಚತುರ್ಥವಾರಮಪಿ ಯತ್ತ್ವಾಂ ಯಜಾಮೋದದಿರ್ಭವ ॥೧೦॥

ಅ॥ ನಾಲ್ಕು ಆವರ್ತಿಯೂ ಯಾವ ಕಾರಣದಿಂದ ನಿನ್ನನ್ನು ಪೂಜಿಸುತ್ತೇವೋ, ಆದ ಕಾರಣ ಅಭೀಷ್ಟವನ್ನು ಕೊಡುವವನಾಗು.

ವಿ ॥ ತುರೀಯಂ ಎನ್ನುವುದಕ್ಕೆ ನಾಲ್ಕಾವರ್ತಿ ಎಂಬ ವ್ಯಾಖ್ಯಾನವು ಹೇಗೆಂದರೆ = ಯಾವ ಋಕ್ಕಿನಲ್ಲಿ ದ್ರವಿಣೋವಾ ಎಂಬವಳು ದೇವತೆಯೋ ಅಂತಹ ಋಕ್ಕು ದ್ರಾವಿಣೋದಸೀ. ದೇವ ಪೂಜಾರ್ಥವಾಗಿ ಅ ೪ ಋಕ್ಕುಗಳಲ್ಲಿಯೂ ದ್ರವಿಣೋದಸ್ ದೇವತೆಯ ಸ್ತುತಿರೂಪವಾದ ಪೂಜೆಯು ಇದೆ. ಅದರಲ್ಲಿ ಈ ಋಕ್ಕು ೪ನೇದ್ದು. ಆದ ಕಾರಣ ಚತುರ್ಥವಾರಂ ಎಂದದ್ದು ॥೧೦॥

ಋ ॥ ೧೫೭) ಅಶ್ವಿನಾ ಪಿಬತಂ ಮಧು ದೀದ್ಯಗ್ನೀ ಶಚುವ್ರತಾ । ಋತುನಾ ಯಜ್ಞವಾಹಸಾ ॥೧೧॥

ಅ|| (ಇದಕ್ಕೆ ಅಶ್ವಿನೀ ದೇವತೆಗಳೇ ದೇವತೆಗಳು.) ಅಶ್ವಿನಾ = ಅಶ್ವಿನೀ ದೇವತೆಗಳಿರಾ, ದೀದ್ಯಗ್ನೀ= (ದೀಪೀದೀಪ್ತೌ) ಅತಿಶಯವಾಗಿ ಪ್ರಕಾಶಮಾನವಾದ ಅಗ್ನಿಗೆ ಸದೃಶರಾದ, ಶುಚಿವ್ರತಾ = ಪವಿತ್ರವಾದ ಜಗತ್ಸರ್ಜನಾದಿರೂಪ ವ್ಯಾಪಾರವುಳ್ಳ, ಯಜ್ಞವಾಹಸಾ. ಯಜ್ಞಗಳಿಗೆ ಪ್ರವರ್ತಕರಾದ, (ನೀವಿಬ್ಬರು) ಋತುನಾ =ಋತು ಪಾತ್ರದಿಂದ ಅಥವಾ ಋತುದೇವತೆಗಳಿಂದ ಕೂಡಿಕೊಂಡು ಮಧು=ಸೋಮವನ್ನು, ಪಿಬತಂ =ಕುಡಿಯಿರಿ ||೧೧||

**ಅ|| ದೀದ್ಯಗ್ನೀ ಇತಿದೀಪಾಗ್ನೀ ||೧೧||**

ಅ|| ದೀದ್ಯಗ್ನೀ ಅಂದರೆ ದೀಪ್ತವಾದ ಅಗ್ನಿವುಳ್ಳ ಅಂದರೆ ಅತಿಶಯವಾಗಿ ಪ್ರಕಾಶಮಾನವಾದ ಅಗ್ನಿಗೆ ಸದೃಶರು ||೧೧||

**ಋ || (೧೫೮) ಗಾರ್ಹಪತ್ಯೇನ ಸಂತ್ಯ ಋತುನಾ ಯಜ್ಞನೀರಸಿ । ದೇವಾನ್ ದೇವಯತೇ ಯಜ ||೧೨||೨೯||೧೫||**

ಅ|| (ವಿಷ್ಣುವು ಅಗ್ನಿಯಾಗಲೀ ದೇವತೆಗಳು.) ಸಂತ್ಯ = ವ್ಯಾಪ್ತತ್ವರೂಪ ಸಂತತತ್ವದಿಂದ ಅಂದರೆ ಸರ್ವತ್ರ ವ್ಯಾಪ್ತನಾದುದರಿಂದ ಸಂತ್ಯ ಎನಿಸಿಕೊಂಡ ಶ್ರೀ ವಿಷ್ಣುವೇ, ಗಾರ್ಹಪತ್ಯಾಗ್ನಿಯು ನಿತ್ಯದಲ್ಲಿಯೂ ಮನೆಯಲ್ಲಿದ್ದುದರಿಂದ ಸಂತ್ಯ ಎನಿಸಿಕೊಂಡ ಅಗ್ನಿಯೇ, (ಯಾವ ನೀನು) ಗಾರ್ಹಪತ್ಯೇನ =ಗಾರ್ಹಪತ್ಯ ಪಾತ್ರದಿಂದಲೂ, ಋತುನಾ = ಋತು ಪಾತ್ರದಿಂದಲೂ, ಅಥವಾ ಋತು ದೇವತೆಗಳಿಂದ ಕೂಡಿಕೊಂಡು (ಸೋಮವನ್ನು ಪಾನ ಮಾಡಿ) ಯಜ್ಞನೀಃ =ಯಜ್ಞಗಳಿಗೆ ಪ್ರವರ್ತಕನು, ಅಸಿ = ಆಗಿರುತ್ತಿ. (ಅಂತಹ ನೀನು) ದೇವಯತೇ = ಯಜಮಾನನ ಪ್ರಯೋಜನಕ್ಕಾಗಿ, ದೇವಾನ್ =ದೇವತೆಗಳನ್ನು ಯಜ=ಪೂಜಿಸು. ||೧೨||೨೯||೫||

**ಭಾ || (೧) ಸಂತ್ಯೋಽಗ್ನಿಸ್ಸಂತತತ್ವತಃ । (೨) ವಿಷ್ಣುರ್ವರ್ತ್ವಧಿಪೋ ವಿಷ್ಣುಃ ಕೇಶವಾದಿ ಸ್ವರೂಪತಃ । (೩) ಗ್ರಹಾನ್ ಸೋಮಸ್ಯ ಮಿಮತ ಇತಿ ತಸ್ಯೈವ ಕಥ್ಯತೇ । (೪) ಗಾರ್ಹಪತ್ಯೇನ ಪಾತ್ರೇಣ ಯಜಮಾನಸ್ತು ದೇವಯನ್ । ದೇವಾನ್ಯಾತೀತಿ ||೧೨||೨೯||೧೫||**

ಅ|| (೧) (ಸಂಪೂರ್ವಾತ್ ತನು ವಿಸ್ತಾರೇ ಕರಣೇಚ) ಗಾರ್ಹಪತ್ಯಾಗ್ನಿಯು ನಿತ್ಯದಲ್ಲಿಯೂ ಮನೆಯಲ್ಲಿದ್ದುದರಿಂದ ಸಂತ್ಯಃ=ಅಗ್ನಿಯು. ಅಥವಾ ಶ್ರೀ ವಿಷ್ಣುವು ಸರ್ವತ್ರವ್ಯಾಪ್ತನಾದುದರಿಂದ ಸಂತ್ಯಃ =ಶ್ರೀ ವಿಷ್ಣುವು. (೨) (ಇಲ್ಲಿಯೂ ಹಿಂದೆಯೂ ಋತು ಶಬ್ದದಿಂದ ಯಾವ ದೇವತೆಯನ್ನು ಇಟ್ಟುಕೊಳ್ಳಬೇಕೆಂದರೆ) ಕೇಶವಾದಿ ಸ್ವರೂಪದಿಂದ ಶ್ರೀ ವಿಷ್ಣುವು ೬ ಋತುಗಳಿಗೆ ಅಧಿಪತಿಯು. (ಮುಖ್ಯ ದೇವತೆಯು) (ಧಾತೃ ಮೊದಲಾದ ೧೨ ಆದಿತ್ಯರು ಅವಾಂತರ ದೇವತೆಗಳು) (ಒಂದೊಂದು ಋತುವಿಗೆ ಎರಡೆರಡು ಮಾಸಗಳಾಗಿರುವುದರಿಂದ ಎರಡೆರಡು ಕೇಶವಾದಿ ಭಗವದ್ರೂಪಗಳು ಒಂದೊಂದು ಋತುವಿಗೆ ಮುಖ್ಯ ದೇವತೆಯು) (೩) (ಅದು ಹೇಗೆಂದರೆ) ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ । ಛಂದಾಂಸಿ ಚ ವಧತೋ ಅಧ್ವರೇಷು ಗ್ರಹಾಂತ್ಸೋಮಸ್ಯ ವಿಮತೇ ದ್ವಾದಶ || ಎಂಬ ಶ್ರುತಿಯಲ್ಲಿ ಆ ಶ್ರೀ ವಿಷ್ಣುವಿಗೇನೇ ೬ ಋತುಗಳ ಅಧಿಪತ್ಯವು (ಮುಖ್ಯ ದೇವತಾತ್ವವು) ಹೇಳಲ್ಪಡುತ್ತದೆ. (ಹೇಗೆಂದರೆ ಕವಯಃ ವಿಪ್ರಾಃ = ಜ್ಞಾನಿಗಳಾದ ಬ್ರಾಹ್ಮಣರು, ಸುಪರ್ಣಂ =ಚೆನ್ನಾಗಿ ಪರಮಾನಂದ ಸ್ವರೂಪನಾದ, ಶ್ರೀ ವಿಷ್ಣುವನ್ನು, ಏಕಂ ಸಂತಂ

=ಒಬ್ಬನನ್ನೇ, ವಚೋಭಿಃ =ಋತು ಶಬ್ದಗಳಿಂದಲೇ, (ಸ್ವರೂಪದಿಂದ ಅಲ್ಲ.) ಬಹುಧಾ ಋತುಗಳಿಗೆ ಅಧಿಪತಿಯಾಗಿ, ಕೇಶವಾದಿ ೧೨ ಭಗವದ್ರೂಪಗಳಿಂದ ಇರತಕ್ಕವನನ್ನಾಗಿ, ಕಲ್ಪಯಂತಿ = ಧ್ಯಾನಿಸುತ್ತಾರೆ. ಮತ್ತು ದ್ವಾದಶ = ಆ ೧೨ ರೂಪಗಳಿಂದ ಇರತಕ್ಕ ಭಗವಂತನನ್ನು ಅಧ್ವರೇಷು = ಪ್ರತಿಯಜ್ಞಗಳಲ್ಲಿ, ಛಂದಾಂಸಿ =ಮಂತ್ರಗಳನ್ನು ದಧತಃ=ಧರಿಸಿರುವ ಋತ್ವಿಜರು, ಸೋಮಸ್ಯ ಗ್ರಹಾನ್ = ಸೋಮದ ಪಾತ್ರಗಳನ್ನು, ಮಿಮತೇ = ನಿರ್ಮಿಸುತ್ತಾರೆ ಎಂದು ಶ್ರುತಿಯಲ್ಲಿ ಶ್ರೀ ವಿಷ್ಣುವೇ ಋತುಗಳಿಗೆ ಮುಖ್ಯ ದೇವತೆಯೆಂದು ಹೇಳಲ್ಪಡುತ್ತಾನೆ.) (೪) (ಗಾರ್ಹಪತ್ಯ, ದೇವಯತ್ ಎಂಬ ಶಬ್ದಗಳಿಗೆ ವ್ಯಾಖ್ಯಾನ ಮಾಡುತ್ತಾರೆ.) ಗಾರ್ಹಪತ್ಯೇನ = ಗಾರ್ಹಪತ್ಯ ಪಾತ್ರದಿಂದ, ದೇವಾನ್ ಏತಿ=ಎಂಬ ವ್ಯುತ್ಪತ್ತಿಯಿಂದ ದೇವಯನ್=ಯಜಮಾನನು. ಅಥವಾ ದೇವಾನ್ ಯಾತೀತಿ = ದೇವತೆಗಳನ್ನು ಹೊಂದುವುದರಿಂದ ದೇವಯನ್ =ಯಜಮಾನನು (ಇದು ಅರ್ಥ ನಿರ್ದೇಶವು) ॥೧೨॥೨೯॥೧೫॥

ಅವ ॥ ೯ ಋಕ್ಕು, ೨ ವರ್ಗ, ಐಂದ್ರ ಸೂಕ್ತ, ಗಾಯತ್ರೀ ಛಂದಸ್ಸು.

ಋ ॥ (೧೫೯) ಆ ತ್ವಾ ವಹಂತು ಹರಯೋ ವೃಷಣಂ ಸೋಮಪೀತಯೇ । ಇಂದ್ರ ತ್ವಾ ಸೂರಚಕ್ಷಸಃ ॥೧॥

ಅ ॥ ಇಂದ್ರ = ಇಂದ್ರನೇ, ವೃಷಣಂ = ಅಭೀಷ್ಟವನ್ನು ಸುರಿಸುವ, ತ್ವಾ=ನಿನ್ನನ್ನು, ಸೋಮ ಪೀತಯೇ = ಸೋಮಪಾನ ಮಾಡುವುದಕ್ಕಾಗಿ, ಸೂರಚಕ್ಷಸಃ =ಸೂರಾಣಿ =ಸುಷ್ಠು ಊರಾಣಿ = ಚೆನ್ನಾಗಿ ವಿಷಯಗಳನ್ನು ವಿಷಯೀಕರಿಸುವ, ಚಕ್ಷಾಂಸಿ =ಚಕ್ಷುಸ್ಸುಗಳು, ಯೇಷಾಂ ತೇ =ಯಾರಿಗೆ ಇವೆಯೋ, ಅಂತಹ, ತ್ವಾ =ನಿನ್ನ, ಹರಯಃ - ಕುದುರೆಗಳು, ಆ ವಹಂತು = ಹೊರಲಿ. ॥೧॥

ಭಾ ॥ ಸುಷ್ಠ್ವರೀಕುರ್ವಂತಿ ವಿಷಯಾನ್ಯತಃ । ಚಕ್ಷೂಂಷೀಂದ್ರಸ್ಯ ಹರಯಸ್ತೇನೋಕ್ತಾ ಸೂರಚಕ್ಷಸಃ ॥೧॥

ಅ॥ (ಸುಷ್ಠು ಊರೀಕುರ್ವಂತಿ =ಗೃಹ್ಣಂತಿ ಊರಾಣಿ=ವಿಷಯಾನ್, ಎಂಬ ವ್ಯುತ್ಪತ್ತಿಯಿಂದ ಸೂರಾಣಿ ಸೂರಾಣಿ ಚಕ್ಷಾಂಸಿ ಚಕ್ಷೂಂಸಿ ಯೇಷಾಂತೇ ಸೂರ ಚಕ್ಷಸಃ =ಚೆನ್ನಾಗಿ ವಸ್ತುಗಳನ್ನು ವಿಷಯೀಕರಿಸುವ ಕಣ್ಣುಗಳುಳ್ಳವುಗಳು.) ಯಾವ ಕಾರಣದಿಂದ ಇಂದ್ರನ ಕುದುರೆಗಳಿಗೆ ಚೆನ್ನಾಗಿ ಸಮಸ್ತ ವಿಷಯಗಳನ್ನು ವಿಷಯೀಕರಿಸುವ ಕಣ್ಣುಗಳು ಇವೆಯೋ, ಆದ ಕಾರಣ ಇಂದ್ರನ ಕುದುರೆಗಳು ಸೂರಚಕ್ಷಸಃ ಎಂದು ಹೇಳಲ್ಪಡುತ್ತವೆ. ॥೧॥

ಋ ॥ (೧೬೦) ಇಮಾ ಧಾನಾ ಘೃತಸ್ನುವೋ ಹರೀ ಇಹೋಪ ವಕ್ಷತಃ । ಇಂದ್ರಂ ಸುಖತಮೇ ರಥೇ ॥೨॥

ಅ॥ ಹರೀ = ಇಂದ್ರ ಸಂಬಂಧಿ ಕುದುರೆಗಳೇ (ನಿಮಗಾಗಿ) ಇಮಾ ಧಾನಾಃ = ಈ ಪ್ರಸಿದ್ಧ ಚಣಕಾದಿ ಧಾನ್ಯಗಳು, ಘೃತಸ್ನುವಃ = (ಷ್ಣುಪ್ರಸ್ರವಣೇ) ಘೃತೇನಸ್ನುತಾಃ =ಘೃತದಿಂದ ಆರ್ದ್ರಗಳಾಗಿವೆ (ಆದ ಕಾರಣ ಇಂದ್ರಂ=ಇಂದ್ರನನ್ನು, ಸುಖತಮೇ ರಥೇ =ಅತಿ ಸುಖವುಳ್ಳ ರಥದಲ್ಲಿರತಕ್ಕವನನ್ನಾಗಿ ಅಥವಾ ಅಂತಹ ರಥದಿಂದ, ಇಹ =ಈ ಯಜ್ಞದಲ್ಲಿ, ಉಪವಕ್ಷತಂ =ಹೊತ್ತುಕೊಂಡು ಬನ್ನಿರಿ. (ಆಧ್ಯಾತ್ಮದಲ್ಲಿ) ಹರೀ=ಮನೋಬುದ್ಧಿಗಳೇ, (ಇಂದ್ರನ ಉದ್ದೇಶ್ಯಗಳಾದ) ಘೃತಸ್ನುವಃ =ಭಕ್ತಿಯುಕ್ತಗಳಾದ, ಇಮಾಃಧಾನಾಃ =ಈ ಬುದ್ಧಿವೃತ್ತಿ ವಿಶೇಷಗಳು ಇವೆ. (ಆದ ಕಾರಣ) ಇಹಸುಖತಮೇ

ರಥೇ = ಈ ಸುಖಮಯವಾದ ಶರೀರದಲ್ಲಿ, ಇಂದ್ರಂ=ಇಂದ್ರನನ್ನು ಉಪವಕ್ಷತಃ = (ವಹಪ್ರಾಪಣೇ) ಸನ್ನಿಹಿತನನ್ನಾಗಿ ಮಾಡಿರಿ. (ಭೋಜನ ಮಾಡುವವರಿಗೆ ಘೃತದಲ್ಲಿ ಸ್ನೇಹವು. ಭಜನಾದಿಗಳನ್ನು ಮಾಡುವವನಿಗೆ ಭಕ್ತಿಯಲ್ಲಿ ಸ್ನೇಹವು. ॥೨॥

**ಭಾ ॥ ಭಕ್ತಿಸ್ನುತಾನಿ ಧಾನಾನಿ ಬುದ್ಧೇರ್ಧಾನಾ ಇತಿ ಹ್ಯಪಿ ॥೨॥**

ಅ॥(ಆಧ್ಯಾತ್ಮಾರ್ಥದಲ್ಲಿ) (ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಽಧಿಕಃ । ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಎಂದು ಹೇಳಿದುದರಿಂದ ಭಕ್ತಿಯು ಸ್ನೇಹ ಎನಿಸುತ್ತದೆ. ಘೃತ ತೈಲಾದಿಗಳಿಗೆ ಚಿಕ್ಕಣತಾ ರೂಪಗುಣ ಸಂಬಂಧದಿಂದಲೂ ರೂಢಿಯಿಂದಲೂ ಸ್ನೇಹ ಶಬ್ದವಾಚ್ಯತ್ವವು ಆದ ಕಾರಣ ಘೃತ ಶಬ್ದವು ಭಕ್ತಿಯಲ್ಲಿ ಗೌಣವು) ಭಕ್ತಿಯಿಂದ ಆರ್ದ್ರಗಳಾದ ಧ್ಯಾನಗಳೆಂದರೆ ಬುದ್ಧಿಯ ವೃತ್ತಿ ವಿಶೇಷಗಳು. ವಿಜ್ಞಾನ ವೈರಾಗ್ಯ ಶ್ರದ್ಧಾಧೃತಿ ಮೊದಲಾದವುಗಳು. ಬಾಹ್ಯಾರ್ಥದಲ್ಲಿ ಧಾನಾ ಶಬ್ದದಿಂದ ಪ್ರಸಿದ್ಧ ಚಣಕ (ಕಡಲೆ) ಮೊದಲಾದವುಗಳು.

**ಋ ॥ (೧೬೧) ಇಂದ್ರಂ ಪ್ರಾತರ್ಹವಾಮಹ ಇಂದ್ರಂ ಪ್ರಯತ್ಯಧ್ವರೇ । ಇಂದ್ರಂ ಸೋಮಸ್ಯ ಪೀತಯೇ ॥೩॥**

ಅ ॥ ಪ್ರಾತಃ =ಪ್ರಾತಸ್ಸವನದಲ್ಲಿ, ಇಂದ್ರಂ=ಇಂದ್ರನನ್ನು ಹವಾಮಹೇ = (ನಾವು) ಕರೆಯುತ್ತೇವೆ. (ಹೋಮಿಸುತ್ತೇವೆ) ಅಧ್ವರೇ =ಯಾಗವು, ಪ್ರಯತಿ =ಪ್ರವರ್ತಿಸುತ್ತಿರಲು, (ಮಾಧ್ಯಂ ದಿನಸವನದಲ್ಲಿ) ಇಂದ್ರಂ=ಸೋಮಪಾನಾರ್ಥವಾಗಿ, ಇಂದ್ರಂ=ಇಂದ್ರನನ್ನು ಹವಾಮಹೇ =ಕರೆಯುತ್ತೇವೆ (ಹೋಮಿಸುತ್ತೇವೆ) ॥೩॥

**ಭಾ ॥ (೧) ಪ್ರಾತರಿತ್ಯಾದಿವಾಕ್ಯೇನ ಸವನತ್ರಯಮೀರಿತಂ । (೨) ಸಮಾಪ್ತತ್ವಾತ್ಸೋಮ ಪೀತಿಸ್ತೃತೀಯಂ ಸವನಂ ಸ್ಮೃತಂ । ಸದಾ ॥೩॥**

ಅ॥ (೧) (ಋಕ್ಕಿನ ತಾತ್ಪರ್ಯವನ್ನು ಹೇಳುತ್ತಾರೆ.) ಇಂದ್ರಂ ಪ್ರಾತಃ ಇತ್ಯಾದಿ ವಾಕ್ಯದಿಂದ ಪ್ರಾತಸ್ಸವನ, ಮಾಧ್ಯಂಸವನ, ಸಾಯಂಸವನ ಎಂದು ೩ ಸವನಗಳು ಹೇಳಲ್ಪಡುತ್ತವೆ. (೨) ಸೋಮಪಾನವು ಪ್ರಾತಸ್ಸವನ, ಮಾಧ್ಯಂದಿನಸವನಗಳಲ್ಲಿಯೂ ಇದ್ದ ಪ್ರಯುಕ್ತ ಸೋಮಪೀತಿ ಶಬ್ದದಿಂದ ತೃತೀಯ ಸವನವು ಹೇಳಲ್ಪಡುವುದು ಹೇಗೆಂದರೆ) ಸೋಮಪಾನವು ಅನ್ಯತ್ರ ಇದ್ದರೂ ತೃತೀಯ ಸವನಾನಂತರದಲ್ಲಿ ಸೋಮಪಾನವಿಲ್ಲದಿರುವುದರಿಂದ ತೃತೀಯ ಸವನದಲ್ಲಿ ಸಮಾಪ್ತವಾಗುವ ಪ್ರಯುಕ್ತ (ಪೂರ್ಣವಾಗುವ ಪ್ರಯುಕ್ತ) (ಅಸಾಧಾರಣ್ಯೇನ ವ್ಯಪದೇಶಾ ಭವಂತಿ ಎಂಬ ವಿವಕ್ಷೆಯಿಂದ) ಸೋಮಪೀತಿ ಶಬ್ದದಿಂದ ತೃತೀಯ ಸವನವು ಹೇಳಲ್ಪಡುತ್ತದೆ. ಹೀಗೆ ಸದಾ ಆ ಇಂದ್ರನನ್ನು ಹೋಮಿಸುತ್ತೇವೆ. (ಹೀಗೆ ಸದಾ ಎಂದು ಅರ್ಥವನ್ನು ಅಂಗೀಕರಿಸದಿದ್ದರೆ ಪುನಃ ಇಂದ್ರಂ ಎಂಬುವುದು ವ್ಯರ್ಥವಾಗಬೇಕಾಗುವುದು.) (ಹಾಗಾದರೆ ೩ನೇ ಇಂದ್ರಶಬ್ದವು ಇದಿ ಪರಮೈಶ್ವರ್ಯೇ ಎಂಬ ಧಾತು ನಿಷ್ಪನ್ನವಾಗಿ ಯೌಗಿಕವಾದುದರಿಂದ ವಿಶೇಷಣವು, ಪೂರ್ವ ಪಾದದಲ್ಲಿದ್ದ ಇಂದ್ರ ಶಬ್ದವು ರೂಢವಾಗಿರುವುದರಿಂದ ವಿಶೇಷ್ಯವು. ಆದ ಕಾರಣ ವೈಯರ್ಥ್ಯವಿಲ್ಲವೆಂದರೆ - ಈ ಋಕ್ಕಿನಲ್ಲಿ ೩ ಇಂದ್ರ ಶಬ್ದಗಳಿವೆ. ೨ನೇ ಇಂದ್ರಶಬ್ದಕ್ಕೂ ಯೌಗಿಕತ್ವವಿದ್ದುದರಿಂದ ವಿಶೇಷಣತ್ವವು ಕೂಡುವ ಪ್ರಯುಕ್ತ ೩ನೇ ಇಂದ್ರ ಶಬ್ದವು ವ್ಯರ್ಥವಾಗುವುದರಿಂದ ವಿಶೇಷಣತ್ವವು ಕೂಡಲಾರದು. ಅಂತೂ ಎರಡೇ ಇಂದ್ರ ಶಬ್ದಗಳು ಇದ್ದಲ್ಲಿ ೧ಕ್ಕೆ ಯೌಗಿಕತ್ವ ೧ ಕ್ಕೆ ರೂಢತ್ವವನ್ನು ಅಂಗೀಕರಿಸಲಿಕ್ಕೆ ಬಂದರೂ ಇಲ್ಲಿ ೩ನೇ

ಇಂದ್ರಶಬ್ದವಿದ್ದ ಪ್ರಯುಕ್ತ ವೈಯರ್ಥ್ಯವೇ ಬರುವುದರಿಂದ ಹಾಗೆ ಆಶ್ರಯಿಸುವುದು ಯುಕ್ತವಲ್ಲ.) ||೩||

**ಋ || (೧೬೨) ಉಪ ನಃ ಸುತಮಾಗಹಿ ಹರಿಭಿರಿಂದ್ರ ಕೇಶಿಭಿಃ । ಸುತೇ ಹಿ ತ್ವಾ ಹವಾಮಹೇ ||೪||**

ಅ || ಇಂದ್ರ = ಇಂದ್ರನೇ ಹಿ = ಯಾವ ಕಾರಣದಿಂದ, ತ್ವಾ =ನಿನ್ನನ್ನು, ಸುತೇ =ಸೋಮವು ಹಿಂಡಲ್ಪಡುತ್ತಿರಲು, ಹವಾಮಹೇ =ಹೋಮಿಸುತ್ತೇವೋ, (ಆ ಕಾರಣ) ಕೇಶಿಭಿಃ=ಜೋತಾಡತಕ್ಕ ಕೇಶಗಳಿಂದ ಕೂಡಿದ ಹರಿಭಿಃ=ಕುದುರೆಗಳಿಂದ, ನಃ=ನಮ್ಮ, ಸುತಂ =ಸೋಮವನ್ನು ಉಪ ಆಗಹಿ =ಬಾ. ||೪||

**ಋ || (೧೬೩) ಸೇಮಂ ನಃ ಸ್ತೋಮಮಾ ಗಹ್ಯುಪೇದಂ ಸವನಂ ಸುತಂ । ಗೌರೋ ನ ತೃಷಿತಃ ಪಿಬ ||೫||೩೦||**

ಅ|| (ಎಲೋ ಇಂದ್ರನೇ) ನಃ =ಅಂತಹ ನೀನು, ನಃ =ನಮ್ಮ, ಇಮಂ ಸ್ತೋಮಂ = ಈ ಸ್ತುತಿಯನ್ನು ಇದಂಸದನಂ=ಈ ಕಂಡನ (ತುಂಡರಿಸುವ) ಸ್ಥಲವನ್ನು, ಸುತಂ=ತುಂಡರಿಸಿದ ಸೋಮವನ್ನು ಕೂಡ, ಉಪ ಅಗಹಿ=ಬಾ, (ಬಂಧು) ತೃಷಿತಃ=ತೃಷೆಯುಕ್ತವಾದ, ಗೌರಃ ನ=ಮೃಗ ವಿಶೇಷದಂತೆ (ಪಾನೇಚ್ಛೆಯಿಂದ ಕೂಡಿದವನಾಗಿ) ಪಿಬ=(ಸೋಮವನ್ನು) ಕುಡಿ. (ಪಾನೇಚ್ಛೆಯಿಲ್ಲದಿದ್ದರೆ ಪಾನವೇ ಕೂಡಲಾರದು) ||೫||೩೦||

**ಋ || (೧೬೪) ಇಮೇ ಸೋಮಾಸ ಇಂದವಃ ಸುತಾಸೋ ಅಧಿ ಬರ್ಹಿಷಿ । ತಾ ಇಂದ್ರ ಸಹಸೇ ಪಿಬ ||೬||**

ಅ || ಇಂದ್ರ =ಇಂದ್ರನೇ, ಇಮೇ ಇಂದವಃ =ಈದಾವ, ಇಂ =ಕಾಮ್ಯವನ್ನು =ದದತಿ =ಕೊಡುತ್ತವೆ, ಎಂಬ ವ್ಯುತ್ಪತ್ತಿಯಿಂದ ಇಷ್ಟಪ್ರದಗಳಾದ, ಸುತಾಸಃ = ಹಿಂಡಲ್ಪಟ್ಟ, ಸೋಮಾಸಃ =ಸೋಮಗಳು, ಅಧಿ ಬರ್ಹಿಷಿ = ಬರ್ಹಿಸ್ಸಿನ ಮೇಲೆ, (ಇರುತ್ತವೆ.) ತಾನ್=ಅಸೋಮಗಳನ್ನು, ಸಹಸೇ =ಬಲಕ್ಕಾಗಿ, ಪಿಬ=ಕುಡಿ. (ಇಂದ್ರ ಶಬ್ದದಿಂದ ವಿಷ್ಣುವನ್ನು ಇಟ್ಟುಕೊಂಡರೆ) ಸಹಸೇ -ಯಜಮಾನನಿಗೆ ಬಲವು ಲಭಿಸುವುದಕ್ಕಾಗಿ, ಅಥವಾ ನಿನ್ನ ಬಲವು ಅಭಿವ್ಯಕ್ತಿಯಾಗುವುದಕ್ಕಾಗಿ ಎಂದರ್ಥವು. ಬಲಾಭಿವ್ಯಕ್ತಿಯೆಂದರೆ ಭಕ್ತರಿಗೆ ಅಭೀಷ್ಟವನ್ನು ಕೊಡುವುದು, ಎಂದು ತಿಳಿಯಬೇಕು.

**ಭಾ || (೧) ವಿಷ್ಣುವಿವಕ್ಷಾಯಾಂ ಯಜಮಾನಬಲಂ ಸಹಃ || (೨) ತದಿಷ್ಟಸ್ಯೈವ ದಾನಾಯ ತದ್ಗುಣ ವ್ಯಕ್ತಿರೇವ ವಾ || (೩) ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ || (೪) ಹೇಯೋಪಾದೇಯರಹಿತಗುಣಪೂರ್ಣೋ ಹರಿಸ್ಸದಾ || (೫) ಅನುಗ್ರಹವ್ಯಕ್ತಿರೇವ ತಗ್ಗುಣಾನಾಂ ಚ ನಾನ್ಯಥಾ । ಇತ್ಯಾದಿವೇದವಾಕ್ಯೇಭ್ಯೋ । ನೈವ ವೃದ್ಧಿರ್ಹರೇಃ ಕ್ವಚಿತ್ ||೬||**

ಅ|| (೧) ಸೋಮಪಾನಾದಿಗಳಿಂದ ಇಂದ್ರನಿಗೆ ಬಲವೃದ್ಧಿಯಿದ್ದ ಪ್ರಯುಕ್ತ ಆ ವ್ಯಾಖ್ಯಾನವು ಪ್ರಸಿದ್ಧ ಇಂದ್ರನಲ್ಲಿ ಕೂಡುತ್ತದೆ.) (ಪರಮೇಶ್ವರನಲ್ಲಿ ಆದರೂ ಯೋಜನಾಂತರವನ್ನು ಸೂಚಿಸುತ್ತಾರೆ.) ಇಂದ್ರಶಬ್ದದಿಂದ ವಿಷ್ಣುವನ್ನು ವಿವಕ್ಷಾ ಮಾಡಿದರೆ ಯಜಮಾನನ ಬಲವು ಸಹಃ ಎನಿಸುತ್ತದೆ. (೨) ಸಹಸೇ = ಬಲಕ್ಕಾಗಿ, ಅಂದರೆ ಯಜಮಾನನಿಗೆ ಯಾವುದು ಇಷ್ಟವಾದ ಬಲವು (ಜ್ಞಾನಾದಿರೂಪವಾದುದು) ಇದೆಯೋ, ಅದನ್ನು ಕೊಡುವುದಕ್ಕಾಗಿಯೇ, (ಸೋಮವನ್ನು ಕುಡಿ.) (ಸಹಃ

ಶಬ್ದದಿಂದ ಶ್ರೀಹರಿಯ ಬಲವನ್ನು ಎಂದು ಅಂಗೀಕರಿಸಿಕೊಂಡು ಕೂಡಿಸುತ್ತಾರೆ.) ಆ ವಿಷ್ಣುವಿನಲ್ಲಿ ಯಾವುದು ಬಲಾಖ್ಯಗುಣವಿದೆಯೋ ಅದರ ವ್ಯಕ್ತಿಯು ಬಲಸಾಧ್ಯವಾದ ಅಭೀಷ್ಟ ಸಂಪಾದನೆಯು. ಅಂದರೆ ಭಕ್ತರಿಗೆ ಇಷ್ಟಪ್ರದಾನಕ್ಕೆ ಅನುಕೂಲವಾದ ವ್ಯಾಪರವು. ಏವಂಚ ನಿನ್ನ ಬಲವ್ಯಕ್ತವಾಗುವುದಕ್ಕಾಗಿಯೇ ಎರಡು ಏವ ಶಬ್ದಗಳಿಂದ ಎರಡು ಏವ ಶಬ್ದಗಳಿಂದ ಶ್ರೀ ಹರಿಯ ಬಲವು ಸೋಮದಿಂದ ವೃದ್ಧಿಯನ್ನು ಹೊಂದುವುದಲ್ಲ ಎಂದುಕ್ತವಾಯ್ತು. ಏವಂಚ ಯಜಮಾನನಿಗೆ ಇಷ್ಟವಾದ ಬಲವನ್ನು ಕೊಡುವುದಕ್ಕಾಗಿಯೇ ಸೋಮಪಾನವು, ತನ್ನ ಬಲವೃದ್ಧಿಗಾಗಿ ಅಲ್ಲ, ಅಥವಾ ಶ್ರೀ ವಿಷ್ಣುವಿನ ಬಲಾಭಿವ್ಯಕ್ತಿಯೇ ಸಹಃ ಎನಿಸುತ್ತದೆ. ವಿಷ್ಣುವಿಗೆ ಬಲವೃದ್ಧಿಯಲ್ಲ.) (೩) ಅದು ಹೇಗೆಂದರೆ) ಅದಃ =ಈ ನಾರಾಯಣಾಖ್ಯ ಮೂಲರೂಪವೂ, ಪೂರ್ಣಂ=ಜ್ಞಾನಾದಿ ಗುಣವ್ಯಕ್ತಿಯುಳ್ಳದ್ದು, ಇದಂ=ರಾಮಕೃಷ್ಣಾದಿ ಅವತಾರರೂಪವೂ, ಪೂರ್ಣಂ=ಪೂರ್ಣವು. ಪೂರ್ಣಾತ್ =ಪೂರ್ಣವಾದ ಮೂಲರೂಪದಿಂದ, ಪೂರ್ಣಂ=ಅವತಾರರೂಪವು, ಉದಚ್ಯತೇ =ಅಭಿವ್ಯಕ್ತವಾಗುತ್ತದೆ. (ಇಲ್ಲಿ ಪೂರ್ಣತ್ವವನ್ನು ಹೇಳಿದುದರಿಂದ ಶ್ರೀ ಹರಿಗೆ ನಿತ್ಯದಲ್ಲಿಯೂ ಅಭಿವ್ಯಕ್ತಿಯೇ ಉಕ್ತವಾಯ್ತು.) (೪) ಸರ್ವದಾ ಶ್ರೀ ಹರಿಯು ಹೇಯತ್ವವೂ ಉಪಾಧೇಯತ್ವವೂ ಇಲ್ಲದಿರುವ ಸರ್ವಗುಣಗಳಿಂದ ಪರಿಪೂರ್ಣನೆ. (೫) ಶ್ರೀ ಹರಿಯ ಗುಣಗಳಿಗೆ ವ್ಯಕ್ತಿಯೆಂದರೆ - ಅನುಗ್ರಹದ (ಪರರಿಗೆ ಅಭೀಷ್ಟವನ್ನು ಹೊಂದಿಸಿ ಕೊಡುವಿಕೆ.) ವ್ಯಕ್ತಿಯೇ. ಬೇರೆ ರೀತಿ ಸರ್ವಥಾ ಅಲ್ಲ. ಇದು ಮೊದಲಾದ ವೇದವಾಕ್ಯಗಳಿಂದ ಎಲ್ಲಿಯೂ ಶ್ರೀ ಹರಿಗೆ ವೃದ್ಧಿಯೆಂಬುವುದು ಸರ್ವಥಾ ಇಲ್ಲವೇ ಇಲ್ಲ. ||೬||

ಋ || (೧೬೫) ಅಯಂ ತೇ ಸ್ತೋಮೋ ಅಗ್ರಿಯೋ ಹೃದಿಸ್ಪೃಗಸ್ತು ಶಂತಮಃ । ಅಥಾ ಸೋಮಂ ಸುತಂ ಪಿಬ ||೭||

ಅ|| (ಇಂದ್ರನೇ) ಅಗ್ರಿಯಃ =ಶ್ರೇಷ್ಠವಾದ, ಶಂತಮಃ=ಶ್ರೋತೃಗಳಿಗೆ ಅತಿಶಯವಾಗಿ ಸುಖವನ್ನು ಕೊಡುವ, ಅಯಂಸ್ತೋಮಃ=ಈ ಸ್ತುತಿಯು, ತೇ=ನಿನಗೆ, ಹದಿಸ್ಪೃಕ್=ಹೃದಯಂಗಮವು, ಅಸ್ತು=ಆಗಲಿ. ಅಥ=ಆ ಮೇಲೆ, ಸ್ತುತಿಯಿಂದ ಪ್ರೀತನಾದ ನೀನು, ಸುತಂ=ಹಿಂಡಲ್ಪಟ್ಟ, ಸೋಮಂ=ಸೋಮವನ್ನು, ಪಿಬ=ಕುಡಿ. ||೭||

ಋ || (೧೬೬) ವಿಶ್ವಮಿತ್ಸವನಂ ಸುತಮಿಂದ್ರೋ ಮದಾಯ ಗಚ್ಛತಿ । ವೃತ್ರಹಾ ಸೋಮಪೀತಯೇ ||೮||

ಅ|| ವೃತ್ರಹಾ=ವೃತಾಸುರನನ್ನು ಸಂಹರಿಸಿದ, ಇಂದ್ರಃ=ಇಂದ್ರನು, (ಇಂದ್ರಪಕ್ಷದಲ್ಲಿ) ಮದಾಯ=ತನಗೆ ಹರ್ಷವಾಗುವುದಕ್ಕಾಗಿ, (ವಿಷ್ಣು ಪಕ್ಷದಲ್ಲಿ) ಮದಾಯ = ಯಜಮಾನನಿಗೆ ಸಂತೋಷವುಂಟಾಗುವುದಕ್ಕಾಗಿ, ಅಥವಾ ತನ್ನ ಗುಣಗಳ ಅಭಿವ್ಯಕ್ತಿಗಾಗಿ, ಸೋಮಪೀತಯೇ=ಸೋಮಪಾನ ಮಾಡುವುದಕ್ಕಾಗಿ, ವಿಶ್ವಮಿತ್ ಸವನಂ=ಎಲ್ಲಾ ಸವನಗಳಲ್ಲಿಯೂ, ಸುತಂ=ಸೋಮವನ್ನು ಕುರಿತು, ಗಚ್ಛತಿ ಹೊಂದುತ್ತಾನೆ. ||೮||

ಋ || (೧೬೭) ಸೇಮಂ ನಃ ಕಾಮಮಾ ಪೃಣ ಗೋಭಿರಶ್ವೈಃ ಶತಕ್ರತೋ। ಸ್ತವಾಮ ತ್ವಾ ಸ್ವಾಧ್ಯಃ ||೯||೩೧||೧೬||

ಅ|| ಶತಕ್ರತೋ=ಇಂದ್ರನೇ, ಸಃ=ಅಂತಹ ನೀನು, ನಃ =ನಮಗೆ, ಇಮಂ=ಗವಾದಿ ವಿಷಯಕವಾದ, ಕಾಮಂ=ಅಭಿಲಾಷೆಯನ್ನು, ಗೋಭಿಃ =ಗೋವುಗಳಿಂದಲೂ, ಅಶ್ವೈಃ=ಅಶ್ವಗಳಿಂದಲೂ, (ಗೋವುಗಳನ್ನು ಅಶ್ವಗಳನ್ನು

ಕೊಟ್ಟು) ಆ ಪೃಣ=ಪೃಣಪ್ರೀಣನೇ) ಸಂಪೂರ್ತೀಕರಿಸು. (ನಾವು) ಸ್ವಾಧ್ಯಃ : (ಸೂಲಜ್‌ಪೂರ್ವ ಕಾತ್‌ಧ್ಯೆ ಚಿಂತಾಯಾಂ) ಒಳ್ಳೇ ಬುದ್ಧಿಯುಳ್ಳವರು (ಒಳ್ಳೆ ಬುದ್ಧಿಯುಳ್ಳವರು (ಒಳ್ಳೇ ಜ್ಞಾನವುಳ್ಳವರು ಆಗಿ) ತ್ವಾ=ನಿನ್ನನ್ನು, ಸ್ತವಾಮ=ಸ್ತುತಿಸುತ್ತೇವೆ. ||೯||೩೧||೧೬||

ಭಾ || ಪೃಣ ಸಂಪೂರಯ ಸ್ವಾಧ್ಯಃ ಸುಧೀತಯ ಇತೀರಿತಾಃ ||೯||೩೧||೧೬||

ಅ|| ಪೃಣ, ಸ್ವಾಧ್ಯಃ ಈ ಎರಡು ಪದಗಳನ್ನು ವ್ಯಾಖ್ಯಾನ ಮಾಡುತ್ತಾರೆ.) ಪೃಣ=ಸಂಪೂರ್ಣೀಕರಿಸು. ಸ್ವಾಧ್ಯಃ=ಒಳ್ಳೇ ಬುದ್ಧಿಯುಳ್ಳವರು (ಸಮೀಚೀನವಾದ ಜ್ಞಾನವುಳ್ಳವರು) ಎಂದು ಹೇಳಲ್ಪಡುತ್ತಾರೆ. ||೯||೩೧||೧೬||

ಅವ || ೯ ಋಕ್ಕು, ಐಂದ್ರಾವರುಣ ಸೂಕ್ತವು. ಇಂದ್ರವರುಣದೇವತಾಕವು. ಗಾಯತ್ರೀ ಛಂದಸ್ಸು.

ಋ || (೧೬೮) ಇಂದ್ರಾವರುಣಯೋರಹಂ ಸಮ್ರಾಜೋರವ ಆ ವೃಣೇ । ತಾ ನೋ ಮೃಳಾತ ಈದೃಶೇ ||೧||

ಅ || ಅಹಂ = ನಾನು, ಸಮ್ರಾಜೋಃ = (ರಾಜೃದೀಪ್ತೌ) ಚೆನ್ನಾಗಿ ಪ್ರಕಾಶವನ್ನು ಹೊಂದಿಕೊಂಡಿರುವ, ಇಂದ್ರಾವರುಣಯೋಃ=ಇಂದ್ರವರುಣರು ಮಾಡತಕ್ಕ, ಅವಃ=ರಕ್ಷಣೆಯನ್ನು ಆ ವೃಣೇ=ಪ್ರಾರ್ಥಿಸುತ್ತೇನೆ. ತಾ=ಆ ಇಂದ್ರ ವರುಣರು, ನಃ=ನಮಗೆ, ಈದೃಶೇ =ಅವಿಕಾರದಿಂದಲೇ (ವಿಕಾರವಿಲ್ಲದೇನೇ) ಇರುವುದಕ್ಕಾಗಿ ಮೃಳಾತಃ = (ಮೃಡಸುಖನೇ) (ನಮ್ಮನ್ನು) ರಕ್ಷಿಸಲಿ. ||೧||

ಭಾ || ಅವಿಕಾರೇಣ ಸಂಸ್ಥಾನಮೀದೃಕ್ತ್ವಂ ನಾಮ ಕೀರ್ತಿತಂ ||೧||

ಅ|| ಈಗ ಹೇಗೆ ಇರುವುದೋ, ಹಾಗೆಯೇ ಸರ್ವದಾ ಇರುವಿಕೆಯು ಈದೃಕ್ತ್ವವು. ಅಂದರೆ ಯಾವುದೊಂದು ವಿಕಾರವಿಲ್ಲದೆ ಇರುವಿಕೆಯು ಎಂದು ಹೇಳಲ್ಪಟ್ಟಿದೆ. ||೧||

ಋ || (೧೬೯) ಗಂತಾರಾ ಹಿ ಸ್ಥೋಽವಸೇ ಹವಂ ವಿಪ್ರಸ್ಯ ಮಾವತಃ । ಧರ್ತಾರಾ ಚರ್ಷಣೀನಾಂ ||೨||

ಅ|| (ಇಂದ್ರ ವರುಣರೇ) ಹಿ=ಯಾವ ಕಾರಣದಿಂದ ಚರ್ಷಣೀನಾಂ = ಪ್ರಜೆಗಳನ್ನ, ಧರ್ತಾರೌ (ಧೃಧಾರಣೇ) ಧರಿಸಿಕೊಂಡಿರುವ, (ನೀವಿಬ್ಬರು) ಮಾವತಃ=ಜ್ಞಾನವುಳ್ಳ, ವಿಪ್ರಸ್ಯ=ಬ್ರಾಹ್ಮಣನ, ಹವಂ=ಆಹ್ವಾನವನ್ನು ಕುರಿತು, ಅವಸೇ=ಯಜಮಾನನ ರಕ್ಷಣೆಗಾಗಿ, ಗಂತಾರಾ =ಹೋಗುವವರು, ಸ್ಥಃ=ಆಗಿರುತ್ತೀರೋ, (ಆದ ಕಾರಣ ಬನ್ನಿರಿ.) (ಗಾಯತ್ರೀ ಛಂದಸ್ಸವು)

ಭಾ || ಮಾವತೋ ಜ್ಞಾನಯುಕ್ತಸ್ಯ ಪ್ರಜಾಶ್ಚರ್ಷಣಯಃ ಸ್ಮೃತಾಃ ||೨||

ಅ|| ಮಾವತಃ -ಜ್ಞಾನದಿಂದ ಕೂಡಿದವನ, ಎಂದರ್ಥವು. ಚರ್ಷಣಯಃ=ಪ್ರಜೆಗಳು, ಎಂದು ಹೇಳಿಕೊಳ್ಳಲ್ಪಡುತ್ತಾರೆ. ||೨||

ಋ || (೧೭೦) ಅನುಕಾಮಂ ತರ್ಪಯೇಥಾಮಿಂದ್ರಾವರುಣ ರಾಯ ಆ। ತಾ ವಾಂ ನೇದಿಷ್ಠಮೀಮಹೇ ||೩||

ಅ|| ಇಂದ್ರಾವರುಣಾ =ಇಂದ್ರ ವರುಣರೇ, (ನಮ್ಮನ್ನು) ರಾಯಃ -ದ್ರವ್ಯದ ವಿಷಯದಲ್ಲಿ, ಅನುಕಾಮಂ=ಯಥೇಷ್ಟವಾಗಿ, ಆ ತರ್ಪಯೇಥಾ =ತೃಪ್ತರನ್ನಾಗಿ ಮಾಡಿರಿ. (ನಾವು) ತಾ ವಾಂ=ಅಂತಹ ನಿಮ್ಮನ್ನು, ನೇದಿಷ್ಠಂ =ಶೀಘ್ರವಾಗಿ, ಈಮಹೇ =ಶರಣು ಹೊಂದುವೆವು. (ಗಾಯತ್ರೀ ಛಂದಸ್ಕವು) ||೩||

ಭಾ || ನೇದಿಷ್ಠತ್ವಂ ಸಮೀಪತ್ವಂ ಕ್ಷಿಪ್ರಂ ಶರಣಮೀಮಹೇ ||೩||

ಅ || ನೇದಿಷ್ಠತ್ವಂ = ಕಾಲತಃ ಸಾಮೀಪ್ಯವು, ಅಂದರೆ ಶೀಘ್ರದಲ್ಲಿ ಶರಣು ಹೊಂದುವೆವು. ||೩||

ಋ || (೧೭೧) ಯುವಾಕು ಹಿ ಶಚೀನಾಂ ಯುವಾಕು ಸುಮತೀನಾಂ + ಭೂಯಾಮ ವಾಜದಾವ್ನಾಂ ||೪||

ಅ || ಈ ಋಕ್ಕಿಗೆ ಗಾಯತ್ರಿಯ ವಿಶೇಷವಾದ ನಿಚೃ ಛಂದಸ್ಸು

ಅ|| (ಎಲೋ ಇಂದ್ರ ವರುಣರೇ ನಾವು) ಯುವಾಕು = ನಿಮ್ಮ ಸಂಬಂಧಿಗಳಾದ, ಶಚೀನಾಂ =ನೀವು ಬಹು ಸಾಧುಗಳು ಇಂತಹ ವಾಕ್ಯಗಳಿಗೆ, (ಹಾಗೆಯೇ) ಯುವಾಕು ಸುಮತೀನಾಂ =ನಿಮ್ಮ ಸಂಬಂಧಿಗಳಾದ ಬುದ್ಧಿಗಳಿಗೂ, ಭೂಯಾಮ=ಸರ್ವದಾ ವಿಷಯರಾಗುತ್ತೇವೆ. ಮತ್ತು ವಾಜದಾವ್ನಾಂ=ಅನ್ನವನ್ನು ಕೊಡುವವರಿಗೆ ಭೂಯಾಮ=ಸರ್ವದಾ ವಿಷಯರಾಗುತ್ತೇವೆ. (ಸರ್ವ ಪೂಜ್ಯರಾಗುತ್ತೇವೆ.) ಹಿ = ನಿಶ್ಚಯ ||೪||

ಭಾ || ಯುವಯೋರೇವ ವಾಕ್ಯಾನಾಂ ಸುಮತೀನಾಂ ಚ ಸರ್ವಶಃ । ಭವೇಮಾನ್ನಪ್ರದಾತೃಣಾಂ ಸರ್ವದಾ ವಿಷಯಾ ವಯಂ ||೪||

ಅ || ನಿಮ್ಮ ಸಂಬಂಧಿಗಳಾದ (ನೀವು ಯೋಗ್ಯರು ಎಂಬೀ) ವಾಕ್ಯಗಳಿಗೂ ಸದ್ಬುದ್ಧಿಗಳಿಗೂ ಸರ್ವಕಾಲದಲ್ಲಿಯೂ ವಿಷಯರಾಗುತ್ತೇವೆ. ಮತ್ತು ಅನ್ನವನ್ನು ಕೊಡುವವರಿಗೂ ನಾವು ಸರ್ವದಾ ವಿಷಯಕರಾಗುತ್ತೇವೆ. ಅಂದರೆ ಸರ್ವಪೂಜ್ಯರಾಗುತ್ತೇವೆ. ||೪||

ಋ || (೧೭೨) ಇಂದ್ರಃ ಸಹಸ್ರದಾವ್ನಾಂ ವರುಣಃ ಶಂಸ್ಯಾನಾಂ । ಕ್ರತುರ್ಭವತ್ಯುಕ್ಥ್ಯಃ ||೫||೩೨||

ಅ || (ಈ ಋಕ್ಕಿಗೆ ಗಾಯತ್ರಿ (ವಿಶೇಷವಾದ ಪಾದನಿಚೃತ್ ಬ್ರಸೀಯಸೀ ಎಂದಾಗಲೀ) ಛಂದಸ್ಸು) ಇಂದ್ರಃ =ಇಂದ್ರನು, ಸಹಸ್ರದಾವ್ನಾಂ = ಬಹಳವಾಗಿ ದಾನ ಮಾಡುವವರಿಗೂ, ಶಂಸ್ಯಾನಾಂ =ಸ್ತುತ್ಯರಾದವರಿಗೂ, ಕ್ರತುರ್ಭವತಿ = ಕ್ರತುವಿನಂತೆ ಆಗುತ್ತಾನೆ. (ಅಂದರೆ ಕ್ರತುವು ಕರ್ಮಗಳ ಮಧ್ಯದಲ್ಲಿ ಹೇಗೆ ಪ್ರಧಾನವೋ ಹಾಗೆಯೇ ಪ್ರಧಾನನು.) ಉಕ್ಥ್ಯಃ =ಮಂತ್ರ ವಿಶೇಷಗಳಲ್ಲಿ ಸ್ತುತ್ಯನು ಆಗಿರುತ್ತಾನೆ. (ಅಂದರೆ ಮಂತ್ರವಿಶೇಷಗಳಿಂದ ಸ್ತುತ್ಯನೂ ಆಗಿರುತ್ತಾನೆ.) ಹೀಗೆಯೇ ವರುಣೋಪಿ=ವರುಣನೂ ಕೂಡ ಪ್ರಧಾನನೂ ಸ್ತುತ್ಯನೂ ಆಗಿರುತ್ತಾನೆ. ||೫||೩೨||

ಭಾ ॥ ಕ್ರತುಃ ಪ್ರಧಾನ ಉಕ್ಥ್ಯಶ್ಚ ಶಸ್ತ್ರೈಃ ಸ್ತುತ್ಯೋ ವಿಶೇಷತಃ ॥೫॥೩.೨॥

ಅ॥ ಕ್ರತುವು ಹೇಗೆ ಕರ್ಮಗಳ ಮಧ್ಯದಲ್ಲಿ ಪ್ರಧಾನವೋ, ಹಾಗೆಯೇ ಇಂದ್ರನು ಪ್ರಧಾನನು ಉಕ್ಥ್ಯಶ್ಚ =ಮಂತ್ರ ವಿಶೇಷಗಳಿಂದ ವಿಶೇಷತಃ ಸ್ತುತ್ಯನು. ತಸ್ಮಾದ್ಭೂಮಾ ಗುಣತೋ ವೈ ವಿಶಿಷ್ಟೋ ಯಥಾಕ್ರತುಃ ಕರ್ಮಮಧ್ಯೇ ವಿಶಿಷ್ಟಃ ॥ ಎಂಬ ಶ್ರುತಿಯು ಸೂಚಿತವಾಯ್ತು ॥೫॥೩.೨॥

ಋ ॥ (೧೭೩) ತಯೋರಿದವಸಾ ವಯಂ ಸನೇಮ ನಿಚ ಧೀಮಹಿ । ಸ್ಯಾದುತ ಪ್ರರೇಚನಂ ॥೬॥

ಅ ॥ ವಯಂ =ನಾವು, ತಯೋರಿತ್ = ಆ ಇಂದ್ರ ವರುಣರದ್ದೇ ಆದ, ಅವಸಾ =ರಕ್ಷಣೆಯಿಂದ, ಸನೇಮ = (ಷಣ ಸಂಭಕ್ತೌ) (ದ್ರವ್ಯವನ್ನು ಅಥವಾ ಜ್ಞಾನವನ್ನು) ಸದಾ ಹೊಂದುವೆವು. ಮತ್ತು ನಿ ಧೀಮಹಿ ಚ - ಭೂಮಿಯನ್ನು ಅಗೆದು ದ್ರವ್ಯವನ್ನು ಸ್ಥಾಪಿಸುತ್ತೇವೆ. ಅಥವಾ ಸದಾ ಆ ಇಂದ್ರ ವರುಣರನ್ನು (ಧ್ಯೈಚಿಂತಾಯಾಂ) ಧ್ಯಾನಿಸುವೆವು. (ನಮಗೆ) ಪ್ರರೇಚನಂ = (ರಿಚವಿಯೋಜನ ಸಂಪರ್ಚನಯೋಃ) ವಿಸರ್ಜನವು, ತನ್ನಿಂದ ಬಿಡುಗಡೆಯು) ಸ್ವತ್ವತ್ಯಾಗವು, ಅಂದರೆ ಅರ್ಥಿಗಳಿಗೆ ದಾನವು, ಸ್ಯಾದುತ=ಆಗಿಯೇ ಆಗುವುದು. ॥೬॥

ಭಾ ॥ ರಕ್ಷಣೇನ ತಯೋರ್ವಿತ್ತಂ ಜ್ಞಾನಂ ವಾ ಪ್ರಾಪ್ನುಮಸ್ಸದಾ । ನಿಧೀಮಹಿ ಚ ದಾನಂ ಚ ಸ್ಯಾದೇವಾಸ್ಮಾಕಮರ್ಥಿನೇ ॥೬॥

ಅ॥ ಆ ಇಂದ್ರವರುಣರು ಮಾಡತಕ್ಕ ರಕ್ಷಣೆಯಿಂದ ಸದಾ ದ್ರವ್ಯವನ್ನು ಜ್ಞಾನವನ್ನಾಗಲೀ ಹೊಂದುವೆವು. ಭೂಮಿಯನ್ನು ಅಗೆದು ದ್ರವ್ಯವನ್ನು ಸ್ಥಾಪಿಸುವೆವು. ಯಾಚಿಸುವವರಿಗೆ ದಾನವು ನಮಗೆ ಆಗಲೇ ಬೇಕು (ಯಥೇಷ್ಟ ದಾನಕೊಡುವಂತೆ ಆಗಬೇಕು.) ॥೬॥

ಋ ॥ (೧೭೪) ಇಂದ್ರಾವರುಣ ವಾಮಹಂ ಹುವೇ ಚಿತ್ರಾಯ ರಾಧಸೇ ॥ ಅಸ್ಮಾನ್ತ್ಸು ಜಿಗ್ಯುಷಸ್ಕೃತಂ ॥೭॥

ಅ॥ ಇಂದ್ರಾವರುಣಾ =ಇಂದ್ರವರುಣರೇ, ಅಹಂ =ನಾನು, ಚಿತ್ರಾಯ =ಮಂಗಲಕ್ಕಾಗಿ, ರಾಧಸೇ = ಸಂಸಿದ್ಧಿಗಾಗಿ, ವಾಂ=ನಿಮ್ಮಿಬ್ಬರನ್ನು, ಹುವೇ =ಕರೆಯುತ್ತೇನೆ (ನೀವಿಬ್ಬರು) ಅಸ್ಮಾನ್ =ನಮ್ಮನ್ನು ಸುಜಿಗ್ಯುಷಃ=(ಜಿಜಯೇ) ಸರ್ವತ್ರ ವಿಜಯವನ್ನು ಹೊಂದುವವರನ್ನಾಗಿ, ಕೃತಂ=ಮಾಡಿರಿ ॥೭॥

ಭಾ ॥ (೧) ಹ್ರಸ್ವತಾ ಸಂಹಿತಾಯಾಂತು ದೇವತೈಕ್ಯ ಪ್ರದರ್ಶಿನೀ ॥ (೨) ಸ್ವರೂಪೈಕ್ಯಂ ಹರೌ ತತ್ತು ಮತ್ಯೈಕ್ಯಂ ಭಿನ್ನಯೋರಪಿ ॥೭॥

ಅ ॥ (೧) ಇಲ್ಲಿ ಇಂದ್ರವರುಣ ಎಂದು ಸಂಹಿತೆಯಲ್ಲಿ ಹ್ರಸ್ವಾಂತವಾಗಿ ಪಠಿತವಾಗಿದೆ. (ಪದಚ್ಛೇದವಾದರೂ ಇಂದ್ರಾವರುಣಾ ಎಂದು ದೀರ್ಘಾಂತರಾಗಿ ಭೇದಿಸಲ್ಪಡುತ್ತದೆ.) ಅದಾದರೂ ದೇವತೆಗಳಿಗೆ ಐಕ್ಯವನ್ನು ತೋರಿಸುತ್ತದೆ. (೨) ಮುಖ್ಯ ಪ್ರತಿಪಾದ್ಯ, ಅಮುಖ್ಯ ಪ್ರತಿಪಾದ್ಯ ಭೇದದಿಂದ ಆ ವಾಕ್ಯವನ್ನು ತೋರಿಸುತ್ತಾರೆ.) ಶ್ರೀ ಹರಿಯನ್ನು ಇಟ್ಟುಕೊಳ್ಳುವಾಗ

ಇಂದ್ರಾವರುಣ ಎಂಬ ಹ್ರಸ್ವಾಂತ ಪದದಿಂದ ಪ್ರಕಾಶಿತವಾದ ಐಕ್ಯವಂಎಂದರೆ ಮುಖ್ಯತಃ ಭಗವಂತನ ಸ್ವರೂಪಗಳಿಗೆ ಐಕ್ಯವೆಂದೂ, ಸ್ವರೂಪತಃ ಭಿನ್ನರಾದ ಇಂದ್ರವರುಣರನ್ನು ಇಟ್ಟುಕೊಳ್ಳುವಾಗ ಅವರಿಗೆ ಮತ್ತೈಕ್ಯವೆಂದೂ ತಿಳಿದುಕೊಳ್ಳಬೇಕು. ||೭||

ಋ || (೧೭೫) ಇಂದ್ರಾವರುಣ ನೂ ನು ವಾಂ ಸಿಷಾಸಂತೀಷು ದೀಷ್ವಾ । ಅಸ್ಮಭ್ಯಂ ಶರ್ಮ ಯಚ್ಛತಂ ||೮||

ಅ || ಇಂದ್ರಾವರುಣಾ = ಎಲೋ ಇಂದ್ರ ವರುಣರೇ, ನು = ಈಗ, ವಾಂ =ನಿಮ್ಮನ್ನು, ನು= (ಣುಸ್ತುತೌ) ಸ್ತುತಿಸುತ್ತೇವೆ. ಧೀಷು =ನಮ್ಮ ಬುದ್ಧಿಗಳು, ನಿಮ್ಮನ್ನು ಆಸಿಷಾಸಂತೀಷು =ಚೆನ್ನಾಗಿ ಪ್ರಕಾಶಿಸುತ್ತಿರಲು, ಅಸ್ಮಭ್ಯಂ = ನಮಗೆ, ವಾಂ=ನೀವಿಬ್ಬರು, ಶರ್ಮ=ಸುಖವನ್ನು, ಯಚ್ಛತಂ =ಕೊಡಿರಿ. (ಅಂದರೆ ನಿಮ್ಮನ್ನು ನಮ್ಮ ಬುದ್ಧಿಗಳು ಪ್ರಕಾಶಗೊಳಿಸುವುದರಿಂದ ನಮಗೆ ಸುಖವನ್ನು ಕೊಡಿರಿ.) ||೮||

ಭಾ || (೧) ಅದ್ಯ ವಾಂ ನುನುಮೋ ಲೋಪಃ ಸ್ವಾತಂತ್ರ್ಯಾರ್ಥೇಹಿ ಸೂತ್ರತಃ || (೨) ಸಾಧಯಂತೀಷು ಧೀಷ್ವೇವ ಶರ್ಮಾಸ್ಮಭ್ಯಂ ಪ್ರಯಚ್ಛತಂ ||೮||

ಅ || (೧) (ನು = ಈಗ, ನಿಮ್ಮಿಬ್ಬರನ್ನು ನು = ಸ್ತುತಿಸುತ್ತೇವೆ. (ಇಲ್ಲಿ ಮೆಸ್ ಪ್ರತ್ಯಯವು ಕಾಣುವುದಿಲ್ಲ. ನ ಕೇವಲಾ ಪ್ರಕೃತಿಃ ಪ್ರಯೋಕ್ತವ್ಯಾ ನಾಪಿ ಪ್ರತ್ಯಯಃ ಎಂದು ನಿಷೇಧವಿದ್ದ ಪ್ರಯುಕ್ತ ಧಾತು ಮಾತ್ರಕ್ಕೆ ಪ್ರಯೋಗವು ಕೂಡುವುದಿಲ್ಲ, ಭೂಃ ಶ್ರೀಃ ಇತ್ಯಾದಿಗಳಂತೆ ಕರ್ತೃಕಾರಕಾದಿ ಪ್ರತೀತಿಯೂ ಇಲ್ಲಿ ತೋರುವುದಿಲ್ಲ. ಆದ ಕಾರಣ ನುಮಃ ಎಂದು ಹೇಳದೆ ನು ಎಂದಿಷ್ಟು ಮಾತ್ರ ಹೇಳಿದ್ದು ಹೇಗೆ ? ಎಂದರೆ) ಸ್ತೋತ್ರಾದಿಗಳನ್ನು ಮಾಡಲಿಕ್ಕೆ ನಮಗೆ (ಸ್ತುತಿಸತಕ್ಕ ಜೀವರಿಗೆ) ಕರ್ತೃತ್ವ (ಸ್ವಾತಂತ್ರ್ಯ)ವಿಲ್ಲ, ಪರಮೇಶ್ವರನಾದ ನಿನಗೇನೇ ಸ್ವಾತಂತ್ರ್ಯವು, ಎಂದು ತಿಳಿಸುವುದಕ್ಕಾಗಿ ಲೋಪಃ ಸ್ವಾತಂತ್ರ್ಯಾರ್ಥೇ ಎಂದ ಚಿರಂತನ ವ್ಯಾಕರಣ ಸೂತ್ರದಿಂದ, ಣುಸ್ತುತೌ ಕರ್ತ್ರರ್ಥಕಲಾದೇಶವಾದ ಮಸ್ ಪ್ರತ್ಯಯಕ್ಕೆ ಲೋಪ ಮಾಡಿ ನು ಎಂಬ ಧಾತು ಮಾತ್ರ ನಿರ್ದೇಶವು. ಹಿ ಶಬ್ದದಿಂದ ಈ ಅರ್ಥವು ಅನುಭವ ಸಿದ್ಧವೆಂದುಕ್ತವಾಯ್ತು. (ಮಸ್ ಪ್ರತ್ಯಯದಿಂದ ಸ್ತುತಿಸತಕ್ಕ ಜೀವನಿಗೆ ಸ್ವಾತಂತ್ರ್ಯರೂಪ ಕರ್ತೃತ್ವವನ್ನು ಹೇಳಬೇಕು. ಮಸ್ ಎಂಬ ಪ್ರತ್ಯಯವನ್ನು ಲೋಪ ಮಾಡಿರುವುದರಿಂದ ಕರ್ತೃತ್ವ (ಸ್ವಾತಂತ್ರ್ಯ)ಕ್ಕೆ ಲೋಪವು. (ಕರ್ತೃತ್ವವಿಲ್ಲವೆಂದೂ ಜ್ಞಾಪಿತವಾಯ್ತು.) (೨) ನಮ್ಮ ಬುದ್ಧಿಗಳು ನಿಮ್ಮನ್ನು ಪ್ರಕಾಶಗೊಳಿಸಿದರೇನೇ ನಮಗೆ ಸುಖವನ್ನು ಕೊಡಿರಿ. (ಅಂದರೆ ಯಾವ ಕಾರಣದಿಂದ ನಮ್ಮ ಬುದ್ಧಿಗಳು ನಿಮ್ಮನ್ನು ಪ್ರಕಾಶಗೊಳಿಸುತ್ತವೋ ಆದ ಕಾರಣ ಸುಖವನ್ನು ಕೊಡಿರಿ.) ||೮||

ಋ || (೧೭೬) ಪ್ರ ವಾಮಶ್ನೋತು ಸುಷ್ಟುತಿರಿಂದ್ರಾವರುಣ ಯಾಂ ಹುವೇ । ಯಾಮೃಧಾಥೇ ಸಧಸ್ತುತಿಂ ||೯||೩೩||೧೭||೪||

ಅ || ಇಂದ್ರಾವರುಣಾ = ಇಂದ್ರವರುಣರೇ, (ನಾನು) ಯಾಂ =ಯಾವ ಒಳ್ಳೇ ಸ್ತೋತ್ರವನ್ನು, ಹುವೇ (ಹ್ವೇಞ್ ಸ್ಪರ್ಧಾಯಾಂ) ಕರೆಯುತ್ತೇನೋ, (ಸಂಪಾದಿಸುತ್ತೇನೋ) ಅಥವಾ ಯಾವ ಸ್ತುತಿಯಿಂದ ನಿಮ್ಮನ್ನು ಕರೆಯುತ್ತೇನೋ, ಸುಷ್ಟುತಿಃ = ಅಂತಹ ಶೋಭನವಾದ ಸ್ತುತಿಯು, ವಾಂ =ನಿಮ್ಮನ್ನು ಪ್ರ ಅಶ್ನೋತು = (ಅಶೂ ವ್ಯಾಪ್ತೌ) ಚೆನ್ನಾಗಿ ಹೊಂದಲಿ.

(ಅಂತಹ ಸ್ತೋತ್ರದಲ್ಲಿಯೂ ನನಗೆ ಸರ್ವಥಾ ಸ್ವಾತಂತ್ರ್ಯವಿಲ್ಲ) ಮತ್ತೆ ಯಾಂ ಸಧಸ್ತುತಿಂ - ಯಾವ ಅರ್ಥ ಸಹಿತವಾದ ಸ್ತೋತ್ರವನ್ನು, (ಯಥಾಸ್ಥಿತವಾದ ಸೋತ್ರವನ್ನು) (ನನಗೆ ಯಾವಾಗಲೂ) ಋಧಾಥೇ - (ಋಧು ವೃದ್ಧೌ) ಅಭಿವೃದ್ಧೀಕರಿಸುತ್ತೀರೋ, ಪ್ರವರ್ತಿಸುತ್ತೀರೋ (ಅಂತಹ ಸ್ತೋತ್ರವು ನಿಮ್ಮನ್ನು ಹೊಂದಲಿ.) ||೯||

ಭಾ || ಯಥಾಸ್ಥಿತಸ್ತುತಿಂ ಯಾಂ ಚ ವರ್ಧಯೇಥೇ ಸದೈವ ಮೇ ||೯||೩||೧೭||೪||

ಆ || ಯಾವ ಯಥಾಸ್ಥಿತವಾದ ಸ್ತೋತ್ರವನ್ನು ಯಾವಾಗಲೂ ಅಭಿವೃದ್ಧೀಕರಿಸುತ್ತೀರೋ, (ಅಂತಹ ಸ್ತೋತ್ರವು ನಿಮ್ಮನ್ನು ಹೊಂದಲಿ.) ||೯||೩||೧೭||೪||

ಅವ || ಈ ಸೂಕ್ತದಲ್ಲಿ 9 ಋಕ್ಕುಗಳು ೨ ವರ್ಗ, ಗಾಯತ್ರೀ ಛಂದಸ್ಸು ೧, ೨, ೩, ೪, ೫ ಇವುಗಳಿಗೆ ಬ್ರಾಹ್ಮಣಸ್ಪತ್ಯರು, ೪, ೫ಕ್ಕೆ ಇಂದ್ರ ಸೋಮರೂ ದೇವತೆಗಳು. ೫ಕ್ಕೆ ದಕ್ಷಿಣೆಯೂ ದೇವತೆಯು. ೬, ೭, ೮, ೯ ಗಳಿಗೆ ಸಾದಸ ಸ್ಪತ್ಯರು ದೇಪತೆಗಳು, ೯ಕ್ಕೆ ನಾರಾಂಶಸಿಯೂ ದೇವತೆಯು

ಋ || (೧೭೭) ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ | ಕಕ್ಷೀವಂತಂ ಯ ಔತಿಜಃ ||೧||

ಅ || ಬ್ರಹ್ಮಣಸ್ಪತೇ = ಶೋಭನ ವಚನಗಳಿಗೆ ಅಧಿಪತಿಯಾದ, ವೇದಗಳಿಗೆ ಸ್ವಾಮಿಯಾದ, ಎಲೋ ವಿಷ್ಣುವೇ, ಎಲೋ ವಾಯುವೇ, (ನೀನು ನಮ್ಮನ್ನು ಕುರಿತು) (ಕೃಪೆಯಿಂದ) ಯಃ=ಯಾವ ಶಬ್ದವು, (ಮೊದಲು) ಕಕ್ಷೀವಂತ = ಕಕ್ಷೀವನ್ನಾಮಕ ಋಷಿಯನ್ನು (ನನ್ನನ್ನು) (ಕುರಿತು ಕೊಡಲ್ಪಟ್ಟದೋ) ಅಂತಹ, ಸೋಮಾನಂ ಸ್ವರಣಂ = (ಸ್ವೃಶಬ್ದೋಪತಾಪಯೋಃ) ಸೌಮ್ಯ ಶಬ್ದವನ್ನು ಕೃಣುಹಿ=ಮಾಡು, ಯಃ ಔತಿಜಃ=ಯಾರು ಉಶಿಕ್ ಎಂಬುವನ ಪುತ್ರನೋ, (ಆತನೇ ಕಕ್ಷೀವಾನ್ ಎಂಬ ಋಷಿಯು) ||೧||

ಭಾ || (೧) ಸೌಮ್ಯಂ ಶಬ್ದಂ ಕೃಣು ತ್ವಂ ನೋ ವಿಷ್ಣೋ ವಾಯೋ ಸುವಾಕ್ಪತೇ || ಕಕ್ಷೀವಂ ತಂ ಪ್ರತಿ ಹಿಯೋ ದತ್ತೋಯಃ ಸ ಉಶಿಕ್ಸುತಃ | (೨) ವಿವಕ್ಷಿತೋ ಮುನಿಸ್ಸೋಽಪಿ ತಸ್ಮಾದಥೋಽಪಿಮಾಂ ಪ್ರತಿ ||೧||

ಆ || (೧) ವೇದಗಳಿಗೆ ಅಧಿಪತಿಯಾದ ಶ್ರೀ ವಿಷ್ಣುವೇ, ಎಲೋ ವಾಯುವೇ, ನೀನು ನಮ್ಮನ್ನು ಕುರಿತು ಕೃಪೆಯಿಂದ ಯಾವ ಶಬ್ದವು ಮೊದಲು ಕಕ್ಷೀವನ್ನಾಮಕಋಷಿಯನ್ನು ಕುರಿತು ಕೊಡಲ್ಪಟ್ಟದೋ ಉಪದೇಶಿಸಿ ಯದೋ ಅಂತಹ ಸೌಮ್ಯಂ (ಅತಿ ಸುಂದರವಾದ) ಶಬ್ದವನ್ನು ಮಾಡು. ಯಾವನು ಉಶಿಕ್ ಎಂಬ ಋಷಿಯ ಮಗನೋ ಆತನೇ ಕಕ್ಷೀವಾನ್ ಎಂಬ ಋಷಿಯು. (೨) (ಮಾಂ) ಎಂದು ಹೇಳದೆ ಕಕ್ಷಿವಂ ತಂ - ಎಂದು ಪರೋಕ್ಷವಾಗಿ ಹೇಳಿದುದರಿಂದ ಮೇಧಾತಿಥಿಯು ಬೇರೆ, ಕಕ್ಷಿವಂತನು ಬೇರೆ ಎಂಬ ಶಂಕೆಯನ್ನು ಪರಿಹರಿಸುತ್ತಾರೆ.) ಯಾವ ಮೇಧಾತಿಥಿಯು ಎಂಬ ಮುನಿಯು ಇಲ್ಲಿ ವಿವಕ್ಷಿತನೋ, ಆತನೇ ಕಕ್ಷೀವಾನ್ ಎಂಬವನೂ ಕೂಡ. ಆದ ಕಾರಣ ಕಕ್ಷೀವಂತಂ ಎನ್ನುವುದಕ್ಕೆ ಮಾಂಪ್ರತಿ ನನ್ನನ್ನು ಕುರಿತು ಎಂದೇ ಅರ್ಥವು ಆಗುತ್ತದೆ.

ವಿ || ಸೋಮ ಶಬ್ದಕ್ಕೆ ಸೌಮ್ಯತ್ವಾರ್ಥಕತ್ವವೂ ಸೌಮ್ಯ ಶಬ್ದಕ್ಕೆ ಸೌಂದರ್ಯಾರ್ಥಕತ್ವವೂ ಅಭಿಯುಕ್ತತಮರಾದ

ಆಚಾರ್ಯರ ಉಕ್ತಿ ಬಲದಿಂದ ಸಿದ್ಧವಾಗುತ್ತದೆ. ಮಧ್ವಮುನಿಗಳು ವಾಯುದೇವರ ಅವತಾರಭೂತರಾದುದರಿಂದ ಅಭಿಯುಕ್ತತಮರೆಂದು ಸಿದ್ಧಿಸುವುದು. ವಾಯುದೇವರ ಅವತಾರಭೂತರೆನ್ನುವುದು.

(1) ಯದೀಮನು ಪ್ರದಿವೋ ಮಧ್ವ ಅಧವೇ ಗುಹಾನಂತಂ ಮಾತರಿಶ್ವಾ ಮಥಾಯತಿ ಇತ್ಯಾದಿ ಶ್ರುತಿ, (೬) ಏವಂ ಧರ್ಮೇಷು ನಷ್ಟೇಷು ಶಾಸ್ತ್ರೇಷು ಚ ಕಲೌಯುಗೇ। ದೇವೈರ್ವಿಜ್ಞಾಪಿತೋ ವಿಷ್ಣುಃ ವಾಯುಮಾಜ್ಞಾಪಯಿಷ್ಯತಿ। ಉದ್ಧರಸ್ವ ಮಹಾಬಾಹೋ ಮಮ ಧರ್ಮಾನ್ ಸನಾತನಾನ್। ಇತ್ಯಾಜ್ಞಪ್ತೋ ಭಗವತಾ ಕಲೌ ವಾಯುರ್ಭವಿಷ್ಯತಿ। ಮಧ್ವನಾಮ್ನಾ ಯತಿರಸೌ ಸಚ್ಛಾಸ್ತ್ರಾಣಿ ಕರಿಷ್ಯತಿ। ಗೀತಾಯಾಶ್ಚೋಪನಿಷದಾಂ ಭಾಷ್ಯಾಣಿ ಚ ಕರಿಷ್ಯತಿ। ನಿರಸಿಷ್ಯತಿ ಪಾಷಂಡಾನ್ ದುಶ್ಶಾಸ್ತ್ರಾಣಿ ಮಹಾಮತಿಃ। ಸ್ಥಾಪಯಿಷ್ಯತಿ ಸದ್ಧರ್ಮಾನ್ ಸಚ್ಛಾಸ್ತ್ರಂ ವ್ಯಾಕರಿಷ್ಯತಿ। ಶ್ರೋಷ್ಯಂತಿ ಮುನಯಸ್ಸರ್ವೇ ಶುಕಾದ್ಯಾ ದೇವರೂಪಿಣಃ॥ ಇತಿ ಕೂರ್ಮಪುರಾಣದಲ್ಲಿದ್ದ ಶ್ರೀ ಮುಷ್ಣ ಮಾಹಾತ್ಮ್ಯಗತ ವಚನ, (3) ಕಲೌ ಪಾಷಂಡಭೂಯಿಷ್ಠೇ ಧರ್ಮಲೇಶವಿವರ್ಜಿತೇ। ವೈವಸ್ವತೇಂತರೇ ಪ್ರಾಪ್ತೇ ಹ್ಯಷ್ಟಾವಿಂಶೇ ಕಲೌ ಯುಗೇ। ತ್ರಿಪುರಾ ಭಾರತೇ ಯುದ್ಧೇ ನಿಹತಾ ರಾಕ್ಷಸಾ ಭುಮಿ। ಯದಾ ಪ್ರವರ್ತಯಿಷ್ಯಂತಿ ಮಾರ್ಗಂ ಪಾಷಂಡಗೋಚರಂ। ತದಾ ಸಂಪ್ರಾರ್ಥಿ ತೋ ದೇವೈಃ ಭಗವಾನ್ ಹರಿರೀಶ್ವರಃ। ತತ್ಕರ್ಮರಕ್ಷಂ ವಿನತಮಾತರಿಶ್ವಾನಮಾದಿಶತ್। ವಾಯುಸ್ತು ಯತಿರೂಪೇಣ ಜನಿಷ್ಯತಿ ಕಲೌಯುಗೇ। ತ್ರಿಪುರಾ ಭಾರತೇ ಯುದ್ಧೇ ನಿಹತಾ ರಾಕ್ಷಸಾ ಭುಮಿ। ಯದಾ ಪ್ರವರ್ತಯಿಷ್ಯಂತಿ ಮಾರ್ಗಂ ಪಾಷಂಡಗೋಚರಂ। ತದಾ ಸಂಪ್ರಾರ್ಥಿ ತೋ ದೇವೈಃ ಭಗವಾನ್ ಹರಿರೀಶ್ವರಃ। ತತ್ಕರ್ಮರಕ್ಷಂ ವಿನತಮಾತರಿಶ್ವಾನಮಾದಿಶತ್। ವಾಯುಸ್ತು ಯತಿರೂಪೇಣ ಜನಿಷ್ಯತಿ ಕಲೌಯುಗೇ। ಸ ದಶ ಪ್ರಮತಿರ್ಭೂತ್ವಾ ಕಲೌ ಧರ್ಮಾನ್ ವದಿಷ್ಯತಿ। ಕೃತ್ವಾ ತಚ್ಛಾಸ್ತ್ರ ಸಂದರ್ಭಂ ಸ್ಥಾಪಯಿಷ್ಯತಿ ಸತ್ಪಥಃ। ಇತಿ ಸ್ಕಾಂದ ಪುರಾಣದಲ್ಲಿದ್ದ ಶ್ರೀ ಮುಷ್ಣಮಾಹಾತ್ಮಗತ ವಚನ, (೫) ತ್ವಂಚಾಪಿಗಚ್ಛ ಶೈಲೇಂದ್ರಂ ಪೂರ್ವಂ ಸ್ವರ್ಣಮುಖೀತಟೇ ಯತ್ರ ಬ್ರಹ್ಮಶಿಲಾ ನಾಮ ಸರಿನ್ಮಧ್ಯೇಽವ ಶಿಷ್ಯತೇ। ಅಗಸ್ತ್ಯತಪಸಾ ಪಶ್ಚಾದ್ಗಯಾಸಾನ್ನಿಧ್ಯ ಮತ್ರವೈ। ಪಾದಾ ಈಶಾನ ವಿಷ್ಣ್ವಾದಿದೇವತಾಸ್ತತ್ರ ಸಂತಿಹಿ। ಯತಿರೂಪೋ ಮಾತರಿಶ್ವಾ ಅಷ್ಟಾವಿಂಶತಿಮೇ ಕಲೌ। ಯಜತ್ರಾಯಂ ವದಂತ್ಯತ್ರ ಮಧ್ವನಾಮ್ನಾ ಪರಂ ವಿಭುಂ। ತವೈವ ತಪಸಾ ಪುಣ್ಯೇ ಪ್ರೀತ್ಯಾಚಾಗಸ್ತ್ಯಯೋಗಿನಃ। ತತ್ಸ್ಥಾಪಿತಾಲಯೇ ಪುಣ್ಯೇ ಚಾತುರ್ಮಾಸ್ಯಂ ಕರಿಷ್ಯತಿ। ಶುಕಃ ಶ್ರೋಷ್ಯತಿ ಸಚ್ಛಾಸ್ತ್ರಂ ಪದ್ಮತೀರ್ಥಾದಿಕೈರ್ಯುತಃ। ಇತಿ ಬ್ರಹ್ಮ ಪುರಾಣಸ್ಥ ವೆಂಕಟಗಿರಿ ಮಾಹಾತ್ಮ್ಯಗತ ವಚನ, ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗುತ್ತದೆಂದು ತಿಳಿಯಬೇಕು.) ॥೧॥

ಋ ॥ (೧೭೮) ಯೋ ರೇವಾನ್ಯೋ ಅಮೀವಹಾ ವಸುವಿತ್ಪುಷ್ಟಿವರ್ಧನಃ। ಸನಃ ಸಿಷಕ್ತು ಯಸ್ತುರಃ ॥೨॥

ಅ ॥ ಯಃ - ಯಾವಾತನು, ರೇವಾನ್ =ದ್ರವ್ಯವುಳ್ಳವನೋ, ಯಃ =ಯಾವಾತನು, ಅಮೀವಹಾ = ರೋಗ ಪರಿಹಾರಕನೋ, ವಸುವಿತ್ =ಜ್ಞಾನಾಖ್ಯ ವಸ್ತುವನ್ನು ತಿಳಿದವನೋ, (ತಿಳಿಯಲರ್ಹವಾದುದನ್ನು ಎಲ್ಲವನ್ನು ತಿಳಿದವನೋ, ಯಾವಾತನು, ಪುಷ್ಟಿವರ್ಧನಃ = (ಪುಷ್ಟಿಂ ವರ್ಧಯತಿ) ಭಕ್ತರಿಗೆ ಪುಷ್ಟಿಯನ್ನು ಅಭಿವೃದ್ಧೀಕರಿಸುವನೋ, ಯಾವಾತನು, ತುರಃ = (ತುರತ್ವರಣೇ) ವೇಗರೂಪ ಪ್ರವೃತ್ತಿನಿಮಿತ್ತದಿಂದ ತುರಶಬ್ದ ವಾಚ್ಯನೋ, ಸಃ=ಅಂತಹ ಶ್ರೀ ವಿಷ್ಣುವು ವಾಯುವಾಗಲೀ, ನಃ =ನಮ್ಮನ್ನು, ಸಿಷಕ್ತು = (ಪಚಸಮವಾಯೇ) ಕೂಡಲಿ. (ಅಂದರೆ ನಮ್ಮಿಂದ ಸಂಯುಕ್ತನಾಗಲಿ.) (ನಮ್ಮ ಬುದ್ಧಿಗೆ ವಿಷಯನಾಗಲಿ) ॥೨॥

ಭಾ ॥ ವಿತ್ತವಾನ್ ರೋಗಹಾ ಜ್ಞಾನವೇತ್ತಾಽಸ್ಮಾಭಿಃ ಸಯುಗ್ಭವೇತ್ । ತುರೋ ವೇಗಾ ದ್ಧರಿರ್ವಾಯುಃ ॥೨॥

ಅ ॥ ಯಾವಾತನು ದ್ರವ್ಯವುಳ್ಳವನೋ ರೋಗ ಪರಿಹಾರಕನೋ, ತಿಳಿಯಲರ್ಹವಾದುದನ್ನು ಎಲ್ಲವನ್ನು ತಿಳಿದವನೋ, ವೇಗವೆಂಬ ಪ್ರವೃತ್ತಿ ನಿಮಿತ್ತದಿಂದ ತುರಶಬ್ದವಾಚ್ಯನಾದ ಶ್ರೀ ಹರಿಯೋ, ಅಥವಾ ವಾಯುವೋ, ಅಂತಹವನು ನಮ್ಮಿಂದ ಸಂಯುಕ್ತನು ಆಗಬೇಕು. ॥೨॥

ಋ ॥ (೧೭೯) ಮಾನಃ ಶಂಸೋ ಅರರುಷೋ ಧೂರ್ತಿ ಪ್ರಣಙ್ಮರ್ತ್ಯಸ್ಯ । ರಕ್ಷಾ ಣೋ ಬ್ರಹ್ಮಣಸ್ಪತೇ ॥೩॥

ಅ॥ ಅರರುಷಃ (ರುಷಹಿಂಸಾಯಾಂ) ಅಲಂರುಷ್ಯತೀತಿ ಅತಿಹಿಂಸಕನಾದ, ಮರ್ತ್ಯಸ್ಯ=ಅಸ್ಥಾನದಲ್ಲಿ ಕೋಪವುಳ್ಳ ದೈತ್ಯಾದಿರೂಪ ಮನುಷ್ಯನಿಗೆ, ಧೂರ್ತಿ : (ತುರ್ವಿಧುರ್ವಿಹಿಂಸಾಯಾಂ) ಹಿಂಸಕವಾದ, ಶಂಸಃ = (ಶಂಸಕಥನೇ) ವಚನವು, (ಉಪದ್ರವಕ್ಕೆ ಸಾಧನವಾದ ಉಪದ್ರವಕಾರಿಯಾದ ಮಾತು) ನಃ =ನಮ್ಮನ್ನು, ಮಾ ಪ್ರಣಕ್ = (ಪ್ರಾಪೂರಣೇ) (ಪೃಚೀಸಂಪರ್ಕೇ) ಪ್ರವೇಶಿಸಬಾರದು. (ಹೊಂದಬಾರದು) ಬ್ರಹ್ಮಣಃ ಪತೇ = ಶ್ರೀ ಹರಿಯೇ ವಾಯುವೇ, ನಃ =ನಮ್ಮನ್ನು, ರಕ್ಷ=ರಕ್ಷಿಸು. (ಅಂದರೆ ಹೇಗೆ ಕೆಟ್ಟ ಮಾತು ನಮ್ಮನ್ನು ಹೊಂದಲಿಕ್ಕಿಲ್ಲವೋ ಹಾಗೆ ರಕ್ಷಿಸು.) ॥೩॥

ಭಾ ॥ ಅರರುಟ್ ಚಾತಿರೋಷಣಾತ್ । ತಸ್ಯ ಧೂರ್ತಿರ್ವಚೋ ನಾಸ್ಮಾನ್ ಪೂರಯೇದ್ರಕ್ಷ ನೋ ದರೇ ॥೩॥

ಅ॥ ಯಾವಾತನು ಅತಿಶಯವಾಗಿ ಹಿಂಸೆ ಮಾಡುವುದರಿಂದ ಆಲಂ ರುಷ್ಯತಿ ಎಂಬ ವ್ಯುತ್ಪತ್ತಿಯಿಂದ ಅರರುಟ್ ಎನಿಸುತ್ತಾನೋ, ಅಂತಹ ಅಸ್ಥಾನದಲ್ಲಿ ಕೋಪಗೊಳ್ಳತಕ್ಕ ದೈತ್ಯ ಮೊದಲಾದವರಿಗೆ ಉಪದ್ರವಕಾರಿಯಾದ ಮಾತು ನಮ್ಮನ್ನು ಹೊಂದಬಾರದು. ಎಲೋ ಶ್ರೀ ಹರಿಯೇ ಅಂತಹ ಮಾತು ನಮ್ಮನ್ನು ಹೇಗೆ ಹೊಂದಲಾರದೋ, ಹಾಗೆ ರಕ್ಷಿಸು. ॥೩॥

ಋ ॥ (೧೮೦) ಘಾ ವೀರೋ ನ ರಿಷ್ಯತಿ ಯಮಿಂದ್ರೋ ಬ್ರಹ್ಮಣಸ್ಪತಿಃ । ಸೋಮೋ ಹಿನೋತಿ ಮರ್ತ್ಯಂ ॥೪॥

ಅ॥ ಯಂ ಮರ್ತ್ಯಂ = ಯಾವ ಮನುಷ್ಯನನ್ನು, ಇಂದ್ರಃ = ಇಂದ್ರನೂ, ಬ್ರಹ್ಮಣಸ್ಪತಿಃ = ಶ್ರೀ ಹರಿಯೂ, ವಾಯುವೂ, ಸೋಮಃ = ಸೋಮನೂ ಕೂಡ, ಹಿನೋತಿ = (ಹಿ ಗತೌ ವೃದ್ಧೌ ಚ) ಹೊಂದುತ್ತಾನೋ, ಅಭಿವೃದ್ಧೀಕರಿಸುತ್ತಾನೋ, ಸಃಘ=ಆ ಮನುಷ್ಯನೇ, ವೀರಃ = ಶೂರನು, ನ ರಿಷ್ಯತಿ = (ರಿಷ ಹಿಂಸಾಯಾಂ) ಸಂಹರಿಸಲ್ಪಡುವುದಿಲ್ಲ. ಘ=ಪ್ರಸಿದ್ಧವು. ॥೪॥

ಭಾ ॥ ಘೇತಿ ಹಾಽವಧೃತಿಶ್ಚೈವ ಸೋಮಃ ಸೌಮ್ಯತ್ವತೋ ಹರಿಃ । ಉಸಾ ಮಯಾ ಚ ಯು
ಕ್ತತ್ವಾದೂರ್ಮ್ಯರ್ಯುಕ್ತತ್ವತೋಽಪಿ ವಾ । ಅಮಃ ಸ ಇತಿ ವಾ ॥೪॥

ಅ ॥ ಘ ಎಂಬ ಶಬ್ದವು ಹ ಎಂಬ ಅರ್ಥದಲ್ಲಿದೆ. ಅಂದರೆ ಪ್ರಸಿದ್ಧಿ ಎಂಬ ಅರ್ಥವನ್ನು ತೋರಿಸುತ್ತದೆ. ಮತ್ತು ಅವಧೃತಿಃಏವ = ನಿಶ್ಚಯವೆಂಬ ಅರ್ಥದಲ್ಲಿಯೂ ಇದೆ. (ಸೋಮ ಶಬ್ದವನ್ನು ಶ್ರೀ ಹರಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ)

(1) ಶ್ರೀಹರಿಯು ಸೌಮ್ಯನಾದುದರಿಂದ (ಕ್ರೌರ್ಯವಿಲ್ಲದಿರುವುದರಿಂದ) ಸೋಮಃ ಎನಿಸುತ್ತಾನೆ ಅಥವಾ (2) ಉಶ್ಚ ಮಾ ಚ ಉಮೇ । ಉಮಾಭ್ಯಾಂ ಸಹ ವರ್ತತೇ ಎಂಬ ವ್ಯುತ್ಪತ್ತಿಯಿಂದ, ಉಕಾರಃ ಶಂಕರಃ ಪ್ರೋಕ್ತಃ ಎಂಬ ಪ್ರಮಾಣದಿಂದ ರುದ್ರನಿಂದಲೂ ಲಕ್ಷ್ಮೀ ದೇವಿಯಿಂದಲೂ ಕೂಡಿಕೊಂಡಿರುವುದರಿಂದಲೂ, (3) ಉಮ್ಯೈಃ ಸಹ ವರ್ತತೇ ಎಂಬ ವ್ಯುತ್ಪತ್ತಿಯಿಂದ ಭೂತಾನಿ ವೈ ವಿಶ್ವ ಉಮಾಃ ಎಂಬ ಶ್ರುತಿಯಿಂದ ಸಮಸ್ತ ಭೂತಗಳಿಂದ ಕೂಡಿಕೊಂಡು ಪ್ರೇರಕನಾಗಿರುವುದರಿಂದ, ಅಂದರೆ ಸಮಸ್ತ ಭೂತಗಳನ್ನು ಪ್ರೇರೇಪಿಸುವುದರಿಂದಲೂ, (೪) ನ ವಿದ್ಯತೇ ಮಾ ಪರಿಮಿತಿಃ (ಪರಿಮಾಣವು) ಯಸ್ಯ ಎಂಬ ವ್ಯುತ್ಪತ್ತಿಯಿಂದ ಅಮಃ ಸಾರತ್ವಾತ್ ಸಃ, ಏವಂಚ ಸಶ್ಚಾಸೌ ಅಮಶ್ಚ ಎಂಬ ವ್ಯುತ್ಪತ್ತಿಯಿಂದ ಸರ್ವರಿಗಿಂತ ಶ್ರೇಷ್ಠನಾಗಿದ್ದು ಇಯತ್ತಾ ಇಲ್ಲದಿರುವುದರಿಂದ ಶ್ರೀ ಹರಿಯ ಸೋಮಃ ಎನಿಸುತ್ತಾನೆ. ॥೪॥

ಋ ॥ (೧೮೧) ತ್ವಂ ತಂ ಬ್ರಹ್ಮಣಸ್ಪತೇ ಸೋಮ ಇಂದ್ರಶ್ಚ ಮರ್ತ್ಯಂ । ದಕ್ಷಿಣಾ ಪಾತ್ವಂಹಸಃ ॥೫॥೩೪॥

ಅ ॥ ಬ್ರಹ್ಮಣಸ್ಪತೇ = ಎಲೋ ಶ್ರೀ ಹರಿಯೇ, ವಾಯುವೇ, ತಂ ಮರ್ತ್ಯಂ = (ಯಾರು ನಿನ್ನ ಭಕ್ತನೋ) ಅಂತಹ ಮನುಷ್ಯನನ್ನು, ತ್ವಂ = ನೀನು, ಅಂಹಸಃ =ಪಾಪದ್ವೆಶೆಯಿಂದ (ರಕ್ಷಿಸು) ಸೋಮಃ =ಸೋಮನೂ, ಇಂದ್ರಃ=ಇಂದ್ರನೂ, ದಕ್ಷಿಣಾ ಚ = ಲಕ್ಷ್ಮೀ ದೇವಿಯೂ, ಶ್ರೀ ಹರಿಯೂ ಕೂಡ, ಪಾತು = ರಕ್ಷಿಸಲಿ. ॥೫॥

ಭಾ ॥ ಸಾಕ್ಷಾಚ್ಛ್ರೀರ್ದಕ್ಷೇಣೇತಿ ದಕ್ಷಿಣಾ । ದಕ್ಷಿಣಾ ಚತುರತ್ವಾದ್ವಾ ಸ್ವಯಮೇವ ಜನಾರ್ದನಃ ॥೫॥೩೪॥

ಅ॥ ದಕ್ಷೇ = ದಕ್ಷಿಣ ಭಾಗದಲ್ಲಿ, ಇನಃ =ಸ್ವಾಮಿಯಾದ ಶ್ರೀ ವಿಷ್ಣುವು ಯಸ್ಯಾಃ ಎಂಬ ವ್ಯುತ್ಪತ್ತಿಯಿಂದ ಸಾಕ್ಷಾತ್ ಶ್ರೀ ದೇವಿಯೇ ದಕ್ಷಿಣಾ ಎನಿಸುತ್ತಾಳೆ. (ಸಾಕ್ಷಾತ್ ಎಂಬ ಪದದಿಂದ ಶಂರೂಪಮಾಶ್ರಿತಾ ವಾಯುಂ ಶ್ರೀ ರೀತ್ಯೇವ ಚ ಕೀರ್ತಿತಾ ತಾಶ್ಚೇಂದ್ರಧರ್ಮನಾಸತ್ಯಶ್ರಯಣಾಶ್ರಿಯ ಇತ್ಯಾದಿ ಪ್ರಮಾಣಗಳಿಂದ ಶ್ರೀ ಶಬ್ದವಾಚ್ಯರಾದ ಸರಸ್ವತ್ಯಾದಿಗಳು ಅಲ್ಲವೆಂದುಕ್ತವಾಯ್ತು.) ಅಥವಾ ದಕ್ಷಿಣೇ ಸರಳೋದಾರೌ ಎಂಬ ಪ್ರಮಾಣದಿಂದ ಪರೇಚ್ಛಾನುಸಾರ ಪ್ರವೃತ್ತಿರೂಪವಾದ ಚಾತುರ್ಯನಿಮಿತ್ತದಿಂದಲೂ ಪ್ರಾವಿಣ್ಯದಿಂದಲೂ ಸಾಕ್ಷಾತ್ ಸ್ತ್ರೀ ರೂಪನಾದ ಶ್ರೀ ಹರಿಯೇ ದಕ್ಷಿಣಾ ಎನಿಸುತ್ತಾನೆ. ॥೫॥೩೪॥

ಋ ॥ (೧೮೨) ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ । ಸನಿಂ ಮೇಧಾಮಯಾಸಿಷಂ ॥೬॥

ಅ॥ (ನಾನು) ಅದ್ಭುತಂ = ಆಶ್ಚರ್ಯ ಸ್ವರೂಪನೂ, ಇಂದ್ರಸ್ಯ ಪ್ರಿಯಂ ಇಂದ್ರನಿಗೆ ಪ್ರಿಯನಾದವನೂ, ಕಾಮ್ಯಂ =ಸಮಸ್ತ ಜನರಿಗೂ ಇಚ್ಛಾ ವಿಷಯನೂ, ಸನಿಂ =ಲಾಭ ಸ್ವರೂಪನೂ, ಮೇಧಾಂ = ಜ್ಞಾನಸ್ವರೂಪನೂ, ಸದಸಃ ಪತಿಂ (ಪಾರಕ್ಷಣೇ) ಸಭೆಗೆ ಪಾಲಕನೂ ಸ್ವಷ್ಟಾಪಾತಾ ತಥೈವಾತ್ತಾನಿಖಿಲಸ್ಯೈಕೈವತು ಇತ್ಯಾದಿ ಪ್ರಮಾಣಗಳಿಂದ ಸರ್ವಪಾಲಕನೂ ಆದ ಶ್ರೀ ವಿಷ್ಣುವನ್ನು ಅಥವಾ ಪ್ರಧಾನ ವಾಯುವನ್ನು, ಪ್ರಧಾನಾಗ್ನಿಯನ್ನಾಗಲೀ, ಅಯಾಸಿಷಂ = (ಯಾಪ್ರಾಪಣೇ) ಶರಣು ಹೊಂದುವೆನು. ॥೬॥

ಭಾ ॥ (೧) ಸದಸಸ್ಪತಿರ್ಹರಿಃ ಸಾಕ್ಷಾದ್ವಾಯುರಗ್ನಿರಥಾಪಿ ವಾ ॥ (೨) ಲಾಭಜ್ಞಾನ ಸ್ವರೂಪೋಽಸೌ ಶರಣಂ ತಮಯಾಸಿಷಂ ॥೬॥

ಅ ॥ (೧) ಶ್ರೀ ಹರಿಯೇ ಮುಖ್ಯವೃತ್ತಿಯಿಂದ ಸಭೆಗೆ ರಕ್ಷಕನು. ಪಾಲಕನು. ಹಾಗೆಯೇ ಮುಖ್ಯ ವಾಯುವೂ ಕೂಡ. (ಪ್ರವಹಾದಿ ವಾಯುಗಳಲ್ಲಿ) ಅಥವಾ ಮುಖ್ಯಾಗ್ನಿಯೂ ಕೂಡ ಸದಸಸ್ಪತಿಯು. (ಅಗ್ನಿ ಪುತ್ರರಲ್ಲ) (೨) (ಸನಿಮೇಧಾ ಶಬ್ದಾರ್ಥವನ್ನು ಹೇಳುತ್ತಾರೆ.) ಈ ಶ್ರೀ ಹರಿಯು ಲಾಭಸ್ವರೂಪನೂ ಜ್ಞಾನ ಸ್ವರೂಪನೂ ಆಗಿರುತ್ತಾನೆ. ಆತನನ್ನು ಶರಣು ಹೊಂದುವೆನು. ॥೬॥

ಋ ॥ (೧೮೩) ಯಸ್ಮಾದೃತೇ ನ ಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ । ಸಧೀನಾಂ ಯೋಗಮಿನ್ವತಿ ॥೭॥

ಅ ॥ ಯಸ್ಮಾದೃತೇ = ಯಾವ ಸದಸಸ್ಪತಿಯ ಅನುಗ್ರಹವಿಲ್ಲದೆ, ವಿಪಶ್ಚಿತಶ್ಚನ = ಜ್ಞಾನಿಗೂ ಕೂಡ ಯಜ್ಞಃ =ಯಾಗವು ನ ಸಿಧ್ಯತಿ = ಸಿದ್ಧಿಸುವುದಿಲ್ಲವೋ, ಸಃ =ಅಂತಹ ಸದಸಸ್ಪತಿಯು, ಧೀನಾಂ = ಬುದ್ಧಿಗಳ, ಯೋಗಂ =ಸಂಬಂಧವನ್ನು ಇನ್ವತಿ = (ಇವಿ ವ್ಯಾಪ್ತೌ) ಹೊಂದುತ್ತಾನೆ. ॥೭॥

ಭಾ ॥ ಧೀಪ್ರೇರಕಃ ಸ ಧ್ಯೇಯಶ್ಚ ಧೀಭಿರ್ಯೋಗಂ ತದಾಪ್ನುತೇ ॥೭॥

ಅ ॥ ಯಾವ ಕಾರಣದಿಂದ ಆ ಶ್ರೀ ಹರಿಯು ಸರ್ವರ ಬುದ್ಧಿಗಳಿಗೆ ಪ್ರೇರಕನೋ, (ಬುದ್ಧಿಗಳಿಗೆ ವಿಷಯನೋ) ಧ್ಯಾನಾರ್ಹನೂ ಆಗಿರುತ್ತಾನೋ, ಆದ ಕಾರಣ ಬುದ್ಧಿಗಳಿಂದ ಸಂಬಂಧವನ್ನು ಹೊಂದುತ್ತಾನೆ. (ಏವಂಚ ಬುದ್ಧಿಗಳಿಗೆ ಪ್ರೇರಕನಾಗಿರುವುದರಿಂದಲೂ ಧ್ಯೇಯನಾಗಿರುವುದರಿಂದಲೂ ಬುದ್ಧಿ ಸಂಬಂಧವನ್ನು ಹೊಂಉದತ್ತಾನೆಂದು ಶ್ರುತಿಯಲ್ಲಿ ಹೇಳಿದ್ದು ಯುಕ್ತವು.) ॥೭॥

ಋ ॥ (೧೫೪) ಆದೃಧ್ನೋತಿ ಹವಿಷ್ಕೃತಿಂ ಪ್ರಾಂಚಂ ಕೃಣೋತ್ಯಧ್ವರಂ । ಹೋತ್ರಾ ದೇವೇಷು ಗಚ್ಛತಿ ॥೮॥

ಅ ॥ (ಸದಸಸ್ಪತಿಯಿಲ್ಲದೆ ಯಜ್ಞವು ಸಿದ್ಧಿಸುವುದಿಲ್ಲ ಎಂದದ್ದನ್ನು ಪ್ರಪಾದಿಸುತ್ತಾರೆ.) (ಯಾವ ಕಾರಣದಿಂದ ಸರ್ವಸ್ವಾಮಿಯಾದ ಸದಸಸ್ಪತಿಯು ಹವಿಷ್ಕೃತೀ = (ಹವಿಷಃ ಕೃತಿಃ ಯಸ್ಮಿನ್ ಯಜಮಾನೇ ಸಾ ಹವಿಷ್ಕೃತಿಃ ಎಂಬ ವ್ಯುತ್ಪತ್ತಿಯಿಂದ ಅಥವಾ ಹವಿಷು ಕೃತಿಃಂ ಸಂಪಾದನಂ ಯಸ್ಯ ಎಂಬವ್ಯುತ್ಪತ್ತಿಯಿಂದ) ಯಜಮಾನನನ್ನು, ಋಧ್ನೋತಿ = (ಯಜ್ಞ ಮಾಡತಕ್ಕ ಯಜಮಾನನಿಗೆ) ಸಮೃದ್ಧನನ್ನಾಗಿ ಮಾಡುತ್ತಾನೋ, ಯಾವ ಕಾರಣದಿಂದ ಅಧ್ವರಂ =ಯಜ್ಞವನ್ನು, ಪ್ರಾಂಚಂ = (ಪ್ರಕೃಷ್ಟ ತಯಾ ಅಂಚತಿ =ಪ್ರವರ್ತತೇ ಎಂಬ ವ್ಯುತ್ಪತ್ತಿಯಿಂದ ಉತ್ತಮನನ್ನಾಗಿ, ಕೃಣೋತಿ = ಮಾಡುತ್ತಾನೋ, ಯಾವ ಕಾರಣದಿಂದ, ದೇವೇಷು = ದೇವ ವಿಷಯಗಳಾದ, ಹೋತ್ರಾ = ದೇವತೆಗಳ ಆಹ್ವಾನಗಳನ್ನು, ಗಚ್ಛತಿ = ಹೊಂದುತ್ತಾನೋ, (ಸ್ವೀಕರಿಸುತ್ತಾನೋ) ಅತ್ = ಆ ಕಾರಣ, ಸದಸಸ್ಪತಿಯಿಲ್ಲದೆ ಯಜ್ಞವು ಸಿದ್ಧಿಸುವುದಿಲ್ಲ. ॥೮॥

ಭಾ ॥ ತಸ್ಮಾದ್ಧವಿಷ್ಕೃತಸ್ಸ್ವೃದ್ಧಿಂ ಕರೋತಿ ಯಜತೋ ವಿಭುಃ ಕರೋತಿ ಚೋತ್ತಮಂ ಯಜ್ಞಂ ದೇವಾಹ್ವಾನಾನಿ ಗಚ್ಛತಿ ॥೮॥

ಅ ॥ ಆದ ಕಾರಣ ಶ್ರೀ ಹರಿಯು ಯಜ್ಞ ಮಾಡತಕ್ಕ ಯಜಮಾನನಿಗೆ ಅಭಿವೃದ್ಧಿಯನ್ನು ಮಾಡುತ್ತಾನೆ. (ಅಂದರೆ ಸಫಲೀಕರಿಸುತ್ತಾನೆ. ಅಂತೂ ಸಂತಾನಾಭಿವೃದ್ಧಿಯನ್ನು ಮಾಡುತ್ತಾನೆ.) ಯಾಗವನ್ನು ಉತ್ತಮವನ್ನಾಗಿ ಮಾಡುತ್ತಾನೆ.

(ಅಂದರೆ ದೇವತೆಗಳು ಪಭೋಗಿಸುವಂತೆ ಮಾಡುವುದು ಮತ್ತೂ ಸ್ವರ್ಗಾದಿರೂಪ ಉತ್ತಮ ಫಲವನ್ನು ಕೊಡುವಂತೆ ಮಾಡುವುದು) ದೇವತೆಗಳ ಆಹ್ವಾನವನ್ನು ಸ್ವೀಕರಿಸುತ್ತಾನೆ.

ವಿ॥ ಈ ಮೂರರ ಮಧ್ಯದಲ್ಲಿ ಮೊದಲು ಮೊದಲಿನದ್ದನ್ನು ಕುರಿತು ಮೇಲು ಮೇಲಿನದ್ದು ಕಾರಣವು. ದೇವತೆಗಳ ಆಹ್ವಾನಗಳು ವಿಷ್ಣು ವಿಷಯಕಗಳೆಂದು ಅನುಸಂಧಾನ ಮಾಡಿದರೇನೇ ಯಜ್ಞವು ದೇವತೆಗಳಿಗೆ ಉಪಭೋಗ್ಯವಾಗುವುದು (ವಿಷ್ಣುವಿಷಯಕಗಳಾಗದೆ ಇದ್ದರೆ ದೈತ್ಯರಿಗೆ ಉಪಭೋಗ್ಯ. ದೇವತೆಗಳಿಂದುಪಭುಕ್ತವಾದ ಯಜ್ಞದಿಂದಲೇ ಯಜಮಾನನಿಗೆ ಫಲವು ದೃಷ್ಟವಾಗುತ್ತದೆ. ಏವಂಚ ಇವೆಲ್ಲವನ್ನೂ ನೀನೇ ಮಾಡುವುದರಿಂದ ನೀನು ಇಲ್ಲದೆ ಯಾಗವು ಸಿದ್ಧಿಸುವುದಿಲ್ಲ. ಎಂದದ್ದು ಯುಕ್ತವು. ॥೮॥

ಋ ॥ (೧೮೫) ನರಾಶಂಸಂ ಸುಧೃಷ್ಟಮಮಪಶ್ಯಂ ಸಪ್ರಥಸ್ತಮಂ । ದಿವೋ ನ ಸದ್ಮಮಖಸಂ ॥೯॥೩೫॥೧೮॥

ಅ ॥ (ಯಾವ ನರಾಶಂಸನಿಗೆ) ಸದ್ಮಮಖಸಂ = ಗೃಹ ರೂಪವಾದ ಯಜ್ಞವು, ಅಥವಾ ದೇವತೆಗಳಿಗೆ ಪ್ರಿಯವಾದ ಅಗ್ನಿ ಗೃಹವೂ ಯಜ್ಞವೂ ಕೂಡ, ದಿವಃ = ಸ್ವರ್ಗಕ್ಕಿಂತಲೂ ಅತಿಶಯವಾಗಿ ಪ್ರಿಯಂನ =ಪ್ರಿಯವಾದುದಂತೆ ತೋರುತ್ತದೋ, (ಅಂತಹ) ಸುಧೃಷ್ಟಮಂ = ಅತಿಧಾರ್ಷ್ಟ್ಯವಿರುವ, ಸಪ್ರಥಸ್ತಮಂ = (ಪ್ರಥುಪ್ರಖ್ಯಾನೇ) ಅತಿಶಯಿತ ಗುಣ ವಿಸ್ತಾರದಿಂದ ಸಹಿತನಾದ, ನರಾಶಂಸಂ = ನರೈಃ ಆ ಶಂಸ್ಯತೇ (ಶಂಸು ಸ್ತುತೌ) ಎಂಬ ವ್ಯುತ್ಪತ್ತಿಯಿಂದ ಬ್ರಹ್ಮಾದಿ ಪುರುಷರಿಂದ ಚೆನ್ನಾಗಿ ಸ್ತುತಿಸಲ್ಪಡುವ ಶ್ರೀ ವಿಷ್ಣುವನ್ನು (ನಾನು) ಅಪಶ್ಯಂ =ನೋಡಿರುವೆನು. ॥೩೫॥೧೮॥

ಭಾ ॥ (೧) ನರೈಃ ಸ್ತುತ್ಯೋ ನರಾಶಂಸೋ ಹರಿರ್ಧೃಷ್ಟತಮಶ್ಚ ಸಃ ॥ (೨) ಗುಣಾನಾಂ ಪ್ರಥಮಾಧಿಕ್ಯಾತ್ಸಪ್ರಥಸ್ತಮ ಈರಿತಃ ॥ (೩) ಯಸ್ಯ ಸ್ವರ್ಗಾದಪಿ ಗೃಹಂ ಮುಖಃ ಪ್ರಿಯಮಿವೇಯತೇ ॥೯॥೨೫॥೧೮॥

ಅ ॥ (೧) ಶ್ರೀ ಹರಿಯು ಬ್ರಹ್ಮಾದಿ ಪುರುಷರಿಂದ ಸ್ತುತ್ಯನಾದುದರಿಂದ ನರಾಶಂಸನೆನಿಸುತ್ತಾನೆ. ಆ ಶ್ರೀ ಹರಿಯು ಅತಿಧಾರ್ಷ್ಟ್ಯವಿರುವವನು. (೨) ಆತನು ಗುಣಗಳ ಅತಿಶಯಿತ ವಿಸ್ತಾರಾಧಿಕ್ಯದಿಂದ ಸಪ್ರಥಸ್ತಮಃ ಎನಿಸುತ್ತಾನೆ. (೩) ಯಾವ ಶ್ರೀ ಹರಿಗೆ ದೇವತೆಗಳಿಗೆ ಪ್ರಿಯವಾದ ಅಗ್ನಿ ಗೃಹವೂ ಯಾಗವೂ ಕೂಡ ಸ್ವರ್ಗಕ್ಕಿಂತಲೂ ಪ್ರಿಯದಂತೆ ತೋರುತ್ತದೋ, ಅಂತಹನು. ॥೯॥೩೫॥೧೮॥

ಅವ ॥ ೯ ಋಕ್ಕು, ೨ ವರ್ಗ, ಅಗ್ನಿಮಾರುತ ದೇವತಾಕವು. ಗಾಯತ್ರ ಸೂಕ್ತ.

ಋ ॥ (೧೮೬) ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರ ಹೂಯಸೇ । ಮರುದ್ಭಿರಗ್ನ ಆಗಹಿ ॥೧॥

ಅ ॥ ಅಗ್ನೇ= ಎಲೋ ವಿಷ್ಣುವೇ, ಪ್ರಧಾನಾಗ್ನಿಯೇ, ಗೋಪೀಥಾಯ= ರಕ್ಷಣೆಗಾಗಿ, ಚಾರುಂ = ಮಂಗಲಕರವಾದ (ಅಂದರೆ ಚೆನ್ನಾಗಿ ಶಾಸ್ತ್ರೋಕ್ತ ಲಕ್ಷಣಗಳುಳ್ಳ) ತ್ಯಂ=ಪ್ರಸಿದ್ಧವಾದ, ಅಧ್ವರಂ ಪ್ರತಿ ಎಲ್ಲಾ ಯಜ್ಞಗಳನ್ನು ಕುರಿತು, ಪ್ರಹೂಯಸೇ = (ನೀನು ಯಾವ ಕಾರಣದಿಂದ) ಕರೆಯಲ್ಪಡುತ್ತಿಯೋ, (ಆ ಕಾರಣ) ಮರುದ್ಭಿಃ =ವಾಯುಗಳಿಂದ (ಕೂಡಿಕೊಂಡು) ಆಗಹಿ = ಬಾ ॥೧॥

ಭಾ ॥ ಯಜ್ಞಂ ಪ್ರತಿಪ್ರತಿ ತ್ಯಂ ತಂ ಸಮ್ಯಕ್ ಶಾಸ್ತ್ರೋಕ್ತಲಕ್ಷಣಂ । ಆಹೂಯಸೇ ॥೧॥

ಅ ॥ ಚೆನ್ನಾಗಿ ಶಾಸ್ತ್ರಗಳಲ್ಲಿ ಹೇಳಿದ ಲಕ್ಷಣಗಳುಳ್ಳ ಆ ಪ್ರಸಿದ್ಧ ಎಲ್ಲಾ ಯಜ್ಞಗಳನ್ನು ಕುರಿತು ಕರೆಯಲ್ಪಡುತ್ತಿಯೋ, (ಆ ಕಾರಣ ಇಷ್ಟವನ್ನು ಕೊಡುವುದಕ್ಕಾಗಿ ಬಾ.) ॥೧॥

ಋ ॥ (೧೮೭) ನ ಹಿ ದೇವೋ ನ ಮರ್ತ್ಯೋ ಮಹಸ್ತವ ಕ್ರತುಂ ಪರಃ । ಮರುದ್ಭಿರಗ್ನ ಆಗಹಿ ॥೨॥

ಅ ॥ ಅಗ್ನೇ = ಎಲೋ ಶ್ರೀ ವಿಷ್ಣುವೇ, ಕ್ರತುಂ =ಯಾಗವನ್ನು (ಕುರಿತು ಬರಲಿಕ್ಕೆ) ತವ = ನಿನಗಿಂತ ಪರಃ = ಬೇರೆಯಾದ, ದೇವಃ =ದೇವನು, ಮಹಃ =ಶ್ರೇಷ್ಠನು ಪೂಜ್ಯನು, ನ ಹಿ = ಇಲ್ಲವೇ ಇಲ್ಲ. ಮರ್ತ್ಯನ =ಮನುಷ್ಯನಾದರೂ ಇಲ್ಲವೇ ಇಲ್ಲ ಎನ್ನುವುದು ಸುತಾರಾಂ ಸಿದ್ಧವು (ಆದ ಕಾರಣ) ಮರುದ್ಭಿಃ ಆಗಹಿ =ವಾಯುಗಳಿಂದ ಕೂಡಿಕೊಂಡು ಬಾ ॥೨॥

ಭಾ ॥ (೧) ಮಹಾನ್ನೈವ ತ್ವದನ್ಯೋಽಸ್ತಿ ಕ್ರಂತುಪ್ರತಿ । (೨) ವಿಷ್ಣೌ ಹಿ ಮುಖ್ಯತೋಽರ್ಥೋಽಯಮಗ್ನೌ ಕಾಂಶ್ಚಿದೃತೇ ಸುರಾನ್ ॥೨॥

ಅ ॥ (೧ ಯಾಗಗಳನ್ನು ಕುರಿತು ಬರಲಿಕ್ಕೆ ನಿನ್ನಿಂದ ವ್ಯತಿರಿಕ್ತನಾದವನು ಶ್ರೇಷ್ಠನು ಪೂಜ್ಯನು ಇಲ್ಲವೇ ಇಲ್ಲ. (೨) (ಇಲ್ಲಿ ಅಗ್ನಿಗೆ ಸರ್ವೋತ್ತಮತ್ವವು ಉಕ್ತವಾಗಿದೆ. ಆ ಸರ್ವೋತ್ತಮತ್ವವನ್ನು ವಿಷ್ಣು ಪ್ರಸಿದ್ಧಾಗ್ನಿ ಭೇದದಿಂದ ವ್ಯಾಖ್ಯಾನ ಮಾಡುತ್ತಾರೆ.) ನಿನಗಿಂತ ಇತರನು ಶ್ರೇಷ್ಠನು ಇಲ್ಲವೇ ಇಲ್ಲ ಎಂಬೀ ಅರ್ಥವು ಅಗ್ನಿ ಶಬ್ದದಿಂದ ಶ್ರೀ ವಿಷ್ಣುವನ್ನು ವಿವಕ್ಷಾ ಮಾಡಿದರೆ ಮುಖ್ಯವಾಗಿ (ಸಂಕೋಚವಿಲ್ಲದೆ) ಸರ್ವೋತ್ತಮನೆಂದು ವ್ಯಾಖ್ಯಾನ ಮಾಡಬೇಕು. ಪ್ರಸಿದ್ಧಾಗ್ನಿಯನ್ನು ವಿವಕ್ಷಾ ಮಾಡಿಕೊಂಡರೆ ಕೆಲವು ದೇವತೆಗಳನ್ನು (ವಿಷ್ವಾದಿ ದೇವತೆಗಳನ್ನು ಆರಂಭಿಸಿಕೊಂಡು ನಾರದ ಪರ್ಯಂತರಾದವರನ್ನು) ಬಿಟ್ಟು ಕೆಳಗಿನವರಿಂದುತ್ತಮನೆಂದು ಸಂಕೋಚದಿಂದ ವ್ಯಾಖ್ಯಾನ ಮಾಡಬೇಕು. ॥೨॥

ಋ (೧೮೮) ಯೇ ಮಹೋ ರಜಸೋ ವಿದುರ್ವಿಶ್ವೇ ದೇವಾಸೋ ಅದ್ರುಹಃ ಮರದ್ಭಿರಗ್ನ ಆಗಹಿ ॥೩॥

ಅ ॥ ಅದ್ರುಹಃ = (ನದ್ರುಹ್ಯಂತೀತಿ) ಸಜ್ಜನರಿಗೆ ದ್ರೋಹ ಮಾಡದಿರುವ, ಯೇ ವಿಶ್ವೇದೇವಾಸಃ =ಯಾವ ಮರುತ್‌ಗಳು, ಮಹಃ =ಶ್ರೇಷ್ಠವಾದ, ರಜಸಃ =ಅನುರಾಗವನ್ನು ಹುಟ್ಟಿಸುವ ಸ್ವರ್ಗದಲ್ಲಿದ್ದೇ ವಿದುಃ =ಎಲ್ಲವನ್ನು ತಿಳಿಯುತ್ತಾರೋ, (ಅಂತಹ ದೂರದರ್ಶನಾದಿಗಳುಳ್ಳ) ಮರುದ್ಭಿಃ =ಮರುತ್‌ಗಳಿಂದ ಕೂಡಿಯೇ ಅಗಹಿ =ಬಾ ॥೩॥

ಭಾ । ಮಹತೋ ರಂಜಕಾತ್ಸ್ವರ್ಗಾದದ್ರೋಗ್ಧಾರೋಽಖಿಲಂ ವಿದುಃ ॥೩॥

ಅ ॥ ಸಜ್ಜನರಿಗೆ ದ್ರೋಹ ಮಾಡದಿರುವ ಮರುತ್‌ಗಳು ಶ್ರೇಷ್ಠವಾದ ಅನುರಾಗವನ್ನು ಹುಟ್ಟಿಸುವ ಸ್ವರ್ಗದಲ್ಲಿ ಕೂತುಕೊಂಡೇ ಎಲ್ಲವನ್ನು ತಿಳಿಯುತ್ತಾರೆ. ॥೩॥

ಋ ॥ (೧೮೯) ಯ ಉಗ್ರಾ ಅರ್ಕಮಾನೃಚುರನಾಧೃಷ್ಟಾಸ ಓಜಸಾ । ಮರುದ್ಭಿರಗ್ನ ಆಗಹಿ ॥೪॥

ಅ ॥ ಯೇ = ಯಾವ, ಉಗ್ರಾಃ =ದೈತ್ಯರನ್ನು ಕುರಿತು ಕ್ರೂರರಾದ ಮರುತ್‌ಗಳು ಓಜಸಾ = ಸಾಮರ್ಥ್ಯದಿಂದ, ಅನಾಧೃಷ್ಟಾಸಃ = (ಧೃಷುಶಕ್ತಿ ಬಂಧನ) ಅಭಿಭೂತರು (ಪರರಿಂದ ಪ್ರತಿಬದ್ಧವಾದ ಶಕ್ತಿಯುಳ್ಳವರು) ಆಗದಿರುವವರಾಗಿ, ಅರ್ಕಂ =ಸೂರ್ಯನನ್ನು ಅನೃಚಃ = (ಅರ್ಚ ಗತಿ ಪೂಜನಯೋಃ) ಹೊಂದಿರುತ್ತಾರೋ, (ಸೂರ್ಯನಲ್ಲಿ ವಿಶೇಷತಃ ಸನ್ನಿಹಿತರಾಗಿರುತ್ತಾರೋ ) ಅಂತಹ, ಮರುದ್ಭಿಃ =ವೇದ ಪ್ರತಿಪಾದ್ಯ ಭಗವದ್ರೂಪಗಳಿಂದಲೂ ಪ್ರಸಿದ್ಧ ವಾಯುಗಳಿಂದಲೂ ಕೂಡಿಕೊಂಡು, ಆಗಹಿ=ಬಾ ॥೪॥

ಭಾ ॥ ಪ್ರಾಪ್ತಾ ಅರ್ಕಂ ವಿಶೇಷೇಣ ಸನ್ನಿಧಿಸ್ತತ್ರ ಯುದ್ಧರೇಃ ॥೪॥

ಅ ॥ (ಸರ್ವತ್ರ ವ್ಯಾಪ್ತನಾದ ಶ್ರೀ ಹರಿಗೆ ವಿಶೇಷವಾಗಿ ಸೂರ್ಯ ಪ್ರಾಪ್ತಿಯನ್ನು ಹೇಳಲು ಕಾರಣವೇನೆಂದರೆ) ಯಾವ ಕಾರಣದಿಂದ ವಿಶೇಷತಃ ಆ ಸೂರ್ಯನಲ್ಲಿ ಶ್ರೀ ಹರಿಯ ಸನ್ನಿಧಾನವು ಅಧಿಕವಾಗಿ ಇದೆಯೋ ಆ ಕಾರಣ ಅರ್ಕಂ ಪ್ರಾಪ್ತಾಃ ಎಂದು ವಿಶೇಷೋಕ್ತಿಯು ಯುಕ್ತವು ॥೪॥

ಋ ॥ (೧೯೦) ಯೇ ಶುಭ್ರಾ ಘೋರವರ್ಪಸಃ ಸುಕ್ಷತ್ರಾಸೋ ರಿಶಾದಸಃ । ಮರುದ್ಭಿರಗ್ನ ಆಗಹಿ ॥೫॥೩೬॥

ಅ ॥ ಅಗ್ನೇ =ಶ್ರೀ ಹರಿಯೇ, ಶುಭ್ರಾಃ =ಚೆನ್ನಾಗಿ ಪ್ರಕಾಶಿಸುತ್ತಿರುವ, (ಅಂದರೆ ಶುದ್ಧಗಳಾದ) (ಘೋರ ವರ್ಪಸಃ = ದೈತ್ಯರನ್ನು ಕುರಿತು ಕ್ರೂರವಾದ ಬಲವುಳ್ಳ, ಸುಕ್ಷತ್ರಾಸಃ = (ಕ್ಷಿ, ಕ್ಷಯೇ, ಅಥವಾ ಕ್ಷಿನಿವಾಸೇ, ತ್ರೈಜ್ ಪಾಲನೇ) ಚೆನ್ನಾಗಿ ಶರೀರವನ್ನು ಅಥವಾ ಭೂಮ್ಯಾದಿಗಳನ್ನು ರಕ್ಷಿಸುವ, ಅಥವಾ ದ್ರವ್ಯಾದಿ ನಾಶದಿಂದಲೂ ರಕ್ಷಿಸುವ, (ರಿಂ=ರಮ್ಯವಾದ ಶಂ=ಸುಖವನ್ನು ಆದಂತಿ ಎಂಬ ವ್ಯುತ್ಪತ್ತಿಯಿಂದ) ರಿಶಾದಸಃ = ರಮ್ಯವಾದ ನಿರ್ದೋಷವಾದ ಸುಖವನ್ನು ಭೋಗಿಸುವ, ಇಂತಹ ಯೇ=ಯಾವ ಮರುತ್‌ಗಳು ಇದ್ದಾವೋ, ಅಂತಹ, ಮರುದ್ಭಿಃ = ವೇದ ಪ್ರತಿಪಾದ್ಯ ಭಗವದ್ರೂಪ ವಿಶೇಷಗಳಿಂದ ಕೂಡಿಕೊಂಡು ಆಗಹಿ = ಬಾ ॥೫॥

ಭಾ ॥ (೧) ಶುದ್ಧಾಃ ಘೋರಬಲಾಃ ಕ್ಷೇತ್ರತ್ರಾತಾರಃ ಕ್ಷತಿತೋಽಪಿವಾ । ರಮ್ಯಸತ್ಸುಖಭೋ ಕ್ತಾರೋ ಮರುತೋ ಮಾರುತತ್ವತಃ (೨) ಏತಾದೃಶಾನಿ ರೂಪಾಣಿ ಪ್ರಾಣಾಗ್ನಿಸ್ಥಾ ನಿ ಚೇಶಿತುಃ । ಪೃಥಗ್ವಾ ತಾದೃಶಾನ್ಯೇವ ದೇವಗಾನ್ಯಪಿ ಸರ್ವಶಃ ॥೫॥೩೬॥

ಅ॥ (೧) ಶುದ್ಧಗಳಾದ (ನಿರ್ದುಷ್ಟಗಳಾದ) ದೈತ್ಯರ ಮೇಲೆ ಕ್ರೂರವಾದ ಬಲವನ್ನು ತೋರಿಸುವವುಗಳು, ಚೆನ್ನಾಗಿ ಶರೀರ ಭೂಮ್ಯಾದಿಗಳನ್ನು ರಕ್ಷಿಸುವವುಗಳು, ಅಥವಾ ದ್ರವ್ಯಾದಿ ನಾಶದಿಂದ ರಕ್ಷಿಸುವವುಗಳು (ದ್ರವ್ಯಾದಿಗಳು ನಾಶವಾಗದಂತೆ ಮಾಡುವವರು) ಮನೋಹರವಾದ ನಿರ್ದುಷ್ಟವಾದ ಸುಖವನ್ನುಣ್ಣುವ, ಇಂತಹವುಗಳು ವೇದಪ್ರತಿ ಪಾದ್ಯಗಳಾಗಿರುವುದರಿಂದ ಮರುತ್ ಎನ್ನಿಸಿಕೊಳ್ಳುವ ಭಗವದ್ರೂಪವಿಶೇಷಗಳು) (ಅಂತಹ ರೂಪ ವಿಶೇಷಗಳಿಂದ ಕೂಡಿಕೊಂಡು ಬಾ) (೨) (ಇಲ್ಲಿ ಮರುತ್ ಅಗ್ನಿ ಶಬ್ದಗಳಿಂದ ಮುಖ್ಯವಾಗಿ ಶ್ರೀ ವಿಷ್ಣುವೇ ಹೇಳಲ್ಪಡುತ್ತಾನೆಂಬುವುದು ಸಿದ್ಧವೇ. ಅಲ್ಲದೆ ರೂಪ

ವಿಶೇಷವನ್ನು ಪ್ರತಿಪಾದಿಸುತ್ತಾರೆ.) ಸರ್ವೇಶ್ವರನಾದ ಶ್ರೀ ಹರಿಯ ಹಿಂದೆ ಹೇಳಿದ ಗುಣಗಳುಳ್ಳ ರೂಪಗಳು ಪ್ರಾಣಸ್ಥಾನಿ=ಇಂದ್ರಿಯಗಳಲ್ಲಿ ನಿಯಾಮಕಗಳಾಗಿರತಕ್ಕವುಗಳು ಅಥವಾ ಪ್ರಾಣ ಅಪಾನಾದಿ ವಾಯುಗಳಲ್ಲಿರತಕ್ಕವುಗಳು ಇವು ಮರುತ್ ಶಬ್ದವಾಚ್ಯಗಳು. ಅಗ್ನಿಸ್ಥಾನಿ= ಜಾಠರಾಗ್ನಿಯಲ್ಲಿ ನಿಯಾಮಕಗಳಾಗಿರುವ ಭಗವದ್ರೂಪಗಳು ಅಗ್ನಿಶಬ್ದ ವಾಚ್ಯಗಳು. ರಾಮಕೃಷ್ಣ ಮೊದಲಾದ ರೂಪಗಳಂತೆಯೇ ಮರುತ್ ಅಗ್ನಿಶಬ್ದ ವಾಚ್ಯ ಭಗವದ್ರೂಪಗಳೂ ಪ್ರತ್ಯೇಕವಾಗಿಯೇ ಇವೆ. ಅಧಿಷ್ಠಾನಾಂತರಗಳಲ್ಲಿ ಇರುವವುಗಳಲ್ಲ. (ಇವು ಆಧ್ಯಾತ್ಮ ರೂಪಗಳು) ಅಂತಹ ಎಲ್ಲಾ ರೂಪಗಳೂ ಮರುತ್, ಅಗ್ನಿ ದೇವತೆಗಳಲ್ಲಿಯೂ ಇವೆ. (ಇದರಿಂದ ಅಧಿದೈವದಲ್ಲಿರತಕ್ಕ ರೂಪವು ಉಕ್ತವಾಯ್ತು.) ಇದು ಬಾಹ್ಯಾರ್ಥವು. ||೫||೩೬||

**ಋ (೧೯೧) ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ । ಮರುದ್ಭಿರಗ್ನ ಆಗಹಿ** ||೬||

ಅ || ಯೇ ದೇವಾಸಃ = ಯಾವ ಮರುತ್ ನಾಮಕ ದೇವತೆಗಳು, ನಾಕಸ್ಯ = ನಿದುಃಖವಾದ ಸ್ವರ್ಗದ ಅಧಿ = ಮೇಲೆ, ದಿವಿ ರೋಚನೇ = (ರುಚದೀಪ್ತೌ) ಸೂರ್ಯಾದಿ ಪ್ರಕಾಶದಲ್ಲಿ, ಆಸತೇ ಇರುತ್ತಾರೋ, ಅಂತಹ ಮುರುತ್‌ಗಳಿಂದ ಕೂಡಿಕೊಂಡು ಬಾ. (ಅಂತೂ ಸ್ವರ್ಗದ ಮೇಲೆ ಇರತಕ್ಕ ಸೂರ್ಯಾದಿ ರೂಪ ಪ್ರಕಾಶದಲ್ಲಿ ಮರುತ್‌ಗಳು ಸನ್ನಿಹಿತರಾಗಿರುತ್ತಾರೆ.) ||೬||

**ಭಾ || (೧) ಸ್ವರ್ಗೋಪರಿ ಪ್ರಕಾಶೇಚ ಸೂರ್ಯಾದಾವಾಸತೇ ಸುರಾಃ । (೨) ನಾಕೋ ನಿರ್ದುಃಖರೂಪತ್ವಾದ್ದ್ಯೌಃ ಪ್ರಕಾಶಸ್ವರೂಪತಃ** ||೬||

ಅ || (೧) ಸ್ವರ್ಗದ ಮೇಲೆ ಇರತಕ್ಕ ಸೂರ್ಯ ಮೊದಲಾದ ಪ್ರಕಾಶದಲ್ಲಿ ಮರುತ್ ದೇವತೆಗಳು ಸನ್ನಿಹಿತರಾಗಿರುತ್ತಾರೆ. (೨) (ಇಲ್ಲಿ ನಾಕಸ್ಯ =ಸ್ವರ್ಗಕ್ಕೆ ಎನ್ನುವುದಕ್ಕೆ ದಿವಿ =ಸ್ವರ್ಗದಲ್ಲಿ ಎನ್ನುವುದರಿಂದ ಪುನರುಕ್ತಿಯು ಎಂದರೆ) ಕಂ=ಸುಖವು. ಅಕಂ = ಸುಖ ವಿರುದ್ಧವಾದ ದುಃಖವು. ನ ವಿದ್ಯತೇ ಅಕಂ ಅಸ್ಮಿನ್ ಎಂಬ ವ್ಯುತ್ಪತ್ತಿಯಿಂದ ನಿರ್ದುಃಖ ಸುಖರೂಪವಾಗಿರುವುದರಿಂದ ನಾಕಃ, ಏವಂಚ ಸರ್ವಥಾ ದುಃಖಶೂನ್ಯವಾಗಿರುವುದರಿಂದ ನಾಕ ಶಬ್ದವಾಚ್ಯವಾದುದು ಸ್ವರ್ಗವು. ಪ್ರಕಾಶಸ್ವರೂಪವಾಗಿರುವುದರಿಂದ ದ್ಯೌಃ ಎಂಬ ಪದವು ಸೂರ್ಯಾದಿರೂಪ ಅರ್ಥವುಳ್ಳದ್ದು. (ಏವಂಚ ದಿವಿ ಎನ್ನುವುದಕ್ಕೆ ಸ್ವರ್ಗದಲ್ಲಿ ಎಂದರ್ಥವಲ್ಲ. ಮತ್ತೆ ಸೂರ್ಯಾದಿರೂಪ ಪ್ರಕಾಶದಲ್ಲಿ ಎಂದರ್ಥವು. ಆದ ಕಾರಣ ಪುನರುಕ್ತಿಯಿಲ್ಲ.) ||೬||

**ಋ || (೧೯೨) ಯ ಈಂಖಯಂತಿ ಪರ್ವತಾನ್ ತಿರಃ ಸಮುದ್ರ ಮರ್ಣವಂ । ಮರುದ್ಭಿರಗ್ನ ಆಗಹಿ** ||೭||

ಅ || ಯೇ = ಯಾವ ದೇವತೆಗಳು, ಪರ್ವತಾನ್ = ಪರ್ವತಗಳನ್ನು, ಈಂಖಯಂತಿ = (ಈಖಿಗತೌ) ಕೈಯಲ್ಲಿ ಹಿಡಿದುಕೊಂಡು ತಿರುಗಾಡಿಸುತ್ತಾರೋ, ಹಾಗೆಯೇ, ಅರ್ಣವಂ =ಜಲಗಳುಳ್ಳ, ಸಮುದ್ರಂ =ಸಾಗರವನ್ನು, ತಿರಃ=ತಿರಸ್ಕರಿಸಿ ಇರುತ್ತಾರೋ, (ವಿಷ್ಣು ಪಕ್ಷದಲ್ಲಿ ಆದರೂ) ಪರ್ವತಾನ್ =ಜನ್ಮಗಳುಳ್ಳ ಪುರುಷರನ್ನು, ಈಂಖಯಂತಿ =ಪ್ರೇರೇಪಿಸುತ್ತಾರೋ,

ಅರ್ಣವಂ=ಜಲಾದಿಭೂತಗಳಿಗೆ ಆಧಾರವಾಗಿರುವುದರಿಂದ ನೀರುಳ್ಳ, ಸಮುದ್ರಂ=ಪ್ರಕೃತಿಯನ್ನು, ತಿರಃ=ತಿರಸ್ಕರಿಸುತ್ತಾರೋ, ನಿಯಮಿಸುತ್ತಾರೋ, ಅಂತಹ ಮರುನ್ನಾಮಕ ದೇವತೆಗಳಿಂದ ಕೂಡಿಕೊಂಡು, ಮರುದಂತರ್ಗತಗಳಾದ ಅಥವಾ ಪ್ರತ್ಯೇಕ ಇರುವ, ಭಗವದ್ರೂಪವಿಶೇಷಗಳಿಂದ ಕೂಡಿ ಅಗ್ನೇ=ಶ್ರೀ ವಿಷ್ಣುವೇ, ಪ್ರಸಿದ್ಧ ಅಗ್ನಿಯೇ, ಆಗಹಿ=ಬಾ ॥೭॥

ಭಾ ॥ (೧) ಪ್ರತೋಲಯಂತಿ ಚ ಗಿರೀಂಸ್ತಿರಸ್ಕೃತ್ಯಚ ಸಾಗರಂ ॥ (೨) ಪುರುಷಾನ್ ಪ್ರಕೃತಿಂ ವಾಪಿ ಪರ್ವವಂತೋ ಹಿ ಜನ್ಮನಾ । ಪುರುಷಾಃ ಸುಸಮುದ್ರೇಕಾತ್ಸಮುದ್ರಾ ಪ್ರಕೃತಿರ್ಮತಾ ॥ (೩) ಪ್ರಕೃತೇ ಪುರುಷಾಣಾಂ ಚ ಪ್ರೇರಕಃ ಸನ್ ಸದಾ ಹರೇ । ಸ್ವರೂಪೈರ್ಬಹುಭಿರ್ಯುಕ್ತ ಆಯಾಹಿ ಸಮಸದ್ಗುಣೈಃ ॥೭॥

ಅ ॥ (೧) ಮರುತ್‌ಗಳು ಪರ್ವತಗಳನ್ನು ಕೈಯಲ್ಲಿ ಹಿಡಿದುಕೊಂಡು ಹಾರಿಸುತ್ತಿರುತ್ತಾರೆ. ತಿರುಗಾಡಿಸುತ್ತಾರೆ. ಹಾಗೆಯೇ ಜಲಭರಿತವಾದ ಸಮುದ್ರವನ್ನು ತಿರಸ್ಕರಿಸುತ್ತಾರೆ. (೨) (ವಿಷ್ಣು ವಿಷಯದಲ್ಲಿ ಪರ್ವತಾನ್ ಸಮುದ್ರಂಚ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ) ಯಾವ ಕಾರಣದಿಂದ ಪುರುಷರು ಜನ್ಮರೂಪವಾದ ಪರ್ವವುಳ್ಳವರೋ, ಆದ ಕಾರಣ ಪುರುಷರು ಪರ್ವತಾಃ ಎನಿಸುತ್ತಾರೆ. ಚೆನ್ನಾಗಿ ಬ್ರಹ್ಮಾದಿಗಳಿಗಿಂತ ಅಧಿಕ್ಯ (ಉತ್ತಮತ್ವ)ವಿದ್ದುದರಿಂದ ಪ್ರಕೃತಿಯು ಸಮುದ್ರಃ ಎನಿಸುತ್ತಾಳೆ. (ಜಲ ಮೊದಲಾದ ಸಮಸ್ತ ಭೂತಗಳಿಗೆ ಆಧಾರಳಾದುದರಿಂದ ಪ್ರಕೃತಿಯು ಅರ್ಣವ ಎನಿಸುತ್ತಾಳೆ.) ಹೀಗೆ ಮರುತ್‌ಗಳು ಪುರುಷರನ್ನೂ ಪ್ರಕೃತಿಯನ್ನೂ ಪ್ರೇರೇಪಿಸುತ್ತಾರೆ. (೩) ಶ್ರೀ ಹರಿಯೇ ಸದಾ ಪ್ರಕೃತಿಗೂ ಪುರುಷರಿಗೂ ಪ್ರೇರಕನಾಗಿ ತನ್ನಿಂದ ನ್ಯೂನವೂ ಅಧಿಕವೂ ಆಗದಿರುವ ಸಮಗಳೇ ಆದ ಜ್ಞಾನಾನಂದಾದಿ ನಿರ್ದುಷ್ಟ ಗುಣಗಳುಳ್ಳ ನಿನ್ನ ಬಹುರೂಪಗಳಿಂದ ಕೂಡಿದವನಾಗಿಯೇ, ಬಾ. (ರಾಜ್ಞಾಸಹ ಮಂತ್ರೀ ಸಮಾಗತಃ ಇತ್ಯಾದಿಗಳಂತೆಯೇ ಮರುತ್ ನಾಮಕ ಭಗವದ್ರೂಪಗಳಿಗೆ ಅಪ್ರಾಧಾನ್ಯವಿಲ್ಲವೆಂದು ತೋರಿಸುವುದಕ್ಕಾಗಿಯೇ ಸಮಸದ್ಗುಣೈಃ ಎಂದದ್ದು) ॥೭॥

ಋ ॥ (೧೯೩) ಆಯೇ ತನ್ವಂತಿ ರಶ್ಮಿಭಿಸ್ತಿರಃ ಸಮುದ್ರಮೋಜಸಾ । ಮರುದ್ಭಿರಗ್ನ ಆಗಹಿ ॥೮॥

ಅ ॥ ಯೇ = ಯಾರು, ರಶ್ಮಿಭಿಃ = ತೇಜಸ್ಸುಗಳಿಂದ, ಜ್ಞಾನವಿಶೇಷಗಳಿಂದ, ಅಥವಾ ಪ್ರಕಾಶಗಳಿಂದ, (ಸಮಸ್ತವನ್ನು) ಆ ತನ್ವಂತಿ =ವ್ಯಾಪಿಸುತ್ತಾರೋ, ಹಾಗೆಯೇ, ಓಜಸಾ = ಸಾಮರ್ಥ್ಯದಿಂದ, ಸಮುದ್ರಂ=ಸಮುದ್ರವನ್ನು, ತಿರಃ=ತಿರಸ್ಕರಿಸುತ್ತಾರೋ, (ಅಂದರೆ ಸಮುದ್ರಕ್ಕಿಂತಲೂ ಹೆಚ್ಚು ಗಾಂಭೀರ್ಯವುಳ್ಳವರಾಗಿರುತ್ತಾರೋ) ಅಂತಹ ಮರುತ್‌ಗಳಿಂದ ಕೂಡಿಕೊಂಡು ಅಗ್ನಿಯೇ ಬಾ. ॥೮॥

ಋ ॥ (೧೯೪) ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂ ಮಧು । ಮರುದ್ಭಿರಗ್ನ ಆಗಹಿ ॥೯॥೩೭॥೧॥೧೯॥

ಅ ॥ (ನಾನು)ತ್ವಾ ಅಭಿ=ನಿನ್ನನ್ನು ಕುರಿತು, ಪೂರ್ವಪೀತಯೇ=ಪ್ರಥಮತಃ ಪಾನ ಮಾಡುವುದಕ್ಕಾಗಿ ಸೋಮ್ಯಂ=ಸೋಮ ರೂಪವಾದ, ಮಧು=ಸ್ವಾದುವಾದ ದ್ರವ್ಯವನ್ನು, ಸೃಜಾಮಿ=ನಿರ್ಮಿಸುತ್ತೇನೆ. ಆದ ಕಾರಣ ಮರತ್‌ಗಳಿಂದ ಕೂಡಿ ಅಗ್ನಿಯೇ ಬಾ ॥ ॥೯॥೩೭॥೧॥೧೯॥

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀ ಮದೃಗ್ಭಾಷ್ಯೇ ಪ್ರಥಮೋಧ್ಯಾಯಃ**

**ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿದ ಋಗ್ಭಾಷ್ಯದಲ್ಲಿ**
**೧ನೇ ಅಧ್ಯಾಯವು ಸಮಾಪ್ತವಾಯ್ತು.**

## ಋಗ್ಭಾಷ್ಯಂ

ಅಶೇಷಗುಣಸಂಪೂರ್ಣಂ ಸರ್ವದೋಷವಿವರ್ಜಿತಂ ।
ಅನಂತಾಮ್ನಾಯಸಂವೇದ್ಯಂ ವಂದೇಽಹಂ ಕಮಲಾಪತಿಂ ॥
ಪ್ರಣ್ಯ ಶ್ರೀಮದಾನಂತತೀರ್ಥಾದಿ ಗುರುಶೇಖರಾನ್
ಅದ್ಯಾಧ್ಯಾಯಸ್ಯ ಮಂತ್ರಾರ್ಥಾನ್ ಭಾಷ್ಯಟೀಕಾದಿರೂಪಿತಾನ್
ಸಮಗ್ರಹೀಷ್ಮ ಬಾಲಾನಾಂ ಬೋಧಾಯ ಪ್ರೀತಯೇ ಹರೇಃ ॥
ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥
ತಂತ್ರಿ ನಾರಾಯಣೇನಾಸ್ಯ ವ್ಯಾಖ್ಯಾ ಕಾರ್ಣಾಟಕೀ ಕೃತಾ ।
ಭೂಯಾತ್ ಕುಸುಮ ಮಾಲೇವ ಪ್ರೀತ್ಯೈ ಮಾಧವ ಮಧ್ವಯೋಃ ॥

॥ಶ್ರೀಃ॥

||ಶ್ರೀ||

# ಎರಡನೇ ಅಧ್ಯಾಯವು

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ**

**ಲಕ್ಷ್ಮೀಹಯಗ್ರೀವಾಯ ನಮಃ**

**ಶ್ರೀಮಧ್ವಗುರುಸಂಸೇವ್ಯಂವೇದವೇದ್ಯಗುಣಾರ್ಣವಂ।**

**ನಿರ್ದೋಷಂ ಶ್ರೀಹರಿಂ ವಂದೇ ಪೂರ್ಣಪ್ರಜ್ಞಗುರೂನಪಿ॥**

ಅವ||೮ ಋಕ್ಕುಗಳು. ೨ ವರ್ಗಗಳು. ಅರ್ಭವ. (ಋಭುದೇವತಾಕ) ವಾದುದು. ಗಾಯತ್ರ ಸೂಕ್ತವು.

**ಋ। (೧೯೫)ಅಯಂ ದೇವಾಯ ಜನ್ಮನೇ ಸ್ತೋಮೋ ವಿಪ್ರೇಭಿ ರಾಸಯಾ । ಅಕಾರಿ ರತ್ನಧಾತಮಃ ||೧||**

ಅ || ವಿಪ್ರೇಭಿಃ=ಮೇಧಾತಿಥಿ ಮೊದಲಾದ ಜ್ಞಾನಿಗಳಿಂದ, ಅಯಂ=ಈ ಬುದ್ಧಿಯಲ್ಲಿರತಕ್ಕ, ರತ್ನಧಾತಮಃ =ಅತಿಶಯಿತ ಸುಖವನ್ನು ಕೊಡುವವನಾದುದರಿಂದ, ಸ್ತೋಮಃ=ಸ್ತುತಿಯು, ಜನ್ಮನೇ=ಸಮಸ್ತರ ಉತ್ಪತ್ತಿಕರ್ತನಾದ, ದೇವಾಯ=ಕ್ರೀಡಾದಿ ಗುಣವಿಶಿಷ್ಟನಾದ, ವಿಷ್ಣುವಿಗೋಸ್ಕರ, ಆಸಯಾ=ಅಸು ಕ್ಷಿಪಣೇ ಆಸ್ಯಂತೇ ಕ್ಷಿಪ್ಯಂತೇ=ಉಚ್ಚರಿಸಲ್ಪಡುತ್ತವೆ. ವರ್ಣಾಃ ಅನಯಾ ಎಂಬ ವ್ಯುತ್ಪತ್ತಿಯಿಂದ) ಮುಖದಿಂದ, (ಮನಸ್ಸಿನಿಂದ ಮಾತ್ರವಲ್ಲ, ಮತ್ತೆ ವಚನದಿಂದಲೂ,) ಅಕಾರಿ=ಮಾಡಲ್ಪಟ್ಟಿತು. ಏವಂಚ ವಿಷ್ಣುವಿಗಾಗಿ ಸ್ತೋತ್ರವು ಮಾಡಲ್ಪಟ್ಟಿತು.) (ಋಭುವಿಷಯದಲ್ಲಿ) ಜನ್ಮನೇ (ಮಾನುಷಾ ಏವ ಹಿ ತೇ ದೇವಾ ಜಾತಾಃ ಎಂಬ ನಿಗಮದಿಂದ) (ಋಭು ಎಂಬವನು ಒಬ್ಬನೇ ಆದಾಗ್ಯೂ, ವಿಭ್ವಾ ವಾಜಃ, ಎಂಬಿಬ್ಬರನ್ನು ಸಾಹಚರ್ಯದಿಂದ ಋಭು ಎಂಬ ನಾಮದಿಂದಲೇ ೩ ಮಂದಿಯನ್ನು ತೆಗೆದುಕೊಳ್ಳಬೇಕು. (ಏವಂಚ ಒಂದೇ ಸ್ತುತಿಗೂ ಋಷಿಗಳು ಬಹು ಮಂದಿ ಇದ್ದಾರೆ.) ||೧||

**ಭಾ || ಸರ್ವಜನ್ಮಕೃತೇ ವಿಷ್ಣು ದೇವಾಯೇಯಂ ಸ್ತುತಿಃ ಕೃತಾ ।**
**ಮುಖೇನ ವಿಪ್ರೈಃ ಕಾಣ್ವಾದ್ಯೈಃ ಸೈವ ಯದ್ರತಿಧಾತಮಾ ||೧||**

ಅ || ಯಾವ ಕಾರಣದಿಂದ ಆ ವಿಷ್ಣುವಿನ ಸ್ತುತಿಯೇ ಅತಿಶಯವಾಗಿ ಸುಖವನ್ನು ಕೊಡತಕ್ಕುದೋ ಆ ಕಾರಣ ಪ್ರತಿಭೆಯುಳ್ಳ ಕಣ್ವ ಋಷಿಗಳ ಪುತ್ರರಾದ ಮೇಧಾ ತಿಥಿ ಮೊದಲಾದವರಿಂದ, ಸಮಸ್ತ ಕಾರ್ಯಗಳಿಗೆ ಉತ್ಪಾದಕನಾದ (ವಿಷ್ಣು ವ್ಯತಿರಿಕ್ತ ಬ್ರಹ್ಮಾದಿಗಳಿಗೂ ಉತ್ಪಾದಕನಾದ) ಶ್ರೀ ವಿಷ್ಣು ದೇವನಿಗೋಸ್ಕರ, ಮುಖದಿಂದ ಈ ಸ್ತೋತ್ರವು ಮಾಡಲ್ಪಟ್ಟಿತು.

ವಿ || (1) ಯದ್ಯಪಿ ಮೂವರ ಮಧ್ಯದಲ್ಲಿ ಋಭು ಎಂಬ ಹೆಸರು ಒಬ್ಬನಿಗೇನೇ ಆದಾಗ್ಯೂ ಋಭುರ್ವಿ ಭ್ವಾ

ವಾಜೋ ದೇವಾ ಆ ಗಚ್ಛತ ಇತ್ಯಾದಿಗಳಲ್ಲಿ ಸಾಹಚರ್ಯವಿದ್ದುದರಿಂದ ಋಭು ಎಂಬ ಒಬ್ಬನ ನಾಮದಿಂದಲೇ ಮೂವರನ್ನೂ ಇಟ್ಟುಕೊಳ್ಳಬೇಕು. (2) ಸ್ತೋಮಃ ಎನ್ನುವುದರಿಂದ ಒಂದು ಸ್ತುತಿಯು ಒಬ್ಬನದ್ದು ಎಂದು ಹೇಳಿಯದೆ. ಆದ ಕಾರಣ ವಿಪ್ರೇಭಿಃ ಎಂದು ಸ್ತೋತೃಗಳಿಗೆ ಬಹುತ್ವ ಹೇಳಿದ್ದು ಹೇಗೆ ಕೂಡುತ್ತದೆ. ಎಂದರೆ ಒಂದೇ ವೇದಾದಿ ಸ್ತೋತ್ರಕ್ಕೂ ಸ್ತೋತೃಗಳು ಬಹುಮಂದಿ ಇರುತ್ತಾರೆ, ಆದಕಾರಣ ವಿಪ್ರೇಭಿಃ ಎಂದು ಬಹುವಚನವು ಕೂಡುತ್ತದೆ. (3) ಅಕಾರಿ ಎಂದು ಭೂತ ಕಾಲಿಕವನ್ನು ಹೇಳಿದುದರಿಂದ ಹಿಂದೆ ಮಾತ್ರ ಸ್ತೋತ್ರ ಮಾಡಿದ್ದು ವರ್ತಮಾನ ಕಾಲದಲ್ಲಿಯೂ ಭವಿಷ್ಯತ್ಕಾಲದಲ್ಲಿಯೂ ಸ್ತೋತ್ರ ಮಾಡುವುದಿಲ್ಲ ಎಂಬ ಶಂಕೆಯು ಪ್ರಾಪ್ತವಾಗುತ್ತದೆಂದರೆ-ವೇದವು ಅನಾದಿ ನಿತ್ಯವಾದುದರಿಂದ ಸ್ತೋತ್ರ ಮಾಡುವುದಿಲ್ಲ ಎಂಬ ಶಂಕೆಯು ಪ್ರಾಪ್ತವಾಗುತ್ತದೆಂದರೆ-ವೇದವು ಅನಾದಿ ನಿತ್ಯವಾದುದರಿಂದ ಸ್ತೋತ್ರ ಮಾಡುವುದೂ ಪ್ರವಾಹತಃ ಅನಾದಿ ನಿತ್ಯವಾದ ಪ್ರಯುಕ್ತ ಉತ್ತರೋತ್ತರ ಕಾಲದಲ್ಲಿ ಪೂರ್ವ ಪೂರ್ವ ಕಾಲೀನ ಸ್ತುತಿಯನ್ನು ವಿವಕ್ಷಾಕಾಲೀನ ಸ್ತುತಿಯನ್ನು ವಿವಕ್ಷಾ ಮಾಡಿಕೊಂಡು ಅಕಾರಿ ಎಂದು ಭೂತಕಾಲಿಕ ಪ್ರಯೋಗವನ್ನು ಮಾಡಿದ್ದು. (4) ಮತ್ತು ಋಷಿಗಳ ಪ್ರವಾಹವೂ ಅನಾದಿಯಾಗಿರುವುದರಿಂದ ಮೊದಲಿನ ಮೇಧಾತಿಥಿ ಮೊದಲಾದ ಋಷಿಗಳು ಸ್ತೋತ್ರ ಮಾಡಿರುವುದರಿಂದ ಅಕಾರಿ ಎಂದು ಭೂತಾರ್ಥಕ ಲುಙ್ ಪ್ರಯೋಗವು ಯುಕ್ತವು. (5) ಋಭು ವಿಷಯದಲ್ಲಿ ಆದರೂ ಮಾನುಷಾ ಏವ ಹಿ ತೇ ದೇವಾಃ ಜಾತಾಃ ಎಂದು ನಿಗಮವು (ಸಮಾಖ್ಯಾ ಶ್ರುತಿಯು) ತದುಪರ್ಯಪಿ ಬಾದರಾಯಣಸ್ಸಂಭವಾತ್, ಮನುಷ್ಯಾನಾಮೇವ ಸತಾಂ ದೇವಾದಿತ್ವ ಪ್ರಾಪ್ಯ್ಯ ಪರಿ (ಬ್ರ. ಸೂ. ೧. ೩. ೨೬) ಎಂದು ಹೇಳಿದ ನ್ಯಾಯ, ಇವುಗಳಿಂದ ಒಂದೇ ಜನ್ಮದಲ್ಲಿ ಮನುಷ್ಯರಾಗಿರತಕ್ಕವರೇ ದೇವತೆಗಳಾಗಿ ಹುಟ್ಟಿರುವ ಋಭುಗಳಿಗೋಸ್ಕರ ಎಂದರ್ಥವು. (6) ಮರ್ತಾಸಃ ಸಂತೋ ಅಮೃತತ್ವ ಮಾನಶುಃ । ಸೌಧನ್ವನಾ ಋಭವಃ ಸೂರಚಕ್ಷಸೇ ಎಂದು ಉತ್ತರತ್ರ ಇದ್ದ ಪ್ರಯುಕ್ತವೂ ಒಂದೇ ಜನ್ಮದಲ್ಲಿ ಎಂದು ಅರ್ಥ ಮಾಡಬೇಕು. ಬಾಕಿ ಹಿಂದಿನಂತೆ ಅರ್ಥ. ॥೧॥

ಋ ॥ (೧೯೬) ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ । ಶಮೀಭಿರ್ಯಜ್ಞಮಾಶತ ॥೨॥

ಅ ॥ ಯೇ=ಯಾವ ಋಭುಗಳು. ಇಂದ್ರಾಯ=ಇಂದ್ರನ ಉದ್ದಿಶ್ಯ, ವಚೋಯುಜಾ=ವಚಸಾಯುಜ್ಯೇತೇ ಎಂಬ ವ್ಯುತ್ಪತ್ತಿಯಿಂದ ಸಾರಥಿಯ ವಾಙ್ಮಾತ್ರದಿಂದಲೇ ರಥದಲ್ಲಿ ಸಂಬದ್ಧಗಳಾಗುವ, ಹರೀ=ಕುದುರೆಗಳನ್ನು ಮನಸಾ=ಸಂಕಲ್ಪ ಮಾತ್ರದಿಂದಲೇ, ತತಕ್ಷುಃ=(ತಕ್ಷರಣೇ) ಮಾಡಿರುವರೋ, ಯೇಚ=ಯಾರು, ಶಮೀಭಿಃ=ಶಮೋ ಮನ್ನಿಷ್ಠತಾಬುದ್ಧೇಃ ಎಂಬ ಪ್ರಮಾಣದಿಂದ ಶ್ರೀಪರಮಾತ್ಮನಲ್ಲಿಯೇ ಆಸಕ್ತಗಳಾದ ಬುದ್ಧಿಗಳಿಂದ ಯಜ್ಞಂ=ಯಜ್ಞ ಭಾಗವನ್ನು, ಆಶತ=(ಅಶೂವ್ಯಾಪ್ತೌ) ಹೊಂದಿರುವರೋ, (ಅಂತಹವರಿಗೋಸ್ಕರ ಸ್ತುತಿಯು ಮಾಡಲ್ಪಟ್ಟಿತು. (ಇಲ್ಲಿ ಋಭ್ವಾದಿ ದೇವತೆಗಳಲ್ಲಿರತಕ್ಕ ಲಿಂಗಗಳು ಆವಾವ ಅಂತರ್ಯಾಮಿ ಭಗವದ್ರೂಪಗಳಲ್ಲಿ ಮುಖ್ಯಗಳೆಂದು ಶಾಸ್ತ್ರದೃಷ್ಟ್ಯಾತೂಪದೇಶೋಃ ವಾಮದೇವವತೌ (೧.೧.೩.) ಇತ್ಯಾದಿ ಸೂತ್ರಗಳಲ್ಲಿ ವ್ಯಕ್ತಗಳಾಗಿವೆ. ಎಂದು ಅವರವರಲ್ಲಿ ಅಂತರ್ಗತ ರೂಪವನ್ನು ಅಪೇಕ್ಷಿಸಿ ಮಂತ್ರಗಳನ್ನು ಶ್ರೀ ವಿಷ್ಣುವಿನಲ್ಲಿ ಯೋಜನಾ ಮಾಡಬೇಕು.) (ಪ್ರತ್ಯೇಕವಾಗಿರುವ ಭಗವದ್ರೂಪಗಳೆನ್ನುವ ಪಕ್ಷದಲ್ಲಿ ಆದರೂ) (ಯೇ=ಯಾವ ಭಗವದ್ರೂಪ ವಿಶೇಷಗಳು, ಶಮೀಭಿಃ=ಇಂದ್ರದೇವರು ಮಾಡಿರುವ, ಶ್ರೀ

ಪರಮಾತ್ಮನಲ್ಲಿಯೇ ಆಸಕ್ತವಾದ ಬುದ್ಧಿಸಾಧ್ಯಕ್ರಿಯೆಗಳಿಂದ, (ಸಂತುಷ್ಟಗಳಾಗಿ) ಯಜ್ಞಂ=ಇಂದ್ರನ ಸಂಬಂಧಿಯಾದ ಯಜ್ಞವನ್ನು (ಋಭುಗಳಿಂದ) ಆಶತ=ಹೊಂದಿರುತ್ತಾವೋ, ಇಂದ್ರನ ಉದ್ದಿಶ್ಯ ಸಂಕಲ್ಪ ಮಾತ್ರದಿಂದ ವಾಙ್ಮಾತ್ರದಿಂದಲೇ ರಥದಲ್ಲಿ ಯೋಚಿಸಲ್ಪಟ್ಟವುಗಳನ್ನಾಗಿ ಕುದುರೆಗಳನ್ನು ಮಾಡಿರುತ್ತಾವೋ ಅಂತಹ ಭಗವದ್ರೂಪಗಳಿಗಾಗಿ ಸ್ತುತಿಯು ಮಾಡಲ್ಪಟ್ಟಿತು. (ಹೀಗೆಯೇ ಮೇಲಿನ ಋಕ್ಕುಗಳಲ್ಲಿಯೂ ಇತರರಿಗಾಗಿ ರಥ ಕರಣಾದಿಗಳನ್ನು ಹೇಳಿದರೆ ಅಂತರ್ಯಾಮಿ ವಿವಕ್ಷೆಯಿಂದ ಅಥವಾ ಇತರ ಕರಗಣಗಳಿಂದ ಎಂದು ತಿಳಿಯಬೇಕು.) (ಅಧ್ಯಾತ್ಮರೂಪದಲ್ಲಿ ಯಾವ ಋಭುನಾಮಕ ಭಗವದ್ರೂಪ ವಿಶೇಷಗಳು ಶರೀರದಲ್ಲಿತಕ್ಕವುಗಳು ಬಿಂಬಾದಿರೂಪಿಯಾದ ಪರಮಾತ್ಮನನ್ನು ವಿಷಯೀಕರಿಸಲಿಕ್ಕಾಗಿ ಭಕ್ತರ ಮನೋಬುದ್ಧಿಗಳನ್ನು ವೇದಾನುಸಾರಿಗಳನ್ನಾಗಿ ಸಂಕಲ್ಪ ಮಾತ್ರದಿಂದಲೇ ಮಾಡಿರುತ್ತಾವೋ ತತ್ಸಂಬಂಧಿಗಳಾದ ಪರಮಾತ್ಮನಲ್ಲಿಯೇ ಆಸಕ್ತ ಬುದ್ಧಿಗಳಿಂದ ಜ್ಞಾನಯಜ್ಞವನ್ನು ಹೊಂದಿರುತ್ತಾವೋ ಅಂತಹ ಭಗವದ್ರೂಪಗಳಿಗಾಗಿ ಸ್ತೋತ್ರವು ಮಾಡಲ್ಪಟ್ಟಿತು. ||೨||

ಭಾ || ವಾಙ್ಮಾತ್ರೇಣೈವ ಯೋಜ್ಯಾ ಯೇ ಚಕ್ರುರಿಂದ್ರಾಯ ವಾಜಿನೌ । ಶಮೀಭಿರ್ವಿಷ್ಣು ನಿಷ್ಠಾಭಿರ್ಯಜ್ಞಂ ಭಾಗಂ ಚ ಲೇಭಿರೇ || (೨) ಭಗವಾಂಶ್ಚೈತದಖಿಲಂ ಕೃತವಾನಭುಷು ಸ್ಥಿತಃ || ಪೃಥಗ್ವಾ ಫಲದಾತೃತ್ವಾತ್ ||೨||

ಅ || (೧) ಯಾವ ಋಭುಗಳು ಇಂದ್ರನ ಉದ್ದಿಶ್ಯ ಕುದುರೆಗಳನ್ನು ಸಾರಥಿಯ ವಾಙ್ಮಾತ್ರದಿಂದಲೇ ರಥದಲ್ಲಿ ಸಂಬದ್ಧಗಳನ್ನಾಗಿ ಸಂಕಲ್ಪ ಮಾತ್ರದಿಂದಲೇ ಮಾಡುತ್ತಾರೋ, ಯಾರು ವಿಷ್ಣುವಿನಲ್ಲಿಯೇ ಆಸಕ್ತಗಳಾದ ಬುದ್ಧಿಗಳಿಂದ ಯಜ್ಞ ಭಾಗವನ್ನು ಹೊಂದಿರುತ್ತಾರೋ, ಅಂತಹವರಿಗೆ ನಮಸ್ಕಾರವು ಮಾಡಲ್ಪಟ್ಟಿತು. (೨) (ಹಾಗಾದರೆ ಋಭುಗಳು ಇಂದ್ರನ ಭೃತ್ಯರಾದುದರಿಂದ ಇಂದ್ರನಿಗಾಗಿ ಋಭುಗಳಿಗೆ ರಥದಲ್ಲಿ ಅಶ್ವಸಂಯೋಜನಾದಿಗಳು ಕೂಡುತ್ತವೆ. ಮತ್ತು ಮೊದಲು ಮನುಷ್ಯರಾಗಿದ್ದವರು ದೇವತ್ವವನ್ನು ಹೊಂದಿರುವುದರಿಂದ ಯಜ್ಞ ಭಾಗವನ್ನು ಹೊಂದಿರುತ್ತಾರೆಂಬುವುದೂ ಕೂಡುತ್ತದೆ. ಆದರೆ ಶ್ರೀ ವಿಷ್ಣುವು ಇಂದ್ರನ ಭೃತ್ಯನಾಗದಿರುವುದರಿಂದಲೂ ಹೊಸತಾಗಿ ದೇವತ್ವವನ್ನು ಹೊಂದದಿರುವುದರಿಂದಲೂ ಆತನಿಗೆ ಇಂದ್ರನ ಉದ್ದಿಶ್ಯ ಇತರ ದೇವತೆಗಳಲ್ಲಿ ಕೂಡತಕ್ಕ ಅಶ್ವ ನಿರ್ಮಾಣಾದಿಗಳು ಹೇಗೆ ಕೂಡುತ್ತವೆಂದರೆ) ಶ್ರೀ ಭಗವಂತನು ಋಭುಗಳಲ್ಲಿದ್ದವನಾಗಿ ಈ ಎಲ್ಲಾ ಅಶ್ವ ನಿರ್ಮಾಣಾದಿಗಳನ್ನು ಮಾಡಿದನು. (ಏತತ್ ಎನ್ನುವುದರಿಂದಲೇ ಅಶ್ವ ನಿರ್ಮಾಣಾದಿಗಳು ಎನ್ನುವ ಅರ್ಥವು ಸಿದ್ಧವಾಗುವುದಾದರೂ ಮುಂದೆ ಹೇಳುವ ರಥ ನಿರ್ಮಾಣಾದಿಗಳಿಗೂ ಸಂಗ್ರಹವಾಗಬೇಕೆನ್ನುವ ಉದ್ದಿಶ್ಯಅಖಿಲಂ ಎಂಬ ಪದವನ್ನು ಹೇಳಿದ್ದು.) (ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋಧಯನ್ ಎಂಬ ಪ್ರಮಾಣದಿಂದ ಆವಾವ ಕ್ರಿಯೆಗಳು ಅವರವರಲ್ಲಿ ಅಂತರ್ಗತವಾದ ಶ್ರೀ ಭಗವಂತನಿಂದಲೇ ಮಾಡಲ್ಪಡುತ್ತವೆ ಎಂದು ಪ್ರಸಿದ್ಧವು.) ಅಥವಾ ಶ್ರೀ ಹರಿಯೇ ಇಂದ್ರಾದಿಗಳಿಗೆ ಫಲವನ್ನು ಕೊಡುವವನಾದುದರಿಂದ ಋಭುಗಳಲ್ಲಿರತಕ್ಕ ರೂಪವನ್ನು ಹೊರತೇ ಪ್ರತ್ಯೇಕವಾದ ತನ್ನ ಈಶ್ವರ ರೂಪದಿಂದಲೇ ಅಶ್ವ ನಿರ್ಮಾಣಾದಿಗಳೆಲ್ಲವನ್ನು ಮಾಡಿದನು. ||೨||

ಋ || (೧೯೭) ತಕ್ಷನ್ನಾ ಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ । ತಕ್ಷನ್ ಧೇನುಂ ಸಬರ್ದುಘಾಂ ||೩||

ಅ ॥ (ಋಭುಗಳು) ನಾಸತ್ಯಾಭ್ಯಾಂ=ಅಶ್ವಿನೀ ದೇವತೆಗಳಿಗಾಗಿ, ಪರಿಜ್ಮಾನಂ=ಸಮಸ್ತ ಭೂಮಿಗಳ ಸುತ್ತಮುತ್ತಲೂ ಹೋಗುವ, (ತಡೆಯಿಲ್ಲದ ಗತಿಯುಳ್ಳ) ಸುಖಂ=ಅನಾಯಾಸದಿಂದ ಹೊರಲಿಕ್ಕೆ ಯೋಗ್ಯವಾದ, ರಥಂ=ರಥವನ್ನು, ತಕ್ಷನ್=ಮಾಡಿದರು. ಸಬರ್ದುಘಾಂ=(ಬಕಾಮನೇ) ಸಮಸ್ತ ಕಾಮ್ಯಗಳನ್ನು ಕರೆಯುವ, (ಕೊಡುವ) ಧೇನುಂ=ಬೃಹಸ್ಪತಿಯ ಕಾಮಧೇನುವನ್ನೂ, ತಕ್ಷನ್=ಮಾಡಿದರು. (ಯದ್ಯಪಿ ಅಶ್ವಿನೀ ದೇವತೆಗಳಲ್ಲಿ ಒಬ್ಬನಿಗೆ ಮಾತ್ರ ನಾಸತ್ಯವೆಂದು ಹೆಸರು. ಆದರೂ ಆತನ ಸಾಹಚರ್ಯದಿಂದ ಸದಾಽವಿಯೋಗೌದಿವಿಜೇಷು ದಸ್ರೌ ಎಂಬ ಪ್ರಮಾಣದಿಂದ ನಿತ್ಯದಲ್ಲಿಯೂ ಅವಿಯುಕ್ತರಾದುದರಿಂದ ಇಬ್ಬರೂ ನಾಸತ್ಯರೆಂದು ಹೇಳಲ್ಪಡುತ್ತಾರೆ. ಪೃಥಕ್ ಪೃಥಕ್ ನಾಮಗಳಿದ್ದುದರಿಂದಲೇ ನಾಸತ್ಯದಸ್ರೌ ಕ್ರಮಶಃ ಪ್ರಸೂತೌ, ಎಂದು ತಾತ್ಪರ್ಯ ನಿರ್ಣಯದಲ್ಲಿಯೂ ನಾಸತ್ಯದಸ್ರೌ ಪರಮಸ್ಯ ನಾಸ ಎಂದು ಭಾಗವತದಲ್ಲಿಯೂ ಹೇಳಿರುವರು.) ॥೩॥

**ಭಾ ॥ (೧) ಪರಿತೋಽಜ್ಮಾಂ ಯಶ್ಚರೇತ್ । ಪರಿಜ್ಮಾಽತೋ ರಥಃ (೨) ಕಾಮ್ಯಂ ಸಬುರಿತ್ಯಭಿಧೀಯತೇ । ಬ ಕಾಮನ ಇತಿ ಹ್ಯಸ್ಮಾತ್ ॥೩॥**

ಅ ॥ (೧) ಯಾವ ಕಾರಣದಿಂದ ಭೂಮಿಯ ಸುತ್ತಮುತ್ತಲೂ ರಥವು ಸಂಚರಿಸುತ್ತದೋ, ಆದಕಾರಣ ರಥವು ಪರಿಜ್ಮಾ ಎನಿಸುತ್ತದೆ. (೨) (ಸಬರ್ದುಘಾಂ ಎನ್ನುವಲ್ಲಿದ್ದ ಸಬರ್ ಎನ್ನುವುದರ ಅರ್ಥ ಹೇಳುತ್ತಾರೆ.) ಬ ಕಾಮನೇ ಎನ್ನುವ ಧಾತು ವ್ಯಾಖ್ಯಾನದಿಂದ ಕರ್ಮಾರ್ಥದಲ್ಲಿ ರ ಪ್ರತ್ಯಯವೂ ಸಡಾಗಮವೂ ಬಂದರೆ ಸಬರ್ ಎಂದಾಗುತ್ತದೆ. ಸಬರ್ ಎನ್ನುವ ಶಬ್ದದಿಂದ ಸರ್ವಕಾಮ್ಯವು ಹೇಳಲ್ಪಡುತ್ತದೆ. ॥೩॥

**ಋ ॥ (೧೯೮) ಯುವಾನಾ ಪಿತರಾ ಪುನಃ ಸತ್ಯ ಮಂತ್ರಾ ಋಜೂಯವಃ। ಋಭವೋ ವಿಷ್ಟ್ಯಕ್ರತ ॥೪॥**

-ಅ ॥ ಋಭವಃ=ಜ್ಞಾನಕ್ಕೆ ಆಶ್ರಯರಾದುದರಿಂದ ಋಭು ಎನಿಸಿಕೊಂಡ ವಿಷ್ಣುರೂಪ ವಿಶೇಷಗಳೂ ಅಥವಾ ಕರ್ಮವು ಸತ್ಯವಾಗಿ ಉಳ್ಳವರು, ಅಥವಾ ಋತಂ=ಯಜ್ಞಭಾಗವನ್ನು ಭೂತಾಃ=ಹೊಂದಿರುವ ಋಭುಗಳೆನಿಸಿಕೊಂಡ ಪ್ರಸಿದ್ಧ ದೇವತೆಗಳೂ ಕೂಡ, ಋಜೂಯವಃ=ಬ್ರಹ್ಮತ್ವಕ್ಕೆ ಯೋಗ್ಯರಾದ ಋಜುಗಳನ್ನು ತಮಗೆ ಸ್ವಾಮಿಗಳನ್ನಾಗಿ ಇಚ್ಛಿಸುವವರಾಗಿ (ಅಂದರೆ ಋಜುಗಳ ಭಕ್ತರಾಗಿ) ಸತ್ಯಮಂತ್ರಾಃ=ಅಮೋಘ ಮಂತ್ರಗಳುಳ್ಳವರಾಗಿ, ಪಿತರಾ=ಸುಧನ್ವಾ ಎನ್ನುವ ತನ್ನ ತಂದೆಯನ್ನು, ತನ್ನ ತಾಯಿಯನ್ನು ಕೂಡ, ಪುನಃ=ತಿರುಗಿ, ಯುವಾನಾ=ತರುಣರನ್ನಾಗಿ, ಅಕ್ರತ=ಮಾಡಿದರು. (ಜೀರ್ಣರಾದ ಮಾತಾಪಿತೃಗಳನ್ನು ತಿರುಗಿ ತರುಣರನ್ನಾಗಿ ಮಾಡಿದರು. ) ಮತ್ತು, ವಿಷ್ಟೀ=(ವೇತನವಿಲ್ಲದೆ ಸ್ವಾಮಿಯ ಬಲಾತ್ಕಾರದಿಂದ ಯಾವ ಕರ್ಮವು ಮಾಡಲ್ಪಡುತ್ತದೋ, ಅದು ವಿಷ್ಟಿಯೆನಿಸುತ್ತದೆ.) ಅಂತಹ ಕರ್ಮವನ್ನು (ಏಕಂ ಚಮಸಂ ಚತುರಃ ಕೃಣೋತನ ಎಂದು ಹೇಳುವ ಪ್ರಕಾರ, ಅಕ್ರತ= (ಡುಕೃಞ್ ಕರಣೇ) ದೇವತೆಗಳಿಗಾಗಿ ಮಾಡಿದರು. (ಇಲ್ಲಿ ಋಜು ಭಕ್ತತ್ವ ಮೊದಲಾದ, ಅನ್ಯರಲ್ಲಿರತಕ್ಕ ಲಿಂಗಗಳನ್ನು ಅವರ ಅಂತರ್ಯಾಮಿಯನ್ನು ಇಟ್ಟುಕೊಂಡು ಹೇಳಿದ್ದೆಂದು ತಿಳಿಯಬೇಕು. ಹಾಗಾದರೆ ನೀಚತ್ವವನ್ನು ಹೊಂದಿಸಿ ಕೊಡುವ ಲಿಂಗವು ಶ್ರೀವಿಷ್ಣುವಿನಲ್ಲಿ ಹೇಗೆ ಕೂಡುತ್ತದೆಂದರೆ ಸರ್ವಶಾಸ್ತೃತ್ವರೂಪವಾದ ಸಮಸ್ತ ವ್ಯಾಪಾರ ಕರ್ತೃತ್ವರೂಪವಾದ ಸ್ವಾತಂತ್ರ್ಯವು ಶ್ರೀವಿಷ್ಣುವಿಗೇನೇ ಇದ್ದ ಪ್ರಯುಕ್ತ ಕೂಡುತ್ತದೆ.) ॥೪॥

ಭಾ ॥ (೧। ಸುಧನ್ವೈ ಷಾಂ ಪಿತಾ ಸ್ಮೃತಃ। (೨) ಬೃಹಸ್ಪತೇಃ ಕಾಮದೇನುಮೃಜುಭಕ್ತಾ ಋಜೂಯವಃ॥ (೩) ಅವೇತನಂ ಸ್ವಾಮಿಬಲಾತ್ಕರ್ಮ ವಿಷ್ಟ್ಯತ್ರ ತೇಽಕೃತ॥ (೪) ಋತಭೂಮಿರ್ಜ್ಞಾನಭೂಮಿರ್ಭಗವಾನೃಭುರೀರಿತಃ॥ (೫) ಯೇಷಾಂ ಭೂತ ಮೃತಂ ಕರ್ಮ ಯಜ್ಞಭಾಗಾಪ್ತಿತೋಽಪಿ ತೇ ॥೪॥

ಅ॥ (೧) (ಋಭುಗಳಿಗೆ ತಂದೆಯು ಯಾರೆಂದರೆ) (ಸುಧನ್ವಾ ಎಂಬ ಅಂಗೀರಸನಿಗೆ ಋಭುಃ ವಿಭ್ವಾವಾಜಃ ಎಂಬ ಮೂವರು ಮಕ್ಕಳು ರಥಕಾರರಾದರು, ಎಂದು ಅಶ್ವಾದಶ್ವಮತಕ್ಷತ ಇತ್ಯಾದಿಗಳಲ್ಲಿ ಹೇಳುವರು. ಆದ ಕಾರಣ) ಸುಧನ್ವಾ ಎನ್ನುವವನು ಈ ಋಭುಗಳ ತಂದೆಯು. (೨) (ಹಿಂದಿನ ಋಕ್ಕಿನಲ್ಲಿ ಸಬರ್ದು ಘಾಂಧೇನುಮತಕ್ಷನ್ ಎಂದು ಹೇಳಿದೆ. ಈ ಕಾಮಧೇನುವು ಯಾರದ್ದೆಂದರೆ) (ಇಂದ್ರೋ ಹರೀಯುಯುಜೇ ಅಶ್ವಿನಾ ರಥಂ ಬೃಹಸ್ಪತಿರ್ವಿಶ್ವರೂಪಾಮುಪಾಜತ ಎನ್ನುವಲ್ಲಿ ಇಂದ್ರನು ಕುದುರೆಗಳನ್ನು ಹೊಂದಿದನು. ಅಶ್ವಿನೀ ದೇವತೆಗಳು ರಥವನ್ನು ಹೊಂದಿದರು, ಬೃಹಸ್ಪತಿಯು ವಿಶ್ವರೂಪವುಳ್ಳ ಕಾಮಧೇನುವನ್ನು ಹೊಂದಿದನು ಎಂದು ಮುಂದೆ ಹೇಳುವದರಿಂದ) ಬೃಹಸ್ಪತಿಯ ಕಾಮಧೇನುವನ್ನು ಎಂದರ್ಥವು. (ಋಜೂಯವ ಶಬ್ದಾರ್ಥವನ್ನು ಹೇಳುತ್ತಾರೆ.) ಬ್ರಹ್ಮ ಪದವಿಗೆ ಯೋಗ್ಯರಾದ ದೇವತೆಗಳನ್ನು ತಮ್ಮಿಂದ ಸೇವ್ಯರನ್ನಾಗಿ ಇಚ್ಛಿಸುವವರು ಋಜೂಯವರು. ಋಜುಗಳ ಭಕ್ತರು. (ಭಕ್ತರು ತಮ್ಮ ನಿಯಾಮಕರನ್ನು ಇಚ್ಛಿಸುತ್ತಾರಷ್ಟೆ.) (೩) (ವಿಷ್ಟ್ಯಕ್ರತ ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.) (ಯದ್ಯಪಿ ವಿಷ್ಟಿ ಎಂಬ ಪದವು ವಿಷ್ಟಿರ್ವ್ರತಂ ಎಂದು ಕರ್ಮ ಸಾಮಾನ್ಯ ನಾಮಗಳಲ್ಲಿ ಪಠಿತವಾಗಿದೆ. ಆದಾಗ್ಯೂ ರೂಢ್ಯನುಸಾರವಾಗಿ) ಸಂಬಳವಿಲ್ಲದೆ ಸ್ವಾಮಿಯ ಬಲಾತ್ಕಾರದಿಂದ ಯಾವುದು ಕರ್ಮವು ಮಾಡಲ್ಪಡುತ್ತದೋ, ಅದು ವಿಷ್ಟಿ ಎನಿಸುತ್ತದೆ. ಋಭುಗಳು ತಮ್ಮ ಮಾತಾ ಪಿತೃಗಳನ್ನು ಜೀರ್ಣರಾದವರನ್ನು ತರುಣರನ್ನಾಗಿ ಮಾಡಿದರು. (ಹೇಗೆಂದರೆ ಅಮೋಘ ಮಂತ್ರವುಳ್ಳವರಾದ ಪ್ರಯುಕ್ತ. ಅದೂ ಹೇಗೆಂದರೆ ಋಜುಗಳ ಭಕ್ತರಾದ ಪ್ರಯುಕ್ತವೇ. ಅಂತಹ ಕರ್ಮವನ್ನು ಏಕಂಚಮಸಂಚಂತುರಃ ಕೃಣೊತನ ಎಂದು ಹೇಳುವ ಪ್ರಕಾರ ದೇವತೆಗಳಿಗಾಗಿ ಮಾಡಿದರು.) (೪) ಋಭು ಶಬ್ದವನ್ನು ಶ್ರೀ ಪರಮಾತ್ಮನಲ್ಲಿ ನಿರ್ವಚನಮಾಡುತ್ತಾರೆ. ಯಾವ ಕಾರಣದಿಂದ ಶ್ರೀ ಪರಮಾತ್ಮನು ಋತ ಭೂಮಿಃ=ಜ್ಞಾನಕ್ಕೆ ಆಶ್ರಯನೋ, ಆದ ಕಾರಣ ಋಭುಃ ಎನಿಸುತ್ತಾನೆ. (೫) ಋಭು ಶಬ್ದವನ್ನು ಇತರ ದೇವತೆಗಳಲ್ಲಿ ನಿರ್ವಚನ ಮಾಡುತ್ತಾರೆ.) ಯಾವ ದೇವತೆಗಳ, ಋತಂ= (ಋತಂ ಸತ್ಯಂ ತಥಾ ಧರ್ಮ ಎಂಬ ಸ್ಮೃತಿಯಿಂದ) ಕರ್ಮವು, ಭೂತಂ=(ಭೂಸತ್ತಾಯಾಂ ಎಂಬ ಧಾತುವಿನಿಂದ) ಸತ್ಯವಾಗಿದೆಯೋ, ಆ ದೇವತೆಗಳು ಋಭುಗಳೆನಿಸುತ್ತಾರೆ. (ಅವರು ಯಾವುದು ಅಸಾಧ್ಯ ಕರ್ಮವನ್ನು ಮಾಡುತ್ತಾರೋ ಅದು ಸತ್ಯವೇ. ಅದು ಐಂದ್ರಜಾಲಿಕವಲ್ಲ.) ಅಥವಾ ಭಾಗವನ್ನು ಹೊಂದಿರುವವರು ಋಭುಗಳು. (ಋತ ಶಬ್ದಕ್ಕೆ ಋಕಾರವು. ಭಾಗ ಶಬ್ದಕ್ಕೆ ಭುಶಬ್ದವು.) ಅಥವಾ ಋತಂ=ಯಜ್ಞ ಭಾಗವನ್ನು ಭೂತಾಃ=ಹೊಂದಿದವರು ಆ ಕಾರಣದಿಂದಲೂ ಅವರು ಋಭುಗಳೆನಿಸುತ್ತಾರೆ. ॥೪॥

ಋ ॥ (೧೯೯) ಸಂ ವೋ ಮದಾಸೋ ಅಗ್ಮತೇಂದ್ರೇಣ ಚ ಮರುತ್ವತಾ । ಆದಿತ್ಯೇಭಿಶ್ಚರಾಜಭಿಃ ॥ ॥೫॥೧॥

ಅ ॥ (ಎಲೋ ಋಭುಗಳೇ) ಮದಾಸಃ=ಮದಕ್ಕೆ ಕಾರಣಗಳಾದ (ಹರ್ಷ ಹೇತುಗಳಾದ) ಇಂದವಃ=ಸೋಮಗಳು ಮರುತ್ವತಾ=ಮರುತಃ ಅಸ್ಯಸಂತಿ ಎಂಬ ವ್ಯುತ್ಪತ್ತಿಯಿಂದ ಮರುತ್‌ಗಳು ನಿಯಮ್ಯರಾಗಿ ಉಳ್ಳ,

ಇಂದ್ರೇಣಚ=ಇಂದ್ರನಿಂದಲೂ, ರಾಜಭಿಃ=ರಾಜರ್‌ದೀಪ್ತೌ) ಪ್ರಕಾಶಮಾನರಾದ, ಆದಿತ್ಯೇಭಿಶ್ಚ=ಆದಿತ್ಯರಿಂದಲೂ ಕೂಡಿಕೊಂಡು, ವಃ=ನಿಮ್ಮನ್ನು ಸಮಗ್ಮತ=(ಸಮ ಪೂರ್ವಾತ್ ಗಮ್ಲೃಗತೌ) ಹೊಂದಿದವು ||೫||

ಭಾ || ಸಹೇಂದ್ರೇಣ ಸಹಾದಿತ್ಯೈಃ ಪ್ರಾಪ್ತಾ ಯುಷ್ಮಾಕಮಿಂದವಃ ||೫||೧||

ಅ || ಎಲೋ ಋಭುಗಳೇ ಚಂದ್ರನಿಂದ ಅಭಿಮನ್ಯಮಾನಗಳಾದ ಸೋಮಗಳು ಇಂದ್ರನಿಂದಲೂ ಆದಿತ್ಯರಿಂದಲೂ ಕೂಡಿಕೊಂಡೇ ನಿಮ್ಮನ್ನು ಹೊಂದಿದವು. (ಇದರಿಂದ ಋಭುಗಳಿಗೆ ಇಂದ್ರ, ಆದಿತ್ಯರಿಂದ ಕೂಡಿ ಸೋಮಪಾನವಿದೆ ಎಂದು ಅಭಿಪ್ರಾಯವು) ||೫||೧||

ಋ|| (೨೦೦) ಉತತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ | ಅಕರ್ತ ಚತುರಃ ಪುನಃ ||೬||

ಅ||ಉತ=ಮತ್ತೂ (ಋಭುಗಳು) ತ್ಯಂ=ಪ್ರಸಿದ್ಧವಾದ, (ಪೂರ್ವದಲ್ಲಿ ಮಾಡಲ್ಪಟ್ಟ ಜೀರ್ಣವಾದ ಒಂದೇ) ಚಮಸಂ=ಪಾನಭಾಜನವನ್ನು ಪುನಃ=ತಿರುಗಿ, ನವಂ=ನೂತನಗಳಾದ, ಚತುರಃ = ನಾಲ್ಕು ಚಮಸಗಳನ್ನು, ಅಕರ್ತ=ಮಾಡಿದರು. ಹೀಗೆ ತ್ವಷ್ಟುರ್ದೇವಸ್ಯ ತ್ವಷ್ಟೃದೇವತೆಯ, ನಿಷ್ಕೃತಂ=ಶುಶ್ರೂಷಣೆಯನ್ನು, ಅಕರ್ತ=ಮಾಡಿದರು.

ವಿ||ದೇವತೆಗಳಿಂದ ಕಳುಹಿಸಲ್ಪಟ್ಟ, ಅಗ್ನಿಯೂ ತ್ವಷ್ಟೃದೇವತೆಯೂ ಕೂಡ ಋಭುಗಳೊಡನೆ ಇದೊಂದು ಜೀರ್ಣವಾದ ಚಮಸವು. ಇದರಂತೆ ಇರುವ ಹೊಸ ನಾಲ್ಕು ಚಮಸಗಳನ್ನು ಮಾಡಿರಿ ಎಂದು ಹೇಳಿದರು. ಆಗ ಆ ಋಭುಗಳು ೨. ಅಥವಾ ೩ ಚಮಸಗಳನ್ನು ಮಾಡುವೆವು ೪ ಚಮಸಗಳನ್ನು ಮಾಡಲಶಕ್ಯವೆಂದರು. ತಿರುಗಿ ಅಗ್ನಿಯೂ ತ್ವಷ್ಟೃದೇವತೆಯೂ ನಿರ್ಬಂಧ ಮಾಡಲು, ೨. ೩. ಮಾಡುತ್ತೇವೆಂದು ತಾವು ಹೇಳಿದ ಮಾತನ್ನು ಬಿಟ್ಟು ಬಿಟ್ಟು ತ್ವಷ್ಟೃದಿಗಳ ಸೇವೆಯನ್ನು (ನಾಲ್ಕು ಚಮಸಗಳ ನಿರ್ಮಾಣ ರೂಪಸೇವೆಯನ್ನು ಮಾಡಿದರು. ||೬||

ಭಾ || ಏಕಂ ಚಮಸಂ ಚತುರಃ ಕುರುತೇತ್ಯಾಹ ತಾನ್ಪುರಾ | ತ್ವಷ್ಟಾಽಗ್ನಿಶ್ಚೈವ ದೇವಾನಾಂ ವಾಕ್ಯಾತ್ತದಪಿ ತೈಃ ಕೃತಂ|ದ್ವ್ಯಾದಿಸ್ವೋಕ್ತಂ ಪರಿತ್ಯಜ್ಯ ತ್ವಷ್ಟುಃಶುಶ್ರೂಷಣಂ ಕೃತಂ| ತಂ ಪೂರ್ವಕೃತಮೇವೈಕಂ ಚಮಸಂ ಚತುರೋಽಕೃತ ||೬||

ಅ||ತ್ವಷ್ಟೃ ದೇವತೆಯೂ ಅಗ್ನಿಯೂ ಕೂಡ ದೇವತೆಗಳ ವಾಕ್ಯಾನುಸಾರ ಆ ಋಭುಗಳೊಡನೆ ಒಂದು ಚಮಸವನ್ನು ಪುನಃ ಇದರಂತೆ ಇರುವ ನಾಲ್ಕು ಹೊಸ ಚಮಸಗಳನ್ನು ಮಾಡಿರಿ ಎಂದು ಮೊದಲು ಹೇಳಿರುವರು. ಆ ಋಭುಗಳಿಂದ ದುಷ್ಕರವಾದುದಾಗ್ಯೂ ಅದು ಮಾಡಲ್ಪಟ್ಟಿತು. ಅವರ ನಿರ್ಬಂಧದಿಂದ ತಾವು ಹೇಳಿದ ೨ ಯಾ ೩ ಮಾಡುತ್ತೇವೆಂಬುದನ್ನು ಬಿಟ್ಟು ತ್ವಷ್ಟೃ ದೇವತೆಯ ನಾಲ್ಕು ಚಮಸಗಳ ನಿರ್ಮಾಣರೂಪವಾದ ಸೇವೆಯು ಮಾಡಲ್ಪಟ್ಟಿತು. ಆ ಪೂರ್ವದಲ್ಲಿ ಮಾಡಲ್ಪಟ್ಟ ಜೀರ್ಣವಾದ ಒಂದೇ ಒಂದು ಚಮಸವನ್ನು ನಾಲ್ಕು ಹೊಸ ಚಮಸಗಳನ್ನಾಗಿ ಮಾಡಿದರು. ||೬||

ಋ|| (೨೦೧) ತೇ ನೋ ರತ್ನಾನಿ ಧತ್ತನ ತ್ರಿರಾ ಸಾಪ್ತಾನಿ ಸುನ್ವತೇ| ಏಕಮೇಕಂ ಸುಶಸ್ತಿಭಿಃ ||೭||

ಅ|| (ಯೇ=) ಇಂತಹ ಯಾವ ಋಭುಗಳು ಇದ್ದಾರೋ ತೇ = ಅಂತಹ ನೀವು ನಃ = ನಮ್ಮ, ಸುನ್ವತೇ = ಯಜಮಾನನಿಗೋಸ್ಕರ, ತ್ರಿಃ =ತ್ರಿಕಾಲಗಳಲ್ಲಿಯೂ ಕೂಡ, ಸಾಪ್ತಾನಿ = ಸಪ್ತ ಸಂಖ್ಯಾಕಗಳಾದ, ರತ್ನಾನಿ = ಚತುರ್ವೇದ, ಇತಿಹಾಸ, ಪುರಾಣ, ಪಂಚರಾತ್ರಗಳೆಂಬ ರತ್ನಗಳನ್ನು, ಅಥವಾ ತರ್ಕ, ಮೀಮಾಂಸ ಸಹಿತ ಪಂಚವೇದಗಳೆಂಬ ರತ್ನಗಳನ್ನು ಅಥವಾ ಗಾಯತ್ರೀ ಮೊದಲಾದ ಸಪ್ತ ಛಂದಸ್ಸುಗಳನ್ನು, (ಉಷ್ಣಿಕ್, ಅನುಷ್ಟುಪ್, ಬೃಹತೀ, ವಿರಾಟ್, ತ್ರಿಷ್ಟುಪ್, ಜಗತೀ ಛಂದಸ್ಸುಗಳನ್ನು) (ದೇವತಾಂತರ ಪಕ್ಷದಲ್ಲಿ) ಚಕ್ರಂ ರಥೋ ಮಣಿರ್ಭಾರ್ಯಾ ನಿಧಿರಶ್ವೋ ಗಜಸ್ತಥಾ । ಏತಾನಿ ಸಪ್ತ ರತ್ನಾನಿ ಪೂರ್ವೇಷಾಂ ಚಕ್ರವರ್ತಿನಾಂ ॥ ಚಕ್ರಂ = ಸೇನೆಯು, ಅಥವಾ (ಚಕ್ರಂ ರಾಷ್ಟ್ರೇ ಪ್ಯಕ್ಷರಂತು ಎಂಬ ಕೋಶದಿಂದ) ರಾಷ್ಟ್ರವು, ರಥಃ = ರಥವು, ಮಣಿಃ = ಪುಷ್ಯ ರಾಗ ಮೊದಲಾದ ಮಣಿಯು, ಭಾರ್ಯಾ=ಹೆಂಡತಿಯು ನಿಧಿಃ = (ನಿಧಿರ್ನಾ ಶೇವಧಿರ್ಭೇದಾಃ ಪದ್ಮ ಶಂಖಾದಯೋ ನಿಧೇಃ । ಎಂಬ ಕೋಶದಿಂದ ಪದ್ಮ ಶಂಖಾದಿರೂಪವಾದುದು ನಿಧಿಯು. ಮಹಾ ಪದ್ಮಶ್ಚ ಶಂಖಶ್ಚ ಶಂಖೋ ಮಕರ ಕಚ್ಛಪೌ । ಮುಕುಂದ ಕುಂದ ನೀಲಾಶ್ಚವರಾಶ್ಚ ನಿಧಯೋ ನವ । ಎಂದು ಒಂಭತ್ತು ನಿಧಿ ಪ್ರಭೇದಗಳು.) (ಚಕ್ರಂ ರಾಷ್ಟ್ರಂ ವರ್ತಯಂ ತೀತಿ ಚಕ್ರವರ್ತಿನಃ) (ಅಶ್ವಃ =ಕುದುರೆಯು, ಗಜಃ =ಆನೆಯು, ಇವು ಏಳು ಮೊದಲಿನ ಚಕ್ರವರ್ತಿಗಳ ಪುರಾಣೋಕ್ತಗಳಾದ ಸಪ್ತ ರತ್ನಗಳು ಎಂದು ಹೇಳಿದ ರತ್ನಗಳನ್ನು, ಅಧತ್ತನ = ಕೊಡಿರಿ. ಸುಶಸ್ತಿಭಿಃ = (ಶಂಸುಸ್ತುತೌ) ಪ್ರಶಂಸೆಗೆ ಕಾರಣಗಳಾದ, ಆವಾವ ಎಲ್ಲಾ ಗುಣಗಳಿಂದ ಕೂಡಿರುವ, ಏಕಮೇಕಂ ವಾ = ಈ ರತ್ನಗಳ ಮಧ್ಯದಲ್ಲಿ ಒಂದೊಂದು ರತ್ನವನ್ನಾಗಲೀ, ಅಧತ್ತನ = ಕೊಡಿರಿ. ಅಂತಹ ರತ್ನಗಳನ್ನು ಕೊಡಿರಿ. ||೭||

ಭಾ || (೧) ಸಪ್ತಸಂಖ್ಯಾನಿ ರತ್ನಾನಿ ತ್ರಿಕಾಲೇಷ್ವಪಿ ಧತ್ತನ || (೨) ಪುರಾಣ ಪಂಚರಾತ್ರೇ ತಿಹಾಸವೇದಾನ್ ಹರಿಸ್ತಥಾ । ಮೀಮಾಂಸಾತರ್ಕಸಹಿತಾನ್ ಪಂಚವೇದಾ ನಥಾಪಿವಾ । ಸಪ್ತ ಛಂದಾಂಸಿ ವೈಕೈಕಂ ತದ್ಗುಣೈರಖಿಲೈಃ ಸಹ ||೭||

ಅ|| (೧) ಅತೀತಾದಿ ಕಾಲಗಳಲ್ಲಿಯೂ, ಏಳು ಸಂಖ್ಯಾಕ ರತ್ನಗಳನ್ನು ಕೊಡಿರಿ. (ದೇವತಾಂತರ ಪಕ್ಷದಲ್ಲಿ ಚಕ್ರಂ ರಥಃ ಇತ್ಯಾದಿ ರತ್ನರೂಪ ವಸ್ತುಗಳ ಸಮೂಹಗಳು. ೨) (ವಿಷ್ಣುಪಕ್ಷದಲ್ಲಿ ಆದರೂ) ಶ್ರೀ ಹರಿಯು ವಿವಕ್ಷಿತನಾದರೆ - ಪುರಾಣ, ಪಂಚರಾತ್ರಾಗಮ, ಇತಿಹಾಸ, ೪ ವೇದಗಳು, ಇವುಗಳನ್ನು, ಹಾಗೆಯೇ ಮೀಮಾಂಸಾತರ್ಕಗಳಿಂದ ಕೂಡಿರುವ ಐದು ವೇದಗಳನ್ನು, ಅಥವಾ ಗಾಯತ್ರೀ ಮೊದಲಾದ ಏಳು ಛಂದಸ್ಸುಗಳನ್ನು ಕೊಡಿರಿ. ಈ ರತ್ನಗಳ ಮಧ್ಯದಲ್ಲಿ ಒಂದೊಂದು ರತ್ನವನ್ನು ಪ್ರಶಂಸೆಗೆ ಕಾರಣಗಳಾದ ಆವಾವ ಎಲ್ಲಾ ಗುಣಗಳಿಂದೊಡಗೂಡಿ ಇರುವುದನ್ನಾಗಿಯೂ ಕೊಡಿರಿ. ||೭||

ಋ || (೨೦೨) ಆಧಾರಯಂತ ವಹ್ನಯೋಽಭಜಂತ ಸುಕೃತ್ಯಯಾ । ಭಾಗಂ ದೇವೇಷು ಯಜ್ಞಿಯಂ ||೮||೨||೨೦||

ಅ|| ವಹ್ನಯಃ = (ಧೃತಿರ್ಧಾರಣಧೈರ್ಯಯೋಃ ಧಾರಣ, ಸ್ಥೈರ್ಯ) ಜಗತ್ತಿಗೆ ಧಾರಕರಾಗಿರುವುದರಿಂದಲೂ, ತಾವೇ ಸ್ಥಿರವಾಗಿರುವುದರಿಂದಲೂ ವಹ್ನಿ ಎಂದು ಹೆಸರುಳ್ಳ, ಋಭವಃ = ಋಭುಗಳು, ಸುಕೃತ್ಯಯಾ =ಒಳ್ಳೇ ಕರ್ಮದಿಂದ, ದೇವೇಷು = ದೇವತೆಗಳ ಮಧ್ಯದಲ್ಲಿದ್ದು, ಯಜ್ಞಿಯಂ ಭಾಗಂ = ಯಜ್ಞಕ್ಕೆ ಅರ್ಹವಾದ ಭಾಗವನ್ನು, ಅಭಜಂತ = ಹೊಂದಿದರು. ಆಧಾರಯಂತಚ = ಪ್ರಾಪ್ತವಾದ ಯಜ್ಞಭಾಗವನ್ನು ಅವಿಚ್ಛಿನ್ನ ಹೇಗೆ ಆದೀತೋ ಹಾಗೆ ಧರಿಸಿದರು. (ಅಂದರೆ

ಕಾಲಾಂತರದಲ್ಲಿಯೂ ಸ್ಥಿರೀಕರಿಸಿದರು.) (ಏವಂಚ ಧೃ ಧಾತುವಿಗೆ ಸ್ಥೈರ್ಯವೂ ಧಾರಕತ್ವವೂ ಹೀಗೆ ೨ ಅರ್ಥಗಳು) ||೮||೨||೨೦||

**ಭಾ || ಸುಕರ್ಮಾಣಾ ಯಜ್ಞಭಾಗಮಭಜನ್ನಪ್ಯಧಾರಯನ್ | ವಹ್ನಯೋ ಧಾರಕತ್ವೇನ ಸ್ಥಿರತ್ವೇನ ಯಥಾಗತಿಃ ||೮||೨||೧||**

ಅ || ಜಗತ್ತನ್ನು ಧರಿಸುವುದರಿಂದಲೂ ಸ್ಥಿರವಾಗಿರಿಸಿರುವುದರಿಂದಲೂ, ವಹ್ನಿ ಎನಿಸಿಕೊಂಡ ಋಭುಗಳು ಸತ್ಕರ್ಮದಿಂದ ದೇವತೆಗಳ ಮಧ್ಯದಲ್ಲಿ ಆಗಿ ಯಜ್ಞಾರ್ಹ ಭಾಗವನ್ನು ಹೊಂದಿದದರು. ಮತ್ತು ಧರಿಸಿದರು. (ಭಜನಾತಿರಿಕ್ತವಾದ ಧಾರಣವಿಲ್ಲದಿರುವುದರಿಂದ ಪೌನರುಕ್ತ್ಯವೆಂದರೆ) ಯಾವ ಪ್ರಕಾರದಿಂದ ಪ್ರಾಪ್ತವಾದ ಭಾಗಕ್ಕೆ ವಿಚ್ಛೇದವಿಲ್ಲದಂತೆ ಆಗುವುದೋ ಹಾಗೆ ಧರಿಸಿದರು. (ಅಂತೂ ಈಗ ಹೊಂದಿದರು. ಆಧಾರಯಂತ =ಕಾಲಾಂತರದಲ್ಲಿಯೂ ಸ್ಥಿರೀಕರಿಸಿಕೊಂಡರು. ಅಥವಾ ಜಗತ್ತಿನ ಪ್ರವೃತ್ತಿಯು ಹೇಗೆ ಆಗುವುದೋ ಹಾಗೆ ಧಾರಕವಾಗಿ ಪ್ರವೃತ್ತಿ ಮಾಡಿದರು. ಏವಂಚ ಆಧಾರಯಂತ = ಯಜ್ಞಭಾಗವನ್ನು ತಮ್ಮಲ್ಲಿ ಸ್ಥಿರೀಕರಿಸಿಕೊಂಡರು. ತಾವು ಪ್ರವರ್ತಕರೂ ಆದರು. ಅಭಜಂತ = ವಿಭಾಗಿಸಿದರು. ಪ್ರವರ್ತಿಸುವಂತೆ ಮಾಡಿದರು ಎಂದರ್ಥವು. ||೮||೨||೧||

ಅ|| ೬ ಋಕ್ಕು. ೧ ವರ್ಗ, ಐಂದ್ರಾಗ್ನವು, ಗಾಯತ್ರ ಸೂಕ್ತವು.

**ಋ || (೨೦೩) ಇಹೇಂದ್ರಾಗ್ನೀ ಉಪಹ್ವಯೇ ತಯೋರಿತ್ಸ್ತೋಮ ಮುಶ್ಮಸಿ | ತಾ ಸೋಮಂ ಸೋಮಪಾತಮಾ||೧||**

ಅ|| ಯಾವ ಕಾರಣದಿಂದ, ತಯೋರಿತ್ =ಇಂದ್ರ ಅಗ್ನಿಗಳದ್ದೇ, ಸ್ತೋಮಂ =ಸ್ತುತಿಯನ್ನು, (ವಶಕಾಂತೌ ಕಾಂತಿಶಬ್ದದಿಂದ ಕಾಮನೆಯೂ ಹೇಳಲ್ಪಡುತ್ತದೆ.) ತಥಾಚ ಉಸ್ಮಸಿ =ನಾವೆಲ್ಲರೂ ಇಚ್ಛಿಸುತ್ತೇವೋ, (ಆದ ಕಾರಣ ನಾನು) ಇಹ =ಈ ಯಜ್ಞದಲ್ಲಿ, ಇಂದ್ರಾಗ್ನೀ =ಇಂದ್ರ ಅಗ್ನಿ ದೇವತೆಗಳನ್ನು, ಉಪಹ್ವಯೇ=ಕರೆಯುತ್ತೇನೆ. ಮತ್ತು, ತಾ=ಆ ಇಂದ್ರಾಗ್ನಿಗಳೂ ಸೋಮಪಾತಮಾ =ಅತಿಶಯವಾಗಿ ಸೋಮಗಳನ್ನು ಪಾನ ಮಾಡುವವರೋ, (ಆದ ಕಾರಣ) ಸೋಮಂ = ಸೋಮವನ್ನು ಕೂಡ ಕುರಿತು ಉಪಹ್ವಯೇ =ಕರೆಯುತ್ತೇನೆ. ||೧||

**ಭಾ || ಹ್ವಯೇ ಸೋಮಂ ಪ್ರತಿ ಚ ತೌ ||೧||**

ಅ|| ಆ ಇಂದ್ರಾದಿಗಳನ್ನು, ಸೋಮವನ್ನು ಕುರಿತು ಕರೆಯುತ್ತೇನೆ. ||೧||

**ಋ || (೨೦೪) ತಾ ಯಜ್ಞೇಷು ಪ್ರಶಂಸತೇಂದ್ರಾಗ್ನೀ ಶುಂಭತಾ ನರಃ | ತಾ ಗಾಯತ್ರೇಷು ಗಾಯತ ||೨||**

ಅ || ಹೇ ನರಃ = ಋತ್ವಿಜರೇ, (ನೀವು) ತಾ =ಪ್ರಸ್ತುತರಾದ, ಇಂದ್ರಾಗ್ನಿ =ಇಂದ್ರ ಅಗ್ನಿ ದೇವತೆಗಳನ್ನು, ಯಜ್ಞೇಷು=ಯಜ್ಞಗಳಲ್ಲಿ, ಪ್ರಶಂಸತ =ಚೆನ್ನಾಗಿ ಸ್ತೋತ್ರ ಮಾಡಿರಿ. ಶುಂಭತ=(ಶುಭ ಶುಭಶೋಭಾರ್ಥೇ) ಮತ್ತು ಅಲಂಕರಿಸಿರಿ. ತಾ=ಆ ಇಂದ್ರಾಗ್ನಿಗಳನ್ನು, ಗಾಯತ್ರೇಷು=ಗಾಯತ್ರ ಸಾಮಗಳಿಂದ, ಗಾಯತ=ಸ್ತುತಿಸಿರಿ. ||೨||

ಭಾ ॥ ಶುಂಭನಂ ಭೂಷಣಂ ಮತಂ ॥೨॥

ಅ ॥ (ಶುಭ ಶುಂಭ ಶೋಭಾರ್ಥೇ ಎಂಬ ಧಾತು ವ್ಯಾಖ್ಯಾನದಿಂದ) ಶುಂಭನವೆಂದರೆ ಭೂಷಣವು ಅಲಂಕಾರಕವು ಎಂದರ್ಥವು. ಶುಂಭತ=ಅಲಂಕರಿಸಿರಿ ಎಂದರ್ಥವು. ॥೨॥

ಋ ॥ (೨೦೫) ತಾ ಮಿತ್ರಸ್ಯ ಪ್ರಶಸ್ತಯ ಇಂದ್ರಾಗ್ನೀತಾ ಹವಾಮಹೇ । ಸೋಮಪಾ ಸೋಮಪೀತಯೇ ॥೩॥

ಅ॥ ತಾ = ಯಾವಪ್ರಸಿದ್ಧರಾದ ಇಂದ್ರಾಗ್ನಿಗಳು, ಮಿತ್ರಸ್ಯ =ಶ್ರೀ ಹರಿಯ, ಪ್ರಶಸ್ತಯೇ = ಪ್ರಶಂಸೆಗಾಗಿ (ಪ್ರಶಂಸೆಯುಳ್ಳವರು) (ಆಗುತ್ತಾರೋ) (ದೇವತೆಗಳು ಪರಮಾತ್ಮನ ಪ್ರಶಂಸೆಯನ್ನು ಲೋಕಗಳಲ್ಲಿ ಪ್ರಸಿದ್ಧಿಗೊಳಿಸುತ್ತಾರೆ. ತಾ=ಅಂತಹ, ಸೋಮಪಾ=ಸೋಮಪಾನ ಮಾಡತಕ್ಕ, ಇಂದ್ರಾಗ್ನೀ=ಇಂದ್ರ ಅಗ್ನಿಗಳನ್ನು, ಸೋಮಪೀತಯೇ =ಸೋಮಪಾನ ಮಾಡುವುದಕ್ಕಾಗಿ, ಹವಾಮಹೇ =ಕರೆಯುತ್ತೇವೆ ॥೩॥

ಭಾ ॥ ತೌ ಮಿತ್ರಸ್ಯ ಪ್ರಶಸ್ತ್ಯರ್ಥೌ ಹರೇಃ ॥೩॥

ಅ॥ ಆ ಇಂದ್ರಾಗ್ನಿಗಳು ಮಿತ್ರನೆನಿಸಿಕೊಂಡ ಶ್ರೀ ಹರಿಯ ಪ್ರಶಂಸಾ ರೂಪ ಪ್ರಯೋಜನವುಳ್ಳವರು. ॥೩॥

ಋ ॥ (೨೦೬) ಉಗ್ರಾ ಸಂತಾ ಹವಾಮಹ ಉಪೇದಂ ಸವನಂ ಸುತಂ । ಇಂದ್ರಾಗ್ನೀ ಏಹ ಗಚ್ಛತಾಂ ॥೪॥

ಅ॥ (ನಾವು) ಉಗ್ರಾ=ಶತ್ರುಗಳಿಗೆ ಕ್ರೂರರಾದ, ಸಂತಾ=ಪ್ರಶಸ್ತರಾದ, ಇಂದ್ರಾಗ್ನಿ=ಇಂದ್ರ ಅಗ್ನಿಗಳನ್ನು ಇದಂ ಸವನಂ=ಈ ಯಜ್ಞವನ್ನು, ಸುತಂ ಉಪ=ಸೋಮವನ್ನು ಕೂಡ ಕುರಿತು, ಹವಾಮಹೇ=ಕರೆಯುತ್ತೇವೆ. (ಆ ಆಹ್ವಾನವನ್ನು ಕೇಳಿ) ಇಂದ್ರ ಅಗ್ನಿಗಳು, ಇಹ=ಇಲ್ಲಿಗೆ, ಆ ಗಚ್ಛತಾ=ಬರಲಿ ॥೪॥

ಋ ॥ (೨೦೭) ತಾ ಮಹಾಂತಾ ಸದಸ್ಪತೀ ಇಂದ್ರಾಗ್ನೀ ರಕ್ಷ ಉಬ್ಜತಂ । ಅಪ್ರಜಾಃ ಸಂತ್ವತ್ರಿಣಃ ॥೫॥

ಅ॥ ಇಂದ್ರಾಗ್ನೀ= ಎಲೋ ಇಂದ್ರಾಗ್ನಿಗಳೇ, (ಯಾವ ನೀವಿಬ್ಬರು) ಮಹಾಂತಾ =ಪೂಜ್ಯರೋ, ಸದಸ್ಪತೀ = ಯಜ್ಞ ಗೃಹ ವಿಶೇಷಕ್ಕೆ ಅಧಿಪತಿಗಳೋ, ತಾಃ =ಅಂತಹ ನೀವಿಬ್ಬರು, ರಕ್ಷಃ=ರಾಕ್ಷಸರನ್ನು ಉಬ್ಜತಂ= ಉಬ್ಜ ಅರ್ಜವೇ) ಸಂಹರಿಸಿರುವಿರಿ. ಮತ್ತು, ಅತ್ರಿಣಃ = (ತ್ರಯಃ ಏಷಾಂ ಸಂತೀತಿ ತ್ರಿಣಃ । ನತ್ರಿಣಃ ಅತ್ರಿಣಃ ) (ತಮಸ್ಸನ್ನು ಹೊಂದುವುದರಿಂದ) ಸ್ವರ್ಗ ಮೋಕ್ಷ ಪ್ರಥಿವೀ ರೂಪ ಪಿತೃಮಾರ್ಗ, ದೇವಮಾರ್ಗ, ಮನುಷ್ಯಮಾರ್ಗಗಳೆಂಬ 3 ಮಾರ್ಗಗಳೂ ಇಲ್ಲದಿರುವ, ರಾಕ್ಷಸರ ಸಂಬಂಧಿಗಳಾದ ಜನರು, ಅಪ್ರಜಾಃ =ಪ್ರಜೆಗಳು ಇಲ್ಲದಿದ್ದವರು (ಸಂತತಿ ಇಲ್ಲದವರು) ಸಂತು =ಆಗಲಿ. ॥೫॥

ಭಾ ॥ ರಕ್ಷಾಂಸಿ ಚೋಬ್ಜತಂ । ರಕ್ಷೋರಕ್ಷ್ಯಾಃ ಪ್ರಜಾ ಯಸ್ಮಾದತ್ರ್ಯೋ ಮಾರ್ಗಾತ್ರ ಯೋರಿಝ್ತಾಃ । ಪಿತೃದೇವ ಮನುಷ್ಯಾಣಾಂ ಗತ್ಯಭಾವಾದಧೋಗತೇಃ ॥೫॥

ಅ॥ ಎಲೋ ಇಂದ್ರಾಗ್ನಿಗಳೇ ರಾಕ್ಷಸರನ್ನು ಕೊಲ್ಲಿರಿ. ಯಾವ ಕಾರಣದಿಂದ ತಮಸ್ಸನ್ನು ಹೊಂದುವುದರಿಂದ, ಪಿತೃಗಳ ಗತಿಯಾದ ಸ್ವರ್ಗ ದೇವತೆಗಳ ಗತಿಯಾದ ಮೋಕ್ಷ, ಮನುಷ್ಯರ ಗತಿಯಾದ ಪೃಥಿವೀ, ಇವುಗಳು ಲಭಿಸದಿರುವುದರಿಂದ ಪಿತೃಮಾರ್ಗ, ದೇವಮಾರ್ಗ, ಮನುಷ್ಯಮಾರ್ಗ ಎಂಬ 3 ಮಾರ್ಗಗಳಿಂದಲೂ ಹೀನರಾಗಿರುತ್ತಾರೋ, ಆದ ಕಾರಣ ರಾಕ್ಷಸ ಜನರು ಅತ್ರ್ಯಃ ಎನಿಸುತ್ತಾರೆ. (ನವಿದ್ಯಂತೆ ತ್ರಯೋ ಯಾಸಾಂ) ಆದ ಪ್ರಯುಕ್ತ ರಾಕ್ಷಸರಿಂದ ರಕ್ಷಿಸಲ್ಪಡತಕ್ಕ ಪ್ರಜೆಗಳು (ಸಂತತಿಯಿಲ್ಲದವರಾಗಲಿ.) ||೫||

ಋ ॥ (೨೦೮) ತೇನ ಸತ್ಯೇನ ಜಾಗೃತಮಧಿ ಪ್ರಚೇತುನೇ ಪದೇ । ಇಂದ್ರಾಗ್ನೀ ಶರ್ಮ ಯಚ್ಛತಂ ||೬||೩||೨೧||

ಅ॥ ಇಂದ್ರಾಗ್ನೀ =ಎಲೋ ಇಂದ್ರಾಗ್ನಿಗಳೇ (ನೀವಿಬ್ಬರು) ತೇನ =ಪ್ರಸಿದ್ಧನಾದ, ಸತ್ಯೇನ=ಗುಣಪೂರ್ಣನಾದ ಶ್ರೀ ವಿಷ್ಣುವಿನ ಪ್ರಸಾದದಿಂದ, ಪ್ರಚೇತುನೇ =ಪ್ರಕೃಷ್ಟ ಚೇತನನಾದ ಅಧಿಕ್ಯೇಽಧಿಕಂ ಎಂಬ ಸೂಕ್ತದಿಂದ ಪ್ರಚೇತನೇ ಎಂಬಲ್ಲಿದ್ದ ಅಕಾರಕ್ಕೆ ಉಕಾರವು.) (ಉಕಾರಕ್ಕೆ ಅಧಿಕ್ಯವೆಂದು ಅರ್ಥವು) ಪದೇ =(ಪದಗತೌ) ಗಮ್ಯನಾದ, ಶ್ರೀ ಹರಿಯಲ್ಲಿ, ಅಧಿ=ಚೆನ್ನಾಗಿ, (ಇತರ ದೇವತಾ ಸಾಧಾರಣವಾಗದೆ) ಅಥವಾ ಸ್ವಾಭಾವಿಕವಾಗಿ (ಅಂದರೆ ಫಲಾಪೇಕ್ಷೆಯಿಲ್ಲದೆ, ಜಾಗೃತಂ =ಜಾಗರೂಕರಾಗಿಯೇ ಇದ್ದೀರಿ. (ಭಗವದ್ವಿಷಯದಲ್ಲಿ ಜಾಗರಣವುಳ್ಳವರು ಆಗಿರುತ್ತೀರಿ.) (ಇಂತಹ ನೀವಿಬ್ಬರು ನಮಗೆ) ಶರ್ಮ = ಸುಖವನ್ನು, ಯಚ್ಛತಂ = ಕೊಡಿರಿ. (ವಿಷ್ಣು ಪಕ್ಷದಲ್ಲಿ ಆದರೂ) ಇಂದ್ರಾಗ್ನೀ = ಇಂದ್ರ ಅಗ್ನಿ ಶಬ್ದವಾಚ್ಯಗಳಾದ ಎಲೋ ಭಗವದ್ರೂಪಗಳೇ, (ನೀವಿಬ್ಬರು) ತೇನ ಸತ್ಯೇನ = ಪ್ರಸಿದ್ಧವಾದ ಇಚ್ಛಾದಿ ರೂಪಗುಣದಿಂದ, ಸ್ವವಿಷಯದಲ್ಲಿ ಜಾಗರೂಕರಾಗಿದ್ದೀರಿ. (ಅಂದರೆ ತಮ್ಮ ಸಾಮರ್ಥ್ಯದಿಂದಲೇ ಸ್ವಪ್ರಕಾಶರಾಗಿದ್ದೀರಿ.) (ಸದ್ಭಾವೇ ಸಾಧುಭಾವೇಚ ಇತ್ಯಾದಿ ಪ್ರಮಾಣಗಳಿಂದ ಸತ್ ಶಬ್ದವು ಗುಣವಾಚಕವಾಗಿರುವುದರಿಂದ, ಸದ್ಭಿಃ =ಗುಣಗಳಿಂದ, =ವ್ಯಾಪ್ತನು, ಹೀಗೆ ಸತ್ಯ ಶಬ್ದವು ಗುಣಪೂರ್ತಿ ವಾಚಕವು. ಏವಂಚ ಸತ್ಯ ಶಬ್ದವು ಜ್ಞಾನ ಇಚ್ಛಾ ಮೊದಲಾದ ಗುಣವಾಚಕವೆಂದು ತಿಳಿಯಬೇಕು.) ||೬||೩||೨೧||

ಭಾ ॥ ಸತ್ಯೇನ ಗುಣಪೂರ್ಣೇನ ವಿಷ್ಣುನಾ ತೇನ ಜಾಗೃತಂ । ಸ್ವಗುಣೈರೇವ ವಿಷ್ಣುಸ್ತು ಪ್ರಕೃಷ್ಟೋ ಚೇತನೇ ಹರೌ ॥ ಪದೇ ಗಮ್ಯತ್ವತಃ ಸಮ್ಯಕ್ತಸ್ಮಿನ್ನೇವ ಸ್ವಭಾವತಃ । ತಥಾ ಸ್ಥಿತೌ ತು ಜಾಗೃತಮಿತಿ ವಿಷ್ಣುರ್ವಿಶೇಷತಃ ॥ ಉಕ್ತಃ ||೬||೩||೨೧||

ಅ॥ (ಇಂದ್ರಾಗ್ನಿಗಳೇ) ಪ್ರಸಿದ್ಧನಾದ (ಸತ್ಯೇನ) = ಗುಣ ಪೂರ್ಣನಾದ ವಿಷ್ಣುವಿನ ಪ್ರಸಾದದಿಂದ ವಿಷ್ಣುವು ವಿವಕ್ಷಿತನಾದರೆ ಅಗಸತ್ಯೇನ ಎನ್ನುವುದಕ್ಕೆ, ತನ್ನ ಇಚ್ಛಾ ಮೊದಲಾದ ಗುಣದಿಂದಲೇ, ಸರ್ವೋತ್ಕೃಷ್ಟ ಚೇತನನಾದ, ಜ್ಞಾನಿಗಳಿಂದ ಹೊಂದಲ್ಪಡುವುದರಿಂದ ಪದ ಎನಿಸಿಕೊಂಡ, ಶ್ರೀ ಹರಿಯಲ್ಲಿ ಚೆನ್ನಾಗಿ ಅಂದರೆ ಆ ಶ್ರೀ ಹರಿ ವಿಷಯದಲ್ಲಿಯೇ ಸ್ವಭಾವತಃ = ಫಲಾಪೇಕ್ಷೆಯಿಲ್ಲದೆ ಜಾಗರೂಕರಾಗಿದ್ದೀರಿ. (ಹಾಗಾದರೆ ಇಂದ್ರಾಗ್ನಿಗಳು ಸರ್ವದಾಭಗದ್ವಿಷಯದಲ್ಲಿ ಜಾಗರೂಕರಾಗಿಯೇ ಇರುತ್ತಾರೆ. ಆದ ಕಾರಣ ತಿರುಗಿ ಜಾಗ್ರತಂ =ಜಾಗರೂಕರಾಗಿರಿ ಎಂದದ್ದು ಹೇಗೆ ? ಎಂದರೆ) ಸ್ವಭಾವತಃ = ವಿಧಾನವಿಲ್ಲದೆ ಇಂದ್ರಾಗ್ನಿಗಳು ಜಾಗರೂಕರಾಗಿಯೇ ಇರುತ್ತಾರೆ. ಆದುದರಿಂದಲೇ ಜಾಗೃತಂ ಎಂದು ಲಕಾರ ವ್ಯತ್ಯಾಸವು (ಲಡರ್ಥದಲ್ಲಿ ಲೋಟ ಪ್ರಯೋಗವು) ಉಕ್ತವಾಗಿದೆ. (ಹಾಗಾದರೆ ಈ ವಾಕ್ಯವನ್ನು ಶ್ರೀ ವಿಷ್ಣುವಿನಲ್ಲಿ

ಕೂಡಿಸಲಿಕ್ಕೆ ಶಕ್ಯವಿಲ್ಲ. ಏಕೆಂದರೆ ಕರಣ ಅಧಿಕರಣ ಕೃರ್ತೃತ್ವಾದಿಗಳಿಗೆ ಭೇದವು ಇರಬೇಕು. ಪ್ರಕೃತ ಕರಣಗಳಾದ ಸತ್ಯಪದೋಕ್ತ ಗುಣಗಳಿಗೂ ಪ್ರಚೇತನ ಪರೋಕ್ತ ಹರಿರೂಪ ಅಧಿಕರಣಕ್ಕೂ ಇಂದ್ರಾಗ್ನೀ ಪದೋಕ್ತ ಕರ್ತೃಗಳಿಗೂ, ದ್ವಿತ್ವಾದಿಗಳಿಗೂ ಶ್ರೀ ವಿಷ್ಣುವಿನಲ್ಲಿ ಅಭೇದವೇ ಇದ್ದ ಪ್ರಯುಕ್ತ ಈ ವಾಕ್ಯವನ್ನು ಕೂಡಿಸಲಿಕ್ಕೇನೇ ಅಶಕ್ಯವು ಎಂದರೆ, ಶ್ರೀ ವಿಷ್ಣುವು ಭೇದ ಪ್ರತಿನಿಧಿರೂಪವಾದ ವಿಶೇಷ ಶಕ್ತಿಯಿಂದ ಒಬ್ಬನೇ ಕರಣನೂ, ಅಧಿಕರಣನೂ ಕರ್ತನೂ ಆಗುತ್ತಾನೆ. ಆದ ಕಾರಣ ಕರಣತ್ವಾದಿ ರೂಪಗಳಿಂದ ಹೇಳಲ್ಪಟ್ಟಿದ್ದಾನೆ. (ಆದ ಕಾರಣ ದೋಷವಿಲ್ಲ.) ||೬||೩||೨೧||

ಅವ || ೨೧ ಋಕ್ಕುಗಳು, ೪ ವರ್ಗಗಳು. ನಾನಾ ದೇವತೆಗಳು, ಗಾಯತ್ರ ಸೂಕ್ತವು ಆದಿಯ ೪ ಋಕ್ಕುಗಳು ಅಶ್ವಿನೀ ದೇವತಾಕಗಳು. ಆ ಮೇಲಿನ ೪ ಋಕ್ಕುಗಳು ಸವಿತ್ ದೇವತಾಕಗಳು, ಆ ಮೇಲಿನ ೨ ಋಕ್ಕುಗಳು ಅಗ್ನಿ ದೇವಕಾಕಗಳು. ೧ ಋಕ್ಕು ದೇವಿಯರನ್ನು ಪ್ರತಿಪಾದಿಸತಕ್ಕದು. ಆ ಮೇಲಿನ ೧ ಋಕ್ಕುಗೆ ಇಂದ್ರಾಣೀ ವರುಣಾನೀ = ಅಗ್ನಾ ಯೀ ಇವರು ದೇವತೆಯರು. ಆ ಮೇಲಿನ ೨ ಋಕ್ಕುಗಳಿಗೆ ದ್ಯಾವಾಪೃಥಿನೀ ದೇವತೆಗಳೂ. ಆ ಮೇಲಿನ ೧ ಋಕ್ಕುಗೆ ಪೃಥಿವೀ ದೇವತೆಯೂ ಮೇಲಿನ ೬ ಋಕ್ಕುಗಳಿಗೆ ವಿಷ್ಣು ದೇವತೆಯು ಆ ೬ ಋಕ್ಕುಗಳಲ್ಲಿ ೧ನೇದ್ದಾದ ಅತೋದೇವಾ ಎಂಬ ಋಕ್ಕು ದೇವ ದೇವತಾಕವು.

ಋ || (೨೦೯) ಪ್ರಾತರ್ಯುಜಾ ವಿಭೋಧಯಾಶ್ವಿನಾದೇಹ ಗಚ್ಛತಾಂ । ಅಸ್ಯ ಸೋಮಸ್ಯ ಪ್ರೀತಯೇ ||೧||

ಅ (ಎಲೋ ಹೋತನೇ) ಪ್ರಾತರ್ಯುಜಾ = ಪ್ರಾತಸ್ಸವನದಲ್ಲಿ ಸ್ತುತಿವಿಷಯರಾಗಿ ಸಂಬದ್ಧರಾದ ಅಶ್ವಿನೌ =ಪ್ರಸಿದ್ಧರಾದ ಅಶ್ವಿನೀ ದೇವತೆಗಳನ್ನು ಹಾಗೆಯೇ ಪ್ರಾತರ್ಯುದಾ =ಪ್ರಾತಃಕಾಲದಲ್ಲಿ ಮಾಡಲ್ಪಡತಕ್ಕ ಹಂಸೋಪಾಸನಾ ರೂಪವಾದ ಸಮಾಧಿಗೆ ವಿಷಯರಾದ, ಅಶ್ವಿನೌ = ವಿಷ್ಣುರೂಪ ವಿಶೇಷಗಳನ್ನು ವಿಬೋಧಯ=ಸರ್ವದಾ ವಿಬುದ್ಧರಾಗಿಯೇ ಇರುವವರನ್ನು, ಪ್ರಾರ್ಥನೆ ಮಾಡು. (ಅವರು) ಇಹ = ಇಲ್ಲಿಗೆ ಅಸ್ಯಸೋಮಸ್ಯ ಪೀತಯೇ = ಈ ಸೋಮವನ್ನು ಪಾನ ಮಾಡುವುದಕ್ಕಾಗಿ, ಅಗಚ್ಛತಾ = ಬರಲಿ ||೧||

ಭಾ || (೧) ಪ್ರಾತಃ ಸ್ತುತತ್ವೇನ ಪ್ರೋಕ್ತೌ ಪ್ರಾತರ್ಯುಜಾವಿತಿ । ಅಶ್ವಿನೌ (೨) ಭಗವಾಂಶ್ಚೈವ ಪ್ರಾತರ್ಯೋಗೇನ ಗಮ್ಯತೇ || (೩) ಸ್ತುತಿ ಶಬ್ದಃ ಸ್ತುತೌ ಯಸ್ಮಾದ್ಬುಧ್ಯತೇ ವರ್ತಮಾನಕಃ । ಬೋಧಯೇತ್ಯತ ಉಕ್ತ್ಂ ತತ್ಪರತೋ ಬುಧ್ಯತೇ ಕಥಂ ||೧||

ಅ|| (೧) ಪ್ರಾತಃ ಸದನದಲ್ಲಿ ಸ್ತುತಿಸಲ್ಪಡುವವರಾದುದರಿಂದ ಅಶ್ವಿನೀ ದೇವತೆಗಳು ಪ್ರಾತರ್ಯುಜಾ ಎಂದು ಹೇಳಿಸಿಕೊಳ್ಳಲ್ಪಡುತ್ತಾರೆ. (೨) ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ। ಏಕವಿಂಶತ್ಸಹಸ್ರಾತ್ಮಾ ಸಷಟ್‌ಶತಮಹರ್ನಿಶಂ । ಅರ್ಪಣೀಯೋ ಹರೌನಿತ್ಯಂ ಪ್ರಾತರ್ಯೋಗೋ ಮಹಾನಯಂ || ಎಂದು ತಂತ್ರಸಾರದಲ್ಲಿ ಹಂಸೋಪಾಸನೆಯನ್ನು ಪ್ರಾತಯೋಗವೆಂದು ಹೇಳಿದುದರಿಂದ ಶ್ವಾಸಾತ್ಮಕ ಹಂಸಮಂತ್ರ ಜಪರೂಪ ಉಪಾಸನಾಸ್ವರೂಪವಾದ ಪ್ರಾತರ್ಯೋಗದಿಂದ ಶ್ರೀ ಪರಮಾತ್ಮನು ಹೊಂದಲ್ಪಡುತ್ತಾನೆ. ಆದ ಕಾರಣ ಶ್ರೀ ಹರಿಯು ಪ್ರಾತರ್ಯುಕ್ ಎನಿಸುತ್ತಾನೆ. (ಹಾಗಾದರೆ ಶ್ರೀ ವಿಷ್ಣುವು ವಿಶೇಷವಾಗುವುದು ಹೇಗೆಂದರೆ ಮೋಕ್ಷೋಪಾಯವಾದ ಹಂಸೋಪಾಸನೆಗೂ ಉಪೇಯನಾದ

ವಿಷ್ಣುವಿಗೂ ಅಭೇದೋಪಚಾರವು) (೩) (ಮೊದಲು ಅಜ್ಞಾನವಿದ್ದರೇನೇ ಬೋಧನವು (ತಿಳಿಸಿಕೊಡುವಿಕೆಯು) ಕೂಡುವುದರಿಂದ ವಿಬೋಧಯ =ತಿಳಿಸಿಕೊಡು ಎನ್ನುವುದರಿಂದ ಅಜ್ಞಾನವು ಸೂಚಿತವಾಗುತ್ತದೆ. ಆದ ಕಾರಣ ಸಯುಕ್ತಿಕವಾಗಿ ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ.) ಯಾವ ಕಾರಣದಿಂದ ಸ್ತುತ್ಯರ್ಥಕವಾದ ಶಬ್ದವನ್ನು ಗುಣಸಂಕೀರ್ತನ ರೂಪವಾದ ಸ್ತುತಿಯಲ್ಲಿಯೇ (ವ್ಯಾಖ್ಯಾನ ಮಾಡಬೇಕು. ಸ್ತುತಿ ಪ್ರಕರಣದಿಂದ ಸಂಗತಿಯಿಲ್ಲದಿರುವ ಪ್ರಯುಕ್ತ ದೋಷ ಸೂಚಕವಾಗಿ ವ್ಯಾಖ್ಯಾನ ಮಾಡಬಾರದು.) ಆದ ಕಾರಣ ಬೋಧಯ ಎಂದು ಯಾವುದು ಉಕ್ತವಾಗಿದೆಯೋ, ಅಲ್ಲಿ ಲೋಟ್ ಪ್ರತ್ಯಯವನ್ನು ಬುದ್ಧ್ಯತೇ ಎಂದು ವರ್ತಮಾನಾರ್ಥಕವನ್ನಾಗಿಯೂ ಸ್ವಾರ್ಥೇಣಿಚ್ ಎಂದೂ ವ್ಯಾಖ್ಯಾನ ಮಾಡಬೇಕು ಪ್ರಾರ್ಥಿಸು ಎಂದು. (ಇದ್ದ ಹಾಗೆ ವ್ಯಾಖ್ಯಾನ ಮಾಡಿದರೆ ಸ್ತುತಿತ್ವಕ್ಕೆ ವ್ಯಾಹತಿ ಬರುವುದು ಹೇಗೆ ? ಎಂದರೆ ) (ಸರ್ವಜ್ಞನಾದುದರಿಂದ ಶ್ರೀ ಹರಿಯು) ಋತ್ವಿಗಾದಿಗಳಿಂದ ಹೇಗೆ ತಿಳಿಯುತ್ತಾನೆ. ||೧||

ಋ || (೨೧೦) ಯಾ ಸುರಥಾ ರಥೀತಮೋಭಾ ದೇವಾ ದಿವಿಸ್ಪೃಶಾ । ಅಶ್ವಿನಾ ತಾ ಹವಾಮಹೇ ||೨||

ಅ || ಯಾ = ಯಾವ, ಉಭಾ ದೇವಾ = ಇಬ್ಬರು ದೇವತೆಗಳಾದ ಅಶ್ವಿನಾ = ಅಶ್ವಿನೀ ದೇವತೆಗಳು ಸುರಥಾ = ಪ್ರಶಸ್ತ ರಥವುಳ್ಳವರೋ, ರಥಿತಮಾ =ಅತಿಶಯಿತ ಶ್ರೇಷ್ಠ ರಥವುಳ್ಳವರೋ, ದಿವಿಸ್ಪೃಶಾ = ಸ್ವರ್ಗದಲ್ಲಿರುವವರೋ, ತಾ = ಅವರಿಬ್ಬರನ್ನು ಹವಾಮಹೇ = ಕರೆಯುತ್ತೇವೆ ||೨||

ಋ || (೨೧೧) ಯಾ ವಾಂ ಕಶಾ ಮಧುಮತ್ಯಶ್ವಿನಾ ಸೂನೃತಾವತೀ । ತಯಾ ಯಜ್ಞಂ ಮಿಮಿಕ್ಷತಂ ||೩||

ಅ|| ಅಶ್ವಿನಾ = ಅಶ್ವಿನೀ ದೇವತೆಗಳೇ, ಯಾ = ಯಾವ, ವಾಂ =ನಿಮ್ಮಿಬ್ಬರ ಸಂಬಂಧಿಯಾದ, ಮಧುಮತೀ =ಅಮೃತವನ್ನು ಸುರಿಸುವುದರಿಂದ ಸ್ಪರ್ಶ ಮಾತ್ರದಿಂದಲೇ ಸಮಸ್ತ ಪದಾರ್ಥಗಳಿಗೂ ಸ್ವಾದುತ್ವ (ರುಚಿ)ಯನ್ನುಂಟು ಮಾಡುವ, ಸೂನೃತಾವತೀ =ವೇದವಾಣಿಯಿಂದ ಸ್ತುತ್ಯವಾಗಿರುವ, ಕಶಾ=ತಂತು ಚರ್ಮಾದಿಗಳಿಂದ ನಿರ್ಮಿತವಾದ, ಅಶ್ವಾದಿಗಳಿಗೆ ಹೊಡೆಯುವುದಕ್ಕಾಗಿ ಮಾಡಿರತಕ್ಕ ರಜ್ಜು ವಿಶೇಷವೋ, (ಚಾಕೋಲು) ತಯಾ=ಅದರಿಂದ, ಯಜ್ಞ= ನಮ್ಮ ಯಜ್ಞವನ್ನು (ಅಂದರೆ ಯಜ್ಞ ಸಂಬಂಧಿಯಾದ ಘೃತಸೋಮ ಮೊದಲಾದ ವಸ್ತುಗಳ ಸಮೂಹವನ್ನು ಮಿಮಿಕ್ಷತಂ = (ಮಿಹ ಸ್ಪರ್ಶನೇ) ಸ್ಪರ್ಶಿಸಿರಿ ||೩||

ಭಾ || (೧) ಕಶಯಾ ಸ್ಪೃಷ್ಟಿಮಾತ್ರೇಣ ಮಧುಕಂ ಕುರುತೋಽಖಿಲಂ । ಅತೋ ಮಿಮಿಕ್ಷತಮಿತಿ (೨) ಸ್ಪರ್ಶೋ ಮೇಕ್ಷಣ ಮುಚ್ಯತೇ || (೩) ವೇದವಾಕ್ಯಸ್ತುತತ್ವೇನ ಕಶಾ ಸಾ ಸೂನೃತಾವತೀ । (೪) ತಯೈವ ಘೃತಸೋಮಾದಿ ಸ್ಪೃಶತಂ ಯಾಜ್ಞಿಕಂ ವಸು ||೩||

ಅ|| (ಚಾಕೋಲಿನಿಂದ ಯಜ್ಞ ಸಾಮಾಗ್ರಿಗಳನ್ನು ಮುಟ್ಟಬೇಕೆಂದು ಪ್ರಾರ್ಥಿಸಲಿಕ್ಕೆ ಏನು ಕಾರಣವೆಂದರೆ) (ಅಶ್ವಿನೀ ದೇವತೆಗಳು) ಚಾಕೋಲಿನಿಂದ ಕೇವಲ ಸ್ಪರ್ಶ ಮಾತ್ರದಿಂದ ಯಜ್ಞ ಸಂಬಂಧಿ ಘೃತ ಮೊದಲಾದ ಎಲ್ಲಾ ವಸ್ತುಗಳನ್ನು ಮಧುರಗಳನ್ನಾಗಿ ಮಾಡುತ್ತಾರೆ. ಆದ ಕಾರಣ ಸ್ಪರ್ಶ ಮಾಡಿರಿ ಮುಟ್ಟಬೇಕೆಂದು ಅಶ್ವಿನಿ ದೇವತೆಗಳ ಹತ್ತಿರ ಪ್ರಾರ್ಥಿಸಿದ್ದು.

(೨) ಮೇಕ್ಷಣವೆಂಬ ಪ್ರಕೃತಿಯಿಂದ ಸ್ಪರ್ಶವು ಹೇಳಲ್ಪಟ್ಟಿದೆ. (೩) ವೇದ ವಾಕ್ಯಗಳಿಂದ ಸ್ತುತಿಸಲ್ಪಡುವುದರಿಂದ ಆ ಕಶೆಯು ಸೂನೃತಾವತೀ ಎನಿಸುತ್ತದೆ. (೪) (ಯಜ್ಞವು ಕ್ರಿಯಾರೂಪವಾಗಿರುವುದರಿಂದ ಕಶೆಯಿಂದ ಯಜ್ಞವನ್ನು ಮುಟ್ಟುವುದು ಹೇಗೆ ? ಮತ್ತು ಯಜ್ಞವು ಮಧುರವಾಗುವುದೆಂದದ್ದೂ ಹೇಗೆ ಎಂದರೆ) ಆ ಭಾರ್ಕೋಲಿನಿಂದಲೇ ಘೃತಸೋಮ ಮೊದಲಾದ ಯಜ್ಞ ಸಂಬಂಧಿ ವಸ್ತುವನ್ನು ಸ್ಪರ್ಶಮಾಡಿರಿ ಎಂದರ್ಥವು ॥೩॥

ಋ ॥ (೨೧೨) ನ ಹಿ ವಾಮಸ್ತಿ ದೂರಕೇ ಯತ್ರಾ ರಥೇನ ಗಚ್ಛಥಃ । ಅಶ್ವಿನಾ ಸೋಮಿನೋ ಗೃಹಂ ॥೪॥

ಅ॥ ಅಶ್ವಿನಾ = ಅಶ್ವಿನೀ ದೇವತೆಗಳಿರಾ, ಸೋಮಿನಃ ಸೋಮಪಾನ ಮಾಡುವ ಯಜಮಾನನ, ಯತ್ರಗೃಹಂ= ಯಾವ ಮನೆಯನ್ನು ಕುರಿತು, ರಥೇನ =ರಥದಿಂದ, ಗಚ್ಛಥಃ =ಬರುತ್ತೀರೋ, (ಆ ಮನೆಯು) ವಾಂ =ನಿಮಗೆ ದೂರಕೇ =ದೂರದಲ್ಲಿ ನಾಸ್ತಿ ಹಿ = ಇಲ್ಲವಷ್ಟೆ, ದೂರವಾಗುವುದಿಲ್ಲವಷ್ಟೆ. (ಆದ ಕಾರಣ ಬನ್ನಿರಿ) ॥೪॥

ಋ ॥ (೨೧೩) ಹಿರಣ್ಯಪಾಣಿಮೂತಯೇ ಸವಿತಾರಮುಪಹ್ವಯೇ । ಸಾ ಚೇತ್ತಾ ದೇವತಾ ಪದಂ ॥ ॥೫॥

ಅ॥ (ನಾನು) ಹಿರಣ್ಯ ಪಾಣಿಂ = ಹಿತವೂ ರಮಣೀಯವೂ ಆಗಿರುವ, ಅಥವಾ ಹಿರಣ್ಯ ವರ್ಣವುಳ್ಳ, ಸಮಸ್ತ ಅವಯವಗಳಿಂದ ಕೂಡಿದ ರೂಪವುಳ್ಳ, ಸವಿತಾರಂ = (ಷೂಞ ಪ್ರಾಣಿ ಪ್ರಸವೇ) ಜಗತ್ತನ್ನು ಸೃಷ್ಟಿಸುವುದರಿಂದ ಸವಿತೃ ಎನಿಸಿಕೊಂಡ ಶ್ರೀ ಹರಿಯನ್ನು, ಊತಯೇ = ರಕ್ಷಾರ್ಥವಾಗಿ, ಉಪಹ್ವಯೇ = ಕರೆಯುತ್ತೇನೆ. (ಏಕೆಂದರೆ) ಸಃ = ಆ ಶ್ರೀ ಹರಿಯೇ, ಪದಂ = ತನ್ನ ಸ್ವರೂಪವನ್ನು ಇತರರ ಸ್ವರೂಪವನ್ನು ಚೇತ್ತಾ = (ಚಿತೀಸಂಜ್ಞಾನೇ) ತಿಳಿದವನು. ಸಃ =ಆತನೇ, ದೇವತಾ = ಕ್ರೀಡಾದಿ ಗುಣವಿಶಿಷ್ಟವಾದ ದೇವನು. (ಇತರರು ದೇವತಾಭಾಸರು) ಅಥವಾ ದೇವತಾ = ದೇವ ಶಬ್ದ ಪ್ರವೃತ್ತಿ ನಿಮಿತ್ತವಾದ ಕ್ರೀಡಾದಿಗುಣ ಸಮುದಾಯವು, ಸಃ = ಅವನೇ (ಗುಣಗಳಿಂದ ಅಭಿನ್ನನೇ) (ಪ್ರಸಿದ್ಧ ಸೂರ್ಯನಲ್ಲಿ ಯಥಾಯೋಗ್ಯವಾಗಿ ಇಟ್ಟುಕೊಳ್ಳಬೇಕು) ॥೫॥

ಭಾ ॥ (೧) ಹಿತತ್ವಾದ್ರಮಣೀಯತ್ವಾದ್ಧಿರಣ್ಯಂ ವರ್ಣತೋಽಪಿಚ । ರೂಪಂ ನಾರಾಯಣಸ್ಯೈವ ಪಾಣಿ ಶಬ್ದೋಪಲಕ್ಷಿತಂ ॥ (೨) ಸೃಷ್ಟೃತ್ವಾತ್ಸವಿತಾ ವಿಷ್ಣುಃ ಸಜ್ಞಾತಾ ಸ್ವಪದಾದಿಕಂ ॥ ಸ ಏವಾ ದೇವತಾ ಮುಖ್ಯಾ ತದ್ಗುಣೈಕ್ಯೇನ ದೇವತಾ ॥ ॥೫॥೪॥

ಅ॥ (೧) (ಶ್ರೀ ವಿಷ್ಣುವಿನಲ್ಲಿ ಹಿರಣ್ಯಪಾಣಿ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) (ಶ್ರೀ ನಾರಾಯಣನ ಸ್ವರೂಪವೇ (ಪ್ರಾಣಿ ಮಾತ್ರವಲ್ಲ.) ಜಗತ್ತಿಗೆ ಹಿತಕರವಾಗಿರುವುದರಿಂದಲೂ ಜಗತ್ತಿನಿಂದ ಅತಿ ರಮಣೀಯವಾಗಿರುವುದರಿಂದಲೂ ಹಿರಣ್ಯವು ಮತ್ತು ಹಿರಣ್ಯ ಸದೃಶವಾಗಿರುವುದರಿಂದಲೂ ಹಿರಣ್ಯವು, ಲಕ್ಷಣಯಾಪಾಣಿ ಶಬ್ದದಿಂದ ಸಮಸ್ತ ಅವಯವಗಳಿಂದ ಕೂಡಿದ ರೂಪವನ್ನು ಇಟ್ಟುಕೊಳ್ಳಬೇಕು. ಏವಂಚ ಶ್ರೀ ಪರಮಾತ್ಮನಿಗೆ ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಇತ್ಯಾದಿ ಪ್ರಮಾಣಗಳಿಂದ ಅಂತಹ ಹಿರಣ್ಯ ರೂಪವಿದ್ದ ಪ್ರಯುಕ್ತ ಶ್ರೀ ಹರಿಯು ಹಿರಣ್ಯಪಾಣಿಯೆನಿಸುತ್ತಾನೆ. (೨) (ಸವಿತೃ ಶಬ್ದವನ್ನು ಗಾಯತ್ರೀ ವ್ಯಾಖ್ಯಾನ ಮಾಡುವಾಗ ವ್ಯಾಖ್ಯಾನ ಮಾಡಿರುವುದರಿಂದ ತಿರುಗಿ ಸ್ಮೃತಿಪಥಕ್ಕೆ ತರುತ್ತಾರೆ)

ಶ್ರೀ ವಿಷ್ಣುವು ಜಗತ್ತನ್ನು ಸೃಷ್ಟಿಸುವುದರಿಂದ ಸವಿತಾ ಎನಿಸುತ್ತಾನೆ. ಆ ಶ್ರೀ ಹರಿಯು ತನ್ನ ಸ್ವರೂಪವನ್ನು ಇತರರ ಸ್ವರೂಪವನ್ನೂ ತಿಳಿಯುತ್ತಾನೆ. ಆ ಶ್ರೀ ಹರಿಯೇ ಮುಖ್ಯ ದೇವನು. (ಇತರರು ದೇವತಾಭಾಸರು.) ಅಥವಾ ಆ ಶ್ರೀ ಹರಿಯೇ ದೇವಸ್ಯ ಭಾವಃ = ದೇವತಾ, ದೇವಶಬ್ದ ಪ್ರವೃತ್ತಿ ನಿಮಿತ್ತವು, ಕ್ರೀಡಾದಿ ಗುಣಗಳ ಸಮುದಾಯವು. (ಹಾಗಾದರೆ ದೇವತಾ ಎಂದು ವ್ಯಪ್ರದೇಶವು - ಹೇಗೆಂದರೆ) (ಉಭಯವ್ಯಪದೇಶಾತ್ತ್ವಹಿಕುಂಡಲವತ್) (೩-೨-೨೮) ಇತ್ಯಾದಿಗಳಲ್ಲಿ ಗುಣ ಗುಣಿಗಳಿಗೆ ಅಬೇಧವು ಸಿದ್ಧವಾದ ಪ್ರಯುಕ್ತ) ಆ ಶ್ರೀ ಹರಿಗೂ ಆತನ ಕ್ರೀಡಾದಿ ಗುಣಗಳಿಗೂ ಐಕ್ಯವಿರುವ ಕಾರಣ ದೇವತಾ = ದೇವತ್ವವು ಕ್ರೀಡಾದಿ ಗುಣಗಳ ಸಮುದಾಯವು ಆ ಶ್ರೀ ಹರಿಯೇ. (ಶ್ರೀ ಹರಿಯಿಂದ ಅಭಿನ್ನವೇ) ||೫||೪||

ಋ || (೨೧೪) ಅಪಾಂ ನಪಾತಮವಸೇ ಸವಿತಾರಮುಪಸ್ತುಹಿ । ತಸ್ಯ ವ್ರತಾನ್ಯುಶ್ಮಸಿ ||೬||

ಅ|| (ಎಲೋ ಹೋತನೇ) ಅಪಾಂ ನಪಾತಂ =ಅದ್ಭ್ಯಃ ಪೃಥಿವೀ ಎಂಬ ಶ್ರುತಿಯಿಂದ ಪೃಥಿವಿಯು ಜಲಗಳ ಪುತ್ರಿಯು. ಪೃಥಿವ್ಯಾತ್ಮಕವಾದುದರಿಂದ ದೇಹವೂ ಕೂಡ ಜಲಗಳ ಪುತ್ರವು. ಅಂತಹ ಪಾರ್ಥಿವ ದೇಹದಲ್ಲಿ ಶ್ರೀ ಹರಿಯು ವ್ಯಕ್ತನಾಗುವುದರಿಂದ ಪೃಥಿವೀ ಪುತ್ರನೆನಿಸುತ್ತಾನೆ. ಈ ರೀತಿಯಾಗಿ) ಜಲಗಳಿಂದ ಹುಟ್ಟಿದ ಪೃಥಿವ್ಯಾತ್ಮಕ ದೇಹದಲ್ಲಿ ಶ್ರೀ ಹರಿಯು ವ್ಯಕ್ತನಾಗುವುದರಿಂದ ಜಲಗಳ ಪೌತ್ರನಾದುದರಿಂದ ಅಪಾಂನಪಾತ್ ಎನಿಸಿಕೊಂಡು ಸವಿತಾರಂ =ಜಗತ್ಸರ್ಜಕನಾದ ಶ್ರೀ ಹರಿಯನ್ನು, ಹಾಗೆಯೇ ಜಲಗಳ ಕಾರ್ಯವಾದ ಬ್ರಹ್ಮಾಂಡದಲ್ಲಿ ಸೂರ್ಯನು ಹುಟ್ಟಿರುವುದರಿಂದ ಜಲಗಳಿಗೆ ಪೌತ್ರನಾದುದರಿಂದ ಅಪಾಂನಪಾತ್ ಎನಿಸಿಕೊಂಡ ಅಥವಾ ಶ್ರೀ ವಿಷ್ಣುವಿನ ರೇತಸ್ಸಿನಿಂದ ಹುಟ್ಟಿರುವುದರಿಂದ ಅಪಾಂನಪಾತ್ ಎನಿಸಿಕೊಂಡ ಬ್ರಹ್ಮಾಂಡವು ೨೪ ತತ್ವಗಳ ಕಾರ್ಯವಾಗಿರುವುದರಿಂದ ಜಲರೂಪ ಸೂರ್ಯನನ್ನು, ಅವಸೇ = ರಕ್ಷಣೆಗೋಸ್ಕರ, ಉಪಸ್ತು ಹಿ = ಸ್ತೋತ್ರ ಮಾಡು. (ಏಕೆಂದರೆ) ತಸ್ಯ =ಸವಿತೃ ಎನಿಸಿಕೊಂಡ ಶ್ರೀ ಹರಿಯ ಮತ್ತು ಸೂರ್ಯನ, ವ್ರತಾನಿ = ಜಗತ್ಸರ್ಜನಾದಿ ಕರ್ಮಗಳನ್ನು, ಉಶ್ಮಸಿ = ವಶಕಾಂತೌ) ನಾವೆಲ್ಲರೂ ಇಚ್ಛಿಸುತ್ತೇವೆ. ||೬||

ಭಾ || ವ್ಯಕ್ತತ್ವಾತ್ಪಾರ್ಥಿವೇ ದೇಹೇ ಸೋಽಪಾರ ನಪ್ತಾ ಜನಾರ್ದನಃ ||೬||

ಅ|| (ಮಗನ, ಮತ್ತು ಮಗಳ ಮಗನು ನಪ್ತಾ ಎನಿಸುತ್ತಾನೆ. ನ ಪಾತಯತಿ ಸ್ವಕುಲಂ, ಕಿಂತು ಉದ್ಧರತಿ, ತಮ್ಮ ಕುಲವನ್ನು ಅಧೋ ಲೋಕಕ್ಕೆ ಬೀಳಿಸುವುದಿಲ್ಲ, ಮತ್ತೆ ಉದ್ಧರಿಸುತ್ತಾನೆ, ಎಂಬ ವ್ಯುತ್ಪತ್ತಿಯಿಂದ ನಪಾತ್ =ಪೌತ್ರನು) ಹೀಗೆ ಜಲಗಳಿಂದ ಹುಟ್ಟಿದ ಪಾರ್ಥಿವ ದೇಹದಲ್ಲಿ ಶ್ರೀ ಹರಿಯು ವ್ಯಕ್ತನಾಗುವುದರಿಂದ ಜಲಗಳ ಪೌತ್ರನು. (ದೇಹದಲ್ಲಿ ಉತ್ಪನ್ನತ್ವಾತ್ ಎಂದು ಹೇಳಬೇಕಿತ್ತು. ವ್ಯಕ್ತತ್ವಾತ್ = ಎಂದದ್ದು ಹೇಗೆ ಎಂದರೆ (ಸಃ =ಆಶ್ರೀ ಹರಿಯು ಅಜಃ ಉತ್ಪತ್ತಿಯಿಲ್ಲದವನೆಂದೇ ಪ್ರಸಿದ್ಧನು. ಆದುದರಿಂದಲೇ ಜನಾರ್ದನನು. ಜನಂ = ಜನನವನ್ನು ಅರ್ದಯತಿ, ತನಗೆ ಉತ್ಪತ್ತ್ಯ ಭಾವವನ್ನು ಮಾಡುತ್ತಾನೆ, ಆದ ಕಾರಣ ಜನಾರ್ದನಃ = ಎನಿಸುತ್ತಾನೆ. ||೬||

ಋ || (೨೧೫) ವಿಭಕ್ತಾರಂ ಹವಾಮಹೇ ವಸೋಶ್ಚಿತ್ರಸ್ಯ ರಾಧಸಃ । ಸವಿತಾರಂ ನೃಚಕ್ಷಸಂ ||೭||

ಅ|| (ನಾವು) ಚಿತ್ರಸ್ಯ ರಾಧಸಃ =ಉತ್ತಮ ಸಿದ್ಧಿರೂಪವಾದ, ವಸೋಃ =ಜ್ಞಾನ ಧನವನ್ನೂ ಪ್ರಸಿದ್ಧ ಧನವನ್ನು, ವಿಭಕ್ತಾರಂ =ಸದಾ ವಿಭಾಗಿಸಿ ಕೊಡತಕ್ಕ, (ಅಂದರೆ ಯಾರಿಗೆ ಎಷ್ಟು ಯೋಗ್ಯವೋ ಅವರಿಗೆ ಅಷ್ಟು ಕೊಡತಕ್ಕ ) ನೃ ಚಕ್ಷಸಂ = ಜೀವರನ್ನು ಚೆನ್ನಾಗಿ ನೋಡತಕ್ಕ (ಅಂದರೆ ಸಮಸ್ತ ಪುಣ್ಯ ಪಾಪಾದಿ ರೂಪ ವಿಶೇಷ ಧರ್ಮಗಳಿಂದೊಡಗೂಡಿ ಜೀವ ಚೈತನ್ಯಕ್ಕೆ ಸಾಕ್ಷಿಯಾದ, ಸವಿತಾರಂ = ಶ್ರೀ ಹರಿಯನ್ನು ಸೂರ್ಯನನ್ನು, ಹವಾಮಹೇ = ಕರೆಯುತ್ತೇವೆ. ||೭||

ಭಾ || ಸದಾ ವಿಭಜ್ಯ ದಾತಾರಂ ವಸೋರುತ್ತ ಮರಾಧಸಃ | ಅಶೇಷ ಪುಣ್ಯ ಪಾಪಾದಿ ವಿಶೇಷೈಶ್ಚಿತಿ ದರ್ಶಕಂ | ಅಹ್ವಯಾಮಃ ||೭||

ಅ|| ನಾವು ಉತ್ತಮ ಸಿದ್ಧಿರೂಪವಾದ, ಜ್ಞಾನ ಧನ ಪ್ರಸಿದ್ಧ ಧನಗಳನ್ನು ಸದಾ ಯಾರಿಗೆ ಎಷ್ಟು ಯೋಗ್ಯವೋ ಅವರಿಗೆ ಅಷ್ಟನ್ನು ವಿಭಾಗಿಸಿ ಕೊಡತಕ್ಕ, ಸಮಸ್ತ ಪುಣ್ಯ ಪಾಪಾದಿ ವಿಶೇಷ ಧರ್ಮಗಳಿಂದೊಡಗೂಡಿ ಜೀವ ಚೈತನ್ಯಕ್ಕೆ ಸಾಕ್ಷಿಯಾದ, ಸವಿತೃ ಎನಿಸಿದ ಶ್ರೀ ಹರಿಯನ್ನು ಸೂರ್ಯನನ್ನು ಕರೆಯುತ್ತೇವೆ||೬||

ಋ || (೨೧೬) ಸಖಾಯ ಆ ನಿಷೀದತ ಸವಿತಾ ಸ್ತೋಮ್ಯೋನು ನಃ | ದಾತಾ ರಾಧಾಂಸಿ ಶುಂಭತಿ ||೮||

ಅ|| ಹೇ ಸಖಾಯಃ =ಎಲೋ ಋತ್ವಿಜರೇ, ಆ = ನಮ್ಮ ಸಮೀಪಕ್ಕೆ ಬಂದು, ನಿಷೀದತ=ಕೂತು ಕೊಳ್ಳಿರಿ. (ಏಕೆಂದರೆ) ಯಃ ಸವಿತಾ = ಯಾವ ಶ್ರೀ ಹರಿಯು, ರಾಧಾಂಸಿ =ಸಿದ್ಧಿಗಳನ್ನು ಶುಂಭತಿ = (ಶುಭ ಶುಂಭ ಶೋಭಾರ್ಥೇ) ಭಗವನ್ಮಾಹಾತ್ಮ್ಯೆಯನ್ನು ವಿಶೇಷತಃ ಪ್ರತಿಪಾದಿಸುವುದಕ್ಕಾಗಿ ಚೆನ್ನಾಗಿ ಶೋಭೆ ಬರುವಂತೆ ಮಾಡುತ್ತಾನೋ, (ಆದ ಕಾರಣ) ನು = ಈಗ, ನಃ =ನಮಗೆ, (ಸಃ = ಅಂತಹ) ದಾತಾ = ಅಭೀಷ್ಟವನ್ನು ಕೊಡುವ, ಸವಿತಾ = ಶ್ರೀ ಹರಿಯು ಸೂರ್ಯನು, ಸ್ತೋಮ್ಯಃ =ಸ್ತುತಿಸಿಕೊಳ್ಳಲಿಕ್ಕೆ ಅರ್ಹನು. ||೮||

ಭಾ || ಸ ರಾಧಾಂಸಿ ಶೋಭಯತ್ಯಂಜಸಾ ಹರಿಃ ||೮||

ಅ|| (ರಾಧಾಂಸಿ ಶುಂಭತಿ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಆ ಶ್ರೀ ಹರಿಯು (ಶುಭ ಶುಂಭ ಶೋಭಾರ್ಥೇ (ಎಂಬ ಧಾತುವ್ಯಾಖ್ಯಾನದಿಂದ) ಸಿದ್ಧಿಗಳನ್ನು ಚೆನ್ನಾಗಿ ಶೋಭೆ ಬರುವಂತೆ ಮಾಡುತ್ತಾನೆ. ಅಥವಾ ಸ್ವರಾಧಾಂಸಿ ಎಂಬ ಪಾಠದಲ್ಲಿ ತನ್ನಿಂದ ಕೊಡಲ್ಪಟ್ಟ ಸಿದ್ಧಿಗಳನ್ನು ಎಂದರ್ಥವು. (ಹರಿಗೆ ಸಿದ್ಧಿ ಶೋಭಕತ್ವವು ಹೇಗೆಂದರೆ - ಅಧಿಪತಿಗಳಿಲ್ಲದಿರುವ ಸಿದ್ಧಿಗಳಿಗೆ ಉಪಯೋಗವಿಲ್ಲದಿರುವುದರಿಂದ ಶೋಭೆಯು ಬರುವುದಿಲ್ಲ. ತಥಾಚ ಯಾವ ಕಾರಣದಿಂದ ಶ್ರೀ ಹರಿಯು ಸಿದ್ಧಿಗಳಿಗೆ ಶೋಭೆಯನ್ನುಂಟು ಮಾಡುತ್ತಾನೋ, ಅಂದರೆ - ಭಕ್ತರಿಗೆ ಅಭಿಲಷಿತ ವಸ್ತುವನ್ನು ಕೊಡುವವನೆಂದು ಮಾಡಿಕೊಂಡು ಸ್ತುತಿಸಿಕೊಳ್ಳಲಿಕ್ಕೆ ಅರ್ಹನೋ, ಆದ ಕಾರಣ ಆ ಶ್ರೀ ಹರಿಯನ್ನು ಸ್ತುತಿಸುವುದಕ್ಕಾಗಿ ಋತ್ವಿಜರೇ ಯಜಮಾನನ ಸಮೀಪಕ್ಕೆ ಬಂದು ಕೂತುಕೊಳ್ಳಿರಿ ಎಂದು ಋಕ್ಕಿನ ಅಭಿಪ್ರಾಯವು. ||೮||

ಋ || (೨೧೭) ಅಗ್ನೇ ಪತ್ನೀರಿಹಾವಹ ದೇವಾನಾಮುಶತೀರುಪ | ತ್ವಷ್ಟಾರಂ ಸೋಮಪೀತಯೇ ||೯||

ಅ॥ ಅಗ್ನೇ =ಎಲೋ ಶ್ರೀ ಹರಿಯೇ, ಎಲೋ ಅಗ್ನಿಯೇ ಉಶತೀಃ = (ವಶಕಾಂತೌ) ಯಜ್ಞಕ್ಕೆ ಬರಬೇಕೆಂದಿಚ್ಛಿಸುವ, ದೇವಾನಾಂ ಪತ್ನೀಃ =ದೇವತೆಗಳನ್ನು ರಕ್ಷಿಸುವುದರಿಂದ ಪತ್ನೀ ಎಂದು ಹೇಳಲ್ಪಟ್ಟ ಶ್ರೀ ಹರಿಯ ಸ್ತ್ರೀ ರೂಪಗಳನ್ನು, ಮತ್ತು ದೇವತೆಗಳ ಹೆಂಡಂದಿಯರನ್ನು, ತ್ವಷ್ಟಾರಂ = ತ್ವಷ್ಟ್ಟ ಎನಿಸಿಕೊಂಡ ಶ್ರೀ ಹರಿಯನ್ನು, ಪ್ರಸಿದ್ಧ ತ್ವಷ್ಟೃ ದೇವತೆಯನ್ನೂ, ಸೋಮಪೀತಯೇ = ಸೋಮಪಾನ ಮಾಡುವುದಕ್ಕಾಗಿ, ಇಹ =ಈ ಯಜ್ಞದಲ್ಲಿ, ಉಪ ಆವಹ =ಸನ್ನಿಹಿತರನ್ನಾಗಿ ಮಾಡು.

ವಿ ॥ ಇಲ್ಲಿ ಅನುಕ್ರಮಣಿಕೆಯಲ್ಲಿ ಹೇಳಿದ್ದ ಅಗ್ನಿ ಎಂಬ ದೇವತೆಯು ಅನುಪಪನ್ನವು. ಏಕೆಂದರೆ ಅಗ್ನಿಯು ಪ್ರೈಷ (ಕಾರ್ಯ ವಿಶೇಷವನ್ನು ಮಾಡುವುದಕ್ಕಾಗಿ ಪ್ರೇರೇಪಿಸುವಿಕೆ) ಗೋಚರವಾಗಿದೆ. ಸಖಾಯ ಆನಿಷೀದತ ಎಂಬಲ್ಲಿ ಋತ್ವಿಜರಿಗೆ ಪ್ರೈಷವಿಷಯತ್ವವಿದ್ದರೂ ದೇವತಾತ್ವವಿಲ್ಲ. ಆದ ಕಾರಣ ಪ್ರೈಷವಿಷಯಕವಾದದ್ದು ಲಿಂಗವಾಗುವುದಿಲ್ಲ. ಮತ್ತೆ ಇಲ್ಲಿ ಅಗ್ನಿಗೂ, ದೇವಪತ್ನಿಯರಿಗೂ ತ್ವಷ್ಟೃವಿಗೂ ದೇವತಾತ್ವವಿದೆ ಎಂದು ಪ್ರತೀತ್ಯನುಸಾರವಾಗಿಯೇ ದೇವತೆಗಳನ್ನು ತಿಳಿದುಕೊಳ್ಳಬೇಕು.) ॥೯॥

ಋ ॥ (೨೧೮) ಆಗ್ನಾ ಅಗ್ನ ಇಹಾವಸೇ ಹೋತ್ರಾಂ ಯವಿಷ್ಠ ಭಾರತೀಂ । ವರೂತ್ರೀಂ ಧಿಷಣಾಂ ವಹ ॥೧೦॥೫॥

(ಇಲ್ಲಿ ನದಿಗಳು, ಅಗ್ನಿ ಭಾರತೀ, ಶ್ರೀ ದೇವಿ, ಇವರು ದೇವತೆಗಳು)

ಅ॥ ಯವಿಷ್ಠ =ಅತಿಶಯವಾಗಿ ತರುಣನಾದ ಅಗ್ನೇ = ಎಲೋ ಅಗ್ನಿಯೇ, ಗ್ನಾಃ = (ಅಭಿಯಜ್ಞಂಗೃಣೀಹಿ ಎಂಬಲ್ಲಿ ಹೇಳಿದ ಪ್ರಕಾರ) ನಿನ್ನದ್ದಾದ ಸ್ತ್ರೀರೂಪಗಳನ್ನೂ ನದಿಗಳನ್ನೂ, ಹೋತ್ರಾ = (ಹ್ವೇಞಶಬ್ದೇ) ಕರೆಯಲ್ಪಡುವುದರಿಂದಲೂ ಆಹ್ವಾನ ಮಂತ್ರಗಳಿಗೆ ಅಭಿಮಾನಿನಿಯಾದುದರಿಂದಲೂ, ಹೋತ್ರಾ ಎನಿಸಿಕೊಂಡ, ವರೂತ್ರೀಂ = ವೃಞವರಣೇ) (ತ್ರೈಜಪಾಲನೇ) ಸರ್ವರಿಗೂ ಅಂಗೀಕಾರಾರ್ಹಳಾದುದರಿಂದಲೂ ಜಗತ್ತನ್ನು ರಕ್ಷಿಸುವುದರಿಂದಲೂ ವರೂಶ್ಚಾಸೌ ತ್ರೀಚ ಎಂಬ ವ್ಯುತ್ಪತ್ತಿಯಿಂದ ವರೂತ್ರೀ ಎನಿಸಿಕೊಂಡ, ಧಿಷಣಾಂ = ಬುದ್ಧಿ ಸ್ವರೂಪಿಣಿಯೂ, ಸರ್ವರ ಬುದ್ಧಿಗೆ ಪ್ರೇರಕಳೂ ಸರ್ವರ ಬುದ್ಧಿಗೆ ಅಭಿಮಾನಿನಿಯೂ ಆದ, ಭಾರತೀಂ = ಭರತನೆನಿಸಿದ ವಾಯುವಿಗೆ ಸ್ವಾಮಿಯಾದುದರಿಂದ ಭಾರತೀ ಎನಿಸಿದ ಶ್ರೀ ಹರಿಯ ಸ್ತ್ರೀರೂಪವನ್ನೂ, ಅಥವಾ ವಾಯುವಿನ ಪತ್ನಿಯಾದ ಭಾರತೀ ದೇವಿಯನ್ನೂ, ಅಥವಾ ಶ್ರೀ ದೇವಿಯನ್ನು ಅವಸೇ =ನಮ್ಮ ರಕ್ಷಣೆಗಾಗಿ, ಇಹ =ಯಜ್ಞದಲ್ಲಿ ಅವಹ =ಸನ್ನಿಹಿತರನ್ನಾಗಿ ಮಾಡು. ॥೧೦॥೫॥

ಭಾ ॥ (೧) ನದೀಶ್ಚ ಭಾರತೀಂ ಚೈವ ಹೋತ್ರಾಮಾಹುತಿರೂಪತಃ । ವರೂತ್ರೀಂ ವರಣೀ ಯತ್ವಾತ್ರಾಣಾದ್ಬುದ್ಧಿಸ್ವರೂಪಿಣೀಂ ॥ (೨) ವಿಷ್ಣುಶ್ಚ ಪ್ರಾಣಸಂಬಂಧಾದ್ಭಾರತೀತ್ಯೇವ ಚೋದಿತಃ । (೩) ಪ್ರಾಣಸ್ತು ಭರತೋ ಭಾರತತತ್ವಾದ್ಧರ್ತೃರೂಪತಃ ॥ (೪) ಹೊತ್ರಾ ಹುತತ್ವತೋ ವಿಷ್ಣುಃ ಶ್ರೀರ್ಮಾಪಿ ಧಿಷಣಾ ಮತಾ ॥೧೦॥೫॥

ಅ ॥ (೧) ನದಿಗಳನ್ನು ಚ = ನಿನ್ನ ಸ್ತ್ರೀ ರೂಪಗಳನ್ನೂ, (ಆಹೂಯಂತೇಯೈಸ್ತೇ ಹೋತ್ರಾಃ ಮಂತ್ರಾಃ ಎಂಬ ವ್ಯುತ್ಪತ್ತಿಯಿಂದ) ಆಹ್ವಾನ ಮಂತ್ರಗಳಿಗೆ ಅಭಿಮಾನಿನಿಯಾದುದರಿಂದ ಹೋತ್ರಾ ಎನಿಸಿಕೊಂಡ, ಸರ್ವರಿಗೂ ಅಂಗೀಕಾರಾರ್ಹಳಾದುದರಿಂದಲೂ ಸರ್ವ ಜಗತ್ತನ್ನು ರಕ್ಷಿಸುವುದರಿಂದಲೂ ವರೂತ್ರೀ ಎನಿಸಿಕೊಂಡ, ಬುದ್ಧಿ ಸ್ವರೂಪಿಣಿಯೂ, ಸರ್ವರ ಬುದ್ಧಿಗೆ ಅಭಿಮಾನಿನಿಯೂ, ಆದ, ವಿಷ್ಣುವಿನ ಸ್ತ್ರೀ ರೂಪವನ್ನೂ ಭಾರತೀ ದೇವಿಯನ್ನೂ ಕೂಡ

(ನಮ್ಮ ರಕ್ಷಣೆಗಾಗಿ ಈ ಯಜ್ಞದಲ್ಲಿ ಸನ್ನಿಹಿತರನ್ನಾಗಿ ಮಾಡು) (೨) (ಭಾರತೀ ಶಬ್ದವನ್ನು ಶ್ರೀ ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಾರೆ.) ಶ್ರೀ ವಿಷ್ಣುವು ಮುಖ್ಯಪ್ರಾಣನಿಗೆ ಸ್ವಾಮಿತ್ವರೂಪ ಸಂಬಂಧದಿಂದ (ಸ್ವಾಮಿಯಾದುದರಿಂದ) ಭಾರತೀ ಎಂದೇ ಹೇಳಿಸಿಕೊಳ್ಳಲ್ಪಡುತ್ತಾನೆ. ಅಥವಾ ಶ್ರೀ ಹರಿಯ ಸ್ತ್ರೀ ರೂಪವು ಭಾರತೀ ಎನಿಸಿಕೊಳ್ಳುತ್ತದೆ. ಚ = ಮುಖ್ಯಪ್ರಾಣನ ಪತ್ನಿಯಾದುದರಿಂದ ವಾಯುಪತ್ನಿಯು ಭಾರತೀ ಎಂದು ಹೇಳಿಸಿಕೊಳ್ಳಲ್ಪಡುತ್ತಾಳೆ. ೨ ನೇ ಚ ಶಬ್ದದಿಂದ ಶ್ರೀ ವಿಷ್ಣುವು ದೇವತೆಗಳನ್ನು ರಕ್ಷಿಸುವುದರಿಂದ ದೇವಾನಾಂ ಪತ್ನೀ ಎಂದೂ ಹೇಳಲ್ಪಡುತ್ತಾನೆ. (೩) (ಪ್ರಾಣ ಸಂಬಂಧದಿಂದ ಭಾರತೀ ಎಂದು ಹೇಗೆ ಸಿಗುತ್ತದೆಂದರೆ) (ಸಮಸ್ತ ಗುಣಗಳ) ಭಾರ (ಧರಿಸುವಿಕೆ)ದಿಂದ ವ್ಯಾಪ್ತನಾದುದರಿಂದಲೂ (ನಿರವಧಿಕ ಗೌರವದಿಂದಲೂ, (ಅಂದರೆ ಅತಿ ಶ್ರೇಷ್ಠನಾಗಿರುವುದರಿಂದಲೂ) (ಸಮಸ್ತ ಜಗತ್ತಿಗೆ) ಪೋಷಕನಾಗಿರುವುದರಿಂದಲೂ ಮುಖ್ಯಪ್ರಾಣನಾದರೂ ಭರತನೆನಿಸಿಕೊಳ್ಳುತ್ತಾನೆ. (ಭರತಸ್ಯ ಇಯಂ ಭಾರತೀ. ಮುಖ್ಯಪ್ರಾಣನಿಗೆ ಸ್ವಾಮಿಯಾದವನು ಶ್ರೀ ಹರಿಯು. (೪) (ಶ್ರೀ ವಿಷ್ಣುವಿಗೆ ಮಂತ್ರಾದಿಗಳ ಅಭಿಮಾನಿತ್ವವಿಲ್ಲದಿರುವುದರಿಂದ ಶ್ರೀ ವಿಷ್ಣುವಿನಲ್ಲಿ ಹೋತ್ರಾ ಎಂಬ ಶಬ್ದವು ಹೇಗೆ ಕೂಡುತ್ತದೆ ಎಂದರೆ ಶ್ರೀ ವಿಷ್ಣುವು ಹೋಮಿಸಲ್ಪಡುವುದರಿಂದ (ಅಂದರೆ ಶ್ರೀ ವಿಷ್ಣುವನ್ನುದ್ದೇಶಿಸಿ ಋತ್ವಿಜರು ಹೋಮಾದಿಗಳನ್ನು ಮಾಡುವುದರಿಂದ) ಶ್ರೀ ವಿಷ್ಣುವು ಹೋತ್ರಾ ಎನಿಸುತ್ತಾನೆ. ಸರ್ವರ ಬುದ್ಧಿಗಳಿಗೆ ಪ್ರೇರಕಳಾದುದರಿಂದಲೂ ಸರ್ವರ ಬುದ್ಧಿಗಳಿಗೆ ಅಭಿಮಾನಿನಿಯಾದುದರಿಂದಲೂ ಲಕ್ಷ್ಮೀದೇವಿಯು ಧಿಷಣಾ ಎನಿಸುತ್ತಾಳೆ. ||೧೦||೫||

**ಋ || (೨೧೯) ಅಭಿನೋ ದೇವೀರವಸಾ ಮಹಃ ಶರ್ಮಣಾ ನೃಪತ್ನೀಃ । ಅಚ್ಛಿನ್ನಪತ್ರಾಃ ಸಚಂತಾಂ ||೧೧||**

ಅ|| ಅಚ್ಛಿನ್ನ ಪತ್ರಾಃ = ನಿರಂತರದಲ್ಲಿಯೂ ಇರುವ ತಾಟಂಕವೆಂಬ ಕರ್ಣಾಭರಣಗಳುಳ್ಳ, (ಸರ್ವದಾ ಅವೈಧವ್ಯಕ್ಕೆ ಕಾರಣವಾದ ಸೌಮಂಗಲ್ಯದಿಂದ ಕೂಡಿರುವ) ನೃಪತ್ನೀಃ =ಪ್ರಧಾನ ಪುರುಷರಾದ ದೇವತೆಗಳ ಪತ್ನಿಯರು, ಅಥವಾ ಮನುಷ್ಯಾದಿಗಳನ್ನು ರಕ್ಷಿಸತಕ್ಕ ಶ್ರೀ ಹರಿಯ ಸ್ತ್ರೀ ರೂಪಗಳಾದ ದೇವೀಃ =ದೇವಿಯರು, ಅವಸಾ =ಜಗದ್ರಕ್ಷಣ ಮಾಡತಕ್ಕ ಮುಖ್ಯಪ್ರಾಣನಿಂದ ಕೂಡಿಕೊಂಡು, ಮಹಃ =ಸರ್ವೋತ್ತಮನಾದ ಶ್ರೀ ಹರಿಯ, ಶರ್ಮಣಾ =ಸಂಬಂಧಿಯಾದ ಮೋಕ್ಷಾದಿ ಸುಖವನ್ನು ಕೊಟ್ಟು ನಃ =ನಮ್ಮನ್ನು ಅಭಿ =ಸುತ್ತಲೂ, ಸಚಂತಾಂ = (ಷಚರಕ್ಷಣೇ) ರಕ್ಷಿಸಲಿ. ||೧೧||

**ಭಾ || (೧) ಶರ್ಮ ದತ್ವೈವ ಮಹತೋ ವಿಷ್ಣೋಃ ರಕ್ಷಂತು ನೋಽಭಿತಃ । ಪ್ರಾಣೇನೈವಾ ವಸಾ ಸಾಕಂ (೨) ಯಸ್ಮಾದವಿಧವಾಸ್ಸದಾ । ಅತೋ ಹ್ಯಚ್ಛಿನ್ನಪತ್ರಾಸ್ತಾಃ ಸದಾಯುಕ್ಕರ್ಣಭೂಷಣಾಃ ||೧೧||**

ಅ|| (೧) ರಕ್ಷಣೆ ಮಾಡತಕ್ಕ ಮುಖ್ಯಪ್ರಾಣನಿಂದ ಕೂಡಿಕೊಂಡೇ ಸರ್ವೋತ್ತಮನಾದ ಶ್ರೀ ವಿಷ್ಣುವಿನ ಸಂಬಂಧಿಯಾದ ಮೋಕ್ಷಾದಿರೂಪವಾದ ಸುಖವನ್ನು ಕೊಟ್ಟೇ (ಶ್ರೀ ದೇವಿಯರು ನಮ್ಮನ್ನು ರಕ್ಷಿಸಲಿ) (೨) (ಅಚ್ಛಿನ ಪತ್ರಾಃ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ) ಯಾವ ಕಾರಣದಿಂದ ಸರ್ವದಾ ಆ ದೇವಿಯರು ಅವಿಧವೆಯರೋ, ಆದ ಕಾರಣ ಅವರು ಅಚ್ಛಿನ್ನಪತ್ರರೆನಿಸುತ್ತಾರೆ. ಸರ್ವದಾ ತಾಟಂಕವೆಂಬ ಕರ್ಣಾಭರಣದ ಸಂಬಂಧವುಳ್ಳವರು. (ಆ ಸಂಬಂಧವು ಅವಿಧವೆಯರಿಗೇನೇ ಕೂಡುತ್ತದೆ.) ||೧೧||

ಋ ॥ (೨೨೦) ಇಹೇಂದ್ರಾಣೀ ಮುಪಹ್ವಯೇ ವರುಣಾನೀಂ ಸ್ವಸ್ತಯೇ। ಅಗ್ನಾಯೀಂ ಸೋಮಪೀತಯೇ ॥೧೨॥

ಅ॥ (ನಾನು) ಇಂದ್ರಾಣೀಂ = ಇಂದ್ರನ ಪತ್ನಿಯಾದ ಶಚೀದೇವಿಯನ್ನೂ ವರುಣಾನೀಂ =ವರುಣನ ಪತ್ನಿಯನ್ನು, ಅಗ್ನಾಯೀಂ =ಅಗ್ನಿಯ ಪತ್ನಿಯನ್ನು ಕೂಡ, ಸೋಮಪೀತಯೇ=ಸೋಮಪಾನಕ್ಕಾಗಿ, ಸ್ವಸ್ತಯೇ =ಸೋಮಪಾನ ಮಾಡಿ ನಮಗೆ ನಿರಂತರದಲ್ಲಿಯೂ ಸೌಖ್ಯವನ್ನು ಕೊಡುವುದಕ್ಕಾಗಿ, ಇಹಂ =ಈ ಯಜ್ಞದಲ್ಲಿ, ಉಪಹ್ವಯೇ =ಕರೆಯುತ್ತೇನೆ. (ವಿಷ್ಣು ಪಕ್ಷದಲ್ಲಿ ಆದರೂ) ಇಂದ್ರಾದಿಗಳಿಗೆ ಸ್ವಾಮಿಯಾದುದರಿಂದ ಇಂದ್ರನೆನಿಸಿದ ಶ್ರೀ ಹರಿಯ ಸಂಬಂಧಿಯಾದ ಸ್ತ್ರೀ ರೂಪವು. ಇಂದ್ರಾಣಿಯು. ಇಂದ್ರಾದಿಗಳನ್ನು (ರಕ್ಷಿಸು) ವುದರಿಂದ ಇಂದ್ರ ಪತ್ನೀ ಎನಿಸಿದ ಸ್ತ್ರೀ ರೂಪವು. ಹೀಗೆ ಇಂದ್ರಾಣ್ಯಾದಿ ಶಬ್ದಗಳಿಂದ ಶ್ರೀ ಹರಿಯ ಸ್ತ್ರೀ ರೂಪಗಳು ಹೇಳಲ್ಪಡುತ್ತವೆ. ॥೧೨॥

ಋ ॥ (೨೨೧) ಮಹೀ ದ್ಯೌಃಪೃಥಿವೀ ಚ ನಃ ಇಮಂ ಯಜ್ಞಂ ಮಿಮಿಕ್ಷತಾಂ । ಪಿಪೃತಾಂ ನೋ ಭರೀಮಭಿಃ ॥೧೩॥

ಅ॥ ಮಹೀ =ಶ್ರೇಷ್ಠಳಾದ, ದ್ಯೌಃ ಪೃಥಿವೀಚ =ವಿಷ್ಣುವಿನ ಸ್ತ್ರೀರೂಪಗಳು, ಶ್ರೀ ಭೂಮಿಗಳಾಗಲೀ, ಸ್ವರ್ಗ ಪೃಥಿವೀ ಲೋಕಗಳಿಗೆ ಅಭಿಮಾನಿನಿಯರಾಗಲೀ, ನಃ =ನಮ್ಮ, ಇಮಂ ಯಜ್ಞಂ =ಈ ಯಜ್ಞವನ್ನು ಮಿಮಿಕ್ಷತಾಂ =ಮುಟ್ಟಲಿ. (ಬರಲಿ) (ಬಂದು) ಭರೀಮಭಿಃ = (ಭೃಞ್ಭರಣೇ) ಯಜ್ಞ ಸಾಧನ ಸಮೂಹಗಳಿಂದ ಅಥವಾ ಯಜ್ಞ ಸಮೂಹಗಳಿಂದ, ನಃ =ನಮ್ಮನ್ನು ಪಿಪೃತಾಂ = (ಪೃಪಾಲನ ಪೂರಣಯೋಃ) (ದುಃಖಗಳಿಂದ) ದಾಟಿಸಲಿ. ॥೧೩॥

ಭಾ ॥ ಭರಣ್ಯೈರ್ನ ಪಾರಯೇತಾಂ ದುಃಖೇಭ್ಯಃ ಶ್ರೀಶ್ಚ ಭೂಶ್ಚ ತೇ । ಸ್ವಯಂ ವಾ ಭಗವಾನ ನ್ಯೇ ರೋದಸೀ ಲೋಕದೇವತೇ ॥೧೩॥

ಅ॥ ಶ್ರೀ ಭೂಮಿಗಳು ದ್ಯಾವಾಪೃಥಿವೀ ಶಬ್ದ ವಾಚ್ಯಗಳು, ಮತ್ತು ಸಾಕ್ಷಾತ್ಪರಮಾತ್ಮನು ದ್ಯಾವಾ ಪೃಥಿವೀ ಶಬ್ದ ವಾಚ್ಯನು (ಅಂದರೆ - ಶ್ರೀ ಪರಮಾತ್ಮನ ೨ ಸ್ತ್ರೀ ರೂಪಗಳು ದ್ಯಾವಾ ಪೃಥಿವೀಗಳೆನಿಸುಕ್ತವೆ.) ಶ್ರೀ ಭೂಮಿಯಿಂದ ಇತರರಾದ ಸ್ವರ್ಗಭೂಮಿಗಳಿಗೆ ಅಭಿಮಾನಿಗಳಾದ ದೇವತೆಗಳೂ ದ್ಯಾವಾ ಪೃಥಿವಿಗಳೆನಿಸುತ್ತಾರೆ. ಇವರೆಲ್ಲರೂ ಯಜ್ಞ ಸಾಧನ ಸಮೂಹಗಳಿಂದಲೂ, ಯಜ್ಞ ಸಮೂಹಗಳಿಂದಲಾಗಲೀ ನಮ್ಮನ್ನು ದುಃಖಗಳಿಂದ ಪಾರು ಮಾಡಲಿ. (ದುಃಖಗಳಿಂದ ವಿರಹಿತರನ್ನಾಗಿ ಮಾಡಲಿ.) ॥೩॥

ಋ ॥ (೨೨೨) ತಯೋರಿದ್ಘೃತವತ್ಪಯೋ ವಿಪ್ರಾ ರಿಹಂತಿ ಧೀತಿಭಿಃ । ಗಂಧರ್ವಸ್ಯ ಧ್ರುವೇ ಪದೇ ॥೧೪॥

ತಯೋಃ = ದ್ಯಾವಾಪೃಥಿವಿಗಳ ಸಂಬಂಧಿಯಾದ, (ಯಾವ) ಪಯಃ = (ಪ್ರೀಯತೇ ಮುಮುಕ್ಷುಭಿಃ ಸೇವ್ಯತೇ ಎಂಬವ್ಯುತ್ಪತ್ತಿಯಿಂದ) ಜ್ಞಾನವು, ಗಂಧರ್ವಸ್ಯ =ಶ್ರೀ ವಿಷ್ಣುವಿನ, ಧ್ರುವೇಪದೇ =ನಿತ್ಯ ಸ್ವರೂಪ ವಿಷಯಕವಾದ ಘೃತವತ್ (ಘೃಕ್ಷರಣದೀಪ್ತ್ಯೋಃ) ಅಪರೋಕ್ಷ ಜ್ಞಾನದಿಂದ ಸಹಿತವಾಗಿದೆಯೋ (ಅಂತಹ ಜ್ಞಾನವನ್ನು ವಿಪ್ರಾಃ = ಮೇಧಾವುಳ್ಳವರು, ಧೀತಿಭಿಃ = ಬುದ್ಧಿಗಳಿಂದ ತ್ರಯೋಃ - ಅವರ ಪ್ರಸಾದದಿಂದ, ರಿಹಂತಿ ಇತ್ = ನಿಶ್ಚಯವಾಗಿಯೂ ಸೇವಿಸುತ್ತಾರೆ. (ಲಿಹ

ಆಸ್ವಾದನೇ ರಲಯೋರಭೇದಃ ) (ದ್ಯಾವಾ ಪೃಥಿವಿಗಳಿಗೆ ಅಭಿಮಾನಿನಿಯಾದ ಭಾರತೀ ದೇವಿಯಿಂದ ಅಭಿಮನ್ಯಮಾನವಾದುದರಿಂದ ಜ್ಞಾನಕ್ಕೆ ದ್ಯಾವಾ ಭೂಮಿಗಳ ಸಂಬಂಧವು) ||೧೪||

**ಭಾ || (೧) ತಯೋಃ ಪಯಸ್ತು ವಿಜ್ಞಾನಂ ಘೃತವತ್ಸ್ಯಾಪರೋಕ್ಷಕಂ | (೨) ಯಲ್ಲೋಕ ದೇವಾತಾಽಪಿ ಸ್ಯಾದ್ಭಾರತೀ ಜ್ಞಾನದೇವತಾ || (೩) ವಿಷ್ಣೋರ್ನಿತ್ಯಪದತ್ವಂ ಯಜ್ಜ್ಞಾನಂ ಯದ್ಘೃತವತ್ಪಯಃ | ಲಿಹಂತಿ ವಿಪ್ರಾಸ್ತಜ್ಜ್ಞಾನಂ ಬುದ್ಧಿಭಿಸ್ತತ್ಪ್ರಸಾದತಃ|| (೪) ಗಾಂ ಧಾರಯನ್ ವರ್ತತೇ ಯದ್ಗಂಧರ್ವಸ್ತೇನ ಕೇಶವಃ ||೧೪||**

ಅ|| (೧) ದ್ಯಾವಾಪೃಥಿವಿಗಳ ಸಂಬಂಧಿಯಾದುದು (ಪೀಯತೇ ಮುಮುಕ್ಷುಭಿಃ ಸೇವ್ಯತೇ ಎಂಬ ವ್ಯುತ್ಪತ್ತಿಯಿಂದ) ಪಯಃ ಎಂದರೆ ವಿಜ್ಞಾನವು. (ಪರೋಕ್ಷ ವಿಜ್ಞಾನವು.) (ಘೃ ಕ್ಷರಣದೀಪ್ತ್ಯೋಃ ಎಂಬ ಧಾತು ವ್ಯಾಖ್ಯಾನದಿಂದ) ಘೃತಂ=ದೀಪ್ತಿಯು ಅಪರೋಕ್ಷ ಜ್ಞಾನವು. ಘೃತವತ್=ಅಪರೋಕ್ಷ ಜ್ಞಾನದಿಂದ ಸಹಿತವಾದುದು. (೨) (ಪರೋಕ್ಷ ಅಪರೋಕ್ಷ ಜ್ಞಾನಗಳಲ್ಲಿ ದ್ಯಾವಾಪೃಥಿವಿಗಳ ಸಂಬಂಧ ಹೇಗೆ? ಎಂದರೆ) ಯಾವ ಕಾರಣದಿಂದ ಭಾರತಿಯೂ ಕೂಡ ದ್ಯಾವಾ ಪೃಥಿವೀಲೋಕಗಳ ದೇವತೆಯಾಗುತ್ತಾಳೋ, ಅವಳೇ ಜ್ಞಾನಕ್ಕೂ ದೇವತೆಯೋ, (ಆದುದರಿಂದ ದ್ಯಾವಾ ಪೃಥಿವಿಗಳಿಗೆ ಸಂಬಂಧ ಪಟ್ಟದ್ದು) (೩) (ಈಗ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ) ಯಾವ ಜ್ಞಾನವು ಶ್ರೀ ವಿಷ್ಣುವಿನ ನಿತ್ಯವಾದ ಸ್ವರೂಪವನ್ನು ವಿಷಯೀಕರಿಸತಕ್ಕುದೋ, ಯಾವ ಜ್ಞಾನವು ಹಿಂದೆ ಹೇಳಿದ ಪ್ರಕಾರ ಅಪರೋಕ್ಷ ಜ್ಞಾನದಿಂದ ಸಹಿತವಾದುದೋ, ಅಂತಹ ಜ್ಞಾನವನ್ನು ಜ್ಞಾನಿಗಳು ಬುದ್ಧಿಗಳಿಂದ (ಬುದ್ಧಿತ್ವರೂಪದಿಂದ ಬುದ್ಧಿಯು ಒಂದೆ ಯಾದಾಗ್ಯೂ ವೃತ್ತಜ್ಞಾನಗಳು ಹೆಚ್ಚು ಇದ್ದ ಪ್ರಯುಕ್ತ ಬುದ್ಧಿಭಿಃ ಎಂದು ಬಹುವಚನವು.) ದ್ಯಾವಾ ಪೃಥಿವಿಗಳ ಪ್ರಸಾದದಿಂದ ಸೇವಿಸುತ್ತಾರೆ. (೪) (ಗಂಧರ್ವ ಶಬ್ದವನ್ನು ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಾರೆ) (ಗೋ ಶಬ್ದವು ಉಪಪದವಾಗಿ ಉಳ್ಳ ಧೃಜ ಅವಸ್ಥಾನೇ, ವೃತು ವರ್ತನೆ ಎಂಬ ಧಾತು ವ್ಯಾಖ್ಯಾನದಿಂದ (ಯಾವ ಕಾರಣದಿಂದ ಗಾಂ=ವೇದ ವಚನವನ್ನು ಧಾರಯನ್=ಧರಿಸುತ್ತಾ ವರ್ತತೇ=ಇರುತ್ತಾನೊ ಎಂಬ ವ್ಯುತ್ಪತ್ತಿಯಿಂದ ಆಕಾರಣದಿಂದ ಶ್ರೀಹರಿಯು ಗಂಧರ್ವ ಎನಿಸುತ್ತಾನೆ. (ಪ್ರಸಿದ್ಧ ಗಂಧರ್ವರಲ್ಲಿಯೂ ಹೀಗೆಯೇ ವ್ಯುತ್ಪತ್ತಿಯನ್ನು ತಿಳಿಯಬೇಕು) ||೧೪||

**ಋ|| (೨೨೩) ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ | ಯಚ್ಛಾ ನಃ ಶರ್ಮ ಸಪ್ರಥಃ | ||೧೫||೬||**

ಅ || ಹೇ ಪೃಥವಿ=ಎಲೋ ಪೃಥವಿಯೇ, (ಯಾವ ನೀನು) ಅನೃಕ್ಷರಾ=(ನೃವತ್=ಮನುಷ್ಯವತ್‌ಕ್ಷರತಿ ನಶ್ಯತಿ ನೃಕ್ಷರಾ| ನ ನೃಕ್ಷರಾ ಅನೃಕ್ಷರಾ ಎಂಬ ವ್ಯುತ್ಪತ್ತಿಯಿಂದ) ಮನುಷ್ಯರಂತೆ ನಾಶವಿಲ್ಲದವಳೋ, ನಿವೇಶನೀ= (ನಿವಿಶಂತೇ ಅಸ್ಯಾಂಭೂತಾನಿ ಎಂಬ ವ್ಯುತ್ಪತ್ತಿಯಿಂದ) ಸರ್ವರಿಗೂ ಆಶ್ರಯಭೂತಳೂ ಆಗಿರುತ್ತಿಯೋ, (ಅಂತಹ ನೀನು) ನಃ=ನಮಗೆ, ಸ್ಯೋನಾ=ಸುಖವನ್ನುಂಟು ಮಾಡುವವಳು, ಭವ=ಆಗು. ನಃ=ನಮಗೆ, ಸಪ್ರಥಃ=ವಿಸ್ತಾರದಿಂದ ಕೂಡಿರುವ, ಶರ್ಮ=ಮಹತ್ತರವಾದ ಸುಖವನ್ನು ಅಥವಾ ಶ್ರೇಷ್ಠವಾದ ಮನೆಯನ್ನು ಯಚ್ಛ=ಕೊಡು. ||೧೫||೬||

**ಭಾ|| ಸ್ಯೋನಾ ಸುಖಕರೀ ಸ್ಯಾನ್ನೋ ಯತೋ ನಶ್ಯಸಿ ನೋ ನೃವತ್| ನಿವೇಶನೀ ಸಾಧಾ ರತ್ವಾಚ್ಛರ್ಮ ಯಚ್ಛ ಮಹತ್ತರಂ ||೧೫||೬||**

ಅ || (ಸ್ಯೋನಾ ಶಬ್ದವು ಸುಖನಾಮಗಳಲ್ಲಿ ಪಠಿತವಾದ ಕಾರಣ ಸ್ಯೋನ ಶಬ್ದವು ಸುಖಮಾಸನಂ ಎಂಬಲ್ಲಿ

ಸುಖಶಬ್ದಕ್ಕೆ ಸುಖಾಕಾರಿಯಲ್ಲಿ ಹೇಗೆ ಲಕ್ಷಣಾವಿದೆಯೋ ಹಾಗೆಯೇ ಸ್ಯೋನ ಶಬ್ದವೂ ಸುಖಕಾರಿಯಲ್ಲಿಯೇ ಇದೆ. ಆದಕಾರಣ) ನಮಗೆ ಸುಖಕಾರಿಯಾಗುವುದು. (ಅನೃಕ್ಷರಾ ಎಂಬುದಕ್ಕೆ ಅರ್ಥವನ್ನು ಹೇಳುತ್ತಾರೆ) ಯಾವ ಕಾರಣದಿಂದ ಮನುಷ್ಯರಂತೆ ನಾಶಹೊಂದುವುದಿಲ್ಲವೋ (ಆದಕಾರಣ ಅನೃಕ್ಷರಾ ಎನಿಸುತ್ತಾಳೆ.) (ನಶ್ಯತಿ ಎಂದು ಪ್ರಥಮ ಪುರುಷವನ್ನು ಹೇಳಬೇಕಿತ್ತು, ನಶ್ಯಸಿ ಎಂದು ಮಧ್ಯಮ ಪುರುಷನನ್ನು ಹೇಳಿದುದರಿಂದ ಯಾ ತ್ವಂ ಅನೃಕ್ಷರಾ ಎಂದು ಯೋಜನಾಮಾಡಬೇಕೆಂದು ಸೂಚಿತವಾಯ್ತು.) (ನಿವಿಶಂತೇ ಅಸ್ಯಾಂಭೂತಾನಿ ಎಂಬ ವ್ಯುತ್ಪತ್ತಿಯಿಂದ ಸಮಸ್ತ ವಸ್ತುಗಳಿಗೂ ಆಶ್ರಯವಾಗಿರುವುದರಿಂದ ಆ ಪೃಥಿವಿಯು ನಿವೇಶನೀ ಎನಿಸುತ್ತದೆ. ಎಲೋ ಪೃಥಿವಿಯೇ ಮಹತ್ತರವಾದ ಸುಖವನ್ನಾಗಲೀ, ಮನೆಯನ್ನಾಗಲೀ ಕೊಡು. ||೧೫||೬||

**ಋ|| (೨೨೪) ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ||೧೬||**

ಅ || ಯತಃ=ಯಾವ ಕಾರಣದಿಂದ, ವಿಷ್ಣುಃ=ಜಗತ್ಪತಿಯಾದ ಶ್ರೀ ವಿಷ್ಣುವು, ಪೃಥಿವ್ಯಾಃ=ಪೃಥಿವೀ ಲೋಕವನ್ನಾರಂಭಿಸಿ. ಸಪ್ತಧಾಮಭಿಃ-೭ ಲೋಕಗಳಿಂದ ಕೂಡಿಕೊಂಡು, (೩ ಪಾದ ವಿಕ್ಷೇಪಗಳಿಂದ) (ಈಗ ಜಗತ್ತನ್ನು) ವಿಚಕ್ರಮೇ=ಆಕ್ರಮಿಸಿರುವನೋ (ಅಸುರರಿಂದ ಅಪಹರಿಸುರುವನೋ) ಅಪಹರಿಸಿಯೂ ದೇವತೆಗಳನ್ನು ಆವಾವ ಪದಗಳಲ್ಲಿರುವವರನ್ನಾಗಿಯೂ ಮಾಡಿರುವನೋ) ಆದಕಾರಣ (ಹೀಗೆ ವಿಷ್ಣು ಪ್ರಸಾದದಿಂದ ಲಬ್ಧವಾದ ಪದವುಳ್ಳವರಾದುದರಿಂದ ಸಮರ್ಥರಾದ ಪ್ರಯುಕ್ತ) ದೇವಾಃ=ದೇವತೆಗಳು, ನಃ=ನಮ್ಮನ್ನು ಅವಂತು=ರಕ್ಷಿಸಲಿ ||೧೬||

**ಭಾ || (೧) ಅಸುರೇಭ್ಯೋ ಜಗದ್ಧೃತ್ವಾ ಯತೋ ವಿಷ್ಣುಸ್ತ್ರಿವಿಕ್ರಮೈಃ| ಆರಭ್ಯ ಪೃಥಿವೀಂ ಸಪ್ತಲೋಕೈಃ ಸಾಕಂ ಜಗತ್ಪತಿಃ । ಚಕ್ರೇ ಸುರಾನ್ ಪದಸ್ಥಾನಪತೋ ದೇವಾ ಅವಂತು ನಃ|| (೨) ವಿಶಿಷ್ಟಬಲಚೇಷ್ಟತ್ವಾದ್ವಿಷ್ಣುರಿತ್ಯಭಿಧಾ ಹರೇಃ । ಪ್ರಾಣಂ ಬಲಂ ಷಕಾರಂ ಚ ಣಕಾರಂ ಚಾಹ ಹಿ ಶ್ರುತಿಃ ||೧೬||**

ಅ || (೧|| ಯಾವ ಕಾರಣದಿಂದ ಜಗತ್ಪತಿಯಾದ ಶ್ರೀವಿಷ್ಣುವು ೩ ಪಾದವಿಕ್ಷೇಪಗಳಿಂದ ಪೃಥಿವೀಲೋಕವನ್ನಾರಂಭಿಸಿ ೭ ಲೋಕಗಳಿಂದ ಕೂಡಿಕೊಂಡು ಈ ಜಗತ್ತನ್ನು ಅಸುರರಿಂದ ಅಪಹರಿಸಿ ದೇವತೆಗಳನ್ನು ತಂ ತಮ್ಮ ಪದಗಳಲ್ಲಿರುವವರನ್ನಾಗಿ ಮಾಡಿರುವವನೋ, ಆದ ಕಾರಣ ಹೀಗೆ ವಿಷ್ಣು ಪ್ರಸಾದದಿಂದ ಹೊಂದಿರುವ ಪದವುಳ್ಳವರಾದುದರಿಂದ ಸಮರ್ಥರಾದ ಪ್ರಯುಕ್ತ ದೇವತೆಗಳು ನಮ್ಮನ್ನು ರಕ್ಷಿಸಲಿ. (೨) (ವಿಷ್ಣು ಶಬ್ದವನ್ನು ಭಗವಂತನಲ್ಲಿ ನಿರ್ವಚನ ಮಾಡುತ್ತಾರೆ) (ವಿಶಿಷ್ಟ ಅತ್ಯುತ್ಕೃಷ್ಟವಾದ ಬಲವೂ ಚೇಷ್ಟೆಯೂ ಇರುವುದರಿಂದ ಶ್ರೀಹರಿಗೆ ವಿಷ್ಣು ಎಂಬ ನಾಮ ಧೇಯವು. (ವಿ ಶಬ್ದವು ವಿಶಿಷ್ಟ ಎಂಬ ಅರ್ಥವನ್ನು ಹೇಳತಕ್ಕುದು ಆಗಲಿ. ಷಕಾರ ಣಕಾರಣಗಳು ಚೇಷ್ಟಾ ಬಲಗಳೆಂಬ ಅರ್ಥವನ್ನು ಹೇಳುವುದು ಯಾವುದರಿಂದ, ಎಂದರೆ) ಶ್ರೀ ಪರಮಾತ್ಮನ ಪ್ರಾಣಂ=ಚೇಷ್ಟೆಯನ್ನು ಷಕಾರಂ=ಷಶಬ್ದದಿಂದ ಹೇಳಲ್ಪಡತಕ್ಕುದನ್ನಾಗಿಯೂ, ಬಲವನ್ನು, ಣಕಾರಂ=ಣ ಶಬ್ದದಿಂದ ಹೇಳಲ್ಪಡತಕ್ಕುದನ್ನಾಗಿಯೂ ಣಕಾರೋ ಬಲಂ ಷಕಾರಃಪ್ರಾಣ ಆತ್ಮಾ ಎಂಬ ಐತರೆಯ ಶ್ರುತಿಯು ಹೇಳುತ್ತದೆ. ||೧೬||

**ಋ || (೨೨೫) ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಳ್ಹಮಸ್ಯ ಪಾಂಸುರೆ|| ||೧೭||**

ಅ ॥ ವಿಷ್ಣುಃ=ಶ್ರೀಪರಮಾತ್ಮನು, ಇದಂ ವಿಶ್ವಂ=ಈ ಜಗತ್ತನ್ನು ವಿಚಕ್ರಮೇ=ಆಕ್ರಮಿಸಿದನು. (ಹೇಗೆಂದರೆ) ತ್ರೇಧಾ=ಮೂರು ವಿಧವಾಗಿ, ಪದಂ=ಪಾದವನ್ನು, ನಿದಧೇ=ಇಟ್ಟನು. (ಆಗ) ಅಸ್ಯ=ಈ ಜಗತ್ಪತಿಯ, ಪಾಂಸುರೇ=(ಪಾಂಸವಃ ರಮಂತೇ=ಶೋಭತೇ ಅತ್ರ ಎಂಬವ್ಯುತ್ಪತ್ತಿಯಿಂದ) ಶೋಭಿಸಿಕೊಂಡಿರುವ ಧೂಲಿಗಳುಳ್ಳ ಪಾದದಲ್ಲಿ ಅಥವಾ (ಪಾಂಸ್ವಭಿಮಾನಿದೇವಾಃ ರಮಂತೇ ಅತ್ರ ಎಂಬ ವ್ಯುತ್ಪತ್ತಿಯಿಂದ) ಸುಖದಿಂದ ಕ್ರೀಡಿಸಿಕೊಂಡಿರುವ ಪಾಂಸ್ವಭಿಮಾನಿ ದೇವತೆಗಳುಳ್ಳ, ಪಾದದಲ್ಲಿ (ಈ ಜಗತ್ತು) ಸಮೂಳ್ಹಂ=ಧೂಲಿಗಳಂತೆ ಪ್ರತಿಷ್ಠಿತವಾಗಿದೆ. (ಹೊಂದಿಸಲ್ಪಟ್ಟಿದೆ) ॥೧೭॥

ಭಾ ॥ ರಮಂತಿ ಪಾಂಸವೋ ಯತ್ರ ಪಾಂಸುರಂ ಪದಮೀರಿತಂ।ಸಮೂಢಂ ತತ್ರ ವಿಶ್ವಂ ಹಿ ಪಾಂಸುವಜ್ಜಗತಃ ಪತೇಃ ॥೧೭॥

ಅ ॥ ಯಾವ ಪಾದದಲ್ಲಿ ಧೂಲಿಗಳು ಶೋಭಿಸುತ್ತಿರುತ್ತವೋ ಅಂತಹ ಪಾದವು ಪಾಂಸುರವೆನಿಸುತ್ತದೆ. (ಅಥವಾ ಪಾಂಸು ಶಬ್ದದಿಂದ ಪಾಂಸುಗಳನ್ನಾಶ್ರಯಿಸಿರುವ ದೇವತೆಗಳು.) ಯಾವ ಪಾದದಲ್ಲಿ ಪಾಂಸುಗಳನ್ನಾಶ್ರಯಿಸಿರುವ ಪಾಂಸ್ವಭಿಮಾನಿ ದೇವತೆಗಳು ಸುಖವಾಗಿ ಕ್ರೀಡಿಸುತ್ತಿರುತ್ತಾರೋ, ಅಂತಹ ಪಾದವು ಪಾಂಸುರವೆನಿಸುತ್ತದೆ. ಜಗತ್ಪತಿಯಾದ ಶ್ರೀಹರಿಯ ಆ ಪಾದದಲ್ಲಿ ಸಂಪೂರ್ಣ ಜಗತ್ತು ಧೂಲಿಯಂತೆ ಹೊಂದಿಸಲ್ಪಟ್ಟಿದೆ. (ಆಶ್ರಿತವಾಗಿದೆ.) ॥೧೭॥

ಋ ॥ (೨೨೬) ತ್ರೀಣಿ ಪದಾ ವಿ ಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ । ಅತೋ ಧರ್ಮಾಣಿ ಧಾರಯನ್ ॥೧೮॥

ಅ ॥ ಅದಾಭ್ಯಃ=(ದಭದಾಭ್ಯೇ) ನಿವಾರಿಸಲಿಕ್ಕೆ ಅಶಕ್ಯನಾದ, ವಿಷ್ಣುಃ=ಶ್ರೀ ಪರಮಾತ್ಮನು, ತ್ರೀಣಿಪದಾ=ಎಲ್ಲಾ ತ್ರಿವಿಧಗಳಾದ ಸ್ವರೂಪಗಳನ್ನು, ಅಂದರೆ ಋಗ್ಯಜುಸ್ಸಾಮ ವೇದಾಖ್ಯ ಸ್ವರೂಪಗಳನ್ನು, ಅತಿತಾನಾಗತ ವರ್ತಮಾನ ಕಾಲಾಖ್ಯ ಸ್ವರೂಪಗಳನ್ನು, ಸತ್ವರಜಸ್ತಮೋಗುಣಾಖ್ಯ ಸ್ವರೂಪಗಳನ್ನು, ಭೂಲೋಕ ಭುವರ್ಲೋಕ ಸ್ವರ್ಲೋಕಾಖ್ಯ ಸ್ವರೂಪಗಳನ್ನು, ದೇವಮಾನುಷ ದಾನವರೂಪ ಜೀವಾಖ್ಯ ಸ್ವರೂಪಗಳನ್ನು ಚೇತನ ಅಚೇತನ ಮಿಶ್ರ ರೂಪಗಳಾದ ಶ್ರೀಮುಕ್ತ ಘಟಾದಿ ಸಾತ್ಮಕ ದೇಹಾಖ್ಯ ಸ್ವರೂಪಗಳನ್ನು ಗೋಪಾಃ=ರಕ್ಷಕನಾಗಿಯೂ, ಸೃಷ್ಟಿಸುವವನಾಗಿಯೂ, ಪೋಷಿಸುವವನಾಗಿಯೂ, ಮೋಕ್ಷಪ್ರದನಾಗಿಯೂ, ವಿ ಚಕ್ರಮೇ=ಅತಿಕ್ರಮಿಸಿರುವನು. (ಯಾವ ಕಾರಣದಿಂದ ಶ್ರೀವಿಷ್ಣುವು ಇಂತಹ ಮಹಾತ್ಮೆವುಳ್ಳವನೋ, ಅತಃ=ಆ ಕಾರಣದಿಂದ ಧರ್ಮಾಣಿ=(ಧರ್ಮೋಽಸ್ತ್ರೀಪುಣ್ಯ ಆಚಾರಃ ಎಂಬ ಕೋಶದಿಂದ ನಪುಂಸಕತ್ವವು) ಜಗತ್ತಿಗೆ ಧಾರಕರಾದ ವಾಯ್ವಾದಿ ದೇವತೆಗಳನ್ನು, ಧಾರಯನ್=ಧರಿಸುವವನಾಗಿ (ಇರುತ್ತಾನೆ.)॥೧೮॥

ಭಾ ॥ (೧) ವೇದಾನ್ ಕಾಲಾನ್ ಗುಣಾಲ್ಲೋಕಾನ್ ದೇವ ಮಾನುಷದಾನವಾನ್ । ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿ ಚಕ್ರಮೇ ॥ (೨) ರಕ್ಷಕತ್ವೇನ್ ಸರ್ವಾಣಿ ಸೃಷ್ಟ್ಯುಭರ್ತೃತಸ್ತಥಾ । ಮೋಕ್ಷದತ್ವೇನ ಚ ವಿಭುಃ ಸ್ತಂಭನೀಯೋ ನಕೇನ ಚಿತ್ ॥ (೩) ಧಾರಕಾಂಶ್ಚೈವ ವಾಯ್ವಾದೀನ್ ಧಾರಯನ್ ವರ್ತತೇ ತತಃ ॥೧೮॥

ಅ॥ (೧) ಶ್ರೀ ಪರಮಾತ್ಮನು ಎಲ್ಲಾ ತ್ರಿವಿಧ ಸ್ವರೂಪಗಳನ್ನು ಅತಿಕ್ರಮಿಸಿದನು. (ಆ ೩ ಸ್ವರೂಪಗಳು ಯಾವುವು? ಎಂದರೆ) (1) ಋಗ್ಯಜುಸ್ಸಾಮಾಖ್ಯ ೩ ವೇದಗಳನ್ನು, (2) ಅತೀತಾನಾಗತ ವರ್ತಮಾನಾಖ್ಯ ಕಾಲಗಳನ್ನು, (3) ಸತ್ವರಜಸ್ತಮೋಗುಣಗಳನ್ನು, (4) ಭೂರ್ಭುವಃ ಸ್ವಲೋಕಗಳನ್ನು ದೇವ ಮಾನುಷ ದಾನವರೆಂಬ ಜೀವರನ್ನು, (5) ಚೇತನ

ಅಚೇತನ ಮಿಶ್ರಗಳಾದ ಸಕಲ ಪದಾರ್ಥಗಳನ್ನು ಅಂದರೆ ಚೇತನಾ=ಲಕ್ಷ್ಮೀ ದೇವಿಯೂ ಮುಕ್ತರು, ಅಚೇತನಾಃ ಘಟಪಟಾದಿಗಳು, ಮಿಶ್ರಾಃ=ಸಾತ್ಮಕ ದೇಹಗಳು, ಇವುಗಳನ್ನು ಅತಿ ಕ್ರಮಿಸಿರುವನು. (೨) ವ್ಯಾಪ್ತನಾದ ಶ್ರೀಹರಿಯು ಈ ಎಲ್ಲಾ ೩ ವಿಧ ಸ್ವರೂಪಗಳನ್ನು, ಆಪತ್ತುಗಳಿಂದ ರಕ್ಷಿಸುವವನಾಗಿಯೂ, ಸೃಷ್ಟಿಸುವವನಾಗಿಯೂ, ಅನ್ನ ವಸ್ತ್ರಾದಿಗಳಿಂದ ಪೋಷಿಸುವವನಾಗಿಯೂ ಮೋಕ್ಷವನ್ನು ಕೊಡುವವನಾಗಿಯೂ, ಅತಿಕ್ರಮಿಸಿದನು. ಶ್ರೀಹರಿಯು ಯಾರಿಂದಲೂ ನಿವಾರಿಸಲು ಶಕ್ಯನಲ್ಲ. (೩) ಶ್ರೀವಿಷ್ಣುವಿಗೆ ಇಂತಹ ಮಹಾತ್ಮ್ಯಗಳು ಇದ್ದುದರಿಂದ ಜಗತ್ತಿಗೆ ಧಾರಕರಾದ ವಾಯ್ವಾದಿಗಳನ್ನು ಆತನೇ ಧರಿಸಿಕೊಂಡು ಇರುತ್ತಾನೆ. ||೧೮||

**ಋ || (೨೨೭) ವಿಷ್ಣೋಃ ಕರ್ಮಾಣಿ ಪಶ್ಯಂತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಸ್ಸಖಾ ||೧೯||**

ಅ || ಎಲೋ ಜನರೇ, ವ್ರತಾನಿ=ಸಮಸ್ತ ಪ್ರಾಣಿಗಳ ಕರ್ಮಗಳು, ಯತಃ=ಯಾವ ಕರ್ಮಗಳ ದೆಶೆಯಿಂದ, ಅಥವಾ ವಿಷ್ಣುವಿನಿಂದ, (ಹುಟ್ಟಿದ್ದಾವೋ,) (ಯಾವ ವಿಷ್ಣುವು, ಪಸ್ಪಶೇ=(ಸ್ಪಶ ಅಜ್ಞಾತದ ಶೌ) ಪ್ರಾಕೃತ ಜನರಿಂದ ಕಾಣಲ್ಪಡದಿದ್ದರೂ ಯೋಗಿಗಳಿಂದ ಕಾಣಲ್ಪಡುತ್ತಿರುತ್ತಾನೋ, (ಯಾವ ಶ್ರೀವಿಷ್ಣುವು, ಇಂದ್ರಸ್ಯ=ಪುರಂದರನಿಗೆ, ಅಥವಾ ಮುಖ್ಯ ವಾಯುವಿಗೆ, ಯುಜ್ಯಃ=ಮುಖ್ಯ ಸಂಬಂಧಕ್ಕೆ ಅರ್ಹನಾದ, (ನಿಯಮೇನ ಒಟ್ಟಿಗೇನೇ ಇರುವ,) ಸಖಾ=ಗೆಳೆಯನೋ, ವಿಷ್ಣೋಃ=ಅಂತಹ ಶ್ರೀವಿಷ್ಣುವಿನ, ಕರ್ಮಾಣಿ=ಜಗತ್ಸೃಷ್ಟ್ಯಾದಿ ಕರ್ಮಗಳನ್ನು, ಪಶ್ಯಂತ=ತಿಳಿಯಿರಿ. ||೧೯||

**ಭಾ || (೧) ಜಾನೀಥ ವಿಷ್ಣುಕರ್ಮಾಣಿ ಪ್ರಾಣಿಕರ್ಮಾಣ್ಯಶೇಷತಃ । ಯತೋ ಜಾತಾನ್ಯ ವಿಜ್ಞಾತೋ ಭಗವಾನ್ ಸರ್ವದೈವ ಚ। (೨) ಸ್ಪಶಾಜ್ಞಾತದೃಶೌ ಯಸ್ಮಾದಿಂದ್ರಸ್ಯ ಸಹಿತಃ ಸಖಾ । ಪ್ರಾಣಸ್ಯೈವೇಂದ್ರನಾಮ್ನಶ್ಚ (೩) ಕಸ್ಮಿನ್ನಹ ಮಿತಿಶ್ರುತೇಃ।। (೪) ತ್ವಯೇದಿಂದ್ರೇತಿ ವತನಾತ್ಪ್ರಾಣ ಇಂದ್ರಾಭಿದೋ ಮತಃ ||೧೯||**

ಅ || (೧) (ಎಲೋ ಜನರೇ) ಶ್ರೀಪರಮಾತ್ಮನ ಜಗತ್ಸೃಷ್ಟ್ಯಾದಿ ಕರ್ಮಗಳನ್ನು ತಿಳಿಯಿರಿ. (ಎಂತಹ ಕರ್ಮಗಳೆಂದರೆ) ಸಮಸ್ತ ಪ್ರಾಣಿಗಳ ಕರ್ಮಗಳೂ ಯಾವ ಭಗವತ್ಕರ್ಮಗಳಿಂದಲೇ ಅಥವಾ ಭಗವಂತನಿಂದಲೇ ಹುಟ್ಟಿದ್ದಾವೋ, (ಶ್ರೀಪರಮಾತ್ಮನಾಗಲೀ ಆತನ ಕರ್ಮಗಳಾಗಲೀ ಪ್ರಾಣಿಗಳ ಕರ್ಮಗಳಿಗೆ ಜನಕ (ಪ್ರೇರಕ)ವೆಂಬುವುದು ಎಲ್ಲಿಯೂ ಉಪಲಂಭವಾಗದಿರುವುದರಿಂದ ಇದು ಹೇಗೆ ಕೂಡುತ್ತದೆಂದರೆ) ಭಗವಂತನು ಸರ್ವದಾ ಅವಿಜ್ಞಾತನೇ ಆಗಿರುತ್ತಾನೆ. ಚ=ಜ್ಞಾತನೂ ಆಗಿರುತ್ತಾನೆ. (೨) (ಹೇಗೆಂದರೆ) ಸ್ಪರ್ಶಧಾತುವು ಅಜ್ಞಾತದೃಶೌ=ಪ್ರಾಕೃತ ಜನರ ಪ್ರತ್ಯಕ್ಷಕ್ಕೆ ಅಯೋಗ್ಯವಾದ ಅರ್ಥವನ್ನು ಯೋಗಿಗಳಿಗೆ ದರ್ಶನವಾಗುವಿಕೆ ಎಂಬ ಅರ್ಥದಲ್ಲಿದೆ. ಆದಕಾರಣ ಹೇಳಿದ್ದು ಯುಕ್ತವು. (ಯಾವಾತನು) ಇಂದ್ರನಿಗೆ ಅಥವಾ ಇಂದ್ರನೆಂದು ಹೆಸರುಳ್ಳ ಮುಖ್ಯ ವಾಯುವಿಗೆ ಸರ್ವದಾ ಒಟ್ಟಿಗೆ ಇರುವ ಮಿತ್ರನೋ, (ಅಂತಹ ವಿಷ್ಣುವಿನ ಕರ್ಮಗಳನ್ನು ತಿಳಿಯಿರಿ.) (೩) (ಪ್ರಾಣಸ್ಯೈವ ಎಂಬಲ್ಲಿದ್ದ ಏವ ಶಬ್ದದಿಂದ ಇಂದ್ರ ಶಬ್ದಕ್ಕೆ ಮುಖ್ಯ ಪ್ರಾಣನೆಂಬ ಅರ್ಥವೇ ಮುಖ್ಯವು ಎಂದುಕ್ತವಾಯ್ತು.) (ಅದು ಹೇಗೆಂದರೆ) ಕಸ್ಮಿನ್ನ್ವ ಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣಮಸೃಜತ ಎಂಬ ಶ್ರುತಿಯಿಂದ ವಿಷ್ಣು ಪ್ರಾಣರಿಗೇನೇ ಅವಿನಾಭಾವವು (ನಿತ್ಯ ಸಂಬಂಧವು) ಇರುವುದು. (೪) (ಇಲ್ಲಿ ಇಂದ್ರಶಬ್ದಕ್ಕೆ ಪ್ರಾಣಾನೆಂಬ ಅರ್ಥವು ಹೇಗೆಂದರೆ) ತ್ವಯೇಂದಿಂದ್ರ ಯುಜಾ ವಯಂ ಪ್ರತಿ ಬ್ರುವೀಮಹಿ ಸ್ಪೃಧಃ।ತ್ವಮಸ್ಮಾಕಂ ತವ ಸ್ಮಸಿ।ಎಲೋ ಇಂದ್ರನೇ (ಎಲೋ ಮುಖ್ಯ ಪ್ರಾಣನೇ) ವಿಷ್ಣುವಿನಿಂದ ಕೂಡಿದ ನಿನ್ನಿಂದ ಶ್ರೇಷ್ಠತ್ವ ವಿಷಯದಲ್ಲಿ ನಾವು ಮೊದಲು ವಿವಾದ ಮಾಡಿ ಆಮೇಲೆ ಪರಾಜಿತರಾಗಿ ನಿನ್ನೊಡನೆ

ಹೇಳುತ್ತೇವೆ. ನೀನು ನಮಗೆ ಸ್ವಾಮಿಯು ಆಗಿರುತ್ತಿ. ನಾವು ನಿನ್ನ ದಾಸರಾಗಿರುತ್ತೇವೆ. ಎಂಬ ಋಕ್ಕಿನಲ್ಲಿ ಇಂದ್ರಶಬ್ದಕ್ಕೆ ಪ್ರಾಣನಲ್ಲಿ ಪ್ರಯೋಗವು ಕಂಡದೆ. ಆದಕಾರಣ ತ್ವಯೇದಿಂದ್ರ ಎಂಬ ಶ್ರುತಿಯಿಂದ ಇಂದ್ರ ಶಬ್ದ ವಾಚ್ಯನು ಪ್ರಾಣನೆಂದು ಸಂಮತನು. (ಇಂದ್ರ ಶ್ರುತಿಯು ಪ್ರಾಣಪರವಾಗುವುದು ಹೇಗೆಂದರೆ) ಈ ಶ್ರುತಿಯ ಪ್ರಾಣ ಉಕ್ಥಮಿತ್ಯೇವ ವಿದ್ಯಾತ್ತಂ ದೇವಾ ಅಬ್ರುವನ್ ತ್ವಮುಕ್ಥಮಸಿ ತ್ವಮಿದಂಸರ್ವಮಸಿ ತವ ವಯಂ ಸ್ಮಃ ತ್ವಮಸ್ಮಾಕಮಸೀತಿ ತದಪ್ಯೇತದೃಷಿಣೋಕ್ತಂ ತ್ವಮ ಸ್ಮಾಕಂ ತವ ಸ್ಮಸಿ ಎಂದು ಪ್ರತೀಕವನ್ನು ತೆಗೆದು ಕೊಂಡು ತಾನು ಹೇಳಿದ ಅರ್ಥದಲ್ಲಿ ಸಂಮತಿಯಾಗಿ ಉಪನಿಷತ್ತಿನಲ್ಲಿ ಈ ಶ್ರುತಿಯು ಉದಾಹೃತವಾಗಿದೆ. ಆದಕಾರಣ ಇಂದ್ರ ಶಬ್ದ ವಾಚ್ಯನು ಮುಖ್ಯಪ್ರಾಣನೇ ॥೧೯॥

ಋ ॥ (೨೨೮) ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥೨೦॥

ಅ ॥ ಆತತಂ=ವ್ಯಾಪ್ತವಾದ, ಚಕ್ಷುಃ=ಚಕ್ಷುರಿಂದ್ರಿಯವನ್ನು (ರಶ್ಮಿಗಳಿಗೂ ರಶ್ಮಿಮತ್ತಿಗೂ ಅಭೇದವಿದ್ದ ಪ್ರಯುಕ್ತ ಚಕ್ಷುಃ ಎಂದೆ ಹೇಳಿದ್ದು.) ದಿವೀವ=ಆಕಾಶದಲ್ಲಿ ಹೇಗೋ ಹಾಗೆ, ತತ್=ಆದಾವ, ವಿಷ್ಣೋಃ=ಶ್ರೀವಿಷ್ಣುವಿನ, ಪರಮಂ=ರಮಾ ಬ್ರಹ್ಮಶಿವಾದಿಗಳಿಂದುತ್ತಮವಾದ, ಪದಂ=ಸ್ವರೂಪವನು, ಸೂರಯಃ=ಸಂಸಾರದಿಂದ ಬಿಡುಗಡೆಹೊಂದಿದ ಜ್ಞಾನಿಗಳು, ಸದಾ=ಸರ್ವದಾ, ಪಶ್ಯಂತಿ=ನೋಡುತ್ತಾರೆ.

ವಿ ॥ ಹೇಗೆ ಚಕ್ಷುಸ್ಸು ಆಕಾಶದಲ್ಲಿ ವ್ಯಾಪ್ತವಾದುದಾಗ್ಯೂ ಕಾಣಿಸಿಕೊಳ್ಳುವುದಿಲ್ಲವೋ ಕೇವಲ ವಿಷಯೋಪಲಬ್ಧಿ ರೂಪ ಫಲದಿಂದ ಅನುಮಿತವಾಗುತ್ತದೋ, ಹಾಗೆಯೇ ಪರಮೇಶ್ವರನ ಸ್ವರೂಪವೂ ಸರ್ವತ್ರ ವ್ಯಾಪ್ತವಾದುದಾಗ್ಯೂ ಕಾಣಿಸಿಕೊಳ್ಳುವುದಿಲ್ಲ. ಮತ್ತೆ ಅಸ್ವತಂತ್ರಗಳಾದ ಪದಾರ್ಥಗಳ ಸತ್ತಾ ಪ್ರತೀತಿಪ್ರವೃತ್ತಿಗಳಿಂದ ತಿಳಿಯಲ್ಪಡುತ್ತದೆ. ಹೀಗೆ ದೃಷ್ಟಾಂತವಚನದ ತಾತ್ಪರ್ಯವು. ॥೨೦॥

ಭಾ ॥ (೧) ರಮಾ ಬ್ರಹ್ಮ ಶಿವಾದಿಭ್ಯೋ ಯದ್ವಿಷ್ಣೋಃ ಪರಮಂ ಪದಂ। ರೂಪಂ ಪಶ್ಯಂತಿ ನಿರ್ಮುಕ್ತಾಃ ಸಂಸಾರಾತ್ಸೂರಯಸ್ಸದಾ। (೨) ಚಕ್ಷುರ್ದಿವೀವ ವ್ಯಾಪ್ತಂ ಯದ ದೃಶ್ಯಂ ಫಲದರ್ಶಿತಂ ॥೨೦॥

ಅ ॥ (೧) ರಮಾ ಬ್ರಹ್ಮ ಶಿವಾದಿಗಳಿಂದುತ್ತಮವಾದ ವಿಷ್ಣುವಿನ ಯಾವ ಸ್ವರೂಪವನ್ನು ಸಂಸಾರದಿಂದ ಬಿಡುಗಡೆ ಹೊಂದಿದ ಜ್ಞಾನಿಗಳು (ಅವರೇ ಮುಖ್ಯ ಸೂರಿಗಳು) ಸದಾ ನೋಡುತ್ತಿರುತ್ತಾರೆ. (ಮುಖ್ಯತಃ ಜ್ಞಾನಿತ್ವವು ಸಂಸಾರದಿಂದ ಮುಕ್ತರಾದವರ ಧರ್ಮವು) (೨) (ದೃಷ್ಟಾಂತದ ತಾತ್ಪರ್ಯ ಹೇಳುತ್ತಾರೆ) ಹೇಗೆ ಚಕ್ಷುಸ್ಸು ಆಕಾಶದಲ್ಲಿ ವ್ಯಾಪ್ತವಾದುದಾಗ್ಯೂ ಕಾಣಿಸಿಕೊಳ್ಳುವುದಿಲ್ಲವೋ, ಫಲದಿಂದ ಅನುಮಿತವಾಗುತ್ತದೋ, ಹಾಗೆಯೇ, ಪರಮಾತ್ಮನ ಸ್ವರೂಪವು. ॥೨೦॥

ಋ॥ (೨೨೯) ತದ್ವಿಪ್ರಾಯೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ। ವಿಷ್ಣೋರ್ಯತ್ಪರಮಂ ಪದಂ ॥೨೧॥೭॥೨೨॥

ಅ ॥ ಯತ್ ವಿಷ್ಣೋಃ ಪರಮಂ ಪದಂ=ಯಾವುದು ವಿಷ್ಣುವಿನ ಸರ್ವೋತ್ಕೃಷ್ಟವಾದ ಸ್ವರೂಪವೋ ತತ್=ಆ ಸ್ವರೂಪವನ್ನು, ವಿಪನ್ಯವಃ (ಪನಜ್ಞಾನೇ) ವಿಶೇಷತಃ ಜ್ಞಾನಿಗಳಾದ ಜಾಗೃವಾಂಸಃ (ಜಾಗೃನಿದ್ರಾಕ್ಷಯೇ) ಜಾಗರಣವನ್ನೇ

ಹೊಂದಿರುವ (ಸಂಸಾರದಿಂದ ಬಿಡುಗಡೆ ಹೊಂದಿರುವ) ವಿಪ್ರಾಸಃ=ಮೇಧಾತಿಥಿ ಮೊದಲಾದ ಬ್ರಾಹ್ಮಣರು, ಸಮಿಂಧತೇ=(ಞ ಇಂಧೀದೀಪ್ತೌ) ತಿಳಿಯುತ್ತಾರೆ. ಅಥವಾ ತಿಳಿಸುತ್ತಾರೆ. ||೨೧||

ಭಾ || (೧) ಸಂದೀಪಯಂತಿ ವಿಜ್ಞಾನೈಃ ಸಂಸಾರಾತ್ಪ್ರಾಪ್ತಜಾಗರಾಃ | ವಿಪನ್ಯವೋ ಜಾನಿತಮಾಃ ವಿಷ್ಣೋರ್ಯತ್ಪರಮಂ ಪದಂ || (೨) ತಾತ್ಪರ್ಯಾಧಿಕ್ಯ ವಿಜ್ಞಪ್ತ್ಯಾ ಅರ್ಥಮೇತಂ ಪುನರ್ಜಗೌ ||೨೧||೭||೩||

ಅ ||೧) ಜಾಗರಣವನ್ನೇ ಹೊಂದಿರುವ ಸಂಸಾರದಿಂದ ಮುಕ್ತರಾದ ಮುಖ್ಯ ಜ್ಞಾನಿಗಳು ಶ್ರೀವಿಷ್ಣುವಿನ ಉತ್ತಮವಾದ ಸ್ವರೂಪವನ್ನು ಜ್ಞಾನಸಾಧನಗಳಾದ ವೇದಾದಿ ಪ್ರಮಾಣಗಳಿಂದ ತಿಳಿಯುತ್ತಾರೆ. ಇತರರಿಗೆ ತಿಳಿಸುತ್ತಾರೆ. (೨) ಈ ಋಕ್ಕಿನ ಅರ್ಥವನ್ನು ತದ್ವಿಷ್ಣೋಃ ಪರಮಂ ಪದಂ ಎಂಬ ಮೊದಲಿನ ಋಕ್ಕಿನಲ್ಲಿಯೆ ಹೇಳಿಯಾಗಿದೆ. ಆದ ಕಾರಣ ಪುನಃ ಏತಕ್ಕ ಹೇಳಿದ್ದು ಎಂದರೆ) ಸಮಸ್ತ ವೇದಗಳಿಗೂ ಇಲ್ಲಿ ಹೇಳಿದ ಸರ್ವೋತ್ತಮತ್ವರೂಪ ಅರ್ಥದಲ್ಲಿಯೇ ಪರಮತಾತ್ಪರ್ಯವು ಎಂಬ ಅರ್ಥವನ್ನು ತಿಳಿಸುವುದಕ್ಕಾಗಿ ವಿಷ್ಣು ಸರ್ವೋತ್ತಮತ್ವಾದಿರೂಪವಾದ ಅರ್ಥವನ್ನು ತಿರುಗಿ ವೇದವು ಹೇಳಿತು. ||೨೧||೭||೩||

ಅವ || ೨೩ನೇ ಸೂಕ್ತವು. ೨೪ ಋಕ್ಕು ೫ ವರ್ಗ, ನಾನಾ ದೇವತೆಗಳು, ನಾನಾ ಛಂದಸ್ಸುಗಳು, ಆದಿಯ ೧೮ ಋಕ್ಕಿಗಳಿಗೆ ಗಾಯತ್ರೀ ಛಂದಸ್ಸು, ೧ನೇ ಋಕ್ಕು ವಾಯುದೇವತಾಕವು.

ಋ || (೨೩೦) ತೀವ್ರಾಃ ಸೋಮಸ ಆ ಗಹ್ಯಾಶೀರ್ವಂತಃ ಸುತಾ ಇಮೇ| ವಾಯೋ ತಾನ್ ಪ್ರಸ್ಥಿತಾನ್ ಪಿಬ ||೧||

ಅ || ವಾಯೋ=ಎಲೋ ವಾಯುವೇ, (ಯಾವ) ಇಮೇ=ಈದಾವ, ತೀವ್ರಾಃ=ತೀಕ್ಷ್ಣಗಳಾದ, ಶೀಘ್ರದಲ್ಲಿ ಕಾರ್ಯಕಾರಿಗಳಾದ, (ಅಂದರೆ ವೀರ್ಯವುಳ್ಳ,) ಆಶೀಃ=ಇಚ್ಛಾದಿ ವಿಷಯವಾದ ಅರ್ಥವು ಅಂತಹ ಅರ್ಥವುಳ್ಳವರು. ಆಶೀರ್ವಂತಃ=ಅಂದರೆ ಇಚ್ಛಾವಿಷಯ ಅರ್ಥದಿಂದ ಕೂಡಿ ಸಾಧ್ಯ ಸಾಧನಭಾವ ಸಂಬಂಧವುಳ್ಳವುಗಳು ಮತ್ತು ಸಾಧ್ಯವಾದ ಯಜಮಾನನ ಇಷ್ಟಕ್ಕೆ ಸಾಧಕಗಳೂ ಆದ ಸುತಾಃ=ಹಿಂಡಲ್ಪಟ್ಟ, ಸೋಮಾಸಃ=ಸೋಮಗಳು (ಇರುತ್ತವೋ) ತಾನ್=ಅಂತಹ, ಪ್ರಸ್ಥಿತಾನ್=ಸೋಮಗಳನ್ನು ಉತ್ತರವೇದಿಯನ್ನು ಕುರಿತು ತಂದಿರುವುದರಿಂದ ಪ್ರಸ್ಥಿತ ಎಂದು ಹೆಸರುಳ್ಳ ಸೋಮಗಳನ್ನು, ಅಥವಾ ನಿನಗೆ ಅಭಿಮುಖಗಳಾದ ಸೋಮಗಳನ್ನು ಕುರಿತು, ಆಗಹಿ=ಬಾ ಪಿಚಬ=(ಬಂದು) ಕುಡಿ. ||೧||

ಭಾ || ವೀರ್ಯವಂತಶ್ಚ ಯೇ ಸೋಮಾಃ ಯಜಮಾನೇಷ್ಟಸಾಧಕಾಃ| ಪಿಬ ತಾನ್ ||೧||

ಅ || (ಯಚ್ಛಬ್ದವನ್ನು ಅಧ್ಯಾಹಾರ ಮಾಡಿಕೊಂಡು ಏಕವಾಕ್ಯವಾಗಿ ವ್ಯಾಖ್ಯಾನ ಮಾಡುತ್ತಾರೆ.) ಯಾವ ಸೋಮಗಳು ವೀರ್ಯವುಳ್ಳವುಗಳೋ ಯಜಮಾನನಿಗೆ ಇಷ್ಟಾರ್ಥವನ್ನು ಸಾಧಿಸಿ ಕೊಡುವವುಗಳೂ ಆಗಿವೆಯೋ ಅಂತಹ ಸೋಮಗಳನ್ನು ಕುಡಿ. ||೧||

ಋ || (೨೩೧) ಉಭಾ ದೇವಾ ದಿವಿಸ್ಪೃಶೇಂದ್ರವಾಯೂ ಹವಾಮಹೇ| ಅಸ್ಯ ಸೋಮಸ್ಯ ಪೀತಯೇ ||೨||

ಅ || (೨, ೩ನೇ ಋಕ್ಕುಗಳು ಇಂದ್ರ ವಾಯುದೇವತಾಕಗಳು) ಉಭಾ=ಇಬ್ಬರಾದ, ದೇವಾ=ಕ್ರೀಡಾದಿಗುಣ ವಿಶಿಷ್ಟರಾದ. (ದಿವು ಕ್ರೀಡಾವಿಜಿಗೀಷಾ ವ್ಯವಹಾರ ದ್ಯುತಿ ಸ್ತುತಿ ಮೋದಮದ ಸ್ವಪ್ನಕಾಂತಿ ಗತಿಷು) ದಿವಿ ಸ್ಪಶಾ=ದಿವಿ=ಜ್ಞಾನ ವಿಷಯದಲ್ಲಿ ಸ್ಪೃಶತಃ=ಸಂಬಂಧಿಗಳು ಅಧಿಕಜ್ಞಾನವುಳ್ಳ ಅಥವಾ ಅಧಿಕ ಪ್ರಕಾಶವುಳ್ಳ) ಇಂದ್ರ ವಾಯೂ=ಎಲೋ ಇಂದ್ರ ವಾಯುಗಳೇ (ನಾವು) ಅಸ್ಯ ಸೋಮಸ್ಯ ಪೀತಯೇ=ಈ ಸೋಮವನ್ನು ಪಾನಮಾಡುವುದಕ್ಕಾಗಿ ಹವಾಮಹೇ (ನಿಮ್ಮನ್ನು) ಹೋಮಿಸುತ್ತೇವೆ. ||೨||

ಭಾ || ಸರ್ವದೇವಾನಾಂ ಜ್ಞಾನಧಿಕ್ಯೌ ದಿವಿಸ್ಪೃಶೌ ||೨||

ಅ || (ದಿವಿಸ್ಪೃಶೌ ಎನ್ನುವುದನ್ನು) ವ್ಯಾಖ್ಯಾನ ಮಾಡುತ್ತಾರೆ) (ದ್ಯೌಃ ಎನ್ನುವುದು ದ್ಯುತಿಯೆಂದು ಅರ್ಥವುಳ್ಳ, ಅಥವಾ ಗತಿ ಎಂದು ಅರ್ಥವುಳ್ಳ ದಿವ್‌ದಾತುವಿನ ರೂಪವು. ೨ ಕಲ್ಪಗಳಲ್ಲಿಯೂ ಜ್ಞಾನವೇ ಅದರ ಅರ್ಥವು. ಜ್ಞಾನವೂ ಪ್ರಕಾಶ ರೂಪವಾಗಿದೆ. ಗತ್ಯರ್ಥಕಗಳು ಜ್ಞಾನಾರ್ಥಕಗಳು. ದಿವಿ ಎನ್ನುವುದು ವಿಷಯ ಸಪ್ತಮೀ. ತಥಾಚ ದಿವಿಸ್ಪೃಶತಃ ಇತಿದಿವಿಸ್ಪೃಶೌ. ದಿವಿ=ಜ್ಞಾನ ವಿಷಯದಲ್ಲಿ ಸ್ಪೃಶತಃ=ಸಂಬಂಧಿಗಳು. (ಜ್ಞಾನಾಧಿಕ್ಯವುಳ್ಳವರು) ಉಭಾ ದೇವಾ ದಿವಿಸ್ಪೃಶಾ=ದೇವತೆಗಳಾಗಿದ್ದವರು ಜ್ಞಾನಾಧಿಕ್ಯವುಳ್ಳವರು, ಹೀಗೆ ದೇವಶಬ್ದ ಸನ್ನಿಧಾನ ಸಾಮರ್ಥ್ಯದಿಂದ ದೇವಾನಾಂ ಮಧ್ಯೇ ಎಂದೂ ಸಿಗುತ್ತದೆ. ಜ್ಞಾನೇನ ಆಧಿಕ್ಯಂಯಯೋಃ=ಯಾವ ಇಂದ್ರ ವಾಯುಗಳಿಗೆ ಜ್ಞಾನದಿಂದ ಆಧಿಕ್ಯವಿದೆಯೋ, ಎಂದು ವ್ಯಧಿಕರಣ ಬಹುವ್ರೀಹಿಯು ಅಥವಾ ಜ್ಞಾನಸ್ಯ ಆಧಿಕ್ಯಂ ಜ್ಞಾನಾಧಿಕ್ಯಂ. ಅನಯೋರ ಸ್ಥೀತಿ ಜ್ಞಾನಾಧಿಕ್ಯೌ ಎಂದು ನಿರ್ಧಾರಣ ಸಾಮರ್ಥ್ಯದಿಂದ ಆದಿಕ್ಯವೆನ್ನುವ ಅರ್ಥವು ಸಿಗುತ್ತಧೆ. ತಥಾಚ ದಿವಿಸ್ಪೃಶೌ=ಸಮಸ್ತ ದೇವತೆಗಳ ಮಧ್ಯದಲ್ಲಿ (ಇದು ನಿರ್ಧಾರಣೇ ಷಷ್ಠಿಯು) ಅಧಿಕ ಜ್ಞಾನವುಳ್ಳವರು. ||೨||

ಋ || (೨೩.೨) ಇಂದ್ರವಾಯೂ ಮನೋಜುವಾ ವಿಪ್ರಾ ಹವಂತ ಊತಯೇ। ಸಹಸ್ರಾಕ್ಷಾ ಧಿಯಸ್ಪತೀ ||೩||

ಅ || ಮನೋಜುವಾ=(ಜು ಪ್ರೇರಣೇ ಎಂಬ ಧಾತು ವ್ಯಾಖ್ಯಾನದಿಂದ) ಮನಸ್ಸಿಗೆ ಪ್ರೇರಕರಾದ, ಅಥವಾ (ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ) ಮನಸ್ಸಿನಂತೆ ವೇಗವುಳ್ಳ, (ಮನೋಯೋಗೀನೌ=ಎಂದುಕ್ಕಚಿತ್ಪಾಠವು. ಆ ಕಲ್ಪದಲ್ಲಿ) ಪ್ರಶಸ್ತ ಮನಸ್ಸುಳ್ಳ ದಿಯಃ ಪತೀ=ಬುದ್ಧಿಗಳಿಗೆ ಸ್ವಾಮಿಗಳಾಗಿರುವುದರಿಂದ, ಸಹಸ್ರಾಕ್ಷಾ=(ಶತಂಸಹಸ್ರಂ ಎಂದು ಬಹು ನಾಮಗಳಲ್ಲಿ ಪಠಿತವಾಗಿರುವುದರಿಂದ) (ಸಹಸ್ರ ಶಬ್ದಕ್ಕೆ ಅಪರಿಮಿತವೆಂದು ಅರ್ಥವು. ಅಕ್ಷ ಶಬ್ದಕ್ಕೆ ಅಕ್ಷಿ (ಕಣ್ಣು)ಯಿಂದ ಹುಟ್ಟಿದ ಸಾಕ್ಷಾತ್ಕಾರವೆಂದು ಅರ್ಥವು. ಏವಂಚ) ಅಪರಿಮಿತಿ ಜ್ಞಾನವುಳ್ಳ, ಇಂದ್ರವಾಯೂ=ಇಂದ್ರವಾಯುಗಳೆನಿಸಿದ ವಿಷ್ಣುರೂಪ ವಿಶೇಷಗಳೇ ಅಥವಾ ಇಂದ್ರ ವಾಯುಗಳೆಂಬ ದೇವತೆಗಳೇ, ವಿಪ್ರಾಃ=ಮೇಧಾತಿಥಿ ಮೊದಲಾದವರು, ಊತಯೇ=ತಮ್ಮ ರಕ್ಷಣೆಗಾಗಿ, ಹವಂತೇ=(ನಿಮ್ಮನ್ನು) ಕರೆಯುತ್ತಾರೆ. ||೩||

ಭಾ || ಮನಸಃ ಪ್ರೇರಕೌ ಚ್ಛೈವ ಬಹುಜ್ಞಾನೌ ಧಿಯಸ್ಪತೀ ||೩||

ಅ || (ಮನೋಜುವೌ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಮನಸ್ಸಿಗೆ ಪ್ರೇರಕರು, ಚ=ಮನಸ್ಸಿನಂತೆ ವೇಗವುಳ್ಳವರು. (ಸಹಸ್ರಾಕ್ಷ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಬಹು ಜ್ಞಾನವುಳ್ಳವರು. ಏವ ಶಬ್ದದಿಂದ ಪುರಂದರನೊಬ್ಬನೇ

ಸಹಸ್ರಾಕ್ಷನು. ವಾಯುವಿನಲ್ಲಿ ಛತ್ರಿನ್ಯಾಯದಿಂದ ಲಕ್ಷಣಾ ಎಂಬ ವ್ಯಾಖ್ಯಾನವು ಉಭಯ ಸಾಧಾರಣವಾದ ಯೌಗಿಕ ರೂಪವಾದ ಮುಖ್ಯಾರ್ಥವು ಕೂಡುವಾಗ ಅಯುಕ್ತವು ಎಂದು ಉಕ್ತವಾಯ್ತು. ಮತ್ತು ನಾವು ಹೇಳಿದ ಪ್ರಕಾರ ಅರ್ಥ ಹೇಳಿದರೆ ಧಿಯಸ್ಪತೀ ಎನ್ನುವುದೂ ಹೇತುವಾಗಿ ಉಪಪನ್ನವಾಗುತ್ತದೆ. ಅಂದರೆ ಅಮಿತಜ್ಞಾನವಿರಲಿಕ್ಕೆ ಧಿಯಸ್ಪತಿತ್ವವು ಸರ್ವಬುದ್ಧ್ಯಭಿಮಾನಿತ್ವವು ಹೇತುವು. ||೩||

ಅವ || ಮೂರು ಋಕ್ಕುಗಳು ಮಿತ್ರಾವರುಣ ದೇವತಾಕವು.

ಋ || (೨೩೩) ಮಿತ್ರಂ ವಯಂ ಹವಾಮಹೇ ವರುಣಂ ಸೋಮಪೀತಯೇ। ಜಜ್ಞಾನಾ ಪೂತದಕ್ಷಸಾ ||೪||

ಅ || ವಯಂ=ನಾವು, ಮಿತ್ರಂ=ಸೂರ್ಯನನ್ನು, ವರುಣಂ=ವರಣನನ್ನು ಕೂಡ, ಸೋಮಪೀತಯೇ=ಸೋಮಪಾನ ಮಾಡುವುದಕ್ಕಾಗಿ, ಹವಾಮಹೇ=ಕರೆಯುತ್ತೇವೆ. (ಯಾವ ಮಿತ್ರಾವರುಣರು ಆಹೂತರಾಗಿ) ಜಜ್ಞಾನಾ=(ಜನೀ ಪ್ರಾದುರ್ಭಾವೇ) ಯಜ್ಞಗಳಲ್ಲಿ ಅಭಿವ್ಯಕ್ತರಾಗುತ್ತಾರೋ, (ಅಭಿವ್ಯಕ್ತರಾಗಿ) ಪೂತದಕ್ಷಸಾ=(ಪೂತಃ ದಕ್ಷಃ ಯಜಮಾನಃ ಯಾಭ್ಯಾಂ ಯಾರಿಂದ ಯಜಮಾನನು ಪವಿತ್ರನಾಗುತ್ತಾನೋ ಎಂಬ ವ್ಯುತ್ಪತ್ತಿಯಿಂದ) ಯಜಮಾನನನ್ನು ಪವಿತ್ರೀಕರಿಸಿರುವರು. ||೪||

ಭಾ || ಜಜ್ಞಾನೌ ವ್ಯಜ್ಯಮಾನೌ ತು ಯಜಮಾನಸ್ಯ ಶೋಧಕೌ ||೪||

ಅ || ಜಜ್ಞಾನೌ=ಯಜ್ಞಗಳಲ್ಲಿ ಅಭಿವ್ಯಕ್ತರಾದವರು. ಪೂತದಕ್ಷಸಾ=ವ್ಯಕ್ತರಾಗಿ ಯಜಮಾನವನ್ನು ಪವಿತ್ರನನ್ನಾಗಿ ಮಾಡುತ್ತಾರೆ. (ಏವಂಚ ಅಭಿವ್ಯಕ್ತಿಯು ಯಜಮಾನನ ಪಾವಿತ್ರ್ಯಕ್ಕೆ ಕಾರಣವು.) ||೪||

ಋ || (೨೩೪) ಋತೇನ ಯಾ ವೃತಾವೃಧಾವೃತಸ್ಯ ಜ್యೋತಿಷಸ್ಪತೀ || ತಾ ಮಿತ್ರಾವರುಣಾ ಹುವೇ ||೫||೮||

ಅ || ಯೌ=ಯಾರು, ಋತೇನ=ಸಮಸ್ತ ವೇದಗಳಿಂದ ತಿಳಿಯಲ್ಪಟ್ಟ, ಅಥವಾ ಜ್ಞಾನರೂಪವಾದ ಪರಬ್ರಹ್ಮನಿಂದ, ಋತಾವೃಧೌ=ಪರಬ್ರಹ್ಮನಲ್ಲಿಯೇ ಚೆನ್ನಾಗಿ ವೃದ್ಧಿವುಳ್ಳವರೋ, ಜ್ಯೋತಿಷಃ= ಪ್ರಕಾಶರೂಪವಾದ, ಪ್ರಮಾಣಸಿದ್ಧವಾದ, ಋತಸ್ಯ=ಸತ್ಯಕ್ಕೆ, ಪತೀ-ಅಧಿಪತಿಗಳೋ, ತಾ=ಅಂತಹ ಮಿತ್ರಾವರುಣರನ್ನು (ನಾನು) ಹುವೇ=ಕರೆಯುತ್ತೇನೆ. (ವಿಷ್ಣು ವಿಷಯದಲ್ಲಿ ಋತೇನ, ಋತವೃಧೌ ಎಂಬುವುಗಳಿಗೆ ಋತೇನ ಮಿತ್ರಾವರುಣಾ ಎನ್ನುವಲ್ಲಿ ಹೇಳಿದಂತೆ ಅರ್ಥವನ್ನು ತಿಳಿಯಬೇಕು.) ||೫||೮||

ಭಾ || (೧) ಪರೇಣ ಬ್ರಹ್ಮಣಾ ತಸ್ಮಿನ್ ವೃದ್ಧೌ ಸತ್ಯಪತೀ ಸದಾ । (೨) ಸತ್ಯಂ ಜ್ಯೋತಿಃ ಪ್ರಕಾಶತ್ವಾತ್ತೌ ಮಿತ್ರಾವರುಣಾ ಹುವೇ ||೫||೮||

ಅ || (೧) ಪರಬ್ರಹ್ಮನಿಂದಲೇ ಸದಾ ಪರಬ್ರಹ್ಮನಲ್ಲಿಯೇ ವೃದ್ಧಿಯುಳ್ಳವರು. (ಪರಮೇಶ್ವರ) ವಿಷಯದಲ್ಲಿ ವೃದ್ಧಿಯು ಕಾದಾಚಿತ್ಕವಲ್ಲ, ಎಂಬ ಅಭಿಪ್ರಾಯದಿಂದ ಸದಾ ಎಂದುಕ್ತವಾಗಿದೆ. ದೇವತಾಂತರ ವಿಷಯದಲ್ಲಿ ಕಾದಾಚಿತ್ಕವೃದ್ಧಿಯು ಸಂಭವಿಸುತ್ತದೆಂದುಕ್ತವಾಯ್ತು.) ಸತ್ಯಾಧಿಪತಿಗಳು. (೨) (ಸತ್ಯವು ಜ್ಯೋತಿಸ್ಸು ಆಗುವುದು ಹೇಗೆಂದರೆ)

ಪ್ರಕಾಶ ಸ್ವರೂಪವಾಗಿರುವುದರಿಂದ ಪ್ರಸಿದ್ಧವಾಗಿದೆ. (ಅಂದರೆ ಪ್ರಮಾಣ ಪ್ರಮಿತವಾಗಿದೆ. ಆದುದರಿಂದ ಸತ್ಯವು ಜ್ಯೋತಿಸ್ಸು ಎನಿಸುತ್ತದೆ. (ಸತ್ಯವಾದುದೇ ಪ್ರಮಾಣ ಪ್ರಸಿದ್ಧವಾಗುವುದಷ್ಟೆ.) ಅಂತಹ ಮಿತ್ರಾವರುಣರನ್ನು ಕರೆಯುತ್ತೇನೆ. ||೫||೮||

**ಋ || (೨೩೫) ವರುಣಃ ಪ್ರಾವಿತಾ ಭುವನ್ಮಿತ್ರೋ ವಿಶ್ವಾಭಿರೂತಿಭಿಃ । ಕರತಾಂ ನಃ ಸುರಾಧಸಃ ||೬||**

ಅ || ವರುಣಃ ಮಿತ್ರಃ=ವರುಣನೂ ಮಿತ್ರನೂ ಕೂಡ, ವಿಶ್ವಾಭಿಃ ಊತಿಭಿಃ=ಸಮಸ್ತ ರಕ್ಷಣೆಗಳಿಂದಲೂ ಪ್ರಾವಿತಾ=ಚೆನ್ನಾಗಿ ನಮ್ಮನ್ನು ರಕ್ಷಿಸುವವರು ಭುವತ್=ಆಗಬೇಕು. (ಮತ್ತು ಆ ಮಿತ್ರಾವರುಣರು) ನಃ=ನಮ್ಮನ್ನು, ಸುರಾಧಸಃ=ಶೋಭನ ಸಿದ್ಧಿವುಳ್ಳವರನ್ನಾಗಿ, ಕರತಾಂ=ಮಾಡಲು. ||೬||

**ಭಾ || ಸಂಸಿದ್ಧಾನ್ ಕುರುತಾಂ ನಸ್ತೌ ||೬||**

ಅ || ಆ ಮಿತ್ರಾವರುಣರು ನಮ್ಮನ್ನು ಒಳ್ಳೇ ಸಿದ್ಧಿವುಳ್ಳವರನ್ನಾಗಿ ಮಾಡಲಿ. ||೬||

ಅವ || ಇನ್ನು ಮೇಲಿನ ೩ ಋಕ್ಕುಗಳು ಮರುದ್ಗಣಗಳಿಂದ ಕೂಡಿದ ಇಂದ್ರದೇವತಾಕವೂ ಉಭಯ ದೇವತಾಕವೂ ಆಗಿದೆ.

**ಋ || (೨೩೬) ಮರುತ್ವಂತಂ ಹವಾಮಹ ಇಂದ್ರಮಾ ಸೋಮಪೀತಯೇ । ಸಜೂರ್ಗಣೇನ ತೃಂಪತು ||೭||**

ಅ || (ನಾವು)=ಮರುತ್ವಂತಂ ಮರುತ್‌ಗಳಿಂದ ಕೂಡಿರುವ, ಇಂದ್ರಂ = ಶ್ರೀಹರಿಯನ್ನು = ಇಂದ್ರನನ್ನು = ಸೋಮಪೀತಯೇ = ಸೋಮಪಾನ ಮಾಡುವುದಕ್ಕಾಗಿ, ಆ ಹವಾಮಹೇ=ಚೆನ್ನಾಗಿ ಕರೆಯುತ್ತೇವೆ. (ಕರೆಯಲ್ಪಟ್ಟ ಶ್ರೀಹರಿಯು, ಇಂದ್ರನೂ) ಗಣೇಶನ=ಮರುದ್ಗಣದಿಂದ, ಸಜೂಃ=ಕೂಡಿಕೊಂಡು, ತೃಂಪತು=(ತೃಪತೃಂಪತೃಪೌ) ತೃಪ್ತಿಯನ್ನು ಹೊಂದಲಿ. ||೭||

**ಭಾ || ಸಗಣಸ್ತೃಪ್ಯತಾಂ ಹರಿಃ ||೭||**

ಅ || ಮರುದ್ಗಣಗಳಿಂದ ಕೂಡಿರುವ ಶ್ರೀ ಹರಿಯು ತೃಪ್ತಿಯನ್ನು ಹೊಂದಲಿ ||೭||

**ಋ || (೨೩೭) ಇಂದ್ರಜ್ಯೇಷ್ಠಾ ಮರುದ್ಗಣಾ ದೇವಾಸಃ ಪೂಷರಾತಯಃ । ವಿಶ್ವೇ ಮಮ ಶ್ರುತಾ ಹವಂ ||೮||**

ಅ || ಇಂದ್ರಜ್ಯೇಷ್ಠಾಃ=ಕಿಂ ನ ಇಂದ್ರ ಜಿಘಾಂಸಸಿ ಭ್ರಾತರೋ ಮರುತಸ್ತವ ಎಂಬ ಶ್ರುತಿಯಿಂದ ಇಂದ್ರನೇ ಜ್ಯೇಷ್ಠನಾಗಿ ಉಳ್ಳ, ಪೂಷರಾತಯಃ=ಸರ್ವ ಗುಣ ಪರಿಪೂರ್ಣನಾದುದರಿಂದ ಪೂಷನೆನಿಸಿ ಕೊಂಡ ಶ್ರೀವಿಷ್ಣುವೇ ಅಭೀಷ್ಟನನ್ನು ಕೊಡುವವನು ಮಿತ್ರನಾಗಿ ಉಳ್ಳ, ಮರುದ್ಗಣಾಃ=(ಸಪ್ತಾನಾಂ ವರ್ಗ ಸಪ್ತಕಃ, ೭ ಮರುತಗಳ ಸಮೂಹವು ಸಪ್ತಕವು.

ಹೀಗೆಯೇ ೭-೭ ಗುಂಪಾಗಿ ಇದ್ದು ೪೯ ಸಂಖ್ಯೆಯುಳ್ಳ)ಮರುತಗಳ ಸಮೂಹ ಭೂತರಾದ, (ಹಿಂದಿನ ಋಕ್ಕಿನಲ್ಲಿ ಗಣೇನ ಎಂದು ಏಕವಚನವಿದ್ದರೂ (ಮಹಾಗಣವು ಒಂದೆಯಾಗಿದ್ದರೂ) ಅವಾಂತರ ಗಣವನ್ನು ವಿವಕ್ಷಾ ಮಾಡಿಯೇ ಇಲ್ಲಿ ಮರುದ್ಗಣಾಃ ಎಂದು ಬಹು ವಚನವನ್ನು ಹೇಳಿದ್ದು) ಹೇ ದೇವಾಸಃ=ಎಲೋ ದೇವತೆಗಳೇ, ವಿಶ್ವೇ=ನೀವೆಲ್ಲರೂ ಮಮ=ನನ್ನ, ಹವಂ=ಆಹ್ವಾನವನ್ನುಶ್ರುತ=(ಶ್ರುಶ್ರವಣೇ) ಕೇಳಿರಿ. ||೮||

ಭಾ || ಪೂಷಾ ಪೂರ್ಣತ್ವತೋ ವಿಷ್ಣುಸ್ತನ್ಮಿತೋ ವಿಷ್ಣುಸ್ತನ್ಮಿತ್ರಾಃ ಪೂಷರಾತಯಃ ||೮||

ಅ || ಪುಷ ಪುಷ್ಟೌ ಎಂಬ ಧಾತು ನಿಷ್ಪನ್ನವಾದ ಪೂಷಾ=ಸರ್ವಗುಮ ಪರಿಪೂರ್ಣನಾದ ಶ್ರೀವಿಷ್ಣುವು ವಿಷ್ಣುವೇ ಮಿತ್ರನಾಗಿ ಉಳ್ಳವರು, ಪೂಷರಾತಯಃ ಎನಿಸುತ್ತಾರೆ. ||೮||

ಋ || (೨೩೮) ಹತ ವೃತ್ರಂ ಸುದಾನವ ಇಂದೇಣ ಸಹಸಾ ಯುಜಾ । ಮಾ ನೋ ದುಃಶಂಸ ಈಶತ ||೯||

ಅ || ಹೇ ಸುದಾನವಃ=(ದಾಣ್‌ದಾನೇ) ಅತೀವ ದಾನಶೀಲರಾದ ಮರುತ್‌ಗಳೇ, ಸಹಸಾ=ಬಲರೂಪನಾದ, ಬಲವುಳ್ಳ ಅಥವಾ ಬಲಾಭಿಮಾನಿಯಾದ, ಇಂದ್ರೇಣ=ಇಂದ್ರನಿಂದ ಯುಜಾ=ಕೂಡಿರುವುದರಿಂದ (ಅಂದರೆ ಇಂದ್ರ ದೇವರಿಂದ ಸಹಿತರಾದವರಾಗಿ) ವೃತ್ರಂ=(ಯಥಾರ್ಥಜ್ಞಾನಕ್ಕೆ ಆವರಕವಾಗಿರುವುದರಿಂದ) ಅಜ್ಞಾನವನ್ನು (ಇತರರ ಅಜ್ಞಾನ ನಿವೃತ್ತಿಗಿಂತ ತನ್ನ ಅಜ್ಞಾನ ನಿವೃತ್ತಿಯು ಅತ್ಯಾವಶ್ಯಕವಾಗಿರುವುದರಿಂದ) ನನ್ನ ಅಜ್ಞಾನವನ್ನು ಹತ=ನಾಶಗೊಳಿಸಿರಿ. ಮತ್ತು, ದುಃಶಂಸಃ (ಶಂಸಕಥನೇ) ದುಷ್ಟವಾದ ಶಾಸ್ತ್ರವು, ಅಥವಾ ದುಶ್ಶಾಸ್ತ್ರದಿಂದ ಅತಿರಿಕ್ತವಾದ ದುಷ್ಟವಾದ ಮಾತು, ಅಥವಾ ದುಃ ಶಂಸಃಯಸ್ಯ ಎಂಬ ವ್ಯುತ್ಪತ್ತಿಯಿಂದ ದುಷ್ಟನಾದ ವಚನವುಳ್ಳ ಪುರುಷನು, ನಃ=ನಮಗೆ, ಮಾಈಶತ=ಶಕ್ತವಾ(ನಾ)ಗಲಾರದು. (ಅಂದರೆ ಅಜ್ಞಾನವನ್ನು ಹುಟ್ಟಿಸಲಿಕ್ಕೆ ಸಮರ್ಥವಾಗಲಾರನು. (ಪೂರ್ವಾರ್ಧದಲ್ಲಿ ಹುಟ್ಟಿದ ಅಜ್ಞಾನವು ನಾಶವಾಗಬೇಕೆಂದೂ ಉತ್ತರಾರ್ಧದಲ್ಲಿ ಹೊಸತಾಗಿ ಅಜ್ಞಾನವು ಹುಟ್ಟಬಾರದೆಂದೂ ಪ್ರಾರ್ಥಿಸಿದ್ದು ಎಂದಭಿಪ್ರಾಯವು ಉಕ್ತವಾಯ್ತು. ||೯||

ಭಾ || ಸಹಸಾ ಬಲರೂಪೇಣ ಶಕ್ರೇಣ ಸಹಿತಾಃ ಸುರಾಃ । ಮದಜ್ಞಾನಂ ಹತಾತೀವ ದಾನ ಶೀಲಾನಶಕ್ನುಯಾತ್ । ದುರ್ವಾಕ್ತದ್ವಾನ್ ಪುಮಾನ್ನಾನೋ ||೯||

ಅ || ಅತ್ಯಂತ ದಾನಶೀಲರಾದ, ಮರುತ್ ದೇವತೆಗಳೇ ಬಲಂ ರೂಪಂ=ಧರ್ಮವು, ಅಥವಾ ಪ್ರತಿಮೆಯು ಯಸ್ಯ ಎಂಬ ವ್ಯುತ್ಪತ್ತಿಯಿಂದ ಬಲವುಳ್ಳವನೂ ಬಲಾಭಿಮಾನಿಯೂ ಆದ ಇಂದ್ರನಿಂದ ಕೂಡಿದವರಾಗಿ ನನ್ನ ಅಜ್ಞಾನವನ್ನು ನಾಶಗೊಳಿಸಿರಿ. ದುರ್ವಚನವು ಅಥವಾ ದುರ್ವಚನವುಳ್ಳ ಪುರುಷರು, ನಮಗೆ ಅಜ್ಞಾನವನ್ನು ಹುಟ್ಟಿಸಲಿಕ್ಕೆ ಸಮರ್ಥವಾಗಬಾರದು. (ನಾಗಲಾರನು) ||೯||

ಅವ || ೩ ಋಕ್ಕುಗಳು. ವಿಶ್ವೇದೇವ ದೇವತಾಕವು

ಋ || (೨೩೯) ವಿಶ್ವಾನ್ ದೇವಾನ್ ಹವಾಮಹೇ ಮರುತಃ ಸೋಮಪೀ ತಯೇ। ಉಗ್ರಾಹಿ ಪೃಶ್ನಿಮಾತರಃ ||೧೦||೯||

ಅ ॥ ಹಿ=ಯಾವ ಕಾರಣದಿಂದ ಪ್ರಶ್ನಿಮಾತರಃ=ಪ್ರಶ್ನಿರ್ಮಾತಾ ಯೇಷಾಂ ಎಂಬ ವ್ಯುತ್ಪತ್ತಿಯಿಂದ ಗೋರೂಪವುಳ್ಳವಳೂ, ವಾಗ್ರೂಪವುಳ್ಳವಳೂ, ದ್ಯುರೂಪವುಳ್ಳವಳೂ ಆದ ಭಾರತೀ ದೇವಿಯು ತಾಯಿಯಾಗಿಉಳ್ಳ, ಸಮಸ್ತ ದೇವತೆಗಳು, ಉಗ್ರಾಃ=ಶತ್ರುಗಳಿಂದ ಸಹಿಸಲಶಕ್ಯವಾಗಿರುತ್ತಾರೋ, (ಆದ ಕಾರಣ) (ನಾವು) ವಿಶ್ವಾನ್ ದೇವಾನ್=ಸಮಸ್ತ ದೇವತೆಗಳನ್ನು, ಮರುತಃ=ಮರುತಗಳನ್ನೂ ಕೂಡ, ಸೋಮಪೀತಯೇ=ಸೋಮಪಾನಮಾಡುವುದಕ್ಕಾಗಿ, ಹವಾಮಹೇ=ಕರೆಯುತ್ತೇವೆ. ॥೧೦॥

ಭಾ ॥ ಬಾರತೀ ಪ್ರಶ್ನಿರುಚ್ಯತೇ । ಗೋರೂಪಾಚ ಕ್ವಚಿತ್ಸಾಽಭೂತ್ತತ್ಸುತಾಶ್ಚಾಖಿಲಾಃ ಸುರಾಃ । ಅನ್ಯತ್ರಾಪಿ ಸುತಾಸ್ತಸ್ಯಾಃ॥೧೦॥೯॥

ಅ ॥ (೧) ಪ್ರಶ್ನಿಮಾತರಃ ಎನ್ನುವುದರ ಅರ್ಥ ಹೇಳುತ್ತಾರೆ) ಪ್ರಶ್ನಿ ಶಬ್ದದಿಂದ ಭಾರತಿಯು ಹೇಳಲ್ಪಡುತ್ತಾಳೆ. (ಹೇಗೆಂದರೆ) ಪ್ರಶ್ನಿಃ ನಾಕಃ ಗೌಃ ಎಂದು ಸಾಧಾರಣ ನಾಮಗಳಲ್ಲಿ ಪ್ರಶ್ನಿ ಶಬ್ದವು ಗೋಶಬ್ದದಿಂದ ಸಹ ಪಠಿತವಾಗಿದೆ. ಗೋಶಬ್ದಕ್ಕೆ ವಾಕ್ ಎಂದು ಅರ್ಥವಿದೆ. ನಾಕ ಶಬ್ದದಿಂದ ಸಹಪಾಠವಿದ್ದ ಪ್ರಯುಕ್ತ ಪ್ರಶ್ನಿಶಬ್ದಕ್ಕೆ ಸ್ವರ್ಗವೆಂಬ ಅರ್ಥವೂ ಇದೆ. ಆದ ಕಾರಣ) ಪ್ರಶ್ನಿ ಶಬ್ದಕ್ಕೆ ಗೋರೂಪವುಳ್ಳ, ವಾಗ್ರೂಪವುಳ್ಳ, ಮತ್ತು ದ್ಯುರೂಪವುಳ್ಳ ಭಾರತಿಯೆಂದರ್ಥವು. ಕೆಲವು ಕಾಲದಲ್ಲಿ ಅಥವಾ ಕೆಲವು ಕಾರ್ಯ ವಿಶೇಷಕ್ಕಾಗಿ ಆ ಭಾರತೀಯು ಗೋರೂಪವುಳ್ಳವಳಾಗಿದ್ದಳು. ಎಲ್ಲಾ ದೇವತೆಗಳೂ ಆ ಭಾರತೀಯ ಮಕ್ಕಳು, ಆದ ಕಾರಣ ದೇವತೆಗಳು ಪ್ರಶ್ನಿಮಾತರಃ ಎನಿಸುತ್ತಾರೆ. ಭಾರತಿಯು (ಅನ್ಯತ್ರ) ವೇದ ದ್ಯು ಇತ್ಯಾದಿಗಳಿಗೆ ಅಭಿಮಾನಿಯು. ಆದಾಗ್ಯೂ ಪ್ರಶ್ನಿ ಶಬ್ದವು ವಾಗಾದಿನಾಮವುಳ್ಳದ್ದೂ ಆಗುತ್ತದೆ.) ಆದ ಕಾರಣ ಅನ್ಯತ್ರಾಪಿ ದೇವತೆಗಳು ಆ ಭಾರತೀಯ ಮಕ್ಕಳು. (ಭಾರತೀಯ ಗೋರೂಪಳಾದುದರಿಂದಲೂ ವೇದಗಳಿಗೆ ಅಭಿಮಾನಿನಿಯು ಆದುದರಿಂದಲೂ ಗೋವಾಕ್‌ದ್ಯುಪರ್ಯಾಯ ಪ್ರಶ್ನಿಶಬ್ದದಿಂದ ಭಾರತಿಯು ಹೇಳಲ್ಪಡುತ್ತಾಳೆ.) ॥೧೦॥೯॥

ಋ ॥ (೨೪೦) ಜಯತಾಮಿವ ತನ್ಯತುರ್ಮರುತಾಮೇತಿ ಧೃಷ್ಣುಯಾ। ಯಚ್ಛುಭಂ ಯಾಥನಾ ನರಃ ॥೧೧॥

ಅ ॥ ಹೇನರಃ=ಎಲೊ ವಿಶ್ವೇ ದೇವತೆಗಳಿರಾ, ಯತ್=ಯಾವಾಗ, ಶುಭಂ=ಉತ್ತಮನಾದ ಶ್ರೀವಿಷ್ಣುವನ್ನು ಅಥವಾ ವಾಯುವನ್ನು ಕುರಿತು, ಯಾಥತ=ಪ್ರಾರ್ಥಿಸುತ್ತೀರೋ, (ಆಗ ಮರುತಾಂ=ಮರುತ್‌ಗಳಾದ ನಿಮ್ಮ, ತನ್ಯತುಃ =(ತನುವಿಸ್ತಾರೆ) ಧ್ವನಿಯು, (ಸಂಗ್ರಾಮದಲ್ಲಿ) ಜಯತಾಮಿವ=ಜಯಶೀಲರಾದ ರಾಜರ ಧ್ವನಿಯೆಂಬಂತೆ, ಧೃಷ್ಣುಯಾ=(ಞಧೃಷಾ ಪ್ರಾಗಲ್ಭ್ಯೇ) ಧೈರ್ಯದಿಂದ, ಏತಿ=ಪ್ರವೃತ್ತವಾಗುತ್ತದೆ. ॥೧೧॥

ಭಾ ॥ ಜಯತಾಮಿವ ತದ್ಧ್ವನಿಃ । ಧೈರ್ಯದ್ಯಾತಿ ಯದಾ ವಿಷ್ಣುಂ ವಾಯುಂ ವಾ ಯಾಥಾನೋತ್ತಮಂ ॥೧೧॥

ಅ ॥ ಯಾವಾಗ ಸರ್ವೋತ್ತಮನಾದ ಶ್ರೀವಿಷ್ಣುವನ್ನು ಅಥವಾ ವಾಯುದೇವರನ್ನು ಪ್ರಾರ್ಥಿಸುತ್ತೀರೋ, ಆಗ ಆ ಮರುತ್‌ಗಳಾದ ನಿಮ್ಮ ಧ್ವನಿಯು, (ರಣಾಂಗಣದಲ್ಲಿ) ಜಯಶೀಲರಾದ ರಾಜರ ಧ್ವನಿಯಂತೆ ಧೈರ್ಯದಿಂದ ಪ್ರವೃತ್ತವಾಗುತ್ತದೆ. ॥೧೧॥

ಋ ॥ (೨೪೧) ಹಸ್ಕಾರಾದ್ವಿದ್ಯುತಸ್ಪರ್ಯತೋ ಜಾತಾ ಅವಂತು ನಃ । ಮರುತೋ ಮೃಳಯಂತು ನಃ ॥೧೧॥

ಅ ॥ (ಯಾವ ಸಮಸ್ತ ದೇವತೆಗಳೂ) ಮರುತಃ=ಮರುತ್‌ಗಳೂ ಕೂಡ, ಹಸ್ಕಾರಾತ್=ನಿರ್ದೋಷ ಗುಣ ವಿಶಿಷ್ಟರಾದ ವಾಯುದೇವರಿಂದ, ವಿದ್ಯುತಃ=(ದ್ಯುತದೀಪ್ತೌ) ವಿಶೇಷೇಣ ದ್ಯೋತತೇ ಜಾನಾತೀತಿ ವಿದ್ಯುತ್) ವಿಶೇಷತಃ ಜ್ಞಾನವುಳ್ಳ ಭಾರತಿಯಿಂದಲೂ, ಪರಿ=ಚೆನ್ನಾಗಿ ಜಾತಾಃ=ಹುಟ್ಟಿರುತ್ತಾರೋ, ಅತಃ=ಚೆನ್ನಾಗಿ ಹುಟ್ಟಿರುವುದರಿಂದಲೇ (ಅವರು) ನಃ=ನಮ್ಮನ್ನು, ಅವಂತು=ರಕ್ಷಿಸಲಿ. ನಃ=ನಮ್ಮನ್ನು, ಮೃಳಯಂತು=ಸುಖಿಗಳನ್ನಾಗಿ ಮಾಡಲಿ. ॥೧೨॥

ಭಾ ॥ (೧) ದೋಷತ್ಯಾಗಾದ್ಗುಣಪ್ರಾಪ್ತೇರ್ಹಸ್ಕಾರೋ ವಾಯುರುಚ್ಯತೇ ॥ (೨) ವಿದ್ಯುದ್ವಿಶಿಷ್ಟಜ್ಞಾನತ್ವಾದ್ಭಾರತೀ (೩) ತತ್ಸುತಾ ಹಿ ತೇ । ಸರ್ವದೇವಾಶ್ಚ ಮರುತೋ ರಕ್ಷಂತ್ವೇತಾದೃಶೋ ಹರಿಃ ॥ ತತ್ರದಂತರ್ಗತತ್ವೇನ ॥೧೨॥

ಅ ॥ (೧) (ಹಸ್ಕಾರ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ) (ಓಹಾಕ್ ತ್ಯಾಗೇ ಎಂಬುವ ಧಾತು ವ್ಯಾಖ್ಯಾನದಿಂದ ತ್ಯಜತಿ ದೋಷಾನ್ ಹಃ-ದೋಷಗಳಿಲ್ಲದವನು, ಸ್ವೇನ ಸಹಕರೋತಿಗುಣಾನ್ ಗುಣಗಳನ್ನು ತನ್ನಿಂದ ಸಂಬದ್ಧಗಳನ್ನಾಗಿ ಮಾಡುತ್ತಾನೆಂಬ ವ್ಯುತ್ಪತ್ತಿಯಿಂದ ಸ್ಕಾರಃ, ಹಶ್ಚಾಸೌ ಕಾರಶ್ಚ ಹಸ್ಕಾರಃ । ಏವಂಚ) ದೋಷಗಳನ್ನು ಪರಿತ್ಯಾಗ ಮಾಡಿದುದರಿಂದಲೂ, ಸಮಸ್ತ ಗುಣಗಳನ್ನು ಹೊಂದಿರುವುದರಿಂದಲೂ ಹಸ್ಕಾರ ಶಬ್ದದಿಂದ ವಾಯುವು ಹೇಳಲ್ಪಡುತ್ತಾನೆ. (೨) (ವಿದ್ಯುತ್ ಶಬ್ದಾರ್ಥವನ್ನು ಹೇಳುತ್ತಾರೆ)ದ್ಯುತದೀಪ್ತೌ ಎಂಬ ಧಾತು ವ್ಯಾಖ್ಯಾನದಿಂದ ವಿಶೇಷೇಣ ದ್ಯೋತತೇ ಜಾನಾತಿ ಎಂಬ ವ್ಯುತ್ಪತ್ತಿಯಿಂದ ಸರ್ವೋತ್ಕೃಷ್ಟ ಜ್ಞಾನವಿದ್ದುದರಿಂದ ವಿದ್ಯುತ್ ಶಬ್ದದಿಂದ ಭಾರತಿಯು ಹೇಳಲ್ಪಡುತ್ತಾಳೆ. (೩) (ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ) ಸಮಸ್ತ ದೇವತೆಗಳೂ ಮರುತ್‌ಗಳೂ ಕೂಡ (ಪ್ರಾಣ ಭಾರತಿಯರಿಂದ ಹುಟ್ಟಿರುವುದರಿಂದಲೇ) ಅವರು ಪ್ರಾಣ ಭಾರತಿಯರ ಮಕ್ಕಳು. ಹಿ=ಪ್ರಸಿದ್ಧ. (ವಿಶಿಷ್ಟ ಮಾತಾಪಿತೃಗಳಿಂದ ಹುಟ್ಟಿರುವುದರಿಂದಲೇ) ಅವರು ನಮ್ಮನ್ನು ರಕ್ಷಿಸಲಿ. (ಮತ್ತು ಸುಖಿಗಳನ್ನಾಗಿ ಮಾಡಲಿ.) (ಶ್ರೀ ಹರಿಯಲ್ಲಿ ವಾಯು ಭಾರತಿ ಪುತ್ರತ್ವವನ್ನುಪಪಾದಿಸುತ್ತಾರೆ) ಶ್ರೀಹರಿಯೂ ಕೂತ ಆವಾವ ಮರುದಾದಿಗಳಲ್ಲಿ ಅಂತರ್ಗತನಾಗಿರುವ ಕಾರಣ ಭಾರತೀ ವಾಯುಗಳ ಪುತ್ರನೆಂದು ಹೇಳಲ್ಪಡುತ್ತಾನೆ. ॥೧೨॥

ಅವ ॥ ೩ ಋಕ್ಕುಗಳು ಪೂಷದೇವತಾಕಗಳು.

ಋ ॥ (೨೪೨) ಆ ಪೂಷನ್ ಚಿತ್ರಬರ್ಹಿಷಮಾಘೃಣೇ ಧರುಣಂ ದಿವಃ । ಆಜಾ ನಷ್ಟಂ ಯಥಾ ಪಶುಂ ॥೧೩॥-

ಅ ॥ ಹೇ ಆಘೃಣೇ=(ಆ ಘೃಣಯಃ ರಶ್ಮಯಃಯಸ್ಯ) ಚೆನ್ನಾಗಿ ಸರ್ವತ್ರ ರಶ್ಮಿಗಳುಳ್ಳ ಪೂಷನ್=ಸರ್ವಗುಣ ಪರಿಪೂರ್ಣನಾದುದರಿಂದ ಪೂಷನ್ ಎನಿಸಿದ ಶ್ರೀಹರಿಯೇ ಮತ್ತು ಪೂಷದೇವತೆಯೇ, ಚಿತ್ರಬರ್ಹಿಷಂ=ವಿಚಿತ್ರವಾದ ನಾನಾ ವಿಧ ಪೂರ್ಣತ್ವವುಳ್ಳ ಚತುರ್ಮುಖ ಬ್ರಹ್ಮನನ್ನು (ನೀನು ನಮ್ಮನ್ನು ಕುರಿತು) ಆ ಅಜ=(ಅಜಗತೌ) ಗುರುವನ್ನಾಗಿ ಹೊಂದಿಸಿಕೊಂಡು. ದಿವಃ=ಭಾರತೀ ದೇವಿಗೆ, ಧುರಣಂ=ಧಾರಕನಾದ ಪತಿಯಾದ ವಾಯುವನ್ನು ಕೂಡ, ನಷ್ಟಂ ಪಶುಂ ಯಥಾ= (ನಶ ಅದರ್ಶನೇ ಎಂಬ ಧಾತು ವ್ಯಾಖ್ಯಾನದಿಂದ) ಅತ್ತಿತ್ತಾ ಹೋಗಿರುವುದರಿಂದ ನಷ್ಟವಾದ ಅದೃಷ್ಟವಾದ ಗೋವನ್ನೆಂಬಂತೆ, (ಅಂದರೆ ನಷ್ಟವಾದ (ದೇಶಾಂತರಕ್ಕೆ ಹೋದ) ಗೋವನ್ನು ಹೇಗೆ ಆದರದಿಂದ ಬರುವಂತೆ ಮಾಡುತ್ತಾರೋ, ಹಾಗೆಯೇ) ಆ ಅಜ=ಹೊಂದಿಸಿಕೊಡು. ಅಥವಾ (ನಮಗಾಗಿ ತಾವು) ಆ ಆಜ=(ಆದಿಕಾಲದಲ್ಲಿ (ಸೃಷ್ಟಿಕಾಲದಲ್ಲಿ) ಭಾರತೀ ಪ್ರಾಣರನ್ನು) ॥೧೩॥

ಭಾ ॥ (೧) ಪೂಷಾ ಪೂರ್ಣತ್ವತಶ್ಚ ಸಃ । ಆ ಘೃಣಿಃ ಪೂರ್ಣರಶ್ಮಿತ್ವಾ (೨) (ಋಕ್ಕನ್ನು ವ್ಯಾಖ್ಯಾನಮಾಡುತ್ತಾರೆ) ಚಿತ್ರ ಬರ್ಹಿಷಂ=ಚಿತ್ರ=ನಾನಾ ವಿಧವಾದ ಬರ್ಹಿಷಂ=ಪೂರ್ಣತ್ವವುಳ್ಳ, (ಜ್ಞಾನ ಭಕ್ಷ್ಯಾದಿಗಳು ಬಹು ವಿಧಗಳಾಗಿರುವುದರಿಂದ ಪೂರ್ಣತ್ವವೂ ಕೂಡ ನಾನಾವಿಧವು.) ಬ್ರಹ್ಮನನ್ನು ಕೂಡ ನಮ್ಮನ್ನು ಕುರಿತು ಗುರುವನ್ನಾಗಿ ಹೊಂದಿಸಿ ಕೊಡು. ಮತ್ತು ಭಾರತೀ ದೇವಿಗೆ ಪತಿಯಾದ ಪ್ರಿಯನಾದ ವಾಯುವನ್ನು ಕೂಡ ನಷ್ಟವಾದ ಗೋವನ್ನು ಹೊಂದಿಸಿ ಕೊಡುವಂತೆ ಹೊಂದಿಸಿ ಕೊಡು. ॥೩೧॥

ಋ ॥ (೨೪೩) ಪೂಷಾ ರಾಜಾನಮಾಘೃಣಿರಪಗೂಳ್ಹಂ ಗುಹಾಹಿತಂ । ಅವಿಂದಚ್ಚಿತ್ರ ಬರ್ಹಿಷಂ ॥೧೪॥

ಅ ॥ ಆಘೃಣಿಃ=ಪೂರ್ಣರಶ್ಮಿಗಳುಳ್ಳ, ಪೂಷಾ=ಪೂರ್ಣನಾದ, ಶ್ರೀ ಹರಿಯು, ರಾಜಾನಂ=ಜಗತ್ತಿಗೆ ರಾಜನಾದ, ಜಗತ್ತನ್ನು ರಂಜಿಸುವ, ಗುಹಾಹಿತಂ=ಸರ್ವರಿಗೂ ನಿಯಾಮಕನಾಗಿ ಹೃದಯ ಗುಹೆಯಲ್ಲಿ ಇರುವ, ಅಪಗೂಳ್ಹಂ=ತನ್ನ ಕುಕ್ಷಿಯಲ್ಲಿ ಗೂಢವಾಗಿರುವ, ಚಿತ್ರ ಬರ್ಹಿಷಂ=ನಾನಾ ವಿಧ ಪೂರ್ಣತ್ವವುಳ್ಳ, ಬ್ರಹ್ಮನನ್ನು ಅವಿಂದತ್=(ವಿದ್ಲ್ ಲಾಭೇ) (ಪುತ್ರನನ್ನಾಗಿ) ಹೊಂದಿದನು. ॥೧೪॥

ಭಾ ॥ ಜಗದ್ರಾಜ ಮುವಿಂದದ್ಭಗವಾನ್ ಸುತಂ । ಸ್ವಕುಕ್ಷಿಗೂಢಂ ಬ್ರಹ್ಮಾಣಂ ॥೧೪॥

ಅ ॥ ಶ್ರೀಹರಿಯು ಜಗತ್ತಿಗೆ ರಾಜನಾದ, ತನ್ನ ಹೊಟ್ಟೆಯಲ್ಲಿ ಗೋಪ್ಯನಾಗಿರುವ, ಚತುರ್ಮುಖನನ್ನು ಮಗನನ್ನಾಗಿ ಹೊಂದಿದನು (ಹಿಂದಿನಋಕ್ಕಿನಲ್ಲಿ ಹೇಳಿದ್ದ ಅರ್ಥವನ್ನು ಪುನಃ ಹೇಳಿದ್ದು ಅಭ್ಯಾಸಕ್ಕಾಗಿ) (ಆದರಾತಿಶಯವನ್ನು ತೋರಿಸುವುದಕ್ಕಾಗಿ ಮತ್ತು ವಿಶೇಷಣಾಂತರಗಳನ್ನು ಹೇಳಿದುದರಿಂದ ಅಧಿಕ ವಿಧಾನಕ್ಕಾಗಿಯೂ ಎಂದು ತಿಳಿಯಬೇಕು.) ॥೧೪॥

ಋ ॥ (೨೪೪) ಉತೋ ಸ ಮಹ್ಯಮಿಂದುಭಿಃ ಷಡ್ಯುಕ್ತಾ ಅನು ಸೇಷಿಧತ್ । ಗೋಭಿರ್ಯವಂ ನ ಚರ್ಕೃಷತ್ ॥೧೫॥೧೦॥

ಅ ॥ ಉತೋ=ಮತ್ತು, ಸಃ=ಪೂಷನೆನಿಸಿದ ಶ್ರೀಹರಿಯು, ಇಂದುಭಿಃ=ಸೋಮಗಳಿಂದ (ತೃಪ್ತಿಯನ್ನು ಹೊಂದಿದವನಾಗಿ) ಮಹ್ಯಂ=ನನಗಾಗಿ, ಷಟ್=ಷಡಿಂದ್ರಿಯಗಳನ್ನು ಯುಕ್ತಾನ್=ಅರ್ಥಗಳಿಂದ ಸನ್ನಿಕೃಷ್ಟಗಳನ್ನಾಗಿ, ಚರ್ಕೃಷತ್=(ಕೃಷ ವಿಲೇಖನೇ) ಮಾಡಿದನು. ಅನುಸೇಷಿ(ಸಿ) ಧತ್=(ಷಿಧಗತ್ಯಾಂ) ಸಾಧಿಸಿದನು. (ಶಕ್ತಿಯುಕ್ತಗಳನ್ನಾಗಿ ಮಾಡಿದನು.) ಗೋಭಿಃ=ಜಲಗಳಿಂದ, (ನೀರನ್ನು ಸೇಚಿಸಿ) ಯವಂ ನ=ಧಾನ್ಯವಿಶೇಷವನ್ನು ಹೇಗೆ ಮಾಡುತ್ತಾರೋ, ವೀರ್ಯಯುಕ್ತವನ್ನಾಗಿ ಸಾದಿಸುತ್ತಾರೋ ಹಾಗೆಯೇ ॥೧೫॥

ಭಾ ॥ ಮಹ್ಯಂ ಸೋಮೈಶ್ಚ ತರ್ಪಿತಃ । ಸಾಧಯಾಮಾಸ ಷಡ್ಯುಕ್ತಾನೀಂದ್ರಿಯಾಣಿ ಚಕಾರ ಚ । ಸಾಧನಂ ಶಕ್ತಿದಾನಂ ತು ಗೋಭಿರ್ವಾಭಿರ್ಯಥಾಯವಂ ॥೧೫॥೧೦॥

ಅ ॥ ಶ್ರೀಹರಿಯು ಸೋಮಗಳಿಂದ ತೃಪ್ತಿಯನ್ನು ಹೊಂದಿದವನಾಗಿ ನನಗಾಗಿ ಚಕ್ಷುರಾದಿ ೬ ಇಂದ್ರಿಯಗಳನ್ನು

ವಸ್ತುಗಳಿಂದ ಸನ್ನಿಕೃಷ್ಟಗಳನು ಸಾಧಿಸಿದನು. ಮತ್ತು ಸಾಮರ್ಥ್ಯಯುಕ್ತಗಳನ್ನಾಗಿಯೂ ಮಾಡಿದನು. ಜಲಗಳಿಂದ (ನೀರನ್ನು ಸೇಚಿಸಿ) ಧಾನ್ಯ ವಿಶೇಷವನ್ನು ವೀರ್ಯಯುಕ್ತವನ್ನಾಗಿ ಹೇಗೆ ಸಾಧಿಸುತ್ತಾರೋ, ಹಾಗೆಯೇ. (ಕರುಣಾತಿರಿಕ್ತವಾದ ಸಾಧನವು ಎಂತಹುದೆಂದರೆ) (ಇಂದ್ರಿಯಗಳಿಗೆ ಕರಣವೆಂದರೆ ಉತ್ಪಾದನವು.) ಸಾಧನವೆಂದರೆ-ವಿಷಯವನ್ನುಪಭೋಗಿಸಲಿಕ್ಕೆ ಸಾಮರ್ಥ್ಯೋತ್ಪಾದನವು. ||೧೫||೧೦||

ಅವ || ಈ ೧೫ ಋಕ್ಕುಗಳಿಂದ ಇತರಗಳಾದ ಸಾರ್ಧಸಪ್ತ ಋಕ್ಕು (೭.೨ ಋಕ್ಕುಗಳು) ಅಪ್‌ದೇವತಾಕಗಳು. ಪಯಸ್ವಾನ್ ಎಂಬ ಅರ್ಧಋಕ್ಕಿಗೆ ಅಗ್ನಿಯು ದೇವತೆಯು ಮತ್ತು ಅಪ್‌ದೇವತೆಯು. ಸಂ ಮಾಗ್ನೇ ಎಂಬ ಋಕ್ಕಿಗೆ ಸರ್ವ ದೇವತೆಗಳೇ ದೇವತೆಗಳು.

ಋ || (೨೪೫) ಅಂಬಯೋ ಯಂತ್ಯಧ್ವಭಿರ್ಜಾಮಯೋ ಅಧ್ವರೀಯತಾಂ| ಪೃಂಚತೀರ್ಮಧುನಾ ಪಯಃ ||೧೬||

ಅ || ಅಂಬಯಃ=ಜಗತ್ತಿಗೆ ಮಾತೃಭೂತಗಳಾದ ಜಾಮಯಃ=ಜಗತ್ತಿಗೆ ಭಗಿನಿಯರೂ ಆದ, ಅಧ್ವರೀಯತಾಂ=ಅಧ್ವರವನ್ನು ಇಚ್ಛಿಸುವವರಿಗೆ (ಯಜ್ಞ ಮಾಡುವವರಿಗೆ) ಮಧುನಾ=ಸೋಮದಿಂದ ಕೂಡಿ, ಪಯಃ=ಕ್ಷೀರವನ್ನು, ಸೋಮವನ್ನು ಕೂಡ. ಪೃಂಚತೀಃ=(ಪೃಚೀ ಸಂಪರ್ಕೇ) ಪಯಸ್ಸಿನಿಂದ ಸಂಬದ್ಧಗಳಾದ, (ಸೋಮದಲ್ಲಿ ಪಯಸ್ಸಿನಲ್ಲಿ ಉದಕ ಸಂಪರ್ಕವಿದೆ) ನದಿಯಲ್ಲಿರತಕ್ಕ ಜಲಗಳು, ಅಧ್ವಭಿಃ=ಮಾರ್ಗಗಳಿಂದ, ಯಂತಿ=ಹೋಗುತ್ತವೆ. ||೧೬||

ಭಾ || (೧) ಅಂಬಯೋ ಮಾತರೋ ಹ್ಯಾಪಃ ಕಾರಣತ್ವಾತ್ಸಹೋದರಾಃ | ಜಗತೋ ಜಾಮಯೋ ಯಸ್ಮಾತ್ಸಹ ತಾಭಿರ್ವಿವರ್ಧತೇ || (೨) ಅಧ್ವರಂ ಕುರ್ವತಾಂಕ್ಷೀರಂ ಸೋಮಂ ಚಾಪಿ ಪ್ರಪೃಂಚತೀಃ | ಸಂಪೃಕ್ತಾಃ ||೧೬||

ಅ || (೧) ಇಲ್ಲಿ ಅಂಬಾ ಶಬ್ದದ ಪರ್ಯಾಯವು ಅಂಬಿ ಶಬ್ದವು. (ಜಗತ್ತಿಗೆ ಮಾತೃಗಳು ಯಾವವೆಂದರೆ) ಜಲಗಳು. (ಆಪೋದೇವೀಃ ಇತ್ಯಾದಿಗಳಲ್ಲಿ ಅಪ್‌ಶಬ್ದವು ಶ್ರುತವಾಗಿದೆ. ಅವುಗಳು ಈ ಪ್ರಕರಣದಲ್ಲಿ ಪ್ರತಿಪಾದ್ಯಗಳಾಗಿವೆ ಮತ್ತು ಅಂಬಯೋ ಯಂತ್ಯಧ್ವಬಿರಿತ್ಯಾಪೋ ವಾ ಅಂಬಯಃ ಎನ್ನುವ ಬ್ರಾಹ್ಮಣದಿಂದಲೂ ಜಲಗಳು ಮಾತೃಭೂತಗಳೆಂದು ಹಿ ಶಬ್ದದಿಂದ ಹೇಳಿದರು) ಜಗತ್ತಿಗೆ ಕಾರಣಗಳಾಗಿರುವುದರಿಂದ ಜಲಗಳು ಮಾತೃಗಳೆನಿಸುತ್ತವೆ. ಮತ್ತು ಜಗತ್ತಿಗೆ ಜಾಮಯಃ =ಸಹೋದರಗಳೂ ಆಗಿರುತ್ತವೆ. (ಹೇಗೆಂದರೆ) ಯಾವ ಕಾರಣದಿಂದ ಜಲಗಳಿಂದ ಕೂಡಿಯೇ ಅಭಿವೃದ್ಧಿಯನ್ನು ಹೊಂದುತ್ತದೋ ಪಾರ್ಥಿವಾದಿ ಭಾಗಚತುಷ್ಟಯಾತ್ಮಕವಾದ ಜಗತ್ತು ಅಭಿವೃದ್ಧಿಯನ್ನು ಹೊಂದುವಾಗ ಅಧಿಕವಾದ ಜಲಭಾಗದಿಂದ ಕೂಡಿಕೊಂಡೇ ಅಭಿವೃದ್ಧಿಯನ್ನು ಹೊಂದುತ್ತದೋ,) ಆದಕಾರಣ ಜಲಗಳು ಸಹೋದರಗಳೆನಿಸುತ್ತವೆ. (೨) (ಅಧ್ವರೀಯತಾಂ ಇತ್ಯಾದಿಗಳನ್ನು ವ್ಯಾಖ್ಯಾನ ಮಾಡುತ್ತಾರೆ.) (ಯದ್ಯಪಿ ಅಧ್ವರೀಯತ್ ಶಬ್ದವು ಯಜ್ಞವನ್ನು ಇಚ್ಛಿಸುವವರನ್ನು ಹೇಳುತ್ತದೆ. ಆದಾಗ್ಯೂ ಇಚ್ಛಾಸಮಯದಲ್ಲಿ ಸೋಮಸವನವಿಲ್ಲದಿದ್ದ ಪ್ರಯುಕ್ತ ಪೃಂಚತೀರ್ಮಧುನಾ ಎಂದು ಹೇಳಿದ ಸೋಮ ಸಂಬಂಧವು ಕೂಡುವುದಿಲ್ಲ. ಸೋಮಸವನಕಾಲದಲ್ಲಿ ಆದರೂ ಯಜ್ಞವು ಉಂಟಾಗಿರುವುದರಿಂದ ಇಚ್ಛೆಯೇ ಕೂಡುವುದಿಲ್ಲ. ಆದಕಾರಣ ಇಚ್ಛೆಯಿಂದ ಕರಣವನ್ನು ಉಪಲಕ್ಷಣಯಾ ಸ್ವೀಕರಿಸಿ ಅಧ್ವರಂ ಕುರ್ವತಾಂ ಎಂದು ಹೇಳಿರುವರು. ಯಾಗವನ್ನು ಮಾಡುವವರಿಗೆ ಪಯಃ=ಕ್ಷೀರವನ್ನೂ ಸೋಮವನ್ನೂ, (ಪೃಚೀಸಂಪರ್ಕೇ) ಸಂಪರ್ಕಿಸುವ,

(ಪಯಸ್ಸಿನಿಂದ ಸಂಬದ್ಧಗಳಾಗುವ) ನದಿಯಲ್ಲಿರತಕ್ಕ ಜಲಗಳು ಮಾರ್ಗಗಳಿಂದ ಹೋಗುತ್ತವೆ. (ತಟಾಕಾದಿಗಳ ಜನಕ್ಕೆ ಸ್ವತಃ ಗಮನವಿಲ್ಲ. ಮಾರ್ಗಗಳಿಂದ ಗಮನವನ್ನು ಹೇಳಿದುದರಿಂದ ನದಿಯಲ್ಲಿರತಕ್ಕ ಜಲಗಳೇ ವಿವಕ್ಷಿತಗಳು.) ಇಲ್ಲಿ ಜಡಭೂತಗಳಾದ ಜಲಗಳ ಸ್ತುತಿಯು ಕೂಡದಿರುವುದರಿಂದ ಅಭಿಮಾನಿನಯನ್ಯಾಯದಿಂದಲೂ ದೇವೀಃ ಎಂದು ಶ್ರುತವಾದುದರಿಂದಲೂ ಅಪಃ ಎಂಬ ಪದದಿಂದ ಅಬ್ದೇವತೆಗಳನ್ನೂ ಶ್ರೀ ಹರಿಯ ಸ್ತ್ರೀರೂಪಗಳನ್ನೂ ಇಟ್ಟುಕೊಳ್ಳಬೇಕು.) ||೧೬||

ಋ || (೨೪೭) ಅಮೂರ್ಯಾ ಉಪ ಸೂರ್ಯೇ ಯಾಭಿರ್ವಾ ಸೂರ್ಯ ಸಹ। ತಾ ನೋ ಹಿನ್ವಂತ್ವಧ್ವರಂ ||೧೭||

ಅ || ಯಾಃ ಅಮೂಃ=ಯಾವ ಈ ಜಲಗಳು, ಉಪಸೂರ್ಯೇ=ಸೂರ್ಯನ ಸಮೀಪದಲ್ಲಿ, ಇರುತ್ತವೋ, ವಾ ಸೂರ್ಯ=ಸೂರ್ಯನೂ ಕೂಡ, ಯಾಭಿಃ ಸಹ=ಯಾವ ಜಲಗಳಿಂದ ಕೂಡಿರುತ್ತಾನೋ (ಸದಾ ಸೂರ್ಯನಿಂದ ಕೂಡಿಯೇ ಇರುತ್ತವೋ) ತಾಃ=ಅಂತಹ ಜಲಗಳು, ನಃ=ನಮ್ಮ, ಅಧ್ವರಂ=ಯಜ್ಞವನ್ನು ಹಿನ್ವಂತು=(ಹಿಗತೌ ವೃದ್ಧೌಚ ಎಂಬ ಧಾತು ವ್ಯಾಖ್ಯಾನದಿಂದ) ಗಚ್ಛಂತು=ಹೊಂದಲಿ ಮತ್ತೂ ಅಭಿವೃದ್ಧೀಕರಿಸಲಿ. ||೧೭||

ಭಾ || ಯಾಃ ಸಮೀಪಸ್ಥಾಃ ಸೂರ್ಯಸ್ಯ ಸಹಿತಾ ಅಪಿ ||೧೭||

ಅ || ಯಾವ ಜಲಗಳು ಸೂರ್ಯನ ಸಮೀಪದಲ್ಲಿಯೇ ಇರುತ್ತವೋ, ಮತ್ತೂ ಸೂರ್ಯನು ಯಾವ ಜಲಗಳಿಂದ ಕೂಡಿಯೇ ಇರುತ್ತಾನೋ ಮತ್ತು ಸೂರ್ಯನಿಂದ ಸಹಿತಗಳಾಗಿಯೇ ಸದಾ ಇರುತ್ತವೋ ಎಂದು ಜಲಗಳಿಗೂ ಸೂರ್ಯನಿಗೂ ಅನ್ಯೋನ್ಯ ಸಾಹಿತ್ಯವನ್ನು (ಪರಸ್ಪರ ಒಟ್ಟಿಗೆ ಇರುತ್ತವೆ ಎಂದು) ಹೇಳಿದುದರಿಂದ ಅದರ ತಾತ್ಪರ್ಯವು ಸಹಿತಾ ಅಪಿ ಎಂದು ಏವಂಚ (ಅಥವಾ ತಾತ್ಪರ್ಯಾರ್ಥಪರ ವ್ಯಾಖ್ಯಾನಕ್ಕಿಂತ ದ್ವಿತೀಯ ಪಾದಕ್ಕೆ ಸಾಕ್ಷಾದ್ವ್ಯಾಖ್ಯಾನವೇ ಸ್ವರಸವು. ಸಃ ಹಿ ತಾಃ ಎಂದು ಪದಚ್ಛೇದವು.) ಆ ಸೂರ್ಯನೂ ಕೂಡ ಆ ಜಲಗಳನ್ನು ಹೊಂದಿಯೇ ಸದಾ ಇರುತ್ತಾನೆ. ಪ್ರಸಿದ್ಧವು. ||೫೭||

ಋ || (೨೪೭) ಅಪೋ ದೇವೀರುಪಹ್ವಯೇ ಯತ್ರ ಗಾವಃ ಪಿಬಂತಿ ನಃ । ಸಿಂಧುಭ್ಯಃ ಕರ್ತ್ವಂ ಹವಿಃ । ||೧೮||

ಅ || ಯತ್ರ=ಯಾವ ಜಲಗಳನ್ನು, ನಃ=ನಮ್ಮದ್ದಾದ, ಗಾವಃ=ಗೋವುಗಳು, ಪಿಬಂತಿ=ಕುಡಿಯುತ್ತವೋ, ಅಪಃ ದೇವೀಃ=ಅಂತಹ ಜಲಾಭಿಮಾನಿ ದೇವಿಯರನ್ನು (ನಾನು) ಉಪಹ್ವಯೇ=ಕರೆಯುತ್ತೇನೆ. (ಏಕೆಂದರೆ) (ಯಾವ ಕಾರಣದಿಂದ) ನಃ=ನಮ್ಮ, ಹವಿಃ=ಸೋಮ ಚರು ಪುರೋಡಾಶ ಮೊದಲಾದ ಹವಿಸ್ಸು, ಸಿಂಧುಭ್ಯಃ=ನದ್ಯಭಿಮಾನಿ ದೇವತೆಗಳ ಉದ್ದಿಶ್ಯ ಅಥವಾ ನದ್ಯಾದಿಗಳ ಉದಕದಿಂದ ಸೋಮಾದಿಗಳನ್ನು ಮಾಡುವುದರಿಂದ ಅವರಿಗಾಗಿ, ಕರ್ತ್ವಂ=ಕಾರ್ಯವು ಆದಕಾರಣ ನಾನು ಕರೆಯುತ್ತೇನೆ. ||೧೮||

ಭಾ || ಹ್ವಯಾಮಿ ತಾ ಯಾಃ ಪಿಬಂತಿಗಾವೋ ನಃ ಸರ್ವಥಾ ಹವಿಃಕಾರ್ಯಂ ನದೀಭಃ ||೧೮||

ಅ || ನಮ್ಮ ಗೋವುಗಳು ಯಾವ ಜಲಗಳನ್ನು ಕುಡಿಯುತ್ತವೋ, ಅಂತಹ ಜಲಾಭಿಮಾನಿ ದೇವಿಯರನ್ನು

ಕರೆಯುತ್ತೇವೆ. ಏಕೆಂದರೆ ಸೋಮ ಮೊದಲಾದ ಎಲ್ಲಾ ಹವಿಸ್ಸುಗಳನ್ನು ನದ್ಯಭಿಮಾನಿ ದೇವತೆಗಳ ಉದ್ದಿಶ್ಯ ಕರ್ತವ್ಯವು. ||೧೮||

ಅವ || ಈ ಋಕ್ಕುಪುರ ಉಷ್ಣಿಕ್ ಛಂದಸ್ಕವು. ಉಷ್ಣಿಕ್ ವಿಶೇಶ ಛಂದಸ್ಕವು. ಯಾವ ಋಕ್ಕಿನ ಆದ್ಯಪಾದದಲ್ಲಿ ೧೨ ಅಕ್ಷರಗಳೋ, ೨ ಪಾದಗಳಲ್ಲಿ ೮ ಅಕ್ಷರಗಳೋ, ಅದು ಪುರಲುಷ್ಣಿಕ್ ಛಂದಸ್ಸು. ಉಷ್ಣಿಕ್ ಛಂದಸ್ಸಿಗೆ ಅಭಿಮಾನಿನಿಯು ಗೌರೀದೇವಿಯು||

ಋ || (೨೪೮) ಅಪ್ಸ್ವಂತರಮೃತಮಪ್ಸು ಭೇಷಜಮಪಾಮುತ ಪ್ರಶಸ್ತಯೇ | ದೇವಾ ಭವತ ವಾಜಿನಃ || ||೧೯||

ಅ || ಅಮೃತಂ ಮರಣ ನಿವೃತ್ತಿಗೆ ಕಾರಣವಾದ ಜಲಶಾಯಿ ರೂಪ ದ್ರವ್ಯವು. ಅಪ್ಸು=ಜಲಗಳ ಮಧ್ಯದಲ್ಲಿ ಅಂತಃ =ಅಂತರ್ಹಿತವಾಗಿದೆ. ಭೇಷಜಂ ರೋಗ ನಿವಾರಕ ದ್ರವ್ಯವೂ ಕೂಡ, ಅಪ್ಸು=ಜಲಗಳಲ್ಲಿಯೇ ಇದೆ. ಅಪಾಮುತ=ಆ ಜಲಾಭಿಮಾನಿ ದೇವಿಯರನ್ನೇ ಪ್ರಶಸ್ತಯೇ ಪ್ರಶಂಸಾ ಮಾಡುವುದಕ್ಕಾಗಿ ವಾಜಿನಃ=ಅನ್ನವುಳ್ಳದೇವಾಃ=ದೇವತೆಗಳು, ಭವತ=(ನಮಗೆ ಸಹಾಯಕರು) ಆಗಲಿ. (ಅಂದರೆ ಜಲಾಭಿಮಾನಿ ದೇವತೆಗಳನ್ನು ಪ್ರಶಂಸೆ ಮಾಡತಕ್ಕ ನಮ್ಮ ವಾಕ್ ಮನಸ್ಸು ಮೊದಲಾದವುಗಳನ್ನು ಆ ದೇವತೆಗಳು ಪ್ರೇರೇಪಿಸಲಿ) ||೧೯||

ಭಾ || ತಾಸ್ವಂತರದೃಶ್ಯಮಮೃತಂ ಸ್ಥಿತಂ | ಅಪಾಮೇವ ಪ್ರಶಂಸಾರ್ಥಂ ಸಹಾಯಾಃ ಸಂತು ನಃ ಸುರಾಃ || ||೧೯||

ಅ || (ನವಿದ್ಯತೇ ಮೃತಂ ಮೃತಿರ್ಯಸ್ಮಾತ್ಕಾರಣಾತ್ ತದಮೃತಂ ಎಂಬವ್ಯುತ್ಪತ್ತಿಯಿಂದ) ಮರಣಾಭಾವಕ್ಕೆ ಕಾರಣವಾದ ಯಾವುದು ಜಲಶಾಯಿರೂಪ ದ್ರವ್ಯವೋ ಅಂತಹ ಜಲಶಾಯಿರೂಪವಾದ ದ್ರವ್ಯವು ಜಲಗಳ ಮಧ್ಯದಲ್ಲಿ ಇದೆ. ಅದು ಆ ದೃಶ್ಯವಾಗಿಯೇ ಇದೆ. (ಇದು ಕಂಪಪಸೂಚಿತವಾದ ಅರ್ಥವು) ಅಥವಾ ಅಮೃತವು ಜಲಗಳಲ್ಲಿದೆ. (ಹೇಗೆಂದರೆ) ಅಂತರ್ಹಿತವಾಗಿದೆ. ಅದೃಶ್ಯವಾಗಿದೆ. ಆ ಜಲಾಭಿಮಾನಿ ದೇವತೆಗಳನ್ನೇ ಪ್ರಶಂಸೆಮಾಡುವುದಕ್ಕಾಗಿ ದೇವತೆಗಳು ನಮಗೆ ಸಹಾಯಕರಾಗಲಿ. (ಭವಂತು ಎಂದು ಪ್ರಥಮ ಪುರುಷ ಹೇಳದೆ ವ್ಯತ್ಯಾಸವಾಗಿ ಭವತ ಎಂದು ಮಧ್ಯಮ ಪುರುಷ ಪ್ರಯೋಗವು ಕೇವಲ ಅಬಭಿಮಾನಿ ದೇವತೆಗಳೇ ದೇವತೆಗಳೆಂದು ತಿಳಿಸುವುದಕ್ಕಾಗಿ) ||೧೯||

ಅವ || ತ್ರಿ ಶಿರಸರು, ತ್ವಾಷ್ಟ್ರರು, ಸಿಂಧು ದ್ವೀಪರು ಅಥವಾ ಅಂಬರೀಷರು ಇವರಿಂದ ದೃಷ್ಟವಾದ ಈ ನಾಲ್ಕು ಋಕ್ಕುಗಳಿಗೆ ಮೇಧಾತಿಥಿಗಳೂ ಋಷಿಗಳು. ಅದರಲ್ಲಿ ಅಪಶ್ಚ ಎಂಬ ಅಂತಿಮ ಪಾದಕ್ಕೆ ಕೇವಲ ಮೇಧಾತಿಥಿಗಳು ಋಷಿಗಳು. ೩೨ ಅಕ್ಷರಗಳಿದ್ದುದರಿಂದ ಅನುಷ್ಛಂದಸ್ಕವು

ಋ || (೨೪೯) ಅಪ್ಸು ಮೇ ಸೋಮೋ ಅಬ್ರವೀದಂತರ್ವಿಶ್ವಾನಿ ಭೇಷಜಾ |

ಅಗ್ನಿಂ ಚ ವಿಶ್ವಶಂಭುವಮಾಪಶ್ಚ | ವಿಶ್ವಭೇಷಜೀಃ ||೨೦||೧೧||

ಅ ॥ ಸೋಮಃ=ಸೋಮರಾಜನು, ಅಪ್ಸು ಅಂತಃ=ನೀರಿನೊಳಗೆ, ವಿಶ್ವಾನಿ ಭೇಷಜಾ=ಸಮಸ್ತ ಔಷಧಗಳೂ (ಇರುತ್ತವೆ ಎಂದೂ,) ವಿಶ್ವಶಂಭುವಂ=ಸಂಪೂರ್ಣ ಸುಖಗಳಿಗೆ ಆಶ್ರಯನಾದ, ಅಗ್ನಿಂಚ=ಅಗ್ನಿಯನ್ನೂ ಕೂಡ, (ನೀರಿನೊಳಗೆ ಇರತಕ್ಕವನನ್ನಾಗಿಯೂ) ಅಬ್ರವೀತ್=ಹೇಳಿದನು. ಆಪಶ್ಚ=ಜಲಗಳು ವಿಶ್ವಭೇಷಜೀಃ=(ವಿಶ್ವಾನಿ ಭೇಷಜಾನಿ ಯಾಸು ತಾಃ , ಎಂಬ ವಿಗ್ರಹದಿಂದ) ಸಮಸ್ತ ಔಷಧಗಳುಳ್ಳವುಗಳೆಂದೂ ಅಥವಾ ಜಲಗಳು ಸಮಸ್ತ ಔಷಧ ರೂಪಗಳೆಂದೂ, ಅಬ್ರವೀತ್=ಹೇಳಿದನು. ॥೨೦॥೧೧॥

ಭಾ ॥ **ತಾತ್ಪರ್ಯಾರ್ಥಂ ಪುನರ್ವಾಕ್ಯಂ ಸುಖಾಧಾರೋ ಹುತಾಶನಃ** ॥೨೦॥೧೧॥

ಅ ॥ (ಹಿಂದಿನ ಋಕ್ಕಿನಲ್ಲಿ ಅಪ್ಸು ಭೇಷಜಂ ಇತ್ಯಾದಿಗಳಲ್ಲಿ ಹೇಳಿದುದನ್ನೇ ಇಲ್ಲಿ ಆಪಶ್ಚ ವಿಶ್ವಬೇಷಜೀಃ ಇತ್ಯಾದಿ ಪ್ರಕಾರ ತಿರುಗಿ ಏತಕ್ಕೆ ಹೇಳಿದ್ದು ಎಂದರೆ) ಈ ವಿಷಯದಲ್ಲಿ ಮುಖ್ಯ ತಾತ್ಪರ್ಯವಿದೆ ಎಂದು ತಿಳಿಸುವುದಕ್ಕಾಗಿ ಪುನಃ ಹೇಳಿದ್ದು. (ಮತ್ತು ಪ್ರಮಾಣೋಪನ್ಯಾಸ, ಸಮಸ್ತ ಔಷಧ ರೂಪತ್ವರೂಪವಾದ ಅರ್ಥಾಂತರ, ಇತ್ಯಾದಿ ಉದ್ದೇಶದಿಂದಲೂ ಪುನಃ ಪುನಃ ಹೇಳಿದುದರಿಂದ ಪುನರುಕ್ತಿಯಿಲ್ಲವೆಂದೂ ತಿಳಿಯಬೇಕು) ಸೋಮರಾಜನು ಇದನ್ನು ಹೇಳಿದನು. ಏನು ಹೇಳಿದನೆಂದರೆ ನೀರಿನೊಳಗೆ ಸಮಸ್ತ ಔಷಧಗಳೂ ಇವೆ. ಅಂದರೆ ಸಮಸ್ತ ಔಷಧಗಳಿಗೂ ಉದಕವೇ ಉಪಾದಾನ ಕಾರಣವಾಗಿರುವುದರಿಂದ ಕಾರಣರೂಪದಿಂದಲೂ ಔಷಧಗಳು ಜಲಗಳಲ್ಲಿವೆ ಎಂದು ಹೇಳಿದನು.) (ಅಗ್ನಿಂಚ ವಿಶ್ವಶಂಭುವಂ ಎನ್ನುವುದಕ್ಕೆ ಅರ್ಥ ಹೇಳುತ್ತಾರೆ.) ಅಗ್ನಿಯು ಸುಖಕ್ಕೆ ಆಶ್ರಯನು. ಅಂದರೆ ಅಗ್ನಿಯು ಸಮುದ್ರದಲ್ಲಿದ್ದ ಪ್ರಯುಕ್ತ ಪೂರ್ಣ ಸುಖಾಶ್ರಯನಾದ ಅಗ್ನಿಯನ್ನು ನೀರಿನೊಳಗೆ ಇರುತ್ತಾನೆಂದೂ ಸೋಮನು ಹೇಳಿದನು) ॥೨೦॥೧೧॥

ಅವ ॥ ಈ ಋಕ್ಕಿಗೆ ಪ್ರತಿಷ್ಠಾ (ಗಾಯತ್ರೀ ವಿಶೇಷ) ಛಂದಸ್ಸು ಯಾವ ಋಕ್ಕಿನ ೩ ಪಾದಗಳಲ್ಲಿ ಕ್ರಮವಾಗಿ, ೮ ಅಕ್ಷರ, ೭ ಅಕ್ಷರ, ೬ ಅಕ್ಷರಗಳು ಇರುತ್ತವೆಯೋ ಆ ಛಂದಸ್ಸು ಪ್ರತಿಷ್ಠಾ ಎನಿಸುತ್ತದೆ.

ಋ ॥ **(೨೫೦) ಆಪಃ ಪೃಣೀತ ಭೇಷಜಂ ವರೂಥಂ ತನ್ವೇ ೩ ಮಮ । ಜ್ಯೋಕ್ಚ ಸೂರ್ಯಂ ದೃಶೇ** ॥೨೧॥

ಅ ॥ ಹೇ ಆಪಃ=ಎಲೋ ಜಲಗಳೇ ಜಲಾಭಿಮಾನಿಗಳೇ, (ನನಗಾಗಿ) ಭೇಷಜಂ=ಔಷಧವನ್ನು, ಪೃಣೀತ=ಪೃಣ ದಾನೇ) ಕೊಡಿರಿ. ಮಮ ತನ್ವೇ=ನನ್ನ ಶರೀರದ, ವರೂಥಂ=ರಕ್ಷಣೆಯನ್ನು ಕೂಡ (ಕೊಡಿರಿ) ಅಥವಾ ವರೂಥಂ ಎನ್ನುವುದು ಭೇಷಜಂ ಎನ್ನುವುದಕ್ಕೇನೇ ವಿಶೇಷಣವು. ಈ ಕಲ್ಪದಲ್ಲಿ ತನ್ನ ಶರೀರಕ್ಕೆ ರಕ್ಷಕವಾದ ಔಷಧವನ್ನು ಎಂದರ್ಥವು. ಸೂರ್ಯಂ=[ಯಾ ಪ್ರಾಪಣೇ] ಬ್ರಹ್ಮಾದಿಗಳಿಂದ ಪ್ರಾಪ್ಯನಾದ, ಶ್ರೀವಿಷ್ಣುವನ್ನು, ದೃಶೇ=ನೋಡುವುದಕ್ಕಾಗಿ ಅಥವಾ ಸೂರ್ಯಂ=ಶ್ರೀವಿಷ್ಣುವಿನ, ದೃಶೇ=ಜ್ಞಾನಕ್ಕಾಗಿ, ಜ್ಯೋಕ್ಚ=ಜ್ಞಾನವನ್ನು ಕೂಡ, ಪೃಣೀತ=[ಪೃಣ ಪ್ರೀಣನೇ] ಕೊಡಿರಿ. ॥೨೧॥

ಭಾ ॥ **(೧) ವರೂಥಂ ಗುಪ್ತಿರುದ್ದಿಷ್ಟಾ ಜ್ಯೋತಿರ್ವಿಷ್ಣುದೃಶೇ ತಥಾ ॥ (೨) ಸೂರಿಪ್ರಾಪ್ಯೋ ಯತೋ ವಿಷ್ಣುಃ ಸೂರ್ಯ ಇತ್ಯಭಿಧೀಯತೇ । ಪೃಣ ದಾನೇ** ॥೨೧॥

ಅ ॥ (೧) (ವರೂಥ ಶಬ್ದಾರ್ಥವನ್ನು ಹೇಳುತ್ತಾರೆ.) ವರೂಥ ಶಬ್ದದಿಂದ ರಕ್ಷಣೆಯು ಹೇಳಲ್ಪಡುತ್ತದೆ. (ಮತ್ತು

ವರೂಥಂ ಎನ್ನುವುದಕ್ಕೆ ರಕ್ಷಕವೆಂದು ಅರ್ಥವಾಗುವುದು) (ಉತ್ತರಾರ್ಥವನ್ನು ವ್ಯಾಖ್ಯಾನ ಮಾಡುತ್ತಾರೆ) ವಿಷ್ಣುವನ್ನು ನೋಡುವುದಕ್ಕಾಗಿ ಅಥವಾ ವಿಷ್ಣುವಿನ ದರ್ಶನಕ್ಕಾಗಿ ಜ್ಞಾನವನ್ನು (ಕೊಡಿರಿ) (೨) ಸೂರ್ಯ ಶಬ್ದವನ್ನು ಶ್ರೀ ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಾರೆ.) ಯಾವ ಕಾರಣದಿಂದ ಶ್ರೀ ವಿಷ್ಣುವು ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಹೊಂದಲ್ಪಡುವನೋ, ಆದ ಕಾರಣ ಸೂರ್ಯನೆಂದು ಹೇಳಿಸಲ್ಪಡುತ್ತಾನೆ. (ಸೂರಿ ಶಬ್ದ)ದಿಂದ ಪ್ರಾಪ್ಯ ಎಂಬ ಅರ್ಥದಲ್ಲಿ ತದ್ಧಿತವಾದ ಯ ಪ್ರತ್ಯಯವು.) (ಪ್ರಣೇತ ಎನ್ನುವುದರ ಧಾತ್ವರ್ಥವನ್ನು ಹೇಳುತ್ತಾರೆ.) ಪೃಣ ಧಾತುವು ದಾನ ಎಂಬ ಅರ್ಥದಲ್ಲಿಯೂ ಇದೆ. ||೨೧||

ಅವ || ೩ ಋಕ್ಕುಗಳು ಅನುಷ್ಟುಪ್ ಛಂದಸ್ಕಗಳು

ಋ || (೨೫೧) ಇದಮಾಪಃ ಪ್ರವಹತ ಯತ್ಕಿಂಚ ದುರಿತಂ ಮಯಿ । ಯದ್ವಾಹಮಭಿ ದುದ್ರೋಹ ಯದ್ವಾ ಶೇಪ ಉತಾನೃತಂ ||೨೨||

ಅ || ಹೇ ಆಪಃ=ಎಲೋ ಜಲಾಭಿಮಾನಗಳೇ, ಯತ್ಕಿಂಚ ಮಯಿ ದುರಿತಂ=ಯಾವುದಾದರೂ ನನ್ನಲ್ಲಿ ದುರಿತವಿದೆಯೋ, ಇದಂ=ಈ ಎಲ್ಲಾ ನಮ್ಮ ಪಾಪವನ್ನು ಪ್ರವಹತ=(ವಹ ಪ್ರಾಪಣೇ)(ನದೀ ಪ್ರವಹತಿ ಎನ್ನುವಲ್ಲಿ ನೀರು ತನ್ನ ಸ್ಥಾನದಿಂದ ಬೇರೆ ಕಡೆಗೆ ಹೋಗುತ್ತದೆ ಎಂದು ಪ್ರತೀತವಾಗುವುದರಿಂದ ಪ್ರವಹತ ಎನ್ನುವಲ್ಲಿಯೂ ಆ ಅರ್ಥವನ್ನೇ ಇಟ್ಟುಕೊಳ್ಳಬೇಕು. ತಥಾ ಚ) ಬೇರೆ ಕಡೆಗೆ ಹೋಗುವ ಹಾಗೆ ಮಾಡಿರಿ. ತೆಗೆಯಿರಿ. (ಯಾವ ಪಾಪವನ್ನು ಎಂದರೆ) ಅಹಂ=ನಾನು, ಯದ್ವಾ ಅಭಿದುದ್ರೋಹ=ಯಾವುದಾದರೂ ಪ್ರಾಣಿಗಳ ಹಿಂಸೆಯನ್ನು ಮಾಡಿರುವೆನೋ, (ದ್ರುಹ ಜಿಘಾಂಸಾಯಾಂ ಎಂಬ ಧಾತು ವ್ಯಾಖ್ಯಾನದಿಂದ ಪ್ರಾಣಿಗಳನ್ನು ಕೊಲ್ಲಬೇಕೆಂಬ ಇಚ್ಛೆಯಿಂದುಂಟಾದ ಪಾಪವನ್ನು) (ಅಥವಾ ಪ್ರಾಣಿಗಳ ಹಿಂಸೆಯಿಂದುಂಟಾದ ಪಾಪವನ್ನು) (ಇದು ತಾತ್ಪರ್ಯಾರ್ಥವು) ಯದ್ವಾ=ಅಥವಾ, ಶೇಪೇ (ಶೇಪಶ್ಶೇಪೌ ಚ ಶೇಫಶ್ಚ ಶೇಫಶ್ಚ ಶೇಫಂ ಪ್ರೋಕ್ತಂ ಚ ಶೇಫಸಿ ಎಂದು ದ್ವಿರೂಪ ಕೋಶದಲ್ಲಿ ಹೇಳಿದುದರಿಂದ ಶೇಪ ಶೇಫ ಶಬ್ದಗಲು ಪರ್ಯಾಯಗಳು ಭಗೋ ಯೋನಿರ್ದ್ವಯೋಃ ಶಿಶ್ನೋ ಮೇಢ್ರೋ ಮೇಹನಶೇಫಸೀ ಎಂದು ಅಮರ ಕೋಶದಿಂದ ಇವು ಪರ್ಯಾಯ ಶಬ್ದಗಳು. ಏವಂಚ) ಶೇಪನಿಮಿತ್ತವಾದ ಪಾಪವನ್ನು, ಏವಂಚ ಶಿಶ್ನದಿಂದುಂಟಾದ (ಗುಹ್ಯೇಂದ್ರಿಯದಿಂದುಂಟಾದ) ಪಾಪವನ್ನು, ಉತ=ಮತ್ತು, ಅನೃತಂ=ಅನೃತ ವಚನದಿಂದುಂಟಾದ ಪಾಪವನ್ನು ಅವೆಲ್ಲವನ್ನು ಪ್ರವಹತ=ತೆಗೆಯಿರಿ. ನಾಶಗೊಳಿಸಿರಿ. ||೨೨||

ಭಾ || ಅಖಿಲಂ ಪಾಪಮಾಪಃ ಪ್ರವಹತಾಪಿ ನಃ । ಹಿಂಸಾಜಂ ಶೇಫಜಂ ಚೈವ ತಥೈ ವಾನೃತಸಂಭವಂ ||೨೨||

ಅ || ಎಲೋ ಜಲಾಭಿಮಾನಿಗಳೇ, ಪ್ರಾಣಿಗಳ ಹಿಂಸೆಯಿಂದುಂಟಾದ, ಪಾಪವನ್ನು, ಗುಹ್ಯೇಂದ್ರಿಯದಿಂದುಂಟಾದ ಪಾಪವನ್ನು, ಹಾಗೆಯೇ ಅನೃತ ವಚನದಿಂದುಂಟಾದ ಪಾಪವನ್ನು ಈ ಎಲ್ಲಾ ನಮ್ಮ ಪಾಪವನ್ನು ತೆಗೆಯಿರಿ. ನಾಶಗೊಳಿಸಿರಿ. ||೨೨||

ಋ || (೨೫೨) ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ ।

ಪಯಸ್ವಾನಗ್ನ ಆಗಹಿ ತಂ ಮಾ ಸಂಸೃಜ ವರ್ಚಸಾ ||೨೩||

ಅ || ಹೇ ಆಪಃ=ಎಲೋ ಅಬ್ದೇವತೆಗಳೇ, ಅದ್ಯ=ಈಗ (ನಾವು ಯಾವ ಕಾರಣದಿಂದ ನಿಮ್ಮನ್ನು) ಅನುಅಚಾರಿಷಂ=ಅನುಸರಿಸಿ ಸಂಚರಿಸಿರುವೆನೋ, (ಅಂದರೆ ನಿಮ್ಮ ಭೃತ್ಯರಾಗಿರುತ್ತೇವೋ,) ಹಿ=ಯಾವ ಕಾರಣದಿಂದ ರಸೇನ=(ರಸಃ ಸಾರೋ ವರಶ್ರೇತಿ ಶಬ್ದಾಃ ಪರ್ಯಾನುವಾಚಕಾಃ ಎನ್ನುವ ಪ್ರಮಾಣದಿಂದ) ಶ್ರೇಷ್ಠವಾದ ಸುಖದಿಂದ, ಸಮಗಸ್ಮಹಿ=ಸಂಗತರಾಗಿರುತ್ತೇವೋ, (ಆ ಕಾರಣದಿಂದ) ಅಗ್ನೇ=ಎಲೋ ಅಗ್ನಿಯೇ, (ನೀನು) ಪಯಸ್ವಾನ್=ಜಲಾಭಿಮಾನಿಗಳಿಂದ ಸಹಿತನಾಗಿ, (ಅಗ್ನಿಯು ಸಮುದ್ರದಲ್ಲಿದ್ದ ಪ್ರಯುಕ್ತ ಅಪ್‌ಸಾಹಿತ್ಯವು ಯುಕ್ತವು.) ಆ ಗಹಿ=ನಮ್ಮ ಸಮೀಪಕ್ಕೆ ಬಾ. (ಬಂದು) ತಂ=ಹೀಗೆ ಸ್ತೋತ್ರ ಮಾಡತಕ್ಕ, ಮಾ=ನನ್ನನ್ನು, ವರ್ಚಸಾ=ತೇಜಸ್ಸಿನಿಂದ, (ಬ್ರಹ್ಮ ವರ್ಚಸ್ಸಿನಿಂದ) ಸಮಸೃಜ=ಕೂಡಿಸು. (ಬ್ರಹ್ಮ ವರ್ಚಸ್ಸಿನಿಂದ ಯುಕ್ತನನ್ನಾಗಿ ಮಾಡು.) ||೨೩||

ಭಾ || ರಸೇನ ಸಂಗತಾಶ್ಚ ಸ್ಮೋ ಯಸ್ಮಾದನುಚರಾ ಹಿ ವಃ ||೨೩||

ಅ || ಯಾವ ಕಾರಣದಿಂದ ನಾವು ನಿಮ್ಮ ಭೃತ್ಯರಾಗಿರುತ್ತೇವೋ, ಆದ ಕಾರಣ ಸುಖದಿಂದ ಕೂಡಿದವರಾಗಿರುತ್ತೇವೆ. (ಸಮಗಸ್ಮಹಿ ಎಂಬ ಬಹುವಚನವನ್ನನುಸರಿಸಿ ಅನ್ವಚಾರಿಷಂ ಎಂಬ ಏಕವಚನಾಂತವನ್ನು ಅನುಚರಾ ಎಂದು ಬಹುವಚನಾಂತವಾಗಿ ಭಾಷ್ಯದಲ್ಲಿ ವ್ಯಾಖ್ಯಾತವಾಗಿದೆ.) ||೨೩||

ಋ || (೨೫೩) ಸಂ ಮಾಽಗ್ನೇ ವರ್ಚಸಾ ಸೃಜ ಸಂಪ್ರಜಯಾ ಸಮಾಯುಷಾ ।

ವಿದ್ಯುರ್ಮೇ ಅಸ್ಯ ದೇವಾ ಇಂದ್ರೋ ವಿದ್ಯಾತ್ಸಹ ಋಷಿಭಿಃ || ||೨೪||೧೨||೨೩||

ಅ || ಅಗ್ನೇ=ಎಲೋ ಅಗ್ನಿಯೇ, ಮಾ=ನನ್ನನ್ನು ವರ್ಚಸಾ=ಬ್ರಹ್ಮವರ್ಚಸ್ಸಿನಿಂದಲೂ ಸಂಸೃಜ=ಕೂಡಿಸು ಪ್ರಜಯಾ=ಸತ್ಸಂತಾನದಿಂದಲೂ, ಸಂಸೃಜ=ಕೂಡಿಸು. ಆಯುಷಾ=ಆಯುಷ್ಯದಿಂದಲೂ, ಸಂಸೃಜ=ಕೂಡಿಸು. ದೇವಾಃ =ಅಗ್ನ್ಯಾದಿ ದೇವತೆಗಳು, ಅಸ್ಯ ಮೇ= (ದ್ವಿತೀಯಾ ವಿಭಿಕ್ತ್ಯರ್ಥದಲ್ಲಿ ಷಷ್ಠೀ ವಿಭಕ್ತಿಯು.) ಈ ನನ್ನನ್ನು ವಿದ್ಯುಃ =(ಅಂತರ್ಣೀತಣಿಚ್) ತಿಳಿಸಿಯಾರು. (ವಿದ್ವಾಂಸರನ್ನಾಗಿಯೂ ಮಾಡಿಯಾರು.) ಋಷಿಭಿಸ್ಸಹ=ಋಷಿಗಳಿಂದೊಡಗೂಡಿ, ಇಂದ್ರಃ=ಇಂದ್ರನೂ ಕೂಡ, ಅಸ್ಯ ಮೇ=ಈ ನನ್ನನ್ನು ವಿದ್ಯಾತ್=ವಿದ್ವಾಂಸನನ್ನಾಗಿ ಮಾಡಿಯಾನು. ಅಥವಾ ದೇವಾಃ =ಯಾವ ದೇವತೆಗಳು, ವಿದ್ಯುಃ=(ಸಮಸ್ತವನ್ನು) ತಿಳಿದಿರುವರೋ, ಇಂದ್ರಃ=ಯಾವ ಇಂದ್ರನು, ವಿದ್ಯಾತ್=ಸಮಸ್ತವನ್ನು) ತಿಳಿದಿರುವನೋ (ಅವರೆಲ್ಲರೂ ಇಂದ್ರನೂ ಕೂಡ) ಋಷಿಭಿಸ್ಸಹ=ಋಷಿಗಳಿಂದೊಡಗೂಡಿ, ಅಸ್ಯ ಮೇ=ಈ ನನಗೆ, ಸಂತು=ಸರ್ವದಾ ನನಗಾಗಿ ಇರಲಿ. (ಅಂದರೆ ಸರ್ವದಾ ನನಗೆ ಉಪಕಾರಕರಾಗಿರಲಿ.) ಅಥವಾ, ದೇವಾಃ=ಅಗ್ನ್ಯಾದಿ ದೇವತೆಗಳು, ಅಸ್ಯ ಮೇ=ಈ ನನ್ನನ್ನು ವಿದ್ಯುಃ=(ಕೃಪಾಪಾತ್ರನನ್ನಾಗಿ) ತಿಳಿಯುವರು. (ಅಂದರೆ ತಿಳಿದು ನನ್ನಲ್ಲಿ ಕೃಪೆಯನ್ನು

ಮಾಡಿಯಾರು.) ಇಂದ್ರಃ=ಇಂದ್ರನೂ ಕೂಡ, ಸಹಋಷಿಭಿಃ=ಋಷಿಗಳಿಂದೊಡಗೂಡಿ, ವಿದ್ಯಾತ್=ಕೃಪಾಪಾತ್ರನನ್ನಾಗಿ ತಿಳಿದಾನು. (ತಿಳಿದು ನನ್ನಲ್ಲಿ ಕೃಪೆಯನ್ನು ಮಾಡಿಯಾನು.) ಅಥವಾ ದೇವಾಃ=ದೇವತೆಗಳು, ಅಸ್ಯ ಮೇ=ಈ ನನ್ನಿಂದ ಹೇಳಲ್ಪಟ್ಟದ್ದನ್ನು ವಿದ್ಯುಃ-ಅನುಮೋದಿಸಲಿ. ಇಂದ್ರಃ=ಇಂದ್ರನೂ ಕೂಡ, ಸಹ ಋಷಿಭಿಃ=ಋಷಿಗಳಿಂದೊಡಗೂಡಿ, ವಿದ್ಯಾತ್=ಅನುಮೋದಿಸಲಿ. ||೨೪||೧೨||೨೩||೫||

ಭಾ || **ಕುರ್ಯುರ್ಮಾಮಪಿ ವಿದ್ವಾಂಸಂ ಮದರ್ಥಂ ಸರ್ವದಾ ಸುರಾಃ । ಏನಂ ಮಾಮಿತಿ ವಾರ್ಥ ಸ್ಯಾದನುಜ್ಞಾನಂತು ಚೋದಿತಂ** ||೨೭||೧೨||೪||೫||

ಅ || ಅಗ್ನ್ಯಾದಿ ದೇವತೆಗಳು, ನನ್ನನ್ನು ವಿದ್ವಾಂಸನನ್ನಾಗಿಯೂ ಮಾಡಿಯಾರು. (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಅಗ್ನ್ಯಾದಿ ದೇವತೆಗಳೂ ಇಂದ್ರನೂ ಕೂಡ ಎಲ್ಲರೂ ಸರ್ವದಾ ನನಗಾಗಿ ಆಗಲಿ. ನನಗೆ ಉಪಕಾರಕರಾಗಲಿ) (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ಅಗ್ನ್ಯಾದಿ ದೇವತೆಗಳು ಈ ನನ್ನನ್ನು (ಕೃಪಾಪಾತ್ರನನ್ನಾಗಿ ತಿಳಿದು ಕೃಪೆ ಮಾಡಲಿ.) ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಈ ನಾನು ಹೇಳಿದುದನ್ನು ಅನುಮೋದಿಸಲಿ. ||೨೪||೧೨||೪||೫||

ಅವ || ಕಸ್ಯ ನೂನಂ ಎಂದಾರಂಭಿಸಿ ತ್ವಮಗ್ನೇ ಪ್ರಥಮಃ ಎನ್ನುವುದಕ್ಕಿಂತ ಮೊದಲಿನ ೩ ಋಕ್ಕುಗಳಿಂದ ನ್ಯೂನವಾದ ೧೦೦ ಋಕ್ಕುಗಳಿಗೆ (ಅಂದರೆ ೯೭ ಋಕ್ಕುಗಳಿಗೆ ಶುನಶ್ಶೇಪರು ಋಷಿಗಳು. ಹಾಗಾದರೆ ಶುನಶ್ಶೇಪರಿಗೆ ಶತರ್ಚಿಗಳೆಂದು ಪ್ರಸಿದ್ಧಿ ಹೇಗೆ ಎಂದರೆ ಚತುರ್ಥ ಪಂಚಮ ಮಂಡಲಗಳಲ್ಲಿ ೩ ಋಕ್ಕುಗಳು ಇದರ ಪ್ರಯುಕ್ತ ಶತರ್ಚಿ ಎನ್ನುವುದಕ್ಕೆ ವಿರೋಧವಿಲ್ಲ. ಶುನಶ್ಶೇಪರ ಕಥೆಯು ಬ್ರಾಹ್ಮಣದಲ್ಲಿ ಸ್ಪಲ್ಪವಾಗಿದೆ. ಅದರಲ್ಲಿ ಕಸ್ಯ ಇತ್ಯಾದಿ ೧೫ ಋಕ್ಕುಗಳು. ೩ ವರ್ಗ, ೨೪ನೇ ಸೂಕ್ತವು ಪ್ರಾಯಶಃ ತ್ರಿಷ್ಟುಪ್ ಛಂದಸ್ಕವು. ತ್ರಿಷ್ಟುಪ್ ಛಂದಸ್ಸಿಗೆ ಇಂದ್ರಾಣಿಯು ದೇವತೆಯು. ಅದರಲ್ಲಿ ಈ ಋಕ್ಕು ಪ್ರಜಾಪತಿ ದೇವತಾಕವು.

ಋ || **(೨೫೪) ಕಸ್ಯ ನೂನಂ ಕತಮಸ್ಯಾಮೃತಾನಾಂ ಮನಾಮಹೇ ಚಾರು ದೇವಸ್ಯ ನಾಮ ।**
**ಕೋ ನೋ ಮಹ್ಯಾ ಅದಿತಯೇ ಪುನರ್ದಾತ್ಪಿತರಂ ಚ ದೃಶೇಯಂ ಮಾತರಂ ಚ** ||೧||

ಅ || (ನಾವು) ಕಸ್ಯ= (ಕರೋತೀತಿ ಕಃ ಎಂಬವ್ಯುತ್ಪತ್ತಿಯಿಂದ) ಸರ್ವಕರ್ತನೂ, ಅಮೃತಾನಾಂ = ಮರಣರಹಿತರಾದುದರಿಂದ ಅಮರರೆನಿಸಿದ, ದೇವತೆಗಳ ಮಧ್ಯದಲ್ಲಿ, ಕತಮಸ್ಯ=ಅತಿಶಯ ಸುಖಸ್ವರೂಪನೂ, ಅಥವಾ ಅಮೃತಾನಾಂ=ಮುಕ್ತರಾದ ಬ್ರಹ್ಮಾದಿಗಳ ಸಕಾಶದಿಂದ, ಕತಮಸ್ಯ=ಅತಿಶಯ ಸುಖರೂಪನೂ ಆದ, ದೇವಸ್ಯ=ಶ್ರೀ ವಿಷ್ಣುವಿನ, ಚಾರು=ಮಂಗಲಕರವಾದ, (ಅಂದರೆ ಅರ್ಥಾನು ಸಂಧಾನಪೂರ್ವಕವಾಗಿ ಆವೃತ್ತಿ ಮಾಡಿದರೆ ಮೋಕ್ಷಪ್ರದವಾದ) ನಾಮ=ನಾಮವನ್ನು, ನೂನಂ=ಈಗ, ಮನಾಮಹೇ=(ಮ್ನಾ ಅಭ್ಯಾಸೇ ಎಂಬ ಧಾತು ವ್ಯಾಖ್ಯಾನದಿಂದ) ಪುನಃ ಪುನಃ ಉಚ್ಚರಿಸುತ್ತೇವೆ. (ಸಃ=) ಕಃ=(ಆ) ಸರ್ವಕರ್ತನಾದ ಶ್ರೀವಿಷ್ಣುವು, ನಃ=ನಮ್ಮನ್ನು, ಮಹ್ಯೈ=ದೇಶತಃ ಮಹತ್ತಾದ, (ಸರ್ವ

ದೇಶಗಳಲ್ಲಿ ವ್ಯಾಪ್ತಳಾದ,) ಅದಿತಯೇ=(ಅದ ಭಕ್ಷಣೇ ಎಂಬ ಧಾತು ವ್ಯಾಖ್ಯಾನದಿಂದ( (ಅತ್ತಾ ಚರಾಚರಗ್ರಹಣಾತ್ ಎನ್ನುವಲ್ಲಿ ಹೇಳಿದ ಪ್ರಕಾರ ಸರ್ವಂ ವಾ ಅತ್ತೀತಿ ಅದಿತಿಃ ಎಂಬ ಶ್ರುತಿಸಿದ್ಧವಾದ ಸರ್ವಾತ್ತೃತ್ವದಿಂದಲೂ, (ದೋ ಅವಖಂಡನೇ)ಕಾತಲಃ ಗುಣತಶ್ಚ ವ್ಯಾಪ್ತತ್ವ ಹೇತುವುನಿಂದಲೂ,) ಅದಿತಿ ಎನಿಸಿಕೊಂಡ ವಿಷ್ಣುವಿನ ಸ್ತ್ರೀರೂಪಕ್ಕೋಸ್ಕರ, ಅಥವಾ ಶ್ರೀ ದೇವಿಗೋಸ್ಕ, ಪುನಃ=ಮತ್ತು, ದಾತ್=(ದಾಣ್‌ದಾನೇ) ಕೊಡಬೇಕು(ಅಂದರೆ ಸರ್ವದಾ ಸರ್ವಗತನಾದ ಶ್ರೀಹರಿಯಲ್ಲಿ ಅಥವಾ ಲಕ್ಷ್ಮೀದೇವಿಯಲ್ಲಿ ಇರತಕ್ಕ ನಮ್ಮನ್ನು ವೈಕುಂಠಾದಿಗಳಲ್ಲಿರತಕ್ಕ ಭಗವದ್ರೂಪವಿಶೇಷವನ್ನು ಹೊಂದಿಸಬೇಕು. ಎಂದುಪುನಶ್ಶಬ್ದವು.) (ದಾತ್ ಎನ್ನುವುದು ಲಿಜರ್ಥದಲ್ಲಿ ಲುಙ ಅಡಭಾವವು) ( ಆ ಶ್ರೀಹರಿಯೇ ಸರ್ವಲೋಕಕ್ಕೂ ಮುಖ್ಯವಾಗಿ ಪಿತನೂ ಮಾತೆಯೂ ಆಗಿರುತ್ತಾನೆ. ಆದ ಕಾರಣ) ಪಿತರಂ ಚ=ತಂದೆಯಾದ ಶ್ರೀ ವಿಷ್ಣುವನ್ನು, ಮಾತರಂ ಚ=ತಾಯಿಯಾದ ಶ್ರೀ ವಿಷ್ಣುವಿನ ಸ್ತ್ರೀರೂಪವನ್ನು, ಅಥವಾ ಶ್ರೀ ದೇವಿಯನ್ನೂ ದೃಶೇಯಂ=ನೋಡುವೆನು. ||೧||

ಭಾ || (೧) ಶುನಶ್ಶೇಪೋ ದದರ್ಶಾತ ಉತ್ತರಂ ಪರಮೃಕ್ಶತಂ । ಯೂಪಾದಾತ್ಮಾವಿಮೋಕ್ಷಾಯ ಸ್ತುವನ್ ದೇವಾನ್ ಪೃಥಕ್ಪೃಥಕ್|| ತ್ರ್ಯೂನಂ ಶತಮಿಹ್ಯೆವಾನ್ಯಚ್ಚತುರ್ಥೇ ಪಂಚಮೇऽಪಿ ಚ । ಮಂಡಲೇ (೨) ಬ್ರಹ್ಮಣೋಕ್ತಸ್ತು ಕ್ರಮೋऽತ್ರಾಪಿ ಹ್ಯೃಚಾಂಭವೇತ್ || (೩) ಕರ್ತುಃ ಪರಾನಂದತನೋರಿದಾನೀಂ ಮನಾಮಹೇ ಚಾರು ವಿಷ್ಣೋಸ್ಸುರಾಣಾಂ । ನಾಮೇಶಶ್ಚೇದಿಂದಿರಾಯೈ ಪುನರ್ದಾದ್ದೃಶೇಯಂ ತಾಂ ಮಾತರಂ ತಂಚ ದೇವಂ || (೪) ಸ ಮುಕ್ತಾನಾಮಮೃತಾನಾಮಜೇಶಮುಖ್ಯಾನಾಂ ಚಾಭ್ಯಧಿಕೋಯತ್ಸುಖಾದೌ । ತೇನೋಕ್ತೋऽಸೌ ಕತಮೋऽ (೫) ಖಂಡಿತತ್ವಾತ್ಸ ಚಾದಿತಿರ್ಮಹತೀ ತನ್ಮಹೀ ಚ || (೬) ದೇಶಾನಂತ್ಯಾತ್ತನ್ಮಹತ್ತ್ವಂ ಗುಣೈಸ್ತು ಕಾಲಾಚ್ಚೋಕ್ತಂ ತಸ್ಯ ಚಾಖಂಡಿತತ್ವಂ || (೭) ಸೇವ ಮಾತಾ ಸ ಪಿತಾ ಚ ದೇವಸ್ತಸ್ಮಿನ್ ಸದಾಸಂಸ್ಥಿತಾಸ್ತತ್ಪುನರ್ದಾತ್ || (೮) ಅತ್ತಿ ವಿಶ್ವಂ ತೇನ ಚೈವಾದಿತಿರ್ವಾ ಶ್ರೀರ್ವಾ (೯) ಬ್ರಹ್ಮಾ ಪ್ರೊಕ್ತ ಏವಂ ಕ ಏವ || (೧೦) ಗುಣಾಶ್ಚ ತಸ್ಯಾಭ್ಯಧಿಕಾಃ ಸದೈವ ಜೀವೇಭ್ಯಸ್ತತ್ಸೋऽಪಿ ತದ್ವಾಕ್ಯಯೋಗ್ಯಃ || (೧೧|| ದದಾತ್ಯಸೌ ವಿಷ್ಣವೇ ಚೇಂದಿರಾಯೈ ಪ್ರಾಪ್ತಾನಸ್ಮಾನಪಿ ತೌ ಸರ್ವಗತ್ವಾತ್ || (೧೨) ವಿಶೇಷದೇಶಪ್ರಾಪ್ತಿತಸ್ತಸ್ಯ ಚಾಪ್ತಿರ್ವೈಕುಂಠಾದಿರ್ಲೋಕ ಉಕ್ತೋ ಹರೇಶ್ಚ

||೧||

ಅ || (ಮೇಧಾತಿಥಿ ಋಷಿಗಳು ಕಂಡಿರುವ ಋಕ್ಕುಗಳನ್ನು ವ್ಯಾಖ್ಯಾನ ಮಾಡಿಯಾಯ್ತು. ಈಗ ವ್ಯಾಖ್ಯಾನ ಮಾಡಲಿಕ್ಕೆ ಇಷ್ಟಗಳಾದ ಋಕ್ಕುಗಳಿಗೆ ಋಷಿಗಳಿಗೆ ಋಷಿಯನ್ನು ಹೇಳುತ್ತಾರೆ.) ಶುನಶ್ಶೇಪರು ಯೂಪ (ಯಜ್ಞದಲ್ಲಿ ಪಶುವನ್ನು ಕಟ್ಟತಕ್ಕಸ್ತಂಭ) ದೇಶೆಯಿಂದ ತನ್ನನ್ನು ಬಿಡಿಸಿಕೊಳ್ಳುವುದಕ್ಕಾಗಿ ದೇವತೆಗಳನ್ನು ಪ್ರ ಪ್ರತ್ಯೇಕ ಸ್ತೋತ್ರ ಮಾಡುತ್ತಾ ಇದಕ್ಕಿಂತ ಮೇಲಿನದ್ದಾದ (ಅವ್ಯವ ಹಿತೋತ್ತರವಾದ) ಉತ್ತಮವಾದ ೧೦೦ ಋಕ್ಕುಗಳನ್ನು ಅಥವಾ ಇದಕ್ಕಿಂತ ಮೇಲಿನದ್ದಾದ ೩ ಋಕ್ಕುಗಳಿಂದ ಕಡಿಮೆಯಾದ ೧೦೦ ಋಕ್ಕುಗಳನ್ನು, ವ್ಯವಹಿತೋತ್ತರವಾದ ೩ ಋಕ್ಕುಗಳನ್ನು ಹೀಗೆ ೧೦೦ ಋಕ್ಕುಗಳನ್ನು ಕಂಡರು. (ಹರಿಶ್ಚಂದ್ರನು ವರುಣನಿಗಾಗಿ ಶುನಶ್ಶೇಪರನ್ನು ಪುತ್ರ ಪ್ರತಿನಿಧಿಯನ್ನಾಗಿ ಸಂಕಲ್ಪಿಸಿ ಯಜ್ಞದಲ್ಲಿ ಪಶುವನ್ನಾಗಿ ಮಾಡಿ ಯೂಪಸ್ತಂಭದಲ್ಲಿ ಪಾಶಗಳಿಂದ ೩ ಸ್ಥಾನಗಳಲ್ಲಿ ಬಂಧಿಸಿದನು. .ಬದ್ಧರಾದ ಶುನಶ್ಶೇಪರು ತನ್ನನ್ನು ಬಿಡಿಸಿ ಕೊಳ್ಳುವುದಕ್ಕಾಗಿ ದೇವತೆಗಳನ್ನು ಸ್ತುತಿಸಿದರು, ಇತ್ಯಾದಿ ರೂಪವಾದ ಬ್ರಾಹ್ಮಣೋಕ್ತವಾದ ಕಥೆಯನ್ನು ಯೂಪಾತ್

ಇತ್ಯಾದಿಗಳಿಂದ ಸ್ಮರಣೆ ಬರುವಂತೆ ಮಾಡಿದರು. ಕಥಾಜ್ಞಾನವು ಇದ್ದರೇನೇ ಉತ್ತಮ ಪಾಶಾದಿ ಬದ್ಧತ್ವರೂಪವಾದ ಉದುತ್ತಮಂ ವರುಣಪಾಶಂ ಉತ್ಯಾದಿ ಋಕ್ಕುಗಳಲ್ಲಿ ಉಕ್ತವಾದದ್ದೂ ಸುಖದಿಂದ ತಿಳಿಯಲು ಶಕ್ಯವಾಗುತ್ತದೆ. ಹೀಗಾದರೆ ಶುನಶ್ಯೇಪರು ೧೦೦ ಋಕ್ಕುಗಳನ್ನು ಶುನಶ್ಯೇಪರು ೧೦೦ ಋಕ್ಕುಗಳನ್ನು ಕಂಡಿದ್ದಾರೆಂದರೆ ಹಿರಣ್ಯಸ್ತೂಪರು ಕಂಡಿರತಕ್ಕ ತ್ವಮಗ್ನೇ ಪ್ರಥಮಃ ಇತ್ಯಾದಿ ೩ ಋಕ್ಕುಗಳನ್ನೂ ಶುನಶ್ಶೇಪರು ಕಂಡದ್ದು ಎಂದಾಗ ಬೇಕಾಗುವುದು ಎಂದರೆ) ಅತಉತ್ತರಂಪರಂ (ಎಂದು ಹೇಳಿರುವರು. ಅದನ್ನು ತ್ರ್ಯೂನಂ ಇತ್ಯಾದಿಗಳಿಂದ ವಿವರಿಸುತ್ತಾರೆ) ಕಸ್ಯ ನೂನಂ ಇದು ಮೊದಲಾದ ಆನುಪೂರ್ವಿಯಲ್ಲಿ ೩ ಋಕ್ಕುಗಳಿಂದ ಕಡಿಮೆಯೇ ಆದ ೧೦೦ ಋಕ್ಕುಗಳು ಇವೆ. ಬೇರೆ ೩ ಋಕ್ಕುಗಳು (1) ತ್ವನ್ನೋ ಅಗ್ನೇ ವರುಣಸ್ಯ ವಿದ್ವಾನ್ (2) ಸತ್ವ ನ್ನೋ ಅಗ್ನೇऽವಮೋ ಭವೋತಿ ಎಂಬ ೨ ಋಕ್ಕುಗಳು ೪ನೇ ಮಂಡಲದ ೩ನೇ ಅಷ್ಟಕದಲ್ಲಿ ೪ನೇ ಅಧ್ಯಾಯದಲ್ಲಿದೆ. (3) ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾತ್ ಎಂಬ ೧ ಋಕ್ಕು ೫ನೇ ಮಂಡಲದಲ್ಲಿ ೩ನೇ ಅಷ್ಟಕದ ೬ನೇ ಅಧ್ಯಾಯದಲ್ಲಿದೆ. (ಆದಕಾರಣ ತ್ವಮಗ್ನೇ ಪ್ರಥಮಃ ಇತ್ಯಾದಿಗಳನ್ನು ಶುನಶ್ಯೇಪರು ಕಂಡದ್ದಲ್ಲ. ಶುನಶ್ಯೇಪರು ಬೇರೆ ೩ ಋಕ್ಕುಗಳನ್ನು ಕಂಡಿರುವುದರಿಂದ ಶತರ್ಚಿಗಳು ಎನ್ನುವುದಕ್ಕೆ ಹಾನಿಯೂ ಇಲ್ಲ.) (೨) (ಹಾಗಾದರೆ ಈ ರೀತಿಯಾಗಿ ಪತಕ್ಕೆ ಕಲ್ಪಿಸುವುದು. ಶುನಶ್ಯೇಪರೇ ಈಗ ೯೭ ಋಕ್ಕುಗಳನ್ನೇ ಕಂಡದ್ದು, ಎಂದಾಗಲಿ. ಅಲ್ಪವಾದ ಪ್ರಯುಕ್ತ ವಿವಕ್ಷಾ ಮಾಡಲಿಲ್ಲ, ಆದ ಕಾರಣ ೩ ಋಕ್ಕುಗಳು ಕಡಿಮೆ ಇದ್ದರೂ ಶತರ್ಚಿ ಎಂಬ ನಾಮವೂ ಸಂಗತವೇ ಆಗುವುದು ಎಂದು ಅನುಕ್ರಮಣಿಕಾನುಸಾರಿಯು ಶಂಕಿಸಿದರೆ)

ಬ್ರಾಹ್ಮಣದಲ್ಲಿ ಆದರೂ ಒಂದೇ ಕಾಲದಲ್ಲಿ ಒಂದೇ ದೇಶದಲ್ಲಿ ಒಂದೇ ಅವಸ್ಥೆಯಲ್ಲಿ ಶುನಶ್ಯೇಪರು ಕಡಿಮೆ ಇಲ್ಲದೆ ೧೦೦ ಋಕ್ಕುಗಳನ್ನೇ ಕಂಡಿರುವರು ಎಂದು ಸ ಪ್ರಜಾಪತಿಮೇವ ಪ್ರಥಮಂ ದೇವತಾನಾಮುಪಸಸಾರ ಕಸ್ಯ ನೂನಂ ಕತಮಸ್ಯಾಮೃತಾನಾಂ ಎಂಬ ಋಕ್ಕನ್ನು ಆರಂಭಿಸಿ ಅಥೈನಮವಭೃಥಮಭ್ಯವನಿನಾಯ, ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತ್ಯೇತಾಭ್ಯಾಮಥೈನಮತ ಊರ್ಧ್ವಮಗ್ನಿಮಾಹವನೀಯಮುಪಸ್ಥಾಪಯಾಂಚಕಾರ ಶುನಶ್ಚಿಚೇಪಂ ನಿದಿತಂ ಸಹಸ್ರಾತ್ ಎಂಬ ಪರ್ಯಂತ ಕ್ರಮವಾಗಿ ೧೦೦ ಋಕ್ಕುಗಳನ್ನು ಕಂಡಿದ್ದಾರೆಂದು ಹೇಳಿ ತದೇತತ್ಪರಮೃಕ್ಕತ ಗಾಥಂ ಶೌನಶ್ಯೇಪಮಾಖ್ಯಾನಂ ಎನ್ನುವುದರಿಂದ ಕಡಿಮೆಯಿಲ್ಲದೆ ೧೦೦ ಋಕ್ಕುಗಳನ್ನೇ ಕಂಡಿದ್ದಾರೆಂದು ಹೇಳಿದೆ ಬ್ರಾಹ್ಮಣದಲ್ಲಿ ಸ್ಪಷ್ಟವಾಗಿ ಹೇಳಿದ ಋಕ್ಕುಗಳ ಅಕ್ರಮವನ್ನೂ ಇಲ್ಲಿಯೂ ಅನುಸರಿಸಲೇ ಬೇಕು. ಇಲ್ಲವಾದರೆ ಬ್ರಾಹ್ಮಣ ಭಾಗದಿಂದ ವಿರೋಧವು ಬರುವುದು.

(ಬ್ರಾಹ್ಮಣೋಕ್ತಿಯನ್ನನುಸರಿಸಬೇಕೆಂದು ಹೇಳದೆ ಬ್ರಾಹ್ಮಣೋಕ್ತಕ್ರಮವನ್ನು ಅನುಸರಿಸಬೇಕು ಎಂದು ಹೇಳಿದೆ. ಇಲ್ಲಿ ಕ್ರಮಶಬ್ದ ಹೇಳಿದುದಕ್ಕೆಸ್ವಾರಸ್ಯವು ಕಾಣದಿರುವುದರಿಂದ ಅಥವಾ ಎಂದು ಪಕ್ಷಾಂತರ ಹೇಳಿದರು. (ಅತ್ರಾಪಿ=)೩ರಿಂದ ಕಡಿಮೆಯಾದ ೧೦೦ ಋಕ್ಕುಗಳು ಎಂಬ ಪಕ್ಷದಲ್ಲಿಯೂ ಬ್ರಾಹ್ಮಣದಲ್ಲಿ ಹೇಳಿದ ಕ್ರಮವೇ ಆಗುವುದು. ಯಥಾ ಶ್ರುತವಾದ ಕ್ರಮವಲ್ಲ. ಹೇಗೆಂದರೆ ನಮೋ ಮಹದ್ಭ್ಯ ಎಂಬ ಶ್ರುತಿಯ ಆನಂತರದಲ್ಲಿ ಯಚ್ಚಿದ್ಧಿ ಸತ್ಯ ಸೋಮ ಪಾಃ ಇದು ಮೊದಲಾದ ಋಕ್ಕುಗಳಿಂದ ಇಂದ್ರನನ್ನೂ ಅಶ್ವಿನೀ ದೇವತೆಗಳನ್ನು ಉಷೋ ದೇವತೆಯನ್ನು ಸ್ತುತಿಸುತ್ತಿರಲು ಶುನಶ್ಯೇಪನನ್ನು ಕಟ್ಟಿದ ಹಗ್ಗವು ಬಿಟ್ಟು ಹೋಯಿತು. ಆ ಶುನಶ್ಯೇಪನನ್ನು ಅಧಿಕರಿಸಿ ಪ್ರವೃತ್ತವಾದ ಬ್ರಾಹ್ಮಣವು. ಆ ಬ್ರಾಹ್ಮಣದಲ್ಲಿ ಆದರೂ ಆಧುನಿಕರು ಯಚ್ಚಿದ್ದಿ ಸತ್ಯಸೋಮಪಾಃ ಎನ್ನುವುದಕ್ಕಿಂತ ಮೊದಲು ಪಠಿತವಾದುದಾಗ್ಯೂ ಯತ್ರ ಗ್ರಾವಾ ಎಂಬ ೯ ಋಕ್ಕುಗಳುಳ್ಳ ಸೂಕ್ತದಲ್ಲಿರುವ ಯಚ್ಚಿದ್ಧಿ ತ್ವಂ ಗೃಹೇ ಗೃಹೇ ಇದು ಮೊದಲಾದ ೫ ಋಕ್ಕುಗಳ ಕಾರ್ಯವನ್ನು ಹೇಳಿ ಅಗಕ್ಕಿಂತ ಮೊದಲಿರುವ ಯತ್ರ ಗ್ರಾವಾ ಎಂಬ ೪ ಋಕ್ಕುಗಳಿಂದ ಹೋಮವು ಪ್ರತಿಪಾದಿಸಲ್ಪಟ್ಟಿದೆ. ಆ ಶುನಶ್ಯೇಪರನ್ನು

ಕುರಿತು ಋತ್ವಿಜರು ಹೇಳಿದರು. ನೀವೇ ನಮ್ಮ ಈ ಹಗಲಿನ ಸಂಸ್ಥೆಯನ್ನು ಹೊಂದಬೇಕು. ಇತ್ಯಾದಿ ಪ್ರಕಾರ ಹೇಳಿದರು (ಪ್ರಕೃತವೇನಾಯಿತೆಂದರೆ) ಅಲ್ಲಿ ಯತ್ರ ಗ್ರಾವಾ ಇದು ಮೊದಲಾದ ೯ ಋಕ್ಕುಗಳಿಗೆ ತ್ವಮಗ್ನೇ ಪ್ರಥಮಃ ಎನ್ನುವುದಕ್ಕಿಂತ ಪೂರ್ವದಲ್ಲಿ ೩ ಋಕ್ಕುಗಳಿಂದ ಸ್ಪಷ್ಟವಾಗಿ ಪರತ್ವವು ತಿಳಿಯುತ್ತದೆ. ಯದ್ಯಪಿ ಇಲ್ಲಿ ಸ ಇಂದ್ರಂ ತುಷ್ಟಾವ, ಯಚ್ಚಿದ್ಧಿ ಸತ್ಯ ಸೋಮಪಾಃ ಎಂಬೀ ಸೂಕ್ತದಿಂದ ಎಂದೇ ಹೇಳಿದೆ. ಇದಕ್ಕಿಂತ ಮೇಲಿನ ಸೂಕ್ತದಿಂದ ಎಂದು ಹೇಳಲಿಲ್ಲ. ಆದಾಗ್ಯೂ ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಎಂಬೀ ಋಕ್ಕು, ಹಾಗೆಯೇ ಅಭಿ ತ್ವಾ ದೇವ ಸವಿತಃ ಎಂಬೀ ಋಕ್ತ್ರಯ ಇವುಗಳಿಂದ ಎಂದು ಪಾಠ ಕ್ರಮವಿದೆ. (೩) (ಕಸ್ಯ ಪಂಚೋನಾಽಽಜೀಗರ್ತಿ ಶುನಶ್ಶೇಪಃ ಕೃತ್ರಿಮೋ ವೈಶ್ವಾಮಿತ್ರೋ ದೇವರಾತೋ ವಾರುಣಂತು ತ್ರೈಷ್ಟುಭಮಾದೌ ಕಾಯ್ಯಾಗ್ನೇಯ್ಯೌ ಸಾವಿತ್ರಸ್ತ್ರಚೋ ಗಾಯತ್ರೋಽಸ್ಯಾಂತ್ಯಾಭಾಗೀ ಎಂದು ಅನುಕ್ರಮಣಿಕೆಯು. ಕಸ್ಯ ಎನ್ನುವ ಸೂಕ್ತಕ್ಕೆ ೧೫ ಋಕ್ಕು ಅಜೀಗರ್ತರ ಮಗನಾದ ಅಜೀಗರ್ತಿಯು ಶುನಶ್ಶೇಪರು ಋಷಿಗಳು. ಇವರೇ ವಿಶ್ವಾಮಿತ್ರರ ಕೃತ್ರಿಮ ಪುತ್ರರು. ದೇವರಾತರೆಂದು ನಾಮವು ಈ ಸೂಕ್ತಕ್ಕೂ ಮೇಲಿನ ಸೂಕ್ತಕ್ಕೂ ವರುಣನು ದೇವತೆಯು, ಈ ಋಕ್ಕುಗಳಲ್ಲಿ ೪೪ ಅಕ್ಷರಗಳಿದ್ದುದರಿಂದ ತ್ರಿಷ್ಟುಪ್ ಛಂದಸ್ಸು. ೧ನೇ ಋಕ್ಕು ಪ್ರಜಾಪತಿ ದೇವತಾಕವು ೨ನೇ ಋಕ್ಕು ಅಗ್ನಿ ದೇವತಾಕವು ಮೇಲಿನ ೩ ಋಕ್ಕುಗಳು ಸವಿತೃದೇವತಾಕಗಳು. ಗಾಯತ್ರಿ ಛಂದಸ್ಕವು ಸಾವಿತ್ರದ ಅಂತ್ಯವಾದ ಭಗಭಕ್ತಸ್ಯ ಎಂಬ ಋಕ್ಕುಭಗದೇವತಾಕವು. (ಕರ್ತು ಇತ್ಯಾದಿಗಳಿಂದ ಶ್ರೀ ವಿಷ್ಣುವಿನಲ್ಲಿ ಈ ಋಕ್ಕನ್ನು ಯೋಜನಾಮಾಡುತ್ತಾರೆ. ಸರ್ವೇಶ್ವರನಾದ ಶ್ರೀ ಹರಿಯು ವಿವಕ್ಷಿತನಾದರೆ (ಆಗ ಹೀಗೆ ಯೋಜನಾ ಮಾಡಬೇಕು.) ಸರ್ವಕರ್ತನೂ ದೇವತೆಗಳ ಮಧ್ಯದಲ್ಲಿ ಅತ್ಯುತ್ಕೃಷ್ಟವಾದ ಆನಂದಾತ್ಮಕ ಶರೀರವುಳ್ಳವನೂ, ಆದ ಶ್ರೀವಿಷ್ಣುವಿನ ಮಂಗಲಕರವಾದ ನಾಮವನ್ನು ಈಗ (ಮನಾಮಹೇ=ಈ ಧಾತುವು ನಾಮ ಎಂಬ ಶಬ್ದವನ್ನು ಗ್ರಹಣಮಾಡಿದ ಸಾಮರ್ಥ್ಯದಿಂದ ಉಚ್ಚಾರಣಾದಿರೂಪವಾದ ಅರ್ಥದಲ್ಲಿ ಉಚ್ಚರಿಸುತ್ತೇವೆ. ಸ್ಮರಿಸುತ್ತೇವೆ. ಆವೃತ್ತ್ಯಾದಿಗಳನ್ನು ಮಾಡುತ್ತೇವೆ. (ಅಂತಹ ಪ್ರಸಿದ್ಧನಾದ ಸರ್ವಕರ್ತನಾದ ಶ್ರೀವಿಷ್ಣುವು ನಮ್ಮನ್ನು) ಲಕ್ಷ್ಮೀದೇವಿಗಾಗಿ ಪುನಃ ಕೊಡಬೇಕು. ಆ ಮೇಲೆ ತಂದೆಯಾದ ಆ ದೇವನನ್ನು, ತಾಯಿಯಾದ ಶ್ರೀ ದೇವಿಯನ್ನು ನೋಡುವೆನು. (೪) (ಕತಮಸ್ಯಾಮೃತಾನಾ. ಎಂಬುವುದನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಆ ಶ್ರೀಹರಿಯು ಬ್ರಹ್ಮರುದ್ರರೇ ಪ್ರಧಾನರಾಗಿ ಉಳ್ಳ ಮರಣವಿಲ್ಲದಿರುವುದರಿಂದ ವ್ಯಾಖ್ಯಾನ ಮಾಡುತ್ತಾರೆ.) ಆ ಶ್ರೀಹರಿಯು ಬ್ರಹ್ಮರುದ್ರರೇ ಪ್ರಧಾನರಾಗಿ ಉಳ್ಳ ಮರಣವಿಲ್ಲದಿರುವುದರಿಂದ ಅಮೃತರೆನಿಸಿದ ಮುಕ್ತರ ಸಕಾಶದಿಂದ ಯಾವ ಕಾರಣದಿಂದ ಆನಂದ ಮೊದಲಾದ ಸರ್ವಗುಣಗಳಲ್ಲಿ ಅತ್ಯಧಿಕನೋ, ಆದುದರಿಂದ ಈ ಶ್ರೀಹರಿಯು (ಕತಮಃ=) ಅತಿಶಯಿತ ಸುಖಸ್ವರೂಪನೆನಿಸುತ್ತಾನೆ. (೫) (ಮಹ್ಯೈ ಅದಿತಯೇ ಎಂಬುವುದನ್ನು ಮೊದಲು ಲಕ್ಷ್ಮೀವಿಷಯಕವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಈಗ ಭಗವದ್ವಿಷಯಕವೂ ಆಗುತ್ತದೆಂದು ವ್ಯಾಖ್ಯಾನ ಮಾಡುತ್ತಾರೆ.) ಆ ಶ್ರೀಹರಿಯು ಅಖಂಡಿತ (ವ್ಯಾಪ್ತ)ನಾದ ಪ್ರಯುಕ್ತ (ದೋ ಅವಖಂಡನೇ ಎಂಬ ಧಾತು ವ್ಯಾಖ್ಯಾನದಿಂದ ದೀಯತೇ=ಖಂಡ್ಯತೇ ಇತ್ಯದಿತಿಃ, ನ ದಿತಿಃ ಅದಿತಿಃ ಎಂಬ ವ್ಯುತ್ಪತ್ತಿಯಿಂದ)ಅದಿತಿಯೆನಿಸುತ್ತಾನೆ. ಯಾವ ಕಾರಣದಿಂದ ಸ್ತ್ರೀರೂಪನಾದ ಶ್ರೀಹರಿಯು ಸರ್ವತ್ರ (ಮಹಿತಿ=)ವ್ಯಾಪ್ತನೋ ಆದಕಾರಣ ಮಹೀ=ಸಮಸ್ತ ದೇಶಗಳಲ್ಲಿ ವ್ಯಾಪ್ತನು. ಸ್ತ್ರೀರೂಪನು. (೬) (ಮಹತ್ ಶಬ್ದ ಅಖಂಡ ಶಬ್ದಗಳಿಗೆ ವ್ಯಾಪ್ತ ಎಂಬ ಅರ್ಥವಿರುವುದರಿಂದ ಮಹತ್ತ್ವವೂ ಅಖಂಡಿತತ್ವವೂ ಒಂದೇ. ಆದಕಾರಣ ಪುನರುಕ್ತಿಯನ್ನು ಪರಿಹರಿಸುತ್ತಾರೆ.) ಆ ವಿಷ್ಣುವಿನಮಹತ್ತ್ವವುಸಮಸ್ತದೇಶಗಳಲ್ಲಿವ್ಯಾಪಿಸಿಕೊಂಡಿರುವುದರಿಂದಹೇಳಲ್ಪಟ್ಟಿದೆ.ಆ ವಿಷ್ಣುವಿನಲ್ಲಿ ಅಖಂಡಿತತ್ವವಾದರೂ ಅನಂತ ಗುಣಗಳಿದ್ದುದರಿಂದಲೂ ಸಮಸ್ತ ಕಾಲಗಳಲ್ಲಿ ವ್ಯಾಪಿಸಿಕೊಂಡಿರುವುದರಿಂದಲೂ

ಹೇಳಲ್ಪಟ್ಟಿದೆ (೭) (ಪಿತರಂ ಮಾತರಂ ಚ ಎನ್ನುವುದನ್ನು ಮೊದಲು ವಿಷ್ಣು ಲಕ್ಷ್ಮೀ ವಿಷಯಕವಾಗಿ ವ್ಯಾಖ್ಯಾನ ಮಾಡಿರುವರು. ಈಗ ಆ ಎರಡನ್ನು ಪರಮಾತ್ಮ ವಿಷಯಕವನ್ನಾಗಿಯೂ ಮಾತರಂ ಎನ್ನುವುದನ್ನು ಲಕ್ಷ್ಮೀ ವಿಷಯಕವನ್ನಾಗೀಯೂ ವ್ಯಾಖ್ಯಾನ ಮಾಡುತ್ತಾರೆ) ಆ ಶ್ರೀಹರಿಯೇ (ಸರ್ವಲೋಕಕ್ಕೂ) ಮುಖ್ಯವಾಗಿ ಮಾತೆಯು. ಚ=ಶ್ರೀದೇವಿಯು ಮಾತೆಯು. ಆ ಶ್ರೀದೇವನೇ ಮುಖ್ಯತಃ ತಂದೆಯು. ಆ ಶ್ರೀಹರಿಯಲ್ಲಿಯೇ ಯಾವ ಕಾರಣದಿಂದ ಸದಾ (ನಾವು) ಆಶ್ರಿತರಾಗಿರುತ್ತೇವೋ, ಆದುದರಿಂದ ಪುನಃ ಶ್ರೀಹರಿಯು (ನಮ್ಮನ್ನು ಶ್ರೀಹರಿಯ ಸ್ತ್ರೀರೂಪಕ್ಕೋಸ್ಕರ, ಅಥವಾ ಶ್ರೀದೇವಿಗೋಸ್ಕರ) ಕೋಡಬೇಕು. (ಅಂದರೆ ವೈಕುಂಠಾದಿಗಳಲ್ಲಿರತಕ್ಕ ರೂಪವಿಶೇಷವನ್ನು ವಿಶೇಷತಃ ಹೊಂದಿಸಿಕೊಡಬೇಕು. (೮) (ಅದಿತಿ ಶಬ್ದವನ್ನು ಶ್ರೀ ವಿಷ್ಣುವಿನಲ್ಲಿ ಪ್ರಕಾರಾಂತರದಿಂದ ನಿರ್ವಚನ ಮಾಡುತ್ತಾರೆ) ಶ್ರೀಹರಿಯು ಸಮಸ್ತ ಜಗತ್ತನ್ನು ಸಂಹರಿಸುತ್ತಾನೆ. ಆದುದರಿಂದಲೇ ಅದಿತಿಯೆನಿಸುತ್ತಾನೆ (ಎಂದು ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ಎಂದು ಅದಿತಿ ಶಬ್ದ ನಿರ್ವಚನಪರವಾದ ಶ್ರುತಿಬಲದಿಂದ ಅಂಗೀಕರಿಸಬೇಕು.) ಎಂದು ಏವ ಶಬ್ದದಿಂದ ಹೇಳಿದರು. (ಮಹ್ಯೈ ಅದಿತಯೇ ಎನ್ನುವುದು ಇಂದಿರಾ ವಿಷಯಕವೂ ಆಗುತ್ತದೆಂದು ಹೇಳಿದೆ. ಅದು ಯಾವ ನಿರ್ವಚನದಿಂದ ಎಂದರೆ) (ಲಕ್ಷ್ಮೀದೇವಿಗೂ ಕೂಡ ಸ್ವಯೋಗ್ಯಮಹತ್ತ್ವ ಅಖಂಡಿತತ್ವ ಅತ್ತೃತ್ವಗಳು ಇದ್ದುದರಿಂದ, ಲಕ್ಷ್ಮೀದೇವಿಯೂ ಕೂಡ ಇದೇ ನಿರ್ವಚನದಿಂದ ಮಹೀ ಎಂದೂ ಅದಿತಿಯೆಂದೂ ಹೇಳಲ್ಪಡುತ್ತಾಳೆ. (೯) (ಶ್ರೀ ವಿಷ್ಣುವಿನಲ್ಲಿ ಈ ಋಕ್ಕನ್ನು ವ್ಯಾಖ್ಯಾನಮಾಡಿ ಚತುರ್ಮುಖನಲ್ಲಿಯೂ ವ್ಯಾಖ್ಯಾನ ಮಾಡುತ್ತಾರೆ.) ಚತುರ್ಮುಖ ಬ್ರಹ್ಮನೂ ಕೂಡ ಹೀಗೆಯೇ ಜಗತ್ಕರ್ತೃತ್ವಾದಿಗಳಿಂದ ಕಃ ಇತ್ಯಾದಿ ಸಬ್ದಗಳಿಂದ ಹೇಳಲ್ಪಡುತ್ತಾನೆ. ಕಃ ಪ್ರಜಾಪತಿರುದ್ದಿಷ್ಟಃ ಕೋ ವಾಯುರಿತಿ ಶಬ್ದಿತಃ । ಎಂದು ವರರುಚಿಯ ಉಕ್ತಿಪ್ರಕಾರ ಕ ಶಬ್ದವು ಚತುರ್ಮುಖನಲ್ಲಿ ರೂಢವೂ ಆಗಿದೆ ಎಂದು ಕ ಏವ ಎಂಬಲ್ಲಿದ್ದ ಏವ ಶಬ್ದದ ಅಭಿಪ್ರಾಯವು. (೧೦) ಹಾಗಾದರೆ ಅಮೃತಾನಾಂ ಕತಮಸ್ಯ ಎಂಬುವುದು ಚತುರ್ಮುಖನಲ್ಲಿ ಕೂಡುವುದಿಲ್ಲ. ಶ್ರೀವಿಷ್ಣು ರಮಾ ತನಗೆ ಸಮಾನಿಕರಾದ ಋಜುಗಣಸ್ಥರು. ಇವರಿಗಿಂತ ಆಧಿಕ್ಯವಿಲ್ಲ ಎಂದರೆ) ಯಾವ ಕಾರಣದಿಂದ ಆ ಚತುರ್ಮುಖನಿಗೆ ಯಾವಾಗಲೂ ತನಗೆ ಸಮಾನಿಕರಾದ ಋಜುಗಣಸ್ಥರಿಗಿಂತ ಇತರರಾದ ಸಮಸ್ತ ಜೀವರಿಗಿಂತಲೂ ಅತ್ಯಧಿಕಗಳೇ ಆದ ಗುಣಗಳೂ ಇರುತ್ತವೋ, ಆದಕಾರಣ ಆ ಚತುರ್ಮುಖನೂ ಕೂಡ ಆ ವಾಕ್ಯಗಳಿಗೆ ಯೋಗ್ಯನೇ (ವಾಚ್ಯನೇ) ಆಗಿರುತ್ತಾನೆ. (೧೧) ಉತ್ತರಾರ್ಧವನ್ನು ಚತುರ್ಮುಖನಲ್ಲಿ ಯೋಜನಾ ಮಾಡುತ್ತಾರೆ.) ಈ ಚತುರ್ಮುಖನು ನಮ್ಮನ್ನು ಶ್ರೀವಿಷ್ಣುವಿಗೂ ಲಕ್ಷ್ಮೀದೇವಿಗೂ ಕೂಡ ಕೊಡಲಿ. ಆ ಲಕ್ಷ್ಮೀನಾರಾಯಣರು ಸರ್ವತ್ರ ವ್ಯಾಪ್ತರಾಗಿರುವುದರಿಂದ ಪ್ರಾಪ್ತರಾದಾಗ್ಯೂ ನಮ್ಮನ್ನು ಪುನಃ ವೈಕುಂಠಾದಿಗಳಲ್ಲಿರತಕ್ಕರೂಪ ವಿಶೇಷವನ್ನು ಹೊಂದಿಸಲಿ. (೧೨) (ಹಾಗಾದರೆ ಪ್ರಾರ್ಥನೆಯು ಹೇಗೆಂದರೆ) ವಿಶೇಷದೇಶಗಳ ಪ್ರಾಪ್ತಿಗಾಗಿ ಶ್ರೀವಿಷ್ಣುವು ಸರ್ವಗತನಾದಾಗ್ಯೂ ಆತನ ಪ್ರಾಪ್ತಿಯು (ಪ್ರಾರ್ಥಿಸಲ್ಪಡುತ್ತದೆ.) (ವಿಶೇಷ ದೇಶವು ಯಾವುದೆಂದರೆ) ವೈಕುಂಠ ಮೊದಲಾದ ಭಗವಲ್ಲೋಕವು (ವಿಶೇಷ ದೇಶವೆಂದು) ಹೇಳಲ್ಪಟ್ಟಿದೆ. (ವೈಕುಂಠಾದಿಗಳು ವಿಶೇಷ ದೇಶವು ಹೇಗೆ ಆಗುವುದೆಂದರೆ) ಶ್ರೀಹರಿಯು ಸರ್ವಗತನಾದಾಗ್ಯೂ ವೈಂಕುಂಠಾದಿಗಳು ಶ್ರೀಹರಿಗೆ ಸರ್ವದಾ ಅಭಿವ್ಯಕ್ತಿ ಸ್ಥಾನವಾಗಿರುವುದರಿಂದ ವೈಕುಂಠಾದಿಗಳು ವಿಶೇಷ ದೇಶಗಳೆನಿಸುತ್ತವೆ. ॥೧॥

ಅವ ॥ ಈ ಋಕ್ಕು ಅಗ್ನಿದೇವತಾಕವು. ಅಗ್ನೇಃ ಎನ್ನುವುದರಿಂದ ಪ್ರಸಿದ್ಧವಾದ ಅಗ್ನಿಯು, ಅಗ್ನ್ಯಂತರ್ಗತನು, ಶ್ರೀಹರಿಯು ಅಥವಾ ಅತಿರಿಕ್ತವಾದ ಪರಶುರಾಮಾಖ್ಯ ವಿಷ್ಣು ವಿಶೇಷವೂ ಗ್ರಾಹ್ಯವು.

ಋ ॥ (೨೫೫) ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಮನಾಮಹೇ ಚಾರು ದೇವಸ್ಯ ನಾಮ ।
ಸನೋ ಮಹ್ಯಾ ಅದಿತಯೇ ಪುನರ್ದಾತ್ಪಿತರಂ ಚ ದೃಶೇಯಂ ಮಾತರಂ ಚ ॥೨॥

ಅ ॥ (ಹಿಂದಿನ ಋಕ್ಕಿನಂತೆಯೇ ಅರ್ಥವು.) ವಯಂ=ನಾವು, ದೇವತೆಗಳ ಮಧ್ಯದಲ್ಲಿ ಪ್ರಥಮಸ್ಯ=ಮೊದಲಿನವನಾದ ಆಗ್ನೇಃ=ಅಗ್ನ್ಯಂತರ್ಗತ ಶ್ರೀಹರಿಯ, ಚಾರುವಾದ ನಾಮವನ್ನು ಪುನಃ ಪುನಃ ಉಚ್ಚರಿಸುತ್ತೇವೆ. ಸಃ=ಆ ಶ್ರೀಹರಿಯು. (ಬಾಕಿ ಸಂಪೂರ್ಣ ಹಿಂದಿನಂತೆ) ॥೨॥

ಭಾ ॥ ತಸ್ಯೈವ ವಾನ್ಯದ್ರೂಪಮಗ್ನ್ಯಾಖ್ಯಮುಕ್ತಂ ಯೊ ಯಜ್ಞೇಶೋ ಹೂಯತೇ ಜಾಮ ದಗ್ನ್ಯಃ । ಸ ದೇವಾನಾಂ ಪ್ರಥಮೋ ನಾಮ ತಸ್ಯ ಸ್ಮೃತಂ ಸಾರ್ಥಂ ಸರ್ವಕಾಮಪ್ರದಂ ಸ್ಯಾತ್ ॥೨॥

ಅ ॥ (ಋಗರ್ಥವು ಸ್ಪಷ್ಟವಾಗಿರುವುದರಿಂದ ಮುಖ್ಯಾರ್ಥವನ್ನು ಮಾತ್ರ ಹೇಳುತ್ತಾರೆ.) ಶ್ರೀಪರಮಾತ್ಮನದ್ದೇ ಅಗ್ನಿಯೆಂದು ಹೆಸರುಳ್ಳ ಇನ್ನೊಂದು ರೂಪವು (ಈ ಋಕ್ಕಿನಲ್ಲಿ ಹೇಳಲ್ಪಟ್ಟಿದೆ. ಹಾಗಾದರೆ-ಪ್ರಜಾಪತಿರುವಾಚ ಅಗ್ನಿರ್ವೈದೇವಾನಾಂ ನೇದಿಷ್ಠ ಸ್ತಮೇವೋಪಧಾವೇತಿ. ಸೋಽಗ್ನಿಮುಪಸಸಾರಾಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಇತ್ಯೇತಯರ್ಚಾ ಎಂದು ಬ್ರಾಹ್ಮಣವು, ಎಂದರೆ ಆ ಶ್ರೀಹರಿಯೇ ಅಗ್ನಿಯೆಂದು ಹೆಸರುಳ್ಳವನು ಉಕ್ತನಾಗಿದ್ದಾನೆಂದು ಹೇಳದೆ ಆ ಶ್ರೀಪರಮತ್ಮನದ್ದೇ ಇನ್ನೊಂದು ರೂಪವು ಎಂದು ಹೇಳಿದೆ. ಸ ಏವ ಎಂದು ಹೇಳಿದರೆ ಈ ಋಕ್ಕಿನಲ್ಲಿಯೂ ಪ್ರಜಾಪತಿ ನಾಮಕನಾದ ಪರಮಾತ್ಮನೇ ವಾಚ್ಯನೆಂದು ಪ್ರಾಪ್ತವಾಗುವುದರಿಂದ ತಂ ಪ್ರಜಾಪ್ರತಿಃ ಎಂದು ಭಿನ್ನವಿಷಯವನ್ನು ಪ್ರತಿಪಾದಿಸುವ ಬ್ರಾಹ್ಮಣದಿಂದ ವಿರೋಧವು ಬರುವುದು, ಎಂಬ ಆ ಶಂಕೆಯ ಪರಿಹಾರವು ಅಗ್ನ್ಯಾಖ್ಯಃ ಎಂಬ ಉಕ್ತಿಯಿಂದಲೇ ಆಗುತ್ತದೆ. ಅದನ್ನು ಬಿಟ್ಟು ಪ್ರಜಾಪತಿಯಲ್ಲಿ ಅಂತರ್ಗತವಾದ ರೂಪದ್ದೆಶೆಯಿಂದ ಭಿನ್ನವಾದ ಅಗ್ನಿನಾಮಕ ರೂಪವನ್ನು ಇಲ್ಲಿ ಹೇಳಿದೆ. ಅಂತಹ ರೂಪವು ಯಾವುದು? ಎಂದರೆ) ಸಮಸ್ತ ಯಜ್ಞಗಳಿಗೂ ಅಧಿಪತಿಯಾದ ಯಾಲ ಪರಶುರಾಮನು ಹೋಮಿಸಲ್ಪಡುತ್ತಾನೋ, (ಯಜ್ಞಭೋಕ್ತೃಗಳಾದ ದೇವತೆಗಳಿಗೆ ನಿಯಮಾಕನು ಎಂದು ಹೇಳಿದುದರಿಂದ ತದಧೀನತ್ವಾತ್ ಎಂಬ ನ್ಯಾಯದಿಂದ ಅಗ್ನ್ಯಾದಿಗಳಲ್ಲಿರತಕ್ಕ ಅಗ್ನಿತ್ವಾದಿಗಳು ಭಗವದಧೀನಗಳಾಗಿರುವುದರಿಂದ ಅಗ್ನ್ಯಾದಿ ಶಬ್ದಗಳ ಪ್ರವೃತ್ತಿಯು. ಅಥವಾ ಇದಿ ಪರಮೈಶ್ವರ್ಯೇ ಎಂಬ ಧಾತು ವ್ಯಾಖ್ಯಾನದಿಂದ ಯಜ್ಞೇಶಃ ಎನ್ನುವುದು ಇಂದ್ರ ಶಬ್ದದ ನಿರ್ವಚನವು. ಹಾಗೆಯೇ ಹೂಯತೇ ಎನ್ನುವುದರಿಂದಲೂ ಅಗ್ನ್ಯಾದಿಘಲ್ಲಿ ಅಂತರ್ಗತನಾದ ಶ್ರೀವಿಷ್ಣುವು ಹೋಮ ವಿಷಯನೆಂದು ಹೇಳಿದುದರಿಂದ ಅತ್ತೀತಿ ಅಗ್ನಿಃ ಎಂದು ನಿರ್ವಚನವು ಉಕ್ತವಾಯ್ತು.) (ಪ್ರಥಮಸ್ಯಾಮೃತಾನಾಂ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಆ ಪರಶುರಾಮನು ದೇವತೆಗಳಲ್ಲಿ ಆದಿ ಭೂತನು. (ಹಾಗಾದರೆ-ಈ ಋಕ್ಕಿನಲ್ಲಿಯೂ ಪೂರ್ವ ಋಕ್ಕಿನಲ್ಲಿಯೂ ನಾಮಸ್ಮರಣಾದಿಗಳು ಭಗವತ್ಪ್ರಾಪ್ತಿಗೆ ಹೇತುವು ಎಂದು ಹೇಳಲ್ಪಡುತ್ತದೆ. ಕೋ ನಃ ಸ ನಃ ಎಂದು ಫಲವೂ ಪ್ರಾರ್ಥಿಸಲ್ಪಡುತ್ತದೆ. ಅದಯುಕ್ತವು. ನಾಮಸ್ಮರಣಾದಿ ಮಾತ್ರವು ವೈಕುಂಠಾದಿಗಳ ಪ್ರಾಪ್ತಿಗೆ ಸಾಧನವೆನ್ನುವುದು, ನಾನ್ಯಃ ಪಂಥಾ ಎಂಬ ಉಕ್ತಿನಿಂದ ಭಗವಂತನ ಜ್ಞಾನದಿಂದ ಅತಿರಿಕ್ತವಾದುದು ಮೋಕ್ಷ ಸಾಧನವಲ್ಲ ಎಂದು ಹೇಳಿದುದರಿಂದ ಪ್ರಮಾಣವಿರುದ್ಧವು ಎಂದರೆ-) ಶ್ರೀಪರಮಾತ್ಮನ ಅರ್ಥಜ್ಞಾನ ಸಹಿತವಾದ ನಾಮಸ್ಮರಣೆಯು

ಸರ್ವಾಭೀಷ್ಟಗಳನ್ನು ಸಿಗುವುದರಿಂದ ಭಗವನ್ನಾಮವು ಚಾರು (ಮಂಗಲಕರವು) ಆಗುವುದು. ॥೨॥

ಅವ ॥ ೩ ಋಕ್ಕುಗಳು ಸವಿತೃದೇವತಾಕವು. ಗಾಯತ್ರೀ ಛಂದಸ್ಕವು.

ಋ ॥ (೨೫೬) ಅಭಿತ್ವಾ ದೇವಸವಿತರೀಶಾನಂ ವಾರ್ಯಾಣಾಂ । ಸದಾಽವನ್ಭಾಗಮೀಮಹೇ ॥೩॥

ಅ ॥ ಸವಿತಃ ದೇವ=ಸವಿತೃ ಶಬ್ದವಾಚ್ಯನಾದ ಶ್ರೀವಿಷ್ಣುವೇ, ಪ್ರಸಿದ್ಧ ಸವಿತೃ ದೇವನೇ, ಸದಾ=ನಿತ್ಯದಲ್ಲಿಯೂ, ಅವನ್=(ತನ್ನನ್ನು) ರಕ್ಷಿಸುವುದಕ್ಕಾಗಿ (ನಾನು) ವಾರ್ಯಾಣಾಂ=ವರಣೀಯಗಳಾದ(ಅಂಗೀಕಾರಾರ್ಹಗಳಾದ) ವಿತ್ತಗಳಿಗೆ, ಈಶಾನಂ=ಸ್ವಾಮಿಯಾದ, ಭಾಗಂ=(ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಇತ್ಯಾದಿ ಪ್ರಮಾಣಗಳಿಂದ) ಐಶ್ವರ್ಯಾದಿ ಗುಣಗಳು ಭಗವು. ಅದರ ಸಮೂಹರೂಪನಾದ, (ದೇವತಾ ಪಕ್ಷದಲ್ಲಿ) ಭಗ(ಷಡ್ಗುಣ)ರೂಪನಾದ ಶ್ರೀಹರಿಯ ಸಂಬಂಧಿಯಾದ, ತ್ವಾ=ನಿನ್ನನ್ನು, ಅಭಿ ಈಮಹೇ=ತನ್ನ ರಕ್ಷಣೆಯನ್ನು ಇಚ್ಛಿಸುತ್ತಾ ನಿನ್ನನ್ನು ಶರಣು ಹೊಂದುತ್ತೇನೆ. ಅವನ್ ಎನ್ನುವುದು ಏಕವಚನವಾದ ಪ್ರಯುಕ್ತ ಅಭಿಏಮಿ ಎಂದು ಏಕವಚನಾರ್ಥದಲ್ಲಿ ಬಹುವಚನವು.) ॥೩॥

ಭಾ ॥ (೧)ಸವೀತೇತ್ಯಪರಂ ರೂಪಂ ಜಗತ್ಕಾರಣಮೀಶಿತುಃ। (೨) ವಿತ್ತಾನಾಮೀಶ್ವರಂ ತಂ ತು ವಾರ್ಯಂ ಹಿ ವರಣೀಯತಃ । ವಿತ್ತಂ (೩) ರಕ್ಷನ್ನವನ್ನಿತ್ಯಮಾತ್ಮಾನಂ ಭಾಗಮೇಮ್ಯಹಂ ॥ ತ್ವಾಮೈಶ್ವರ್ಯಾದಿಸಮಿತಿಂ ॥೩॥

ಅ ॥ (೧) (ಈ ಋಕ್ಕಿನಲ್ಲಿ ಮುಖ್ಯವಾಗಿ ಶ್ರೀವಿಷ್ಣುವೇ ಸವಿತೃ ಶಬ್ದವಾಚ್ಯನು.) (ಮುಖ್ಯವಾಗಿ ಸವಿತೃ ಶಬ್ದವಾಚ್ಯನು ಶ್ರೀವಿಷ್ಣುವೇ ಎಂದಾದರೆ ತಮಗ್ನಿರುವಾಚ ಸವಿತಾ ವೈ ಪ್ರಸವಾನಾಮೀಶೇ ತಮೇವೋಪಧಾವೇತಿ ಸ ಸವಿತಾರಮುಪಸಸಾರಾಭಿತ್ವಾ ದೇವಸವಿತರಿತ್ಯನೇನ ತೃಚೇನ ಎಂಬ ಬ್ರಾಹ್ಮಣದಲ್ಲಿ ಪ್ರಸವಾನಾಮೀಶೇ ಎಂದು ಸೂರ್ಯಲಿಂಗವು ಹೇಗೆ ಕೂಡುತ್ತದೆ? ಎಂದರೆ) ಸರ್ವೇಶ್ವರನಾದ ಶ್ರೀಹರಿಯ ಸವಿತಾ ಎಂಬ ಸವಿತೃ ಶಬ್ದ ಪ್ರವೃತ್ತಿ ನಿಮಿತ್ತವಾದ ಜಗತ್ಕಾರಣವಾದುದು ಇನ್ನೊಂದು ರೂಪವು. (ಇದರಿಂದ ಪ್ರಸವಾನಾಮೀಶೇ ಎನ್ನುವುದೂ ಸವಿತ್ರಂತರ್ಗತ ಶ್ರೀಹರಿಗೇನೇ ಮುಖ್ಯ ಲಿಂಗವು.) (೨) (ವಾರ್ಯಾಣಾಮೀಶಾನಂ ಎನ್ನುವುದಕ್ಕೆ ಅರ್ಥ ಹೇಳುತ್ತಾರೆ.) ದ್ರವ್ಯಗಳಿಗೆ ಅಧಿಪತಿಯು. (ದ್ರವ್ಯವು ವಾರ್ಯ ಶಬ್ದವಾಚ್ಯವಾಗುವುದು ಹೇಗೆಂದರೆ) ದ್ರವ್ಯವು ಸರ್ವರಿಂದಲೂ ಅಂಗೀಕಾರಾರ್ಹವಾಗಿರುವುದರಿಂದ ವಾರ್ಯವೆನಿಸುತ್ತದೆ.ಅವದ್ಯ ಪರ್ಣವರ್ಯಾ ಗರ್ಹ್ಯಪಣಿತವ್ಯಾನಿರೋಧೇಷು ಎಂಬ ಸೂತ್ರೋಕ್ತವಾದ ಅನಿರೋಧರೂಪವಾದ ಉಪಾಧಿಯನ್ನೂ ವಾರ್ಯಾಣಾಂ ಎಂಬಲ್ಲಿ ವಿವಕ್ಷಾ ಮಾಡದೆ ವರಣೀಯತ್ವರೂಪವಾದ ಯೌಗಿಕಾರ್ಥವನ್ನು ವಿವಕ್ಷಾ ಮಾಡಿರುವುದರಿಂದ ಋಹಲೋರ್ಣ್ಯತ್ ಎಂಬ ಸೂತ್ರದಿಂದ ವೃಞ ಧಾತುವಿಗೆ ಣ್ಯತ್ ಪ್ರತ್ಯಯವು ಬಂದು ವಾರ್ಯವೆಂದಾಗುವುದು ಎಂದು ಹಿ ಶಬ್ದಾರ್ಥವು. (೩) (ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ಎಂಬ ಪ್ರಮಾಣದಿಂದ ತನ್ನ ರಕ್ಷಣೆಯು ಅಂತರಂಗವಾಗಿರುವುದರಿಂದ) ತನ್ನನ್ನು ನಿತ್ಯದಲ್ಲಿಯೂ ಅವನ್=ರಕ್ಷಿಸುವುದಕ್ಕಾಗಿ ನಾನು ದ್ರವ್ಯಗಳಿಗೆ ಅಧಿಪತಿಯಾದ ಭಾಗಂ=ಐಶ್ವರ್ಯಾದಿ ಗುಣಗಳ ಸಮೂಹ ರೂಪನಾದ ಆ ಪ್ರಸಿದ್ಧನಾದ ನಿನ್ನನ್ನು ತನ್ನನ್ನು ರಕ್ಷಿಸುವುದಕ್ಕಾಗಿ ಶರಣು ಹೊಂದುತ್ತೇನೆ.

ವಿ ॥ ಯದ್ಯಪಿ ಅವನ್ ಎನ್ನುವುದು ಸಂಬುದ್ಧ್ಯಂತವಾಗಿ ವ್ಯಾಖ್ಯಾನ ಮಾಡಲಿಕ್ಕೆ ಶಕ್ಯವಾಗುತ್ತದೆ. ಅವನ್

ಎನ್ನುವುದು ಸವಿತೃವಿಗೆ ವಿಶೇಷಣವು ಎಂದು ಹೇಳಿದರೂ ರಕ್ಷಣ ಪ್ರಯೋಜನವು ಲಭಿಸುವುದರಿಂದ ಕರ್ತೃ ವಿಶೇಷಣವು ಎಂದು ಏತಕ್ಕೆ ಹೇಳಬೇಕು ಎಂದರೆ-ಸಾಕ್ಷಾತ್ಪ್ರಯೋಜನ ಲಾಭವಾಗುವುದಕ್ಕಾಗಿ. ಅದರಿಂದ ಸಾಕ್ಷಾತ್ಪ್ರಯೋಜನಲಾಭವು ಹೇಗೆಂದರೆ -ಲಕ್ಷಣಹೇತ್ವೋಃ ಕ್ರಿಯಾಯಾಃ=ಕ್ರಿಯಾಂತರಕ್ಕೆ ಚಿಹ್ನೆವಾಚಕವಾದ ಮತ್ತೂ ಹೇತುವಾಚಕವಾದ ಧಾತುವಿನದ್ವೆಶೆಯಿಂದ ಲಟಿಗೆ ಶತೃಶಾನಚ್‌ಪ್ರತ್ಯಯಗಳು ಬರುತ್ತವೆ. ಹೇತು ಶಬ್ದದಿಂದ ಸಾಧನವೂ ಫಲವೂ ಇಲ್ಲಿ ವಿವಕ್ಷಿತವು. ಹೇತು ಎಂಬ ಅರ್ಥದಲ್ಲಿ ಅವನ್ ಎನ್ನುವುದು ಶತ್ರಂತ ಪದವು. ರಕ್ಷಿಸುವುದಕ್ಕಾಗಿ ಎಂದರ್ಥವು. ಸವಿತೃವಿನ ಶರಣೆಯನ್ನು ಹೊಂದುವುದು ಫಲವಾಗಿರುವುದರಿಂದ ರಕ್ಷಣೆಯು ಹೇತುವೆನ್ನಿಸುತ್ತದೆ. ಆದ ಕಾರಣ ರಕ್ಷಣವಾಚಕವಾದ ಅವಧಾತುವಿನಿಂದ ಶತೃಪ್ರತ್ಯಯದಿಂದ ಸಾಕ್ಷಾತ್ಪ್ರಯೋಜನಲಾಭವಾಗುತ್ತದೆ. ತನ್ನನ್ನು ರಕ್ಷಿಸುವುದಕ್ಕಾಗಿ ಎಂದು ಅನ್ವಯವು ||೩||

ಋ || (೨೫೭) ಯಶ್ಚಿದ್ಧಿ ತ ಇತ್ಥಾಭಗಃ ಶಶಮಾನಃ ಪುರಾ ನಿದಃ || ಅದ್ವೇಷೊ ಹಸ್ತಯೋರ್ದಧೇ ||೪||

ಅ || (ಎಲೋ ವಿಷ್ಣುವೇ) ಇತ್ಥಾ=ವಿಕಾರವಿಲ್ಲದಿರುವುದರಿಂದ ಹೀಗೆಯೆ ಇರುವ, (ಅಂದರೆ ಈಗ ಇರುವಂತೆಯೇ ಸರ್ವದಾ ಇರುವ) ಶಶಮಾನಃ=(ಶ=ಸುಖ, ಅತಿಶಯಾರ್ಥದಲ್ಲಿ ದ್ವಿರ್ವಚನವು. ಶಶಂ ಮನ್ಯತೇ=ಅನುಭವತಿ ಎಂಬವ್ಯುತ್ಪತ್ತಿಯಿಂದ,) ಅತಿಶಯಿತ ಸುಖವನ್ನು ಅನುಭವಿಸುತ್ತಿರುವ, (ಅಂದರೆ ಸುಖಾಧಿಕ್ಯವುಳ್ಳ) ನಿದಃ=(ನಿಹನ್ ಶಬ್ದವು ಅತಿಶಯಿತದೂರಾರ್ಥಕವು) ಬಹು ಪ್ರಾಚೀನನಾದ ಚತುರ್ಮುಖನಿಗಿಂತಲೂ, ಪುರಾ=ಪೂರ್ವಕಾಲೀನನಾದ, ಅದ್ವೇಷಃ=ದ್ವೇಷ ಮೊದಲಾದ ದೋಷಗಳಿಲ್ಲದಿರುವ, ಯಶ್ಚಿತ್=ಇಂತಹ ಯಾವುದೋ ಒಂದು, ತೇ=ನಿನ್ನ, ಭಗಃ =ಪರಮೈಶ್ವಯಾದಿರೂಪವಾದ ಶರೀರವಿದೆಯೋ, (ಅಂತಪದನ್ನು ಹೇಗೆ ಮಗನು ಅತಿ ಸ್ನೇಹವಿರುವ ತಂದೆಯ ೨ ಕೈಗಳನ್ನು ತನಗೆ ಅಭೀಷ್ಟಗಳನ್ನು ಕೊಡುವುದಕ್ಕಾಗಿ ಗೃಹಿಸುತ್ತಾನೋ ಹಾಗೆಯೇ) ನಾನು ಹಸ್ತಯೋರ್ದಧೇ=(ಡುಧಾಞ್‌ಧಾರಣೇ) ೨ ಕೈಗಳಲ್ಲಿ ಧರಿಸಿದೆನು. (ಅಂದರೆ ಐಶ್ವಯಾದಿ ರೂಪವಿಗ್ರಹವು ಭಗವಂತನ ಸ್ವರೂಪವು. ಅಂತಹ ಭಗವದ್ರೂಪದ ೨ ಕೈಗಳನ್ನು ನನಗೆ ಅಭೀಷ್ಟವನ್ನು ಕೊಡುವುದಕ್ಕಾಗಿ ಸಂಗ್ರಹಿಸುತ್ತೇನೆ. (ಈ ವಿಷಯದಲ್ಲಿ ಜಗೃಭ್ಮಾ ತೇ ದಕ್ಷಿಣಮಿಂದ್ರ ಹಸ್ತಂ ಎಂದು ಶ್ರುತಿಯು,) ಹಿ=ನಿಶ್ಚಯವು. (ದೇವತಾಂತರದಲ್ಲಿ) ದೇವ ಇತ್ಯಾಯಶ್ಚಿತ್, ತೇ=ನಿನಗೆ, ಸ್ವಾಮಿಯಾದ, ಶಶಮಾನಃ ನಿದಃ ಪುರಾ ಭಗಃ=ಐಶ್ವರ್ಯಾದಿರೂಪನಾದ, ಅದ್ವೇಷಃ=ಶ್ರೀಹರಿಯು ತಮಹಂ ಹಸ್ತಯೋರ್ದಧೇಹಿ, ಎಂದು ಯೋಜನೆಯು. (ಹೀಗೆ ಯೋಜನಾಮಾಡದೆ ಹಿಂದಿನ ಯೋಜನೆಯಂತೆಯೇ ಸೂರ್ಯನಲ್ಲಿಯೂ ಇಟ್ಟುಕೊಂಡರೆ, ತೇ=ನಿನ್ನದ್ವಾದ, ಭಗಃ =ಪರಮೈಶ್ವರ್ಯಾದಿರೂಪವು ಇತ್ಯಾದಿ ಪ್ರಕಾರ ಯೋಜನಾ ಮಾಡಿದರೆ ಸುಖವಿಶಿಷ್ಟಾಭಿಧಾನದೇವಚ (೧.೨.೧೫) ಭೂಮಾ ಸಂಪ್ರಸಾದಾದಧ್ಯುಪದೇಶಾತ್ (೧.೩.೮.) ಇತ್ಯಾದಿಗಳಲ್ಲಿ ನಿರತಿಶಯ ಸುಖವು ಶ್ರೀವಿಷ್ಣುವಿನ ಲಿಂಗವೆಂದೇ ನಿರ್ಣೀತವಾಗಿರುವುದರಿಂದ ನಿರತಿಶಯ ಸುಖವಿಶಿಷ್ಟಾಭಿಧಾನದೇವಚ (೧.೨.೨೫) ಭೂಮಾ ಸಂಪ್ರಸಾದಾದಧ್ಯುಪದೇಶಾತ್ (೧. ೩. ೮) ಇತ್ಯಾದಿಗಳಲ್ಲಿ ನಿರತಿಶಯ ಸುಖವು ಶ್ರೀವಿಷ್ಣುವಿನ ಲಿಂಗವೆಂದೇ ನಿರ್ಣೀತವಾಗಿರುವುದರಿಂದ ನಿರತಿಶಯ ಸುಖತ್ವೋಕ್ತಿಯು ವಿರುದ್ಧವಾಗುವುದು. ಮತ್ತೂ ದಹರ ಉತ್ತರೇಭ್ಯಃ (೧. ೩. ೧೪) ಸರ್ವಧರ್ಮೋಪಪತ್ತೇಶ್ಚ (೨.೧.೩೮) ಇತ್ಯಾದಿಗಳಲ್ಲಿ ನಿರ್ದೋಷಕತ್ವವು ಶ್ರೀವಿಷ್ಣುವಿನದ್ದೇ ಧರ್ಮವು ಎಂದು ನಿರ್ಣೀತವಾಗಿರುವುದರಿಂದ ನಿರ್ದೋಷತ್ವ ರೂಪವಾದ ಲಿಂಗದಿಂದಲೂ ವಿರೋಧವು ಬರುವುದು.) ||೪||

ಭಾ ॥ (೧) ಯೋऽಪಿ ತೇ ಪರಮೋ ಭಗಃ । ಇತ್ಥಂ ಭೂತೋऽವಿಕಾರಿತ್ವಾಚ್ಛಶಮಾನಃ ಸುಖಾಧಿಕಃ । ನೇದೀಯಸೋ ಬ್ರಹ್ಮಣೋऽಪಿ ಪೂರ್ವೋ ದ್ವೇಷಾದಿವರ್ಜಿತಃ । ಹಸ್ತಯೋಸ್ತಂ ದಧೇ ದೇವ ತವ ರೂಪಮನಾಮಯಂ ॥ (೨) ನಿದೋ ದವೀಯ ಇತಿ ತು ವಿರುದ್ಧಾರ್ಥದ್ವಯಾಭಿಧೌ ॥ ದೂರಸಾಮಿಪ್ಯವಚನಾವುಭಾವಪಿ ಮಹೋ ದಧೌ ॥ (೩) ಯದಾऽನ್ಯಸ್ಸವಿತಾ ದೇವಸ್ತವ ಸ್ವಾಮೀ ಭಗೋ ಹರಿಃ। ಅದ್ವೇಷೋ ವಿಷ್ಣುರಿತ್ಯುಕ್ತೇಸ್ತಮಹಂ ಹಸ್ತಯೋರ್ದಧೇ ॥೪॥

ಅ ॥ (೧) ವಿಕಾರವಿಲ್ಲದಿರುವುದರಿಂದ ಈಗ ಇರುವಂತೆ ಸದಾ ಇರುವ, (ಶತಮಾನಃ) ಸುಖಾಧಿಕ್ಯವುಳ್ಳ, ಅತಿ ಪ್ರಾಚೀನ ಕಾಲೀನನಾದ ಚತುರ್ಮುಖ ಬ್ರಹ್ಮನಿಂದಲೂ ಪೂರ್ವಕಾಲೀನನಾದ, ದ್ವೇಷಾದಿದೋಷಗಳಿಲ್ಲದಿರುವ ಇಂತಹ ಯಾವುದು ನಿನ್ನ ಪರಮೈಶ್ವರ್ಯಾದಿರೂಪವಾದ ಅತ್ಯುತ್ತಮ ವಿಗ್ರಹವಿದೆಯೋ, ಅಂತಹ ನಿನ್ನ ನಿರ್ದೋಷವಾದ ರೂಪವನ್ನು ಕೈಗಳಲ್ಲಿ ಧರಿಸುತ್ತೇನೆ. (ಅಂದರೆ-ಪುತ್ರನು ಸ್ನೇಹವಿರುವ ತಂದೆಯ ೨ ಕೈಗಳನ್ನು ತನಗೆ ಅಭೀಷ್ಟ ಕೊಡುವುದಕ್ಕಾಗಿ ಗ್ರಹಿಸುವಂತೆ ಇಂತಹ ಭಗವದ್ರೂಪದ ಹಸ್ತಗಳನ್ನು ನನಗೆ ಅಭೀಷ್ಟವನ್ನು ಕೊಡುವುದಕ್ಕಾಗಿ ಸಂಗ್ರಹಿಸುತ್ತೇನೆ.) (೨) (ನಿದಃ ಎಂಬುವುದು ಅವ್ಯಯವು. ಇದು, ಉತ ಬ್ರುವಂತು ನೋ ನಿದಃ ಎಂಬ ಋಕ್ಕನ್ನು ವ್ಯಾಖ್ಯಾನ ಮಾಡುವ ಕಾಲದಲ್ಲಿ ನಿದಸ್ತಸ್ಯ ಸಮೀಪಗಾಃ ಎಂದು ಸಾಮೀಪ್ಯ ಎಂಬ ಅರ್ಥದಲ್ಲಿ ವ್ಯಾಖ್ಯಾತವಾಗಿದೆ. ಇಲ್ಲಿ ದೂರ ಎಂಬ ಅರ್ಥದಲ್ಲಿ ವ್ಯಾಖ್ಯಾತವಾಯ್ತು. ಆದಕಾರಣ ಇದು ಹೇಗೆ ಕೂಡುತ್ತದೆ ಎಂದರೆ) (ಹೇಗೆ ಆರಾತ್ ಶಬ್ದವು ಆರಾದ್ದೂರ ಸಮೀಪಯೋಃ ಎಂಬ ಕೋಶದಿಂದ ದೂರ ಸಮೀಪಗಳೆಂಬ ೨ ವಿರುದ್ಧಾರ್ಥಗಳನ್ನು ಹೇಳುತ್ತದೋ, ಹಾಗೆಯೇ) ನಿದಃ ದವೀಯಃ ಎಂಬುವ ೨ ಶಬ್ದಗಳೂ ಪ್ರತ್ಯೇಕವಾಗಿ ವಿರುದ್ಧಾರ್ಥಗಳೆರಡನ್ನು ಹೇಳುತ್ತವೆ. ಅಂದರೆ ಎರಡು ಶಬ್ದಗಳೂ ದೂರ ಸಾಮೀಪ್ಯ ಎಂಬ ವಿರುದ್ಧಾರ್ಥಗಳೆರಡನ್ನು ಹೇಳುತ್ತವೆಂದು ನಾಮಮಹೋದಧಿ ಎಂಬ ಗ್ರಂಥದಲ್ಲಿ ಉಕ್ತವಾಗಿದೆ. (ಭಾರತ, ಭೀಮ ಇತ್ಯಾದಿ ಶಬ್ದಗಳಂತೆ ನಾಮೈಕದೇಶ ಗ್ರಹಣವು) (೩) (ಹೀಗೆ ಶ್ರೀವಿಷ್ಣುವಿನಲ್ಲಿ ಋಕ್ಕನ್ನು ವ್ಯಾಖ್ಯಾನ ಮಾಡಿ ದೇವತಾಂತರದಲ್ಲಿಯೂ ವ್ಯಾಖ್ಯಾನ ಮಾಡುತ್ತಾರೆ.) ಯಾವಾಗ ಶ್ರೀವಿಷ್ಣುವಿನಿಂದ ಭಿನ್ನವಾದ ಸೂರ್ಯದೇವನು ವಿವಕ್ಷಿತನಾಗುತ್ತಾನೋ, (ಆಗ ಈ ರೀತಿಯಾಗಿ ಯೋಜನಾ ಮಾಡಬೇಕು.) (ಎಲೋ ಸೂರ್ಯನೇ, ನಿನಗೆ ಸ್ವಾಮಿಯಾದವನು, ಐಶ್ವರ್ಯಾದಿರೂಪನಾದವನು ಯಾವ ಶ್ರೀಹರಿಯು ಇದ್ದಾನೋ, ಅಂತಹ ಶ್ರೀಹರಿಯನ್ನು ನಾನು ಕೈಗಳಲ್ಲಿ ಸಂಗ್ರಹಿಸುತ್ತೇನೆ. (ಈ ವಿಶೇಷಣಗಳು ವಿಷ್ಣು ವಿಷಯಕಗಳು, ಹೇಗೆ ಆಗುವುವೆಂದರೆ) ಗ್ರಂಥಾಂತರಲ್ಲಿ ಅದ್ವೇಷೋ ವಿಷ್ಣುಃ ಎಂದು ಅದ್ವೇಷತ್ವವು ವಿಷ್ಣು ಲಿಂಗವೆಂದು ಹೇಳಿದೆ. (ಹಾಗೆಯೇ ನಿರ್ವಿಕಾರತ್ವಾದಿಗಳೂ ಶ್ರೀವಿಷ್ಣುವಿನದ್ದೇ ಲಿಂಗಗಳು ಎನ್ನುವಲ್ಲಿ ನಿರ್ವಿಕಾರೋऽಕ್ಷರಃ ಶುದ್ಧಃ, (2) ಆನಂದಮಯೋऽಭ್ಯಾಸಾತ್ (3) ವಾಸುದೇವೋವಾ ಇದಮಗ್ರ ಆಸೀನ್ನ ಬ್ರಹ್ಮಾನಚ ಶಂಕರಃ । (4) ಬ್ರಹ್ಮಾದೇವಾನಾಂ ಪ್ರಥಮಃ ಸಂಬಭೂವ (5) ನಿರಸಿಷ್ಮೋ ನಿರವದ್ಯಃ ಇದು ಮೊದಲಾದ ಪ್ರಮಾಣಗಳು ಇವೆ. ॥೪॥

ಋ ॥ (೨೫೮) ಭಗ ಭಕ್ತಸ್ಯ ತೆ ವಯಮುದಶೇಮ ತವಾವಸಾ । ಮೂರ್ಧಾನಂ ರಾಯ ಆರಭೇ ॥ ॥೫॥೧೩॥

ಅ ॥ (ಸವಿತಃ=ಎಲೋ ಶ್ರೀಹರಿಯೇ,) ತವ=ನಿನ್ನ, ಅವಸಾ=ರಕ್ಷಣೆಯಿಂದ, (ನಿನ್ನ ರಕ್ಷಣೆಯ ಬಲದಿಂದ)

ವಯಂ=ನಾವು, ಆರಭೇ=(ನಿನ್ನ ಸಂಬಂಧಿಯಾದ ವಿದ್ಯೆಯನ್ನು) ಆರಂಭಿಸುತ್ತೇವೆ. (ಆಮೇಲೆ) ಭಗಭಕ್ತಸ್ಯ ಭಗ=ಐಶ್ವರ್ಯಾದಿಗಳು, ಭಕ್ತಸ್ಯ=ಅನ್ನ (ಭೋಗ್ಯ)ವಾಗಿವುಳ್ಳ ಪರಮಾತ್ಮನಾದ, ತೇ, ನಿನ್ನ, ರಾಯಃ=ಪ್ರಸಿದ್ಧವಾದ ವಿತ್ತದ್ವೆಶೆಯಿಂದ, ಮೂರ್ಧಾನಂ=ಉತ್ತಮವಿತ್ತವಾದ ಮೋಕ್ಷಾಖ್ಯ ಸುಖವನ್ನೂ, ಉತ್ ಅಶೇಮ (ಅಶು ಭೋಜನೇ) ಚೆನ್ನಾಗಿ ಉಣ್ಣುವೆವು. (ದೇವತಾಂತರದಲ್ಲಿ ಆದರೂ) ಎಲೋ ಸೂರ್ಯನೇ, ನಾವು ನಿನ್ನ ರಕ್ಷಣೆಯಿಂದ, ನಿನ್ನದ್ವಾದ ವಿದ್ಯೆಯನ್ನು ಆರಂಭಿಸುತ್ತೇವೆ. ಆಮೇಲೆ ಭಗ ಭಕ್ತಸ್ಯ=ಐಶ್ವರ್ಯಾದಿ ಸ್ವರೂಪನಾದ ಶ್ರೀವಿಷ್ಣುವಿನ ಭಕ್ತನಾದ, ನಿನ್ನ ಸಂಬಂಧಿಯಾದ ಸುಪ್ರಸಿದ್ಧವಾದ ದ್ರವ್ಯಕ್ಕಿಂತಲೂ ಉತ್ತಮ ಸುಖವನ್ನುಣ್ಣುತ್ತೇವೆ ||೫||

**ಭಾ || ವಿಷ್ಣು ಭಕ್ತಸ್ಯ ತೇ ರಾಯೋ ಮೂರ್ಧಾನಂ ರಾಯ ಉತ್ತಮಂ । ತವಾವಸಾಽಽರಭೇ ವಿದ್ಯಾಮುಚ್ಚೈರಶ್ನಾಮಿ ತತ್ಫಲಂ|| (೨) ಐಶ್ವರ್ಯಾದಿ ಗುಣಾ ಯಸ್ಯ ಭಗೋ ಭಕ್ತಂ ಪರಾತ್ಮನಃ । ತಸ್ಯ ತೇ ವಿತ್ತಮಶ್ನಾನಿ ತವ ರಕ್ಷಾಬಲಾದ್ಧರೇ ||೫||೧೩||**

ಅ || (೧) (ಎಲೋ ಸೂರ್ಯನೇ) ನಿನ್ನ ರಕ್ಷಣೆಯ ಬಲದಿಂದ ನಿನ್ನದ್ವಾದ ವಿದ್ಯೆಯನ್ನು ಆರಂಭಿಸುತ್ತೇವೆ. ಆ ವಿದ್ಯೆಗೆ ಫಲಭೂತವಾದ, ಐಶ್ವರ್ಯಾದಿ ಸ್ವರೂಪನಾದ ಶ್ರೀವಿಷ್ಣುವಿನ ಸೇವಕನಾದ ನಿನ್ನ ಸಂಬಂಧಿಯಾದ, (ನಿನ್ನಿಂದ ಕೊಡಲ್ಪಡತಕ್ಕ) ರಾಯೋ ಮೂರ್ಧಾನಂ=ಪ್ರಸಿದ್ಧವಿತ್ತಕ್ಕಿಂತಲೂ ಉತ್ತಮವಾದ, ಸುಖವನ್ನೂ, (ಅಶೂ ಭೋಜನೇ) ಚೆನ್ನಾಗಿ ಉಣ್ಣುತ್ತೇವೆ. (೨) ಹೀಗೆ ದೇವತಾಂತರದಲ್ಲಿ ವ್ಯಾಖ್ಯಾನ ಮಾಡಿ ಶ್ರೀವಿಷ್ಣುವಿನಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಎಲೋ ಶ್ರೀಹರಿಯೇ ನಿನ್ನ ರಕ್ಷಣೆಯ ಬಲದಿಂದ, (ನಿನ್ನ ವಿದ್ಯೆಯನ್ನು ಆರಂಭಿಸುತ್ತೇವೆ.) ಆಮೇಲೆ, ಯಾವ ಶ್ರೀಪರಮಾತ್ಮನಿಗೆ ಭಗಃ=ಐಶ್ವರ್ಯಾದಿ ಗುಣಗಳು. ಭೋಗ್ಯವಾಗಿ ಇವೆಯೋ, ಅಂತಹ ನಿನ್ನ ವಿತ್ತವನ್ನು (ನಿನ್ನಿಂದ ಕೊಡಲ್ಪಡತಕ್ಕ ಮೋಕ್ಷಾಖ್ಯ ವಿತ್ತವನ್ನು) (ಅಶೂಭೋಜನೇ) ಉಣ್ಣುತ್ತೇವೆ. ||೫||೧೩||

ಅವ || ಇನ್ನು ೩೧ ಮಂತ್ರಗಳು ವರುಣದೇವತಾಕಗಳು.

**ಋ || (೨೫೯) ನಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ ವಯಶ್ಚನಾಮೀ ಪತಯಂತ ಆಪುಃ ।**
**ನೇಮಾ ಆಪೋಽನಿಮಿಷಂ ಚರಂತೀರ್ನಯೇ ವಾತಸ್ಯ ಪ್ರಮಿನನ್ತ್ಯಭ್ವಂ ||೬||**

ಅ || (ಮುಂದಿನ ವರುಣ ಪದವನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು.) ವರುಣನೆನಿಸಿದ ಎಲೋ ಶ್ರೀವಿಷ್ಣುವೇ) ತೇ=ನಿನ್ನ, ಕ್ಷತ್ರಂ=(ತ್ರೈಜ ಪಾಲನೇ) (ಕ್ಷತಾತ್ತ್ರಾಯತೇ ಎಂಬವ್ಯುತ್ಪತ್ತಿಯಿಂದ) (ಪ್ರಜೆಗಳನ್ನು) ಕೆಡಕಿನಿಂದ ರಕ್ಷಿಸುವಿಕೆಯನ್ನು (ಅಂದರೆ ಅನಿಷ್ಟ ಪರಿಹಾರದ ಮುಖ್ಯ ಕಾರಣವನ್ನು) ವಯಶ್ಚನ=ವಿರ್ಲಯೇಚ ವಿಶೇಷೇಚ ಎಂಬ ಕೋಶದಿಂದ ವಿಶಬ್ದವು ವಿಶೇಷವಾಚಕವು. ಸೋಽಸ್ಯಾಸ್ತಿ ಎಂಬ ಅರ್ಥದಲ್ಲಿ ಪ್ರಾಪ್ತವಾದ ಮತುಪಿಗೆ ಗುಣವಚನೇಭ್ಯೋ ಮತುಪೋ ಲುಕ್ ಎಂಬ ಸೂತ್ರದಿಂದ ಲೋಪವು, ತಥಾಚ) ವಿಶಿಷ್ಟ (ಉತ್ತಮರಾದ) ಅಮೀ=ಪರೋಕ್ಷ ಜ್ಞಾನಿಗಳೂ (ಅಂದರೆ ಯಾರು ಮುಕ್ತಿಯಲ್ಲಿರತಕ್ಕವರೋ ಅವರೂ ಕೂಡ) (ವಿಃ ಪಕ್ಷಿ ಪರಮಾತ್ಮನೋಃ ಎಂಬ ಪ್ರಮಾಣದಿಂದ) ಗರುಡರೂ ಕೂಡ, ನಹಿ ಆಪುಃ=ಹೊಂದುವುದೇ ಇಲ್ಲ. ತೇ=ನಿನ್ನ, ಸಹಃ=(ಶೂಪಃಸಹಃ) ಎಂದು ಬಲನಾಮಗಳಲ್ಲಿ. ಪಠಿತವಾದ, ಪ್ರಯುಕ್ತ ಬಲವನ್ನು ಕೂಡ, ನ=ಹೊಂದಲಿಲ್ಲ. ಮನ್ಯುಂ= (ಮನು ಅವಬೋದನೇ ಎಂಬ ಧಾತು ವ್ಯಾಖ್ಯಾನದಿಂದ) ಜ್ಞಾನವನ್ನು

ಕೂಡ. ನ=ಹೊಂದಲಿಲ್ಲ. (ಮನ್ಯು ಶಬ್ದವು ಕ್ರೋಧನಾಮಗಳಲ್ಲಿ ಪಠಿತವಾದ ಪ್ರಯುಕ್ತ ಕ್ರೋಧ ಎನ್ನುವುದು ರೂಢಾರ್ಥವಾಗಿದ್ದರೂ ಅದು ಗುಣವಾಗದಿರುವುದರಿಂದ ಶ್ರೀವಿಷ್ಣುವಿನಲ್ಲಿ ಸರ್ವಥಾ ಕೊಡದಿರುವ ಪ್ರಯುಕ್ತ ಅದನ್ನು ಸಂಸಾರದಿಂದ ಭಕ್ತರನ್ನು ಮೇಲಕ್ಕೆ ಬರುವ ಹಾಗೆ ಮಾಡುವ, (ಬಿಡುಗಡೆ ಮಾಡಿಸುವ) ಆಚಾರ್ಯರೂ ಕೂಡಾ, ನಾಪುಃ =ಹೊಂದುವುದಿಲ್ಲ. ಅನಿಮಿಷಂ=(ನಿಮಿಷಃ=ನಿಮೇಷವು, ಕಾಲ ವಿಶೇಷವು. ಅದಕ್ಕಿಂತ ಭಿನ್ನವಾದ ಕಾಲವು ಅನಿಮಿಷವು, ರೆಪ್ಪೆಗಳ ನಿಮೀಲನಾಭಾವವು (ಕಣ್ಣಿನ ಮುಚ್ಚಳಾಭಾವವು) (ಹೇಗೆ ಆದೀತೋ ಹಾಗೆ) ಸರ್ವಥಾ ಚರಂತೀಃ=ಶುಭಗಳನ್ನೇ ಆಚರಿಸುತ್ತಿರುವ ಇಮಾಃ=ಪ್ರಸಿದ್ಧರಾದ, ಆಪಃ=(ಆ ಪೋವೈ ಸರ್ವಾ ದೇವತಾಃ ಸಮಸ್ತ ದೇವತೆಗಳೂ ಅಪ್ ಶಬ್ದವಾಚ್ಯರಷ್ಟೇ, ಎಂಬ ಶ್ರುತಿಯಿಂದ) ಸಮಸ್ತ ದೇವತೆಗಳೂ, ಅಥವಾ ಜಲಾಭಿಮಾನಿಗಳಾದ ರಮಾದಿ ದೇವಿಯರು, ಅಥವಾ ತಂತಮ್ಮ ಕರ್ಮ ನಿರ್ಮಿತಗಳಾದ ಜಲಾತ್ಮಕ ದೇಹಗಳುಳ್ಳ ಗಂಗಾದಿ ನದ್ಯಭಿಮಾನಿದೇವತೆಗಳೂ ನೀನು ಮಾಡತಕ್ಕ ಅನಿಷ್ಟ ಪರಿಹಾರ ಕರಣಾದಿಗಳನ್ನು, ನಾಪುಃಹೊಂದುವುದಿಲ್ಲ. ಮತ್ತು, ಯೇ=ಯಾವ ದೇವತೆಗಳ ಸಮೂಹಗಳು, ವಾತಸ್ಯ=ಮುಖ್ಯ ವಾಯುವಿಗೆ, ಅಭ್ವಂ=ವಿಷ್ಣುವಿನ ಸಕಾಶಿದ್ದೆಶೆಯಿಂದ ಉತ್ಪತ್ತಿಯನ್ನು ಅಥವಾ ವಾತಸ್ಯ=ಶ್ರೀವಿಷ್ಣುವಿನ, ಅಭ್ವಂ=ಪ್ರಾದುರ್ಭಾವವನ್ನು ಪ್ರಮಿನಂತಿ=ತಿಳಿಯುತ್ತಾರೋ, ತೇಽಪಿ=ಅಂತಹ ಮಹಾಜ್ಞಾನಿಗಳೂ ಕೂಡ, ನಾಪುಃ=ಹೊಂದುವುದಿಲ್ಲ ॥೬॥

**ಭಾ ॥ (೧) ಕ್ಷತಾತ್ತ್ರಾಣಂ ತೇ ಬಲಸಂವಿದಂ ಚ ಪೂರ್ಣಂ ನಾಪುರ್ಮುಕ್ತಿಗಾ ಯೇ ವಿಶಿಷ್ಟಾಃ।ಅಪಿ ಸ್ವಯಂ ಸಂಸೃತೇರುತ್ಪತಂತಃ ಪತಯಂತೋಽನ್ಯಾನ್ ಶಿಷ್ಯಭಕ್ತಾನು ದಾರಾಃ।ಸದಾ ಶುಭಾನ್ಯಾಚರಂತೋಽಪಿ ದೇವಾಃ ಅಬ್ದೇವತಾ ಆಪ ಇತಿ ಶ್ರುತಿರ್ಯತ್।ಗಂಗಾದ್ಯಾ ವಾ ವಾಯುದೇವಸ್ಯ ವಿಷ್ಣೋರುತ್ಪತ್ತಿಂ ಯೇ ಜಾನತೇ ದೇವಸಂಘಾಃ। ವಯಸ್ಸುಪರ್ಣಾ ಇತಿ ವಾಪಿ ॥೬॥**

ಅ ॥ (೧) (ಎಲೋ ವರುಣನೆನಿಸಿದ ಶ್ರೀಹರಿಯೇ) ಪರೋಕ್ಷಜ್ಞಾನಿಗಳಾದ ಉತ್ತಮರಾದವರೂ, ಯಾರು ಮುಕ್ತಿಯಲ್ಲಿದ್ದಾರೋ, ಅಂತಹವರೂ ನಿನ್ನ ಪ್ರಜೆಗಳಿಗೆ ಬರತಕ್ಕ ಅನಿಷ್ಟಗಳ ಪರಿಹಾರಕ್ಕೆ ಮುಖ್ಯ ಕಾರಣವು ಯಾವುದಿದೆಯೋ ಅಂತಹದನ್ನು ನಿನ್ನ ಬಲವನ್ನೂ, ಜ್ಞಾನವನ್ನೂ, ಕೂಡ ಪೂರ್ಣವಾಗಿ ಹೊಂದುವುದೇ ಇಲ್ಲ. (ಅಂದರೆ ತದ್ಗುಣಸಾರತ್ವಾತ್ತದ್ವ್ಯಪದೇಶಃ ಪ್ರಾಜ್ಞವತ್ ಎಂಬ ಸೂತ್ರದಿಂದ ವಿಷ್ಣುವಿನ ಗುಣಗಳಿಗೆ ಸದೃಶಗಳಾದ ಗುಣಗಳು ಮುಕ್ತರಿಗೆ ಇದ್ದುದರಿಂದ ನಿಷೇಧವು ಹೇಗೆಂದರೆ-ಪೂರ್ಣವಾಗಿ ಹೊಂದುವುದಿಲ್ಲ. ಅಂದರೆ ವಿಷ್ಣುವಿನ ಗುಣಗಳಿಗೆ ಸದೃಶಗಳಾದ ಪೂರ್ಣ ಗುಣಗಳು ಮುಕ್ತರಿಗೆ ಇಲ್ಲ ಎಂದೇ ಹೇಳಿದ್ದಲ್ಲದೆ ಯಥಾ ಕಥಂಚಿತ್ ಶ್ರೀಹರಿಯ ಗುಣಗಳಿಗೆ ಸದೃಶಗಳಾದ ಗುಣಗಳು ಇಲ್ಲವೆಂದು ಹೇಳಿದ್ದಲ್ಲ.) ಯಾರು ತಾವಾಗಿಯೇ ಸಂಸಾರದಿಂದ ಮೇಲಕ್ಕೆ ಬಂದಿರುವರೋ (ಬಿಡುಗಡೆ ಹೊಂದಿರುವರೋ) ಅಂತಹ ಜೀವನ್ಮುಕ್ತರೂ (ಅಪರೋಕ್ಷ ಜ್ಞಾನಿಗಳೂ) ಕೂಡ ಹೊಂದುವುದಿಲ್ಲ. ಅಥವಾ ಇತರರಾದ ಶಿಷ್ಯರನ್ನೂ, ಭಕ್ತರನ್ನೂ ಸಂಸಾರದಿಂದ ಮೇಲಕ್ಕೆ ಬರುವಂತೆ ಮಾಡುವ (ಅಂದರೆ ಬಿಡುಗಡೆಯಾಗುವಂತೆ ಮಾಡುವ) ಯಾವ ಉತ್ತಮರಾದ ಆಚಾರ್ಯರು ಇದ್ದಾರೋ, ಅಂತಹವರೂ ಹೊಂದುವುದಿಲ್ಲ. ಸದಾ ಶುಭಗಳನ್ನೇ ಆಚರಿಸುತ್ತಿರುವ ಅಬಭಿಮಾನಿಗಳಾದ ಸಮಸ್ತ ದೇವತೆಗಳೂ ಹೊಂದುವುದೇ ಇಲ್ಲ. ಅಪೋವೈ ಸರ್ವಾ ದೇವತಾಃ ಎಂದು ಶ್ರುತಿಯು. ಅಥವಾ ಅಬಭಿಮಾನಿಗಳಾದ ರಮಾದಿ ದೇವಿಯರೂ ಅಥವಾ ತಂತಮ್ಮ ಕರ್ಮಗಳಿಂದ ನಿರ್ಮಿತ ಜಲದೇಹಗಳುಳ್ಳ ಗಂಗಾದಿ ನದ್ಯಭಿಮಾನಿಗಳೂ ಹೊಂದುವುದಿಲ್ಲ. ಅಥವಾ ಯಾವ ದೇವತೆಗಳ ಸಮೂಹಗಳು ವಾಯುದೇವರಿಗೆ ಶ್ರೀವಿಷ್ಣುವಿನಿಂದ ಉತ್ಪತ್ತಿಯನ್ನು ತಿಳಿಯುತ್ತಾರೋ ಅಂತಹ ಮಹಾಜ್ಞಾನಿಗಳೂ ಹೊಂದುವುದಿಲ್ಲ. ಅಥವಾ ವಾತಸ್ಯ=ವಾಯುದೇವನೆನಿಸಿದ

ಶ್ರೀವಿಷ್ಣುವಿಗೆ ಪ್ರಾದುರ್ಭಾವವನ್ನು ಯಾವ ದೇವ ಸಂಘಗಳು ತಿಳಿಯುತ್ತಾವೋ ಅಂತಹ ಮಹಾ ಜ್ಞಾನಿಗಳೂ ಕೂಡ ಹೊಂದುವುದೇಇಲ್ಲ. ಅಥವಾ (ವಿಹಗೇ ಗಗನೇ ಚ ವಿಃ=ಎಂಬ ಏಕಾಕ್ಷರರತ್ನ ಮಾಲಾದಲ್ಲಿ ಹೇಳಿದ ಪ್ರಕಾರ) ವಯಃ =ಗರುಡರೂ ಕೂಡ ಪೂರ್ಣವಾಗಿ ತಿಳಿಯುವುದಿಲ್ಲ. ||೬||

**ಖು || (೨೬೦) ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ।**

**ನೀಚೀನಾಃ ಸ್ಥುರುಪರಿ ಬುಧ್ನ ಏಷಾಮಸ್ಮೇ ಅಂತರ್ನಿಹಿತಾಃ ಕೇತವಃ ಸ್ಯುಃ ||೭||**

ಅ || ಪೂತದಕ್ಷಃ=ಪವಿತ್ರನಾಗಿ ಮಾಡಲ್ಪಟ್ಟ ಯಜಮಾನನುಳ್ಳ, ವರುಣಃ ರಾಜಾ=ಶ್ರೀಹರಿಯು, ಅಬುಧ್ನೇ=(ಬುಧ ಅವಗಮನೇ ಎಂಬ ಧಾತು ವ್ಯಾಖ್ಯಾನದಿಂದ) ಬುಧ್=ಜ್ಞಾನವು. ಬುಧಃ=ಜ್ಞಾನದ ಅಭಾವವು, ಬುಧ್ನಂ (ನಇಗೆ ಪರನಿಪಾತಾದಿಗಳು ಛಾಂದಸವು.) ಅಜ್ಞಾನವು ಅದರ ಅಭಾವವು, ಅಬುಧ್ನವು ಅತಿಶಯಿತಜ್ಞಾನವು. (ತೃತೀಯಾ ವಿಭಕ್ತ್ಯರ್ಥದಲ್ಲಿ ಸಪ್ತಮಿಯು.) ಜ್ಞಾನದಿಂದ (ಜ್ಞಾನಪೂರ್ವಕವಾಗಿ) ವನಸ್ಯ=(ವನಸಂಭಕ್ತೌ ಪಚಾದ್ಯಚ್) ತನ್ನನ್ನು ಸೇವಿಸುವವನಿಗೋಸ್ಕರ, ಊರ್ಧ್ವಂಸ್ತೂಪಂ=ಉತ್ತಮ ಸ್ಥಾನವನ್ನು, ದದತೇ=(ದದ ದಾನೇ) ಕೊಡುತ್ತಾನೆ. ಮತ್ತು ನೀಚೀನಾಃ=ಯಾರು ನೀಚ ಸ್ಥಾನದಲ್ಲಿ (ಮನುಷ್ಯ ಲೋಕಾದಿಗಳಲ್ಲಿ) ಇರುವವರೋ, ಅಂತಹವರೂ ಕೂಡ, (ವರುಣನೆನಿಸಿದ ಶ್ರೀಪರಮಾತ್ಮನನ್ನು ಸೇವಿಸಿರುವ ನಿಮಿತ್ತದಿಂದ) ಉಪರಿ=ಊರ್ಧ್ವಲೋಕದಲ್ಲಿದ್ದವರು (ಸ್ವರ್ಗದಲ್ಲಿರತಕ್ಕವರು) ಸ್ಥುಃ=(ಷ್ಠಾಗತಿ ನಿವೃತ್ತೌ) ಆಗುವವರು ಅಥವಾ ನೀಚೀನಾಃ=ನೀಚರಾದ ಮನುಷ್ಯಾದಿಗಳೋ, ಅವರೂ ಕೂಡ, ಉಪರಿ=ಮುಕ್ತಿಯಲ್ಲಿರುವವರು ಆಗುವರು. (ಈ ೨ ಅರ್ಥಗಳಲ್ಲಿಯೂ ಅವರು ನೀಚೀನರು ಹೇಗೆ? ಅಂದರೆ) ಅದರಲ್ಲಿ ೧ನೇ ಅರ್ಥದಲ್ಲಿ ಬುಧ್ನ ಏಷಾಂ ಎಂದು. ಏಷಾಂ=ಸ್ವರ್ಗವನ್ನು ಹೊಂದಬೇಕೆಂದು ಇಚ್ಛಿಸುವವರಿಗೆ (ಬುಧ್ನಃ ಅಧೋ ಭಾಗಃ) ಸುರರ ಲೋಕವಾದ ಸ್ವರ್ಗದ್ದೆಶೆಯಿಂದ ನೀಚಲೋಕವಾದ ಭೂವೋಕವು ಯಾವ ಕಾರಣದಿಂದ ನಿವಾಸ ಸ್ಥಾನವೋ ಆದಕಾರಣದಿಂದ ಸ್ವರ್ಗಸ್ಥರಿಗಿಂತ ಭೂಮಿಯಲ್ಲಿರತಕ್ಕವರು ನೀಚೀನರು. ೨ನೇ ಅರ್ಥದಲ್ಲಿ ಆದರೂ ಬುಧ್ನ ಶಬ್ದಕ್ಕೆ ಅಧಸ್ತನವೆಂದರ್ಥವು. ಏಷಾಂ=ಮನುಷ್ಯಾದಿಗಳಿಗೆ ಬುಧ್ನಃ=ದೇವತೆಗಳದ್ದೆಶೆಯಿಂದ ಕೆಳಗಿನದ್ದೂ ಅಂದರೆ ಮನುಷ್ಯಾದಿಗಳಿಗೆ ಸ್ವರೂಪ ಭೂತಗಳಾದ ಯಾವವು ಆನಂದಾದಿ ಗುಣಗಳು ಇವೆಯೋ ಅವುಗಳು ದೇವತೆಗಳದ್ದೆಶೆಯಿಂದ ಸ್ವಲ್ಪಗಳು ಅಥವಾ ಮನುಷ್ಯಾದಿಗಳಿಗೆ ಬುಧ್ನಃ=(ಬುಧಃ ಜ್ಞಾನಸ್ಯಪ್ರತಿಷೇಧಃ, ಬುಧ್ನಃಂ, ಎಂದು ಹೇಳಿದ ಪ್ರಕಾರ) ಅಪ್ರಕಾಶವು, (ಅಜ್ಞಾನವು)ಇದೆ. ದೇವತೆಗಳಿಗೆ ಅಜ್ಞಾನವಿಲ್ಲ.) ಆದಕಾರಣ ಮನುಷ್ಯರು ನೀಚರು. (ಈ ವರುಣನ ಆಜ್ಞೆಯಿಂದ ಯಾವ ಜೀವರು ನೀಚಿನಾಃ=ಯತ್ಕಿಂಚಿತ್ ವಸ್ತುವಿಗಿಂತ ನೀಚರೋ, (ಅವರೇ ಉಪರಿ=ಕಿಂಚಿತ್ ವಸ್ತುವಿಗಿಂತ ಮೇಲಿನವರೂ ಆಗುತ್ತಾರೆ. (ಅಂದರೆ ನೀಚೋಚ್ಚ ಭಾವದಿಂದಲೇ ಇರುತ್ತಾರೆ.) (ಅದಕ್ಕೆ ಅವಧಿಯಲ್ಲವೋ ಎಂದರೆ) ಬುಧ್ನ ಏಷಾಂ ಎಂದು ಏಷಾಂ=ನೀಚೋಚ್ಚ ಭಾವದಿಂದ ಇರುವ ಜೀವರಿಗೆ, ಬುಧ್ನಃ=ಮೂಲ ಭೂತನಾದವನು ಒಬ್ಬನು ಚತುರ್ಮುಖನು ಇದ್ದಾನೆ. (ಅಂತಹ ವರುಣನೆನಿಸಿದ ಶ್ರೀಹರಿಯ ಅನುಗ್ರಹದಿಂದ) ಅಸ್ಮೇ=ನಮ್ಮ ಅಂತಃ=ಹೃದಯದಲ್ಲಿ, ಕೇತವಃ=ಜ್ಞಾನಗಳು, ನಿಹಿತಾಃ=ನಿತ್ಯದಲ್ಲಿ ಇಡಲ್ಪಟ್ಟವುಗಳು, ಸ್ಯುಃ=ಆಗುವವು. ಅಂದರೆ ನಾವು ಜ್ಞಾನಿಗಳು ಆಗುವೆವು.) ||೭||

ವಿ ॥ ಈ ಋಕ್ಕಿನಲ್ಲಿ ಸ್ಯು: ಎನ್ನುವುದಕ್ಕೆ ಪದಕಾಲದಲ್ಲಿ ಸ್ಯುರಿತಿಸ್ಯು: ಎಂದು ೨ ಸಲ ಉಚ್ಚಾರಣವು ಸ್ವಯೋಗ್ಯವಾದುದು ಎಷ್ಟು ಜ್ಞಾನವಿದೆಯೋ ಅಷ್ಟು ಜ್ಞಾನವೂ ಅಭಿವ್ಯಕ್ತಿಯಾಗ ಬೇಕೆಂಬ ಪ್ರಾರ್ಥನೆಯನ್ನು ತೋರಿಸುವುದು ॥೭॥

**ಭಾ ॥ (೧) ಅಬುಧ್ನೇ ಪ್ರಕಾಶತಃ ಸಂಭಜತಃ ಸ್ವಮುಚ್ಚೈ:। ಸ್ತೂಪಂ ಸ್ಥಾನಂ ದದತೇ (೨) ಪೂತದಕ್ಷೋ ನೀಚಸ್ಥಾ ಅಪ್ಯೂರ್ಧ್ವಗಾಸ್ತೇನ ತಸ್ಥು:।ನೀಚಾ ಶ್ಚ ಯೇ ಮುಕ್ತಾಗಾ ಮಾನುಷಾದ್ಯಾ (೩) ಸ್ತೇಷಾಂ ಬುಧ್ನೋ ನೀಚಲೋಕಸ್ಸುರೇಭ್ಯ: ॥ ನೀಚಾ ಗುಣಾ ಅಪ್ರಕಾಶೋಽಥ ವೈಷಾಂ (೪) ನೀಚೋಚ್ಚತ್ವಂ ಕ್ರಮಶಶ್ಚಾವಿರಿಂಚಾತ್ ॥ ಅಸ್ಮಾಕ ಮಂತರ್ನಿಹಿತಾನಿ ನಿತ್ಯಂ ಜ್ಞಾನಾನಿ ಭೂಯಾಸುರತೋಽಧಿಕಾನಿ॥ (೫) ಭವಂತ್ಯರ್ಹಾ ಭವಿತುಂ ವಾ ಭವಿಷ್ಯಾ: ಸ್ಯುರ್ದ್ವಿಗ್ರಹೇ ಪ್ರಾರ್ಥನೈವಾಧಿಕಾರ್ಥೇ ॥೭॥**

ಅ ॥ ಯಾಜಮಾನನನ್ನು ಪವಿತ್ರೀಕರಿಸಿದ ಶ್ರೀಹರಿಯು, ಅಬುಧ್ನೇ=ಪ್ರಕಾಶದಿಂದ (ಜ್ಞಾನ ಪೂರ್ವಕವಾಗಿ) ತನ್ನನ್ನು ಚೆನ್ನಾಗಿ ಸೇವಿಸುವವನಿಗೋಸ್ಕರ, ಉತ್ತಮವಾದ ಸ್ತೂಪಂ=ಸ್ಥಾನವನ್ನು, ಕೊಡುತ್ತಾನೆ. (೨) ನೀಚಸ್ಥಾನವಾದ ಮರ್ತ್ಯಲೋಕಾದಿಗಳಲ್ಲಿರುವವರೂ ವರುಣನೆನಿಸಿದ ಭಗವಂತನ ಸೇವಾನಿಮಿತ್ತದಿಂದ ಉತ್ತಮವಾದ ಸ್ವರ್ಗಲೋಕಾದಿಗಳಲ್ಲಿರುವವರು ಆಗುವರು. ನೀಚರಾದ ಮನುಷ್ಯಾದಿಗಳು ಯಾರು ಇರುವರೋ ಅವರೂ ಮುಕ್ತಿಯಲ್ಲಿರುವವರು ಆಗುತ್ತಾರೆ. (೩) (೧ನೇ ಅರ್ಥದಲ್ಲಿ) ಅಂತಹ ಸ್ವರ್ಗವನ್ನು ಹೊಂದಬೇಕೆಂದು ಇಚ್ಛಿಸುವವರಿಗೆ ಬುಧ್ನ:=ಅಧೋ ಭಾಗವು. (ಅಂದರೆ ಸ್ವರ್ಗಲೋಕಕ್ಕಿಂತ ನೀಚಲೋಕವಾದ ಭೂಲೋಕವು ಇಚ್ಛಿಸುವವರಿಗೆ ಬುಧ್ನ: =ಅಧೋ ಭಾಗವು. (ಅಂದರೆ ಸ್ವರ್ಗಲೋಕಕ್ಕಿಂತ ನೀಚಲೋಕವಾದ ಭೂಲೋಕವು ಯಾವ ಕಾರಣದಿಂದ ಆವಾಸಸ್ಥಾನವೋ ಆದ ಕಾರಣ ಸ್ವರ್ಗಸ್ಥರಿಗಿಂತ ಭೂಮಿಯಲ್ಲಿರುವವರು ನೀಚರು) (೨ನೇ ಅರ್ಥದಲ್ಲಿ) ಮನುಷ್ಯಾದಿಗಳಿಗೆ ಸ್ವರೂಪಭೂತಗಳಾದ ಆನಂದಾದಿಗುಣಗಳು ದೇವತೆಗಳದ್ದೆಶೆಯಿಂದ ಸ್ವಲ್ಪಗಳು. ಅಥವಾ ಈ ಮನುಷ್ಯಾದಿಗಳಿಗೆ ಅಪ್ರಕಾಶ:=ಅಜ್ಞಾನವಿದೆ. (ದೇವತೆಗಳಿಗೆ ಇಲ್ಲ ಆದಕಾರಣ ಮನುಷ್ಯಾದಿಗಳು ದೇವತೆಗಳಿಗಿಂತ ನೀಚರು.) (೪) ತೃತೀಯ ಪಾದವನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ವಿರಿಂಚಪರ್ಯಂತವಾಗಿ ಕ್ರಮವಾಗಿ ಜೀವರಿಗೆ ಯಾವುದು ನೀಚೋಚ್ಚತ್ವವು (ತಾರತಮ್ಯವು) ಇದೆಯೋ (ಅದು ವರುಣನೆನಿಸಿದ) ಶ್ರೀಹರಿಯ ಪ್ರಸಾದದಿಂದ ನಮಗೆ ಹೃದಯದಲ್ಲಿ ಜ್ಞಾನಗಳು ನಿತ್ಯದಲ್ಲಿಯೂ ನಿಹಿತಗಳು ಆಗಲಿ. (ಅಂದರೆ ನಾವು ಜ್ಞಾನಿಗಳು ಆಗುವೆವು.) (ಹಾಗಾದರೆ ಜ್ಞಾನಗಳು ಇವೆ ಎನ್ನುವುದು ನಿಶ್ಚಿತವೇ. ಅವುಗಳು ಸಿಗಬೇಕೆಂದು ಪ್ರಾರ್ಥನೆಯು ಹೇಗೆ ಕೂಡುತ್ತದೆ ಎಂದರೆ) ಇದ್ದ ಜ್ಞಾನಗಳಿಗಿಂತಲೂ ಅಧಿಕ ಜ್ಞಾನವು ಬರಬೇಕೆಂದು ಪ್ರಾರ್ಥನೆಯು.) (೫) (ಹಾಗಾದರೆ-ಅಯೋಗ್ಯ ಪ್ರಾರ್ಥನೆಯಿಂದ ಪ್ರತ್ಯವಾಯವುಂಟಾಗುವುದು ಎಂದರೆ) ಯಾವಜ್ಞಾನಗಳು ಮುಂದೆ ಬರತಕ್ಕವುಗಳು ನಮಗೆ ಆಗಲಿಕ್ಕೆ ಅರ್ಹಗಳು ಆಗುತ್ತವೋ ಅವುಗಳು ಆಗಿಯೇ ಆಗುತ್ತವೆ. ಅವುಗಳು ಆಗುವವು. ಎನ್ನುವುದರಿಂದ ಯಾವ ಜ್ಞಾನಗಳು ನಮಗೆ ಹೃದಯದಲ್ಲಿ ಗೂಢಗಳಾಗಿರುತ್ತವೋ, ಅವುಗಳು ವ್ಯಕ್ತಗಳಾಗುವುವು, ಎಂದು ಯೋಜನಾಂತರವು ಸೂಚಿತವಾಗುತ್ತದೆ. (ಆದಕಾರಣ ಅಧಿಕಾನಿ ಎಂಬ ವ್ಯಾಖ್ಯಾನವು ಹೇಗೆ ಸಿಗುತ್ತದೆ. ಎಂದರೆ ಪದಕಾರರು ಪದಕಾಲದಲ್ಲಿ ಸ್ಯು: ಎನ್ನುವುದಕ್ಕೆ ಸ್ಯುರಿತಿಸ್ಯು: ಎಂದು ಯಾವುದು ದ್ವಿರುಚ್ಚಾರಣವು ಮಾಡಲ್ಪಡುತ್ತದೋ, ಆದ್ವಿರುಚ್ಚಾರಣದಿಂದ ಆಧಿಕ್ಯರೂಪವಾದ ಅರ್ಥವನ್ನು ತೋರಿಸುವುದಕ್ಕಾಗಿ ಪ್ರಾರ್ಥನೆಯೇ ಆಗುತ್ತದೆ ಅಂದರೆ ಯಾವುದು ನಮಗೆ ಯೋಗ್ಯವಾದ ಜ್ಞಾನವಿದೆಯೋ ಅದು ಜೀವ ಸ್ವರೂಪವೇ ಆಗಿರುವುದರಿಂದ ಸದಾ ಉಂಟೇ ಉಂಟು. ಅಂತಹ ಜ್ಞಾನವು ಅಭಿವ್ಯಕ್ತವಾಗಲಿ, ಎಂಬ ಆದಿಕ್ಯೇ ಅಧಿಕಂ ಎಂಬ ಸೂತ್ರದಿಂದ) ಆಧಿಕ್ಯರೂಪ ಅರ್ಥವನ್ನು ತೋರಿಸುವುದಕ್ಕಾಗಿ ದ್ವಿರುಚ್ಚಾರಣದಿಂದ ಪ್ರಾರ್ಥನೆಯೇ ಮಾಡಲ್ಪಡುತ್ತದೆ ॥೭॥

ಋ ॥ (೨೬೧) ಉರುಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ ಪಂಥಾ ಮನ್ವೇತವಾ ಉ ।

ಅಪದೇ ಪಾದಾ ಪ್ರತಿಧಾತವೇಽಕರುತಾಪವಕ್ತಾ ಹೃದಯಾವಿಧಶ್ಚಿತ್ ॥೮॥

ಅ ॥ ರಾಜಾ=ಪ್ರಕಾಶಿಸಿಕೊಂಡಿರುವ, ವರುಣಃ=ಶ್ರೀಹರಿಯು, ಅನ್ವೇತವೈ ಉ=ತನ್ನ ಆಜ್ಞಾನುಸಾರ ಹೋಗುವುದಕ್ಕಾಗಿ, ಅಂದರೆ ಸರ್ವದಾ ಹೋಗುವುದಕ್ಕಾಗಿಯೇ, ಸೂರ್ಯಾಯ=ಸೂರ್ಯನ, ಉರುಂ=ವಿಸ್ತೀರ್ಣವಾದ, ಪಂಥಾಂ=ಮಾರ್ಗಗಳನ್ನು ಚಕಾರ=ಮಾಡಿದನು. (ಅಂದರೆ ಸೂರ್ಯನ ಸಂಚಾರಕ್ಕಾಗಿ ಇತರ ಮೂರ್ತ ಪದಾರ್ಥಗಳ ಪ್ರತಿಘಾತವಿಲ್ಲದ ಹಾಗೆ ಅಂತರಿಕ್ಷವನ್ನು ಮಾಡಿದನು.) ಹಿ=ನಿಶ್ಚಯವು. ಮತ್ತೂ ಅಪದೇ=ಪಾದವಿಲ್ಲದ ಪುರುಷನಿಗೋಸ್ಕರ, ಪ್ರತಿ ಧಾತವೇ=(ಧಾವು ಗತಿ ಶುದ್ಧ್ಯೋಃ ಎಂಬ ಧಾತು ವ್ಯಾಖ್ಯಾದಿಂದ) ಹೋಗುವುದಕ್ಕಾಗಿ, ಪಾದಾ=ಪಾದಗಳನ್ನು ಅಕಃ=(ಕೃಞ್ಕರಣೇ) ಮಾಡಿದನು ಅಥವಾ ಅಪದೇ=ಅಜ್ಞನಿಗೋಸ್ಕರ, ಪಾದಾ=ಪಾದಗಳನ್ನು ಅಂದರೆ ಜ್ಞಾನ ವಿಜ್ಞಾನಗಳನ್ನು ಪ್ರತಿಧಾತವೇ=ಪರಮಾತ್ಮನನ್ನು ಹೊಂದುವುದಕ್ಕಾಗಿ ಅಕಃ=ಮಾಡಿದನು. ಉತ=ಮತ್ತು, ಹೃದಯ ವಿಧಃ=(ಹೃದಯಂ ವಿಶೇಷಣ ಧತ್ತೇ ಎಂಬವ್ಯುತ್ಪತ್ತಿಯಿಂದ) ಬುದ್ಧಿಯನ್ನು ವಿಶೇಷವಾಗಿ ಧರಿಸುತ್ತಿರುವ, ಚಿದಪಿ=ಬುದ್ಧಿಧಾರಕನಾದ ಶಂಕರನದ್ದೂ ಕೂಡ ಅಪವಕ್ತಾ=ದೋಷಗಳನ್ನು ಹೇಳುತ್ತಾನೆ. (ಅಂದರೆ ಆತನ ದೋಷಗಳನ್ನು ತಿಳಿದು ಶಿಕ್ಷಿಸುತ್ತಾನೆ.) ॥೮॥

ಭಾ ॥ (೧) ಉರುಂ ರಾಜಾ ರಂಜನಾದ್ರಾಜನಾದ್ವಾ ಸೂರ್ಯಾಯ ಪಂಥಾನಮಸ್ಯೈ ಚಕಾರ। ಸ್ವಾಜ್ಞಾನುಸಾರೇಣ ಸದೈವ ಗತ್ಯೈ (೨) ಪಾದಾವಪಾದಾಯ ಚ ಗಂತವೇಽ ಕರೋತ್ । ಅಜ್ಞಾಯ ವಿಜ್ಞಾನಮಕಃ ಸ ಗಂತುಮಾತ್ಮಾನಮಿತ್ಯರ್ಥ ಇಹಾಂ ಜಸೋಕ್ತಃ ॥ (೩) ಬುದ್ಧೇರ್ಧಾತುಃ ಶಂಕರಸ್ಯಾಪಿ ದೋಷಾನ್ವಕ್ತಾ ಜ್ಞಾನಾಚ್ಛಿಕ್ಷ ಕತ್ವಾಚ್ಚ ವಿಷ್ಣುಃ ॥೮॥

ಅ ॥ (೧) (ರಂಜರಾಗೇ ಎಂಬ ಧಾತು ವ್ಯಾಖ್ಯಾನದಿಂದ) ಭಕ್ತರಿಗೆ ತನ್ನಲ್ಲಿ ಸ್ನೇಹವನ್ನು ಹುಟ್ಟಿಸುವುದರಿಂದಲೂ, (ರಾಜೃ ದೀಪ್ತೌ ಎಂಬ ಧಾತು ವ್ಯಾಖ್ಯಾನದಿಂದ) ಪ್ರಕಾಶಿಸುವುದರಿಂದ, ಪ್ರಕಾಶಗೊಳಿಸುವುದರಿಂದಲೂ ರಾಜಾ ಎನಿಸಿಕೊಂಡ, ವರುಣನೆನಿಸಿದ ಶ್ರೀಹರಿಯು, ತನ್ನ ಆಜ್ಞಾನುಸಾರವಾಗಿ ಸದಾ ಹೋಗುವುದಕ್ಕಾಗಿಯೇ, ಸೂರ್ಯನಿಗೆ ವಿಸ್ತೀರ್ಣವಾದ, ಮಾರ್ಗವನ್ನು ಮಾಡಿದನು. (ಅಂದರೆ ಸೂರ್ಯನ ಸಂಚಾರಕ್ಕಾಗಿ ಮೂರ್ತಾಂತರಗಳ ತಡೆಯಿಲ್ಲದ ಹಾಗೆ ಅಂತರಿಕ್ಷವನ್ನು ಮಾಡಿದನು) (೨) ಪಾದಗಳಿಲ್ಲದ ಪುರುಷನಿಗೋಸ್ಕರ, ಹೋಗುವುದಕ್ಕಾಗಿ ಪಾದಗಳನ್ನು ಮಾಡಿದನು. (ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಕಾರಿಭಿಃ । ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ । ಎಂಬ ಪ್ರಮಾಣದಿಂದ ಸೂತ್ರಭಾಷ್ಯದಲ್ಲಿ ಸೂತ್ರಾನುಕಾರಿ ಪದಗಳನ್ನು ಹೇಗೆ ಪ್ರಯೋಗ ಮಾಡಬೇಕೋ ಹಾಗೆಯೇ ವೇದಭಾಷ್ಯದಲ್ಲಿ ವೇದನಾನುಕಾರಿಪದಗಳನ್ನು ಪ್ರಯೋಗಮಾಡಬೇಕೆಂಬ ಅಭಿಪ್ರಾಯದಿಂದ ಗಂತವೇ ಎಂದು ಗಮ್ ಧಾತುವಿಗೆ ತವೇ ಎಂಬ ಪ್ರತ್ಯಯ ಪ್ರಯೋಗವನ್ನು ಭಾಷ್ಯದಲ್ಲಿ ಮಾಡುರುವರು.) ಅಥವಾ ಅಪದೇ=(ಪದಗತೌ. ಯೇಯೇ ಗತ್ಯರ್ಥಾ ತೇತೇ ಜ್ಞಾನಾರ್ಥಕಾಃ ನ ವಿದ್ಯತೇ ಪದ್ಯಸ್ಯ ಎಂಬ ವ್ಯುತ್ಪತ್ತಿಯಿಂದ) ಅಜ್ಞ ಪುರುಷನಿಗೋಸ್ಕರ, ವಿಜ್ಞಾನವನ್ನೂ ಜ್ಞಾನವನ್ನೂ, ತನ್ನನ್ನು ಹೊಂದುವುದಕ್ಕಾಗಿ ಮಾಡಿದನು, ಎಂಬೀ ಅರ್ಥವು ಈ ಪಾದದಲ್ಲಿ ಮುಖ್ಯ ವೃತ್ತಿಯಿಂದ ಹೇಳಲ್ಪಟ್ಟಿತು. (ಚರಣದಾನರೂಪವಾದ ಅರ್ಥಕ್ಕಿಂತ ಜ್ಞಾನಾದಿದಾನರೂಪವಾದ ಅರ್ಥವು ಹೇಗೆ ಆಗುವುದು? ಪಾದ ಶಬ್ದವು ಚರಣದಲ್ಲಿ ರೂಢವಾಗಿದೆ. ಜ್ಞಾನದಲ್ಲಿ ಯೌಗಿಕವಾಗಿದೆ ಎಂದರೆ-ಅತ್ತಿತ್ತ ಹೋಗುವುದಕ್ಕಾಗಿ ಪಾದದಾನಕ್ಕಿಂತ ಭಗವಂತನನ್ನು

ಹೊಂದುವುದಕ್ಕಾಗಿ ಜ್ಞಾನವಿಜ್ಞಾನಗಳ ದಾನವು ಮಾಹಾತ್ಮ್ಯಾತಿಶಯ ಸೂಚಕವಾಗಿರುವುದರಿಂದ ಅಧಿಕವಾಗಿದೆ.) (೩) ಶ್ರೀವಿಷ್ಣುವು ಜ್ಞಾನವನ್ನು ಧರಿಸುವ ಅಥವಾ ಪರೋಪದೇಶಕನಾದ ಶಂಕರನದ್ದೂ ಕೂಡ ದೋಷಗಳನ್ನು ಹೇಳುತ್ತಾನೆ. (ಶ್ರೀವಿಷ್ಣುವಿಗೆ ತನ್ನ ಭಕ್ತರಲ್ಲಿ ಸ್ನೇಹವಿದ್ದುದರಿಂದ ದ್ವೇಷಿಗಳಂತೆ ದೋಷಗಳನ್ನು ಹೇಳುತ್ತಾನೆನ್ನುವುದು ಹೇಗೆ ಕೂಡುತ್ತದೆ ಎಂದರೆ) ಸೂಕ್ಷ್ಮ ವಿಜ್ಞಾನವಿದ್ದುದರಿಂದಲೂ, ಶಿಕ್ಷಕನಾದುದರಿಂದಲೂ ಉಪಪನ್ನವಾಗುತ್ತದೆ. (ಶಿಕ್ಷಕನು ನೀನು ಇಂತಹ ಅನ್ಯಾಯವನ್ನು ಮಾಡಿರುತ್ತಿ ಎಂದು ದೋಷಗಳನ್ನು ಹೇಳುತ್ತಾನಷ್ಟೆ. ಇದರಿಂದ ಶ್ರೀವಿಷ್ಣುವು ವಿಜ್ಞಾನವುಳ್ಳವನೆಂದೂ ಶಿಕ್ಷಕನೆಂದೂ ಅಭಿಪ್ರೇತವಾಯ್ತು. ದೌರ್ಜನ್ಯವು ಬರುವುದಿಲ್ಲ.) ॥೮॥

ಋ ॥ (೨೬.೨) ಶತಂ ತೇ ರಾಜನ್ಭಿಷಜಃ ಸಹಸ್ರಮುರ್ವೀ ಗಭೀರಾ ಸುಮ ತಿಷ್ಟೇ ಅಸ್ತು । ಬಾಧಸ್ವ ದೂರೇ ನಿಋತಿಂ

ಪರಾಚೈಃ ಕೃತಂಚಿದೇನಃ ಪ್ರಮುಮುಗ್ಧ್ಯಸ್ಮತ್ ॥೯॥

ಅ ॥ ಹೇ ರಾಜನ್=ಶ್ರೀಹರಿಯೇ; ತೇ=ನಿನಗೆ, ಶತಂ=ಅನಂತಗಳಾದ, (ಶತ ಸಹಸ್ರ ಶಬ್ದಗಳು ಬಹುನಾಮಗಳಲ್ಲಿ ಪಠಿತಗಳಾಗಿರುವುದರಿಂದ ಸಂಖ್ಯಾ ವಿಶೇಷಾರ್ಥವಿದೆ ಎನ್ನುವಲ್ಲಿ ಜ್ಞಾಪಕವಿಲ್ಲದಿರುವ ಪ್ರಯುಕ್ತ ಅನಂತವೆಂದರ್ಥವುಳ್ಳವುಗಳು.) ಸಹಸ್ರಂ=ಪುನಃ ಪ್ರತ್ಯೇಕವಾಗಿ ಅನಂತ ಪ್ರಕಾರಗಳಾಗಿರುವ, ಭಿಷಜಃ=ರಕ್ಷಕತ್ವಗುಣ ಸಂಬಂಧದಿಂದ ಜಗದ್ರಕ್ಷಾ ಸಾಧನಗಳಾದ ಬಲಗಳು (ಅಂದರೆ ವೈದ್ಯನು ರೋಗದಿಂದ ರಕ್ಷಿಸುವವನು, ಬಲಗಳು ಸರ್ವ ಪ್ರಕಾರದಿಂದಲೂ ಜಗತ್ತನ್ನು ರಕ್ಷಿಸುವವುಗಳು. ಆದ ಕಾರಣ ಬಲಗಳಲ್ಲಿ ಭಿಷಕ್ ಶಬ್ದಕ್ಕೆ ಅಮುಖ್ಯ ವ್ಯವಹಾರವು.) (ಸಂತಿ=ಇರುತ್ತವೆ.) (ಆದ ಕಾರಣ ನನಗೆ) ಉರ್ವೀ=ಮಹತ್ತಾದ, ಗಭೀರಾ=ಅಗಾಧ ರೂಪವಾದ, ಸುಮತಿಃ=ಶೋಭನವಾದ ಬುದ್ಧಿಯು, ತೇ=ನಿನಗೆ, (ನಿನ್ನ ವಿಷಯದಲ್ಲಿ) ಅಸ್ತು=ಸದಾ ಇರಲಿ. (ಅಂದರೆ (1) ಇಷ್ಟ, ಇಷ್ಟ ಸಾಧನ ಇವುಗಳನ್ನು ಕೊಡುವುದು. (2) ಅನಿಷ್ಟ ಪರಿಹಾರ ಹೀಗೆ ರಕ್ಷಣೆಯು ವಿಧವಾದ ಪ್ರಯುಕ್ತ ಜ್ಞಾನಾದಿಗಳು ಲಭಿಸಬೇಕೆಂದು ಪ್ರಾರ್ಥನೆಯು ಯುಕ್ತವು.) ಮತ್ತು ನಿಋತಿಂ= (ನಿಃ ನೈಶ್ಚಿತ್ಯನಿಷೇಧಯೋಃ ಎಂಬ ವಿಶ್ವಕೋಶದಿಂದ ನಿಃ=ನಿಷೇಧವು. ಋ ಗತೌ, ಎಂದು ಧಾತು ವ್ಯಾಖ್ಯಾನದಿಂದ ನಿರ್ಗತಾ ಋತಿಃ=ಜ್ಞಾನಂ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ ದುರ್ಮತಿಯು ಯಥಾರ್ಥ ಜ್ಞಾನಕ್ಕೆ ವಿರೋಧಿಯಾಗಿರುವುದರಿಂದ ನಿಋತಿಯೆಂದು ಹೆಸರುಳ್ಳ ದುರ್ಮತಿಯನ್ನು, ದೂರೇ=ದೂರದಲ್ಲಿಯೇ, ಪರಾಚೈಃ-ನಿರಾಕರಿಸಿ, (ದುರ್ಜ್ಞಾನಿ ಜನರನ್ನು ನರಕದಲ್ಲಿ ಹಾಕಿ) ಬಾಧಸ್ವ=(ಭಾಧೃ ವಿಲೋಡನೇ ಎಂಬ ಧಾತು ವ್ಯಾಖ್ಯಾನದಿಂದ) ನಾಶಗೊಳಿಸು. ಕೃತಂ=(ನನ್ನಿಂದ) ಮಾಡಲ್ಪಟ್ಟ, ಏನಶ್ಚಿತ್=ಪಾಪವನ್ನೂ ಕೂಡ, ಅಸ್ಮತ್=ನನ್ನಿಂದ, ಪ್ರಮುಮುಗ್ಧಿ=ಬಿಡಿಸು. ಹೋಗಲಾಡಿಸು. ॥೯॥

ಭಾ ॥ (೧) ಜಗದ್ರಕ್ಷಾಸಾಧನಾನ್ಯಪ್ಯನಂತಾನ್ಯನಂತಧಾ ಸಂತಿ ಪುನಸ್ತ್ವವೇಶ ॥ (೨) ಅಗಾಧ ರೂಪಾ ಮಹತೀ ಶುಭಾ ಚ ಮತಿರ್ಮಮ ತ್ವದ್ವಿಷಯೇ ಸದಾಽಸ್ತು ॥ (೩) ಋತ ಜ್ಞಾನಪ್ರತಿರೂಪತ್ವಹೇತೋರ್ನಿಋತ್ಯಾಖ್ಯಾಂ ದುರ್ಮತಿಂ ದೂರ ಏವ। ಬಾಧ ಸ್ವ ದುರ್ಜ್ಞಾನಿಜನಂ ನಿರಸ್ಯ ಸ್ವರ್ಗಾತ್ಪರಾಕೃತ್ಯ ಚ ಶಶ್ವದೇವ ॥ (೪) ಕೃತಂ ಚ ಪಾಪಂ ಪ್ರಮುಮುಗ್ಧಿ ಮತ್ತಃ ॥ ॥೯॥

ಅ(೧) ಎಲೋ ಶ್ರೀಹರಿಯೇ ನಿನಗೆ ಅನಂತಗಳಾದ ಪುನರಪಿ ಪ್ರತ್ಯೇಖವಾಗಿ ಅನಂತಗಳಾಗಿರುವ, ಜಗದ್ರಕ್ಷಾಸಾಧನಗಳಾದ ಬಲಗಳಿವೆ. (೨) ಆದಕಾರಣ ನನಗೆ ಮಹತ್ತಾದ, ಅಗಾಧ ರೂಪವೂ ಆದ, ಶುಭವಾದ ಬುದ್ಧಿಯು ನಿನ್ನ ವಿಷಯದಲ್ಲಿ ಸದಾ ಇರಲಿ. (೩) ಋತವೆಂದರೆ ಜ್ಞಾನವು. ಅಂತಹ ಯಥಾರ್ಥ ಜ್ಞಾನಕ್ಕೆ ವಿರೋಧಿಯಾಗಿರುವುದರಿಂದ ನಿಋತಿಯೆಂದು ಹೆಸರುಳ್ಳ ದುರ್ಮತಿಯನ್ನು ದೂರದಲ್ಲಿಯೇ ಬಾಧಿಸು. (ದುರ್ಮತಿಯನ್ನು ಬೋಧಿಸುವ ದುರ್ಜ್ಞಾನಿಗಳು ಬಹಳ ಇದ್ದ ಪ್ರಯುಕ್ತ ದುರ್ಮತಿಯನ್ನು ನಾಶಗೊಳಿಸುವುದು ಹೇಗೆಂದರೆ) ದುರ್ಮತಿಯನ್ನು ತಿರಸ್ಕರಿಸಿ ದುರ್ಜ್ಞಾನಿ ಜನರನ್ನು ಸ್ವರ್ಗಾದಿ ಸ್ಥಾನಗಳಿಂದ ಸರ್ವದಾ ನಿರಾಕರಿಸಿ (ನರಕದಲ್ಲಿಯೇ ಹಾಕಿ) ನಾಶಗೊಳಿಸು. (೪) ನಾನು ಮಾಡಿದ್ದ ಪಾಪವನ್ನೆಲ್ಲಾ ನನ್ನಿಂದ ಬಿಡಿಸು. ಹೋಗಲಾಡಿಸು. (ಮುಚ ಪ್ರಮೋಚನೇ ಮೋದನೇ ಚ ಎಂದು ಧಾತುವ್ಯಾಖ್ಯಾನವು) ||೯||

ಋ || (೨೬೩) ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹಚಿದ್ದಿವೇಯುಃ |
ಅದಭ್ಧಾನಿ ವರುಣಸ್ಯ ವ್ರತಾನಿ ವಿಚಾಕ ಶಚ್ಚಂದ್ರಮಾ ನಕ್ತಮೇತಿ ||೧೦||೧೪||

ಅ || (ಎಲೋ ವರುಣನೇ)ಯೇ ಅಮೀ ಋಕ್ಷಾಃ=ಯಾವ ಈ ನಕ್ಷತ್ರಗಳು ಇರುತ್ತವೋ, (ಅವುಗಳು ಉಚ್ಚಾ=ಉನ್ನತವಾದ ಆಂತರಿಕ್ಷದಲ್ಲಿ, ನಿಹಿತಾಸಃ=(ನಿನ್ನಿಂದಲೇ,) ಇಡಲ್ಪಟ್ಟಿವೆ. (ಯಾವುದು ಅವುಗಳು) ನಕ್ತಂ=ರಾತ್ರಿಯಲ್ಲಿ, ದದೃಶ್ರೇ=ದೃಶ್ಯಗಳಾಗಿವೆಯೋ, ದಿವಾ=ಹಗಲಿನಲ್ಲಿ, ಕುಹಚಿತ್=ಕೆಲವು ವೇಳೆಯೇ, ಈಯುಃ=(ಇಣ್‌ಗತೌ) ತೋರುತ್ತವೋ, (ಅಂದರೆ ರಾತ್ರಿಯಲ್ಲಿ ಸದಾ ತೋರುತ್ತವೋ, ಹಗಲು ಕೆಲವು ವೇಳೆಯೆ ತೋರುತ್ತವೋ ಇದು ಕೂಡ ನಿನ್ನಿಂದಲೇ) ವರುಣಸ್ಯ=ಉತ್ಕೃಷ್ಟವಾದ ಆನಂದರೂಪ ಶರೀರವುಳ್ಳ ಶ್ರೀವಿಷ್ಣುವೆನಿಸಿದ ನಿನ್ನ್ದೇ, ವ್ರತಾನಿ=ಆಕಾಶದಲ್ಲಿ ನಕ್ಷತ್ರ ಸ್ಥಾಪನ ಮೊದಲಾದ ಹೇಳಲ್ಪಟ್ಟ ಕರ್ಮಗಳು, ಅದೃಬ್ಧಾನಿ=ಅಪ್ರತಿಹತಗಳಾಗಿವೆ. (ತಡೆಯಿಲ್ಲದವುಗಳಾಗಿವೆ.) ಮತ್ತು, ಚಂದ್ರಮಾಃ =ಚಂದ್ರನು, ವಿಚಾಕಶತ್=(ಕಾಶೃದೀಪ್ತೌ, ದೀಪ್ತಿಯೆಂದರೆ ದರ್ಶನವು.) (ಸಮಸ್ತವನ್ನು) ನೋಡುತ್ತಾ, ಅಥವಾ ವರುಣನ ಅಪ್ರತಿಹತಗಳಾದ ವ್ರತಗಳನ್ನು ನೋಡುತ್ತಾ, ಅಥವಾ ಪ್ರಕಾಶವನ್ನು ಹೊಂದಿದವನಾಗಿ, ನಕ್ತಂ=ರಾತ್ರಿಯಲ್ಲಿ, ಏತಿ=ಹೋಗುತ್ತಾನೆ. (ಅದೂ ಕೂಡ ನಿನ್ನಿಂದಲೇ) ಮತ್ತು ಚಂದ್ರಾದಿಗಳೆಲ್ಲರೂ ನಿನ್ನ ಆಜ್ಞೆಯಿಂದಲೇ ನಿನ್ನಿಂದ ಪ್ರೇರಿತರಾಗಿಯೇ ತಂತಮ್ಮ ವ್ಯಾಪರಗಳನ್ನು ಮಾಡುತ್ತಾರೆ. ||೧೦||

ಭಾ || (೧) ಋಕ್ಷಾಣ್ಯಮೀ ನಿಹಿತಾನಿ ತ್ವಯೋಚ್ಚೈಃ || ದೃಶ್ಯಾನಿ ರಾತ್ರೌ ನ ದಿವಾ ತ್ವಯೆ ವೇತ್ಯಾದೀನಿ ಕಮಾಣ್ಯನಿರೋಧಿತಾನಿ | ಪಶ್ಯನ್ಪರಾನಂದತನೋಸ್ತವೈವ ಚಂದ್ರೋನಿತ್ಯಂ ದೃಶ್ಯ ಮಾನಸ್ತ್ವಯೈವ || (೩) ಸಂಪ್ರೇರಿತೋ ಯಾತಿ ಪರೇ ಚ ದೇವಾ ಏವಂ ತ್ವದಾಜ್ಞಾಕರಣಾಃ ಸದೈವ ||೧೦||೧೪||

ಅ || ಈ ನಕ್ಷತ್ರಗಳು ಅಂತರಿಕ್ಷ ಲೋಕದಲ್ಲಿ ನಿನ್ನಿಂದಲೇ ಇಡಲ್ಪಟ್ಟಿವೆ. ನಕ್ಷತ್ರಗಳು ರಾತ್ರಿಯಲ್ಲಿ ದೃಶ್ಯಗಳಾಗುತ್ತವೆ. ಹಗಲಿನಲ್ಲಿ ಕೆಲವು ವೇಳೆಯೇ ತೋರುತ್ತವೋ, ಯಾವುದು ನಕ್ಷತ್ರಗಳು ಹಗಲು ಸರ್ವದಾ ಪ್ರತೀತಿಗಳಾಗುವುದೆ ಇಲ್ಲವೋ, ಕೆಲವು ವೇಳೆ ಖಗ್ರಾಸ (ಸಂಪೂರ್ಣಗ್ರಾಸ) ಸೂರ್ಯ ಗ್ರಹಣಾದಿ ಕಾಲದಲ್ಲಿಯೆ ತೋರುತ್ತವೋ, ಅದೂ ಕೂಡ (ಅಂದರೆ-ಕೆಲವು ವೇಳೆ ಕೆಲವು ನಕ್ಷತ್ರಗಳು ಹಗಲು ತೋರುವುದೂ ನಿನ್ನಿಂದಲೇ ಮಾಡಲ್ಪಟ್ಟದ್ದು.(೨) (ವರ=ಅತ್ಯುತ್ತಮವಾದ,

ಣ=ಆನಂದವಿರುವುದರಿಂದ ವರುಣನೆನಿಸಿದ) ಉತ್ಕೃಷ್ಟವಾದ ಆನಂದ ರೂಪ ಶರೀರವುಳ್ಳ, ಶ್ರೀಹರಿಯಾದ ನಿನ್ನದ್ದೇ ಅಂತರಿಕ್ಷದಲ್ಲಿ ನಕ್ಷತ್ರ ಸ್ಥಾಪನ ಮೊದಲಾದ ಹೇಳಿದ ಕರ್ಮಗಳು ತಡೆಯಿಲ್ಲದವುಗಳು ಚಂದ್ರನು ಸಮಸ್ತವನ್ನು ನೋಡುತ್ತಾ, ನಿತ್ಯದಲ್ಲಿಯೂ, ಅತ್ತಿತ್ತ ಸಂಚರಿಸುವುದೂ ನಿನ್ನಿಂದಲೇ. ಶ್ರೀಹರಿಯ ತಡೆಯಿಲ್ಲದ ಕರ್ಮಗಳನ್ನು ನೋಡುತ್ತಾ ಹೋಗುವುದೂ ನಿನ್ನಿಂದಲೇ. ಚಂದ್ರನು ರಾತ್ರಿಯಲ್ಲಿ ನಿತ್ಯದಲ್ಲಿಯೂ ಕಾಣಲ್ಪಡುತ್ತಾ ಹೋಗುವುದೂ ಕೂಡ ನಿನ್ನಿಂದಲೇ, (೩) ಯಾವ ಪ್ರಕಾಶ ವಿಶಿಷ್ಟನಾಗಿ ಕಾಣಲ್ಪಡತಕ್ಕ ಚಂದ್ರನೋ, ಆತನು ನಿನ್ನಿಂದಲೇ ಚೆನ್ನಾಗಿ ಪ್ರೇರಿತನಾಗಿಯೇ ರಾತ್ರಿಯಲ್ಲಿ ಹೋಗುತ್ತಾನೆ. ಹೀಗೆಯೇ ಇತರರಾದ ದೇವತೆಗಳೂ ಕೂಡ ಸದಾ ನಿನ್ನ ಆಜ್ಞೆಯನ್ನೇ ಮಾಡಿಕೊಂಡಿರುವವರು. ಅಥವಾ ತ್ವದಾಜ್ಞಾಯಾಃ ಕರಣಂ ಕೃತಿರ್ಯೇಷು ಎಂದು ವಿಗ್ರಹವು. ॥೧೦॥೧೪॥

**ಋ ॥ (೨೬೪ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜ ಮಾನೋ ಹವಿರ್ಭಿಃ ।**

**ಅಹೇಳಮಾನೋ ವರುಣೇಹ ಬೋಧ್ಯುರು ಶಂಸ ಮಾ ನ ಆಯುಃ ಪ್ರಮೋಷೀಃ ॥೧೧॥**

ಅ ॥ ಹೇ ವರುಣ=ಎಲೋ ಶ್ರೀಹರಿಯೇ, (ಯಾವ ಕಾರಣದಿಂದ ನೀನು ಇಂತಹ ಗುಣಗಳುಳ್ಳವನೋ) ತತ್=ಆಕಾರಣದಿಂದ, ತ್ವಾ=ನಿನ್ನನ್ನು, ಬ್ರಹ್ಮಣಾ=(ಬ್ರಹ್ಮ ಪ್ರೋಕ್ತಂ ತಪೋಽಧ್ಯಾತ್ಮ ವೇದಜ್ಞಾನೇಷು ಸೂರಿಭಿಃ ಎಂದು ವಿಶ್ವಕೋಶವು.) ವೇದವಚನದಿಂದ, ವಂದಮಾನಃ= (ವದಿ ಅಭಿವಾದನಸ್ತುತ್ಯೋಃ) ನಮಸ್ಕರಿಸುತ್ತಾ ಸ್ತುತಿಸುತ್ತಾ, ಸಾಷ್ಟಾಂಗವೆರಗುತ್ತಾ, ಯಾಮಿ=ಶರಣು ಹೊಂದುತ್ತೇನೆ. ಮತ್ತು ಯಜಮಾನಃ=ಯಜಮಾನನು, ಮತ್ತು ನನ್ನಿಂದ ಭಿನ್ನವಾದ ವಿದ್ವಾಂಸನು, ಹವಿರ್ಭಿಃ=ಹವಿಃ ಪ್ರದಾನಾದಿಗಳಿಂದ, ತದೇವ ಆಶಾಸ್ತೇ=ನಿನ್ನನ್ನು ಶರಣು ಹೊಂದುವುದನ್ನೇ ಇಚ್ಛಿಸುತ್ತಾನೆ. (ಅಂದರೆ ಯಾವ ಕಾರಣದಿಂದ ಇನ್ನೊಬ್ಬ ಜ್ಞಾನಿಯೂ ನಿನ್ನನ್ನು ಶರಣು ಹೊಂದಬೇಕೆಂದು ಇಚ್ಛಿಸುತ್ತಾನೋ, ಆ ಕಾರಣದಿಂದ ನಾನೂ ಕೂಡ ನಿನ್ನನ್ನು ಶರಣು ಹೊಂದುತ್ತೇನೆ) (ಎಲೋ ವರುಣನೇ) ಇಹ=ನಮ್ಮಲ್ಲಿ, ಅಹೇಳಮಾನಃ =ಅವಮಾನವನ್ನು ಮಾಡದಿರುವ ನೀನು (ಅಂದರೆ ಮನುಷ್ಯ ಮಾತ್ರನೆಂಬ ಬುದ್ಧಿಯಿಂದ ನಮ್ಮನ್ನು ಶರಣು ಹೊಂದಿದವರನ್ನು ನಿಂದಿಸದಿರುವವನಾಗಿ) ಬೋಧಿ=ಸಂಭೋಧಿಸು. (ಅಂದರೆ-ಎಲೋ ಶುನಶ್ಶೇಪನೇ ಶ್ರಾಂತನಾಗಿರುತ್ತಿ ಇದು ಮೊದಲಾದ ವಚನವನ್ನು ಮಾಡು.) ಉರುಶಂಸ=ಉತ್ತಮರಾದ ಬ್ರಹ್ಮಾದಿಗಳಿಂದ ಚೆನ್ನಾಗಿ ಸ್ತುತಿಸಲ್ಪಡತಕ್ಕವನೇ, ನಃ=ನಮ್ಮ, ಆಯುಃ =ಆಯುಷ್ಯವನ್ನು ಮಾ ಪ್ರಮೋಷೀಃ (ಮುಷ ಸ್ತೇಯೇ ಎಂಬ ಧಾತು ವ್ಯಾಖ್ಯಾನದಿಂದ) ಛೇದಿಸಬೇಡ. (ಕ್ಷೀಣೀಕರಿಸಬೇಡ) ವೃದ್ಧಿಗೊಳಿಸು. ॥೧೧॥

ಭಾ ॥ (೧) ಏವಂಗುಣೋ ಯತ್ತ್ವಮತೋ ಪ್ರಜಾಮಿ ಸದಾ ಶರಣ್ಯಂ ಶರಣ್ಯಂ ವೇದವಾಚಾ। ನಮ್ಮನ್ನನ್ಯೋ ಯಜಮಾನೋ ಹವಿರ್ಭಿಸ್ತದಾಶಾಸ್ತೇ ತ್ವದ್ಗತಿಂ ದೇವ ದೇವ ॥ ಅನಿಂದನ್ನಸ್ಮಾನ್ನರಮಾತ್ರಬುದ್ಧ್ಯಾ ಸಂಬೋಧಯೋಚ್ಚೈಃ ಸ್ತುತಮಸ್ಮದಾಯುಃ ಛೆತ್ಸೀಃ ॥೧೧॥

ಅ ॥ (೧) (ತತ್ ಎನ್ನುವ ಪರಾಮರ್ಶಕ್ಕೆ ವಿಷಯವನ್ನು ತೋರಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ. ಯಾವ ಕಾರಣದಿಂದ ಇಂತಹ ಗುಣಗಳುಳ್ಳವನೋ ಆ ಕಾರಣದಿಂದ ಮರೆಯಾಗಲು ಯೋಗ್ಯನಾದ ನಿನ್ನನ್ನು ವೇದವಚನದಿಂದ

ನಮಸ್ಕರಿಸುತ್ತಾ ಸ್ತುತಿಸುತ್ತಾ ಸಾಷ್ಟಾಂಗವೆರಗುತ್ತಾ ಸದಾ ಶರಣು ಹೊಂದುತ್ತೇನೆ. ಯಜಮಾನನು ನನ್ನಿಂದ ಇತರನಾದ ವಿದ್ವಾಂಸನೂ ಕೂಡ, ಹವಿಃ ಪ್ರದಾನಾದಿಗಳಿಂದ ಅದನ್ನೇ ಇಚ್ಛಿಸುತ್ತಾನೆ. ಅಂದರೆ ನಿನ್ನ ಶರಣಪ್ರಾಪ್ತಿಯನ್ನೇ ಇಚ್ಛಿಸುತ್ತಾನೆ. ಏವಂಚ (ಯಾವ ಕಾರಣದಿಂದ ಇನ್ನೊಬ್ಬ ವಿದ್ವಾಂಸನೂ ನಿನ್ನನ್ನು ಶರಣು ಹೊಂದಬೇಕೆಂದು ಇಚ್ಛಿಸುತ್ತಾನೋ, ಆ ಕಾರಣದಿಂದ ನಾನೂ ಕೂಡಾ ಶರಣು ಹೊಂದುತ್ತೇನೆ.) ಎಲೋ ದೇವಾಧಿಪತಿಯೇ ನೀನು ಮನುಷ್ಯ ಮಾತ್ರನೆಂಬ ಬುದ್ಧಿಯಿಂದ ನಮ್ಮನ್ನು ಶರಣು ಹೊಂದಿದವರನ್ನು ನಿಂದಿಸದಿರುವವನಾಗಿ (ಎಲೋ ಶುನಶ್ಶೇಪನೇ ಶ್ರಾಂತನಾಗಿರುತ್ತಿ ಎಂದು) ಸಂಭೋದಿಸು. ಚೆನ್ನಾಗಿ ಸ್ತುತಿಸಲ್ಪಟ್ಟವನೇ ನಮ್ಮ ಆಯುಷ್ಯವನ್ನು ಛೇದಿಸಬೇಡ ವೃದ್ಧಿಗೊಳಿಸು ॥೧೧॥

**ಋ ॥ (೨೬೫) ತದಿನ್ನಕ್ತಂ ತದ್ದಿವಾ ಮಹ್ಯಮಾಹುಸ್ತದಯಂ ಕೇತೋಹೃದ ಆವಿಚಷ್ಟೇ ।**

**ಶುನಃಶೇಪೋ ಯಮಹ್ವದ್ಗೃಭೀತಃ ಸೋ ಅಸ್ಮಾ ನ್ರಾಜಾ ವರುಣೋ ಮುಮೋಕ್ತು ॥೧೨॥**

ಅ ॥ (ಎಲೋ ವರುಣನೇ) ನಕ್ತಂ=ರಾತ್ರಿಯಲ್ಲಿ, ಮಹ್ಯಂ=ನನಗಾಗಿ, ತದಿತ್=(ಬ್ರಹ್ಮಣಾ ವಂದಮಾನಂ ಎಂದು ಪ್ರಕೃತನಾದ) ನಿನ್ನ ಸ್ತೋತ್ರವನ್ನೇ, (ಅವಶ್ಯವಾಗಿ ಮಾಡಬೇಕೆಂದು ಆಚಾರ್ಯರು) ಆಹುಃ=ಹೇಳುತ್ತಾರೆ. ದಿವಾ=ಹಗಲಿನಲ್ಲಿಯೂ, ತತ್=ಆ ಸ್ತೋತ್ರವನ್ನೇ (ಮಾಡಬೇಕೆಂದು ಹೇಳುತ್ತಾರೆ) ಮತ್ತು, ಹೃದಃ=ಹೃದಯದಲ್ಲಿರತಕ್ಕ, ಅಥವಾ ಹೃದಯವನ್ನಧಿಷ್ಠಾನೀಕರಿಸಿರುವ, ಅಂದರೆ ಹೃದಯದಲ್ಲಿರುವ, ಕೇತಃ=ಜ್ಞಾನರೂಪನಾದ, ಅಯಂ=ಈ ನಿನ್ನ ರೂಪಾಂತರನಾದ, (ಅಂದರೆ ಸ್ತುತ್ಯವಾದ ವರುಣಾದಿ ರೂಪದಿಂದ ಇತರ ವಾದವ್ಯಾಸಾದಿ ಸ್ವರೂಪನಾದ) ಶ್ರೀನಾರಾಯಣನು, ತತ್=ಆ ನಿನ್ನ ಸ್ತೋತ್ರವನ್ನೇ, (ಮಾಡಬೇಕೆಂದು, ಆ ವಿಚಷ್ಟೇ=ಚೆನ್ನಾಗಿ ಹೇಳುತ್ತಾನೆ. ಮತ್ತು ಚೆನ್ನಾಗಿ ನೋಡುತ್ತಾನೆ. (ಚಕ್ಷಿಜ್ ವ್ಯಕ್ತಾಯಾಂ ವಾಚಿ) ಎಂದು ಧಾತು ಪಾಠದಲ್ಲಿ ವಚನದಲ್ಲಿ ಪ್ರಯೋಗವಿದೆ. ಚಷ್ಟೇ, ವಿಚಷ್ಟೇ, ಎಂದು ದರ್ಶನ ಕರ್ಮದಲ್ಲಿ ಪ್ರಯೋಗವಿದೆ. ಹೀಗೆ ಉಭಯತ್ರಾಪಿ ಪ್ರಯೋಗವಿದೆ.) (ಹೀಗೆ ಸ್ತುತಿಸತಕ್ಕ) ಗೃಭೀತಃ=(ಹೃಗ್ರಹೋರ್ಭ ಛಂದಸಿ ಎಂಬ ಸೂತ್ರದಿಂದ ಹಕಾರಕ್ಕೆ ಭಕಾರವು.) ಗೃಹೀತನಾದ (ಯೂಪದಲ್ಲಿ ಬದ್ಧನಾದ) ಶುನಶ್ಶೇಪಃ=ಶುನಶ್ಶೇಪನು, ಯಂ=ಯಾರನ್ನು, ಅಹ್ವತ್=(ಹ್ವೇಞ್ ಸ್ಪರ್ಧಾಯಾಂ ಶಬ್ದೇಚ) ಕರೆದನೋ, ಕರೆಯುತ್ತಾನೋ, ಸಃ=ಆದಾವ, ರಾಜಾ=ಸರ್ವೇಶ್ವರನಾದ, ವರುಣಃ=ವರುಣ ದೇವನು, ಅಸ್ಮಾನ್=ನಮ್ಮನ್ನು, ಮುಮೋಕ್ತು=(ಈಗ ಯೂಪ ಬಂಧನದಿಂದುಂಟಾದ ಸಂಸಾರ ದುಃಖ ದೆಶೆಯಿಂದ), ಅಥವಾ ಮೃತ್ಯುರೂಪನಾದ ಶ್ರೇಷ್ಠ ದುಃಖ ದೆಶೆಯಿಂದ) (ಮುಚ್ಲ್ ಮೋಕ್ಷಣೇ) ಬಿಡಿಸಲಿ. (ದುಃಖವನ್ನು ಪರಿಹರಿಸಲಿ) ॥೧೨॥

**ಭಾ ॥ ನಕ್ತಂ ದಿವಸೇ ಚೈತದೇವ ಸ್ತೋತ್ರಂ ತ್ವದೀಯಂ ಪ್ರಾಹುರಾರ್ಯಾ ಸುಕಾರ್ಯಂ। ಮಹ್ಯಂ ಕೇತೋ ಜ್ಞಾನರೂಪೋ ನಾರಾಯಣೋ ವಕ್ತ್ಯಯಂ ತೇಽನ್ಯ ರೂಪಂ।ಪಶ್ಯತ್ಯಪೀಶೋ ಯಂ ಸಮಹ್ವದ್ಗೃಹೀ(ಭೀ)ತಃಸ ನೋ ದೇವೋ ಮೋಚಯ ತ್ವಗ್ರ್ಯದುಃಖಾತ್ ॥೧೨॥**

ಅ ॥ ರಾತ್ರಿಯಲ್ಲಿಯೂ, ಹಗಲಿನಲ್ಲಿಯೂ, ನಿನ್ನ ಸಂಬಂಧಿಯಾದ ನಿನ್ನ ಈ ಸ್ತೋತ್ರವನ್ನೇ ಚೆನ್ನಾಗಿ ಮಾಡಬೇಕೆಂದು ನನಗಾಗಿ ಆರ್ಯರು ಹೇಳಿರುವರು. ಮತ್ತು ಹೃದಯದಲ್ಲಿರತಕ್ಕ ಕೇತಃ=ಜ್ಞಾನರೂಪನಾದ, ನಿನ್ನದ್ವಾದ ಸ್ತುತ್ಯವಾದ

ವರುಣಾದಿ ರೂಪದಿಂದ ಇತರವಾದ ವ್ಯಾಸಾದಿ ಸ್ವರೂಪನಾದ ಶ್ರೀನಾರಾಯಣನೂ (ಆ ನಿನ್ನ ಸ್ತೋತ್ರವನ್ನೇ ಮಾಡಬೇಕೆಂದು)ಹೇಳುತ್ತಾನೆ. ಮತ್ತು ನೋಡುತ್ತಾನೆ. ಹೀಗೆ ಸ್ತುತಿಸ ತಕ್ಕ ಯಾಪದಲ್ಲಿ ಬದ್ಧನಾದ ಶುನಶ್ಶೇಪನು ಯಾರನ್ನು ಕರೆದನೋ, ಅಂತಹ ವರುಣ ದೇವನು ನಮ್ಮನ್ನು ಈಗ ಉಂಟಾದ ದುಃಖದಿಂದಲೂ ಮರಣ ದುಃಖದಿಂದಲೂ, ಬಿಡಿಸಲಿ. ||೧೨||

ಋ || (೨೬೬) ಶುನಃಶೇಪೋ ಹ್ಯಹ್ವದ್ಗೃಭೀತ ಸ್ತ್ರಿಷ್ವಾದಿತ್ಯಂ ದ್ರುಪ ದೇಷು ಬದ್ಧಃ|

ಅವೈನಂ ರಾಜಾ ವರುಣಃ ಸಸೃಜ್ಯಾದ್ವಿದ್ವಾಸ ಅದಬ್ಧೋ ವಿಮುಮೋಕ್ತು ಪಾಶಾನ್ ||೧೩||

ಅ || ಗೃಭೀತಃ= ಗೃಹೀತನಾದ, ಸ್ವೀಕರಿಸಲ್ಪಟ್ಟ ಅಂದರೆ=ತ್ರಿಷು, ದ್ರುಪದೇಷು=ವೃಕ್ಷರೂಪನಾದ ಯಜ್ಞಸ್ತಂಭದ ಉರ್ಧ್ವಭಾಗ, ಅಧೋಭಾಗ, ಮಧ್ಯಭಾಗಗಳೆಂಬ ಮೂರು ಸ್ಥಾನಗಳಲ್ಲಿ, ಬದ್ಧಃ=ಚೆನ್ನಾಗಿ ಕಟ್ಟಲ್ಪಟ್ಟ, (ಅಥವಾ ದ್ರುತಂ ಪದ್ಯಂತೇ=ಶೀಘ್ರಂ ಹೊಂದಿದವುಗಳು ಎಂಬ ವ್ಯುತ್ಪತ್ತಿಯಿಂದ) ವಿಕ್ರಯ, ಯೂಪಬಂಧನ, ಆಲಂಭನ (ಹಿಂಸನೋದ್ಯೋಗ) ಇವುಗಳಿಂದ ಸಂಬದ್ಧನಾದ, ಅಥವಾ ಜೀವರ ದ್ರವಣಕ್ಕೆ (ಸಂಸಾರಕ್ಕೆ) ನಿಮಿತ್ತ ಭೂತಗಳಾದ ಸತ್ವರಜಸ್ತಮೋಗುಣಗಳಿಂದ, ಬದ್ಧಃ=ಚೆನ್ನಾಗಿ ಬದ್ಧನಾದ, ಶುನಶ್ಶೇಪಃ=ಶುನಶ್ಶೇಪನು, ಆದಿತ್ಯ=ಸರ್ವರಿಗಿಂತ ಆದಿಯಲ್ಲಿದ್ದುದರಿಂದ ಆದಿತ್ಯನೆನಿಸಿದ ಯಾವ ವರುಣನನ್ನು, ಅಹ್ವತ್‌ಹಿ=ಕರೆಯುತ್ತಾನೋ, (ಸಃ) ವರುಣಃ ರಾಜಾ=ಆ ವರುಣ ರಾಜನು, ಏನಂ=ಈ ಶುನಶ್ಶೇಪನನ್ನು, ವಿದ್ವಾನ್=ನಮ್ಮ ಆಹ್ವಾನವನ್ನು ತಿಳಿದವನಾಗಿ, ಅವ ಸಸೃಜ್ಯಾತ್=(ಸೃಜವಿಸರ್ಗೇ) ಪೂರ್ವದಲ್ಲಿ ಹೇಳಿದ ಬಂಧದಿಂದ ವಿಯುಕ್ತನನ್ನಾಗಿ ಮಾಡಲಿ. (ಅಂತೂ ಪ್ರಸನ್ನನಾಗಿ) ಅದಬ್ಧಃ=ಅಪ್ರತಿಬದ್ಧನಾಗಿ, ಪಾಶಾನ್=ಕರ್ಮ ಪಾಶಗಳನ್ನು, ವಿಮುಮೋಕ್ತು=ಬಿಡಿಸಲಿ (ಕರ್ಮಪಾಶಗಳಿಂದ ಬಿಡುಗಡೆಮಾಡಲಿ) (ಈ ಸೂಕ್ತದಲ್ಲಿ ಯಾವ ಋಕ್ಕುಗಳಲ್ಲಿ ಇತರತ್ರ ಅವಕಾಶವಿಲ್ಲದಿರುವ ವಿಷ್ಣುಲಿಂಗಾದಿಗಳು ಇವೆಯೋ ಆ ಋಕ್ಕುಗಳನ್ನು ವರುಣಾಂತರ್ಯಾಮಿ ಪರಗಳನ್ನಾಗಿಯೇ ಕೂಡಿಸಬೇಕು) ||೧೩||

ಭಾ || (೧) ಶುನಃಶೇಪೋ ಹ್ಯಸ್ಪದ್ಗೃಹಿ(ಭೀ)ತಃ ಸ್ಥಾನತ್ರಯೇ ವಿಕ್ರಯಾದ್ಯೈಸ್ಸುಬದ್ಧಃ| (೨) ದ್ರುತಂ ಪ್ರಾಪ್ತಾನಿ ದ್ರುಪದಾನಿ ವಿಕ್ರಯೋ ಯೂಪೇ ಬಂಧಃ ಸಂಜ್ಞಪನೋದ್ಯ

ಮಶ್ಚ:| (೩) ಆದಿತ್ಯೋಽಸಾವಾದಿ ಸಂಸ್ಥಃಪರೇಶೋ ವಾರೀಶಾಂತಃ ಸಂಸ್ಥಿತಃ ಸ್ತೂಯತೇಽತ್ರ | (೪) ಗುಣಾಸ್ತ್ರಯೋ ದ್ರುಪದಾನೀತಿ ಚೋಕ್ತಾ ದ್ರವತ್ಯಯಂ ಜೀವ ಸಂಘೋಹಿ ಯತ್ರ || (೬) ಕರೋತ್ವೇನಮವ ಸೃಷ್ಟಂ ಸ್ಮತೇಃ ಸಃ ಪ್ರಸನ್ನೋಽಸ್ಮಾನ್ ಕರ್ಮಪಾಶಾನ್ ಮುಮೋಕ್ತು ||೧೩||

ಅ|| (೧) (ಇಲ್ಲಿ ಪ್ರಥಮ ಪಾದವು ನಿಗದ (ಪಾಠ)ದಿಂದಲೇ ವ್ಯಾಖ್ಯಾತವಾಗಿದೆ ಎಂದು ತೋರಿಸುತ್ತಾ ಗೃಭೀತ ಪದವನ್ನು ವ್ಯಾಖ್ಯಾನ ಮಾಡುತ್ತಾರೆ.) ಗೃಹೀತನಾದ ಶುನ್ಯೇಪನು ಕರೆಯುತ್ತಾನೆ. (ತ್ರಿಷು ದ್ರುಪದೇಷು ಬದ್ಧಃ ಎನ್ನುವುದನ್ನು (1) ಸ್ಥಾನತ್ರಯದಲ್ಲಿ ಬದ್ಧನೂ, (2) ವಿಕ್ರಯಾದಿಗಳಿಂದ ಬದ್ಧನು, (ಎಂದು ೨ ಪ್ರಕಾರ ವ್ಯಾಖ್ಯಾನ ಮಾಡಿದರು.) (ಊರ್ಧ್ವ ಭಾಗ ಅಧೋ ಭಾಗ ಮಧ್ಯ ಭಾಗ ಎಂದು ಯೂಪದ್ದು ೩ ಸ್ಥಾನಗಳು. (೨) (ಯೂಪದ ೩ ಸ್ಥಾನಗಳಲ್ಲಿ ಎಂದು ೧ನೇ

ಅರ್ಥವು. ೨ನೇ ಅರ್ಥದಲ್ಲಿ ವಿಕ್ರಯಾದಿಗಳು ಮೂರು ಯಾವುವು ? ಅವುಗಳು ದ್ರುಪದಗಳೆಂದು ಅನ್ನಿಸುವುದು ಹೇಗೆ ? ಎಂದರೆ) ಶೀಘ್ರದಲ್ಲಿ ಪ್ರಾಪ್ತಗಳಾದವುಗಳು, ಧ್ರುಪದಗಳೆನಿಸುತ್ತದೆ. ವಿಕ್ರಯಣ, ಯೂಪದಲ್ಲಿ ಬಂಧ, ಹಿಂಸೋದ್ಯೋಗ ಎಂದು ವಿಕ್ರಯಾದಿಗಳು ಮೂರು. (೩) (ಆದಿತ್ಯ ಶಬ್ದವನ್ನು ಶ್ರೀ ವಿಷ್ಣುವಿನಲ್ಲಿ ಯೋಜನಾ ಮಾಡುತ್ತಾರೆ.) ಸರ್ವರಿಗಿಂತ ಆದಿಯಲ್ಲಿರತಕ್ಕ ಈ ಶ್ರೀ ಹರಿಯು ಆದಿತ್ಯನೆನಿಸುತ್ತಾನೆ. (ಅಗ್ನಿಮೀಳೇ ಇತ್ಯಾದಿಗಳಲ್ಲಿ ಆಧ್ಯಾತ್ಮಾದಿ ಭೇದದಿಂದ ೩ ಅರ್ಥಗಳಿವೆ ಎಂದು ಹೇಗೆ ಪ್ರತಿಪಾದಿತವಾಗಿದೆಯೋ, ಅದೇ ರೀತಿಯಾಗಿ ಈ ಸೂಕ್ತದಲ್ಲಿ ಸರ್ವತ್ರ ವರುಣನೂ ಹೇಳಲ್ಪಡುತ್ತಾನೋ ಎಂದರೆ) ವರುಣನೊಳಗೆ ನಿಯಾಮಕನಾಗಿರುವ ಬ್ರಹ್ಮಾದಿಗಳಿಗೆ ನಿಯಾಮಕನಾದ ವರುಣನೆನಿಸಿದ ಶ್ರೀ ಹರಿಯೇ ಈ ಸೂಕ್ತದಲ್ಲಿ ಹೇಳಲ್ಪಡುತ್ತಾನೆ. (ವರುಣನು ಹೇಳಲ್ಪಡುವುದಿಲ್ಲ.) (೪) ಹಾಗಾದರೆ ಈ ಸೂಕ್ತದಲ್ಲಿದ್ದ ಸಮಸ್ತ ಋಕ್ಕುಗಳಲ್ಲಿಯೂ ವರುಣನು ಸರ್ವಥಾ ಪ್ರತಿಪಾದಿಸಲ್ಪಡುವುದಿಲ್ಲವೋ, ಎಂದರೆ) ಶುನಶ್ಶೇಪಃಯಂ ಇದು ಮೊದಲಾದ ಕೆಲವು ವಾಕ್ಯಗಳಿಂದ ವರುಣನೂ ಕೂಡ ಋಷಿಯಿಂದ ಸ್ತುತಿಸಲ್ಪಡುತ್ತಾನೆ, ಪ್ರಸಿದ್ಧವು. (ಯಾವ ವಾಕ್ಯದಲ್ಲಿ ವರುಣನು ಸ್ತುತಿಸಲಿಕ್ಕೆ ಅರ್ಹನಾಗುತ್ತಾನೋ, ಅಲ್ಲಿ ವರುಣನನ್ನು ಕೂಡ ಇಟ್ಟುಕೊಳ್ಳಬೇಕು.) ನಹಿತೇ ಕ್ಷತ್ರಂ ಇತ್ಯಾದಿಗಳಲ್ಲಿ ವಿಷ್ಣುವೇ ಪ್ರತಿಪಾದ್ಯನು. ವರುಣನು ಪ್ರತಿಪಾದ್ಯನಾಗುವುದೇ ಇಲ್ಲ. (೫) ಯಾವ ಸತ್ವಾದಿ ಗುಣಗಳಲ್ಲಿ ಈ ಜೀವ ಸಮುದಾಯವು ಓಡುತ್ತಿರುತ್ತದೋ, ಅಂತಹ ಸತ್ವಾದಿ ಮೂರು ಗುಣಗಳು ದ್ರುಪದಾನಿ ಎಂದು ಹೇಳಲ್ಪಡುತ್ತವೆ. (೬) (೩ನೇ ಪಾದದ ತಾತ್ಪರ್ಯ ಹೇಳುತ್ತಾರೆ.) ಆ ವರುಣನು ಈ ಶುನಶ್ಶೇಪನನ್ನು ಸಂಸಾರದಿಂದ ವಿಯುಕ್ತನನ್ನಾಗಿ ಮಾಡಲಿ. (ಸಂಸಾರದಿಂದ ಬಿಡುಗಡೆ ಮಾಡಲಿ) (೪ನೇ ಪಾದದ ಅರ್ಥ ಹೇಳುತ್ತಾರೆ) ಆ ವರುಣನೆನಿಸಿದ ಶ್ರೀ ಹರಿಯು ಪ್ರಸನ್ನನಾಗಿ, ನಮ್ಮನ್ನು ಕರ್ಮಪಾಶಗಳ ದೆಸೆಯಿಂದ ಬಿಡುಗಡೆ ಮಾಡಲಿ. ||೧೩||

ಋ || (೨೬೭) ಅವತೇ ಹೇಳೊವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ |

ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ||೧೪||

ಅ|| ವರುಣ = ವರುಣನೇ, (ನಾವು) ತೇ ನಮೋಭಿಃ = ನಿನ್ನ ವಿಷಯಕ ನಮಸ್ಕಾರಗಳಿಂದಲೂ ಹವಿರ್ಭಿ ಯಜ್ಞೇಭಿಃ - ಹವಿಸ್ಸಿನಿಂದ ಕೂಡಿರುವ ನಿನ್ನ ವಿಷಯಕ ಯಜ್ಞಗಳಿಂದಲೂ, (ನಿನ್ನ ನಮಸ್ಕಾರ ನಿನ್ನ ಉದ್ದೇಶದಿಂದ ಮಾಡಿದ ಯಜ್ಞ, ಇವುಗಳಿಂದುಂಟಾದ ನಿನ್ನ ಅನುಗ್ರಹದಿಂದ) ತೇ = ನಿನ್ನ, ಹೇಳಃ = ತಿರಸ್ಕಾರವನ್ನು ನಿಂದೆಯನ್ನು, ಅವ = ಅಧಮವನ್ನಾಗಿ, ಅಂದರೆ ಅಧೋಗತಿಗೆ ಕಾರಣವನ್ನಾಗಿ, ಅವ ಈ ಮಹೇ= ತಿಳಿಯುತ್ತೇವೆ. ರಾಜನ್ = ಪ್ರಕಾಶಾಶ್ರಯನಾದ, ಅಸುರ = ಪ್ರಾಣಗಳಲ್ಲಿ ಅಥವಾ ಪ್ರಾಣಗಳಿಂದ ಕ್ರೀಡಿಸುತ್ತಿರುವ, ಪ್ರಚೇತಃ = (ಕ್ಷಿನಿವಾಸಗತ್ಯೋಃ) ಆಶ್ರಯನಾಗಿ, ಕೃತಾನಿ = ನಮ್ಮಿಂದ ಮಾಡಲ್ಪಟ್ಟ, ಏನಾಂಸಿ = ಪಾಪಗಳನ್ನು, ಶಿಶ್ರಥಃ = (ಶ್ರಥುವಿಯೋಗೇ, ಅಥವಾ ಶ್ರಥ ವಿಮೋಚನ ಪ್ರತಿಹರ್ಷಯೋಃ ) ಶೀಘ್ರದಲ್ಲಿ ಬಿಡಿಸು. ||೧೪||

ಭಾ || ನಿಂದಾಂ ಚ ತೇಽವಾಗ್ಗತೇರ್ಹೇತುಭೂತಾಮವಗಚ್ಛಾಮಃ ಸೇಯಮಿತ್ಯಪ್ಯಯೋ ಗ್ಯಾಂ | ನಮಸ್ಕಾರೈಸ್ತ್ವದ್ಗತೈಸ್ತ್ವನ್ಮಖೈಶ್ಚ ಹವಿರ್ಯುಕ್ತೈಸ್ತ್ವತ್ಪ್ರಸಾದಾತ್ಸ ಚತ್ವಂ || ಕ್ಷಿತಿರಸ್ಮಭ್ಯಂ ಪ್ರಾಣರಂತಾಽಖಿಲಜ್ಞೋ ವಿಯೋಜಯಾಸ್ಮತ್ಕೃತಾನ್ಯಾಶ್ಚ ಘಾನಿ ||೧೪||

ಅ|| (ಇಲ್ಲಿ ಈಮಹೇ ಎಂದು ಕ್ರಿಯಾಪದವು ಒಂದೆಯಾದುದರಿಂದ ೨ ಅವ ಶಬ್ದಗಳೂ ಉಪಸರ್ಗಗಳಲ್ಲ ಎಂಬ ಅಭಿಪ್ರಾಯದಿಂದ ಒಂದನೇ ಅವ ಶಬ್ದಕ್ಕೆ ಅವಮವೆಂದು ಅರ್ಥವು ಎಂಬ ವಿವಕ್ಷೆಯಿಂದ ವ್ಯಾಖ್ಯಾನ ಮಾಡುತ್ತಾರೆ.) (ಎಲೋ ವರುಣನೇ) ನಿನ್ನ ವಿಷಯಕ ನಮಸ್ಕಾರಗಳಿಂದಲೂ, ಹವಿಸ್ಸಿನಿಂದ ಕೂಡಿರುವ ನಿನ್ನ ಯಜ್ಞಗಳಿಂದಲೂ ಉಂಟಾದ ನಿನ್ನ ಅನುಗ್ರಹದಿಂದ ನಿನ್ನ ನಿಂದೆಯನ್ನು ಅಧೋಗತಿಗೆ ಕಾರಣಭೂತವಾದುದನ್ನಾಗಿ ತಿಳಿಯುತ್ತೇವೆ. (ಹಾಗಾದರೆ ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯವಾ । ತತೋ ನಾ ಪೈತಿ ಯಸ್ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ । ಎಂಬ ಭಾಗವತೋಕ್ತಿಯಿಂದ ಮುಮುಕ್ಷುವಿಗೆ ಭಗವನ್ನಿಂದೆಯು ತಿಳಿಯಲಯೋಗ್ಯವು, ಎಂದರೆ) ಉಪಾದೇಯವಾಗಿ ಅಯೋಗ್ಯವಾದುದಾಗ್ಯೂ (ಅಂದರೆ ಭಗವನ್ನಿಂದೆಯನ್ನು ನಾವು ಮಾಡಬಾರದು, ಮತ್ತು ಕೇಳಬಾರದು. ಹೀಗಿದ್ದರೂ) ಆ ಭಗವನ್ನಿಂದೆಯು ಈ ಅಧೋಗತಿಗೆ ಕಾರಣಭೂತವಾಗಿದೆ ಎಂದು ತಿಳಿಯುತ್ತೇವೆ. ಹೀಗೆ ನಮ್ಮಿಂದ ತಿಳಿಯಲ್ಪಟ್ಟ ಇಂದ್ರಿಯಗಳಲ್ಲಿ ಅಥವಾ ಇಂದ್ರಿಯಗಳಿಂದ ರಮಿಸುವ, ಸರ್ವಜ್ಞನಾದ ನೀನು ನಮಗೆ ಆಶ್ರಯನಾಗಿ ನಾವು ಮಾಡಿದ ಪಾಪಗಳನ್ನು ಶೀಘ್ರದಲ್ಲಿ ಬಿಡಿಸು. ||೧೪||

ಋ || (೨೬೪) ಉದುತ್ತಮಂ ವರುಣಪಾಶಮಸ್ಮದವಾಧಮಂ ವಿ ಮಧ್ಯಮಂ ಶ್ರಥಾಯ ।

ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ||೧೫||೧೫||೨೪||

ಅ|| ವರುಣ = ವರುಣನೇ, ಉತ್ತಮಂ ಪಾಶಂ = ಉತ್ಕೃಷ್ಟವಾದ ಪುಣ್ಯರೂಪವಾದ ಪಾಶವನ್ನೂ ಅಸ್ಮತ್ ಉತ್ ಶ್ರಥಯ =ಮಿತ್ರರಿಗೆ ಕೊಟ್ಟು ನಮ್ಮಿಂದ ಬಿಡಿಸು. ಅಧಮಂ ಪಾಶಂ =ಪಾಪ ರೂಪ ಪಾಶವನ್ನು, ಅವ ಶ್ರಥಯ =ದ್ವೇಷಿಗಳಿಗೆ ಕೊಟ್ಟು ನಮ್ಮಿಂದ ಬಿಡಿಸು. ಮಧ್ಯಮಂ ಪಾಶಂ =ಪಾಪದಿಂದ ಮಿಶ್ರವಾದ ಪುಣ್ಯವನ್ನೂ, (ತನ್ನ ಫಲವನ್ನು ಭೋಗಿಸುವ ಕಾಲದಲ್ಲಿ ಪುಣ್ಯಫಲದ ಭೋಗಕ್ಕೆ ಅವಕಾಶವನ್ನು ಕೊಡತಕ್ಕ ಪಾಪವು ಮಿಶ್ರವೆನ್ನಿಸುತ್ತದೆ.) ಪುಣ್ಯದಿಂದ ಮಿಶ್ರವಾದಪಾಪವನ್ನೂ, ವಿಶ್ರಥಯ =ಉದಾಸೀನರಿಗೆ ಕೊಟ್ಟು ನಮ್ಮಿಂದ ಬಿಡಿಸು. ಅಥ=ಹೀಗೆ ವಿಯೋಜನದಿಂದ, ಆದಿತ್ಯ =ಎಲ್ಲರಿಗಿಂತ ಆದಿಯಲ್ಲಿರತಕ್ಕ ಶ್ರೀ ಹರಿಯೇ, ತವವ್ರತೇ = ನಿನ್ನ ಕರ್ಮದಲ್ಲಿ, (ನಿನ್ನಲ್ಲಿಯೇ ಆಸಕ್ತಿಯಿಂದ) ಅನಾಗಸಃ=(ನ ವಿದ್ಯತೇ ಆಗಃ ಅಪರಾಧಃ ಸರ್ವದೋಷಃ ಯೇಷಾಂ ತೇ) ದೋಷ ಲೇಶ ರಹಿತರಾಗಿ ಸಂಸಾರದಿಂದ ಮುಕ್ತರಾದ, ವಯಂ =ನಾವು, ತವ ಆದಿತಯೇ =ನಿನ್ನ ಪತ್ನಿಯಾದ ಲಕ್ಷ್ಮೀ ದೇವಿಗೆ, ಸ್ಯಾಮ =ಪುತ್ರರಾಗುವೆವು. ||೧೫||೧೫||೨೪||

ಭಾ || (೧) ಪುಣ್ಯಂ ಪಾಪಂ ಮಿಶ್ರಮಿತ್ಯೇವ ಪಾಶಾನ್ಯಥಾಯೋಗ್ಯಂ ಶ್ರಥಯಾಽನ್ಯೇಷು ದತ್ವಾ। ತ್ವನ್ನಿಷ್ಠಯಾ ತೇನ ವಯಂ ತ್ವದೀಯಲಕ್ಷ್ಮ್ಯಾಃ ಪುತ್ರಾಃ ಸ್ಯಾಮ ಮುಕ್ತಾಃ ಸ್ವತೇಶ್ಚ || (೨) ಏಷಾ (ಏಷರ್ಗ್ವಿ) ವಿಷ್ಣೋಃ ಕೇವಲಾಽಪ್ಯೇವಮನ್ಯಾ ಅಯೋಗ್ಯಾಯಾ ಅನ್ಯದೇವೇಷು ಸಮ್ಯಕ್ || (೩) ವಾಕ್ಯೈರ್ವಿಶಿಷ್ಟೈರಪವಾದಹೀನೈರ್ಜ್ಞೇಯಾ ಗುಣಾ ಅನ್ಯದೇವೇಷು ಚೈವ || (೪) ಪತಿಃ ಸೋಮೋ ವರುಣಸ್ಯಾಪ್ಯಥಾಗ್ನೇಃ ಪತಿಃ ಸೂರ್ಯಸ್ತಾವುಭೌ ತುಲ್ಯವೀರ್ಯೌ। ಸೂರ್ಯಾಚಂದ್ರಮಸೋಃ ಪತಿರಿಂದ್ರೋಽಸ್ಯ ರುದ್ರಃ ಪತಿರ್ಬ್ರಹ್ಮಾ ಪತಿರಸ್ಯಾಪಿ ವಿಷ್ಣುಃ । ಪತಿರ್ಮುಕ್ತೇರ್ವಾಸುದೇವೋಽಥ ದೃಷ್ಟೇರ್ಬ್ರಹ್ಮಾ ವಿದ್ಯಾಯಾಃ ಶರ್ವ ಇಂದ್ರಃ ಕ್ರಿಯಾಯಾಃ ।

**ಕ್ರಿಯಾಂಶಾನಾಮಧಿಪಾ ಅನ್ಯದೇವಾಸ್ತಥಾ ಫಲಾನಾಮಪಿ ಮುಕ್ತಿಮಾರ್ಗೇ । ಯಥಾ ಯೋಗ್ಯಂ ಸ್ವೇಂದ್ರಿಯಪ್ರೇರಕಾಶ್ಚ ತತಃ ಪೂಜ್ಯಾ ದೇವತಾ ಮುಕ್ತಿಕಾಮ್ಯೈಃ । ಇತಿ ಶ್ರುತೇಸ್ತಾರತಮ್ಯಂ ಗುಣಾನಾಂ ಜ್ಞಾತ್ವಾ ಯೋಜ್ಯಾಃ ಶ್ರುತಯಸ್ತತ್ರತತ್ರ ॥೧೫॥೧೫॥**

ಅ॥ (ಉತ್ತಮ ಅಧಮ ಮಧ್ಯಮ ಪಾಶಗಳನ್ನು ವ್ಯಾಖ್ಯಾನ ಮಾಡುತ್ತಾರೆ) ಪುಣ್ಯ ರೂಪಪಾಶ, ಪಾಪ ರೂಪಪಾಶ ಮಿಶ್ರರೂ ಪಾಶಗಳನ್ನು (ಋಕ್ಕಿನ ಪ್ರಥಮಾರ್ಧದಲ್ಲಿ ಹೇಳಿದ ಉ, ಅವ, ವಿ, ಎಂಬ ೩ ಉಪಸರ್ಗಗಳ ಅರ್ಥಗಳನ್ನು ಹೇಳುತ್ತಾರೆ.) ಯಥಾಯೋಗ್ಯವಾಗಿ ಇತರರಿಗೆ ಕೊಟ್ಟು, (ಅಂದರೆ ತಸ್ಯ ಪುತ್ರಾ ದಾಯಮುಪ ಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ ಎಂಬ ಶ್ರುತ್ಯನುಸಾರವಾಗಿ ಅನ್ಯೇಷುದತ್ವಾ ಎಂಬ ಭಾಷ್ಯವನ್ನು ಮೂರು ಪ್ರಕಾರ ವ್ಯಾಖ್ಯಾನ ಮಾಡುತ್ತಾರೆ.) (ಉತ್ತಮವಾದ ಪುಣ್ಯ ರೂಪಪಾಶವನ್ನು ಸುಹೃತ್‌ಗಳಿಗೂ, ಅಧಮವಾದ ಪಾಪ ರೂಪಪಾಶವನ್ನು ದ್ವೇಷಿಗಳಿಗೂ, ಮಧ್ಯಮವಾದ ಮಿಶ್ರ ರೂಪಪಾಶವನ್ನು ಉದಾಸೀನರಿಗೂ ಕೊಟ್ಟು) ನಮ್ಮಿಂದ ಬಿಡಿಸು. ಏವ ಶಬ್ದದಿಂದ ಸಾಮಾನ್ಯತಃ ಪ್ರಸಿದ್ಧ ಪಾಶವಿನಿಯೋ ಜನರೂಪವಾದ ಅರ್ಥವು ಕೂಡುವುದಾದರೂ ಪುಣ್ಯಾದಿವಿಯೋಜನರೂಪವಾದ ಅರ್ಥವೇ ಪರಮಮುಖ್ಯಾರ್ಥವೆಂದುಕ್ತವಾಯ್ತು. ಆ ವಿಯೋಜನದಿಂದ, ನಿನ್ನಲ್ಲಿಯೇ ಆಸಕ್ತಿಯಿಂದ, ಸಂಸಾರದಿಂದ ಮುಕ್ತರಾದ ನಾವು ನಿನ್ನವಳಾದ ಲಕ್ಷ್ಮೀದೇವಿಗೆ ಪುತ್ರರಾಗುವೆವು. (೨) ವಿಷಗ್ವಿಷ್ಣೋಃ ಎಂಬ ಈ ಭಾಷ್ಯದಿಂದ ಈ ಋಕ್ಕು ವಿಷ್ಣು ಪ್ರತಿಪಾದಕವೆಂದು ಹೇಳಲ್ಪಡುತ್ತದೆ. ಪರೇಶೋ ವಾರೀಶಾಂತ್ಯ ಎಂಬ ೧೩ನೇ ಭಾಷ್ಯದಲ್ಲಿ ಈ ಸೂಕ್ತವೇ ವಿಷ್ಣು ಪ್ರತಿಪಾದಕವೆಂದು ಹೇಳಿದೆ. ಆದ ಕಾರಣ ಇದು ಪುನರುಕ್ತವಾಯಿತೆಂದರೆ ಪರೇಶಃ ಇತ್ಯಾದಿಗಳಿಂದ ಹೇಳಿದುದನ್ನೇ ವಿವರಿಸುತ್ತಾರೆ.) ಈ ಋಕ್ಕು ಕೇವಲ ವಿಷ್ಣು ಪ್ರತಿಪಾದಕವೇ. ಬೇರೆ ಪ್ರತಿಪಾದ್ಯವು ಈ ಋಕ್ಕಿನಲ್ಲಿ ಇಲ್ಲ. ಹೀಗೆಯೇ ಇತರ ಋಕ್ಕುಗಳೂ ಇತರ ದೇವತೆಗಳಲ್ಲಿ ಅಯೋಗ್ಯಗಳು ಯಾವುವು ಇವೆಯೋ, ಅವುಗಳೆಲ್ಲವೂ ಚೆನ್ನಾಗಿ ವಿಷ್ಣುಪರಗಳೇ ಆಗುವುವು. (ಪಾಶಾದಿ ಶಬ್ದಗಳಿಗೆ ಪುಣ್ಯಪಾಪಾದಿ ರೂಪ ಅರ್ಥ ವಿವಕ್ಷಾಮಾಡಿದರೇನೇ ಕೇವಲ ವಿಷ್ಣುಪರತ್ವವನ್ನು ತಿಳಿಯಬೇಕು.) (ಪ್ರಸಿದ್ಧ ಪಾಶಮೋಚನ ಪ್ರಾರ್ಥನಾದಿರೂಪವಾದ ಅರ್ಥಾಂತರವನ್ನು ವಿವಕ್ಷಾ ಮಾಡಿದರೆ ವರುಣಾದಿರೂಪವಾದ ಅರ್ಥಾಂತರವೂ ಕೂಡುವುದು.) (೩) (ಇತರ ದೇವತೆಗಳಲ್ಲಿ ಈ ಋಕ್ಕುಗಳು ಅಯೋಗ್ಯಗಳೆಂದೂ, ಶ್ರೀ ವಿಷ್ಣುವಿನಲ್ಲಿ ಯೋಗ್ಯಗಳೆಂದೂ ಹೇಗೆ ತಿಳಿದುಕೊಳ್ಳಬೇಕು. ಮತ್ತೂ ಆವಾವ ಋಕ್ಕುಗಳಲ್ಲಿ ಹೇಳಿದ ಗುಣಗಳು ಯೋಗ್ಯಗಳಾದರೆ (ಉಪಪನ್ನಗಳಾದರೆ) ಋಕ್ಕೂ ಯೋಗ್ಯವಾಗುವುದು. ಅನುಪಪನ್ನಗಳಾದರೆ ಋಕ್ಕು ಅಯೋಗ್ಯವಾಗುವುದು. ಅದನ್ನು ಹೇಗೆ ತಿಳಿಯಬೇಕು, ಎಂದರೆ,) ಇತರ ದೇವತೆಗಳಲ್ಲಿ ಅಯೋಗ್ಯಗಳಾದ ಗುಣಗಳನ್ನು ನ ಹಿ ತೇ ಕ್ಷತ್ರಂ ಇತ್ಯಾದಿ ಹೇಳಲ್ಪಟ್ಟವುಗಳನ್ನು ಶ್ರೀ ವಿಷ್ಣುವಿನಲ್ಲಿಯೇ ಯೋಗ್ಯಗಳಾದ ಗುಣಗಳನ್ನು ವಿಶಿಷ್ಟಗಳಾದ ಉತ್ತಮಗಳಾದ ಅಪವಾದವಿಲ್ಲದಿರುವ ವಾಕ್ಯಗಳಿಂದ ತಿಳಿಯಬೇಕು. (ಎಂದು ಹೇಳಿದುದರಿಂದ ಆ ಋಕ್ಕುಗಳು ಇತರ ದೇವತೆಗಳಲ್ಲಿ ಅಯೋಗ್ಯಗಳೆಂದೂ, ಶ್ರೀವಿಷ್ಣುವಿನಲ್ಲಿ ಯೋಗ್ಯಗಳೆಂದೂ ಸಿದ್ಧವಾಗುತ್ತವೆ.) (ಅಥವಾ ಶ್ರೀವಿಷ್ಣುವಿನಲ್ಲಿ ಯೋಗ್ಯಗಳಾದ ಗುಣಗಳನ್ನೂ ಇತರ ದೇವತೆಗಳಲ್ಲಿ ಯೋಗ್ಯಗಳಾದ ಗುಣಗಳನ್ನು ವಿಶಿಷ್ಟಗಳಾಗಿರುವುದರಿಂದಲೇ ಅಪವಾದವಿಲ್ಲದಿರುವ ವಾಕ್ಯಗಳಿಂದ ತಿಳಿಯಬೇಕು. (೪) (ಆ ವಾಕ್ಯಗಳನ್ನೇ ಉದಾಹರಿಸುತ್ತಾರೆ.) ಚಂದ್ರನು ವರುಣನಿಗೆ ಅಧಿಪತಿಯು. ಸೂರ್ಯನು ಅಗ್ನಿಗೆ ಅಧಿಪತಿಯು. ಆ ಸೂರ್ಯ ಚಂದ್ರರು ಸಮಾನವಾದ ವೀರ್ಯವುಳ್ಳವರು. ಸೂರ್ಯ ಚಂದ್ರರಿಗೆ ಇಂದ್ರನು ಅಧಿಪತಿಯು. ಇಂದ್ರನಿಗೆ ರುದ್ರನು ಅಧಿಪತಿಯು. ರುದ್ರನಿಗೆ ಚತುರ್ಮುಖ ಬ್ರಹ್ಮನು ಅಧಿಪತಿಯು. ಬ್ರಹ್ಮನಿಗೆ ಶ್ರೀವಿಷ್ಣುವು, ಅಧಿಪತಿಯು. ವಾಸುದೇವನೇ

ಮುಕ್ತಿಗೆ ಅಧಿಪತಿಯು, ಭಗವದ್ದರ್ಶನಕ್ಕೆ ಚತುರ್ಮುಖನೂ, ವಿದ್ಯೆಗೆ ರುದ್ರನೂ, ಕ್ರಿಯೆಗಳಿಗೆ ಇಂದ್ರನೂ ಅಧಿಪತಿಯು. ಕ್ರಿಯಾಂಶಗಳಿಗೆ ಇತರ ದೇವತೆಗಳೂ ಅಧಿಪತಿಗಳು. ಹಾಗೆಯೇ ಫಲಗಳಿಗೂ ಅಧಿಪತಿಗಳನ್ನು ತಿಳಿಯಬೇಕು. ಮುಕ್ತಿ ಸಾದನವನ್ನು ಸಂಪಾದಿಸುವ ವಿಷಯದಲ್ಲಿ ಯಥಾಯೋಗ್ಯವಾಗಿ ತಂತಮ್ಮಿಂದ ಅಭಿಮನ್ಯಮಾನಗಳಾದ ಇಂದ್ರಿಯಗಳಿಗೆ ಪ್ರೇರಕರು. ಆದ ಕಾರಣ ಮುಕ್ತಿಯನ್ನು ಪಡೆಯಲಿಚ್ಛಿಸುವವರು ಎಲ್ಲಾ ದೇವತೆಗಳನ್ನೂ ಯಥಾಯೋಗ್ಯವಾಗಿ ಪೂಜಿಸಬೇಕು, ಎಂಬ ಶ್ರುತಿಯಿಂದ ದೇವತಾ ಸಂಬಂಧಿಗಳಾದ ಗುಣಗಳಿಗೆ (ವಿಷ್ಣುಗುಣಗಳಿಗೆ ತಾರತಮ್ಯವಿಲ್ಲವೆಂದೂ ತಿಳಿದು.) ತಾರತಮ್ಯವನ್ನು ತಿಳಿದು ಆವಾವ ದೇವತೆಗಳಲ್ಲಿ ಶ್ರುತಿಗಳನ್ನು ಯಥಾಯೋಗ್ಯವಾಗಿ ಯೋಜಿಸಬೇಕು. ||೧೫||

ವಿ || (1) ಪತಿಃ ಸೋಮೋ ವರುಣಸ್ಯ ಇತ್ಯಾದಿಗಳಿಂದ ಎಲ್ಲಿ ಎಲ್ಲಿ ವರುಣನಿಗೆ ಆಯೋಗ್ಯಗಳಾದ ಗುಣಗಳ ಕಥನವು ಹೇಗೆ ಹೇಳಲ್ಪಡುತ್ತದೆ ಎಂದರೆ ಸೋಮೋ ವರುಣಸ್ಯ ಪತಿಃ ಎಂಬ ಉಕ್ತಿಯಿಂದ ವಿಚಾಕಶತ್ ಚಂದ್ರಮಾ ನಕ್ತಮೇತಿ ಎಂಬುವುದು ವಿಚಾಕಶತ್ ಎಂಬುವಲ್ಲಿ ವರುಣನಿಗೆ ಇಂದ್ರ ಪ್ರೇರಕತ್ವವು ಹೇಳಲ್ಪಡುವುದರಿಂದ ಅದು ವರುಣನಲ್ಲಿ ಅಯೋಗ್ಯವೆಂದು ಲಬ್ಧವಾಗುತ್ತದೆ. (2) ತುಲ್ಯವೀರ್ಯೌ ಎನ್ನುವುದರಿಂದ ಉರುಂ ಹಿ ರಾಜಾ ಎನ್ನುವಲ್ಲಿ ಸೂರ್ಯ ಸಂಚಾರಕ್ಕಾಗಿ ಮಾರ್ಗ ಕರ್ತೃತ್ವವು ವರುಣನಲ್ಲ ಅಯೋಗ್ಯವೆಂದು ತಿಳಿಯುತ್ತದೆ. (3) ಅಸ್ಯೇಂದ್ರಸ್ಯ ರುದ್ರಃ ಪತಿಃ ಎನ್ನುವುದರಿಂದ ಉತಾಪವಕ್ತಾ ಎನ್ನುವಲ್ಲಿ ರುದ್ರ ಶಿಕ್ಷಕತ್ವವು ವರುಣನಲ್ಲಿ ಅಯೋಗ್ಯವೆಂದು ತೋರುತ್ತದೆ. (4) ಅಸ್ಯಾಪಿ ವಿಷ್ಣುಃ ಎಂದು ವಿಷ್ಣುವಿಗೆ ಸರ್ವೋತ್ತಮತ್ವವನ್ನು ಹೇಳಿದುದರಿಂದ ನ ಹೀತೇಕ್ಷತ್ರಂ ಎನ್ನುವಲ್ಲಿ ಅನ್ಯರಿಂದ ಅಪ್ರಾಪ್ಯವಾದ ಬಲಾದಿಯುಕ್ತತ್ವವು ವರಣನಲ್ಲಿ ಅಯೋಗ್ಯವೆಂದು ನಿಶ್ಚಿತವಾಗುತ್ತದೆ. (5) ಪತಿರ್ಮುಕ್ತೇರ್ವಾಸುದೇವಃ ಎನ್ನುವುದರಿಂದ ಊರ್ಧ್ವಂ ಸ್ತೂಪಂ ಎನ್ನುವಲ್ಲಿ ಉತ್ತಮ ಸ್ಥಾನದಾತೃತ್ವವು ಅನ್ಯತ್ರ ಅಯೋಗ್ಯವೆಂದು ನಿಶ್ಚಿತವಾಗುತ್ತದೆ. (6) ದೃಷ್ಟೇರ್ಬ್ರಹ್ಮ ಎನ್ನುವುದರಿಂದ ಅಸ್ಮೇ ಅಂತರ್ನಿಹಿತಾಃ ಎನ್ನುವುದರಿಂದ ಆನೋಬರ್ಹೀರಿಶಾದಸಃ ಎಂಬ ಅಗ್ನೇಯ ಋಕ್ಕಿನಲ್ಲಿ ಮಿತ್ರ ಅರ್ಯಮಾ ಎನ್ನುವ ಸೂರ್ಯಸ್ಥಾಪಕತ್ವವು ಅಗ್ನೀಗೆ ಅಯೋಗ್ಯವಾದುದು ಹೇಳಲ್ಪಡುತ್ತದೆ. (8) ವಿದ್ಯಾಯಾಃ ಶರ್ವೋ ಅಧಿಪಃ ಎನ್ನುವುದರಿಂದ ಅತೋವಿಶ್ವಾನ್ಯದ್ಭುತಃ ಇತ್ಯಾದಿಗಳಲ್ಲಿ ವರುಣನಿಗೆ ಅಯೋಗ್ಯವಾದ ಸರ್ವಾಶ್ಚರ್ಯ ದರ್ಶನವು ಹೇಳಲ್ಪಡುತ್ತದೆ. (9) ಇಂದ್ರಃ ಕ್ರಿಯಾಯಾಃ ಎನ್ನುವುದರಿಂದ ವೇದಮಾಸೋಧೃತ ವೃತಃ ಇತ್ಯಾದಿಗಳಲ್ಲಿ ವರುಣನಿಗೆ ಅಯೋಗ್ಯವಾದ ಸರ್ವಕರ್ಮಧಾರಣವು ಹೇಳಲ್ಪಡುತ್ತದೆ. ಹೀಗೆಯೇ ಇತರ ದೇವತೆಗಳಲ್ಲಿಯೂ ತಿಳಿಯಬೇಕು. ||೧೫|೧೫||೨೪||

ಅವ || ೨೧ ಋಕ್ಕು ೪ ವರ್ಗ ಗಾಯತ್ರೀ ಛಂದಸ್ಸು. ೨೫ನೇ ಸೂಕ್ತ. ವರುಣನು ದೇವತೆಯು.

ಋ || (೨೬೯) ಯಚ್ಚಿದ್ಧಿ ತೇ ವಿಶೋ ಯಥಾ ಪ್ರದೇವ ವರುಣ ವ್ರತಂ । ಮಿನೀಮಸಿ ದ್ಯವಿದ್ಯವಿ ||೧||

ಅ || ವರುಣ ದೇವ=ವರುಣನೇ, ವಿಶಃ=ಪ್ರಜೆಗಳು, ಸಜ್ಜನರು ಯಥಾ ಹಿ=ಹೇಗೋ (ಹಾಗೆಯೇ ನಾವು,) ಯಚ್ಚಿತ್=ಯಾವುದು, ತೇ ವ್ರತಂ ನಿನ್ನ ಸೇವಾತ್ಮಕವಾದ ಕರ್ಮವಿದೆಯೋ, (ಅವೆಲ್ಲವನ್ನು) ದ್ಯವಿದ್ಯವಿ=(ದ್ಯುರಹ್ನಿ ವಹ್ನೌ ತ್ರಿದಿವೇ ಎಂಬ ವಿಶ್ವಕೋಶದಿಂದಲೂ, ಅಹರ್ನಾಮಗಳಲ್ಲಿ ಪಠಿತವಾದುದರಿಂದಲೂ) ಪ್ರತಿ ದಿವಸದಲ್ಲಿಯೂ ಪ್ರಮಿನೀಮಸಿ=ಮಾಡುತ್ತೇವೆ ||೧||

ಭಾ ॥ ದಿವಸೇ ದಿವಸೇ ದೇವ ಕುರ್ಮೋ ಯದಪಿ ತೇ ವ್ರತಂ । ಯಥೈವ ಸುಜನಾಃ ॥೧॥

ಅ॥ ಎಲೋ ವರುಣ ದೇವನೇ ಸಜ್ಜನರು ಹೇಗೋ (ಹಾಗೆ ನಾವು) ಯಾವುದು ನಿನ್ನದ್ದು ಸೇವಾತ್ಮಕವಾದುದು ಕರ್ಮವು ಇದೆಯೋ, ಅದನ್ನು ಪ್ರತಿ ದಿವಸದಲ್ಲಿಯೂ ಮಾಡುತ್ತೇವೆ. (ಯದ್ಯಪಿ ಧಾತು ಪಾಠದಲ್ಲಿ ಮೀಙ ಹಿಂಸಾಯಾಂ ಎಂದು ಇದೆ. ಇದು ಅದಲ್ಲ. ವೈದಿಕವು, ಹ್ರಸ್ವವು. ಮಿಧಾತುವಿಗೆ ಗ್ನಾಪ್ರತ್ಯಯ, ಇತ್ವಂ. ಮಸಿ ಪ್ರತ್ಯಯವು. ಮಿನೀಮಸಿ ॥೧॥

ಋ ॥ (೨೭೦) ಮಾ ನೋ ವಧಾಯ ಹತ್ನವೇ ಜಿಹೀಳಾನಸ್ಯ ರೀರಧಃ। ಮಾ ಹೃ ಣಾನಸ್ಯ ಮನ್ಯವೇ ॥೨॥

ಅ ॥ (ಎಲೋ ವರುಣನೇ) ನಃ=ನಮ್ಮನ್ನು, ವಧಾಯ=ಸಂಹರಿಸುವುದಕ್ಕಾಗಿ, ಹತ್ನವೇ=(ಹಂತೀತಿಹತ್ನುಃ) ಸಂಹರಿಸುವ, ಜಿಹೀಳಾನಸ್ಯ=ಹಿಳಭಾವಕರಣೇ, ಅಥವಾ (ಓಹಾಕ ತ್ಯಾಗೇ) ಧರ್ಮವನ್ನು ಬಿಡುವ ಪುರುಷನಿಗೆ, ಮಾರೀರಧಃ=(ರಾಧ ಸಾಧ ಸಂಸಿದ್ಧೌ, ಸಾಧಿಸಬೇಡ. (ಅವನ ಅಧೀನರನ್ನಾಗಿ ನಮ್ಮನ್ನು ಮಾಡಬೇಡ. ಅಂದರೆ ಘಾತಕನೂ ಧರ್ಮಹೀನನೂ ಆದ ಪುರುಷನನ್ನು ವಶೀಕರಿಸಿದರೆ ನಮಗೆ ಹನನವು ಆಗುವುದು.) ಮತ್ತು ಹೃಣಾನಸ್ಯ=(ಹೃಙ ಹರಣೇ) ಅಪಹರಿಸತಕ್ಕ ಪುರುಷನ, ಮನ್ಯವೇ=ಕೋಪಕ್ಕಾಗಿ, ಮಾರೀರಧಃ=ಸಾಧಿಸಬೇಡ. (ಅಂದರೆ ಅಪಹರಿಸತಕ್ಕ ಪುರುಷನ ಕೋಪವು ನಮ್ಮಲ್ಲಿ ಆಗಬಾರದು) ॥೨॥

ಭಾ ॥ ಮಾ ನೋ ಹಂತುಂ ಸಾಧಯ ನಿಘ್ನತೇ । ಜಹೀಳಾನಸ್ತ್ಯಜನ್ ಧರ್ಮಂ ಹರತೋ ಮಾ ಚ ಮನ್ಯವೇ ॥೨॥

ಅ ॥ (ಎಲೋ ವರುಣನೇ) ನಮ್ಮನ್ನು ಸಂಹರಿಸುವುದಕ್ಕಾಗಿ (ಸಂಹರಿಸುವ, ಮತ್ತು ಧರ್ಮವನ್ನು ಬಿಡುವ ಪುರುಷನಿಗೆ) ಸಾಧಿಸಬೇಡ. (ಅವನ ಅಧೀನರನ್ನಾಗಿ ಮಾಡಬೇಡ.) ಧರ್ಮವನ್ನು ಬಿಡುವವನು ಜಹೀಳಾನಃ ಎನಿಸುತ್ತಾನೆ. (ಸಂಹಾರಕನೂ ಧರ್ಮಭ್ರಷ್ಟನೂ ಆದ ಪುರುಷನನ್ನು ವಶೀಕರಿಸಲಿಕ್ಕೆ ಪ್ರಯತ್ನಿಸಿದರೆ ನಮ್ಮನ್ನೇ ಕೊಂದು ಬಿಡುವನು.) ಮತ್ತು ಅಪಹರಿಸುವ ಪುರುಷನ ಕೋಪಕ್ಕಾಗಿ ಸಾಧಿಸಬೇಡ (ಅಂದರೆ ಆತನ ಕೋಪವು ನಮ್ಮಲ್ಲಿ ಆಗಬಾರದು.) ॥೨॥

ಋ ॥ (೨೭೧) ವಿ ಮೃಳೀಕಾಯ ತೇ ಮನೋ ರಥೀರಶ್ವಂ ನ ಸಂದಿತಂ। ಗೀರ್ಭಿರ್ವರುಣ ಸೀಮಹಿ ॥೩॥

ಅ ॥ ವರುಣ=ಎಲೋ ವರುಣನೇ (ನಾವು) ಮನಃ=ನಮ್ಮ ಮನಸ್ಸನ್ನು ಗೀರ್ಭಿ=ವೇದ ವಚನಗಳಿಂದ, (ಅವುಗಳ ಶ್ರವಣಾದಿಗಳಿಂದ) ಮೃಳೀಕಾಯ (ಮೃಳಸುಖನೇ) ತೇ=ರಕ್ಷಕನಾದ ನಿನ್ನಲ್ಲಿ ವಿಸೀಮಹಿ=(ಷಿಙಬಂಧನೇ) ಕಟ್ಟುತ್ತೇವೆ. (ನಿನ್ನ ವಿಷಯಕವನ್ನಾಗಿ ಮಾಡುತ್ತೇವೆ.) (ಅದರಲ್ಲಿ ದೃಷ್ಟಾಂತವು.) ರಥೀಃ=(ರಥಃನಿಯೋಜ್ಯತ್ವೇನಾಸ್ಯಾಸ್ತೀತಿ ಎಂಬ ಅರ್ಥದಲ್ಲಿ ಇನಿಪ್ರತ್ಯಯವಾಗುತ್ತಿರಲು ರಥಿನ ಈಕಾರೋವಾಚ್ಯಃ ಎನ್ನುವುದರಿಂದ ನಕಾರಕ್ಕೆ ಈ ಕಾರಾದೇಶವು.) ಸಾರಥಿಯು, ಸಂದಿತಂ=ಸಂಪೂರ್ವಾತ್‌ದೋಽವ ಖಂಡನೇ, ಚೆನ್ನಾಗಿ ಖಂಡಿತವಾದ, (ರಥದಿಂದ ವಿಯುಕ್ತವಾದ) ಅಶ್ವಂನ=ಅಶ್ವವನ್ನು ಹೇಗೆ ರಜ್ಜುಗಳಿಂದ ರಥದಲ್ಲಿ ಕಟ್ಟುತ್ತಾನೋ ಹಾಗೆ ನಿನ್ನಲ್ಲಿ ಮನಸ್ಸನ್ನು ಸಂಪೂರ್ಣ ಇಡುತ್ತೇವೆ. ಅಥವಾ ಎಲೋ ವರುಣನೇ, ತೇ ಮನಃ=ನಿನ್ನದ್ದಾದ ಮನಸ್ಸನ್ನು (ಕೃಪಾರೂಪವಾದ ನಿನ್ನ ಮನೋವೃತ್ತಿಯನ್ನು) ಗೀರ್ಭಿ=ಸ್ತುತಿರೂಪಗಳಾದ ವಚನಗಳಿಂದ, ಮೃಳೀಕಾಯ=ರಕ್ಷಣೆಗೋಸ್ಕರ, (ಮೃಳ ಸುಖನೇ ಎಂದು ಸುಖಾರ್ಥವಾದುದಾಗ್ಯೂ

ಅನೇಕಾರ್ಥಾಹಿಧಾತವಃ ಎನ್ನುವುದರಿಂದ ಇಲ್ಲಿ ರಕ್ಷಣಾರ್ಥಕವೂ ಆಗಿದೆ.) ವಿಸೀಮಹಿಃ (ನಮ್ಮಲ್ಲಿ) ದೃಢವಾಗಿ ಸ್ಥಾಪಿಸಿಕೊಳ್ಳುತ್ತೇವೆ (ದೃಷ್ಟಾಂತವು ಮುಂಚಿನಂತೆ) ||೩||

**ಭಾ || ಮನಸ್ತ್ವಯಿ ನಿಬಧ್ನೀಮೋ ಗೀರ್ಭಿರಶ್ವಂ ವಿಯೋಜಿತಂ । ಬಧ್ನಾತಿ ಸಾರಥಿರ್ಯದ್ವತ್ ಮೃಳೀಕೋ ರಕ್ಷಕೋಽಧಿಕಂ||**
**(೨) ತ್ವನ್ಮನೋಽಸ್ಮಾತು ವಾ ಗೀರ್ಭೀರಕ್ಷಣಾಯ ವಿಸೀಮರ್ಹಿ||೩||**

ಅ || ಸಾರಥಿಯು ರಥದಿಂದ ವಿಯುಕ್ತವಾದ ಅಶ್ವವನ್ನು ರಥದಲ್ಲಿ ಹೇಗೆ ಕಟ್ಟುತ್ತಾನೋ, ಹಾಗೆ ನಮ್ಮ ಮನಸ್ಸನ್ನು ವೇದವಚನ ಶ್ರವಣಾದಿಗಳಿಂದ ರಕ್ಷಿತನಾದ ನಿನ್ನ ವಿಷಯಕವನ್ನಾಗಿ ಮಾಡುತ್ತೇವೆ (ಈ ವ್ಯಾಖ್ಯಾನದಲ್ಲಿ ಮೃಳೀಕ ಎನ್ನುವುದು ವರುಣನಿಗೆ ವಿಶೇಷಣವು.) (ಮೃಳ ಸುಖನೇ ಅನೇಕಾರ್ಥಾಹಿಧಾತವಃ ಇಲ್ಲಿ ರಕ್ಷಣವೆಂದರ್ಥವು. ವಿ ಎನ್ನುವುದಕ್ಕೆ ಅಧಿಕವೆಂದರ್ಥವು ತಥಾಚ) ಮೃಳೀಕಃ=ಅಧಿಕವಾಗಿ ರಕ್ಷಿಸುವವನು. (೨) (ದೃಷ್ಟಾಂತಾಂಶವನ್ನು ಬಿಟ್ಟು, ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ಎಲೋ ವರುಣನೇ ನಿನ್ನ ಕೃಪಾರೂಪವಾದ ಮನೋವೃತ್ತಿಯನ್ನು ಸ್ತುತಿರೂಪಗಳಾದ ವಚನಗಳಿಂದ ರಕ್ಷಣೆಗೋಸ್ಕರ ನಮ್ಮಲ್ಲಿಟ್ಟುಕೊಳ್ಳುತ್ತೇವೆ. ||೩||

**ಋ || (೨೭೨) ಪರಾ ಹಿ ಮೇ ವಿಮನ್ಯವಃ ಪತಂತಿ ವಸ್ಯಇಷ್ಟಯೇ। ವಯೋ ನ ವಸತೀರುಪ ||೪||**

ಅ || (ಎಲೋ ವರುಣನೇ) ಮೇ=ನನ್ನ, ವಿಮನ್ಯವಃ=(ಮನು ಅವಬೋಧನೇ) ಅನೇಕ ವಿಷಯಕಗಳಾದುದರಿಂದ ಅನೇಕ ವಿಧಗಳಾದ ಬುದ್ಧಿ ವೃತ್ತಿಗಳು, ವಸ್ಯ ಇಷ್ಟಯೇ=(ವಸ ಆಚ್ಛಾದನೇ ವಸ್ಯತೇ ಅಚ್ಛಾದ್ಯತೇ ಇತಿವಸ್ಯಃ ಗೋಪ್ಯವಾಗಿರುವುದರಿಂದ ಶುಭವು. ಇಷ ಗತೌ) ಶುಭದ ಪ್ರಾಪ್ತಿಗಾಗಿ, ಪರಾ=ನಿನಗೆ ವಿಮುಖಗಳಾಗಿ, ಪತಂತಿ=ಹೋಗುತ್ತವೆ. ಹಿ=ಹಾ, ಕಷ್ಟವು, ವಯಃ=ಪಕ್ಷಿಗಳು, ವಸತೀರುಪನ=ನೀಡಗಳನ್ನೂ ಹೇಗೋ ಹಾಗೆ (ಅಂದರೆ ಹೇಗೆ ದೂರದಲ್ಲಿ ಹಾರುತ್ತಿರುವ ಹಕ್ಕಿಗಳು ರೆಕ್ಕೆಗಳನ್ನು ಸಂಕೋಚ ಮಾಡಿಕೊಂಡು ತಂತಮ್ಮ ಗೂಡುಗಳನ್ನು ಕುರಿತು ಓಡಿ ಹೋಗುತ್ತವೋ, ಹಾಗೆಯೇ, ವೈಷಯಿಕ ಸುಖ ಲಾಭಕ್ಕಾಗಿ ನಮ್ಮ ಬುದ್ಧಿಗಳು ವಿಷಯಗಳ ಕಡೆಗೇನೇ ಓಡಿ ಹೋಗುತ್ತವೆ. ಆದಕಾರಣ ನನ್ನನ್ನು ಧಿಕ್ಕಾರ ಮಾಡಬೇಕು.) ಅಥವಾ ಸರ್ವಥಾ ಅತ್ಯಂತಿತ ಸುಖಸಾಧನಗಳಾಗದಿರುವ ವಿಷಯಗಳಲ್ಲಿ ಆತ್ಯಂತಿಕ ಸುಖಲಾಭಕ್ಕಾಗಿ ಬುದ್ಧಿ ವೃತ್ತಿಗಳು ಬೀಳುತ್ತವೆ. ಆದ ಕಾರಣ ಅತ್ಯಂತ ಸುಖಕ್ಕೆ ಸಾಧನವಾಗಿದೆ ಎಂಬ ಜ್ಞಾನದಿಂದ ಭ್ರಮೆಗೊಂಡಿದ್ದೇನೆ. ಅಥವಾ ವಸತೀರುಪ=ಗೂಡುಗಳನ್ನು ವಯೋನ=ಹಕ್ಕಿಗಳು ಹೇಗೆ ಹೊಂದುತ್ತವೋ, (ವ್ಯತಿರೇಕದೃಷ್ಟಾಂತವು) ಹಾಗೆ, ಮೇ=ನನ್ನ, ವಿಮನ್ಯವಃ=ಅನೇಕ ವಿಧಗಳಾದ ಪ್ರಜ್ಞೆಗಳು, ವಸ್ಯ ಇಷ್ಟಯೇ=ಮೋಕ್ಷಾದಿ ರೂಪವಾದ ಶುಭದ ಪ್ರಾಪ್ತಿಗಾಗಿ. ಪರಾ=ದೂರದಲ್ಲಿರತಕ್ಕ (ಅಂದರೆ ಅವ್ಯಕ್ತ ಸ್ವಭಾವವುಳ್ಳ) ನಿನ್ನನ್ನು, ನ ವಿಪತಂತಿ=ಹೊಂದುವುದಿಲ್ಲ. ವಿಷಯೀಕರಿಸುವುದಿಲ್ಲ. ಹಿ=ಕಷ್ಟವು. ||೪||

**ಭಾ || ಪರಾಕ್ ಪತಂತಿ ಪ್ರಜ್ಞಾ ಮೇ ವಿವಿಧಾಃ ಶುಭಲಬ್ಧಯೇ । ಪಕ್ಷಿಣೋ ವಸತೀರ್ಯದ್ವದ್ವಾ ನ ತ್ವಾಂ**
**ಪ್ರಾಪ್ನುವಂತಿ ಚ ||೪||**

ಅ || ನನ್ನ ಅನೇಕ ವಿಷಯಕಗಳಾದ ಬುದ್ಧಿ ವೃತ್ತಿಗಳು ಶುಭದ ಪ್ರಾಪ್ತಿಗಾಗಿ ನಿನಗೆ ಪರಾಙ್ಮುಖಗಳಾಗಿಯೇ

ಹೋಗುತ್ತವೆ. ಪಕ್ಕಿಗಳು ನೀಡಗಳನ್ನು ಕುರಿತು ಹೇಗೋ ಹಾಗೆಯೇ. (ಅಂದರೆ ವೃಷಯಿಕ ಸುಖ ಲಾಭಕ್ಕಾಗಿ ವಿಷಯಗಳ ಕಡೆಗೇನೇ ಓಡುತ್ತವೆ.) ಹಾ=ಕಷ್ಟವು ಅಥವಾ ಅವ್ಯಕ್ತ ಸ್ವಭಾವನಾದ ನಿನ್ನನ್ನು ವಿಷಯೀಕರಿಸುವುದಿಲ್ಲ. ಕಷ್ಟ. ||೪||

ಋ || (೨೬೩) ಕದಾ ಕ್ಷತ್ರಶ್ರಿಯಂ ನರಮಾ ವರುಣಂ ಕರಾಮಹೇ। ಮೃಳೀಕಾಯೋರುಚಕ್ಷಸಂ ||೫||೧೬||

ಅ || (ಯಾವ ಕಾರಣವಿಂದ ನಮ್ಮ ಬುದ್ಧಿಗಳು ವಿಷಯಗಳ ಕಡೆಗೇನೇ ಓಡಿ ಹೋಗುತ್ತವೋ, ವರುಣನನ್ನು ಹೊಂದುವುದಿಲ್ಲವೋ ಆದಕಾರಣ ಬುದ್ಧಿಗಳಿಗೆ ವರುಣ ವಿಷಯಕತ್ವರೂಪವಾದ ಪ್ರಯೋಜನವು ಆವಶ್ಯಕವಾದ ಪ್ರಯುಕ್ತ ಆ ವರುಣನನ್ನು ಹೊಂದುವುದಕ್ಕಾಗಿ ನಾವು) ಕದಾ=ಯಾವಾಗ, ಮೃಳೀಕಾಯ=(ನಮ್ಮ ಮನಸ್ಸಿನ) ರಕ್ಷಣೆಗಾಗಿ (ಮನಸ್ಸನ್ನು ರಕ್ಷಿಸುವುದೆಂದರೆ ವಿಷಯಗಳ ಕಡೆಗೆ ಹೋಗದಿದ್ದಂತೆ ಮಾಡಿ ಶ್ರೀಹರಿಯಲ್ಲಿಯೇ ಇರಿಸುವುದು.) ಕ್ಷತ್ರಶ್ರಿಯಂ=(ಕ್ಷತ್ರಿಯರ ಸಮುದಾಯವು, ಧನವು, ಬಲವು, ಇವುಗಳು (ಕ್ಷತ್ರ ಶಬ್ದವು ಕ್ಷತ್ರಿಯ ವಾಚಕವು. ಧನಬಲನಾಮಗಳಲ್ಲಿ ಪಠಿತವೂ ಆಗಿದೆ) ಯಾವ ವರುಣನನ್ನು ಆಶ್ರಯಿಸುತ್ತಾರೋ, (ವೋ) ಅಂತಹ ವರುಣನು ಕ್ಷತ್ರಶ್ರೀಃ ಎನಿಸುತ್ತಾನೆ. ಅಂತಹ) ಅಖಿಲ ಕ್ಷತ್ರಿಯರಿಗೆ ಅಧಿಪತಿಯಾದ, ನರಂ=(ನಿಷೇಧಾರ್ಥಕ ನ ಶಬ್ದವು. ರಿಷಹಿಂಸಾಯಾಂ ಚ) (ನರಿಷ್ಯತೀತ ನರಃ) ವಿನಾಶವಿಲ್ಲದಿರುವ, ಉರುಚಕ್ಷಸಂ=(ಉರು ಚಕ್ಷುಃ ದರ್ಶನಂ ಯಸ್ಯ) ಮಹಾದರ್ಶನವುಳ್ಳ, ವರುಣಂ=ವರುಣನನ್ನು ಅಕರಾಮಹೇ=(ಕೃಞಾಕರಣೇ. ವಾ. ಕೃಞಾಕೃತೌ ಡುಕೃಞಾಕರಣೇ) ಚೆನ್ನಾಗಿ ಕರೆಯುತ್ತೇವೆ. ||೫||೧೬||

ಭಾ || ಅತೋಽಖಿಲಕ್ಷತ್ರಪತಿಮಾಹ್ವಯಾಮಃ ಕದಾ ವಯಂ । ಅವಿನಾಶಿನಂ ರಕ್ಷಣಾಯ ಮಹಾದರ್ಶನಮಂಜಸಾ ||೫||೧೬||

ಅ || ಯಾವ ಕಾರಣದಿಂದ ನಮ್ಮ ಬುದ್ಧಿಗಳು ವಿಷಯಗಳ ಸಮೀಪಕ್ಕೇನೆ ಓಡಿ ಹೋಗುತ್ತವೆ. ವರುಣನನ್ನು ಹೊಂದುವುದಿಲ್ಲ. ಆದ ಕಾರಣ ವರುಣನನ್ನು ಹೊಂದುವುದಕ್ಕಾಗಿ, ನಾವು ಸಮಸ್ತ ಕ್ಷತ್ರಿಯರಿಗೆ ಅಧಿಪತಿಯೂ ವಿನಾಶವಿಲ್ಲದಿರುವವನೂ, ಮಹಾ ದರ್ಶನವುಳ್ಳವನೂ ಆದ ವರುಣನನ್ನು ಯಾವಾಗ ನಮ್ಮ ಮನಸ್ಸನ್ನು ರಕ್ಷಿಸಿ ಕೊಳ್ಳುವುದಕ್ಕಾಗಿ ಚೆನ್ನಾಗಿ ಕರೆಯುತ್ತೇವೆ. ||೫||೧೬||

ಋ || (೨೬೪) ತದ್ವಿತ್ಸಮಾನಮಾಶಾತೇ ವೇನಂತಾ ನ ಪ್ರ ಯುಚ್ಛತಃ । ಧೃತ ವ್ರತಾಯ ದಾಶುಷೇ ||೬||

ಅ || ತತ್= ಆ ವರುಣನ ಪ್ರಸಾದದಿಂದ, ವೇನಂತಾ=(ವೇನತಿ ಮೇನತಿ ಎಂದು ಗತಿ ಕರ್ಮಗಳಲ್ಲಿ ಪಠಿತವು.) ತಿಳಿದಿರುವ (ಸರ್ವಜ್ಞರಾದ) ಬ್ರಹ್ಮ ವಾಯುಗಳು, ವರುಣಂ=ವರುಣನನ್ನು ಸಮಾನಮಿತ್=ಸಮವಾಗಿಯೇ=(ಅಶೂ ವ್ಯಾಪ್ತೌ, ವ್ಯಾಪ್ತಿಃ=ಸರ್ವದೇಶ ಗತಿಯು. ಗತಿ ಪರ್ಯಾಯವಾದುದರಿಂದ ಜ್ಞಾನಾರ್ಥಕವು.) ತಿಳಿಯುತ್ತಾರೋ. (ಅಂತೂ ವರುಣನ ಪ್ರಸಾದದಿಂದ ಸಮ ಜ್ಞಾನವುಳ್ಳವರು.) (ಯಾವ ಸರ್ವಜ್ಞರಾದ) ಬ್ರಹ್ಮ ವಾಯುಗಳು ಧೃತವ್ರತಾಯ= (ಧೃತಂ ವ್ರತಂ ಯೇನ) ವ್ರತವನ್ನು ಧರಿಸುವ, ಧಾತುಷೇ=ಯಜಮಾನನಿಗೋಸ್ಕರ, ನ ಪ್ರ ಯುಚ್ಛತಃ=ಯಥಾರ್ಥ ಜ್ಞಾನವನ್ನೂ, ಕರ್ಮ ಪ್ರಯೋಗವನ್ನೂ ಕೂಡ) ಕೊಡುವುದಿಲ್ಲ. ಯೋಗ್ಯತಾತಿರೇಕದಿಂದ ಮಾಡುವುದಿಲ್ಲ. (ಯೋಗ್ಯತಾನುಸಾರವಾಗಿಯೇ

ಮಾಡುತ್ತಾರೆ.) ಅಥವಾ (ಯುಚ್ಛ ಪ್ರಮಾದೇ) ಆ ಬ್ರಹ್ಮವಾಯುಗಳು ಯಜಮಾನನಿಗೆ ಯಥಾರ್ಥ ಜ್ಞಾನವನ್ನೂ ಕರ್ಮಪ್ರಯೋಗವನ್ನೂ ವಿನಷ್ಟವನ್ನಾಗಿ ಮಾಡುವುದೇ ಇಲ್ಲ.) (ಪ್ರಸಿದ್ಧ ವರುಣ ಪಕ್ಷದಲ್ಲಿ ವೇಸಂತಾ=ಜ್ಞಾನಿಗಳಾದವರು ಅಶ್ವಿನೀ ದೇವತೆಗಳು ಎಂದು ತಿಳಿಯಬೇಕು. ||೬||

**ಭಾ ||  (೧) ತತ್ಪ್ರಸಾದಾದ್ಬ್ರಹ್ಮವಾಯೂ ಸಮಮೇವಾವಗಚ್ಛತಃ|| (೨) ವೇನಂತೌ ಹಿ ವಿಜಾ ನಂತೌ ತೌ ಹಿ ಜ್ಞಾನಿವರೌ ಮತೌ|| (೩) ಯಥಾಜ್ಞಾನಂ ಪ್ರಯೋಗಂ ಚ ದಾ ಶುಷೇ ಕುರುತೋ ನ ತೌ || (೪) ಅಶ್ವಿನೌ ವರುಣಶ್ಚೇತ್ಸ್ಯಾತ್ ||೬||**

ಅ ||(೧) ಆ ವರುಣನೆನಿಸಿದ ಶ್ರೀ ಹರಿಯ ಪ್ರಸಾದದಿಂದ ಬ್ರಹ್ಮವಾಯುಗಳು ಸಮವಾಗಿಯೇ ತಿಳಿದುಕೊಳ್ಳುತ್ತಾರೆ. (ಅಂದರೆ ಸಮಜ್ಞಾನವುಳ್ಳವರು.) (೨) (ಆಶಾತೇ=ಸಮವಾಗಿಯೇ ತಿಳಿಯುತ್ತಾರೆ ಎನ್ನುವಲ್ಲಿ ಬ್ರಹ್ಮವಾಯುಗಳೇ ಕರ್ತೃಗಳು ಎನ್ನುವುದು ಯಾವುದರಿಂದ ಎಂದರೆ) ವೇನಂತೌ ಎಂಬ ವಿಶೇಷಣ ಸಾಮರ್ಥ್ಯದಿಂದ. ಅಂದರೆ ವೇನಂತೌ=ವಿಶೇಷವಾಗಿ ತಿಳಿಯುವವರೂ ಸರ್ವಜ್ಞರೂ ಆದವರು ಬ್ರಹ್ಮವಾಯುಗಳೇ (ಇದರಿಂದಲೂ ಬ್ರಹ್ಮವಾಯುಗಳೇ ಎಂದು ಹೇಗೆ ನಿಶ್ಚಯವಾಗುವುದು ಎಂದರೆ) ಆ ಬ್ರಹ್ಮವಾಯುಗಳೇ ಜ್ಞಾನಿಗಳಲ್ಲಿ ಶ್ರೇಷ್ಠರೆಂದು ಸಮ್ಮತರು. (೩) ಆ ಬ್ರಹ್ಮವಾಯುಗಳು ಯಜಮಾನನಿಗೆ ಯಥಾರ್ಥ ಜ್ಞಾನವನ್ನೂ ಕರ್ಮಪ್ರಯೋಗವನ್ನೂ ಕೂಡ (ಯೋಗ್ಯತೆಯನ್ನುತಿಕ್ರಮಿಸಿ) ಮಾಡುವುದಿಲ್ಲ. ಅಥವಾ ವಿನಷ್ಟವನ್ನಾಗಿ ಮಾಡುವುದಿಲ್ಲ. (೪) (ಹೀಗೆ ವಿಷ್ಣುವೆಂಬ ಪಕ್ಷದಲ್ಲಿ ಆಶಾತೇ ಎಂಬ ಕ್ರಿಯೆಗೆ ಬ್ರಹ್ಮವಾಯುಗಳು ಕರ್ತೃಗಳೆಂದು ಆಯ್ತು. ಪ್ರಸಿದ್ಧ ವರುಣನೆಂಬ ಪಕ್ಷದಲ್ಲಿ ಬ್ರಹ್ಮವಾಯುಗಳು ವರುಣನಿಗಿಂತ ಉತ್ತಮರಾಗಿರುವುದರಿಂದಲೂ ವರುಣನ ಅನುಗ್ರಹದಿಂದ ಸಮಜ್ಞಾನವುಳ್ಳವರೆಂಬುದು ಕೂಡದಿರುವುದರಿಂದಲೂ ಕರ್ತೃಗಳು ಯಾರು ಎಂದರೆ) ವರುಣ ಶಬ್ದದಿಂದ ಪ್ರಸಿದ್ಧ ವರುಣನನ್ನೇ ವಿವಕ್ಷಾ ಮಾಡಿದರೆ ಆಗ ಅಶ್ವಿನೀ ದೇವತೆಗಳು ಕರ್ತೃಗಳೆಂದು ತಿಳಿಯಬೇಕು. ||೬||

**ಋ || (೨೭೫) ವೇದಾ ಯೋ ವೀನಾಂ ಪದಮಂತರಿಕ್ಷೇಣ ಪತತಾಂ | ವೇದ ನಾವಃ ಸಮುದ್ರಿಯಃ ||೭||**

ಅ || ಯಃ=ಯಾವ ಈ ಜಲಾಧಿಪತಿಯಾದ ವರುಣನು, ವಿಷ್ಣುವು, (ಈ ವ್ಯಾಖ್ಯಾನವು ಉಭಯ ಸಾಧಾರಣವಾಗಿದೆ.) ಅಂತರಿಕ್ಷೇಣ=ಆಕಾಶದಲ್ಲಿ, (ಅಥವಾ ವಿವಕ್ಷಾತಃ ಕಾರಕಾಣಿಭವಂತಿ ಎಂಬ ಉಕ್ತಿಯಿಂದ ಅಧಿಕರಣಕ್ಕೇನೇ ಸಾಧಕತಮ (ಕರಣ)ತ್ವವನ್ನು ವಿವಕ್ಷಾ ಮಾಡಿಕೊಂಡು ತೃತೀಯಾವಿಭಕ್ತಿಯು ಪತತಾಂ=ಹಾರುತ್ತಿರುವ, ಹೋಗುತ್ತಿರುವ, ವೀನಾಂ=ಪಕ್ಷಿಗಳ, ಪದಂ=ಪದವನ್ನು, ವೇದ= (ವಿದಜ್ಞಾನೇ) (ಸೂಕ್ಷ್ಮ ವಿಜ್ಞಾನವಿದ್ದುದರಿಂದ) ತಿಳಿಯುತ್ತಾನೋ, (ಹಾಗೆಯೇ) ಯಃ=ಯಾವ ಸಮುದ್ರಿಯಃ=ಸಮುದ್ರದಲ್ಲಿದ್ದವನು, (ನೀರಿನಲ್ಲಿ) ನಾವಃ=ದೋಣಿಯ, ಪದಂ= (ಪದಂ ವ್ಯವಸಿತಿತ್ರಾಣ ಸ್ಥಾನ ಲಕ್ಷ್ಮಾಂಘ್ರಿವಸ್ತುಷು| ಎಂಬ ಕೋಶದಿಂದ) ರಕ್ಷಣೆಯನ್ನು, ವಾ ಲಕ್ಷಣವನ್ನು, ಅಥವಾ ಸ್ಥಾನವನ್ನು, ವೇದ=ತಿಳಿಯುತ್ತಾನೋ, ಅಥವಾ, (ವಿಷ್ಣು ಪಕ್ಷದಲ್ಲಿ ಋಕ್ಕನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ. (ಯಃ=ಯಾವ ಸಮುದ್ರಿಯಃ= (ಸಮುದ್ರೇಭವಃ) ಕ್ಷೀರಸಮುದ್ರದಲ್ಲಿ ಮಲಗಿರುವ, ಉತ್ಕೃಷ್ಟವಾದ ಆನಂದವುಳ್ಳ ಶ್ರೀವಿಷ್ಣುವು ಅಂತರಿಕ್ಷೇಣ=(ಅಂತಃ ಈಕ್ಷ್ಯತೇ ಎಂಬ ವ್ಯುತ್ಪತ್ತಿಯಿಂದ) ಪರಬ್ರಹ್ಮನ ಪ್ರಸಾದದಿಂದ, ಪತತಾಂ=ಸಂಸಾರದಿಂದ ಮೇಲಕ್ಕೆ ಬಂದಿರುವ, ವೀನಾಂ=(ವೀಗತ್ಯಾದೌ) ಜ್ಞಾನಾದಿ ಗುಣಗಳಿಂದ ವಿಶಿಷ್ಟರಾದ ಮುಕ್ತರ. ಪದಂ=ಸ್ಥಿತಿಯನ್ನು, ವೇದ=ತಿಳಿಯುತ್ತಾನೋ,

ನಾವಃ=(ನಯತಿ ಉನ್ನಯತೀತಿ ನೌಃ ಎಂಬ ವ್ಯುತ್ಪತ್ತಿಯಿಂದ) ಜ್ಞಾನದ, ಪದಂ=ಮುಖ್ಯ ವಿಷಯವಾದ ಸ್ವಸ್ವರೂಪವನ್ನೂ ಕೂಡ, ವೇದ=ತಿಳಿಯುತ್ತಾನೋ, (ಈ ವ್ಯಾಖ್ಯಾನದಲ್ಲಿಯೂ ಹಿಂದಿನ ಋಕ್ಕಿನಲ್ಲಿದ್ದ ತತ್(ತತ್ಪ್ರಸಾದಾತ್) ಎನ್ನುವುದರಿಂದಲೇ ಅನ್ವಯವು.) ॥೭॥

ಭಾ ॥ (೧) ಆಕಾಶೇ ಪಕ್ಷಿಣಾಂ ಪದಂ । ವೇತ್ತ್ಯಸೌ ಸೂಕ್ಷ್ಮವಿಜ್ಞಾನಾತ್ (೨) ತಥಾ ನಾವೋ ಜಲೇಽಬ್ಧಿಗಃ ॥ (೩) ಮುಕ್ತಾನಾಂ ಚ ಸ್ಥಿತಿಂ ವೇದ ಜ್ಞಾನಸ್ಯ ಚ ಗತಿಂ ಪರಾಂ । ಕ್ಷೀರಾಬ್ಧಿಶಯನೋ ವಿಷ್ಣುಃ ॥೭॥

ಅ ॥ (೧) ಈ ವರುಣನು ಆಕಾಶದಲ್ಲಿ ಹಾರುತ್ತಿರುವ ಹಕ್ಕಿಗಳ ಪಾದವನ್ನು ಸೂಕ್ಷ್ಮ ವಿಜ್ಞಾನವಿದ್ದುದರಿಂದ ತಿಳಿಯುತ್ತಾನೆ. (೨) ಹಾಗೆಯೇ ಸಮುದ್ರದಲ್ಲಿದ್ದವನು ನೀರಿನಲ್ಲಿ ದೋಣಿಯ ರಕ್ಷಣೆ ಲಕ್ಷಣ ಸ್ಥಾನಗಳನ್ನು ತಿಳಿಯುತ್ತಾನೆ. (೩) (ವಿಷ್ಣು ಪಕ್ಷದಲ್ಲಿ ಋಕ್ಕನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಕ್ಷೀರಾಬ್ಧಿಶಾಯಿಯಾದ ಶ್ರೀವಿಷ್ಣುವು ಮುಕ್ತರ ಸ್ಥಿತಿಯನ್ನು ಜ್ಞಾನಕ್ಕೆ ಮುಖ್ಯ ವಿಷಯವಾದ ಸ್ವಸ್ವರೂಪವನ್ನೂ, ಕೂಡ ತಿಳಿಯುತ್ತಾನೆ. ॥೭॥

ಋ ॥ (೨೨೬) ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ ॥ ವೇದಾ ಯ ಉಪಜಾಯತೇ ॥೮॥

ಅ ॥ ಧೃತವ್ರತಃ=(ಧೃತಂ ವ್ರತಂ ಯೇನ) ಸಮಸ್ತ ಕರ್ಮಗಳನ್ನು ಧರಿಸಿರುವ, ವರುಣನು, ಪ್ರಜಾವತಃ=(ಪ್ರಕರ್ಷೇಣ ಜಾಯಂತೇ ಇತಿ ಪ್ರಜಾಃ=ಕಾರ್ಯಗಳು) ಕಾರ್ಯಯುಕ್ತಗಳಾದ, ದ್ವಾದಶ=ಹನ್ನೆರಡು, ಮಾಸಃ=(ಮಾಸ್ತ್ವೃತಶ್ಚಂದ್ರಮಾಸಯೋಃ ಎಂಬ ಕೋಶದಿಂದ) ಮಾಸಗಳನ್ನು, ವೇದ=(ಆಯಾವ ಕಾಲಗಳಿದುಂಟಾಗತಕ್ಕ ಕಾರ್ಯಗಳಿಂದ ಕೂಡಿಕೊಂಡು ಸಮಸ್ತ ಕಾಲವನ್ನೂ) ತಿಳಿಯುತ್ತಾನೋ, ಯಃ=ಯಾವಾತನು, ಉಪಜಾಯತೇ=ತನ್ನ ಸಮೀಪದಲ್ಲಿಯೇ ವ್ಯವಧಾನವಿಲ್ಲದೆ ಹುಟ್ಟುತ್ತಾನೋ, (ಅಂತಹ ಪದ್ಮದಿಂದ ಹುಟ್ಟಿದ ಚತುರ್ಮುಖನನ್ನು) (ಚತುರ್ಮುಖನು ನಾಭಿಪದ್ಮದಿಂದ ಹುಟ್ಟಿರುವುದರಿಂದ ಆತನಿಗೆ ವ್ಯವಧಾನವಿಲ್ಲದೆ ಜನ್ಮವು. ಲಕ್ಷ್ಮೀದ್ವಾರಾ ಉತ್ಪತ್ತಿಯಲ್ಲ.) ವೇದ=ತಿಳಿಯುತ್ತಾನೋ, ಅಥವಾ ಉಪಜಾಯತೇ=ತನ್ನ ಸಮೀಪದಲ್ಲಿಯೇ ಇರುತ್ತಾನೋ, ಅಂತಹ ಮುಕ್ತನನ್ನು ತಿಳಿಯುತ್ತಾನೆ. (ಅಂದರೆ ಸಾಮೀಪ್ಯ, ಸಾಯುಜ್ಯಾದಿರೂಪವಾದ ಮುಕ್ತ್ಯಾದಿಗಳುಳ್ಳವರಾಗುತ್ತಾರೆ) ಯಃ=ಉಪಜಾಯತೇ ಎನ್ನುವುದು ಜಾತ್ಯೇಕ ವಚನವು. ಅಂದರೆ ಜಾತಿಃ ಛಂದಸಿ ಸಾಮಾನ್ಯೇ ಮಾಲತ್ಯಾಮೋಘ ಜನ್ಮನೋಃ । ಎಂಬ ವಿಶ್ವಕೋಶದಿಂದ ಸಮೂಹವೆಂಬ ಅರ್ಥದಲ್ಲಿ ಏಕ ವಚನವು. ಆತೇವ ಸುಧಾದಲ್ಲಿ ತತ್ರ ತತ್ರಸಮೂಹೇ ಏಕವಚನಂ ಎಂದುಕ್ತವಾಗಿದೆ. ತಥಾ ಚ ಸಮಸ್ತ ಮುಕ್ತರನ್ನೂ ತಿಳಿಯುತ್ತಾನೆ, ಎಂದಭಿಪ್ರಾಯವು. ॥೮॥

ಭಾ ॥ (೧) ಕಾಲಂ ಕಾಲೋದ್ಭವೈಸ್ಸಹ । (೨) ಯ ಆತ್ಮನಸ್ಸಮೀಪೇ ಚ ಜಾಯತೇ ತಂ ಚ ಪದ್ಮಜಂ । ಮುಕ್ತಂ ವಾ ॥೮॥

ಅ = (೧) ಆಯಾವ ಕಾಲಗಳಲ್ಲಿ ಹುಟ್ಟತಕ್ಕ ಕಾರ್ಯಗಳಿಂದ ಕೂಡಿರುವ ಸಮಸ್ತ ಕಾಲವನ್ನೂ ತಿಳಿಯುತ್ತಾನೆ. (೨) ಯಾವಾತನು ತನ್ನ ಸಮೀಪದಲ್ಲಿಯೇ ವ್ಯವಧಾನವಿಲ್ಲದೇನೇ ಹುಟ್ಟುತ್ತಾನೋ ಅಂತಹ ತನ್ನ ನಾಭಿ ಕಮಲದಿಂದ ಹುಟ್ಟಿದ ಚತುರ್ಮುಖನನ್ನು ಸಮಸ್ತ ಮುಕ್ತರನ್ನಾಗಲೀ ತಿಳಿಯುತ್ತಾನೆ. (ವ್ಯವಧಾನವಿಲ್ಲದೆ ಉತ್ಪತ್ತಿಯು ಎಂದು ತೋರಿಸುವುದಕ್ಕಾಗಿಯೇ

ಪದ್ಮಜಂ ಎಂದದ್ದು) ||೮||

ಋ || (೨೭೭) ವೇದ ವಾತಸ್ಯ ವರ್ತನಿಮುರೋಃಋಷ್ವಸ್ಯ ಬೃಹತಃ । ವೇದಾ ಯೇ ಆಧ್ಯಾಸತೇ ||೯||

ಅ || (ವರುಣನೇ) ಉರೋಃ=ಪರಿಮಾಣಾದಿ ಗುಣಗಳಿಂದ ಮಹತ್ತಾದ, ಬೃಹತಃ ಋಷ್ವಸ್ಯ=ಮಹಾಪ್ರಕಾಶವುಳ್ಳ, (ಋಷ್ವ ಶಬ್ದಕ್ಕೆ ಬಲವೆಂಬ ಅರ್ಥವಿದ್ದಂತೆ ಪ್ರಕಾಶವೆಂಬ ಅರ್ಥವೂ ಇದೆ.) ಅಥವಾ ಮಹಾಜ್ಞಾನವುಳ್ಳ, ವಾತಸ್ಯ=ವಾಯುವಿನ, ವರ್ತನಿಂ=ಪ್ರವೃತ್ತಿಯನ್ನು, ವೇದ=ತಿಳಿಯುತ್ತಾನೆ. ಯೇ=ಯಾವ ದೇವತೆಗಳು, ಅಧ್ಯಾಸತೇ=ಅಧಿಕಗಳೇ ಆದ ಸಪ್ತ ಲೋಕಾದಿ ಸ್ಥಾನಗಳಲ್ಲಿ ಇರುತ್ತಾರೋ, ಅವರನ್ನೂ ತಿಳಿಯುತ್ತಾನೆ. ||೯||

ಭಾ || ವರ್ತನಾಂ ವಾಯೋರ್ಮಹತೋಽತಿಪ್ರಕಾಶಿನಃ । ಬೃಹತೋ ಜ್ಞಾನಿನಶ್ಚೈವ ಬೃಹತೋಮಹತೋಽಪಿ ವಾ ||ಅಧಿಕಾನಿ ಪದಾನ್ಯೇವ ದೇವಾ ಅಧ್ಯಾಸತೇ ಪಿ ತಾನ್ ||೯||

ಅ || (ಉರು ಬೃಹತ್ ಶಬ್ದಗಳು ಮಹತ್ ಎಂಬ ಅರ್ಥವನ್ನು ಹೇಳತಕ್ಕವುಗಳಾದುದರಿಂದ ಉರೋಃ ಬೃಹತಃ ಎನ್ನುವುದು ಪರ್ಯಾಯ ಶಬ್ದಗಳು) (ಪೌನರುಕ್ತ್ಯ ಪರಿಹಾರಕ್ಕಾಗಿ ಉರೋಃ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ. ಉರೋಃ=ಪರಿಮಾಣಾದಿ ಗುಣಗಳಿಂದ ಮಹತ್ತಾದ, (ಬೃಹತಃ ಎನ್ನುವುದನ್ನು ಋಷ್ವಸ್ಯ ಎನ್ನುವುದಕ್ಕೆ ವಿಶೇಷಣವಾಗಿ ವ್ಯಾಖ್ಯಾನ ಮಾಡುತ್ತಾರೆ) ಬೃಹತ್ ಋಷ್ವಸ್ಯ=ಅತ್ಯಂತ ಪ್ರಕಾಶವುಳ್ಳ, ೨ ಶಬ್ದಗಳಿಗೂ ಒಂದೇ ಅರ್ಥವಾದುದಾಗ್ಯೂ ಉರು ಶಬ್ದವು ವಾಯುವಿಗೆ ವಿಶೇಷಣವು. ಬೃಹತಃ ಎನ್ನುವುದು ವಾಯುವಿಗೆ ವಿಶೇಷಣವಾದ ಪ್ರಕಾಶದಲ್ಲಿ ವಿಶೇಷಣವಾದುದರಿಂದ ಪುನರುಕ್ತಿಯಿಲ್ಲ, ಬೃಹತಃ ಋಷ್ವಸ್ಯ=ಎನ್ನುವುದರ ಅರ್ಥವು ಅತಿ ಪ್ರಕಾಶಿನಃ ಎಂದು (ಋಷ್ವ ಶಬ್ದಕ್ಕೆ ಬಲವೆಂಬ ಅರ್ಥವಿದ್ದಂತೆ ಪ್ರಕಾಶ (ಬಾಹ್ಯ ಪ್ರಕಾಶ=(ಶರೀರಕಾಂತಿ) ಎಂಬ ಅರ್ಥವೂ ಇದೆ.) (ಅಂತರವಾದ ಜ್ಞಾನ ರೂಪ ಪ್ರಕಾಶವೆಂಬ ಅರ್ಥವನ್ನು ಇಟ್ಟುಕೊಂಡು ಬೃಹತಃ ಎನ್ನುವುದನ್ನು ಋಷ್ವಸ್ಯ ಎನ್ನುವುದಕ್ಕೆ ವಿಶೇಷಣವೆಂಬ ಅಭಿಪ್ರಾಯದಿಂದ ವ್ಯಾಖ್ಯಾನ ಮಾಡುತ್ತಾರೆ.) ಮಹಾ ಜ್ಞಾನವುಳ್ಳವನೇ, (ಬಾಹ್ಯಕಾಂತಿಗಿಂತ ಜ್ಞಾನವು ಸ್ವರೂಪ ವಿಶೇಷ ನಿರ್ಣಾಯಕವಾಗಿರುವುದರಿಂದ ಈ ಅರ್ಥವೇ ಮುಖ್ಯವೆಂದು ತೋರಿಸುವುದಕ್ಕಾಗಿ ಏವ ಶಬ್ದವು) (ಅಥವಾ ಬೃಹತಃ ಎನ್ನುವುದು. ಉರೋಃ ಎನ್ನುವುದಕ್ಕೇನೇ ವಿಶೇಷಣವೆನ್ನುತ್ತಾರೆ.) ಬೃಹತಃ ಮಹತ್ತಾದ. (ಉರು ಬೃಹತ್ ಶಬ್ದಗಳು ಏಕಾರ್ಥಕಗಳಾದುದರಿಂದ ಅವುಗಳಿಗೆ ವಿಶೇಷಣ ವಿಶೇಷ್ಯ ಭಾವವು ಹೇಗೆ ಕೂಡುತ್ತದೆ. ಎಂದರೆ) (ಉರೋಃ ಎಂದಿಷ್ಟು ಮಾತ್ರ ಹೇಳಿದರೆ ಔಪಚಾರಿಕವಾಗಿ ಮಹತ್ತ್ವವೆಂದು ಶಂಕಾಬರಬಹುದು. ಅಂತಹ ಶಂಕೆಯು ಬರಬಾರದೆಂದು ಉರುತ್ವಕ್ಕೆ ಬೃಹತಃ ಎನ್ನುವುದನ್ನು ವಿಶೇಷಣೀಕರಿಸಿದ್ದಾರೆ. ತಥಾಚ ಅತಿ ಮಹತ್ತಾದ ಪರಿಮಾಣಾದಿ ಗುಣಗಳುಳ್ಳವನೂ, ಮಹಾ ಪ್ರಕಾಶವುಳ್ಳವನೂ, ಮಹಾಜ್ಞಾನಿಯೂ ಆದ ಮಹಾ ವಾಯುವಿನ ಪ್ರವೃತ್ತಿಯನ್ನು ತಿಳಿಯುತ್ತಾನೋ, ಯಾವ ದೇವತೆಗಳು ಅಧಿಕಗಳೇ ಆದ ಸಪ್ತ ಲೋಕಾದಿ ಸ್ಥಾನಗಳಲ್ಲಿರುತ್ತಾರೋ ಅವರನ್ನೂ ತಿಳಿಯುತ್ತಾನೆ. ||೯||

ಋ | (೨೭೮) ನಿಷಸಾದ ಧೃತವ್ರತೋ ವರುಣಃ ಪ ಸ್ತ್ಯಾ ಽ ಸ್ವಾ। ಸಾಮ್ರಾಜ್ಯಾಯ ಸುಕ್ರತುಃ ||೧೦||೧೭||

ಅ || ಸುಕ್ರತುಃ=ಪ್ರಶಸ್ತ ಜ್ಞಾನವುಳ್ಳ, ಧೃತವ್ರತಃ=ನಿಯಮವನ್ನು ಧರಿಸಿರುವ ವರುಣ್ಣಃ=ಶ್ರೀಹರಿಯು ವರುಣನು,

ಸಾಮ್ರಾಜ್ಯಾಯ=(ಸಕಲ ಧರ್ಮಗಳನ್ನು ಪರಿಪಾಲಿಸುವ ಸಮೀಚಿನ ರಾಜನು, ಸಾಮ್ರಾಟ್ ಎನಿಸುತ್ತಾನೆ. ಸಕಲ ಜಗತ್ತನ್ನು ಪರಿಪಾಲಿಸುವುದಕ್ಕಾಗಿ, ಪಸ್ತ್ಯಾಸು ಚ=ಪ್ರಜೆಗಳಲ್ಲಿ ಗೃಹಗಳಲ್ಲಿಯೂ ಕೂಡ, ಆ ನಿಷಸಾದ=ಕೂತುಕೊಂಡನು, (ಅಂದರೆ ಪ್ರಜೆಗಳನ್ನೂ ಗೃಹಗಳನ್ನೂ ಅಧಿಕರಿಸಿಕೊಂಡಿದ್ದನು.) ||೧೦||೧೭||

**ಭಾ || ಸಾಮ್ರಾಜ್ಯಾಯ ಸಪಸ್ತ್ಯಾಸು ನಿಷಸಾದ ಪ್ರಜಾಸು ಚ| ಸುಜ್ಞಾನಃ ||೧೦||೧೭||**

ಅ || ಒಳ್ಳೇ ಜ್ಞಾನವುಳ್ಳ ಶ್ರೀಹರಿಯು (ಸಮೀಚೀನನಾದ ರಾಜನು ಸಕಲಧರ್ಮಗಳನ್ನು ಪರಿಪಾಲಿಸುವವನು ಸಮ್ರಾಟ್ ಎನಿಸುತ್ತಾನೆ. ಅವನ ಧರ್ಮವು ಅಥವಾ ಕರ್ಮವು ಸಾಮ್ರಾಜ್ಯವು.) ಹೀಗೆ ಸಮಸ್ತ ಜಗತ್ತನ್ನು ಪರಿಪಾಲಿಸುವುದಕ್ಕಾಗಿ, ಪಸ್ತ್ಯಾಸು=(ಪಸ್ತ್ಯಶಬ್ದವು ಗೃಹನಾಮಗಳಲ್ಲಿ ಪಠಿತವಾಗಿರುವುದರಿಂದ ಗೃಹಿಣೀ ಗೃಹಮುಚ್ಯತೇ ಎಂಬ ವಚನದಿಂದ ಪತ್ನೀ ಪರ್ಯಾಯವು. ಆದರಿಂದ ಭವಾರ್ಥ (ಹುಟ್ಟುವಿಕೆ)ದಲ್ಲಿ ಯತ್ ಪ್ರತ್ಯಯವು) ಪ್ರಜೆಗಳಲ್ಲಿ, ಚ=ಗೃಹಗಳಲ್ಲಿಯೂ ಕುಳಿತನು. ||೧೦||೧೭||

**ಋ || (೨೭೯) ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾ ಅಭಿಪಶ್ಯತಿ ಕೃತಾನಿ ಯಾ ಚ ಕರ್ತ್ವಾ ||೧೧||**

ಅ || ಅತಃ=ಈ ಪ್ರಜೆಗಳಲ್ಲಿ ಗೃಹಗಳಲ್ಲಾಗಲೀ ಇರುವ, ಚಿಕಿತ್ವಾನ್=(ಕಿತನಿವಾಸೇ, ಕಿತಕರಣೇ, ಸರ್ವತ್ರ ನಿವಾಸಿಸುವ, ಸರ್ವಕರ್ತನಾದ, ವರುಣನು, ವಿಶ್ವಾನಿ=ಸಮಸ್ತ ವಸ್ತುಗಳನ್ನೂ, ಅದ್ಭುತಾ=ಅತ್ಯಾಶ್ಚರ್ಯಗಳನ್ನಾಗಿ, ಅಭಿಪಶ್ಯತಿ ನೋಡುತ್ತಾನೆ. ಮತ್ತೂ, ಯಾ=ಯಾವ ವಸ್ತುಗಳು, ಕೃತಾನಿ=ಮಾಡಲ್ಪಟ್ಟಿವೆಯೋ, ಕರ್ತ್ವಾ=ಕರ್ತವ್ಯಗಳಾಗಿವೆಯೋ, ತಾನಿಚ ಅವುಗಳನ್ನೂ ಕೂಡ, ಅಭಿಪಶ್ಯತಿ ನೋಡುತ್ತಾನೆ. ||೧೧||

**ಭಾ || ತತ್ರ ಸನ್ವಿಶ್ವಾನ್ಯದ್ಭುತಾನಿ ಚ ಪಶ್ಯತಿ । ಕರ್ತಾ ಚಿಕಿತ್ವಾನ್ಸ ಕೃತಕರ್ತವ್ಯಾನಿ ಚ ಪಶ್ಯತಿ ||೧೧||**

ಅ || ಆ ಪ್ರಜೆಗಳಲ್ಲಿಯೂ ಗೃಹಗಳಲ್ಲಿಯೂ ಇರುವ ಚಿಕಿತ್ವಾನ್=ಸರ್ವಕರ್ತನಾದ ವರುಣನು, ಎಲ್ಲಾ ವಸ್ತುಗಳನ್ನು ಅತ್ಯಾಶ್ಚರ್ಯಗಳನ್ನಾಗಿ ನೋಡುತ್ತಾನೆ. ಆತನು ಮಾಡಿದ್ದ ವಸ್ತುಗಳನ್ನೂ, ಮಾಡಲರ್ಹ ವಸ್ತುಗಳನ್ನೂ ನೋಡುತ್ತಾನೆ. ||೧೧||

**ಋ || (೨೮೦) ಸ ನೋ ವಿಶ್ವಾಹಾ ಸುಕ್ರತುರಾದಿತ್ಯಃ ಸುಪಥಾ ಕರತ್ । ಪ್ರ ಣ ಆಯೂಂಷಿ ತಾರಿಷತ್ ||೧೨||**

ಅ || ಸಃ=ಆ ಈ, ಸುಕ್ರತುಃ=ಒಳ್ಳೇ ಜ್ಞಾನವುಳ್ಳ, ಆದಿತ್ಯಃ=ಶ್ರೀಹರಿಯು, ವಿಶ್ವಾಹಾ=ಸಮಸ್ತ ದಿನಗಳನ್ನೂ ನಃ=ನಮಗೆ, ಸುಪಥಾ=ನಿರ್ವಿಘ್ನಗಳನ್ನಾಗಿ, ಕರತ್=ಮಾಡಲು. ನಃ=ನಮಗೆ, ಆಯೂಂಷಿ=ಆಯುಸ್ಸುಗಳನ್ನು, ಪ್ರತಾರಿಷತ್=ಕೊಡಲಿ. ||೧೨||

**ಭಾ || ವಿಶ್ವಾನ್ಯಹಾನಿ ನೋ ದೇವಃ ಸುಪಥಾನಿ ಕರೋತ್ವಸೌ । ದದಾತ್ವಾಯೂಂಷಿ ನೋ ನಿತ್ಯಂ ಮುಕ್ತೌ ವಾ ||೧೨||**

ಅ ॥ ಆದಿತ್ಯ ದೇವನು ಸಮಸ್ತ ದಿನಗಳನ್ನು ನಮಗೆ ನಿರ್ವಿಘ್ನಗಳನ್ನಾಗಿ ಮಾಡಲಿ. ನಮಗೆ ಆಯುಷ್ಯಗಳನ್ನು ಕೊಡಲಿ. (ಈ ಪ್ರಾರ್ಥನೆಯು ಮುಕ್ತಿಯಲ್ಲಿ ಮುಖ್ಯವು. ಅನ್ಯತ್ರ ಉಪಚಾರವು ಎನ್ನುತ್ತಾರೆ.) ನಿತ್ಯದಲ್ಲಿಯೂ ಮುಕ್ತಿಯಲ್ಲಿಯೂ ಪೂರ್ಣಾಯುಷ್ಯವನ್ನು (ಅಂದರೆ ಮೃತಿರಹಿತವಾದ ಆಯುಷ್ಯವನ್ನು) ಕೊಡಲಿ. ॥೧೨॥

ಋ ॥ (೨೮೧) ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ ಪರಿ ಸ್ಪಶೋ ನಿಷೇದಿರೇ । ॥೧೩॥

ಅ ॥ ವರುಣಃ=ವರುಣನು, ದ್ರಾಪಿಂ=(ದ್ರು ಗತೌ, ಆಪ್ಲ್ ವ್ಯಾಪ್ತೌ,) (ದ್ರುತಂ ಅಪ್ನೋತೀತಿದ್ರಾಪಿಃ) ಶೀಘ್ರವಾಗಿ ದೇಶಾಂತರಗಳನ್ನು ಹೊಂದುವ (ಅಂದರೆ ಅತೀ ವೇಗವಾಗಿ ತಿರುಗಾಡುವ,) ಹಿರಣ್ಯಂ=ಹಿತವೂ ರಮಣೀಯವೂ ಆಗಿರುವ, ಅಥವಾ ಹಿರಣ್ಮಯವಾದ, ವರ್ಣತಃ ಸ್ವರ್ಣಕ್ಕೆ ಸದೃಶವಾದ ಸುದರ್ಶನವನ್ನು, ಬಿಭ್ರತ್=ಧರಿಸಿದನು. ನಿರ್ಣಿಜಂ=(ಣಿಜಿರ್ ಶೌಚೇ) ಪ್ರಕ್ಷಾಳಿತವಾದ ಶುದ್ಧವಾದ ವಸ್ತುವನ್ನು, ವಸ್ತ=(ವಸ ಆಚ್ಛಾದನೇ) ಉಟ್ಟುಕೊಂಡನು. ಅಥವಾ ದ್ರಾಪಿಂ=ಅತಿ ಶೀಘ್ರವಾಗಿ ತಿರುಗುತ್ತಿರುವ, ಹಿರಣ್ಮಯವಾದ ಚಕ್ರವನ್ನು, ಬಿಭ್ರತ್=(ಶತ್ರಂತ) ಧರಿಸಿರುವ ವರುಣನು ಶುದ್ಧ ವಸ್ತ್ರವನ್ನುಟ್ಟುಕೊಂಡನು. ಸ್ಪಶಃ=(ಸ್ಪಶಬಾಧನ ಸ್ಪರ್ಶನಯೋಃ) ಅನೇಕಾರ್ಥಾ ಹಿ ಧಾತವಃ, ಆದಕಾರಣ) ಅವಿಜ್ಞಾತಚರರಾದ, ಅಂದರೆ ಪೂರ್ವದಲ್ಲಿ ತಿಳಿಯಲ್ಪಡದಿರುವ, ಅಥವಾ ತಿಳಿಯಲ್ಪಡದಿರುವವರಾಗಿ ಸಂಚರಿಸುತ್ತಿರುವ, ದೇವತೆಗಳು, ಪರಿ=ವರುಣನ ಸುತ್ತಮುತ್ತಲೂ, ನಿಷೇದಿರೇ=ಸೇವೆಗೋಸ್ಕರ ಕುಳಿತರು. (ಪ್ರಸಿದ್ಧ ವರುಣ ಪಕ್ಷದಲ್ಲಿ) ದ್ರಾಪಿಂ=ಶೀಘ್ರವಾಗಿ ಬಂಧನಕ್ಕೆ ಸಾಧನವಾದ, ಪಾಶವನ್ನು ಬಿಭ್ರತ್=(ವರುಣನು) ಧರಿಸಿದನು. ॥೧೩॥

ಭಾ ॥ (೧) ಅತಿದ್ರುತ ಭ್ರಮಂ । ಹಿತಂ ಚ ರಮಣೀಯಂ ಚ ಚಕ್ರಂ ಸ್ವರ್ಣಂ ಚ ವರ್ಣ ತಃ ॥ ಅಬಿಭ್ರಚ್ಚ (೨) ಸುನಿರ್ಣಿಕ್ತಂ ಶುದ್ಧಂ ವಸ್ತ್ರಮವಸ್ತ ಚ ॥ (೩) ಅವಿಜ್ಞಾತ ಚರಾ ದೇವಾಃ ಸ್ಪಶಸ್ತಸ್ಯ ನಿಷೇದಿರೇ । ಪರಿತೋ ವರುಣಃ ಪಾಶಮಬಿಭ್ರದ್ದ್ರುತ ಬಂಧನಂ ॥೧೩॥

ಅ ॥ (೧) (ವರುಣನು) ಅತಿ ಶೀಘ್ರವಾಗಿ ತಿರುಗುತ್ತಿರುವ, ಹಿತಕರವೂ ರಮಣೀಯವೂ ಆಗಿರುವ ವರ್ಣತಃ ಸುವರ್ಣಕ್ಕೆ ಸದೃಶವಾಗಿರುವ, ಸುದರ್ಶನವನ್ನು ಧರಿಸಿದನು. (೨) ಚೆನ್ನಾಗಿ ಶೋಧಿತವಾದ. ಶುದ್ಧವಾದ ವಸ್ತ್ರವನ್ನುಟ್ಟುಕೊಂಡನು. (೩) ಸ್ಪಶಃ=ಇತರರಿಂದ ತಿಳಿಯಲ್ಪಡದಿರುವವರಾಗಿಯೇ ಸಂಚರಿಸುತ್ತಿರುವ ದೇವತೆಗಳು ಆ ವರುಣನ ಸುತ್ತ ಮುತ್ತಲೂ ಸೇವೆಗೋಸ್ಕರ ಕುಳಿತರು. ಪ್ರಸಿದ್ಧ ವರುಣನು ಶೀಘ್ರವಾಗಿ ಬಂಧಿಸುವುದಕ್ಕೆ ಸಾಧನವಾದ ಹಗ್ಗವನ್ನು ಧರಿಸಿದನು. ॥೧೩॥

ಋ ॥ (೨೮೨) ನ ಯಂ ದಿಪ್ಸಂತಿ ದಿಪ್ಸವೋ ನ ದ್ರುಹ್ವಾಣೋ ಜನಾನಾಂ । ನ ದೇವಮಭಿಮಾತಯಃ ॥ ॥೧೪॥

ಅ ॥ ಯಂ=ಯಾವ ವರುಣನನ್ನು, ದಿಪ್ಸವಃ=(ದಂಭು ದಂಭೇ) ದಂಭಿಸಲಿಕ್ಕೆ ಇಚ್ಛಿಸುವ ಅಂದರೆ ನಿರೊಧಕರಾದ ವೀರರಾದ ರಾಕ್ಷಸರೂ ಕೂಡ, ನದಿಪ್ಸಂತಿ=ನಿರೋಧಿಸುವುದಿಲ್ಲವೋ, ಮತ್ತು, ಜನಾನಾಂ=ಜನರಿಗೆ, ದ್ರುಹ್ವಾಣಃ =(ದ್ರುಹಜಿಘಾಂಸಾಯಾಂ) ದ್ರೋಹಿಗಳಾದ ದೈತ್ಯರು ಯಂ=ಯಾವ ವರುಣನನ್ನು, ನದಿಪ್ಸಂತಿ=ಯಾವ ವರುಣನಿಗೆ

ದ್ರೋಹಮಾಡುವುದಿಲ್ಲವೋ ಅಭಿಮಾತಯಃ=(ಮೀಜ ಹಿಂಸಾಯಾಂ) ರಾಕ್ಷಸರಿಂದಲೂ ದೈತ್ಯರಿಂದಲೂ ಇತರರಾದ ಶತ್ರುಗಳೂ ಕೂಡ, ಯಂದೇ ವಂ=ಯಾವ ವರುಣನನ್ನು, ನ ದಿಪ್ಸಂತಿ=ನಿರೋಧಿಸುವುದಿಲ್ಲವೋ ದ್ರೋಹಮಾಡುವುದಿಲ್ಲವೋ, ಸಂಹರಿಸುವುದಿಲ್ಲವೋ (ಅಂತಹ ವರುಣನು ಚಕ್ರವನ್ನು ಧರಿಸಿದನು. ಎಂದು ಪೂರ್ವ ಋಕ್ಕಿನಿಂದ ಅನ್ವಯವು ಅಥವಾ ಸಯಾಮನಿಪ್ರತಿಶ್ರುಧಿ ಎಂಬ ೨ಂನೇ ಉತ್ತರ ಋಕ್ಕಿನಿಂದ ಅನ್ವಯವು.) ಅಥವಾ ಅಂತಹ ವರುಣನನ್ನು ಸುತ್ತಲೂ ಸೇವಿಸುವುದಕ್ಕಾಗಿ ಕೂತುಕೊಂಡರು. ಎಂದು ಪೂರ್ವ ವಾಕ್ಯದಿಂದ ಅಥವಾ ಸರ್ವಜ್ಞನನ್ನು ಕಂಡನು ಎಂದು ಉತ್ತರ ವಾಕ್ಯದಿಂದ ಸಂಬಂಧವು. ॥೧೪॥

**ಭಾ ॥ ಸ್ತಂಭಯಂತಿ ನ ಯಂ ವೀರಾ ಸ್ತಂಭಕಾ ಅಪಿ ರಾಕ್ಷಸಾಃ । ಜನಾನಾಂ ದ್ರೋಹಿ ಣೋ ದೈತ್ಯಾಃ ಶತ್ರವಶ್ಚಾಭಿ ಮಾತಯಃ ॥೧೪॥**

ಅ ॥ (ಯಾವ ವರುಣನನ್ನು) ನಿರೋಧಕರಾದ ವೀರರಾದ ರಾಕ್ಷಸರೂ ಕೂಡ ನಿರೋಧಿಸುವುದಿಲ್ಲವೋ, ಜನರಿಗೆ ದ್ರೋಹಿಗಳಾದ ದೈತ್ಯರೂ, ಅಭಿಮಾತಯಃ=ರಾಕ್ಷಸರೂ ದೈತ್ಯರೂ ಇವರಿಂದ ಇತರರಾದ ಶತ್ರುಗಳೂ ಕೂಡ ಯಾವ ವರುಣನಿಗೆ ದ್ರೋಹಮಾಡುವುದಿಲ್ಲವೋ, (ಅಂತಹ ವರುಣನು ಚಕ್ರವನ್ನು ಧರಿಸಿದನು.) ॥೧೪॥

**ಋ ॥ (೨೮೩) ಉತ ಯೋ ಮಾನುಷೇಷ್ವಾ ಯಶಶ್ಚಕ್ರೇ ಅಸಾಮ್ಯಾ । ಅಸ್ಮಾಕಮುದರೇಷ್ವಾ ॥ ॥೧೫॥೧೮॥**

ಅ ॥ ಯಃ ವರುಣನು, ಅಸಾಮಿ=(ಸಾಮಿ ಶಬ್ದವು ಸಮಶಬ್ದ ಪರ್ಯಾಯವು. ನವಿದ್ಯತೇ ಸಾಮಿ ಯಸ್ಯ. ಅಥವಾ ಸಮಸ್ಯಾತಿ ಸಮಿ. ಸಮ್ಯೇನ ಸಾಮಿ. ಅಥವಾ ಸಮಮಸ್ಯಾಸ್ತೀತಿ ಸಾಮ. ಸಾಮ್ಯೆವ ಸಾಮಿ ನ ಸಾಮಿ ಅಸಾಮಿ, ಎಂಬ ವ್ಯುತ್ಪತ್ತಿಯಿಂದ) ಸಮವಾಗದಿರುವ, ಯಶಃ=ತನ್ನ ಯಶಸ್ಸನ್ನು, ಅಸ್ಮಾಕಂ=ನಮ್ಮ, ಉದರೇಷು=(ಉದರ ಸಾಮೀಪ್ಯವಿದ್ದುದರಿಂದ ಲಕ್ಷಣಯಾ) ಹೃದಯಗಳಲ್ಲಿ, ಆ=ಸುತ್ತಮುತ್ತಲೂ ಸಮಸ್ತ ಕಾಲದಲ್ಲಿಯೂ, ಚಕ್ರೇ=ನಮ್ಮನ್ನು ತನ್ನ ಯಶಸ್ಸನ್ನು ತಿಳಿಯುವವರನ್ನಾಗಿ) ಮಾಡಿರುವನೋ, (ನಮ್ಮಲ್ಲಿ ಮಾತ್ರವಲ್ಲ. ಮತ್ತೆ ಇತರರೂ ಆದ) ಆ=ಚೆನ್ನಾಗಿರುವ, ಮಾನುಷೇಷು=ಮನುಷ್ಯರಲ್ಲಿಯೂ, ಆ=ಸರ್ವಕಾಲದಲ್ಲಿಯೂ ಚಕ್ರೇ=(ಅವರನ್ನು ತಿಳಿಯುವವರನಾಗಿ) ಮಾಡಿರುವನೋ, ಉತ=ಅಜ್ಞರಲ್ಲಿಯೂ ತನ್ನ ಯಶಸ್ಸನ್ನು ಪ್ರಸಿದ್ಧಿಗೊಳಿಸಿದನೆಂದಾಗುವಾಗ ದೇವತೆಗಳಲ್ಲಿ ಪ್ರಸಿದ್ಧಿಗೊಳಿಸಿದವನೆಂಬುವುದು ಸುತರಾಂ ಸಿದ್ಧ. (ಅಂತಹ ವರುಣನು ಚಕ್ರವನ್ನು ಧರಿಸಿದನು ಎಂದು ೧೩ನೇ ಋಕ್ಕಿನಿಂದ ಸಂಬಂಧವು.) ॥೧॥

**ಭಾ ॥ ಅಸಮಂ ಚ ಯಶಶ್ಚಕ್ರೇ ಯೋಽಸ್ಮಾಕಂ ಹೃದಯೇಷು ಚ । ಆಮಾನುಷೇಷು (ಆಮನುಷ್ಯೇಷು) ಚಾನ್ಯೇಷು ಸಮಂತಾದಾತ್ಮನಸ್ಸದಾ ॥ ಅಜ್ಞೇಷ್ವಪಿ ಚ ಮರ್ತ್ಯೇಷು ವ್ಯತನೋದಾತ್ಮನೋ ಯಶಃ ॥೧೫॥೧೮॥**

ಅ ॥ ಯಾವ ವರುಣನು ಸಮವಾಗದಿರುವ ತನ್ನ ಯಶಸ್ಸನ್ನು ನಮ್ಮ ಹೃದಯಗಳಲ್ಲಿ ಆ=ಸರ್ವ ಕಾಲದಲ್ಲಿಯೂ ಸದಾ ಮಾಡಿರುವನೋ, (ನಮ್ಮನ್ನು ತನ್ನ ಯಶಸ್ಸನ್ನು ತಿಳಿಯುವವರನ್ನಾಗಿ ಮಾಡಿರುವನೋ.) (ನಮ್ಮಲ್ಲಿ ಮಾತ್ರವಲ್ಲ.) ಇತರರಾದ, ಚೆನ್ನಾಗಿ ಇರುವ ಮನುಷ್ಯರಲ್ಲಿಯೂ ಕೂಡ ಚೆನ್ನಾಗಿ ಮಾಡಿರುವನೋ, (ಕೈಮುತ್ಯಾರ್ಥವುಳ್ಳ ಉತಶಬ್ದದ ತಾತ್ಪರ್ಯವನ್ನು ಹೇಳುತ್ತಾರೆ.) ಅಜ್ಞರಾದ ಮನುಷ್ಯರಲ್ಲಿಯೂ ತನ್ನ ಯಶಸ್ಸನ್ನು ವಿಸ್ತಾರಗೊಳಿಸಿದನೆಂದಾದ ಮೇಲೆ

ದೇವಾದಿಗಳಲ್ಲಿ ವಿಸ್ತಾರಗೊಳಿಸಿದನೆಂಬುವುದು ಕಿಮುತ ಸುತರಾಂ ಸಿದ್ಧ. ಅಸಮಂ ಚ ಎಂಬಲ್ಲಿದ್ದ ೧ನೇ ಚ ಶಬ್ದವು ಬಿಭ್ರದ್ರಾಪಿಂ ಹಿರಣ್ಯಯಂ ಎನ್ನುವಲ್ಲಿದ್ದ ಬಿಭ್ರತ್ ಎಂಬ ಕ್ರಿಯೆಯಿಂದ ವರುಣನಿಗೆ ಅನ್ವಯವು ಎಂದು ತೋರಿಸುತ್ತದೆ. ಮೇಲಿನ ೨ ಚ ಶಬ್ದಗಳು ನಮ್ಮ ಹೃದಯಗಳಲ್ಲಿ ಮಾತ್ರವಲ್ಲ. ಮನುಷ್ಯರಲ್ಲಿಯೂ ಕೂಡ ಎಂದು ಅನ್ಯೋನ್ಯ ಸಮುಚ್ಚಾಯಕವು. ||೨೫||೧೮||

**ಋ || (೨೮೪) ಪರಾ ಮೇ ಯಂತಿ ಧೀತಯೋ ಗಾವೋ ನ ಗವ್ಯೂತೀರನು । ಇಚ್ಛಂತೀರುರುಚಕ್ಷಸಂ ||೧೬||**

ಅ || ಮೇ=ನನ್ನ, ಧೀತಯಃ=(ಧ್ಯೈ ಚಿಂತಾಯಾಂ) ಬುದ್ಧಿ ವಿಶೇಷಗಳು, ಇಚ್ಛಂತೀಃ=(ಮೋಕ್ಷವನ್ನು ಇಚ್ಛಿಸುವವುಗಳಾಗಿ, ಉರುಚಕ್ಷಸಂ=(ಚಕ್ಷಿಜ್ ವ್ಯಕ್ತಾಯಾಂ ವಾಚಿ) ಮಹಾಜ್ಞಾನವುಳ್ಳ ಪರಮಾತ್ಮನನ್ನು ಪರಾ=ಸಮಸ್ತವನ್ನೂ ಬಿಟ್ಟು, (ಪರಾ ವಿಮೋಕ್ಷ ಪ್ರಾಧಾನ್ಯ ಪ್ರಾತಿಲೋಮ್ಯೇಷು ಧೀಷಣೇ ಎಂಬ ವಿಶ್ವಕೋಶದಿಂದ ವಿಮೋಕ್ಷವು ಪರಿತ್ಯಾಗ ರೂಪವಾದುದರಿಂದ ಪರಾ ಶಬ್ದವು ಪರಿತ್ಯಾಗಾರ್ಥಕವು.) ಯಂತಿ=ಹೋಗುತ್ತವೆ. ಅಥವಾ ಪರಮಾತ್ಮನನ್ನೇ ಇಚ್ಛಿಸುತ್ತಾ ಹೋಗುತ್ತವೆ. (ಈ ವ್ಯಾಖ್ಯಾನವು ಏಕಾಂತ ಭಕ್ತರ ವಿಷಯಕವು. ಏಕಾಂತಾನಾಂ ನ ಕಸ್ಯಚಿತ್ । ಅರ್ಥೇ ನಾರಾಯಣೋ ದೇವಃಸರ್ವಮನ್ಯತ್ತದರ್ಥಕಂ ಎಂದು) ಹೇಗೆಂದರೆ ಗವ್ಯೂತೀಃ=ಗೋವುಗಳ ಆಹ್ವಾನಗಳನ್ನು, ಶೃಂಗವೇಣ್ವಾದಿ ಧ್ವನಿಗಳನ್ನು, ಅನು=ಅನುಸರಿಸಿ, ಗಾವೋನ=ಗೋವುಗಳು ಹೇಗೆ ಹೋಗುತ್ತವೋ, ಹಾಗೆ. ||೧೬||

**ಭಾ || ಮಹಾಜ್ಞಾನಂ ಪರೇಶಾನಮಿಚ್ಛಂತ್ಯೋ ಮಮ ಧೀತಯಃ । ಸರ್ವತೋ ಯಾಂತಿ ಯದ್ವಚ್ಚ ಗಾವಃ ಶೃಂಗಸ್ವರಾನನು ||೧೬||**

ಅ || ಹೇಗೆ ಗೋವುಗಳು ಶೃಂಗವೇಣ್ವಾದಿ ಧ್ವನಿಗಳನ್ನು ಅನುಸರಿಸಿ ಹೋಗುತ್ತವೋ, ಹಾಗೆಯೇ ನನ್ನ ಬುದ್ಧಿಗಳು ಮಹಾಜ್ಞಾನವುಳ್ಳ ಪರಮಾತ್ಮನನ್ನೇ ಇಚ್ಛಿಸುವವುಗಳಾಗಿ ಸಮಸ್ತವನ್ನು ಬಿಟ್ಟು ಪರಮಾತ್ಮನನ್ನೇ ಹೊಂದುತ್ತವೆ. ||೧೬||

**ಋ || (೨೮೫) ಸಂ ನು ವೋಚಾವಹೈ ಪುನರ್ಯತೋ ಮೇ ಮಧ್ವಾಭೃತಂ । ಹೋತೇವ ಕ್ಷದ ಸೇ ಪ್ರಿಯಂ ||೧೭||**

ಅ || (ಎಲೋ ವರುಣನೇ,) ಯತಃ=ಯಾವ ಕಾರಣದಿಂದ, (ನೀನು) ಹೋತೇವ=ಅಗ್ನಿಯಂತೆ (ಅಗ್ನಿಯು ಹೇಗೆ ಓದನಾದಿಗಳನ್ನು ಪಚನೆ ಮಾಡುತ್ತಾನೋ ಹಾಗೆಯೇ) ಮೇ=ನನ್ನದಾದ ಆ ಭೃತಂ=ಚೆನ್ನಾಗಿ ಪೂರ್ಣವಾದ, ಮಧು, ಮೋಕ್ಷದಲ್ಲಿದ್ದ ಸುಖವನ್ನು, ಕ್ಷದಸೇ=(ಕ್ಷದಿ ಪಚನೇ) ಅಭಿವ್ಯಕ್ತವಾಗುವಂತೆ ಮಾಡುತ್ತಿ. (ಯಾವ ಕಾರಣದಿಂದ) ನೀನು, ಪ್ರಿಯಂ=(ನನಗೆ ಸದಾ) ಪ್ರಿಯನೋ, (ಆ ಕಾರಣದಿಂದ) ನು=ಈಗ, ಪುನಃ=ಮತ್ತೂ ಮತ್ತೂ, (ನಮ್ಮಿಬ್ಬರ) ಸಂ ವೋಚಾವಹೈ=(ವಚ ಪರಿ ಭಾಷಣೆ) ಸಂಭಾಷಣವನ್ನು ಮಾಡುವ ||೧೭||

**ಭಾ || ಆ ಪೂರ್ಣಂ ಮಧು ಮೋಕ್ಷ ಸ್ಥಂ ಸುಖಂ ಪಚಸಿ ಮೇಽಗ್ನಿವತ್ । ತತ್ಸಂವೋಚಾ ವಹೈ ಭೂಯಃ ಪ್ರಿಯಸ್ತ್ವಂ ಮಮ ಯತ್ಸದಾ ||೧೭||**

ಅ ॥ ಅಗ್ನಿಯು ಹೇಗೆ ಓದನಾದಿಗಳನ್ನು ಪಚನೆ ಮಾಡುತ್ತಾನೋ, ಹಾಗೆಯೇ ನೀನು ನನಗೆ ಸಂಪೂರ್ಣವಾದ ಮೋಕ್ಷದಲ್ಲಿದ್ದ ಸುಖ ರೂಪವಾದ ಮಧುವನ್ನು ವ್ಯಕ್ತೀಕರಿಸುತ್ತಿ. ಯಾವ ಕಾರಣದಿಂದ ನೀನು ನನಗೆ ಸದಾ ಪ್ರಿಯನೋ, ಆ ಕಾರಣದಿಂದ ಮತ್ತೂ ಮತ್ತೂ ಸಂಭಾಷಣ ಮಾಡುವ ॥೧೭॥

**ಋ ॥ (೨೮೬) ದರ್ಶಂ ನು ವಿಶ್ವದರ್ಶತಂ ದರ್ಶಂ ರಥಮಧಿಕ್ಷಮಿ । ಏತಾ ಜುಷತ ಮೇ ಗಿರಃ ॥೧೮॥**

ಅ ॥ (ನಾನು)ನು=ಈಗ, ವಿಶ್ವ ದರ್ಶತಂ=ಸಮಸ್ತ ಜ್ಞಾನದಿಂದ ವ್ಯಾಪ್ತನಾದ, ಸರ್ವಜ್ಞನಾದ, ಆ ವರುಣನನ್ನು, ದರ್ಶಂ=ನೋಡಿದೆನು. ಅಧಿಕ್ಷಮಿ=(ಧರಾ ವಸುಮತೀ ಧಾತ್ರೀ ಕ್ಷಮಾ ವಿಶ್ವಂಭರಾs, ವನಿಃ ಎಂಬ ಧನಂಜಯೋಕ್ತಿಯಿಂದ ಕ್ಷಮಾಂ ಅಧಿಕೃತ್ಯ ವಿದ್ಯಮಾನಂ) ಭೂಮಿಯನ್ನಧಿಕರಿಸಿ ಇರತಕ್ಕ, (ಅಥವಾ ಕ್ಷಮಾಯಾಮಿತಿ ಅಧಿಕ್ಷಮಿ) ಭೂಮಿಯಲ್ಲಿರತಕ್ಕ, ರಥಂ=ಆ ವರುಣ ರಥವನ್ನು ಕೂಡ, ದರ್ಶಂ=ನೋಡಿದೆವನು. (ಹೀಗೆ ದೃಷ್ಟನಾದ ವರುಮನು) ಏತಾಃ=ವೇದ ರೂಪಗಳಾದ, ಮೇ=ನನ್ನ ಗಿರಃ=ಮಾತುಗಳನ್ನು ಜುಷತ- (ಜುಷೀ ಪ್ರೀತಿ ಸೇವನಯೋಃ) ಸೇವಿಸಲಿ. ಕೇಳಲಿ. ॥೧೮॥

**ಭಾ ॥ ಅದರ್ಶಂ ತಂಚ ಸರ್ವಜ್ಞಂ ತದ್ರಥಂ ಚ ಭುವಿಸ್ಥಿತಂ । ಸುಗಿರೋ ಮೇಜುಷುತ ಚ ॥೧೮॥**

ಅ ॥ ಸರ್ವಜ್ಞನಾದ ವರುಣನನ್ನು, ಭೂಮಿಯಲ್ಲಿರತಕ್ಕ ಆ ವರುಣನ ರಥವನ್ನು, ನೋಡಿದೆನು. ನನ್ನ ವೇದ ರೂಪಗಳಾದ ಸ್ತುತಿಗಳನ್ನು ಕೇಳಲಿ ॥೧೮॥

**ಋ ॥ (೨೮೭) ಇಮಂ ಮೇ ವರುಣ ಶ್ರುಧೀಹವಮದ್ಯಾಚ ಮೃಳಯ। ತ್ವಾಮವಸ್ಯುರಾಚಕೇ ॥೧೯॥**

ಅ ॥ ವರುಣ=ವರುಣನೇ, ಮೇ=ನನ್ನ, ಇಮಂ ಹವಂ=(ಹ್ವೇಞ ಸ್ಪರ್ಧಾಯಾಂ ಶಬ್ದೇಚ) ಈ ಆಹ್ವಾನವನ್ನು, ಶ್ರುಧಿ=ಕೇಳು. ಅದ್ಯಚ=ಈಗಲೇ, ಮೃಳಯ=(ನನ್ನನ್ನು) ಸುಖಗೊಳಿಸು. ರಕ್ಷಿಸು. (ಏಕೆಂದರೆ) ಅವಸ್ಯುಃ=ರಕ್ಷಣೆಯನ್ನು ಇಚ್ಛಿಸುವ ನಾನು, ತ್ವಾಂ=ನಿನ್ನನ್ನು ಆಚಕೇ=(ಚಕತೃಪ್ತೌ ಎನ್ನುವುದಕ್ಕೆ ಅನೇಕಾರ್ಥವಿರುವುದರಿಂದ ಪ್ರಕೃತ ದರ್ಶನಾರ್ಥತ್ವವು.) ಚೆನ್ನಾಗಿ ಭಕ್ತಿಪೂರ್ವಕವಾಗಿ ನೋಡುವೆನು. ॥೧೯॥

**ಭಾ ॥ ತ್ವಾಂರವನೇಪ್ಸುರಹಂ ಚಕೇ। ಪಶ್ಯೇಯಂ ॥೧೯॥**

ಅ ॥ ರಕ್ಷಣೆಯನ್ನಿಚ್ಛಿಸುವ ನಾನು ನಿನ್ನನ್ನು ಚಕೇ=ನೋಡುವೆನು ॥೧೯॥

**ಋ ॥ (೨೮೮) ತ್ವಂ ವಿಶ್ವಸ್ಯ ಮೇಧಿರ ದಿವಶ್ಚ ಗ್ಮಶ್ಚ ರಾಜಸಿ । ಸಯಾಮನಿ ಪ್ರತಿ ಶ್ರುಧಿ ॥೨೦॥**

ಅ ॥ ಮೇಧಿರ=ವಿಶೇಷ ಪ್ರತಿಭೆಯುಳ್ಳವನೇ, (ಯಃ) ತ್ವಂ=(ಏವ)=ಯಾವ ನೀನೇ, ವಿಶ್ವಸ್ಯ=ಸಮಸ್ತ ಜಗತ್ತಿಗೆ (ಅದರದ್ದೇ ವಿವರಣವು.) ದಿವಶ್ಚ=ಸ್ವರ್ಗಲೋಕಕ್ಕೂ, ಗ್ಮಶ್ಚ=ಭೂಲೋಕಕ್ಕೂ ಕೂಡ, ರಾಜಸಿ=(ರಾಜ್‌ದೀಪ್ತೌ) ರಾಜನಾಗಿರುತ್ತಿಯೋ, ಸತ್ವಂ=ಅಂತಹ ನೀನು, ಯಾಮನಿ=(ಯಾ ಪ್ರಾಪಣೇ. ಯಾಧಾತೋಃ ಮನಿನ್ ಪ್ರತ್ಯಯವು) ನಮ್ಮ

ಆಪತ್ಕಾಲದಲ್ಲಿಯೇ, ಪ್ರತಿ ಶ್ರುಧಿ=(ವಿಜ್ಞಾಪನೆಯನ್ನು) ಕೇಳು. ಅಥವಾ ನಿನ್ನನ್ನು ಸಂಸಾರದಿಂದ ಬಿಡುಗಡೆ ಮಾಡುತ್ತೇನೆಂದು ಪ್ರತಿಜ್ಞಾ ಮಾಡು. ॥೨೦॥

**ಭಾ ॥ ತ್ವಂ ಚ ವಿಶ್ವಸ್ಯ ರಾಜಾಭವಸಿ ಮೇಧಿರಃ । ಮೇಧಾವಾನ್ ಗ್ಮಃ ಪೃಥಿವ್ಯಾಶ್ಚ ಸಕಾ ಲೇಚ ಪ್ರಃಶ್ರುಧಿ ॥೨೦॥**

ಅ ॥ ಮೇಧಿರಃ=ಪ್ರತಿಭೆಯುಳ್ಳ ವರುಣನೇ ನೀನೇ ಸಮಸ್ತ ಜಗತ್ತಿಗೂ. ಅಂದರೆ ಗ್ಮಃ=ಭೂಲೋಕಕ್ಕೂ ಕೂಡ, ರಾಜನಾಗಿರುತ್ತಿ. ನಮ್ಮ ಆಪತ್ಕಾಲದಲ್ಲಿಯೇ ವಿಜ್ಞಾಪನೆಯನ್ನು ಕೇಳು. ॥೨೦॥

**ಋ ॥ (೨೮೯) ಉದುತ್ತಮಂ ಮುಮುಗ್ಧಿ ನೋ ವಿಪಾಶಂ ಮಧ್ಯಮಂ ಚೃತ ।**

**ಅವಾಧಮಾನಿ ಜೀವಸೇ ॥೨೧॥೧೯॥೨೫॥**

ಅ ॥ (ಎಲೋ ವರುಣನೇ) (ಹೀಗೆ ವಿಜ್ಞಾಪಿಸಿಕೊಳ್ಳಲ್ಪಟ್ಟ ನೀನು) ನಃ=ನಮ್ಮ ಉತ್ತಮಂ ಪಾಶಂ=ಸತ್ವ ಗುಣಾಖ್ಯ ಪಾಶವನ್ನು, ಉತ್=ಚೆನ್ನಾಗಿ, ಮುಮುಗ್ಧಿ=(ಮುಚ್ಛ ಮೋಚನೇ) ಮಿತ್ರರಿಗೆ ಕೊಟ್ಟು ಬಿಡಿಸು. ಮಧ್ಯಮಂಚ=ರಜೋ ಗುಣಾತ್ಮಕ ವಾಶವನ್ನು ವಿಚೃತ=(ಚೃತೀ ಹಿಂಸಾ ಗ್ರಥನಯೋಃ) ಚೆನ್ನಾಗಿ ಛೇದಿಸು. (ಉದಾಸೀನರಿಗೆ ಕೊಟ್ಟು ನಮ್ಮಿಂದ ಬಿಡಿಸು. ಅಧಮಾನಿಚ=ತಮೋ ವೃತ್ತಿರೂಪಗಳಾದ ಅಧಮ ಬಂಧನಗಳನ್ನು, ಜೀವಸೇ=(ಜೀವ ಪ್ರಾಣಧಾರಣೇ) ಜೀವಿಸುವುದಕ್ಕಾಗಿ, ಮುಕ್ತಿಯಾಗುವುದಕ್ಕಾಗಿ, ಅವಚೃತ=ದ್ವೇಷಿಗಳಿಗೆ ಕೊಟ್ಟು ಬಿಡಿಸು. ಪ್ರಸಿದ್ಧ 3 ಪಾಶಗಳನ್ನು ಬಿಡಿಸಬೇಕೆಂಬ ಪ್ರಾರ್ಥನೆಯಾದರೂ ಸ್ಪಷ್ಟವೇ.) ॥೨೧॥

**ಭಾ ॥ ಸ ತ್ವಂ ತ್ರಿಗುಣಪಾಶಾನ್ನೋ ಮುಮುಗ್ಧಿ ಛಿಂಧಿ ಚಾಂಜಸಾ ॥೨೧॥೧೯॥೨೫॥**

ಅ ॥ ಹೀಗೆ ವಿಜ್ಞಾಪಿಸಿಕೊಳ್ಳಲ್ಪಟ್ಟ ನೀನು ನಮ್ಮ ಸತ್ವ ರಜಸ್ತನು ಆತ್ಮಕ ಪಾಶಗಳನ್ನು ಬಿಡಿಸು. ಮತ್ತು ಚೆನ್ನಾಗಿ ಛೇದಿಸು. ॥೨೧॥೧೯॥೨೫॥

**ಅವ ॥ ೨೬ನೇ ಸೂಕ್ತವು. ೧೦ ಋಕ್ಕು, ೨ ವರ್ಗ, ಅಗ್ನಿದೇವತಾಕವು, ಗಾಯತ್ರ ಸೂಕ್ತವು. ॥।ಋ॥(೨೯೦) ವಸಿಷ್ವಾಹಿ ಮಿಯೇಧ್ಯ ವಸ್ತ್ರಾಣ್ಯೂರ್ಜಾಂ ಪತೇ । ಸೇಮಂ ನೋ ಅಧ್ವರಂ ಯಜ ॥೧॥**

ಅ ॥ ಮಿಯೇಧ್ಯ=ಸದಾ ಪವಿತ್ರನಾದ, ಊರ್ಜ್ಜಾಂ=(ಊರ್ಜಬಲ ಪ್ರಾಣನಯೋಃ) ಬಲಾದಿಗಳಿಗೆ ಮುಖ್ಯ ಕಾರಣಗಳಾದ ಭೋಗ್ಯ ಅನ್ನಗಳಿಗೆ, ಅಥವಾ ಬಲಾದಿಗಳುಳ್ಳ ಜನರಿಗೆ, ಪತೇ=ಸರ್ವದಾ ಸ್ವಾಮಿಯಾದ ಶ್ರೀಹರಿಯೇ, (ಅಗ್ನಿಯಲ್ಲಿರತಕ್ಕ ರೂಪದಿಂದ ಸಮಸ್ತ ದೇವತೆಗಳ ಪೂಜೆಗೋಸ್ಕರ ಸನ್ನದ್ಧನಾದ ನೀನು) ವಸ್ತ್ರಾಣಿ=ಉತ್ತಮಗಳಾದ ವಸ್ತ್ರಗಳನ್ನು, ವಸಿಷ್ವ=(ವಸ ಆಚ್ಛಾದನೇ) ಉಟ್ಟುಕೊಳ್ಳು. (ನಿನ್ನನ್ನು) (ಆಭರಣಗಳಿಂದಲೂ ಅಲಂಕರಿಸಿಕೊಳ್ಳು.) ಹಿ=ಪ್ರಸಿದ್ಧ, ಸಃ=ಹೀಗೆ ಅತಿಶಯವಾಗಿ ಸಂತೋಷವನ್ನು ಮಾಡತಕ್ಕ ನೀನು, ನಃ=ನಮ್ಮ, ಇಮಂ ಅಧ್ವರಂ=ಸ್ವರ್ಗಮಾರ್ಗದಲ್ಲಿ, ಅಥವಾ ಜ್ಞಾನ ಮಾರ್ಗದಲ್ಲಿ ಆಸಕ್ತವಾದ, ಯಜ್ಞವನ್ನು, ಯಜ=ಕೊಡು. (ನಿನ್ನ ಉದ್ದಿಶ್ಯ ಮಾಡಿಕೊಳ್ಳು.) ॥೧॥

**ಭಾ ॥ (೧) ಅಥ ಸೌತ್ರ್ಯಗ್ನಿಗಂ ವಿಷ್ಣುಮಗ್ನಿಮಪ್ಯಗ್ನಿಗೋಚರೈಃ । ವಚನೈಃ (೨) ಸರ್ವದೇವಾನಾಂ ಪೂಜಾಯೈ ಶ್ರೋದ್ಯತೋ ಭವಾನ್ । ವಸಿಷ್ವೋತ್ತಮ ವಸ್ತ್ರಾಣಿ (೩) ಭೂಷಣೈ ರಪ್ಯಲಂಕುರು ॥ ಕುರ್ವನ್ನುತ್ಸವಮತ್ಯಂತಮಸ್ಮದೀಯಂ ಮಖಂ ಯಜ । ನಿತ್ಯ ಮೇಧ್ಯ ಹರೇ ದೇವ ಭೋಗ್ಯಾನ್ನಾನಾಂ ಸದಾ ಪತೇ । ಊರ್ಜಿತಾನಾಂ ಜನಾ ನಾಂ ವಾ (೪) ಸ್ವಸ್ಮಿನ್ನೋ ಅಧ್ವರಂ ಯಜ ॥ (೫) ರಮಯತ್ಯಧ್ವನಿ ಶುಭೇ ಯೇನ ತೇನಾಧ್ವರೋ ಮಖಃ ॥೧॥**

ಅ॥ (ವಸಿಷ್ಠ ಎನ್ನುವುದು ೧೦ ಋಕ್ಕುಗಳುಳ್ಳ ಸೂಕ್ತವು. ಅಶ್ವಂನ ಎನ್ನುವುದು ೧೩ ಋಕ್ಕುಗಳುಳ್ಳದ್ದು. ಅದರಲ್ಲಿ ಅಂತಿಮವಾದುದು ದೈವೀ ದೇವತಾಕವು. ಅದನ್ನು ಬಿಟ್ಟು, ೨೨ನೆದ್ದಕ್ಕೆ ದೇವತೆಯನ್ನು ಹೇಳುತ್ತಾರೆ.) ಆ ಮೇಲೆ ಅಗ್ನಿಯಲ್ಲಿರತಕ್ಕ ಶ್ರೀ ವಿಷ್ಣುವನ್ನೂ ಅಗ್ನಿಯನ್ನೂ ಕೂಡ, ಅಗ್ನಿಗೆ ಯೋಗ್ಯಗಳಾದ ವಚನಗಳಿಂದ ಸ್ತುತಿಸುತ್ತಾರೆ. (೨) ಅಗ್ನಿಯಲ್ಲಿರತಕ್ಕ ರೂಪದಿಂದ ಸಮಸ್ತ ದೇವತೆಗಳ ಪೂಜೆಗೋಸ್ಕರ ಸನ್ನದ್ಧನಾದ ಶುನಶ್ಶೇಪನು ಅಗ್ನಿನಾಮಕ ಶ್ರೀ ಹರಿಯನ್ನು ಸ್ತುತಿಸುತ್ತಾನೆ. (೩) ಸದಾ ಪವಿತ್ರನಾದ, ಅಥವಾ ಯಜ್ಞದಲ್ಲಿ ಅಭಿವ್ಯಕ್ತನಾದ, ಬಲಾದಿಗಳಿಗೆ ಮುಖ್ಯಕಾರಣಗಳಾದ ಭೋಗ್ಯಗಳಾದ ವಿಶಿಷ್ಟ ಅನ್ನಗಳಿಗೆ, ಅಥವಾ ಬಲಾದಿಗಳುಳ್ಳ ಜನರಿಗೆ ಸದಾ ಸ್ವಾಮಿಯಾಗಿಯೇ ಇರುವ, ಕ್ರೀಡಾದಿ ಗುಣ ವಿಶಿಷ್ಟನಾದ ಶ್ರೀ ಹರಿಯೇ ಅಗ್ನಿಯಲ್ಲಿರತಕ್ಕ ರೂಪದಿಂದ ಸಮಸ್ತ ದೇವತೆಗಳ ಪೂಜೆಗೆ ಸನ್ನದ್ಧನಾದ ನೀನು ವಸ್ತ್ರಗಳನ್ನು ಉಟ್ಟುಕೊಳ್ಳು (ಪ್ರಾರ್ಥನೆಯಿಲ್ಲದೆನೇ ವಸ್ತ್ರಗಳನ್ನುಟ್ಟು, ಕೊಳ್ಳುವುದು ಸಿದ್ಧವೆಂದರೆ) ಉತ್ತಮ ವಸ್ತ್ರಗಳನ್ನುಟ್ಟುಕೊಂಡ ತನ್ನನ್ನು ಆಭರಣಗಳಿಂದಲೂ ಅಲಂಕರಿಸಿಕೊಳ್ಳು. ಹೀಗೆ ಅತ್ಯಂತ ಸಂತೋಷವನ್ನು ಮಾಡತಕ್ಕ ನೀನು ನಮ್ಮ ಈ ಯಜ್ಞವನ್ನು ಕೊಡು. (ಯಜ್ಞಾಂಗ ಭೂತಚುರುಪುರೋಡಾಶಾದಿಗಳನ್ನೂ) ಕೊಡು.) (೪) (ಚತುರ್ಥಿ ವಿಭಕ್ತಿಯನ್ನೂ ಹೇಳದಿದ್ದುದರಿಂದ ತನ್ನ ವಾಕ್ಯವನ್ನೇ ವಿವರಿಸುತ್ತಾರೆ.) (ಚತುರ್ಥಿಗೆ ಅಧಿಕರಣತ್ವವನ್ನು ವಿವಕ್ಷಾ ಮಾಡಿಕೊಂಡು) ತನ್ನಲ್ಲಿಯೇ ನಾವು ಮಾಡತಕ್ಕ ಯಜ್ಞವನ್ನು ಸಮರ್ಪಿಸಿಕೊಂಡು (ಅಂದರೆ ಯಜ್ಞಕ್ಕೆ ಅಂಗಭೂತಗಳಾದ ಚರುಪುರೋಡಾಶಾದಿಗಳನ್ನು ಕೊಡು.) (೫) ಯಜ್ಞದಲ್ಲಿ ಅಧ್ವರ ಶಬ್ದವನ್ನು ನಿರ್ವಚನ ಮಾಡುತ್ತಾರೆ.) ಯಾವ ಯೋಗದಿಂದ ಶುಭವಾದ ಸ್ವರ್ಗಾದಿ ಮಾರ್ಗದಲ್ಲಿ ಅಥವಾ ಜ್ಞಾನ ಮಾರ್ಗದಲ್ಲಿ ರಮಿಸುತ್ತಾರೋ, ಆದ ಕಾರಣ ಯಾಗವು ಅಧ್ವರವೆನಿಸುತ್ತದೆ. ॥೧॥

**ಋ ॥ (೨೯೧) ನಿ ನೋ ಹೋತಾ ವರೇಣ್ಯಃ ಸದಾ ಯವಿಷ್ಠ ಮನ್ಮಭಿಃ । ಅಗ್ನೇ ದಿವಿತ್ಮತಾ ವಚಃ ॥೨॥**

ಅ॥ ಯವಿಷ್ಠ = ಚಿಕ್ಕವನಾದ, ಅಗ್ನೇ =ಎಲೋ ಅಗ್ನಿಯೇ, ಹೋತಾ = ಹೋತೃವಿನಲ್ಲಿರತಕ್ಕ, ಹೋತೃನಾಮಕನಾದ, ವರೇಣ್ಯಃ =ಭಜಿಸಲರ್ಹನಾದ ನೀನು, ನಃ = ನಮ್ಮದ್ದಾದ, ವಚಃ =ಮಾತನ್ನು, ಮನ್ನಭಿಃ = (ಮನಜ್ಞಾನೇ) ಬುದ್ಧಿ ವೃತ್ತಿಗಳಿಂದ ಕೂಡಿಕೊಂಡು, ದಿವಿತ್ಮತಾ = ಸ್ವರ್ಗದಲ್ಲಿರತಕ್ಕ ಸಮಸ್ತ ದೇವತೆಗಳಲ್ಲಿ ವ್ಯಾಪ್ತನಾಗಿದ್ದುದರಿಂದ, (ಸಮಸ್ತ ದೇವತಾ ವಿಷಯಕವಾಗಿ) ನಿ=ಅಂತ್ಯಂತವಾಗಿ, ಸದಾ ಯಾವಾಗಲೂ, ಪ್ರವರ್ತಿಸು) ॥೨॥

**ಭಾ ॥ (೧) ವಚೂ ನೋ ನಿನಯಾತ್ಯಂತಂ ದಿವಿ ವ್ಯಾಪ್ತತಯಾ ಸದಾ । ಅಶೇಷದೇವಗತ್ವೇನ ಮನ್ಮಭಿರ್ಮತಿಭಿಸ್ಸಹ ॥ (೩) ಅವಮೋ ದಶದೇವೇಷು ವಹ್ನಿರ್ವಿಷ್ಣುಸ್ತುತಿಶ್ಚಿತಃ ॥೨॥**

ಅ॥ (೧) ಎಲೋ ಅಗ್ನಿಯೇ, ನೀನು ನಮ್ಮ ಮಾತನ್ನು ಬುದ್ಧಿ ವೃತ್ತಿಗಳಿಂದೊಡಗೂಡಿ (ಮನ್ಯತೇ ಜ್ಞಾಯತೇ ಅಪರೋಕ್ಷೀ ಕ್ರಿಯತೇ ಯಾಭಿಃ ಬುದ್ಧಿವತ್ತಿಭಿಃ ಎಂಬ ವ್ಯುತ್ಪತ್ತಿಯಿಂದ) ಯಾವಾಗಲೂ ಸ್ವರ್ಗದಲ್ಲಿರತಕ್ಕ ದೇವತೆಗಳಲ್ಲಿ

ವ್ಯಾಪಿಸಿಕೊಂಡಿರುವುದರಿಂದ ಅಂದರೆ ಸಮಸ್ತ ದೇವತಾ ವಿಷಯಕವಾಗಿ ಅತ್ಯಂತವಾಗಿ ಪ್ರವೃತ್ತಿ ಮಾಡು. (೨) (ಅಗ್ನಿಯು ಯವಿಷ್ಠನು ಹೇಗೆ ಎಂದರೆ) ಉಷಾಃ ಸ್ವಾಹಾ ಚ ಪರ್ಜನ್ಯೋ ಮಿತ್ರೋsಗ್ನಿರ್ವರು ಣೋ ವಿಧುಃ । ಪ್ರವಹೋನಿರುದ್ಧ ಇಂದ್ರೋಮೇ ರುದ್ರೋ ವಾಣೀ ಚ ಮಾರುತಃ । ಎಂದು ಹೇಳಿದ ವಾಯು ಭಾರತೀ ಮೊದಲಾದ ೧೦ ದೇವತೆಗಳಲ್ಲಿ ಅಗ್ನಿಯು ಅಧಮನು. (ಆದ ಕಾರಣ ಯುವಿಷ್ಠನು.) (ಶ್ರೀವಿಷ್ಣುವು ಹೇಗೆ ಯವಿಷ್ಠನೆನ್ನಿಸುವನು ಎಂದರೆ) ಶ್ರೀವಿಷ್ಣುವು ಯವಿಷ್ಠನಾದ ಅಗ್ನಿಯಲ್ಲಿ ನಿಯಾಮಕನಾಗಿದ್ದುದರಿಂದಲೂ ಅಗ್ನಿಯಲ್ಲಿರತಕ್ಕ ಯವಿಷ್ಠತ್ವವು ಶ್ರೀವಿಷ್ಣುವಿನ ಅಧೀನವಾಗಿರುವುದರಿಂದಲೂ ಶ್ರೀವಿಷ್ಣುವು ಯವಿಷ್ಠನೆನಿಸುತ್ತಾನೆ. ॥೨॥

ಋ ॥ (೨೯೨) ಆ ಹಿ ಷ್ಮಾ ಸೂನವೇ ಪಿತಾssಪಿ ರ್ಯಜತ್ಯಾಪಯೇ। ಸಖಾ ಸಖ್ಯೇ ವರೇಣ್ಯಃ ॥ ॥೨॥

ಅ ॥ ವರೇಣ್ಯಃ=ಶ್ರೇಷ್ಠನಾದ, ಪಿತಾ=(ನನ್ನ) ತಂದೆಯಾದ (ಈ ಅಗ್ನಿಯು) ಸೂನವೇ ಪುತ್ರನಾದ (ನನಗಾಗಿ) ಅಥವಾ ಸಖಾ (ನನ್ನ) ಸಖಿಯಾದ (ಈ ಅಗ್ನಿಯು ಸಖ್ಯೇ=ಸಖಿಯಾದ ನನಗೋಸ್ಕರ ಆ ಯಜತಿಹಿಸ್ಮ=ಅಗ್ನಿಯು ನನಗೆ ಅಭೀಷ್ಟಗಳನ್ನು ಹೊಂದಿಸಿ ಕೊಡುವುದಕ್ಕಾಗಿ ನನ್ನಿಂದ ದೇವತೆಗಳನ್ನು ಕೂಡಿಸಿದನು. (ನನ್ನೊಡನೆ ಇರುವಂತೆ ದೇವತೆಗಳನ್ನು ಮಾಡಿದನು) ಅಥವಾ ಆಪಿಃ-(ಆ ಪ್ಲೃ ವ್ಯಾಪೌ) ಪ್ರಾಪ್ಯನಾದ, (ನನಗೆ ಸ್ವಾಮಿಯಾದ) (ಅಗ್ನಿಯು ಆಪಯೇ=(ಭೃತ್ಯನಾಗಿರುವುದರಿಂದ) ಹೊಂದತಕ್ಕ (ನನಗೋಸ್ಕರ) ಆ ಯಜತಿಹಿಸ್ಮ=ಅಗ್ನಯು ನನಗೆ ಅಭೀಷ್ಟನನ್ನು ಹೊಂದಿಸಿಕೊಡುವುದಕ್ಕಾಗಿ ನನ್ನೊಡನೆ ದೇವತೆಗಳನ್ನು ಇರುವಂತೆ ಮಾಡಿದನು. (ಇದರಿಂದ ಜೀವೇಶ್ವರರಿಗೆ ನಾನಾ ವಿಧವಾದ ಸಂಬಂಧವು ಉಕ್ತವಾಯ್ತು.) ॥೩॥

ಭಾ ॥ ಸಖ್ಯೇ ಚ ಸೂನವೇ ಮಹ್ಯಮಾಯಜತ್ಯೇಷ ದೇವತಾಃ । ಆಪಿಃ ಪ್ರಾಪ್ಯೋ ಮಮಸ್ವಾಮಿ ಭೃತ್ಯತ್ವಾನ್ಮಹ್ಯಮಾಪಯೇ ॥೩॥

ಅ ॥ ಈ ಅಗ್ನಿಯು ಪುತ್ರನಾದ ನನಗಾಗಿ, ಅಥವಾ ಸಖಿಯಾದ ನನಗಾಗಿ, ಅಥವಾ ಆಪಿಃ=ಪ್ರಾಪ್ಯನಾದ, ಅಂದರೆ ನನಗೆ ಸ್ವಾಮಿಯಾದ, ಈ ಅಗ್ನಿಯು, ಭೃತ್ಯನಾಗಿರುವುದರಿಂದ ಹೊಂದತಕ್ಕ ನನಗೋಸ್ಕರ (ನನ್ನ ಅಭೀಷ್ಟ ಸಿದ್ಧಿಗಾಗಿ) ದೇವತೆಗಳನ್ನು ಹೊಂದಿಸಿಕೊಡುತ್ತಾನೆ. ॥೩॥

ಋ ॥ (೨೯೩) ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।

ಸೀದಂತು ಮನುಷೋ ಯಥಾ ॥೪॥

ಅ ॥ (ಎಲೋ ಅಗ್ನಿಯೇ) ವರುಣಃ=ವರುಣನೂ, ಮಿತ್ರಃ=ಮಿತ್ರನು, ಅರ್ಯಮಾ=ಸೂರ್ಯನು ಇವರೇ ಮೊದಲಾದ ರಿಶಾದಸಃ=ಹೆಚ್ಚು ಸುಖವುಳ್ಳ ದೇವತೆಗಳು, ನಃ=ನಮ್ಮ ಬರ್ಹಿ=ಯಜ್ಞವನ್ನೂ ಕುರಿತು, ಆ=ಬಂದು, ಮನುಷೋ ಯಥಾ=ಮನುಷ್ಯರು ಹೇಗೆ ಪ್ರತ್ಯಕ್ಷರಾಗುತ್ತಾರೋ ಹಾಗೆಯೇ ಪ್ರತ್ಯಕ್ಷೀ ಭೂತರಾಗಿ, ಸೀದಂತು (ಷದ್ಲೃ ವಿಶರಣ ಗತ್ಯವಸಾದನೇಷು) ಕೂತುಕೊಳ್ಳಲಿ. ॥೪॥

ಋ ॥ (೨೯೪) ಪೂರ್ವ್ಯ ಹೋತರಸ್ಯ ನೋ ಮಂದಸ್ವ ಸಖ್ಯಸ್ಯ ಚ । ಇಮಾ ಉಷುಶ್ರುಧೀ ಗಿರಃ ॥ ॥೫॥೨೦॥

ಅ ॥ ಪೂರ್ವ್ಯ=ಪೂರ್ವ ಕಾಲದಲ್ಲಿಯೂ ಇರುವ, ಹೋತಃ=ಹೋತನೆನಿಸಿದ ಎಲೋ ಅಗ್ನಿಯೇ, ಅಸ್ಯ ಹೀಗೆ ಸ್ತುತಿಸುವ, ಸಖ್ಯಸ್ಯ ಚ=ಸುಖಿಯೂ ಆದ, ನಃ=ನನಗಾಗಿ, ಮಂದಸ್ವ=(ಮದೀಹರ್ಷೇ) ಸುಖವನ್ನೂ ಮಾಡು. ಅಥವಾ ಈ ಸುಖಿಯಾದ ನನ್ನನ್ನು, ಮಂದಸ್ವ=ಸಂತೋಷಗೊಳಿಸು. ಅಥವಾ ನನಗೆ ಪೂಜ್ಯರಾದ ಇಂದ್ರಿಯಾಭಿಮಾನಿಗಳಾಗಿ ಉಪಕಾರಿಗಳಾದ ದೇವತೆಗಳನ್ನು,) ಮಂದಸ್ವ=ಸಂತೋಷಗೊಳಿಸು. ಇಮಾಃ=ಈ ನನ್ನದ್ವಾದ, ಗಿರಶ್ಚ=ಪ್ರಾರ್ಥನಾರೂಪಗಳಾದ ಮಾತುಗಳನ್ನು ಕೂಡ, ಸುಶ್ರುಧಿ ಉ =ಚೆನ್ನಾಗಿ, ನಿಶ್ಚಯವಾಗಿ ಕೇಳು. ॥೫॥

ಭಾ ॥ ಅಸ್ಯ ಮೇಽರ್ಥೇ ಕುರು ಮದಂ ಸ್ವಾತಂತ್ರ್ಯಾನ್ಮಾದಯಸ್ವ ವಾ ॥೫॥೨೦॥

ಅ ॥ ಹೀಗೆ ಸ್ತುತಿಸುವ ಮತ್ತು ಸಖಿಯೂ ಆದ ನನಗೋಸ್ಕರ, ಸಂತೋಷವನ್ನುಂಟು ಮಾಡು, (ಮಂದಸ್ವ ಎನ್ನುವುದನ್ನು ರೀತ್ಯಂತರದಿಂದಲೂ ವ್ಯಾಖ್ಯಾನ ಮಾಡುತ್ತಾರೆ.) ಸ್ವಾತಂತ್ರ್ಯ ರೂಪ ಕಾರಣದಿಂದ ಲುಪ್ತವಾದ ಣಿಚ್ ಉಳ್ಳ ಶಬ್ದವು ಪ್ರಯುಕ್ತವಾಗುತ್ತದೆ. ಅಂದರೆ ಣಿಚ್ ಅಂತರ್ಣೀತವಾಗಿ ಮಂದಸ್ವ ಎನ್ನುವುದಕ್ಕೆ ಮಾದಯಸ್ವ ಎಂದರ್ಥವಾಗುತ್ತದೆ. ಏವಂ ಚ ಈ ಸಖಿಯಾದ ನನ್ನನ್ನು ಅಥವಾ ಇಂದ್ರಿಯಾಭಿಮಾನಿಗಳಾಗಿ ಉಪಕಾರಿಗಳಾದ ದೇವತೆಗಳನ್ನು ಸಂತೋಷಗೊಳಿಸು. ॥೫॥೨೦॥

ಋ ॥ (೨೯೫) ಯಚ್ಚಿದ್ಧಿ ಶಶ್ವತಾ ತನಾ ದೇವಂ ದೇವಂ ಯಜಾಮಹೇ । ತ್ವೇ ಇದ್ಧೂಯತೇ ಹವಿಃ ॥೬॥

ಅ ॥ ಶಶ್ವತಾ= ಸಮಸ್ತ ಕಾಲಗಳಲ್ಲಿಯೂ, ತನಾಚಿತ್=ವಿಸ್ತರವಾಗಿ (ಸಮಸ್ತ ದೇಶಗಳಲ್ಲಿಯೂ) ಕೂಡ, (ಇರತಕ್ಕ ಯಜಮಾನರಾದ ನಾವೆಲ್ಲರೂ) ಯತ್=ಯಾವಾಗ, ದೇವಂ ದೇವಂ=ಸಮಸ್ತ ದೇವತೆಗಳನ್ನೂ, ಯಜಾಮಹೇ=ಪೂಜಿಸುತ್ತೇವೋ, (ಆಗ) ತ್ವೇ ಇತ್=ನಿನ್ನಲ್ಲಿಯೇ, ಹವಿಃ=ಹವಿಸ್ಸು, ಹೂಯತೇಹಿ=ಹೋಮಿಸಲ್ಪಡುತ್ತದಷ್ಟೆ. ಪ್ರಸಿದ್ಧವು ॥೬॥

ಭಾ ॥ ಶಶ್ವದ್ವಿಸ್ತರತಃ ಸರ್ವಾನ್ ಯದಾ ದೇವಾನ್ ಯಜಾಮಹೇ । ತದಾ ತ್ವಯ್ಯೇವ ಹಿ ಹವಿರ್ಹೂಯತೇ ॥೬॥

ಋ ॥ (೨೯೬) ಪ್ರಿಯೋ ನೋ ಅಸ್ತು ವಿಶ್ಪತಿರ್ಹೋತಾ ಮಂದ್ರೋ ವರೇಣ್ಯಃ । ಪ್ರಿಯಾಃ ಸ್ವಗ್ನಯೋ ವಯಂ ॥೭॥

ಅ ॥ ವಿಶ್ಪತಿಃ=ಸಮಸ್ತ ಪ್ರಜೆಗಳಿಗೆ ಅಧಿಪತಿಯು ಮಂದ್ರಃ=ಸುಖವನ್ನುಂಟು ಮಾಡುವವನು, ವರೇಣ್ಯಃ=ಭಜನೀಯನು, ಹೋತಾ=ಹೋತೃ ಎನಿಸಿಕೊಂಡವನು, ಇಂತಹ ಅಗ್ನಿಯು, ನಃ=ನಮಗೆ, ಪ್ರಿಯಃ=ಪ್ರಿಯನು, ಅಸ್ತು=ಆಗಲಿ. (ಇಂತಹ ಗುಣ ವಿಶಿಷ್ಟನಾದ ನೀನು ನಮಗೆ ಪ್ರಿಯನಾಗು.) ಸ್ವಗ್ನಯಃ=ಶೋಭನವಾದ ಅಗ್ನಿಯುಳ್ಳ (ಅಂದರೆ ಅಗ್ನಿಯನ್ನು ಪಾಸನೆ ಮಾಡುವ) ನಾವು ಕೂಡ, ಪ್ರಿಯಾಃ=(ಆತನಿಗೆ) ಪ್ರಿಯರು ಆಗುವೆವು. ॥೭॥

ಭಾ ॥ ಸ ಪ್ರಿಯೋ ಭವ । ಮಂದ್ರೋ ಮದಕರಃ ॥೭॥

ಅ ॥ ಇಂತಹ ಗುಣ ವಿಶಿಷ್ಟನಾದ ನೀನು ಪ್ರಿಯನಾಗು. ಮಂದ್ರಃ=ಸಂತೋಷವನ್ನುಂಟುಮಾಡುವವನು. ॥೭॥

**ಋ ॥ (೨೯೭) ಸ್ವಗ್ನಯೋ ಹಿ ವಾರ್ಯಂ ದೇವಾಸೋ ದಧಿರೇ ಚ ನಃ । ಸ್ವಗ್ನಯೋ ಮನಾಮಹೇ ॥೮॥**

ಅ ॥ ಸ್ವಗ್ನಯಃ=ಪ್ರಶಸ್ತ ಅಗ್ನಿಯುಳ್ಳ, ದೇವಾಸಃ=ದೇವತೆಗಳು, ನಃ=ನಮಗಾಗಿ, ವಾರ್ಯಂ=ಅಂಗೀಕಾರಾರ್ಹವಾದ, ದ್ರವ್ಯವನ್ನು, ದಧಿರೇ=ಕೊಟ್ಟರು. ಹಿ=ಪ್ರಸಿದ್ಧವು. ಚ=ರಕ್ಷಣೆಯನ್ನೂ ಮಾಡಿದರು ಸ್ವಗ್ನಯಃ=ಪ್ರಶಸ್ತ ಅಗ್ನಿಯುಳ್ಳ ನಾವೂ ಕೂಡ, (ಆ ದೇವತೆಗಳನ್ನು) ಮನಾಮಹೇ=ತಿಳಿಯುತ್ತೇವೆ. ಪೂಜಿಸುತ್ತೇವೆ.

ವಿ ॥ ನಾವು ದೇವತೆಗಳನ್ನು ಪೂಜಿಸುವುದು, ದೇವತೆಗಳು ನಮಗೆ ವಿತ್ತ ದಾನ ಮೊದಲಾದುದು ಎಲ್ಲವನ್ನು ಮಾಡುವುದು ಇದೆಲ್ಲವೂ ಅಗ್ನಿ ಪ್ರಸಾದದಿಂದಲೇ ಆಗತಕ್ಕದ್ದು. ಅಂದರೆ ನಾವು ಅಗ್ನಿ ರೂಪವಾದ ಅಧಿಷ್ಠಾನದಲ್ಲಿ ದೇವತೆಗಳಿಗೆ ಹವಿಸ್ಸನ್ನು ಕೊಡುವುದು, ಪೂಜಿಸುವುದು ಇತ್ಯಾದಿಗಳಿಂದ ಸಂತುಷ್ಟರಾದ ದೇವತೆಗಳು ನಮಗೆ ದ್ರವ್ಯಾದಿಗಳನ್ನು ದಾನ ಮಾಡುವರು. ॥೮॥

**ಋ ॥ (೨೯೮) ಅಥಾ ನ ಉಭಯೇಷಾಮಮೃತ ಮರ್ತ್ಯಾನಾಂ । ಮಿಥಃ ಸಂತು ಪ್ರಶಸ್ತಯಃ ॥೯॥**

ಅ ॥ ಅಮೃತ=ಮೃತಿರಹಿತನೇ, ಅಥ=ಮತ್ತು, ಉಭಯೇಷಾಂ=ಸ್ತ್ರೀಯರು ಪುರುಷರು ಎಂದು ಎರಡು ವರ್ಗದವರಾದ, ನಃ=ನಮ್ಮ, ಮರ್ತ್ಯಾನಾಂ=ಮನುಷ್ಯರಿಗೆ, ಮಿಥಃ=ಪರಸ್ಪರವಾಗಿ, ಪ್ರಶಸ್ತಯಃ=(ಪ್ರಪೂರ್ವಾತ್ ಶಂಸು ಕಥನೇ) ಸ್ತುತಿಗಳು, ಸಂತು=ಆಗಲಿ. (ಪರಸ್ಪರ ಸಂಪ್ರೀತಿಯುಂಟಾಗಲಿ) ॥೩॥

**ಭಾ ॥ ಸ್ತ್ರೀಣಾಂ ಪುಂಸಾಂ ಚೋಭಯವರ್ಗಿಣಾಂ ॥೯॥**

ಅ ॥ ಸ್ತ್ರೀಯರು ಪುರುಷರು ಎಂದು ಎರಡು ವರ್ಗದ ಮನುಷ್ಯರು ॥೯॥

**ಋ ॥ (೨೯೯) ವಿಶ್ವೇಭಿರಗ್ನೇ ಅಗ್ನಿಭಿರಿಮಂ ಯಜ್ಞಮಿದಂ ವಚಃ । ಚನೋ ಧಾಃ ಸಹಸೋ ಯಹೋ॥೧೦॥೨೧॥೨೬॥**

ಅ ॥ ಅಗ್ನೇ=ಎಲೋ ಅಗ್ನಿಯೇ, ವಿಶ್ವೇಭಿಃ=ಎಲ್ಲಾ, ಅಗ್ನಿಭಿಃ=ಅಗ್ನಿಗಳಿಂದ ಕೂಡಿಕೊಂಡು, ಇಮಂ=ಈ ನಮ್ಮದಾದ, ಯಜ್ಞಂ=ಯಾಗವನ್ನು, ಇದಂ ವಚಃ=ಈ ಮಾತನ್ನೂ ಕೂಡ, (ಸ್ವೀಕರಿಸು.) ಸಹಸಃ=ಬಲದೇವತೆಯಾದ ವಾಯು ದೇವರ, ಯಹೋ=ಪುತ್ರನಾದ ಅಗ್ನಿಯೇ (ನೀನು) ಚನಃ=ಸುಖವನ್ನು, ಧಾಃ=(ಡುಧಾಞ್ಧಾರಣ ಪೋಷಣಯೋಃ ) ನಮ್ಮಲ್ಲಿ ಕೊಡು ॥೧೦॥೨೧॥೨೬॥

**ಭಾ ॥ (೧) ಚನಃ ಸುಖಂ ಧಾ ಅಸ್ಮಾಸು (೨) ವಾಯೋಃ ಪುತ್ರೋಽಗ್ನಿರೇವ ಚೇತ್ । ಭಗವಾನ್ ವಾಯುನಾ ವ್ಯಂಗ್ಯೋ ॥೧೦॥೨೧॥೨೬॥**

ಅ ॥ (೧) ನಮ್ಮಲ್ಲಿ ಚನಃ=ಸುಖವನ್ನೂ, ಕೊಡು. (೨) (ಸಹಸೋ ಯಹೋ ಎನ್ನುವುದಕ್ಕೆ ಅಗ್ನಿಯಲ್ಲಿಯೂ ಶ್ರೀವಿಷ್ಣುವಿನಲ್ಲಿಯೂ ಕ್ರಮದಿಂದ ವ್ಯಾಖ್ಯಾನ ಮಾಡುತ್ತಾರೆ.) ಅಗ್ನಿಯೇ ವಾಯುವಿನ ಪುತ್ರನೆಂದು ವಿವಕ್ಷಿತನಾದರೆ ಆಗ ಸಹಸಃ=ವಾಯುದೇವರ, ಯಹೋ=ಪುತ್ರನೇ ಎಂದು ವ್ಯಾಖ್ಯಾನ ಮಾಡಬೇಕು. ಪರಮಾತ್ಮನು ವಿವಕ್ಷಿತನಾದರೆ, ಆಗ ವಾಯುದೇವರಿಂದ ಅಭಿವ್ಯಂಗ್ಯನು ಎಂದರ್ಥವನ್ನು ವಿವಕ್ಷಾ ಮಾಡಿಕೊಂಡು, ಸಹಸಃಯಹೋ ವಾಯುವಿನಿಂದ ಅಭಿವ್ಯಂಗ್ಯನೇ ಎಂದು ವ್ಯಾಖ್ಯಾನ ಮಾಡಬೇಕು.

ವಿ ॥ (೧) ವಾಯು ದೇವರು ಭಗವದ್ಗುಣಗಳನ್ನು ರುದ್ರೇಂದ್ರಾದಿಗಳಿಗೆ ಉಪದೇಶಿಸಿ ಪ್ರಕಟೀಕರಿಸುತ್ತಾ ವಾಯುವಿನಿಂದ ವ್ಯಂಗನಾಗುವುದರಿಂದ ಶ್ರೀ ಪರಮಾತ್ಮನೂ ಕೂಡ ವಾಯುಪುತ್ರನೆನಿಸುತ್ತಾನೆ. ಪ್ರಾಣೋವಾವ ಮಹಾನ್ ಸಹ ಓಜೋ ಬಲಮಿತ್ಯಾ ಚಕ್ಷತೇ ಎಂಬ ಶ್ರುತಿಯು ಸಹ ಶಬ್ದವು ವಾಯುವಾಚಕವು ಎನ್ನುವಲ್ಲಿ ಪ್ರಮಾಣವು (೨) ಅಪತ್ಯಂ ಯಹುಃ ಸೂನುಃ ಎನ್ನುವಲ್ಲಿ ಯಹು ಶಬ್ದವು ಅಪತ್ಯ ನಾಮಗಳಲ್ಲಿ ಪಠಿತವಾದ ಪ್ರಯುಕ್ತ ಯಹು ಶಬ್ದವು ಅಪತ್ಯ ವಾಚಕವು ॥೧೦॥೨೧॥೭॥

ಅ ವ ॥ ಅಶ್ವಂನ ಎನ್ನುವುದು ೨೭ನೇ ಸೂಕ್ತವು. ೧೩ ಋಕ್ಕುಗಳು. ೩ ವರ್ಗಗಳು. ಅವುಗಳಲ್ಲಿ ಅಂತಿಮವಾದುದು ದ್ವಿವೀದೇವತಾಕವು. ತ್ರಿಷ್ಟುಪ್ ಛಂದಸ್ಕವು. ಇತರಗಳು ಅಗ್ನಿದೇವತಾಕಗಳೂ ಗಾಯತ್ರೀ ಛಂದಸ್ಕಗಳು

ಋ ॥ (೩೦೦) ಅಶ್ವಂ ನತ್ವಾ ವಾರವಂತಂ ವಂದಧ್ಯಾ ಅಗ್ನಿಂ ನಮೋಭಿಃ । ಸಮ್ರಾಜಂತಮಧ್ವರಾಣಾಂ ॥೧॥

ಅ ॥ (ನಾನು) ಅಧ್ವರಾಣಾಂ=ಯಜ್ಞಗಳಿಗೆ ಸಮ್ರಾಜಂತಂ=ಸ್ವಾಮಿಯಾದ, ವಾರವಂತಂ ವಡವಾಮುಖನೆನಿಸಿದ, ಅಗ್ನಿಂ ತ್ವಾ=ಅಗ್ನಿಯಾದ ನಿನ್ನನ್ನು ಅಶ್ವಂನ=ಅಶ್ವರೂಪನಾದ ನಿನ್ನನೆಂಬಂತೆ, ನಮೋಭಿಃ=ನಮಸ್ಕಾರ ರೂಪಗಳಾದ ವಾಕ್ಯಗಳಿಂದ, ವಂಧ್ಯೈ=(ವದಿ ಅಭಿವಾದನಸ್ತುತ್ಯೋಃ) ನಮಸ್ಕರಿಸುತ್ತೇನೆ. ಅಥವಾ ಸ್ತುತಿಸುವುದಕ್ಕಾಗಿ, ನಮಸ್ಕರಿಸುವುದಕ್ಕಾಗಿ (ಪ್ರಾರಂಭಿಸುತ್ತೇನೆ.) ಶ್ರೀವಿಷ್ಣು ವ್ಯತಿರಿಕ್ತವಾದ ಅಶ್ವವನ್ನೆಂಬಂತೆ ನಿನ್ನನ್ನು ಸ್ತುತಿಸುವುದು ಉಚಿತವಲ್ಲ. ಏಕೆಂದರೆ ವಿಷ್ಣು ವ್ಯತಿರಿಕ್ತವಾದ ಅಶ್ವಕ್ಕೆ ಇಲ್ಲಿ ಹೇಳಿದ ಯಾಗ ನಿಯಮಾಕತ್ವವೂ ವಂದ್ಯತ್ವವೂ ಕೂಡಲಾರದು.

ಭಾ ॥ (೧) ವಾರವಾನ್ ವಡವಾಮುಖಃ ॥ (೨) ಸ್ವದೃಷ್ಟಾಂತೋ ಹರೇರ್ಯಸ್ಮಾತ್ ವಿಷ್ಣುಸ್ಸ ವಡವಾಮುಖಃ ॥೧॥

ಅ ॥ (೧) (ವಾರವತ್ ಶಬ್ದಕ್ಕೆ ವಿಶೇಷ್ಯವನ್ನು ಹೇಳುತ್ತಾರೆ) ದಕಾರ ಲಕಾರಗಳಿಗೆ ಆಭೇದವಿದ್ದ ಪ್ರಯುಕ್ತ ವಾರಂ=ವಾಲಂ ಡಕಾರ ಲಕಾರಗಳಿಗೆ ಅಭೇದವಿದ್ದ ಪ್ರಯುಕ್ತ ವಾಲಂ=ವಾಡಂ ವಾಡಮೇವ ವಾಡವಂ ವಡವಾಯಾಃ ಇದಂ ಮುಖಂ ವಾಡವಂ ತತ್ ಅಸ್ಯಾಸ್ತೀತಿ ವಾರವಾನ್. ಅಂದರೆ ವಡವಾ ಮುಖವು. (ವಡವಾಗ್ನಿಯು). ಅಥವಾ ವಾರಾಂ ಸಮೂಹಃ=ಜಲಗಳ ಸಮುದಾಯವು ವಾರಂ=ಸಮುದ್ರೋದಕವು ತತ್ ಅಸ್ಯ ಅಸ್ತಿ ಸಮುದ್ರ ಜಲವು ಇದಕ್ಕೆ ಸ್ಥಾನವಾಗಿದೆ. ಅಥವಾ ಭಕ್ಷ್ಯವಾಗಿದೆ. ಆದ ಕಾರಣ ವಾರವಾನ್. ಅಥವಾ ಗುಣಸುದಾಯವುಳ್ಳವನು. ಅಥವಾ ಭಕ್ತರ ಸಮುದಾಯವುಳ್ಳವನು ಎಂದರ್ಥವು. (2) (ಅಶ್ವಂನ ಎನ್ನುವುದರ ತಾತ್ಪರ್ಯ ಹೇಳುತ್ತಾರೆ.) ಯಾವ ಕಾರಣದಿಂದ ಆ ಅಶ್ವವು (ಅಂದರೆ ಅಶ್ವಸ್ವರೂಪೋ ಬೃಹ್ಮಾಽಭೂದಶ್ವರೂಪಾಜ್ಜನಾರ್ದನಾತ್ । ತತ್ರ ಸನ್ನಿಹಿತೋ ವಿಷ್ಣುಃ ಅಶ್ವರೂಪಃ ಸ್ವಯಂ ಪ್ರಭುಃ॥ ಎಂದು ಬೃಹದಾರಣ್ಯಕಭಾಷ್ಯೋಕ್ತ ಪ್ರಮಾಣದಿಂದ ಅಶ್ವಾಂತರ್ಗತವಾದ ಅಶ್ವಾಕಾರ ಮೂರ್ತಿಯೂ) ಹಾಗೆಯೇ ವಡವಾಮುಖನೂ, ಕೂಡ ಶ್ರೀ ವಿಷ್ಣುವೇ ಆಗಿರುತ್ತಾನೋ, ಆದಕಾರಣ ಶ್ರೀಹರಿಗೆ ತಾನೇ ದೃಷ್ಟಾಂತನು.

ವಿ ॥ (1) ಸ್ತ್ರೀರೂಪವಾದ ಕುದುರೆಯು ವಡವಾ ಎನ್ನಿಸುತ್ತದೆ. ವಡವಾಯಾಃ ಮುಖಮಿವ ಮುಖಂಯಸ್ಯ=ಹೆಣ್ಣು ಕುದುರೆಯ ಮುಖದಂತೆ ಮುವುಳ್ಳವನು. ಇದು ಸಮುದ್ರದೊಳಗಿರುವ ವಡವಾಗ್ನಿ ರೂಪವು (2) ಭೂತಾದಿಭೂತೋಽಂಬು ನಿಧಾನ ಮಧ್ಯೇ ಭೂತ್ವಾ ಹರಿಃ ಸರ್ವಹರೋಽತಿಧಾಮ್ನಾ । ಆಗಾಥ ಮಂಭೋ ವಿದಧಾತಿ ಭಸ್ಮಯೋ

ವಾಡವಾಗ್ನಿರ್ನೃಹರಿರ್ವಿಚಿಂತ್ಯ:॥ ಎಂದು ನೃಸಿಂಹ ಧ್ಯಾನ ಚಕ್ರದಲ್ಲಿ ಸಮುದ್ರ ಮಧ್ಯದಲ್ಲಿ ವಾಡವಾಗ್ನಿ ಸ್ವರೂಪನಾದ ನರಸಿಂಹನ್ನು ಧ್ಯಾನಿಸಬೇಕೆಂದು ಹೇಳಿದೆ. (3) ಹಯಗ್ರೀವರೂಪಿ ಶ್ರೀಪರಮಾತ್ಮನು ಗಂಡು ಕುದುರೆಯ ಮುಖಕ್ಕೆ ಸದೃಶವಾದ ಮುಖವುಳ್ಳವನು. ಸ್ತ್ರೀರೂಪೋಹಯಶೀರ್ಷವಾನ್, ತಥೈವ ವಡವಾಕ್ತ್ರಃ ಎಂದು ಮಹಾಭಾರತ ತಾತ್ಪರ್ಯದಲ್ಲಿ ಸ್ವಲ್ಪ ವ್ಯತ್ಯಾಸ ಹೇಳಿದೆ. ॥೧॥

**ಋ ॥ (೩೦೧) ಸ ಘಾ ನಃ ಸೂನುಃ ಶವಸಾ ಪೃಥುಪ್ರಗಾಮಾ ಸುಶೇವಃ। ಮೀಢ್ವಾ ಅಸ್ಮಾಕಂ ಬಭೂಯಾತ್ ॥೨॥**

ಅ ॥ ಶವಸಾ=ಬಲರೂಪನಾದ ವಾಯುವಿನ ಸೂನುಃ=ಪುತ್ರನಾದ, ಅಥವಾ ಶವಸಾ=ವಾಯುದೇವರಿಂದ ಕೂಡಿ, ನಃ=ಶುನಃ ಶ್ಯೇಪ ಮೊದಲಾದ ಋಷಿಗಳಾದ ನಮ್ಮ ಸೂನುಃ=ಪುತ್ರನಾದ, ಪೃಥುಪ್ರಗಾಮಾ=ಬಹು ವಿಸ್ತೃತವಾದ ಪ್ರಕೃಷ್ಟಜ್ಞಾನವುಳ್ಳ, ಸಃ=ಆ ಅಗ್ನಿಯು, ನಃ=ನಮಗೆ, ಸುಶೇವಃ=ಸುಖವನ್ನುಂಟು ಮಾಡುವವನು, ಬಭೂಯಾತ್ ಆಗಲಿ. ಸಃ ಘು=ಆ ಅಗ್ನಿಯೇ, ಅಸ್ಮಾಕಂ=ನಮಗೆ, ಮೀಢ್ವಾನ್=ಸಮಸ್ತ ಅಭೀಷ್ಟವನ್ನು ಕೊಡುವವನೂ, ಸ್ವಾಮಿಯೂ ಕೂಡ, ಬಭೂಯಾತ್=ಆಗಬೇಕು. ॥೨॥

**ಭಾ ॥ (೧) ಸೂನುಃ ಸ ಶವಸೋ ವಾಯೋಃ ಪೃಥುಜ್ಞಾನಃ ಸುಶೇವಕೃತ್ । ಸುಖಕೃನ್ನೋ ಭವೇನ್ಮೀಢ್ವಾನ್ ಸ್ವಾಮೀ ನಃ ಸೂನುರೇವವಾ । ವ್ಯಂಗ್ಯತ್ವಾದ್ವಾಯುನಾ ಸಾರ್ಧಂ ಸುಶೇವಃ ಸುಸುಖಾತ್ಮಕಃ ॥೨॥**

ಅ ॥ (1) ಬಲರೂಪನಾದ ವಾಯುವಿನ ಪುತ್ರನಾದ, ವಿಸ್ತೃತವಾದ ಪ್ರಕೃಷ್ಟ ಜ್ಞಾನವುಳ್ಳ ಆ ಅಗ್ನಿಯು ನಮಗೆ ಸುಶೇವಕೃತ್ ಅಂದರೆ ಚೆನ್ನಾಗಿ ಸುಖಕಾರಿಯು ಆಗಬೇಕು. ಮತ್ತು ನಮಗೆ ಅಭೀಷ್ಟದಾಯಕನೂ ಸ್ವಾಮಿಯೂ ಆಗಬೇಕು. (ಮೀಢ್ವಾನ್=ಮಿಹಸೇಚನೇ) (2) (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ವಾಯುವಿನ ಮತ್ತು ಶುನಃಶೇಪಾದಿ ಋಷಿಗಳಾಗ ನಮ್ಮ ಪುತ್ರನಾದ ಅಗ್ನಿಯು ಸುಖಕಾರಿಯಾಗಬೇಕು. (ಶ್ರೀವಿಷ್ಣುವು ವಾಯುವಿನ ಮತ್ತು ಋಷಿಗಳ ಪುತ್ರನಾಗುವುದು ಹೇಗೆಂದರೆ) ಶ್ರೀ ವಾಯುದೇವರು ಹಾಗೆಯೇ ಋಷಿಗಳು, ಭಗವದ್ಗುಣಗಳನ್ನು ಪ್ರಕಟೀಕರಿಸುವುದರಿಂದ ಅಂತೂ ಶ್ರೀಹರಿಯು ಅವರಿಂದ ವ್ಯಂಗ್ಯನಾಗುವ ಪ್ರಯುಕ್ತ ವಾಯುವಿನ ಹಾಗೂ ಋಷಿಗಳ ಪುತ್ರನೆನಿಸುತ್ತಾನೆ. ವಾಯುವಿನಿಂದ ಕೂಡಿಕೊಂಡು ಶ್ರೀವಿಷ್ಣುವು (ಶ್ರೀವಿಷ್ಣು ವಾಯುಗಳು) ಅಭೀಷ್ಟದಾಯಕನಾ(ರಾ)ಗಲಿ. (ಸುಶೇವಃ ಎನ್ನುವುದಕ್ಕೆ ಅರ್ಥಾಂತರವನ್ನು ಹೇಳುತ್ತಾರೆ.) ಸುಶೇವಃ=ಪೂರ್ಣ ಸುಖಸ್ವರೂಪನು. ॥೨॥

**ಋ ॥ (೩೦೨) ಸ ನೋ ದೂರಾಚ್ಚಾಸಾಚ್ಚ ನಿ ಮರ್ತ್ಯಾದಘಾಯೋಃ ॥ ಪಾಹಿ ಸದಮಿದ್ವಿಶ್ವಾಯುಃ ॥೩॥**

ಅ ॥ ವಿಶ್ವಾಯುಃ=ಪೂರ್ಣವಾದ ಆಯುಷ್ಯವುಳ್ಳ, (ನಿತ್ಯನಾದ) ಸಃ=ಆ ಅಗ್ನಿಯಾದ ನೀನು, ನಃ=ನಮ್ಮ, ಸದಂ ಇತ್=(ಸೀದಂತ್ಯಸ್ಮಿನ್‌ಜನಾಃ ಎಂಬ ವ್ಯುತ್ಪತ್ತಿಯಿಂದ) ಎಲ್ಲಾ ಸ್ಥಾನಗಳಲ್ಲಿಯೂ ದೂರಾಚ್ಚ=ದೂರದಲ್ಲಿರತಕ್ಕ, ಆಸಾಚ್ಚ=ಸಮೀಪದಲ್ಲಿಯೂ ಇರತಕ್ಕ, ಅಘಾಯೋಃ=ಪಾಪಕ್ಕಾಗಿ ಆಯುಷ್ಯವುಳ್ಳ, ಅಥವಾ ಪಾಪನಿಮಿತ್ತವಾಗಿ ಗತಿಯುಳ್ಳ, ಮರ್ತ್ಯಾತ್=ಮನುಷ್ಯನದ್ವೇಶೆಯಿಂದ, ನಿ=ನಿಶ್ಚಿತ ಹೇಗೆ ಆದೀತೋ ಹಾಗೆ, ಪಾಹಿ=ರಕ್ಷಿಸು. ॥೩॥

**ಭಾ ॥ ಆಸಾತ್ಸಮೀಪತಶ್ಚಾಸ್ಮಾನಘಾರ್ಥಾಯೋರ್ನಿಪಾಹಿ ಚ । ಪ್ರತಿ ಪ್ರತಿ ಸದೋ ನಿತ್ಯೋ ವಿಶ್ವಾಯುಃ ॥೩॥**

ಅ ॥ ಪೂರ್ಣ ಆಯುಷ್ಯವುಳ್ಳ ಅಂದರೆ ನಿತ್ಯನಾದ ಅಗ್ನಿಯಾದ ನೀನು ನಮ್ಮನ್ನು ಎಲ್ಲಾ ಸ್ಥಾನಗಳಲ್ಲಿಯೂ, ದೂರದಲ್ಲಿಯೂ ಸಮೀಪದಲ್ಲಿಯೂ ಇರತಕ್ಕ ಪಾಪಕ್ಕಾಗಿ ಆಯುಷ್ಯವುಳ್ಳ, ಮತ್ತು ಪಾಪಕ್ಕಾಗಿ ಸಂಚರಿಸುವ ಮನುಷ್ಯನ ದೆಶೆಯಿಂದ ನಿಶ್ಚಯವಾಗಿಯೂ ರಕ್ಷಿಸು. ॥೩॥

ಋ ॥ (೩೦೩) ಇಮಮೂ ಷು ತ್ವಮಸ್ಮಾಕಂ ಸನಿಂ ಗಾಯತ್ರಂನವ್ಯಾಂಸಂ । ಅಗ್ನೇ ದೇವೇಷು ಪ್ರವೋಚಃ ॥೪॥

ಅ ॥ ಅಗ್ನೇ=ಎಲೋ ಅಗ್ನಿಯೇ, ತ್ವಂ=ನೀನು ಅಸ್ಮಾಕಂ=ನಮ್ಮ, ಇಮಂ=ಈ ಸ್ತೋತ್ರವನ್ನು, ಸನಿಂ=(ಷಣುದಾನೇ) ದಾನ ಸ್ವರೂಪವನ್ನಾಗಿ, (ಅಂದರೆ ನನಗೆ ಅಭೀಷ್ಟವನ್ನು ಕೊಡು ಎಂಬ ವಚನದಿಂದೊಡಗೂಡಿದ್ದನ್ನಾಗಿಯ್ಯೂ) ಗಾಯತ್ರಂ=(ಈ ಸ್ತೋತ್ರದಲ್ಲಿ ಗಾಯತ್ರಿಯು ಇದ್ದ ಪ್ರಯುಕ್ತ) ಗಾಯತ್ರೀ ಛಂದಸ್ಸೇ ಸ್ವರೂಪವಾಗಿ ಇರತಕ್ಕುದನ್ನಾಗಿ ನವ್ಯಾಂಸಂ=ಅತಿ ನೂತನವನ್ನಾಗಿ, ಅತ್ಯಂತ ಅಪೂರ್ವವಾದುದನ್ನಾಗಿ, ಸ್ತೋತ್ರಗಳಲ್ಲಿ ಶ್ರೇಷ್ಠವಾದುದನ್ನಾಗಿ, ದೇವೇಷು=ದೇವತೆಗಳಲ್ಲಿ, ಸುಪ್ರವೋಚಃ=ಚೆನ್ನಾಗಿ ಹೇಳಿರುತ್ತಿ. ಮತ್ತು ಉ=ಆದರಪೂರ್ವಕವಾಗಿ ಹೇಳು. (ದೇವತೆಗಳನ್ನು ಹೊಂದಿಸಿಕೊಡು.)॥೫॥

ಭಾ ॥ ತ್ವಮಿಮಾಂ ಸ್ತುತಿಂ । ಸನಿಂ ದಾಸ್ವರೂಪಾಂ ಚ ಗಾಯತ್ರೀಛಂದಆತ್ಮಿಕಾಂ । ನವ್ಯಾಂಸಂ ಸ್ತುತಿಷು ಶ್ರೇಷ್ಠಾಂ ವದ ದೇವೇಷು ಸಾದರಂ ॥೪॥

ಅ ॥ ಅಗ್ನಿಯೇ ನೀನು ಈ ಸ್ತೋತ್ರವನ್ನು ದಾನ ಸ್ವರೂಪವನ್ನಾಗಿಯೂ, ಗಾಯತ್ರೀ ಛಂದಸ್ಸೇ ಸ್ವರೂಪವಾಗಿ ಉಳ್ಳದ್ದನ್ನಾಗಿಯೂ, ಅತಿ ಅಪೂರ್ವವಾದುದನ್ನಾಗಿಯೂ, ಸ್ತುತಿಗಳಲ್ಲಿ ಶ್ರೇಷ್ಠವಾದುದನ್ನಾಗಿಯೂ ಆದರ ಪೂರ್ವಕವಾಗಿ ದೇವತೆಗಳಲ್ಲಿ ಹೇಳು (ದೇವತೆಗಳನ್ನು ಹೊಂದಿಸಿಕೊಡು) ॥೪॥

ಋ ॥ (೩೦೪) ಈ ನೋ ಭಜ ಪರಮೇಷ್ವಾ ವಾಜೇಷು ಮಧ್ಯಮೇಷು । ಶಿಕ್ಷಾ ವಸ್ವೋ ಅಂತಮಸ್ಯ ॥೫॥೨೨॥

ಅ ॥ (ಎಲೋ ಅಗ್ನಿಯೇ ನೀನು) ಪರಮೇಷು=ಉತ್ತಮಗಳಾದ, ವಾಜೇಷು=ಅನ್ನಗಳಲ್ಲಿ, ನಃ=ನಮ್ಮನ್ನು ಆ ಭಜ=ಹೊಂದಿಸಿಕೊಡು, ಮಧ್ಯಮೇಷು=ಮಧ್ಯಮ ಅನ್ನಗಳಲ್ಲಿ ಆ ಭಜ=ಹೊಂದಿಸಿ ಕೊಡು. ಅಂತಮಸ್ಯ (ಮಜಃ ಮಾನೇ)=ಜ್ಞಾನ ರೂಪವಾದ ವಸ್ವಃ=ದ್ರವ್ಯಕ್ಕಾಗಿ, ಶಿಕ್ಷ=(ನಮ್ಮನ್ನು) ಶಿಕ್ಷಿಸು.

ವಿ ॥ (೧) ಇಲ್ಲಿ ಪರಮ ಮಧ್ಯಮರನ್ನು ಗ್ರಹಣ ಮಾಡಿದುದರಿಂದ ಅಧಮರನ್ನೂ ಇಟ್ಟುಕೊಳ್ಳಬೇಕು. ವಾಜ ಶಬ್ದದಿಂದ ಸಮಸ್ತ ಭೋಗಗಳನ್ನು ಇಟ್ಟುಕೊಳ್ಳಬೇಕು. (೨) ತಥಾಚ, ಉತ್ತಮ ಮಧ್ಯಮ ಅಧಮ ಭೋಗಗಳನ್ನು ನಾವು ಭೋಗಿಸುವಾಗ ನೀನು ನಮ್ಮನ್ನು ರಕ್ಷಕನಾಗಿ ಹೊಂದು. ನಿನ್ನಿಂದ ರಕ್ಷಿತರಾದ ನಾವು ಸಮಸ್ತ ಭೋಗಗಳನ್ನು ಭೋಗಿಸುವವರು ಆಗುವೆವು. ॥೫॥೨೨॥

ಭಾ ॥ (೧) ಉತ್ತಮಾಧಮಮಧ್ಯೇಷು ಭೋಗೇಷ್ವಸ್ಮಾನವಾಪ್ನುಹಿ । ರಕ್ಷಕತ್ವೇನ (೨) ಶಿಕ್ಷಾಸ್ಮಾನ್ ಜ್ಞಾನವಸ್ವರ್ಥಮೇವ ಚ । (೩) ಅಂತೇ ಮೋಕ್ಷೇಽಮಿತತ್ವೇನ ಜ್ಞಾನಮಂತಮಮುಚ್ಯತೇ ॥೫॥೨೨॥

ಅ ॥ (೧) ಎಲೋ ಅಗ್ನಿಯೇ ಉತ್ತಮ ಮಧ್ಯಮ ಅಧಮ ಭೋಗಗಳನ್ನು ನಾವು ಭೋಗಿಸುವಾಗ ರಕ್ಷಕನಾಗಿ ನಮ್ಮನ್ನು ಹೊಂದು. (ನಮ್ಮನ್ನು ನೀನು ರಕ್ಷಿಸಿದರೆ ನಾವು ಸಮಸ್ತ ಭೋಗಗಳನ್ನು ಭೋಗಿಸುವೆವು. (೨) ಜ್ಞಾನರೂಪವಾದ ದ್ರವ್ಯಕ್ಕಾಗಿಯೇ ನಮ್ಮನ್ನು ಶಿಕ್ಷಿಸು. (ಭಗವದ್ಜ್ಞಾನವನ್ನೇ ಮುಖ್ಯತಃ ಪ್ರಾರ್ಥಿಸಬೇಕಲ್ಲದೆ ಭೋಗಗಳನ್ನು ಪ್ರಾರ್ಥಿಸುವುದಲ್ಲ, ಎನ್ನುವ ಅಭಿಪ್ರಾಯದಿಂದ ಏವ ಶಬ್ದವು (೩) ಅಂತಮ ಶಬ್ದಕ್ಕೆ ಜ್ಞಾನವೆಂಬ ಅರ್ಥವು ಹೇಗೆ ಆಗುವುದೆಂದರೆ) ಸಂಸಾರದ ಅಂತ್ಯದಲ್ಲಿ ಅಂದರೆ ಮೋಕ್ಷದಲ್ಲಿ ಅಂದರೆ ಮೋಕ್ಷಕ್ಕೆ ಸಾಧನವಾಗಿ ಪ್ರಮಿತವಾಗಿರುವುದರಿಂದ ಜ್ಞಾನವು ಅಂತಮವು ಎನಿಸುತ್ತದೆ. ಅಂತೂ ಮೋಕ್ಷಕ್ಕೆ ಕಾರಣವಾಗಿ ಪ್ರಮಿತವಾದ ಜ್ಞಾನವು ಅಂತಿಮವೆನಿಸುತ್ತದೆ. ॥೫॥೨॥

ಋ ॥ (೩೦೫) ವಿಭಕ್ತಾಽಸಿ ಚಿತ್ರಭಾನೋ ಸಿಂಧೋರೂರ್ಮಾ ಉಪಾಕ ಆ । ಸದ್ಯೋ ದಾಶುಷೇ ಕ್ಷರಸಿ ॥೬॥

ಅ ॥ ಚಿತ್ರಭಾನೋ=ನಿತ್ಯದಲ್ಲಿಯೂ ಉತ್ತಮ ತೇಜಸ್ಸುಳ್ಳ ಶ್ರೀಹರಿಯೇ, (ನೀನು) ಸಿಂಧೋಃ=ಕ್ಷೀರಸಮುದ್ರದ, ಊರ್ಮೌ=ಅಲೆಗಳ ಉಪಾಕೇ=ಸಮೀಪದಲ್ಲಿ, (ಇದ್ದವನಾಗಿ) (ಕ್ಷೀರ ಸಮುದ್ರದ ಅಲೆಗಳ ಸಮೀಪದಲ್ಲಿದ್ದವನಾಗಿ) ಆ ವಿಭಕ್ತಾ=ಚೆನ್ನಾಗಿ ಮುಕ್ತರಿಗೆ ಭೋಗವನ್ನು ವಿಭಾಗಮಾಡಿ ಕೊಡುವವನಾಗಿ, ಅಸಿ=ಆಗಿರುತ್ತಿ. ದಾಶುಷೇ=ಯಜಮಾನನಿಗೋಸ್ಕರ, ಸದ್ಯಃ=ತತ್ಕ್ಷಣದಲ್ಲಿಯೇ, ಸಾವಕಾಶವಿಲ್ಲದೆ, ಕ್ಷರಸಿ=(ಕ್ಷರದಾನೇ) ನಿತ್ಯದಲ್ಲಿಯೂ (ನಿಖಿಲ ಇಷ್ಟವನ್ನು) ಕೊಡುತ್ತಿ. ॥೬॥

ಭಾ ॥ (೧) ಕ್ಷೀರಾಭ್ಧ್ಯೂರ್ಮಿಸಮೀಪಸ್ಥೋ ಮುಕ್ತಭೋಗವಿಭಾಗದಃ ॥ ಯಜ್ಞಮಾನಾಯ ಸದ್ಯಶ್ಚ ಕ್ಷರಸ್ಯಖಿಲಮೀಪ್ಸಿತಂ ॥ (೨) ನಿತ್ಯಮುತ್ತಮತೇಜಸ್ತ್ವಾಚ್ಚಿತ್ರಭಾನುರ್ಹರಿಃಸ್ಮೃತಃ ॥೬॥

ಅ ॥ (೧) ನೀನು ಕ್ಷೀರ ಸಮುದ್ರದ ಅಲೆಗಳ ಸಮೀಪದಲ್ಲಿದ್ದವನಾಗಿ, ಮುಕ್ತರಿಗೆ ಭೋಗ ವಿಶೇಷವನ್ನು ತರತಮ ಭಾವದಿಂದ ಕೊಡುವವನಾಗುತ್ತಿ. ಯಜಮಾನನಿಗೆ ತತ್ಕ್ಷಣದಲ್ಲಿ ಸಾವಕಾಶವಿಲ್ಲದೆ ನಿಖಿಲ ಇಷ್ಟವನ್ನು ಕೊಡುತ್ತಿ. (೨) ನಿತ್ಯದಲ್ಲಿಯೂ ಶ್ರೀಹರಿಯು ಉತ್ತಮ ತೇಜಸ್ಸುಳ್ಳವನಾದುದರಿಂದ ಚಿತ್ರಭಾನುಃ ಎನಿಸುತ್ತಾನೆ. ॥೬॥

ಋ ॥ (೩೦೬) ಯಮಗ್ನೇ ಪೃತ್ಸು ಮರ್ತ್ಯಮವಾ ವಾಜೇಷು ಯಂ ಜುನಾಃ। ಸ ಯಂತಾ ಶಶ್ವತೀರಿಷಃ ॥೭॥

ಅ ॥ ಅಗ್ನೇ=ಎಲೋ ವಿಷ್ಣುವೇ, (ನೀನು) ಯಂ ಮರ್ತ್ಯಂ=ಯಾವ ಮನುಷ್ಯನನ್ನು, ಪೃತ್ಸು=ಸ್ಪ...ಗಳು ಮಾಡತಕ್ಕ ಯುದ್ಧಗಳಲ್ಲಿ (ಅಧ್ಯಾತ್ಮದಲ್ಲಿ) ಜ್ಞಾನಾಜ್ಞಾನಾತ್ಮಕಗಳಾದ ಯುದ್ಧಗಳಲ್ಲಿ(ಅವಾಃ=ರಕ್ಷಿಸಿರುತ್ತಿಯೋ, ಯಂ=ಯಾರನ್ನು ವಾಜೇಷು=ಅನ್ನಗಳಲ್ಲಿ, ಜುನಾಃ=(ಜುನಗತೌ) ಹೊಂದಿಸಿ ಕೊಡುತ್ತಿಯೋ, ಪ್ರೇರೇಪಿಸುತ್ತೀಯೋ, ಸಃ=ಆ ಮನುಷ್ಯನೇ, ಶಸ್ವತೀಃ=ಶಾಶ್ವತಗಳಾದ, (ನಿತ್ಯಗಳಾದ) ಇಷಃ=ಅನ್ನಗಳನ್ನು ನಿತ್ಯ ಸಮೀಚೀನ ಪೂರ್ಣ ಸುಖವನ್ನು, ನಿತ್ಯ ಭೋಗಗಳನ್ನಾಗಲೀ, ಯಂತಾ=(ಯಮ್‌ಗತೌ) ಹೊಂದುವನು. (ಮುಕ್ತಿ ಫಲವನ್ನು ಹೊಂದುತ್ತಾನೆ.) (ಪ್ರಸಿದ್ಧ ಅಗ್ನಿ ಪಕ್ಷದಲ್ಲಿ ಬಹುಕಾಲೀನವಾದ ಐಹಿಕ ಭೋಗಗಲು ಅಗ್ನಿಯಿಂದ ಲಭಿಸುವವು) ॥೬॥

ಭಾ ॥ (1) ಯಂ ಮರ್ತ್ಯಂ ರಕ್ಷಸಿ ವಿಭೋ ಯಂ ಯುತ್ಸು ಪ್ರೇರಯಸ್ಯಪಿ । ಜ್ಞಾನಾಜ್ಞಾನಾತ್ಮಕೇಷ್ವೇವ ಸಂಗತಾ

**ನಿತ್ಯಸತ್ಸುಖಂ ॥ ಭೋಗಾನ್ವಾ ಮುಕ್ತಿಗಾನ್ನಿತ್ಯಾನಿಹ ಚೇದುಪಚಾರತಃ ॥೭॥**

ಅ ॥ (1) ಎಲೋ ಶ್ರೀಹರಿಯೇ ಯಾವ ಮನುಷ್ಯನನ್ನು ಯುದ್ಧಗಳಲ್ಲಿ (ಅಧ್ಯಾತ್ಮದಲ್ಲಿ) ಜ್ಞಾನ ಅಜ್ಞಾನ ಸ್ವರೂಪಗಳಾದ, ಜ್ಞಾನ ಅಜ್ಞಾನ ಕರ್ತೃಕಗಳಾದ ಯುದ್ಧಗಳಲ್ಲಿಯೇ ರಕ್ಷಿಸುತ್ತಿಯೋ, ಯಾವ ಮನುಷ್ಯನನ್ನು ಅನ್ನಗಳಲ್ಲಿಯೇ ಪ್ರೇರೇಪಿಸುತ್ತಿಯೋ, ಅಂತಹ ಮನುಷ್ಯನೇ, ನಿತ್ಯಗಳಾದ ಅನ್ನಗಳನ್ನು ಮುಕ್ತಿಯಲ್ಲಿರುವ ನಿತ್ಯವಾದ ನಿರ್ದುಷ್ಟವಾದ ಸುಖವನ್ನು, ಅಥವಾ ನಿತ್ಯಗಳಾದ ಮುಕ್ತಿಯಲ್ಲಿರತಕ್ಕ ಭೋಗಗಳನ್ನು ಚೆನ್ನಾಗಿ ಅವರವರ ಯೋಗ್ಯತಾನುಸಾರ ಹೊಂದುವನು. (ಅಗ್ನಿ ವಿಷಯದಲ್ಲಿ ಹೇಗೆಂದರೆ) ಔಪಚಾರಿಕವಾಗಿ ಐಹಿಕ ಭೋಗ ವಿಷಯಕವು. (ಅಂದರೆ ಬಹುಕಾಲದಲ್ಲಿ ಅಗ್ನಿಯು ಐಹಿಕ ಭೋಗಗಳನ್ನು ಕೊಡುತ್ತಾನೆಂದು ಭಾವವು) ॥೭॥

**ಋ ॥ (೩೦೭) ನಕಿರಸ್ಯ ಸಹಂತ್ಯ ಪರ್ಯೇತಾ ಕಯಸ್ಯ ಚಿತ್ । ವಾಜೋ ಅಸ್ತಿ ಶ್ರವಾಯ್ಯಃ ॥೮॥**

ಅ ॥ ಸಹಂತ್ಯ=ಬಲದಿಂದ ವ್ಯಾಪ್ತನಾದ ಅಗ್ನಿಯೇ, ಅಥವಾ ವಾಯುವಿನ ಪುತ್ರನಾದ ಅಗ್ನಿಯೆನಿಸಿದ ಶ್ರೀಹರಿಯೇ, ಅಸ್ಯ=ಯಂ ಮರ್ತ್ಯಂ ಎಂದು ಪ್ರಕೃತನಾದ, ನಿನ್ನವನಾದ, ಕಯಸ್ಯಚಿತ್=ಯಾರೋ ಒಬ್ಬನಿಗೆ, ಶ್ರವಾಯ್ಯಃ=ಕೇಳಲರ್ಹವಾದ, (ಅಂದರೆ ಕಿವಿಗಳಿಗೆ ಸುಖವನ್ನುಂಟು ಮಾಡುವ,) ಅಥವಾ ಅತ್ಯಂತ ಪ್ರಸಿದ್ಧವಾದುದು, (ಅತಿಬಹುಬಲವಾದುದಾಗ್ಯೂ) ವಾಜಃ=ಭೋಗವು, ಪರ್ಯೇತಾ=ಪರಿಪೂರ್ಣವಾದುದು, ನಕಿಃ ಅಸ್ತಿ=ಇಲ್ಲವೇ ಇಲ್ಲ. ॥೮॥

ವಿ ॥ ಮಹತ್ತಾದ ಭೋಗವೂ ನಿನ್ನ ಭಕ್ತರಿಗೆ ಪರಿಪೂರ್ಣವಾಗುವುದಿಲ್ಲ. ಏಕೆಂದರೆ-ಮೇಲೆ ಮೇಲೆ ಯಥೇಷ್ಟವಾಗಿ ಭೋಗ ವಿಶೇಷವನ್ನು ಕೊಡುತ್ತಿ, ಅಥವಾ ಮಹಾಫಲ ಮೋಕ್ಷ ರೂಪವಾದ ಪುರುಷಾರ್ಥವನ್ನು ಕೊಡುತ್ತಿ ಎಂದು ಮಾಡಿಕೊಂಡು ಐಹಿಕ ಭೋಗವು ಬಹಳವಿದ್ದಾಗ್ಯೂ ಅದು ಪರಿಪೂರ್ಣವಲ್ಲ. ನಿನ್ನ ಭಕ್ತರಿಗೆ ಅದು ತುಚ್ಛವೇ ಆಗಿದೆ. ॥೮॥

**ಭಾ ॥ (1) ಪರಿಪೂರ್ಣೋಽಸ್ಯ ನೈವಾಸ್ತಿ ತ್ವದೀಯಸ್ಯ ತು ಕಸ್ಯಚಿತ್ । ಭೋಗೋಽಪಿ ಬಹುಲೋ ಯಸ್ಮಾದ್ದಿತ್ಸಸ್ಯೇವ ಪುನಃ ಪುನಃ ॥**
**ಸಹಂತ್ಯಃ ಸಂತತಬಲಃ ಸಹಸಃ ಪುತ್ರ ಏವ ವಾ ॥ ಶ್ರವಾಯ್ಯಃ ಶ್ರವಣೀಯಶ್ಚ ಸುಪ್ರಸಿದ್ಧತಮೋಽಪಿ ವಾ ॥೮॥**

ಅ ॥ ಚೆನ್ನಾಗಿ ವ್ಯಾಪ್ತವಾದ ಬಲವುಳ್ಳವನು ಸಹಂತ್ಯಃ ಎನಿಸುತ್ತಾನೆ. ಅಥವಾ ವಾಯೋರಗ್ನಿಃ ಎಂಬ ಶ್ರುತಿಯಿಂದ ವಾಯುವಿನ ಪುತ್ರನಾದ ಅಗ್ನಿಯೇ ಸಹಂತ್ಯಃ=ಎನಿಸುತ್ತಾನೆ. ಎಲೋ ಶ್ರೀಹರಿಯೇ ನಿನ್ನವನಾದ, ಯಾವನೊಬ್ಬನಿಗಾದರೂ ಶ್ರವಾಯ್ಯಃ=ಕೇಳಲರ್ಹವಾದ, ಅತ್ಯಂತ ಪ್ರಸಿದ್ಧವಾದುದಾಗ್ಯೂ ಅಂದರೆ ಅತಿ ಬಹುಬಲವಾದುದಾಗ್ಯೂ ಭೋಗವು ಪರಿಪೂರ್ಣವಾದುದು ಆಗುವುದೇ ಇಲ್ಲ. (ಮಹಾಭೋಗವೂ ಕೂಡ ನಿನ್ನ ಭಕ್ತರಿಗೆ ಪರಿಪೂರ್ಣವಾಗುವುದಿಲ್ಲ.) ಏಕೆಂದರೆ ಮಹಾ ಭೋಗಗಳನ್ನು ಪುನಃ ಪುನಃ ಅವರಿಗೆ ಯಾವ ಕಾರಣದಿಂದ ಕೊಡುತ್ತಿಯೋ ಆದಕಾರಣ ಅವರಿಗೆ ಯಾವುದೊಂದು ಭೋಗವೂ ಕೂಡ ಅಂತಿಮವಾಗುವುದೇ ಇಲ್ಲ.) ಅಥವಾ ಯಾವ ಕಾರಣದಿಂದ ಪುನಃ ಪುನಃ ಅತ್ಯುಚ್ಚವಾದ ಮೋಕ್ಷ ಭೋಗವನ್ನು ಕೊಡುತ್ತೀಯೋ ಆದಕಾರಣ ಸಾಂಸಾರಿಕ ಭೋಗವು ಬಹಳವಿದ್ದರೂ ನಿನ್ನ ಭಕ್ತರಿಗೆ ಪರಿಪೂರ್ಣವಾಗುವುದಿಲ್ಲ. ತುಚ್ಛವೇ ಆಗುತ್ತದೆ. ಅಂತೂ ಲೋಕದಲ್ಲಿ ತನ್ನನ್ನು ಆಶ್ರಿಯಿಸಿದವರಿಗೆ ಪ್ರಭುವು ನಿತ್ಯವೂ ಕೊಡತಕ್ಕ ಹಣವು ಅಲ್ಪವಾದ ಪ್ರಯುಕ್ತ ಅದರಿಂದ ಅಲಂಬುದ್ಧಿಯು ಹುಟ್ಟುವುದಿಲ್ಲ. ಮತ್ತೆ ಕೇಳಿದಷ್ಟು ಹಣವನ್ನು ಕೊಟ್ಟರೆ ಅದರಿಂದ ಅಲಂಬುದ್ಧಿಯು ಹುಟ್ಟುತ್ತದೆ. ಆ ಹಣ ಸಿಕ್ಕಿದ ಮೇಲೆ ಸಂತುಷ್ಟರಾಗಿ ಪ್ರಭುವನ್ನು ಬಿಟ್ಟು ತಮ್ಮ ದೇಶಕ್ಕೆ ಹೋಗುತ್ತಾರಷ್ಟೆ. ಪ್ರಕೃತದಲ್ಲಿ

ಆದರೂ ನೀನು ನಿನ್ನ ಭಕ್ತರಿಗೆ ಬೇಕಾದಷ್ಟು ಹಣ ಕೊಟ್ಟರೂ ಅದು ಅವರಿಗೆ ಅಂತಿಮವಾಗುವುದಲ್ಲ. ತೃಪ್ತಿಯುಂಟಾಗುವುದಿಲ್ಲ. ಸಾಂಸಾರಿಕ ಭೋಗವು ದುಃಖ ಮಿಶ್ರವಾದ ಕಾರಣ ಅದರಿಂದ ಮಾಹಾತ್ಮ್ಯಾತಿಶಯವು ಹುಟ್ಟುವುದಿಲ್ಲ. ಮತ್ತೆ ಅತ್ಯುಚ್ಚವಾದ ಮೋಕ್ಷಭೋಗವೇ ಪರಿಪೂರ್ಣವಾದುದು ||೮||

**ಋ || (೩೦೮) ಸ ವಾಜಂ ವಿಶ್ವಚರ್ಷಣಿರರ್ವದ್ಭಿರಸ್ತು ತರುತಾ । ವಿಪ್ರೇಭಿರಸ್ತು ಸನಿತಾ ||೯||**

ಅ || (ಎಲೋ ಅಗ್ನಿಯೇ) ಸಃ=ಪ್ರಕೃತನಾದ ನಿನ್ನವನೇ ಆದವನು (ಭಕ್ತನು) ವಿಶ್ವ ಚರ್ಷಣಿಃ=ಸಮಸ್ತ ಪ್ರಜೆಗಳು ಅಧೀನದಲ್ಲಿ ಉಳ್ಳವನಾಗಿ (ಸಮಸ್ತರಿಗೂ ಅಧಿಪತಿಯಾಗಿ (ಗೋಮಿಥುನಗಳನ್ನು ದಾನ ಮಾಡಿದುದರಿಂದ ಗೋವುಗಳೂ ಎತ್ತುಗಳೂ ಸಮಾರ್ತಗಳಾಗಿರುವುದರಿಂದ) ಅರ್ವದ್ಭಿಃ=ಕುದುರೆಗಳಿಂದ, ವಾಜಂ=ಧಾನ್ಯ ರೂಪವಾದ ಆಮಾನ್ನವನ್ನು, ತರುತಾ=ತರತಕ್ಕವನು, ಅಸ್ತು=ಆಗಬೇಕು. (ಎಂದರೆ ನಿನ್ನ ಭಕ್ತನು ಚಕ್ರವರ್ತಿಯಾಗಲಿ, ಅರ್ಥಿಗಳಿಗೆ ಗೋವುಗಳನ್ನು ದಾನ ಮಾಡಲಿ. ಹೇಗೆ ಗೋವುಗಳನ್ನು ದಾನಮಾಡಿದರೆ ಅಶ್ವಗಳಿಂದಲೇ ಧಾನ್ಯಗಳ ಆನಯನಾದಿಗಳನ್ನು ಮಾಡುತ್ತಾರೋ ಹಾಗೆಯೇ) ಅತ್ತು, ವಿಪ್ರೇಭಿಃ=ಬ್ರಾಹ್ಮಣರಿಂದ ಸನಿತಾ=(ಶಣುದಾನೇ) ದಾನ ಮಾಡುವವನು, ಆಗಲಿ. (ಅಂದರೆ-ಒಬ್ಬನಿಗೆ ದಾನ ಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ ಬ್ರಾಹ್ಮಣರನ್ನು ಸಹಾಯಕರನ್ನಾಗಿ ಮಾಡಬೇಕೋ ಅಷ್ಟು ಯಥೇಷ್ಟ ದಾನ ಮಾಡುವವನು ಆಗಲಿ) ಅಥವಾ ಎಲೋ ಅಗ್ನಿಯೇ, ನಿನ್ನವನಾದ ಭಕ್ತನು ಚಕ್ರವರ್ತಿಯಾಗಿ ಅಶ್ವಗಳಿಂದ ವಾಜಂ ತರುತಾ=ಯುದ್ಧ ಪಾರಂಗತನಾಗಲಿ. ಹಾಗೆಯೇ ಬ್ರಾಹ್ಮಣ (ಶಿಷ್ಯನಿಗೆ)ಗೋಸ್ಕರ, ವಾಜಂ ಸನಿತಾ=ಅನ್ನವನ್ನು ಅಥವಾ ಯಥೇಷ್ಟ ಭೋಗವನ್ನು ಕೊಡುವವನು ಆಗಬೇಕು. ಅಥವಾ ನಿನ್ನ ಭಕ್ತನು ಬಹು ಶಿಷ್ಯ ಸಂಪತ್ತುಳ್ಳವನಾಗಿ ಅರ್ವದ್ಭಿಃ=ನಿನ್ನ ವಿಷಯಕಗಳಾದ ಇಂದ್ರಿಯಗಳಿಂದ, ವಾಜಂ=ತಮೋಗುಣದಿಂದ ಕೂಡಿ ಯುದ್ಧವನ್ನೂ, ತರುತಾ ಅಸ್ತು=ದಾಟುವವನಾಗಬೇಕು. ಹಾಗೆಯೇ ವಿಪ್ರೇಭಿಃ=ಬ್ರಾಹ್ಮಣರಿಗಾಗಿ, ಸವಿತಾ ಜ್ಞಾನದಾಯಕನಾಗಲಿ. ||೯||

**ಭಾ || (೧) ವಾಜಂ ತಾರಯಿತಾಽಽನೇತಾ ಸೋರ್ವದ್ಭಿರ್ಗೋಸಮಾಪ್ತಿತಃ । ತ್ವದೀಯಸ್ತು ಭವೇದ್ವಿ (೨) ಪ್ರೈಃ ದಾತಾ ವಿಪುಲದಾನತಃ|| (೩) ಯುದ್ಧಸ್ಯ ತಾರಕೋಽನ್ನಸ್ಯದಾತಾ ಭೋಗಸ್ಯ ವಾಭವೇತ್ || (೪) ಇಂದ್ರಿಯೈಸ್ತ್ತಮಸಾ ಯುದ್ಧಂ ತರುತಾ ಜ್ಞಾನದೋಽಥವಾ ||೯||**

ಅ || ಎಲೋ, ಅಗ್ನಿಯೇ, ನಿನ್ನ ಭಕ್ತನೇ ಆದವನು, ಗೋಮಿಥುನಗಳನ್ನು ದಾನಮಾಡಿ ಗೋವುಗಳು ಸಮಾಪ್ತಗಳಾಗಿರುವುದರಿಂದ ಕುದುರೆಗಳಿಂದ ಅನ್ನವನ್ನು (ಧಾನ್ಯರೂಪ ಅಮಾನ್ನವನ್ನು) ತರತಕ್ಕವನಾಗಬೇಕು, (2) ಬ್ರಾಹ್ಮಣರಿಂದ ದಾನಮಾಡುವವನಾಗಲಿ. (ಅಂದರೆ ಒಬ್ಬನಿಗೆ ದಾನಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ ಬ್ರಾಹ್ಮಣರನ್ನು ಸಹಾಯಕರನ್ನಾಗಿ ಹೇಗೆ ಮಾಡಿಯಾನೋ) ಅಷ್ಟು (ಬೇಕಾದಷ್ಟು ದಾನಮಾಡುವವನಾಗಲಿ. ಯಥೇಷ್ಟ ದಾನ ಮಾಡಬೇಕು.) (3) (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ನಿನ್ನ ಭಕ್ತನು. ಚಕ್ರವರ್ತಿಯಾಗಿ ಅಶ್ವಗಳಿಂದ ಯುದ್ಧ ಪಾರಂಗತನು ಆಗಲಿ. ಹಾಗೆಯೇ ಬ್ರಾಹ್ಮಣರಿಗೋಸ್ಕರ, ಯಥೇಷ್ಟ ಅನ್ನದಾನ ಮಾಡುವವನು, ಭೋಗದಾಯಕನೂ ಆಗಬೇಕು. (4) (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ನಿನ್ನ ಭಕ್ತನು ಬಹು ಶಿಷ್ಯ ಸಂಪತ್ತುಳ್ಳವನಾಗಿ, (ಇಂದ್ರಿಯಾಣಿ ಹಯಾನಾಹುಃ ಎಂಬ ಪ್ರಮಾಣದಿಂದ) ನಿನ್ನ ವಿಷಯಕ ಇಂದ್ರಿಯಗಳಿಂದ. ತಮೋಗುಣದಿಂದೊಡಗೂಡಿ ಯಾವುದು ವಿರುದ್ಧವಿದೆಯೋ ಅದಕ್ಕೆ ತಾರಕನು ಆಗಬೇಕು. ಹಾಗೆಯೇ ಶಿಷ್ಯರಿಗೆ ಜ್ಞಾನದಾಯಕನು ಆಗಬೇಕು. ||೯||

ಋ ॥ (೭೦೯) ಜರಾಬೋಧ ತದ್ವಿವಿಡ್ಢಿ ವಿಶೇ ಯಜ್ಞಿಯಾಯ ಸ್ತೋಮಂ ರುದ್ರಾಯ ದೃಶೀಕಂ ॥೧೦॥೨೩॥

ಅ ॥ ಜರಾಬೋಧ=(ಜರಸ್ತುತೌ) ಸ್ತುತಿಯನ್ನು ತಿಳಿಯುವವನಾದುದರಿಂದ ಜರಾಬೋಧನೆನಿಸಿದ ಶ್ರೀಹರಿಯೇ ತತ್=ಸ್ತುತಿಯನ್ನು ತಿಳಿಯುವವನಾದುದರಿಂದ ರುದ್ರಾಯ=ರೋಗ ಪರಿಹಾರಕನಾದ ವಿಷ್ಣುವೆನಿಸಿದ ನಿನಗಾಗಿ, (ಪ್ರಸಿದ್ಧ ಅಗ್ನಿ ಪಕ್ಷದಲ್ಲಿ) ಪ್ರಸಿದ್ಧ ಅಗ್ನಿಯಾದ ನಿನಗಾಗಿ, ದೃಶೀಕಂ=ಪ್ರತ್ಯಕ್ಷವಾಗಿ, ಉಚ್ಚಸ್ವರದಿಂದ ಮಾಡಲ್ಪಡತಕ್ಕ, ಸ್ತೋಮಂ=ಸ್ತುತಿಯನ್ನು, ಯಜ್ಞಿಯಾಯ=ಯಜ್ಞದಲ್ಲಿ ಯೋಗ್ಯರಾದ, ವಿಶೇವಿಶೇ=ಸಮಸ್ತ ಜನರಿಗೆ ಪ್ರಯೋಜನ ಸಿದ್ಧಿಯಾಗುವುದಕ್ಕಾಗಿ (ಅಂದರೆ ಯಜಮಾನನಿಗೆ ಪ್ರಯೋಜನ ಸಿದ್ಧಿಯಾಗುವುದಕ್ಕಾಗಿ) ವಿವಿಡ್ಢಿ=(ವಿದ ಜ್ಞಾನೇ) ವಿಶೇಷವಾಗಿ ತಿಳಿ. (ನಿನ್ನ ವಿಷಯಕಕವಾದ ಸ್ತೋತ್ರವನ್ನು ನೀನು ಸರ್ವದಾ ನಿಶ್ಚಿಯಿಸಿಕೊಳ್ಳು) (ಇಲ್ಲಿ ಪೌರಾಣಿಕ ಇತಿಹಾಸವಿದೆ. ಶುನಶ್ಶೇಪರನ್ನು ಕುರಿತು ಹೇಳಿದನು. ಆಗ ಆ ಶುನಶ್ಶೇಪರು ಅಗ್ನಿಯನ್ನು ಕುರಿತು ಹೇಳಿದರು. ನಾನು ರುದ್ರನನ್ನು ಸ್ತುತಿಸಲಿಕ್ಕೆ ತಿಳಿಯಲಾರೆನು. ನೀನೇ ಸ್ತುತಿಸು, ಎಂದು. ಈ ಅಭಿಪ್ರಾಯದಿಂದಲೇ ಜರಾಬೋಧ ಎಂದದ್ದು) ಹೇ ಜರಾಬೋಧ=ರುದ್ರನ ಸ್ತುತಿಯನ್ನು ತಿಳಿದಿರುವ ಎಲೋ ಅಗ್ನಿಯೇ, ಯಜ್ಞಿಯಾಯ=ಯಜ್ಞದಲ್ಲಿ ಯೋಗ್ಯನಾದ, ವಿಶೇ ವಿಶೇ=ನನಗಾಗಿ ರೋಗ ಪರಿಹಾರಕನಾದ ರುದ್ರನ ಸ್ತುತಿಯನ್ನು ನೀನೇ ಮಾಡು. ॥೧೦॥೨೩॥

ಭಾ ॥ ಸ್ತುತಿಬೋದ್ಧಾಯತಸ್ತ್ವಾಂ ತ್ವಮವಧಾರಯ ಸರ್ವದಾ । ನಿತ್ಯಜ್ಞಾನೋಽಪಿ ದತ್ವಾ ತತ್ಫಲಂ ವೇತ್ತ್ರೇತಿ ಕಥ್ಯತೇ ॥
ರುಜಾಂ ವಿದ್ರಾವಕೇಶಾಯ ಪ್ರತ್ಯಕ್ಷಾಂ ತವ ವಾ ಸ್ತುತಿಂ ॥೧೦॥೨೩॥

ಅ ॥ ಎಲೋ ಜರಾಬೋಧನೇ ಯಾವ ಕಾರಣದಿಂದ ನೀನು ಸ್ತೋತ್ರವನ್ನು ತಿಳಿಯುವವನೋ, ಆದಕಾರಣ ರೋಗ ಪರಿಹಾರಕರಿಗೆ ನಿಯಾಮಕನಾದ ಶ್ರೀವಿಷ್ಣುವಾದ ನಿನಗೋಸ್ಕರ ಪ್ರತ್ಯಕ್ಷವಾಗಿ ಉಚ್ಚ ಸ್ವರದಿಂದ ನೀನೇ ನಿಶ್ಚಯಿಸಿಕೊಳ್ಳು. (ಹಾಗಾದರೆ ಪರಮಾತ್ಮನು ಸರ್ವಜ್ಞನು, ಆದಕಾರಣ ವಿಶಿಷ್ಟ ಸ್ತುತಿ ಬೋದ್ಧನೆಂದು ಹೇಗೆ ಹೇಳಿಸಿಕೊಳ್ಳಲ್ಪಡುತ್ತಾನೆ. ಮತ್ತು ಆತನು ನಿತ್ಯ ಜ್ಞಾನವುಳ್ಳವನೆಂದಾದ ಮೇಲೆ ವಿಶೇಷವಾಗಿ ತಿಳಿ ಎಂದು ಹೇಗೆ ಪ್ರಾರ್ಥಿಸಿಕೊಳ್ಳಲ್ಪಡುತ್ತಾನೆ.....? ಎಂದರೆ) ಯಜ್ಞದಲ್ಲಿ ಫಲ ಹೊಂದಲು ಯೋಗ್ಯರಾದ ಸಮಸ್ತ ಜನರಿಗೂ ಪ್ರಯೋಜನ ಸಿದ್ಧಿಯಾಗುವುದಕ್ಕಾಗಿ (ಅಂದರೆ ಯಜಮಾನನಿಗೆ ಪ್ರಯೋಜನ ಸಿದ್ಧಿಯಾಗುವುದಕ್ಕಾ) ಸರ್ವಜ್ಞನಾದ... ಸ್ತುತಿಸುದುದಕ್ಕೆ ಫಲವನ್ನು ಕೊಡುವುದರಿಂದ ಜರಾಬೋಧನೆಂದು ಹೇಳಿಸಿ ಕೊಳ್ಳಲ್ಪಡುತ್ತಾನೆ. ಹಾಗೆಯೇ ನಿತ್ಯಜ್ಞಾನವುಳ್ಳವನಾದಾಗ್ಯೂ ಸ್ತೋತ್ರ ಮಾಡಿದುದಕ್ಕೆ ಫಲವನ್ನು ಕೊಡುವುದಕ್ಕಾಗಿ ಸ್ತುತಿಯನ್ನು ವಿಶೇಷತಃ ತಿಳಿ ಎಂದು ಪ್ರಾರ್ಥಿಸಿಕೊಳ್ಳಲ್ಪಡುತ್ತಾನೆ. (ಪ್ರಸಿದ್ಧ ಅಗ್ನಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ) ಜರಾಬೋಧ=ಎಲೋ ಅಗ್ನಿಯೇ ರೋಗ ಪರಿಹಾರಕನಾದ ನಿನಗಾಗಿ ನಿನ್ನದ್ವಾದ ಸ್ತೋತ್ರವನ್ನು ವಿಶೇಷತಃ ತಿಳಿ. ಈಶಾಯ ಎಂದು ಹೇಳುವಾಗ ಶಿವನೂ ಕೂಡ ರುದ್ರನೆನಿಸುತ್ತಾನೆಂದು ಸೂಚಿತವಾತಯ್ತು.

॥೧೦॥೨೩॥

ಋ ॥ (೭೧೦) ಸ ನೋ ಮಹಾಂ ಅನಿಮಾನೋ ಧೂಮಕೇತುಃ ಪುರುಶ್ಚಂದ್ರಃ । ದಿಯೇ ವಾಜಾಯ ಹಿನ್ವತು ॥೧೧॥

ಅ ॥ ಅನಿಮಾನಃ=(ನಿತರಾಂ ನ ವಿದ್ಯತೇ ಮಾನಂ ಮಿತಿಃ ಯಸ್ಯ ಎಂಬ ವ್ಯುತ್ಪತ್ತಿಯಿಂದ) ಅತ್ಯಂತವಾಗಿ ಮಿತಿಯಿಲ್ಲವಿರುವನಾದುದರಿಂದ, ಮಹಾನ್ ದೊಡ್ಡ ಪರಿಮಾಣವುಳ್ಳವನು, ಪುರುಶ್ಚಂದ್ರಃ=(ಚದಿ ಆಹ್ಲಾದನೇ. ದೀಪ್ತೌಚ) ಅತಿಶಯವಾಗಿ ಆಹ್ಲಾದವನ್ನುಟುಮಾಡುವವನಾದುದರಿಂದ ಪೂರ್ಣ ಸುಖವುಳ್ಳವನು, ಸಃ=ಸರ್ವತ್ರ ಪ್ರಸಿದ್ಧನು, ಧೂಮಕೇತುಃ=ಧೂಮವು ಅಗ್ನಿಯ ಊರ್ಧ್ವ ಭಾಗದಲ್ಲಿದ್ದ ಪ್ರಯುಕ್ತ ಪತಾಕಾ ಸ್ಥಾನೀಯವಾಗಿದೆ. ಆದಕಾರಣ ಪ್ರಸಿದ್ಧಾಗ್ನಿಯು ಧೂಮಕೇತುವೆನಿಸುತ್ತಾನೆ. (ವಿಷ್ಣು ಪಕ್ಷದಲ್ಲಾದರೂ ಧೂಮಕೇತುಃ=(ಧೂಞ್‌ಕಂಪನೇ) ಧೊತ್ಕರೋತೀತಿ ಧೂಮಃ =ರೆಕ್ಕೆಗಳ ಗಾಳಿ ಮೊದಲಾದುವುಗಳಿಂದ ಸ್ವಾಭಾವಿಕವಾಗಿಯೇ ಶತ್ರುಗಳನ್ನು ನಡುಗಿಸುವುದರಿಂದ ಧೂಮಃ=ಗರುಡನು, ಕೇತುರ್ಯಸ್ಯ ಎಂಬವ್ಯುತ್ಪತ್ತಿಯಿಂದ ಗರುಡನು ಪತಾಕಾ ಸ್ಥಾನೀಯನಾಗಿ ಉಳ್ಳವನು ಇಂತಹ ಅಗ್ನಿಯು ಶ್ರೀವಿಷ್ಣುವು, ನಃ =ನಮ್ಮನ್ನು ಧಿಯೇ=ಜ್ಞಾನಕ್ಕಾಗಿಯೂ ವಾಜಾಯ=ಅನ್ನಾದಿಗಳಿಗಾಗಿಯೂ, ಹಿನ್ವತು=(ಹಿ ಗತೌ, ವೃದ್ಧೌಚ) ಯಾವ ಕರ್ಮಗಳಿಂದ ಒಳ್ಳೇ ಜ್ಞಾನವುಳ್ಳವರೂ ಅನ್ನವುಳ್ಳವರೂ ಆಗುವೆವೋ ಅಂತಹ ಸತ್ಕರ್ಮಗಳನ್ನು ಮಾಡುವ ವಿಷಯದಲ್ಲಿ ಪ್ರೇರೇಪಿಸಲಿ. ॥೧೧॥

ಭಾ ॥ (೧) ನಿತರಾಮಮಿತತ್ವೇನ ಮಹಾನ್ ಪುರುಸುಖಶ್ಚ ಸಃ । ಧೂತ್ಕರೋತಿ ಗರುತ್ಮಾನ್ ಯದ್ವರೇಶ್ಚೇದ್ಧೂಮಕೇತುತಾ ॥ ತಾಚ್ಛೀಲ್ಯೇ ಮ ಇತಿ ಹ್ಯಸ್ಮಾತ್ ಸೂತ್ರಾದ್ಧೂಮ ಇತೀರಿತಃ।ಜ್ಞಾನಾಯಾನ್ನಾಯ ಚಸ ನಃ ಪ್ರಹಿಣೋತು ಸುಕರ್ಮಣಾಂ ॥೧೧॥

ಅ ॥ ಚೆನ್ನಾಗಿ ಮಿತಿಯಿಲ್ಲದಿರುವವನಾದುದರಿಂದ ಅತಿ ದೊಡ್ಡ ಪರಿಮಾಣವುಳ್ಳವನೂ ಪೂರ್ಣ ಸುಖವುಳ್ಳವನು, (ಶ್ರೀಹರಿಗೆ ಧೂಮಕೇತುತ್ವವು ಹೇಗೆಂದರೆ) ಶ್ರೀಹರಿಗೆ ಧೂಮಕೇತುತ್ವವು ವಿವಕ್ಷಿತವಾಗುವುದಾದರೆ ಆಗ ಧೂಞ್ ಕಂಪನೇ ಎನ್ನುವುದರಿಂದ, ತಾಚ್ಛೀಲ್ಯ ಎಂಬ ಅರ್ಥದಲ್ಲಿ ಮಃ ಪ್ರತ್ಯಯವು ಎಂಬ ಮಹಾವ್ಯಾಕರಣ ಸೂತ್ರದಿಂದ ಮ ಪ್ರತ್ಯಯವನ್ನು ಮಾಡೋಣ, ಯಾವ ಕಾರಣದಿಂದ ಗರುಡನು ಸ್ವಭಾವತ ಏವ ಶತ್ರುಗಳನ್ನು ನಡುಗಿಸುತ್ತಾನೋ, ಆದ ಕಾರಣ ಗರುಡನು ಧೂಮಃ ಎನಿಸುತ್ತಾನೆ. ಅಂತಹ ಗರುಡನು ಪತಾಕೆಯಾಗಿ ಉಳ್ಳವನು. ಶ್ರೀಹರಿಯು ನಮ್ಮನ್ನು ಜ್ಞಾನಕ್ಕಾಗಿಯೂ ಅನ್ನಕ್ಕಾಗಿಯೂ ಸತ್ಕರ್ಮಗಳನ್ನು ಮಾಡುವ ವಿಷಯದಲ್ಲಿ ಪ್ರೇರೇಪಿಸಲಿ. ॥೧೧॥

ಋ ॥ (೩೧೧) ಸ ರೇವಾ ಇವ ವಿಶ್ಪತಿರ್ದೈವ್ಯಃ ಕೇತುಃ ಶೃಣೋತು ನಃ । ಉಕ್ಥೈರಗ್ನಿರ್ಬೃಹದ್ಭಾನುಃ ॥೧೨॥

ಅ ॥ ವಿಶ್ಪತಿರಿವ=ರಾಜನಂತೆ, ರೇವಾನ್=ದ್ರವ್ಯವುಳ್ಳ, ದೈವ್ಯಃ=ದೇವತೆಗಳದ್ದಾದ, ಕೇತುಃ=(ಮುಂದೆ ಹೋಗುವುದರಿಂದ) (ದೇವತೆಗಳಿಗೆ) ಪತಾಕೆಯಂತಿರುವ, ಬೃಹದ್ಭಾನುಃ=ಪೂರ್ಣ ತೇಜಸ್ಸುಳ್ಳ, ಸಃ ಅಗ್ನಿಃ=ಈ ಅಗ್ನಿನಾಮಕ ಶ್ರೀಹರಿಯೂ ನಃ=ನಮ್ಮ, ಉಕ್ಥೈಃ=ಸ್ತೋತ್ರಗಳನ್ನು ಶೃಣೋತು=(ಶ್ರುಶ್ರವಣೇ) ಕೇಳಲಿ. ॥೧೨॥

ಭಾ ॥ ದೇವಾನಾಂ ಕೇತುಭೂತೋಽಸೌ ವಿತ್ತವಾನ್ ವಿಶ್ಪತಿರ್ಯಥಾ । ಅಸ್ಮದೀಯಾನಿ ಚೋಕ್ಥಾನಿ ಬೃಹತ್ತೇಜಾಃ ಶೃಣೋತು ॥೧೨॥

ಅ ॥ ರಾಜನು ಹೇಗೋ ಹಾಗೆ ದ್ರವ್ಯವುಳ್ಳವನು, ಮುಂದೆ ಹೋಗುವುದರಿಂದ ದೇವತೆಗಳಿಗೆ ಕೇತುವಿನಂತೆ

ಇರುವವನು, ಪೂರ್ಣ ತೇಜಸ್ಸುಳ್ಳವನು, ಇಂತಹ ಅಗ್ನಿಯು ನಮ್ಮ ಸ್ತೋತ್ರಗಳನ್ನು ಕೇಳಲಿ ||೧೨||

**ಋ || (೩೧೨) ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ।**

**ಯುವಭ್ಯೋ ನಮ ಆಶಿನೇಭ್ಯಃ ।**

**ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ||೧೩||೨೪||೨೭||**

ಅ || ಮಹದ್ಭ್ಯಃ=ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನಗಳಾದ ಭಗವಂತನ ರೂಪ ವಿಶೇಷಗಳಿಗೋಸ್ಕರ, ನಮಃ =ನಮಸ್ಕಾರವು ಅರ್ಭಕೇಭ್ಯಃ=ಲೋಕದೃಷ್ಟಿಯಿಂದ ಅರ್ಭಕ ಪರಿಮಾಣವುಳ್ಳ ಭಗವಂತನ ರೂಪ ವಿಶೇಷಗಳಿಗೋಸ್ಕರ, ನಮಃ=ಯುವಭ್ಯಃ=ತರುಣ ಪರಿಮಾಣವುಳ್ಳ ರೂಪ ವಿಶೇಷಗಳಿಗೋಸ್ಕರ, ನಮಃ, ಆಶಿನೇಭ್ಯಃ=ಭಗವಂತನ ಬಹುರೂಪ ವಿಶೇಷಗಳಿಗೋಸ್ಕರ, ನಮಃ=ನಮಸ್ಕಾರವು. ದೇವಾಃಕ್ರೀಡಾದಿ ಗುಣ ಸಂಪನ್ನಗಳಾದ ಭಗದ್ರೂಪಗಳೇ, (ಯಜ್ಞಸ್ತಂಭದಿಂದ ವೋಚಿತರಾದ ನಾವು) ಯದಿ ಶಕ್ನವಾಮ=(ಶಕ್ಲೃ ಶಕ್ತೌ) ಯಾಗ ಮಾಡುವುದಲ್ಲಿ ಶಕ್ತಿಯುಳ್ಳವರು ಆದರೆ, ದೇವಾನ್=ನಾರಾಯಣಾದಿ ಸಮಸ್ತ ದೇವತೆಗಳನ್ನು ಯಜಾಮ=ಪೂಜಿಸುವೆವು. (ಶಕ್ತಿಯಿಲ್ಲವಾದರೆ) ಜ್ಯಾಯಸಃ=ಶ್ರೇಷ್ಠಗಳಾದ ಭಗವದ್ರೂಪ ವಿಶೇಷಗಳ, ಶಂಸಂ=ಕೇವಲ ಸ್ತುತಿಯನ್ನು ಮಾ ಆವೃಕ್ಷಿ=(ಓವೃಶ್ಚೂಚ್ಛೇದನೇ) ಲುಪ್ತವನ್ನಾಗಿ ಮಾಡುವುದಿಲ್ಲ. (ಸ್ತುತಿ ಮಾಡದಿರುವುದಿಲ್ಲ.) (ಸ್ತುತಿ ಮಾಡುತ್ತಾ ಇರುತ್ತೇವೆ.) ಅಥವಾ ಮಹದ್ಭ್ಯಃ=ನಾರಾಣಾದಿ ಇಂದ್ರ ಪರ್ಯಂತ ದೇವತೆಗಳಿಗೋಸ್ಕರ, ನಮಃ, ಅರ್ಭಕೇಭ್ಯಃ=ರುದ್ರಾದಿ ಪಿತೃ ಸಂಬಂಧ ಪ್ರಸಿದ್ಧಿಯುಳ್ಳ ಸ್ಕಂದ ಇಂದ್ರಾದಿ ದೇವತೆಗಳಿಗೋಸ್ಕರ, ನಮಃ, ಯುವಭ್ಯಃ=ಸ್ಕಂದ ಇಂದ್ರಾದಿ ದೇವತೆಗಳದ್ವೇ ತರುಣರೂಪ ವಿಶೇಷಗಳಿಗೋಸ್ಕರ, ನಮಃ, ಆಶಿನೇಭ್ಯಃ =ಸ್ಕಂದಾದಿಗಳದ್ವೇ ಬಹುರೂಪಗಳಿಗೋಸ್ಕರ ನಮಃ ನಮಸ್ಕಾರವು. (ದೇವಪದದಿಂದ ನಾರಾಯಣಾದಿ ಸಮಸ್ತ ದೇವತೆಗಳನ್ನು ಇಟ್ಟುಕೊಳ್ಳಬೇಕು.) ||೧೩||

**ಭಾ || (೧) ಅಥ । ನಾರಾಯಣ ಬ್ರಹ್ಮಪುರಸ್ಸರಾಸ್ತು ದೇವಾ ಮಹಾಂತಃ ಶಿಶವಃ ಸ್ಕಂದಪೂರ್ವಾ । ವಟು ಸ್ವರೂಪಾಶ್ಚ ತಏವ ಕುತ್ರಚಿತ್ ಯುವಾನ ಇಂದ್ರಾದಯ ಏತ ಏವ || (೨) ಮಹತ್ತ್ವಮೇಷಾಂ ಗುಣತೋಽಪಿ ಯೂನಾಮಿಂದ್ರಾದಯೋ ಮಧ್ಯಗುಣಾಯುವಾನಃ || (೩) ಆಪೇಕ್ಷಿಕಾಲ್ಪೈಶ್ಚ ಗುಣೈಸ್ತದೀಯೈಃ ಸಮೀರಿತಾ ಆಶಿನಾ ಅರ್ಭಕಾಶ್ಚ । (೪) ಕೃತಂ ನಮಃ (೫) ಶಕ್ತಿಮಂತೋ ಯಜಾಮ ನ ಜ್ಯಾಯಸಾಂ ಸ್ತುತಿಮಾತ್ರಂ ಲುಪಾಮಃ (೬) ಏಕಸ್ಯ ವಿಷ್ಣೋರಪಿ ರೂಪಭೇದಾ ಅಣೀಯಾಂಸಃ ಸಂತ್ಯಥವಾ ಮಹಾಂತಃ || (೭) ಯುವತ್ವಸಾಮ್ಯೇಽಪಿ ಮಹತ್ತ್ವಭೇದಾದ್ಯುವಾ ಮಹಾನಿತ್ಯಪಿ ಭೇದ ಉಕ್ತಃ ||೧೩||೨೪||೮||**

ಅ || (೧) ಇನ್ನು ಮುಂದೆ ದೇವತೆಗಳು ಸ್ತುತಿಸಲ್ಪಡುತ್ತಾರೆ. (ಮಹದಾದಿ ಶಬ್ದ ನಿರ್ದಿಷ್ಟರಾದ ದೇವತೆಗಳನ್ನು ಹೇಳುತ್ತಾರೆ.) ಶ್ರೀನಾರಾಯಣನು ಬ್ರಹ್ಮನು ಇವರೇ ಮೊದಲಾದ ದೇವತೆಗಳಾದರೂ ಮಹಾಂತಃ ಎನಿಸುತ್ತಾರೆ. ಸ್ಕಂದನೇ ಮೊದಲಾದ ದೇವತೆಗಳು ಶಿಶುಗಳು ಅರ್ಭಕರನಿಸುತ್ತಾರೆ. ವಟುಸ್ವರೂಪರಾದ ಸ್ಕಂದ ಇಂದ್ರಾದಿಗಳೇ ಆಶೀನರು

ಎನಿಸುತ್ತಾರೆ. (ಅಶ್ನುವಂತಿ ವ್ಯಾಪ್ನುವಂತಿ ಶ್ರೌತಂ ಸ್ಮಾರ್ತಂಚಕರ್ಮ ತೇ=ಶ್ರುತ್ಯುಕ್ತ ಕರ್ಮಗಳನ್ನು ಸ್ಮೃತ್ಯುಕ್ತ ಕರ್ಮಗಳನ್ನೂ ಚೆನ್ನಾಗಿ ಮಾಡಿಕೊಂಡಿರುವವರು ಆಶೀನರರು ಎನಿಸುತ್ತಾರೆ.) ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ ನಮೋ ಯುವಭ್ಯೋ ನಮಆವಟುಭ್ಯಃ। ಎಂದು ನಮ ಆವಟುಭ್ಯಃ ಎಂದು ಭಾಗವತ ಪುರಾಣ ಸಮಾಖ್ಯೆಯಿಂದ ಆಶಿನ ಶಬ್ದವು ವಟುವಾಚಕವು.) ಅರ್ಭಕರು ಇತ್ಯಾದಿಗಳಿಂದ ಹೇಳಲ್ಪಟ್ಟ ಆ ಸ್ಕಂದ ಇಂದ್ರಾದಿ ದೇವತೆಗಳೇ ಕುತ್ರ ಚಿತ್ ಕೆಲವು ರೂಪ ವಿಶೇಶಗಳಲ್ಲಿ ಯುವಾನಃ ಎನಿಸುತ್ತಾರೆ. (೩) ಪ್ರಕಾರಾಂತರದಿಂದ ಸರ್ವದಾತರುಣರೇ ಆದ ನಾರಾಯಣಾದಿ ರೂಪ ವಿಶೇಷಗಳಿಗೆ ಮಹತ್ತ್ವವನ್ನು ವ್ಯಾಖ್ಯಾನ ಮಾಡುತ್ತಾರೆ.) ಯಾವ ಕಾರಣದಿಂದ ನಾರಾಯಣಾದಿ ರೂಪಗಳಿಗೆ ಜ್ಞಾನ ಆನಂದ ಮೊದಲಾದ ಗುಣಗಳಿಂದ ಮಹತ್ತ್ವವು ಹೇಳಲ್ಪಡುತ್ತದೋ, ವಾರ್ಧಿಕ್ಯದಿಂದ ಅಲ್ಲವೋ ಆದಕಾರಣ ತರುಣಗಳೇ ಆದ ಈ ನಾರಾಯಣಾದಿರೂಪಗಳಿಗೆ ಮಹತ್ತ್ವವು ಕೂಡುತ್ತದೆ. ತರುಣರೇ ಆದ ಇಂದ್ರಾದಿಗಳು ಮಧ್ಯಮ ಗುಣವುಳ್ಳವರು. (3) ಆ ಇಂದ್ರಾದಿದೇವತೆಗಳೇ, ಅವರವರದ್ವಾಗ ತಮ್ಮ ಅಪೇಕ್ಷಿತಗಳಾದ ಅಲ್ಪಗುಣಗಳಿಂದ ಆಶಿನಾಃ=ವಟುಗಳು. ಅರ್ಭಕರೂ ಎಂದೂ ಹೇಳಲ್ಪಡುತ್ತಾರೆ. (4) ಹೀಗೆ ಮಹದಾದಿ ಪದಾರ್ಥಗಳನ್ನು ಹೇಳಿ ಪೂರ್ವಾರ್ಧ ವಾಕ್ಯಾರ್ಥವನ್ನು ಹೇಳುತ್ತಾರೆ.) ಮಹದಾದಿ ದೇವತೆಗಳಿಗೋಸ್ಕರ ನಮ್ಮಿಂದ ನಮಸ್ಕಾರವು ಮಾಡಲ್ಪಟ್ಟಿತು. (5) (ಈಗ ಉತ್ತರಾರ್ಧವನ್ನು ವ್ಯಾಖ್ಯಾನ ಮಾಡುತ್ತಾರೆ.) (ದೇವತೆಗಳಿಂದ ಯಜ್ಞಸ್ತಂಭದಿಂದ ಬಿಡಿಸಿಕೊಡಲ್ಪಟ್ಟ ನಾವು ಯಾಗಮಾಡುವುದರಲ್ಲಿ) ಶಕ್ತಿಯುಳ್ಳವರಾಗಿ ಆದರೆ ದೇವತೆಗಳನ್ನು ಪೂಜಿಸುವೆವು. (ಶಕ್ತಿಯುಲ್ಲವಾದರೂ) ಶ್ರೇಷ್ಠರಾದ ದೇವತೆಗಳ ಸ್ತುತಿ ಮಾತ್ರವನ್ನು ಲೋಪಿಸುವುದಿಲ. (ಸ್ತುತಿಮಾಡುತ್ತಾ ಇರುತ್ತೇವೆ.) (ಎಲೋ ದೇವತೆಗಳಿರಾ ಎಷ್ಟು ಮಾತ್ರಕ್ಕೂ ಸ್ತುತಿ ಮಾಡದೆ ಇರುವುದಿಲ್ಲ.) (6) (ಮಹದ್ಭ್ಯಃ ಇತ್ಯಾದಿ ಶಬ್ದಗಳಿಂದ ಸಮಸ್ತ ದೇವತೆಗಳೂ ವಿವಕ್ಷಿತರಾದರೆ ಹೀಗೆ ವ್ಯಾಖ್ಯಾನವಿರಲಿ. ಮಹದ್ಭ್ಯಃ ಇತ್ಯಾದಿ ಶಬ್ದಗಳಿಂದ ವಿಷ್ಣುವೊಬ್ಬನನ್ನೇ ಇಟ್ಟುಕೊಂಡರೆ ಆಗ ಏನು ಅರ್ಥವು ಎಂದರೆ) ಒಬ್ಬ ವಿಷ್ಣುವಿಗೂ ಕೂಡ ರೂಪ ವಿಶೇಷಗಳು ಇವೆ ಅಣುರೂಪಗಳು ಅಥವಾ ಮಧ್ಯಮ ರೂಪಗಳು (ಅಣುತ್ವ ಮಹತ್ತ್ವಗಳೆಂಬ ಎರಡು ಪ್ರಕಾರಗಳಿರುವವುಗಳು) ಮಹದ್ರೂಪಗಳು. (7) (ಪ್ರಕೃತವೇನಾಯಿತೆಂದರೇ ಅರ್ಭಕ ಆಶಿನಗಳಿಗೆ ತಾರುಣ್ಯವು ಸಮವಾದುದಾಗ್ಯೂ ಪರಿಮಾಣಭೇದದಿಂದ ಯುವಾಮಹಾನ್ ಎಂದೂ ಭೇದವು ಉಕ್ತವಾಗಿದೆ.

ವಿ॥ ಇಂದ್ರಾದಿಗಳು ತರುಣರು ಎಂದಾದರೆ ಪುನಃ ಅವರೇವೇ ಆಶಿ ನರು (ವಟುಗಳು) ಹೇಗೆ ಆಗುವರು ಎಂದರೆ ಶ್ರೀವಿಷ್ಣುವಿಗಿಂತ ಬ್ರಹ್ಮಾದಿಗಳು ಮಧ್ಯಮ ಗುಣಗಳುಳ್ಳವರಾದುದರಿಂದ ಯುವಾನಃ=ತರುಣರು ಎನಿಸುತ್ತಾರೆ. ಆ ಬ್ರಹ್ಮಾದಿಗಳಿಗಿಂತ ಅಲ್ಪ ಗುಣಗಳುಳ್ಳವರು, ನಮಗಿಂತ ಬಹ್ವಧಿಕ ಗುಣಗಳುಳ್ಳವರು ಹೀಗೆ ಇಟ್ಟುಕೊಂಡು ಇಂದ್ರಾದಿಗಳೇ ಆಶಿನರು ವಟುಗಳೆನಿಸುತ್ತಾರೆ. ಒಂದೇ ಕಡೆಯಲ್ಲಿ ಮೂರು ಪ್ರಕಾರಗಳು ಹೇಗೆಂದರೆ-ಕೆಲವು ರೂಪ ವಿಶೇಷಗಳಲ್ಲಿ, ಕೆಲವು ಅವಸ್ಥಾ ವಿಶೇಷಗಳಲ್ಲಿ, ಕೆಲವು ಪರಿಮಾಣ ವಿಶೇಷದಲ್ಲಿ. ಹೀಗೆ ನಾರಾಯಣಾದಿ ರೂಪಗಳಲ್ಲಿ ಮಹತ್ತ್ವಾದಿಗಳನ್ನು ವಿವಕ್ಷಾಮಾಡಿಕೊಳ್ಳಬೇಕು. ಅಂದರೆ-ನಾರಾಯಣನನ್ನಾರಂಭಿಸಿ ಇಂದ್ರ ಪರ್ಯಂತರಾದವರು ಅವಾಂತರ ಪಿತ್ರಾದಿ ಸಂಬಂಧ ಪ್ರಸಿದ್ಧಿಯಿಲ್ಲದವರು, ಮಹಾಂತಃ, ಎನಿಸುತ್ತಾರೆ. ಶಿವ ಮೊದಲಾದ ಪಿತ್ರಾದಿಗಳ ಸಂಬಂಧವುಳ್ಳ ಪ್ರಸಿದ್ಧರಾದ ಸ್ಕಂದ ಇಂದ್ರಾದಿ ದೇವತೆಗಳು ಅರ್ಭಕರೆನಿಸುತ್ತಾರೆ. ಅವರೇವೇ ರೂಪ ವಿಶೇಷಗಳಲ್ಲಿ ಯುವಾನಃ=ತರುಣರೂ, ಆಶಿನಾಃ =ವಟುಗಳು ಎಂದೂ ಅನಿಸುತ್ತಾರೆ. ಎಂದುಕ್ತವಾಯ್ತು. ಇದರಿಂದ ನಾರಾಯಣಾದಿ ಎಲ್ಲಾ ದೇವತೆಗಳೂ ನಿರ್ಜರರು (ಮುದಿತನವಿಲ್ಲದವರು) ಆದುದರಿಂದ ಇವರಿಗೆ ಮಹತ್ತ್ವವು ಹೇಗೆಂದರೆ ಇವರು ಸರ್ವದಾ ತರುಣರೇ ಆದಾಗ್ಯೂ ಇವರಿಗೆ

ಪ್ರಕಾರ ಭೇದದಿಂದ ಮಹತ್ತ್ವಾದಿಗಳೂ ಕೂಡುತ್ತವೆ. (೨) ಶ್ರೀನಾರಾಯಣಾದಿ ಭಗವದ್ರೂಪಗಳಂತೆ ಅನಂತ ಗುಣಗಳೂ ಇಲ್ಲ. ಅಸ್ಮದಾದಿಗಳಂತೆ ಅತ್ಯಲ್ಪ ಗುಣಗಳೂ ಇಲ್ಲ. ಆದಕಾರಣ ಮಧ್ಯಮ ಗುಣಗಳುಳ್ಳವರಾದುದರಿಂದ ಯುವಾನ ಏವ ತರುಣರೇ ಆದ ಇಂದ್ರಾದಿ ದೇವತೆಗಳು ಬ್ರಹ್ಮನೇ ಮೊದಲಾದ ಮಧ್ಯಮ ಗುಣಗಳುಳ್ಳ ತರುಣರನ್ನಪೇಕ್ಷಿಸಿ ಅಲ್ಪ ಗುಣಗಳುಳ್ಳವರಾದುದರಿಂದಲೂ, ಅಲ್ಪ ಗುಣಗಳುಳ್ಳ ಅಸ್ಮದಾದಿಗಳಿಗಿಂತ ಅಧಿಕ ಗುಣಗಳುಳ್ಳವರಾದುದರಿಂದಲೂ, ಆಶಿನರು ಎನಿಸುತ್ತಾರೆ. ನಾರಾಯಣಾದಿ ಭಗವದ್ರೂಪಗಳಿಗಿಂತ ಅಲ್ಪ ಗುಣಗಳುಳ್ಳವರಾದುದರಿಂದ ಅರ್ಭಕರೆಂದೂ ಅನಿಸುತ್ತಾರೆ. (೩) ಮಹದ್ಭ್ಯಃ ಇತ್ಯಾದಿಗಳಿಗಿಂತ ಭಗವದ್ರೂಪಗಳನ್ನೇ ವಿವಕ್ಷಾ ಮಾಡಿಕೊಳ್ಳುವುದಾದರೆ - ಅವ್ಯಾಕೃತಾಕಾಶಾದಿಗಳಲ್ಲಿರತಕ್ಕ ವ್ಯಾಪ್ತಗಳಾದ ಭಗವದ್ರೂಪ ವಿಶೇಷಗಳು ಮಹಾಂತಃ ಎನಿಸುತ್ತದೆ. ಮನಸ್ಸು ಮೊದಲಾದುವುಗಳಲ್ಲಿರತಕ್ಕ ಅಣುರೂಪಗಳಾದ ವಾಮನ ಮೊದಲಾಡ ಭಗವದ್ರೂಪಗಳು ವಟು ರೂಪಗಳು. ರಾಮ ಮೊದಲಾದ ಭಗವದ್ರೂಪಗಳು ಯುವಾನಃ=ತರುಣ ರೂಪಗಳು. ॥೧೩॥೨೪॥೮॥

ಅವ ॥ ೯ ಋಕ್ಕುಗಳು. ೨ ವರ್ಗಗಳು. ೨೮ನೇ ಸೂಕ್ತವು. ಅದರಲ್ಲಿ ಮೊದಲಿನ ೪ ಋಕ್ಕುಗಳು ಇಂದ್ರ ದೇವತಾಕಗಳು. ಅನುಷ್ಟುಬ್ ಛಂದಸ್ಕಗಳು.

**ಋ ॥ (೩೧೩) ಯತ್ರ ಗ್ರಾವಾ ಪೃಥು ಬುಧ್ನ ಊರ್ಧ್ವೋ ಭವತಿ ಸೋತವೇ ।**

**ಉಲೂಖಲಸುತಾನಾಮವೇದ್ವಿಂದ್ರ ಜಲ್ಗುಲಃ ॥೧॥**

ಅ ॥ (ಪಾಶದಿಂದ ಬಿಡುಗಡೆ ಹೊಂದಿದ ಶುನಃಶೇಪನು ಈ ಋಕ್ಕುಗಳಿಂದ ಹೋಮಿಸಿದನು.) ಹೇ ಜಲ್ಗುಲಃ =(ಜರಸ್ತುತೌ, ಗುರುಸ್ವೀಕಾರೇ, ಜರಂಗುರತಿ=ಸ್ತೋತ್ರವನ್ನು ಸ್ವೀಕರಿಸುತ್ತಾನೆ. ರೋಲಃ=ರೇಫಕ್ಕೆ ಲಕಾರವು. ಜಲ್ಗುಲಾಃ) ನಾವು ಮಾಡುವ ಸ್ತೋತ್ರವನ್ನು ಸ್ವೀಕರಿಸುವ, ಇಂದ್ರ=ಶ್ರೀಹರಿಯೇ, ಯತ್ರ ಯಾವ ಯಜ್ಞದಲ್ಲಿ, ಪೃಥು ಬುಧ್ನಃ =ವಿಸ್ತೀರ್ಣಗಳಾದ ಕೆಳಭಾಗಗಳುಳ್ಳ, ಊರ್ಧ್ವ=ಊರ್ಧ್ವ ದೇಶ ಸಂಬಂಧಿಗಳಾದ, (ಸೋಮ ರಸವನ್ನು ಹಿಂಡಲಿಕ್ಕೆ ಋತ್ವಿಜರಿಂದ ಮೇಲಕ್ಕೆ ಎತ್ತಲ್ಪಟ್ಟ) ಗ್ರಾವಾ=ಕಲ್ಲುಗಳು. ಸೋತವೇ=(ಷೂಞ್ ಅಭಿಷವೇ) ಸೋಮ ರಸವನ್ನು ಹಿಂಡುವುದಕ್ಕಾಗಿ ಭವಂತಿ=ಆಗುತ್ತವೋ, (ಅಂತಹ ಯಜ್ಞದಲ್ಲಿ) ಉಲೂಖಲಸುತಾನಾಂ=ಉಲೂಖಲದಲ್ಲಿ (ಸೋಮ ರಸವನ್ನು ಹಿಂಡಿ ಇಟ್ಟುಕೊಳ್ಳುವ ಪಾತ್ರದಲ್ಲಿ) ಹಿಂಡಲ್ಪಟ್ಟ ನಮ್ಮದ್ದಾದ ಸೋಮ ರಸಗಳನ್ನು ಅವ ಇತ್ ಉ=ಸರ್ವಥಾ ಹೊಂದಲೇಬೇಕು. ಹೊಂದುತ್ತಿ. ಅಧ್ಯಾತ್ಮ ರೂಪ ಅರ್ಥದಲ್ಲಿ ಯಾವ ಜ್ಞಾನ ಯಜ್ಞದಲ್ಲಿ, ಪೃಥುಬುಧ್ನಃ=ವಿಸ್ತಾರವಾದ ಮೂಲಪ್ರದೇಶವುಳ್ಳದ್ದು ಊರ್ಧ್ವ=ಮಾತಾಡಲು ಉದ್ಯುಕ್ತವಾದ, ಗ್ರಾವಾ=ವಾಗಿಂದ್ರಿಯವು, ಸೋಮಂ=ಮನಸ್ಸನ್ನು, ಸೋತವೇ ವೇದ ವಾಕ್ಯವನ್ನು ಪರ್ಯಾಲೋಚಿಸುತ್ತಾ ವಿಚಾರ ಮಾಡಲಿಕ್ಕೆ ಆಗುತ್ತದೋ, ಅಂತಹ ಯಜ್ಞದಲ್ಲಿ ಉಲೂಲೂಖಲಸುತಾನಾಂ=ಭೂಮಿಗಿಂತ ಎತ್ತರದಲ್ಲಿರುವ, ಧ್ಯಾನಗಳನ್ನು ಪುಡಿಮಾಡುವ ಉಜಿಡೆಯಲ್ಲಿ ಅಂದರೆ ಉಜಿಡೆಗೆ ಸದೃಶವಾದ ಶರೀರದಲ್ಲಿರುವ ಮನೋವೃತ್ತಿ ವಿಶೇಷಗಳನ್ನು ಅವ ಇತ್ ಉ=ಸರ್ವಥಾ ಹೊಂದಲೇ ಹೊಂದುತ್ತಿ. ॥೧॥

**ಭಾ ॥ (೧) ವಿಸ್ತೀರ್ಣಾಧಸ್ತನಾ ಯತ್ರ ಗ್ರಾವಾಣೋಽಭಿಷವೋದ್ಧೃತಾಃ । ಧಿಷಣಾಭಿಷುತಾನ್ ಸೋಮಾನವ ನಃ**

**ಸ್ವೀಕೃತಸ್ತುತೇ|| (೨) ಗುರು ಸ್ವೀಕಾರ ಇತ್ಯಸ್ಮಾದ್ಧಾತೋಃ ಸ್ತುತ್ಯೋಹಿ ಜಲ್ಗುಲಃ ||೧||**

ಅ || ನಾವು ಮಾಡುವ ಸ್ತೋತ್ರವನ್ನು ಸ್ವೀಕರಿಸುವ ಇಂದ್ರನೇ ಯಾವ ಯಜ್ಞದಲ್ಲಿ ವಿಸ್ತಾರವಾದ ಅಧಸ್ತನ ಭಾಗಗಳುಳ್ಳವುಗಳು, ಧಿಷಣ=(ಸಂಹತೌ ಹಿಂಸಾಯಾಂಚ, ಹಿಂಸಾರ್ಥಕವಾದ ದೃಷ್ ಧಾತುವಿಗೆ ಧಿಷ ಆದೇಶವು. ಅನಾದೇಶ) ಉಜಿಡೆಯಲ್ಲಿ ಹಿಂಡಲ್ಪಟ್ಟ ಸೋಮವನ್ನೂ (ಷೂ ಜ್ ಅಭಿಷವೇ) ಹಿಂಡಲಿಕ್ಕೆಋತ್ವಿಜರಿಂದ ಮೇಲಕ್ಕೆ ಎತ್ತಲ್ಪಟ್ಟ ಪಾಷಾಣಗಳು ಇವೆಯೋ, ಅಲ್ಲಿ ಸೋಮ ಪಾತ್ರದಲ್ಲಿ ಹಿಂಡಲ್ಪಟ್ಟ ನಮ್ಮದ್ದಾದ ಸೋಮಗಳನ್ನು ಹೊಂದು. ಅವಧಾತುವು, ಅವ ರಕ್ಷಣ ಗತಿ ಇತ್ಯಾದ್ಯರ್ಥಗಳಲ್ಲಿ. ಪ್ರಕೃತ ಅವಾಪ್ತ್ಯರ್ಥಕವು) (ಜಲ್ಗುಲಃ ಎನ್ನುವುದಕ್ಕೆ ಸ್ವೀಕೃತ ಸ್ತುತಿ ಎನ್ನುವ ಅರ್ಥವು ಹೇಗೆ ಆಗುವುದೆಂದರೆ ಗುರುಸ್ವೀಕಾರೇ ಎಂಬ ಧಾತು ವ್ಯಾಖ್ಯಾನದಿಂದ ಸ್ತುತಿಯನ್ನು ಸ್ವೀಕರಿಸುವವನು ಜಲ್ಗುಲಃ ಎನಿಸಿಉತ್ತಾನೆ. (ಜರ, ಗುರ, ಎಂಬುವ ಎರಡು ಕಡೆಯಲ್ಲಿಯೂ ರೋಲಃ ಎನ್ನುವುದರಿಂದ ರೇಫಕ್ಕೆ ಆಕಾರವು, ಜರಂ ಗುರತೀತಿ ಜಲ್ಗುಲಾಃ ಸಂಬುದ್ಧಿಯು, ಜಲ್ಗುಲಃ ಎಂದು. ||೨||

**ಋ (೩೧೪) ಯತ್ರ ದ್ವಾವಿವ ಜಘುನಾ ಧಿಷವಣ್ಯಾ ಕೃತಾ | ಉಲೂಖಲ ಸುತಾನಾ ಮವೇದ್ವಿಂದ್ರ ಜಲ್ಗುಲಃ ||೨||**

ಅ || (ಇಲ್ಲಿ ಸೋಮವನ್ನು ಹಿಂಡಲಿಕ್ಕೆ ಹೇತು ಭೂತಗಳಾದ ಎರಡು ಹಲಿಗೆಗಳು ಸ್ತ್ರೀಯರ ಜಘುನ ಸಮಗಳಾಗಿ ಸ್ತುತಿಸಲ್ಪಡುತ್ತವೆ.) ಯತ್ರ=ಯಾವ ಯಜ್ಞದಲ್ಲಿ, ದ್ವಾವಿವ ಜಘುನಾ=ಸ್ತ್ರೀಯರ ಎರಡು ಜಘುನಗಳಂತೆ, ಅಧಿಷವಣ್ಯಾ=(ಅಧಿ ಷೂಯತೇ ಸೋಮಃ ಏತಯೋಃ ಸೋಮಃ=ಇವುಗಳಲ್ಲಿ ಸೋಮವು ಹಿಂಡಲ್ಪಡುತ್ತದೆ. ಎಂಬುವುದರಿಂದ) ಎರಡು ಹಲಿಗೆಗಳಾಗಿ,=ಕೃತಾ ಮಾಡಲ್ಪಟ್ಟವೆಯೊ (ಅಂತಹ ಯಜ್ಞದಲ್ಲಿ ಉಲೂಖಲದಲ್ಲಿ ಹಿಂಡಲ್ಪಟ್ಟ ಸೋಮಗಳನ್ನು ಸರ್ವಥಾ ಹೊಂದಲೇ ಹೊಂದುತ್ತಿ. (ಅಧ್ಯಾತ್ಮ ರೂಪ ಅರ್ಥದಲ್ಲಿ) ಅಧಿಹವಣ್ಯಾ=ಓಷ್ಠಗಳು, ಎಂದು ಇಟ್ಟುಕೊಳ್ಳಬೇಕು.) ||೨||

**ಭಾ || ಫಲಕೇಽಭಿಷವಸ್ಯೈವ ಸ್ತ್ರಿಯೋ ಜಘುನಸಾಮ್ಯತಃ | ಪ್ರೋಕ್ತೇ ||೨||**

ಅ || ಇಲ್ಲಿ ಸೋಮರಸವನ್ನು ಹಿಂಡಲಿಕ್ಕೆ ಹೇತುಭೂತಗಳಾದ ಎರಡು ಹಲಗೆಗಳು ಸ್ತ್ರೀಯರ ಜಘುನಗಳಿಗೆ ಸಮಗಳಾಗಿ ಹೇಳಲ್ಪಟ್ಟಿವೆ.

ವಿ || (1) ಇಲ್ಲಿ ಯಾಜ್ಞಿಕರದ್ದು ಈ ಆಚಾರವು. ಭೂಮಿಯಲ್ಲಿ ಉಪರಾ ಎಂದು ಹೆಸರುಳ್ಳ (೪) ನಾಲ್ಕು ಗರ್ತಗಳನ್ನು ಮಾಡಿ ಅದರ ಮೇಲೆ ಪಲಾಶದ ಅಧಿಷವಣಿ ಫಲಕ ಎಂದು ಹೆಸರುಳ್ಳ ೨ ಪೀಠ (ಹಲಿಗೆ)ಗಳನ್ನೂ ಸ್ಥಾಪಿಸಿ ಆ ಎರಡು ಪೀಠಗಳ ಮೇಲೆ ಅನುಡುಹ (ಎತ್ತಿನ) ಚರ್ಮವನ್ನು ಹಬ್ಬಿಸಿ ಅದರ ಮೇಲೆ ಉಪಲ ಎಂದು ಹೆಸರುಳ್ಳ ವಿಸ್ತೃತವಾದ ಪಾಷಾಣವನ್ನು ಸ್ಥಾಪಿಸಿ ಅಲ್ಲಿ ಅಧ್ವರ್ಯುರ್ಗಣಕ್ಕೆ ಸೇರಿದ ನಾಲ್ವರು ಋತಿಜ್ವರು ನಾಲ್ಕು ಕಲ್ಲುಗಳಿಂದ ಜಜ್ಜಿ ಸೋಮರಸವನ್ನು ಹಿಂಡುತ್ತಾರೆ. ಅದ ಕಾರಣ ೨ ಹಲಿಗೆಗಳೂ ಪರಂಪರಯಾ ಸೋಮರಸವನ್ನೂ ಹಿಂಡಲಿಕ್ಕೆ ಕಾರಣಗಳೆಂದು ತಿಳಿಯಬೇಕು. (೩) ಯಾವ ಯಜ್ಞದಲ್ಲಿ ೨ ಜಘುನಗಳಂತೆಯೇ ಅಧಿಷವಣಿಗಳೆರಡು. ಅಧಿಷೂಯತೇ ಸೋಮಃ ಏತಯೋಃ ಎಂಬ ವ್ಯುತ್ಪತ್ತಿಯಿಂದ, ಅಧಿಷವಣೀ=ಎರಡು ಹಲಿಗೆಗಳು (ಅಂದರೆ ಹೇಗೆ ಗಮನ ಮೊದಲಾದ ವ್ಯಾಪಾರ ಕಾಲದಲ್ಲಿ! ಜಘುನದ

ಏಕ ದೇಶಗಳು ಚಲನದಿಂದ ಕೂಡಿರುತ್ತವೋ ಹಾಗೆಯೇ ಸೋಮವನ್ನು ಹಿಂಡುವ ಕಾಲದಲ್ಲಿ ಹಲಿಗೆಗಳೂ ಚಲನದಿಂದ ಕೂಡಿದವುಗಳಾಗಿ ಮಾಡಲ್ಪಡುತ್ತವೆ.) (3) ಹಾಗಾದರೆ ಸೋಮವನ್ನು ಹಿಂಡುವ ಕಾಲದಲ್ಲಿ ಉಲೂಖಲವೇ ಇಲ್ಲದಿರುವ ಪ್ರಯುಕ್ತ ಉಪಲದಿಂದ ಹಿಂಡಲ್ಪಡ ತಕ್ಕ ಸೋಮವು ಉಲೂಖಲದ (ಉಜಿಡೆಯ) ಸುತವು ಹೇಗೆ ಆಗುವುದು? ಎಂದರೆ ಉಪಲವು ಸೋಮವನ್ನೂ ಭೇದಿಸಲಿಕ್ಕೆ ಸಾಧನವಾದ ಕಾರಣ ಉಲೂಖಲದ ಸಾಮ್ಯವಿದ್ದ ಪ್ರಯುಕ್ತ ಉಲೂಖಲ ಸುತಾನಾಂ ಎನ್ನುವುದಕ್ಕೆ ಉಪಲಸುತಾನಾಂ ಎಂದೇ ಅರ್ಥವು ಎಂದು ಯತ್ರ ಗ್ರಾವಾ ಇದು ಮೊದಲಾದ ೬ ಋಕ್ಕುಗಳಲ್ಲಿಯೂ ಔಪಚಾರಿಕ ಪ್ರಯೋಗವು (೫) ಹಾಗಾದರೆ ಅಧಿಷವಣೇ ಶಬ್ದದಿಂದ ಸವನಕ್ಕೆ ಸಾಧನವಾದ ಉಪಲವನ್ನೂ ಹೇಳಿದ ಕಾರಣ ಉಲೂಖಲವೆಂದು ತೆಗೆದುಕೊಂಡದ್ದೂ ವ್ಯರ್ಥ್ಯವೆಂದರೇ ಫಲಕಗಳೆ (ಹಲಿಗೆಗಳೇ) ಅಧಿಷವಣೇ ಶಬ್ದದಿಂದ ವಾಚ್ಯಗಳೆಂದು ಯಾಜ್ಞಿಕರಲ್ಲಿ ಪ್ರಸಿದ್ಧಿಯಿರುವಿದು. ॥೨॥

ಋ ॥ (೩೧೫) ಯತ್ರ ನಾರ್ಯಪಚ್ಯವ ಮುಪಚ್ಯವಂ ಚ ಶಿಕ್ಷತೇ । ಉಲೂಖಲಸುತಾನಾಮವೇದ್ವಿಂದ್ರ ಜಲ್ಗುಲಃ॥೩॥

ಅ ॥ ಯತ್ರ=ಯಾವ ಯಜ್ಞದಲ್ಲಿರತಕ್ಕ ಹಲಿಗೆಗಳ, ಅಪಚ್ಯವಂ=(ಚ್ಯು ಜಗತೌ) ಅಧೋಗಮನವನ್ನು ಉಪಚ್ಯವಂ ಚ=ಮೇಲೆ ಗಮನವನ್ನು ಕೂಡ, ನಾರೀ=ಸ್ತ್ರೀಯ ಎರಡು ಜಘನಗಳು, ಶಿಕ್ಷತೇ=ಸ್ವೀಕರಿಸುತ್ತದೋ ಅನುಕರಿಸುತ್ತದೋ, (ನಾರೀಜಘನಯುಗಲಕ್ಕೂ ಗಮನ ಕಾಲದಲ್ಲಿ ಊರ್ಧ್ವಗಮನ ಅಧೋಗಮನಗಳು ಇವೆ. ಅಂತೂ ಹಲಿಗೆಗಳ ಅಧೋಗಮನ, ಊರ್ಧ್ವಗಮನಗಳನ್ನು ಸುಂದರಿಯ ಎರಡು ಜಘನಗಳು ತೆಗೆದು ಕೊಳ್ಳುತ್ತವೆ. ಅನುಕರಿಸುತ್ತವೆ.) ಅಂತಹ ಸೋಮಗಳನ್ನು ಸರ್ವಥಾ ಹೊಂದಲೇಬೇಕು. ॥೩॥

ಭಾ ॥ (1) ಉಪಚ್ಯವಶ್ಚಾಪಚ್ಯವಃ ಸಂಗತಿಭೇದತಃ ॥ (2) ಜಿಹ್ವಾಗ್ರಾವ್ಯಾಥವಾಗ್ಯುಕ್ತಿರುಚ್ಯತೇಽಭಿಷವಸ್ತ್ವಥಾ ॥ ಖಲಶ್ಚೋರುಸ್ತಥಾ ದೇಹಃ ಸೋಮೋ ಮನ ಇತೀರಿತಃ ಜ್ಞಾನೋತ್ಪತ್ತೌ ಚ ಫಲಕಸ್ಥಾನೇ ಓಷ್ಠೇ ಉದೀರಿತೇ ॥೩॥

ಅ ॥ (1) (ಹಲಿಗೆಗಳ ಅಧೋಗಮನ ಊರ್ಧ್ವಗಮನಗಳಿಗೆ ಏನು ಕಾರಣವು ಎಂದರೆ) (ಹಲಿಗೆಗಳು ಗರ್ತ (ಹೊಂಡ)ದ ಮೇಲೆ ಇದ್ದ ಪ್ರಯುಕ್ತ ಎರಡು ಹಲಿಗೆಗಳ ಸಂಯೋಗವು ಶಿಥಿಲವಾಗುತ್ತದೆ. ಆದ ಕಾರಣ ಅಧೋಗಮನ ಊರ್ಧ್ವಗಮನಗಳು. ಕೂಡುತ್ತವೆ. (ಹೇಗೆಂದರೆ ಸೋಮಲತೆಯನ್ನು ಕಂಡಿಸುವ ಕಾಲದಲ್ಲಿ ಕಲ್ಲುಗಳಿಂದ ಜಜ್ಜುವಾಗ ಕೆಳಗೆ ಹೋಗುತ್ತದೆ ಇತರ ಸಮಯದಲ್ಲಿ ಮೇಲಕ್ಕೆ ಇರುತ್ತದೆ.) (2) (ಮೂರು ಋಕ್ಕುಗಳಲ್ಲಿರತಕ್ಕ ಗ್ರಾವಾದಿ ಶಬ್ದಗಳಿಗೆ ಅಧ್ಯಾತ್ಮ ಪರವಾಗಿ ಅರ್ಥ ಹೇಳುತ್ತಾರೆ.) (ಮೂಕ ಸಾಧಾರಣವಾದ ನಾಲಿಗೆಯು ಜ್ಞಾನಕ್ಕೆ ಕಾರಣವಾಗದೆ ಇರುವುದರಿಂದ) ಜಿಹ್ವಾಪದದಿಂದ ವಾಗಿಂದ್ರಿಯವನ್ನು ಇಟ್ಟುಕೊಳ್ಳಬೆಕು. ಪಾಷಾಣವು, ನಾಲಿಗೆಯು ಅಂದರೆ ವಾಗಿಂದ್ರಿಯವು. ಹಾಗೆಯೇ ಅಭಿಷವವು ವಾಗಿಂದ್ರಿಯಕ್ಕೆ ಮನಸ್ಸಿನಿಂದ ವೇದೋಚ್ಚಾರಣ ರೂಪವಾದ ಸಂಬಂಧವು. ಭೂಮಿಗಿಂತ ಉಚ್ಚವಾದ ಉಜಿಡೆಯು ದೇಹವು. ಮನಸ್ಸು ಸೋಮಲತಾ ಸ್ಥಾನೀಯವು, ಎಂದು ಹೇಳಲ್ಪಟ್ಟಿದೆ. ಫಲಕ (ಹಲಿಗೆ) ಸ್ಥಾನಗಳು ಓಷ್ಠಗಳು. (ಜಿಹ್ವಾಗ್ರಾವಾ ಇತ್ಯಾದಿಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ) ಜ್ಞಾನವು ಉಂಟಾಗುವ ವಿಷಯದಲ್ಲಿ ಹೀಗೆ ಹೇಳಲ್ಪಟ್ಟಿವೆ.

ವಿ ॥ (1) ಉಲೂಖಲಃ ಎಂದು ಹೇಳದೆ ಉರುಃ ಖಲಃ ಎಂದದ್ದು ಊರ್ಧ್ವಂ ಖಂ (ಅವಕಾಶವು) ಅಸ್ಯ ಎಂದು ವ್ಯಾಖ್ಯಾನ ಮಾಡಬಾರದು ಎಂಬ ಅಭಿಪ್ರಾಯದಿಂದ (2) ದೇಹರೂಪವಾದ ಪಾಷಾಣ ಸಂಬಂಧದಿಂದ ವಾಗಿಂದ್ರಿಯಕ್ಕೆ ಗ್ರಾವ (ಪಾಷಾಣ) ಸಾದೃಶ್ಯವು. (3) ವೇದೋಚ್ಚಾರಣ ರೂಪವಾದ ವಚನ ಸಂಬಂಧವು ಜ್ಞಾನ ರೂಪವಾದ ಸೋರಸವನ್ನು ಹುಟ್ಟಿಸುವ ಪ್ರಯುಕ್ತ ಅಭಿಷವ (ಸೋಮರಸವನ್ನು ಹಿಂಡುವಿಕೆ) ಸಾಮ್ಯವು. (4) ದೇಹವು ಮನೋರೂಪವಾದ ಸೋಮಕ್ಕೆ ಆಧಾರವಾಗಿರುವುದರಿಂದ ಉಲೂಖಲ (ಉಜಿಡೆ) ಸಾಮ್ಯವು. (5) ಮನಸ್ಸು ಜ್ಞಾನವೆಂಬ ರಸಕ್ಕೆ ಉಪಾದಾನ ಕಾರಣವಾಗಿರುವುದರಿಂದ ಸೋಮಲತಾ ಸಾಮ್ಯವು. (6) ಓಷ್ಠಗಳು ವೇದಗಳನ್ನು ಉಚ್ಚರಿಸುವುದರಿಂದ ಜ್ಞಾನವುಂಟಾಗಲಿಕ್ಕೆ ಉಪಯುಕ್ತಗಳಾಗುವ ಪ್ರಯುಕ್ತ ಫಲಕ (ಹಲಿಗೆ) ಸಾಮ್ಯವು (7) ಯಾವ ಭೂಮಿಯಲ್ಲಿ ಧಾನ್ಯವು ವೃಷಭ ಸಂಚಾರಾದಿಗಳಿಂದ ಹುಲ್ಲಿನಿಂದ ಪ್ರತ್ಯೇಕಿಸಲ್ಪಡುತ್ತದೋ ಅಂತಹ ಸ್ಥಳವು (ಅಂದರೆ ಹುಲ್ಲು ಜಪ್ಪುವ ಸ್ಥಳವು) ಖಲವೆನಿಸುತ್ತದೆ. ಅದರ ಸಾದೃಶ್ಯದಿಂದ ಪಾಷಾಣ ದಾರ್ವಾದಿಮಯವಾದುದು ಶಾಲ್ಯಾದಿಗಳನ್ನು ತುಷಾ (ಉಮಿ)ವಿಲ್ಲದ ಹಾಗೆ ಮಾಡಲು ಯಾವುದು ಸಾಧನವೋ ಅದೂ ಕೂಡ ಖಲವೆನಿಸುತ್ತದೆ. ॥೩॥

ಋ (೩೧೬) ॥ ಯತ್ರ ಮಂಥಾಂ ವಿಬಧ್ನತೇ ರಶ್ಮೀನ್ಯಮಿತವಾ ಇವ । ಉಲೂಖಲಸುತಾನಾಮವೇದ್ವಿಂದ್ರ ಜಲ್ಗುಲ ॥೪॥

ಅ ॥ ಹೇಗೆ, ಮಂಥಾಂ=ಮೊಸರನ್ನು ಕಡಿಯಲಿಕ್ಕೆ ಸಾಧನವಾದ ಕಾಷ್ಠಮಯವಾದ ಕಡಗೋಲನ್ನು ಯಮುತವಾ ಇವ= (ಯಮುಉಪಯಮೇ) ನಿಯಮಿಸಲಿಕ್ಕೆ (ತನ್ನ ಸ್ವಾಧೀನದಲ್ಲಿರಿಸಿಕೊಳ್ಳಲಿಕ್ಕೆ) ರಶ್ಮೀನ್ ಕಡಗೋಲಿನ ಹಗ್ಗಗಳನ್ನೂ, ವಿಬಧ್ನತೇ= ಕಟ್ಟುತ್ತಾರೋ ಹೇಗೆ, ಕುದುರೆಯನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಲಿಕ್ಕೆ ಕುದುರೆಯ ಹಗ್ಗ (ಕಡಿವಾಣ)ವನ್ನೂ (ಸ್ತಂಭಾದಿಗಳಲ್ಲಿ) ವಿಬಧ್ನತೇ= ಕಟ್ಟುತ್ತಾರೋ, (ಹಾಗೆಯೇ, ಯತ್ರ= ಯಾವ ಯಜ್ಞದಲ್ಲಿ (ಉಲೂಖಲಸ್ಯ=) (ಉಪಲದ) ರಶ್ಮೀನ್=ಹಗ್ಗಗಳನ್ನೂ (ದೃಢವಾಗಿ ನಿಲ್ಲುವುದಕ್ಕಾಗಿ) ಹಲಿಗೆ ಮೊದಲಾದ ದ್ರವ್ಯಾಂತರಗಳಿಂದ,) ವಿಬಧ್ನತೇ=ಕಟ್ಟುತ್ತಾರೋ ಅಂತಹ ಯಜ್ಞದಲ್ಲಿ ಸೋಮುಗಳನ್ನು ಹೊಂದು (ಅಧ್ಯಾತ್ಮದಲ್ಲಿ) ಉಲೂಖಲಸ್ಯ=ದೇಹದ, ರಶ್ಮೀನ್ ನಾಡಿಗಳನ್ನು ವಿಬಧ್ನತೇ=ಬಾಕಿಹಿಂದಿನಂತೆ. ॥೪॥

ಭಾ ॥ (೧) ಮಂದರಶ್ಮೀನಶ್ವರಶ್ಮೀನ್ಯಥಾ ಯತ್ರ ನಿಬಧ್ಯತೇ । (೨) ರಶ್ಮಯೋ ಯತ್ರನಾಡ್ಯಶ್ಚ ॥೪॥

ಅ ॥ (೧) ಹೇಗೆ ಕಡಗೋಲು ಹಗ್ಗಗಳನ್ನು ದೃಢವಾಗಿ ಕಟ್ಟುತ್ತಾರೋ ಹೇಗೆ ಕುದುರೆಯ ಹಗ್ಗಗಳನ್ನು (ಕುದುರೆಯನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಸ್ತಂಭಾದಿಗಳಲ್ಲಿ ಕಟ್ಟುತ್ತಾರೋ,) (ಹಾಗೆಯೇ ಯಾವ ಯಜ್ಞದಲ್ಲಿ ಉಲೂಖಲದ (ಉಪಲದ) ರಶ್ಮಿಗಳನ್ನು ದೃಢವಾಗಿ ನಿಲ್ಲುವುದಕ್ಕಾಗಿ ಹಲಿಗೆ ಮೊದಲಾದ ದ್ರವ್ಯಾಂತರಗಳಿಂದ ಕಟ್ಟುತ್ತಾರೆ.) (೨) (ಅಧ್ಯಾತ್ಮದಲ್ಲಿ ರಶ್ಮಿಗಳು ಯಾವವೆಂದರೆ- ) ದೇಹದಲ್ಲಿರುವ ನಾಡಿಗಳೇ, ರಶ್ಮಿಗಳೆಂದು ತಿಳಿಯಬೇಕು.) ॥೪॥

ಅವ ॥ ಈ ಋಕ್ಕೂ ಮೇಲಿನ ಋಕ್ಕೂ ಕೂಡ ಉಲೂಖಲ ದೇವತಾಕಗಳು. ಅನುಷ್ಟುಪ್ ಛಂದಸ್ಕಗಳು.

ಋ ॥ (೩೧೭) ಯಚ್ಚಿದ್ಧಿ ತ್ವಂ ಗೃಹೇ ಗೃಹ ಉಲೂಖಲಕ ಯುಜ್ಯಸೇ ಇಹ ದ್ಯುಮತ್ತಮಂ ವದ ಜಯತಾಮಿವದುಂದುಭಿಃ ॥೫॥೨೪॥

ಅ || ಹೇ ಉಲೂಖಲಕ=ಎಲೋ ಉಜಿಡೆಯೇ ಯತ್=ಯಾವ ಕಾರಣ ದೆಶೆಯಿಂದ ತ್ವಂ=ನೀನು, ಗೃಹೇ ಗೃಹೇಚಿತ್=ಈ ಯಜಮಾನನಿಂದ ಮಾಡಲ್ಪಟ್ಟ ಎಲ್ಲಾ ಯಜ್ಞ ಗೃಹಗಳಲ್ಲಿಯೂ (ಆಧ್ಯಾತ್ಮದಲ್ಲಿ) ಪ್ರತಿ ಶರೀರಗಳಲ್ಲಿ ಯುಜ್ಯಸೇ=ಪೂಜ್ಯನಾಗಿ ಕೂಡಿಕೊಂಡೇ ಇರುತ್ತಿಯೋ ಹಿ=ಆ ಕಾರಣದಿಂದ, ಇಹ=ಈ ಯಜ್ಞದಲ್ಲಿ ಜಯತಾಮಿವ ದುಂದುಭಿಃ=ಯುದ್ಧದಲ್ಲಿ ಜಯಾರ್ಥಿಗಳಾಡ ಜನರಿಗೆ ಭೇರಿ(ನಗಾರಿ)ಯಂತೆ, ದ್ಯುಮತ್ತಮಂ-ಅತಿಶಯವಾಗಿ ಪ್ರಕಾಶವುಳ್ಳ, ಧ್ವನಿಯನ್ನು (ಉಚ್ಚಸ್ವರದಿಂದ) ವದ=ಮಾಡು. ||೫||೨೪||

ಭಾ || **(1) ಯಸ್ಮಾದ್ಯುಕ್ತೋ ಗೃಹೇ ಗೃಹೇ || ದೇಗೇ ದೇಹೇಽಥವಾ ತೇನ ದ್ಯುಮದ್ದುಂದುಭಿವದ್ವದ || (2) ಪೃಥಿವೀ ದೇವತಾ ತಸ್ಯ ತದ್ಗತೋ ವಾ ಸ್ವಯಂ ಹರಿಃ| ಸೋಮಾಮಾತ್ಯೋಽಪರೋ ದೇವೋ ವನಸ್ಪತಿರಿತೀರಿತಃ (3) ಸೋಮೋವಾ ತದ್ಗವಿಷ್ಣುರ್ವಾ ಶ್ರುತಃ ಫಲಕದೇವತಾ || (4) ವೃಕ್ಷಾಣಾಮಪಿ ಸರ್ವೇಷಾಮತಃ || ||೫||೨೫||**

ಅ || (1) (ಎಲೋ ಉಲೂಖಲವೇ ನೀನು) ಯಾವ ಕಾರಣದಿಂದ ಯಾಜಮಾನನಿಂದ ಮಾಡಲ್ಪಟ್ಟ ಎಲ್ಲಾ ಯಜ್ಞ ಗೃಹಗಳಲ್ಲಿಯೂ, (ಅಧ್ಯಾತ್ಮದಲ್ಲಿ) ಪ್ರತಿ ಶರೀರಗಳಲ್ಲಿಯೂ ಪೂಜ್ಯನಾಗಿ ಕೂಡಿಯೇ ಇರುತ್ತಿಯೋ, ಆ ಕಾರಣದಿಂದ ಭೇರಿಯಂತೆ ಅತ್ಯುಚ್ಚವಾಗಿ ಧ್ವನಿ ಮಾಡು. (2) ಜಡವಾದ ಉಲೂಖಲವನ್ನು ಹೀಗೆ ಪ್ರಾರ್ಥಿಸುವುದು ಹೇಗೆ ಎಂದರೆ) ಆ ಉಲೂಖಲಕ್ಕೆ ಪೃಥಿವಿಯು ದೇವತೆಯು. ಮತ್ತು ವನಸ್ಪತಿ ಎಂಬ ಶಬ್ದದಿಂದ ಹೇಳಲ್ಪಟ್ಟ ಸೋಮನ ಅಮಾತ್ಯನೂ ಕೂಡ ಇನ್ನೊಬ್ಬನು ಉಲೂಖಲಕ್ಕೆ ದೇವತೆಯು.) (ಅಯಜೀ ಎನ್ನುವ ಮೇಲಿನ ಎರಡು ಋಕ್ಕುಗಳು ಮುಸಲದೇವತಾಕವು. ಮತ್ತು ಉಲೂಖಲ ದೇವತಾಕವೂ ಆಗಿದೆ ಎಂದು ಕೆಲವರು ಹೇಳುತ್ತಾರೆ. ಅದು ಅಯುಕ್ತವು. ಏಕೆಂದರೆ ಅಧಿ ಷವಣ್ಯಾ ಕೃತಾ ಎನ್ನುವಲ್ಲಿ ಹಲಗೆಗಳೇ ಪ್ರಕೃತಗಳಾದ ಪ್ರಯುಕ್ತ ಅವುಗಳನ್ನೇ ಇಟ್ಟುಕೊಳ್ಳಬೇಕು. ಮುಸಲವನ್ನು ಅಥವಾ ಉಲೂಖಲವನ್ನೂ ತೆಗೆದುಕೊಳ್ಳುವುದು ಉಚಿತವಲ್ಲ.) (ಅಚೇತನಗಳಾದ ಹಲಗೆಗಳಿಗೂ ಕೂಡ ಇಂದ್ರಾಯ ಮಧು ಮತ್ಸುತಂ ಇತ್ಯಾದಿ ರೂಪ ಪ್ರಾರ್ಥನಾದಿಗಳು ಕೂಡುವುದಕ್ಕಾಗಿ ಪ್ರಸಂಗ ಸಂಗತಿಯಿಂದ ಅವುಗಳಿಗೂ ದೇವತೆಯನ್ನು ಹೇಳುತ್ತಾರೆ.) ವನಸ್ಪತಿ ಎಂಬ ಶಬ್ದದಿಂದ ಹೇಳಲ್ಪಟ್ಟ ಸೋಮನ ಸೋಮನ ಅಮಾತ್ಯನೂ, ಅವರಲ್ಲಿರತಕ್ಕ ಶ್ರೀವಿಷ್ಣುವೂ ವನಸ್ಪತಿ ಶಬ್ದ ವಾಚ್ಯತ್ವವು ಹೇಗೆಂದರೆ) ಎಲ್ಲಾ ವೃಕ್ಷಗಳಿಗೂ ಕೂಡ ಸೋಮನೂ ಸೋಮಾಂತರ್ಗತ ಶ್ರೀವಿಷ್ಣುವೂ ಕೂಡ ದೇವತೆಯು. (ಹೀಗೆಯೇ ಸಮಸ್ತವೃಕ್ಷಗಳಿಗೂ ಉತ್ಪಾದಕವೂ, ಮತ್ತು ಅಧಾರವೂ ಆದ ಕಾರಣ ಪೃಥಿವಿಗೂ, ಪೃಥಿವಿಯಲ್ಲಿರತಕ್ಕ ಶ್ರೀವಿಷ್ಣುವಿಗೂ ವನಸ್ಪತಿ ಶಬ್ದ ವಾಚ್ಯತ್ವವಿದೆ ಎಂದು ತಿಳಿಯಬೇಕು. ಆದ ಕಾರಣ ಯಚ್ಚಿದ್ಧಿ ಇದು ಮೊದಲಾದ ನಾಲ್ಕು ಋಕ್ಕುಗಳಲ್ಲಿ ಹೇಳಿದ್ದೂಯುಕ್ತವು.

ವಿ || (1) ಹಿಂದಿನ ೪ ಋಕ್ಕುಗಳಲ್ಲಿ ಉಲೂಖಲ ಶಬ್ದದಿಂದ ಅಚೇತನವನ್ನು ಹೇಳಿದ ಕಾರಣ ಸೋಮಾಖ್ಯ ಮನಸ್ಸಿಗೆ ಅಧಿಕರಣವಾಗಿ ದೇಹವನ್ನು ಹೇಳಿದೆ. ಈ ಋಕ್ಕಿನಲ್ಲಿ ಉಲೂಖಲ ಶಬ್ದದಿಂದ ಉಲೂಖಲಾಧಾರವಾದ ದೇವತೆಯನ್ನು ಹೇಳಿದೆ. ಆದ ಕಾರಣ ವಿರೋಧವಿಲ್ಲ. (2) ಏವಂಚ ಜಡವಾದ ಉಲೂಖಲವನ್ನು ಕುರಿತು ಪ್ರಾರ್ಥನೆಯು ಕೂಡದಿರುವ ಕಾರಣ ಅಭಿಮಾನ್ಯಧಿಕರಣ ನ್ಯಾಯದಿಂದ ಅಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳಬೇಕು, ಧರಾದೇವಿ, ಧರಾದೇವಿಯಲ್ಲಿರತಕ್ಕ ಶ್ರೀಹರಿಯೂ ಉಲೂಖಲ ದೇವತೆಗಳೆಂದು ತಿಳಿದುಕೊಳ್ಳಬೇಕು. ||೫||೨೫||

ಋ || (೩೧೮) ಉತ ಸ್ಮ ತೇ ವನಸ್ಪತೇ ವಾತೋ ವಿವಾತ್ಯಗ್ರಮಿತ್ |

**ಅಥೋ ಇಂದ್ರಾಯ ಪಾತವೇ ಸುನು ಸೋಮಮುಲೂಖಲ ॥೬॥**

ಪ ॥ ವನಸ್ಪತೇ=ವೃಕ್ಷಗಳಿಗೆ ಸ್ವಾಮಿಯಾದ, ಉಲೂಖಲ=ಉಜಿಡೆಯೇ, ವಾತಃ ಉತ=ವಾಯುವೂ ಕೂಡ. ತೇ ಅಗ್ರಮಿತ್=ನಿನ್ನಿಂದ ಅಭಿಮನ್ಯಮಾನವಾದ ವೃಕ್ಷಾಗ್ರದಲ್ಲಿಯೇ ವಿ ವಾತಿ ಸ್ಮ=ಅನೇಕ ಪ್ರಕಾರ ವೀಜಿಸಿರುವನೋ, (ಅಂದರೆ ಯಾವ ಕಾರಣದಿಂದ ಇಂದ್ರನು ತನ್ನ ಗಾಳಿಯಿಂದ ನಿನ್ನದಾದ ವೃಕ್ಷದ ಅಗ್ರಭಾಗವನ್ನೇ ಹಂದಾಡಿಸುತ್ತಿರುವನೋ, ಅಥೋ=ಆ ಕಾರಣದಿಂದ (ಇಂದ್ರನಿಂದ ಉಪಕೃತನಾದ ಪ್ರಯುಕ್ತ) ಇಂದ್ರಾಯ=ಪ್ರಸಿದ್ಧ ಇಂದ್ರನಿಗೆ ಪಾತವೇ=ಪಾನಕ್ಕಾಗಿ ಸೋಮ=ಸೋಮವನ್ನು ಸುನು=ಮರ್ದಿಸಿ ರಸವನ್ನು ತೆಗೆದು ಇಟ್ಟುಕೊಳ್ಳು. ಅಥವಾ ವನಸ್ಪತೇ ಭಜಿಸಲು ಯೋಗ್ಯರಾದ ದೇವತೆಗಳಿಗೆ ಅಧಿಪತಿಯಾದ, ಉಲೂಖಲ=ಉಲೂಖಲ ದೇವತೆಯಲ್ಲಿ ಅಂತರ್ಗತನಾದ ಶ್ರೀಹರಿಯೇ, ವಾತಃ ಉತ=ವಾಯಿವೂ ಕೂಡ, ತೇ ಅಗ್ರಂ ಇತ್=ನಿನ್ನ ಮುಂಭಾಗದಲ್ಲಿಯೇ, ವಿವಾತಿ=ಅನೇಕ ಪ್ರಕಾರ ಓಡುತ್ತಿರುತ್ತಾನೋ, (ನಿನ್ನ ಸೇವಕನಾಗಿಯೇ ಹೋಗಿರುವನೋ) ಅಥೋ=ಯಾವ ಕಾರಣದಿಂದ ಹೀಗೆ ನೀನು ಅತಿ ಸಮರ್ಥನೋ, ಆ ಕಾರಣದಿಂದ, ಇಂದ್ರಾಯ=ಇಂದ್ರನೆನಿಸಿದ ಶ್ರೀವಿಷ್ಣುವನ್ನು ಉದ್ದೇಶಿಸಿ, ಪಾತವೇ=ಇಂದ್ರಸಾದ ತನಗೆ ಪಾನಕ್ಕಾಗಿ ಸೋಮಂ=ಸೋಮವನ್ನು (ಅಧ್ಯಾತ್ಮದಲ್ಲಿ) ಮನಸ್ಸನ್ನು ಸುನು=ರಸ ತೆಗೆದು ಇಟ್ಟುಕೊಳ್ಳು. ದೃಢೀಕರೀಸಿಕೊಳ್ಳು ॥೬॥

ಭಾ ॥ **(1) ವೃಕ್ಷಾಗ್ರ ವಿವ ತು । ವಾಯುರ್ವಾತಿ (2) ವನಾನಾಂ ವಾ ಭಜನೀಯದಿವೌಕಸಾಂ ॥ ಪತಿರ್ವಿಷ್ಣುಸ್ತು ತಸ್ಯಾಗ್ರೇ ವಾಯುರ್ದೇವೋ ಹಿ ಗಚ್ಛತಿ॥ (3) ಪಾತವೇ ಸ್ವಸ್ಯ ಸೋಮಂ ವಾ ಮನೋ ವಾ ಸುನು ವಿಷ್ಣವೇ ॥೬॥**

ಅ ॥ ಎಲೋ ಉಲೂಖಲವೇ, ವಾಯುವೂ ಕೂಡ ನಿನ್ನಿಂದ ಅಭಿಮನ್ಯ ಮಾನವಾದ ವೃಕ್ಷಾಗ್ರದಲ್ಲಿಯೇ ವೀಜಿಸುತ್ತದೆ. (ಅಂದರೆ-ಸೋಮನೂ ಸೋಮಾಂತರ್ಗತ ಶ್ರೀವಿಷ್ಣುವೂ ಕೂಡ ವೃಕ್ಷಗಳ ದೇವತೆಯಾದುದರಿಂದ ಆ ವೃಕ್ಷಾಂತರ್ಗತ ಸೋಮ ವಿಷ್ಣುಗಳ ಪ್ರೀತಿಗಾಗಿ ವೃಕ್ಷಾಗ್ರದಲ್ಲಿ ವಾಯುವು ಶೀತಲ ಸುಗಂಧ ಮಂದರೂಪವಾಗಿ ಅನೇಕ ಪ್ರಕಾರ ವೀಜಿಸುತ್ತಾನೆ ಎಂದು ಪೂರ್ವಾರ್ಧದ ತಾತ್ಪರ್ಯವು.) (2) (ಪೂರ್ವಾರ್ಧದ ತಾತ್ಪರ್ಯವನ್ನು ಶ್ರೀವಿಷ್ಣುವಿನಲ್ಲಿ ಕೂಡಿಸುತ್ತಾರೆ.) ಶ್ರೀವಿಷ್ಣುವಾದರೂ ಪ್ರಸಿದ್ಧಗಳಾದ ವೃಕ್ಷ ಸಮೂಹ ರೂಪಗಳಾದ ವನಗಳಿಗೆ, ಅಥವಾ ವನ ಷಣ ಸಂಭಕ್ತೌ ಎನ್ನುವುದರಿಂದ ಭಜಿಸಿಕೊಳ್ಳಲು ಯೋಗ್ಯರಾಗಿರುವುದರಿಂದ ವನ ಶಬ್ದ ವಾಚ್ಯರಾದ ದೇವತೆಗಳಿಗೆ ಅಧಿಪತಿಯು, ಆದ ಕಾರಣ ವನಸ್ಪತಿಃ (ವನ್ಯಂತೇ ಇತಿ ವನಾಃ ದೇವತೆಗಳು ತೇಷಾಂ ಪತಿಃ, ವನಸ್ಪತಿಃ) ಎನಿಸುತ್ತಾನೆ. ಆ ವಿಷ್ಣುವಿನ ಇದಿರು (ಜಡವಾಯುವಲ್ಲದ) ಪ್ರಸಿದ್ಧ ವಾಯುದೇವರು ಸೇವಕರಾಗಿ ಹೋಗುತ್ತಾರೆ. (3) (ಪ್ರಸಿದ್ಧ ಇಂದ್ರ ಪಕ್ಷದಲ್ಲಿ) ಯಾವ ಕಾರಣದಿಂದ ಇಂದ್ರನು ತನ್ನ ಗಾಳಿಯಿಂದ ನಿನ್ನದ್ದಾದ ವೃಕ್ಷದ ಅಗ್ರಭಾಗವನ್ನೇಹಂದಾಡಿಸುತ್ತಾನೊ ವೃಕ್ಷವನ್ನು ಕಿತ್ತು ಹಾಕುವುದಿಲ್ಲವೋ, ಆದ ಕಾರಣ ಇಂದ್ರನಿಂದ ಉಪಕಾರವನ್ನು ಹೊಂದಿರುವ ಕಾರಣ, ಎಂದು ದೇವತಾಂತರದಲ್ಲಿ) (ಇಂದ್ರ ಶಬ್ದದಿಂದ ಶ್ರೀವಿಷ್ಣುವು ಗೃಹೀತನಾದರೆ,) ನೀನು ಅತಿ ಸಮರ್ಥನಾದ ಕಾರಣ ಶ್ರೀವಿಷ್ಣುವನ್ನುದ್ದೇಶಿಸಿ ತನಗೆ ಪಾನ ಮಾಡುವುದಕ್ಕಾಗಿ ಪ್ರಸಿದ್ಧವಾದ ಸೋಮವನ್ನು (ಬಾಹ್ಯದಲ್ಲಿ) (ಅಧ್ಯಾತ್ಮದಲ್ಲಿ) ಮನಸ್ಸನ್ನು ಹಿಂಡಿ ರಸವನ್ನು ತೆಗೆದು ಇಟ್ಟುಕೊಳ್ಳು. ಶ್ರೀವಿಷ್ಣುವಿನಲ್ಲಿಯೇ ಸ್ಥಿರೀಕರಿಸು. ॥೬॥

ಅವ ॥ ಈ ಋಕ್ಕು ಮೇಲಿನ ಋಕ್ಕು ಕೂಡ ಫಲಕ ದೇವತಾಕಗಳು. ಗಾಯತ್ರೀ ಛಂದಸ್ಕಗಳು.

**ಋ ॥ (೩೧೯) ಆಯುಜೀ ವಾಜಸಾತಮಾ ತಾ ಹ್ಯುಚ್ಚಾ ವಿಜರ್ಭೃತಃ । ಹರೀ ಇವಾಂಧಾಂಸಿ ಬಪ್ಸತಾ ॥೭॥**

ಅ ॥ ಆಯಜೀ= (ಯಜದೇವ ಪೂಜಾ ಸಂಗತಿಕರಣದಾನೇಷು) ಚೆನ್ನಾಗಿ ಯಾಗ ಮಾಡಲ್ಪಡತಕ್ಕ, (ವಾಜ ಸಾತಮಾ=(ವಾಜಶಬ್ದೋಪಪದಾತ್ ಷಣುಲಾಭೇ) ವಾಜಂ ಅನ್ನಂ ಸನುತೆ ಇತಿ ವಾಜಸೌ. ಅತಿಶಯೇನ ವಾಜಸೌ ವಾಜಸಾತಮೌ=) ಅನ್ನವನ್ನು ಹೊಂದುವವರಲ್ಲಿ ಉತ್ತಮರಾದ ಉಚ್ಚಾ=ಉತ್ಕೃಷ್ಟರಾದ, ತಾ=ಆ ಫಲಕಗಳು, ಆ ಹಲಗೆಗಳುಗೆ ಅಭಿಮಾನಿಗಳಾದ ಸೋಮ ವನಸ್ಪತಿ ದೇವತೆಗಳು, ಹರೀ ಇವ=ಇಂದ್ರ ದೇವರ ಕುದುರೆಗಳು ಹೇಗೆ, ಅಂಧಾಂಸಿ=ಅನ್ನಾದಿಗಳನ್ನು, ಬಪ್ಸತಾ=(ಬಪ್ಸ ಅದನೇ ಅಥವಾ ಪ್ಸಾ ಅದನೇ) ಭಕ್ಷಿಸುತ್ತವೋ, ಹಾಗೆ, ವಿಜರ್ಭೃತಃ ಓ=(ಜಹಭಕ್ಷಣೇ) ವಿಶೇಷವಾಗಿ ಭಕ್ಷಿಸುತ್ತಾರಷ್ಟೆ. (ಅಂದರೆ ಸೋಮವನ್ನು ಹಿಂಡುವ ಕಾಲದಲ್ಲಿ ಅತಿ ಭಕ್ಷಕರಾಗಿರುತ್ತಾರೆ.) ॥೭॥

**ಭಾ ॥ (1) ಆಯಾಜ್ಯಾವನ್ನಲಬ್ಧೄಣಾಮುತ್ತಮಾವತಿ ಭಕ್ಷಕೌ । (2) ಜಹಭಕ್ಷಣ ಇತ್ಯಸ್ಮಾ (3) ದ್ಯಥಾಽಶ್ವಾವನ್ನಭಕ್ಷಕೌ ॥ (4) ಸೋಮಸ್ಯ ಭಕ್ಷಕಾವತ್ರ ॥೭॥**

ಅ ॥ (1) ಚೆನ್ನಾಗಿ ಯಾಗ ಮಾಡಲ್ಪಡತಕ್ಕ ಅನ್ನವನ್ನು ಹೊಂದುವವರಲ್ಲಿ ಉತ್ತಮರಾದ, ಆ ಸೋಮ ವನಸ್ಪತಿ ದೇವತೆಗಳು, ಅತಿ ಭಕ್ಷಕರಾಗಿರುತ್ತಾರೆ (2) (ಈ ಅರ್ಥವು ಹೇಗೆ ಸಿಗುವುದೆಂದರೆ) ಜಹಭಕ್ಷಣೇ ಎಂಬ ಧಾತು ವ್ಯಾಖ್ಯಾನದಿಂದ (ಪ್ರಥಮ ಪುರುಷದ್ವಿ ವಚನ, ಹಕಾರಕ್ಕೆ ಭಕಾರ, ರಮ ಆಗಮ ಬಂದರೆ ವಿಜರ್ಭೃತಃ ಎಂಬ ರೂಪವು ಸಿದ್ಧಿಸುವುದು.) (3) ಹೇಗೆ ಇಂದ್ರನ ಕುದುರೆಗಳು ಅನ್ನಭಕ್ಷಕಗಳೆಂದು ಪ್ರಸಿದ್ಧಗಳೋ ಹಾಗೆಯೇ. (4) (ಹಾಗಾದರೆ-ಇಂದ್ರನ ಕುದುರೆಗಳು, ಕಡಲೆ ಮೊದಲಾದ ಧಾನ್ಯ (ಸೋಮರಸವನ್ನು ತೆಗೆದ ಮೇಲೆ ರಸವನ್ನು ಬೇರೆ ಕಡೆ ಇಟ್ಟು ಅಲ್ಲಿ ಅವಶಿಷ್ಟವಾದ ನೀರಸ ಪದಾರ್ಥವು ಋಜೀಷ ಎನಿಸುತ್ತದೆ.) ಋಜೀಷ ಮೊದಲಾದ ಅನ್ನ ಇವುಗಳನ್ನು ಭಕ್ಷಿಸುವವುಗಳೆಂದು ಪ್ರಸಿದ್ಧಗಳಾಗಿವೆ. ಹಲಗೆಗಳಲ್ಲಿ ಇದು ಹೇಗೆ ಕೊಡುತ್ತದೆ ಎಂದರೆ) ಹಲಗೆಯ ವಿಷಯದಲ್ಲಿ, ಸೋಮರಸವನ್ನು ಹಿಂಡುವ ಕಾಲದಲ್ಲಿ ಹಲಗೆಗಳು ಸೋಮರಸವನ್ನು ಭಕ್ಷಿಸುವವುಗಳು. (ಅಂದರೆ-ಹಲಗೆಯ ಮೇಲೆ ಇರತಕ್ಕ ಕಲ್ಲಿನಲ್ಲಿ ಸೋಮ ಸಂಬಂಧವಿದ್ದ ಪ್ರಯುಕ್ತ ಹಲಗೆಗಳಲ್ಲಿ ಸೋಮ ಭಕ್ಷಕತ್ವವಿದೆ. ಎಂದು ಅಮುಖ್ಯ ಪ್ರಯೋಗವು (ಫಲಕಾಭಿಮಾನಿ ದೇವತೆಗಳಾದರೂ ಸವನ ಕಾಲದಲ್ಲಿ ಸೋಮ ಭಕ್ಷಕರಾಗಿರುತ್ತಾರೆ.) ॥೭॥

**ಋ ॥ (೩೨೦) ತಾನೋ ಅದ್ಯ ವನಸ್ಪತೀ ಋಷ್ವಾವೃಷ್ವೇಭಿಃ ಸೋತೃಭಿಃ । ಇಂದ್ರಾಯ ಮಧುಮತ್ಸುತಂ ॥೮॥**

ಅ ॥ ಋಷ್ವೌ=ಅತಿ ಶ್ರೇಷ್ಠರಾದ, ವನಸ್ಪತೀ=ಸೋಮ, ಸೋಮನ ಅಮಾತ್ಯನಾದ ವನಸ್ಪತಿ ಎಂದು ಪ್ರಸಿದ್ಧರಾದ ನೀವಿಬ್ಬರು, ಋಷ್ವೇಭಿಃ=ಮಹಾನುಭಾವರಾದ, ಸೋತೃಭಿಃ=ಸೋಮವನ್ನು ಭೇದಿಸುವ ಋತ್ವಿಜರಿಂದ ಕೂಡಿಕೊಂಡು, ಇಂದ್ರಾಯ=ಇಂದ್ರನಿಗೋಸ್ಕರ, ನಃ=ನಮ್ಮದ್ದಾದ, ಮಧುಮತ್=ಸ್ವಾದುರಸಯುಕ್ತವಾದ, ಸೋಮವನ್ನು, ಸುತಂ=ಮರ್ದಿಸಿ ರಸವನ್ನು ತೆಗೆದು ಇಡಿರಿ. ॥೮॥

ಭಾ ॥ ಋಷ್ವಾವತಿಮಹತ್ತರೌ । ಮಹದ್ಭಿಃ ಸೋತೃಭಿಃ ಸೋಮಮಿಂದ್ರಾಯ ಮಧು ಮತ್ಸುತಂ ॥೮॥

ಅ ॥ ಋಷ್ವೌ=ಅತ್ಯಂತ ಶ್ರೇಷ್ಠರಾದ, ಸೋಮ ಮತ್ತು ಸೋಮನ ಅಮಾತ್ಯನಾದ ವನಸ್ಪತಿ ಎಂಬ ದೇವತೆಗಳೇ, ಶ್ರೇಷ್ಠರಾದ, ಸೋಮವನ್ನು ಭೇದಿಸುವ ಋತ್ವಿಜರಿಂದ ಕೂಡಿಕೊಂಡು, ನೀವಿಬ್ಬರು ಇಂದ್ರನೆ ಉದ್ದಿಶ್ಯ ಸ್ವಾದುರಸ ಯುಕ್ತವಾದ ಸೋಮವನ್ನು ಚೆನ್ನಾಗಿ ರಸತೆಗೆದಿಡಿರಿ.

ವಿ ॥ ಯದ್ಯಪಿ ಋಷ್ವ ಶಬ್ದಕ್ಕೆ ಮಹತ್ ಎಂದೇ ಅರ್ಥವು ಆದಕಾರಣ ಋಷ್ವೌ=ಮಹಾಂತೌ ಎಂದು ಹೇಳಬೇಕಿತ್ತು. ಅತಿಮಹತ್ತರೌ ಎಂದು ಹೇಳಿದ್ದು ಹೇಗೆ ಎಂದರೆ-ಸೋತೃಗಳಲ್ಲಿ (ಸೋಮವನ್ನು ಕಂಡಿಸುವವರಲ್ಲಿ) ಮುಖ್ಯಾಮುಖ್ಯನ್ಯಾಯವು ಬಾಧಿತವಾಗಿದೆ. ದೇವತೆಯಲ್ಲಿ ಬಾಧಿತವಲ್ಲ. ಆದಕಾರಣ ಅತಿ ಮಹತ್ತರೌ ಎಂದು ಹೇಳಿದ್ದು. ॥೮॥

ಅವ ॥ ಈ ಋಕ್ಕು ಸೋಮದೇವತಾಕವು ಗಾಯತ್ರೀ ಛಂದಸ್ಕವು.

ಋ ॥ (೩.೨೧) ಉಚ್ಛಿಷ್ಟಂ ಚಮ್ವೋರ್ಭರ ಸೋಮಂ ಪವಿತ್ರ ಆಸೃಜ । ನಿಧೇಹಿ ಗೋರಧಿ ತ್ವಚಿ ॥೯॥೨೬॥೨೮॥

ಅ ॥ ಸೋಮಂ=ಈ ಸೋಮವನ್ನು ಉತ್=ಉತ್ಪವನಕ್ಕಾಗಿ, ಶುದ್ಧೀಕರಿಸುವುದಕ್ಕಾಗಿ, ಪವಿತ್ರೇ=ಸೋಮ ರಸವನ್ನು ತುಂಬಿಸುವುದಕ್ಕಾಗಿ ಯಾವುದು ಸ್ಥೂಲವಾದ ಕುಂಡವು ಸ್ಥಾಪಿಸಲ್ಪಡುತ್ತದೋ, ಅದು ದ್ರೋಣ ಕಲಶವೆನಿಸುತ್ತದೆ. ಅಂತಹ ದ್ರೋಣ ಕಲಶದ ಮೇಲೆ ಇರತಕ್ಕ ಪವಿತ್ರ ಪಾತ್ರದಲ್ಲಿ ಆಸೃಜ=ಇಡು. (ಉಳಿದ ಸೋಮವನ್ನು) ಚಮ್ವೋಃ =ಚಮಸನಾಮಕ ಪಾತ್ರಗಳಲ್ಲಿ ಭರ= (ಭೃಞ ಭರಣೇ) ತುಂಬಿಸಿಡು. ಗೋರಧಿತ್ವಚಿ=ಚರ್ಮದ ಮೇಲೆ, (ಋಜೀಷಂ=ಸವನಾಂತರದಲ್ಲಿ ರಸವನ್ನು ಬೇರೆ ತೆಗೆದ ಮೇಲೆ ಅವಶಿಷ್ಟವಾದ ನೀರಸ ಪದಾರ್ಥವನ್ನು) ನಿಧೇಹಿ=ಸ್ಥಾಪಿಸು. (ಹೀಗೆ ಋಷಿಯು ತನ್ನನ್ನು ಕುರಿತು ಅಥವಾ ತನ್ನ ಅಂತರ್ಯಾಮಿಯನ್ನು ಕುರಿತು ಹೇಳಿದ್ದೆಂದು ತಿಳಿದುಕೊಳ್ಳಬೇಕು.) (ಅಧ್ಯಾತ್ಮಪರವಾದುದು) ಸೋಮಂ=ಈ ಮನಸ್ಸನ್ನು, ಉತ್ ಶುದ್ಧೀಕರಿಸಿಕೊಳ್ಳುವುದಕ್ಕಾಗಿ, ಪವಿತ್ರೇ=ಬುದ್ಧಿಯಲ್ಲಿ, ಆಸೃಜ=ಇಡು. ಉಳಿದ ಮನೋವೃತ್ತಿ ವಿಶೇಷವನ್ನು ಚಮ್ವೋಃ=ಚಮಸಗಳೆನಿಸಿಕೊಂಡ ಶಿರೋಭಾಗಗಳಲ್ಲಿ, ಭರ=ಇಡು. ಗೋರಧಿತ್ವಚಿ=ಮುಖಚರ್ಮದಲ್ಲಿ, (ಋಜೀಷಂ=ಋಜೀಷಸ್ಥಾನೀಯವಾದ ಮನೋವೃತ್ತಿ ವಿಶೇಷವನ್ನು ನಿಧೇಹಿ=ಇಡು. (ಅಂದರೆ ಬುದ್ಧ್ಯಾದಿ ಸ್ಥಾನಗಳಲ್ಲಿರತಕ್ಕ ಶ್ರೀಹರಿಯಲ್ಲಿ ಮನಸ್ಸನ್ನು ಸ್ಥಿರವಾಗಿ ಇಡು. ॥೯॥

ಭಾ ॥ (1) ಸೋಮಮುತ್ಪವನಾಯೈತಂ ದ್ರೋಣೋಪರಿ ಪವಿತ್ರಕೇ ॥ ಭರ (2) ಶಿಷ್ಟಂಚಮಸಯೋಃ (3) ಋಜೀಷಂ ಗೋರಧಿ ತ್ವಚಿ ॥ (4) ಭರೇತ್ಯಾತ್ಮಾನಮೇವಾಹ ಸ್ವಾಂತರ್ಯಾಮಿಣಮೇವವಾ ॥ ಶಿರೋಭೇದೌತು ಚಮಸೌ ದ್ರೋಣಂ ಚೋದರಮೀರಿತಂ ॥ (5) ಪವಿತ್ರಂ ಬುದ್ಧಿರೇವಾತ್ರ ಮನಶ್ಶುದ್ಧಿಸ್ತಯಾ ಯತ ॥ (6) ಮುಖಚರ್ಮೈವ ಗೋಚರ್ಮ ಮನ ಏತೇಷು ವಿಷ್ಣವಿ ॥ ಧಾರ್ಯಂ ॥೯॥

ಅ ॥ (1) (ಈ ಅಂತಿಮವಾದ ಋಕ್ಕು ಪ್ರಜಾಪತಿಯಾದ ಹರಿಶ್ಚಂದ್ರನ ಪ್ರಶಂಸೆಯು. ಅಥವಾ ಗೋ ಚರ್ಮದ ಪ್ರಶಂಸೆಯಿಂದ, ಎಂದು ಅನುಕ್ರಮಣಿಕಾಕಾರರು ಹೇಳಿದು ಆಯುಕ್ತವು. ಏಕೆಂದರೆ ಹರಿಶ್ಚಂದ್ರನ ಸ್ತುತಿಯೇ ಇಲ್ಲಿ

ತೋರುವುದಿಲ್ಲ. ಗೋ ಚರ್ಮವು ಪ್ರತಿಭಾಸವಾದರೂ ಗೋಚರ್ಮದ ಸ್ತುತಿಯು ಇಲ್ಲಿ ಇರುವುದಿಲ್ಲ. ಮತ್ತೆ ಚಮಸಭರಣಾದಿಗಳಿಂದ ಸೋಮವೇ ಸಂಸ್ಕಾರ್ಯವಾಗಿರುವುದರಿಂದ ಸೋಮವೇ ಪ್ರಧಾನವು. ಆದಕಾರಣ ಸೋಮವೇ ಇಲ್ಲಿ ದೇವತೆಯೆಂದು ತಿಳಿಯುತ್ತದೆ.) ಈ ಸೋಮವನ್ನು ಶುದ್ಧೀಕರಿಸುವುದಕ್ಕಾಗಿಯೇ, ದ್ರೋಣ ಕಲಶದ ಮೇಲೆ ಇರತಕ್ಕ ಪವಿತ್ರ ಪಾತ್ರದಲ್ಲಿ, ಇದು (೨) ಅವಶಿಷ್ಟವಾದ ಸೋಮವನ್ನು ಚಮಸನಾಮಕ ಪಾತ್ರಗಳಲ್ಲಿ ತುಂಬಿಸು. (3) ನೀರಸವಸ್ತುವನ್ನು ಚರ್ಮದ ಮೇಲೆ ಸ್ಥಾಪಿಸು. (ಸೋಮ ರಸವನ್ನು ಚರ್ಮದಲ್ಲಿ ಇಡುವುದು ಯಾಜ್ಞಿಕರಲ್ಲಿ ಪ್ರಸಿದ್ಧಿಯಿಲ್ಲದಿರುವ ಪ್ರಯುಕ್ತ ಋಜೀಷಂ ಎಂದು ಅಧ್ಯಾಹಾರ ಮಾಡಿದ್ದು.) (ಯದ್ಯಪಿ ಈ ಋಕ್ಕಿನಲ್ಲಿ ಏತಂ ಎಂದೂ ದ್ರೋಣೋಪರಿ ಎಂದೂ ಇಲ್ಲ. ಆದಾಗ್ಯೂ ಏನಂ ದ್ರೋಣಕಲಶಂ ಅಭ್ಯವನಿನಾಯೋಚ್ಛಿಷ್ಟಂ ಚಮ್ವೋರ್ಭರ ಋಕ್ಕಿನಿಂದ ದ್ರೋಣಕಲಶವನ್ನು ಕುರಿತು ಶುನಃಶ್ಶೇಪನು ಒಯ್ದನು ಎಂದು ಹೇಳಿದುದರಿಂದಲೂ ಈ ಋಕ್ಕಿನಲ್ಲಿ ಸೋಮನೇ ದೇವತೆ ಎಂದು ಸಿದ್ಧಿಸುತ್ತದೆ.) (ಆದುದರಿಂದಲೇ ಬೃಹದ್ದೇವತಾಕಾರನು 'ಸೋಮ ಮಂತ್ಯಾ ಪ್ರಶಂಸತಿ ಎಂದು ಬೃಹದ್ದೇವತಾಕಾರರು ಹೇಳಿರುವರು.) (4) (ಹಾಗಾದರೆ ಭರ, ಸೃಜ, ನಿಧೇಹಿ, ಎಂದು ಯಾರನ್ನು ಕುರಿತು ಹೇಳುವುದೆಂದರೆ) ಭರ ಎಂದೂ, ಸೃಜ ಎಂದೂ, ನಿಧೇಹಿ ಎಂದೂ ತನ್ನನ್ನು ಕುರಿತೇ ಹೇಳಿದ್ದು ಅಥವಾ ತನ್ನ ಅಂತರ್ಯಾಮಿಯನ್ನು ಕುರಿತೇ ಹೇಳಿದ್ದು. (ಈ ಕ್ರಿಯಾಕರ್ತನು ಇನ್ನೊಬ್ಬನು ಇಲ್ಲ. (ಅಧ್ಯಾತ್ಮ ಪರವಾದುದು. ಚಮಸ ಮೊದಲಾದ ಶಬ್ದಗಳ ಅರ್ಥವನ್ನು ಹೇಳುತ್ತಾರೆ.) ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಃ ಚಮಸ ಊರ್ಧ್ವಬುಧ್ನಃ ಎಂಬ ಶ್ರುತಿಯಿಂದ ಚಮಸಗಳೆಂದರೆ ಶಿರೋಭಾಗಗಳು. ದ್ರೋಣವೆಂದರೆ ಉದರವು, ಉಪಲಕ್ಷಣಯಾ ಹೃದಯವು. (ಏಕೆಂದರೆ ಹೃದಯದಲ್ಲಿ ಸೋಮ ಶಬ್ದವಾಚ್ಯವಾದ ಮನೋವೃತ್ತಿಯು ಪ್ರಚುರವಾಗಿದೆ.) (5) ಪವಿತ್ರವೆಂದರೆ ಬುದ್ಧಿಯೇ, ಆ ಬುದ್ಧಿಯಿಂದಲೇ ಯಾವ ಕಾರಣದಿಂದ ಮನಸ್ಸಿನ ಶುದ್ಧಿಯಾಗುತ್ತದೋ, (ಮನಶ್ಶುದ್ಧಿಸ್ತಯಾ ಯತಃ ಎನ್ನುವುದರಿಂದ ಸೋಮದ ಶುದ್ಧಿಗೆ ಕಾರಣವಾದ ಪವಿತ್ರಕ್ಕೂ ಬುದ್ಧಿಗೂ ಸಾಮ್ಯವನ್ನು ಪಪಾದಿಸಿದ ಹಾಗಾಯ್ತು.) (6) (ಗೋ ಶಬ್ದದಿಂದ ವಾಗಿಂದ್ರಿಯಕ್ಕೆ ಆಧಾರ ಭೂತವಾದ ಮುಖವು ಲಕ್ಷಿತವಾಗುತ್ತದೆ.) ತಥಾಚ ಗೋ ಶಬ್ದವಾಚ್ಯವಾದ ವಾಕ್ ಮುಖದಲ್ಲಿದೆ. ಆದ ಕಾರಣ ಮುಖಚರ್ಮವೇ ಗೋಚರ್ಮವು. (ಇವುಗಳಲ್ಲಿ ಸೋಮವನ್ನು ಇಡುವುದು ಮೊದಲಾದುದು ಹೇಗೆಂದರೆ) ಈ ಆಧಾರಗಳಾದ ಶಿರಸ್ಸು ಹೃದಯಮುಖಗಳಲ್ಲಿರತಕ್ಕ ವಿಷ್ಣುವಿನಲ್ಲಿ ಸೋಮರೂಪವಾದ ಮನಸ್ಸನ್ನು ಇಡಬೇಕು. (ಈ ಪಕ್ಷದಲ್ಲಿ ನಿಧೇಹಿ ಎನ್ನುವಲ್ಲಿಯೂ ಸೋಮವೇ ಕರ್ಮವು.) (ವಿಷ್ಣವಿ ಎಂದು ಪ್ರಯೋಗ ಮಾಡಿದುದರಿಂದ ತನ್ನ ಭಾಷ್ಯವು ವೇದ ತುಲ್ಯವೆಂದು ಸೂಚಿತವಾಯ್ತು.) ||೯||೨೬||

ಅವ || ಯಚ್ಚಿದ್ಧಿ ಎನ್ನುವುದಕ್ಕೆ ೭ ಋಕ್ಕುಗಳು. ೨೯ನೇ ಸೂಕ್ತವು. ೧ ವರ್ಗವು, ಇಂದ್ರ ದೇವತಾಕವು. ಅಥವಾ ಶಚೀದೇವತಾಕವು. ಪಙ್ಕ್ತಿ ಛಂದಸ್ಕವು.

ಋ || (೩.೨೨) ಯಚ್ಚಿದ್ಧಿ ಸತ್ಯ ಸೋಮಪಾ ಅನಾಶಸ್ತಾ ಇವ ಸ್ಮಸಿ |

ಆ ತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ||೧||

ಅ ॥ ಸತ್ಯ=(ಸಚ್ಛಬ್ದ ಉತ್ತಮಂ ಬ್ರೂಯಾದಾನಂದಂ ತೀತಿ ವೈ ವದೇತ್ । ಯೇತಿ ಜ್ಞಾನಂ ಸಮುದ್ದಿಷ್ಟಂ ಎಂಬ ಪ್ರಮಾಣದಿಂದ) ಷಡ್ಗುಣ ಪರಿಪೂರ್ಣನಾದ, ಸೋಮಪಾಃ=ಸೋಮಪಾನ ಮಾಡಿರುವ, ತುವಿಮಘ=ಮಹಾಯಾಗಗಳುಳ್ಳ (ಅಂದರೆ ಸಮಸ್ತ ಯಜ್ಞಗಳಲ್ಲಿಯೂ ಪೂಜಿಸಲ್ಪಡುವ) ಇಂದ್ರ=ಶ್ರೀ ಪರಮಾತ್ಮನೇ ಯಚ್ಚಿತ್=ಯಾವ ಕಾರಣದಿಂದಲೇ, (ನಾವು ಈಗ) ಅನಾಶಸ್ತಾ ಇವ=(ಶಂಸಸ್ತುತೌ) ಸ್ತುತಿಸಲ್ಪಡದಿರುವವರಂತೆ, ಸ್ಮಸಿ=ಆಗಿರುತ್ತೇವೋ, ಹಿ=ನಿಶ್ಚಯವು. (ಸರ್ವಥಾ ಸ್ತುತ್ಯರಲ್ಲವೆಂದಾಗಿದ್ದರೆ ಲೌಕಿಕರು ಪ್ರಶಂಸಿಸು ಎಂದು ಪ್ರಾರ್ಥಿಸುವುದು ಕೂಡದೆ ಹೋಗುವುದು. ಏಕೆಂದರೆ ಮಹಾ ಸಮರ್ಥನಾದ ಈಶ್ವರನೂ ಕೂಡ ಅತ್ಯಂತ ಅಪ್ರಶಸ್ತ ಇಂದ್ರಿಯಾದಿಗಳುಳ್ಳ ತಮೋ ಯೋಗ್ಯರಾದವರನ್ನು ಯಾವಾಗಲೂ, ಪ್ರಶಸ್ತ ಇಂದ್ರಿಯಾದಿಗಳುಳ್ಳ ಮುಕ್ತಿಯೋಗ್ಯರನ್ನಾಗಿ ಮಾಡುವುದಿಲ್ಲವಷ್ಟೆ. ಆದಕಾರಣ ಸರ್ವಥಾ ಸ್ತುತ್ಯರಲ್ಲ, ಎಂಬುವುದು ನಮಗೆ ಸಮ್ಮತವಲ್ಲ, ಅಥವಾ ತಾನು ತಮಸ್ಸಿಗೆ ಯೋಗ್ಯನಲ್ಲ ಎಂದು ತೋರಿಸುವುದಕ್ಕಾಗಿ) ಇವ ಎಂದು ಹೇಳಿದ್ದು. (ಆದಕಾರಣ) ತ್ವಂ ತು=ನೀನೇ, ನಃ=ನಮ್ಮನ್ನು ಶುಭ್ರಿಷು=ಶುಭ್ರಗಳಾದ, ಸಹಸ್ರೇಷು=ಸಹಸ್ರ ಸಂಖ್ಯಾಕಗಳಾದ, ಗೋಷು ಅಶ್ವೇಷುಚ=ಗೋವು ಅಶ್ವಗಳು ಇವುಗಳ ವಿಷಯದಲ್ಲಿ, ಆಶಂಸಯ=ಪ್ರಶಂಸಿಸು, (ಅಂದರೆ-ಜನರು, ಗೋವು ಅಶ್ವ ಮೊದಲಾದ ಸಂಪತ್ತುಗಳಿದ್ದರೆ ನಮ್ಮನ್ನು ಹೇಗೆ ಸ್ತುತಿಸುವರೋ, ಹಾಗೆಯೇ ನಮಗೆ ಗವಾದಿ ಸಂಪತ್ತುಗಳನ್ನು ಕೊಟ್ಟು, ಜನರು ಸ್ತುತಿಸುವಂತೆ ನಮ್ಮನ್ನು ಮಾಡು.) (ಅಧ್ಯಾತ್ಮಪರವಾದುದು,) ಗೌ=ವಾಗಿಂದ್ರಿಯವು ಅಶ್ವಾಃ=ಮನಸ್ಸು ಮೊದಲಾದ ಜ್ಞಾನೇಂದ್ರಿಯಗಳು, ಅಂತೂ ಶುದ್ಧಗಳಾದ ವಾಕ್‌ಮನಸ್ಸು ಮೊದಲಾದ ವಿಷಯದಲ್ಲಿ ನಮ್ಮನ್ನು ಪ್ರಶಂಸಿಸು. ಭಗವಂತನ ಗುಣಾದಿರೂಪಗಳಾದ ವಿಷಯಗಳು ಬಹಳವಿದ್ದ ಪ್ರಯುಕ್ತ ಸಹಸ್ರೇಷು ಎಂದದ್ದು.

ವಿ ॥ ಶ್ರೀ ಪರಮಾತ್ಮನ ಗುಣ ಕರ್ಮರೂಪ ಮೊದಲಾದ ಬಹು ವಿಷಯಗಳು ನಮಗೆ ಹೇಳಲು ಯೋಗ್ಯಗಳೂ ತಿಳಿಯಲು ಯೋಗ್ಯಗಳೂ ಆಗಿವೆ. ಆದಕಾರಣ ನಮ್ಮನ್ನು ಅಂತಹ ಭಗವದ್ಗುಣಾದಿಗಳನ್ನು ತಿಳಿಯುವವರನ್ನಾಗಿಯೂ ಇತರರಿಗೆ ಹೇಳುವವರನ್ನಾಗಿಯೂ ಮಾಡಿ ಜನರು ವಾಗಾದಿಗಳ ವಿಷಯದಲ್ಲಿ ಸ್ತುತಿಸುವಂತೆ ನಮ್ಮನ್ನು ಸ್ತುತಿಸು.॥೧॥

ಭಾ ॥ ಯತ್ಸದ್ಗುಣಾ ಶಸ್ತಾ ಇವ ಸ್ಮಸಿ ವಯಂ ತತಃ । ಶುಭ್ರವಾಙ್ಮನ ಆದೀನಾಂ ವಿಷಯೇಽಸ್ಮಾನ್ ಪ್ರಶಂಸಯ ॥ ಬಹು ವಾಚ್ಯಜ್ಞೇಯಯುಕ್ತಾನ್ ಕೃತ್ವಾಽಸ್ಮಾಂ ಸ್ತ್ವಂ ಮಹಾಮಖ ॥೧॥

ಅ ॥ (ಸ ಇಂದ್ರಂ ತುಷ್ಟಾವ ಯಚ್ಚಿದ್ಧಿ ಸತ್ಯಸೋಮಪಾಃ ಇತಿ ಚೈತೇನ ಸೂಕ್ತೇನೋತ್ತರಸ್ಯ ಚ ಪಂಚದಶಭಿಃ ಎಂಬ ಬ್ರಾಹ್ಮಣ ವಾಕ್ಯದಿಂದ ಇಂದ್ರ ದೇವತಾಕವು ಈ ಸೂಕ್ತವು ಎಂದು ಸಿದ್ಧಿಸುತ್ತದೆ.)ಎಲೋ ಸದ್ಗುಣ ಪರಿಪೂರ್ಣನಾದ ಸಮಸ್ತ ಯಜ್ಞಗಳಲ್ಲಿಯೂ ಪೂಜಿಸಲ್ಪಡುವ ಶ್ರೀಹರಿಯೇ, ಯಾವ ಕಾರಣದಿಂದ ನಾವು ಸ್ತುತ್ಯರಾಗದಿದ್ದವರಂತೆ ಆಗಿರುತ್ತೇವೋ, ಆ ಕಾರಣ ನೀನು ನಮ್ಮನ್ನು ಬಹಳ ಭಗವದ್ಗುಣಾದಿಗಳನ್ನು ಹೇಳುವವರನ್ನಾಗಿಯೂ ತಿಳಿಯುವವರನ್ನಾಗಿಯೂ ಮಾಡಿ ಶುದ್ಧಗಳಾದ ವಾಕ್ ಮನಸ್ಸು ಮೊದಲಾದ ಜ್ಞಾನೇಂದ್ರಿಯಗಳ ವಿಷಯದಲ್ಲಿ ನಮ್ಮನ್ನು ಪ್ರಶಂಸಿಸು. ॥೧॥

ಋ ॥ (೩.೨೩) ಶಿಪ್ರಿನ್ವಾಜಾನಾಂ ಪತೇ ಶಚೀವಸ್ತವ ದಂಸನಾ ।

ಆತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೨॥

ಅ॥ ಶಿಪ್ರಿನ್ = ಸುಖವುಳ್ಳ, ವಾಜಾನಾಂ ಪತೇ =ಅನ್ನಗಳಿಗೆ ಅಧಿಪತಿಯಾದ, ಶಚೀವಃ =ವಚನಗಳ ಪ್ರಯೋಗಾದಿಗಳನ್ನು ತಿಳಿದವನಾದುದರಿಂದ ವಾಗಭಿಜ್ಞನಾದ, ಇಂದ್ರನೇ, ದಂಸನಾ=ಸಮಸ್ತ ಜನರು ಮಾಡತಕ್ಕ ತರ್ಮಗಳು, ತವ=ನಿನ್ನಿಂದ ಪ್ರೇರಿತಗಳೂ ನಿನ್ನ ವಿಷಯಗಳೂ ಆಗಿವೆ. (ಆತೂನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು) ಇಂತಹ ಸುಖಿಯೂ ಅನ್ನಪತಿಯೂ ಕರ್ಮಪ್ರೇರಕನೂ ಆದ ನೀನು ನಮ್ಮನ್ನು ಗವಾದಿ ವಿಷಯಗಳಲ್ಲಿ ಪ್ರಶಂಸಿಸು. ॥೨॥

ಭಾ ॥ ಸುಖಿನ್ನನ್ನಪತೇ ವಾಗ್ಜ್ಞ ತವ ಕರ್ಮಾಣಿ ಸರ್ವತಃ ॥೨॥

ಅ॥ ಸುಖಿಯೂ ಅನ್ನಾಧಿಪತಿಯೂ ವಾಗಭಿಜ್ಞನೂ ಆದ ಶ್ರೀ ಹರಿಯೇ ಜನರು ಮಾಡತಕ್ಕ ಕರ್ಮಗಳೆಲ್ಲವೂ ನಿನ್ನಿಂದಲೇ ಪ್ರೇರಿತಗಳೂ ನಿನ್ನ ಮಿಷಯಕಗಳೂ ಆಗಿವೆ. ॥೨॥

ಋ ॥ (೩.೨೪) ನಿ ಷ್ವಾಪಯಾಮಿಥೂದೃಶಾ ಸಸ್ತಾಮಬುಧ್ಯಮಾನೇ ।

ಆತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೩॥

ಅ॥ ಇಂದ್ರ =ಎಲೋ ಪರಮೇಶ್ವರನೇ, ಮಿಥುದೃಶಾ= (ದೈತ್ಯರಾಕ್ಷಸರೇ ಮುಖ್ಯತಃ ಮಿಥ್ಯಾಜ್ಞಾನಿಗಳಾದುದರಿಂದ) ದೈತ್ಯರಾಕ್ಷಸರೆಂಬ ಪ್ರಜೆಗಳಿರಾ, ಸಸ್ತಾಂ = (ಷಸಸ್ವಪ್ನೇಸ್ವಾಪವು ಸಮಸ್ತ ಇಂದ್ರಿಯಗಳ ಉಪರತಿಸ್ವರೂಪವಾಗಿರುವುದರಿಂದ ಆಗ ಜ್ಞಾನವೇ ಇಲ್ಲದಿರುವ ಪ್ರಯುಕ್ತ ಸಸ್ತಾಂ ಎನ್ನುವುದರಿಂದ ಅಜ್ಞಾನವನ್ನು ಲಕ್ಷಣಯಾ ಇಟ್ಟುಕೊಳ್ಳಬೇಕು) ಅಜ್ಞಾನಿಗಳಾಗಿರುವಿರಿ. ಯಾವ ಪ್ರಕಾರದಿಂದ ಬಹ್ವಜ್ಞಾನಿಗಳು ಎಂದರೆ) ಅಬುಧ್ಯಮಾನೇ=ಯಾವ ರೀತಿಯಾಗಿ ಸದಾ ತತ್ವಜ್ಞಾನ ಶೂನ್ಯರಾಗುತ್ತಾರೋ, (ಹಾಗೆ ನೀನು ಆ ಪ್ರಜೆಯನ್ನು) ನಿಷ್ವಾಪಯ = ಪರತತ್ವ ವಿಷಯದಲ್ಲಿ ಚೆನ್ನಾಗಿ ಮೋಹಿಸು. ಆತೂನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು. ॥೩॥

ಭಾ ॥ ದೈತ್ಯರಕ್ಷಃ ಪ್ರಜೇ ಮಿಥ್ಯಾದೃಶೌ ಸಸ್ತಾಂ ಪುನರ್ಬಹು । ಅಬುಧ್ಯಮಾನೇ ನಿತ್ಯಂಚ ಯಥಾ ನಿಷ್ವಾಪಯೇಶ್ವರ ॥೩॥

ಅ॥ ಮಿಥ್ಯಾಜ್ಞಾನಿಗಳಾದ ದೈತ್ಯರಾಕ್ಷಸರೆಂಬ ಪ್ರಜೆಗಳಿರಾ, ಪುನಃ =ಬಹಳವಾಗಿ ಅಜ್ಞಾನಿಗಳಾಗಿರುವಿರಿ. ಹೇಗೆಂದರೆ -ಯಾವ ಪ್ರಕಾರದಿಂದ ಸರ್ವದಾ ತತ್ವಜ್ಞಾನ ಶೂನ್ಯರಾಗುತ್ತಾರೋ, ಹಾಗೆಯೇ ಎಲೋ ಶ್ರೀ ಹರಿಯೇ ನೀನು ಅಂತಹ ಪ್ರಜೆಗಳನ್ನು ಪರತತ್ವ ವಿಷಯದಲ್ಲಿ ಚೆನ್ನಾಗಿ ಮೋಹಗೊಳಿಸು. ॥೩॥

ಋ ॥ (೩.೨೫) ಸಸಂತು ತ್ಯಾ ಅರಾತಯೋ ಬೋಧಂತು ಶೂರ ರಾತಯಃ ।

ಆತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೪॥

ಅ॥ ಶೂರ = ಎಲೋ ಶ್ರೀ ಹರಿಯೇ (ಚೆನ್ನಾಗಿ ನಿರ್ಭಯವಾಗಿ) ತ್ಯಾಃ = ಅಪ್ರಸಿದ್ಧರಾದ (ಪುಲ್ಲಿಂಗಕ್ಕೆ ವ್ಯತ್ಯಾಸವಾಗಿ ಸ್ತ್ರೀಲಿಂಗವು) ಅರಾತಯಃ = ನಿನ್ನ ಶತ್ರುಗಳು, ಸಸಂತು = (ಷಸಸ್ವಪ್ನೇ) ಸ್ವಾಪ ಮಾಡಲಿ. (ಅಂದರೆ ಸರ್ವದಾ ಅಜ್ಞಾನದಿಂದ ಮೋಹಯುಕ್ತವಾಗಲಿ) ಮತ್ತು ರಾತಯಃ = ನಿನ್ನ ಮಿತ್ರರು, ಭೋಧಂತು = ನಿನ್ನ ರೂಪವನ್ನು ತಿಳಿಯುತ್ತಲೇ ಇರಲಿ. ಆತೂನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು. (ಅಥವಾ ಈ ಋಕ್ಕಿನಲ್ಲಿ ತ್ಯಾಃ ಎಂಬ ಪದವು ಪ್ರಜಾಃ ಎಂಬ ಸ್ತ್ರೀವಾಚಕವೇ. ಹೀಗೆ ತಿಳಿಸುವುದಕ್ಕಾಗಿಯೇ ಪೂರ್ವಋಕ್ಕಿನ ಭಾಷ್ಯದಲ್ಲಿ ದೈತ್ಯರಕ್ಷಃ ಪ್ರಜೇ ಎಂದು ಪ್ರಜಾ ಎಂಬ ಪದವನ್ನೂ ಸ್ವೀಕರಿಸಿರುವರು. ತಥಾಚ ಶತ್ರುರೂಪರಾದ=ತ್ಯಾಃ=ಪ್ರಸಿದ್ಧರಾದ, ಪ್ರಜಾಃ =ಪ್ರಜೆಗಳು ಸ್ವಾಪಮಾಡಲಿ. ಎಂದರ್ಥವು) ॥೪॥

ಭಾ ॥ ಸ್ವಪಂತು ತೇ ಶತ್ರವಸ್ತ್ರೀ ಸರ್ವದಾಽಜ್ಞಾನಮೋಹಿತಾ॥
ಬೋಧಂತು ಚೈವ ಮಿತ್ರಾಣಿ ತವ ರೂಪಂ ಸುನಿರ್ಭಯಂ ॥೪॥

ಅ॥ ಆ ಪ್ರಸಿದ್ಧರಾದ ಆ ನಿನ್ನ ಶತ್ರುಗಳು ಸರ್ವದಾ ಅಜ್ಞಾನದಿಂದ ಮೋಹಯುಕ್ತರಾಗಿರಲಿ. ನಿನ್ನ ಮಿತ್ರರು ಏನೂ ಭಯವಿಲ್ಲದೇನೆ ನಿನ್ನ ರೂಪವನ್ನು ತಿಳಿಯುತ್ತಲೇ ಇರಲಿ. ॥೪॥

ಋ ॥ (೩.೨೬) ಸಮಿಂದ್ರ ಗರ್ದಭಂ ಮೃಣ ನುವಂತಂ ಪಾಪಯಾಽಮುಯಾ ॥
ಆ ತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೫॥

ಅ॥ ಇಂದ್ರ = ಶ್ರೀ ಹರಿಯೇ, ಗರ್ದಭಂ =ದುರ್ವಾಕ್ಯತ್ವಾದಿಗಳು, ಉಭಯತ್ರ ಸಮಗಳೇ ಆಗಿರುವುದರಿಂದ ಮಾಯಾವಾದಿಯೆಂಬ ಕತ್ತೆಯನ್ನು ಪಾಪಯಾ =ಪಾಪಿಷ್ಠವಾದ, ಅಮುಯಾ=ಈ ಮಾಯೆಯಿಂದ, ಶಾಠ್ಯದಿಂದ, ಗೂಢ ದ್ವೇಷದಿಂದ) ನುವಂತಂ =ಸ್ತುತಿಸುವವನನ್ನೂ ಕೂಡ, ಅಥವಾ ಮಾಯಾಮಯಾಸ್ತವಗುಣಾಃ ಇತ್ಯಾದಿ ರೂಪವಾಗಿ ಕೂಗುವವನನ್ನೂ ಕೂಡ, ಸಮ್ ಮೃಣ = (ಮೃಣ ಹಿಂಸಾಯಾಂ) ತಮಸ್ಸಿನಲ್ಲಿಯೇ ಬಿಸುಟು ಚೆನ್ನಾಗಿ ತಪ್ತಗಳಾದ ಪಾಷಾಣಗಳಿಂದ ಸರ್ವದಾ ಪುಡಿ ಪುಡಿ ಮಾಡು. ಆತೂನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು.

ಭಾ ॥ ಪಾಪಯಾ ಮಾಯಯಾ ಮಿಥ್ಯಾಸ್ತುವಂತಂ ಶ್ಯಾಮಪಿ ಪ್ರಭೋ । ಮಾಯಾಮ ಯಾಸ್ತವ ಗುಣಾಃ ನ ಸಂತಿ ಪರಮಾರ್ಥತಃ । ಇತಿ ನಿತ್ಯಂ ರುವಂತಂ ಚ ಮಾಯಾ ವಾದ್ಯಾಖ್ಯಗರ್ದಭಂ । ಸಂಚೂರ್ಣಯ । ತಮಸ್ಯೇವ ಕ್ಷಿಪ್ತ್ವಾ ತಪ್ತಾಶ್ಮಭಿಃ ಸದಾ ॥೫॥

ಅ॥ ಎಲೋ ಪ್ರಭುವೇ ನಿನ್ನನ್ನಾದರೂ ಪಾಪಿಷ್ಠವಾದ ಮಾಯೆಯಿಂದ ಶಾಠ್ಯದಿಂದ ಸ್ತುತಿಸುತ್ತಿರುವ ಅಥವಾ ನಿನ್ನ ಗುಣಗಳು ಮಾಯಾಮಯಗಳು, (ಮಾಯೆಯನ್ನಾಶ್ರಯಿಸಿರುವವುಗಳು.) (ಮಾಯಾ ರೂಪ ಹೇತುವಿನಿಂದ ಗುಣಗಳಿವೆಯೆಂದು ಹೇಳುವವನು) ಪಾರಮಾರ್ಥಿಕವಾಗಿ ಇಲ್ಲ. ಹೀಗೆ ನಿತ್ಯದಲ್ಲಿಯೂ ಕೂಗುತ್ತಿರುವ ಮಾಯವಾದಿಯೆಂಬ ಕತ್ತೆಯನ್ನು ತಮಸ್ಸಿನಲ್ಲಿಯೇ ಹಾಕಿ ಸರ್ವದಾ ಚೆನ್ನಾಗಿ ಕಾಯಿಸಲ್ಪಟ್ಟ ಕಲ್ಲುಗಳಿಂದ ಚೆನ್ನಾಗಿ ಪುಡಿ ಪುಡಿ ಮಾಡು.

ವಿ ॥ (1) ದಯಾಶೀಲ ದೇವ ಪ್ರಸೀದ (ಶಿವ ಭುಜಂಗ ಪ್ರಯಾತ ಸ್ತೋತ್ರ) ಮಹಿಮ್ನಃ ಪಾರಂತೇ ಇದು ಮೊದಲಾದ, ಮಾಯಾವಾದಿಗಳ ಸ್ತೋತ್ರಗಳು ಶಾಸ್ತ್ರ ಮೂಲಕಗಳೂ (2) ನಿರಾಕಾರಮೋಂ ಕಾರಗಮ್ಯಂ (ವೇದಸಾರ ಶಿವಸ್ತವಃ) ಅನೃತ ಜಡ ವಿರೋಧಿ ರೂಪಂ ಇತ್ಯಾದಿಗಳು ಸರ್ವಥಾ ಆಕಾರವೇ ಇಲ್ಲದವನಿಗೆ ಪಾರಮಾರ್ಥಿಕವಾಗಿ ಗುಣಾಶ್ರಯತ್ವವೇ ಕೂಡದಿರುವುದರಿಂದ ಸ್ತುತಿಯಲ್ಲವೆಂದು ಹೇಳಿವೆ. (3) ಏಕೆಂದರೆ ಅನಾದಿಯಾದ ಅನಿರ್ವಾಚ್ಯವಾದ ಪಾಪ ಭೂತವಾದ ಅಪ್ರಾಮಾಣಿಕವಾ ದಮಾಯೆಯನ್ನಾಶ್ರಯಿಸಿ ಅನೇಕಾನೇಕ ಪ್ರಮಾಣ ಸಿದ್ಧಗಳಾದವುಗಳು ಭಗವಂತನಿಗೆ ಅನಂತ ಗುಣಗಳಿವೆ, ಜಗತ್ಸತ್ಯವು ಭಗವಂತನು, ಜಗತ್ಕಾರಣನು ಜ್ಞಾನಾನಂದಾದಿ ಸ್ವರೂಪನು, ದಿವ್ಯ ಮಹಾಮಹಿಮೆಗಳುಳ್ಳವನು, ಇತ್ಯಾದಿ ಅಪಲಾಪ ಮಾಡುವುದು ಸರ್ವಥಾ ಅಯುಕ್ತವು ॥೫॥

ಋ॥ (೩.೨೭) ಪತಾತಿ ಕುಂಡೃಣಾಚ್ಯಾ ದೂರಂ ವಾತೋವನಾದಧಿ ।

ಅತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೬॥

ಅ॥ ವಾತಃ =ವಾಯು ದೇವರು, (ಹಿಂದೆ ಪ್ರಸ್ತುತರಾದ ನಿನ್ನನ್ನು ನಿಂದಿಸುವವರನ್ನು) ವನಾತ್ = ತನ್ನಲ್ಲಿ ಬಿದ್ದವರನ್ನು ಬೇರೆ ಕಡೆಗೆ ಹೋಗಲು ಸರ್ವಥಾ ಬಿಡದಿರುವುದರಿಂದ ವನವೆಂದು ಹೆಸರುಳ್ಳ ಕುಂಡ್‌ಣಾಚ್ಯಾ=ಕುಂಭೀ ಪಾಕಕ್ಕಿಂತಲೂ ನೀಚವೆಂದು ಪ್ರಸಿದ್ಧವಾದ ಅಂಧಂತಮಸ್ಸಿನಲ್ಲಿ ದೂರಂ ಅಧಿ=ಅತಿ ದೂರದಲ್ಲಿ, ಪತಾತಿ=ಬೀಳಿಸಲಿ. ಅತೂನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು ॥೬॥

ಭಾ ॥ (೧) ಧೂರಂ ಚ ಪಾತಯತ್ಯೇನಾನ್ ವಾಯುಸ್ತಸ್ಮಿನ್ ತಮಸ್ಯಧಃ ॥ (೨) ವನಂದೃಢಗ್ರಹೇಣೈವ ತತ್ತಮೋ ವೇದನೋಲ್ಬಣಾ ॥ ಕುಂಡೃಣಾಚೀತಿ ಸಂಪ್ರೋಕ್ತಾ (೩) ಕುಂಡಾನ್ನೀಚತ್ವತೋಽಧಿಕಂ ॥ (೪) ಕುಂಭಃಕುಂಡಾಭಿಧಃ ಕುಂಭೀಪಾಕಾನ್ನೀಚಾ ಹಿ ತದ್ಗತಿಃ ॥ (೫) ರೇಫಃ ಸ್ವರವ್ಯತ್ಯಯಶ್ಚ ತದಾಧಿಕ್ಯಾರ್ಥಮೀರಿತೌ ॥೬॥

ಅ॥ (1) ವಾಯುದೇವರು, (ಎಲೋ ಶ್ರೀ ಹರಿಯೇ) ನಿನ್ನನ್ನು ಯಾರು ಯಾರು ನಿಂದಿಸುವರೋ, ಅಂತಹವರನ್ನು ಕುಂಡಣಾಚ್ಯ ಎಂದು ಪ್ರಸಿದ್ಧವಾದ ಅಂಧಂತಮಸ್ಸಿನಲ್ಲಿ ಅತಿ ದೂರದಲ್ಲಿ ಬೀಳಿಸಲಿ. (2) ತಮಸ್ಸು ವನವೆಂದು ಹೇಗೆ ಹೇಳಿಸಿಕೊಳ್ಳುವುದು ಎಂದರೆ) (ವನಧಾತುವಿಗೆ ಸಂಭಜನವೆಂದರ್ಥವು. ಸಂಭಂಜನವೆಂದರೆ ದೃಢವಾಗಿ ಗ್ರಹಣವು. ಅಂದರೆ ವಿಯೋಗವಿಲ್ಲದಿರುವಿಕೆ ಆದ ಕಾರಣ) (ಅಂಧಂತಮಸ್ಸು ನಿತ್ಯವಾದ ಪ್ರಯುಕ್ತ) ಆ ಅಂಧಂತಮಸ್ಸು ವಿಯೋಗವಿಲ್ಲದಿರುವುದರಿಂದಲೇ, (ಅಲ್ಲಿ ಹೋದವರಿಗೆ ಪುನರಾವೃತ್ತಿಯಿಲ್ಲದಿರುವುದರಿಂದಲೇ ಸ್ತ್ರೀಲಿಂಗವನ್ನು ಸಂಪಾದಿಸುವುದಕ್ಕಾಗಿ ಉಲ್ಬಣಾವೇದನಾ ಎಂದದ್ದು) (3) ಕುಂಡ ದೆಶೆಯಿಂದ ಅತಿ ನೀಚವಾದ ಹೇಗೆಂದರೆ) ಕುಂಭೀಪಾಕ ಎಂಬ ನರಕವೇ ಕುಂಡ ಎನಿಸುತ್ತದೆ. ಭಗವಂತನನ್ನು ನಿಂದಿಸುವವರ ಗತಿಯಾದ ಅಂಧಂ ತಮಸ್ಸು ಕುಂಭೀಪಾಕಕ್ಕಿಂತಲೂ ಅತಿ ನೀಚವು. ಹಿ=ರೌರವೋಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ । ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯ ನರಕಾಣಿತು । ತಾಮಿಸ್ರಶ್ಚಾಂಧತಾಮಿಸ್ರೌ ದ್ವೌ ನಿತ್ಯೌಸಂಪ್ರಕೀರ್ತಿತೌ । ಇತಿ ಸಪ್ತಪ್ರಧಾನಾನಿ ಬಲೀಯಸ್ತೂತ್ತರೋತ್ತರಂ ॥ ಎಂದು ಭಾರತ ವಾಕ್ಯ ಪ್ರಸಿದ್ಧವು. (5) (ಹೀಗಾದರೆ ಕುಂಡನೀಚಾ ಎಂದಾಗಬೇಕಿತ್ತು. ಕುಂಡೃಣಾಚೀ) ಎಂದು ಹೇಗೆಂದರೆ

ಕುಂಡನೀಚೈವ ಕುಂಡ್ಯೈಣಾಚೀ. ಇಲ್ಲಿ ರೇಫ ಶಬ್ದದಿಂದ ಶ್ರುತಿ ಸಾಮ್ಯದಿಂದ ಋಕಾರವು ಹೇಳಲ್ಪಡುತ್ತದೆ. ಕುಂಡ ಶಬ್ದದಲ್ಲಿ ಅಕಾರಕ್ಕೆ ವರ್ಣವಿಕಾರ ರೂಪವಾದ ಋ ಕಾರವು. ನೀಚಾ ಎನ್ನುವಲ್ಲಿ ಈ ಕಾರ ಆಕಾರ ಸ್ವರಗಳಿಗೆ ವ್ಯತ್ಯಯವು ಅಂದರೆ ಅಂತಿಮವಾದ ಚಕಾರದಲ್ಲಿರತಕ್ಕ ಆ ಕಾರವು ನ ಕಾರದ ಮೇಲೆಯೂ ನಕಾರದಲ್ಲಿರತಕ್ಕ ಈ ಕಾರವು ಚಕಾರದ ಮೇಲೆಯೂ ಹೀಗೆ ವರ್ಣ ವಿಪರ್ಯಯವು. ತಮಸ್ಸಿಗೆ ಕುಂಭೀಪಾಕದ್ವೆರೆಯಿಂದಲೂ ಅತ್ಯಧಿಕ ದುಃಖವಿದೆಯೆಂದು ತೋರಿಸುವುದಕ್ಕಾಗಿ ಪ್ರಯುಕ್ತಗಳಾಗಿವೆ. ಆ ಅಭಿಪ್ರಾಯದಿಂದಲೇ ಮೊದಲು ಅಧಿಕಂ ಎಂದು ಹೇಳಿದೆ. ॥೬॥

ಋ ॥ (೩.೨೮) ಸರ್ವಂ ಪರಿಕ್ರೋಶಂ ಜಹಿ ಜಂಭಯಾ ಕೃಕದಾಶ್ವಂ ।

ಆತೂನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥೭॥೨೭॥೨೯॥

ಅ ॥ ಇಂದ್ರ =ಶ್ರೀ ಹರಿಯೇ, ಪರಿಕ್ರೋಶಂ = (ಪರಿತಃ ಕ್ರೋಶಃ=ದುಷ್ಟ ವ್ಯವಹಾರಃ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ) ಸರ್ವತ್ರ ದುಷ್ಟ ವ್ಯವಹಾರವನ್ನೇ ಮಾಡುತ್ತಿರುವ (ಅಂದರೆ ನಿಂದಿಸುತ್ತಿರುವ) ಸರ್ವಂ =ಎಲ್ಲಾ ಪಾಪಿಷ್ಠ ಜನರನ್ನು, ಜಹಿ=ಸಂಹರಿಸು. ಜಂಭಯ = ಜಭಿನಾಶನೇ) ಶುನಕಾದಿಗಳಿಂದ ನಿತ್ಯದಲ್ಲಿಯೂ ಕಚ್ಚಿಸು. (ಹೇಗೆಂದರೆ) ಕೃಕದಾಶ್ವಂ = (ದಂಶ ದಂಶನೇ) ಗರಗಸಗಳಿಂದ ಕಠಿಣವಾಗಿ ಶೀಳಿಸುವಿಕೆಯು ಹೇಗೋ, ಹಾಗೆ (ಕಚ್ಚಿಸು) ॥೭॥೨೭॥೨೯॥

ಭಾ ॥ ಸರ್ವಂ ಪರಿಕ್ರೋಶಕರಂ ಪಾಪಿನಂ ಜಹಿ ಜಂಭಯ । ದಂಶಯ ಶ್ವಾದಿಭಿರ್ನಿತ್ಯಂ ಕ್ರಕಚೈರ್ದಂಶನಂ ಯಥಾ ॥೭॥೨೭॥೧೦॥

ಅ ॥ ನಿಂದಿಸುವ ಎಲ್ಲಾ ಪಾಪಿಷ್ಠರನ್ನು ಸಂಹರಿಸು. ಜಂಭಯ ಅಂದರೆ ಗರಗಸಗಳಿಂದ ಹೇಗೆ ವೃಕ್ಷಾಂಗಗಳನ್ನು ಛೇದಿಸುತ್ತಾರೋ, ಹಾಗೆಯೇ ನಿತ್ಯದಲ್ಲಿಯೂ ನಾಯಿ ಮೊದಲಾದವುಗಳಿಂದ ಕಚ್ಚಿಸು. (ಕಟ್ಟಿಗೆಯನ್ನು ಛೇದಿಸುವ, ಹಲ್ಲುಗಳು ಇದ್ದ ಆಯುಧ ವಿಶೇಷವು ಕ್ರಕಚವು. ಗರಗಸವು) ॥೭॥೨೭॥೧೦॥

ಅವ ॥ ೩೦ನೇ ಸೂಕ್ತವು. ೨೨ ಋಕ್ಕುಗಳು, ೪ ವರ್ಗಗಳು ಆದಿಮ ೧೬ ಋಕ್ಕುಗಳು. ಇಂದ್ರದೇವ ತಾಕಗಳು, ಆ ಮೇಲೆ ೩ ಋಕ್ಕುಗಳು ಅಶ್ವಿನೀ ದೇವತಾಕಗಳು, ಅಂತಿಮ ೩ ಋಕ್ಕುಗಳು ಉಷೋ ದೇವತಾಕಗಳು. ೧೧ನೇದ್ದು ಪಾದನಿಚೃತ್ ಗಾಯತ್ರೀ ವಿಶೇಷವು. ೧೬ನೇದ್ದು ತ್ರಿಷ್ಟುಪ್ ಛಂದಸ್ಕವು. ಅವಶಿಷ್ಟಗಳು ಗಾಯತ್ರೀ ಛಂದಸ್ಕಗಳು

ಋ ॥ (೩.೨೯) ಆವ ಇಂದ್ರಂ ಕ್ರಿವಿಂ ಯಥಾ ವಾಜಯಂತಃಶತಕ್ರತುಂ । ಮಂಹಿಷ್ಠಂ ಸಿಂಚ ಇಂದುಭಿಃ ॥೧॥

ಅ ॥ ವಾಜಯಂತಃ = (ತತ್ಕರೋತಿ ತದಾಚಷ್ಟೇ ಇತಿ ಣಿಚ್) ಯುದ್ಧವನ್ನು ಮಾಡುವ, ಅಥವಾ ವಾಜಯಂತಃ = (ಪ್ರಾತಿಪದಿಕಾತ್ ಧಾತ್ವರ್ಥೇ ಣಿಚ್ ವಾಜಾನ್ ಭಂಜತೇ ಎಂಬ ವ್ಯುತ್ಪತ್ತಿಯಿಂದ) ಸಮಸ್ತ ಭೋಗಗಳನ್ನು ಭುಂಜಿಸುವ ದೇವತೆಗಳಿರಾ, ವಃ =ನಿಮಗೆ ಸ್ವಾಮಿಯಾದ, ಶತಕ್ರತುಂ=೧೦೦ ಯಜ್ಞ ಮಾಡಿರುವ, ಮಂಹಿಷ್ಠಂ = (ಮಹಿವೃದ್ಧೌ) ಮುಖ್ಯ

ಪೂಜ್ಯನಾದ. ಇಂದ್ರಂ = ಇಂದ್ರನನ್ನು ಇಂದುಭಿಃ =ಸೋಮಗಳಿಂದ (ನಾನು) ಕ್ರಿವಿಂ ಯಥಾ =ಜಗದ್ರಕ್ಷಣಾದಿಗಳನ್ನು ಮಾಡುವುದರಿಂದ ಕ್ರಿವಿ ಶಬ್ದವಾಚ್ಯನಾದ ರಾಜನನ್ನು ಹೇಗೋ ಹಾಗೆ, ಅಥವಾ ಶ್ರೀ ವಿಷ್ಣುವನ್ನು ಹೇಗೋ ಹಾಗೆಯೇ ಆ ಸಿಂಚೇ =ಅಭಿಷೇಕ ಮಾಡುತ್ತೇನೆ. (ಇಂದ್ರ ಸಂಬಂಧಿಯಾದ ಮಹಾಭಿಷೇಕದಲ್ಲಿ ಸರ್ವಾಧಿಪತ್ಯವನ್ನು ಹೇಗೆ ಅಭಿಷೇಕ ಮಾಡುತ್ತಾರೋ ಹಾಗೆಯೇ) ||೧||

**ಭಾ || (1) ಹೇ ವಾಜಯಂತೋ ಯುಧ್ಯಂತೋ ದೇವಾ ಭೋಗಿನ ಏವ ವಾ। ಸೋಮೈರ್ವಾ ಇಂದ್ರಮಾಸಿಂಚೇ ಕ್ರಿವಿಂ ಯದ್ವನ್ನ್ರಪಂ ಕೃತೇ: । ಕರ್ತಾರಮೀಶಮಿವ ವಾ । (2) ಸ್ವದೃಷ್ಟಾಂತೋ ಹರೇರ್ಭವೇತ್ ||೧||**

ಅ || (1) ಹೇವಾಜಯಂತಃ = ಯುದ್ಧ ಮಾಡುವ ಅಥವಾ ಸಮಸ್ತ ಭೋಗಗಳನ್ನು ಭೋಗಿಸುವ ದೇವತೆಗಳಿರಾ ನಿಮ್ಮ ಸಂಬಂಧಿಯಾದ ದೇವೇಂದ್ರನನ್ನು ಸೋಮಗಳಿಂದ ಕ್ರಿವಿಂ =ರಾಜನನ್ನು ಹೇಗೋ ಅಥವಾ ಜಗತ್ಪಾಲನಾದಿಗಳನ್ನು ಮಾಡುವ ಶ್ರೀ ವಿಷ್ಣುವನ್ನೆಂಬಂತೆ ಅಭಿಷೇಕ ಮಾಡುತ್ತೇನೆ. (2) (ಇಂದ್ರ ಶಬ್ದ ವಾಚ್ಯನು ವಿಷ್ಣುವೆಂದಾದರೆ ಆಗ ಅದು ಹೇಗೆ ಕೂಡುತ್ತದೆಂದರೆ) ಶ್ರೀ ಹರಿಯನ್ನು ವಿವಕ್ಷಾಮಾಡಿಕೊಳ್ಳುವುದಾದರೆ ಇದು ತನಗೇನೇ ದೃಷ್ಟಾಂತವಾಗುವುದು. ||೧||

**ಋ || (೩೩೦) ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ । ಏದು ನಿಮ್ನಂ ನ ರೀಯತೇ ||೨||**

ಅ || ಯಃ =ಯಾವ ಈ ಇಂದ್ರನು, ಶುಚೀನಾಂ =ಶುದ್ಧಗಳಾದ, ಸಮಾಶಿರಾಂ= (ಸಂಗತಂ ಆಶಿರಂ ಪ್ರಧಾನಂ ಆಜ್ಯ ಪುರೋಡಾಶಾದಿ, ಮಂತ್ರಾದಿಕಂ ವಾ ಯೇಷಾಂ ಎಂಬ ವ್ಯುತ್ಪತ್ತಿಯಿಂದ) ಸಂಬದ್ಧನಾದ ಪ್ರಧಾನವುಳ್ಳ ಅಥವಾ ಆಜ್ಯ ಪುರೋಡಾಶಾದಿ ಮಂತ್ರಾದಿಗಳುಳ್ಳ, ದಧ್ಯಾಖ್ಯ ಆಶಿರವುಳ್ಳ, (ಆಶಿರವತಾಂ ಎಂದು ಹೇಳದೆ ಆಶಿರಾವತಾಂ ಎಂಬ ದೀರ್ಘವು ಛಾಂದಸವು. ಅಥವಾ ಶಿರಾಶಬ್ದವು ಸ್ತ್ರೀಲಿಂಗವು) ಸೋಮಗಳ, ಶತಂ ವಾ = ನೂರರಿಂದ, ಸಹಸ್ರಂ ವಾ =ಸಾವಿರದಿಂದಲಾಗಲಿ, ನಿಮ್ನಂ ನ = ಪಾತಾಲದಂತೇ ಪಾತಾಲದಲ್ಲಿ ಹೇಗೆ ಪೂರ್ತಿಯಾಗುವುದಿಲ್ಲವೋ, ಹಾಗೆಯೇ ಇತ್ ಉ ಆರೀಯತೇ = ಎಲ್ಲಿಯೂ ಸರ್ವಥಾ) ನೀಲಿನವಾಗುವುದೇ ಇಲ್ಲ. (ಏಕ ಕಾಲದಲ್ಲಿಯೇ ಅನೇಕ ಜನರು ಸೋಮಗಳನ್ನು ಕೊಟ್ಟರೂ ಅವುಗಳಿಂದ ಇಂದ್ರನಿಗೆ ಅಲಂಬುದ್ಧಿಯು ಇಲ್ಲ. ಬಹು ಭೋಗ ಶಕ್ತಿಯುಳ್ಳವನಷ್ಟೆ) (ರೀಯತೇ ಎನ್ನುವಲ್ಲಿಯೂ ನಿಮ್ನಂ ಎನ್ನುವಲ್ಲಿಯೂ ಎರಡು ಕಡೆಗಳಲ್ಲಿಯೂ ನ ಎನ್ನುವುದಕ್ಕೆ ಸಂಬಂಧವು. ರೀಯತೇ ಎನ್ನುವಲ್ಲಿ ನಿಷೇದಾರ್ಥಕವು. ನಿಮ್ನಂ ಎನ್ನುವಲ್ಲಿ ಇವಾರ್ಥವು. ಹೀಗೆ ನ ಶಬ್ದಕ್ಕೆ ಆವೃತ್ತಿಯು.) (ಶತ ಸಹಸ್ರ ಶಬ್ದಗಳಿಗೆ ವಿಭಕ್ತಿ ವ್ಯತ್ಯಯವನ್ನು ಆಶ್ರಯಿಸಿಕೊಳ್ಳಬೇಕಾಗುತ್ತದೆ. ಎಂಬ ಅರುಚಿಯಿಂದ ರೀತ್ಯಂತರವಾಗಿ ವ್ಯಾಖ್ಯಾನ ಮಾಡುತ್ತಾರೆ.) ಯಾವ ಇಂದ್ರನು ಶುದ್ಧಗಳಾದ ಸೋಮಗಳ ನೂರನ್ನು ಸಹಸ್ರವನ್ನಾಗಲೀ ನಿಮ್ನಂ ನ =ಬಹು ಜಲವನ್ನು ಪಾತಾಲವೇ ಹೇಗೋ ತುಂಬಿಸಿಕೊಳ್ಳುತ್ತದೋ ಹಾಗೆಯೇ, ಆರೀಯತೇ ಇತ್ ಉ = ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾನೆಯೇ ಸರಿ. ಅಂತಹ ಇಂದ್ರನನ್ನು ಆಸಿಂಚೇ =ಅಭಿಷೇಕ ಮಾಡುತ್ತೇನೆ. ||೨||

ಅ || (1) ಈ ಇಂದ್ರನು ಪ್ರಧಾನಗಳಾದ ಸೋಮಗಳ ನೂರರಿಂದ ಅಥವಾ ಸಹಸ್ರದಿಂದ ಪಾತಾಲದಲ್ಲಿ ಹೇಗೆ ಪೂರ್ತಿಯಾಗುವುದಿಲ್ಲವೋ ಹಾಗೆಯೇ ಎಲ್ಲಿಯೂ ನಲೀನನಾಗುವುದಿಲ್ಲ. (ಏಕ ಕಾಲದಲ್ಲಿ ಅನೇಕ ಜನರು ಕೊಟ್ಟರೂ

ಸೋಮಗಳಿಂದ ಇಂದ್ರನಿಗೆ ಅಲಂಬುದ್ಧಿಯುಂಟಾಗುವುದಿಲ್ಲ. ಬಹು ಭೋಗ ಶಕ್ತಿಯಿದೆ.) (2) ಆ ಸೋಮಗಳನ್ನೇ ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾನೆಯೇ ಸರಿ. ||೨||

ಋ || (೩.೩೧) ಸಂ ಯನ್ಮದಾಯ ಶುಷ್ಮಿಣ ಏನಾ ಹ್ಯಸ್ಯೋದರೇ । ಸಮುದ್ರೋನ ವ್ಯಚೋ ದಧೇ ||೩||

ಅ || ಯತ್ = ಯಾವ ಕಾರಣದಿಂದ, ಏನಾ = ಈ ಎಲ್ಲಾ ಜಗತ್ತುಗಳೂ, ಅಸ್ಯ = ಈ ಇಂದ್ರನ, ಉದರೇ = ಹೊಟ್ಟೆಯಲ್ಲಿ ಪ್ರವಿಷ್ಟಗಳಾದವುಗಳು ಶುಷ್ಮಿಣೇ =ಬಲಿಷ್ಠನಾದ ಈ ಇಂದ್ರನ, ಮದಾಯ =ತೃಪ್ತಿಗೋಸ್ಕರ (ವ್ಯಚಃ = ವ್ಯಚವ್ಯಾಜೀಕರಣೇ) ವ್ಯಕ್ತಿಗಳನ್ನು ಪ್ರಭಾವಗಳನ್ನು ಎಲ್ಲಿಯೂ, ನಹಿ ಸಂದಧೇ =ಧರಿಸಲೇ ಇಲ್ಲವೋ, ಹಿ =ನಿಶ್ಚಯವೋ, ಸಮುದ್ರಃ = ಚೆನ್ನಾಗಿ ಶ್ರೇಷ್ಠವಾಗಿರುವುದರಿಂದ ಸಮುದ್ರವೆನ್ನುವ ಪ್ರಕೃತಿಯೂ ಕೂಡ, ವ್ಯಚಃ =ಪ್ರಭಾವವನ್ನು, ನಹಿ ಸಂದಧೇ =(ಇದು ಶ್ರೇಷ್ಠವಾಗಿರುವುದರಿಂದ) ಧರಿಸಲಿಲ್ಲವೋ (ಆ ಕಾರಣದಿಂದ ಆ ಇಂದ್ರನಿಗೆ ಅಲಂಬುದ್ಧಿಯು ಇಲ್ಲವೇ ಇಲ್ಲ) (ಅಂದರೆ ಪ್ರಕೃತ್ಯಾದಿಗಳಿಂದೊಡಗೂಡಿದ ಸಮಸ್ತ ಜಗತ್ತು ಉದರವನ್ನು ಪ್ರವೇಶಿಸಿದರೂ ತೃಪ್ತಿಯನ್ನು ಹುಟ್ಟಿಸಲಿಕ್ಕೆ ಸಮರ್ಥನಾಗದಿದ್ದ ಮೇಲೆ ಸೋಮಗಳು ಹೇಗೆ ತಾನೇ (ತೃಪ್ತಿಯನ್ನು ಹೊಂದಿಸಿಯಾವು) ||೬||

ಭಾ || (1) ಬಲಿನೇಽಸ್ಮೈ ಮದಾಯ ಚ । ಸಂದಧುರ್ನೈವ ವಿಶ್ವಾನಿ ವ್ಯಕ್ತೀರಸ್ಯೋದರೇ ಕ್ವಚಿತ್ (2) ಸಮುದ್ರೇಕಾತ್ಸಮುದ್ರಾಖ್ಯಾ ಪ್ರಕೃತಿ ಶ್ಚ ಮಹತ್ತ್ವತಃ ||೩||

ಅ || (1) ಶ್ರೀ ಹರಿಯ ಉದರದಲ್ಲಿ ಪ್ರಕೃತಿ ಸಹಿತಗಳಾದ ಸಮಸ್ತ ಜಗತ್ತು ಪ್ರವಿಷ್ಟಗಳಾದವುಗಳು ಬಲಿಷ್ಠನಾದ ಇಂದ್ರನೆನಿಸಿದ ಶ್ರೀ ಹರಿಯ ತೃಪ್ತಿಗಾಗಿ ಪ್ರಭಾವಗಳನ್ನು ಎಲ್ಲಿಯೂ ಹೊಂದಲೇ ಇಲ್ಲ. (2) ಚೆನ್ನಾಗಿ ಅಧಿಕ್ಯವಿದ್ದ ಪ್ರಯುಕ್ತ ಸಮುದ್ರವೆನಿಸಿದ ಪ್ರಕೃತಿಯೂ ಕೂಡ ಪ್ರಭಾವವನ್ನು ಹೊಂದಲೇ ಇಲ್ಲ. (ಏಕೆಂದರೆ ಪ್ರಕೃತಿಯು ಅತಿ ಮಹತ್ತಾಗಿದೆಯಷ್ಟೇ. (ಅಂತೂ ಪ್ರಕೃತಿ ಸಹಿತ ಸಮಸ್ತ ಜಗತ್ತು ಉದರವನ್ನು ಪ್ರವೇಶಿಸಿ ತೃಪ್ತಿಯನ್ನು ಹುಟ್ಟಿಸಲಿಕ್ಕೆ ಸಮರ್ಥವಾಗಲಿಲ್ಲ)||೩||

ಋ || (೩.೩.೨) ಅಯಮು ತೇ ಸಮತಸಿ ಕಪೋತ ಇವ ಗರ್ಭಧಿಂ ವಚಸ್ತಚ್ಚಿನ್ನ ಓಹಸೇ ||೪||

ಅ || (ಎಲೋ ಶ್ರೀ ಹರಿಯೇ) ಅಯಂ =ಈ ಪ್ರಪಂಚವು ಪ್ರಕೃತಿಯೂ ಕೂಡ, ತೇಉ =ನಿನ್ನ ಅಧೀನವೇ ಸರಿ. ಗರ್ಭಧಿಂ = (ಗರ್ಭಧೀಯತೇ ಅತ್ರ, ಎಂಬ ವ್ಯುತ್ಪತ್ತಿಯಿಂದ) ಗರ್ಭಾಶಯವನ್ನು (ಅಂಡವನ್ನು) ಕಪೋತ ಇವ =ಪಾರಿವಾಳವು ಹೇಗೆ ವ್ಯಾಪಿಸುತ್ತದೋ, ಹಾಗೆಯೇಷ ಸಮತಸಿ= (ಅತಸಾತತ್ಯಗಮನೇ) (ಸಮಸ್ತ ಜಗತ್ತನ್ನು) ಚೆನ್ನಾಗಿ ವ್ಯಾಪಿಸಿಕೊಂಡಿರುತ್ತಿ. ತತ್‌ಚಿತ್ = ಆ ಕಾರಣದಿಂದಲೇ, ನಃ =ಋಷಿಗಳಾದ ನಮ್ಮ ವೇದವಚನವನ್ನು, ಓಹಸೇ = (ವಹ ಪ್ರಾಪಣೇ) ಹೊಂದಿರುತ್ತಿ. (ವೇದಪ್ರತಿಪಾದ್ಯನಾಗಿರುತ್ತಿ.) (ಅಲ್ಪ ಪ್ರಭಾವವುಳ್ಳವನು ವೇದಪ್ರತಿಪಾದ್ಯನು ಆಗಲಾರನಷ್ಟೇ.) ||೪||

ಭಾ || ತವೈವಾಯಂ ಪ್ರಪಂಚಶ್ಚ ಕಪೋತೋ ಗರ್ಭಧಿಂ ಯಥಾ । ಸಮ್ಯಕ್ ವ್ಯಾಪ್ನೋಷಿ ವಿಶ್ವಂ ಚ ತಸ್ಮಾನ್ನೋ ವಚ ಓಹಸೇ ||೪||

ಅ ॥ ಈ ಪ್ರಪಂಚವೂ ಪ್ರಕೃತಿಯೂ ಕೂಡ ನಿನ್ನ ಅಧೀನವೇ ಆಗಿದೆ. ಕರ್ಪೋತವು ಅಂಡವನ್ನು ಹೇಗೆ ವ್ಯಾಪಿಸುತ್ತದೋ ಹಾಗೆಯೇ ನೀನು ಸರ್ವ ಜಗತ್ತನ್ನು ವ್ಯಾಪಿಸಿಕೊಂಡಿದ್ದಿ. ಆದುದರಿಂದಲೇ ನಮ್ಮ (ಋಷಿಗಳ) ವೇದವಚನವನ್ನು ಹೊಂದಿರುತ್ತಿ. (ವೇದ ಪ್ರತಿಪಾದ್ಯನಾಗಿರುತ್ತಿ.) ||೪||

**ಋ ॥ (೩.೩.೩) ಸ್ತೋತ್ರಂ ರಾಧಾನಾಂ ಪತೇ ಗಿರ್ವಾಹೋ ವೀರ ಯಸ್ಯ ತೇ । ವಿಭೂತಿರಸ್ತು ಸೂನೃತಾ ||೫||೨೪||**

ಅ ॥ ರಾಧಾನಾಂ = (ರಾಧಸಾಧಸಂಸಿದ್ಧೌ) ಸಿದ್ಧಿಗಳಿಗೆ, ಪತೇ =ಅಧಪತಿಯಾದ, ಗಿರ್ವಾಹಃ = (ಗೃನಿಗರಣೇ) ಸಮಸ್ತ ವೇದಗಳಿಗೆ ಪ್ರವರ್ತಕನಾದ, ವೀರ =ಪರಾಕ್ರಮಶಾಲಿಯಾದ ಶ್ರೀ ಹರಿಯೇ (ಸಮಸ್ತ ವೈದಿಕ ಪದವನ್ನು) ಯಸ್ಯತೇ ಸ್ತೋತ್ರಂ = ಯಾವ ನಿನ್ನ ಸ್ತೋತ್ರವನ್ನಾಗಿ (ನಾನು ತಿಳಿದಿರುವನೋ) ಸೂನೃತಾ = ನಿನಗೆ ಪ್ರೀತಿಯನ್ನುಂಟು ಮಾಡತಕ್ಕ ನನ್ನ ಈ ಒಳ್ಳೇ ಮಾತು, (ಅಂತಹ ನಿನಗೆ ವಿಭೂತೆರಸ್ತು =ಐಶ್ವರ್ಯ ಪ್ರತಿಪಾದಕವಾಗಲಿ (ವಿಭೂತಿ ಪ್ರತಿಪಾದಕವೆಂದು ನಿನ್ನಿಂದ ತಿಳಿಯಲ್ಪಡಲಿ. ||೫||೨೪||

**ಭಾ ॥ (1) ಗಿರಾಂ ವಾಹಕ ತೇ ಸ್ತೋತ್ರಮಖಿಲಂ ವೇದ ವೈದಿಕಂ । ಸೂನೃತಾ ವಾಗಿಯಂ ಮೇ ಚ ವಿಭೂತಿರಿ: ಕಲ್ಪ್ಯತಾಂ । (2) ಅಸ್ತಿತ್ವತ್ಕೇತತ್ಪ್ರಸಾದೇನ ಫಲದಾನಾದುದೀರ್ಯತೇ ||೫||೨೪||**

ಅ ॥ (1) ವೇದಗಳಿಗೆ ಪ್ರವರ್ತಕನಾದ ಶ್ರೀ ಹರಿಯೇ, ಸಮಸ್ತ ವೈದಿಕ ಪದವನ್ನು ನಿನ್ನ ಸ್ತೋತ್ರದನ್ನಾಗಿಯೇ ನಾನು ತಿಳಿಯುತ್ತೇನೆ. ನಿನಗೆ ಪ್ರೀತಿಯನ್ನುಂಟು ಮಾಡತಕ್ಕ ನನ್ನ ಈ ಒಳ್ಳೇ ಮಾತು ಐಶ್ವರ್ಯ ಪ್ರತಿಪಾದಕವೆಂದು ನಿನ್ನಿಂದ ತಿಳಿಯಲ್ಪಡಲಿ. (2) ಅಸ್ತಿತ್ಕೇತ್ಪ್ರಸಾದೇನ ಫಲದಾನಾದು ದೀರ್ಯತೇ ||೫||೨೪||

ಅ ॥ (1) ವೇದಗಳಿಗೆ ಪ್ರವರ್ತಕನಾದ ಶ್ರೀ ಹರಿಯೇ, ಸಮಸ್ತ ವೈದಿಕ ಪದವನ್ನು ನಿನ್ನ ಸ್ತೋತ್ರವನ್ನಾಗಿಯೇ ನಾನು ತಿಳಿಯುತ್ತೇನೆ. ನಿನಗೆ ಪ್ರೀತಿಯನ್ನುಂಟು ಮಾಡತಕ್ಕ ನನ್ನ ಈ ಒಳ್ಳೇ ಮಾತು ಐಶ್ವರ್ಯಪ್ರತಿಪಾದಕವೆಂದು ನಿನ್ನಿಂದ ತಿಳಿಯಲ್ಪಡಲಿ. (2) (ಹಾಗಾದರೆ ವೇದಗಳಿಗೆ ಅರ್ಥ ಸಂಭಂಧವು ಸ್ವಾಭಾವಿಕವೇ ಆಗಿರುವುದರಿಂದ ಅಸ್ತು=ಆಗಲಿ ಎಂದು ಪ್ರಾರ್ಥನೆಯು ಹೇಗೆ ಕೂಡುತ್ತದೆಂದರೆ ಅಂದರೆ ಶ್ರೀ ವಿಷ್ಣುವಿಗೆ ಐಶ್ವರ್ಯ ಪ್ರತಿಪಾದಕತ್ವವು ಸ್ವತಏತ ಸಿದ್ಧವಾದ ಪ್ರಯುಕ್ತ ಪ್ರಾರ್ಥನೆಯು ಕೂಡುವುದಿಲ್ಲ. ಎಂದರೆ ಅನುಗ್ರಹದಿಂದ ಫಲದಾನವನ್ನಪೇಕ್ಷಿಸಿ ಅಸ್ತು ಎಂದು ಹೇಳಲ್ಪಡುತ್ತದೆ. (ಅಂದರೆ - ಐಶ್ವರ್ಯ ಪ್ರತಿಪಾದಕವಾದ ನನ್ನ ಈ ಒಳ್ಳೇ ಮಾತಿನಿಂದ ಪ್ರಸನ್ನನಾಗಿ ಫಲವನ್ನು ಕೊಡು ಎಂಬ ಅಭಿಪ್ರಾಯದಿಂದ ಅನುಗ್ರಹ ಮಾಡಿ ಫಲವನ್ನು ಕೊಡಿಸುವುದಕ್ಕಾಗಿ ಸೂನೃತಾ ವಿಭೂತಿರಸ್ತು ಎಂದು ಲಕ್ಷಣಾ ವೃತ್ತಿಯಿಂದ ಹೇಳಲ್ಪಡುತ್ತದೆ. ||೬||೨೪||

**ಋ ॥ (೩.೩.೪) ಊರ್ಧ್ವಸ್ತಿಷ್ಠಾನ ಊತಯೇಽಸ್ಮಿನ್‌ವಾಜೇ ಶತಕ್ರತೋ । ಸಮನ್ಯೇಷುಬ್ರವಾವ ಹೈ ||೬||**

ಅ ॥ ಶತಕ್ರತೋ=ಎಲೋ ಅನಂತಜ್ಞಾನವುಳ್ಳ ಶ್ರೀ ಹರಿಯೇ, ನಃ = ನಮಗೆ, ಊತಯೇ =ಇಷ್ಟವಾದ ಜ್ಞಾನಾದಿರೂಪವಾದ ಅರ್ಥವು ಸಿದ್ಧಿಯಾಗುವುದಕ್ಕಾಗಿ, ಅಸ್ಮಿನ್ ವಾಜೇ = ಈ ಅನುಭವ ಸಿದ್ಧವಾದ ಜ್ಞಾನಾ ಜ್ಞಾನಮಯವಾದ

ಯುದ್ಧದಲ್ಲಿ ಜ್ಞಾನ ಅಜ್ಞಾನಗಳಿಗೆ ಕಾರಣಗಳಾದ ಪ್ರಮಾಣ, ಪ್ರಮಾಣಾಭಾಸಗಳ ಸಂಘರ್ಷವಾಗಲು, ಊರ್ಧ್ವ =ಉತ್ತಮನಾಗಿ, (ನಮ್ಮ ಪ್ರೀತಿ ಪಕ್ಷವನು ಗೆಲ್ಲುವವನಾಗಿ) ಶಿಷ್ವ=ಸದಾ ಇರು. (ಆದುದರಿಂದಲೇ ನನ್ನಲ್ಲಿರತಕ್ಕ ನೀನು, ನಾನೂ ಕೂಡ ನಿನನು) ಅನ್ಯೇಷು = ಇತರ ಶಿಷ್ಯರಲ್ಲಿ, ಸಂಬ್ರವಾ ವಹ್ಯೆ =ಚೆನ್ನಾಗಿ ಉಪದೇಶಿಸುವ ||೬||

ಭಾ || (೧) ಉತ್ತಮಃ ಸನ್ನತ್ರ ಯುದ್ಧೇ । ಜ್ಞಾನಾಜ್ಞಾನಮಯೇ ವಿಭೋ । ಅಭಿಪ್ರೇತಾರ್ಥಸಿದ್ಧ್ಯರ್ಥಮಸ್ಮಾಕಂ ತಿಷ್ಠ ಸರ್ವದಾ || (೨) ಮತ್ಸ್ಥಿತಸ್ತ್ವಮಹಂ ಚೈವ ತ್ವಾಮನ್ಯೇಷು ಬ್ರವಾಹ ಹ್ಯೈ ||೬||

ಅ || (೧) ಎಲೋ ಅನಂತಜ್ಞಾನವುಳ್ಳ ಸರ್ವಸಮರ್ಥನಾದ ಶ್ರೀ ಹರಿಯೇ, ನಮಗೆ ಇಷ್ಟಸಿದ್ಧಿಗಾಗಿ ಈ ಅನುಭವಸಿದ್ಧವಾದ ಜ್ಞಾನಾಜ್ಞಾನಮಯವಾದ ಯುದ್ಧದಲ್ಲಿ (ಅಂದರೆ =ಜ್ಞಾನ ಅಜ್ಞಾನಗಳಿಗೆ ಕಾರಣಗಳಾದ ಪ್ರಮಾಣ ಪ್ರಮಾಣಾಭಾಸಾದಿಗಳ ಸಂಘರ್ಷದಲ್ಲಿ) ಉತ್ತಮನಾಗಿ, (ನಮ್ಮ ವಿರೋಧಿಯನು ಗೆಲ್ಲುವವನಾಗಿ) ಸರ್ವದಾ ಇರು. (೨) (ನಮ್ಮ ವಿರೋಧಿಯನು ಗೆಲ್ಲುವುದರಿಂದಲೇ) ನನ್ನಲ್ಲಿರತಕ್ಕ ನೀನು, ನಾನೂ ಕೂಡ ನಿಮ್ಮನ್ನು ಇತರ ಶಿಷ್ಯರಲ್ಲಿ ಚೆನ್ನಾಗಿ ಉಪದೇಶ ಮಾಡುವ

ಋ || (೩.೩.೫) ಯೋಗೇ ಯೋಗೇ ತವಸ್ತರಂ ವಾಜೇವಾಜೇ ಹವಾಮಹೇ । ಸಖಾಯ ಇಂದ್ರಮೂತಯೇ|| ||೭||

ಅ || ಸಖಾಯಃ =ಎಲೋ ಸಖಿಗಳಿರಾ, (ನಾವು) ತವಸ್ತರಂ=ಅತಿಶಯವಾಗಿ ತೇಜಸ್ಸುಳ್ಳ, ಇಂದ್ರಂ=ಶ್ರೀ ಹರಿಯನ್ನು ಊತಯೇ =ರಕ್ಷಣೆಗಾಗಿ, ಯೋಗೇಯೋಗೇ =ಸಮಸ್ತ ಧ್ಯಾನಯೋಗಗಳಲ್ಲಿ, ವಾಜೇ ವಾಜೇ =ಸಮಸ್ತ ಬಾಹ್ಯ ಯುದ್ಧಗಳಲ್ಲಿಯೂ, ಪ್ರಮಾಣ ಪ್ರಮಾಣಾಭಾಸ ಸಂಘರ್ಷರೂಪ ಮನನಗಳಲ್ಲಿಯೂ ಹವಾಮಹೇ = ಕರೆಯುತ್ತೇವೆ. ||೭||

ಭಾ || ತೇಜಸ್ವಿತಮಮಿಂದ್ರಂ ತಂ ಯೋಗೇ ಯೋಗೇ ಹವಾಮಹೇ ||೭||

ಅ || ಅತಿಶಯ ತೇಜಸ್ಸುಳ್ಳ, ಆ ಇಂದ್ರನನ್ನು, ಸಮಸ್ತ ಧ್ಯಾನ ಯೋಗಗಳಲ್ಲಿಯೂ ಕರೆಯುತ್ತೇವೆ. ||೭||

ಋ || (೩.೩.೬) ಆ ಘಾ ಗಮದ್ಯದಿ ಶ್ರವತ್ಸಹಸ್ರಿಣೀಭಿರೂತಿಭಿಃ । ವಾಜೇಭಿ ರುಪ ನೋ ರಾವಂ ||೮||

ಅ || (ಇಂದ್ರನು) ಯದಿಶ್ರವತ್ =ಭಕ್ತಿಯಿಂದ ಹೇಳಿದುದನ್ನು ಕೇಳಿದರೆ ಸಹಸ್ರಿಣೀಭಿಃ ಊತಿಭಿ = ಬಹ್ವರ್ಥ ಯುಕ್ತಗಳಾದ ಅಭಿಪ್ರಾಯಗಳಿಂದ ಕೂಡಿ (ಬಹು ಪುರುಷಾರ್ಥಗಳನ್ನು ಕೊಡುವುದಕ್ಕಾಗಿ) ವಾಜೇಭಿಃ =ಅನ್ನಗಳಿಂದಲೂ (ಅನ್ನಗಳನ್ನು ಕೊಡುವುದಕ್ಕಾಗಿ) ನಃ ಹವಂ =ನಮ್ಮ ಆಹ್ವಾನವನ್ನು, ಉಪ ಆಗಮತ್ ಘ=ಬಂದೇ ಬರುವನು ||೮||

ಭಾ || ಉಕ್ತಂ ಚೇತ್ಸ ಶೃಣೋತ್ಯೇವ ಶ್ರುತಂ ಚೇದಾಗಮಿಷ್ಯತಿ । ಬಹ್ವರ್ಥಯುಕ್ತಾಭಿಪ್ರಾಯೈರನ್ನೈರಪ್ಯುಪ ನೋ ಹವಂ ||೮||

ಅ || (ಇಲ್ಲಿ ಯದಿಶ್ರವತ್ ಎಂದು ಪರಮೇಶ್ವರನು ಕೇಳಿದರೆ ಎಂದು ಶ್ರೀ ಹರಿಗೆ ಪಕ್ಷೇ ಶ್ರವಣವು ಎಂದು

ತೋರುತ್ತದೆ.. ಅದನ್ನು ಪರಿಹರಿಸುವುದಕ್ಕಾಗಿ ಸರಿಯಾಗಿ ವ್ಯಾಖ್ಯಾನ ಮಾಡುತ್ತಾರೆ.) ಎಲೋ ಶ್ರೀ ಹರಿಯೇ ಇಲ್ಲಿಗೆ ಬಾ ಎಂದು ನಾವು ಹೇಳಿದರೆ ಆಗ ಶ್ರೀ ಹರಿಯು ನಿಶ್ಚಯವಾಗಿಯೂ ಕೇಳಿಯೇ ಕೇಳುವನು. ನಾವು ಭಕ್ತಿಯಿಂದ ಹೇಳಿದುದನ್ನು ಕೇಳಿವರೆ ಬಹ್ವರ್ಷಯುಕ್ತಗಳಾದ ಅಭಿಪ್ರಾಯಗಳಿಂದ ಕೂಡಿಕೊಂಡು (ಬಹಳ ಪುರುಷಾರ್ಥಗಳನ್ನು ಕೊಡುವುದಕ್ಕಾಗಿ) ಯಥೇಷ್ಟ ಅನ್ನಗಳನ್ನು ಕೊಡುವುದಕ್ಕಾಗಿ ನಮ್ಮ ಆಹ್ವಾನವನ್ನುದ್ದೇಶಿಸಿ ಬಂದೇ ಬರುವನು. ||೮||

ಋ || (೩೩೭|| ಅನು ಪ್ರತ್ನಸ್ಯೌಕಸೋ ಹುವೇ ತುವಿಪ್ರತಿಂ ನರಂ | ಯಂ ತೇ ಪೂರ್ವಂ ಪಿತಾ ಹುವೇ ||೯||

ಅ || ಯಂ ತೇ =ಯಾವ ನಿನ್ನನ್ನು, ಪೂರ್ವಂ =ಪೂರ್ವ ಕಾಲದಲ್ಲಿ, ತೇ ಪಿತಾ = (ಪಿ ಗತೌ) ನಿನ್ನನ್ನು ತಿಳಿದಿರುವುದರಿಂದ ಪಿತನೆನಿಸಿದ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನು, ಹುವೇ ಕರೆದಿರುವನೋ, ಅಥವಾ ತೇ =ನಿನ್ನವನಾದ, ನಿನ್ನ (ಭಕ್ತನಾದ) ಪಿತಾ =ಬ್ರಹ್ಮನು, ಯಂತೇ =ಯಾವ ನಿನ್ನನ್ನು, ಹುವೇ =ಕರೆದಿರುವನೋ (ನಾನು) ಪ್ರತ್ನಸ್ಯಂ = ಪುರಾತನವಾದ, ಅನಾದಿಯಾದ ಶ್ರೀ ವಿಷ್ಣುವಿನ ಓಕಸಃ ಅನು=ವೈಕುಂಠ ಮೊದಲಾದ ಪ್ರಸಿದ್ಧ ಸ್ಥಾನಗಳ ಪ್ರಾಪ್ತಿಗಾಗಿ, ತುವಿಪ್ರತಿಂ =ಸಮಸ್ತ ವೈರಿಗಳಿಗೆ ಪ್ರತಿಯಾಗಿ ಇರುವ, ನರಂ =ಅಂತಹ ನಾಶರಹಿತನಾದ ಇಂದ್ರನಾದ ನಿನನ್ನು ಹುವೆ = ಕರೆಯುತ್ತೇನೆ. ||೯||

ಭಾ || **(೧) ಪುರಾತನಸ್ಯ ದಿಷ್ಣೋಸ್ತದೋಕಸೋऽರ್ಥೇ ಹವಯೇ ಹರಿಂ || (೨) ಮಹಾನ್ ಪ್ರತಿ ಪ್ರತಿಸ್ಥಶ್ಚ ತುವಿಪ್ರತಿರಿತೀರಿತಃ || (೩) ಯಂ ತ್ವಾಂ ಪೂರ್ವಂ ಪಿತಾ ಜ್ಞಾತ್ವೈವಾಹ್ವಯಾಮಾಸ ವಿಶ್ವಕೃತ್ | (೪) ತ್ವದ್ಭಕ್ತ ಇತಿ ವಾ ಬ್ರಹ್ಮಾ ||೯||**

ಅ || (1) ಅನಾದಿಯಾದ ಶ್ರೀ ವಿಷ್ಣುವಿನ ಪ್ರಸಿದ್ಧವಾದ ವೈಕುಂಠಾದಿ ಸ್ಥಾನಗಳ ಪ್ರಾಪ್ತಿಗಾಗಿ ಶ್ರೀಹರಿಯಾದ ನಿನ್ನನ್ನು ಕರೆಯುತ್ತೇನೆ. (2) ಶ್ರೀ ಹರಿಯು ಯಾವುದರಿಂದ ತುವಿ ಪ್ರತಿ ಎಂಬ ಶಬ್ದದಿಂದ ವಾಚ್ಯನಾಗುತ್ತಾನೆಂದರೆ) ತುವಿ ಎನ್ನುವುದಕ್ಕೆ ಬಹು ಎಂದರ್ಥವು. ಆದ ಕಾರಣ ಬಹುತ್ವ ವಿಶಿಷ್ಟ ಗುಣ ರೂಪಾದಿಗಳುಳ್ಳವನಿಗೆ ಮಹತ್ವವಿದ್ದ ಬಹುತ್ವ ವಿಶಿಷ್ಟ ಗುಣ ರೂಪಾದಿಗಳುಳ್ಳವನಿಗೆ ಮಹತ್ವವಿದ್ದ ಪ್ರಯುಕ್ತ) ಮಹಾನ್ = ಶ್ರೇಷ್ಠನೂ ಪ್ರತಿ=ಇದಿರಾಗಿ ಇರುವವನು, ಸಮಸ್ತ ವೈರಿಗಳಿಗೆ ಇದಿರಾಗಿ ಇರುವವನು. (ಈ ಪ್ರತಿ ಎನ್ನುವುದು ಉಪಸರ್ಗವು. ಉಪಸರ್ಗಗಳು ಕ್ರಿಯಾವಾಚಕಶಬ್ದವಿದ್ದರೆ ಕ್ರಿಯಾ ವಿಶೇಷಗಳಿಗೆ ದ್ಯೋತಕಗಳಾಗುತ್ತವೆ. ಕ್ರಿಯಾ ವಾಚಕ ಶಬ್ದವಿಲ್ಲವಾದರೆ ಕರ್ತೃ ಕರ್ಮಾದಿಗಳಿಂದ ಸಹಿತವಾದ ಕ್ರಿಯೆಯನ್ನು ಹೇಳುತ್ತದೆ. ಆದ ಕಾರಣ ಪ್ರತಿ ಎಂಬ ಉಪಸರ್ಗವೂ ಕೂಡ ಕ್ರಿಯಾ ವಚನಾದಿಗಳು ಇಲ್ಲದಿರುವುದರಿಂದ ಸಮಸ್ತ ವೈರಿಗಳ ಇದಿರು ಇರುವವನು ಎಂದು ಕರ್ತೃ ಕರ್ಮಾದಿಗಳಿಂದ ಸಹಿತವಾದ ಕ್ರಿಯೆಯನ್ನು ಹೇಳುತ್ತದೆ. ) ಹಾಗಾದರೆ =ಬಾಷ್ಯದಲ್ಲಿ ಪ್ರತಿ ಪ್ರತಿಸಿಸ್ಥಃ ಎಂದು ವಿಪ್ಸಾದಲ್ಲಿ ಕರ್ಮಪ್ರವಚನೀಯ ಸಂಜ್ಞೆಯಿದ್ದುದರಿಂದ ನಿತ್ಯವೀಪ್ಸಯೋಃಋೂ ಎಂದು ದ್ವಿತ್ವ ಪ್ರಯೋಗವಿದ್ದ ಕಾರಣ ಶ್ರುತ್ಯುಕ್ತವಾದ ಪ್ರತಿಶಬ್ದಕ್ಕೆ ಕರ್ಮ ಪ್ರವಚನೀಯ ಸಂಜ್ಞೆಯನ್ನಂಗೀಕರಿಸಿರುವ ಪ್ರಯುಕ್ತ ಅಂತಹ ಕರ್ಮ ಪ್ರವಚನೀಯ ಸಂಜ್ಞೆಯು ಆಕಡಾರಾದೇಕಾ ಸಂಜ್ಞಾ ಎನ್ನುವ ಸೂತ್ರದಿಂದ ಉಪಸರ್ಗ ಸಂಜ್ಞೆಯಿಂದ ಬಾಧಿತವಾಗುವುದರಿಂದ ಪ್ರತಿ ಎನ್ನುವುದಕ್ಕೆ ಉಪಸರ್ಗತ್ವವೇ ಇಲ್ಲದಿರುವ ಕಾರಣ ಉಪ ಸರ್ಗತ್ವವನ್ನಂಗೀಕರಿಸಿಕೊಂಡು ಕರ್ತೃ ಕರ್ಮಾದಿ ಸಹಿತವಾದ ಕ್ರಿಯಾವಾಚಿತ್ವವನ್ನು ಹೇಳಿದ್ದು ಹೇಗೆಂದರೆ) ಬಾಷ್ಯಕಾರರು

ಮಾಡಿದ ಪ್ರತಿ ಪ್ರತಿಸ್ಥ: ಎಂಬ ದ್ವಿರ್ವಚನವು ಶ್ರುತಿಯಲ್ಲಿ ಪ್ರತಿಶಬ್ದವಿದೆ ಎಂಬ ಅಭಿಪ್ರಾಯ ಮಾತ್ರದಿಂದ ಅಲ್ಲದೆ ಪ್ರತಿ ಎನ್ನುವುದಕ್ಕೆ ವೀಪ್ಸಾರ್ಥಕತ್ವವಿದೆ ಎಂಬ ಅಭಿಪ್ರಾಯದಿಂದ ಅಲ್ಲ. ಆದ ಕಾರಣ ಕರ್ಮಪ್ರವಚನೀಯ ಸಂಜ್ಞೆಯು ಇಲ್ಲದಿರುವುದರಿಂದ ಪ್ರತಿ ಎನ್ನುವುದಕ್ಕೆ ಉಪಸರ್ಗತ್ವವನ್ನಂಗೀಕರಿಸಿದರೆ ಬಾಧಕವಿಲ್ಲದಿರುವ ಪ್ರಯುಕ್ತ ಕರ್ತೃ ಕರ್ಮಾದಿ ಸಹಿತವಾದ ಕ್ರಿಯೆಯನ್ನು ಹೇಳುತ್ತದೆ, ಎಂಬುವುದು ಯುಕ್ತವೇ ಸರಿ) ಆದ ಕಾರಣ ತುವಿಪ್ರತಿ ಎನಿಸುತ್ತಾನೆ. (3) ಯಾವ ನಿನನು ಪೂರ್ವ ಕಾಲದಲ್ಲಿ ಜಗತ್ಸೃಷ್ಟಿ ಕರ್ತನಾದ ಬ್ರಹ್ಮನು ನಿನಗೆ. ಪಿತಾ=ಸಮಸ್ತವನ್ನು ತಿಳಿದವನಾದುದರಿಂದಲೇ ಪಿತನೆನಿಸುವನು ಜನಕನಾದುದರಿಂದ ಪಿತವೆನಿಸುವುದು ಅಲ್ಲ. ಈ ರೀತಿಯಾಗಿ ಕರೆದಿರುವನೋ ಅಥವಾ ನಿನ ಭಕ್ತನಾದ ಜಗಜ್ಜನಕನಾದ ಬ್ರಹ್ಮನು ಕರೆದಿರುವನೋ ॥೯॥

ಋ ॥ (೩೩೮) ತಂ ತ್ವಾ ವಯಂ ವಿಶ್ವವಾರಾ ಶಾಸ್ಮಹೇ ಪುರುಹೂತ । ಸಖೇ ವಸೋ ಜರಿತೃಭ್ಯಃ ॥೧೦॥೨೯॥

ಅ ॥ ವಿಶ್ವವಾರ = (ವೃ॰ ವರಣೇ, ಕರ್ಮಣಿಘಞ್) ಎಲ್ಲರಿಂದಲೂ ಅಗೀಕಾರಾರ್ಹನು, ಪುರುಹೂತ =ದೇವಾದಿಗಳಿಂದೆಲ್ಲರಿಂದಲೂ ಕರೆಯಲ್ಪಟ್ಟವನು, ಸಖೇ =ಸಖಿಯಾದವನು, ವಸೋ=ಸರ್ವತ್ರ ಆವಾಸ ಮಾಡಿಕೊಂಡಿರುವವನು (ಸರ್ವತ್ರ ವ್ಯಾಪ್ತನು) ಇಂತಹ ಶ್ರೀ ಹರಿಯೇ, ವಯಂ =ನಾವು, ತಂ=ಅಂತಹ ತ್ವಾ =ನಿನ್ನನ್ನು ಆ ಶಾಸ್ಮಹೇ=ಇಚ್ಛಿಸುತ್ತೇವೆ (ನಮಗೆ ಮಾತ್ರವಲ್ಲ. ಮತ್ತೆ) ಜರಿತೃಭ್ಯೋಽಪಿ =ಇತರ ಸ್ತೋತೃಗಳಿಗೋಸ್ಕವೂ ಕೂಡ ॥೧೦॥೨೯॥

ಭಾ ॥ ತಂ ತ್ವಾಮಾಶಾಸ್ಮಹೇ ವಯಂ ॥೧೦॥೨೯॥

ಅ ॥ ಅಂತಹ ಮಾಹಾತ್ಮ್ಯೆಯುಳ್ಳ ನಿನ್ನನ್ನೂ ನಾವು ಇಚ್ಛಿಸುತ್ತೇವೆ ॥೧೦॥೨೯॥

ಋ ॥ (೩೩೯) ಅಸ್ಮಾಕಂ ಶಿಪ್ರಿಣೀನಾಂ ಸೋಮಪಾಃ ಸೋಮ ಪಾವ್ನಾಂ । ಸಖೇ ವಜ್ರಿನ್ ಸಖೀನಾಂ ॥೧೧॥

ಅ ॥ ಸೋಮಪಾಃ ಸಖೇ ವಜ್ರಿನ್=ಎಲೋ ಶ್ರೀ ಹರಿಯೇ ಶಿಪ್ರಿಣೀನಾಂ = (ಶಿಪ್ರಮೇಷಾಮಸ್ತಿ ಎಂಬ, ವ್ಯುತ್ಪತ್ತಿಯಿಂದ) ಸುಖಿಗಳಾದ, ಸೋಮ ಪಾವ್ನಾಂ =ಸೋಮವನ್ನು ಪಾನ ಮಾಡುವ, ಸಖೀನಾಂ ಅಸ್ಮಾಕಂ = ನಿನ್ನ ಸಖಿಗಳಾದ ಪುರುಷರಾದ ನಮಗೆ, (ಮಂಗಲ ವಾಗಲಿ) ॥೧೧॥

ಭಾ ॥ ಅಸ್ಮಾಕಂ ಸುಖಿನಾಂ ಸೋಮಪಾತ್ರಣಾಂ ॥೧೧॥

ಅ ॥ ಸೋಮವನ್ನು ಪಾನ ಮಾಡುವ ಸುಖಿಗಳಾದ ನಮಗೆ ॥೧೧॥

ಋ ॥ (೩೪೦) ತಥಾ ತದಸ್ತು ಸೋಮಪಾಃ ಸಖೇ ವಜ್ರಿನ್ ತಥಾ ಕೃಣು ॥ ಯಥಾ ತ ಉಶ್ಮಸೀಷ್ಟಯೇ ॥೧೨॥

ಅ ॥ ಸೋಮಪಾಃಸಖೇವಜ್ರಿನ್ = (ಡಜಗತೌ) ಎಲೋ ಶ್ರೀ ಹರಿಯೇ (ನಾವು) ತೇ =ನಿನ್ನ ಸಕಾಶದಿಂದ

ಯಥಾ=ಹೇಗೆ (ಯಾವ ವಸ್ತುವನ್ನು) ಇಷ್ಟಯೇ = (ಇಷಗತೌ) ಹೊಂದುವುದಕ್ಕಾಗಿ, ಉಶ್ಮಸಿ (ವಂಶಕಾಂತೌ) ಇಚ್ಛಿಸುತ್ತೇವೋ ತತ್‌ತಥಾಅಸ್ತು = ಅಂತಹ ವಸ್ತು ಹಾಗೆಯೇ ಪ್ರಾಪ್ತವಾಗಲಿ (ನನ್ನ ಸಕಾಶದಿಂದ ಇಷ್ಟವಾದ ವಸ್ತುವಿನ ಪ್ರಾಪ್ತಿಯು ಹೇಗಾಗುವುದೆಂದರೆ) ತಥಾಕೃಣು =ನೀನು ಹಾಗೆಯೇ ಮಾಡು. ||೧೨||

**ಭಾ || (೧) ಅಸ್ತು ತತ್ತಥಾ । ತೇ ಸಕಾಶಾದ್ಯಥೇಚ್ಛಾಮಃ ಪ್ರಾಪ್ತುಂ ದೇವ ತಥಾ ಕೃಣು || (೨) ವಜ್ರೋ ಜ್ಞಾನಂ ವಜಗತಾವಿತ್ಯಸ್ಮಾತ್ ||೧೨||**

ಅ || (೧) ಎಲೋ ಶ್ರೀ ಹರಿಯೇ ನಿನ್ನ ಸಕಾಶದೆಸೆಯಿಂದ ಯಾವ ವಸ್ತುವನ್ನು ಹೊಂದಲಿಕ್ಕೆ ಹೇಘೆ ಇಚ್ಛಿಸುತ್ತೇವೋ ಅದು ಹಾಗೆಯೇ ಪ್ರಾಪ್ತವಾಗಲಿ. ಎಲೋ ಶ್ರೀ ಹರಿಯೇ ಹಾಗೆಯೇ ಹೊಂದುವಂತೆ ನೀನು ಮಾಡು. (೨) (ಶ್ರೀ ಹರಿಯಲ್ಲಿ ವಜ್ರಿನ್ ಶಬ್ದವು ಹೇಗೆಂದರೆ) ವಜಗತೌ ಇತ್ಯಸ್ಮಾತ್ ಬಾವಾರ್ಥದಲ್ಲಿ ರ ಪ್ರತ್ಯಯವು. ಯೇ ಯೇ ಗತ್ಯರ್ಥಕಾಃತೇತೇ ಜ್ಞಾನಾರ್ಥಕಾಃ, ಆದ ಕಾರಣ ವಜ್ರಃ =ಜ್ಞಾನವು. (ವಜ್ರಃ ಅಸ್ಯಾಸ್ತೀತಿ ವಜ್ರೀಂ =ಪೂರ್ಣ ಜ್ಞಾನವುಳ್ಳವನು) ||೧೨||

**ಋ || (೨೪೧) ರೇವತೀರ್ನ ಸಧಮಾದ ಇಂದ್ರೇಸಂತು ತುವಿವಾಜಾಃ । ಕ್ಷುಮಂತೋ ಯಾಭಿರ್ಮದೇಮ ||೧೩||**

ಅ || ಸಧಮಾದೇ = (ಮದೀ ಹರ್ಷೇ ಭಾವೇಘಞ) (ಸೀದಂತ್ಯಸ್ಮಿನ್ನಿತಿ ಸಧಃ, ಸದೇಃ ಅಕಾರಃ, ದಕಾರಕ್ಕೆ ಢಕಾರವು) ಮಾದಸಧೇ=ಪೂರ್ಣ ಸುಖಕ್ಕೆ ಆಶ್ರಯವಾದ, ಇಂದ್ರೇ = ನಮಗೆ ನಿಯಾಮಕನಾದ ಶ್ರೀ ಹರಿಯು, (ಸರ್ವರಿಗೆ ಸ್ವಾಮಿಯಾಗಿ ಇರುತ್ತಿರಲು) ಯಾಭಿಃ =ಯಾವ ಪಶ್ವಾದಿಗಳಿಂದ, ಕ್ಷುಮಂತಃ = (ಕ್ಷಿನಿ ವಾಸಗತ್ಯೋಃ) ಸ್ಥಿತಿಯುಳ್ಳವರಾಗಿ, ಮದೇಮ =ಸುಖಿಗಳಾಗಿರುವೆವೋ ಅಂತಹ ರೇವತೀಃ = ದ್ರವ್ಯವುಳ್ಳ, ತುವಿವಾಜಾಃ =ಬಹ್ವನ್ನಗಳು, ಅಥವಾ ರೇವತೀಃ = ಪಶುಗಳೂ, ತುವಿವಾಜಾಶ್ಚ=ಬಹ್ವನ್ನಗಳೂ ಕೂಡ ಸಂತು=ಆಗಲಿ ||೧೩||

**ಭಾ || (೧) ವಿತ್ತಸಂಯುತಾಃ । ರೇವತೀಃ ಪಶವಃ ಪ್ರೋಕ್ತಾ: (೨) ಸಧಮಾದೇ ಸುಖಸ್ಥಿತೌ । (೩) ತುವಿವಾಜಾ ಮಹಾನ್ನಾನಿ (೪) ಕ್ಷುಮಂತಃ ಸ್ಥಿತಿಸಂಯುತಾಃ । (೫) ಜ್ಞಾನಯುಕ್ತಂ ಸುಖಂ ವಾ (೬) ಸ್ಯಾತ್ ಸತೀಶೇಽಸ್ಮಾಕಮೂರ್ಜಿತಂ ||೧೩||**

ಅ || (೧) (ವಿತ್ತ ಸಂಯುತಾಃ ಇತ್ಯಾದಿಗಳಿಂದ ರೇವತೀ ಮೊದಲಾದ ಪದಾರ್ಥಗಳನ್ನು ಹೇಳುತ್ತಾರೆ) (ರೈ ಪರ್ಯಾಯವು ರೇ ಶಬ್ದವು. ತಥಾ ಚ ರೇವತೀಃ = ರೇವತ್ಯಃ) ದ್ರವ್ಯದಿಂದ ಕೂಡಿದವುಗಳು. ಅಥವಾ (ಪಶವೋ ವೈ ರೇವತ್ಯಃ ಇತ್ಯಾದಿ ಪ್ರಮಾಣಗಳಿಂದ ಪಶುಗಳು ರೇವತೀ ಎನಿಸಿಕೊಳ್ಳುತ್ತವೆ. (೩) ಸಧಮಾದೇ = (ಸದಿ ಧಾತುವಿಗೆ ಆಕಾರ ಪ್ರತ್ಯಯವು. ದಕಾರಕ್ಕೆ ಧಕಾರವು. ಸೀದಂತ್ಯ ಸ್ಮಿನ್ನಿತಿ ಸಧಃ =ಆಶ್ರಯವು. ಮದೀಹರ್ಷೇ ಭಾವಾರ್ಥದಲ್ಲಿ ಘಞ. ಮಾದಃ =ಸುಖವು ಮಾದಸ್ಯ ಸಧಃ = ಸುಖಕ್ಕೆ ಆಶ್ರಯನು. ಪೂರ್ವಾನಿಪಾತವು ಛಾಂದಸವು. ತಥಾಚ) ಪೂರ್ಣ ಸುಖಿಯಾಗಿ ಇರುತ್ತಿರಲು (೩) (ತುವಿ ಎನ್ನುವುದಕ್ಕೆ ಬಹು ಎಂದರ್ಥವು. ವಾಜ ಶಬ್ದಕ್ಕೆ ಅನ್ನವೆಂದರ್ಥವು. ತಥಾಚ) ತುವಿ ವಾಜಾಃ = ಮಹತ್ತಾದ ಅನ್ನಗಳು (ವಾಜಮನ್ನಂ ಎಂದು ವಾಜಶಬ್ದವು ಅನ್ನನಾಮಗಳಲ್ಲಿ ಪಠಿತವಾದ ಪ್ರಯುಕ್ತ ವಾಜಾ ಎಂದು ಸ್ತ್ರೀತ್ವವು ಹೇಗೆಂದರೆ ರೇವತೀ ಶಬ್ದ ಸಾಮಾನಾಧಿಕರಣ್ಯವಿದ್ದುದರಿಂದಲೂ, ಮೇಲೆ ಯಾಭಿಃ ಎಂದು ಸ್ತ್ರೀಲಿಂಗ ಶಬ್ದವಿದ್ದ ಪ್ರಯುಕ್ತವೂ

ತುವಿವಾಜಾ ಎಂದು ಸ್ತ್ರೀಲಿಂಗ ಶಬ್ದ ಪ್ರಯೋಗವು. ವೈದಿಕವು) (೫) ಕ್ಷುಮಂತಃ = (ಕ್ಷಿನಿವಾಸಗತ್ಯೋಃ ಎನ್ನುವುದರಿಂದ ಡು ಪ್ರತ್ಯಯವು. ಕ್ಷುಃ = ನಿವಾಸವು. ತಥಾಚ) ಆವಾಸವುಳ್ಳವರು. ಸ್ಥಿತಿಯಿಂದ ಕೂಡಿದವರು. (ಕೆಲವರು ಕ್ಷು ಶಬ್ದೇ ಎನ್ನುವ ಧಾತುವಿನ ರೂಪವೆಂದು ತಿಳಿದು ಕ್ಷುಮಂತಃ ಶಬ್ದವುಳ್ಳವರು, ಕೀರ್ತಿಯುಳ್ಳವರು ಎಂದು ವ್ಯಾಖ್ಯಾನ ಮಾಡುವರು. ಅದು ಅಯುಕ್ತವು. ಏಕೆಂದರೆ ಕ್ಷು ಧಾತುವಿಗೆ ಕ್ಷುದ್ರೂಪ ನಾಸಿಕಾಜನ್ಯ ಶಬ್ದಾರ್ಥಕತ್ವವಿದ್ದುದರಿಂದ ಶಬ್ದ ಸಾಮಾನ್ಯ ರೂಪ ಅರ್ಥವು ಕೂಡದಿರುವುದರಿಂದ ಶಬ್ದ ವಿಶೇಷವೆಂದರ್ಥವಾದ ಕಾರಣ ಕೀರ್ತಿಯೆಂಬ ಅರ್ಥವು ಸಿಗುವುದಿಲ್ಲವಷ್ಟೇ) (೫) ಅಥವಾ ರೇವತೀಸ್ತುವಿವಾಜಾಃ ಎನ್ನುವುದಕ್ಕೆ ಜ್ಞಾನಯುಕ್ತವಾದ ಸುಖವು ಎಂದಾಗಲೀ ಅರ್ಥವು. (ಜ್ಞಾನವೇ ಎಲ್ಲಾ ವಿತ್ತಗಳಿಗಿಂತ ಮುಖ್ಯ ವಿತ್ತವು. ಸುಖವೇ ಮುಖ್ಯಾನ್ನವು.) (೬) (ಈಗ ಋಗರ್ಥವನ್ನು ಯೋಜನಾ ಮಾಡುತ್ತಾರೆ) ಉತ್ಕೃಷ್ಟವಾದ ಈ ಅನಾದಿಗಳು ಸುಖಾಶ್ರಯನಾದ ಶ್ರೀ ಹರಿಯು ನಮಗೆ ಸ್ವಾಮಿಯಾಗುತ್ತಿರಲು ದ್ರವ್ಯಯುಕ್ತಗಳಾದ ಬಹ್ವನ್ನಗಳೂ ಅಥವಾ ಪಶುಗಳೂ ಬಹ್ವನ್ನಗಳೂ ಕೂಡ ಆಗಲಿ. (ಎಂತಹುಗಳೆಂದರೆ) ಯಾವ ವಸ್ತುಗಳಿಂದ ಒಳ್ಳೇ ಸ್ಥಿತಿಯುಳ್ಳವರಾಗಿ ಸರ್ವದಾ ಸುಖಿಗಳಾಗಿಯೇ ಇರುತ್ತೇವೋ ||೧೩||

ಋ || (೩೪೨) ಅ ಘ ತ್ವಾವಾನ್ ತ್ಮನಾಽಽಪ್ತಃ ಸ್ತೋತೃಭ್ಯೋ ಧೃಷ್ಣವಿಯಾನಃ | ಋಣೋರಕ್ಷಂ ನ ಚಕ್ರ್ಯೋಃ||೧೪||

ಅ || ಧೃಷ್ಣೋ = (ಞಿಧೃಷಾಪ್ರಾಗಲ್ಭ್ಯೇ) ಧೈರ್ಯ ಯುಕ್ತನಾದ ಶ್ರೀ ಹರಿಯೇ, ತ್ವಾವಾನ್ =ನೀನೇ ಸ್ವಾಮಿಯಾಗಿ ಉಳ್ಳ ಪುರುಷನು, ತ್ಮನಾಘ =(ಮಂತ್ರೇಷ್ವಾಙ್ಯಾದೇರಾತ್ಮನಃ, ಎನ್ನುವ ಸೂತ್ರದಿಂದ ಆಕಾರ ಲೋಪವು) (ಅನ್ನಾದಿಗಳುಳ್ಳವನು ಮಾತ್ರವಲ್ಲ ಮತ್ತೆ) ನಿನ್ನಿಂದಲೇ ಆಪ್ತಃ =ಹೊಂದಲ್ಪಡುವವನು, (ಆಗುವನು) (ಅಂದರೆ -ನಿನ್ನ ಅನುಗ್ರಹದಿಂದಲೇ ಅಭೀಷ್ಟ ಪ್ರಾಪ್ತಿಯುಳ್ಳವನು ಆಗುವನು.) ಸ್ತೋತೃಭ್ಯಃ =ಸ್ತುತಿಸುವವರಿಗೆ ಅಥವಾ ಸ್ತುತಿಸುವ ಶಿಷ್ಯರಿಂದ, ಅ = ಸುತ್ತಮುತ್ತಲೂ, ಇಯಾನಃ =ಶಿಷ್ಯರಿಗೆ ಆಶ್ರಯನೂ, ಅಥವಾ (ಶಿಷ್ಯರಿಂದ) ತಿಳಿಯಲ್ಪಡುವವನೂ, (ಆಗುವನು) ಇಣ್‌ಗತೌ, ಎನ್ನುವುದಕ್ಕೆ, ಆನಶ್, ಇಯಹಾದೇಶವು) (ಹೇಗೆಂದರೆ) ಋಣೋಃ= ಶಬ್ದವನ್ನು ಮಾಡುವ, ಚಕ್ರ್ಯೋಃ =ಚಕ್ರಗಳಿಗೆ ಅಕ್ಷಂನ =ಚಕ್ರದ ನಾಭಿಯಲ್ಲಿರುವ ಕಾಷ್ಠವು (ಹೇಗೆ ಆಶ್ರಯಭಾವದಿಂದ ಇರುತ್ತದೋ ಹಾಗೆಯೇ) (ದಾರ್ಷ್ಟಾಂತಿಕದಲ್ಲಿ ಸ್ತೋತೃಭ್ಯಃ ಎಂದು ಹೇಳಿದುದರಿಂದ ದೃಷ್ಟಾಂತದಲ್ಲಿಯೂ ಋಣೋಃ ಎಂದದ್ದು, ಅಂದರೆ ಶಬ್ದವಿದ್ದುದರಿಂದ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಸಾಮ್ಯವನ್ನು ಪ್ರತಿಪಾದಿಸುವುದಕ್ಕಾಗಿ ಋಣೋಃ ಎಂದು ಹೇಳಿದ್ದು. ಅದು ಚಕ್ರಯೋಃ ಎನ್ನುವುದಕ್ಕೆ ವಿಶೇಷಣವು.) ||೧೪||

ಭಾ || (1) ತ್ವದ್ವಾನ್ ತ್ವಯ್ಯೈವ ಚಾಪ್ತಃ ಸ್ಯಾತ್ (2) ಸ್ತೋತೃಣಾಮಾ ಸಮಂತತಃ | ಇಯಾನೋ ಗಮ್ಯಮಾನಸ್ಯೈ (3) ರಣಶೋಶ್ಚಕ್ರಯೋರ್ಯಥಾ | ಅಕ್ಷಮಾಶ್ರಯ ಭಾವೇನ ||೧೪||

ಅ || (1) ನಿನ್ನನ್ನೇ ಸ್ವಾಮಿಯೆಂದು ತಿಳಿದಿರುವ ಪುರುಷನು ನಿನ್ನ ಅನುಗ್ರಹದಿಂದಲೇ ಅಭೀಷ್ಟವನ್ನು ಹೊಂದುವವನಾಗುವನು. (2) ನಿನ್ನನ್ನು ಸ್ತೋತ್ರ ಮಾಡುವವರಿಗೆ ಸರ್ವತ್ರ ಆಶ್ರಯನೂ ಆಗುವನು. ಅಥವಾ ಸ್ತೋತೃಗಳಾದ ಶಿಷ್ಯರಿಂದ ತಿಳಿಯಲ್ಪಡುವವನಾಗುವನು. (3) ಧ್ವನಿಗೈಯುವ ಚಕ್ರಗಳ ನಾಭಿಕಾಷ್ಠವು ಹೇಗೆ ಆಶ್ರಯಿಸಿಕೊಂಡು ಇರುತ್ತದೋ, ಹಾಗೆಯೇ ||೧೪||

ಋ ॥ (೩೪೩) ಆ ಯದ್ದುವಃ ಶತಕ್ರತ ವಾ ಕಾಮಂ ಜರಿತೃಣಾಂ । ಋಣೋಃ ರಕ್ಷಂ ನ ಶಚೀಭಿಃ ॥೧೫॥೩೦॥

ಅ ॥ ಶತಕ್ರತೋ = ಪೂರ್ಣ ಜ್ಞಾನವುಳ್ಳ ಶ್ರೀ ಹರಿಯೇ, ಯತ್=ಯಾವ ಕಾರಣದಿಂದ, (ನೀನು) ಶಚೀಭಿಃ = (ಶಚೀವಾಕ್ ಎಂದು ವಾಕ್‌ನಾಮಗಳಲ್ಲಿ ಪಾಠವಿದೆ) ವೇದ ವಚನಗಳಿಂದ, ಜರಿತೃಣಾ= ಸ್ತೋತ್ರ ಮಾಡುವವರಿಗೆ, ಆ ಕಾಮಂ -ಸಮಸ್ತ ಕಾಮ್ಯಗಳನ್ನು, ಆದುವಃ =ಪೂರ್ಣೀಕರಿಸುವವನಾಗಿರುತ್ತಿಯೋ, ಋಣೋರಕ್ಷಂ ನ=ಶಬ್ದ ಮಾಡುವ ಚಕ್ರಗಳ ನಾಭಿಕಾಷ್ಠವು ಆಶ್ರಯ ಭಾವದಿಂದ ಹೇಗೆ ಇರುತ್ತದೋ, ಹಾಗೆಯೇ, (ಆದ ಕಾರಣ ನನಗೂ ಕೂಡ ಅಭೀಷ್ಟವನ್ನು ಕೊಡು.) ॥೧೫॥

ಭಾ ॥ (1) ಸ್ತೋತೃಣಾಂ ಕಾಮಮಾದುಹಃ । (2) ಆ ಸಮಂತಾತ್ ಸ್ಥಿತಂ ಕಾಮ (3) ಮತ್ಯಾಧಿಕ್ಯೇ ಪೃಥಕ್ಪದಂ ॥೧೫॥೩೦॥

ಅ ॥ ಸ್ತೋತ್ರ ಮಾಡುವವರಿಗೆ ಅಭೀಷ್ಟವನ್ನು ಚೆನ್ನಾಗಿ ಪೂರ್ಣೀಕರಿಸುತ್ತಿ. (ಅಕ್ಷವು ಅಭೀಷ್ಟವನ್ನು ಕೊಡದಿರುವುದರಿಂದ ಅಕ್ಷವು ಹೇಗೆ ದೃಷ್ಟಾಂತವು ಎಂದರೆ ಚಕ್ರಗಳಿಗೆ ಅಕ್ಷವು ಆಶ್ರಯವಾಗಿದೆ ಎನ್ನುವುದರಿಂದ ಮಾತ್ರ ದೃಷ್ಟಾಂತವು.) (ಶ್ರೀ ವಿಷ್ಣುವೂ ಕೂಡ ಸ್ತೋತೃಗಳಿಗೆ ಅಭೀಷ್ಟವನ್ನು ಕೊಡುವುದರಿಂದ ಆಶ್ರಯನಾಗಿದ್ದಾನೆಂದೇ ವಿವಕ್ಷಿತವು) (ಆದ ಕಾರಣ ನನಗೂ ಅಭೀಷ್ಟವನ್ನು ಕೊಡು.) (2) (೨ನೇ ಆ ಶಬ್ದಕ್ಕೆ ವೈಯರ್ಥ್ಯವೆಂದರೆ) ಸಮಂತಾತ್ =ಐಹಿಕ ಪಾರತ್ರಿಕ ನಿಖಿಲ ಇಷ್ಟಗಳನ್ನು. (3) ಪಕ್ಷಾಂತರವನ್ನು ಹೇಳುತ್ತಾರೆ.) ಮೊದಲು ಒಂದು ಆ ಶಬ್ದವು ದುವಃ ಎಂಬ ಕ್ರಿಯಾ ಸಂಬಂಧಿಯು, ೨ನೇ ಆ ಶಬ್ದವು ಸಾಧನ ಸಹಿತ ಕ್ರಿಯಾ ವಾಚನಕವಾಗಿ ಕಾಮಂ ಎನ್ನುವುದಕ್ಕೆ ವಿಶೇಷಣವು ಎಂದು ಹೇಳಿದೆ. ಈಗಲಾದರೂ ೨ ಆಕಾರಗಳೂ ದುವಃ ಎನ್ನುವ ಕ್ರಿಯೆಗೆ ಸಂಬಂಧಪಟ್ಟವುಗಳು) ಆತ್ಯಾಧಿಕ್ಯವೆಂದರ್ಥವು (ಆದ ಕಾರಣ ಎರಡು ಆಕಾರಗಳೂ ವ್ಯರ್ಥಗಳಲ್ಲ.) ಪುನಃ ಆ ಶಬ್ದವು ಪ್ರತ್ಯೇಕ ಪದವು ॥೧೫॥೩೦)

ಋ ॥ (೩೪೪) ಶಶ್ವದಿಂದ್ರಃ ಪೋಪ್ರುಥದ್ಭಿರ್ಜಿಗಾಯ ನಾನದದ್ಭಿಃ ಶಾಶ್ವಸ ದ್ಭಿರ್ಧನಾನಿ ।

ಸ ನೋ ಹಿರಣ್ಯರಥಂ ದಂಸನಾವಾನ್ ಸ ನಃ ಸನಿತಾ ಸನಯೇ ಸ ನೋಽದಾತ್ ॥೧೬॥

ಅ ॥ (ಶುನಃಶೇಪರಿಂದ ಹಿಂದೆ ಹೇಳಿದ ಪ್ರಕಾರ ಋಕ್ಕುಗಳಿಂದ ಸ್ತುತಿಸಿಕೊಂಡ ಇಂದ್ರ ದೇವರು ಆ ಶುನಶ್ಯೇಪರಿಗೆ ಹಿರಣ್ಯ ರಥವನ್ನು ಕೊಡುವುದೆಂದು ಮನಸ್ಸಿನಿಂದ ತನ್ನ ಇಚ್ಛೆಯಿಂದಲೇ ಪರಪ್ರೇರಣೆಯಿಲ್ಲದೇನೇ ಸಂಕಲ್ಪಿಸಿದರು. ಆ ಮೇಲೆ ಶುನಃಶೇಪರು ಶಶ್ವದಿಂದ್ರಃ ಎಂಬ ಋಕ್ಕಿನಿಂದಃ ಆ ಇಂದ್ರದೇವರನ್ನು ಸ್ತೋತ್ರ ಮಾಡಿದರು. ಅಂತೂ ಶುನಶ್ಯೇಪರಿಗೆ ಇಂದ್ರನ ಅನುಗ್ರಹವುಂಟಾಯ್ತು.) ಇಂದ್ರಃ =ಇಂದ್ರನು, ಪೋಪ್ರುಥದ್ಭಿಃ = (ಪ್ರಥ ಪ್ರಖ್ಯಾನೇ) (ತನ್ನ ವೀರ್ಯವನ್ನು) ಪ್ರಸಿದ್ಧಿಗೊಳಿಸುವ, ನಾನದದ್ಭೀಃ =(ಣದ ಅವ್ಯಕ್ತೇ ಶಬ್ದೇ) ಅತಿಶಯವಾಗಿ ಮತ್ತೂ ಮತ್ತು ಧ್ವನಿ ಮಾಡುವ ಶಾಸ್ವಸದ್ಭಿಃ = (ಶ್ವಸ ಪ್ರಾಣನೇ) ಸಿಟ್ಟಿನಿಂದ ಚೆನ್ನಾಗಿ ಮತ್ತೂ ಮತ್ತೂ ಶ್ವಾಸ ಬಿಡುತ್ತಿರುವ ದೇವತೆಗಳಿಂದೊಡಗೂಡಿ, ಶಶ್ವತ್ =ಯಾವಾಗಲೂ ಧನಾನಿ =ದೈತ್ಯ ಸಂಬಂಧಿ ದ್ರವ್ಯಗಳನ್ನು, ಜಿಗಾಯ = (ಜಿಜಯೇ) ಗೆದ್ದನು.

ದಂಸನಾವಾನ್=ಕರ್ಮವುಳ್ಳ, ಸಃ=ಆ ಇಂದ್ರನು, ನಃ =ನಮಗೆ, ಹಿರಣ್ಯರಥಂ =ಸ್ವರ್ಣಮಯವಾದ ರಥವನ್ನು, ಅದಾತ್ = ಈಗ ಕೊಟ್ಟನು. ಸಃ =ಆ ಇಂದ್ರನೇ ನಃ =ನಮಗೆ, ಸನಿತಾ =(ಷಣುದಾನೇ) ನಿಖಿಲ ಐಹಿಕ ಪುರುಷಾರ್ಥವನ್ನು ಕೊಡುವನು. ಅಥವಾ ಸಃ = ಆ ಇಂದ್ರನು, ನಃ = ನಮ್ಮದಾದ, ನಿಖಿಲ ಹವಿಸ್ಸು ಮೊದಲಾದುದನ್ನು, ಸನಿತಾ = (ವನಷಣ ಸಂಭಕ್ತೌ) ಹೊಂದುವನು.ಸಃ = ಆತನು, ನಃ =ನಮಗೆ, ಸನಯೇ=ಪಾರತ್ರಿಕಲಾಭ ನಿಮಿತ್ತವಾಗಿಯೂ, (ಆಗುತ್ತಾನೆ.) ||೧೬||

ಭಾ || ಕ್ರೋಥಾಚ್ಛ್ವಸದ್ಭಿಃ ಪ್ರಥಯದ್ಭಿರಾತ್ಮವೀರ್ಯಂ ಸುರೈಃ ಶಶ್ವದಿಂದ್ರೋ ಜಗಾಯ । ಧನಾನಿ ನಃ ಸ್ವರ್ಣರಥಂ ಚ ದಾತಾ ಲಬ್ಧಾ ಪ್ರಾದಾಲ್ಲಾಭಕೃತೇಚ ನೋऽಖಿಲಂ ||೧೬||

ಅ || ಇಂದ್ರ ದೇವರು, ತಮ್ಮ ಪರಾಕ್ರಮವನ್ನು ಪ್ರಸಿದ್ಧಿಗೊಳಿಸುವ (ಅತಿಶಯವಾಗಿ ಪುನಃ ಪುನಃ ಧ್ವನಿಗೈಯುವ) ಸಿಟ್ಟಿನಿಂದ ಚೆನ್ನಾಗಿ ಮತ್ತೂ ಶ್ವಾಸ ಬಿಡುವ, ದೇವತೆಗಳಿಂದ ಕೂಡಿ ಸರ್ವದಾ ದೈತ್ಯ ಸಂಬಂಧಿ ದ್ರವ್ಯಗಳನ್ನು ಗೆಲ್ಲುತ್ತಿದ್ದನು. ಆ ಇಂದ್ರನು ನಮಗೆ ಸ್ವರ್ಣಮಯ ರಥವನ್ನು ಕೊಟ್ಟನು.

ಐಹಿಕ ನಿಖಿಲಾಭೀಷ್ಟಗಳನ್ನೂ ಕೊಟ್ಟನು. ಅಥವಾ ನಾವು ಕೊಟ್ಟ ಹವಿರಾದಿಗಳನ್ನು ಹೊಂದುವನು. ನಮಗೆ ಪಾರತ್ರಿಕ ಲಾಭಕ್ಕಾಗಿಯೂ ಆಗುವನು. (ಪಾರತ್ರಿಕ ಲಾಭವನ್ನು ಹೊಂದಿಸಿಕೊಡುವನು.) ||೧೬||

ಋ || (೩೪೫) ಆಶ್ವಿನಾ ವಶ್ವಾವತ್ಯೇಷಾ ಯಾತಂ ಶವೀರಯಾ । ಗೋಮದ್ದಸ್ರಾ ಹಿರಣ್ಯವತ್ ||೧೭||

ಅ || (೩ ಋಕ್ಕುಗಳು ಅಶ್ವಿನೀ ದೇವತಾಕಗಳು) ದಸ್ರಾ = (ದಸು ಉಪಕ್ಷಯೇ) ಶತ್ರುಗಳನ್ನು ನಾಶಗೊಳಿಸುವ, ಅಶ್ವಿನೌ = ನಾಸತ್ಯ ದಸ್ರ ಎನ್ನುವ ಅಶ್ವಿನೀ ದೇವತೆಗಳಿರಾ, ಅಶ್ವವತ್ಯಾ = ಅಶ್ವಗಳಿಂದ ಕೂಡಿರುವ ಶವೀರಯಾ = ಸುಖ ಪುತ್ರರಿಂದ ಕೂಡಿರುವ, ಇಷಾ = ಅನ್ನದಿಂದ ಕೂಡಿಕೊಂಡು ಗೋಮತ್ ಹಿರಣ್ಯವತ್ = (ನಿಮ್ಮಿಬ್ಬರ ಆಗಮನವು ಹೇಗೆ) ಗೋವುಗಳುಳ್ಳದ್ದೂ ಹಿರಣ್ಯವುಳ್ಳದ್ದೂ ಆಗುವುದೋ, ಹಾಗೆಯೇ, ಆ ಯಾತಂ = (ನಮ್ಮ ಸಮೀಪಕ್ಕೆ ಅಶ್ವಾದಿಗಳನ್ನು ಕೊಡುವುದಕ್ಕಾಗಿ) ಬನ್ನಿರಿ. (ಆಧ್ಯಾತ್ಮಪರವಾದ ಅರ್ಥವು) ದಸ್ರಾ ಅಶ್ವಿನೌ = ಎಲೋ ಅಶ್ವಿನೀ ದೇವತೆಗಳಿರಾ, ಅಶ್ವವತ್ಯಾ = ಇಂದ್ರಿಯಗಳಿಂದ ಕೂಡಿದ, ಶವೀರಯಾ = ಸುಖದಿಂದ ಅವಿದ್ಯಾದಿಗಳನ್ನು ಜಯಿಸುವ ವಿಷಯದಲ್ಲಿ ಪರಾಕ್ರಮ ಯುಕ್ತವಾದ ಇಷಾ =(ಈಶ ಐಶ್ವರ್ಯೇ ಮನೋಜಯ ರೂಪವಾದ ಐಶ್ವರ್ಯದಿಂದ ಕೂಡಿಕೊಂಡು, ಗೋಮತ್ =ವೇದ ವಾಕ್ಯಯುಕ್ತವಾಗಿ, ಹಿರಣ್ಯವತ್ = ಹಿತರೂಪನೂ ರಮಣ ರೂಪನೂ ಆದ ಪರಬ್ರಹ್ಮನಿಂದ ಕೂಡಿ ಹೇಗೆ ಆದೀತೋ ಹಾಗೆ, ಆ ಯಾತಂ=ಬನ್ನಿರಿ. ||೧೭||

ಭಾ || (1) ಗೋಮದ್ಧಿರಣ್ಯವಚ್ಚ ಸ್ಯಾದ್ಯಥಾऽऽಯಾತಂ ತಥೈವ ನಃ । ಸುಖ ಪುತ್ರ ಯುಜಾ ಚಾಶ್ವವತ್ಯೇಷಾ (2) ಶಂ ಸುಖಂ ಯತಃ (3) ಇಡೈಶ್ವರ್ಯಂ ತಥಾ ವೀರಂ ವೀರ್ಯಂ ಖಾನ್ಯಶ್ವನಾಮತಃ । ಗೌರ್ವಾಗ್ಘಿತಂ ಚ ರಮಣಂ ಪರಂಬ್ರಹ್ಮ ಗುಣೋಚ್ಛ್ರಿತಂ ||೧೭||

ಅ || (1) ಸುಖ ಪುತ್ರರಿಂದಲೂ ಅಶ್ವಗಳಿಂದಲೂ, ಅನ್ನದಿಂದಲೂ ಕೂಡಿಕೊಂಡು, ನಿಮ್ಮಿಬ್ಬರ ಆಗಮನವು ಗೋವುಗಳಿಂದ ಕೂಡಿದ್ದು ಹಿರಣ್ಯದಿಂದ ಕೂಡಿದ್ದು ಹೇಗೆ ಆಗುವುದೋ ಹಾಗೆ ಬನ್ನಿರಿ. (ಅಂದರೆ ಅಶ್ವಾದಿಗಳನ್ನು

ಕೊಡುವುದಕ್ಕಾಗಿ ಬನ್ನಿರಿ) (೩) (ಶವೀರಯಾ ಎನ್ನುವುದನ್ನು ವಿವರಿಸುತ್ತಾರೆ.) ಯಾವ ಕಾರಣದಿಂದ, ಶಂ=ಸುಖವೋ, (ವೀರಸ್ಸು ಸುಭಟೇ ಶ್ರೇಷ್ಠೇ ಎಂಬ ವಿಶ್ವಕೋಶದಿಂದ ಶ್ರೇಷ್ಠಾರ್ಥಕವಾದ ವೀರ ಶಬ್ದಕ್ಕೆ ಪುತ್ರ ಎಂದು ಅರ್ಥವು. ಅಥವಾ ಅವೀರಾ ನಿಷ್ಪತಿಸುತಾ ಎನ್ನುವ ಅಮರ ಕೋಶದಿಂದ ವೀರ ಶಬ್ದಕ್ಕೆ ಪುತ್ರನೆಂದರ್ಥವು. ಶಥಾಚ ವೀರಃ =ಪುತ್ರನು, ತಥಾಚ ಸುಖ ಪುತ್ರರುಳ್ಳದ್ದು ಶವೀರಾ ತಯಾ ಆದ ಕಾರಣ ಹೇಳಿದ್ದು ಯುಕ್ತವು. (3) (ಇಡಾದಿ ಶಬ್ದಗಳಿಗೆ ಆಧ್ಯಾತ್ಮ ಪರವಾಗಿ ಅರ್ಥಗಳನ್ನು ಹೇಳುತ್ತಾರೆ) ಇಟ್ ಶಬ್ದದಿಂದ ಐಶ್ವರ್ಯವು. ಮನಸ್ಸಿನ ಜಯವು ಹೇಳಲ್ಪಡುತ್ತದೆ. (ಇಷಾ ಎನ್ನುವುದು ಈಶ ಐಶ್ವರ್ಯೇ ಎನ್ನುವುದರ ರೂಪವು) ವೀರಂ =ವೀರ್ಯವು, ಆ ವಿದ್ಯೆಯನ್ನು ಜಯಿಸುವ ವಿಷಯದಲ್ಲಿ ಪರಾಕ್ರಮವು. ಅಶ್ವ ನಾಮದಿಂದ ಇಂದ್ರಿಯಗಳು ಹೇಳಲ್ಪಡುತ್ತವೆ. ಗೌಃ =ವಚನವು. ಹಿತಕರನೂ ರಮಣೀಯನೂ ಆದ ಪರಬ್ರಹ್ಮನು ಹಿರಣ್ಯವೆನಿಸುತ್ತಾನೆ. (ಹಿರಣ್ಯ ಶಬ್ದಕ್ಕೆ ಅರ್ಥಾಂತರವನ್ನೂ ಹೇಳುತ್ತಾರೆ.) ಹೇಗೆ ಲೋಕಗಳಲ್ಲಿ ಹಿರಣ್ಯವು ಶ್ರೇಷ್ಠವೋ, ಹಾಗೆಯೇ ಪರಬ್ರಹ್ಮನು ಬ್ರಹ್ಮ ರುದ್ರಾದಿ ಎಲ್ಲಾ ದೇವತೆಗಳಿಗಿಂತಲೂ ಗುಣಗಳಿಂದ ಶ್ರೇಷ್ಠನು ಎಂದರ್ಥವು.॥೧೭॥

**ಋ ॥ (೩೪೬) ಸಮಾನ ಯೋಜನೋ ಹಿ ವಾಂ ರಥೋ ದಸ್ರಾವಮರ್ತ್ಯ । ಸಮುದ್ರೇ ಅಶ್ವಿನೇಯತೇ ॥೧೮॥**

ಅ ॥ ದಸ್ರೌ ಅಶ್ವಿನಾ = ಎಲೋ ಭಗವದ್ರೂಪ ವಿಶೇಷಗಳೇ, ವಾಂ =ನಿಮ್ಮ ಭಕ್ತರಾದ ನಿನ್ನಲ್ಲಿಯೇ ಮನಸಸ್ಸನ್ನು ಇಟ್ಟವರಿಗೆ, ಸಮಾನ ಯೋಜನಃ = (ಮರಣವಿಲ್ಲದಿರುವ ದೇಹವು ಪ್ರಾಪ್ತಿಯಾಗಲಿಕ್ಕೆ ಯೋಗವು ಸಾಧನವಾದ ಪ್ರಯುಕ್ತ ಎಂತಹ ಧ್ಯಾನಾದಿ ರೂಪವಾದ ಯೋಗದಿಂದ ಮೋಕ್ಷವು ಪ್ರಾಪ್ತವಾಗುತ್ತದೋ, ಅಂತಹ ಯೋಗದಿಂದ ಸಂಬಂಧವುಳ್ಳ (ಅಂದರೆ ಸಮಾನವಾದ ಯೋಗದಿಂದ ಕೂಡಿರುವ) ಅಮರ್ತ್ಯ =ಜ್ಞಾನ ಆನಂದ ಸ್ವರೂಪವಾಗಿರುವುದರಿಂದ ಮರಣವೇ ಇಲ್ಲದಿರುವ, ರಥಃ= ಈ ಪ್ರಸಿದ್ಧವಾದ ದೇಹವೂ, ಸಮುದ್ರೇ ಕ್ಷೀರ ಸಮುದ್ರದಲ್ಲಿ ಈಯತೇ = ತಿಳಿಯಲ್ಪಡುತ್ತದೆ. ಹಿ =ಪ್ರಸಿದ್ಧವು. (ಪ್ರಸಿದ್ಧ ಅಶ್ವಿನೀ ದೇವತೆಗಳಲ್ಲಿ ಆದರೂ ಎಲೋ ಅಶ್ವಿನೀ ದೇವತೆಗಳಿರಾ, ವಾಂ =ನಿಮ್ಮ ಸಂಬಂಧಿಯಾದ, ಸಮಾನ ಯೋಜನಃ =ಯೋಗ್ಯವಾದ ಚಕ್ರವುಳ್ಳ, ಅಮರ್ತ್ಯ = ಅಲೌಕಿಕವಾದ, ರಥಃ =ರಥವು, ಸಮುದ್ರೇ = ಸಮುದ್ರ ಪರ್ಯಂತ, ಈಯತೇ=ಹೋಗುವಂತಾದ್ದು. ಹಿ=ಪ್ರಸಿದ್ಧವು. ॥೧೮॥

**ಭಾ ॥ (1) ಸಮಾನಯೋಗಯುಕ್ತೋಽಯಂ ರಥೋ ದೇಹಸ್ತ್ವದಾತ್ಮನಾಂ । ಚಿತ್ಸುಖತ್ವಾದಮರ್ತ್ಯಶ್ಚ ಜ್ಞಾಯತೇ ಕ್ಷೀರ ಸಾಗರೇ (2) ಮೋಕ್ಷಸ್ಯ ಯಾವತಾ ಪ್ರಾಪ್ತಿಃ ಸಮಾನೋ ಯೋಗ ಉಚ್ಯತೇ ॥೧೮॥**

ಅ ॥ (1) (ಎಲೋ ಭಗವದ್ರೂಪ ವಿಶೇಷಗಳೇ) ನಿನ್ನಲ್ಲಿಯೇ ಮನಸ್ಸನ್ನು ಇಟ್ಟಿರುವ ಭಕ್ತರಿಗೆ (ಅಶ್ವಿನಾ ಎಂದು ಭಗವದ್ರೂಪಗಳಿಗೆ ದ್ವಿತ್ವವಿದ್ದ ಪ್ರಯುಕ್ತ ಭಾಷ್ಯದಲ್ಲಿ ಯುಷ್ಮದಾತ್ಮನಾಂ ಎಂದು ಹೇಳಬೇಕಿತ್ತು. ತ್ವದಾತ್ಮನಾಂ ಎಂದು ಏಕವಚನ ಹೇಳಿದ್ದು ಹೇಗೆಂದರೆ ಭಗವದ್ರೂಪಗಳಿಗೆ ಭೇದವನ್ನು ವಿವಕ್ಷಾ ಮಾಡದೆ ಇದ್ದು ಸರ್ವೋತ್ತಮನಾದ ಶ್ರೀ ಹರಿಯು ಒಬ್ಬನೇ ಎನ್ನುವ ಅಭಿಪ್ರಾಯದಿಂದ ತ್ವದಾತ್ಮನಾಂ ಎಂದು ಹೇಳಿದ್ದು) (ಇಲ್ಲಿ ಯೋಜನ ಶಬ್ದದಿಂದ ಧ್ಯಾನಾದಿ ರೂಪವಾದ ಯೋಗವನ್ನು ತೆಗೆದುಕೊಂಡದ್ದರಿಂದ ಮುಕ್ತನಿಗೆ ಧ್ಯಾನಾದಿಗಳಿಂದ ಪ್ರಯೋಜನವಿಲ್ಲದಿರುವುದರಿಂದ ಮುಕ್ತರು ಸಮಾನ ಯೋಗ ಯುಕ್ತರು ಎಂದದ್ದು ಹೇಗೆಂದರೆ) ಅಮರ್ತ್ಯವಾದ (ಮರಣವಿಲ್ಲದಿರುವ) ದೇಹದ ಪ್ರಾಪ್ತಿಗೆ ಯೋಗವು ಸಾಧನವಾಗಿರುವುದರಿಂದ ಸಮಾನ ಯೋಗ ಯುಕ್ತಃ ಎಂದದ್ದು (ಯದ್ಯಪಿ ಮೋಕ್ಷದಲ್ಲಿ ಮುಕ್ತರು ಧ್ಯಾನಾದಿಗಳನ್ನು

ಮಾಡುತ್ತಿರುತ್ತಾರೆ. ಆದರೂ ಆ ಧ್ಯಾನಾದಿಗಳು ಫಲರೂಪವಾಗಿರುವುದರಿಂದ ಸ್ವರೂಪವಾಗಿರುವ ಪ್ರಯುಕ್ತ ಅಮರ್ತ್ಯ ದೇಹವೆಂದು ಗ್ರಹಣ ಮಾಡಿದುದರಿಂದಲೇ ಧ್ಯಾನಾದಿಗಳನ್ನು ತೆಗೆದುಕೊಂಡದ್ದರಿಂದ ಮುಖ್ಯವಾಗಿ ಯೋಗಯುಕ್ತತ್ವವು ಕೂಡದಿರುವ ಕಾರಣ ಬಾಹ್ಯ (ಧ್ಯಾನಾದಿಗಳನ್ನೇ ತೆಗೆದುಕೊಳ್ಳಬೇಕು.) (ದೇಹವು ಅಮರ್ತ್ಯವು ಹೇಗೆ ಆಗುವುದೆಂದರೆ) (ಸ್ವರೂಪ ದೇಹವನ್ನು ವಿವಕ್ಷಾ ಮಾಡಿಕೊಂಡು) ಜ್ಞಾನಾನಂದಾತ್ಮಕವಾಗಿರುವುದರಿಂದ (ಸ ಏಷ ದೇವರಥಃ ತದ್ರಥೋ ದೇಹ ಉಚ್ಯತೇ ಇತ್ಯಾದಿ ಪ್ರಮಾಣಗಳಿಂದ ದೇಹವೇ ರಥವೆಂದು ಹೇಳಿದ ಕಾರಣ ರಥಃ = ದೇಹವು) ಅಮರ್ತ್ಯವೆಂದು (ಮರಣವಿಲ್ಲದಿರುವುದೆಂದು) ಕ್ಷೀರ ಸಮುದ್ರದಲ್ಲಿ ಇದೆ ಎಂದು ತಿಳಿಯಲ್ಪಡುತ್ತದೆ. (೨) ಸಮಾನವಾದ ಯೋಗವು ಯಾವುದೆಂದರೆ) ಎಂತಹ ಧ್ಯಾನಾದಿಗಳಿಂದ ಮೋಕ್ಷವು ಪ್ರಾಪ್ತವಾಗುತ್ತದೋ, ಅದೇ ಸಮಾನ ಯೋಗವೆನಿಸುತ್ತದೆ. (ಪ್ರಸಿದ್ಧ ಅಶ್ವಿನೀ ದೇವತೆಗಳನ್ನು ಇಟ್ಟುಕೊಂಡರೆ ಸಮಾನ ಯೋಜನಃ = ಯೋಗ್ಯ ಚಕ್ರವುಳ್ಳ ರಥವು ಸಮುದ್ರ ಪರ್ಯಂತ ಹೋಗತಕ್ಕದ್ದು.) (ಹೀಗೆಯೇ ಪ್ರತ್ಯೇಕವಾಗಿ ವಿಷ್ಣುಪಕ್ಷದಲ್ಲಿಯೂ ಸಮಾನ ಯೋಜನಃ = ಸ್ವಯೋಗ್ಯ ಸಂಬಂಧವುಳ್ಳ, ರಥಃ =ಗರುಡನು ಇತ್ಯಾದಿ ಪ್ರಕಾರ ತಿಳಿದುಕೊಳ್ಳಬೇಕು) ||೧೮||

ಋ || (೩೪೭) ನ್ಯ ಘ್ನ್ಯಸ್ಯ ಮೂರ್ಧನಿ ಚಕ್ರಂ ರಥಸ್ಯ ಯೇಮಥುಃ । ಪರಿ ದ್ಯಾಮನ್ಯ ದೀಯತೇ ||೧೯||

ಅ || (ಎಲೋ ಅಶ್ವಿನೀ ಎನಿಸಿಕೊಂಡ ಭಗವದ್ರೂಪಗಳಿರಾ) ರಥಸ್ಯ ಸೂರ್ಯರಥದ, ಚಕ್ರಂ = ಒಂದು ಚಕ್ರವನ್ನು, ಅಘ್ನ್ಯಸ್ಯ =ನಹಂತಿ ನಗಚ್ಛತೀತಿ ಅಘ್ನ್ಯಃ = ಹನ ಹಿಂಸಾ ಗತ್ಯೋಃ = ಎಂಬ ಧಾತುವಿನಿಂದ ನಿಷ್ಪನ್ನವು) ಮಾನಸೋತ್ತರ ಪರ್ವತದ, ಮೂರ್ಧನಿ, ಶಿರಸ್ಸಿನಲ್ಲಿ (ನೀವಿಬ್ಬರು) ನಿ ಯೇ ಮಥುಃ = (ಯಮುಉ ಪರಮೇ) ನಿಯಮಿಸುವವರಾಗಿದ್ದೀರಿ. (ನಿಮ್ಮಿಬ್ಬರಿಂದ ಚಕ್ರವು ನಿಯಮಿಸಲ್ಪಟ್ಟದ್ದಾಗಿರುತ್ತದೆ) ಅನ್ಯತ್ = ಇನ್ನೊಂದು ಚಕ್ರವು. (ಚಕ್ರ ಸ್ಥಾನೀಯವಾದ ಅಕ್ಷ ಪ್ರದೇಶವು) ದ್ಯಾಂ ಪರಿ =ಮೇರು ಪರ್ವತದಲ್ಲಿ, ಈಯತೇ ( ನಿಮ್ಮಿಂದ ನಿಯಮಿತವಾಗಿ) ತಿಳಿಯಲ್ಪಡುತ್ತದೆ ಅಥವಾ ಅಶ್ವಿನೀ ದೇವತೆಗಳಿರಾ, ರಥಸ್ಯ, =ಜಗದಾಖ್ಯ ರಥದ ಚಕ್ರಂ=(ಪ್ರವೃತ್ತಿ ಹೇತುತ್ವವು ಸಮವಾದ ಪ್ರಯುಕ್ತ) ಪಾಪಾಖ್ಯ ಚಕ್ರವನ್ನು ಅಘ್ನ ಸ್ಯ = (ವಿಷ್ಣು ವಾಚಕವಾದ ಆಕಾರದಿಂದ ಹನ ಧಾತುವಿಗೆ ಕರ್ಮಾರ್ಥದಲ್ಲಿ ಯಕ್ ಅಃ = ವಿಷ್ಣುವು ತೇನ ಹನ್ಯತೇ ಎಂಬ ವ್ಯುತ್ಪತ್ತಿಯಿಂದ) ಶ್ರೀ ಹರಿಯಿಂದ ಸಂಹರಿಸಲ್ಪಡುವ ದೈತ್ಯ ಜನರ, ಮೂರ್ಧನಿ =ಶಿರಸ್ಸಿನಲ್ಲಿ, ನಿಯೇ ಮಥುಃ = (ನೀವಿಬ್ಬರು) ಸ್ಥಾಪಿಸುವವರಾಗಿದ್ದೀರಿ ಅನ್ಯತ್ ಚಕ್ರಂ = ಇತರವಾದ ಪುಣ್ಯವು ದ್ಯಾಂ ಪರಿ = (ಪೃಥಿವ್ಯಾಂಧೌರ್ಮ ಹಾಮೇರುಃ ಎಂಬ ಪ್ರಮಾಣದಿಂದ ದ್ಯೋ ಶಬ್ದಕ್ಕೆ ಲಕ್ಷಣಯಾ) ಸ್ವರ್ಗದಲ್ಲಿದ್ದ ಜನರ ಮೇಲೆ, ಈಯತೇ (ನಿಮ್ಮಿಬ್ಬರಿಂದಲೇ) ತಿಳಿಯಲ್ಪಡುತ್ತದೆ. (ನಿಯಮಿಸಲ್ಪಡುತ್ತದೆ.) ||೧೯||

ಭಾ || ಏಕಂ ಚಕ್ರಂ ಗಿರೇರ್ಮೂರ್ಧ್ನಿ ನಿಯತಂ ದಿವಿ ಚಾಪರಂ । ಪಾಪಂ ಚಕ್ರಂ ಹರಿಘ್ನ್ಯಸ್ಯ ಪುಣ್ಯಂ ದಿವ್ಯಸ್ಯ ಚೋಪರಿ ||೧೯||

ಅ || ಸೂರ್ಯ ರಥದ ಒಂದು ಚಕ್ರವು ಮಾನಸೋತ್ತರ ಪರ್ವತದ ಶಿರಸ್ಸಿನಲ್ಲಿಯೂ ಇನ್ನೊಂದು ಚಕ್ರವು (ಸೂರ್ಯರಥಕ್ಕೆ ಒಂದೇ ಚಕ್ರವಿದ್ದುದರಿಂದ, ಅನ್ಯಥ್ ಚಕ್ರಂ=ಇನ್ನೊಂದು ಚಕ್ರವು ದ್ಯಾಂ ಪರಿ ಎಂದದ್ದು ಹೇಗೆಂದರೆ) ಚಕ್ರವಲ್ಲ ಮತ್ತೆ ಚಕ್ರಂ =ಚಕ್ರಸ್ಥಾನೀಯವಾದ ಅಕ್ಷ ಪ್ರದೇಶವು ಮೇರು ಪರ್ವತದಲ್ಲಿ (ನಿಮ್ಮಿಬ್ಬರಿಂದ) ನಿಯತವಾಗಿದೆ.

(ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಜಗದಾಖ್ಯರಥದ ಪಾಪಖ್ಯ ಒಂದು ಚಕ್ರವು ದೈತ್ಯ ಜನರ ಶಿರಸ್ಸಿನಲ್ಲಿಯೂ ಪುಣ್ಯಾಖ್ಯ ಚಕ್ರವು ಸ್ವರ್ಗದಲ್ಲಿರತಕ್ಕ ಜನರ ಮೇಲೆಯೂ (ಜನರಲ್ಲಿಯೂ) ನಿಮ್ಮಿಬ್ಬರಿಂದಲೇ ಸ್ಥಾಪಿಸಲ್ಪಡುತ್ತದೆ. ||೧೯||

ಋ || (೩೪೮) ಕಸ್ತ ಉಷಃ ಕಧಪ್ರಿಯೇ ಭುಜೇ ಮರ್ತೋ ಅಮರ್ತ್ಯೇ | ಕಂ ನಕ್ಷಸೇ ವಿಭಾವರಿ ||೨೦||

ಅ || ಕಧಪ್ರಿಯೇ = ಯಾವನಾರಾಯಣೀರೂಪಕ್ಕೆ ಪೂರ್ಣನಂದವಿರುವುದರಿಂದ ಸರ್ವವೂ ಪ್ರಿಯವೇ ಆಗಿಯದೋ, ಅಪ್ರಿಯವು ಯಾವುದೂ ಇಲ್ಲವೋ, ಅಥವಾ ದುಃಖಕಾರಣವು ಯಾವುದೂ ಇಲ್ಲವೋ ಅಂತಹ ಸ್ತ್ರೀ ರೂಪವು ಕದಪ್ರಿಯವು, ಅಮರ್ತ್ಯೇ = ಮೃಙ್ ಪ್ರಾಣತ್ಯಾಗೇ) ಮರಣವಿಲ್ಲದಿರುವುದು, ವಿಭಾವರಿ = ವಿಶಿಷ್ಟವಾದ ಪ್ರಭೆಯಿಂದ ಜಗತ್ತನ್ನು ಆವರಿಸಿಕೊಂಡಿರುವುದು. ಉಷಃ = ಉಷಃ ಎನಿಸಿಕೊಂಡ ಭಗವಂತನ ಸ್ತ್ರೀ ರೂಪವೇ, ಕಃ ಮರ್ತ = ಯಾವ ಮನುಷ್ಯನು, ತೇಃ =ನಿನ್ನ ಭುಜೇ =ಭೋಗಕ್ಕೋಸ್ಕರ, (ಆಗುತ್ತಾನೆ) (ಯಾರೊಬ್ಬನೂ ಆಗುವುದಿಲ್ಲ. ಯಾವ ಕಾರಣದಿಂದ ನೀನು ಇತರರಿಗೆ ಪೂರ್ಣಾನಂದವನ್ನೇ ಕೊಡುವವನೂ, ಮರಣರಹಿತನೂ ಆಗಿರುತ್ತಿಯೋ ಆದ ಕಾರಣ ನಿನ್ನ ಭೋಗವು ಮನುಷ್ಯನ ಅಧೀನವು ಹೇಗೆ ಆಗುವುದು) ಕಂ ನಕ್ಷಸೇ = (ಣಕ್ಷಗತೌ) ಆಪ್ತಕಾಮನಾದುದರಿಂದ ತನಗಾಗಿ ಯಾವನನ್ನು ಕುರಿತು ಹೋಗುತ್ತಿ, (ಯಾವನೊಬ್ಬನನ್ನು ಆಶ್ರಯಿಸುವುದೇ ಇಲ್ಲ) ||೨೦||

ಭಾ || (1) ಕೋ ಮರ್ತ್ಯಸ್ತ್ವಪ ಭೋಗಾಯ ಯತಃ ಸರ್ವಪ್ರಿಯೋ ಭವಾನ್ | (2) ಕಿಮಪಿ ಪ್ರಿಯಮಸ್ಯೇತಿ ಪೂರ್ಣಾನಂದಾತ್ಕಧಪ್ರಿಯಃ | (3) ಆಪ್ತ ಕಾಮತ್ವತಃ ಕಂ ವಾ ಗಚ್ಛತಿ ಸ್ವಾರ್ಥಹೇತುತಃ | (4) ವಿಶೇಷಾದ್ಭವೃತೇರ್ವಿಷ್ಣುಃ ಕಥಿತಶ್ಚ ವಿಭಾವರೀ ||೨೦||

ಅ || (1) (ಎಲೋ ಉಷಾದೇವಿಯೇ) ಯಾವ ಕಾರಣ ನೀನು ಸರ್ವರಿಗೂ ಪ್ರಿಯನೇ ಆಗಿರುತ್ತಿಯೋ ಆದ ಕಾರಣ ಯಾವ ಮನುಷ್ಯನು ನಿನ್ನ ಭೋಗಕ್ಕೋಸ್ಕರ ಆಗುತ್ತಾನೆ. (2) ಪರಿಪೂರ್ಣ ಆನಂದವುಳ್ಳವನಾದುದರಿಂದ ಸಮಸ್ತ ವಸ್ತುವೂ ಪ್ರಿಯವೇ ಆಗಿರುವುದರಿಂದ ಕಧಪ್ರಿಯಃ ಎನಿಸುತ್ತಾನೆ. (3) ಆಪ್ತಕಾಮನಾದುದರಿಂದ ತನ್ನ ಪ್ರಯೋಜನಕ್ಕಾಗಿ ಯಾರನ್ನು ಕುರಿತು ಹೋಗುತ್ತಿ ? (4) ವಿಶೇಷಾಕಾರವಾಗಿ ಪ್ರಕಾಶದಿಂದ ಇಡೀ ಜಗತ್ತನ್ನು ಆವರಿಸಿಕೊಂಡಿರುವುದರಿಂದ ಶ್ರೀ ವಿಷ್ಣುವು ವಿಭಾವರೀ ಎನಿಸುತ್ತಾನೆ. ||೨೦||

ಋ || (೩೪೯) ವಯಂ ಹಿ ತೇ ಅಮನ್ಮಹ್ಯಾಂತಾದಾ ಪರಾಕಾತ್ | ಅಶ್ವೇ ನ ಚಿತ್ರೇ ಅರುಷಿ ||೨೧||

ಅ || ಅಶ್ವೇನ =ಜಾತ್ಯಶ್ವದಂತೆ, ಚಿತ್ರೇ =ಸದಾ ಮಂಗಳಕರಗಳಾದ, ಅರುಷಿ=ಸದಾಽರುಣಗಳಾದ ಎಲೋ ಉಷಾದೇವಿಯೇ, ವಯಂ =ನಾವು ಆ ಅಂತಾತ್ =ಸರ್ವ ಜೀವರಲ್ಲಿ ಅಂತಿಮನಾದ ಅತ್ಯಧಮನಾದ ಕಲಿಪರ್ಯಂತವಾದ, ಆ ಪರಾಕಾತ್ =ಚೆನ್ನಾಗಿ ಉತ್ತಮವಾದ, ಸುಖವುಳ್ಳ ಶ್ರೀ ತತ್ವ ಪರ್ಯಂತವಾದ ಅಂದರೆ ಅತ್ಯಧಮನಾದ ಕಲಿ,

ಅತ್ಯುತ್ತಮಳಾದ ಲಕ್ಷ್ಮೀ ಸಹಿತವಾದ (ಲಕ್ಷ್ಮೀಯನ್ನು ಆರಂಭಿಸಿ ಕಲಿಪರ್ಯಂತ) ಸಮಸ್ತ ಜಗತ್ತು, ತೇ ಅಮನ್ಮಹಿ= (ಮನು ಅವ ಭೋಧನೇ) ಸರ್ವದಾ ಕೇವಲ ನಿನ್ನೊಬ್ಬನ ಅಧೀನವನ್ನಾಗಿಯೇ ಧ್ಯಾನಿಸುತ್ತಿರುತ್ತೇವೆ. ಹಿ=ಪ್ರಸಿದ್ಧ. ಪ್ರಸಿದ್ಧ ಉಷಾದೇವಿ ಎಂದು ಇಟ್ಟುಕೊಳ್ಳುವುದಾದರೆ ಅಂತ ಶಬ್ದದಿಂದ ನರಕವನ್ನೂ ಪರಾಕ ಶಬ್ದದಿದ ಸ್ವರ್ಗರೂಪ ಅರ್ಥವನ್ನೂ ಇಟ್ಟುಕೊಳ್ಳಬೇಕು. ಅಂತೂ ನರಕ ಸ್ವರ್ಗಗಳಿಂದ ಕೂಡಿದ ಜಗತ್ತಿಗೆ ಸ್ವಾಮಿಯು ಎಂದು ಇಟ್ಟುಕೊಳ್ಳಬೇಕು) ॥೨೧॥

ಭಾ ॥ **(1) ಚಿಂತಯಾಮಸ್ತ್ವದೇಕಸ್ಯ ವಿಶ್ವಮಾಂತಪರಾಕಯೋಃ । (2) ಪರಾಕಃ ಸುಸುಖ್ಯೈವ ಶ್ರೀರಂತಃ ಕಲಿರುದಾಹೃತಃ । (3) ನರಕಸ್ವರ್ಗಯೋರೇವದೇವ್ಯುಷಾ ಉದಿತಾಯದಾ । ಜಾತ್ಯಶ್ವತ್ಸದಾ ಭದ್ರೇ ಚಾರುಣೇ** ॥೨೧॥

ಅ ॥ ಜಾತಿ ಕುದುರೆಯಂತೆ ಸದಾ ಮಂಗಲಕರಗಳಾದ (ಶ್ರೀ ಹರಿಯನ್ನು ಇಟ್ಟುಕೊಂಡು ಜಾತ್ಯಶ್ವವತ್ ಎಂದದ್ದು. ಇಲ್ಲವಾದರೆ ಅಶ್ವಾವತ್ ಎಂದು ಹೇಳಬೇಕಿತ್ತು.) ಅರುಣ ಬಣ್ಣವುಳ್ಳ ಜ್ಞಾನ ಆನಂದಾದಿ ಗುಣಗಳ ಸಮುದಾಯವುಳ್ಳ, ಎಲೋ ಉಷಾದೇವಿಯೇ, ಶ್ರೀ ಹರಿಯ ಸ್ತ್ರೀರೂಪವೇ ಕಲಿಯನ್ನಾರಂಭಿಸಿ ಲಕ್ಷ್ಮೀ ಪರ್ಯಂತವಾದ ಸಮಸ್ತ ಜಗತ್ತನ್ನು ಕೇವಲ ನಿನ್ನ ಅಧೀನವನ್ನಾಗಿಯೇ ತಿಳಿಯುತ್ತೇವೆ. (2) (ಪರಾಕ ಅಂತ ಶಬ್ದಗಳಿಗೆ ಅರ್ಥ ಹೇಳುತ್ತಾರೆ) ಪೂರ್ಣ ಸುಖದ ಅಂತ್ಯವು ಪರಾಕವು ಲಕ್ಷ್ಮೀದೇವಿಯು ಪೂರ್ಣ ಸುಖವುಳ್ಳವಳೇ. ದುರ್ಜನರಲ್ಲಿ ಅಂತಿಮನು ಕಲಿಯು ಎಂದು ಹೇಳಲ್ಪಡುತ್ತಾನೆ. (3) (ಪ್ರಸಿದ್ಧ ಉಷಾದೇವಿಯಲ್ಲಿ ಈ ಅರ್ಥವು ಕೂಡದಿರುವುದರಿಂದ ಬೇರೆ ರೀತಿಯಾಗಿ ಅರ್ಥ ಹೇಳುತ್ತಾರೆ.) ಯಾವಾಗ ಪ್ರಸಿದ್ಧ ಉಷಾ ದೇವಿಯು ಇಲ್ಲಿ ಹೇಳಲ್ಪಡುತ್ತಾಳೋ, ಆಗ ನರಕ ಸ್ವರ್ಗಗಳಿಗೆ ಸ್ವಾಮಿಯು ಎಂದು ಇಟ್ಟುಕೊಳ್ಳಬೇಕು. ಅಂತಃ = ವಿನಾಶವು. ದುಃಖವು, ನರಕವು. ಪರಮಸುಖ ರೂಪವಾಗಿರುವುದರಿಂದ ಪರಾಕಃ =ಸ್ವರ್ಗವು. ತಥಾ ಚ ಉಷಾದೇವಿಯು ನರಕ ಸ್ವರ್ಗಗಳಿಗೆ ಸ್ವಾಮಿಯು ಎಂದರ್ಥವು. ॥೨೧॥

ಋ ॥ **(೨೫೦) ತ್ವಂ ತ್ಯೇಭಿರಾಗಹಿ ವಾಜೇಭಿರ್ದುಹಿತರ್ದಿವಃ । ಅಸ್ಮೇ ರಯಿಂ ನಿ ಧಾರಯ** ॥೨೨॥೩೧॥೩೦॥೬॥

ಅ ॥ ಹೇ ದಿವಃ ದುಹಿತಃ = (ಶ್ರೀ ವಿಷ್ಣುವು ಸರಸ್ವತೀ ಭಾರತಿಯರ ಸ್ತುತಿಯಿಂದ ಅಭಿವ್ಯಂಗನಾಗುವುದರಿಂದ) ವಾಣಿಯರ ಪುತ್ರಿಯೆನಿಸಿಕೊಂಡ ಶ್ರೀ ವಿಷ್ಣುವೇ, ಅಥವಾ ಪ್ರಾಣ ಭಾರತಿಯರ ಪುತ್ರಿಯಾದ ಉಷಾ ದೇವಿಯೇ, ತ್ವಂ=ನೀನು ತ್ಯೇಭಿಃ =ಪ್ರಸಿದ್ಧಗಳಾದ, ವಾಜೇಭಿಃ = (ನಮಗೆ) ಅನ್ನಗಳನ್ನು ಕೊಡುವುದಕ್ಕಾಗಿ ಆ ಗಹಿ = (ನಮ್ಮ ಸಮೀಪಕ್ಕೆ) ಬಾ. ಅಸ್ಮೇ = ನಮ್ಮಲ್ಲಿ, ರಯಿಂ =ದ್ರವ್ಯವನ್ನು ಕೂಡ, ನಿಧಾರಯ = ನಿಶ್ಚಿತ ಹೇಗೆ ಆದೀತೋ ಹಾಗೆ ಸ್ಥಾಪಿಸು.

॥೨೨॥೩೧॥೩೦॥೬॥

ಭಾ ॥ **(1) ಪ್ರಾಣ ವಾಕ್ಸುತೇ । (2) ತದ್ವ್ಯಂಗ್ಯತ್ವಾದ್ಧರಿಶ್ಚೈವ ದಿವಸ್ಪುತ್ರ ಉದಾಹೃತಃ** ॥೨೨॥

ಅ ॥ (ಇಲ್ಲಿ ದಿವೋದುಹಿತಃ = ಎನ್ನುವುದನ್ನು ಪ್ರಸಿದ್ಧಳಾದ ಉಷಾ ದೇವಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ) ಮುಖ್ಯಪ್ರಾಣ ಭಾರತಿಯರ ಪುತ್ರಿಯಾದ ಉಷಾದೇವಿಯೇ (ಯದ್ಯಪಿ ವಾಗಭಿಮಾನಿನಿಯರಾದ ಸರಸ್ವತೀ ಭಾರತೀಯರೇ ದ್ಯೌಃ ಎನಿಸುತ್ತಾರೆ. ಆದರೂ ಕೇವಲ ಸ್ತ್ರೀಯರಿಗೆ ಮಕ್ಕಳೇ ಆಗದಿರುವುದರಿಂದ ಪ್ರಾಣ ವಾಕ್ಸುತೇ ಎಂದು ಹೇಳಿದ್ದಾರೆ.) (2) (ಪರಮಾತ್ಮನು ಸರಸ್ವತೀ ಭಾರತಿಯರ ಮಗಳು ಎಂದಾಗುವುದು ಹೇಗೆಂದರೆ) ಶ್ರೀ ಹರಿಯು ಸರಸ್ವತೀ ಭಾರತಿಯರಿಂದಲೇ ಪ್ರಕಟನಾಗುವುದರಿಂದ ದಿವಸ್ಪುತ್ರಃ ಎನಿಸುತ್ತಾನೆ. ॥೨೨॥೩೧॥೧೧॥೬॥

ಅವ ॥ ಶುನಶ್ಶೇಪರು ಕಂಡಿರುವ ಋಕ್ಕುಗಳನ್ನು ವ್ಯಾಖ್ಯಾನ ಮಾಡಿ ಈಗ ಮೇಲಿನ ಋಕ್ಕುಗಳಿಗೆ ಋಷಿಯನ್ನೂ ದೇವತೆಗಳನ್ನೂ ಹೇಳುತ್ತಾರೆ.

ಭಾ ॥ **ಅಗ್ನೀಂದ್ರಾದಿಗತಂ ಪೃಥಕ್ ಸ್ಥಿತಮಪಿ ಸ್ತೌತ್ಯಚ್ಯುತಂ ಭಕ್ತಿತಃ ಸ್ವರ್ಣಸ್ತೂಪ ಇತಿ ಪ್ರಸಿದ್ಧಿಮಗಮದ್ಯಃ ಸಂಸ್ತುವನ್ ಸೂರ್ಯಗಂ। ವಿಷ್ಣುಂ ಸ್ವರ್ಣ ಸಮಾನಚಾರುವಪುಷಂ ಸ್ವರ್ಣಾಭಿಧಂ ಶಾಶ್ವತಂ ತಂ ದೃಷ್ಟ್ವಾ ಪರತೋಽಭವಚ್ಚ ಮಹಿತಃ ಸುಜ್ಞಾನ ಮಪ್ಯಾಪ್ತವಾನ್ ॥**

ಅ ॥ ಯಾವಾತನು ಸೂರ್ಯಾಂತರ್ಗತನಾದ, ಸ್ವರ್ಣ ಹಿರಣ್ಯ ಎಂದು ಹೆಸರುಳ್ಳ ಶ್ರೀ ವಿಷ್ಣುವನ್ನು ಚೆನ್ನಾಗಿ ಸ್ತುತಿಸುವವನಾಗಿ ಹಿರಣ್ಯಸ್ತೂಪನೆಂದು ಪ್ರಸಿದ್ಧಿಯನ್ನು ಹೊಂದಿರುವನೋ, (ಷ್ಟು ಞ ಸ್ತುತೌ ಎನ್ನುವುದರಿಂದ ಡೂಪ ಪ್ರತ್ಯಯವು. ಹಿರಣ್ಯಸ್ಯ ಸ್ತೂಪಃ (ಹಿರಣ್ಯದ ಸ್ತೋತ್ರವು) ಎಂದು ಶ್ರೀ ವಿಷ್ಣುವಿಗೆ ಹಿರಣ್ಯವೆಂಬ ಹೆಸರು ಹೇಗೆಂದರೆ) ಯಾವಾತನು (ಹಿರಣ್ಮಯವಪುಃ ಧೃತ ಶಂಖಚಕ್ರಃ ಎಂಬ ಪ್ರಮಾಣದಿಂದ ಉವರ್ಣಕ್ಕೆ ಸಮಾನವಾದ ಮನೋಹರವಾದ ಶರೀರವುಳ್ಳವನೂ (ರೂಪವಿದ್ದ ಪ್ರಯುಕ್ತ ಅನಿತ್ಯನೋ ಎಂದರೆ) ಶಶ್ವದೇಕ ಪ್ರಕಾರನ್ನೂ, ಆದ ಆ ಶ್ರೀ ವಿಷ್ಣುವನ್ನು ನೋಡಿ ಇತರರಿಂದ ಪೂಜಿಸಲ್ಪಟ್ಟವನೂ ಆಗಿರುವನೋ, ಒಳ್ಳೇ ಜ್ಞಾನವನ್ನು ಹೊಂದಿರುವನೋ, (ಅಂತಹ ಹಿರಣ್ಯಸ್ತೂಪನೆನಿಸಿದ ಅಂಗೀರಸ, ಗೋತ್ರದವನ ಮೇಲಿನ ಋಕ್ಕುಗಳಿಂದ) ಅಗ್ನಿ ಇಂದ್ರ ಮೊದಲಾದ ದೇವತೆಗಳಲ್ಲಿ ಅಂತರ್ಗತನೂ, ಮತ್ತು ಅಗ್ನ್ಯಾದಿಗಳಲ್ಲಿ ಅಂತರ್ಗತನಾಗದೆಯೂ ಪೃಥಕ್ ಇರುವವನೂ, (ಅಗ್ನ್ಯಾದಿಗಳಲ್ಲಿ ಅಂತರ್ಗತನಾದ ಶ್ರೀ ವಿಷ್ಣುವಿಗೆ ಹೇಗೆ ಅಗ್ನಿ ಇಂದ್ರ ಮೊದಲಾದ ನಾಮಗಳು ಇವೆಯೋ, ಹಾಗೆಯೇ ವೈಕುಂಠಾದಿಗಳಲ್ಲಿರತಕ್ಕ ಭಗವದ್ರೂಪಗಳಿಗೂ ಅಗ್ನ್ಯಾದಿ ನಾಮಗಳಿವೆ.) ಇಂತಹ ಅಗ್ನಿ ಇಂದ್ರ ಮೊದಲಾದ ನಾಮಗಳುಳ್ಳ ಶ್ರೀಹರಿಯನ್ನು ಭಕ್ತಿಯಿಂದ ಸ್ತುತಿಸುತ್ತಾರೆ. ಅಗ್ನಿ ಇಂದ್ರ ಮೊದಲಾದ ದೇವತೆಗಳನ್ನು ಅಲ್ಲಿ ಇಲ್ಲಿ ಹೇಳುವೆವು.

ಅವ ॥ ಈ ೩ನೇ ಅನುವಾಕಕ್ಕೆ ಸೂರ್ಯಾಂತರ್ಗತನಾದ ಹಿರಣ್ಯದಂತೆ ವರ್ಣವುಳ್ಳ, ಹಿರಣ್ಯ ಎಂದು ಹೆಸರುಳ್ಳ ಶ್ರೀ ಹರಿಯನ್ನು ಸ್ತುತಿಸುವ ಅಂಗೀರಸ ಗೋತ್ರದವನಾದ ಹಿರಣ್ಯಸ್ತೂಪನೆಂದು ಪ್ರಖ್ಯಾತನಾದ ಋಷಿಯು (ಋಷಗತೌ ಋಷತಿಜಾನಾತೀತಿ ಋಷಿಃ) ಋಷಿಯೆಂದು ತಿಳಿಯಬೇಕು. ಈ ತ್ವಮಗ್ನೇ ಎನ್ನುವುದಕ್ಕೆ ೧೮ ಋಕ್ಕುಗಳು, ೪ ವರ್ಗಗಳು ಅಗ್ನಿ ದೇವತಾಕರಗು, ಆಗ್ನೇಯ ಸೂಕ್ತವು ೩೧ನೇ ಸೂಕ್ತವು. ಅದರಲ್ಲಿ ೮,೧,೧೮ ಋಕ್ಕುಗಳು ತ್ರಿಷ್ಟುಪ್ ಛಂದಸ್ಕಗಳು. ಬಾಕಿ ಇದ್ದವುಗಳು ಜಗತೀ ಛಂದಸ್ಕಗಳು. ಜಗತೀ ಛಂದಸ್ಸಿಗೆ ವಾರುಣೀ ಸಮಸ್ತ ದೇವ ಸ್ತ್ರೀಯರೂ ದೇವತೆಗಳು.

ಋ ॥ **(೩೫೧) ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾ ಮಭವಃ ಶಿವಃ ಸಖಾ ।**

**ತವ ವ್ರತೇ ಕವಯೋ ವಿದ್ಮನಾಪಸೋಽ ಜಾಯಂತ ಮರುತೋ ಭ್ರಾಜದೃಷ್ಟಯಃ ॥** ॥೧॥

ಅ ॥ ಅಗ್ನೇ =ಎಲೋ ಶ್ರೀ ಹರಿಯೇ, ತ್ವಂ =ನೀನು, ಪ್ರಥಮಃ =ಸರ್ವ ದೇವೋತ್ತಮನು, (ಆಗಿರುತ್ತಿ) ಅಂಗಿರಾಃ = (ಅಂಗಾನಿ ಅವಯವಾಃ ಅಸ್ಯ ಸಂತಿ ಎಂಬ ವ್ಯುತ್ಪತ್ತಿಯಿಂದ ಅಂಗಿ = ಶರೀರವು, ಅಲ್ಲಿ ರಸವು ಶ್ರೇಷ್ಠನು ಅಂದರೆ)

ಶರೀರದಲ್ಲಿದ್ದು ಪ್ರವರ್ತಕನಾದ ಸರ್ವದೇವೋತ್ತಮನು. ಋಷಿಃ = (ಋಷ ಗತೌ, ಋಷತಿ ಜಾನಾತೀತಿ ಋಷಿಃ) ಸರ್ವಜ್ಞನೂ ದೇವಃ =ಕ್ರೀಡಾದಿಗುಣವಿಶಿಷ್ಟನು, ಶಿವಃ =ಸುಖಾತ್ಮಕನು, ದೇವಾನಾಂ ಸಖಾ =ದೇವತೆಗಳಿಗೆ ಸಖಿಯೂ, ಅಭವಃ =ಆಗಿರುತ್ತಿ. ಭ್ರಾಜ ದೃಷ್ಟಯಃ = (ಭ್ರಾಜಂತ್ಯಃ = ಪ್ರಕಾಶ ಮಾನಗಳಾದ, ಋಷ್ಟಯಃ = ಆಯುಧವಿಶೇಷಗಳು ಯೇಷಾಂ ಎಂಬವ್ಯುತ್ಪತ್ತಿಯಿಂದ) ಪ್ರಕಾಶಮಾನಗಳಾದ ಆಯುಧವಿಶೇಷಗಳನ್ನು ಧರಿಸಿರುವ ಮರುತಃ =ಹಿಂದಿನ ಮತ್ತು ಈಗ ಇರುವ ವಾಯುಗಳು, ತವ = ನಿನ್ನ, ವ್ರತೇ = ಸಂಬಂಧಿ ವ್ರತಾಚರಣದಿಂದಲೇ ವಿದ್ಮನಾಽಪಸಃ = (ವಿದ್ಮನಾ = ವಿದ್ಯೆಯಿಂದ ಸಹಿತವಾದ ಅಪಃ =ಕರ್ಮವು ಯೇಷಾಂ ಎಂಬ ವ್ಯುತ್ಪತ್ತಿಯಿಂದ, ವಿದ್ಯೆಗಳಿಂದೊಡಗೂಡಿದ ಕರ್ಮಗಳುಳ್ಳವರಾಗಿ) ಕವಯಃ =ಮಹಾವಿಜ್ಞಾವುಳ್ಳವರಾಗಿತ (ವವ್ರತೇ ವಿದ್ಮನಾಪಸಃ ಎನ್ನುವುದರಿಂದ ಹೇಳಲ್ಪಟ್ಟ, ಭಗದ್ವಿಷಯಕವಾದ ಜ್ಞಾನಕರ್ಮಗಳು ಇದ್ದ ಕಾರಣ ಪುನಃ ಜ್ಞಾನಪ್ರಾಪ್ತಿಯು ಹೇಗೆಂದರೆ ಭಗವದ್ವಿಷಯಕವಾಗಿರುವುದರಿಂದ ಅತಿ ಶ್ರೇಷ್ಠವಾಗಿಯೂ ವಿಶೇಷವಾಗಿಯೂ ಇರುವ ಜ್ಞಾನವುಳ್ಳವರು ಎಂದರ್ಥವು.) ಅಜಾಯಂತ =ಆದರು. ||೧||

ಭಾ || ಅಂಗೇ ರಸೋ ಜ್ಞಾನತ ಏವ ಚರ್ಷಿ ಸಖಾ ಪ್ರಿಯತ್ವೇನ ದಿವೌಕಸಾಂ ಹರಿಃ । ತವವ್ರತೇನ್ಯೆವ ಸವಿದ್ಯಕರ್ಮಿಣೋ ಮಹಾವಿಜ್ಞಾನಾ ಮರುತೋ ಬಭೂವಿರೇ ||೧||

ಅ || ಶ್ರೀ ಹರಿಯು ಶರೀರದಲ್ಲಿ ಶ್ರೇಷ್ಠನಾಗಿರುವುದರಿಂದ ಅಂಗಿರಾಃ ಎನಿಸುತ್ತಾನೆ. ವಿಶೇಷ ಜ್ಞಾನವಿದ್ದುದರಿಂದಲೇ ಋಷಿಯೆನಿಸುತ್ತಾನೆ. (ಅಂಗಿರಸ ಋಷಿಯಿಂದ ಐಕ್ಯವಿದ್ದ ಪ್ರಯುಕ್ತ ಶ್ರೀ ಹರಿಯು ಋಷಿಯೆನಿಸಿಕೊಳ್ಳುವುದಲ್ಲ ಎಂಬ ಅಭಿಪ್ರಾಯದಿಂದ ಏವ ಶಬ್ದವು) ದೇವತೆಗಳಿಗೆ ಪ್ರಿಯನಾಗಿರುವುದರಿಂದ ದೇವತೆಗಳಿಗೆ ಸಖನೆಂದೂ ಹೇಳಿಸಲ್ಪಡುತ್ತಾನೆ. ಅತೀವ ವರ್ತಮಾನ ಕಾಲಿಕ ವಾಯುಗಳು ನಿನ್ನ ನಿಯಮಾನುಸಾರವಾಗಿಯೇ ಸದ್ವಿದ್ಯೆ ಕರ್ಮಗಳುಳ್ಳವರೂ ಮಹಾ ವಿಜ್ಞಾನವುಳ್ಳವರೂ ಆಗಿರುತ್ತಾರೆ ||೧||

ಋ || (೩೫೨) ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿ ಭೂಷಸಿ ವ್ರತಂ ।
ವಿಭುರ್ವಿಶ್ವಸ್ಮೈ ಭುವನಾಯ ಮೇಧಿರೋ ದ್ವಿಮಾತಾ ಶಯುಃ ಕತಿಧಾ ಚಿದಾಯವೇ || ||೨||

ಅ || ಅಗ್ನೇ = ಎಲೋ ಶ್ರೀ ಹರಿಯೇಃ ತ್ವಂ =ನೀನು ಪ್ರಥಮಃ = ಸರ್ವೋತ್ತಮನು. ಅಂಗೀರಸ್ತಮಃ = ಅತಿಶಯವಾಗಿ ಅಂಗಗಳಲ್ಲಿ ಶ್ರೇಷ್ಠನು, ಕವಿಃ = ಸರ್ವಜ್ಞನು, ಇಂತಹ ನೀನು, ದೇವಾನಾಂ ವ್ರತಂ = ದೇವತೆಗಳು ಮಾಡತಕ್ಕ ವ್ರತ (ಕರ್ಮ)ವನ್ನು, ಪರಿಭೂಷಷಿ = ಸಫಲವನ್ನಾಗಿ ಮಾಡುತ್ತಿ. ಮತ್ತು ವಿಶ್ವಸ್ಮೈಭುವ ನಾಯ =ಸಮಸ್ತ ಜಗತ್ತಿಗೂ, ವಿಭುಃ =ಸ್ವಾಮಿಯು. ಜಗದ್ವ್ಯಾಪಿಯು. ಮೇಧಿರಃ = (ಭೂಮನಿಂದಾ ಪ್ರಶಂಸಾಸು ನಿತ್ಯಯೋಗೇಽತಿಶಾಯನೇ ! ಸಂಸರ್ಗೇಽಸ್ತಿ ವಿವಕ್ಷಾಯಾಂ ಭವಂತಿ ಮತುಬಾದಯಃ । ಎಂಬ ಪ್ರಮಾಣದಿಂದ ಭೂಮದ್ಯರ್ಥಗಳಲ್ಲಿ ಮತುಪ್ ಮೊದಲಾದ ಪ್ರತ್ಯಯ್ಯಗಳು ಬರುತ್ತವೆ, ಎನ್ನುವುದರಿಂದ ಮಾತುಬರ್ಥದಲ್ಲಿ ಇರನ್ ಪ್ರತ್ಯಯವು) ಅತಿಶಯವಾದ ಪ್ರಜ್ಞೆಯುಳ್ಳವನೆ, ದ್ವಿಮಾತಾ = (ಮಾಙಮಾನೇ) ಜಡಾ ಜಡ ವಸ್ತುಗಳನ್ನು ತಿಳಿದವನು, ಶಯುಃ = ಕ್ಷೀರಾಬ್ಧಿ ಶಾಯಿಯು. (ಅಗ್ನಿಯಲ್ಲಿ ಆದರೆ) ವಾಡವಾಗ್ನಿಗೆ ಸಮುದ್ರವು ಸ್ಥಾನವಾಗಿರುವುದರಿಂದ) ಸಮುದ್ರದಲ್ಲಿರುವವನು, ಇಂತಹ ನೀನು,

ಆಯವೇ = ಪ್ರಜೆಗಳಿಗೆ, ಕತಿಧಾ ಚಿತ್ = ಸ್ವಾಮಿಯು ಗುರುವು, ನಿತ್ಯ ಸಖಿವು ಪಿತನು, ಇದು ಮೊದಲಾದ ಬಹುಪ್ರಕಾರಗಳಿಂದೊಡಗೂಡಿದವನು (ಆಗಿರುತ್ತಿ) ||೨||

ಭಾ || ವ್ಯಾಪೀಚ ವಿಶ್ವಸ್ಯ ಸುಮೇಧಸಾ ಯುತೋ ಜಡಾಜಡೇ ವೇತ್ತಿ ತಥಾಽಬ್ಧಿ ಶಾಯಿ । ಕತಿ ಪ್ರಕಾರೋಽಪಿ ಸಪಿ ಪ್ರಜಾಯೈ ಸ್ವಾಮೀ ಗುರುರ್ನಿತ್ಯಸಖಾ ಪಿತಾ ಚ ||೨||

ಅ || ಶ್ರೀ ಹರಿಯೇ ನೀನು ಸರ್ವ ಜಗತ್ತಿನಲ್ಲಿ ವ್ಯಾಪಿಸಿಕೊಂಡಿರುವವನು ಒಳ್ಳೇ ಪ್ರಜ್ಞೆಯಿಂದ ಕೂಡಿದವನು, ಜಡ ಅಜಡ ವಸ್ತುಗಳನ್ನು ತಿಳಿದವನು, ಹಾಗೆಯೇ ಕ್ಷೀರಾಬ್ಧಿಶಾಯಿಯು, ಅಂತಹ ನೀನು ಪ್ರಜೆಗಳಿಗೆ ಸ್ವಾಮಿಯು, ಗುರುವೂ ನಿತ್ಯ ಸಖನು, ಪಿತನು, ಇದು ಮೊದಲಾದ ಬಹುಪ್ರಕಾರಗಳುಳ್ಳವನೂ ಆಗಿರುತ್ತಿ. ||೨||

ಋ || (೩೫೩) ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।
ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ||೩||

ಅ || ಅಗ್ನೇ =ಎಲೋ ವಿಷ್ಣುವೇ, ತ್ವಂ =ನೀನು, ವಿವಸ್ವತೇ =ವಿವಿಧ ವಸ್ತುಗಳಲ್ಲಿ ಆವಾಸ ಮಾಡುವ, ಮಾತರಿಶ್ವನೇ =ವಾಯುವಿನ ದೆಶೆಯಿಂದ, ಪ್ರಥಮಃ =ಪ್ರಥಮತಃ ಅತಿಶಯವಾಗಿ ಪ್ರಾದುರ್ಭಾವವನ್ನು ಹೊಂದಿರುವಿ. ಹೇಗೆಂದರೆ ಸುಕ್ರತೂಯಾ = (ಶೋಭನಂ ಕ್ರತುಜ್ಞಾನಂ ಅಸ್ಯ) ಶ್ರೀ ಹರಿಗೆ ವಾಯುದೇವರಿಗಿಂತ ಒಳ್ಳೇ ಜ್ಞಾನವಿದ್ದ ಪ್ರಯುಕ್ತ. ಹೋತೃವೂರ್ಯೇ = ಪರಮೇಶ್ವರರ ನಿಮಿತ್ತವಾಗಿ ಇತರರಿಗಿಂತ ಶ್ರೇಷ್ಠರಾದ, ಅಥವಾ ಹೋತೃವವೂರ್ಯ ಯಾಭ್ಯಾಂ ಎಂಬುವುದರಿಂದ ಪರಮಾತ್ಮನೇ ಶ್ರೇಷ್ಠನಾಗಿ ಉಳ್ಳ, ಅಥವಾ ಶ್ರೀ ಹರಿಯು ಪತಿಯಾಗಿರುವುದರಿಂದ ಶ್ರೇಷ್ಠರಾಗಿರುವ, ರೋದಸೀ =ಸ್ವರ್ಗಭೂಮಿಗಳೂ, ಲಕ್ಷ್ಮೀ ಭೂದೇವಿಯರೂ, ಅರೇಜೇತಾಂ (ರಾಜ್‌ರ್‌ದೀಪ್ತೌ) ಶೋಭಿಸಿರುವರೋ ಮತ್ತು ವಸೋ =ಶ್ರೀ ಹರಿಯೇ, ಓ=ಯಾವ ಕಾರಣದಿಂದ ಅಸಘ್ನೋಃ = ಶ್ರೀ ಹರಿಯನ್ನು ಯಾವ ಪ್ರತಿಭಟರೂ ಸಹಿಸುವುದೇ ಇಲ್ಲವೋ ಆದ ಕಾರಣ ವಾಯುದೇವರೂ ಬ್ರಹ್ಮದೇವರೂ ಕೂಡ ಅಸಘ್ನಃ =ಎನಿಸುತ್ತಾರೆ. (ಷಹಮರ್ಷಣೇ ಸಘ್ನಃ, ಆ ಮೇಲೆ ನ ಞ ಸಮಾಸವು.) ಅಂತಹ, ಮಹಃ =ಮಹತ್ತತ್ತ್ವಾಭಿಮಾನಿಗಳಾದ ವಾಯು ಬ್ರಹ್ಮರಿಗಾಗಿ, ತ್ವಂ=ನೀನು, ಭಾರಂ=ಜಗತ್ಸೃಷ್ಟಿ ರಕ್ಷಣ ಪೋಷಣ ಮೊದಲಾದ ಕಾರ್ಯಗಳನ್ನು, ಅಯಜಃ =ಪ್ರಪ್ರತ್ಯೇಕವಾಗಿ ಕೊಟ್ಟಿರುತ್ತಿ. ||೩||

ಭಾ || (1) ತ್ವಂ ವಿಷ್ಣೋ ಪ್ರಥಮೋ ಮಾತರಿಶ್ವನ ಆವಿರ್ಬಭೂವಾಸ್ಯ ಸುಬೋಧವತ್ತ್ವಾತ್ । (2) ವಾಯುರ್ವಿವಸ್ವಾನ್ ವಿವಿಧೇಷು ವಾಸಾತ್ (3) ಅಶೋಭೇತಾಂ ತ್ರೀಶ್ಚ ಭೂಃ ಸರ್ವಹೋತುಃ (4) ವರತ್ವತಃ ತೇ ರದನಾದ್ರೋದಸೀ ತೇ ಸೈಕಾಹಿ ದೀರ್ಣಾ ದ್ವಿವಿಧಾ ಬಭೂವ । (5) ಸಹಂತೇಽಮುಂ ನೈವ ಕೇಚಿದ್ಯ್ಯಸಘ್ನುರ್ವಾಯು ರ್ವಿರಿಂಚೋಽಪಿ ಮಹಾಂಶ್ಚ ತಸ್ಮೈ। ವಿಶ್ವಸ್ಯ ಭಾರಂ ಪ್ರತಿದಿಷ್ಟವಾಂಸ್ತ್ವಂ (6) ವಾಸಾಚ್ಚ ಸರ್ವತ್ರ ವಸುರ್ಭವಾನಸಿ ||೩||

ಅ || (1) ಎಲೋ ವಿಷ್ಣುವೇ ನೀನು ವಾಯುವಿಗಿಂತ ಮೊದಲೇ ಅತಿಶಯವಾಗಿ ಪ್ರಾದುರ್ಭಾವವನ್ನು ಹೊಂದಿರುವಿ.

(ತ್ವಂದೇವ ಶಕ್ತ್ಯಾಂ ಗುಣಕರ್ಮಯೋಸೌ ರೇತ ಸ್ಸ್ವಜಾಯಾಂ ಕವಿರಾದಧೇsಜಃ ಇತ್ಯಾದಿ ಶಿಷ್ಟ ಪ್ರಯೋಗದಂತೆಯೇ ಇಲ್ಲಿಯೂ ಯುಷ್ಮತ್ ಶಬ್ದವಿದ್ದರೂ ಪ್ರಥಮ ಪುರುಷವು ಕಂಡದೆ. ಆದ ಕಾರಣ ತ್ವಂ ಎಂಬ ಪ್ರಯೋಗದಿಂದ ಆವಿರ್ಭೂವಿಥ ಎಂಬ ಮಾಧ್ಯಮ ಪುರುಷನನ್ನು ಪ್ರಯೋಗಿಸುವಲ್ಲಿ ಆವಿರ್ಭೂವವೆಂದು ಪ್ರಥಮ ಪುರುಷ ಪ್ರಯೋಗವು ಯುಕ್ತವು. ಅಂತೂ ಛಾಂದಸವು) (ಏಕೆಂದರೆ) ಈ ಶ್ರೀ ಹರಿಗೆ ವಾಯುವಿಗಿಂತ ಒಳ್ಳೆ ಜ್ಞಾನವಿದ್ದ ಪ್ರಯುಕ್ತ. ಅಥವಾ ಶ್ರೀ ಹರಿಗೆ ವಾಯುವಿಗಿಂತ ಪೂರ್ಣಜ್ಞಾನವು ಪ್ರಾಪ್ತವಾಗಿರುವುದರಿಂದ (2) (ವಾಯುವಿಗೆ ವಿವಸ್ವಾನ್ ಎಂಬ ಹೆಸರು ಹೇಗೆಂದರೆ) ವಾಯುವು ವಿವಿಧ ಪದಾರ್ಥಗಳಲ್ಲಿ ಆವಾಸ ಮಾಡಿಕೊಂಡಿರುವುದರಿಂದ ವಿವಸ್ವಾನ್ ಎನಿಸುತ್ತಾನೆ. (3) ಶ್ರೀ ದೇವಿ ಭೂದೇವಿಯರು ನಿನ್ನಿಂದಲೇ ಶೋಭೆಯನ್ನು ಹೊಂದಿರುವರು. (ಏಜೃ ರೇಜೃ ಭೇಜೃ ಭ್ರಾಜೃ ದೀಪ್ತೌ ಎಂಬ ಧಾತು ವಾಕ್ಯನದಿಂದ ರೇಜೃ ಧಾತುವು ಇಲ್ಲಿ ಶೋಬಾರ್ಥಕವು. ಅಥವಾ ರಾಜೃ ದೀಪ್ತೌ ಎಂಬ ಧಾತು ವ್ಯಾಖ್ಯಾನದಿಂದ ಇದು ರಾಜೃ ಧಾತುವಿನ ರೂಪವು.) (ಶ್ರೀ ಭೂಮಿಯರು ಯಾವ ನಿಮಿತ್ತದಿಂದ ಹೋತ್ರವೂರ್ಯ ಶಬ್ದವಾಚ್ಯರು ಎಂದರೆ) ಸರ್ವ ಹೋತನಾದ ಶ್ರೀ ಪರಮಾತ್ಮನ ನಿಮಿತ್ತ ಇವರಿಗೆ ಸರ್ವೋತ್ಕೃಷ್ಟತ್ವವಿದ್ದ ಆ ಶ್ರೀ ಭೂಮಿಯರು ಹೋತ್ರವೂರ್ಯೇ ಎನಿಸುತ್ತಾರೆ) (ಇದರಿಂದ ಹೋತ್ರಾ = ಶ್ರೀ ವಿಷ್ಣುವಿನ ಪ್ರಸಾದದಿಂದ, ವೂರ್ಯೇ = (ವೃಙ ಸಂಭಕ್ತೌ) ಶ್ರೇಷ್ಠರು, ಎಂದುಕ್ತವಾಯ್ತು) ಅಥವಾ ಸರ್ವ ಹೋತನಾದ ಶ್ರೀ ಹರಿಗೊಬ್ಬನಿಗೇನೇ ಶ್ರೀ ಭೂಮಿಯರಿಗಿಂತ ಶ್ರೇಷ್ಠತ್ವವಿದ್ದ ಪ್ರಯುಕ್ತ (ಆ ಶ್ರೀ ಭೂಮಿಯರು ಹೋತ್ರವೂರ್ಯೇ ಎನಿಸುತ್ತಾರೆ. ಹೋತ್ರೈವ ವೂರ್ಯ ಶ್ರೇಷ್ಠಃ ಯಾಭ್ಯಾಂ ಎಂದು ವಿಗ್ರಹವು) (ಅಥವಾ ನಿಮಿತ್ತ ಸಪ್ತಮಿಯು ಇದು) ಹೋತುಃ ಊರ್ಯಂ ವರತ್ವಂ ಪತಿತ್ವಂ ತಸ್ಮಾತ್ ತಥಾ ಚ ಶ್ರೀ ಭೂಮಿಯರು ಪರಮೇಶ್ವರನೆಂಬ ಪತಿಯಿಂದ ಕೂಡಿರುವ ಪ್ರಯುಕ್ತವೇ ಶೋಭಿಸಿದರು) ಅಪ್ರಯೋಜಕ ಪತಿಯಾಗಿದ್ದರೆ ಸರ್ವಥಾ ಶೋಭೆಯು ಬರುತ್ತಿರಲಿಲ್ಲ) (4) (ಆ ಶ್ರೀ ಭೂಮಿಯರು ರೋದಸೀ ಎಂದು ಹೇಗೆ ಅನಿಸಿಕೊಳ್ಳುತ್ತಾರೆ ಎಂದರೆ) ಆ ಶ್ರೀ ಭೂಮಿಯರು (ರದನಾತ್ ರದ ವಿಲೇಖನೇ) ಶೀಳಿಸುವುದರಿಂದ ರೋದಸೀ ಎನಿಸುತ್ತಾರೆ. (ಅದನ್ನೇ ವಿವರಿಸುತ್ತಾರೆ.) ಆ ಒಂದು ಮೂಲ ಪ್ರಕೃತಿಯು ಶ್ರೀಃ ಭೂಃ ಎಂದು ವಿಭಕ್ತವಾಗಿ ಎರಡು ಪ್ರಕಾರವಾಯ್ತು. (5) ಯಾವ ಕಾರಣದಿಂದ ಈ ಶ್ರೀ ಹರಿಯನ್ನು ಯಾವ ಪ್ರತಿಭಟರೂ ಸಹಿಸುವುದೇ ಇಲ್ಲವೋ ಆದ ಕಾರಣ ವಾಯುದೇವರೂ ಬ್ರಹ್ಮ ದೇವರೂ ಕೂಡ ಅಸಘ್ನುಃ ಎನಿಸುತ್ತಾರೆ. (ಸಹ್ಯತೇ ಇತಿ ಸಘ್ನುಃ, ನ ಸಘ್ನುಃ ಅಸಘ್ನುಃ, (ಷಹ ಮರ್ಷಣೇ, ನಞ ಸಮಾಸವು) ಈ ವಾಯು ಬ್ರಹ್ಮರು ಶ್ರೇಷ್ಠರು. ಅಂತಹ ವಾಯು ಬ್ರಹ್ಮರಿಗೆ ಸಮಸ್ತ ಜಗದ್ರೂಪ ಭಾರವನ್ನು ಪ್ರಪ್ರತ್ಯೇಕವಾಗಿ ನೀನು ಕೊಟ್ಟಿರುತ್ತಿ. (ಅಂದರೆ ಸಮಸ್ತ ಜಗತ್ತಿನ ಸೃಷ್ಟಿ ರಕ್ಷಣ ಪೋಷಣ ಮೊದಲಾದ ಕಾರ್ಯಗಳನ್ನು ಕೊಟ್ಟಿರುತ್ತಿ.) (6) (ವಸುಃ ಎಂದು ಹೇಗೆ ಅನ್ನಿಸಿಕೊಳ್ಳುವುದೆಂದರೆ) (ಸರ್ವತ್ರ ವಸತಿ) ನೀನು ಸಮಸ್ತ ಜಗತ್ತಿನಲ್ಲಿ ಆವಾಸ ಮಾಡುವುದರಿಂದಲೂ (ವ್ಯಾಪ್ತನಾಗಿದ್ದುದರಿಂದಲೂ) ಅಥವಾ ಸರ್ವಮಸ್ಮಿನ್ ವಸತಿ=ಸಮಸ್ತ ಜಗತ್ತು ಶ್ರೀ ಹರಿಯ ಅಧೀನವಾಗಿಯೇ ಆವಾಸ ಮಾಡುವುದರಿಂದ ವಸುಃ ಎನಿಸುತ್ತಿ. ಭವಾನ್ ಎನ್ನುವುದು ವಸೋಃ ಎನ್ನುವಸಂಬುದ್ಧಿ ವ್ಯಾಖ್ಯಾನವು ॥೩॥

೩ು (೩೫೪) ತ್ವಮಗ್ನೇ ಮನವೇ ದ್ಯಾಮ ವಾಶಯಃ ಪುರೂರವಸೇ ಸುಕೃತೇ ಸುಕೃತ್ತರಃ ।

ಶ್ವಾತ್ರೇಣ ಯತ್ಪಿತ್ರೋರ್ಮುಚ್ಯಸೇ ಪರ್ಯಾತ್ವಾ ಪೂರ್ವಮನಯನ್ನಾ ಪರಂ ಪುನಃ ॥೪॥

ಅ ॥ ಅಗ್ನೇ =ಎಲೋ ಶ್ರೀ ಹರಿಯೇ ಸುಕೃತ್ತರಃ = (ಶೋಭನಾನಿ ಕರೋತೀತಿ ಸುಕೃತ್. ಅತಿಶಯೇನ ಸುಕೃತ್ ಸುಕೃತ್ತರಃ = ) ಅತಿಶಯವಾಗಿ ಸತ್ಕರ್ಮಗಳನ್ನೆ ಮಾಡಿಕೊಂಡಿರುವ, ತ್ವಂ=ನೀನು, ಸುಕೃತೇ ಸತ್ಕರ್ಮಗಳನ್ನೇ ಮಾಡುವ ಪುರೂರವಸೇ =(ರು ಶಬ್ದೇ) ಪುರುಃ ರವಃಅಸ್ಯ ಎಂಬ ವ್ಯುತ್ಪತ್ತಿಯಿಂದ) ಒಳ್ಳೇ ಶಬ್ದವುಳ್ಳ, (ವೇದ ಪ್ರತಿಪಾದ್ಯನಾದ ಮನವೇ =ಮನು ಅವಭೋಧನೇ) ವಿಶೇಷ ಜ್ಞಾನವುಳ್ಳ ವಾಯುವಿಗೋಸ್ಕರ, ಧ್ಯಾಂ=ಸ್ವರ್ಗಾದಿಗಳ ಸ್ವಾಮಿತ್ವವನ್ನು ಅವಾಶಯಃ =ಕೊಟ್ಟಿರುತ್ತಿ. ಅಥವಾ ದ್ಯಾಂ = ಜ್ಞಾನರೂಪವಾದ ಸ್ವರ್ಗವನ್ನು ಕೊಟ್ಟಿರುತ್ತಿ. ಅಥವಾ ದ್ಯುದೇವತೆಯಾದ ಭಾರತಿಯನ್ನು ಪ್ರಿಯಳಾದ ಭಾರ್ಯೆಯನ್ನಾಗಿ ಕೊಟ್ಟಿರುತ್ತಿ. (ಯದ್ಯಪಿ ವಾಶ್ಯ ಶಬ್ದೇ. ಅದರ ನಿಜಂತ ರೂಪವು) ಅವಾಶಯಃ ಜನರಿಂದ ಶಬ್ದ ಮಾಡಿಸಿದಿ ಎಂದರ್ಥವಾಗುತ್ತದೆ. ಆದಾಗ್ಯೂ ದ್ಯೌಃಮನು ಶಬ್ದಿಶವಾಯು ಸಂಬಂಧಿನೀ, ದ್ಯೌಃ ಅಂದರೆ ಮನು ಎನಿಸಿದವಾಯುವಿನ ಹೆಂಡತಿಯು ಎಂದು ಸಮಸ್ತ ಜನರೂ ಹೇಗೆ ಹೇಳಿಯಾರೋ, ಹಾಗೆ ಮಾಡಿರುತ್ತಿ ಎಂದರ್ಥವು. ಕೂಡುವುದರಿಂದ ಪ್ರಾದಾಃ = ಕೊಟ್ಟಿರುತ್ತಿ ಎಂದು ಫಲಿತಾರ್ಥವು) ಅಥವಾ ಇತರ ಪ್ರಸಿದ್ಧವಾದ ಸ್ವಾಯಂ ಭುವಾದಿ ಮನುವಿಗೋಸ್ಕರ ಸ್ವರ್ಗವನ್ನು ಹೇಗೆ ಕೊಟ್ಟಿರುತ್ತಿಯೋ ಹಾಗೆಯೇ ಪ್ರಸಿದ್ಧನಾದ ಬುಧ ಪುತ್ರನಾದ ಪುರೂರವ ರಾಜನಿಗೆ ಸ್ವರ್ಗವನ್ನು ಕೊಟ್ಟಿರುತ್ತಿ. ಯತ್ =ಯಾವ ಕಾರಣದಿಂದ ಶ್ವಾತ್ರೇಣ = (ಶ್ವಸ ಪ್ರಾಣನೇ, ಶ್ವಸನಾತ್ ಜೇಷ್ಟಕತ್ವಾತ್ ಶ್ವಾ ಇಃಇುವಾಯುಃ) (ಶ್ವಾನಂ ಶ್ರಾಯತೇ ಇತಿ ಶ್ವಾತ್ರಃ) ವಾಯುವನ್ನು ರಕ್ಷಿಸುವ ಪ್ರಯುಕ್ತ ಪಿತ್ರೋಃ =ಜಗತ್ತಿಗೆ ಮಾತಾ ಪಿತೃಗಳಾದ, ಪ್ರಕೃತಿಯಿಂದಲೂ ಚತುರ್ಮುಖದಿಂದಲೂ, ಪರಿ ಮುಚ್ಯತೇ =ನಿತ್ಯ ಮುಕ್ತನಾಗಿರುತ್ತಿ. (ಮುಖ್ಯಪ್ರಾಣನನ್ನು ರಕ್ಷಿಸುವವನಿಗೆ ಪ್ರಕೃತ್ಯಾದಿ ಬಂಧವು ಕೂಡಲಾರದಷ್ಟೆ) ಆ=ಆ ಕಾರಣದಿಂದಲೇಷ ತ್ವಾ=ನಿನ್ನನ್ನು, ಪೂರ್ವಂ =ಪೂರ್ವಿಕರಾದ ಸಜ್ಜನರು, ಆ=ಚೆನ್ನಾಗಿ, ಮಾಹಾತ್ಮ, ಜ್ಞಾನಪೂರ್ವಕ ಸುದೃಢ ಸ್ನೇಹದಿಂದ, ಅನಯನ್ = ಉಪದೇಶ ಮಾಡಿ ಶಿಷ್ಯರ ಸಮೀಪಕ್ಕೆ ಒಯ್ದರು. ಮತ್ತು ಅಪರಂ ಚ = ಇತರರೂ ಕೂಡ, (ಪೂರ್ವಿಕರು ಉಪದೇಶಿಸುದುದನ್ನೇ) ಆ ಅನಿಯನ್ =ತಮ್ಮ ಶಿಷ್ಯ ತಮ್ಮ ಕುರಿತು ಚೆನ್ನಾಗಿ ಉಪದೇಶಿಸಿದರು. ॥೪॥

ಭಾ ॥ **(1) ವಿಶಿಷ್ಟಬೋಧಾನ್ಮನವೇ ವಾಯವೇ ತ್ವಂ ಪ್ರಾದಾದ್ದಿವಂ (2) ಜ್ಞಾನರೂಪಾಂ (3) ಪ್ರಿಯಾಂಚ ॥ (4) ಯಥಾ ತದೀಯೇತಿ ತು ವಾಶನಂ ಸ್ಯಾಲ್ಲೋಕಸ್ಯ ಸರ್ವಸ್ಯ ತಥೈವ ದೇವ ॥ (5) ಪುರೂರವಾ ವಾಯುರೇವೋರುಶಬ್ದಾದ (6) ನ್ಯಸ್ಮೈ ವಾ ಸುಕೃತೇ ಸುಕೃತ್ತರಃ । (7) ಶ್ವಾವೈ ವಾಯುಃ ಶ್ವಸನಾತ್ರಾಣತೋऽಸ್ಯ ನಿತ್ಯಂ ಮುಕ್ತಃ ಪ್ರಕೃತೇಃ ಪೂರುಷಾಚ್ಚ । (8) ತನ್ಯೆವ ತ್ವಾಮಾನಯನ್ ಪೂರ್ವ ಸಂತೋ ನೀತಂ ಪುನಶ್ಚಾಪ್ಯಪರೇ ಸುಭಕ್ತ್ಯಾ ॥೪॥**

ಅ ॥ (1) (ವಾಯುದೇವರಿಗೆ ಮನು ಎಂಬ ಹೆಸರು ಹೇಗೆಂದರೆ) ವಾಯುದೇವರಿಗೆ ವಿಶೇಷ ಜ್ಞಾನವಿದ್ದ ಪ್ರಯುಕ್ತ ಅವರು ಮನು ಎನಿಸುತ್ತಾರೆ. (ಮನು ಎನ್ನುವುದು ಮನು ಅವಬೋಧನೇ ಎನ್ನುವುದರ ರೂಪವು. ಜ್ಞಾನವು ಸಮಸ್ತ ಪ್ರಾಣಿಗಳಿಗೂ ಇದ್ದುದೇ. ಆದಾಗ್ಯೂ `ಮುಖ್ಯಾಮುಖ್ಯಯೋಃ ಮುಖ್ಯೇ ಕಾರ್ಯ ಸಂಪ್ರತ್ಯಯಃ' ಎನ್ನುವುದರಿಂದ ವಿಶೇಷ ಜ್ಞಾನವನ್ನು ಇಟ್ಟುಕೊಳ್ಳಬೇಕು) ಅಂತಹ ವಾಯುವಿಗೋಸ್ಕರ ನೀನು ಸ್ವರ್ಗಾಧಿಪತ್ಯವನ್ನು ಕೊಟ್ಟಿರುತ್ತಿ. (2) (ಸ್ವರ್ಗಾದ್ಯಾಧಿಪತ್ಯವು ಅನಿತ್ಯವಾದ ಕಾರಣ ಅರ್ಥಾಂತರವನ್ನು ಹೇಳುತ್ತಾರೆ.) ಅಥವಾ ಜ್ಞಾನರೂಪವಾದ ಪ್ರಕಾರವನ್ನು ಕೊಟ್ಟಿರುತ್ತಿ. (3) (ವಾಯು ದೇವರಿಗೆ ಸಂಸಾರದಲ್ಲಿಯೂ ಮೋಕ್ಷದಲ್ಲಿಯೂ ಪತ್ನಿಯು ನಿಯತಳೇ ಎಂಬ ಅಭಿಪ್ರಾಯದಿಂದ ವ್ಯಾಖ್ಯಾನ ಮಾಡುತ್ತಾರೆ.) ಸ್ವರ್ಗಲೋಕಕ್ಕೆ ಅಭಿಮಾನಿನಿಯಾದ ಭಾರತೀ ದೇವಿಯನ್ನು ಭಾರ್ಯಳನ್ನಾಗಿ ಕೊಟ್ಟಿರುತ್ತಿ. (4) (ಅವಾಶಯಃ ಎನ್ನುವುದಕ್ಕೆ ಪ್ರಾದಾಃ =ಕೊಟ್ಟಿರುತ್ತಿ ಎಂಬ ಅರ್ಥವು ಹೇಗೆ ಆಗುವುದೆಂದರೆ) (ಮನು ಸಂಬಂಧಿಯಾದ

ಸ್ವರ್ಗವನ್ನು ಜನರಿಂದ ಶಬ್ದ ಮಾಡಿಸಿದಿ. ಅಂದರೆ) ಎಲೋ ಶ್ರೀ ಹರಿಯೇ ಸ್ವರ್ಗವು ಮನು ಎನಿಸಿದ ವಾಯುವಿನ ಸಂಬಂಧಿಯು ಎಂದು ಸಮಸ್ತ ಜನರಿಗೆ ಶಬ್ದೋಚ್ಚಾರಣಾದಿಗಳು ಹೇಗೆ ಆಗುವವೋ, ಹಾಗೆಯೇ ಮಾಡಿರುತ್ತಿ.) (ಸಮಸ್ತವೂ ಭಗವತ್ಸಂಬಂಧಿಯೇ ಆಗಿರುವುದರಿಂದ ವಾಯುವಿಗೆ ಸ್ವರ್ಗಾಧಿಪತ್ಯವನ್ನು ಕೊಡದಿದ್ದರೆ ವಾಯು ಸಂಬಂಧಿತ್ವವೇ ಕೂಡದಿರುವ ಪ್ರಯುಕ್ತ ಸ್ವರ್ಗವು ವಾಯು ಸಂಬಂಧಿಯು ಎಂಬ ವ್ಯವಹಾರವೇ ಕೂಡದೇ ಹೋಗುವುದು) (5) (ಪುರೂರವಸೇ ಎನ್ನುವುದನ್ನು ಮನು ಎನಿಸಿದ ವಾಯುವಿಗೆ ವಿಶೇಷಣವಾಗಿ ವ್ಯಾಖ್ಯಾನ ಮಾಡುತ್ತಾರೆ.) ಉತ್ಪನ್ನವಾದ ವೇದಾದಿ ಶಬ್ದಗಳಿಂದ ವಾಚ್ಯನಾದುದರಿಂದ ವಾಯುವೇ ಪುರೂರವಾಃ = (ಪುರುಃ ರವಃಯಸ್ಯ ಎಂಬ ವ್ಯುತ್ಪತ್ತಿಯಿಂದ) ಎನಿಸುತ್ತಾನೆ. (6) (ಮನವೇ ಪುರೂರವಸೇ ಎಂಬುದನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಇತರರಾದ ಪ್ರಸಿದ್ಧರಾದ ಸ್ವಾಯಂಭುವ ಮೊದಲಾದ ಮನುವಿಗೋಸ್ಕರ ಸ್ವರ್ಗಾಧಿಪತ್ಯವನ್ನು ಹೇಗೆ ? ಕೊಟ್ಟಿರುತ್ತಿಯೋ, ಹಾಗೆಯೇ ಪ್ರಸಿದ್ಧನಾದ ಬುಧು ಪುತ್ರನಾದ ಪುರೂರವ ರಾಜನಿಗೂ ಒಳ್ಳೇ ಸತ್ಕರ್ಮಗಳನ್ನು ಮಾಡತಕ್ಕ ನೀನು ಕೊಟ್ಟಿರುತ್ತಿ. (7) ಶ್ವಾ = ವಾಯುವು ಅರ್ಥಾತ್ ತೌವ ಉದ್ಗೀಥಃ ಎಂಬ ಬಾಷ್ಯದಲ್ಲಿ ವಾಯುವಿಗೆ ಸ್ವರೂಪವು ಪ್ರಸಿದ್ಧವಾಗಿದೆ) (ಶ್ವಸ ಪ್ರಾಣನೇ) ಶ್ವಸನಾತ್ =ಚೇಷ್ಟಕನಾಗಿರುವುದರಿಂದಲೂ ತ್ವಾ=ವಾಯುವು. (ಎಂದು ಆಯೌಗಿಕಾರ್ಥವು) ಶ್ವ ಶಬ್ದಾರ್ಥಭೂತನಾದ ವಾಯುವನ್ನು ರಕ್ಷಿಸುವುದರಿಂದ (ಶ್ವಾನಂ ತ್ರಾಯತೇ ಇತಿ ಶ್ವಾತ್ರಃ, ಎಂಬ ವ್ಯುತ್ಪತ್ತಿಯಿಂದ) ಪ್ರಕೃತಿಯಿಂದಲೂ ಚತುರ್ಮುಖನಿಂದಲೂ, ನಿತ್ಯದಲ್ಲಿಯೂ ಮುಕ್ತನಾಗಿರುತ್ತಿ. (ವಾಯುವನ್ನೂ, ರಕ್ಷಿಸುವವನಿಗೆ ಪ್ರಕೃತ್ಯಾದಿ ಬಂಧವು ಕೂಡಲಾರದಷ್ಟೆ) (8) ಆ ಕಾರಣದಿಂದಲೇ ಪ್ರಾಚೀನ ಸಜ್ಜನರು. ನಿನ್ನನ್ನು ಒಳ್ಳೇ ಭಕ್ತಿಯಿಂದ ಶಿಷ್ಯಾದಿಗಳಲ್ಲಿ ಉಪದೇಶಿಸಿದರು. ಮುಂಚಿನವರು ಉಪದೇಶಿಸಿರುವುದನ್ನೇ ಈಗಿನವರೂ ಕೂಡ ತಮ್ಮ ಶಿಷ್ಯಾದಿಗಳಿಗೆ ಉಪದೇಶಿಸುತ್ತಿರುವರು. ||೪||

ಋ || (೩.೫೫) ತ್ವಮಗ್ನೆ ವೃಷಭಃ ಪುಷ್ಟಿವರ್ಧನ ಉದ್ಯತಸ್ರುಚೇ ಭವಸಿ ಶ್ರವಾಯ್ಯಃ |

ಯ ಅಹುತಿಂ ಪರಿವೇದಾ ವಷಟ್ಕೃತಿಮೇಕಾಯು ರಗ್ರೇ ವಿಶ ಅವಿವಾಸಸಿ ||೫||೩.೨||

ಅ || ಅಗ್ನೇ = ಎಲೋ ಶ್ರೀ ಹರಿಯೇ, ಯಃ =ಯಾವ ಯಜಮಾನನು, ಆಹುತಿ = (ಆಹೂಯತೇ ಇತಿ ಆಹುತಿಃ ತಂ) ಕರೆಯಲ್ಪಡುವ, ವಷಟ್ಕೃತಿಂ = ವರ್ತಂತೇ ಷಟ್ ಸಮಗ್ರೈಶ್ವರ್ಯಾದಯಃ ಗುಣಾಃಯಸ್ಮಿನ್ ಯಾರಲ್ಲಿ ಪೂರ್ಣ ಐಶ್ವರ್ಯಾದಿ ಗುಣಗಳು ಇವೆಯೋ ಆತನು ವಷಟ್ ಎನಿಸುತ್ತಾನೆ) (ವಷಡಿತಿಕ್ರಿಯತೇ ಅಕ್ರಿಯತೇ) ವಷಟ್ ಎಂದು ಕರೆಯಲ್ಪಡುವ, ನಿನ್ನನ್ನು, ಪರಿವೇದ =ಚೆನ್ನಾಗಿ ತಿಳಿದಿರುವನೋ, ಮತ್ತು ನೀನು, ಅಗ್ರೇ=ಅನಾದಿ ಕಾಲವನ್ನಾರಂಭಿಸಿಯೇ ವಿಶಃ =ಪ್ರಜೆಗಳನ್ನು, ಆ ವಾಸಸಿ (ವಸ ಆಚ್ಛಾರ್ಯಾಂ. ತಥಾಪಿ ಇಲ್ಲಿ ವಸ ಪ್ರವೇಶೇ) ಸುತ್ತಲೂ ವಿಶೇಷವಾಗಿ ಆವಾಸ ಮಾಡುತ್ತಿಯೋ, ಅಂದರೆ ಜನರ ಸಮುದಾಯದಲ್ಲಿ ಪ್ರವೇಶಿಸಿಕೊಂಡಿರುತ್ತಿಯೋ,) ತ್ವಂ=ಅಂತಹ ನೀನು, ವೃಷಭಃ =ಭಕ್ತರಿಗೆ ಅಭೀಷ್ಟವನ್ನು ಸೇಚಿಸುವವನು, ಪುಷ್ಟಿವರ್ಧನಃ =ಭಕ್ತರಿಗೆ ಪುಷ್ಟಿಯನ್ನು ಅಭಿವೃದ್ಧಿಕರಿಸುವವನು, ಏಕಾಯಃ = ಮುಖ್ಯವಾದ ನಿತ್ಯವಾದ ಆಯುಷ್ಯವುಳ್ಳವನು, ಉದ್ಯತ ಸ್ರುಚೇ = ಹೋಮಕ್ಕೋಸ್ಕರ ಸನ್ನದ್ಧವಾದ ಸ್ರುಕ್ ಉಳ್ಳ ಯಜಮಾನನಿಂದ ಶ್ರವಾಯ್ಯಃ ನಿತ್ಯದಲ್ಲಿಯೂ ಶ್ರೋತವ್ಯನೂ ಆಗಿರುತ್ತಿ ||೫||

ಭಾ || (1) ಶ್ರೋತವ್ಯಸ್ತ್ವಂ ಯಜಮಾನೇನ ನಿತ್ಯಂ ನಿತ್ಯಾಯುರಗ್ರೇ ಜನತಾ ಪ್ರವಿಷ್ಟ: | (2) ಐಶ್ವರ್ಯಾದ್ಯಾ: ಷಡ್ ಗುಣಾ ನಿತ್ಯವೃತ್ತಾ ವಷಟ್‌ಕಾರ ಸ್ವಾರ್ಥ ಇತ್ಯಾಹ ವೇದಃ | ||೫||೩.೨||

ಅ || ಎಲೋ ಶ್ರೀ ಹರಿಯೇ ನೀನು ನಿತ್ಯದಲ್ಲಿಯೂ ಯಜಮಾನನಿಂದ ಶ್ರವಣಾರ್ಹನು ನಿತ್ಯವಾದ ಆಯುಷ್ಯವುಳ್ಳವನು. ಅನಾದಿಯಿಂದಲೇ ಜನರ ಗುಂಪಿನಲ್ಲಿ ಪ್ರವೇಶಿಸಿಕೊಂಡಿರುತ್ತಿ. (ಯದ್ಯಪಿ ವಸ ಆಚಾರ್ಯ ಎಂದು ಧಾತು ಪಾಠವು. ಆದಾಗ್ಯೂ ಶ್ರೀ ವಿಷ್ಣುವು ಪ್ರಜೆಗಳನ್ನು ಪೂಜಿಸುತ್ತಾನೆನ್ನುವುದು ಕೂಡದಿರುವುದರಿಂದ ಇಲ್ಲಿ ಪ್ರವೇಶಾರ್ಥಕವೆಂದು ತಿಳಿಯಬೇಕು) (2) (ಶ್ರೀ ಹರಿಯು ವಷಟ್ ಕೃತಿಯೆಂದು ಹೇಗೆ ಅನ್ನಿಸುವನೆಂದರೆ `ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರೀಯಃ | ಜ್ಞಾನ ವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀ ರಣಾ || ಎಂದು ಹೇಳಿದ ಐಶ್ವರ್ಯ ಮೊದಲಾದ ಆರು ಗುಣಗಳು ಯಾರಲ್ಲಿ ನಿತ್ಯದಲ್ಲಿಯೂ ಪೂರ್ಣಗಳಾಗಿ ಇರುತ್ತವೋ (ವರ್ತಂತೇ ಷಟ್ ಯಸ್ಮಿನ್ ವಷಟ್ ಎಂದು ವಿಗ್ರಹವು) ವಷಡಿತಿ ಆಕ್ರಿಯತೇ ಇತಿ ವರ್ಷಟ್ ಕೃತಿಃ | ವಷಟ್ಕೃತಿರೇವ ವಷಟ್ಕಾರಃ, ವಷಟ್ ಎಂದು ಕರೆಯಲ್ಪಡುವವನು ಶ್ರೀ ವಿಷ್ಣುವು ವಷಟ್‌ಕಾರ ಶಬ್ದಕ್ಕೆ ಷಡ್ಗುಣ ಪರಿಪೂರ್ಣನಾದ ಶ್ರೀ ವಿಷ್ಣುವು ಎಂದರ್ಥವು ಎಂದು ವೇದವು ಹೇಳುತ್ತದೆ ಎಂದು ಹೇಳಿದ ಅರ್ಥದಲ್ಲಿ ವೇದ ವಾಕ್ಯಾಂತರದ ಸಮ್ಮತಿಯನ್ನು ಹೇಳಿದಂತೆ ಆಯ್ತು. ||೫||೩.೨||

ಋ || (೩೫೬) ತ್ವಮಗ್ನೇ ವೃಜಿನ ವರ್ತನಿಂ ನರಂ ಸಕ್ಮನ್ಪಿಪರ್ಷಿ ವಿದಥೇ ವಿಚರ್ಷಣೇ |
ಯಃ ತೂರಸಾತಾ ಪರಿತಕ್ಮ್ಯೇ ಧನೇ ದಭ್ರೇಭಿಶ್ಚಿತ್ಸ ಮೃತಾ ಹಂಸಿ ಭೂಯಸಃ ||೬||

ವಿ || ವಿಚರ್ಷಣೇ = ನಾನಾ ವಿಧರಾದ ದೇವತೆಗಳೇ ಮೊದಲಾದ ಪ್ರಜೆಗಳಿಗೆ ಅಧಿಪತಿಯಾದ, ಅಗ್ನೇ =ಎಲೋ ಶ್ರೀ ಹರಿಯೇ, ಯಃತ್ವಂ =ಯಾವ ನೀನು, ಶೂರಸಾತಾ = (ಷೈಕ್ಷಯೇ, ಧಾತೂನಾಂ ಅನೇಕಾರ್ಥತ್ವಾತ್ ಪ್ರಕೃತದಲ್ಲಿ ಲಾಭಾರ್ಥಕವು) ಶೂರರಿಗೆ ಲಾಭರೂಪವಾದ ಯುದ್ಧವು, ಪರಿತಕ್ಮ್ಯೇ = (ಪರಿಪೂರ್ವಾತ್ ತಕ ಗತೌ ಮ್ಯ ಪ್ರತ್ಯಯವು) ಹೊಂದಲ್ಪಡುತ್ತಿರಲು, ಧನೇ = ದ್ರವ್ಯ ನಿಮಿತ್ತವಾಗಿ, (ಅಂದರೆ ಹೊಂದಲ್ಪಡತಕ್ಕ ಸಮೃತಾಃ = ಚೆನ್ನಾಗಿ ಶರಣು ಹೊಂದುತ್ತಾರೋ (ಹಾಗಾದರೆ) ದಭ್ರೇಭಿಶ್ಚಿತ್ = (ಶಕ್ತಿಯಿಂದಲೂ ಸಂಖ್ಯೆಯಿಂದಲೂ) ಅಲ್ಪರಾದವರಿಂದಲೂ ಕೂಡ ಭೂಯಸಃ =ಶಕ್ತಿಯಿಂದಲೂ ಸಂಖ್ಯೆಯಿಂದಲೂ ಹೆಚ್ಚಾದ ಪ್ರತಿಭಟರನ್ನು ಕೂಡ, ಹಂಸಿ=ಪ್ರಯತ್ನವಿಲ್ಲದೇನೇ ಅನಾಯಾಸದಿಂದಲೇ, ಹಂಸಿ ಸಂಹರಿಸುತ್ತಿಯೋ, ಅಂತಹ ಪ್ರಯತ್ನವುಳ್ಳ, ಅಥವಾ ವೃಜಿನಂ =ಪಾಪವು ವರ್ತನಿಃ =ಮಾರ್ಗವು ನರಕಾದಿಗಳಿಗೆ ಸಾಧನವು, ಯಸ್ಯ ಎಂಬ ವ್ಯುತ್ಪತ್ತಿಯಿಂದ ನರಕಾದಿಗಳಿಗೆ ಸಾಧನವಾದ ಪಾಪಾಚಾರವುಳ್ಳವನಾದಾಗ್ಯೂ, ನರಂ=ಪುರುಷನನ್ನು, ಸಕ್ಮನ್= (ದ ಕಾರಕ್ಕೆ ಕ ಕಾರವು) ತಮ್ಮ ಮಂದಿರದಲ್ಲಿ ಅಂದರೆ ಅವನ ಮಂದಿರದಲ್ಲಿ ಅಥವಾ ನಿನ್ನದ್ದಾದ ಸ್ವರ್ಗದಲ್ಲಿ ವೈಕುಂಠಾದಿಗಳಲ್ಲಿ, ವಿದಥೇ = (ವಿದಥ ಇತಿ ಯಜ್ಞನಾಮ) ಸದ್ವಿದ್ಯೆಯೆಂಬ ಯಜ್ಞವು (ಪಾಪಾಚಾರವುಳ್ಳವನಿಂದಲೂ ವಿಷ್ಣುವಿನ ಪ್ರೀತಿಗಾಗಿ ಮಾಡಲ್ಪಡುತ್ತಿರಲು) (ಅಥವಾ ವಿದಧಾತುವಿಗೆ ಭಾವಾರ್ಥದಲ್ಲಿ ಅಥಕ್ ಪ್ರತ್ಯಯವು) ಸದ್ವಿದ್ಯೆಯೇ ಪಾಪಿಷ್ಠನಿಂದಲೂ ಅಭ್ಯಾಸ ಮಾಡಲ್ಪಡುತ್ತಿರಲು, ವಿಪರ್ಷಿ = (ಪೃಪಾಲನ ಪೂರಣಯೋಃ) ರಕ್ಷಿಸುತ್ತಿ ಮತ್ತು ಪೂರ್ಣೀಕರಿಸುತ್ತಿ. ||೬||

ಭಾ || (1) ಸದ್ವಿದ್ಯಾಖ್ಯೇ ವಿದಥೇ ಸಂಪ್ರಚಾತೇ ಪಾಪಾಚಾರಂ ಪುರುಷಂ ವಾ ಪಿಪರ್ಷಿ । ಸಕ್ಮನ್ ಗೃಹೇಸ್ವೇ ವಿವಿಧ ಪ್ರಜೇಶೋ ವಿಚರ್ಷಣಿಃ (2) ಶೂರಸಾತೌ ಚ ಯುದ್ಧೇ । ಸಾರ್ತಿರ್ಲಾಭೇ ಯತ್ಪರಿತಕ್ಮ್ಯೇಽಧಿಗಮ್ಯೆ ದಭ್ರಾ ಅಪಿ ತ್ವಾಂ ಶರಣಂ ಯದಿ ಸ್ಮ । ಋತಾ ಗತಾಸ್ತತ್ರ ಹಿ ಭೂಯಸೋಽಪಿ ತೈರ್ಜಂಸಿ ಶಕ್ತ್ಯಾಯ ಸಂಖ್ಯಯಾ ವಾ ಪ್ರಯತ್ನಾತ್ ||೬||

ಅ || (1) ಎಲೋ ಶ್ರೀ ಹರಿಯೇ ವಿಚಷಣಿಃ = ನಾನಾ ವಿಧರಾದ ದೇವಾದಿ ಪ್ರಜೆಗಳಿಗೆ ಸ್ವಾಮಿಯಾದ ನೀನು ಪಾಪಿಷ್ಠನಾದ ಪುರುಷನನ್ನು ಕೂಡ ಸದ್ವಿದ್ಯೆಯೆಂಬ ಯಜ್ಞವು ಪಾಪಿಷ್ಠ ಪುರುಷನಿಂದಲೂ ಶ್ರೀ ವಿಷ್ಣುವಿನ ಪ್ರೀತಿಗಾಗಿ ಮಾಡಲ್ಪಡುತ್ತಿರಲು ಆತನ ಮನೆಯಲ್ಲಿ ಅಥವಾ ನಿನ್ನದ್ದಾದ ವೈಕುಂಠಾದಿಗಳಲ್ಲಿ ರಕ್ಷಿಸುತ್ತಿ. ಪೂರ್ಣೀಕರಿಸುತ್ತಿ. (2) ಯಾವ ಕಾರಣದಿಂದ ಸಾತಿಶಬ್ದವು ಲಾಭಾರ್ಥದಲ್ಲಿದೆಯೋ, ಆದ ಕಾರಣ ಶೂರರ ಸಾತಿಯು ಯುದ್ಧವು. (ಯುದ್ಧವೇ ಶೂರರಿಗೆ ಪರಮ ಲಾಭವು) ಧನವು ಪರಿತಕ್ಮ್ಯೇ = ಹೊಂದಲ್ಪಡುತ್ತಿರಲು, ಅಂದರೆ ಹೊಂದಲ್ಪಡತಕ್ಕ ಧನನಿಮಿತ್ತವಾದ ಸಂಗ್ರಾಮದಲ್ಲಿ (ದ್ರವ್ಯವನ್ನು ಹೊಂದಬೇಕೆಂಬ ಉದ್ದೇಶದಿಂದ ಮಾಡತಕ್ಕ ಯುದ್ಧದಲ್ಲಿ) ಮತ್ತು ಶ್ರೀ ವಿಷ್ಣುವಿನ ಪ್ರೀತಿಗಾಗಿ ಶ್ರೀ ವಿಷ್ಣುವಿನ ದ್ವೇಷಿಗಳು, ಅವರ ಅನುಬಂಧಿಗಳು ಇವರ ನಿಗ್ರಹ ರೂಪವಾದ ಯುದ್ಧದಲ್ಲಿ) ಅತ್ಯಲ್ಪ ಯೋದ್ಧೃಗಳೂ ಕೂಡ ನಿನ್ನನ್ನು ಶರಣು ಹೊಂದಿದರೆ ಶಕ್ತಿಯಿಂದಲೂ ಸಂಖ್ಯೆಯಿಂದಲೂ ಅಲ್ಪರಾದ ಜನರಿಂದಲೂ ಶಕ್ತಿಯಿಂದಲೂ ಸಂಖ್ಯೆಯಿಂದಲೂ ಬಹಳ ಪ್ರತಿಭಟರನ್ನು ಅನಾಯಾಸದಿಂದಲೇ ಸಂಹರಿಸುತ್ತಿ. ಇದು ಸುಪ್ರಸಿದ್ಧವು. ||೬||

ಋ || (೩೫೭) ತ್ವಂ ತಮಗ್ನೇ ಅಮೃತತ್ವ ಉತ್ತಮೇ ಮರ್ತಂ ದಧಾಸಿ ಶ್ರವಸೇ ದಿವೇದಿವೇ ।

ಯಸ್ತಾತೃಷಾಣ ಉಭಯಾಯ ಜನ್ಮನೇ ಮಯಃ ಕೃಣೋಷಿ ಪ್ರಯ ಆ ಚ ಸೂರಯೇ ||೭||

ಅ || ಅಗ್ನೇ=ಎಲೋ ಶ್ರೀ ಹರಿಯೇ, ಯಸ್ತ್ವಂ = ಯಾವ ನೀನು, ತಾತೃಷಾಣಃ = (ಞಿತೃಷಾ ಪಿಪಾಸಾಯಾಂ) ಪ್ರೀತ್ಯಾಧಿಕ್ಯದಿಂದ ತಷ್ಣಾತಿಶಯವುಳ್ಳವನಾಗಿ, ಉಭಯಾಯ ಜನ್ಮನೇ =ಎರಡು ಜನ್ಮಗಳುಳ್ಳ, ಮನುಷ್ಯರಿಗೂ ದೇವತೆಗಳಿಗೂ (ದೈತ್ಯರಿಗೆ ಅಲ್ಲ) ಮಯಃ =ಸ್ವರ್ಗರೂಪ ಸುಖವನ್ನು ಕೃಣೋಷಿ = ಮಾಡುತ್ತಿಯೋ, ಯಸ್ತ್ವಂ=ಯಾವ ನೀನು, ತೃಷ್ಣಾತಿಶಯವುಳ್ಳವನಾಗಿ, ಅ =ಚೆನ್ನಾಗಿ, ಸೂರಯೇ =ಜ್ಞಾನಿಗೋಸ್ಕರ, ಪ್ರಯಃ =ಮೋಕ್ಷಾಖ್ಯ ಪ್ರಿಯವನ್ನು ಕೃಣೋಷಿ = ಮಾಡುತ್ತಿಯೋ, ಸಃ =ಅಂತಹ ನೀನು, ತಂ =ಅಸ್ತೋತ್ರ ಮಾಡತಕ್ಕ, ಮರ್ತಂ =ಮನುಷ್ಯನನ್ನು ಉತ್ತಮೇ =ಮುಖ್ಯವಾದ, ಅಮೃತತ್ವೇ =ಮೋಕ್ಷದಲ್ಲಿ, ದಿವೇದಿವೇ = ಪ್ರತಿನಿತ್ಯವೂ ಶ್ರವಸೇ =ಭಕ್ತನು ಮಾಡತಕ್ಕ ಸ್ತುತಿಯನ್ನು ಕೇಳುವುದಕ್ಕಾಗಿ (ಅಂದರೆ ಭಕ್ತನು ಮಾಡತಕ್ಕ ಸ್ತುತಿಯನ್ನು ಕೇಳಲಿಚ್ಛಿಸಿದವನಾಗಿ) ದಧಾಸಿ =ಮುಕ್ತನನ್ನಾಗಿ ಮಾಡುತ್ತಿ. (ಅಂದರೆ ಮುಕ್ತನು ಸದಾ ನಿನ್ನ ಸಮೀಪದಲ್ಲಿಯೇ ಇದ್ದವನಾಗಿ ಸ್ತುತಿಸುತ್ತಿರುತ್ತಾನೆ.) ||೭||

ಭಾ || (1) ದಿನೇ ದಿನೇ ತತ್ಸ್ತುತಿಂ ಶ್ರೋತುಕಾಮಸ್ತ್ವ ಸ್ತೋತಾರಮಮೃತತ್ವೇ ದಧಾಸಿ || (2) ಪ್ರೀತ್ಯಾಧಿಕ್ಯಾತ್ತೃಷಾಣೋ ಮನುಷ್ಯದೇವೋಭಯೇಷಾಂ ಸುಖಮಾತನೋಷಿ || (3) ಆಸಮಂತಾಜ್ಞಾನಿನೇ ತತ್ರ ನಿತ್ಯಂ ಪ್ರಿಯಂ ಮೋಕ್ಷಾಖ್ಯಂ (4) ತತೃಷಾಣೋ ವಿಶೇಷಾತ್ ||೭||

ಅ || (1) ಎಲೋ ಶ್ರೀ ಹರಿಯೇ ಪ್ರತಿನಿತ್ಯವೂ ಭಕ್ತನು ಮಾಡತಕ್ಕ ಸ್ತೋತ್ರವನ್ನು ಕೇಳಲಿಚ್ಛಿಸಿದವನಾಗಿ ನಿನ್ನನ್ನು ಸ್ತುತಿಸುವವನನ್ನು ಮೋಕ್ಷದಲ್ಲಿ ಮಾಡುತ್ತಿ. (ಮೋಕ್ಷದಲ್ಲಿ ಸದಾ ಸಮೀಪದಲ್ಲಿದ್ದವನಾಗಿಯೇ ಸ್ತುತಿಸುತ್ತಿರುತ್ತಿ) (2) ಪ್ರೀತ್ಯತಿಶಯದಿಂದ ತೃಷ್ಣಾಧಿಕ್ಯವುಳ್ಳವನಾಗಿ ಮನುಷ್ಯರಿಗೆ ದೇವತೆಗಳಿಗೆ ಮಾತ್ರ (ದೈತ್ಯರಿಗೆ ಅಲ್ಲ) ಸ್ವರ್ಗಸುಖವನ್ನು ಮಾಡುತ್ತಿ. (3) ಆ ಮಾನುಷಾದಿಗಳಲ್ಲಿಯೂ ಜ್ಞಾನಿಗಾದರೂ, ಚೆನ್ನಾಗಿ ನಿತ್ಯದಲ್ಲಿಯೂ ಪ್ರಿಯವಾದ ಮೋಕ್ಷಾಖ್ಯ ಸುಖವನ್ನು ಮಾಡುತ್ತಿ. (4) (ಆ ಎನ್ನುವುದನ್ನು ಪ್ರಯಃ ಎನ್ನುವುದರಿಂದ ಸಂಬಂಧಿಸಿಕೊಳ್ಳಬೇಕು ಎಂದುಕ್ತವಾಯ್ತು. ಅಥವಾ ತತೃಷಾಣಃ ಎನ್ನುವುದನ್ನು ಅನುವೃತ್ತಿಮಾಡಿ ಕೊಂಡು ಅದರಿಂದ ಆ ಎನ್ನುವುದಕ್ಕೆ ಸಂಬಂಧವೆಂದು ಮಾಡಿಕೊಳ್ಳಬೇಕೆನ್ನುತ್ತಾರೆ.) (ಜ್ಞಾನೀ ತ್ವಾತ್ಮೈವ ಮೇ ಮತಂ ಎಂದು ಹೇಳಿದುದರಿಂದ ಜ್ಞಾನಿಗೆ ಫಲವನ್ನು ಕೊಡುವುದಕ್ಕಾಗಿ ಅತ್ಯಂತ ಆತುರವಿದ್ದ ಪ್ರಯುಕ್ತ ಸಂಸಾರವಸ್ಥೆಯಲ್ಲಿ ಮಯಃ =ಸ್ವರ್ಗ ಸುಖವನ್ನು ಆ ಮೇಲೆ ಪ್ರಯಃ =ಮೋಕ್ಷ ಸುಖವನ್ನು ಕೂಡ ಕೊಡುತ್ತಿ. ||೭||

ಋ || (೩೫೮) ತ್ವಂ ನೋ ಅಗ್ನೇ ಸನಯೇ ಧನಾನಾಂ ಯಶಸಂ ಕಾರುಂಕೃಣುಹಿ ಸ್ತವಾನಃ |
ಋಧ್ಯಾಮ ಕಮಾಪಸಾ ನವೇನ ದೇವೈರ್ಧ್ಯಾ ವಾ ಪೃಥಿವೀ ಪ್ರಾವತಂನಃ ||೮||

ಅ || ಅಗ್ನೇ =ಶ್ರೀ ಹರಿಯೇ, ಸ್ತವಾನಃ = ನಮ್ಮಿಂದ ಸ್ತುತಿಸಲ್ಪಡತಕ್ಕ ನೀನು, ನಃ = ನಮ್ಮನ್ನು ಧನಾನಾಂ = ಪ್ರಜ್ಞಾಖ್ಯ ಧನಗಳನ್ನ, ಅಥವಾ ಪ್ರಸಿದ್ಧ ಧನಗಳನ್ನು ಸನಯೇ =ಹೊಂದುವುದಕ್ಕಾಗಿ, (ಸಮರ್ಥರನ್ನಾಗಿ) ಕೃಣುಹಿ = ಮಾಡು ಮತ್ತು ನಃ =ನಮ್ಮನ್ನು ಯಶಸಂ =ಯಶಸ್ಸುಳ್ಳವರನ್ನಾಗಿಯೂ, ಕಾರುಂ = ಉಪಾಸನಾದಿಗಳನ್ನು ಮಾಡುವವನನ್ನಾಗಿಯೂ ಜ್ಞಾನದಾನ ಮಾಡುವವರನ್ನಾಗಿಯೂ, ಕೃಣುಹಿ =ಮಾಡು (ಬ್ರಹ್ಮಾ ಪರೋಕ್ಷ ಪರ್ಯಂತ ಉಪಾಸನಾದಿಗಳನ್ನು ಮಾಡಬೇಕಾಗಿರುವುದರಿಂದ ಕಾರು ಪದದಿಂದ ಲಕ್ಷಣಯಾ ಜ್ಞಾನದಾತನನ್ನು (ಜ್ಞಾನೋಪದೇಶಕನನ್ನು ಇಟ್ಟುಕೊಳ್ಳಬೇಕು) (ನಾವು) ನವೇನ = ನೂತನವಾದ, ಅಪಸಾ =ನಿನ್ನ ಸೇವಾರೂಪವಾದ ಕರ್ಮದಿಂದ, ಕರ್ಮ =ಪ್ರಾಚೀನ ಕರ್ಮವನ್ನು ಋಧ್ಯಾಮ =ಸಮೃದ್ಧವನ್ನಾಗಿ ಸಫಲವನ್ನಾಗಿ ಮಾಡುವೆವು. (ಹಿಂದಿನ ಕರ್ಮಗಳಿಗೆ ಸಮೃದ್ಧಿಯನ್ನು ಸಾಫಲ್ಯವನ್ನು ಹೊಂದುವೆವು. ಪ್ರಾಕ್ತನ ಪುಣ್ಯಗಳಿಗೆ ನಿನ್ನ ಸೇವೆಯೇ ಫಲವಾಗಲಿ.) ಧ್ಯಾವಾಪೃಥಿವೀ =ಶ್ರೀ ಭೂದೇವಿಯರೇ ದೇವೈಃ =ದೇವತೆಗಳಿಂದ ಕೂಡಿದ ನೀವು, ನಃ =ನಮ್ಮನ್ನು, ಪ್ರಾವತಂ = (ಆವ ರಕ್ಷಣೇ) ಹೇಗೆ ನಾವು ಅಗ್ನಿಯೆನಿಸಿದ ಶ್ರೀ ಹರಿಯ ಸೇವಕರು ಆಗುವೆವೋ ಹಾಗೆ ಚೆನ್ನಾಗಿ ರಕ್ಷಿಸಿರಿ. ||೮||

ಭಾ || (1) ಪ್ರಜ್ಞಾಧನಾನಾಂ ಲಬ್ಧಯೇ ನಃ ಕೃಧಿ ತ್ವಂ ಯಶಸ್ವಿನಂ ಕಾರಿಣಂ ಜ್ಞಾನದಂಚ (2) ಕರ್ತಾಪರೋಕ್ಷ್ಯಂ ಯಾವದುಪಾಸನಾದೀನ್ ಕಾರುಸ್ತೇನ ಪ್ರೋಚ್ಯತೇ ತತ್ವದಶಿರ್ಶೀ | (3) ಸಂಸ್ತೂಯಮಾನಃ ಕರ್ಮಣಾ ನೂತನೇನ ಸಮೃದ್ಧಿಂಚ ಪ್ರಾಪ್ನುಮಃ ಪ್ರಾಕ್ತನಸ್ಯ || ||೮||

ಅ || (1) ಶ್ರೀ ಹರಿಯೇ ನೀನು ನಮ್ಮನ್ನು ಪ್ರಜ್ಞಾರೂಪ ಧನಗಳನ್ನು ಹೊಂದುವುದಕ್ಕಾಗಿ ಸಮರ್ಥರನ್ನಾಗಿ ಮಾಡು. ನಮ್ಮನ್ನು ಕೀರ್ತಿಯುಳ್ಳವರನ್ನಾಗಿಯೂ ಸತ್ಕರ್ಮಕಾರಿಗಳನ್ನಾಗಿಯೂ ಜ್ಞಾನದಾನ ಮಾಡುವವರನ್ನಾಗಿಯೂ ಮಾಡು. (2)

(ಹಾಗಾದರೆ ಕೃಞ್ ಧಾತುವಿಗೆ ಉಣು ಪ್ರತ್ಯಯ ಮಾಡಿದರೆ ಕಾರುಃ ಎಂದಾಗುತ್ತದೆ. ಕಾರುಂ =ಕಾರಿಣಂ ಎಂದಾಗುವುದು. ಜ್ಞಾನದಂ ಎಂದು ಹೇಗೆ ಲಭಿಸುವುದು ಎಂದರೆ) ಪರಬ್ರಹ್ಮನ ಅಪರೋಕ್ಷ ಜ್ಞಾನವಾಗುವ ಪರ್ಯಂತ ಉಪಾಸನಾದಿಗಳನ್ನು ಯಾವ ಕಾರಣದಿಂದ ಮಾಡುತ್ತಾನೋ ಆ ಕಾರಣದಿಂದ ತತ್ವದರ್ಶಿಯೂ ಕಾರುಃ ಎಂದು ಹೇಳಿಸಲ್ಪಡುತ್ತಾನೆ. (ಹಾಗಾದರೆ ಬ್ರಹ್ಮಾಪರೋಕ್ಷಪರ್ಯಂತ ಉಪಾಸನಾದಿಗಳನ್ನು ಮಾಡುವವನೇ ಕಾರುಃ ಎನಿಸುತ್ತಾನೆ. ತತ್ವದರ್ಶಿಯಲ್ಲ ಎಂದರೆ ಉಣಾದಿಗಳು ಸಂಜ್ಞೆಯಲ್ಲಿ ವಿಹಿತಗಳಾಗುತ್ತವೆ. ಆದ ಕಾರಣ ತತ್ವಜ್ಞಾನಿಯಲ್ಲಿಯೂ ವಿದ್ವಾಂಸರೂ ಕಾರು ಶಬ್ದವನ್ನು ಪ್ರಯೋಗ ಮಾಡುವುದರಿಂದ ವಿದ್ವದ್ರೂಢಿಯಿದೆ. ಮತ್ತು ಸರ್ವ ಸಾಧಾರಣವಾದ ಕರ್ತೃತ್ವರೂಪವಾದ ಅರ್ಥವನ್ನು ಬಿಟ್ಟು ಕಾರು ಶಬ್ದಕ್ಕೆ ಜ್ಞಾನವುಂಟಾಗುವುದಕ್ಕಾಗಿ ಉಪಾಸನಾದಿಕರಣ ರೂಪವಾದ ಉತ್ಕರ್ಷಾರ್ಥದಲ್ಲಿ ಪ್ರವೃತ್ತಿಯು ತಿಳಿದು ಬರುವುದರಿಂದ ತತ್ವದರ್ಶೀ ಎಂದು ತಾತ್ಪರ್ಯಾರ್ಥವು. ಜ್ಞಾನಿಯಲ್ಲಿ ವಿದ್ವದ್ರೂಢಿಯಿದ್ದ ಪ್ರಯುಕ್ತವೇ ವೃತ್ತಿಕಾರರು. ಕರೋತೀತಿ ಕಾರುಃ = ವಿಶ್ವಕರ್ಮನು. ಅಥವಾ ಇಂದ್ರನು ಎಂದು ಹೇಳಿರುವರು. ತಥಾಚ ಪುನರುಕ್ತಿಯು ಬರುವುದರಿಂದ ಲಕ್ಷಣಯಾ ಜ್ಞಾನಿ ಕಾರ್ಯವಾದ ಜ್ಞಾನದಾನವನ್ನು ಇಟ್ಟುಕೊಳ್ಳಬೇಕು.) (ಧನಾನಾಂ ಎನ್ನುವುದಕ್ಕೆ ಹಿರಣ್ಯಾದಿ ರೂಪಧನ ಎಂದು ಅರ್ಥ ಇಟ್ಟುಕೊಂಡರೆ ಆಗ ಕಾರುಂ ಎನ್ನುವುದಕ್ಕೆ ತತ್ವದರ್ಶಿಯನ್ನು ಎಂದು ಅರ್ಥ ಮಾಡಿದರೂ ಪುನರುಕ್ತಿ ದೋಷವಿಲ್ಲ) (3) ನಾವು ನೂತನವಾದ ಕರ್ಮದಿಂದ ಪ್ರಾಚೀನ ಕರ್ಮವನ್ನು ಸಫಲವನ್ನಾಗಿ ಮಾಡುತ್ತೇವೆ. ಹಿಂದಿನ ಕರ್ಮಕ್ಕೆ ಸಾಫಲ್ಯವನ್ನು ಹೊಂದುವೆವು. ಹೀಗೆ ನಮ್ಮಿಂದ ಸ್ತುತಿಸಲ್ಪಡತಕ್ಕ ನೀನು ನಮ್ಮನ್ನು ರಕ್ಷಿಸು. ||೮||

ಋ || (೩೫೯) ತ್ವಂ ನೋ ಅಗ್ನೇ ಪಿತ್ರೋರುಪಸ್ಥ ಆ ದೇವೋ ದೇವೇಷ್ವ ನವದ್ಯ ಜಾಗೃವಿಃ |

ತನೂಕೃದ್ಬೋಧಿ ಪ್ರಮತಿಶ್ಚ ಕಾರವೇ ತ್ವಂ ಕಲ್ಯಾಣ ವಸು ವಿಶ್ವಮೋಪಿಷೇ ||೯||

ಅ || ಅಗ್ನೇ =ಶ್ರೀ ಹರಿಯೇ, ತ್ವಂ =ನೀನು, ನಃ =ಸಮಸ್ತ ಪ್ರಾಣಿಗಳಾದ, ನಮಗೆ, ಪಿತ್ರೋಃ =ಮಾತಾ ಪಿತೃಗಳಾದ ಪ್ರಕೃತಿಯ ಮತ್ತು ವಿರಿಂಚನೆಂಬ ಪುರುಷನ, ಉಪಸ್ಥೇ= (ಉಪತಿಷ್ಠಂತೇ ಸ್ತುವಂತಿ ಅತ್ರ) ಸಮೀಪದಲ್ಲಿರುತ್ತಿ. (ಅಂದರೆ -ಸದಾ ಇವರಿಬ್ಬರಿಗೂ ನಿಯಾಮಕನಾಗಿರುತ್ತಿ) ಅನವದ್ಯ=ನಿರ್ದೋಷನೇ, ದೇವಃ =ಕ್ರೀಡಾದಿ ಗುಣ ವಿಶಿಷ್ಟನಾದ, ತ್ವಂ =ನೀನು, ದೇವೇಷು ಅಜಾಗೃವಿಃ =ನಿತ್ಯದಲ್ಲಿಯೂ ನೇತೃತ್ವ ರೂಪ ಗುಣವಿದ್ದುದರಿಂದ ದೇವತೆಗಳನ್ನು ನಿತ್ಯದಲ್ಲಿಯೂ ಚೆನ್ನಾಗಿ ತಿಳಿದವನಾಗಿರುತ್ತಿ. ತನೂಕೃತ್ = ಸಮಸ್ತ ಶರೀರಗಳನ್ನು ಮಾಡುವವನು, ಪ್ರಮತಿಶ್ಚ = ಪ್ರಕೃಷ್ಟವಾದ ಮತಿಯಿದ್ದುದರಿಂದ ಪ್ರಾಜ್ಞವರ್ಯನೂ, ಆಗಿರುತ್ತಿ. (ಯಾವ ಕಾರಣದಿಂದ) ಕಲ್ಯಾಣ=ಮಂಗಲಕರನೇ, ತ್ವಂ =ನೀನು, ಕಾರವೇ =ಜ್ಞಾನಿಯಾದವನಿಗೋಸ್ಕರ, ವಿಶ್ವ = ಸಮಸ್ತವಾದ ವಸು =ಮೋಕ್ಷಾದಿಗಳನ್ನು ಆ ಊಪಿಷೇ =ಹೊಂದಿಸಿ ಕೊಡುತ್ತಿಯೋ, (ಆದ ಕಾರಣ ಇಂತಹ ನೀನು), ನಃ = ನಮ್ಮನ್ನು, ಬೋಧಿ =ತಿಳಿಸಿಕೊಡು. (ಜ್ಞಾನಿಗಳನ್ನಾಗಿ ಮಾಡು) ||೯||

ಭಾ || (1) ತ್ವಂ ನಃ ಪಿತ್ರೋಃ ಪ್ರಕೃತೇಃ ಪೂರುಷಸ್ಯ ಸಮೀಪಸ್ಥಃ ತನ್ನಿಯಂತಾ ಸದೈವ | (2) ದೇವೇಷು ತ್ವಂ ಜಾಗೃವಿರ್ನಿತ್ಯವೇತ್ತಾ ತನೂಕೃನ್ನೋ ಬೋಧಯ ಪ್ರಾಜ್ಞವರ್ಯ | (3) ವಿಶ್ವಂ ವಸು ಪ್ರಾಪಯಸೇ ಚ ಕಾರವೇ ||೯||

ಅ ॥ ಶ್ರೀ ಹರಿಯೇ ನೀನು ನಮಗೆಲ್ಲರಿಗೂ ಮಾತಾಪಿತೃಗಳಾದ ಪ್ರಕೃತಿಯ ಮತ್ತು ಚತುರ್ಮುಖನ, ಸಮೀಪದಲ್ಲಿದ್ದವನಾಗಿ ಯಾವಾಗಲೂ ಅವರಿಬ್ಬರಿಗೂ ನಿಯಾಮಕನಾಗಿರುತ್ತಿ. (2) ದೇವತೆಗಳಿಗೆ ನಿತ್ಯದಲ್ಲಿಯೂ ಪ್ರೇರಕನಾಗಿರುವುದರಿಂದ ನಿತ್ಯದಲ್ಲಿಯೂ ತಿಳಿದವನಾಗಿರುತ್ತಿ. ಸಮಸ್ತ ಶರೀರಗಳನ್ನು ಮಾಡುವವನು. ಪ್ರಾಜ್ಞವರ್ಯನೂ ಆಗಿರುತ್ತಿ. ಇಂತಹ ನೀನು ನಮ್ಮನ್ನು ಜ್ಞಾನಿಗಳನ್ನಾಗಿ ಮಾಡು. (3) ಜ್ಞಾನಿಗಳಿಗೆ ಸಮಸ್ತ ಮೋಕ್ಷಾದಿಗಳನ್ನು ಹೊಂದಿಸಿ ಕೊಡುತ್ತಿಯೋ, ಆದ ಕಾರಣ ಜ್ಞಾನಿಗಳನ್ನಾಗಿ ಮಾಡು. ||೯||

**ಋ ॥ (೨೬೦) ತಮಗ್ನೇ ಪ್ರಮತಿಸ್ತ್ವಂ ಪಿತಾಸಿ ನಸ್ತ್ವಂ ವಯಸ್ಕೃತ್ತವ ಜಾಮಯೋ ವಯಂ ।**

**ಸಂ ತ್ವಾ ರಾಯಃ ಶತಿನಃ ಸಂ ಸಹಸ್ರಿಣಃ ಸುವೀರಂ ಯಂತಿ ವ್ರತಪಾಮದಾಭ್ಯ ||೧೦||೩೩||**

ಅ ॥ ಅಗ್ನೇ = ಶ್ರೀ ಹರಿಯೇ, ತ್ವಂ =ನೀನು, ಪ್ರಮತಿಃ = ಪ್ರಕೃಷ್ಟ ಜ್ಞಾನವುಳ್ಳವನು (ಆಗಿರುತ್ತಿ) ತ್ವಂ= ನೀನು, ನಃ =ನಮಗೆ, ಪಿತಾ ಅಸಿ =ಶರೀರವನ್ನು ಮಾಡತಕ್ಕವನಾದುದರಿಂದ ತಂದೆಯು ಆಗಿರುತ್ತಿ. ನೀನು, ವಯಸ್ಕೃತ್ = (ಕಾಲಕೃತ ಶರೀರಾವಸ್ಥೆಯು ವಯಃ ಎನಿಸುತ್ತದೆ. ಆದರಿಂದ ಆಯುಸ್ಸನ್ನು ಇಟ್ಟುಕೊಳ್ಳಬೇಕು) ಆಯುಷ್ಯವನ್ನು ಮಾಡುವವನು. (ನೀನು ನಮ್ಮ ತಂದೆಯು ಎಂದು ಮಾತ್ರವಲ್ಲ ಮತ್ತೆ) ವಯಂ =ನಾವು, ತವ =ನಿನಗೆ, ಜಾಮಯಃ =ಭ್ರಾತೃಗಳೂ ಕೂಡ ಆಗಿರುತ್ತೇವೆ. (ಅಗ್ನಿಯು ಅಂಗಿರಸ ಋಷಿಯ ಜ್ಯೇಷ್ಠಪುತ್ರನು. ಆದ ಕಾರಣ ಹಿರಣ್ಯಸ್ತೂಪರಿಗೆ ಭ್ರಾತನು. ಪಿತೃಸಮೋ ಜ್ಯೇಷ್ಠಃ ಎಂಬ ಪ್ರಮಾಣದಿಂದ ಜ್ಯೇಷ್ಠನಾದ ಕಾರಣ ಪಿತನೆನ್ನುವುದೂ ಕೂಡುತ್ತದೆ. ಶ್ರೀ ಹರಿಯಾದರೂ ಒಂದೇ ಗರ್ಭದಲ್ಲಿ ಹಿರಣ್ಯಸ್ತೂಪ ಕ್ರಮವುಳ್ಳ, ವ್ರತಪಾಂ =ಕರ್ಮಗಳನ್ನು ರಕ್ಷಿಸುವ, ತ್ವಾ =ನಿನ್ನನ್ನು, (ಹೊಂದಿ) ಶತಿನಃ =ಶತ ಸಂಖ್ಯೆಯುಳ್ಳ ಜನರೂ ರಾಯಃ =ದ್ರವ್ಯಗಳನ್ನು ಸಂ ಯತಿ =ಹೊಂದುತ್ತಾರೆ. ಸಹಸ್ರಿಣಃ = (೧೦೦ ಮಂದಿ ಮಾತ್ರ ಹೊಂದುವುದಲ್ಲ. ಮತ್ತೆ) ಸಹಸ್ರ ಸಂಖ್ಯೆಯುಳ್ಳ ಪ್ರಜೆಗಳೂ ದ್ರವ್ಯಗಳನ್ನು ಹೊಂದುತ್ತಾರೆ. (ನಾವು ನಿನ್ನ ಸಂಬಂಧಿಕರು. ನೀನು ಧನಿಕನು, ಆದ ಕಾರಣ ನಮ್ಮನ್ನು ಧನಿಕರನ್ನಾಗಿ ಮಾಡು) ||೧೦||

**ಭಾ ॥ (1) ಆಯುಷ್ಕರೋ ಭ್ರಾತರಸ್ತೇ ವಯಂ ಚ । (2) ದೇಹೇತ್ವೇಕಸ್ಮಿತ್ ಗರ್ಭವ ದ್ವಾಸತಶ್ಚ ಭ್ರಾತಾಽಸ್ಯ ಜೀವಃ ಪರಮಸ್ಯ ನಿತ್ಯಂ ||೧೦||**

ಅ ॥ (1) ನೀನು ಆಯುಷ್ಯವನ್ನು ಮಾಡುವವನು ನಾವು ನಿನ್ನ ಭ್ರಾತೃಗಳು. (2) ಪರಮೇಶ್ವರನಿಗೆ ಜೀವನು ಭ್ರಾತನು ಹೇಗೆ ಆಗುವುದೆಂದರೆ) ಒಂದು ಗರ್ಭದಲ್ಲಿರತಕ್ಕ ಎರಡು ಪ್ರಾಣಿಗಳಂತೆ ಒಂದೇ ದೇಹದಲ್ಲಿ ಪರಮಾತ್ಮ ಹಿರಣ್ಯ ಸ್ತೂಪರು ಇಬ್ಬರೂ ಆವಾಸ ಮಾಡುವುದರಿಂದ ಜೀವನು ಸರ್ವೋತ್ತಮನಾದ ಶ್ರೀ ವಿಷ್ಣುವಿಗಾದರೂ ನಿತ್ಯದಲ್ಲಿಯೂ ಭ್ರಾತನೆನಿಸುತ್ತಾನೆ. ಒಂದು ದೇಹದಲ್ಲಿ ಆವಾಸ ಮಾಡುವುದರಿಂದಲೇ (ಒಬ್ಬ ಪಿತನಿಂದಲೇ ಹುಟ್ಟಿದ ಪ್ರಯುಕ್ತ ಎಂದಲ್ಲ) (೧೦೦ ಅಥವಾ ಸಾವಿರ ಮಂದಿ ನಾವೇ ಮೊದಲಾದ ಪ್ರಜೆಗಳು ಸಾಧನಗಳನ್ನು ಹೊಂದುವುದಕ್ಕಾಗಿ ನಿನ್ನನ್ನು ಹೊಂದುತ್ತಾರೆ. ಆದ ಕಾರಣ ನಾವು ನಿನ್ನವರು ನೀನು ಧನಿಕನು. ನಮಗೆ ಧನಗಳನ್ನು ಕೊಡು. ||೧೦||

ಋ ॥ (೩೬೧) ತ್ವಾಮಗ್ನೇ ಪ್ರಥಮಮಾಯುಮಾಯವೇ ದೇವಾ ಅಕೃಣ್ವನ್ನ ಹುಷಸ್ಯ ವಿಶ್ಪತಿಂ ।

ಇಳಾಮಕೃಣ್ವನ್ಮನುಷಸ್ಯ ಶಾಸನೀಂ ಪಿತುರ್ಯತ್ಪುತ್ರೋ ಮಮಕಸ್ಯ ಜಾಯತೇ ॥೧೧॥

ಅ ॥ ಅಗ್ನೇ = ಎಲೋ ಶ್ರೀ ಹರಿಯೇ, ದೇವಾಃ = ಭೂತ ಇಂದ್ರಿಯಾದಿಗಳಿಗೆ ಅಭಿಮಾನಿಗಳಾದ ದೇವತೆಗಳೂ ಪ್ರಥಮಂ ಆಯುಂ = (ಇಣ್ ಗತೌ ಸರ್ವಜ್ಞನಾದುದರಿಂದ) ಮುಖ್ಯ ವೃತ್ತಿಯಿಂದ ಮುಖ್ಯವಾಗಿ ಅಯು ಶಬ್ದ ವಾಚ್ಯನಾದ, ತ್ವಾಂ ನಿನ್ನನ್ನು, ಆಯವೇ ಪರೂರವ ರಾಜನಿಂದ ಊರ್ವಶಿಯಲ್ಲಿ ಹುಟ್ಟಿದ ಆಯು ನಾಮಕ ರಾಜನಿಗೆ ವಿಶ್ಪತಿಂ = ಪ್ರೇರಕನನ್ನಾಗಿ ಅಕೃಣ್ವನ್ = ಆ ಯುರಾಜನ ದೇಹ ಸೃಷ್ಟಿಯಿಂದ ಮಾಡಿದವರಂತೆ ಆದರು. ಮತ್ತು ನಹುಷಸ್ಯ = ನಹುಷ ರಾಜನಿಗೆ, ತ್ವಾಂ = ನಿನ್ನನ್ನು ವಿಶ್ಪತಿಂ =ಪ್ರೇರಕನನ್ನಾಗಿ, ಅಕೃಣ್ವನ್ =ನಹುಷನ ದೇಹದ ನಿರ್ಮಾಣದಿಂದ, ಮಾಡಿದವರಂತೆ ಆದರು. ಮತ್ತು ಯತ್ =ಯಾವ ಇಳಾದೇವಿಯು (ವಾಸುದೇವನು ಮಮಕಸ್ಯ=ನನ್ನ ಅಪತ್ಯವು ಎಂದು ಅಭಿಮಾನ ಮಾಡತಕ್ಕ ಪಿತುಃ =ಮನುವಿನ ಪುತ್ರ, ಜಾಯತೇ =ಪುತ್ರನಾಗಿ ಹುಟ್ಟುತ್ತಾನೋ (ನನ್ನ ಮಗನೆಂದು ಅಭಿಮಾನ ಮಾತ್ರ. ವಸ್ತುತಃಪುತ್ರನಲ್ಲ) ಮನುಷಸ್ಯ ಶಾಸನೀ =ಮನುವಿನಿಂದ ಯಾರು ಶಿಕ್ಷಾರ್ಹಳೋ, ಯಾವ ಇಳಾದೇವಿಯು ಮನುವಿನ ಮಗಳೋ ನಿನ್ನನ್ನು (ವಾಸುದೇವನನ್ನು) ಅಂತ ಇಳಾ ದೇವಿಯ ಅಂತರ್ಯಾಮಿಯಾಗಿಯೂ ಮನುವಿಗೆ ಶಿಕನಾಗಿಯೂ ಸರ್ವರಿಂದ ಸ್ತುತ್ಯನಾದುದರಿಂದ ಇಳಾ ಎನಿಸಿದವನನ್ನಾಗಿ ಮಾಡಿದರು. ಅಂತೂ ನಿನ್ನ ಪ್ರೇರಣೆಯಿಂದಲೇ ಈ ರಾಜರ ಪ್ರಭಾವವು. ॥೧೧॥

ಭಾ ॥ (1) ಆಯೋ ರಾಜ್ಞೋ ಹೃದಯೇ ಪ್ರೇರಕತ್ವಾದಾಯೋರಾಯುರ್ನಹುಷಸ್ಯಾಧಿಪಶ್ಚ । (2) ಚಕ್ರುರ್ದೇವಾ ದೇಹಸೃಷ್ಟ್ಯೈವ ತಸ್ಯಯನ್ನಾಮಾಂತರ್ಯಾಮಿಣೋ ಜೀವಗಂ ಚ (೫) ನಾಮಾರ್ಥಭಾಗ್ವಾಸುದೇವೋ ಹಿ ಶಕ್ತ್ಯಾ ತೇನ ಹ್ಯಾಯುಃ ಪ್ರಥಮೋऽಸಾವಿಹೋಕ್ತಃ ॥ (5) ಮನುರ್ನಾಮ್ನಾ ಮನುಷಸ್ತಸ್ಯ ಚೇಲಾ ಪುತ್ರೀನಾ ಮಾಸ್ಯಾ ಅಪಿ ವಿಷ್ಣೋಃಸದೈವ ॥ (6) ಇಳೇಡ್ಯತ್ವಾದುಪಜೀವ್ಯತ್ವತಶ್ಚ (7) ಸ ಏವಾಯುಕಯನಾ ಜ್ಞಾನತಶ್ಚ ॥ (8) ತಚ್ಛಾಸ್ಯತ್ವಾಚ್ಛಾಶನೀ ಮಾನವೀಳಾ ತಚ್ಛಾ ಸಕತ್ವಾಚ್ಛಾಸನೀ ವಾಸುದೇವಃ । (9) ಮಮತ್ವಕರ್ತುರ್ಹಿ ಪಿತುಃ ಸ ಪುತ್ರಃ ಸ್ವಾತಂತ್ರ್ಯಂ ಚ ಮಮತಾ ನಾನ್ಯದಸ್ತಿ ॥೧೧॥

ಅ ॥ (1) ಪುರೂರವ ರಾಜನ ಪುತ್ರನಾದ ಆಯುನಾಮಕನಾದ ರಾಜನ ಹೃದಯದಲ್ಲಿದ್ದು ಪ್ರೇರಕನಾಗಿರುವುದರಿಂದ ಅಂತೂ ಆಯುರಾಜನಿಗೆ ಪ್ರೇರಕನಾದ ಸರ್ವಜ್ಞನಾದ ಶ್ರೀ ಹರಿಗೂ ಆಯು ಶಬ್ದ ವಾಚ್ಯತ್ವವು ಮತ್ತು ನಹುಷ ರಾಜನಿಗೆ ಹೃದಯದಲ್ಲಿದ್ದು ಪ್ರೇರಕನಾಗಿ ಸ್ವಾಮಿಯಾಗಿರುತ್ತಾನೆ. (2) (ಆದಾಗ್ಯೂ ದೇವತೆಗಳು ಮಾಡಿದರು ಎಂದದ್ದು ಹೇಗೆ) (ದೇವತೆಗಳು ಶ್ರೀ ಹರಿಯನ್ನಾಗಲೀ ಶ್ರೀ ಹರಿಯು ಪ್ರೇರಕನು ಎನ್ನುವುದನ್ನಾಗಲೀ ಮಾಡಲಿಲ್ಲವಷ್ಟೆ ಎಂದರೆ) ಆಯುರಾಜ ಮೊದಲಾದವರ ದೇಹಗಳನ್ನು ಸೃಷ್ಟಿಸಿದುದರಿಂದಲೇ ದೇವತೆಗಳು ಚಕ್ರುಃ ಎಂದು ಹೇಳಲ್ಪಡುತ್ತಾರೆ. (ಅಲ್ಲದೆ ಶ್ರೀ ಹರಿಯನ್ನಾಗಲೀ ಶ್ರೀ ಹರಿಗೆ ಪ್ರೇರೇಪಿಸುವ ಶಕ್ತಿಯನ್ನಾಗಲೀ ಸೃಷ್ಟಿಸುವುದರಿಂದ ಚಕ್ರುಃ ಎಂದು ಹೇಳಿದ್ದಲ್ಲ) (ಅಂದರೆ - ಅಯೋಃ ಎಂಬ ಷಷ್ಠೀ ವಿಭಕ್ತಿಯಿಂದ ಆಯು ಮೊದಲಾದ ರಾಜರ ಶರೀರಗಳ ಪ್ರೇರಕತ್ವವು ಉಕ್ತವಾಗಿದೆ.

ಆದುದರಿಂದಲೇ ಹೃದಯೇ ಪ್ರೇರಕತ್ವಾತ್ ಎಂದು ಹೇಳಲ್ಪಟ್ಟಿದೆ. ಶರೀರವೇ ಇಲ್ಲವಾದರೆ ಶರೀರದ ಪ್ರೇರಣೆಯೂ ಕೂಡಲಾರದು. ಆದ ಕಾರಣ ಶರೀರವನ್ನು ಸೃಷ್ಟಿಸಿರುವ ದೇವತೆಗಳು ಪ್ರೇರಕನನ್ನು ಸೃಷ್ಟಿಸಿದರು ಎಂದು ಅಮುಖ್ಯವಾಗಿ ಹೇಳಲ್ಪಡುತ್ತದೆ.) (3) (ಆದಾಗ್ಯೂ ಶ್ರೀ ವಿಷ್ಣುವಿಗೆ ಆಯು ಶಬ್ದ ವಾಚ್ಯತ್ವವು ಹೇಗೆಂದರೆ) ಯಾವ ಆಯು ಮೊದಲಾದ ನಾಮವು ಜೀವರಲ್ಲಿ ಪ್ರಸಿದ್ಧವೋ, ಆ ನಾಮವು ಜೀವರಲ್ಲಿ ಅಂತರ್ಯಾಮಿಯಾಗಿರುವುದರಿಂದ ಶ್ರೀ ಹರಿಗೂ ಆಗುತ್ತದೆ. ಆದ ಕಾರಣ ಆಯು ರಾಜನಿಗೆ ಪ್ರೇರಕನಾದ ಶ್ರೀ ಹರಿಯೂ ಕೂಡ ಆಯುಃ ಎನಿಸುತ್ತಾನೆ. (4) (ಮುಖ್ಯಾರ್ಥಕವಾದ ಪ್ರಥಮಂ ಎನ್ನುವುದು ದ್ವಿತೀಯಾಂತವಾಗಿರುವುದರಿಂದ ಆಯುಂ ಎನ್ನುವುದಕ್ಕೆ ವಿಶೇಷಣವೋ, ವಿಶ್ವತಿಂ ಎನ್ನುವುದಕ್ಕೆ ವಿಶೇಷಣವೋ ಮತ್ತು ಶ್ರೀ ವಿಷ್ಣುವಿನಲ್ಲಿ ಪ್ರವೃತ್ತಿ ನಿಮಿತ್ತವಾದುದಕ್ಕೆ ಮುಖ್ಯತ್ವವು ಎಂತಹುದು ? ಎಂದರೆ ) ಹಿ = ಯಾವ ಕಾರಣದಿಂದ ಶ್ರೀ ವಾಸುದೇವನು ಸ್ವತಂತ್ರವಾಗಿಯೇ ನಾಮಾರ್ಥಗಳನ್ನು ಹೊಂದುವವನೋ, ಆಯು ಶಬ್ದ ಪ್ರವೃತ್ತಿ ನಿಮಿತ್ತವುಳ್ಳವನೋ, ಆದ ಕಾರಣ ಈ ಶ್ರೀ ಹರಿಯು ಇಲ್ಲಿ ಮುಖ್ಯವಾಗಿ ಆಯು ಶಬ್ದವಾಚ್ಯನೆಂದುಕ್ತನಾಗಿದ್ದಾನೆ. ಶ್ರುತ್ಯಾದಿ ಪ್ರಸಿದ್ಧನು. (5) (ಆಯುಂ ಎಂಬ ದ್ವಿತೀಯಾಂತವಾದ ಆಯು ಶಬ್ದವು ಆಯಯತಿ ಗಮಯತಿ ಪ್ರವರ್ತಯತೀತಿ ಆಯುಃ ಪ್ರವರ್ತಕನು ಎಂದು ಕ್ರಿಯಾವಚನವಾಗಿ ವ್ಯಾಖ್ಯಾನ ಮಾಡಿದರೆ ಸರ್ವವೂ ಸಮಂಜಸವಾಗುತ್ತದೆ. ಈ ಅಧ್ಯಾಹಾರಾದಿಗಳು ಏತಕ್ಕೆ ? ಎಂದರೆ - ಹೀಗೆ ವ್ಯಾಖ್ಯಾನ ಮಾಡಿದರೆ ಮುಖ್ಯವಾಗಿ ಆಯು ಮೊದಲಾದ ಸಮಸ್ತ ಪ್ರವೃತ್ತಿ ನಿಮಿತ್ತವಿದ್ದುದರಿಂದ ಅವರವರಲ್ಲಿರತಕ್ಕ ಪ್ರವೃತ್ತಿ ನಿಮಿತ್ತ ಸ್ವಾತಂತ್ರ್ಯವು ಶ್ರೀ ಹರಿಯಲ್ಲಿಯೇ ಇದ್ದ ಕಾರಣ ಸಮಸ್ತನಾಮಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ, ಎನ್ನುವ ಮಾಹಿಮಾತಿಶಯವು ಲಭಿಸುತ್ತದೆ.) (ಮನುಷ್ಯಸ್ಯ ಇಳಾಂ ಎಂದು ಹೇಳಿಯದೆ. ಅದರಲ್ಲಿ ಮನುಷ್ಯ ಶಬ್ದಕ್ಕೆ ಜ್ಞಾನೀ ಎಂದರ್ಥವಿದ್ದುದರಿಂದ ಯಾವ ಜ್ಞಾನಿಯನ್ನು ಇಟ್ಟುಕೊಳ್ಳಬೇಕು. ಇಳಾ ಶಬ್ದಕ್ಕೆ ಅನೇಕಾರ್ಥಗಳನ್ನು ಹೇಳಿದುದರಿಂದ ಇಲ್ಲಿ ವಿವಕ್ಷವಾದ ಅರ್ಥವು ಯಾವುದು ? ಎಂದರೆ - ) ಮನುಷ್ಯ ಶಬ್ದದಿಂದ ಮನುವನ್ನು ಇಟ್ಟುಕೊಳ್ಳಬೇಕು. ಆ ಮನವಿನ ಪುತ್ರಿಯು ಇಳಾ ಎನಿಸುತ್ತಾಳೆ. (ಹಾಗಾದರೆ ಇಲ್ಲಿ ತ್ವಾಂ ಎನ್ನುವುದನ್ನು (1) ಇಟ್ಟುಕೊಳ್ಳಬೇಕೋ ಬೇಡವೋ. (2) ದ್ವಿತೀಯಾರ್ಥದಲ್ಲಿ ತ್ವಾಂ ಎನ್ನುವುದನ್ನು ಇಟ್ಟುಕೊಳ್ಳದಿದ್ದರೆ ಅಗ್ನಿ ಯು ವಿಶೇಷ್ಯವಾಗದೆ ಇದ್ದುದರಿಂದ ಅಗ್ನಿ ಪ್ರತಿಪಾದಕತ್ವವು ಇಲ್ಲದೆ ಹೋಗುವುದು. ಅಂತೂ ಈ ಅರ್ಥ ಋಕ್ಕು ಅಗ್ನಿ ಸೂಕ್ತದಲ್ಲಿ ಸೇರದೆ ಹೋಗಬೇಕಾಗುವುದು. (1) ತ್ವಾಂ ಎನ್ನುವುದನ್ನು ಇಲ್ಲಿ ಇಟ್ಟುಕೊಳ್ಳಬೇಕೆಂದಾದರೆ ಇಳಾ ಶಬ್ದಕ್ಕೆ ಶ್ರೀ ವಿಷ್ಣುವಿನಲ್ಲಿ ರೂಢಿಯು ಇಲ್ಲ. ಯೋಗಾರ್ಥವೂ ತೋರುವುದಿಲ್ಲ, ಇಳಾ ಶಬ್ದವು ಸ್ತ್ರೀಲಿಂಗವೂ ಆಗಿದೆ. ಆದ ಕಾರಣ ಪುಲ್ಲಿಂಗ ವಿಷ್ಣು ವಾಚಕತ್ವವು ಹೇಗೆ ಕೂಡುತ್ತದೆ? ಎಂದರೆ) ಈ ಮನು ಪುತ್ರಿಗೆ ಯಾವುದು ಇಳಾ ಎಂಬ ನಾಮವು ಇದೆಯೋ, ಆ ಇಳಾ ಎಂಬ ನಾಮವು ವಿದ್ವದ್ರೂಢಿಯಿದ್ದುದರಿಂದ ಸದಾ ಶ್ರೀ ವಿಷ್ಣುವಿಗೇನೇ ಮುಖ್ಯತಃ ನಾಮವು. (ಆದ ಕಾರಣ ತ್ವಾಂ ಇಳಾಂ ಎಂದು ಹೇಳುವುದು ಯುಕ್ತವು.) (6) (ಇಳಾ ಶಬ್ದವು ಶ್ರೀ ವಿಷ್ಣುವಿಗೆ ನಾಮವು ಹೇಗೆ ಆಗುವುದೆಂದರೆ) (ಈಡ ಸ್ತುತೌ) ಸರ್ವರಿಂದ ಸ್ತುತ್ಯನಾದುದರಿಂದ ಶ್ರೀ ವಿಷ್ಣುವು ಇಳಾ ಎನಿಸುತ್ತಾನೆ. ಸ್ತ್ರೀರೂಪವಿರುವುದರಿಂದ, ಸ್ತ್ರಿಯಃ ಸತೀಃ ತಾ ಉ ಮೇ ಪುಂಸ ಅಹುಃ ಇತ್ಯಾದಿಗಳಲ್ಲಿ ಶ್ರೀ ಹರಿಗೆ ಸ್ತ್ರೀ ಲಿಂಗವೂ ಇದೆ ಎಂದು ಪ್ರಸಿದ್ಧವೇ ಆಗಿದೆ. ಮತ್ತು ಇಳಾ = ಭೂಮಿಯು. ಪೃಥಿವಿಯು ಹೇಗೆ ಸರ್ವರಿಗೂ ಉಪಜೀವ್ಯವಾಗಿದೆಯೋ, ಹಾಗೆಯೇ, ಶ್ರೀ ವಿಷ್ಣುವೂ ಉಪಜೀವ್ಯನಾಗಿರುವುದರಿಂದ ಇಳಾ ಎನಿಸುತ್ತಾನೆ. (7) ಮೊದಲು ಆಯು ಶಬ್ದವು ಶ್ರೀ ವಿಷ್ಣುವಿನ ನಾಮವೆಂದು ಹೇಳಿದೆ. ಇಳಾ ಶಬ್ದಕ್ಕೆ ನಿರ್ವಚನವನ್ನು ಹೇಳುವ ಪ್ರಸಂಗದಲ್ಲಿ ಆಯು ಶಬ್ದವನ್ನು ನಿರ್ವಚನ ಮಾಡುತ್ತಾರೆ.) ಆ ಶ್ರೀ ಹರಿಯೇ

(ಇಣ್ ಗತೌ ಏತಿ ಜಾನಾತೀತ್ಯಾಯುಃ) ಗತ್ಯರ್ಥಗಳಿಗೆ ಜ್ಞಾನಾರ್ಥಕತ್ವವು. ಅಯನಾತ್ =ಜ್ಞಾನವಿದ್ದುದರಿಂದ, ಅಂದರೆ ಸರ್ವಜ್ಞನಾದುದರಿಂದ ಆಯುಃ ಎನಿಸುತ್ತಾನೆ. (8) (ಮನುಷಸ್ಯತಾಸನೀ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ. ಯಾವಾಗ ಇಳಾದೇವಿಯು ಮನುವಿನ ಪುತ್ರಿಯು ಎಂದು ವಿವಕ್ಷಿತಳೋ ಆಗ ಮನುವು ಪಿತನಾದುದರಿಂದ ಪುತ್ರಿಯಾದ ಇಳಾದೇವಿಯು ಮನುವಿನಿಂದ ಶಾಸನಾರ್ಹಳಾದುದರಿಂದ ಮನುಷಸ್ಯ ಶಾಸನೀ ಎನಿಸುತ್ತಾಳೆ. ಇಳಾ ಶಬ್ದದಿಂದ ವಾಸುದೇವನು ವಿವಕ್ಷಿತನಾದರೆ ಆಗ ವಾಸುದೇವನು ಮಗುವಿಗೆ ಶಾಸಕನಾದುದರಿಂದ ಮನುಷಸ್ಯ ಶಾಸನೀ ಎನಿಸುತ್ತಾನೆ. (9) (4ನೇ ಪಾದದ ತಾತ್ಪರ್ಯವನ್ನು ಹೇಳುತ್ತಾರೆ.) ಮಮತಾವನ್ನು ಮಾಡತಕ್ಕ ತಂದೆಯಾದ ಸ್ವಾಯಂಭುವ ಮನುವಿಗೆ ಆ ವಾಸುದೇವನು ಮಗನು. ಪ್ರಸಿದ್ಧವು ಇದು. ಹೇಗೆಂದರೆ ಭಾಗವತಾದಿ ಪುರಾಣಗಳಲ್ಲಿ ಕಪಿಲಾದಿ ಭಗವದ್ರೂಪಗಳು ಸ್ವಾಯಂಭುವಾದಿ ಮನುಗಳ ಪರಂಪರೆಯಾಗಿ ಪುತ್ರರೆಂದು ಹೇಳಿದೆ. (ಶ್ರೀ ವಿಷ್ಣುವಿಗೆ ಉತ್ಪತ್ತಿಯಿಲ್ಲ. ಆತನು ಮನುವಿನಿಂದ ಹುಟ್ಟಿದವನಲ್ಲ. ಆದ ಕಾರಣ ಶ್ರೀ ಹರಿಗೆ ಮನುವು ಪಿತನು ಹೇಗೆ ಆಗುವುದು ಎಂದರೆ) (ಲೋಕದಲ್ಲಿ ಮಕ್ಕಳನ್ನು ಕುರಿತು ತಂದೆಗೆ ಸ್ವಾತಂತ್ರ್ಯವು ಕಂಡದ್ರಿಂದ ಪ್ರಕೃತದಲ್ಲಿ) ಸ್ವಾತಂತ್ರ್ಯವೆಂದರೆ ಪಿತೃತ್ವವು. ಅಂದರೆ ಮಮತಾ = ನನ್ನ ಮಗನೆಂದು ಅಭಿಮಾನ ಮಾತ್ರವು. ಜನಕತ್ವವು ಅಲ್ಲ. (ಮತ್ತೆ ಗೌಣೀ ವೃತ್ತಿಯಿಂದಲೇ ಅಂದರೆ ಮನುವು ಜನಕನಾಗದಿರುವುದರಿಂದ ಮಮತಾ ರೂಪವಾದ ಗುಣ ಸಂಬಂಧದಿಂದ ಪಿತನ ಸಾದೃಶ್ಯವಿದ್ದುದರಿಂದ ಪಿತಾ ಎನಿಸುತ್ತಾನೆ) (ಏವಂಚ ಈ ರಾಜರ ಎಲ್ಲಾ ಪ್ರಭಾವವು ನಿನ್ನ ಪ್ರೇರಣೆಯಿಂದಲೇ ಉಂಟಾದುದು) ||೧೧||

ಋ || (೩೬೨) ತ್ವಂ ನೋ ಅಗ್ನೇ ತವ ದೇವ ಪಾಯುಭಿರ್ಮಘೋನೋ ರಕ್ಷತನ್ವಶ್ಚ ವಂದ್ಯ |

ತ್ರಾತಾ ತೋಕಸ್ಯ ತನಯೇ ಗವಾಮಸ್ಯನಿಮೇಷಂ ರಕ್ಷಮಾಣಸ್ತವ ವ್ರತೇ ||೧೨||

ಅ || ವಂದ್ಯ =ಬ್ರಹ್ಮಾದಿಗಳಿಂದ ನಮಸ್ಕರಿಸಲ್ಪಡತಕ್ಕ, ದೇವ=ಕ್ರೀಡಾದಿ ಗುಣವಿಶಿಷ್ಟನಾದ, ಅಗ್ನೇ = ಎಲೋ ಶ್ರೀ ಹರಿಯೇ, ತ್ವಂ =ನೀನು, ನಃ =ನಮ್ಮವನಾದ, ಮಘೋನಃ =ಧನವುಳ್ಳ ಯಜಮಾನನ, ತನ್ವಃ =ಶರೀರವನ್ನು, ಅಥವಾ ಶರೀರದ ಅವಯವಗಳನ್ನು ಚ =ಯಜಮಾನನ ಜ್ಞಾನ ಭಕ್ತ್ಯಾದಿಗಳನ್ನು ತವ ಪಾಯುಭಿಃ = (ಪಾ ರಕ್ಷಣೇ) ನಿನ್ನದ್ದೇ ಆದ ರಕ್ಷಣೆಗೆ ಮುಖ್ಯ ಕಾರಣಗಳಾದ ಶಕ್ತಿಗಳಿಂದ, ರಕ್ಷ =ಅಪಮೃತ್ಯುವನ್ನು ನಿರಾಕರಿಸಿ ರಕ್ಷಿಸು. ಅಥವಾ ನಃ =ನಮ್ಮ ಮಘೋನಶ್ಚ =ಮತ್ತು ಯಜಮಾನನ, ತನ್ವಃ =ಶರೀರಗಳನ್ನು ರಕ್ಷಿಸು ಮತ್ತು ನೀನು, ತೋಕಸ್ಯ = ನಮ್ಮ ಮಗನಿಗೂ, ತ್ರಾತಾ =ರಕ್ಷಕನು, ಅಸಿ =ಆಗು. (ನಮ್ಮ ಪುತ್ರನಿಗೆ ಮಾತ್ರವಲ್ಲ ತ್ವಂ =ಮತ್ತೆ) ತನಯೇ = (ತನು ವಿಸ್ತಾರೆ) ಮಗನ ಮಗನಿಗೂ ಅಂದರೆ ಪೌತ್ರನಿಗೂ, ತ್ರಾತಾ =ರಕ್ಷಕನಾಗು ಮತ್ತುಗವಾ=ನಮ್ಮ ಗೋವುಗಳಿಗೂ, ತ್ರಾತಾ =ರಕ್ಷಕನಾಗು ಯಸ್ತ್ವಂ = ಯಾವ ನೀನು, ತವ ವ್ರತೇ =ನಿನ್ನ ವಿಷಯವಾದ ಯಜ್ಞ ತಪಸ್ಸು ಮೊದಲಾದ ಕರ್ಮವು ದೇವತೆಗಳಿಂದ ಮಾಡಲ್ಪಡುತ್ತಿರಲು) ಅನಿಮೇಷ= ನಿಮೇಷವಿಲ್ಲದಿರುವ ದೇವತೆಗಳನ್ನು, ರಕ್ಷಮಾಣಃ =ರಕ್ಷಿಸುವವನಾಗಿ, ಅಸಿ =ಆಗಿರುತ್ತಿ. (ಆಧ್ಯಾತ್ಮರೂಪವಾದ ಅರ್ಥವು) ತೋಕಸ್ಯ=ಜ್ಞಾನವನ್ನು, ತನಯೇ =ಸೌಖ್ಯವನ್ನು, ಗವಾಂ =ವಚನವನ್ನು, ತ್ರಾತಾ=ರಕ್ಷಿಸುವವನಾಗು (ಬಾಕಿ ಎಲ್ಲವೂ ಸಮಾನವು. ||೧೨||

**ಭಾ ॥ (1) ತ್ವಂ ನೋ ಮಘೋನೋ ಯಜಮಾನಸ್ಯ ತನ್ವಸ್ತ್ವಮೈವ ರಕ್ಷಾಶಕ್ತಿಭಿಃ ರಕ್ಷದೇವ। (2) ಚ ಶಬ್ದೇನ ಜ್ಞಾನಭಕ್ತ್ಯಾದಿಕಂ ಚ ಸದಾऽಸ್ಮಾಕಂ ಯಜಮಾನಸ್ಯ ಚಾದ್ವಾ ॥ (3) ತ್ರಾತಾ ತೋಕಸ್ಯ ಪುತ್ರಸ್ಯ ಚ ತ್ವಂ ಸಂತತಿತ್ವಾತ್ತನಯಸ್ಯಾಸ್ಯ ಸೂನೋಃ । (4) ಗವಾಂ ಚ ತ್ವಂ ರಕ್ಷಿತಾ (5) ಜ್ಞಾನಸೌಖ್ಯವಾಚಾಂ ವಾದ್ವ್ಯೇವಾ (6) ನಿಮೇಷಾನ್ ಸುರಾಂಶ್ಚ ॥ ಸಂರಕ್ಷಮಾಣಸ್ತ್ವದ್ವ್ರತೇ ತೈಃ ಪ್ರವೃತ್ತೇ ॥೧೨॥**

ಅ ॥ (1) ಎಲೋ ಶ್ರೀ ಹರಿಯೇ, ನೀನು, ನಮ್ಮ ಧನವುಳ್ಳ ಯಜಮಾನನ, ಶರೀರವನ್ನು, ಅಥವಾ ಶರೀರದ ಅವಯವಗಳನ್ನು ನಿನ್ನದ್ದೇ ಆದ ರಕ್ಷಣೆಗೆ ಮುಖ್ಯ ಕಾರಣಗಳಾದ ಶಕ್ತಿಗಳಿಂದ ರಕ್ಷಿಸು. (2) ತನ್ವಶ್ಚ ಎಂಬಲ್ಲಿದ್ದ ಚ ಶಬ್ದದಿಂದ ಯಜಮಾನನ ಜ್ಞಾನಭಕ್ತ್ಯಾದಿಗಳನ್ನು ರಕ್ಷಿಸು. ಅಥವಾ ನಮ್ಮ ಶರೀರಗಳನ್ನೂ ಯಜಮಾನನ ಶರೀರಗಳನ್ನು ರಕ್ಷಿಸು. (ಆಯುಷ್ಯವಿರುವ ಪರ್ಯಂತ ಇರೋಣವು ಸ್ವತಏವ ಸಿದ್ಧವಾಗಿದೆ. ಪ್ರಾರ್ಥನೆಯು ಏತಕ್ಕೆ ಎಂದರೆ) ಸದಾ = ಅಪಮೃತ್ಯುವನ್ನು ಪರಿಹರಿಸುತ್ತಾ, ಅದ್ವಾ =ಆಮಯ (ರೋಗ) ಮೊದಲಾದವುಗಳನ್ನು ಪರಿಹರಿಸುತ್ತಾ ರಕ್ಷಿಸಬೇಕು. (3) ನೀನು ತೋಕಸ್ಯ =ನಮ್ಮ ಮಗನಿಗೆ ರಕ್ಷಕನಾಗು. (ಮಗನಿಗೆ ಮಾತ್ರವಲ್ಲ. ಮತ್ತೆ) ಈ ಮಗನ ಮಗನಿಗೂ (ಪೌತ್ರನಿಗೂ) ರಕ್ಷಕನಾಗು. (ಹಾಗಾದರೆ =ತನಯ ಶಬ್ದವು ಪುತ್ರವಾಚಕವು. ಪೌತ್ರನೆಂದು ಅರ್ಥ ಹೇಳಿದ್ದು ಹೇಗೆ? ಎಂದರೆ) (ತನಯ ಶಬ್ದವು ಕೇವಲ ಪುತ್ರನಿಗೇನೇ ವಾಚಕವಲ್ಲ. ಮತ್ತೆ ತನು ವಿಸ್ತಾರೇ ಎಂಬುವುದರ ರೂಪವಾಗಿರುವುದರಿಂದಲೂ ಅಪತ್ಯ ಸಾಮಾನ್ಯ ನಾಮಗಳಲ್ಲಿ ಪಠಿತವಾಗಿರುವುದರಿಂದಲೂ ಸಂತತಿ ವಾಚಕವಾಗಿದೆ.) ಪೌತ್ರನೂ ಸಂತತಿಯಾದುದರಿಂದ (ಹಾಗೆ ಅರ್ಥ ಹೇಳಿದ್ದೂ ಯುಕ್ತವು) (ಹಾಗಾದರೆ ಯೋಗವೃತ್ತಿಯಿಂದ ಸಂತತಿ ವಾಚಕವಾದ ತನಯ ಶಬ್ದದಿಂದ ಪುತ್ರನೂ ವಾಚ್ಯನಾಗುತ್ತಾನೆ. ಆದ ಕಾರಣ ಪೌತ್ರನನ್ನೇ ಏತಕ್ಕೆ ಇಟ್ಟುಕೊಳ್ಳಬೇಕು ಎಂದರೆ) (ತೋಕ ಶಬ್ದದಿಂದ ಪುತ್ರನನ್ನು ಹೇಳಿದ ಕಾರಣ ತನಯ ಶಬ್ದದಿಂದ ಪುತ್ರನನ್ನು ಹೇಳಲಿಲ್ಲ) (ಹಾಗಾದರೆ ತೋಕ ಶಬ್ದವೂ ಸಾಮಾನ್ಯತಃ ಅಪತ್ಯನಾಮವು. ಆದರೂ ಪುನರುಕ್ತಿ ದೋಷವನ್ನು ಪರಿಹರಿಸುವುದಕ್ಕಾಗಿ ಪ್ರಥಮ ಪ್ರಾಪ್ತವಾದ ತೋಕ ಶಬ್ದದಿಂದ ಪುತ್ರನೆಂದೂ, ದ್ವಿತೀಯ ಪ್ರಾಪ್ತವಾದ ತನಯ ಶಬ್ದದಿಂದ ಪೌತ್ರನೆಂದೂ ಇಟ್ಟುಕೊಳ್ಳಬೇಕು.) (4) ನಮ್ಮ ಗೋವುಗಳಿಗೂ ರಕ್ಷಕನಾಗು (5) (ಹೀಗೆ ತೋಕಸ್ಯ ತನಯಸ್ಯ ಗವಾಂ ಎನ್ನುವ ಮೂರು ಪದಗಳನ್ನು ಬಾಹ್ಯಾರ್ಥದಲ್ಲಿ ವ್ಯಾಖ್ಯಾನ ಮಾಡಿ ಆಧ್ಯಾತ್ಮ ಪರವಾಗಿ ವ್ಯಾಖ್ಯಾನ ಮಾಡುತ್ತಾರೆ) ತೋಕಸ್ಯ ತನಯಸ್ಯ ಗವಾಂ ಎನ್ನುವ ೩ ಪದಗಳಿಗೆ ಜ್ಞಾನ ಸೌಖ್ಯ ವಾಕ್ ಎಂದರ್ಥವು. ಅದ್ವೈವ - ಇದೇ ಮುಖ್ಯಾರ್ಥವು. (ಹೇಗೆಂದರೆ) (ತೋಕ ಶಬ್ದವಾಚ್ಯನು ಪುತ್ರನು. ಜ್ಞಾನವೂ ಆತ್ಮನಿಂದ ಹುಟ್ಟುವ ಪ್ರಯುಕ್ತ ಪುತ್ರ ಎನಿಸುತ್ತದೆ.) (ಜ್ಞಾನವೂ ಪುತ್ರ ಶಬ್ದವಾಚ್ಯ ಎನ್ನುವಲ್ಲಿ ಶ್ರುತಿಯನ್ನು ಹೇಳುತ್ತಾರೆ) ಜ್ಯೋತಿರ್ಹಿ ಪುತ್ರಃ ಪರಮೇ ವ್ಯೋಮನ್, ಎಂದು ಆಕಾಶದಂತೆ ವ್ಯಾಪ್ತವಾದ ಶ್ರೀ ವಿಷ್ಣು ವಿಷಯಕವಾದ ಜ್ಯೋತಿಸ್ಸು ಪ್ರಕಾಶಕವಾದ ಜ್ಞಾನವೇ ಪುತ್ರನೆಂದು ಪ್ರಸಿದ್ಧವು ಎಂದು ಶ್ರುತಿಯು) (1) ಜ್ಞಾನವೇ, ಪುನ್ನಾಮ್ನೋ ನರಕಾತ್ತ್ರಾ ತಾ ಪುತ್ರ ಇತ್ಯಭಿಧೀಯತೇ ಎಂದು ಹೇಳಿದ ಮುಖ್ಯ ಪುತ್ರವು. ಹೇಗೆಂದರೆ ಅಪರೋಕ್ಷ ಜ್ಞಾನವಾದರೆ ನರಕವುಂಟಾಗುವುದಿಲ್ಲ. (೨) ತನಯ ಶಬ್ದವಾಚ್ಯವಾದ ಸಂತತಿಗೆ ವಿಚ್ಛೇದವಿಲ್ಲದಿರುವುದರಿಂದ ಮೋಕ್ಷ ಸುಖವೇ ಮುಖ್ಯ ತನಯ ಶಬ್ದವಾಚ್ಯವು. (೩) ಹಾಗೆಯೇ ವೇದ ವಚನಗಳು ಮುಖ್ಯವಾಗಿ ಜ್ಞಾನ ಸಾಧನಗಳಾಗಿರುವುದರಿಂದ ಮುಖ್ಯವಾಗಿ ಗೋ ಶಬ್ದವಾಚ್ಯಗಳು, ಗೋ ಶಬ್ದಕ್ಕೆ ವಾಕ್ ನಾಮಗಳಲ್ಲಿ ಪಾಠವಿದೆ. (6) ಎಲೋ ಶ್ರೀ ಹರಿಯೇ ನಿನ್ನ ಸಂಬಂಧಿ ಯಜ್ಞ ತಪಸ್ಸು ಮೊದಲಾದ ಕರ್ಮವು ಆ ದೇವತೆಗಳಿಂದ ಮಾಡಲ್ಪಡುತ್ತಿರಲು ನೀನು ದೇವತೆಗಳನ್ನು ಚೆನ್ನಾಗಿ ರಕ್ಷಿಸುವವನಾಗಿರುತ್ತಿ. ॥೧೨॥

ಋ ॥ ।(೩೬೩) ತ್ವಮಗ್ನೇ ಯಜ್ಯವೇ ಪಾಯುರಂತರೋಽನಿಂಷಗಾಯ ಚತುರಕ್ಷ ಇಧ್ಯಸೇ ।

ಯೋರಾತಹವ್ಯೋಽವೃಕಾಯ ಧಾಯಸೇ ಕೀರೇ ಚ್ಚಿನ್ಮಂತ್ರಂ ಮನಸಾ ಮನೋಷಿತಂ ॥೧೩॥

ಅ ॥ ಅಗ್ನೇ = ಎಲೋ ಶ್ರೀ ಹರಿಯೇ, ತ್ವಂ =ನೀನು, ಯಜ್ಯವೇ = ವಿದಿಪ್ರಕಾರ ಯಾಗ ಮಾಡುವವನಿಗೆ, ಪಾಯುಃ (ಪಾರಕ್ಷಣೇ) ಪಾಲಕನೂ, ಅಂತರಃ =ಅಂತರ್ಯಾಮಿಯೂ ಕೂಡ, (ಆಗಿರುತ್ತಿ) (ಅಂದರೆ ಒಳಗೆ ಕ್ರೀಯೆಗಳನ್ನು ಪ್ರವರ್ತಿಸುತ್ತಿ. ಹೊರಗೆ ಫಲವನ್ನು ಕೊಡುತ್ತಿ) ಯಃ = ಯಾವ ಯಜಮಾನನು, ಅನಿಷಂಗಾಯ = ಚೆನ್ನಾಗಿ ಸಂಗವಿಲ್ಲದಿರುವ, (ಸ್ವರ್ಗಾದಿ ಫಲದಲ್ಲಿ ಅತ್ಯಂತ ಸ್ನೇಹವಿಲ್ಲದಿರುವ) (ಅಂದರೆ ಯಜ್ಞಫಲವಾಗಿ ಸ್ವರ್ಗಾದಿಗಳನ್ನು ಇಚ್ಛಿಸದಿರುವವನಿಗಾಗಿ) ಚತುರಕ್ಷಃ =ನಾಲ್ಕು ಅಕ್ಷಿಗಳುಳ್ಳ, ನೀನು (ಭಕ್ತಿಯಿಂದ ಆರಾಧಿಸಲ್ಪಟ್ಟವನಾಗಿ ಜ್ಞಾನದೃಷ್ಟಿಯನ್ನು ಕೊಟ್ಟು) ಇಧ್ಯಸೇ = (ಞಿ ಇಂಧೀ ದೀಪ್ತೌ) ಪ್ರಕಾಶಿಸುತ್ತಿಯೋ (ತೋರುತ್ತಿಯೋ) ಮತ್ತು ಯಃ = ಯಾವ ಯಜಮಾನನು, ಅವೃಕಾಯ = (ಕ್ರೂರವಾದ ಪ್ರಾಣಿ ವಿಶೇಷಕ್ಕೆ (ತೋಳ) ವೃಕ ಎಂದು ಹೆಸರು, ಕ್ರೂರ ಪುರುಷರಲ್ಲಿ ಅಮುಖ್ಯ ಪ್ರಯೋಗವು.) ಅತಿ ಸೌಮ್ಯವಾದ, ನಿನಗಾಗಿ, ಧಾಯಸೇ = (ಧೇಟ್ ಪಾನೇ, ಭಾವೇಽಸುನ್) ಪಾನ ಮಾಡುವುದಕ್ಕಾಗಿ, ರಾತಹವ್ಯಃ = (ರಾದಾನೇ) ಸೋಮಹವ್ಯ ಕ್ಷೀರ ದಧಿ ಮಧು ಮೊದಲಾದ ಹವ್ಯಗಳನ್ನು ಕೊಟ್ಟಿರುವನೋ, (ಅಂತಹ ಯಜಮಾನನಿಗಾಗಿ ಇಧ್ಯಸೇ = ಪ್ರೀತನಾಗುತ್ತಿ) (ಕೇವಲ ಯಜಮಾನನ ಹವಿಸ್ಸಿನಿಂದ ಪ್ರೀತನಾಗುವುದಿಲ್ಲ. ಮತ್ತೆ) ಕೀರೇಃ = (ಡು ಕೃ ಞ ಕರಣೇ) ನಿನ್ನ ಸೇವೆಯನ್ನು ಮಾಡತಕ್ಕ ಯಜ್ಞ ಫಲವಾಗಿ ಸ್ವರ್ಗಾದಿಗಳನ್ನು ಇಚ್ಛಿಸದಿರುವವನ, ತಂ =ಭಕ್ತಿಯಿಂದುಚ್ಚರಿತವಾದ, ಮಂತ್ರಂ ಚಿತ್ = ಮಂತ್ರವನ್ನು ಕೂಡ, ಮನಸಾ =ಸಂತೋಷದಿಂದ, ವನೋಷಿ = ಸ್ವೀಕರಿಸುತ್ತಿ (ಮಂತ್ರವನ್ನು ಕೇಳಿ ಸಂತುಷ್ಟನಾಗುತ್ತಿ) ॥೧೩॥

ಭಾ ॥ (1) ಯಜ್ವೋಽಶ್ಚ ತ್ವಂ ಪಾಲಕೋ ಹ್ಯಂತರಶ । (2) ನಿತರಾಂ ಯಸ್ಸಂಗ ಹೀನೋಽನಿಷಂಗಸ್ತಸ್ಮೈ । ಕ್ಷ್ಯಾದೀಪ್ಯಸೇ ಜ್ಞಾನ ದೃಷ್ಟ್ಯಾ ॥ (3) ದ್ವಿಶೀರ್ಷತ್ವಾಚ್ಚತುರ ಕ್ಷೋಽಧಿಯಜ್ಞೋ (4) ದ್ವೇ ಶೀರ್ಷೇ ಇತಿವಾಗುತ್ತರತ್ರ ॥ (5) ಯೋ ದತ್ತಹ ವಸ್ತೇತಿಸೌಮ್ಯಾಯ ಪೀತ್ಯೈ ಕರ್ತುಂ ಮಂತ್ರಂ ಸಂಭಜಸೇ ಹಿ ತಸ್ಯ ॥೧೩॥

ಅ ॥ (1) ಎಲೋ ಶ್ರೀ ಹರಿಯೇ ನೀನು ಯಾಗ ಮಾಡುವವನಿಗೆ ಪಾಲಕನೂ ಅಂತರ್ಯಾಮಿಯೂ ಆಗಿರುತ್ತಿ. (2) ಸರ್ವಥಾ ಯಜ್ಞಫಲವಾಗಿ ಸ್ವರ್ಗಾದಿಗಳನ್ನು ಇಚ್ಛಿಸದಿರುವವನಾಗಿ ನಾಲ್ಕು ಅಕ್ಷಿಗಳುಳ್ಳ ನಾನು ಭಕ್ತಿಯಿಂದ ಆರಾಧಿತನಾಗಿ ಜ್ಞಾನದೃಷ್ಟಿಯನ್ನು ಕೊಟ್ಟು ಪ್ರಕಾಶಿಸುತ್ತಿ. (3) (ಅಗ್ನಿಗೆ ನಾಲ್ಕು ಅಕ್ಷಿಗಳಿಗೆ ಎಂಬುವುದು ಹೇಗೆಂದರೆ) ೨ ಶಿರಸ್ಸು ಇದ್ದು ಪ್ರಯುಕ್ತವೂ (ಪ್ರತಿ ಶಿರಸ್ಸಿನಲ್ಲಿ ೨ ಕಣ್ಣುಗಳಿದ್ದ ಪ್ರಯುಕ್ತವೂ ಅಗ್ನಿಯು ನಾಲ್ಕು ಕಣ್ಣುಗಳುಳ್ಳವನು ಎಂದೆನಿಸುತ್ತಾನೆ. (ಅಗ್ನಿಯೇ ಯಜ್ಞವನ್ನು ಅಧಿಕವಾಗಿ ಮಾಡುತ್ತಾನೆ. ಅಥವಾ ಆಶ್ರಯಿಸುತ್ತಾನೆ. (4) (ಎರಡು ಶಿರಸ್ಸುಗಳಿವೆ ಎಂಬುವುದು ಹೇಗೆಂದರೆ) ಚತ್ವಾರಿ ಶೃಂಗಾತ್ರಯೋ ಅಸ್ಯ ಪಾದಾ ದ್ವೇ ಶಿರ್ಷೇ ಸಪ್ತ ಹಸ್ತಾಸೋ ಅಸ್ಯ ॥ ಈ ವೃಷಭ ರೂಪನಾದ ವೃಷಭಾಂತರ್ಯಾಮಿಯಾದ ಶ್ರೀ ವಿಷ್ಣುವಿಗೆ ನಾಲ್ಕು ವೇದಗಳು ಜ್ಞಾಪಕಗಳಾಗಿರುವುದರಿಂದ ಶೃಂಗ ತುಲ್ಯಗಳಾಗಿವೆ. ಪ್ರಾತಃಸವನ ಮೊದಲಾದ ೩ ಸವನಗಳು ಗತಿ ಸಾಧನಗಳಾಗಿರುವುದರಿಂದ ಪಾದ ತುಲ್ಯಗಳಾಗಿವೆ. ಪ್ರಾಯಣೀಯ

ಉದಯನೀಯ ಇಷ್ಟಿಗಳು ಶಿರಃಸ್ಥಾನೀಯಗಳು. ಗಾಯತ್ರೀ ಮೊದಲಾದ ಏಳು ಛಂದಸ್ಸುಗಳು ಕರಸ್ಥಾನೀಯಗಳು. ಇಂತಹ ಅಗ್ನಿರೂಪನಾದ ವೃಷಭನು ಮಂತ್ರಬ್ರಾಹ್ಮಣ ಕಲ್ಪಸೂತ್ರಗಳಿಂದ ಸಂಬಂಧವಾಗಿ ಪ್ರಾತಃಸವನಾದಿ ಕ್ರಮದಿಂದ ಶಬ್ದವನ್ನು ಮಾಡುತ್ತಾನೆ. ಇಂತಹ ಶ್ರೀ ಹರಿಯು ಮನುಷ್ಯರನ್ನು ಯಜಮಾನನಿಗಾಗಿ ಪ್ರವೇಶಿಸಿದನು, ಎಂಬ ವಚನವು ಉತ್ತರತ್ರ ಇದೆ. 5) ಯಜಮಾನನು ಎಂತಹನು ಎಂದರೆ) ಯಾವ ಯಜಮಾನನು ಅತಿ ಸೌಮ್ಯನಾದ ನಿನಗೆ ಪಾನ ಮಾಡುವುದಕ್ಕಾಗಿ ಸೋಮ ಅಜ್ಯ ಮೊದಲಾದ ಹವ್ಯಗಳನ್ನು ಕೊಟ್ಟವನಾಗಿ, ನಿನ್ನ ಸೇವೆಯನ್ನು ಮಾಡುವ ಪುರುಷನ ಭಕ್ತಿಯಿಂದ ಉಚ್ಚರಿತವಾದ ಮಂತ್ರವನ್ನೂ ಕೂಡ ಕೇಳಿ ಸಂತುಷ್ಟವಾಗುತ್ತಿ. ||೩೩||

ಋ || (೩೬೪) ತ್ವಮಗ್ನ ಉರುಶಂಸಾಯ = ಶಿಷ್ಯರು ಮಾಡತಕ್ಕ ಮಹಾ ಸ್ತೋತ್ರಗಳಿಗೆ ವಿಷಯನಾದ (ಮಹಾಸ್ತುತ್ಯನಾದ) ವಾಘತೇ = ಶ್ರೀ ವಿಷ್ಣುವನ್ನು ಸ್ತೋತ್ರಮಾಡುವವನಿಗೋಸ್ಕರ, ಯತ್=ಯಾವುದು. ಸ್ಪಾರ್ಹಂ= ) ಇಚ್ಛಿಸಲು ಯೋಗ್ಯವಾದ) (ಇಷ್ಟವಾದ) ಪರಮಂ =ಉತ್ತಮವಾದ, ರೇಕ್ಣಃ ಧನವಿದೆಯೋ (ಸುಖಮೇವ ಚ ಪರಮಂ ಧನಂ =ಸುಖವೇ ಮುಖ್ಯಧನವು) ತತ್ = ಅಂತಹ ಸುಖವನ್ನೇ. ವನೋಷಿ = (ವನ ದಾನೇ) ಕೊಡುತ್ತಿ. ತ್ವಂ=ಯಾವ ನೀನು, ಆಧ್ರಸ್ಯಚಿತ್ = (ಅಜ್ ಪೂರ್ವಕಾತ್ ಧೃಧಾರಣೇ) ಚೆನ್ನಾಗಿ ಧಾರಕನಾದ ವಾಯುವಿಗೂ ಕೂಡ, (ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾಬಲಃ । ಜಗದ್ವೃಕ್ಷದ ೭ ಲೋಕಗಳೆಂಬ ೭ ಸ್ಕಂಧಗಳಲ್ಲಿರತಕ್ಕ ವಾಯುದೇವರು ಮಹಾಬಲಿಷ್ಠರಾದ ಪ್ರಯುಕ್ತ ಜನರನ್ನು ಧರಿಸುತ್ತಿರುತ್ತಾರೆ) ಎಂಬ ಪ್ರಮಾಣದಿಂದ ವಾಯುವೇ ಧಾರಕನೆಂದು ಪ್ರಸಿದ್ಧನು) ಪ್ರಮತಿಃ = ಪ್ರಕೃಷ್ಟಾಮತಿಃ ಯಸ್ಮಾತ್ ಎಂಬ ವ್ಯುತ್ಪತ್ತಿಯಿಂದ) ಪ್ರಕೃಷ್ಟ ಜ್ಞಾನವನ್ನು ಕೊಡುವವನು, ಪಿತಾ ಚ = ತಂದೆಯು ಎಂದೂ (ಸಜ್ಜನರಿಂದ ಉಚ್ಯಸೇ =ಹೇಳಲ್ಪಡುತ್ತಿಯೋ, ಯಾವ ನೀನು ಪ್ರಪಾಕಂ =ಪರಿಪಕ್ವವಾದ ಅಧಿಕಾರವುಳ್ಳ (ಅಪರೋಕ್ಷ ಜ್ಞಾನ ಯೋಗ್ಯರಾದ) ದೇವಾದಿಗಳನ್ನು ಪ್ರದಿಶಃ = ಉಪದೇಶಕನಾಗಿರುವುದರಿಂದ, ಪ್ರಶಾಸ್ಸಿ=ಚೆನ್ನಾಗಿ ಶಿಕ್ಷಿಸುತ್ತಿಯೋ, (ಯಾವ ನೀನು ವಿದುಷ್ಟರಃ =ಸರ್ವಜ್ಞನೋ, (ಅಂತಹ ನೀನು ಮಂತ್ರವನ್ನು ಕೇಳಿ ಸಂತುಷ್ಟನಾಗುತ್ತಿ.) ||೧೪||

ಭಾ || **(1) ಮಹಾಸ್ತೋತ್ರಾಯ ವದತೇ ಸ್ಪಾರ್ಹಮಿಷ್ಟಂ ರೇಕ್ಣಃ ಸುಖಂ ಪರಮಂ ತದ್ದದಾಸಿ । (2) ಅ ಸಮಂತಾದ್ಧಾರಕಸ್ಯಾಪಿ ವಾಯೋಃ ಪ್ರಜಾನದಃ ಪ್ರೋಚ್ಯಸೇ ತ್ವಂ ಪಿತಾ ಚ ॥ ಪ್ರಶಾಸ್ಸಿ ತ್ವಂ ಪರಿಪಕ್ವಾಧಿಕಾರಂ ಪ್ರದೇಶಕತ್ವಾದಖಿಲಂ ತ್ವಂ ಸುವೇತ್ತಾ** ||೧೪||

ಅ || (1) ಎಲೋ ಶ್ರೀ ಹರಿಯೇ ನೀನು ಮಹಾಸ್ತುತ್ಯನಾದ, ಮತ್ತು ಶ್ರೀ ವಿಷ್ಣುವನ್ನು ಸ್ತುತಿಸುವವನಿಗೋಸ್ಕರ, ಇಷ್ಟವಾದ ಪರಮಧನವು ಯಾವುದು ಇದೆಯೋ ಅಂತಹ ಸುಖವನ್ನೇ ಕೊಡುತ್ತಿ. (2) ಚೆನ್ನಾಗಿ ಧಾರಕನಾದ ವಾಯುವಿಗೂ ಕೂಡ ನೀನು ಪ್ರಕೃಷ್ಟ ಜ್ಞಾನವನ್ನು ಕೊಡುವವನೆಂದೂ ಪಿತನೆಂದು ಹೇಳಲ್ಪಡುತ್ತಿ. (3) ಯಾವ ನೀನು ಎಲ್ಲವನ್ನು ಚೆನ್ನಾಗಿ ತಿಳಿದವನಾಗಿರುತ್ತಿಯೋ ಆದ ಕಾರಣ ನೀನು ಉಪದೇಶಕನಾದುದರಿಂದ ಅಪರೋಕ್ಷ ಜ್ಞಾನದಲ್ಲಿ ಯೋಗ್ಯರಾದ ದೇವಾದಿಗಳನ್ನು ಚೆನ್ನಾಗಿ ಶಿಕ್ಷಿಸುತ್ತಿ (ಪ್ರದಿಶ ಎನ್ನುವುದರಿಂದಲೂ ಉಪದೇಶಕತ್ವವು ಉಕ್ತವಾಯ್ತು. ಪ್ರಪಾಕಂಶಾಸ್ಸಿ ಎನ್ನುವಲ್ಲಿಯೂ ಉಪದೇಶಕತ್ವವೇ ವಿವಕ್ಷಿತವಾದ ಪ್ರಯುಕ್ತ ಪುನರುಕ್ತವಾಯ್ತು ಎಂದರೆ, ಸಾಮಾನ್ಯಂವಿಶೇಷೇ ಹೇತುಃ ಸರ್ವೋಪದೇಶಕತ್ವರೂಪವಾದ ಸಾಮಾನ್ಯವು ಅವಿರ್ಭೂತ ಅಪರೋಕ್ಷ ಜ್ಞಾನ ಶಿಕ್ಷಕತ್ವ ವಿಶೇಷದಲ್ಲಿ ಹೇತುವು)

||೧೪||

**ಋ ॥ (೩೬೫) ತ್ವಮಗ್ನೇ ಪ್ರಯತದಕ್ಷಿಣಂ ನರಂ ವರ್ಮೇವ ಸ್ಯೂತಂ ಪರಿಪಾಸಿ ವಿಶ್ವತಃ ।**

**ಸ್ವಾದುಕ್ಷದ್ಮಾ ಯೋ ವಸತೌ ಸ್ಯೋನಕೃಜ್ಜೀವ ಯಾಜಂ ಯಜತೇ ಸೋಪಮಾ ದಿವಃ ॥೧೫॥೩೪॥**

ಅ ॥ ಅಗ್ನೇ = ಎಲೋ ಶ್ರೀ ಹರಿಯೇ, ತ್ವಂ =ನೀನು, ಯಃ = ಯಾವ ಮನುಷ್ಯನು, ಸ್ವಾದುಕ್ಷದ್ಮಾ = ಸುಖ ಸಾಧನಗಳಾದ ಮನೆಗಳು ಯಾರಿಂದ ಇತರರಿಗೆ ಆಗುತ್ತವೋ ಅಂತಹವನೋ, ಅಂದರೆ ತನ್ನ ಮನೆಗಳನ್ನು ಇತರಿಗೆ ದಾನ ಮಾಡುವವನೋ, ಯಶ್ಚ =ಯಾವನು, ವಸತೌ = ತನ್ನ ಮನೆಯಲ್ಲಿ, ಸ್ಯೋನಕೃತ್ = ಇತರರಾದ ಅತಿಥಿಗಳಿಗೆ ಅನ್ನ ದಾನಾದಿಗಳಿಂದ ಸುಖವನ್ನು ಮಾಡುತ್ತಾನೋ, ಯಶ್ಚ =ಯಾವನು ಜೀವಯಾ ಜಂಯಜತೇ = ಜೀವಿಸಿಕೊಂಡಿರುವವನ ಯಾಗವು ಅಂದರೆ ಜೀವನದಿಂದ ವ್ಯಾಪ್ತವಾದ ಯಜ್ಞವನ್ನು ಮಾಡುತ್ತಾನೋ (ಅಂದರೆ ಮರಣ ಪರ್ಯಂತ ಸರ್ವದಾ ಯಾವನು ಯಜ್ಞವನ್ನು ಮಾಡುತ್ತಾನೋ, ತಂ=ಅಂತಹ, ಪ್ರಯತದಕ್ಷಿಣಂ = (ಪ್ರಪೂರ್ವಾದ್ಯತೀ ಪ್ರಯತ್ನೇ ಪ್ರಯತೋ ದಕ್ಷಿಣಾಯಾಂ, ದಕ್ಷಿಣಾ ಶಬ್ದಕ್ಕೆ ಪರನಿಪಾತವು) ಯಾವನು ಯಾಗಗಳಲ್ಲಿ ಪ್ರಯತ್ನ ಪೂರ್ವಕವಾಗಿ ದಕ್ಷಿಣೆಯನ್ನು ಕೊಡುವವನೋ, ಅಂತಹ ನರಂ=ಮನುಷ್ಯನನ್ನು ವಿಶ್ವತಃ =ಸಮಸ್ತ ಕಾಲದಲ್ಲಿ, (ನಿತ್ಯದಲ್ಲಿಯೂ) ಸ್ಯೂತಂ =(ಷಿವು ಬಂಧನೇ) ಅನುಸ್ಯೂತವಾದ (ಧರಿಸಲ್ಪಟ್ಟ) ವರ್ಮೇವ ಕವಚವನ್ನೆಂಬಂತೆ ಪರಿಪಾಸಿ = ಸುತ್ತಲೂ ರಕ್ಷಿಸುತ್ತಿ. (ಇಂತಹವನಿಗೆ ಕೇವಲ ಐಹಿಕ ರಕ್ಷಣೆಯೇ ಪ್ರಯೋಜನವೋ ಎಂದರೆ ಅಲ್ಲ. ಸ್ವರ್ಗಾದಿ ರೂಪವಾದ ಪಾರತ್ರಿಕ ಫಲವೂ ಪ್ರಯೋಜನವೂ ಆಗುತ್ತದೆ. ಹೇಗೆಂದರೆ) ದಿವಃ =ಸ್ವರ್ಗಾದಿಗಳು ಪ್ರಾಪ್ತಿಯಾಗಲಿಕ್ಕೆ, ಸಃ = ಭಗವಜ್ಞಾನ ಮಾರ್ಗದಲ್ಲಿ ಅಭಿನಿವೇಶವೇ, ಉಪಮಾ ದೃಷ್ಟಾಂತವು. (ಶಾಸ್ತ್ರದಲ್ಲಿ ಹೇಳಿದ ಸಾಧನಗಳನ್ನು ಮಾಡಿದುದರಿಂದ ಇಷ್ಟವಾದ ಫಲವು ಈಗ ತೋರುತ್ತದೆ. ಅದರಿಂದ ಪಾರತ್ರಿಕೆ ಸುಖವಿದೆ, ಎಂಬುದನ್ನು ಊಹಿಸಲಾಗುತ್ತದೆ.) ॥೧೫॥೨೪॥

**ಭಾ ॥ (1) ಧೃತಂ ವರ್ಮೇವ ಪರಿಪಾಸಿ ನಿತ್ಯಂ ಪ್ರಯತ್ನಾದ್ಯೋ ದಕ್ಷಿಣಾದೋ ಮಖೇಷು । (2) ಸ್ವಾದುಕ್ಷದ್ಮಾ ಸುಖಗೇಹೋ ಗೃಹೇ ಚ ಸ್ಯೋನಂ ಸುಖಂ ಯಃ ಪರೇಷಾಂ ಕರೋತಿ (3) ಯಾವಜ್ಜೀವಂ ಯಜನೇ ಸುಪ್ರತಿಜ್ಞೋ ಭೂತ್ವಾ ಚ ಯೋ ಯಜತೇ ತಸ್ಯ ಸ್ಯೈವ । ದ್ಯುಪ್ರಾಪ್ತಿಭಾವೇ ಹ್ಯುಪಮಾ ದೇಹ ಏವ ಕ್ಷಮೇತಿ ವಾ ವಸತಿರ್ಜ್ಞಾನಮಾರ್ಗೇ ॥೧೫॥೩೪॥**

ಅ ॥ (1) ಯಾವನು ಯಾಗಗಳಲ್ಲಿ ಪ್ರಯತ್ನ ಪೂರ್ವಕವಾಗಿ ದಕ್ಷಿಣೆಯನ್ನು ಕೊಡುತ್ತಾನೋ ಅಂತಹವನನ್ನು ನಿತ್ಯದಲ್ಲಿಯೂ ಧರಿಸಲ್ಪಟ್ಟ ಕವಚವನ್ನೆಂಬಂತೆ ಸುತ್ತಲೂ ರಕ್ಷಿಸುತ್ತಿ. (2) ಯಾವನು ಸುಖವಾದ ಮನೆಯುಳ್ಳವನೋ, (ಅಂದರೆ ಸುಖ ಸಾಧನಗಳಾದ ಮನೆಗಳು ಯಾರಿಂದ ಇತರರಿಗೆ ಆಗುತ್ತವೋ ಅಂತಹವನು. ಅಂದರೆ ಪ್ರಶಸ್ತ ಮನೆಗಳನ್ನು ಇತರರಿಗೆ ದಾನ ಮಾಡುವವನೋ) ಯಾವನು ಮನೆಯಲ್ಲಿ ಇತರರಾದ ಅತಿಥಿಗಳಿಗೆ ಸುಖವನ್ನು ಮಾಡುತ್ತಾನೋ, (3) (ಮರಣ ಪರ್ಯಂತ ಯಾವನು ಯಜ್ಞ ಮಾಡುತ್ತಾನೋ, ಅಂತಹವನನ್ನು ಶ್ರೀ ಹರಿಯು ಯಾವಾಗ ರಕ್ಷಿಸುತ್ತಾನೆ ಎಂದರೆ) ಯಾವನು ಯಾವಾಗ ಬದುಕಿಕೊಂಡು ಇರುವ ಪರ್ಯಂತ ಯಾಗ ಮಾಡುತ್ತಾನೋ, ಆಗ ರಕ್ಷಿಸುತ್ತಾನೆ. ದೃಢವಾದ ದೀಕ್ಷೆಯುಳ್ಳವನಾಗಿ ಯಾರು ಯಾಗ ಮಾಡುತ್ತಾನೋ. (ಅಂದರೆ ಪ್ರಾರಂಭ ಮಾತ್ರ ಮಿಥ್ಯಾವಾ ವಿಷ್ಣು ಧರ್ಮೇನ ನಿಷ್ಫಲಾ॥

ಎಂಬ ಪ್ರಮಾಣದಿಂದ ಭಕ್ತಿಪೂರ್ವಕ ದೀಕ್ಷೆಯನ್ನಾರಂಭಿಸಿ ರಕ್ಷಿಸುತ್ತಾನೆ) (ಹಿಂದೆ ಹೇಳಿದ ಸಮಸ್ತ ವಿಶೇಷಣಗಳುಳ್ಳ ಮನುಷ್ಯನಿಗೆ ಕೇವಲ ಐಹಿಕ ರಕ್ಷೆಯೇ ಪ್ರಯೋಜನವೋ ಅಲ್ಲವೆನ್ನುತ್ತಾರೆ. ಮತ್ತೆ ಸ್ವರ್ಗಾದಿ ರೂಪವಾದ ಪಾರತ್ರಿಕ ಫಲವೂ ಆಗುತ್ತದೆ. ಹೇಗೆಂದರೆ ಆಗಮದಿಂದ, ಆಗಮದಲ್ಲಿಯೇ ಹೇಗೆ ವಿಶ್ವಾಸವು ಎಂದರೆ) ಅಂತಹ ಮನುಷ್ಯನಿಗೆ ಸ್ವರ್ಗ ಪ್ರಾಪ್ತಿಯಾಗಲಿಕ್ಕೆ ಅದೇ ದೃಷ್ಟಾಂತವು. ಅಥವಾ ದೇಹವು ಇರುವಾಗಲೇ ಯಾವುದು ಕ್ಷಮೆಯೋ, ಅದೇ ದೃಷ್ಟಾಂತವು. ಅಥವಾ ಜ್ಞಾನಮಾರ್ಗದಲ್ಲಿ ಯಾವುದು ವಸತಿಯು ಆಸಕ್ತಿಯು ಇದೆಯೋ, ಅದೇನೇ ನಿಶ್ಚಯಕ್ಕಾಗಿ ದೃಷ್ಟಾಂತವು ಆಗುತ್ತದೆ. (ಅಂದರೆ ಈ ದೇಹದಲ್ಲಿಯೇ ಕ್ಷಮೆಯು ಸಿಗುವುದಕ್ಕಾಗಿ ಜ್ಞಾನಮಾರ್ಗದಲ್ಲಿ ಆವಾಸ ಮಾಡುವುದಕ್ಕಾಗಿ ವೇದೋಕ್ತ ಕರ್ಮವನ್ನು ಮಾಡುತ್ತಿರಲು ಈ ದೇಹದಲ್ಲಿಯೇ ಯಾವುದು ಕ್ಷಮೆಯೋ ಯಾವುದು ಜ್ಞಾನಮಾರ್ಗದಲ್ಲಿ ಆವಾಸವು ಲಭ್ಯವಾಗುತ್ತದೋ ಅವೆರಡೂ ವೇದೋಕ್ತ ಕರ್ಮದಿಂದ ಸ್ವರ್ಗಪ್ರಾಪ್ತಿಯೂ ಆಗುತ್ತದೆ. ||೧೫||

ವಿ || ಶ್ರುತ್ಯುಕ್ತವಾದ ಉಪಮಾ ಶಬ್ದವು ಸ್ತ್ರೀಲಿಂಗವಾದ ಪ್ರಯುಕ್ತ ಯಾವುದು ಆಕಾಂಕ್ಷೆಯು ಇದೆಯೋ ಅದು ಸ್ತ್ರೀಲಿಂಗದಿಂದಲೇ ಪೂರ್ಣೀಕರಿಸಬೇಕೆಂಬ ಅಭಿಪ್ರಾಯದಿಂದ ಕ್ಷಮಾ ವಸತಿಃ ಎಂದು ಸ್ತ್ರೀಲಿಂಗ ಪ್ರಯೋಗವು (2) ಆಗಮೋಕ್ತವಾದುದು ಯಜ್ಞಾದಿಗಳ ಫಲವು ಸ್ವರ್ಗಾದಿಗಳು, ಎನ್ನುವಲ್ಲಿ ವಿಶ್ವಾಸವನ್ನು ಯಾವ ಪ್ರಮಾಣದಿಂದ ಮಾಡಬೇಕು ಎಂಬ ಶಂಕೆಗೆ ಸೋಪಮಾ ದಿವಃ ಎನ್ನುವುದರಿಂದ ಉತ್ತರವು ಹೇಗೆ ಉಂಟಾಯ್ತು ಎಂದರೆ ಸಹಸ್ರನಾಮ ಪಠನ ರೂಪವಾದ ಇಮಂಸ್ತವಮಧೀಯಾನಃ ಶ್ರದ್ಧಾಭಕ್ತಿ ಸಮನ್ವಿತಃ। ಯುಜ್ಯೇತಾऽತ್ಮಾ ಸುಖ ಕ್ಷಾಂತಿಶ್ರೀ ಧೃತಿಸ್ಮೃತಿಕೀರ್ತಿಭಿಃ || ಇತ್ಯಾದಿ ಆಗಮೋಕ್ತವಾದ ಸಾಧನದಿಂದ ಇಲ್ಲಿಯೇ ಕ್ಷಮಾದಿ ರೂಪವಾದ ಫಲವು ತೋರುತ್ತದೆ. ಆ ದೃಷ್ಟಾಂತದಿಂದ, ವಿಮತಂ ಯಜ್ಞಾದಿ ಫಲಂ ಸ್ವರ್ಗಾದ್ಯವಶ್ಯಂ ಭವಿಷ್ಯತಿ ಆಗಮೋಕ್ತತ್ವಾತ್ ಕ್ಷಮಾವತ್, ಎಂದು ಪಾರತ್ರಿಕ ಫಲವೂ ಅನುಮಿತವಾಗುತ್ತದೆ. ||೧೫||

ಋ || (೩೬೬) ಇಮಾಮಗ್ನೇ ಶರಣಿಂ ಮೀಮೃಷೋನ ಇಮಮಧ್ವಾನಂ ಯಮಗಾಮ ದೂರಾತ್ ।

ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್ಮರ್ತ್ಯಾನಾಂ ||೧೬||

ಅ || ಅಗ್ನೇ = ಎಲೋ ಶ್ರೀ ಹರಿಯೇ, ಯಸ್ತ್ವಂ = ಯಾವ ನೀನು, ಸೋಮ್ಯಾನಾಂ = ಸೋಮಪಾನಾರ್ಹರಾದ, ದೇವತೆಗಳಿಗೆ, ಆಪಿಃ = ಪ್ರಾಪ್ಯನೂ, ಪಿತಾ = ಜನಕನೂ, ಪ್ರಮತಿಃ = (ಪ್ರಕೃಷ್ಟಾಮತಿರ್ಯಸ್ಮಾತ್) ಪ್ರಕೃಷ್ಟವಾದ ಬುದ್ಧಿಯು ಯಾರಿಂದ ಆಗುತ್ತದೋ, ಅಂದರೆ ಭಕ್ತರಿಗೆ ಜ್ಞಾನದಾಯಕನೂ, ಆಸಿ = ಆಗಿರುತ್ತಿಯೋ, ಮರ್ತ್ಯಾನಾಂ = ಮನುಷ್ಯರಿಗೆ, (ಮನುಷ್ಯರನ್ನು) ಭೃಮಿಃ = (ಭ್ರಮುಚಲನೇ) ಸ್ವರ್ಗಭೂಮಿ ನರಕ ರೂಪವಾದ ಸಂಸಾರದಲ್ಲಿ ತಿರುಗಿಸುವವನೂ, ಅಸಿ = ಆಗಿರುತ್ತಿಯೋ, ಹಾಗೆಯೇ, ಋಷಿಕೃತ್ =ಜ್ಞಾನದಾನ ಮಾಡಿ ಭಕ್ತರನ್ನು ಭಕ್ತರನ್ನು ಋಷಿಗಳ್ನಾಗಿ ಮಾಡುತ್ತಿಯೋ, ಅಗ್ನೇ = ಎಲೋ ಶ್ರೀ ಹರಿಯೇ, ಇಮಾಂ =ತ್ವಮಗ್ನೇ ಇತ್ಯಾದಿಗಳಿಂದ ನಾನು ಶರಣು ಹೊಂದುತ್ತೇನೆ ಎಂಬುವುದನ್ನು) ಮೀಮೃಷಃ = (ಮೃಷಸಹನೇ) (ಮೃಷತಿತಿಕ್ಷಾಯಾಂ) ಸಹಿಸು ಕೋ (ಅಂದರೆ ಅಲ್ಪನಾದ ಇವನು ಶ್ರೇಷ್ಠನಾದ ನನ್ನನ್ನು ಹೇಗೆ ಶರಣು ಹೊಂದುತ್ತಾನೆ, ಎನ್ನುವ ಬುದ್ಧಿಯಿಂದ ಸಿಟ್ಟು ಮಾಡಬೇಡ.) (ಏಕೆಂದರೆ) ಯಂ ಇಮಂ ಅಧ್ವಾನಂ = ಯಾವ ಈ

ಮಾರ್ಗವನ್ನು ನಿಶ್ಚಯಿಸಿಕೊಂಡು, (ಯಾವ ಕಾರಣದಿಂದ ನಿನ್ನ ಪ್ರಾಪ್ತಿಗಾಗಿ) ದೂರಾತ್ = ದೂರಕ್ಕೇನೇ ಅಗಾಮ =ಬಂದಿರುವೆನೋ, (ಆದ ಕಾರಣ ಅನಾದಿಯಾದ ಸಂಸಾರ ಮಾರ್ಗದಲ್ಲಿ ಖಿನ್ನರಾದ ನಾವು ಕಥಂಚಿತ್ ಈಗ ನಿನ್ನನ್ನು ಯಾವ ಕಾರಣದಿಂದ ಹೊಂದಿರುತ್ತೇವೋ, ಆದ ಕಾರಣ ಸಹಿಸಿಕೋ ||೧೬||

ಭಾ || **(1) ಯಾ ಮೇ ಭವಚ್ಛರೂಪ್ರಾಪ್ತಿರೇಷಾ ಮರ್ಷಸ್ವ ತಾ ಮಲ್ಪ ಇತಿ ಕ್ರುಧೋ ಮಾ || (2) ತ್ವತ್ಪ್ರಾಪ್ತ್ಯರ್ಥಂ ದೂರಮಗಾಂ ಚ ಯತ್ತತ್ಪ್ರಾಪ್ಯ: ಪಿತಾ ಜ್ಞಾನದೋ ದೇವತಾನಾಂ ||ತ್ವಂ ಭ್ರಾಮಕೋ ಮಾನುಷಾಣಾ ಮೃಷೀಣಾಂ ಕರ್ತಾ ತಥಾ ಜ್ಞಾನದಾನೇನ ದೇವ ||೧೬||**

ಅ || (1) ಎಲೋ ಶ್ರೀ ಹರಿಯೇ, ತ್ವಮಗ್ನೇ ಇತ್ಯಾದಿಗಳಿಂದ ಹೇಳಲ್ಪಟ್ಟದ್ದು ನಿನ್ನನ್ನು ನಾನು ಶರಣು ಹೊಂದಿದ್ದೇನೇ ಎನ್ನುವುದು ಯಾವುದು ಇದೆಯೋ, ಅದನ್ನು ಸಹಿಸಿಕೊಳ್ಳು. (ಶರಣು ಹೊಂದುವುದು ಅಪರಾಧವೇ ಆಗದಿರುವುದರಿಂದ ಪ್ರಾರ್ಥನೆಯೇ ಕೂಡಲಾರದು ಎಂದು ಶಂಕಾ ಬಂದರೆ ಪ್ರಾರ್ಥನೆಯ ಅಭಿಪ್ರಾಯ ಹೇಳುತ್ತಾರೆ) ಅಲ್ಪನಾದ ಇವನು ಅತಿ ಶ್ರೇಷ್ಠನಾದ ನನ್ನನ್ನು ಹೇಗೆ ಶರಣು ಹೊಂದುತ್ತಾನೆ, ಎಂಬ ಶುದ್ಧಿಯಿಂದ ಸಿಟ್ಟು ಮಾಡಬೇಡ. (2) (ಅಲ್ಪನಾದ ನಿನ್ನ ಅಪರಾಧವನ್ನು ಶ್ರೇಷ್ಠನಾದ ನಾನು ಏಕೆ ಸಹಿಸಿಕೊಳ್ಳಬೇಕು ಎಂದರೆ) (ಈ ಮಾರ್ಗವನ್ನು ನಿಶ್ಚಯಿಸಿಕೊಳ್ಳು (ದೂರಾತ್‌ಯಂ ಅಗಾಮ ಎನ್ನುವುದರ ತಾತ್ಪರ್ಯ ಹೇಳುತ್ತಾರೆ) ಯಾವ ಕಾರಣದಿಂದ ನಿನ್ನ ಪ್ರಾಪ್ತಿಗಾಗಿ ದೂರಕ್ಕೇನೇ ಬಂದಿರುವೆನೋ, (ಆದ ಕಾರಣ ಸಹಿಸಿಕೊ) (ಶ್ರೀ ವಿಷ್ಣುವು ಸದಾ ತನ್ನ ಹೃದಯದಲ್ಲಿದ್ದ ಪ್ರಯುಕ್ತ ತಾನು ಏತಕ್ಕಾಗಿ ದೂರಕ್ಕೆ ಹೋಗುವುದು? ಎಂದರೆ ಅನಾದಿಯಾದ ಸಂಸಾರ ಮಾರ್ಗದಲ್ಲಿ ದುಃಖಿತನಾದವನು ಕಥಂಚಿತ್ ಈಗ ನಿನ್ನನ್ನು ಜ್ಞಾನ ಸಂಪಾದನೆಯಿಂದ ಯಾವ ಕಾರಣದಿಂದ ಹೊಂದಿರುವೆನೋ, ಆದ ಕಾರಣ ಸಹಿಸಿಕೊ. ಅಂದರೆ ಶ್ರೀ ವಿಷ್ಣುವಿನ ಜ್ಞಾನವೇ ಸಮೀಪ ಪ್ರಾಪ್ತಿಯು, ಆದ ಕಾರಣ ಹೇಗೆ ದೂರದಿಂದ ಬಂದಿರುವ ಪ್ರಯುಕ್ತ ಅತ್ಯಲ್ಪನಾದವನದ್ದು ಅಪರಾಧವನ್ನು ದಯಾಲುಗಳು ಸಹಿಸಿಕೊಳ್ಳುತ್ತಾರೋ, ಹಾಗೆಯೇ ನೀನು ಕೂಡ ನನ್ನ ಅಪರಾಧವನ್ನು ಸಹಿಸಿಕೊಳ್ಳು) ನೀನು ಸೋಮಪಾನ ಮಾಡತಕ್ಕ ದೇವತೆಗಳಿಂದ ಪ್ರಾಪ್ಯನು. ಜನಕನು. ದೇವತೆಗಳಿಗೆ ಜ್ಞಾನದಾನ ಮಾಡುವವನು. ಸ್ವರ್ಗಭೂಮಿ ನರಕಾತ್ಮಕವಾದ ಸಂಸಾರದಲ್ಲಿ ಮನುಷ್ಯರನ್ನು ತಿರುಗಾಡಿಸುವವನು. ಭಕ್ತರಿಗೆ ಜ್ಞಾನದಾನ ಮಾಡಿ ಭಕ್ತರನ್ನು ಋಷಿಗಳನ್ನಾಗಿ ಮಾಡುವವನು. ||೧೬||

ಋ || **(೩೬೭) ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ |**

**ಅಚ್ಛ ಯಾಹ್ಯಾವಹಾ ದೈವ್ಯಂ ಜನಮಾಸಾದಯ ಬರ್ಹಿಷಿ ಯಕ್ಷಿ ಚ ಪ್ರಿಯಂ ||೧೭||**

ಅ || **ಶುಚೇ** = ಶುದ್ಧನಾದ, ಅಂಗಿರಃ =ಶರೀರಗಳಿಗೆ ಪ್ರೇರಕನಾಗಿ ಶ್ರೇಷ್ಠನಾದ, ಅಗ್ನೇ =ಎಲೋ ಶ್ರೀ ಹರಿಯೇ (ನೀನು) ಮನುಷ್ವತ್, ಅಂಗಿರಸ್ವತ್ ಯಯಾತಿವತ್, ಪೂರ್ವವತ್ = ಮನುವಿನ, ಅಂಗಿರಸ ಋಷಿಯ, ಯಯಾತಿ ರಾಜನ, ಹಾಗೆಯೇ ಇತರರಾದ ಪೂರ್ವ ಪುರುಷರ, ಮಂದಿರಗಳನ್ನು ಹೇಗೆ ತಾನೇ ಹೊಂದಿರುತ್ತಿಯೋ, ಹಾಗೆಯೇ ಸದನೇ =ನನ್ನ ಮಂದಿರವನ್ನು ಕುರಿತು ಅಚ್ಛ= (ಅಭಿಮುಖ್ಯೇ ಅಚ್ಛಮವ್ಯಯಂ ಎಂದು ಅಭಿಮುಖ್ಯಾರ್ಥದಲ್ಲಿ ನಿಪಾತವು.

ಅಚ್ಛಗತ್ಯರ್ಥವದೇಷು ಎಂದು ಗತಿ ಸಂಜ್ಞಕವು.) ಅಚ್ಛಯಾಹಿ, ಅಭಿಯಾಹಿ = (ನನಗೆ ನಿನ್ನ ಪ್ರಾಪ್ತಿಗಾಗಿ) ಇದಿರಾಗಿ ಬಾ. (ಬಂದು) ದೈವ್ಯಂ ಜನಂ =ದೇವ ಸಮೂಹವನ್ನು, ಆ ವಹ =ಕರಿಸು (ಬಂದವರನ್ನು) ಬರ್ಹಿಷಿ = ಬರ್ಹಿಸ್ಸಿನಲ್ಲಿ ಆ ಸಾದಯ =ಕೂಡ್ರಿಸು. ಪ್ರಿಯಂ = ಕೂತುಕೊಂಡ, ನಿನಗೆ ಪ್ರಿಯವಾದ ದೇವ ಸಮೂಹವನ್ನು, ಯಕ್ಷಿ ಚ =ಯಾಗ ಮಾಡು. (ಅಂದರೆ ನೀನೇ ಸಮಸ್ತ ಜೀವರಿಗೂ ಪ್ರೇರಕನಾದುದರಿಂದ ಋತ್ವಿಜರಲ್ಲಿದ್ದು ಅವರನ್ನು ಪ್ರೇರೇಪಿಸಿ ನೀನೇ ಯಜಿಸು.) ||೧೭||

ಅ || ಶುಚೇ = ಶುದ್ಧನಾದ, ಅಂಗಿರಃ =ಶರೀರಗಳಿಗೆ ಪ್ರೇರಕನಾಗಿ ಶ್ರೇಷ್ಠನಾದ, ಅಗ್ನೇ = ಎಲೋ ಶ್ರೀ ಹರಿಯೇ, (ನೀನು) ಮನುಷ್ವತ್, ಅಂಗೀರಸ್ವತ್ ಯಯಾತಿವತ್, ಪೂರ್ವವತ್ =ಮನುವಿನ, ಅಂಗಿರಸ ಋಷಿಯ, ಯಯಾತಿ ರಾಜನ, ಹಾಗೆಯೇ ಇತರರಾದ ಪೂರ್ವ ಪುರುಷರ, ಮಂದಿರಗಳನ್ನು ಹೇಗೆ ತಾನೇ ಹೊಂದಿರುತ್ತಿಯೋ, ಹಾಗೆಯೇ ಸದನೇ = ನನ್ನ ಮಂದಿರವನ್ನು ಕುರಿತು ಅಚ್ಛ = (ಅಭಿಮುಖ್ಯೇ ಅಚ್ಛಮವ್ಯ = ಎಂದು ಅಭಿಮುಖ್ಯಾರ್ಥದಲ್ಲಿ ನಿಪಾತವು. ಅಚ್ಛಗತ್ಯರ್ಥವದೇಷು ಎಂದು ಗತಿ ಸಂಜ್ಞಕವು) ಅಚ್ಛಯಾಹಿ. ಅಭಿಯಾಹಿ = (ನನಗೆ ನನ್ನ ಪ್ರಾಪ್ತಿಗಾಗಿ) ಇದಿರಾಗಿ ಬಾ (ಬಂದು) ದೈವ್ಯಂ ಜನಂ ದೇವ ಸಮೂಹವನ್ನು ಆವಹ =ಕರಿಸು. (ಬಂದವರನ್ನು) ಬರ್ಹಿಷಿ =ಬರ್ಹಿಷಿನಲ್ಲಿ ಆ ಸಾದಯ = ಕೂಡ್ರಿಸು. ಪ್ರಿಯಂ=ಕೂತುಕೊಂಡ, ನಿನಗೆ ಪ್ರಿಯವಾದ ದೇವ ಸಮೂಹವನ್ನು, ಯಕ್ಷಿ ಚ = ಯಾಗ ಮಾಡು. (ಅಂದರೆ - ನೀನೇ ಸಮಸ್ತ ಜೀವರಿಗೂ ಪ್ರೇರಕನಾದುದರಿಂದ ಋತ್ವಿಜರಲ್ಲಿದ್ದು ಅವರನ್ನು ಪ್ರೇರೇಪಿಸಿ ನೀನೇ ಯಚಿಸು.) ||೧೭||

ಭಾ || **ಯಥಾ ಮನುಶ್ಚಾಂಗಿರಾ ವಾ ಯಯಾತಿರ್ಗೃಹೇ ಪ್ರಾಪ್ತಸ್ತ್ವಂ ತಥಾ ಮದ್ಗೃಹಂ ಚ । ಅಭ್ಯಾಯಾಹ್ಯಾವಹ ದೇವಸಂಘಮಾಸಾದಯ ಬರ್ಹಿಷಿ ಯಕ್ಷಿ ಚ ಪ್ರಿಯಂ । ಯಷ್ಟಾ ಶ್ವಮೇವಾಖಿಲಜೀವಗೋಯತ್ ||೧೭||**

ಅ || ಮನುವು, ಅಂಗಿರಋಷಿಯು ಯಯಾತಿ ರಾಜನೂ ಹೇಗೆ ತಂತಮ್ಮ ಮನೆಯಲ್ಲಿ ನಿನ್ನನ್ನು ಹೊಂದಿರುತ್ತಾರೋ ಹಾಗೆಯೇ (ನನಗೆ ನಿನ್ನ ಪ್ರಾಪ್ತಿಗಾಗಿ) ನನ್ನ ಮನೆಯನ್ನು ಕುರಿತು ಬಾ. ಬಂದು ದೇವ ಸಮೂಹವನ್ನು ಕರಿಸು. ಬಂದ ದೇವತೆಗಳನ್ನು ಬರ್ಹಿಸ್ಸಿನಲ್ಲಿ ಕೂಡ್ರಿಸು. ಕೂತುಕೊಂಡ ಪ್ರಿಯರಾದ ದೇವ ಸಮಹವನ್ನು ಯಜಿಸು. (ದೇವತೆಗಳ ಆಹ್ವಾನಾದಿಗಳು ಋತ್ವಿಜರ ಕಾರ್ಯವು. ಇದನ್ನು ನಾನು ಹೇಗೆ ಮಾಡಲಿ ಎಂದರೆ) ಯಾವ ಕಾರಣದಿಂದ ನೀನೇ ಸಮಸ್ತ ಜೀವರಲ್ಲಿದ್ದು ಸರ್ವರಿಗೂ ಪ್ರೇರಕನಾಗಿರುತ್ತಿಯೋ, ಆದ ಕಾರಣ ಋತ್ವಿಜರಲ್ಲಿದ್ದು ಯಜಿಸುವವನು ನೀನೇ ||೧೭||

ಋ || **(೩೬೮) ಏತೇನಾಗ್ನೇ ಬ್ರಹ್ಮಣಾ ವಾವೃಧಸ್ವ ಶಕ್ತೀ ವಾ ಯತ್ತೇ ಚ ಕೃಮಾ ವಿದಾ ವಾ ।**
**ಉತ ಪ್ರಣೇಷ್ಯಭಿ ವಸ್ಯೋ ಅಸ್ಮಾನ್ ಸಂ ನಃ ಸೃಜ ಸುಮತ್ಯಾ ವಾಜವತ್ಯಾ ||೧೮||೩೫||೩೧||**

ಅ || ಅಗ್ನೇ = ಶ್ರೀ ಹರಿಯೇ, ಶಕ್ತೀ = ಶಕ್ತ್ಯನುಸಾರ, ವಿದಾ ವಾ =ಜ್ಞಾನಾನುಸಾರ, ಯತ್ =ಯಾವ ಬ್ರಹ್ಮ ಸ್ತೋತ್ರಾದಿಗಳನ್ನು ತೇ = ನಿನ್ನ ವಿಷಯದಲ್ಲಿ, ಚಕೃಮ = ಮಾಡಿರುತ್ತೇವೋ, ಏತೇನ ಬ್ರಹ್ಮಣಾ = ಈ ವೇದ ವಚನದಿಂದ, ವಾವೃಧಸ್ವ =ಅತಿಶಯವಾಗಿ ಅಭಿವೃದ್ಧನಾಗು. (ಅಂದರೆ ನಿನ್ನ ವೃದ್ಧಿಯನ್ನು ವ್ಯಕ್ತೀಕರಿಸು) (ಅಂದರೆ ಶಕ್ತ್ಯನುಸಾರ

ಜ್ಞಾನಾನುಸಾರ ಮಾಡಿದ ವೇದೋಕ್ತವಾದ ಸ್ತುತಿಯಿಂದ ನಮಗೆ ಪ್ರತ್ಯಕ್ಷನಾಗು) ಉತ = ಮತ್ತು, ಅಸ್ಮಾನ್ = ನಮ್ಮನ್ನು (ನಮಗೆ) ವಸ್ಯಃ = (ವಸ ಅಚ್ಛಾದನೇ) ಮಂಗಲವನ್ನು, ಅಭಿಪ್ರಣೇಷಿ =ಹೊಂದಿಸಿ ಕೊಡುತ್ತಿ. (ಅಂದರೆ) ನಃ =ನಮ್ಮನ್ನು, ವಾಜಾವತ್ಯಾ = ಅನ್ನವುಳ್ಳ (ಸಮಸ್ತ ಭೋಗಗಳಿಂದ ಕೂಡಿದ) ಸುಮತ್ಯಾ=ಒಳ್ಳೇ ಬುದ್ಧಿಯಿಂದ, ಸಂಸೃಜ =ನಿತ್ಯದಲ್ಲಿಯೂ ಕೂಡಿಸು. ಅಥವಾ ಯತ್ = ಯಾವ ಕಾರಣದಿಂದ, ಶಕ್ತೀ ವಾ ವಿದಾ ವಾ = ಶಕ್ತಿಯಿಂದಲಾಗಲೀ, ಜ್ಞಾನದಿಂದಲಾಗಲೀ ತೇ = ನಿನ್ನದ್ದಾದ, ಕರ್ಮವನ್ನು, ಚಕೃಮ = ಮಾಡಿ ಉತ್ತೇವೋ, ತತ್ =ಆದ ಕಾರಣ, ಉತ = ಒಳ್ಳೇ ಕರ್ಮಗಳನ್ನು ಮಾಡುವುದರಿಂದ, ಮಂಗಲವನ್ನು ಅಭಿಪ್ರಣೇಪಿ = (ಪ್ರಪೂರ್ವಕಾತ್ ಣೀ ಞ ಪ್ರಾಪಣೇ) ಹೊಂದಿಸಿಕೊಡು. ||೧೮||೩೫||೩೧||

**ಭಾ ||** **(1) ಸ್ಪಷ್ಟತ್ವಂ ಚ ಪ್ರಾಪ್ನುಹಿ ವೇದವಾಚಾ । (2) ತಕ್ತ್ಯಾ ಯತ್ತೇ ಚಕೃಮ ಜ್ಞಾನತೋ ವಾ (3) ವಸ್ಯೋ ಭದ್ರಂ ಪ್ರಣಯಾಸ್ಮಾನ್ ಸಮತ್ಯಾ || ಭೋಗೇ ತಯಾ ಸಂಸೃಜ ನಿತ್ಯಮೇಜ (4) ಯಸ್ಮಾಚ್ಛಕ್ತ್ಯಾ ಚಕೃಮ ತ್ವತ್ಸುಕರ್ಮ ||೧೮||೩೫||೧೨||**

ಅ || (1) ವೇದ ವಚನದಿಂದ ವ್ಯಕ್ತತ್ವವನ್ನೇ ಹೊಂದು. (ಸ್ಪಷ್ಟತ್ವವೆಂದರೆ ವ್ಯಕ್ತತ್ವವೇ. ವೃದ್ಧಿಯನ್ನು ಹೊಂದು ಎಂದರ್ಥವಲ್ಲ. (2) ಶಕ್ತ್ಯನುಸಾರ ಮತ್ತು ಜ್ಞಾನಾನುಸಾ೦ ನಿನ್ನ ವಿಷಯದಲ್ಲಿ ಯಾವ ಬ್ರಹ್ಮಸ್ತುತಿಯನ್ನು ಮಾಡಿರುತ್ತೇವೋ, (ಅಂದರೆ =ಶಕ್ತ್ಯನುಸಾರವಾಗಿಯೂ ಜ್ಞಾನಾನುಸಾರವಾಗಿಯೂ ಮಾಡಿದ ವೇದೋಕ್ತವಾದ ಸ್ತುತಿಯಿಂದ ನಮಗೆ ಪ್ರತ್ಯಕ್ಷನಾಗು.) (ಅಥವಾ ಯಾವ ಕಾರಣದಿಂದ ಶಕ್ತ್ಯಾದಿಗಳನ್ನು ಅತಿಕ್ರಮಿಸದೆ ಮಾಡಿರುತ್ತೇವೋ ಆದ ಕಾರಣ ಪ್ರತ್ಯಕ್ಷನಾಗು) (3) ಮತ್ತು ನಮ್ಮನ್ನು ಮಂಗಲವನ್ನು ಹೊಂದಿಸಿಕೊಡು. ಅಂದರೆ ನಮ್ಮನ್ನು ಸಮಸ್ತ ಭೋಗಗಳಿಂದ ಕೂಡಿದ ಒಳ್ಳೇ ಬುದ್ಧಿಯಿಂದ ಕೂಡಿಸು. (4) (ಮೊದಲು ಶಕ್ತ್ಯಾದಿಗಳನ್ನು ಬ್ರಹ್ಮ ವಿಷಯಕವಾಗಿ ವ್ಯಾಖ್ಯಾನ ಮಾಡಿಯದೆ. ಈಗ ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಯಾವ ಕಾರಣದಿಂದ ಶಕ್ತಿಯಿಂದಲೂ ಜ್ಞಾನದಿಂದಲೂ ನಿನ್ನ ವಿಷಯಕವಾದ ಒಳ್ಳೇ ಕರ್ಮವನ್ನು ಮಾಡಿರುತ್ತೇವೋ ಆದ ಕಾರಣ ಹೊಂದಿಸಿ ಕೊಡು. ||೧೮||೩೫||೧೨||

ಅವ || ೧೫|| ಋಕ್ಕುಗಳು. ೩ ವರ್ಗಗಳು. ಇಂದ್ರ ದೇವತಾಕವು. ತ್ರಿಷ್ಟುಪ್ ಛಂದಸ್ಕವು. ೩೨ನೇ ಸೂಕ್ತವು.

**ಋ ||** **(೨೬೯) ಇಂದ್ರಸ್ಯನು ವೀರ್ಯಾಣಿ ಪ್ರವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ ।**
**ಅಹನ್ನಹಿಮನ್ವಪಸ್ತತರ್ದ ಪ್ರವಕ್ಷಣಾ ಅಭಿನತ್ಪರ್ವತಾನಾಂ ||೧||**

ಅ || ನು = ಈಗಲೇ (ನಾನು) ಇಂದ್ರಸ್ಯ = ದೇವೇಂದ್ರನು, ಅಥವಾ ವಾಸುದೇವನ, ವೀರ್ಯಾಣಿ = ಕರ್ಮಗಳನ್ನೂ ಚರಿತ್ರೆಗಳನ್ನು ವಜ್ರೀ = ಈ ಇಂದ್ರನು, ಯಾನಿ ಪ್ರಥಮಾನಿ =ಯಾವ ಕರ್ಮಗಳನ್ನು ಮುಖ್ಯಗಳನ್ನಾಗಿ, ಚಕಾರ =ಮಾಡಿರುವನೋ, ಅಂತಹ ಕರ್ಮಗಳನ್ನು ಪ್ರವೋಚಂ = ಹೇಳಿರುವೆನು. (ನಿನ್ನ ಚರಿತ್ರೆಗಳು ಅನಂತಗಳಾದುದಾಗ್ಯೂ ಅವುಗಳಲ್ಲಿ ಪ್ರಧಾನ ಚರಿತ್ರೆಗಳನ್ನು ಮಾತ್ರ ಹೇಳುತ್ತೇನೆ. ಆ ಚರಿತ್ರೆಗಳನ್ನು ವಿವರಿಸಿ ಹೇಳುತ್ತೇನೆ.) (ಇಂದ್ರೋವಜ್ರೀ ಎಂದು ಹೇಳಿದುದರಿಂದ ವಜ್ರಾಯುಧದಿಂದ) ಅಹಿಂ=ಅಹಿನಾಮಕ ದೈತ್ಯ ವಿಶೇಷನನ್ನು ಅಹನ್ =ಸಂಹರಿಸಿದನು.

(ವಾಸುದೇವ ಪರವಾಗಿ ಆದರೆ) ಶ್ರೀ ಹರಿಯು ಇಂದ್ರನಲ್ಲಿ ಅಂತರ್ಯಾಮಿಯಾಗಿ ಅಹಿ ದೈತ್ಯನನ್ನು ಸಂಹರಿಸಿದನು. ಅಥವಾ ಅಹಿಂ = (ಹಿಃ ಕೃತೌ ನಿಶ್ಚಯೇ ಖ್ಯಾತೌ, ಹೀತಿ ನಿಶ್ಚಯ ವಾಚೀ ಸ್ಯಾತ್ ಎಂಬ ಪ್ರಮಾಣದಿಂದ) ನಿಶ್ಚಯ ವಾಚೀ ಸ್ಯಾತ್ ಎಂಬ ಪ್ರಮಾಣದಿಂದ) ನಿಶ್ಚಯ ವಿರೋಧಿಯಾದ ಭಕ್ತರ ಸಂಶಯವನ್ನೂ, ಅಹನ್ = (ಜ್ಞಾನೋಪದೇಶದಿಂದ) ವಿನಾಶಗೊಳಿಸಿದನು. ಮತ್ತೂ ಅನು ಅಪಃ =ಜಲಾನುಸಾರವಾಗಿ ಶತರ್ದ = (ತರ್ದಹಿಂಸಾಯಾಂ) (ಮಾರ್ಗವನ್ನೂ) ಹಿಂಸಿಸಿದನು. (ಮಾರ್ಗಕ್ಕೆ ಹಿಂಸೆಯೆಂದರೆ ಖನನವೇ) (ಅಂದರೆ ಎಲ್ಲಿ ಜಲವಿದೆಯೋ ಅಲ್ಲಿ ಮಾರ್ಗವನ್ನು ಅಗೆದನು) (ನಿರಪರಾಧಿಯಾದ ಸಂಹರಿಸಿದುದು ಹೇಗೆ ಕೊಡುತ್ತದೆ ? ಅದಕ್ಕೂ ಜಲಮಾರ್ಗ ಖನನಕ್ಕೂ ಏನು ಸಂಬಂಧವು ? ಎಂದರೆ ಅದಕ್ಕೆ ಉಪಯುಕ್ತವಾದ ಪೌರಾಣಿಕ ಕಥೆಗಳನ್ನು ಹೇಳುತ್ತಾ 2 ನೇ ಪಾದದ ತಾತ್ಪರ್ಯ ಹೇಳುತ್ತಾರೆ) (ಅಹಿನಾಮಕ ದೈತ್ಯನು ಲೋಕೋಪದ್ರವಕ್ಕಾಗಿ ಪರ್ವತಗಳಲ್ಲಿ ನದೀದ್ವಾರಗಳನ್ನು ತಡೆದು ಮೇಘಗಳ ಮೂಲಕ ಬಂದ ಮಳೆಯ ನೀರನ್ನು ಅಂತರಿಕ್ಷದಲ್ಲಿಯೇ ತಡೆದು ನಿಂತು ಬಿಟ್ಟನು. ಇಂದ್ರನು ಆ ದೈತ್ಯನನ್ನು ಸಂಹರಿಸಿ ನದೀದ್ವಾರಗಳನ್ನೂ ವಿವರಿಸಿ ಪ್ರವಾಹಕ್ಕಾಗಿ ಜಲಮಾರ್ಗವನ್ನು ಅಗೆದನು) (ವಾಸುದೇವ ಪರವಾಗಿ ಆದರೆ) ವಾಸುದೇವನಾದರೂ, ಅನು ಅಪಃ =ಭಕ್ತರು ಮಾಡಿದ ಕರ್ಮಗಳನ್ನು ನಿಮಿತ್ತೀಕರಿಸಿ, ತತರ್ದ = (ಭಕ್ತರದ್ದಾದ ಜ್ಞಾನದ ವಿಘ್ನಗಳನ್ನು) ಹಿಂಸಿಸಿದನು. ಮತ್ತೂ, ಇಂದ್ರನು, ಪರ್ವತಾನಾಂ =ಪರ್ವತಗಳ ವಕ್ಷಣಾಃ = (ವಹ ಪ್ರಾಪಣೇ) ರೆಕ್ಕೆಗಳನ್ನು ಪ್ರ ಅಭಿನತ್ =ಚೆನ್ನಾಗಿ ಛೇದಿಸಿದನು. ವಾಸುದೇವನಾದರೂ, ಪರ್ವತಾನಾಂ =ಜನ್ಮಾಖ್ಯ ಪರ್ವವುಳ್ಳ, ಜೀವರ, ವಕ್ಷಣಾಃ = (ವಚ ಪರಿಭಾಷಣೇ) ದುರ್ವಚನಗಳನ್ನೂ, ಪ್ರ ಅಭಿನತ್ = ಭಕ್ತರಿಗೆ ಸುಯುಕ್ತಿಗಳನ್ನು ಕೊಟ್ಟು ಆ ಸುಯುಕ್ತಿಗಳಿಂದ ನಿರಾಕರಿಸಿದನು. ||೧||

**ಭಾ ||** **(1) ಇಂದ್ರಸ್ಯ ವಾ ವಾಸುದೇವಸ್ಯ ವೀರ್ಯಾಣ್ಯಾ ಚಕ್ಷೇऽಹಂ ಯಾನಿ ಮುಖ್ಯಾನಿ ಚಕ್ರೇ । (2) ಅಹಿಂ ದೈತ್ಯಂ ಸಂಶಯಂ ವಾ ಜಘಾನ ಜಲಾನುಸಾರೇಣ ಚಖಾನ ಮಾರ್ಗಂ ॥ (3) ತತರ್ದ ವಿಘ್ನಾನ್ ಕರ್ಮಣಾಂ ವಾऽನುಸಾರಾದ್ವಹನಾತ್ಪಕ್ಷಾ ವಕ್ಷಣಾ ದುರ್ವಚಾಂಸಿ । ಜೀವಾನಾಂ ಚೇದ್ವಕ್ಷಣಾ ಜನ್ಮಪರ್ವವತಾಂ ಬಿಭೇದೈವ ಸುಯುಕ್ತಿಭಿಸ್ತಾಃ** **||೧||**

ಅ || (1) ಇಂದ್ರನು ಯಾವ ಚರಿತ್ರೆಗಳನ್ನು ಪ್ರಧಾನಗಳನ್ನಾಗಿ ಮಾಡಿರುವನೋ, ಅಂತಹ, ಇಂದ್ರನು ಅಥವಾ ವಾಸುದೇವನ ಚರಿತ್ರೆಗಳನ್ನು ನಾನು ಹೇಳುತ್ತೇನೆ. (2) (ಆ ಚರಿತ್ರೆಗಳನ್ನು ವಿವರಿಸುತ್ತಾರೆ.) ಇಂದ್ರನು ಅಹಿನಾಮಕ ದೈತ್ಯನನ್ನು ಸಂಹರಿಸಿದನು. ವಾಸುದೇವನಾದರೂ ಭಕ್ತರ ಸಾಂಶಯವನ್ನು ಜ್ಞಾನದಿಂದ ವಿನಾಶಗೊಳಿಸಿದನು. ಜಲವನ್ನನುಸರಿಸಿ ಮಾರ್ಗವನ್ನು ಅಗೆದನು. (ಅಂದರೆ ಜಲವಿದ್ದಲ್ಲಿ ಮಾರ್ಗವನ್ನು ಅಗೆದನು) (3) ಭಕ್ತರು ಮಾಡಿದ ಕರ್ಮಗಳನ್ನು ಅನುಸರಿಸಿ ಭಕ್ತರ ಜ್ಞಾನದ ವಿಘ್ನಗಳನ್ನು ಪರಿಹರಿಸಿದನು. ಇಂದ್ರನು ಪರ್ವತಗಳ ರೆಕ್ಕೆಗಳನ್ನು ಛೇದಿಸಿದನು. (ವಕ್ಷಣಾ ಶಬ್ದಾರ್ಥವನ್ನು ಹೇಳುತ್ತಾರೆ.) (ವಹಪ್ರಾಪಣೇ ಎನ್ನುವುದರಿಂದ ಕರಣಾರ್ಥದಲ್ಲಿ ಸನ್‌ಪ್ರತ್ಯಯವು ಸ್ತ್ರೀಲಿಂಗವು ಶಬ್ದ ಸ್ವಭಾವವು) ಹೊಂದಿಸಿ ಕೊಡುವುದರಿಂದ ರೆಕ್ಕೆಗಳು ವಕ್ಷಣಾಃ ಎನಿಸಿಕೊಳ್ಳುತ್ತವೆ. (ವಾಸುದೇವ ಪಕ್ಷದಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಜನ್ಮಾಖ್ಯ ಪರ್ವ (ಗ್ರಂಥಿವುಳ್ಳ ಜೀವರನ್ನು ವಿವಕ್ಷಾ ಮಾಡಿದರೆ ಆಗ ಆ ಜೀವರ ದುರ್ವಚನಗಳು ವಕ್ಷಣಾಃ ಎನಿಸುತ್ತವೆ. ಅಂತಹ ದುರ್ವಚನಗಳನ್ನು ಸುಯುಕ್ತಿಗಳಿಂದಲೇ ಶ್ರೀ ಹರಿಯು ನಿರಾಕರಿಸಿದನು.

ವಿ || ಮೋಕ್ಷಕ್ಕೆ ಪ್ರತಿಬಂಧಕಗಳಾದ ಜನ್ಮಗಳೆಂಬ ಪರ್ವ (ಗ್ರಂಥಿ)ಗಳಿದ್ದುದರಿಂದ ಜೀವರು ಪರ್ವತಗಳೆನಿಸುತ್ತಾರೆ

ಅಂತಹ ಕುವಾದಿಗಳಾದ ಜೀವರ ದುಷ್ಟವಚನಗಳನ್ನು ಭಕ್ತರಿಗೆ ಸುಯುಕ್ತಿಗಳನ್ನು ಹೇಳಿ ಆ ಸುಯುಕ್ತಿಗಳಿಂದ ನಿರಾಕರಿಸಿದನು. ||೧||

**ಋ || (೩.೭೦) ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।**

**ವಾತ್ರಾ ಇವ ಧೇನವಃ ಸ್ಯಂದಮಾನಾ ಅಂಜಃ ಸಮುದ್ರಮವಜಗ್ಮುರಾಪಃ ||೨||**

ಅ || (ಇಂದ್ರಃ =ಇಂದ್ರನು) ಪರ್ವತೇ =ಪರ್ವತಗಳಲ್ಲಿ, ಶಿಶ್ರಿಯಾಣಂ =ಆಶ್ರಯಿಸಿರುವ, ಅಹಿಂ=ಅಹಿನಾಮಕ ದೈತ್ಯನನ್ನು, ಅಹನ್ =ಸಂಹರಿಸಿದನು. (ಈಶ್ವರನಾದರೂ) ಪರ್ವತೇ=ಜನ್ಮವೆಂಬ ಪರ್ವದಿಂದ ಕೂಡಿರುವ ಭಕ್ತರಾದ ಜೀವರ ಸಮೂಹದಲ್ಲಿ, ಶಿಶ್ರಿಯಾಣಂ=ಆಶ್ರಯಿಸಿರುವ, ಅಹಿಂ=ಸಂಶಯವನ್ನು, ಅಹನ್=ಪರಿಹರಿಸಿದನು. ತ್ವಷ್ಟಾ=ದೇವವರ್ಧಕಿಯು, ಅಸ್ಮೈ=ಇಂದ್ರನಿಂದಾಗಿ, ಸ್ವರ್ಯಂ = (ಸ್ವು ಶಬ್ದೋಪತಾ ಪಯೋಃ) ಚೆನ್ನಾಗಿ ತೀಕ್ಷ್ಣವಾದ ವಜ್ರಂ = ವಜ್ರಾಯುಧವನ್ನು, ತತಕ್ಷ = ನಿರ್ಮಿಸಿದನು. (ಈಶ್ವರ ಪಕ್ಷದಲ್ಲಿ ಆದರೂ) ತ್ವಷ್ಟಾ = (ತ್ವಿಷ ದೀಪ್ತೌ) ಪ್ರಕಾಶ ಸ್ವರೂಪಿಯಾದ ವಿರಿಂಚನು. ಅಸ್ಮೈ =ಭಗವದ್ವಿಷಯದಲ್ಲಿ. ಸ್ವರ್ಯಂ=ಶಬ್ದ ಸಂಬಂಧಿಯಾದ ಅಂದರೆ ವೇದಜನ್ಯವಾದ, ವಜ್ರಂ=ಜ್ಞಾನಾಖ್ಯ ವಜ್ರನನ್ನು ತತಕ್ಷ=(ಭಕ್ತರಿಗಾಗಿ) ನಿರ್ಮಿಸಿದನು. (ಅಹಿ ನಾಮಕ ದೈತ್ಯನು ಸಂಹೃತನಾಗೋಣ ಏನಾಯಿತೆಂದರೆ) ಅಪಃ =ನದಿಗಳು (ಇಂದ್ರನಿಂದ ಪ್ರೇರಿತಗಳಾಗಿ) ಸ್ಯಂದಮಾನಾಃ =ಹರಿಯುತ್ತಾ, ವಾಸ್ರಾ ಇವ ಧೇನವಃ = ಅತಿ ಚಿಕ್ಕಕರು ಉಳ್ಳ ಸುರಿಸುತ್ತಿರುವ ಮೊಲೆ ಹಾಲುಳ್ಳ ಗೋವುಗಳು ಶಿಶುಗಳನ್ನು ಹೇಗೋ ಹಾಗೆ ಅಂಜಃ =ವೇಗದಿಂದ, ಸಮುದ್ರಂ =ಸಮುದ್ರವನ್ನು, ಅವಜಗ್ಮುಃ =ಹೊಂದಿದವು. ಅಥವಾ (ಅಧ್ಯಾತ್ಮಪರವಾದ ಅರ್ಥವು) ಶ್ರೀ ಹರಿಯಿಂದ ಪ್ರೇರಿತಗಳಾದ ) ಅಪಃ =ಕ್ರಿಯೆಗಳು, ಸ್ಯಂದಮಾನಾಃ = ತಡೆಯಿಲ್ಲದೆ ಇದ್ದವುಗಳಾಗಿ, ವಾಸ್ರಾ ಇವದೇನವಃ = ಹಿಂದಿನಂತೆ ಅರ್ಥ) ಸಮುದ್ರ =ಸರ್ವೋತ್ಕೃಷ್ಟನಾದ ಶ್ರೀ ಹರಿಯನ್ನು ಕುರಿತು, ಅವಜಗ್ಮುಃ =ಹೊಂದುತ್ತೇವೆ. (ಅಂದರೆ ಸಂಶಯವು ಪರಿಹಾರವಾದ ಮೇಲೆ ಭಕ್ತರು ಭಗವಂತನನ್ನೇ ಪೂಜಿಸುತ್ತಾರೆ.) ||೨||

**ಭಾ || ತ್ವಷ್ಟಾತ್ವೇತಜ್ಜ್ಞಾನವಜ್ರಂ ವಿರಿಂಚಸ್ತತಕ್ಷೈ ತದ್ವಿಷಯಂ ತ್ವಿಡಾತ್ಮಾ । ಸ್ವರ್ಯಂ ವಜ್ರಂ ನಿಶಿತಂ ಶಬ್ದಜಂ ವಾ ಶಿಶುವತ್ಸಾ ಗಾವ ಇವೈತದೀರಿತಾಃ । ಅಂಜಸ್ಸಮುದ್ರಂ ಜಗ್ಮುರಾಪಃ ಕ್ರಿಯಾ ವಾ ಸಮುದ್ರಿಕ್ತಂ ದೇವಮೇನಂ ವ್ರಜಂತಿ ||೨||**

ಅ || (ಪ್ರಥಮ ಪಾದಾರ್ಥವು ಸ್ಪಷ್ಟವೇ ಆಗಿರುವುದರಿಂದ ೨ನೇ ಪಾದವನ್ನು ಶ್ರೀ ವಿಷ್ಣು ವಿಷಯಕವಾಗಿ ವ್ಯಾಖ್ಯಾನ ಮಾಡುತ್ತಾರೆ.) ಯಾವ ಕಾರಣದಿಂದ ಚತುರ್ಮುಖನು ಪ್ರಕಾಶ ಸ್ವರೂಪನೋ, ಆದ ಕಾರಣ ಚತುರ್ಮುಖನು ಭಗವದ್ವಿಷಯಕವಾದ, ಜ್ಞಾನಾಖ್ಯ ವಜ್ರವನ್ನು ಭಕ್ತರಿಗಾಗಿ ನಿರ್ಮಿಸಿದನು. ಏತತ್ತು ಯಾವ ವಜ್ರಾಯುಧದಿಂದ ಅಹಿ ದೈತ್ಯನನ್ನು ಸಂಹಸಿರುವನೋ ಅಂತಹುದು ವಜ್ರಾಯುಧವು. (ಏತತ್ ಎಂಬ ಪದವನ್ನು ಗ್ರಹಣ ಮಾಡಿದುದರಿಂದ ಪ್ರಸಿದ್ಧನಾದ ಇಂದ್ರನಲ್ಲಿ (ಇಂದ್ರ ಪರವಾಗಿ) ಅರ್ಥವನ್ನು ಇಟ್ಟುಕೊಳ್ಳಬೇಕೆಂದು ಸೂಚಿತವಾಯ್ತು. (ಹೇಗೆಂದರೆ

ದೇವವರ್ಧಕಿಯು ಇಂದ್ರನಿಗಾಗಿ ವಜ್ರಾಯುಧವನ್ನು ನಿರ್ಮಿಸಿದನು. ಎಂದು) (೩) (ಸ್ವರ್ಯಂ ಎನ್ನುವುದು ವಜ್ರಕ್ಕೆ ವಿಶೇಷಣವು. ಅದನ್ನು ಪ್ರಸಿದ್ಧವಾದ ಇಂದ್ರಾಯುಧದಲ್ಲಿಯೂ ಜ್ಞಾನದಲ್ಲಿಯೂ ವ್ಯಾಖ್ಯಾನ ಮಾಡುತ್ತಾರೆ) ಸ್ವರ್ಯಂ ಕಾಯಿಸಲ್ಪಟ್ಟ ಅಂದರೆ ಹರಿತವಾದ ವಜ್ರವನ್ನು ನಿರ್ಮಿಸಿದನು. (ಶಸ್ತ್ರಗಳು ಕಾಯಿಸಿದರೆ ಹರಿತಗಳಾಗುತ್ತವೆ) ಚತುರ್ಮುಖನು ಭಗವದ್ವಿಷಯದಲ್ಲಿ) ವೇದ ಜನ್ಯವಾದ ಜ್ಞಾನಾಖ್ಯ ವಜ್ರವನ್ನು (ಭಕ್ತರಿಗಾಗಿ ನಿರ್ಮಿಸಿದನು) (ಉತ್ತರಾರ್ಧವನ್ನು ಇಂದ್ರನಲ್ಲಿಯೂ, ಶ್ರೀ ವಿಷ್ಣುವಿನಲ್ಲಿಯೂ ವ್ಯಾಖ್ಯಾನ ಮಾಡುತ್ತಾರೆ.) (ಅಹಿ ದೈತ್ಯನು ಸಂಹೃತನಾಗೋಣ ಈ ಇಂದ್ರನಿಂದ ಪ್ರೇರಿತಗಳಾದ ನದಿಗಳು ಹರಿಯುವುಗಳಾಗಿ ಚಿಕ್ಕ ಕರು ಉಳ್ಳ, ಸುರಿಯುತ್ತಿರುವ ಮೊಲೆ ಹಾಲು ಉಳ್ಳ ಗೋವುಗಳು ಶಿಶುಗಳನ್ನು ಹೇಗೋ ಹಾಗೆ ಪ್ರತಿಬಂಧಕವಿಲ್ಲದೇನೇ ಸಮುದ್ರವನ್ನು ಸೇರಿದುವು. ಅಥವಾ ಶ್ರೀ ಹರಿಯಿಂದ ಪ್ರೇರಿತಗಳಾದ ಕ್ರಿಯೆಗಳು ಪ್ರತಿಬಂಧಕವಿಲ್ಲದ ವ್ಯಾಪಾರವುಳ್ಳವುಗಳಾಗಿ ಸರ್ವೋತ್ತಮನಾದ ಶ್ರೀ ಹರಿಯನ್ನು ಕುರಿತು ಹೊಂದುತ್ತಾರೆ. ಅಂದರೆ ಸಂಶಯವು ಪರಿಹಾರವಾಗೋಣ. ಭಗವದ್ಭಕ್ತರು ಭಗವಂತನನ್ನೇ ಹೊಂದುತ್ತಾರೆ) ॥೨॥

**ಋ ॥ (೩.೭೧) ವೃಷಾಯಮಾಣೋಽವೃಣೀತ ಸೋಮಂ ತ್ರಿಕದ್ರುಕೇಷ್ವಪಿ ಬತ್ಸುತಸ್ಯ ।**

**ಆ ಸಾಯಕಂ ಮಘವಾಽದತ್ತ ವಜ್ರಮಹನ್ನೇನಂ ಪ್ರಥಮಜಾಮಹೀನಾಂ ॥೩॥**

ಅ ॥ (ಇಂದ್ರನು) ವೃಷಾಯಮಾಣಃ =ವೃಷಭದಂತೆ ಆಚರಿಸುವವನಾಗಿ, (ಅಂದರೆ ತೃಷೆಯಿರುವ ಎತ್ತು ಹೇಗೆ ನೀರನ್ನು ಸ್ವೀಕರಿಸುತ್ತದೋ ಹಾಗೆಯೇ) ಸೋಮಂ = ಸೋಮವನ್ನು, ಅವೃಣೀತ = ಸ್ವೀಕರಿಸಿದನು. (ಸ್ವೀಕಾರ ಮಾಡಿ) ತ್ರಿಕದ್ರುಕೇಷು = (ತ್ರಿ=ಮೂರು ಸವನಗಳಲ್ಲಿ ಕ =ಸುಖವು, ದ್ರುತಂ =ಪ್ರಾಪ್ತವಾಯ್ತು ಎಂಬ ವ್ಯುತ್ಪತ್ತಿಯಿಂದ ತ್ರಿಕದ್ರುಕ ಎಂದು ಹೆಸರುಳ್ಳ) ಪ್ರಾತಃ ಅ ॥ (ಇಂದ್ರನು) ವೃಷಾಯಮಾಣಃ =ವೃಷಭದಂತೆ ಆಚರಿಸುವವನಾಗಿ, (ಅಂದರೆ ತೃಷೆಯಿರುವ ಎತ್ತು ಹೇಗೆ ನೀರನ್ನು ಸ್ವೀಕರಿಸುತ್ತದೋ ಹಾಗೆಯೇ) ಸೋಮಂ = ಸೋಮವನ್ನು, ಅವೃಣೀತ = ಸ್ವೀಕರಿಸಿದನು. (ಸ್ವೀಕಾರ ಮಾಡಿ) ತ್ರಿಕದ್ರುಕೇಷು = (ತ್ರಿ=ಮೂರು ಸವನಗಳಲ್ಲಿ ಕ =ಸುಖವು, ದ್ರುತಂ =ಪ್ರಾಪ್ತವಾಯ್ತು ಎಂಬ ವ್ಯುತ್ಪತ್ತಿಯಿಂದ ತ್ರಿಕದ್ರುಕ ಎಂದು ಹೆಸರುಳ್ಳ) ಪ್ರಾತಃ ಸವನ, ಮಾಧ್ಯಂ ಸವನ, ಸಾಯಂ ಸವನ ಎಂಬ ಮೂರು ಸವನಗಳಲ್ಲಿ, ಸುತಸ್ಯ =ಸೋಮವನ್ನು ಅಪಿಬತ್ ಕುಡಿದನು. ಅಧ್ಯಾತ್ಮಪರವಾದುದು) ತ್ರಿಕದ್ರುಕೇಷ=ಬುದ್ಧ್ಯಾದಿ ಸ್ಥಾನಗಳಲ್ಲಿರತಕ್ಕ, ಸುತಸ್ಯ =ಮನಸ್ಸನ್ನು, ಅಪಿಬತ್=ಕುಡಿದನು (ಅಂದರೆ ಬುದ್ಧಿ ಮೊದಲಾದ ಮೂರು ಸ್ಥಾನಗಳಲ್ಲಿರತಕ್ಕ ಭಗವದ್ವಿಷಯಕವಾದ ಮನಸ್ಸನ್ನು ಕುಡಿದನು. (ಅಂದರೆ ಭಗವದ್ವಿಷಯಕಧ್ಯಾನದಿಂದ ಸಂತುಷ್ಟನಾದನು.) ಮಘವಾ =ಧನಾದಿಗಳುಳ್ಳ ಇಂದ್ರನು, ಸಾಯಕಂ = (ಷೋ ಅಂತಕರ್ಮಣಿ, ಯತ್, ಕೃಞ ಧಾತುವಿಗೆ ಡಪ್ರತ್ಯಯವು) ದೈತ್ಯರ ನಾಶವನ್ನು ಮಾಡತಕ್ಕ, ವಜ್ರಂ =ವಜ್ರಾಯುಧವನ್ನು, ಅಥವಾ ಸಾಯಕಂ=ಅವಿದ್ಯಾದಿಗಳಿಗೆ ನಾಶವನ್ನು ಮಾಡತಕ್ಕ, ವಜ್ರಂ =ಜ್ಞಾನಾಖ್ಯ ವಜ್ರವನ್ನು, ಆ ಅದತ್ತ=ಚೆನ್ನಾಗಿ ಸ್ವೀಕರಿಸಿದನು. (ಅದರಿಂದ) ಅಹೀನಾಂ=ಅಹಿನಾಮಕರಾದ ದೈತ್ಯರ ಮಧ್ಯದಲ್ಲಿ, ಪ್ರಥಮಜಾಂ=ಮುಖ್ಯನಾದ, ಏನಂ=ಈ ಅಹಿನಾಮಕ ದೈತ್ಯನನ್ನು ಅಹನ್=ಸಂಹರಿಸಿದನು. (ಹಾಗೆಯೇ ಶ್ರೀ ಹರಿಯು) ಸಾಯಕಂ=ಅಜ್ಞಾನಾದಿಗಳನ್ನು ನಾಶಗೊಳಿಸುವ, ವಜ್ರಂ=ಜ್ಞಾನವನ್ನು ಆ ಅದತ್ತ=(ಭಕ್ತರ ಮನಸ್ಸಿನಲ್ಲಿ) ಹುಟ್ಟಿಸಿದನು. (ಅದರಿಂದ) ಅಹೀನಾಂ=(ಹಿಗತೌ

ಶತಃ ನಞ್ ಸಮಾಸವು) ಜ್ಞಾನಕ್ಕೆ ವಿರೋಧಿಗಳಾದ ಪಾಪಾದಿಗಳ ಮಧ್ಯದಲ್ಲಿ ಪ್ರಥಮಜಾಂ=ಮುಖ್ಯವಾದ, ಏನಂ=ಈ ಸಂಶಯವನ್ನು ಅಹನ್=ಪರಿಹರಿಸಿದನು. ||೩||

ಭಾ || (೧) ವವ್ರೇ ಸೋಮಂ ತೃಷಿತೋ ಯದ್ವದೇವ ವೃಷಾಽಪಿಬತ್ಸವನೇಷು ತ್ರಿಷು ಸ್ಮ || (೨) ಸವನಾನಾಂ ಕದ್ರುಕತ್ವಂ ದ್ರುತಂ ಯತ್ಕಮತ್ರ ಸೋಮೋ ಧ್ಯಾನಯೋಗೇ ಮನೋ ವಾ || (೩) ಸಾಯಂಕರಂ ಲಯಕೃಜ್ಜ್ಞಾನಮೇವ ಸಮಾದದೇ ಸಂಶಯ ಮೀಶವದ್ವಾ ||೩||

ಅ|| (೧) ತೃಷೆಯಿರುವ ಎತ್ತು ನೀರನ್ನು ಹೇಗೆ ಸ್ವೀಕರಿಸುತ್ತದೋ, ಹಾಗೆಯೇ ಇಂದ್ರನು ೩ ಸವನಗಳಲ್ಲಿ ಸೋಮವನ್ನು ಸ್ವೀಕರಿಸಿದನು. (೨) (ಸವನಗಳಲ್ಲಿ ಕದ್ರುಕ ಶಬ್ದವನ್ನು ನಿರ್ವಚನ ಮಾಡುತ್ತಾರೆ.) ಯಾವ ಕಾರಣದಿಂದ ಈ ಸವನಗಳಲ್ಲಿ ಸುಖವು ಪ್ರಾಪ್ತವಾಗಿದೆಯೋ, ಆದ ಕಾರಣ ಸವನಗಳಿಗೆ ಕದ್ರುಕ ಶಬ್ದ ವಾಚ್ಯತ್ವವು. (ಕಂ=ಸುಖವು, ದ್ರುಕಂ=ದ್ರುತಂ=ಪ್ರಾಪ್ತವಾಯ್ತು, ಅತ್ರ=ಇಲ್ಲಿ. ಎಂಬ ವ್ಯುತ್ಪತ್ತಿಯಿಂದ) (ಆದ್ಯಾತ್ಮ ಪರವಾಗಿ ವ್ಯಾಖ್ಯಾನ ಮಾಡುತ್ತಾರೆ) ಧ್ಯಾನ ಯೋಗದಲ್ಲಿ ಮನಸ್ಸು ಸೋಮವೆನಿಸುತ್ತದೆ. (ಆಧ್ಯಾತ್ಮದಲ್ಲಿ ೩ ಆಧಾರಗಳು ತ್ರಿಕದ್ರುಕವೆನಿಸುತ್ತವೆ. ಹೇಗೆಂದರೆ ಶರೀರದಲ್ಲಿ ಮನಸ್ಸು ಇರುತ್ತದೆ. ಹಾಗೆಯೇ ಇಂದ್ರಿಯಗಳಲ್ಲಿ ಜ್ಞಾನ ಹುಟ್ಟುವ ಕಾಲದಲ್ಲಿ ಮನಸ್ಸು ಇರುತ್ತದೆ. ಗೋಲಕರೂಪ ಹೃದಯದಲ್ಲಿಯೂ ಮನಸ್ಸು ಇರುತ್ತದೆ. ಆದ ಕಾರಣ ಸೋಮನಾಮಕ ಮನಸ್ಸಿಗೆ ಶರೀರ ಇಂದ್ರಿಯ ಹೃದಯ ಇವು ಮೂರು ಆಧಾರಗಳು) (೩) (ಸಾಯಕ ಎನ್ನುವುದು ವಜ್ರದ ಹೆಸರು. ಆದ ಕಾರಣ ಪುನರುಕ್ತಿಪರಿಹಾರಕ್ಕಾಗಿ ನಿರ್ವಚನ ಮಾಡುತ್ತಾರೆ.) ದೈತ್ಯರನ್ನು ನಾಶಗೊಳಿಸುವ ವಜ್ರಾಯುಧವನ್ನೂ ಸ್ವೀಕರಿಸಿದನು. ಹಾಗೆಯೇ ಅಜ್ಞಾನಾದಿಗಳನ್ನು ನಾಶಗೊಳಿಸುವ ಜ್ಞಾನವನ್ನು ಭಕ್ತರ ಮನಸ್ಸಿನಲ್ಲಿ ಹುಟ್ಟಿಸಿದನು. (ಏವಂಚ ಪ್ರಸಿದ್ಧ ವಜ್ರಾಯುಧವು ದೈತ್ಯರನ್ನು ನಾಶಗೊಳಿಸುವುದು. ಜ್ಞಾನವಾದರೂ ಆ ವಿದ್ಯಾದಿಗಳನ್ನು ನಾಶಗೊಳಿಸುವುದು.) (ವಿಷ್ಣುಪಕ್ಷದಲ್ಲಿ) ಏನಂ ಎನ್ನುವುದಕ್ಕೆ ಸಂಶಯವನ್ನು (ಎಂದರ್ಥವು) (ವೃಷಾಯಾಮಾಣಃ ಎನ್ನುವುದಕ್ಕೆ ಅರ್ಥಾಂತರವನ್ನು ಹೇಳುತ್ತಾರೆ.) ಭಕ್ತರಿಗೆ ಅಭೀಷ್ಟವನ್ನು ಕೊಡತಕ್ಕ ಸರ್ವೇಶ್ವರನಾದ ಶ್ರೀ ಹರಿಯಂತೆ ಆಚರಿಸುವವನಾಗಿ (ಇಂದ್ರನು ಸೋಮವನ್ನು ಸ್ವೀಕರಿಸಿದನು.) ||೩||

ಋ || (೩.೭.೨) ಯಂದ್ರಿದ್ರಾಹನ್ ಪ್ರಥಮಜಾಮಹೀನಾಮಾನ್ಮಾಯಿನಾಮ ಮಿನಾಃ ಪ್ರೋತಮಾಯಾಃ |

ಆತ್ಸೂರ್ಯಂ ಜನಯನ್ ದ್ಯಾಮುಷಾಸಂ ತಾದೀತ್ನಾ ಶತ್ರುಂ ನ ಕಿಲಾ ವಿವಿತ್ಸೇ ||೪||

ಅ || ಇಂದ್ರ = ಎಲೋ ಇಂದ್ರನೇ, (ನೀನು) ಯತ್ =ಯಾವ ಕಾರಣ ದೆಸೆಯಿಂದ, ಅಹೀನಾ=ಅಹಿನಾಮಕ ದೈತ್ಯರಲ್ಲಿ, ಪ್ರಥಮಜಾಂ=ಮುಖ್ಯನಾದ, ಏನಂ =ಈ ಅಹಿನಾಮಕ ದೈತ್ಯನನ್ನು ಅಹನ್=ಸಂಹರಿಸಿರುತ್ತಿಯೋ, ಅತ್ = ಆ ಕಾರಣ ದೆಶೆಯಿಂದ ಮಾಯಿನಾಂ=ಕಪಟವುಳ್ಳ ಇತರ ದೈತ್ಯರ, ಮಾಯಾ ಉತ ವ್ಯಾಜ ರೂಪಗಳಾದ ಮತ್ತು ಕಪಟ ರೂಪಗಳಾದ ಮಾಯೆಗಳನ್ನು, ಪ್ರ ಅಮಿನಾಃ = (ಮಿ ಞ ಹಿಂಸಾಯಂ) ನಾಶಗೊಳಿಸಿದಿ. ಮತ್ತು ಅತ್ =ಅದರಿಂದಲೇ (ನೀನು) ಸೂರ್ಯಂ ಧ್ಯಾಂ ಉಷಸಂಚ =ಸೂರ್ಯಾದಿಗಳನ್ನು ಜನಯನ್ =ಹುಟ್ಟಿಸುವವನಾಗಿರುತ್ತಿ. (ಅಂದರೆ ಸೂರ್ಯ

ಸ್ವರ್ಗ ದಿನಾದಿಗಳನ್ನು ಮಾಡುವವನಾಗುತ್ತಿ. ಏವಂಚ ಪೂರ್ವದಲ್ಲಿ ಅಹಿನಾಮಕ ದೈತ್ಯನು ಸೂರ್ಯಾದಿಗಳ ವ್ಯಾಪಾರಗಳನ್ನು ತಡೆದಿರುವನು. ಆ ದೈತ್ಯನನ್ನು ಕೊಂದ ತಿರುಗಿ ಸೂರ್ಯಾದಿಗಳ ವ್ಯಾಪಾರಗಳನ್ನು ಮಾಡಿಸಿರುವನು.) (ಆದಾಗ್ಯೂ ಅಹಿ ದೈತ್ಯನನ್ನು ಸಂಹರಿಸಿದುದರಿಂದಲೇ ಮುಖ್ಯತ್ವವು. ಮುಖ್ಯತ್ವವು ಹೇಗೆಂದರೆ) ತಾದೀತ್ನಾ=ಅಷ್ಟು ಬಲವುಳ್ಳ ಅಹಿನಾಮಕ ದೈತ್ಯನಿಗೆ ಸಮಾನ ಬಲವುಳ್ಳ ಇನ್ನೊಬ್ಬ ಶತ್ರುಂ=ಶತ್ರುವನ್ನು, ನ ವಿವಿತ್ಸೇ ಕಿಲ = (ವಿದ್ಲಲ್ ಲಾಭೇ) ಹೊಂದಿರುವುದಿಲ್ಲವಷ್ಟೆ. (ಈಶ್ವರ ಪಕ್ಷದಲ್ಲಿ ಆದರೂ) ಇಂದ್ರ =ಎಲೋ ಪರಮೇಶ್ವರನೇ, ಯತ್ ಯಾವ ಕಾರಣದಿಂದ, ಅಹೀನಾಂ ಜ್ಞಾನ ವಿರೋಧಿಗಳಾದ ಪಾಪಗಳಲ್ಲಿ, ಪ್ರಥಮಜಾಂ=ಮುಖ್ಯವಾದ, ಭಕ್ತರ ಸಂಶಯವನ್ನು (ನೀನು) ಅಹನ್=ನಾಶಗೊಳಿಸಿರುತ್ತಿ. ಅತ್=ಆ ಕಾರಣ, ಮಾಯಿನಾಂ=ಮಾಯಾವಾದಿಗಳ, ಮಾಯಾ ಉತ =ಕುಟಿಲೋಕ್ತಿಗಳನ್ನು (ಸಂಶಯವನ್ನು ಪರಿಹರಿಸಿಕೊಂಡಿರುವ ತಮ್ಮ ಜನರಿಂದ ಮಾಯಾವಾದಿಗಳನ್ನು ಜಯಿಸಿ) (ಪ್ರ ಅಮಿನಾಃ = ನಾಶಗೊಳಿಸಿರುತ್ತಿ. ಅತ್ =ಆದ ಕಾರಣ, ಸೂರ್ಯಂ=ಜ್ಞಾನಕ್ಕೆ ಕಾರಣರಾದ ಆಚಾರ್ಯರನ್ನು ತತ್ಸಂಬದ್ಧವಾದ, ದ್ಯಾಂ=ಮೋಕ್ಷವನ್ನು ಉಪಸಂಚ=ಜ್ಞಾನವನ್ನೂ ಕೂಡ. ಜಯಯನ್=ಭಕ್ತರಿಗೆ ಮಾಡಿರುತ್ತಿ. (ಅಂದರೆ ಆಚಾರ್ಯರ ಉಪದೇಶದಿಂದಲೇ ಜ್ಞಾನ ಮೋಕ್ಷಗಳು ಲಭಿಸುವುವು.) ||೪||

ಭಾ || (೧) ಅಹನ್ನೇನಂ ಪ್ರಥಮಂ ಮಾಯಿನಾಂ ಚ ವ್ಯನಾಶಯೋ ವ್ಯಾಜರೂಪಾಶ್ಚ ಮಾಯಾಃ । (೨) ತತಶ್ರಿ ಸೂರ್ಯದ್ಯುದಿನಾದೇಶ್ಚ ಕರ್ತಾ ತ್ವಮೇವ ತಾವದ್ಬಲ ತೋ ನ ಶತ್ರುಂ || ಲಭಸೇ (೩) ಮಾಯಾವಾದಿನಾಂ ವ್ಯಾಽಥ ಮಾಯಾ ವ್ಯನಾತಯಃ ಸ್ವಜನೈಸ್ತ್ವಜ್ಞಯೇನ ||೪||

ಅ || (೧) (ಇಂದ್ರನೇ ಯಾವ ಕಾರಣದಿಂದ ಅಹಿನಾಮಕ ದೈತ್ಯರಲ್ಲಿ) ಮುಖ್ಯನಾದ ಈ ಅಹಿನಾಮಕ ದೈತ್ಯನನ್ನು ಸಂಹರಿಸಿರುತ್ತಿಯೋ ಆ ಕಾರಣ ಕಪಟವುಳ್ಳ ಇತರ ದೈತ್ಯರ ವ್ಯಾಜರೂಪಗಳಾದ ಮತ್ತು ಕಪಟ ರೂಪಗಳಾದ ಮಾಯೆಗಳನ್ನು ನಾಶಗೊಳಿಸಿರುತ್ತಿ. (೨) ಆ ಕಾರಣದಿಂದಲೇ ಸೂರ್ಯ ಸ್ವರ್ಗ ದಿನಾದಿಗಳಿಗೂ ಉತ್ಪಾದಕನಾಗಿರುತ್ತಿ. (ಪೂರ್ವದಲ್ಲಿ ಸೂರ್ಯಾದಿಗಳ ವ್ಯಾಪಾರಗಳು ಅಹಿನಾಮಕ ದೈತ್ಯನಿಂದ ತಡೆಯಲ್ಪಟ್ಟಿದ್ದವು. ಆತನನ್ನು ಸಂಹರಿಸಿ ಪುನಃ ಆ ವ್ಯಾಪಾರಗಳನ್ನು ಮಾಡಿಸುವವನಾಗಿರುತ್ತಿ.) ಅಷ್ಟು ಬಲವುಳ್ಳ ಅಂದರೆ ಅಹಿನಾಮಕ ದೈತ್ಯನ ಸಮಾನ ಬಲವುಳ್ಳ ಇನ್ನೊಬ್ಬ ಶತ್ರುವನ್ನು ಎಲ್ಲಿಯೂ ಹೊಂದಲೇ ಇಲ್ಲ. (೩) (ಪರಮೇಶ್ವರನಲ್ಲಿ ಲೇಶತಃ ವ್ಯಾಖ್ಯಾನ ಮಾಡುತ್ತಾರೆ.) ಅಥವಾ (ಯಾವ ಕಾರಣದಿಂದ ಜ್ಞಾನ ವಿರೋಧಿಗಳಲ್ಲಿ ಮುಖ್ಯವಾದ ಭಕ್ತರ ಸಂಶಯವನ್ನು ನೀನು ವಿನಾಶಗೊಳಿಸಿರುತ್ತಿಯೋ, (ಸಂಶಯಕ್ಕೆ ಸದೃಶವಾದ ಶತ್ರು ಹೊಂದಲಿಲ್ಲ) ಆದಕಾರಣ ವಿರುದ್ಧವಾದಿಗಳ ಕುಟಿಲೋಕ್ತಿಗಳನ್ನು ಸಂಶಯವನ್ನು ಪರಿಹರಿಸಿ ಕೊಂಡಿರುವ ಸ್ವಜನರಿಂದ ಮಾಯಾವಾದಿಗಳನ್ನು ಜಯಿಸಿ ವಿನಾಶಗೊಳಿಸಿರುತ್ತಿ. ||೪||

ಋ || (೩೭೩) ಅಹನ್ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ ।

ಸ್ಕಂಧಾಂಸೀವ ಕುಲಿಶೇನಾ ವಿವೃಕ್ಣಾಽಹಿಃ ಶಯತ ಉಪಪೃಕ್ಪೃಥಿವ್ಯಾಃ ||೫||೩೬||

ಅ ॥ ಇಂದ್ರಃ=ಇಂದ್ರನು, ಶ್ರೀಹರಿಯು, ಮಹತಾ=ಶ್ರೇಷ್ಠವಾದ, ವಧೇನ=ಸಂಹಾರ ಸಾಧನವಾದ, ವಜ್ರೇಣ=ವಜ್ರಾಯುಧದಿಂದ, ವೃತ್ರಂ=ವೃತ್ರನೆಂಬ ದೈತ್ಯನನ್ನು ಅಥವಾ ಅಜ್ಞಾನವನ್ನು, ವೃತ್ರತರಂ=ವೃತದೈತ್ಯನಿಗಿಂತಲೂ ಅಧಿಕನಾದ ವೃತ್ರತರನಾಮಕ ದೈತ್ಯನನ್ನು ಅಥವಾ ಮಿಥ್ಯಾಜ್ಞಾನವನ್ನು, ವ್ಯಂಸಂ= (ವಿಪೂರ್ವಾತ್ ಅಮಗತ್ಯಾದೌ, ಸಪ್ರತ್ಯಯಃ ವಿರುದ್ಧ ಜ್ಞಾನಾರ್ಥಕಃ) ನಷ್ಟವಾದ ಭುಜಶಿರಸ್ಸಿನ ಸಂಧಿಯುಳ್ಳವನನ್ನಾಗಿ (ಅಂದರೆ ಶಿರಸ್ಸನ್ನು ಛೇದಿಸಿ) ಅಹನ್=ಸಂಹರಿಸಿದನು. ವೃತ್ರಾದಿ ಶಬ್ದವಾಚ್ಯವಾದ ಅಜ್ಞಾನಾದಿಗಳನ್ನು ಶ್ರೀಹರಿಯ ಜ್ಞಾನದಿಂದ ಪರಿಹರಿಸಿದನು. ಹೀಗೆಯೇ ವೃತ್ರ ದೈತ್ಯನನ್ನೂ, ವೃತ್ರತರ ನಾಮಕ ದೈತ್ಯನನ್ನು ಅಹಿನಾಮಕ ದೈತ್ಯನನ್ನು, ಹೀಗೆ ಈ ಮೂವರನ್ನು ಇಂದ್ರನು ಸಂಹರಿಸಿದನು. ಆದಕಾರಣ, ವಿವೃಕ್ಣಾ= (ವಿಪೂರ್ವಾತ್ ಓವ್ರಶ್ಚೂ ಛೇದನೇ ಇತ್ಯಸ್ಮಾತ್‌ಕ್ತಪ್ರತ್ಯಯಃ) ವಿಶೇಷತಃ ಛಿನ್ನಗಳಾದ, ಸ್ಕಂಧಾಂಸೀವ= (ಸ್ಕಂದಿರ್‌ಗತಿ ಶೋಷಣಯೋಃ, ಅಸ್ ಪ್ರತ್ಯಯ. ದಕಾರಕ್ಕೆ ಧಕಾರ) ಮರದ ಗೆಲ್ಲುಗಳು ಹೇಗೋ ಹಾಗೆಯೇ ಕುಲಿಶೇನ=ವಜ್ರಾಯುಧದಿಂದ, (ಛಿನ್ನ ಛಿನ್ನರಾದ) ಅಹಿವೃತ್ರ ವೃತ್ರತರರು, ಪೃಥಿವ್ಯಾಃ ಉಪಸ್ಪೃಕ್=(ಪೃಚೀ ಸಂಪರ್ಕೇ) ಪೃಥಿವೀ ಸಂಪರ್ಕವುಳ್ಳವರಾಗಿ, ಶಯತೇ=(ಶೀಙ್ ಸ್ವಪ್ನೇ) ಮಲಗಿದರು. (ಅಂದರೆ ಭೂಮಿಯಲ್ಲಿ ಬಿದ್ದರು.) (ಅಧ್ಯಾತ್ಮಪರವಾದ ಅರ್ಥವು.) ಕುಲಿಶೇನ=(ಕುಲಂ ಅಸ್ಯಾಸ್ತೀತಿ ಕುಲೀ) ಬ್ರಹ್ಮಜ್ಞಾನಿಯು. (ತನ್ನ ಕುಲಕ್ಕೆ ಸುಖಕ್ಕೆ ಕಾರಣನಾದುದರಿಂದ ಬ್ರಹ್ಮಜ್ಞಾನಿಯು ಕುಲೀ ಎನಿಸುತ್ತಾನೆ.) (ಕುಲಿನಃ ಶಂ=ಸುಖವು ಯಸ್ಮಾದ್ಭವತಿ) ಕುಲಿಶೇನ=ಜ್ಞಾನದಿಂದ, ಅಹಿಃ=ಜ್ಞಾನ ವಿರೋಧಿಗಳಾದ ಪಾಪ ಅಜ್ಞಾನ ಸಂಶಯಃ ಮಿಥ್ಯಾಜ್ಞಾನಗಳು, ಪೃಥಿವ್ಯಾಃ ಉಪಸ್ಪೃಕ್=ಬುದ್ಧಿಸಂಬದ್ಧಗಳು. ಬುದ್ಧಿಯಲ್ಲಿರುವವುಗಳು, ವಿವೃಕ್ಣಾಃ=ಚೆನ್ನಾಗಿ ಛಿನ್ನಗಳಾದ ಸ್ಕಂಧಾಂಸೀವ=ಮರದ ಗೆಲ್ಲುಗಳಂತೆ ಶಯತೇ=ಮಲಗುತ್ತವೆ. (ಅಂದರೆ ನಷ್ಟಗಳಾದುವು.) ॥೫॥

ಭಾ ॥ (೧) ಅಹನ್ ವೃತ್ರಂ ವ್ಯಂಸತೋಧಿಕಂ ಚ (೨) ತಮೋಮಿಥ್ಯಾಪ್ರತ್ಯಯೌ ವ್ಯಂಸನಾದ್ವಾ । (೩) ಸ್ಕಂಧಾಸ್ತರೋರ್ಯದ್ವದಥೋ ವಿವೃಕ್ಣಾ ಅಹಿಶ್ಚ ವಜ್ರೇಣ್ಣ (೪) ಕುಲಸ್ಯ ಶಂಕೃತೇಃ ॥ ವಿದ್ಯಾವಾಮ್ನಾ ಕುಲಿಶೋ (೫) ಬುದ್ಧಿರೇವ ಪೃಥಿವ್ಯಾಖ್ಯಾ ಸಂಶಯ ಸ್ತದ್ಗತೋ ಯತ್ ॥ ಅತಃ ಪೃಥಿವ್ಯಾ ಉಪಸ್ಪೃಕ್ ॥೫॥

ಅ ॥ (೧) (ಇಂದ್ರನು ವಜ್ರಾಯುದದಿಂದ) ವೃತ್ರನಾಮಕ ದೈತ್ಯನನ್ನೂ, ಈ ವೃತ್ರನಿಗಿಂತಲೂ ಅಧಿಕನಾದ ವೃತ್ರತರ ನಾಮಕ ದೈತ್ಯನನ್ನೂ, ನಷ್ಟವಾದ ಭುಜ ಶಿರಸ್ಸಿನ ಸಂಧಿಯುಳ್ಳವನನ್ನಾಗಿ (ಅಂದರೆ ಅವರ ಶಿರಸ್ಸುಗಳನ್ನು ಛೇದಿಸಿ) ಸಂಹರಿಸಿದನು. (೨) (ಅಧ್ಯಾತ್ಮ ರೂಪವಾದ ಅರ್ಥವನ್ನು ಹೇಳುತ್ತಾರೆ.) ವಿರುದ್ಧ ಜ್ಞಾನಾರ್ಥಕವಾದುದರಿಂದ ವ್ಯಂಸ ಶಬ್ದ ವಾಚ್ಯಗಳಾದ ಅಜ್ಞಾನ ಮಿಥ್ಯಾ ಜ್ಞಾನಗಳನ್ನು (ತಮಃ=ಅಜ್ಞಾನವು ವೃತ್ರಶಬ್ದವಾಚ್ಯವು (ಮಿಥ್ಯಾಜ್ಞಾನವು ವೃತತರನನ್ನೂ ಅಹಿಯನ್ನೂ ಈ ಮೂವರು ದೈತ್ಯರನ್ನೂ ಇಂದ್ರನು ಸಂಹರಿಸಿದನು.( (೩) ವಿಶೇಷತಃ ಛಿನ್ನ ಛಿನ್ನಗಳಾದ ಮರದ ಗೆಲ್ಲುಗಳು ಹೇಗೋ ಹಾಗೆ ವಜ್ರಾಯುಧದಿಂದ ಛಿನ್ನ ಛಿನ್ನರಾದ ಅಹಿ ವೃತ್ರ ವೃತ್ರತರರೆಂಬ ದೈತ್ಯರು (ಭೂಮಿಯಲ್ಲಿ ಬಿದ್ದರು (೪) (ಅಧ್ಯಾತ್ಮ ರೂಪವಾದ ಅರ್ಥದಲ್ಲಿ ಕುಲಿಶವೆಂದರೆ ಯಾವುದು ಎಂದರೆ) ಯಾವ ಪುರುಷನಲ್ಲಿ ವಿದ್ಯೆಯುಂಟಾಗಿದೆಯೋ, ವಿದ್ಯೆಯುಳ್ಳ ಆ ಕುಲಕ್ಕೇನೇ ಸುಖವನ್ನುಂಟುಮಾಡುವುದರಿಂದ ವಿದ್ಯೆಯು ಕುಲಿಶ ಶಬ್ದದಿಂದ ಹೇಳಲ್ಪಡುತ್ತದೆ. (ಕುಲಂ ಅಸ್ಯಾಸ್ತೀತಿ ಕುಲೀ, ವಿದ್ಯೆಯುಳ್ಳವನು. ವಿದ್ಯೆಯುಳ್ಳ ವಂಶಕ್ಕೇನೇ ಶಂ=ಸುಖವು, ಯಸ್ಮಾತ್=ಯಾವುದರಿಂದ ಆಗುತ್ತದೋ, ಆ ವಿದ್ಯೆಯು ಕುಲಿಶವೆನಿಸುತ್ತದೆ.) (೫) (ಅಧ್ಯಾತ್ಮ ರೂಪವಾದ ಅರ್ಥದಲ್ಲಿ ಪೃಥಿವೀ ಶಬ್ದವಾಚ್ಯವಾದುದನ್ನು ಹೇಳುತ್ತಾರೆ.) (ಬುದ್ಧಿಯು ಸಂಶಯ. ವಿಪರ್ಯಮ ಮೊದಲಾದ ಸಾಮಾನ್ಯ ರೂಪದಿಂದ ಶ್ರೇಷ್ಠವಾಗಿರುವುದರಿಂದ ಬುದ್ಧಿಯೇ ಪೃಥಿವೀ

ಎನಿಸುತ್ತದೆ ಯಾವ ಕಾರಣದಿಂದ ಸಂಶಯವು ಬುದ್ಧಿಯಲ್ಲಿರತಕ್ಕುದೋ ಆದ ಕಾರಣ ಸಂಶಯಾದಿಗಳು ಬುದ್ಧಿ ಸಂಬದ್ಧಗಳು.

ವಿ ॥ (1) ಯದ್ಯಪಿ ಸಂಶಯವೂ ಬುದ್ಧಿಯಾದುದರಿಂದ ಬುದ್ಧಿಯಲ್ಲಿದೆ ಎಂಬುವುದು ಕೂಡಲಾರದು. ಆದಾಗ್ಯೂ ಸಂಶಯಶಬ್ದದಿಂದ ಬುದ್ಧಿಯಲ್ಲಿರತಕ್ಕ ಡೋಲಾಯಮಾನವಾದುದನ್ನು ಇಟ್ಟುಕೊಂಡು ಬುದ್ಧಿಯಲ್ಲಿದೆ ಎಂದದ್ದು (2) ಹೀಗೆಯೇ ಅಜ್ಞಾನ ಶಬ್ದದಿಂದ ಬುದ್ಧಿಯಲ್ಲಿರತಕ್ಕ ಯಥಾರ್ಥ ವಿಷಯ ತತ್ವಾಭಾವವೂ (ಯಥಾರ್ಥವನ್ನು ವಿಷಯೀಕರಿಸದಿರುವುದು) ಮಿಥ್ಯಾ ಜ್ಞಾನಶಬ್ದದಿಂದ ಬುದ್ಧಿಯಲ್ಲಿರತಕ್ಕ ವಿಪರೀತಾರ್ಥ ವಿಷಯಕತ್ವವೂ ಗೃಹೀತವಾಗುತ್ತದೆ (ವಿಪರೀತವಾದ ಅರ್ಥವನ್ನು ವಿಷಯೀಕರಿಸುವುದು.) (3) ಅಧ್ಯಾತ್ಮ ಪಕ್ಷದಲ್ಲಿ ಸಂಶಯಾದಿಗಳು ಬುದ್ಧಿಯಲ್ಲಿರುತ್ತವೆಂದು ಸಿದ್ಧಗಳಾಗಿರುವುದರಿಂದ ಯಾವ ಸಂಶಯಾದಿಗಳು ಬುದ್ಧಯಲ್ಲಿರುತ್ತವೋ ಅವುಗಳು ನಷ್ಟಗಳಾದುವು. ॥೫॥

**ಋ ॥ (೩೭೪) ಅಯೋದ್ಧೇವ ದುರ್ಮದ ಆಹಿಜುಹ್ವೇ ಮಹಾವೀರಂ ತುವಿಬಾಧಮೃಜೀಷಂ ।**

**ನಾತಾರೀದಸ್ಯ ಸಮೃತಿಂ ವಧಾನಾಂ ಸಂರು ಜಾನಾಃ ಪಿಪಿಷ ಇಂದ್ರ ಶತ್ರುಃ ॥೬॥**

ಅ । ಇಂದ್ರಶತ್ರುಃ=ಇಂದ್ರನೇ ಶತ್ರುವಾಗಿ ಉಳ್ಳ ವೃತ್ರಾಸುರನು, ಅಯ್ಯೋದ್ಧೇವ=ಪ್ರತಿಭಟನು ಇಲ್ಲದಿರುವವನಂತೆ, ದುರ್ಮದಃ=ದರ್ಪದಿಂದ ಉದ್ರಿಕ್ತನಾಗಿ, ಮಹಾವೀರಂ=ವೀರರಲ್ಲಿ ಪ್ರಧಾನನಾದ, ತುವಿಬಾಧಂ=ಬಹಳ, ಮಹಾ ಶ್ರೇಷ್ಠರಾದ ಶತ್ರುಗಳಿಗೆ ಬಾಧಕನಾದ, ಋಜೀಷಂ=(ಸೋಮಲತೆಯನ್ನು ಭೇಧಿಸಿ ರಸವನ್ನು ತೆಗೆದ ಮೇಲೆ ನೀರಸವಾದುದು ತ್ವಕಟೆಯ ಒಳಗಿರುವುದು ಗರ್ಭಕಾಷ್ಠ ರೂಪವಾದುದು ಅಂಶವು ಯಾವುದು ಅವಶಿಷ್ಟವಾಗುವುದೋ ಅದು ಋಜೀಷವೆಂದೂ ವಲ್ಕವೆಂದೂ ಹೇಳಲ್ಪಡುತ್ತದೆ. (ಋಜೀಷದಲ್ಲಿ ರಸವಿಲ್ಲದಿರುವುದರಿಂದ ಕಾಷ್ಠರೂಪವಾಗಿ ದೃಢವಾಗಿದೆ. ಇಂದ್ರನಲ್ಲಿ ಋಜಿಷ ಶಬ್ದಕ್ಕೆ ಅಮುಖ್ಯವೃತ್ತಿಯೇ ಅದು ಹೇಗೆ ದೃಢವಾಗುತ್ತದೋ, ಹಾಗೆಯೇ ದಾರ್ಢ್ಯ ನಿಮಿತ್ತದಿಂದ) ಋಜೀಷ ಎಂದು ಹೆಸರುಳ್ಳ ದೇವೇಂದ್ರನನ್ನು (ಯುದ್ಧಕ್ಕಾಗಿ) ಅಜುಹ್ವೇ ಹಿ (ಹ್ವೇ ಞ ಸ್ಪರ್ಧಾಯಾಂ ಶಬ್ದೇಚ) ಕರೆದನಂತೆ. ಅಥವಾ ವಿಷ್ಣುವೇ ಶತ್ರುವಾಗಿ ಉಳ್ಳ, ಪ್ರತಿಭಟನಿಲ್ಲದಿರುವವನಂತೆ ಮದ ಭರಿತನಾದ ಪ್ರಬಲನಾದ ಅಜ್ಞಾನ ರೂಪನಾದ ವೃತ್ರಾಸುರನು ಮಹಾವೀರತನ ಮೊದಲಾದ ಲಕ್ಷಣಗಳುಳ್ಳ ಶ್ರೀ ವಿಷ್ಣುವನ್ನು ಕರೆದನು (ಆಹ್ವಾನ ಮಾಡಿದ ವೃತ್ರಾಸುರನು) ಅಸ್ಯ ಈ ದೇವೇಂದ್ರನ ವಧಾನಾಂ =ಪ್ರಹಾರಗಳ ಸಮೃತಂ = (ಋ ಗತೌ) ಸಂಪ್ರಾಪ್ತಿಯನ್ನು ನ ಅತಾರೀತ್ =ದಾಟಲಿಲ್ಲ. (ಅಂದರೆ ದೇವೇಂದ್ರನು ಮಾಡಿದ ಪ್ರಹಾರಗಳನ್ನು ವಂಚಿಸುವುದಲ್ಲಿ (ಸಹಿಸುವುದರಲ್ಲಿ) ಶಕ್ತನಾಗಲಿಲ್ಲ.) (ಪ್ರಹಾರದಿಂದ ಪೀಡಿತನಾಗಿ ಬಿದ್ದಿರುವ) ಇಂದ್ರ ಶತ್ರುಃ = ಇಂದ್ರನೇ ಘಾತಕನಾಗಿರುವ (ಅಂದರೆ ಇಂದ್ರನಿಂದ ವಧ್ಯನಾದ) ವೃತ್ರಾಸುರನು, ರುಜಾನಾಂ = ರುಜೋಭಂಗೇ (ಯೋಗಯುಕ್ತರಾದ ದುರ್ಬಲರಾದ ಮನುಷ್ಯ ಪ್ರಜೆಗಳನ್ನು, ಸಂಪಿಪೀಷೆ = (ಪಿಷ ಸಂಚೂರ್ನನೇ) ಚೂರ್ಣೀಕರಿಸಿದನು. ಅಥವಾ ಶ್ರೀ ಹರಿಯಿಂದ ಭಕ್ತರ ದ್ವೇಶಯಿಂದ ನಿರಾಕೃತನಾದ ಅಜ್ಞಾನವು. (ಅಂದರೆ ಶ್ರೀ ಹರಿಯು ಭಕ್ತರಲ್ಲಿ ಅಜ್ಞಾನವನ್ನು ಇಲ್ಲದ ಹಾಗೆ ಮಾಡಿರುವನು. ಹೀಗೆ ಭಕ್ತರಿಂದ ನಿರಾಕೃತವಾದ ಅಜ್ಞಾನವು) ರುಜಾನಾಃ =ಸಂಸಾರ ರೋಗದಿಂದ ಕೂಡಿರುವ ಸಂಸಾರದಲ್ಲಿರುವ ಪ್ರಜೆಗಳನ್ನು, ಸಂ ಪಿಪಿಷೇ =ಚೆನ್ನಾಗಿ ಬಾಧಿಸಿತು. ॥೬॥

**ಭಾ ॥ (1) ಯಸ್ಯ ಯೋದ್ಧಾ ನಾಯೋದ್ಧಾಽಸೌ ತದ್ವದೇವೇಂದ್ರ ಶತ್ರುಃ । ದರ್ಪೋದ್ರಿಕ್ತೋ ಹ್ವಾಹ್ವಯಾಮಾಸ ಶಕ್ರಂ ವಿಷ್ಣುಂ ವಾಽಜ್ಞಾನಂ ವೀರತಮಂ ರಿಪೂಣಾಂ ॥ ಮಹೋಚ್ಛ್ರಾನಾಂ ಬಾಧಕಂ ದಾರ್ಢ್ಯಹೇತೋರ್ಯಚೀಷಾಖ್ಯಂ (೨ ನಾಸ್ಯ ವಿಷ್ಣೋರ್ವಧಾನಾಂ। ಸಂಪ್ರಾಪ್ತಿಮಜ್ಞಾನಮಥಾಪಿ ವೃತ್ರಃ ಶಕ್ರಸ್ಯ ತಾರೀತ್ಸಂ ಪಿಪಿಷೇ ಪ್ರಜಾಶ್ಚ । ರುಜಾಯುಕ್ತಾಃ ಮಾನುಷೀರ್ವಾ ಸ್ಯತಿಸ್ಥಾಃ (೩) ಇಂದ್ರಃ ಶತ್ರುರ್ಯಸ್ಯ ಸ ಹೀಂದ್ರಶತ್ರುಃ । ಪುಂಸೋಃ ಪೂರ್ವಸ್ಮಿನ್ ಸ್ವರಿತಾಂತೇ ಸಮಾಸೋ ಬಹುರ್ವ್ರೀಹಿರ್ಹೀತಿ ಸೂತ್ರಂ ಪುರಾಣಂ ॥೬॥**

ಅ ॥ (೧) ಯಾರಿಗೆ ಪ್ರತಿಭಟನು ಇಲ್ಲವೋ ಅವನಂತೆ ಇಂದ್ರನೇ ಶತ್ರುವಾಗಿ ಉಳ್ಳ ವೃತಾಸುರನು ದರ್ಪದಿಂದ ಉದ್ರಿಕ್ತನಾಗಿ, ಪ್ರಧಾನ ವೀರನೂ, ಮಹಾಬಲಿಷ್ಟರಾದ ರೀಪುಗಳಿಗೆ ಬಾಧಕನೂ, ದಾರ್ಢ್ಯ ನಿಮಿತ್ತವಾಗಿ ಋಜೀಷ ಎಂದು ಹೆಸರುಳ್ಳವನೂ ಆದ ದೇವೇಂದ್ರನನ್ನು (ಯುದ್ಧಕ್ಕಾಗಿ) ಕರೆದನು. ಅಥವಾ ಅಜ್ಞಾನವು ಶ್ರೀ ವಿಷ್ಣುವನ್ನು ಕರೆಯಿತು. (೨) (ಯುದ್ಧಕ್ಕಾಗಿ ಕರೆದ ವೃತ್ರಾಸುರನು) ಈ ದೇವೇಂದ್ರನ ಪ್ರಹಾರಗಳ ಸಂಪ್ರಾಪ್ತಿಯನ್ನು ದಾಟಲಿಲ್ಲ. (ದೇವೇಂದ್ರನು ಮಾಡಿದ ಪ್ರಹಾರಗಳನ್ನು ಸಹಿಸಲಿಕ್ಕೆ ಶಕ್ತನಾಗಲಿಲ್ಲ.) ಅಥವಾ ಅಜ್ಞಾನವು ಶ್ರೀ ವಿಷ್ಣುವಿನ ಪ್ರಹಾರಗಳ ಸಂಪ್ರಾಪ್ತಿಯನ್ನು ದಾಟಲಿಲ್ಲ. ಮತ್ತೆ ಪ್ರಹಾರದಿಂದ ಪೀಡಿತನಾಗಿ ಬಿದ್ದಿರುವ ವೃತ್ರನು ರೋಗ ಯುಕ್ತರಾದ ದುರ್ಬಲರಾದ ಮನುಷ್ಯ ಪ್ರಜೆಗಳನ್ನು ಚೂರ್ಣೀಕರಿಸನದನು. ಅಥವಾ ಅತ್ನಾನವು ಸಂಸಾರದಲ್ಲಿ ಬಿದ್ದಿರುವ ಪ್ರಜೆಗಳನ್ನು ಬಾಧಿಸಿತು. (೩) ಇಂದ್ರ ಶತ್ರು ಎನ್ನುವಲ್ಲಿ ಬಹುವ್ರೀಹಿ ಸಮಾಸವೋ ತತ್ಪುರುಷ ಸಮಾಸವೋ ಎನ್ನುವ ಸಂಶಯಗಳನ್ನು, ವಿಗ್ರಹವನ್ನು ತೋರಿಸಿ ನಿರಾಕರಿಸುತ್ತಾರೆ.) ಇಂದ್ರ ಏವ ಶತ್ರುಃ ಯಸ್ಯ ಇಂದ್ರನೇ ಯಾವ ವೃತ್ರಾಸುರನಿಗೆ ಶತ್ರುವು ನಾಶಕನಾಗಿರುತ್ತಾನೋ ಆತನೇ ಇಂದ್ರ ಶತ್ರು ಎನಿಸುತ್ತಾನೆ. (ಎಂದು ಬಹುವ್ರೀಹಿ ಸಮಾಸವೇ. ಇಂದ್ರಸ್ಯ ಶತ್ರುಃ ಇಂದ್ರಶತ್ರುಃ ಎಂದು ತತ್ಪುರುಷ ಸಮಾಸವಲ್ಲ. ಏಕೆಂದರೆ ವೃತ್ರಾಸುರನು ಇಂದ್ರನಿಗೆ ಶತ್ರುವು (ಘಾತಕನು) ಅಲ್ಲವಷ್ಟೇ. ಮತ್ತೆ ಇಂದ್ರನೇ ವೃತ್ರಾಸುರನಿಗೆ ಘಾತಕನು ಎಂದು ಬಹುವ್ರೀಹಿಯನ್ನು ಪರಿಗ್ರಹಿಸುವ ವಿಷಯದಲ್ಲಿ ಯುಕ್ತಿಯನ್ನು ಹಿ ಶಬ್ದದಿಂದ ಸೂಚಿಸಿದರು.) (ಪುಲ್ಲಿಂಗಗಳಾದ ಎರಡು ಶಬ್ದಗಳಿಗೆ ಸಮಾಂಸ ಮಾಡುವಾಗ) ಸಮಸ್ಯಮಾನಗಳಾದ ಪುಲ್ಲಿಂಗಗಳಾದ ಎರಡು ಶಬ್ದಗಳ ಮಧ್ಯದಲ್ಲಿ ಪೂರ್ವಪದವು ಸ್ವರಿತಾಂತವಾಗುವಾಗ ಆ ಸಮಾಸವು ಬಹುವ್ರೀಹಿಯೆಂದು ತಿಳಿಯಬೇಕು. ಎಂಬುವ ಅರ್ಥವನ್ನು ಪ್ರತಿಪಾದಿಸುವುದು ಪ್ರಾಚೀನವಾದ ವ್ಯಾಕರಣದಲ್ಲಿರತಕ್ಕ ಸೂತ್ರವಿದೆ. ಇದು ಪ್ರಸಿದ್ಧ.

ವಿ ॥ ಹಾಗಾದರೆ ಪ್ರಕೃತದಲ್ಲಿ ಸ್ವರ ವ್ಯತ್ಯಾಸವೂ ಕೂಡ ಬಹುದಾದುದರಿಂದ ಪೂರ್ವಪದವು ಸ್ವರಿತಾಂಶನಾಗಿದ್ದರೆ ಬಹುವ್ರೀಹಿ ಸಮಾಸವೆಂದು ನಿಶ್ಚಯವು ಹೇಗೆ ಆಗುವುದೆಂದರೆ ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋ ನ ತದರ್ಥಮಾಹ । ಸ ವಾಗ್ವಜ್ರೋ ಯಜಮಾನಂ ಹಿನ ಸ್ತಿ ಯಥೇಂದ್ರಶತ್ರುಃ ಸ್ವಂತೋಽಪರಾಧಾತ್ ॥ ಎಂಬ ಶಿಕ್ಷಾ ವಾಕ್ಯದಲ್ಲಿ ಮಂತ್ರದಲ್ಲಿದ್ದ ಪದಗಳು ಸ್ವರವರ್ಣಗಳನ್ನು ಅನುಸರಿಸಿಯೇ ಅರ್ಥವನ್ನು ಪ್ರತಿಪಾದಿಸುತ್ತವೆ, ಎಂಬುವಲ್ಲಿ ದೃಷ್ಟಾಂತವಾಗಿ ಹೇಳಿದ ಸ್ವಾಹೇಂದ್ರಶತ್ರುರ್ವರ್ಧಸ್ವ ಎಂಬಲ್ಲಿದ್ದ ಇಂದ್ರ ಶಬ್ದವು ಹೇಗೆ ಸ್ವರಸಂಬಂಧಿ ಅಪರಾಧದ್ದೆಶೆಯಿಂದ ತ್ವಷ್ಟೃವಿಗೆ ವಿವಕ್ಷಿತವಾದ ತತ್ಪುರುಷ ಸಮಾಸವನ್ನು ಸಾಧಿಸುವ ಅಂತೋದಾತ್ತತ್ವವನ್ನು ಬಿಟ್ಟು ಪೂರ್ವ ಪದಾಂತದಲ್ಲಿ ಸ್ವರಿತೋಚ್ಚಾರಣ ರೂಪವಾದ ದೋಷದ್ದೆಶೆಯಿಂದ ಬಹುವ್ರೀಹಿ ಅರ್ಥವು ಪ್ರಾಪ್ತವಾಗುವುದರಿಂದ ಇಂದ್ರನೇ ವೃತ್ರನಿಗೆ ಶತ್ರುವು ಎಂಬ ಅರ್ಥವುಂಟಾಗುತ್ತದೆ ಎಂದು ಹೇಳಿದೆ. (೩) ಮತ್ತು ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂದು ಪಾಣಿನಿ ಸೂತ್ರದಲ್ಲಿ ಹೇಳಿದಂತೆ ಪೂರ್ವಪದದಲ್ಲಿ ಪ್ರಕೃತಿ ಸ್ವರವನ್ನು ಉಪಲಕ್ಷಣಯಾ

ಇಟ್ಟುಕೊಳ್ಳಬೇಕೆಂದೂ ಉಕ್ತವಾಯ್ತು. ಏವಂಚ ಎಲ್ಲಿ ಪೂರ್ವಪದದಲ್ಲಿ ಪ್ರಕೃತಿ ಸ್ವರವಿದೆಯೋ ಅಲ್ಲಿ ಬಹುವ್ರೀಹಿ ಸಮಾಸವೆಂದು ತಿಳಿಯಬೇಕು. ಎಂದು ಪ್ರಾಚೀನ ಸೂತ್ರಾರ್ಥವು. ||೬||

ಋ || (೩.೭.೫) ಅಪಾದಹಸ್ತೋ ಅಪೃತನ್ಯದಿಂದ್ರಮಾಸ್ಯ ವಜ್ರಮಧಿಸಾನೌ ಜಘಾನ ।

ವೃಷ್ಣೋವಧ್ರಿಃ ಪ್ರತಿಮಾನಂ ಬುಭೂಷನ್ ಪುರುತ್ರಾ ವೃತ್ರೋ ಅಶಯದ್ವ್ಯಸ್ತಃ ||೭||

ಅ || ಅಪಾತ್ =ಪಾದವಿಲ್ಲದಿರುವ, ಅಹಸ್ತಃ =ಹಸ್ತವಿಲ್ಲದಿರುವ, (ಕತ್ತರಿಸಲ್ಪಟ್ಟ ಪಾದ ಬಾಹುಗಳುಳ್ಳವನಾದಾಗ್ಯೂ) ವೃತಾಸುರನು (ಕೇವಲ ದೇಹದಿಂದ) ಇಂದ್ರಂ=ಇಂದ್ರನನ್ನು, ಅಪತನ್ಯತ್=ಯುದ್ಧ ಮಾಡಿಯೇ ಮಾಡಿರುವನು. (ಆಗ ಆ ಇಂದ್ರನು) ಅಸ್ಯ= ಆ ವೃತ್ರಾಸುರನ, ಸಾನೌ = (ಅಮುಖ್ಯ ವೃತ್ತಿಯಿಂದ ಪರ್ವತದ ಶೃಂಗದಂತೆ ಇರುವ) ಅತ್ಯಂತ ಸ್ಥೂಲವಾದ ಕಂಠ ದೇಶದಲ್ಲಿ, ವಜ್ರಂ =ವಜ್ರಾಯುಧವನ್ನು ಅಧಿ ಆ ಜಘಾನ=ಬಿಟ್ಟುಬಿಟ್ಟನು. (ಆಧ್ಯಾತ್ಮ ರೂಪವಾದ ಅಥವು ಅಪಾತ್ ಅಹಸ್ತಃ =ಪ್ರವೃತ್ತಿ ಸಾಧನವಾಗಿರುವುದರಿಂದ ಪಾದ ಹಸ್ತ ಶಬ್ದಗಳಿಂದ ವಾಚ್ಯಗಳಾದ ತರ್ಕಾಗಮಗಳಿಂದ ರಹಿತವಾದ, ವೃತ್ರಃ = ಅಜ್ಞಾನವು ಇಂದ್ರಂ = ಶ್ರೀ ಹರಿಯನ್ನು ಅಪೃತನ್ಯತ್ = ಯುದ್ಧ ಮಾಡಿತು. ಶ್ರೀ ಹರಿಯು, ಅಸ್ಯ =ಅಜ್ಞಾನದ, ಸಾನೌ =ಶೃಂಗದಂತೆ ಅತಿ ಗುರುವಾದ ಸ್ವರೂಪದಲ್ಲಿ, ವಜ್ರಂ=ಜ್ಞಾನವನ್ನು, ಅಧ್ಯಾಜಗಾಮ=ಸೃಷ್ಟಿಸಿದನು. (ಅಂದರೆ -ಶ್ರೀ ವಿಷ್ಣುವು ಚೆನ್ನಾಗಿ ಯುದ್ಧ ಮಾಡುವ ಅಜ್ಞಾನವನ್ನು ಜ್ಞಾನಾಖ್ಯ ವಜ್ರದಿಂದ ಹೊಡೆದನು. (ಪರಿಹರಿಸಿದನು) (ಇಂತಹ ವೃತ್ರನು) ವೃಷ್ಣಃ = ಅಭೀಷ್ಟವನ್ನು ಸುರಿಸುವ ಇಂದ್ರನಿಗೆ, ಅಥವಾ ಶ್ರೀ ವಿಷ್ಣುವಿಗೆ, ಪ್ರತಿಮಾನಂ ಪ್ರತಿರೂಪನು, ಶತ್ರುವು, ಬುಭೂಷನ್ =ಆಗಲಿಚ್ಛಿಸುವವನಾಗಿ, ವಧ್ರಿಃ =ವಧಕ್ಕೇ (ಸಂಹಾರಕ್ಕೆ) ಯೋಗ್ಯನು ಆದನು. ಅಥವಾ ರೂಢಿಯಿಂದ ನೀಚನಾದ ವೃತಾಸುರನು ಅಜ್ಞಾನವೆಂದು ಹೆಸರುಳ್ಳವನು. ಆ ಶ್ರೀ ಹರಿಯಿಂದ ಪುರುತ್ರಾ=ಬಹು ಸ್ಥಾನಗಳಲ್ಲಿ, ವ್ಯಸ್ತಃ =ನಿರಸ್ತನಾಗಿ, ಅಶಯತ್ =ಬಿದ್ದಿರುವನು. ||೭||

ಭಾ || **(1) ಸಂಛಿನ್ನಪಾದ್ಬಾಹುರಪೀಂದ್ರಮೇವ ಯುಯೋಧ ವಜ್ರಂ ವ್ಯಸೃಜತ್ಸ ತಸ್ಯ । ಗಿರೇಃ ಸಾನುಪ್ರತಿಮೇ ಕಂಠದೇಶೇ (2) ತರ್ಕಾಗಮಾಭ್ಯಾಂ ರಹಿತಂ ತಮೋ ವಾ || (3) ಸಂಯುಧ್ಯಮಾನಂ ಮಾನವಜ್ರೇಣ ವಿಷ್ಣುರ್ಜಘಾನ (4) ವಧ್ರಿರ್ವಧಯೋಗ್ಯೋಽಥ ನೀಚಃ । ಈಶಸ್ಯ ಶತ್ರುರ್ಭವಿತುಂ ಸ ಇಚ್ಛನ್ ವ್ಯಸ್ತೋಽಶಯದ್ಬಹುಧೇಶೇನ ತೇನ ||೭||**

ಅ || (1) ವೃತ್ರಾಸುರನು ಚೆನ್ನಾಗಿ ಛೇದಿಸಲ್ಪಟ್ಟ ಪಾದ ಬಾಹುಗಳುಳ್ಳವನಾದಾಗ್ಯೂ ಇಂದ್ರನೊಡನೆ ಯುದ್ಧ ಮಾಡಿಯೇ ಮಾಡಿರುವನು. ಆಗ ಆ ಇಂದ್ರನು ಆ ವೃತ್ರಾಸುರನ ಪರ್ವತದ ಶೃಂಗದಂತಿರುವ ಅತ್ಯಂತ ಸ್ಥೂಲವಾದ ಕಂಠಪ್ರದೇಶದಲ್ಲಿ ವಜ್ರಾಯುಧವನ್ನು(ದಿಂದ) ಹೊಡೆದನು. (2) ಆಧ್ಯಾತ್ಮ ರೂಪವಾದ ಅರ್ಥವು) ತರ್ಕ ಆಗಮಗಳಿಂದ ವಿರಹಿತವಾದ ಅಜ್ಞಾನವು ಶ್ರೀ ಹರಿಯನ್ನು ಕುರಿತು ಯುದ್ಧ ಮಾಡಿತು. (ತರ್ಕ ಆಗಮಗಳು ಜ್ಞಾನ ಮಾರ್ಗದ ಪ್ರವೃತ್ತಿಗೆ ಸಾಧನವಾಗಿರುವುದರಿಂದ ಪಾದಹಸ್ತಗಳ ಸಾಮ್ಯವು) (3) (ಶ್ರೀ ಹರಿಯು) ಚೆನ್ನಾಗಿ ಯುದ್ಧ ಮಾಡತಕ್ಕ (ಸಂಬದ್ಧವಾದ) ಅಜ್ಞಾನವನ್ನು ಜ್ಞಾನಾಖ್ಯ ವಜ್ರದಿಂದ ಸಂಹರಿಸಿದನು. (ಪರಿಹರಿಸಿದನು) (4) ಅಂತಹ ವೃತ್ರಾಸುರನು ಸರ್ವಾಭೀಷ್ಟದಾಯಕನಾದ

ಶ್ರೀ ಹರಿಗೆ ಶತ್ರುವಾಗಿ ಆಗಲಿಚ್ಛಿಸುವವನಾಗಿ ವಧ್ರಿಃ = ಸಂಹಾರ ಯೋಗ್ಯನಾದನು. ಅಥವಾ ನೀಚನಾದ ವೃತ್ರಾಸುರನು ಅಜ್ಞಾನವೆಂದು ಹೆಸರುಳ್ಳವನು. ಸರ್ವಸ್ವಾಮಿಯಾದ ಆ ಶ್ರೀ ಹರಿಯಿಂದ ಬಹುಸ್ಥಾನಗಳಲ್ಲಿ ನಿರಸ್ತನಾಗಿ ಬಿದ್ದುಬಿಟ್ಟನು. ||೭||

ಋ || (೩೭೬) ನದಂ ನ ಭಿನ್ನಮಮುಯಾ ಶಯಾನಂ ಮನೋರುಹಾಣಾ ಅತಿಯಂತ್ಯಾಪಃ |

ಯಾಶ್ಚಿದ್ವೃತ್ರೋ ಮಹಿನಾ ಪರ್ಯತಿಷ್ಠ ತ್ತಾಸಾಮಹಿಃಪತ್ಸುತಃ ಶೀರ್ಬಭೂವ ||೮||

ಅ || (ನದಿಗಳಲ್ಲಿರತಕ್ಕ ಜಲಗಳನ್ನು ತಡೆಯುವುದಕ್ಕಾಗಿ ಇರತಕ್ಕ) ಅಮುಯಾ = ಮೇಲಿನ ಋಕ್ಕಿನಲ್ಲಿ ಹೇಳಲ್ಪಡತಕ್ಕ ತನ್ನ ತಾಯಿಯಿಂದ ಕೂಡಿಕೊಂಡೇ ದೇವೇಂದ್ರನಿಂದ ಸಂಹೃತನಾದ, ಶಯಾನಂ = ಬಿದ್ದಿರುವ ವೃತ್ರಾಸುರನನ್ನು ಭಿನ್ನಂ ನದಂನ =ಭಿನ್ನವಾದ ನದದ ತೀರವನ್ನೆಂಬಂತೆ, ಅತಿ =ಅತಿಕ್ರಮಿಸಿಯೇ, ಅಪಃ =ಜಲಗಳು, ಮನೋರುಹಾಣಾಃ =ಮನಸ್ಸಿಗಿಂತಲೂ ಮೊದಲು (ವೇಗದಿಂದ) ಸ್ಥಲಗಳನ್ನು ಏರುವವುಗಳಾಗಿ, ಯಂತಿ=ಹೋಗುತ್ತವೆ. (ಆ ಜಲಗಳು ಯಾವವೆಂದರೆ) ವೃತಃ = ವೃತ್ರಾಸುರನು (ಪೂರ್ವಕಾಲದಲ್ಲಿ) ಯಾಶ್ಚಿತ್ =ಯಾವ ಜಲಗಳನ್ನು ಮಹಿನಾ = ತನ್ನ ಮಹಿಮೆಯಿಂದ (ಪೂರ್ವದಲ್ಲಿ ಅಂದರೆ ಪುತ್ರನಿಗಿಂತ ಪೂರ್ವಸ್ಥಾನದಲ್ಲಿ) ಪರ್ಯತಿಷ್ಠತ್ =ಸುತ್ತಲೂ ತಡೆದು ನಿಂತಿರುವನು. ಮತ್ತೂ (ತತ್ಸುತಃ =ವೃತ್ರಾಸುರನ ಮಗನಾದ) ಅಹಿಶ್ಚ =ಅಹಿಯೂ ಕೂಡ, ತಾಸಾಂ =ಯಾವ ಆ ಈ ಜಲಗಳ (ಗಮನವನ್ನು ವೃತ್ರಾಸುರನಂತೆ ತಡೆಯುತ್ತಾ) ಪತ್ಸುತಃ ಶೀಃಬಭೂವ =ತಂದೆಯ ಪಾದದೆಶೆಯಿಂದ ಅನಂತರದಲ್ಲಿಯೇ ಮಲಗುವವನು ಆದನು. (ಪಾದ ಶಬ್ದದೆಶೆಯಿಂದ ಪಂಚಮೀ ವಿಭಕ್ತಿಯ ಅರ್ಥದಲ್ಲಿ ಸಪ್ತಮೀ ಬಹುವಚನವು. ಪಾದಶಬ್ದಕ್ಕೆ ಪದ್ದನ್ ಇತ್ಯಾದಿಗಳಿಂದ ಪತ್ ಆದೇಶವು. ಅದರಿಂದ ತಸಿಪ್ರತ್ಯಯವು. ಸಪ್ತಮೀ ವಿಭಕ್ತಿಗೆ ಲೋಪವಿಲ್ಲ. ಮತ್ತೂ ಬಹುವಚನವು. ಛಾಂದಸು. ಅದುವೇ ಉಪಪದವಾಗಿ ಉಳ್ಳ ಶೀಜಧಾತುವಿಗೆ ಕ್ವಿಪ್ ಪ್ರತ್ಯಯವು.) (ಅಂದರೆ ವೃತ್ರಾಸುರನು ನದಿಗಳ ದ್ವಾರಗಳಲ್ಲಿ ತಲೆ ಇಟ್ಟು ನೀರು ಹೋಗುವ ಮಾರ್ಗದಲ್ಲಿ ಇಬದ್ದವನಾಗಿ ಗಮನವನ್ನು ತಡೆದನು. ಅಹಿ ಎಂಬ ದೈತ್ಯನಾದರೂ ಆ ವೃತ್ರಾಸುರನನ್ನು ಅತಿಕ್ರಮಿಸಿ ದಾಟಿಕೊಂಡು ಜಲಗಳು ಹೋಗುತ್ತವೆಂದು ತಿಳಿದು ವೃತ್ರಾಸುರನ ಪಾದದ ಕೆಳಗೆ ಮಲಗಿಕೊಂಡು ತಡೆದನು.) (ಆಧ್ಯಾತ್ಮ ರೂಪವಾದ ಅರ್ಥವಾದರೂ) ಶುಭಗಳಾದ ಜ್ಞಾನಾದಿಗುಣಗಳನ್ನು ತಡೆಯುವುದು ಮೂಲ ಪ್ರಕೃತಿಯಿಂದ ಕೂಡಿಕೊಂಡು ಶ್ರೀ ಹರಿಯಿಂದ ನಾಶಮಾಡಲ್ಪಟ್ಟ (ಶಯಾನಂ) ಕಾರ್ಯವನ್ನು ಹುಟ್ಟಿಸದಿರುವ ಅಜ್ಞಾನವನ್ನು ಅತಿಕ್ರಮಿಸಿ ಅಪಃ=ಜ್ಞಾನ ಮೊದಲಾದ ಶುಭಗಳು ವೇಗದಿಂದ ಮನಸ್ಸನ್ನು ಏರುತ್ತಾ ಪ್ರವರ್ತಿಸುತ್ತವೆ. ಯಾವ ಶುಭಗಳಾದ ಜ್ಞಾನಾದಿಗಳನ್ನು ಅಜ್ಞಾನವಿರುವ ಕಾಲದಲ್ಲಿನ ಅಜ್ಞಾನವು ತಡೆದಿರುವುದೋ ಹಾಗೆಯೇ ಸಂಶಯವು ಜ್ಞಾನಾದಿಗಳನ್ನು ತಡೆಯುವುದಕ್ಕಾಗಿ ಅನಂತರದಲ್ಲಿಯೇ ಆಯ್ತೋ ಏವಂ ಚ ವೃತ್ರಃ =ಅಜ್ಞಾನವು ತತ್ಪುತ್ರಃ = ಸಂಶಯವು. ಸಂಶಯವು ಅಜ್ಞಾನ ಬಂದ ಮೇಲೆಯೇ ಹುಟ್ಟತಕ್ಕುದಾದುದರಿಂದ ಪತ್ಸುತಃ ಶೀಃ = ಎನ್ನುವುದು ಅನಂತರ್ಯ ಮಾತ್ರಾರ್ಥಕವು. ||೮||

ಭಾ || (೧) ಅಪಾಂ ರೋದ್ಧಾರಮಮುಯಾ ಸ್ವಮಾತ್ರಾ ಸಹೈವ ತಕ್ರೇಣ ಹತಂ ತಯಾ ನಂ | ಭಿನ್ನಂ ನದಂ ಯದ್ವದತೀತ್ಯ ಚಾಪೋ ಮನಃಪೂರ್ವಂ ಚಾರುಹಾಣಾಃ ಪ್ರಯಾಂತಿ || (೨) ವೃತ್ರೋ ಯಾಃ ಪೂರ್ವಂ ಸ್ವಮಹಿಮ್ನಾ ಪರೀತ್ಯ

**ಪುರಾತಿ (೩) ಷ್ಮತ್ರ್ತತ್ಸುತೋಽಹಿಶ್ಚ ತಾಸಾಂ । ಪತ್ಸುತಃ ಶೀಃ ಪಾದತೋ, ನಂತರಂ ತು ಶೇತಾಽಭವತ್ತ್ರದ್ವದೇವಾಭಿರುಂಧನ್ ॥ (೪) ತಮಃ ಪುತ್ರಃ ಸಂತಯೋ ವ್ಯಾಭಿರುಂಧನ್ ಶುಭಾನ್ಯಾಸ್ತ್ರೇ ನಿಹತಃ ಸೋಽಪಿ ತೇನ ॥೮॥**

ಅ ॥ (೧) (ಅನ್ವಯವು ಕೂಡುವುದಕ್ಕಾಗಿ ಅಪಾಂ ರೋದ್ಧಾರಂ ಇತ್ಯಾದಿಗಳನ್ನು ಹೇಳಿದ್ದು) ನದೀ ಜಲಗಳು ಇತರತ್ರ ಹೋಗದಂತೆ ಅವುಗಳನ್ನು ತಡೆಯುತ್ತಿರುವ ಮೇಲಿನ ಋಕ್ಕಿನಲ್ಲಿ ಹೇಳಲ್ಪಡತಕ್ಕ ತನ್ನ ತಾಯಿಯಿಂದ ಕೂಡಿಯೇ ದೇವೇಂದ್ರನಿಗೆ ಸಂಹರಿಸಿ ಕೊಳ್ಳಲ್ಪಟ್ಟು ಬಿದ್ದಿರುವ ವೃತ್ರಾಸುರನನ್ನು ಭಿನ್ನವಾದ ನದದ ತೀರವನ್ನೆಂಬಂತೆ ಅತಿಕ್ರಮಿಸಿಯೇ (ದಾಟಿಯೇ) ಜಲಗಳು ಮನಸ್ಸಿಗಿಂತಲೂ ವೇಗದಿಂದ ಸ್ಥಲಗಳನ್ನು ಏರುವವುಗಳಾಗಿ ಹೋಗುತ್ತವೆ. (೨) (ಆ ಜಲಗಳು ಎಂತಹುಗಳೆಂದರೆ) ವೃತಾಸುರನು ಪೂರ್ವ ಕಾಲದಲ್ಲಿ ಯಾವ ಜಲಗಳನ್ನು ತನ್ನ ಮಹಿಮೆಯಿಂದ ಪುತ್ರನಿಗಿಂತ ಪೂರ್ವಸ್ಥಾನದಲ್ಲಿ ಸುತ್ತಲೂ ತಡೆದು ನಿಂತಿರುವನು. (೩) ಮತ್ತು ವೃತ್ರಾಸುರನ ಮಗನಾದ ಅಹಿನಾಮಕ ದೈತ್ಯನೂ ಯಾವ ಜಲಗಳ ಗಮನವನ್ನು ವೃತ್ರಾಸುರನಂತೆ ತಡೆಯುತ್ತಾ ತಂದೆಯ ಪಾದದ ಅಡಿಯಲ್ಲಿಯೇ ಮಲಗಿದ್ದನು. (೪) ವೃತ್ರಃ = ತಮಃ =ಅಜ್ಞಾನವು. ಪುತ್ರಃ = ವೃತ್ರನ ಮಗನಾದ ಅಹಿಯು ಸಂಶಯವು. ಅದು ಶುಭಗಳನ್ನು ತಡೆಯುತ್ತಾ ಇದೆ. ಅದೂ ಕೂಡ ಭಕ್ತರ ಶರೀರದಲ್ಲಿರತಕ್ಕ ಶ್ರೀ ಹರಿಯಿಂದ ಪರಿಹೃತವಾಯ್ತು. ॥೮॥

ಋ ॥ (೩೭೭) ನೀಚಾವಯಾ ಅಭವದ್ವೃತ್ರಪುತ್ರೇಂದ್ರೋ ಅಸ್ಯಾ ಅವ ವಧರ್ಜಭಾರ ॥

**ಉತ್ತರಾ ಸೂರಧರಃಪುತ್ರ ಆಸೀದ್ದಾನುಃ ಶಯೇ ಸಹವತ್ಸಾನಧೇನುಃ ॥೯॥**

ಅ ॥ (ಯಾವ) ವೃತ್ರಪುತ್ರಾ=ವೃತ್ರನು ಮಗನಾಗಿ ಉಳ್ಳ (ವೃತ್ರನ ತಾಯಿಯಾದ) ದಾನುಃ =ದನು ದೇವಿಯು ನೀಚಾವಯಾಃ ಅಭವತ್ = (ವಯ ಬಂಧನೇ) ನೀಚ ಸ್ಥಾನದಲ್ಲಿ (ವಯತಿ ಬಧ್ನಾತೀತಿ) ಬಂಧಿಸುವವಳು ಆದಳೊ, (ಅಂದರೆ ನೀಚ ಸ್ಥಾನದಲ್ಲಿ ಅಹಿಗಿಂತಲೂ ಅನಂತರದಲ್ಲಿ ಈ ಧನುವು ಜಲಗಳ ಬಂಧನವನ್ನು ಮಾಡಿದಳೊ) (ನೀರು ಹೋಗದಿದ್ದಂತೆ ಮಾಡಿರುವಳೋ) ಅಸ್ಯಾಃ = ಈ ದನುವಿನ, ವಧಃ = ಸಂಹಾರವನ್ನು ಇಂದ್ರಃ = ಇಂದ್ರನು = ಅವಃ = ಕೆಳಕಾಲದಲ್ಲಿ (ಅಂದರೆ ವೃತ್ರನನ್ನು ಸಂಹರಿಸುವುದಕ್ಕಿಂತ ಮೊದಲೇ ಜಭಾರ = (ಹೃಞಹರಣೇ) ಮಾಡಿದನು. (ಪ್ರಥಮತಃ ದನುವನ್ನು ಸಂಹರಿಸಲಿಕ್ಕೆ ಕಾರಣವೇನು ? ಎಂದರೆ) ಸೂಃ = (ಸೂತ ಇತಿ ಸೂಃ (ಷೂಜ ಪ್ರಾಣಿ ಪ್ರಸವೇ) ತಾಯಿಯಾದ ದನುವು. (ಮಗನನ್ನು ರಕ್ಷಿಸುವುದಕ್ಕಾಗಿ) ಉರ್ತ್ತರಾ ಅಸೀತ್ = ಮಗನ ಮೇಲೆ ಇರುತ್ತಿದ್ದಳು. ಪುತ್ರಃ =ಮಗನಾದರೂ, ಅಧರಃ ಅಸೀತ್ ಕೆಳಗೆ ಇದ್ದನು. (ಆದ ಕಾರಣ ಇಂದ್ರನು ಮೇಲೆ ಇರತಕ್ಕ ಆ ದನುವನ್ನು ಸಂಹರಿಸಿಯೇ ಕೆಳಗೆ ಇರತಕ್ಕ ಈ ವೃತ್ರನನ್ನು ಸಂಹರಿಸಿದನು. ಆ ಮೇಲೆ ) ದಾನುಃ =ದನುವು ಸಹವತ್ಸಾ ಧೇನು ರ್ನ =ಧೇನುವಿನಂತೆ ಸಪುತ್ರಳಾಗಿ ಶಯೇ =ಬಿದ್ದಳು. (ಅಧ್ಯಾತ್ಮರೂಪವಾದ ಅರ್ಥವು) ವೃತ್ರ ಪುತ್ರಾ = ಯಾವ ಅಜ್ಞಾನಾದಿ ದೋಷಗಳನ್ನು ಹುಟ್ಟಿಸುವ, ದಾನುಃ =(ದೋ ಅವ ಖಂಡನೇ ಖಂಡ್ಯತ್ವ ನಿಮಿತ್ತದಿಂದ ಭೇದಿಸಲ್ಪಡುವುದರಿಂದ (ದನು ಎಂದು ಹೆಸರುಳ್ಳ) ಪ್ರಾತಿಸ್ವಿಕವಾದ

ಪ್ರಕೃತಿಯು, ನೀಚಾವಯಾಃ =ಅಜ್ಞಜನರನ್ನು ಬಂಧಿಸುವುದಾಗಿ, ಅಭವತ್ = ಆಯಿತೋ, ಪ್ರಕೃತಿ ವಧವನ್ನು ಮೊದಲು ಮಾಡಿ ಆ ಮೇಲೆ ಅಜ್ಞಾನ ಮೊದಲಾದ ಪ್ರಕೃತಿ ಕಾರ್ಯವನ್ನು ಶ್ರೀ ಹರಿಯು ನಾಶಗೊಳಿಸಿದನು. ಕಾರಣವಾದ ಪ್ರಕೃತಿಗೆ ಸಾಮರ್ಥ್ಯಾತಿಶಯದಿಂದ ಉತ್ತರತ್ವವಿದೆ. ಅಜ್ಞಾನಾದಿಗಳಿಗೆ ಅಂತಹ ಶಕ್ತಿಯಿಲ್ಲದಿರುವುದರಿಂದ ಉತ್ತರಾಧರತ್ವವಿದೆ. ಆದ ಕಾರಣ ಪೂರ್ವದಲ್ಲಿ ಅದನ್ನು ನಾಶಗೊಳಿಸಿದ್ದು ಎಂದು ತಿಳಿಯಬೇಕು. ||೯||

**ಭಾ || (೧) ನೀಚಸ್ಥಾನೇ ಬಂಧನಂ ಯಾಽಪಿ ಚಾಪಾಂ ಕರೋತಿ ದಾನುರ್ವೃತ್ರಮಾತಾ ದನುಸ್ಸಾ || (೨) ವೃತ್ರೋಽಹ್ಯಭೂದ್ದನುಜಃ ಕಶ್ಯಪಾಚ್ಚ ಪಾಪಾತ್ಮಾಽಸೌ ವೈಷ್ಣವಸ್ತ್ವಾಷ್ಟ್ರಜಾತಃ || (೩) ವೃತ್ರಃ ಪುತ್ರೋಽಸ್ಯಾ ಇತಿ ಸಾ ವೃತ್ರಪುತ್ರಾ ವಧಂ ತಸ್ಯಾ ಅಹರತ್ಪೂರ್ವಮಿಂದ್ರಃ || (೪) ಪ್ರಕೃತಿರ್ವಾ ವೃತ್ರಮಾತಾ ತಮೋ ಹಿ ತಸ್ಯಾ ಅಭೂತ್ತಾಂ ಜಘಾನೇಶಿತಾ ವಾ | (೫) ಪ್ರಾತಿಸ್ವಿಕೀ ಪ್ರಕೃತಿರ್ಯತ್ತ ಮಶ್ವ ದೋಷಾಶ್ಚಾನ್ಯೇ ಪುಂಸ್ತ್ವತೋ ಯುಕ್ತಮೇತತ್ || (೬) ಸುತಾವನಾರ್ಥಮುಪರಿಸ್ಥಾ ಬಭೂವ ಸುತಸ್ಯ ಮಾತಾ ತಾಂ ನಿಹತ್ಯಾಮುಮೇವ | ಜಘಾನೇಂದ್ರಃ (೭) ಕಾರಣಸ್ಯಾಪಿ (ಸ್ಯೈವ) ನಾಶಾತ್ಕಾರ್ಯೋತ್ಥಾನಂ ವಾರಯಾಮಾಸ ವಿಷ್ಣುಃ || (೮) ಸ್ಯಾದೇವ ಪೂರ್ವಂ ಕಾರ್ಯನಾಶೋ ಹ್ಯಥಾಪಿ ನಿಃ ಶೇಷನಾಶಃ ಕಾರಣಸ್ಯೈವ ನಾಶಾತ್ || (೯) ಏವಂ ಭಕ್ತಾನನುಜಗ್ರಾಹ ದೇವೋ ನಾರಾಯಣಃ ನಾರಾಯಣಃ ಪಾರಯನ್ ಸಂಸೃತೇಶ್ಚ || (೧೦) ಉತ್ತರತ್ವಂ ಪ್ರಕೃತೇಃ ಶಕ್ತಿತಃ ಸ್ಯಾತ್ ||೯||**

ಅ|| (೧) ಯಾವ ಆ ವೃತ್ರನ ತಾಯಿಯಾದ ದನು ದೇವಿಯು ನೀಚ ಸ್ಥಾನದಲ್ಲಿ ಅಹಿಗಿಂತಲೂ ಅನಂತರದಲ್ಲಿ ಜಲಗಳ ಬಂಧನವನ್ನು ಮಾಡಿರುವನಳೋ (೨) (ಹಾಗಾದರೆ ದನುವು ಕಶ್ಯಪನ ಹೆಂಡತಿಯು. ವೃತ್ರನು ಕಶ್ಯಪನ ಪುತ್ರನಲ್ಲ. ಮತ್ತೆ ತ್ವಷ್ಟ್ರವಿನ ಪುತ್ರನು. ಆದ ಕಾರಣ ದನುವು ವೃತ್ರನ ತಾಯಿಯು ಹೇಗೆ ಎಂದರೆ) ವೃತ್ರ ಎಂದು ಹೆಸರುಳ್ಳವರು ಇಬ್ಬರು. ಅವರಲ್ಲಿ ಒಬ್ಬನು ಕಶ್ಯಪ ಋಷಿಯಿಂದ ದನುವಿನಲ್ಲಿ ಹುಟ್ಟಿದವನು. (ವೃತನು ದನುವಿನಲ್ಲಿ ಹುಟ್ಟಿದವನೆಂದಾದರೆ ದಾನವನಾಗಬೇಕಾಗುವನು. ದಿತಿಯಲ್ಲಿ ಹುಟ್ಟಿದವನಾಗದಿರುವುದರಿಂದ ದೈತ್ಯನಾಗದೆ ಹೋಗಬೇಕಾಗುವನು ಎಂದರೆ ದೈತ್ಯದಾನವರಿಬ್ಬರಲ್ಲಿಯೂ ತಮಃ ಪ್ರಕೃತಿಕತ್ವವು ಸಮಾನವು. ಆದ ಕಾರಣ ದೈತ್ಯರಲ್ಲಿ ದಾನವರೆಂದೂ ದಾನವರಲ್ಲಿ ದೈತ್ಯರೆಂದೂ ಪುರಾಣಗಳಲ್ಲಿ ವ್ಯವಹಾರವು) ಇನ್ನೊಬ್ಬನು ತ್ವಷ್ಟ್ರವಿನಿಂದ ಹುಟ್ಟಿದವನು. (ಆದ ಕಾರಣ ವಿರೋಧವಿಲ್ಲ) (ಇಬ್ಬರನ್ನು ಏಕೆ ಕಲ್ಪಿಸುವುದು ಎಂದರೆ) ಈ ದನು ಪುತ್ರನು ಪಾಪಿಷ್ಠನಾಗಿ ಶ್ರುತನಾಗಿದ್ದಾನೆ. ದೀರ್ಘಂ ತಮಃ ಅಶಯದಿಂದ್ರಶತ್ರುಃ ಎಂದು. ತ್ವಷ್ಟ್ರಪುತ್ರನು, ವೈಷ್ಣವನು. ಪುಣ್ಯಾತ್ಮನೆಂದು ಭಾಗವತದಲ್ಲಿ ಪ್ರಸಿದ್ಧನಾಗಿದ್ದಾನೆ. (೩) ಆದಾಗ್ಯೂ ವೃತ್ರಪುತ್ರಾ ಎನ್ನುವುದಕ್ಕೆ ವೃತ್ರ ಮಾತಾ ಎಂಬ ವ್ಯಾಖ್ಯಾನವು ಹೇಗೆ ? ಪುತ್ರ ಶಬ್ದಕ್ಕೆ ಸುತ ಎಂದು ಅರ್ಥವಿರುವುದರಿಂದ ಮಾತಾ ಎಂಬ ಅರ್ಥ ಹೇಗೆಂದರೆ) ಈ ಧನುವಿಗೆ ವೃತ್ರನು ಮಗನು. ಆದ ಕಾರಣ ಆ ದನುವು ವೃತ್ರಪುತ್ರಾ ಎನಿಸುತ್ತಾಳೆ. ಆ ದನುವಿನ ಸಂಹಾರವನ್ನು ಇಂದ್ರನು ವೃತನನ್ನು ಸಂಹರಿಸುವುದಕ್ಕಿಂತ ಮೊದಲೇ ಮಾಡಿದ್ದನು. (೪) (ಆಧ್ಯಾತ್ಮದಲ್ಲಿ ವೃತ್ರನ ಮಾತೆಯನ್ನೂ ಹೇಳುತ್ತಾರೆ.) ಮೂಲ ಪ್ರಕೃತಿಯೇ ವೃತ್ರನ ತಾಯಿಯು. (ಮೂಲ ಪ್ರಕೃತಿಯು ವೃತ್ರನ ತಾಯಿಯು. ಎಂಬ ವ್ಯಾಖ್ಯಾನವು ಹೇಗೆಂದರೆ) ಅವಳಿಂದ ಅಜ್ಞಾನವು ಹುಟ್ಟಿತು. ಆ ಪ್ರಕೃತಿಯನ್ನು ಸರ್ವೇಶ್ವರನಾದ ಶ್ರೀ ಹರಿಯು ಸಂಹರಿಸಿದನು. (ಬಿಡಿಸಿದನು) (ಪ್ರಕೃತಿರ್ವಾ ಈಶಿತಾ ವಾ ಎಂದು ವಾ ಶಬ್ದಗಳು ಎರಡು ಏತಕ್ಕೆಂದರೆ) ನೀಚಾವಯಾ ಅಭವದ್ವೃತ್ರಪುತ್ರಾ ಎಂಬುವುದು ಬೇರೆ ವಾಕ್ಯವಾಗಿರುವುದರಿಂದ ಅದು ಅಧ್ಯಾತ್ಮ ಪರವೆಂದು ತೋರಿಸುವುದಕ್ಕಾಗಿ ೧ನೇ ವಾ ಶಬ್ದವು. (ಇಂದ್ರೋಽಅಸ್ಯಾ ಎಂಬುವ ೨ನೇ ವಾಕ್ಯಕ್ಕೆ ಅರ್ಥಾಂತರವನ್ನು ಸೂಚಿಸುವುದಕ್ಕಾಗಿ ೨ನೇ ವಾ ಶಬ್ದವು.

ಅ|| (೧) ಸೃಕೇ = ಯುದ್ಧದಲ್ಲಿ ಒಬ್ಬ ಪ್ರಧಾನ ದೇವನೂ ನಿನ್ನನ್ನು ಕೊಲ್ಲಲಿಕ್ಕೆ ಇಚ್ಛಿಸಿದರೆ = ಆಗ ಅಶ್ವ ಸಂಬಂಧಿವಾರಕನು ಆಗು. (ವಾರಃ = ವಾರಣಶ್ರೀ ಅಸ್ಯಾಸ್ತೀತಿ ವಾರಃ =ವಾರಕನು) (ಅಂದರೆ ಆ ಪ್ರತಿಭಟನ ಅಶ್ವಗಳನ್ನು ತಡೆಯುವವನಾಗು. (೨) (ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಭಾಷ್ಯಕಾರರು ದೃಷ್ಟಾಂತವನ್ನು ಹೇಳುತ್ತಾರೆ) ಹೇಗೆ ವಾಲಿಯು (ತನ್ನ ದೃಷ್ಟಿಪಾತ ಮಾತ್ರದಿಂದ ಪರರ ಸೈನ್ಯವನ್ನು ಅಪಹಾರ ಮಾಡುತ್ತಾನೋ, ಹಾಗೆಯೇ ಆ ನೀನು ನೋಡೋಣ ಮಾತ್ರದಿಂದ ಶತ್ರುವಿನ ರಥದಲ್ಲಿ ಯೋಜಿತಗಳಾದ ಕುದುರೆಗಳ ಬಲವನ್ನು ಅಪಹರಿಸಿ ಆ ಕುದುರೆಗಳನ್ನು ಹಿಂದು ಮುಖವಾಗಿ ಹೊರುವ ಹಾಗೆ ಮಾಡುತ್ತಿ. ಅಥವಾ ಅಶ್ವವಾರಃ ಎಂದರೆ -ಅಶ್ವನಿಷ್ಠಃ ವಾರಃ =ಸಂಭಜನಂ, ಸ್ವಸ್ವಾಮಿವಾಹಕತ್ವಂ ಅಸ್ಯಾಸ್ತೀತಿ ವಾರಃ = ವಾಹಕನು, ಪ್ರಸಿದ್ಧನು, ಆಗ ಅಂದರೆ ರಥವನ್ನು ಹೊರುತ್ತಿರುವ ಪರರ ಕುದುರೆಗಳು ಹಿಂದು ಮುಖವಾಗಿ ಹೇಗೆ ಓಡಿ ಹೋಗುತ್ತವೋ ಹಾಗೆ ಮಾಡು.) ದೇವನೂ ಆಗ ನಿನ್ನನ್ನು (ಇರುಗಿ ಹೊಡೆಯಲು ಇಚ್ಛಿಸಿದರೆ ಆಗ ಆ ಪ್ರತಿಭನ ಕುದುರೆಗಳನ್ನು ನೀನು ತಡೆಯುವವನು ಆಗುತ್ತಿ, ಎಂದು ಹೇಳಿದುದರಿಂದ ಪ್ರಥಮತಃ ಪ್ರಹಾರ (ಹೊಡೆಯುವಿಕೆ) ವಿಷಯನು ಆಗುತ್ತಾನೆಂದು ಪ್ರಾಪ್ತವಾಗುತ್ತದೆ. ಆದ ಕಾರಣ ಅಭಿಪ್ರಾಯ ಹೇಳುತ್ತಾರೆ.) ನೋಡೋಣ ಮಾತ್ರದಿಂದ ನೀನು ಪರರ ಸೈತ್ಯವನ್ನು ಅಪಹರಿಸುವುದರಿಂದ ನಿನ್ನನ್ನು ತಿರುಗಿ ಹೊಡೆಯುವವನು ಯಾವನೊಬ್ಬ ತಿರುಗಿ ಹೊಡೆಯಲು ಇಚ್ಛಿಸಿದರೆ ಎಂದರ್ಥವು.) ಪ್ರಸಿದ್ಧ (೩) (ಶೌರ್ಯವಿದ್ಧವನಿಗೇನೇ ಬಲಾತ್ಕಾರ ಕರಣವು ಕೂಡುವ ಪ್ರಯುಕ್ತ) ಬಲಾತ್ಕಾರದಿಂದ (ಶತ್ರುಗಳ) ಗೋವುಗಳನ್ನು ಗೆದ್ದಿರುತ್ತಿ. ಪುನಃ ಹಿರಣ್ಯವನ್ನು ಗೆದ್ದಿರುತ್ತಿ. (ಶ್ರುತಿಯಲ್ಲಿ ಹೇಳಿದ ಸೋಮವನ್ನು ಬಿಟ್ಟು ಶ್ರುತಿಯಲ್ಲಿ ಹೇಳದ ಹಿರಣ್ಯಂ ಎಂದು ಅಧ್ಯಾಹಾರ ಮಾಡಲಿಕ್ಕೆ ಏನು ಕಾರಣವು ಎಂದರೆ - ಸೋಮವು ಹವಿಸ್ಸಾದ ಕಾರಣ ಅದಕ್ಕೆ ಇಂದ್ರನೇ ಸ್ವಾಮಿಯೆಂದು ಸಿದ್ಧವಾದ ಪ್ರಯುಕ್ತ ಪರಕೀಯ ವಸ್ತುಗಳ ಜಯವನ್ನೇ ಹೇಳಬೇಕಾದ ಕಾರಣ ಶ್ರುತಿಯಲ್ಲಿ ಹೇಳದ ಹಿರಣ್ಯಂ ಎನ್ನುವುದಕ್ಕೇ ಅಧ್ಯಾಹಾರ ಮಾಡಿದ್ದು.) (೪) ನೀನು ೭ ಪ್ರಧಾನ ನದಿಗಳನ್ನು ಸೋಮವನ್ನು ಹೊಂದುವುದಕ್ಕಾಗಿ (ವೃತ್ರಾದಿಗಳ ಪ್ರತಿಬಂಧದಿಂದ) ಬಿಡಿಸಿರುತ್ತಿ. (ಅಂದರೆ ಸೋಮವನ್ನು ಹಿಂಡುವ ಕಾಲದಲ್ಲಿ ಸೋಮರಸದ ಅಭಿವೃದ್ಧಿಗಾಗಿ ಪ್ರತಿಬಂಧದಿಂದ) ಬಿಡಿಸಿರುತ್ತಿ. (ಅಂದರೆ ಸೋಮವನ್ನು ಹಿಂಡುವ ಕಾಲದಲ್ಲಿ ಸೋಮರಸದ ಅಭಿವೃದ್ಧಿಗಾಗಿ ನದೀಜಲಗಳಿಂದ ಸೋಮವನ್ನು ಕೂಡಿಸುವುದಕ್ಕಾಗಿ ನದಿಗಳಿಗೆ ಪ್ರವರ್ತಕನಾಗಿರುತ್ತಿ.) ||೧೨||

ಋ || (೩೮೧) ನಾಸ್ಮೈ ವಿದ್ಯುನ್ನ ತನ್ಯತುಃ ಸಿಷೇಧ ನ ಯಾಂ ಮಿಹಮಕಿರ ದ್ಧ್ರಾದುನಿಂ ಚ।

ಇಂದ್ರಶ್ಚ ಯದ್ಯುಯುಧಾತೇ ಅಹಿಶ್ಚೋತಾಪರೀಭ್ಯೋ ಮಘವಾ ವಿಜಿಗ್ಯೇ ||೧೩||

ಅ || ಯತ್=ಯಾವಾಗ, ಇಂದ್ರಶ್ಚ ಅಹಿಶ್ಚ=ಇಂದ್ರನೂ ಅಹಿಯೂ ಕೂಡ, ಯಯುಧಾತೇ =ಯುದ್ಧ ಮಾಡಿರುವರೋ, (ಎಲೋ ಇಂದ್ರನೇ ಯಾವಾಗ ನಿನಗೆ ಅಹಿದೈತ್ಯನಿಂದ ಯುದ್ಧವು ಪ್ರವೃತ್ತವಾಗಿಯದೋ) (ಆಗ) ವಿದ್ಯುತ್=ವಿದ್ಯುನ್ನಾಮಕ ಆಯುಧವು, ಅಸ್ಮೈ=ಅಹಿಗಾಗಿ, ನ ನಿಷೇಧ =ಈ ಅಹಿಗೆ ಇಂದ್ರವಧರೂಪವಾದ ಪ್ರಯೋಜನದ ಸಿದ್ಧಿಯನ್ನು ಮಾಡಲಿಲ್ಲ. (ಇಂದ್ರನನ್ನು ಸಂಹರಿಸಲಿಕ್ಕೆ ಶಕ್ತನಾಗಲಿಲ್ಲ.) ತನ್ಯಶುಶ್ಚ=ತನ್ಯತು ಎಂಬ ಶಬ್ದದಿಂದ ಹೇಳಲ್ಪಟ್ಟ ವಜ್ರಾಯುಧವೂ, ನ ನಿಷೇಧ=ಈ ಅಹಿಗೆ ಇಂದ್ರವಧರೂಪವಾದ ಪ್ರಯೋಜನನ ಸಿದ್ಧಿಯನ್ನು ಮಾಡಲಿಲ್ಲ.

ಅತಿಶಯ ಸುಖದಿಂದಲೇ, (ಅನಾಯಾಸದಿಂದಲೇ) ವಿಚರಂತಿ=ಸಂಚರಿಸಿದವು. ದೀರ್ಘಂತಮಃ =ಮಹಾತಾಮಸನಾದ, ಇಂದ್ರಶತ್ರುಃ =ವೃತ್ರನು, ಆ ಅಶಯತ್ =ಬಿದ್ದನು. ಇಂದ್ರ ಶತ್ರುವಾದ, ದೀರ್ಘಂ ಮಹತ್ತಾದ, ತಮಃ =ಅಜ್ಞಾನವು ಹೀಗೆಯೇ, ಆ ಅಶಯತ್ =ಬಿದ್ದಿತು. ಅಥವಾ, ಮೃತನಾದ ಇಂದ್ರನ ಶತ್ರುವಾದ ವೃತ್ರನು, ದೀರ್ಘಂ =ಪುನರಾವೃತ್ತಿಯಿಲ್ಲದಿರುವ, ತಮಃ =ಅಂಧಂತಮಸ್ಸನ್ನು ಆ ಅಶಯತ್ = (ಅಶೂ ವ್ಯಾಪ್ತೌ) ಹೊಂದಿದನು.

||೧೦||೩೭||

**ಭಾ || (೧) ಅನಂತತ್ವಾನ್ನೈವ ತಿಷ್ಠಂತಿ ಕಾಷ್ಠಾಃ || (೨) ಅತಸ್ತಾಸಾಂ ನ ಗೃಹಂ ಕಿಂಚಿದಸ್ತಿ (೩) ನಿಣ್ಯಂ ಸುಖೇನೈವ ಚರಂತಿ ಚಾಪಃ || (೪) ದೀರ್ಘಂ ತಮೋ ವೃತ್ರಸಂಜ್ಞಂ ತಮೋ ವಾ ದೀರ್ಘಮಂಧಂ ಪಾಪ ವೃತ್ರಃಸ ಏವ||೧೦||೩೭||**

ಅ || (೧) ದಿಕ್ಕುಗಳು ಅನಂತಗಳಾಗಿರುವುದರಿಂದ ದೇವದತ್ತನಿಗೆ ದಿಗಭಾವ ಪ್ರಯುಕ್ತವಾದ ಗತಿನಿಷ್ಪತ್ತಿಯು ಆಗುವುದಿಲ್ಲ. ದಿಕ್ಕುಗಳು ಸರ್ವತ್ರ ವ್ಯಾಪ್ತಗಳೇ ಆಗಿವೆ. ಪರ್ಯವಸಾನವೇ ಇಲ್ಲ. ತಥಾಚ ದಿಕ್ಕುವ್ಯಾಪ್ತವಾಗಿರುವ ಪ್ರಯುಕ್ತ ದಿಕ್ಕಿನಲ್ಲಿರುವ ದೇವದತ್ತನಿಗೆ ದಿಕ್ಕು ಇಲ್ಲದಿರುವ ಪ್ರಯುಕ್ತ ಯಾವುದು ಅವಸ್ಥಿತಿಯೋ, ಅದರ ಅಭಾವವು ದಿಕ್ಕುಗಳಲ್ಲಿ ಲಾಕ್ಷಣಿಕಪ್ರಯೋಗವು. ದಿಕ್ಕುಗಳಿಗೆ ಪರ್ಯವಸಾನವೇ ಇಲ್ಲದಿರುವ ಕಾರಣ ತಾಃ ನೈವ ತಿಷ್ಠಂತಿ = ಆ ದಿಕ್ಕುಗಳು ಇರುವುದೇ ಇಲ್ಲವೆಂದದ್ದು. (೨) ದಿಕ್ಕುಗಳು ಅನಂತಗಳಾಗಿರುವುದರಿಂದಲೇ ಅವುಗಳಿಗೆ ಯಾವುದೊಂದು ಮನೆಯೂ ಇಲ್ಲ. (ಅಂದರೆ ನಿವಿಶಂತೇ ಅಸ್ಮಿನ್ನಿತಿ ನಿವೇಶನಂ =ಮನೆಯು ಅಂತರ್ಭಾವಕವು ಯಾವುದೂ ಇಲ್ಲ. ಅಮನೆಯೊಳಗೆ ಬೇರೆ ವಸ್ತುಗಳು ಸೇರಿ ಇರುತ್ತವೆ. ಮನೆಯು ಅಂತರ್ಭಾವಕವು. ದಿಕ್ಕುಗಳು ಒಂದು ವಸ್ತುವಿನ ಒಳಗೆ ಇರತಕ್ಕವುಗಳಲ್ಲ. ದಿಕ್ಕು ಒಂದರ ಒಳಗೆ ಇರುವುದಿಲ್ಲ. ಆದ ಕಾರಣ ಅನಿವೇಶನಗಳೆಂದೂ ಹೇಳಲ್ಪಡುತ್ತವೆ. (ಏವಂಚ ಮೃತನಾದ ವೃತನ ಶರೀರವು ಪರ್ಯವಸಾನವನ್ನು ಹೊಂದದಿರುವ ಮತ್ತೂ ಅನಂತಗಳಾಗಿರುವುದರಿಂದ ಅತರ್ಭಾವಕ (ದಿಕ್ಕನ್ನು ಒಳಗೆ ಇರಿಸಿಕೊಳ್ಳುವುದು) ವಿಲ್ಲದಿರುವ ದಿಕ್ಕುಗಳ ಮಧ್ಯದಲ್ಲಿ ಇಡಲ್ಪಟ್ಟಿತು (ಸ್ಥಾಪಿಸಲ್ಪಟ್ಟಿತು.) ಏವಂಚ ಅತಿಸ್ಥೂಲವಾದ ವೃತ್ರನ ಶರೀರವು ಸರ್ವತ್ರ ವ್ಯಾಪಿಸಿಕೊಂಡಿರುವ ಅನಂತಗಳಾದ ದಿಕ್ಕುಗಳನ್ನು ವ್ಯಾಪಿಸಿಕೊಂಡಿದೆ. ಅದ್ಭುತವಾಗಿದೆ. ಅಂತೂ ವೃತ್ರನ ಶರೀರವು ಅತಿಸ್ಥೂಲವೆಂದು ಹೇಳುವ ಪ್ರಯೋಜನವಿದ್ದುದರಿಂದ ೨ ವಿಶೇಷಗಳೂ ಸಾರ್ಥಗಳು) (೩) (ಏವಂಚ ವೃತ್ರನು ಸಂಹೃತನಾದ ಪ್ರಯುಕ್ತ ಪ್ರತಿಬಂಧಕವು ನಿವೃತ್ತಿಯಾದ ಮೇಲೆ) ಜಲಗಳು (ನಿಣ್ಯಂ =ನಿ=ಅತಿಶಯಾರ್ಥಕವು. ಣ್ಯಂ=ಣಶ್ಚ ನಿರ್ವೃತಿವಾಚಕಃ ಸ್ವಾರ್ಥೇಷ್ಯಃ) ಸುಖವು) ಸುಖದಿಂದಲೇ (ಅನಾಯಾಸದಿಂದಲೇ) ಹರಿದು ಹೋದವು. (೪) (ದೀರ್ಘಂತನು ಆಶಯದಿಂದ್ರಶತ್ರು ಎಂಬುವ ವಾಕ್ಯವನ್ನು ೩ ಪ್ರಕಾರ ವ್ಯಾಖ್ಯಾನ ಮಾಡುತ್ತಾರೆ.) (1) ಸ ವೃತ್ರ ಏವ ದೀರ್ಘಂ ತಮಃ ಎನ್ನುವುದರಿಂದ ಮಹಾತಾಮಸನಾದ ಇಂದ್ರಶತ್ರುವಾದ ವೃತ್ರಾಸುರನು ಬಿದ್ದನು. (2) ವೃತ್ರಸಂಜ್ಞಂತಮೋವಾ ಎನ್ನುವುದರಿಂದ (ಅಧ್ಯಾತ್ಮಾರ್ಥವು) ಶ್ರೀ ಹರಿಯ ಶತ್ರುಭೂತವಾದ ಮಹತ್ತಾದ ವೃತ್ರ ಎಂದು ಹೆಸರುಳ್ಳ ಅಜ್ಞಾನವೇ ಬಿದ್ದಿತು. (ನಷ್ಟವಾಯ್ತು.) (3) ದೀರ್ಘಮಂಧಂ ಇತ್ಯಾದಿಗಳಿಂದ ಮೃತನಾದ ಈ ಇಂದ್ರಶತ್ರುವಾದ ವೃತ್ರಾಸುರನು ಪುನರಾವೃತ್ತಿಯಿಲ್ಲದಿರುವ ಅಂಧಂತಮಸ್ಸನ್ನು ಹೊಂದಿದನು ||೧೦||೩೭||

**ಋ || (೩೭೯) ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಅಪಃ ಪಣಿನೇವ ಗಾವಃ |**

**ಅಪಾಂ ಬಿಲಮಪಿಹಿತಂ ಯದಾಸೀ ದ್ವೃತ್ರಂ ಜಘುನ್ವಾ ಅಪ ತದ್ವವಾರ** **||೧೧||**

ಅ || ಗಾವಃ =ಇಂದ್ರನ ಯಜ್ಞದಲ್ಲಿ ಕ್ಲೃಪ್ತಗಳಾದ ಗೋವುಗಳು, ಪಣಿನೇವ = (ಪಣೀ ಎನ್ನುವುದು ದೈತ್ಯರ ಗಣದ ನಾಮಧೇಯವು. ಕ್ರೋಧವಶಾದಿ ಶಬ್ದಗಳಂತೆ ಆದ ಕಾರಣ) ಪಣಿಗಳ ಗಣದಲ್ಲಿ ಸೇರಿರುವ ಬಲನಾಮಕ ದೈತ್ಯನಿಂದ, ಹೇಗೋ ಹಾಗೆಯೇ, ದಾಸ ಪತ್ನೀಃ = ಶ್ರೀ ವಿಷ್ಣುವಿನ ದಾಸನಾದ ವರುಣನ ಪತ್ನಿಯರಾದ, ಅಪಃ =ನದಿಗಳು, ಅಹಿಗೋಪಾಃ =ಅಹಿನಾಮಕ ದೈತ್ಯನೇ ರಕ್ಷಕನಾಗಿ ಉಳ್ಳವುಗಳು. (ಅಂದರೆ ಅಹಿಯಿಂದ ರಕ್ಷಿಸಲ್ಪಟ್ಟವೆ.) (ಕೇವಲ ಅಹಿಯಿಂದ ರಕ್ಷಿಸಲ್ಪಟ್ಟವುಗಳು ಮಾತ್ರವಲ್ಲ, ಮತ್ತೆ) ನಿರುದ್ಧಾಃ = ವೃತ್ರನಿಂದ ತಡೆಯಲ್ಪಟ್ಟವುಗಳಾಗಿಯೂ, ಅತಿಷ್ಠನ್ =ಇದ್ದವು. (ಆಗ) ಶಕ್ರಃ = ದೇವೇಂದ್ರನು, ವೃತ್ರಂ=ವೃತ್ರಾಸುರನನ್ನೂ ಅಹಿಯನ್ನೂ ಕೂಡ, ಜಘನ್ವಾನ್ =ಸಂಹರಿಸಿ, ಆಸೀತ್ =ಆಯ್ತೋ. ತತ್=ಜಲಗಳ ಬಿಲವನ್ನು ಅಪವವಾರ=ತೆರೆದನು. (ಆಧ್ಯಾತ್ಮದಲ್ಲಿ) ದಾಸಪತ್ನೀಃ=ಯಾವನೋ ಒಬ್ಬ ಭಗವದ್ಭಕ್ತನ ಪತ್ನಿಯರಂತೆ ಇರುವ (ಅಧೀನಗಳಾದ) ಆಪಃ =ಕ್ರೀಯೆಗಳು, ಅಹಿಗೋಪಾಃ =ಸಂಶಯದಿಂದ ರಕ್ಷಿಸಲ್ಪಟ್ಟವುಗಳಾಗಿ, ನಿರುದ್ಧಾಃ = ಅಜ್ಞಾನದಿಂದ ತಡೆಯಲ್ಪಟ್ಟವುಗಳಾಗಿಯೂ, ಅತಿಷ್ಠನ್=ಆದವು. ಆಗ ಶಕ್ರಃ = ಶ್ರೀ ಹರಿಯು, ವೃತ್ರಂ = ಅಜ್ಞಾನವನ್ನು, ಅಹಿಂ ಚ = ಸಂಶಯವನ್ನೂ ಕೂಡ, ಜಘನ್ವಾನ್ =ಸಂಹರಿಸಿ, ಯಾವುದು, ಅಪಾಂ=ಶುಭ ಕರ್ಮಗಳ, ಬಿಲಂ=ದ್ವಾರವು, ಅಸ್ತಿಕ್ಯಾದಿಗಳು, ತಾಭ್ಯಾಂ=ಅಜ್ಞಾನ ಸಂಶಯಗಳಿಂದ, ಅಪಿಹಿತಂ=ಅಚ್ಛಾದಿತವಾಗಿತ್ತೋ, ತತ್=ಆ ಅಸ್ತಿಕ್ಯಾದಿಗಳನ್ನು, ಅಪವವಾರ =ತೆರೆದನು ||೧೧||

ಚಾ || **(೧) ದಾಸಸ್ಯ ವಿಷ್ಣೋರ್ವರುಣಸ್ಯ ಪತ್ನ್ಯೋನಿರುದ್ಧಾ ಆಸನ್ನಹಿನಾ ಯದ್ವದೇವ । ಗಾವೋ ಬಲೇನೇಂದ್ರಯಜ್ಞೇ ಸುಕ್ಲೃಪ್ತಾ (೨) ವೃತ್ರಂ ಹತ್ವಾ ತಮಹಿಂ ಚಾತುಶಕ್ರಃ || ಉದ್ಘಾಟಯಾಮಾಸ ಬಿಲಂ ತದಾ ಪಾಂ ಶುಭದ್ವಾರಂ ಭಗವಾನ್ವಾ ತಮೋಘ್ನನ್** **||೧೧||**

ಅ || (೧) ಇಂದ್ರನ ಯಜ್ಞದಲ್ಲಿ ಚೆನ್ನಾಗಿ ಕ್ಲಪ್ತಗಳಾದ ಗೋವುಗಳು ಪರಿಗಣಗಳಲ್ಲಿ ಅಂತಭೂತನಾದ ಬಲನಾಮಕ ದೈತ್ಯನಿಂದ ಹೇಗೆ ರಕ್ಷಿಸಲ್ಪಟ್ಟು ತಡೆಯಲ್ಪಟ್ಟವೆಯೋ) ಹಾಗೆಯೇ ಶ್ರೀ ವಿಷ್ಣುವಿನ ಭೃತ್ಯನಾದ ವರುಣನ ಪತ್ನಿಯರಾದ ನದಿಗಳು ಅಹಿನಾಮಕ ದೈತ್ಯನಿಂದ (ರಕ್ಷಿಸಲ್ಪಟ್ಟವುಗಳೂ) ವೃತ್ರನಿಂದ ತಡೆಯಲ್ಪಟ್ಟವುಗಳೂ ಆದವು. (ವೃತ್ರೇಣಾಪಿ ನಿರುದ್ಧಾಃ ) ಎಂದು ಅಧ್ಯಾಹಾರ ಮಾಡದೆ ಇದ್ದರೆ ಅಹಿನೈವ ನಿರುದ್ಧಾಃ ಎಂದಂಗೀಕರಿಸಿದರೆ ಪೂರ್ವಾರ್ಧದಲ್ಲಿ ಜಲಗಳು ಅಹಿನಾಮಕ ದೈತ್ಯನಿಂದ ನಿರುದ್ಧಗಳಾಗಿವೆ, ಎಂದು ಹೇಳಿದ ಕಾರಣ ಉತ್ತರಾರ್ಧದಲ್ಲಿ ಅಹಿನಾಮಕ ದೈತ್ಯನ ಸಂಹಾರವನ್ನೇ ಹೇಳಬೇಕಿತ್ತು. ಅದು ಬಿಟ್ಟು ವೃತ್ರನನ್ನು ಸಂಹರಿಸಿದನು, ಎಂದು ಹೇಳಿದರೆ ಅಸಂಗತಿಯು ಆಗಬೇಕಾಗುವುದು. ಆದುದರಿಂದಲೇ ವೃತ್ರನನ್ನೂ ಅಹಿಯನ್ನೂ, ಸಂಹರಿಸಿದನು ಎಂದು ಹೇಳುವರು.) (೨) (ಆಗ ದೇವೇಂದ್ರನು ವೃತ್ರಾಸುರನನನ್ನು, ಸಂಹರಿಸಿ ಅಹಿಯನ್ನು ಶೀಘ್ರದಲ್ಲಿ ಅನಾಯಾಸದಿಂದ ಸಂಹರಿಸಿ ಯಾವುದು ಜಲಗಳ ಬಿಲವು ವೃತ್ರ ಅಹಿ ದೈಯರಿಂದ ಅಚ್ಛಾದಿತವಾಗಿತ್ತೋ ಅದನ್ನು ತೆರೆದನು. (ವೃತ್ರವಧಕ್ಕಿಂತಲೂ ಅಹಿಯನ್ನು ಸಂಹರಿಸಲಿಕ್ಕೆ ಅತ್ಯಲ್ಪ ಪ್ರಯತ್ನವು ಎಂಬ ಅಭಿಪ್ರಾಯದಿಂದ ಕಂಠತಃ ಅಹಿಂ ಜಘನ್ವಾನ್ ಎಂದು ಹೇಳಲಿಲ್ಲ (2) (ಅಧ್ಯಾತ್ಮ ರೂಪವಾದ ಅರ್ಥವನ್ನು ಹೇಳುತ್ತಾರೆ.) ಶ್ರೀ ಹರಿಯು ಅಜ್ಞಾನವನ್ನೂ ಸಂಶಯವನ್ನೂ ಪರಿಹರಿಸುವವನಾಗಿ ಶುಭ ಕರ್ಮಗಳ ದ್ವಾರವಾದ ಅಸ್ತಿಕ್ಯಾದಿಗಳು

ಆಚ್ಛಾದಿತಗಳಾಗಿದ್ದವು. ಅವುಗಳನ್ನು ತೆರೆದನು. (ಆಧ್ಯಾತ್ಮಾರ್ಥದಲ್ಲಿ ದಾಸನು ಯಾರು ? ಯಾವನಾದರೂ ವಿಷ್ಣುಭಕ್ತನು ದಾಸನು, ಪತ್ನೀ ಶಬ್ದವು ಸ್ತ್ರೀಯರಲ್ಲಿ ಹೇಗೋ ಹಾಗೆಯೇ ಅಮುಖ್ಯವಾಗಿ ಉಪಹಾರಕಗಳಾದ ಕರ್ಮಗಳಲ್ಲಿ ಇದೆ.) ||೧೧||

ಋ || (೩೮೦) ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ತ್ವಾ ಪ್ರತ್ಯಹನ್ದೇವ ಏಕಃ ।

ಅಜಯೋ ಗಾ ಅಜಯಃ ಶೂರ ಸೋಮ ಮವಾಸೃಜಃ ಸರ್ತವೇ ಸಪ್ತ ಸಿಂಧೂನ್ ||೧೨||

ಅ || ಇಂದ್ರ =ಇಂದ್ರನೇ, ಯತ್ =ಯಾವ ಪಕ್ಷದಲ್ಲಿ ಸೃಕೇ = (ಆಯುಧದ ನಾಮವು. ಅದರ ಸಂಬಂಧದಿಂದ ಯುದ್ಧವನ್ನು ಲಕ್ಷಣಯಾ ಇಟ್ಟುಕೊಳ್ಳಬೇಕು. ಅಥವಾ ಯುದ್ಧದ ನಾಮವೇ) ಯುದ್ಧದಲ್ಲಿ, ಏಕಃ =ಪ್ರಧಾನನಾದಾಗ್ಯೂ, ದೇವಃ = ದೇವತೆಯು, ತ್ವಾ=ನಿನ್ನನ್ನು, ಪ್ರತ್ಯಹನ್=ಹೊಡೆಯಲು ಇಚ್ಛಿಸುವವನೋ, ತತ್=ಆಗ (ನೀನು) ಅಶ್ವ್ಯಃ =ಅಶ್ವ ಸಂಬಂಧಿಯಾದ, ವಾರಃ = (ವೃಞ ವರಣೇ) ನಿವಾರಕನೂ, (ಅಂದರೆ ಪ್ರತಿಭಟನೆ ಕುದುರೆಗಳನ್ನು ತಡೆಯುವವನು) ಅಭವಃ =ಆಗಿರುತ್ತಿ. ಮತ್ತು, ಶೂರ=ಎಲೋ ಪರಾಕ್ರಮಶಾಲಿಯೇ, (ನೀನು) ಗಾಃ = (ಶತ್ರುಗಳ) ಗೋವುಗಳನ್ನು, ಅಜಯಃ =ಗೆದ್ದಿರುತ್ತಿ. ಅಜಯಃ = (ಶತ್ರುಗಳ ಹಿರಣ್ಯಾದಿಗಳನ್ನು) ಗೆದ್ದಿರುತ್ತಿ. (ನೀನು) ಸಪ್ತ ಸಿಂಧೂನ್ =ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸಂನಿಧಿಂ ಕುರು, ಎನ್ನುವಲ್ಲಿ ಹೇಳಲ್ಪಟ್ಟ) (೭) ಏಳು ಪ್ರಧಾನ ನದಿಗಳನ್ನು ಅಥವಾ (೯೯ ಪ್ರಧಾನ ನದಿಗಳಲ್ಲಿ ಅಂತರ್ಗತಗಳಾದ ಕಾವೇರೀ ಕೃಷ್ಣವೇಣೀ ಚ ತುಂಗಭದ್ರಾ ಸರಸ್ವತೀ ಗೋದಾ ಚ ಯಮುನಾ ಗಂಗಾ ಮಹಾನದ್ಯಃ ಪ್ರಕೀರ್ತಿತಾಃ || ಎಂದು ಹೇಳಲ್ಪಟ್ಟ) (೭) ಏಳು ಮುಖ್ಯ ನದಿಗಳನ್ನು, ಸೋಮಂ =ಸೋಮವನ್ನು ಸರ್ತವೇ =ಹೊಂದುವುದಕ್ಕಾಗಿ, ಅವಾಸೃಜಃ = (ವೃತ್ರಾದಿಗಳ ಪ್ರತಿಬಂಧದಿಂದ) ಬಿಡಿಸಿರುತ್ತಿ. (ಅಂದರೆ =ಸೋಮ ರಸವನ್ನು ಹಿಂಡುವ ಕಾಲದಲ್ಲಿ ಸೋಮರಸದ ಅಭಿವೃದ್ಧಿಗಾಗಿ ನದೀ ಜಲಗಳಿಂದ ಸೋಮವನ್ನು ಕೂಡಿಸುವುದಕ್ಕಾಗಿ ನದಿಗಳನ್ನು ಪ್ರವರ್ತಿಸಿದವನಾಗಿರುತ್ತಿ.) ಆಧ್ಯಾತ್ಮ ರೂಪ ಅರ್ಥದಲ್ಲಿ ಎಲೋ ಶ್ರೀ ಹರಿಯೇ, ಗಾಃ = (ಭಕ್ತರ) ಜ್ಞಾನಗಳನ್ನು, ಅಜಯಃ =(ಮಿಥ್ಯಾಜ್ಞಾನದಿಂದ) ಗೆದ್ದಿರುತ್ತಿ. (ಅಂದರೆ -ಮಿಥ್ಯಾಜ್ಞಾನದಿಂದ ಅಭಿಭೂತಗಳಾದ ಜ್ಞಾನಗಳನ್ನು ತಿರಸ್ಕರಿಸಿ ಸ್ಥಿರಗಳನ್ನಾಗಿ ಮಾಡಿರುತ್ತಿ.) ಸೋಮಂ = ಭಕ್ತರಾದ ನಮ್ಮ ಮನಸ್ಸನ್ನು, ಅಜಯಃ = (ಶಬ್ದಾದಿ ವಿಷಯ ಸಮುದಾಯದಿಂದ) ಗೆದ್ದಿರುತ್ತಿ. (ವಿಷಯಗಳಿಂದ, ಅಪಹೃತವಾದ ಮನಸ್ಸನ್ನು ವಿರಕ್ತವನ್ನಾಗಿ ಮಾಡಿರುತ್ತಿ.) ಸಪ್ತಸಿಂಧೂನ್ = ೭ ಸಮುದ್ರಗಳನ್ನೆಂಬಂತೆ ದುಸ್ತರಗಳಾದ ಮಹತ್ತತ್ವಾದಿಗಳನ್ನು, (ಅಂದರೆ -ಮಹತ್ತತ್ವದ ಅಂಶ ಭೂತವಾದ ಚಿತ್ತವನ್ನೂ ಅಹಂಕಾರ ತತ್ವದ ಅಂಶಭೂತವಾದ ಅಹಂಕಾರವನ್ನೂ ದೇಹದಲ್ಲಿರುವ ಪಂಚಭೂತಾಂಶಗಳನ್ನು) ಸರ್ತವೇ =ನ್ಯಾಯ ಮಾರ್ಗದಲ್ಲಿ ಹೋಗುವುದಕ್ಕಾಗಿ ಅವಾಸೃಜಃ = ಪ್ರೇರೇಪಿಸಿದವನಾಗಿರುತ್ತಿ. (ಇತರವಾದುದು ಸ್ಪಷ್ಟವೇ) ||೧೨||

ಭಾ || (೧) ಸೃಕೇ ಯುದ್ಧೇ ಪ್ರತ್ಯಹಂಸ್ತ್ವಾಂ ಯದಿ ಸ್ಮದೇವಃ ಪ್ರಧಾನೋಽಪಿ ತದಶ್ವವಾರಃ || (೨) ವಾಲೀವ ತ್ವಂ ನನು ದೇವಸ್ತದಾನೀಂ ಪ್ರತಿಹಂತಾ ತೇನೈವ ಕಶ್ಚಿದ್ಧಿ ತಸ್ಮಾತ್ || (೩) ಅಜಯೋ ಬಲಾದ್ಗಾಃ ಅಜಯೋ ಹಿರಣ್ಯಂ ಸೋಮಂ ಗಂತುಮಮುಚಃ ಸಪ್ತಸಿಂಧೂನ್ ||೧೨||

ಅ॥ (೧) ಸೃಕೇ = ಯುದ್ಧದಲ್ಲಿ ಒಬ್ಬ ಪ್ರಧಾನ ದೇವನೂ ನಿನ್ನನ್ನು ಕೊಲ್ಲಲಿಕ್ಕೆ ಇಚ್ಛಿಸಿದರೆ = ಆಗ ಅಶ್ವ ಸಂಬಂಧಿವಾರಕನು ಆಗು. (ವಾರಃ = ವಾರಣಂ(ಶ್ರೀ) ಅಸ್ಯಾಸ್ತೀತಿ ವಾರಃ =ವಾರಕನು) (ಅಂದರೆ ಆ ಪ್ರತಿಭಟನ ಅಶ್ವಗಳನ್ನು ತಡೆಯುವವನಾಗು. (೨) (ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಭಾಷ್ಯಕಾರರು ದೃಷ್ಟಾಂತವನ್ನು ಹೇಳುತ್ತಾರೆ) ಹೇಗೆ ವಾಲಿಯು (ತನ್ನ ದೃಷ್ಟಿಪಾತ ಮಾತ್ರದಿಂದ ಪರರ ಸೈನ್ಯವನ್ನು ಅಪಹಾರ ಮಾಡುತ್ತಾನೋ, ಹಾಗೆಯೇ ಆ ನೀನು ನೋಡೋಣ ಮಾತ್ರದಿಂದ ಶತ್ರುವಿನ ರಥದಲ್ಲಿ ಯೋಜಿತಗಳಾದ ಕುದುರೆಗಳ ಬಲವನ್ನು ಅಪಹರಿಸಿ ಆ ಕುದುರೆಗಳನ್ನು ಹಿಂದು ಮುಖವಾಗಿ ಹೊರುವ ಹಾಗೆ ಮಾಡುತ್ತಿ. ಅಥವಾ ಅಶ್ವವಾರಃ ಎಂದರೆ -ಅಶ್ವನಿಷ್ಠಃ ವಾರಃ =ಸಂಭಜನಂ, ಸ್ವಸ್ವಾಮಿವಾಹಕತ್ವಂ ಅಸ್ಯಾಸ್ತೀತಿ ವಾರಃ = ವಾಹಕನು, ಪ್ರಸಿದ್ಧನು, ಆಗ ಅಂದರೆ ರಥವನ್ನು ಹೊರುತ್ತಿರುವ ಪರರ ಕುದುರೆಗಳು ಹಿಂದು ಮುಖವಾಗಿ ಹೇಗೆ ಓಡಿ ಹೋಗುತ್ತವೋ ಹಾಗೆ ಮಾಡು.) ದೇವನೂ ಆಗ ನಿನ್ನನ್ನು (ಇರುಗಿ ಹೊಡೆಯಲು ಇಚ್ಛಿಸಿದರೆ ಆಗ ಆ ಪ್ರತಿಭಟನ ಕುದುರೆಗಳನ್ನು ನೀನು ತಡೆಯುವವನು ಆಗುತ್ತಿ, ಎಂದು ಹೇಳಿದುದರಿಂದ ಪ್ರಥಮತಃ ಪ್ರಹಾರ (ಹೊಡೆಯುವಿಕೆ) ವಿಷಯನು ಆಗುತ್ತಾನೆಂದು ಪ್ರಾಪ್ತವಾಗುತ್ತದೆ. ಆದ ಕಾರಣ ಅಭಿಪ್ರಾಯ ಹೇಳುತ್ತಾರೆ.) ನೋಡೋಣ ಮಾತ್ರದಿಂದ ನೀನು ಪರರ ಸೈತ್ಯವನ್ನು ಅಪಹರಿಸುವುದರಿಂದ ನಿನ್ನನ್ನು ತಿರುಗಿ ಹೊಡೆಯುವವನು ಯಾವನೊಬ್ಬ ತಿರುಗಿ ಹೊಡೆಯಲು ಇಚ್ಛಿಸಿದರೆ ಎಂದರ್ಥವು.) ಪ್ರಸಿದ್ಧ (೩) (ಶೌರ್ಯವಿದ್ಧವನಿಗೇನೇ ಬಲಾತ್ಕಾರ ಕರಣವು ಕೂಡುವ ಪ್ರಯುಕ್ತ) ಬಲಾತ್ಕಾರದಿಂದ (ಶತ್ರುಗಳ) ಗೋವುಗಳನ್ನು ಗೆದ್ದಿರುತ್ತಿ. ಪುನಃ ಹಿರಣ್ಯವನ್ನು ಗೆದ್ದಿರುತ್ತಿ. (ಶ್ರುತಿಯಲ್ಲಿ ಹೇಳಿದ ಸೋಮವನ್ನು ಬಿಟ್ಟು ಶ್ರುತಿಯಲ್ಲಿ ಹೇಳದ ಹಿರಣ್ಯಂ ಎಂದು ಅಧ್ಯಾಹಾರ ಮಾಡಲಿಕ್ಕೆ ಏನು ಕಾರಣವು ಎಂದರೆ - ಸೋಮವು ಹವಿಸ್ಸಾದ ಕಾರಣ ಅದಕ್ಕೆ ಇಂದ್ರನೇ ಸ್ವಾಮಿಯೆಂದು ಸಿದ್ಧವಾದ ಪ್ರಯುಕ್ತ ಪರಕೀಯ ವಸ್ತುಗಳ ಜಯವನ್ನೇ ಹೇಳಬೇಕಾದ ಕಾರಣ ಶ್ರುತಿಯಲ್ಲಿ ಹೇಳದ ಹಿರಣ್ಯಂ ಎನ್ನುವುದಕ್ಕೇ ಅಧ್ಯಾಹಾರ ಮಾಡಿದ್ದು.) (೪) ನೀನು ೭ ಪ್ರಧಾನ ನದಿಗಳನ್ನು ಸೋಮವನ್ನು ಹೊಂದುವುದಕ್ಕಾಗಿ (ವೃತ್ರಾದಿಗಳ ಪ್ರತಿಬಂಧದಿಂದ) ಬಿಡಿಸಿರುತ್ತಿ. (ಅಂದರೆ ಸೋಮವನ್ನು ಹಿಂಡುವ ಕಾಲದಲ್ಲಿ ಸೋಮರಸದ ಅಭಿವೃದ್ಧಿಗಾಗಿ ಪ್ರತಿಬಂಧದಿಂದ) ಬಿಡಿಸಿರುತ್ತಿ. (ಅಂದರೆ ಸೋಮವನ್ನು ಹಿಂಡುವ ಕಾಲದಲ್ಲಿ ಸೋಮರಸದ ಅಭಿವೃದ್ಧಿಗಾಗಿ ನದೀಜಲಗಳಿಂದ ಸೋಮವನ್ನು ಕೂಡಿಸುವುದಕ್ಕಾಗಿ ನದಿಗಳಿಗೆ ಪ್ರವರ್ತಕನಾಗಿರುತ್ತಿ.) ॥೧೨॥

ಋ ॥ (೩೮೧) ನಾಸ್ಮೈ ವಿದ್ಯುನ್ನ ತನ್ಯತುಃ ನಿಷೇಧ ನ ಯಾಂ ಮಿಹಮಕಿರ ದ್ಧ್ರಾದುನಿಂ ಚ।
ಇಂದ್ರಶ್ಚ ಯದ್ಯುಯುಧಾತೇ ಅಹಿಶ್ಚೋತಾಪರೀಭ್ಯೋ ಮಘುವಾ ವಿಜಿಗ್ಯೇ ॥೧೩॥

ಅ ॥ ಯತ್=ಯಾವಾಗ, ಇಂದ್ರಶ್ಚ ಅಹಿಶ್ಚ=ಇಂದ್ರನೂ ಅಹಿಯೂ ಕೂಡ, ಯಯುಧಾತೇ =ಯುದ್ಧ ಮಾಡಿರುವರೋ, (ಎಲೋ ಇಂದ್ರನೇ ಯಾವಾಗ ನಿನಗೆ ಅಹಿದೈತ್ಯನಿಂದ ಯುದ್ಧವು ಪ್ರವೃತ್ತವಾಗಿಯದೋ) (ಆಗ) ವಿದ್ಯುತ್=ವಿದ್ಯುನ್ನಾಮಕ ಆಯುಧವು, ಅಸ್ಮೈ=ಅಹಿಗಾಗಿ, ನ ನಿಷೇಧ =ಈ ಅಹಿಗೆ ಇಂದ್ರವಧರೂಪವಾದ ಪ್ರಯೋಜನದ ಸಿದ್ಧಿಯನ್ನು ಮಾಡಲಿಲ್ಲ. (ಇಂದ್ರನನ್ನು ಸಂಹರಿಸಲಿಕ್ಕೆ ಶಕ್ತನಾಗಲಿಲ್ಲ.) ತನ್ಯತುಶ್ಚ=ತನ್ಯತು ಎಂಬ ಶಬ್ದದಿಂದ ಹೇಳಲ್ಪಟ್ಟ ವಜ್ರಾಯುಧವೂ, ನ ನಿಷೇಧ=ಈ ಅಹಿಗೆ ಇಂದ್ರವಧರೂಪವಾದ ಪ್ರಯೋಜನನ ಸಿದ್ಧಿಯನ್ನು ಮಾಡಲಿಲ್ಲ.

ಯಾಂ =ಯಾವ, ಮಿಹಂ=ಅತಿತೀಕ್ಷ್ಣವಾದ ಆಯುಧವನ್ನು ಹ್ರಾದುನಿಂ ಚ =ವಜ್ರ ಪ್ರಭೇದವನ್ನು (ಯುದ್ಧದಲ್ಲಿ ಅಹಿದೈತ್ಯನು ನಿನ್ನನ್ನು ಕುರಿತು) ಅಕಿರತ್ = (ಕೃವಿಕ್ಷೇಪೇ ಬಿಸಾಡಿರುವನೋ, (ಅವುಗಳೂ ಕೂಡ ನ =ಸಿದ್ಧಿಯನ್ನು ಮಾಡಲಿಲ್ಲ. ಮತ್ತೆ ಅಪರೀಭ್ಯಃ = ಬೇರೆ ಕಾಲದಲ್ಲಿ ಮುಂದಿನ ಕಾಲದಲ್ಲಿ ಮಘನಾ ಉತ = ದೇವೇಂದ್ರನಾದ ನೀನೇ, (ಆ ಅಹಿಯನ್ನು) ವಿಜಿಗ್ಯೇ = (ಜಿಜಯೇ) ಗೆದ್ದಿರುತ್ತಿ. (ಅಧ್ಯಾತ್ಮರೂಪವಾದ ಅರ್ಥವು) ವಿದ್ಯುತ್ = (ದ್ಯುತದೀಪ್ತೌ) ವಿಪರೀತವಾದ ದೀಪ್ತಿಯು, ವಿಪರೀತವಾದ ಮತಿಯು, ತನ್ಯತುಃ = (ಸ್ತನಶಬ್ದೇ) (ಪ್ರತಿವಾದಿಗಳ ಪ್ರಮಾಣ ದೂಷಣಾಭಾಸ ಪ್ರಯೋಗರೂಪ ಶಬ್ದಗಳು) ಅಥವಾ ತನ್ಯತುಃ = (ಇಷ್ಟಂ ತನ್ಯತೇ ಅನಯಾ ವಕ್ತೃಶಕ್ತ್ಯಾ ಎಂಬ ವ್ಯುತ್ಪತ್ತಿಯಿಂದ) ವಕ್ತೃಶಕ್ತಿಯು ಯಾವ ಮಿಹಂ=ವಕ್ತೃಶಕ್ತಿಯನ್ನು ಅಥವಾ ಜನ್ಮಾಂತರ ವಾಸನಾರೂಪ ಶಕ್ತಿಯನ್ನು ಹ್ರಾದುನಿಂಚ = (ಹ್ರಾದ ಅವ್ಯಕ್ತೇ ಶಬ್ದೇ) ಹುಂಕಾರವನ್ನು, ಅಹಿಃ = ಅಜ್ಞಾನವು ಅಕಿರತ್ =ಎಬ್ಬಿಸಿಯದೋ, ಅನಾದಿ ರೂಪವಾದ ವಾಸನಾಶಕ್ತಿಯಿಂದಲೂ ಅಜ್ಞಾನದಿಂದಲೂ ಪ್ರವರ್ತಿತವಾದ ಹುಂಕಾರಾದಿಗಳು ಯಾವುದು ಪ್ರತಿವಾದಿಗೆ ಇವೆಯೋ, ಅವೆಲ್ಲವೂ ಪರಮಾತ್ಮನ ಅನುಗ್ರಹವಿದ್ದರೆ, ಅಸ್ಮೈ =ಭಕ್ತನಿಗಾಗಿ, ನ ನಿಷೇಧ = ಸಿದ್ಧಿಯನ್ನುಂಟು ಮಾಡುವುದಿಲ್ಲ.) (ಕಾರ್ಯಕಾರಿಯು ಆಗುವುದಿಲ್ಲ. ವ್ಯರ್ಥವೇ ಆಗುತ್ತದೆ.) (ಅಂದರೆ ಭಗವದ್ಭಕ್ತರಿಗೆ ಪರಾಜಯವು ಉಂಟಾಗುವುದಿಲ್ಲ.) ಇಂದ್ರಶ್ಚ =ಶ್ರೀ ಹರಿಯೂ, ಅಹಿಶ್ಚ =ಸಂಶಯವೂ ಕೂಡ, ಯತ್ =ಯಾವಾಗ ಯುಯುಧಾತೇ =ಯುದ್ಧ ಮಾಡಿದವೋ, ಆಗ ಮಘವಾ ಉತ =ಶ್ರೀ ಹರಿಯೂ ಕೂಡ, ಅಪರೀಭ್ಯಃ =ಮೇಲಿನ ಕಾಲದಲ್ಲಿ ಭಕ್ತರ ಹೃದಯದಲ್ಲಿದ್ದವನಾಗಿ ಭಕ್ತರ ಅಜ್ಞಾನವನ್ನೂ ಸಂಶಯವನ್ನೂ ವಿಜಿಗ್ಯೇ =ಗೆದ್ದನು. (ಭಕ್ತರ ಅಜ್ಞಾನ ಸಂಶಯಗಳನ್ನು ಪರಿಹರಿಸಿದನು.) ||೧೩||

ಭಾ || (೧) ಅಶನಿಂ ಯಾಂ ವಿದ್ಯುತಂ ಯಾ ಮಿಹಂಚ ನಾಮ್ನಾ ಹೇತಿಂ ವೇದ್ಯುಪಮಾಂ ಸುತೀಕ್ಷ್ಣಾಂ । ಅಶನಿಭೇದಂ ಹ್ರಾದುನಿನಾಮಧೇಯಂ ತ್ವಾಮುದ್ದಿಶ್ಯೈವಾಕಿರತ್ಸೋಽಹಿರುಗ್ರಃ॥ ತ್ವಾಂ ಪ್ರತ್ಯೇತನ್ನೈವ ಸಿದ್ಧಿಂಚಕಾರ ಪಶ್ಚಾತ್ಕಾಲೇ ತ್ವಜಯಸ್ತ್ವಂ ತಮೇವ ||೧೩||

ಅ || (೧) (ಇಡೀ ಋಕ್ಕಿನ ತಾತ್ಪರ್ಯವನ್ನು ಭಾಷ್ಯಕಾರರು ಹೇಳುತ್ತಾರೆ) ಯಾವ ತನ್ಯತು ಶಬ್ದದಿಂದ ಹೇಳಲ್ಪಟ್ಟ ವಜ್ರಾಯುಧವನ್ನು ಯಾವ ವಿದ್ಯುನ್ನಾಮಕ ಆಯುಧವನ್ನು, ಯಾವ ನಾಮದಿಂದ, ಮಿಹಂ = ಯಜ್ಞವೇದಿಗೆ ಸದೃಶವಾದ ಅತಿ ತೀಕ್ಷ್ಣವಾದ ಆಯುಧ ವಿಶೇಷವನ್ನು ಯಾವ ಹ್ರಾದುನಿ ಎಂದು ಹೆಸರುಳ್ಳ ವಜ್ರ ಪ್ರಭೇದವನ್ನು, ಆ ಕ್ರೂರನಾದ ಅಹಿ ದೈತ್ಯನು ನಿನ್ನನ್ನುದ್ದೇಶಿಸಿಯೇ ಬಿಸುಟನು. ಈ ಎಲ್ಲಾ ಆಯುಧ ಸಮುದಾಯವು ನಿನ್ನನ್ನು ಕುರಿತು ಅಂದರೆ ನಿನ್ನ ಸಂಬಂಧಿಯಾದ ನಿನಗೆ ಉಪಹತಿ ರೂಪವಾದ ಸಿದ್ಧಿಯನ್ನು ಮಾಡಲೇ ಇಲ್ಲ. (ನಿನಗೆ ಕೆಡುಕು ಮಾಡಲಿಲ್ಲ.) ಮತ್ತೆ ಮೇಲಿನ ಕಾಲದಲ್ಲಿ ಆದರೂ ಇಂದ್ರನಾದ ನೀನೇ ಆ ಅಹಿಯನ್ನು ಗೆದ್ದಿರುತ್ತಿ. ||೧೩||

ಋ || (೩೮೨) ಅಹೇರ್ಯಾತಾರಂ ಕಮಪಶ್ಯ ಇಂದ್ರ ಹೃದಿಯತ್ತೇ ಜಘ್ನುಷೋ ಭೀರಗಚ್ಛತ್ । ನವ ಚ ಯನ್ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ||೧೪||

ಅ || ಇಂದ್ರ =ಇಂದ್ರನೇ, ಅಹೇಃ =ಅಹಿನಾಮಕ ಅಸುರನನ್ನು ಕುರಿತು, ಯಾತಾರಂ =ಇದಿರು ಹೋಗುವ (ಅಂದರೆ ಅಹಿಯೊಡನೆ ಯುದ್ಧ ಮಾಡುವ) ನಿನ್ನನ್ನು (ಹೊರತು) ಕಂ =ಯಾರನ್ನು ಅಪಶ್ಯಃ ನೋಡಿರುತ್ತಿ. (ಯಾರನ್ನು ನೋಡಲಿಲ್ಲ. (ಅಂದರೆ - ನೀನು ಸಕಲ ಲೋಕ ವೃತ್ತಾಂತವನ್ನು ತಿಳಿದವನಾದರೂ ಅಹಿನಾಮಕ ಅಸುರನಿಗೆ ಪ್ರತಿಭಟನನ್ನು ಕಾಣಲಿಲ್ಲವಷ್ಟೇ.)

(ಏಕೆಂದರೆ) ಯತ್ =ಯಾವ ಕಾರಣದಿಂದ, ಜಘ್ನುಷಃ ತೇ = ಆ ಅಹಿಯನ್ನು ಸಂಹರಿಸುವವನಾದಾಗ್ಯೂ ನಿನ್ನ ಹೃದಿ =ಹೃದಯದಲ್ಲಿ, ಭೀಃ =ಭಯವು, ಅಗಚ್ಛತ್ = ಹೊಂದಿತು (ಭಯವು ಉಂಟಾಯ್ತು.) (ಅಂದರೆ ನಿನ್ನ ಮನಸ್ಸಿನಲ್ಲಿಯೂ ಸಂಹರಿಸಲು ಸಾಧ್ಯವೋ ಅಸಾಧ್ಯವೋ ಎಂದು ಮೊದಲು ಭಯವು ಉಂಟಾಗಿತ್ತು. ಈ ರೀತಿಯಾಗಿ ಇರುವ ಅಹಿಯನ್ನು ನೀನು ಸಂಹರಿಸಿರುತ್ತಿ.) ಯತ್ =ಯಾವ ಕಾರಣದಿಂದ, (ನೀನು ರಜಾಂಸಿ = (ರಜಃ ಎನ್ನುವುದು ಅಂತರಿಕ್ಷ ನಾಮಧೇಯವು) ಆಕಾಶ ಪ್ರದೇಶಗಳನ್ನು, ಭೀತಃ ಶ್ಯೇನಃನ=ಭಯಗ್ರಸ್ತವಾದ ಗಿಡುಗ ಹೇಗೆ ಅತಿಕ್ರಮಿಸಿ ಹೋಗುವುದೋ (ಗಿಡುಗ ಹಕ್ಕಿಯೇ ಸ್ವಭಾವತಃ ಅತಿವೇಗವುಳ್ಳದ್ದು. ಭಯಗ್ರಸ್ತವಾದುದು ಸುತರಾಂ ಅತಿ ವೇಗವುಳ್ಳದ್ದು.) ಹಾಗೆಯೇ ನವ ಚ ನವತಿಂ ಚ ಸ್ರವಂತೀಃ=೯೯ ಹರಿಯುತ್ತಿರುವ ನದಿಗಳನ್ನು, ಅತರಃ =ದಾಟಿದವನಾಗಿರುತ್ತಿ. (ಆದ ಕಾರಣ ನೀನು ಹೊರತು ಇನ್ನೊಬ್ಬನು ಅಹಿಯ ಇದಿರು ಹೋಗುವವನು ಇಲ್ಲ.) (ಅಂದರೆ ಅಹಿಯು ನಾನಾ ನದಿಗಳನ್ನು ತಡೆಯುವನಾದುದರಿಂದ ಆ ಅಹಿಯನ್ನು ಸಂಹರಿಸುವುದಕ್ಕಾಗಿ ಶೀಘ್ರದಲ್ಲಿ ಆ ನದಿಗಳನ್ನೆಲ್ಲಾ ದಾಟಿ ಆ ಅಹಿಯನ್ನು ಸಂಹರಿಸಿರುತ್ತಿ.) (ಅಧ್ಯಾತ್ಮಪರವಾದ ಅರ್ಥವು) ಅಹೇಃ = ಸಂಶಯವನ್ನು, ಯಾತಾರಂ=ಇದಿರು ಹೋಗುವ (ಪರಿಹರಿಸುವ) ನಿತ್ಯನ್ನು ಕುರಿತು ಕಂ=ಯಾರನ್ನು, ಅಪಶ್ಯಃ = ನೋಡಿರುತ್ತಿ... ಇಂದ್ರ =ಶ್ರೀ ಹರಿಯೇ. (ನೀನು) ಹೊರತು ಯಾರೊಬ್ಬನೂ ಇದಿರು ಹೋಗುವವನು (ಪರಿಹರಿಸುವವನು) ಇಲ್ಲವೇ ಇಲ್ಲ.) (ಏಕೆಂದರೆ) ಯತ್ =ಯಾವ ಕಾರಣ ದೆಶೆಯಿಂದ, ತೇ ಜಘ್ನುಷಃ =ನೀನೇ ಸಂಶಯವನ್ನು ಪರಿಹರಿಸುವಾಗ (ನಿನ್ನವರ) ಹೃದಿ ಭೀಃ ಅಗಚ್ಛತ್ =ಹೃದಯದಲ್ಲಿ ಭಯವು ಹೋಯ್ತು. (ಅಂದರೆ ಹೃದಯದಲ್ಲಿರತಕ್ಕ ಭಯವು ಚೆನ್ನಾಗಿ ನಾಶಗೊಂಡಿತು. ಇತರರು ಸಂಶಯ ಪರಿಹಾರಕ್ಕಾಗಿ ಪ್ರವೃತ್ತರಾದರೆ ಭಯವು ಹೋಗಲಾರದು. ) ಮತ್ತು ಯತ್ =ಯಾವ ಕಾರಣದಿಂದ (ನೀನು) ನವ ಚ ನವಂತಿಂ ಚ = ೯೯ ದೇವತೆಗಳನ್ನು, ಭೀತಃ ಶ್ಯೇನೋನ =ಭಯಗ್ರಸ್ತವಾದ ಗಿಡುಗ, ರಜಾಂಸಿ =ಆಕಾಶ ಪ್ರದೇಶಗಳನ್ನು ಹೇಗೆ ದಾಟುತ್ತದೋ, ಹಾಗೆಯೇ, (ಸಂಸಾರಗಳನ್ನು ದಾಟುವ ಆ ದೇವತೆಗಳನ್ನು) ನವ ಚ ನವತಿಂಚ ಸ್ರವಂತೀಃ = ೯೯ ನದಿಗಳನ್ನು ಅತರಃ =ದಾಟಿಸಿರುತ್ತಿ. (ಆದ ಕಾರಣ ನೀನೇ ಸಂಶಯವನ್ನು ಪರಿಹರಿಸುವವನು) ||೧೪||

ಭಾ || (೧) ಅಹೇರ್ಯೋದ್ಧಾರಂ ಕಮಪಶ್ಯ ಇಂದ್ರಯಜ್ಞಘ್ನುಷಸ್ತೇಽಪಿ ಭಯಂ ಜಗಾಮ || (೨) ಜ್ಞಾನಾನಿ ಮಿಥ್ಯಾ ಬೋಧತೋಽ (೩) ತ್ಮನ್ಮನಶ್ಚ ತಬ್ಬಾದಿಕಾದಮುಚ (೪) ಸ್ಸಪ್ತಸಿಂಧೂನ್ । ಮತ್ತ್ರಾಹ ತ್ವಾದೀನ್ (೫) ವಿಪರೀತಾ ಮತಿಸ್ತು ವಿದ್ಯುಚ್ಛ (೬) ಬ್ದಾಃಸ್ತನ್ನತುರ್ವಕ್ತ್ಯಶಕ್ತಿಃ । ಮಿಹೇತ್ಯುಕ್ತಾ (೮) ಹ್ರಾದುನಿರ್ಹುಂಕೃತಿಶ್ಚ ಪ್ರತಿವಕ್ತೃಣಾ (೯) ಮನುಕೂಲೇ ರಮೇಶೇ || (ಪರೇಶೇ) ನ ಸಾಧಯಂತಿ ಸ್ಮ ತಮಸ್ಸಮುತ್ಥಾಂ (೧೦) ಜಯತ್ಯೇನಂ ಸಂಶಯಂ ವಾಸುದೇವಃ || (೧೧) ಸ್ವಭಕ್ತಾರ್ಥೇತದ್ಧ್ರುದಿಸ್ಥಃ ಕ ಏವ ತ್ವದನ್ಯೋಽಹೇರಭಿಗಂತಾ ಭವೇತ । (೧೨) ತವೈವ ಯಸ್ಮಾತ್ಸಂಶಯಂ ಜಘ್ನುಷಸ್ತು ತ್ವದೀಯಾನಾಂ ಭಯಮಂಜೋ ವ್ಯಪ್ಯತಿಃ (೧೩) ಶತಮೇಕೋ ನಮತರಸ್ತ್ವಂ ನದೀನಾಮಹಿಂ ದೈತ್ಯಂ ಘ್ನ್ ಯಥಾಽಽಕಾಶದೇಶಾತ್ । ಭೀತಃ ಶ್ಯೇನೋ ಹ್ಯತಿ (ಧಿ) ಗಚ್ಛೇತ್ತಥೈವ ನಾನಾನದೀವಾರಕತ್ವಾತ್ತು ತಸ್ಯ || (೧೪) ಈಶೋ ದೇವಾನಾಂ ತಾವತಾಂ ತಾವತೀಶ್ಚ ಸೃತ್ವಾಪಗಾಸ್ತಾರಯಾಮಾಸ (೧೫) ಯದ್ವತ್ । ಭೀತಃ ಶ್ಯೇನಸ್ತರತೀತ್ಥಂ ತಥೈಷಾಂ ಕೃತ್ವೋಪೆಮಾಂ ತಾರಯಾಮಾಸ ದೇವಃ (೧೬) ಸ್ವಾತಂತ್ರ್ಯೇ ಭೇದಕರಣೇ ಚೋಕ್ತ ಏವ ವ್ಯತ್ಯಾಸ ಇತ್ಯನವದ್ಯಂ ತದೇತತ್ (೧೭) ವಸ್ವಾದಿತ್ಯಾಮರುತಶ್ಚಾಶ್ವಿನೌಚ ಬೃಹಸ್ಪತಿಃ ಶೇಷವಿಪಾನಿರುದ್ಧಾಃ । ಬ್ರಹ್ಮಾ ಬ್ರಹ್ಮಾಣಃ ಋಭವಶ್ಚೈವ ರುದ್ರಾಃ ಊನಂ ಶತಂ ದೇವತಾಸಂಹಿತೋಕ್ತಂ||೧೪||

ಅ ॥ (೧) ಅಹಿನಾಮಕ ಅಸುರನೊಡನೆ ಯುದ್ಧ ಮಾಡುವವನನ್ನು ನಿನ್ನನ್ನು ಹೊರತು ಯಾರನ್ನು ನೋಡಿರುತ್ತಿ ? (ಯಾರನ್ನೂ ನೋಡಲಿಲ್ಲ. ಅಂದರೆ ಸರ್ವಜ್ಞನಾದ ನೀನೂ ಸಹ ಅವನ ಪ್ರತಿಭಟನನ್ನು ನೋಡಲಿಲ್ಲ.) (ಮಹಾ ಪರಾಕ್ರಮಶಾಲಿಯು) (ಏಕೆಂದರೆ) ಯಾವ ಕಾರಣದಿಂದ ಆತನನ್ನು ನೀಉ ಸಂಹರಿಸುವವನಾದಾಗ್ಯೂ ನಿನಗೆ ಸಹ ಹೃದಯದಲ್ಲಿ ಭಯವು ಉಂಟಾಗಿದೆ. (ಅಂದರೆ ನಿನ್ನ ಮನಸ್ಸಿನಲ್ಲಿಯೂ ಮೊದಲು ಭಯವು ಹುಟ್ಟಿಯದೆ. ಇಂತಹ ಪರಾಕ್ರಮ ಶಾಲಿಯನ್ನೂ ನೀನು ಸಂಹರಿಸುವವನಾಗಿರುತ್ತಿ.) (೨) (ಸಿಂಹಾವಲೋಕನ ನ್ಯಾಯದಿಂದ (೧೨ನೇ ಋಕ್ಕಿನ ಉತ್ತರಾರ್ಧ) ಮೊದಲಾದ ೪ ಅರ್ಧ ಋಕ್ಕುಗಳನ್ನು ಅಧ್ಯಾತ್ಮ ಪರವಾಗಿ ವ್ಯಾಖ್ಯಾನ ಮಾಡುತ್ತಾರೆ.) (ಗೋ ಶಬ್ದವು ಗಮ್ ಧಾತುವಿನ ರೂಪವು, ಗತ್ಯರ್ಥಗಳಾದವುಗಳು ಜ್ಞಾನಾರ್ಥಗಳಾಗುತ್ತವೆ. ಆದ ಕಾರಣ, ಗಾಃ = ಭಕ್ತರ ಜ್ಞಾನಗಳ್ನು ಮಿಥ್ಯಾಜ್ಞಾನದಿಂದ ಗೆದ್ದಿರುತ್ತಿ. (ಅಂದರೆ ಭಕ್ತರ ಜ್ಞಾನಗಳು ಮಿಥ್ಯಾಜ್ಞಾನದಿಂದ ತಿರಸ್ಕೃತಗಳಾಗಿವೆ. ಅವುಗಳನ್ನು ನಿರಾಕರಿಸಿ ಸ್ಥಿರಗಳನ್ನಾಗಿ ಮಾಡಿರುತ್ತಿ.) (೩) ಭಕ್ತರಾದ ನಮ್ಮ ಮನಸ್ಸನ್ನು ಶಬ್ದ ಮೊಲದಾದ ವಿಷಯಗಳ ಸಮುದಾಯದಿಂದ ಗೆದ್ದಿರುತ್ತಿ. (ಅಂದರೆ ವಿಷಯಗಳಿಂದ ಅಪಹೃತವಾದ ಮನಸ್ಸನ್ನೂ ವಿಷಯಗಳ ಕಡೆಗೆ ಹೋಗದಿದ್ದಂತೆ ವಿರಕ್ತವನ್ನಾಗಿ ಮಾಡಿರುತ್ತಿ.) (೪) ೭ ಸಮುದ್ರಗಳನ್ನೆಂಬಂತೆ ದಾಟಲಶಕ್ಯಗಳಾದ ಮಹತ್ತತ್ವಾದಿಗಳನ್ನು (ಅಂದರೆ ಮಹತ್ತತ್ವದ ಅಂಶಭೂತವಾದ ಚಿತ್ತವನ್ನೂ, ಮಹತ್ತತ್ವದ ಅಥವಾ ಅಹಂಕಾರತತ್ವದ ಅಂಶಭೂತವಾದ ಅಹಂಕಾರವನ್ನೂ, ದೇಹದಲ್ಲಿರುವ ಪಂಚಮಹಾಭೂತಗಳ ಅಂಶಗಳನ್ನೂ) ನ್ಯಾಯಮಾರ್ಗದಲ್ಲಿ ಹೋಗುವಂತೆ) ಪ್ರೇರೇಪಿಸುವವನಾಗಿರುತ್ತಿ. (೫) ನಾಸ್ಮೈವಿದ್ಯುತ್ ಎಂಬ ೧೩ನೇ ಋಕ್ಕಿನಲ್ಲಿರುವ ವಿದ್ಯುತ್ ಮೊದಲಾದ ಶಬ್ದಾರ್ಥಗಳನ್ನು ಹೇಳುತ್ತಾರೆ.) ಪ್ರತಿ ವಕ್ತೃಗಳ ಅಂದರೆ ಪ್ರತಿವಾದಿಗಳ ವಿಪರೀತವಾದ ಬುದ್ಧಿಯಾದರೂ ವಿದ್ಯುತ್ ಎನಿಸುತ್ತದೆ. (೭) ವಕ್ತೃಶಕ್ತಿಯು ಮಿಹ ಎಂದು ಹೇಳಲ್ಪಡುತ್ತದೆ. (ಅಂದರೆ ವಕ್ತೃತ್ವ ಶಕ್ತಿಯು ಮಿಹ ಎಂದು ಹೇಳಲ್ಪಡುತ್ತದೆ. ಮಿಹಸೇಚನೇ, ಮಿಹ್ಯತೇ ಸಿಚ್ಯತೇ ವಾಕ್ ಅನಯಾ ವಕ್ತೃತ್ವ ಶಕ್ತಿಯು ಸಹ ಎಂದು ಹೇಳಲ್ಪಡುತ್ತದೆ. ಮಿಹಸೇಚನೇ. ಮಿಹತ್ಯತೇ ಸಿಚ್ಯತೇ ವಾಕ್ ಅನಯಾ ವಕ್ತೃ ಶಕ್ತ್ಯಾ ಮಿಟ್ ವಕ್ತೃಶಕ್ತಿಯು. ಶಕ್ತಿಯಿಂದ ಸಿಕ್ತವಾದ (ಉಪೋದ್ಬಲಿತವಾದ) ವಚನವೇ ಪ್ರವೃತ್ತವಾಗುತ್ತದೆ. ಅಭ್ಯಾಸ ಮಾತ್ರದಿಂದ ಅಲ್ಲ. ಅಂದರೆ ಜನ್ಮಾಂತರೀಯ ವಾಸನಾರೂಪವಾದ ಶಕ್ತಿಯು.) (ಅಂದರೆ ಅನಾದಿಯಾದ ಯೋಗ್ಯತೆಯನ್ನನುಸರಿಸಿರುವ ಜನ್ಮಾಂತರಗಳಲ್ಲಿ ಅನುಸರಿಸುವ ಸಂಸ್ಕಾರರೂಪವಾದ ಶಕ್ತಿಯು. ಅದರಿಂದ ಉಪೋದ್ಬಲಿತವಾಗಿಯೇ ವಚನವು ಪ್ರವೃತ್ತವಾಗುತ್ತದೆ.) (೮) ಹ್ರಾದುನಿಯು ಹುಂಕೃತಿ ಎನಿಸುತ್ತದೆ. (ಹ್ರಾದ ಅವ್ಯಕ್ತೇ ಶಬ್ದೇ ಕ್ತರಿಗೆ ಭಯವನ್ನುಂಟು ಮಾಡುವ ಹುಂಕಾರವು.) (೯) (ಈಗ ೧೩ನೇ ಋಕ್ಕಿನಲ್ಲಿರುವ ನಾಸ್ಮೈ ಎನ್ನುವುದರ ತಾತ್ಪರ್ಯವನ್ನೂ ಹೇಳುತ್ತಾರೆ.) ಬ್ರಹ್ಮಾದಿಗಳಿಗೆ ಸ್ವಾಮಿಯಾದ ಶ್ರೀ ಹರಿಯು ಅನುಗ್ರಾಹಕನಾಗಿ ಇದ್ದರೇನೇ ಅಜ್ಞಾನದಿಂದ ಹುಟ್ಟಿರುವ ಈ ವಿದ್ಯುದಾದಿಗಳು ತಮ್ಮ ಕಾರ್ಯವಾದ ಭಗವದ್ಭಕ್ತರ ಪರಾಜಯವನ್ನು ಸಾಧಿಸುವುದಿಲ್ಲ. (ಅಂದರೆ ಉಂಟು ಮಾಡುವುದಿಲ್ಲ.) (ತಮಸ್ಸಮುತ್ಥಾಃ ಎನ್ನುವುದು ಅಹಿರಕಿರತ್ ಎನ್ನುವುದರ ಅರ್ಥವು) (೧೦) ವಾಸುದೇವನು ಈ ಸಂಶಯವನ್ನು ಗೆಲ್ಲುತ್ತಾನೆ. ನಾಶಗೊಳಿಸುತ್ತಾನೆ. (ಇದು ಉತಾಪರೀಭ್ಯಃ ಎನ್ನುವುದರ ಅರ್ಥವು. (೧೧) (ಅಹೇರ್ಯಾತಾರಂ ಎಂಬುವ ೧೪ನೇ ಋಕ್ಕಿನ ಅರ್ಥವು ಶ್ರೀ ವಾಸುದೇವನಿಗೆ ಸಂಶಯಕೃತವಾದ ಉಪದ್ರವವಿಲ್ಲದಿರುವುದರಿಂದ ಸಂಶಯವನ್ನು ಗೆದ್ದನು ಎಂಬ ಮಾತು ಹೇಗೆ ಕೂಡುತ್ತದೆ ? ಅಂದರೆ ಶ್ರೀ ವಿಷ್ಣುವಿಗೆ ಸಂಶಯ ಸಂಬಂಧವೇ ಇಲ್ಲದಿರುವುದರಿಂದ ಸಂಶಯ ಪ್ರಯುಕ್ತವಾದ ದುಃಖಾದಿಗಳು ಇಲ್ಲವಷ್ಟೆ. ಯುದ್ಧಕ್ಕೆ ಬಾರದೇನೇ ಇದ್ದ ವೈರಿಗಳನ್ನು ಗೆದ್ದನು, ಎಂಬ ಮಾತು ಕೂಡಲಾರದಷ್ಟೆ. ಎಂದರೆ

ಅಭಿಪ್ರಾಯ ಹೇಲುತ್ತಾರೆ.) ತನ್ನ ಭಕ್ತರ ಹೃದಯದಲ್ಲಿರತಕ್ಕ ಶ್ರೀ ವಿಷ್ಣುವು ತನ್ನ ಭಕ್ತರಿಗೆ ಮೋಕ್ಷರೂಪವಾದ ಪ್ರಯೋಜನಕ್ಕಾಗಿ ಸಂಶಯವನ್ನು ಗೆಲ್ಲುತ್ತಾನೆ. (ನಾಶಗೊಳಿಸುತ್ತಾನೆ.) ನಿನ್ನಿಂದ ಭಿನ್ನನಾದವನು ಯಾರು ತಾನೇ ಅಹಿ ಶಬ್ದವಾಚ್ಯವಾದ ಸಂಶಯವನ್ನು ನಾಶಗೊಳಿಸುವುದಕ್ಕಾಗಿ ಪ್ರವರ್ತಿಸುವವನಾಗುವನು. (೧೨) ಯಾವ ಕಾರಣದಿಂದ ನೀನೇ ಸಂಶಯವನ್ನು ವಿನಾಶಗೊಳಿಸುತ್ತಿರುವಾಗಲಾದರೂ ನಿನ್ನ ಭಕ್ತರ ಹೃದಯದಲ್ಲಿರತಕ್ಕ ಭಯವು ಚೆನ್ನಾಗಿ ನಾಶಗೊಳ್ಳುತ್ತದೆ. (ಇತರರು ಸಂಶಯವನ್ನು ವಿನಾಶಗೊಳಿಸುವುದಕ್ಕಾಗಿ ಪ್ರವೃತ್ತರಾಗುತ್ತಿರಲು ಭಯ ಪರಿಹಾರವು ಆಗಲಾರದು.) (೧೩) (ನವಚ ಎಂಬ ೧೪ನೇ ಅರ್ಥ ಋಕ್ಕನ್ನು ಪ್ರಸಿದ್ಧ ಇಂದ್ರನಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಹೇಗೆ ಆಕಾಶ ಪ್ರದೇಶಗಳನ್ನು ಬೆದರಿದ ಗಿಡುಗ ದಾಟುತ್ತಾ ಹೋಗುವುದೋ, (ಶ್ಯೇನ ಹಕ್ಕಿಯೇ ವೇಗವುಳ್ಳದ್ದು, ಭಯಹೊಂದಿದ ಶ್ಯೇನವಾದರೂ ಸುತಾರಾಂ ಅತಿ ವೇಗವುಳ್ಳದ್ದು) ಹಾಗೆಯೇ ಎಲೋ ಇಂದ್ರನೇ, ನೀನು ಅಹಿದ್ವೈತ್ಯನು ನಾನಾ ವಿಧಗಳಾದ ಬಹು ನದಿಗಳನ್ನು ತಡೆಯುವವನಾದ ಕಾರಣ ಆ ಅಹಿ ದೈತ್ಯನನ್ನು ಸಂಹರಿಸಿದ ಪ್ರಯುಕ್ತ ೯೯ ನದಿಗಳನ್ನು ದಾಟುವವನಾಗಿರುತ್ತಿ. (ಯಾವ ಕಾರಣದಿಂದ ಅತಿವೇಗದಿಂದ ೯೯ ಪ್ರಧಾನ ನದಿಗಳನನಲು ದಾಟಿದವನಾಗಿರುತ್ತಿಯೋ, ಆದ ಕಾರಣ ಬಹು ಪರಾಕ್ರಮಿಯಾದುದರಿಂದ ನೀನು ಹೊರತು ಇನ್ನೊಬ್ಬನು ಅಹಿದ್ವೈತ್ಯನ ಇದಿರು ಹೋಗುವವನು ಇಲ್ಲವೇ ಇಲ್ಲ) (ಅ ಆಹಿ ದೈತ್ಯನು ನಾನಾನದಿಗಳ ಪ್ರವೃತ್ತಿಯನ್ನು ತಡೆಯುವವನಾಗಿ ಅಹಿಐತ್ಯನ ಸಂಹಾರವು ಕೂಡಲಾರದು. ಅಹಿತ್ಯೆದ್ಯನನ್ನು ಸಂಹರಿಸುವುದಕ್ಕಾಗಿ ಆತನ ಇದಿರು ಹೋಗದಿರುವವನಿಗೆ ನಾನಾ ನದೀ ತರಣ ರೂಪವಾದ ಕರ್ಮವು ಕೂಡಲಾರದು. ಅಹಿವಧಕ್ಕಾಗಿ ನಾನಾ ನದಿಗಳನ್ನು) ದಾಟಿದುದರಿಂದ ನೀನು ಹೊರತು ಇನ್ನೊಬ್ಬನು ಅಹಿ ದೈತ್ಯನ ಇದಿರು ಹೋಗುವವನು ಇಲ್ಲವೇ ಇಲ್ಲ ಎಂದು ತಿಳಿಯುತ್ತದೆ.) (೧೪) ಈಶ್ವರಪರವಾಗಿ (ಅಧ್ಯಾತ್ಮ ಪರವಾಗಿ) ವ್ಯಾಖ್ಯಾನ ಮಾಡುತ್ತಾರೆ.) ಸರ್ವೇಶ್ವರನಾದ ಶ್ರೀ ಹರಿಯು ೯೯ ದೇವತೆಗಳಿಗೆ ೯೯ ಸಂಸಾರ ನದಿಗಳನ್ನು (ಸಂಸಾರ ಸಮುದ್ರವನ್ನು) ದಾಟುವ ಅಷ್ಟೇ ದೇವತೆಗಳನ್ನು ದಾಟಿಸಿದನು ಎಂದು ತಾತ್ಪರ್ಯವು. ಶ್ರೀ ವಿಷ್ಣುವಿಗೆ ಸಂಸಾರವಿಲ್ಲದಿರುವುದರಿಂದ ಸಂಸಾರ ತರಣವು ಬಾಧಿತವಾದ ಪ್ರಯುಕ್ತ ಅತರಃ ಎನ್ನುವುದಕ್ಕೆ ದಾಟಿಸಿರುತ್ತಿ ಎಂದು ನಿಜರ್ಥದಲ್ಲಿ ತಾತ್ಪರ್ಯವು. ) (ಈಶ್ವರ ಪಕ್ಷದಲ್ಲಿ ಸಂಸಾರ ನದಿಗಳು ೯೯ ಹೇಗೆ ಆಗುವವು. ಸಂಸಾರವು ಒಂದೇ ಆಗಿಯದೆ. ಸಂಸಾರಿಗಳನ್ನು ವಿವಕ್ಷಾ ಮಾಡಿದರೆ ಸಂಸಾರಿಗಳು ಅನಂತರಾಗಿರುತ್ತಾರೆ. ಎಂದರೆ - ಪ್ರಧಾನ ಸಂಸಾರಿಗಳನ್ನು ವಿವಕ್ಷಾ ಮಾಡಿಕೊಂಡು ೯೯ ಮಂದಿ ಎಂದದ್ದು.) (ಏವಂಚ ಎಲೋ ಶ್ರೀ ಹರಿಯೇ ಯಾವ ಕಾರಣದಿಂದ ನೀನು ೯೯ ಸಂಸಾರ ನದಿಗಳನ್ನು ಆ ೯೯ ದೇವತೆಗಳನ್ನೇ ದಾಟಿಸಿರುತ್ತಿಯೋ, ಆದ ಕಾರಣ ನೀನೇ ಸಂಸಯವನ್ನು ನಾಶಗೊಳಿಸುವವನು) (೧೫) (ದೃಷ್ಟಾಂತವನ್ನು ವ್ಯಾಖ್ಯಾನ ಮಾಡುತ್ತಾರೆ.) ಹೇಗೆ ಭೀತವಾದ ಗಿಡುಗ ಹಕ್ಕಿಯು ಆಕಾಶ ಪ್ರದೇಶಗಳನ್ನು ದಾಟುತ್ತದೋ, ಹಾಗೆಯೇ ಶ್ರೀ ಹರಿಯು ಈ ದೇವತೆಗಳಿಗೆ ಸ್ವತಂತ್ರಕರ್ತೃರೂಪವಾದ ಉಪಮಾನವನ್ನು ಮಾಡಿಕೊಂಡು ದೇವತೆಗಳನ್ನು ದಾಟೀಸದನು. (ಹಾಗಾದರೆ ಸ್ವತಂತ್ರಕರ್ತೃ ಪ್ರೇರಕನು ಪ್ರಯೋಜಕಕರ್ತನಾದುದರಿಂದ ಅಂತಹ ಪ್ರಯೋಜಕ ಕರ್ತನಾದ ಈಶ್ವರನನ್ನು ದಾರ್ಷ್ಟಾಂತಿಕನನ್ನಾಗಿ ಹೇಳಿ ಸ್ವತಂತ್ರ ಕರ್ತೃ ಆದ ಶ್ಯೇನವು ಹೇಗೆ ದೃಷ್ಟಾಂತೀಕರಿಸಲ್ಪಡುತ್ತದೆ ? ಎಂದರೆ ದೇವತೆಗಳು ಸಂಸಾರ ಸಮುದ್ರವನ್ನು ದಾಟುತ್ತಾರೆ. ಆದ ಕಾರಣ ಹೇಗೆ ದೇವತೆಗಳಿಗೆ ತರಣಕ್ರಿಯಾ ಕೃರ್ತೃತ್ವದಲ್ಲಿ ಉಪಮೇಯತ್ವವು ಉಂಟಾಗುವುದೋ, ಹಾಗೆಯೇ ಸ್ವತಂತ್ರಕರ್ತೃರೂಪವಾದ ಶ್ಯೇನವನ್ನು ದೃಷ್ಟಾಂತವನ್ನಾಗಿ ಮಾಡಿ ಶ್ರೀ ವಿಷ್ಣುವು ದೇವತೆಗಳನ್ನು ಸಂಸಾರದಿಂದ ದಾಟಿಸಿದನು, ಎಂದು ಹೇಳಿದ್ದು. ಶ್ರೀ ವಿಷ್ಣುವಿಗೆ ಶ್ಯೇನವು ದೃಷ್ಟಾಂತವೆಂದು ಹೇಳಿದ್ದಲ್ಲ. ಇದನ್ನೇ ತೋರಿಸುತ್ತಾರೆ. ಹೇಗೆ

ಭಯಗ್ರಸ್ತವಾದ ಶ್ಯೇನವು ಆಕಾಶ ಪ್ರದೇಶಗಳನ್ನು ದಾಟುತ್ತದೋ, ಹಾಗೆಯೇ ಸಂಸಾರವನ್ನು ದಾಟತಕ್ಕ ದೇವತೆಗಳನ್ನು ದಾಟಿಸಿದನು. ಹೀಗೆ ವ್ಯಾಖ್ಯಾನ ಮಾಡಿದುದರಿಂದ ದೋಷವಿಲ್ಲ.) (೧೬) (ಹಾಗಾದರೆ ಶ್ರುತಿಯಲ್ಲಿ ಅತರಃ =ದಾಟದಿ, ಎಂದೇ ಇದೆ. ಅತಾರಯಃ =ದಾಟಿಸಿದಿ ಎಂದಿಲ್ಲ. ಆದ ಕಾರಣ ದಾಟಿಸಿದಿ ಎಂಬ ವ್ಯಾಖ್ಯಾನವು ಹೇಗೆ ಕೂಡುತ್ತದೆ ? ಎಂದರೆ) ಸ್ವಾತಂತ್ರ್ಯ, ಭೇದಕರಣ ಎಂಬೀ ೨ ಅರ್ಥಗಳಲ್ಲಿ ವ್ಯತ್ಯಾಸವು (ಣಿಜಭಾವವು) ಉಕ್ತವಾಗಿದೆ. ಆದ ಕಾರಣ ಆ ಈ ವ್ಯಾಖ್ಯಾನವು ನಿರ್ದುಷ್ಟವಾದುದು. (ಅಂದರೆ ಶ್ರೀ ವಿಷ್ಣುವಿಗೆ ಪ್ರಯೋಜಕ ಕರ್ತೃತ್ವವಿದ್ದರೂ ಅದನ್ನು ತೋರಿಸುವ ಣಿಜ್ ವ್ಯತ್ಯಾಸವು (ಣಿಜಭಾವವು) ಶ್ರೀ ವಿಷ್ಣುವಿಗೆ ಸರ್ವ ಸ್ವಾತಂತ್ರ್ಯವನ್ನು ತೋರಿಸುವುದಕ್ಕಾಗಿ ಮಾಡಿದ್ದಾಗಿರುತ್ತದೆ.) (೧೭) ಆ ೯೯ ದೇವತೆಗಳು ಯಾರು ಎಂದರೆ) (೮) ಅಷ್ಟವಸುಗಳು. (೧೧) ವಿಷ್ಣು ವ್ಯತಿರಿಕ್ತರಾದ ಏಕಾದಶ ಆದಿತ್ಯರು (೫೦) ಪ್ರಧಾನ ವಾಯುವಿನಿಂದ ಕೂಡಿ ಪಂಚಾಶತ್ ಮರುತಗಳು. (೨) ಅಶ್ವಿನೀ ದೇವತೆಗಳು (೧) ಬೃಹಸ್ಪತಿಯು (೧) ಶೇಷನು (೧) ಗರುಡನು (೧) ಅನಿರುದ್ಧನು (೨) ಅಶ್ವಿನೀ ದೇವತೆಗಳು (೧) ಬೃಹಸ್ಪತಿಯು (೧) ಶೇಷನು (೧) ಗರುಡನು. (೧) ಅನಿರುದ್ಧನು (೧) ಚತುರ್ಮುಖ ಬ್ರಹ್ಮನು (೯) ನವ ಪ್ರಜಾಪತಿಗಳು (೩) ಋಭುಗಳು. (೧೧) ಏಕಾದಶ ರುದ್ರರು ಹೀಗೆ ಒಂದು ಕಡಿಮೆ ನೂರು ಅಂದರೆ ೯೯ ದೇವತೆಗಳು ದೇವತಾ ಸಂಹಿತಾ ಎಂಬ ಗ್ರಂಥ ವಿಶೇಷದಲ್ಲಿ ಹೇಳಲ್ಪಟ್ಟಿರುತ್ತಾರೆ. ||೧೪||

**ಋ || (೩೮೩) ಇಂದ್ರೋ ಯಾತೋಽವಸಿತಸ್ಯ ರಾಜಾ ಶಮಸ್ಯ ಚ ಶೃಂಗಿಣೋ ವಜ್ರಬಾಹುಃ |**
**ಸೇದುರಾಜಾ ಕ್ಷಯತಿ ಚರ್ಷಣೀನಾಮರಾನ್ನನೇಮಿಃ ಪರಿ ತಾ ಬಭೂವ** ||೧೫||೩೮||೨||೩೨||

ಅ || ಸಃ = ಗುಣಪೂರ್ಣನೆಂದು ಪ್ರಸಿದ್ಧನಾದ, ಇಂದ್ರಃ =ಪರಮೇಶ್ವರ್ಯಸಂಪನ್ನನಾದ ಶ್ರೀ ಹರಿಯು, ಯಾತಃ =ಭಕ್ತರಿಂದ ಭಗವಂತನ ಅನುಗ್ರಹದಿಂದ ತಿಳಿಯಲ್ಪಡುತ್ತಾನೆ. ಅವಸಿತಸ್ಯ =ಪರ್ಯವಸಾನವನ್ನು ಹೊಂದಿರುವ ಅಂದರೆ ಸಂಸಾರ ಪಾರವನ್ನು ಹೊಂದಿರುವ ಮುಕ್ತನಿಗೆ, ರಾಜಾ =ಸ್ವಾಮಿಯು, (ಮುಕ್ತಿಯನ್ನು ಹೊಂದಿದವರಿಗೆ ಮಾತ್ರ ಸ್ವಾಮಿಯು ಎಂದಲ್ಲ. ಮತ್ತೆ) ಶಮಸ್ಯ ಚ=ಮುಕ್ತಿಗೂ (ಸ್ವಾಮಿಯು) ವಜ್ರಬಾಹುಃ =ಜ್ಞಾನಾತ್ಮಕವಾದ ಬಾಹ್ವಾದಿಗಳುಳ್ಳವನು. ಸ ಇತ್ =ಆ ಶ್ರೀ ಹರಿಯೇ, ನಿತ್ಯಂ ಉ=ನಿತ್ಯದಲ್ಲಿಯೂ ಶೃಂಗಿಣಃ = ಜ್ಞಾನಿಗಳ ಸಮುದಾಯಕ್ಕೂ, ರಾಜಾ =ಸ್ವಾಮಿಯು. ಚರ್ಷಣಿನಾಂ =ಮುಕ್ತರಲ್ಲದ ಪ್ರಜೆಗಳಿಗೂ, ಕ್ಷಯತಿ =ಸ್ವಾಮಿಯಾಗಿರುತ್ತಾನೆ. (ದೃಷ್ಟಾಂತ ಹೇಳುತ್ತಾರೆ) ನೇಮಿಃ = ಚಕ್ರವು, ಅರಾನ್ನ =ಅಚ್ಚಿಮರಗಳನ್ನೆಂಬಂತೆ, ಸ ಚ = ಆ ಶ್ರೀ ಹರಿಯೇ ತಾ =ಸಮಸ್ತ ಪ್ರಾಣಿಗಳನ್ನು, ಪರಿ ಬಭೂವ =ವಶೀಕರಿಸಿದನು (ಪ್ರಸಿದ್ಧ ಇಂದ್ರನಲ್ಲಿ ಆದರೂ) ಯಾತಃ = (ಯಾಪ್ರಾಪಣೇ) ಜಂಗಮ ವಸ್ತುಗಳಿಗೂ ಅವಸಿತಸ್ಯ (ಅವಸ್ಥಿತಸ್ಯ) = ಸ್ಥಾವರ ವಸ್ತುಗಳಿಗೂ, ಶಮಸ್ಯ =ಶಾಂತಿಗೂ, ಶೃಂಗಿಣಃ =ಪ್ರಕಾಶವುಳ್ಳ ನಕ್ಷತ್ರಾದಿಗಳಿಗೂ, ಇಂದ್ರಃ = ಇಂದ್ರನು, ರಾಜಾ =ಸ್ವಾಮಿಯು, ವಜ್ರಬಾಹುಃ =ವಜ್ರದಂತೆ ದೃಢಗಳಾದ ಬಾಹುಗಳುಳ್ಳವನು. ಅಥವಾ (ವಜ್ರಂ ಬಹೌಹಸ್ತೇ ಯಸ್ಯ ಸಃ ಎಂಬವ್ಯುತ್ಪತ್ತಿಯಿಂದ) ವಜ್ರವು ಕೈಯಲ್ಲಿ ಉಳ್ಳವನು. (ಇತರವೆಲ್ಲವೂ ಸ್ಪಷ್ಟವು) ||೧೫||

**ಭಾ || (೧) ಏವೇಂದ್ರೋ ಭಗವಾಂಸ್ತತ್ತ್ವ ಸಾದಾತ್ಮ್ಯಾಪ್ತೋಭಕ್ತೈಃ ಪರ್ಯವಸಾನಗಂತುಃ ಮುಕ್ತಸ್ಯ ರಾಜಾಽಪಿ ಶಮಸ್ಯ ಮುಕ್ತೇರ್ಜ್ಞಾನಂ ಶೃಂಗಂ ತದ್ವತಶ್ಚೈ (ವಶ್ಯಾಪಿ) ನಿತ್ಯಂ ||**

(೨) ಸ ಏವ ರಾಜಾ ಕ್ಷಯತಿ ಪ್ರಜಾನಾಂ ಭೂತಾಸ್ಯರಾಣೇವ ಚ ಪರ್ಯಭೂತ್ಸಃ ||೧೫||೩೮||೧೩||

ಅ || (೧) (ಸ ಏವ ಎಂಬಲ್ಲಿದ್ದ ಏವ ಶಬ್ದದಿಂದ ಈ ಋಕ್ಕಿಗೆ ಈಶ್ವರ ವಿಷಯಕತ್ವವನ್ನು ಇತರರಿಗೆ ತಿಳಿಯಲು ಅಶಕ್ಯವಾದುದರಿಂದ ಭಾಷ್ಯಕಾರರು ಅಷ್ಟು ಮಾತ್ರ ಹೇಳುತ್ತಾರೆ. ಇಂದ್ರಪರತ್ವವು ಸ್ಪಷ್ಟವಾಗಿರುವುದರಿಂದ ಇತರರಿಗೆನೇ ತಿಳಿಯಲು ಶಕ್ಯವಾಗಿದೆ. ಆದ ಕಾರಣ ಅದನ್ನು ಹೇಳಲಿಲ್ಲ.) ಹಿಂದೆ ಹೇಳಿದ ಗುಣಗಳುಳ್ಳವನೆಂದು ಪ್ರಸಿದ್ಧನಾದ ಇಂದ್ರ ಶಬ್ದವಾಚ್ಯನಾದ ಭಗವಂತನು. ಆತನ ಅನುಗ್ರಹದಿಂದ ಭಕ್ತರಿಂದ ಹೊಂದಲ್ಪಡುತ್ತಾನೆ. ಅಭಕ್ತರಿಂದ ಸರ್ವಥಾ ತಿಳಿಯಲ್ಪಡುವುದಿಲ್ಲ. (ಭಕ್ತರಿಂದಲಾದರೂ ಭಗವಂತನ ಪ್ರಸಾದವಿಲ್ಲದೆ ತಿಳಿಯಲ್ಪಡುವುದಿಲ್ಲ.) (ಪರರು ಹೇಳುವ ಪ್ರಕಾರ ಸರ್ವಥಾ ತಿಳಿಯಲ್ಪಡದಿರುವವನಲ್ಲ.) (ಅವಸಿತಸ್ಯ=ಅವಪೂರ್ವಕಾತ್ ಷೋ ಅಂತಕರ್ಮಣಿ) ಪರ್ಯವಸಾನವನ್ನು ಹೊಂದಿರುವ ಅಂದರೆ ಸಂಸಾರವನ್ನು ದಾಟಿರುವ ಮುಕ್ತನಿಗೆ ಸ್ವಾಮಿಯು. ಶಮಸ್ಯ =ಶಂ ಸುಖವು, ಮುಖ್ಯವಾದ ಸ್ವರೂಪ ಸುಖವನ್ನು, ಮನುತೇ (ಮನು ಅವಬೋಧನೇ, ಯತ್ರ ಸಃ ಶಮಃ || ಮೋಕ್ಷವು) (ಮುಕ್ತರಿಗೆ ಮಾತ್ರ ಅಧಿಪತಿಯಲ್ಲ) ಮುಕ್ತಿಗೂ ಸ್ವಾಮಿಯು || (೨) (ಶೃಂಗಂ =ಜ್ಞಾನವು) ಜ್ಞಾನಿಗಳ ಸಮುದಾಯಕ್ಕೆ, ನಿತ್ಯದಲ್ಲಿಯೂ, ಆ ಶ್ರೀ ಹರಿಯೇ ಸ್ವಾಮಿಯು ಮುಕ್ತರಲ್ಲದ ಪ್ರಜೆಗಳಿಗೂ ಸ್ವಾಮಿಯಾಗಿರುತ್ತಾನೆ. ಚಕ್ರವು ಅಚ್ಚೆ ಮರಗಳನ್ನೆಂಬಂತೆ ಆ ಶ್ರೀ ಹರಿಯೇ ಸಮಸ್ತ ಪ್ರಾಣಿಗಳನ್ನು ವಶೀಕರಿಸಿದನು. ||೧೫||೩೮||೧೩||

ಇತಿ ಶ್ರೀ ಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ
ಶ್ರೀ ಮದೃಗ್ಭಾಷ್ಯೇ ದ್ವಿತೀಯೋಽಧ್ಯಾಯಃ ||
ಶ್ರೀಮತ್ ಆನಂದತೀರ್ಥ ಭಗವತ್ಪಾದಾಚಾರ್ಯರು ವಿರಚಿಸಿರುವ ಋಗ್ಭಾಷ್ಯದಲ್ಲಿ
೨ನೇ ಅಧ್ಯಾಯವು ಸಮಾಪ್ತವಾಯ್ತು.
ಭಾರತ್ಯಾಸ್ತತ್ತ್ವದೇವಾನಾಂ ಕೃಪಯಾ ನ ಸ್ವತಕ್ತಿತಃ |
ಗುಣಾಃ ಯೇತ್ವತ್ರ ದೃಶ್ಯಂತೇ ತೇ ಸರ್ವೇ ತತ್ಪ್ರಸಾದಜಾಃ ||
ಯದಿ ಸಂತಿ ಕ್ವಚಿದ್ದೋಷಾಃ ತೇ ಮೇ ಮಂಡಮತಿತ್ವತಃ |
ತದವದ್ಯಂ ದಯಾಶೀಲೈಃ ಕ್ಷಂತವ್ಯಂ ಸ್ವಜನಪ್ರಿಯೈಃ ||
ನಮೋಽಸ್ತು ವಾಸುದೇವಾಯ ವ್ಯಾಸದೇವಾಯ ಧೀಮತೇ |
ಅಸುದೇವಾಯ ದೇವೇಭ್ಯೋ ಗುರುಭ್ಯಶ್ಚ ನಮೋ ನಮಃ ||
ತಂತ್ರಿನಾರಾಯಣೇನಾಸ್ಯ ವ್ಯಾಖ್ಯಾ ಕಾರ್ನಾಟಕೀ ಕೃತಾ |
ಭೂಯಾತ್ ಕುಸುಮಮಾಲೇವ ಪ್ರೀತ್ಯೈ ಮಾಧವಮಧ್ವಯೋಃ ||

||ಶ್ರೀ||

|| ಶ್ರೀಃ ||

# ಮೂರನೇ ಅಧ್ಯಾಯವು

ಶ್ರೀ ಬ್ರಹ್ಮವಾಯುರುದ್ರೇಂದ್ರಾಃ ಪ್ರಾಪ್ನುವಂತಿ ಯದಾಶ್ರಯಾತ್ ।

ಮಹಾಫಲಮಹಂ ವಂದೇ ತದ್ವಿಷ್ಣೋಃ ಪರಮಂ ಪದಂ ॥

ನಮೋಽಸ್ತು ಹರಯೇ ಯುಕ್ತಿಗಿರಯೇ ನಿರ್ಜಿತಾರಯೇ ।

ಸಮಸ್ತ ಗುರುವೇ ಕಲ್ಪತರವೇ ಪರವೇದಿನಾಂ ॥

ನಮಾಮಿ ಜ್ಞಾನಸಿದ್ಧ್ಯರ್ಥಂ ಪೂರ್ಣಪ್ರಜ್ಞಂ ಜಗದ್ಗುರುಂ ।

ಜಯತೀರ್ಥಮುನಿಂ ಸರ್ವಶಾಸ್ತ್ರಜ್ಞವರದಂ ಗುರುಂ ॥

ಶ್ರೀ ಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ

ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥

ಅ ವ॥ ಏತಾಯಾಮ ಎನ್ನುವ ಸೂಕ್ತಕ್ಕೆ ೧೫ ಋಕ್ಕುಗಳು. ೩ ವರ್ಗಗಳು, ಇಂದ್ರನು ದೇವತೆಯು. ತ್ರಿಷ್ಟುಪ್ ಛಂದಸ್ಸು, ೩೩ನೇ ಸೂಕ್ತವು.

ಋ ॥ (೩೮೪) ಏತಾಯಾಮೋಪ ಗವ್ಯಂತ ಇಂದ್ರಮಸ್ಮಾಕಂ ಸುಪ್ರಮತಿಂ ವಾವೃಧಾತಿ ।

ಅನಾಮೃಣಃ ಕುವಿದಾದಸ್ಯ ರಾಯೋ ಗವಾಂ ಕೇತಂ ಪರಮಾವರ್ಜತೇ ನಃ ॥೧॥

ಅ ॥ (ಸಖಾಯಃ ದೇವಾಶ್ಚ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು) (ಯೇ = ಯಾರು, ಅಸ್ಮಾಕಂ = ನಿಮಗೆ, ಸಖಾಯಃ =ಸಖಿಗಳಾದ, ದೇವಾಃ =ದೇವತೆಗಳೇ ಮೊದಲಾದ ಸಮಸ್ತ ಸಜ್ಜನರು, ಅಥವಾ ಸಖಿಗಳೂ, ದೇವತೆಗಳು ಕೂಡಾ ಇರುತ್ತಾರೋ, ಅಂತಹ ನೀವು) ಆ ಇತ=ಅತಿ ಶೀಘ್ರವಾಗಿ ಬನ್ನಿರಿ. (ಅಂದರೆ - ಎಲೋ ದೇವತೆಗಳೂ ಕೂಡ ಇರುತ್ತಾರೋ, ಅಂತಹ ನೀವು) ಆ ಇತ=ಅತಿ ಶೀಘ್ರವಾಗಿ ಬನ್ನಿರಿ. (ಅಂದರೆ-ಎಲೋ ದೇವತೆಗಳಿರಾ ಬಂದು ನಮ್ಮ ಇಂದ್ರಿಯಾದಿಗಳನ್ನು ಪ್ರೇರೇಪಿಸಿರಿ. ಇತರರಾದ ಸಖಿಗಳಿರಾ ನೀವು ನಮಗೆ ಸಹಾಯಕರಾಗಿರಿ) (ಏಕೆಂದರೆ) (ನಾವು) ಗವ್ಯಂತಃ = ಗೋವುಗಳಂತೆ ಆಚರಿಸುವವರಾಗಿ (ಅಂದರೆ ಗೋವುಗಳೇ ಮೊದಲಾದ ಪಶುಗಳು ಪ್ರಭುವಿನ ಅಧೀನಗಳಾಗಿಯೇ ಹೇಗೆ ಇರುತ್ತವೋ

ಹಾಗೆಯೇ ಇಂದ್ರನ ಅಧೀನದಲ್ಲಿಯೇ ಇರುವ ನಾವು) (ಅಥವಾ ನಾವು) ಗವ್ಯಂತಃ=ಗೋವುಗಳನ್ನು ಇಚ್ಛಿಸುವವರಾಗಿ, ಇಂದ್ರಂ=ಶ್ರೀ ಹರಿಯನ್ನು ಇಂದ್ರನನ್ನು ಉಪಾಯಾಮ=ಶರಣು ಹೊಂದುವೆವು. (ಯಾ ಪ್ರಾಪಣೇ ಭವಿಷ್ಯದರ್ಥದಲ್ಲಿ ಲಹ್) (ಅಥವಾ ಅಯ ಗತೌ) ಅಥವಾ ಇಣ್ ಗತೌ. ಲೋಟ್ ಉತ್ತಮ ಪುರುಷ.) (ಶರಣು ಹೊಂದಲು ಪ್ರಯೋಜನವೇನು ? ಎಂದರೆ) (ಆ ಶ್ರೀ ಹರಿಯು ನಮಗೆ) ಪ್ರಮತಿಂ = ಬಹ್ವರ್ಥವಿಷಯಕವಾದ ಪ್ರಕೃಷ್ಟ ಜ್ಞಾನವನ್ನು, ಸು = ಚೆನ್ನಾಗಿ ಅಥವಾ ಯಥಾರ್ಥವಾಗಿ, ವಾವೃಧಾತಿ=(ವೃಧುವರ್ಧನೇ, ಯಾಜ್‌ಲು ಗಂತ) ಅಭಿವೃದ್ಧೀಕರಿಸುತ್ತಾನೆ. (ಯಾವುದರಿಂದ ಜ್ಞಾನವನ್ನು ಅಭಿವೃದ್ಧೀಕರಿಸುತ್ತಾನೆ ಎಂದರೆ)

(ಯಾವ ಕಾರಣದಿಂದ ಆ ಶ್ರೀ ಹರಿಯು) ಕುವಿತ್ = ಎಲ್ಲಿಯೂ ಅನಾಮೃಣಃ = (ಅಜ್ ಪೂರ್ವಕಾತ್ ಋಣ ಹಿಂಸಾಯಾಂ) ಅಭೇದ್ಯನೋ (ಅಂದರೆ ಎಲ್ಲಿಯೂ ಸರ್ವಥಾ ಭೇದ್ಯನಾಗುವುದೆ ಇಲ್ಲವೋ) (ಯಾವ ಕಾರಣದಿಂದ) ಗವಾಂ = ವೇದ ವಾಕ್ಯಗಳ ಸಂಬಂಧಿಯಾದ (ಅಂದರೆ ವೇದವಾಕ್ಯಗಳಿಂದ ಹುಟ್ಟಿದ ಪಂ=ಯಥಾರ್ಥವಾದಿಯು ಹೇಳಿದ ಪ್ರಕಾರ ಅತ್ಯುತ್ತಮವಾದ, ಕೇತಂ = (ಕೇತುಃ ಕೇತಃ ಚಿತಿಶ್ಚಿತ್ತಂ ಮತಿಃ ಕ್ರತುಃ ಎಂಬ ಕೋಶದಿಂದ) ಭಕ್ತರಲ್ಲಿರತಕ್ಕ ಜ್ಞಾನವು, (ಅಂದರೆ ಇಂದ್ರನದ್ವೇ ವೇದಗಳಿಂದುಂಟಾಗತಕ್ಕ ಉತ್ತಮ ಜ್ಞಾನಗಳು) ಆಗುತ್ತವೋ, ಅಸ್ಯ = ಈ ಇಂದ್ರನದ್ವೇಷ ರಾಯಃ =ದ್ರವ್ಯಗಳು (ಆಗುತ್ತವೋ) ಆತ್ = ಆ ಕಾರಣದಿಂದ, (ಈ ಇಂದ್ರನು) ನಃ =ನಮಗೋಸ್ಕರ, ಆ ವರ್ಜತೇ = (ವೃಜೀ ವರ್ಜನೇ) ಕೊಡುತ್ತಾನೆ. (ಅಂದರೆ ಶ್ರೀ ಹರಿಯು ಇಂದ್ರನೂ ಕೂಡ ಜ್ಞಾನಗಳಿಗೂ ದ್ರವ್ಯಗಳಿಗೂ ಅಧಿಪತಿಯಾಗಿರುತ್ತಾನೆ. ಪ್ರತಿಬಂಧಕವೇನೂ ಇಲ್ಲ. ಸ್ವೀಕರಿಸುವವರು ಅಧಿಕಾರಿಗಳಾಗಿರುತ್ತಾರೆ. ಇಂದ್ರನೇ ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸುವವರೂ ಆಗಿರುತ್ತಾರೆ. ಆದ ಕಾರಣ ದಾನವು ಅತ್ಯಾವಶ್ಯಕವಾದ ಪ್ರಯುಕ್ತ ಪ್ರಾರ್ಥಿಸಿದುದನ್ನು ನಿಶ್ಚಯವಾಗಿಯೂ ಕೊಡುವನು ||೧||

**ಭಾ || (1) ಯೇ ಸಖಾಯಸ್ತ್ವಾರಿತಾ ಏತದೇವಾ (2) ಉಪಾಯಾಮ ಪಶುವತ್ತದ್ವ ತಸ್ಥಾಃ । ಗವ್ಯಂತ ಉಕ್ತಾ (3) ಅತಿನಿಶ್ಚಿತೇಽರ್ಥೇ ಭೂತಶಬ್ದಶ್ಚೇತ್ಯಾಹ ಸೂತ್ರಂ ಪರೇಶಃ । (4) ಪ್ರಕೃಷ್ಟಜ್ಞಾನಂ ವರ್ಧಯತ್ಯೇವ ಸುಷ್ಠು (5) ಸ ನೋಽಬೇದ್ಯೋಽನಾಮೃಣಃ ಕ್ವಾಪಿ (6) ತಸ್ಯ || ವಿತ್ತಾನಿ ತಸ್ಮಾದ್ವೇದ ವಾಕ್ಯೋತ್ಥಮೇವ ಕೇತಂ ಜ್ಞಾನಂ ಪರಮಾವರ್ಜತೇ ನಃ । ದದಾತಿ ||೧||**

ಅ || (1) ಯಾರು ಸಖಿಗಳಾದ ದೇವಾದಿಗಳು ಇರುತ್ತಾರೋ, ಅಂತಹ ನೀವು ಶೀಘ್ರವಾಗಿ ಬನ್ನಿರಿ. (2) ಗವಾದಿ ಪಶುಗಳು ಸ್ವಾಮಿಯ ಅಧಿನದಲ್ಲಿರುವಂತೆ ನಾವು ಇಂದ್ರನ ಅಧೀನದಲ್ಲಿರುವವರಾಗಿ ಗೋವುಗಳನ್ನು ಇಚ್ಛಿಸುತ್ತಾ (ಇಂದ್ರನನ್ನು ಶರಣು) ಹೊಂದುತ್ತೇವೆ. (ಗವ್ಯಂತಃ ಎನ್ನುವುದಕ್ಕೆ ಸುಪಃ ಆತ್ಮನಃ ಕ್ಯಚ್ ಎನ್ನುವ ಸೂತ್ರದಿಂದ ಇಚ್ಛಾ ಎಂಬ ಅರ್ಥದಲ್ಲಿ ಕ್ಯಚ್ ಪ್ರತ್ಯಯ ಮಾಡಿದರೆ ಗೋವುಗಳನ್ನು ಇಚ್ಛಿಸುವವರು ಎಂಬ ಅರ್ಥವಾಗುವುದು ಎಂದರೆ - ಅಹುದು. ಆದರೆ ಗೋವುಗಳನ್ನು ಇಚ್ಛಿಸುವವರು ಎಂಬ ಅರ್ಥವನ್ನು ಬಿಡದೇನೇ ಇಂದ್ರನ ಅಧೀನದಲ್ಲಿಯೇ ಇರುವವರು ಎಂಬ ಅಧಿಕವಾದ ಅತಿಶಯಿತವಾದ ಅರ್ಥವನ್ನು ತೋರಿಸುವುದಕ್ಕಾಗಿ ಪಶುವತ್ ತದ್ವತಸ್ಥಾಃ ಇತ್ಯಾದಿ ಭಾಷ್ಯವು ಪ್ರವೃತ್ತವಾಗಿದೆ.) (3) (ಹಾಗಾದರೆ - ಆಯಾಮ ಎಂಬ ಶಬ್ದವು ಎಂತಹುದು. ಪ್ರಕೃತಿಯು ಯಾವುದು ? ಪ್ರತ್ಯಯವು ಯಾವುದು ? ಎಂದರೆ ಯಾ ಪ್ರಾಪಣೇ ಎನ್ನುವ ಧಾತುವಿನ ಲಙ್‌ನಲ್ಲಿ ರೂಪವು. ಲಙ್‌ಭೂತಾರ್ಥದಲ್ಲಿ ಇರುವುದು. ಆದರೆ

ಈ ಋಕ್ಕಿನಲ್ಲಿ ವಾವೃಧಾತಿ =ಅಭಿವೃದ್ಧೀಕರಿಸುತ್ತಾನೆ ಎಂದು ಭವಿಷ್ಯದರ್ಥವು ಅವಶ್ಯಕವಾದ ಪ್ರಯುಕ್ತ ಅತೀತ (ದಾಟಿದ್ದು) ಎನ್ನುವ ಅರ್ಥವು ಕೂಡಲಾರದು. ಎಂದರೆ) ಅತಿನಿಶ್ಚಿತವಾದ, ಅತೀತಕಾಲವಲ್ಲದಿದ್ದ, ವರ್ತಮಾನಕಾಲಿಕ, ಭವಿಷ್ಯತ್ಕಾಲಿಕ, ಧಾತ್ವರ್ಥದಲ್ಲಿ ಅತೀಕ ಎನ್ನುವ ಅರ್ಥವನ್ನು ಹೇಳುವ ಶಬ್ದವನ್ನು ಪ್ರಯೋಗಿಸಬೇಕು ಎಂಬ ಅರ್ಥವನ್ನು ಪ್ರತಿಪಾದಿಸುವ ಸೂತ್ರವನ್ನು ಶ್ರೀ ಹರಿಯು ಹೇಳಿರುತ್ತಾನೆ. (ಹಾಗೆಯೇ (1) ಪಾಣಿನಿಯೂ ಆಶಂಸಾಯಾಂ ಭೂತವಚ್ಚ ಎಂಬ ಸೂತ್ರದಲ್ಲಿ ಭವಿಷ್ಯವರ್ಥಕವಾದ ಧಾತುವಿನ ದೆಶೆಯಿಂದ ಭೂತ, ವರ್ತಮಾನ, ಕಾಲಗಳಂತೆ ಪ್ರತ್ಯಯಗಳಾಗುತ್ತವೆ ಎಂದು ಪ್ರತಿಪಾದಿಸಿರುವನು. (2) ಮತ್ತು ಏಷ್ಯತ್ತು ನಿಶ್ಚಿತಂ ಯತ್ತದತೀತತ್ವೇನ ಭಣ್ಯತೇ ಎಂಬ ಪ್ರಮಾಣದಲ್ಲಿ ಭವಿಷ್ಯತ್ಕಾಲಿಕವೆಂದು ನಿಶ್ಚಿತವಾದುದು ಯಾವುದಿದೆಯೋ ಅದು ಅತೀತಕಾಲಿಕವೆಂದು ಹೇಳಲ್ಪಡುತ್ತದೆ. ಆದ ಕಾರಣ ಭವಿಷ್ಯತ್ಕಾಲಿಕ ಅರ್ಥವನ್ನು ಇಟ್ಟುಕೊಳ್ಳಬೇಕು. (3) ಅಥವಾ ಅಯ ಪಯ ಗತೌ ಎಂಬ ಧಾತುವಿನಿಂದ ಲೋಟಿಗೆ ಮಸ್ ಆದೇಶವು. ಸಕಾರಕ್ಕೆ ಲೋಪವು. ಆಯಾಮ ಎಂಬ ರೂಪವು ಸಿದ್ಧಿಯಾಗುತ್ತದೆ. ಲೋಟ್ ಕಾಲ ಸಾಮಾನ್ಯರಲ್ಲಿ ವಿಹಿತವಾದ ಪ್ರಯುಕ್ತ ಭವಿಷ್ಯತ್ಕಾಲಿಕ ಅರ್ಥವು ಕೂಡುತ್ತದೆ (4) ಅಥವಾ ಯಾ ಪ್ರಾಪಣೇ ಎಂಬ ಧಾತುವಿನಿಂದ ಛಂದಸಿ ಲುಜ್ ಲಜ್ ಲಿಟಃ ಎಂಬ ಸೂತ್ರದಿಂದ ಕಾಲಸಾಮಾನ್ಯದಲ್ಲಿ ವಿಹಿತವಾದ ಲಜ್ ಎಂದಂಗೀಕರಿಸಿದರೂ ಯಾವ ದೋಷವೂ ಇಲ್ಲ. (5) (ಶರಣು ಹೊಂದಿದರೆ ಏನು ಪ್ರಯೋಜನವೆಂದರೆ) ಆ ಶ್ರೀ ಹರಿಯು ಬಹ್ವರ್ಥ ವಿಷಯಕವಾದ ಉತ್ಕೃಷ್ಟ ಜ್ಞಾನವನ್ನು ಚೆನ್ನಾಗಿ ನಿಶ್ಚಯವಾಗಿಯೂ ಅಭಿವೃದ್ಧೀಕರಿಸುತ್ತಾನೆ. (ವಾವೃಧಾತಿ ಎನ್ನುವುದು ಯಜ್‌ಲುಗಂತ ಪ್ರಯೋಗ್ಯ. ಕ್ರಿಯಾಸಮಭಿಹಾರದಲ್ಲಿ ಯಜ್‌ವಿಹಿತವಾಗಿದೆ. ಪೌನಃ ಪುನ್ಯಭೃಶ ಅರ್ಥರೂಪವಾದ ಕ್ರಿಯಾಸಮಬಿಹಾರ ಎಂಬ ಅರ್ಥವನ್ನು ತೆಗೆದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಏನ ಎಂದದ್ದು. ಏವ ಶಬ್ದದ ಅರ್ಥಭೂತವಾದ ಅವಧಾರಣವೇ ಭೃಶಾರ್ಥಕವು) (5) ಆ ಶ್ರೀ ಹರಿಯು ಎಲ್ಲಿಯೂ ಅನಾಮೃಣಃ = ಅಭೇದ್ಯನು ಆಗುವುದೇ ಇಲ್ಲ. (6) ಯಾವ ಕಾರಣದಿಂದ ಆ ಇಂದ್ರನದ್ದೇ ದ್ರವ್ಯಗಳೋ, ವೇದವಾಕ್ಯಗಳಿಂದ ಹುಟ್ಟಿದ ಉತ್ತಮವಾದ ಕೇತಂ=ಭಕ್ತರಲ್ಲಿರತಕ್ಕ ಜ್ಞಾನವು. (ಸಮುದಾಯವನ್ನು ಏವಕ್ಷಾಮಾಡಿಕೊಂಡು ಏಕವಚನವು. ಬಹುವಚನಾರ್ಥಕವು. ಏವಂಚ) ವೇದದಿಂದ ಉಂಟಾಗತಕ್ಕ ಉತ್ತಮ ಜ್ಞಾನಗಳೋ) ಆ ಕಾರಣದಿಂದ ಆ ಶ್ರೀ ಹರಿಯು ನಮಗೆ ಆ ವಿತ್ತಾದಿಗಳನ್ನು ಆ ವರ್ಜತೇ = ಕೊಡುತ್ತಾನೆ. (ಯದ್ಯಪಿ ಶ್ರೀ ವಿಷ್ಣುವು ಸರ್ವಕ್ಕು ಸ್ವಾಮಿಯಾಗಿರುವುದರಿಂದ ಎಲ್ಲಿಯೂ ಆತನಿಗೆ ಸ್ವತ್ವ ತ್ಯಾಗವು ಇಲ್ಲ. ಆದಾಗ್ಯೂ ಪರಸತ್ವವನ್ನಾಗಿ ಮಾಡಿ ಸ್ವಾಮಿಯಾಗಿರುವುದರಿಂದ ದಾನ ಕೊಡುವಂತೆ ಇಲ್ಲಿಯೂ ಸ್ವತ್ವತ್ಯಾಗವು ತೋರುವುದರಿಂದ ಆ ವ್ಯವಹಾರವು ಅಮುಖ್ಯವೆಂದಂಗೀಕರಿಸಬೇಕು.) (ಈ ಋಕ್ಕಿನಲ್ಲಿ ಹೇಳಿದ ಮಹಾತ್ಮೆಯು ದಾನಕ್ಕೆ ಉಪಯುಕ್ತವಾಗಿದೆ. ಹೇಗೆಂದರೆ ಶ್ರೀ ಹರಿಯು ಜ್ಞಾನ ದ್ರವ್ಯಗಳಿಗೆ ಪ್ರಭುವಾಗಿರುತ್ತಾನೆ. ಪ್ರತಿಬಂಧಕ ಇಲ್ಲ. ಸ್ವೀಕರಿಸುವವರು ಅಧಿಕಾರಿಗಳೂ ಆಗಿರುತ್ತಾರೆ. ಆದ ಕಾರಣವು ದಾನವು ಅವಶ್ಯಕವಾಗಿದೆ.) ॥೧॥

ಋ ॥ (೩೮೫) ಉಪೇದಹಂ ಧನದಾಮಪ್ರತೀತಂ ಜುಷ್ಟಾಂನ ಶ್ಯೇನೋ ವಸತಿಂ ಪತಾಮಿ ।

ಇಂದ್ರಂ ನಮಸ್ಯನ್ನುಪಮೇಭಿರರ್ಕೈರ್ಯ ಸ್ತೋತೃಭ್ಯೋ ಹವ್ಯೋ ಅಸ್ತಿ ಯಾಮನ್ ॥೨॥

ಅ॥ ಯಃ = ಯಾವ ಇಂದ್ರನು, ಯಾಮನ್ = (ಯಾಮಸ್ತು ಪ್ರಹರೇ ವ್ರತೇ ಎಂದು ವಿಶ್ವಕೋಶದಿಂದ ಪ್ರಹರ (ಒಂದು ಜಾವು) ಎಂದರ್ಥವುಳ್ಳದ್ದು ಪ್ರಕೃತ ವೀಪ್ಸಾಭಿಪ್ರಾಯವುಳ್ಳದ್ದು. ಅಂತೂ ಪ್ರತಿಯಾಮದಲ್ಲಿ ಎಂದರ್ಥವಾಗಿರುವುದರಿಂದ) ಸಮಸ್ತ ಕಾಲದಲ್ಲಿ ಅಥವಾ ಯಾಮನ್ ಶಬ್ದವು ಕಾಲವಾಚಕವೇ. (ಕಾಲ ವಿಶೇಷವನ್ನು ಹೇಳತಕ್ಕ ಯಾಮನ್ ಶಬ್ದವು ಕಾಲ ಸಾಮಾನ್ಯವನ್ನು ಪ್ರತಿಪಾದಿಸುತ್ತದೆ.) ಸರ್ವ ಕಾಲದಲ್ಲಿ ಸ್ತೋತೃಭ್ಯಃ=ಸ್ತುತಿಸುವವರಿಗೆ, ಹವ್ಯಃ = (ಹುದಾನಾದನಯೋಃ) ಎಂದು ಅತನಾರ್ಥಕವಾದ ಜುಹುದಾತುವಿಗೆ ಉಪಜೀವನವೆಂದರ್ಥವು. ತಥಾಚ) ಉಪಜೀವ್ಯನೇ, ಅಸ್ತಿ=ಆಗಿರುತ್ತಾನೆ. (ಅಂತೂ ಶ್ರೀ ಹರಿಯು ಹೇಳಿದ ಪ್ರಾತಃಕಾಲ ಮೊದಲಾದ ಸ್ತೋತ್ರ ಕಾಲದಲ್ಲಿ ಸ್ತುತಿಸುವವರಿಗೆ ಸದಾ ಸೇವ್ಯನೇ ಆಗಿರುತ್ತಾನೆ.) ಅಂತಹ, ಧನದಾಂ = (ಕರ್ಮಾರ್ಥಕವಾದ ಧನ ಶಬ್ದದಿಂದ ದಾಣ್ ದಾನೇ, ಆಕಾರಾಂತ) ದ್ರವ್ಯದಾನ ಮಾಡುವ, ಅಪ್ರತೀತ = (ಪ್ರತಿಪೂರ್ವಕವಾದ ಇಣ್‌ಧಾತು. ಗತ್ಯರ್ಥಕವು.) ವೈರಿಗಳಿಂದ ಹೊಂದಲ್ಪಡದೇನೇ ಇರುವ, (ಅಂದರೆ ಯಾವ ವೈರಿಗಳಿಗೂ ಈ ಇಂದ್ರವ ಇದಿರು ಬರಲು ಸಾಧ್ಯವೇ ಇಲ್ಲ) ಇಂದ್ರಮಿತ್ = ಶ್ರೀ ಹರಿಯನ್ನೇ ಉಪಮೇಭಿಃ ಅರ್ಕೈ = ಸದೃಶಾರ್ಥವುಳ್ಳ (ಅಂದರೆ ಇಂದ್ರನನ್ನು ಪ್ರತಿಪಾದಿಸುವ ಅನುಕೂಲಗಳಾದ ಋಕ್ಕುಗಳಿಂದ ನಮಸ್ಯನ್ = ನಮಸ್ಕರಿಸುತ್ತಾ ಸ್ತುತಿಸುತ್ತಾ, ಜುಷ್ಟಾಂ = (ಜುಷೀ ಪ್ರೀತಿ ಸೇವನಯೋಃ) ಸೇವಿಸಲ್ಪಟ್ಟ (ಪೂರ್ವದಲ್ಲಿ ಅನುಭವಿಸಲ್ಪಟ್ಟ) ವಸತಿ = ನೀಡವನ್ನು (ಹಕ್ಕಿಗಳ ಗೂಡನ್ನು ಶ್ಯೇನಃನ = ಗಿಡುಗು ಹೇಗೆ ಹೊಂದುತ್ತದೋ, ಹಾಗೆಯೇ, ಅಹಂ=ನಾನು, ಉಪಪತಾಮಿ = (ಪತ್ಲ್ ಪತನೆ) ಹೊಂದುತ್ತೇನೆ. ॥೨॥

ಭಾ ॥ (೧) ಉಪೈವೇಶಮಹಂ ಪತಾಮಿ ಯಥಾ ಶ್ಯೇನೋ ವಸತಿಂ ಪೂರ್ವ ಭುಕ್ತಾಂ । ಇಂದ್ರಂ ನಮಸ್ಯನ್ನನುಕೂಲಗ್ಭಿರೇವ
ಯಸ್ತೋತೃಭ್ಯೋಹವ್ಯ ಏವಾಸ್ತಿ ಕಾಲೇ ॥೨॥

ಅ ॥ ಯಾವ ಶ್ರೀ ಹರಿಯು ಸಮಸ್ತ ಕಾಲಗಳಲ್ಲಿ (ಅಂದರೆ ಶ್ರೀ ಹರಿಯು ಹೇಳಿದ ಪ್ರಾತರಾದಿ ಸ್ತೋತ್ರ ಕಾಲಗಳಲ್ಲಿ) ಸ್ತುತಿಸುವ ವರೆಗೆ ಸದಾ ಸೇವ್ಯನೇ ಆಗಿರುತ್ತಾನೋ ಅಂತಹ ಸರ್ವೇಶ್ವರನಾದ ಶ್ರೀ ಹರಿಯನ್ನೇ ಇಂದ್ರ ಪ್ರತಿಪಾದಕಗಳಾದ ಅನುಕೂಲಗಳಾದ ಋಕ್ಕುಗಳಿಂದಲೇ ಸ್ತುತಿಸುತ್ತಾ ಗಿಡುಗು ಹೇಗೆ ಮೊದಲು ಅನುಭೂತವಾದ ಗೂಡನ್ನು ಹೊಂದುತ್ತದೋ, ಹಾಗೆಯೇ ನಾನು ಹೊಂದುತ್ತೇನೆ. ॥೨॥

ಋ ॥ (೩೮೬) ನಿ ಸರ್ವಸೇನ ಇಷುಧೀರಸಕ್ತ ಸಮರ್ಯೋ ಗಾ ಅಜತಿ ಯಸ್ಯ ವಷ್ಟಿ ।
ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ಮಾಪಣಿರ್ಭೂರಸ್ಮದಧಿ ಪ್ರವೃದ್ಧ ॥೩॥

ಅ ॥ ಸರ್ವಸೇನ = (ಸರ್ವಾಸೇನಾ ಯಸ್ಯ) ಸಮಸ್ತ ಸೈನ್ಯಗಳಿಗೆ ಅಧಿಪತಿಯಾದ, (ಶ್ರೀ ಹರಿಯು) (ಸಮಸ್ತ ಶತ್ರುಗಳನ್ನು ಸಂಹರಿಸುವುದಕ್ಕಾಗಿ) ಇಷುಧೀನ್ = (ತೂಣೋಪಾಸಂಗತೂಣೀರ ನಿಷಂಗಾ ಇಷುಧಿರ್ದ್ವಯೋಃ ಎಂಬ ಕೋಶದಿಂದ) ಬಾಣಾಧಾರಗಳಾದ ಕೋಶಗಳನ್ನು, ನಿ ಅಸಕ್ತ = (ಷಂಜಸಂಗೇ) ಹಿಂದುಗಡೆ ಕಟ್ಟುತ್ತಾನೆ. ಅಥವಾ (ಶ್ರೀ ಪರಮೇಶ್ವರನು ಭಕ್ತರ ಅಜ್ಞಾನಾದಿಗಳನ್ನು ಪರಿಹರಿಸುವುದಕ್ಕಾಗಿ) ಇಷುಧೀನಿವ ಇಷುಧೀನ್ = ಪ್ರಮಾಣಗಳೆಂಬ ಬಾಣಗಳಿಗೆ ಆಶ್ರಯರಾದ ಸಜ್ಜನರನ್ನು ನಿ ಅಸಕ್ತ = ತನ್ನಲ್ಲಿಯೇ ಕೂಡಿಸಿಕೊಳ್ಳುತ್ತಾನೆ. (ಅಂದರೆ ತನ್ನಲ್ಲಿಯೇ ಮನಸ್ಸು

ಮೊದಲಾದ ವ್ಯಾಪಾರವುಳ್ಳವರನ್ನಾಗಿ ಮಾಡುತ್ತಾನೆ.) (ಈ ಶ್ರೀ ಹರಿಯು ಶತ್ರು ಸಂಹಾರಕನಾದುದರಿಂದ, ಅ ರ್ಯ = (ಜಗತೌ) ಗಮ್ಯನು. (ಶರಣು ಹೊಂದಲು ಯೋಗ್ಯನು. ಸ್ವಾಮಿಯು. ಇಂತಹ ಶ್ರೀ ಹರಿಯು ಗಾಃ =ಶತ್ರುಗಳಿಂದ ಬಲಾತ್ ಅಪಹೃತಗಳಾದ ಗೋವುಗಳನ್ನು (ಅಥವಾ ಅಧ್ಯಾತ್ಮಾರ್ಥದಲ್ಲಿ) ಬುದ್ಧಿಗಳನ್ನು, ಯಸ್ಯ=ಯಾವ ಭಕ್ತನಿಗೆ, ವಷ್ಟಿ=ಕೊಡಲು ಇಚ್ಛಿಸುತ್ತಾನೋ, (ಅಂತಹ ಭಕ್ತನಿಗಾಗಿ) ಸಮ್ ಅಜತಿ= (ಅಜಗತಿಕ್ಷೇಪಣಯೋಃ) ಚೆನ್ನಾಗಿ ಕೊಟ್ಟೇ ಕೊಡುವನು. (ಪರೋಕ್ಷತಃ ಸ್ತುತಿಸಲ್ಪಟ್ಟ ಶ್ರೀ ಹರಿಯನ್ನು ಅಭಿಮುಖೀಕರಿಸಿಕೊಂಡು ಹೇಳುತ್ತಾನೆ.) ಪ್ರವೃದ್ಧಂ = ನಿತ್ಯ ಪ್ರವೃದ್ಧನಾದ ಇಂದ್ರನೇ, ಭೂರಿ =ಬಹಳವಾದ, ವಾಮಂ=ಚೆನ್ನಾಗಿ ಹೊಗಳಲರ್ಹವಾದ, ಮಂಗಲಕರವಾದ) (ಬಾಹ್ಯಾರ್ಥದಲ್ಲಿ) ಗವಾದಿಗಳನ್ನು (ಆಧ್ಯಾತ್ಮಾರ್ಥದಲ್ಲಿ) ತತ್ವಜ್ಞಾನವನ್ನು, ಚೋಷ್ಕೂಯಮಾಣಃ = (ಷ್ಕುದಾನೇ) ಭಕ್ತರಿಗೆ ಅತಿಶಯವಾಗಿ ಕೊಡುತ್ತಿರುವ, ನೀನು ಅಸ್ಮದಧಿ =ನಮ್ಮನ್ನು ಕುರಿತು, (ನಮಗಾಗಿ) (ಯಾವಾಗಲೂ) ಪಣೀಃ = (ಹಿಂಸಕತ್ವಸಾದೃಶ್ಯದಿಂದ) ಪಣಿನಾಮಕ ಅಸುರ ವಿಶೇಷನು, ಮಾ ಭೂಃ =ಆಗಬೇಡ. (ಅಂದರೆ ಮಹಾ ಪ್ರಯತ್ನದಿಂದ ಇಷುಧಿಗಳನ್ನು ಧರಿಸುವುದು ಪ್ರಮಾಣಗಳೆಂಬ ಬಾಣಗಳಿಗೆ ಆಶ್ರಯರಾದ ಸಜ್ಜನರ ಮನಸ್ಸು ತನ್ನಲ್ಲಿ ಇರುವಂತೆ ಮಾಡುತ್ತಾ ಭಕ್ತರಿಗೆ ಗೋದಾನ ಜ್ಞಾನದಾನ ಮೊದಲಾದ ಸಾಧ್ಯಾಚಾರಗಳನ್ನು ಹೊಂದಿಸಿ ಕೊಡುತ್ತಾ ಇದ್ದು ನಮ್ಮನ್ನು ಕುರಿತು ನಿಷ್ಠುರನು ಆಗಿರಬಾರದು) ||೩||

**ಭಾ ||  (1) ಅಶೇಷಸೇನಾಪತಿರೇಷ ಶತ್ರೂನಶೇಷತೋಹಂತುಮಥೋತ ಮಾಂಸಿ। ಬಧ್ನಾನಿ ತೂಣಾನ್ನಿಜ ಸಜ್ಜನಾನ್ಸಾ ಸಂಯೋಜಯತ್ಯಾತ್ಮಮಾನಬಾಣಾನ್ || (2)**

**(2) ಅರ್ಯೋ ಗಮ್ಯೋಽಧೀಶ್ವರೋ (3) ಗಾಮತೀರ್ವಾ ಸಂಕಾಲಯತ್ಯೇವ ಚ ಯಸ್ಯ ವಷ್ಟಿ। ಭಕ್ತಸ್ಯ (4) ತತ್ತ್ವಂ ದದಮಾನಸ್ಯ ಭೂರಿ ಭದ್ರಂ ಮಾಭೂರಸುರಸ್ತ್ವಂ ಕದಾಚಿತ್ । ಅಸ್ಮದರ್ಥೇ ಹಿಂಸಕತ್ವೇನ ನಿತ್ಯಪ್ರವೃದ್ಧ ||೩||**

ಅ|| (1) ಸಮಸ್ತ ಸೈನ್ಯಗಳಿಗೆ ಅಧಿಪತಿಯಾದ ಶ್ರೀ ಇಂದ್ರನು ಸಮಸ್ತ ಶತ್ರುಗಳನ್ನು ಸಂಹರಿಸುವುದಕ್ಕಾಗಿ ಬಾಣಗಳಿಗೆ ಆಶ್ರಯಕಗಳಾದ ಕೋಶಗಳನ್ನು ಹಿಂದುಗಡೆ ಬಂಧಿಸುತ್ತಾನೆ. (ಹಾಗಾದರೆ ಆಸಕ್ತ ಎನ್ನುವುದು ಲುಙಂತವಾದ ಪ್ರಯುಕ್ತ ಅದಕ್ಕೆ ಸಮವಾದ ಲುಙಂತವಾದ ಪ್ರತಿಪದಗಳನ್ನು ಬಿಟ್ಟು ಭಾಷ್ಯದಲ್ಲಿ ಅದ್ನಾತಿ ಎಂದು ಲಡಂತವಾದ ಪ್ರತಿಪದವನ್ನು ಹೇಳಿದ್ದು ಹೇಗೆ ? ಎಂದರೆ ವಷ್ಟಿ ಅಜತಿ ಎಂದು ಲಡಂತವಾದ ಪದಗಳನ್ನು ಶ್ರುತಿಯಲ್ಲಿ ಪ್ರಯೋಗ ಮಾಡಿದುದರಿಂದ ಭಾಷ್ಯದಲ್ಲಿಯೂ ಲಕಾರವನ್ನು ವ್ಯತ್ಯಾಸವಾಗಿ ಪ್ರಯೋಗಿಸಿದ್ದಾರೆ.) (ನಿ ಎನ್ನುವುದಕ್ಕೆ ಆಸಕ್ತ ಎಂಬ ಕ್ರಿಯೆಯಲ್ಲಿ ಅನ್ವಯವು ಎಂದಾಶ್ರಯಿಸಿ ಸಮಸ್ತ ಶತ್ರುಗಳನ್ನು ಸಂಹರಿಸುವುದಕ್ಕಾಗಿ ಎಂದು ವ್ಯಾಖ್ಯಾನ ಮಾಡಿ ರೀತ್ಯಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ಅಥವಾ ಋಕ್ಕಿನಲ್ಲಿ ನಿ ಎಂಬ ಉಪಸರ್ಗವು ಶ್ರುತವಾದ ಪ್ರಯುಕ್ತ ಸಶಾಧನ ಕ್ರಿಯೆಯು ಲಭಿಸುತ್ತದೆ. ಅಂದರೆ ತಿಙ್‌ಪ್ರತ್ಯಯದಿಂದ ವಾಚ್ಯಗಳಾ ಕರ್ತೃಕರ್ಮ ಭಾವಾಖ್ಯವಾದ ಸಾಧನದಿಂದ ಕೂಡಿದ ಕ್ರಿಯೆಯು ಸಸಾಧನ ಕ್ರಿಯೆಯು. ಅಂದರೆ ಉಪಸರ್ಗಕ್ಕೆ ಕ್ರಿಯೆಯ ಸಾಮೀಪ್ಯವಿಲ್ಲವಾದರೆ ಉಪಸರ್ಗವು ಸಸಾಧನ ಕ್ರೀಯೆಯನ್ನು ಹೇಳುವುದರಿಂದ ನಿಹಂತುಂ ಎಂದು ಸಿದ್ಧವಾಗುವಾಗ ಯೋಗ್ಯತಯಾ ಸಮಸ್ತ ಶತ್ರುಗಳನ್ನು ಎಂದು ಅಧ್ಯಾಹಾರ ಮಾಡಬೇಕು, ತಥಾಚ ಸಮಸ್ತ ಶತ್ರುಗಳನ್ನು ನಿ=ಅತ್ಯಂತವಾಗಿ, ಹಂತುಂ=ಸಂಹರಿಸುವುದಕ್ಕಾಗಿ ಎಂದರ್ಥವು (ಆಧ್ಯಾತ್ಮ ಪರವಾದ ಅರ್ಥ) ಅಥೋವಾ=ಅಥವಾ ಶ್ರೀ ಹರಿಯು ಭಕ್ತರ ಅಜ್ಞಾನಾದಿಗಳನ್ನು ಪರಿಹರಿಸುವುದಕ್ಕಾಗಿ (ಇಷವ

ಇವ=ಬಾಣಗಳಂತೆಯೇ ವಿರೋಧಿಗಳನ್ನು ನಾಶಮಾಡುವ ವಿಷಯದಲ್ಲಿ ತೀಕ್ಷ್ಣಗಳಾದ, ಧಿಯಃ=ಬುದ್ಧಿಗಳು ಯೇಷಾಂ=ಯಾವ ಸಜ್ಜನರಿಗೋ ಅಂತಹ ಸಜ್ಜನರು, ಇಷುಧಿಗಳು, ಈ ಅಭಿಪ್ರಾಯದಿಂದ ಮಾನಬಾಣಾನ್ ಎಂದದ್ದು) (ಮಾನಾನಿ =ಪ್ರಮಾಣಗಳು, ಬಾಣಾ ಇವಂ=ಬಾಣಗಳಂತೆ ಯೇಷು=ಯಾವ ಸಜ್ಜನರಲ್ಲಿ ಎಂಬ ವ್ಯುತ್ಪತ್ತಿಯಿಂದ) ಪ್ರಮಾಣಗಳೆಂಬ ಬಾಣಗಳಿಗೆ ಆಶ್ರಯರಾದ ಸ್ವಕೀಯರಾದ ಸಜ್ಜನರನ್ನು ತನ್ನಲ್ಲಿಯೇ ಇರಿಸಿಕೊಳ್ಳುತ್ತಾನೆ. (ಅಂದರೆ - ತನ್ನಲ್ಲಿಯೇ ಮನಸ್ಸು ಮೊದಲಾದವುಗಳ ವ್ಯಾಪಾರವುಳ್ಳವರನ್ನಾಗಿ ಮಾಡುತ್ತಾನೆ. (2) ಈ ಶ್ರೀ ಹರಿಯು ಶತ್ರುಗಳನ್ನು ಸಂಹಾರ ಮಾಡಿ, ಅರ್ಯ = (ಋಗತೌ) (ಗಮ್ಯನು, ಶರಣು ಹೊಂದಲು ಯೋಗ್ಯನು.) ಸರ್ವರಿಗೂ ನಿಯಾಮಕನು. (ಹಾಗಾದರೆ ಋಹಲೋರ್ಣ್ಯತ್ ಎನ್ನುವುದರಿಂದ ಣ್ಯತ್ ಪ್ರತ್ಯಯ ಮಾಡಿ ವೃದ್ಧಿಯೂ ಮಾಡಿದರೆ ಆರ್ಯ ಎಂದಾಗಬೇಕಿತ್ತು. ಆರ್ಯ ಎಂದು ಹೇಗೆ ? ಎಂದರೆ ಆರ್ಯಸ್ವಾಮಿ ಎಂಬುದು ಸಮಂಜಸವೇ. ಈ ಅಭಿಪ್ರಾಯದಿಂದಲೇ ಅರ್ಯ = ಅಧೀಶ್ವರನು. ಸರ್ವ ನಿಯಾಮಕನು (3) (ಬಾಹ್ಯಾರ್ಥದಲ್ಲಿ) ಗಾಃ = ಶತ್ರುಗಳಿಂದ ಅಪಹೃತಗಳಾದ ಗೋವುಗಳನ್ನು, (ಆಧ್ಯಾತ್ಮಾರ್ಥದಲ್ಲಿ) ಗಾಃ =ಬುದ್ಧಿಗಳನ್ನು ಯಾವ ಭಕ್ತನಿಗೆ ಕೊಡಲು ಇಚ್ಛಿಸುತ್ತಾನೋ, ಆತನಿಗಾಗಿ (ಸಂಕಾಲಯತ್ಯೇವ=ಕಲಕಾಮಧೇನೌ) ಚೆನ್ನಾಗಿ ನಿಶ್ಚಯವಾಗಿಯೂ ಕೊಡುವನು. (೫)ಪರೋಕ್ಷವಾಗಿ ಸ್ತುತಿಸಲ್ಪಟ್ಟ ಶ್ರೀ ಹರಿಯನ್ನು ಅಭಿಮುಖೀಕರಿಸಿ ಹೇಳುತ್ತಾರೆ) ನಿತ್ಯದಲ್ಲಿಯೂ ಅಭಿವೃದ್ಧನಾದ ಶ್ರೀ ಹರಿಯೇ, ಬಹಳವಾಗಿ ಮಂಗಳಕರವಾದ (ಬಾಹ್ಯಾರ್ಥದಲ್ಲಿ) ಗವಾದಿಗಳನ್ನೂ (ಆಧ್ಯಾತ್ಮಾರ್ಥದಲ್ಲಿ) ತನ್ನ `ಜ್ಞಾನವನ್ನು ನೀನು ಭಕ್ತರಿಗೆ ಕೊಡುವವನಾಗಿ ನಮಗಾಗಿ ಹಿಂಸಕತ್ವ ಸಾದೃಶ್ಯದಿಂದ (ಹಿಂಸಕನಾಗಿ) ಪಣಿನಾಮಕ ಅಸುರವಿಷೇತನು ಆಗಬೇಡ.

ವಿ॥ ಮಹಾಪ್ರಯತ್ನದಿಂದ ಪ್ರಮಾಣಗಳೆಂಬ ಆಶ್ರಯರಾದ ಸಜ್ಜನರನ್ನು ತನ್ನಲ್ಲಿಯೇ ಆಸಕ್ತರನ್ನಾಗಿ ಮಾಡಿ ಅವರಿಗೆ ಗೋದಾನ ಜ್ಞಾನದಾನಾದಿಗಳನ್ನು ಮಾಡುತ್ತಾ ನಮಗೆ ಅನುಗ್ರಹಿಸು. ಕೆಡುಕು ಮಾಡಬೇಡ

ಋ॥ (೩೮೭) ವಧೀರ್ಹಿ ದಸ್ಯುಂ ಧನಿನಂ ಘನೇನ ಏಕಶ್ಚರನ್ನು ಪರಾಕೇಭಿರಿಂದ್ರ ।
ಧನೋರಧಿ ವಿಷುಣಕ್ತೇ ವ್ಯಾಯನ್ನಯಜ್ವಾನಃಸನಕಾಃ ಪ್ರೇತಿಮೀಯುಃ ॥೪॥

ಅ ॥ ಇಂದ್ರ = ಶ್ರೀ ಹರಿಯೇ, ಏಕಃ ಹಿ = ಒಬ್ಬನೇ, ಇತರರ ಅಪೇಕ್ಷೆಯಿಲ್ಲದಿರುವವನು, ಉಪತಾಕೇಭಿಃ = (ಶಕ್ಲ್ಯಶಕ್ತೌ) ಸಮೀಪದಲ್ಲಿ ಸಮಸ್ತ ವಸ್ತುಗಳ ಒಳಗೂ ಹೊರಗೂ ಶಕ್ತಿಗಳಿಂದ, ಚರನ್ = ಸಂಚರಿಸುವ (ಅಂದರೆ = ಸಮಸ್ತ ದೇವತೆಗಳು, ಮನುಷ್ಯರು ಮೊದಲಾದ ಲೋಕವನ್ನು (ಜನರನ್ನು) ನಿಯಮಿಸುವ ನೀಉ, ದಸ್ಯುಂ=ಕಳ್ಳನನ್ನು, ಧನಿನಂ =ಧನಾಢ್ಯನಾದವನನ್ನು, ಅಂದರೆ ಯಾರು ಕಳ್ಳನು ? ಧನಭರಿತನಾದವನಿಗೆ ಧನಾಢ್ಯತ್ವ ಮಾತ್ರದಿಂದ ಧಸ್ಯುತ್ವವು (ಕಳ್ಳನು ಎಂಬುದು) ಹೇಗೆ ಎಂದರೆ. ಆಯಜ್ವಾನಃ ಎಂಬುದನ್ನು ಇಲ್ಲಿ ಅಯಜ್ವಾನಂ ಎಂದು ದ್ವಿತೀಯಾ ವಿಭಕ್ತಿಯಾಗಿ ಅನ್ವಯಿಸಿಕೊಳ್ಳಬೇಕು. ತದಾಚ ಧನವು ಸಮೃದ್ಧಿಯಾಗಿದ್ದರೂ ನಿನ್ನನ್ನು) ಅಯಜ್ವಾನಂ = ಯಾಗ ಮಾಡದಿರುವವನನ್ನು ಘನೇನ = (ಮೂರ್ತೌಘನಃ) ಎಂಬ ಸೂತ್ರದಿಂದ ಹನ್‌ಧಾತುವಿಗೆ ಅಪ್ರತ್ಯಯವು. ಘನಾದೇಶವು, ಕಾಠಿನ್ಯ ಎಂಬ ಅರ್ಥದಲ್ಲಿ ನಿಪಾತವು. ಪ್ರಕ್ರಿಯೆಯನ್ನು ಸಿದ್ಧೀಕರಿಸಿಕೊಂಡು ನಿರ್ದೇಶ ಮಾಡುವುದು) ಧರ್ಮಧರ್ಮಿಗಳಿಗೆ ಅಭೇದವಿದ್ದ

ಪ್ರಯುಕ್ತ ಕಾಠಿಣ್ಯವುಳ್ಳದ್ದೆಂದು ಅರ್ಥವು (ಮತ್ತು ಘನಃ ಸಾಂದ್ರೇ ದೃಢೇ ದಾರ್ಢ್ಯೆ ಎಂದು ವಿಶ್ವಕೋಶವು) ಮೂರ್ತವಾದ, ಅತ್ಯಂತ ಕಾಠಿಣ್ಯವುಳ್ಳ, ಅತಿದೃಢವಾದ ವಜ್ರಾಯುಧದಿಂದ, ವಧೀಃ = (ಹನ ಹಿಂಸಾಗತ್ಯೋಃ) ಸಂಹರಿಸಿರುತ್ತಿ. ಅಥವಾ ಘನೇನ =ಜ್ಞಾನದಿಂದ ಧನಿನಂ=ಧನಾಕಾಂಕ್ಷೆಯನ್ನು ಹುಟ್ಟಿಸುವ, ದಸ್ಯುಂ=ಅಜ್ಞಾನಗಳ ಸಮುದಾಯವನ್ನು, ವಧೀಃ =ಸಂಹರಿಸಿರುತ್ತಿ. (ಪೂರ್ವಾರ್ಧದಲ್ಲಿ ಹೇಳಿದುದನ್ನೆ ಧನೋಃ ಇತ್ಯಾದಿ ದ್ವಿತೀಯಾರ್ಧದಲ್ಲಿ ವಿವರಿಸುತ್ತಾರೆ. ) ಧನೋಃ = (ಧಿನುಪುಷ್ಟೌ, ಉಪ್ರತ್ಯಯವು. ಧಾತುವಿನ ಇಕಾರಕ್ಕೆ ಆಕಾರಾದೇಶವು ಅಥವಾ ಧನಪುಷ್ಟೌ) ಅತ್ಯಂತ ಪುಷ್ಟಿಯುಳ್ಳ ನಿನ್ನನ್ನು, ಅಧಿ = ಅಧಿಕರಿಸಿ, ಅಯಜ್ವಾನಃ = ಯಾವಾಗಲೂ ಯಾಗ ಮಾಡದೇನೇ ಇದ್ದವರಾಗಿ, ವಿಷುಣಕ್=ವಿಷು ಉಪಪದಾತ್ ಅಂಚ ಗತಿಪೂಜನಯೋಃ) ಸರ್ವತ್ರ, ವಿ ಅಯನ್ = (ಅಯಪಯಗತೌ) ಹೋದರು. (ಅಂದರೆ ಇತರ ದೇವತೆಗಳನ್ನು ಪೂಜಿಸುತ್ತಿದ್ದರು.) (ಆದುದರಿಂದ) ತೇ ಅವರು ಸನಕಾಃ = (ಷಣಭೂಭೇ) ಮೋಕ್ಷಾಧಿಗಳನ್ನು ಹೊಂದುವ ವಿಷಯದಲ್ಲಿ ಯೋಗ್ಯ ಸ್ವರೂಪರಾದಾಗ್ಯೂ, ಪ್ರೇತಿ = ದುಃಖ ಬಾಹುಲ್ಯರೂಪವಾದ ಮರಣವನ್ನು, ಈ ಯುಃ = ಇಣುಗತೌ) ಹೊಂದಿದರು. (ಅಂದರೆ ಯುಕ್ತಿಯೋಗ್ಯರಾದಾಗ್ಯೂ ಪರಮಾತ್ಮನನ್ನು ಬಿಟ್ಟು, ಇತರ ದೇವತೆಗಳನ್ನೂ ಪೂಜಿಸುವವರು ನರಕಾದ್ಯನರ್ಥವನ್ನು ಹೊಂದುತ್ತಾರೆ. ಅಯೋಗ್ಯವು ಅನರ್ಥವನ್ನು ಅನರ್ಥವನ್ನು ಹೊಂದುತ್ತಾರೆಂದು ಸುತಾರಾಂ ಸಿದ್ಧ ||೪||

**ಭಾ || (೧) ವಜ್ರೇಣ ಘನೇನ ದಸ್ಯುಂ । ಜ್ಞಾನೇನ ವಾ ಜ್ಞಾನಗಣಂ ಧನಾಢ್ಯಮಯಜ್ಯುಂ ಚಾಪ್ಯೇಕ ಏವಾಂತರೇಚ । ಚರಂಛ್ಯಾಕ್ಯೈಃ ಶಕ್ತಿಭಿಃ ಸರ್ವದೇವ ನರಾದಿಲೋಕಂ ಯಮಯನ್‌ಜಘಂಥ|| (೨) ಅಧಿಕೃತ್ಯಂ ತ್ವಾಂ ಧನುಮತ್ಯಂತಪುಷ್ಟಂ ವಿಷ್ವಗ್ಗ್ಗುರಯ ಜಂತಃ ಸದೈವ। ಮೃತಿಂ ಪ್ರಾಪುರ್ದುಃಖಬಾಹುಲ್ಯರೂಪಾನಂ ಸಕಾಲಾಭೇ ಯೋಗ್ಯ ರೂಪಾ ಅಪಿ ಸ್ಮ ||೪||**

ಅ || (೧) (ಶ್ರೀ ಹರಿಯೇ) ಇತರಾಪೇಕ್ಷೆಯಿಲ್ಲದಿರುವ, ಮತ್ತು ಸಮಸ್ತ ವಸ್ತುಗಳ ಒಳಗೂ (ಚ) ಹೊರಗೂ (ಶಾಕ್ಯೈಃ =) ಶಕ್ತಿಗಳಿಂದ, ಸಂಚರಿಸುವ, ಅಂದರೆ ಸಮಸ್ತ ದೇವತೆಗಳು ಮನುಷ್ಯರು ಮೊದಲಾದ ಸಮಸ್ತ ಜನರನ್ನು ನಿಯಮಿಸುವ ನೀನು (ದಸ್ಯುಂ=) ಕಳ್ಳನನ್ನು (ಯಾರನ್ನು) ಧನಿಕರಾದವನನ್ನು (ಅಂದರೆ ಧನವು ಇದ್ದರೂ ನಿನ್ನನ್ನು ಉದ್ದೇಶಿಸಿ) ಯಾಗ ಮಾಡದಿದ್ದವನನ್ನು ಅತಿ ದೃಢವಾದ ವಜ್ರಾಯುಧದಿಂದ ಸಂಹರಿಸಿರುತ್ತಿ. ಅಥವಾ ಜ್ಞಾನದಿಂದ ಅಜ್ಞಾನ ಸಮುದಾಯವನ್ನು ಪರಿಹರಿಸಿರುತ್ತಿ. (೨) (ಯಾವ ಕಾರಣದಿಂದ ಆ ಪುರುಷರು) (ಧನುಂ=) ಅತ್ಯಂತ ಪುಷ್ಟನಾದ ನಿನ್ನನ್ನು ಅಧಿಕರಿಸಿಕೊಂಡು ಯಾವಾಗಲೂ ಯಾಗ ಮಾಡದೇನೇ ಇದ್ದವರಾಗಿ ಸುತ್ತಮುತ್ತಲೂ ಹೋದರು. (ಅಂದರೆ ಶ್ರೀ ಹರಿಯನ್ನು ಬಿಟ್ಟು, ಇತರ ದೇವತೆಗಳನ್ನು ಪೂಜಿಸುತ್ತಿದ್ದರು.) ಆದ ಕಾರಣ ಅವರು ಮರಣವನ್ನು ಹೊಂದಿದರು. (ಸರ್ವ ಸಾಧಾರಣವಾದ ಮರಣವು ದೇವತಾಂತರವನ್ನು ಪೂಜಿಸಿದ್ದಕ್ಕೆ ಫಲವು ಹೇಗೆ ಆಗುವುದೆಂದರೆ) ಅತಿ ದುಃಖ ಸ್ವರೂಪವಾದ ಭೂತವಾದ ಮರಣವನ್ನು ಹೊಂದಿರುವರು. (ದುಃಖ ಸ್ವರೂಪವಾದ ಮರಣವು ಎಂತಹವರಿಗೆ ಎಂದರೆ) (ಸನಕಾಃ) ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಲಿಕ್ಕೆ ಯೋಗ್ಯ ಸ್ವರೂಪರಾದಾಗ್ಯೂ ಅಂದರೆ ಮುಕ್ತಿಯೋಗ್ಯರಾದಾಗ್ಯೂ (ಶ್ರೀ ಪರಮೇಶ್ವರನನ್ನು ಬಿಟ್ಟು, ಇತರ ದೇವತೆಗಳನ್ನು ಪೂಜಿಸುವವರು ನರಕಾದ್ಯನರ್ಥನವನ್ನು ಹೊಂದುವರು. ಅಯೋಗ್ಯರು ಹೊಂದುತ್ತಾರೆಂಬುದು ಸುತರಾಂ ಸಿದ್ಧ.) ||೪||

ಋ || (೩೮೮) ಪರಾ ಚಿಚ್ಛೀರ್ಷಾ ವವೃಜುಸ್ತ ಇಂದ್ರಾಯಜ್ವಾನೋ ಯಜ್ವಭಿಃ ಸ್ಪರ್ಧಮಾನಾಃ |

ಪ್ರಯದ್ದಿವೋ ಹರಿವಃ ಸ್ಥಾತರುಗ್ರ ನಿರವ್ರತಾ ಅಧಮೋ ರೋದಸ್ಯೋಃ ||೫|| ೧||

ಅ || ಇಂದ್ರ = ಎಲೋ ಶ್ರೀ ಹರಿಯೇ ತೇ = ಹಿಂದೆ ಹೇಳಿದವರಕ್ಕಿಂತ ಇತರರಾದ ಯಾವ ಅಸುರರು ಅಯಜ್ವಾನಃ = ಯಾಗ ಮಾಡದಿದ್ದವರು (ಇರುತ್ತಾರೋ) ತೇ = ಅವರು, ಯಜ್ವಭಿ=ಯಾಗ ಮಾಡುವವರಿಂದ ಸ್ಪರ್ಧಮಾನಾಃ = ಸ್ಪರ್ಧೆ ಮಾಡುವವರಾಗಿ, ಶೀರ್ಷಾಚಿತ್=ತನ್ನ ಶಿರಸ್ಸುಗಳನ್ನು ಕೂಡ ಪರಾವವೃಜುಃ = (ವೃಜಗತೌ ವ್ರಜ ಸಂತ್ಯಾಗೇ) ಬಿಟ್ಟು ಬಿಡುವರು. (ಅಂದರೆ ಸ್ಪರ್ಧಾನಿಮಿತ್ತವಾಗಿ ನಮ್ಮ ಶಿರಸ್ಸುಗಳ ತ್ಯಾಗವನ್ನು ಎಣಿಸುವುದಿಲ್ಲ. ಎಂತಹ ಕೆಡುಕು ಬಂದರೂ ಚಿಂತೆಯಿಲ್ಲ ಎನ್ನುವರು.) (ಸಜ್ಜನರಿಂದೊಡಗೂಡಿ ಸ್ಪರ್ಧೆ ಮಾತ್ರದಿಂದ ಪ್ರಯೋಜನವನ್ನು ಹೊಂದಿರುತ್ತಾರೆ.) ಹರಿವಃ = (ಹರಯಃ = ಕುದುರೆಗಳು ಅಥವಾ ಇಂದ್ರಿಯಗಳು ಅಸ್ಯ ಸಂತಿ ಎಂಬ ವ್ಯುತ್ಪತ್ತಿಯಿಂದ) ಕುದುರೆಗಳು ಅಥವಾ ಇಂದ್ರಿಯಗಳುಳ್ಳವನೇಷ ಸ್ಥಾತಃ = (ಷ್ಠಾಗತಿನಿವೃತ್ತೌ) ಸ್ಥಿರನಾದವನೇ, ಉಗ್ರ=ಕ್ರೂರನಾದವನೇ ಅಂದರೆ ಇಂದ್ರಿಯಗಳಿಗೆ ಅಧಿಪತಿಯೂ ಅತಿಸ್ಥೈರ್ಯವುಳ್ಳವನೂ ದೈತ್ಯರಿಗೆ ಕ್ರೂರನಾದವನೂ ಆದ ನೀನು ಯತ್=ಯಾವ ಕಾರಣದಿಂದ ದೆಶೆಯಿಂದ ಅಸುರರು ಯಾಗ ಮಾಡದಿರುವಿಕೆ ಮೊದಲಾದ ಧರ್ಮಗಳಿಂದ ಯುಕ್ತರಾಗಿರುತ್ತಾರೋ (ಯಾಗಾದಿಗಳನ್ನು ಮಾಡಲೇ ಇಲ್ಲವೋ) ಆದ ಕಾರಣ ಅವರು ಅವ್ರತಾನ್=ನಿನ್ನ ಪೂಜೆಯಿಂದ ವಿರಹಿತರಾದ ಅಂದರೆ ನಿನ್ನ ಪೂಜಾದಿಗಳನ್ನು ಮಾಡದಿರುವ ಆ ಅಸುರರನ್ನು ದಿವಃ =ಸ್ವರ್ಗದಿಂದಲೂ ರೋದಸ್ಯೋಃ = ಅಂತರಿಕ್ಷ ಲೋಕದಿಂದಲೂ ಪ್ರಥಿವೀ ಲೋಕದಿಂದಲೂ, ಪ್ರ.ನಿ. ಅಧಮಃ=ಧಮಧ್ವಾನೇ ನಿರಾಕರಿಸುವವನಾಗಿರುತ್ತಿ. ||೫||

ಭಾ || (೧) ಅಯಜ್ವಾನೋಽನ್ಯೇ ವಕ್ಷ್ಯಮಾಣಾಸ್ತು ಯೇ ತೇ ಸಂತ್ಯಾಸುರಾ ಯಜ್ವಭಿಃ ಸ್ಪರ್ಧಮಾನಾಃ | ಶಿರಾಂಸ್ಯಪಿ ಸ್ವಾನಿ ಸಂತತ್ಯಜುಸ್ತೇ ಸದ್ಭಿಃ ಸ್ಪರ್ಧಾಮಾತ್ರ ಸಂಪೂರಿತಾರ್ಥಾ || ತಾನವ್ರತಾನ್ ಸ್ವರ್ಗತಃ ಖಾತ್ಪೃಥಿವ್ಯಾ ನಿರಧಮಸ್ತ್ವಂ ಸ್ಥೈರ್ಯವಾನಿಂದ್ರಿಯೇಶಃ ||೫||

ಅ|| (೧) (ಈ ಋಕ್ಕಿನಲ್ಲಿಯೂ ಅಯಜ್ವಾನಃ ಎಂದು ಶ್ರುತವಾದ ಪ್ರಯುಕ್ತ ಪೂರ್ವಋಕ್ಕಿನಲ್ಲಿ ಹೇಳಲ್ಪಟ್ಟವರೇ ಇಲ್ಲಿಯೂ ಹೇಳಲ್ಪಡುತ್ತಾರೆ. ಎಂಬ ಪ್ರತೀತಿಯನ್ನೂ ನಿರಾಕರಿಸುತ್ತಾರೆ.) ಯಾರು ಮುಂದೆ ಹೇಳಲ್ಪಡುವ ವಿಧಿಪ್ರಕಾರ ಯಾಗ ಮಾಡದಿದ್ದವರು ಇರುತ್ತಾರೋ ಅವರಾದರೂ ಹಿಂದೆ ಹೇಳಿದವರಿಗಿಂತ ಇತರರೇ (ಏಕೆಂದರೆ ಅವರು ಮೋಕ್ಷವನ್ನು ಹೊಂದಲಿಕ್ಕೆ ಯೋಗ್ಯರು ಎಂದು ಹಿಂದೆ ಹೇಳಿದೆ. ಇವರಿಗಾದರೂ ತಮ್ಮ ಶಿರಸ್ಸು ಹೋದೀತು ಎಂಬ ಭಯವನ್ನು ಸಹ ಬಿಟ್ಟು ಸದಾ ಸಜ್ಜನರಲ್ಲಿ ದ್ವೇಷ ಮಾಡುತ್ತಿರುತ್ತಾರೆ ಎಂದು ಮಹಾ ದೋಷವನ್ನು ಹೇಳಿದೆ) (ಹಾಗಾದರೆ ಇವರು ಯಾರು ಎಂದರೆ) ಯಾರು ಅಸುರ ಸ್ವಭಾವವುಳ್ಳವರು ಇರುತ್ತಾರೋ ಅವರು (ಹೀಗೆ ತಾತ್ಪರ್ಯವನ್ನು ಹೇಳಿ ಯಜ್ವಭಿಃ ಇತ್ಯಾದಿಗಳಿಂದ ತೋರಿಸುವುದಕ್ಕಾಗಿ ಅಯಜ್ವಾನಃ ಅನ್ಯೇ ಇತ್ಯಾದಿಗಳಿಂದಲೇ ವ್ಯಾಖ್ಯಾನ ಮಾಡುತ್ತಾರೆ.) ಎಲೋ ಶ್ರೀ ಹರಿಯೇ ಹಿಂದೆ ಹೇಳಿದ ಆಯಜ್ವರಿಗಿಂತ ಇತರರಾದ ಮುಂದೆ ಹೇಳುವ ಯಾವ ಪ್ರಸಿದ್ಧರಾದ ಅಸುರರು ಯಾಗ ಮಾಡದಿದ್ದವರು ತಮ್ಮ ಶಿರಸ್ಸುಗಳನ್ನೂ ಕೂಡ ಕೊಟ್ಟು ಬಿಡುವರು (ಅಂದರೆ - ಸ್ಪರ್ಧಾ ನಿಮಿತ್ತವಾಗಿ ತಮ್ಮ ಶಿರಸ್ಸು

ಹೋದರೂ ಗಣನೆ ಮಾಡುವುದಿಲ್ಲ.) ಅವರು ಸಜ್ಜನಿರಿಂದೊಡಗೂಡಿ ಕೇವಲ ಸ್ಪರ್ಧೆಯಿಂದಲೇ ಪ್ರಯೋಜನವನ್ನು ಹೊಂದಿರುವರು. (೨) ಸ್ಥೈರ್ಯವುಳ್ಳ ಲಕ್ಷ್ಮೀಪತಿಯಾದ ನೀನು ನಿನ್ನ ಪೂಜಾದಿಗಳನ್ನು ಮಾಡದಿರುವ ಆ ಅಸುರರನ್ನು ಸ್ವರ್ಗದಿಂದಲೂ ಅಂತರಿಕ್ಷ ಲೋಕದೆಶೆಯಿಂದಲೂ ಪ್ರಥಿವೀ ಲೋಕದಿಂದಲೂ ನಿರಾಕರಿಸುವವನಾಗಿರುತ್ತಿ. ಅಂದರೆ ಆ ಲೋಕಗಳಿಗಿಂತಲೂ ಕೆಳಲೋಕವನ್ನೇ ಹೊಂದಿಸಿ ಕೊಡುತ್ತಿ.) ||೫||೧||

ಋ || (೩೮೯) ಅಯುಯುತ್ಸನ್ನನವ್ಯಸ್ಯ ಸೇನಾಮಯಾತಯಂತ ಕ್ಷಿತಯೋ ನವಗ್ವಾಃ |

ವೃಷಾಯುಧೋ ನ ವಧ್ರಯೋ ನಿರಷ್ಟಾಃ ಪ್ರವದ್ಭಿರಿಂದ್ರಾಚ್ಚಿತ್ತ್ಯಯಂತ ಆಯನ್ ||೬||

ಅ|| ನವಗ್ವಾಃ = ನವಗ್ವರೆಂದು ಪ್ರಸಿದ್ಧರಾದ ಋಷಿಗಳು, ಕ್ಷಿತಯಃ = ಪ್ರಜೆಗಳು (ಬಾಹ್ಯರಾದ ಅಸುರ ಶ್ರೇಷ್ಠರಿಂದ ಉಪದ್ರವವನ್ನು ಹೊಂದಿದವರಾಗಿ ಯಾವಾಗ ಇಂದ್ರನನ್ನು ಶರಣು ಹೊಂದಿರುವರೋ) (ಅಧ್ಯಾತ್ಮಾರ್ಥವನ್ನು ಹೇಳುತ್ತಾರೆ. ಅಥವಾ ನವಗ್ವಋಷಿಗಳಿಂದುಪಲಕ್ಷಿತರಾದ ಸಜ್ಜನರು ತಮಶ್ಶಬ್ದವಾಚ್ಯಗಳಾದ ಅಜ್ಞಾನ ಸಂತಯವಿಪರ್ಯಗಳಿಂದ ಅಥವಾ ತಮೋಗುಣಕಾರ್ಯಗಳಾದ ಪಾಪಗಳ ಸಮೂಹಗಳಿಂದ ಚೆನ್ನಾಗಿ ಪೀಡಿತರಾಗಿ ಯಾವಾಗ ಶ್ರೀ ವಾಸುದೇವನನ್ನು ಶರಣು ಹೊಂದಿದರೋ, ಆಗ ಆ ವಾಸುದೇವನನ್ನು ಶರಣು ಹೊಂದಿರುವುದರಿಂದ ಪುಷ್ಟರಾದ ಸಮರ್ಥರಾದ ಆ ಅಸುರ ಶ್ರೇಷ್ಠರಿಂದ ಅಥವಾ ಅಜ್ಞಾನ ಮೊದಲಾದುವುಗಳಿಂದ ಗೂಡಿ ಆಯುಯುತ್ಸನ್ = (ಯುಧಸಂಪ್ರಹಾರೇ) ಯುದ್ಧ ಮಾಡಲಿಕ್ಕೆ ಇಚ್ಛಿಸಿದರು) ಅಥವಾ (ಇಂದ್ರಾಂತರ್ಗತನಾದ ವಾಸುದೇವನನ್ನು ಅಧ್ಯಾತ್ಮದಲ್ಲಿರುವ ವಾಸುದೇವನನ್ನು ಎಂದು ವಾಸುದೇವಂ ಎನ್ನುವುದಕ್ಕೆ ಬಾಹ್ಯ ಆಧ್ಯಾತ್ಮರೂಪ ಉಭಯಾರ್ಥದಲ್ಲಿಯೂ ಯೋಜನಾ ಮಾಡಬೇಕು. ಹೇಗೆಂದರೆ (ಯುದ್ಧ ಮಾಡಲಿಚ್ಛಿಸುವ ಆ ಮುನಿಗಳು ಆ ಅಸುರರನ್ನು ಅಥವಾ ಅಜ್ಞಾನಾದಿಗಳನ್ನು ಸಂಹರಿಸುವುದಕ್ಕಾಗಿ) ಅನವದ್ಯಸ್ಯ =ನಿರ್ದೋಷನಾದ ಇಂದ್ರಾಂತರ್ಯಾಮಿಯಾದ ಶ್ರೀ ವಿಷ್ಣುವಿನ, ಸೇನಾಂ=ಚತುರಂಗ ಸೈನ್ಯವನ್ನು ಅಥವಾ ಆಧ್ಯಾತ್ಮದಲ್ಲಿರುವ ಶ್ರೀ ವಿಷ್ಣುವಿನ, ಸೇನಾಂ=ಹರಿಭಕ್ತ್ಯಾದಿಗುಣಗಳನ್ನು ಅಯಾತಯಂತ = (ಯತೀಪ್ರಯತ್ನೇ) ಪ್ರೇರೇಪಿಸಿದರೋ ಆಗ ವೃಷಾಯುಧಃ ನ (ಶುಕ್ರಲೇ ಮೂಷಕೇ ಶ್ರೇಷ್ಠೇ ಸುಕೃತೇ ವೃಷಭೇ ವೃಷಃ ಎಂಬ ಕೋಶದಿಂದ ವೃಷಶಬ್ದವು ಶ್ರೇಷ್ಠವಾಚಕವು. ಯುಧ್ಯಂತೇ ಇತಿ ಯುಧಃ) ಶ್ರೇಷ್ಠರಾದ ಸಮರ್ಥರಾದ ಯೋಧರಂತೆ, ವಧ್ರಯಃ =ತಮ್ಮ ಶತ್ರುಗಳನ್ನು ಸಂಹರಿಸುವುದೇ ಮುಖ್ಯ ಸ್ವಭಾವವುಳ್ಳವರಿಂದಾಗ್ಯೂ ಆ ಅಸುರಾದಿಗಳು, ಪ್ರವದ್ಭಿಃ = (ಪ್ರುಜ್‌ಪ್ರುಜ್ ಗತೌ) ಅಶುಗತಿಯುಳ್ಳ ಶ್ರೀ ವಿಷ್ಣುವಿನ ಪರಿವಾರದಿಂದ ಅಥವಾ ತಮ್ಮ ಭಕ್ತ್ಯಾದಿಗುಣನಿಮಿತ್ತವಾಗಿ, ನಿರಷ್ಟಾಃ = (ಅಶೂ ವ್ಯಾಪ್ತೌ) ಅತಿಶಯವಾಗಿ ವ್ಯಾಪಿಸಿದರು. (ಅಂದರೆ ಓಡುವವರಾಗಿ ದಿಗ್ದೇಶಗಳನ್ನು ಹೊಂದಿದರು. ಓಡಿದವರು ಅದರ್ಶನವನ್ನೇ ಹೊಂದಿದರು. (ಅವರು ಓಡುತ್ತಿರಲು ಇಂದ್ರನ ಪರಿವಾರದವರು) ಇಂದ್ರಾತ್ = ಇಂದ್ರನ ಮತ್ತು ಶ್ರೀ ಹರಿಯ ಪ್ರಸಾದದಿಂದ, ಜಿತಯಂತ ! = (ಆ ಅಸುರರನ್ನು) ಪುನಃ ಪುನಃ ಓಡಿಸುವವರಾಗಿ, ಅಯನ್ = (ಅಯಪಯಗತೌ) ಹೋದರು ಪ್ರಸಿದ್ಧ. ||೬||

ಭಾ || (೧) ಯದಾ ನವಗ್ವಾ ಋಷಯೋಽಸುರೇಂದ್ರೈರುಪದ್ರುತಾಃ ಶರಣಂ ವಾಸುದೇವಂ |

**ಪ್ರಾಪುಸ್ತ್ವಮೋಭಿಸ್ತ್ವಾಮುಸ್ಯೆರ್ವಾಽಘುಸಂಘ್ಯಃ ಸಂಪೀಡಿತಾ ಅಯುಯುತ್ಸಂಸ್ತದಾ ತೈಃ ॥ ಸೇನಾಂಚ ವಿಷ್ಣೋರ್ನಿರಯಾತಯಂಸ್ತೇ ವಧಾಯ ತೇಷಾಂ ಹರಿಭಕ್ತ್ಯಾದಿಕಾನ್ವಾ । ಗುಣಾನ್ (2) ಸಮರ್ಥಾಇವ ಯೋಧಾಃ ಸ್ವಶತ್ರುವಧ್ಯೆಇಶೀಲಾ ಅಪಿನಷ್ಟಾಃ ಪ್ಲವದ್ಭಿಃ । ಗುಣೈರ್ವಿಷ್ಣೋಃ ಸ್ವೈರ್ಗುಣೈರ್ವಾ ಪ್ರಸಾದಾದೀಶಸ್ಯ ಸಂಕಾಲಯಂತೋ ಹ್ಯಗಚ್ಛನ್ ॥೬॥**

ಅ॥ (1) (ಇತಿಹಾಸ ಗರ್ಭಿತವಾದ ಪ್ರಯುಕ್ತ ಇತಿಹಾಸವನ್ನು ಸೂಚಿಸುತ್ತಾ ವ್ಯಾಖ್ಯಾನ ಮಾಡುತ್ತಾರೆ.) ನವಗ್ವರೆಂದು ಪ್ರಸಿದ್ಧರಾದ ಋಷಿಗಳು ಬಾಹ್ಯ ಅಸುರೇಂದ್ರರಿಂದ ಉಪದ್ರವನ್ನು ಹೊಂದಿದವರಾಗಿ ಇಂದ್ರನನ್ನು ಶರಣು ಹೊಂದಿದರೋ, ಅಥವಾ ನವಗ್ವಾವಿಸಜ್ಜನರು ತಮೋರೂಪಗಳಾದ ಅಜ್ಞಾನ ಸಂಶಯ ವಿಪರ್ಯಗಳಿಂದಾಗಲೀ, ತಮೋಗುಣ ಕಾರ್ಯಗಳಾದ ಪಾಪಸಮೂಹಗಳಿಂದಾಗಲೀ, ಚೆನ್ನಾಗಿ ಪೀಡಿತರಾಗಿ ಯಾವಾಗ ವಾಸುದೇವನನ್ನು ಶರಣು ಹೊಂದಿದರೋ, ಆಗ ಆ ಶರಣ ಹೊಂದಿದ್ರಿಂದ ಪುಷ್ಟರಾಗಿ ಆ ಅಸುರ ಶ್ರೇಷ್ಠರಿಂದಾಗಲೀ ಅಜ್ಞಾನಾದಿಗಳಿಂದಾಗಲೀ ಕೂಡಿ ಯುದ್ಧ ಮಾಡಲು ಇಚ್ಛಿಸಿದರು. (೨) ಯುದ್ಧಮಾಡಲು ಇಚ್ಛಿಸಿದ ಆ ಮುನಿಗಳು ಅಥವಾ ಸಜ್ಜನರು ಆ ಅಸುರರ ಅಥವಾ ಅಜ್ಞಾನಾದಿಗಳ ಸಂಹಾರಕ್ಕಾಗಿ ಇಂದ್ರಾಂತರ್ಯಾಮಿಯಾದ ಶ್ರೀ ವಿಷ್ಣುವಿನ ಚತುರಂಗಸೈನ್ಯವನ್ನು ಅಧ್ಯಾತ್ಮದಲ್ಲಿರುವ ಶ್ರೀ ಹರಿಯ ಹರಿಭಕ್ತ್ಯಾವಿಗುಣಗಳನ್ನಾಗಲೀ ಪ್ರೇರೇಪಿಸಿದರು. (೩) ಸಮರ್ಥರಾದ ಯೋಧರಂತೆ ತಮ್ಮ ಶತ್ರುಗಳನ್ನು ಸಂಹರಿಸುವುದೇ ಮುಖ್ಯ ಸ್ವಭಾವವುಳ್ಳವರಾದಾಗ್ಯೂ ಆ ಅಸುರಾದಿಗಳು ಶೀಘ್ರಗಮನವುಳ್ಳ ಶ್ರೀ ವಿಷ್ಣುವಿನ ಪರಿಹಾರದಿಂದ ಅಥವಾ ತಮ್ಮದಾದ ಭಕ್ತ್ಯಾದಿಗುಣಗಳಿಂದಾಗಲೀ (ನಷ್ಟಾಃ =ನಶ ಆದರ್ಶನೆ) ಓಡುತ್ತಾ ಆದರ್ಶನನ್ನು ಹೊಂದಿದರು. (ಹಾಗೆ ಓಡುತ್ತಿರಲು ಇಂದ್ರನ ಪರಿವಾರದವರು ಇಂದ್ರನ ಅಥವಾ ಶ್ರೀ ಹರಿಯ ಪ್ರಸಾದದಿಂದ ಆ ಅಸುರರನ್ನು ಓಡಿಸುತ್ತಾ ಹೋಂದುರ. ಪ್ರಸಿದ್ಧ ॥೬॥

**ಋ॥ (೩೯೦) ತ್ವಮೇತಾನ್ರುದತೋ ಜಕ್ಷತಶ್ಚಾಯೋಧಯೋ ರಜಸ ಇಂದ್ರಪಾರೇ ।**

**ಆವಾದಹೋ ದಿವ ಆ ದಸ್ಯುಮುಚ್ಚಾ ಪ್ರಸುನ್ವತಃ ಸ್ತುವ ತಃ ಶಂಸಮಾವಃ ॥೭॥**

ಅ ॥ ಇಂದ್ರ =ಇಂದ್ರನೇ, ಶ್ರೀ ಹರಿಯೇ, ತ್ವಂ =ನೀನು (ನಿನ್ನಿಂದಲೇ ಪೀಡಿಸಿಕೊಳ್ಳಲ್ಪಟ್ಟ ಪ್ರಯುಕ್ತ ರುದತಃ = (ರುದಿರ್ ಅಶ್ರುವಿವಿಮೋಚನೆ) ಮರುಗುತ್ತಿರುವ ಅಕ್ಷತಶ್ಚ = (ಜಕ್ಷಭಕ್ಷಹಸಯೋಃ) ಮುನಿಗಳನ್ನು ಭಕ್ಷಿಸುವ, ಏತಾನ್ =ನರಭಕ್ಷಕರೆಂದು ಪ್ರಸಿದ್ಧರಾದ ರಾಕ್ಷಸರ ಸಮೂಹಗಳನ್ನು, ರಜಸಃ =ರಜೋಗುಣದ, ಪಾರೇ ಅಂತ್ಯದಲ್ಲಿ (ಜಗತ್ತಿಗೆ ಯಾವಾಗ ಚೆನ್ನಾಗಿ ಸತ್ವವೃದ್ಧಿಯಾಗುತ್ತದೋ, ಆವಾಗಲೇ) ಅಯೋಧಯಃ=ಯುಧ ಸಂಪ್ರಹಾರೇ) ಯುದ್ಧ ಮಾಡಿರುತ್ತಿ (ಅಧ್ಯಾತ್ಮಾರ್ಥವು) ಅಥವಾ ರುದತಃ = ಶೋಚ್ಯಗಳಾದ ಜಕ್ಷತಶ್ಚ = ಗುಣಭಕ್ಷಕಗಳಾದ (ಅಂದರೆ ಆನಂದಾದಿಗುಣಗಳನ್ನಾಚ್ಛಾದಿಸುವ) ಏತಾನ್ = ಈ ಅನುಭವ ಸಿದ್ಧಗಳಾದ ಪುರುಷದೋಷಗಳಾದ ಅಜ್ಞಾನಾದಿಗಳನ್ನು, ರಜಸಃ ಪಾರೇ =ರಜೋಗುಣದ ಅಂತ್ಯದಲ್ಲಿ. (ಆಧ್ಯಾತ್ಮಿಕ ಸತ್ವಗುಣವು ವೃದ್ಧಿಯಾದಾಗ) ಅಯೋಧಯಃ = ಯುದ್ಧಮಾಡಿರುತ್ತಿ) ದಸ್ಯುಂ =ಕಳ್ಳರಾದ ಆ ರಾಕ್ಷಸರನ್ನು ದಿವಃ =ಸ್ವರ್ಗದೇಶೆಯಿಂದ, ಅ=ಚೆನ್ನಾಗಿ, ಅವಅದಹಃ = (ದ ಹಭಸ್ಮೀಕರಣೇ ದಹಕ್ಷೇಪೇ) ತಿರಸ್ಕರಿಸುವವನಾಗಿರುತ್ತಿ. (ಅಂದರೆ ಯುದ್ಧದಲ್ಲಿ ಸಂಹರಿಸಿ ಸ್ವರ್ಗಕ್ಕಿಂತಲೂ ನಿರಾಕರಿಸುವವನಾಗಿರುತ್ತಿ

(ಕೆಳಲೋಕಕ್ಕೆ ಹಾಕಿರುತ್ತಿ. (ಅಥವಾ ಸ್ವರ್ಗಕ್ಕಿಂತ ನಿರಾಕರಿಸಿ ನರಕದಲ್ಲಿ ಹಾಕಿರುತ್ತಿ (ಅಧ್ಯಾತ್ಮಾರ್ಥ) ದಸ್ಯಂ = ಗುಣಗಳಿಗೆ ಅಚ್ಛಾದಕಗಳಾದ ಅಜ್ಞಾನ ಮೊದಲಾದ ದೋಷಾಖ್ಯ ಕಳ್ಳರನ್ನು ದಿವಃ =ಜ್ಞಾನಕೊಟ್ಟು ಆ=ಚೆನ್ನಾಗಿ, ಅವ ಅದಹಃ =ಸುಡುವವನಾಗಿರುತ್ತಿ. (ರಾಕ್ಷಸರನ್ನೂ ಅಜ್ಞಾನಾದಿಗಳನ್ನೂ ವಿನಾಶಗೊಳಿಸುವುದರಿಂದ) ಸುನ್ವತಃ=ಯಜ್ಞವನ್ನು ಮಾಡುತ್ತಿರುವ, ಸ್ತುವತಃ=ಸ್ತೋತ್ರವನ್ನು ಮಾಡುತ್ತಿರುವ ಯಾಜ್ಞಿಕರ, ಉಚ್ಚಾ=ಚೆನ್ನಾಗಿ, ಶಂಸಂ=ಸ್ತುತಿಯನ್ನು ಪ್ರ ಅವಃ = (ಅವರಕ್ಷಣೆ ಚೆನ್ನಾಗಿ ರಕ್ಷಿಸುವವನಾಗಿರುತ್ತಿ. (ಅಂದರೆ ವಿಘ್ನಗಳನ್ನು ನಿವಾರಣೆ ಮಾಡಿದರೆ ಯಜ್ಞವೂ ಸ್ತುತಿಯೂ ರಕ್ಷಿತವಾಗುತ್ತದೆ.) ||೭||

**ಭಾ || (೧) ರಕ್ಷೋಗಣಾನ್ ಭಕ್ಷಯತೋ ಮುನೀಂಶ್ಚ ಸಂಪೀಡಿತಾನ್ರುದತಶ್ಚ ತ್ವಯ್ಯೇವ । ಅಯೋಧಯೋ ರಜಸೋಽಂತೇ ಸುಸತ್ವವೃದ್ಧಿರ್ಯದಾ ಜಗತಃ ಸ್ಯಾತ್ತದೈವ (೨) ಪುಂದೋಷಾನ್ವಾ ಗುಣಭಕ್ಷಾನ್ಸ್ವಸತ್ವವೃದ್ಧೌ (೩) ದಿವೋ ಜ್ಞಾನತೋಽವಾಽದಹಶ್ಚ । ಅಜ್ಞಾನದ ಸ್ಯುಂ ಸ್ತುವತಃ ಸಂಸ್ತುತಿಂ ಚ ಪ್ರಾವೋ ರಕ್ಷೋ ||೭||**

ಅ || (೧) ಎಲೋ ಶ್ರೀ ಹರಿಯೇ) ನಿನ್ನಿಂದಲೇ ಚೆನ್ನಾಗಿ ಪೀಡಿಸಿಕೊಳ್ಳಲ್ಪಟ್ಟ (ಹೇತು ಗರ್ಭವಿಶೇಷಣ) ಪೀಡಿಸಿಕೊಳ್ಳಲ್ಪಟ್ಟಿರುವುದರಿಂದ) ಮರುಗುತ್ತಿರುವ ಮುನಿಗಳನ್ನು ಭಕ್ಷಿಸುತ್ತಿರುವ, ನರ ಭಕ್ಷಕರೆಂದು ಪ್ರಸಿದ್ಧರಾದ ರಾಕ್ಷಸರ ಸಮುದಾಯಗಳನ್ನು ರಜೋಗುಣದ ಅಂತ್ಯದಲ್ಲಿ ಜಗತ್ತಿಗೆ ಚೆನ್ನಾಗಿ ಸತ್ವವೃದ್ಧಿಯು ಯಾವಾಗ ಆಗುವುದೋ, ಆವಾಗಲೇ ಯುದ್ಧ ಮಾಡಿರುತ್ತಿ. (ಜಗತಃ ಎಂದು ಹೇಳಿದುದರಿಂದ ಬಾಹ್ಯಸತ್ವವೆಂದು ಸೂಚಿತವಾಯ್ತು. ಆಧ್ಯಾತ್ಮಿಕಭಿನ್ನವಾಗಿ ಅಧಿಭೌತಿಕ ಅಧಿದೈವಿಕರೂಪವಾದ ಜಗತ್ತಿಗೆ ಯಾವುದು ಸತ್ವವಿದೆಯೋ ಅದು ಬಾಹ್ಯ ಸತ್ವವು) ದೇವತೆಗಳೇ ಮೊದಲಾದ ದಿವ್ಯ ಜಗತ್ತಿನಲ್ಲಿಯೂ ಭೌತಿಕಜಗತ್ತಿನಲ್ಲಿಯೂ ತಮೋಗುಣವು ವೃದ್ಧಿಯಾದಾಗ ದೈತ್ಯರಿಂದ ಜಗತ್ತಿಗೆ ಪೀಡೆಯುಂಟಾಗುತ್ತದೆ. ಸತ್ವಗುಣವು ವೃದ್ಧಿಯಾದಾಗ ಇಂದ್ರನು ಆ ರಾಕ್ಷಸರೊಡನೆ ಯುದ್ಧ ಮಾಡಿ ಅವರನ್ನು ಸಂಹರಿಸಿ ಯಜ್ಞವನ್ನೂ ರಕ್ಷಿಸುತ್ತಾನೆ.) (-) (ಅಧ್ಯಾತ್ಮಾರ್ಥವು) ಅಥವಾ ಆನಂದಾದಿಗುಣಗಳಿಗೆ ಅಚ್ಛಾದಕಗಳಾದ ಅಜ್ಞಾನ ಮೊದಲಾದ ಪುರುಷದೋಷಗಳನ್ನು ಆಧ್ಯಾತ್ಮಿಕ ಸತ್ವಗುಣ ವೃದ್ಧಿಯಾಗುತ್ತಿರಲು ಯುದ್ಧ ಮಾಡಿರುತ್ತಿ. (೩) (ಬಾಹ್ಯಾರ್ಥ) ದಸ್ಯುಗಳಾದ ರಾಕ್ಷಸರನ್ನೂ ಸ್ವರ್ಗದೆಶೆಯಿಂದ ಚೆನ್ನಾಗಿ ಕೆಳಗೆ ಹಾಕುವವನಾಗಿರುತ್ತಿ. (ಅಂದರೆ ಯುದ್ಧದಲ್ಲಿ ಸಂಹರಿಸಿ ಸ್ವರ್ಗಕ್ಕಿಂತಲೂ ನಿರಾಕರಿಸುವವನಾಗಿರುತ್ತಿ.) ಅಥವಾ ಸ್ವರ್ಗಕ್ಕಿಂತ ನಿರಾಕರಿಸಿ ನರಕದಲ್ಲಿ ಹಾಕಿರುತ್ತಿ. (ಅಧ್ಯಾತ್ಮಾರ್ಥ) ಅಜ್ಞ

ಅಜ್ಞಾನಾದಿದೋಷಾಖ್ಯದಸ್ಯುಗಳನ್ನು ಜ್ಞಾನವನ್ನು ಕೊಟ್ಟು ಚೆನ್ನಾಗಿ ಸುಡುವವನಾಗಿರುತ್ತಿ. (ರಾಕ್ಷಸರನ್ನೂ ಅಜ್ಞಾನಾದಿಗಳನ್ನೂ ವಿನಾಶಗೊಳಿಸುದುದರಿಂದ ಸ್ತುತಿಸುವವರ ಚೆನ್ನಾಗಿ ಸ್ತೋತ್ರವನ್ನು (ಪ್ರಾಅವಃ) ಚೆನ್ನಾಗಿ ರಕ್ಷಿಸಿರುತ್ತಿ. (ರಾಕ್ಷಸರ ಅಜ್ಞಾನಾದಿಗಳನ್ನು ನಾಶಗೊಳಿಸಿದರೆ ಯಾಗ ಸ್ತೋತ್ರಗಳ ರಕ್ಷಣೆಯು ಹೇಗೆ ಆಗುವುದೆಂದರೆ ವಿಘ್ನಗಳನ್ನು ನಿವಾರಣೆ ಮಾಡಿದರೆ ಅವು ರಕ್ಷಿತವಾಗುವುದು) ||೭||

**ಋ || ೩೯೧) ಚಕ್ರಾಣಾಸಃ ಪರೀಣಹಂ ಪೃಥಿವ್ಯಾ ಹಿರಣ್ಯೇನ ಮಣಿನಾ ಶುಂಭಮಾನಾಃ ।**

**ನ ಹಿನ್ವಾ ಸಸ್ತಿತಿರುಸ್ತ ಇಂದ್ರಂ ಪರಿಸ್ಪಶೋ ಅದಧಾತ್ಸೂರ್ಯೇಣ ||೮||**

ಅ ॥ (ಯಾವ ದೈತ್ಯಾದಿಗಳು) ಪೃಥಿವ್ಯಾಃ=ಪೃಥಿವಿಯಲ್ಲಿರತಕ್ಕ ಜನರ, ಪರೀಣಹಂ = (ಣಹ ಬಂಧನೇ ಸುತ್ತಮುತ್ತಲೂ ಬಂಧನವನ್ನು, ಚಕ್ರಾಣಾಸಃ =(ಡುಕೃಞ್ಕರಣೇ) ಚೆನ್ನಾಗಿ ಮಾಡುವವರಾಗಿ (ನಿರಪರಾಧ)ರಾದ ಪ್ರಾಣಿಗಳನ್ನೂ, ಕಾರಾಗ್ರಹದಲ್ಲಿ (ಜೈಲಿನಲ್ಲಿ) ಹಾಕಿ ಅವರಿಂದ ಬಲಾತ್ಕಾರದಿಂದ ಅಪಹೃತರಾದ) ಹಿರಣ್ಯೇನ =ಸುವರ್ಣದಿಂದಲೂ ಮಣಿನಾ=ಮಣಿಗಳಿಂದಲೂ, ಶುಂಭಮಾನಾಃ =ಶುಭ ಶುಂಭಶೋಭಾರ್ಥ್ಯೇ) ಶೋಭಿಸುವವರಾಗಿ, (ಇರುತ್ತಾರೆ) (ಅಧ್ಯಾತ್ಮಾರ್ಥ) (ಯಾವ ದೃಢ) (ಅಪ್ರತಿಬಲಗಳಾದ) (ದೋಷಗಳುಳ್ಳವರು) ಹಿರಣ್ಯದಿಂದಲೂ ಮಣಿಗಳಿಂದಲೂ ಶೋಭಿಸುವವರಾಗಿ ಆವಾವ ಧನಗಳಿಂದ ಪ್ರಲೋಭಿಸಿ ತಮಗೆ ಆಶ್ರಯಭೂತರಾದವರನ್ನು) ವಂಚಿಸುವವರಾಗಿ ಪೃಥಿವಿಯಲ್ಲಿರತಕ್ಕ ಜನರಿಗೆ ಸಂಸಾರದಲ್ಲಿ ಪರಿಶಃ ಬಂಧನವನ್ನೂ ಮಾಡುತ್ತಾರೆ. ಸಾಂಸಾರಿಕ ಸುಖಾದಿಗಳಲ್ಲಿಯೇ ಅತ್ಯಾಸಕ್ತರಾಗಿರುವಂತೆ ಮಾಡುತ್ತಾರೆ. ಹೀಗೆ (ಜನರನ್ನು ಸಂಸಾರದಲ್ಲಿ ಬಂಧಿಸುತ್ತಾರೆ) ಹಾಗಾದರೆ ಅವರಿಗೆ ಈಶ್ವರನ ಭಯವು ಇದ್ದರೆ ಬಂಧನವನ್ನು ಹೇಗೆ ಮಾಡಿದ್ದೆಂದರೆ) (ಅಂತಹವರು ತಮಗೆ ಯಾರಿಂದಲೂ ಭಯವು ಇಲ್ಲದೇ ಇಲ್ಲವೆಂದು ತಿಳಿಯುವವರಾಗಿ) ಹಿನ್ವಾನಾಸಃ=ಹೀಗತೌ ವೃದ್ಧೌಚ) ಪರಸ್ಪರವಾಗಿ ಗಮನವನ್ನು ಮಾಡಿಸುವವರಾಗಿ, ಅಭಿವೃದ್ಧಿಗೊಳಿಸುವವರಾಗಿ ಪರಸ್ಪರ ಸಹಾಯವುಳ್ಳವರಾಗ್ಯೂ, ಪರಸ್ಪರ ಪ್ರೇರೇಪಿಸುವವರಾದಾಗ್ಯೂ, ಇಂದ್ರಂ ವಾಸುದೇವನನ್ನೂ ಕಥಂಚಿತ್ (ಯಾವ ಪ್ರಕಾರದಿಂದಲೂ) ನ ತಿತಿರುಃ = ದಾಟಲೇ ಇಲ್ಲ ತ್ಲ್‌ಪ್ಲವನತರಣ ಯೋಃ) ಈಶ್ವರನನ್ನು ಮೀರಿ ಇರಲು ಅಶಕ್ತರೇ ಆಗರುತ್ತಾರೆ) (ತೃತೀಯ ಪಾದದ ಅಭಿಪ್ರಾಯವನ್ನೂ ಹೇಳುತ್ತಾರೆ.) (ಯದ್ಯಪಿ ಅವರು ಇಲ್ಲಿ ನಿಗ್ರಹಿಸಲು ಅಶಕ್ಯರೇ ಆಗಿರುತ್ತಾರೆ. ಆದಾಗ್ಯೂ ಅವರು ಪರಲೋಕದಲ್ಲಿ ಶ್ರೀ ಹರಿಯಿಂದ ನಿಶ್ಚಯವಾಗಿಯೂ ದಂಡಿಸಲ್ಪಡುತ್ತಾರೆಯೇ ಸರಿ.) (ಹಾಗಾದರೆ ಅವರ ವೃತ್ತಾಂತವನ್ನೂ ಪುಣ್ಯಾಪಾಪಾದಿ ಕರ್ಮಗಳನ್ನೂ) ತಿಳಿದವರೇನೇ ಶಿಕ್ಷಿಸಬಹುದು ಅದೇವೇ ಶ್ರೀಹರಿಗೆ ಹೇಗೆ ತಿಳಿಯುವುದೂ ಎಂದರೆ ಶ್ರೀ ಹರಿಯು ಸರ್ವಜ್ಞನಾದುದರಿಂದ ತಿಳಿಯುತ್ತಾನೆ ಎಂದು ಪರಿಹಾರವಿದ್ದರೂ ಸಮಾಧಾನಾಂತರವನ್ನು ಹೇಳುತ್ತಾರೆ ಇಂದ್ರಃ = ಶ್ರೀ ವಾಸುದೇವನು (ಬಾಹ್ಯಾರ್ಥದಲ್ಲಿ ದೈತ್ಯರ (ಅಧ್ಯಾತ್ಯಾರ್ಥದಲ್ಲಿ) (ಅಜ್ಞಾನಾದಿಗಳ ವೃತ್ತಾಂತವನ್ನು ತಿಳಿಯುವುದಕ್ಕಾಗಿ ಪುಣ್ಯಪಾಪರೂಪ ಕರ್ಮಗಳನ್ನು ನೋಡುವುದಕ್ಕಾಗಿ) ಸೂರ್ಯೇಣ =ಸೂರ್ಯನಿಂದ ಕೂಡಿ. ಸೂರ್ಯನಿಂದ (ಸಹಿತರಾದ) ಸ್ಪಶಃ = (ಸ್ಪಶಬಾಧನ ಸ್ಪರ್ಶನಯೋಃ=) ಜನರಿಂದ ತಿಳಿಯಲ್ಪಡದಿರುವ ಚಾರರನ್ನು (ಅಂದರೆ ಯಾರಿಗೂ ತಿಳಿಯದಂತೆ ಸಂಚರಿಸುವ ದೇವತೆಗಳ ಸಮೂಹಗಳನ್ನು ಪರಿ ಅದಧ್ಯಾತ=ಪರಿತಃ ಸರ್ವತ್ರಸ್ಥಾಪಿಸಿರುವನು. ॥೮॥

ಭಾ ॥ (೧) ಬಂಧನಂ ಯೇ ಜನಾನಾಂ । ಕುರ್ವಂತಿ ಹೇಮ್ನಾ ಮಣಿಭಿಶ್ಯೋಭಮಾನಾ ದೈತ್ಯಾದಯೋ (೨) ದೃಢದೋಷಾ ಧರ್ನೈರ್ವಾ॥ (೩) ತೇ ಪ್ರೇರಯಂತೋऽಪಿ ಪರಸ್ಪರೇಣ ನೈವಾತರನ್ವಾಸುದೇವಂ ಕಥಂಚಿತ್ ॥ (೪) ಸಹೈವ ಸೂರ್ಯೇಣ ಚ ದೇವಸಂಘಾಂಶ್ಚರಾನಜ್ಞಾತಾ ನದಧಾದ್ವಾಸುದೇವಃ । ದೈತ್ಯಾನಾಂ ವಾ ತಮಸಾಂ ವೃತ್ತದೃಷ್ಟ್ಯ ॥೮॥

ಅ ॥ (೧) ಯಾವ ದೈತ್ಯರೇ ಮೊದಲಾದವರು ಪೃಥಿವಿಯಲ್ಲಿರತಕ್ಕ ಜನರ ಸುತ್ತಲೂ ಬಂಧನವನ್ನು ಚೆನ್ನಾಗಿ ಮಾಡುತ್ತಾರೋ (ನಿರಪರಾಧಿಗಳಾದ ಜನರನ್ನು ಜೈಲಿನಲ್ಲಿಟ್ಟು ಅವರಿಂದ ಅಪಹೃತವಾದ) ಹಿರಣ್ಯದಿಂದಲೂ ಮಣಿಗಳಿಂದಲೂ, ಶೋಭಿಸುವವರಾಗಿರುತ್ತಾರೆ. (೨) (ಆಧ್ಯಾತ್ಮಾರ್ಥ) ದೃಢ (ಪ್ರಬಲ)ವಾದ ದೋಷವುಳ್ಳವರು ಹಿರಣ್ಯ ಮೊದಲಾದ ಅವಾವಧನಗಳಿಂದ ತಮಗೆ ಆಶ್ರಯ ಭೂತರಾದ ಜನರನ್ನೂ ಪ್ರಲೋಭಿಸುವವರಾಗಿ ಜನರನ್ನು ಸಂಸಾರದಲ್ಲಿಯೇ

ಬಂಧಿಸುತ್ತಾರೆ. (೩) ಅಂತಹವರು ತಮಗೆ ಯಾರಿಂದಲೂ ಭಯವಿಲ್ಲವೆಂದು ತಿಳಿಯುವವರಾಗಿ ಪರಸ್ಪರ ಪ್ರೇರೇಪಿಸುವವರಾದಾಗ್ಯೂ ಪರಸ್ಪರ ಸಾಹಯ್ಯ ಉಳ್ಳವರಾಗಿ ಶ್ರೀ ವಾಸುದೇವನನ್ನೂ ಯಾವ ರೀತಿಯಿಂದಲೂ ದಾಟಲೇ ಇಲ್ಲ (ಅವನನ್ನು ತಿರಸ್ಕರಿಸಿಕೊಂಡಿರಲು ಯಾವ ರೀತಿಯಿಂದಲೂ ಸಾಧ್ಯವೇ ಇಲ್ಲ) ೪।। ಶ್ರೀ ವಾಸುದೇವನು (ಬಾಹ್ಯಾರ್ಥದಲ್ಲಿ) ದೈತ್ಯರ (ಆಧ್ಯಾತ್ಮಾರ್ಥದಲ್ಲಿ) ಅಜ್ಞಾನಾದಿಗಳ ವೃತ್ತಾಂತವನ್ನು ತಿಳಿಯುವುದಕ್ಕಾಗಿ (ಪುಣ್ಯಾಪಾಪ ರೂಪ ಕರ್ಮಗಳನ್ನು ನೋಡುವುದಕ್ಕಾಗಿ) ಸೂರ್ಯನಿಂದ ಕೂಡಿರುವ, ಯಾರಿಂದಲೂ ತಿಳಿಯಲ್ಪಡದಿರುವ ಪರಿವಾರರಾದ ದೇವತೆಗಳ ಸಮೂಹವನ್ನೂ ಸ್ಥಾಪಿಸಿರುವರು.

ವಿ ।। (1) ಅಧಿತ್ಯಚಂದ್ರಾವನಿಲೋಽಲಶ್ಚ ದ್ಯೌರ್ಭೂಮಿರಾಪೋಹೃದಯಂ ಮನಶ್ಚ । ಅ ಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ ।। (2) ಸೂರ್ಯೋಽಗ್ನಿಃ ಖಂಮರುದ್ಭಾವಃ ಸೋಮಃ ಸಂಧ್ಯಾಹನೀ ದಿಶಃ । ಕಾಲಃ ಸ್ವಯಂ ಧರ್ಮ ಇತಿ ಹ್ಯೇತೇ ಧರ್ಮಸ್ಯ ಸಾಕ್ಷಿಣಃ ।। ಇಲ್ಲಿ ಸೂರ್ಯ ಚಂದ್ರ ಧರ್ಮ (ಯಮ)ರು ಸ್ವತಃ ದೇವತೆಗಳು, ಅನಿಲ ಮೊದಲಾದವುಗಳಲ್ಲಿ ಅ ವಾಪ ಅಗ್ನ್ಯಾದ್ಯಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳಬೇಕು. ಹೃದಯಂ =ಬುದ್ಧಿಯು, ಮನಃ ಅಹಂಕಾರಾದಿ ವೃತ್ತಿಗಳು ನಾಲ್ಕು. ।।೮।।

ಋ ।। (೬೨) ಪರಿ ಯದಿಂದ್ರ ರೋದಸೀ ಉಭೇ ಅಬುಭೋಜೀರ್ಮ ಹಿನಾ ವಿಶ್ವತಃ ಸೀಂ ।
ಅಮನ್ಯಮಾನಾ ಅಭಿಮನ್ಯಮಾನ್ನೈರ್ನಿ ಬ್ರ್ಹಮ್ಭಿರಧಮೋ ದಸ್ಯುಮಿಂದ್ರ ।।೯।।

ಅ ।। ಇಂದ್ರ =ಇಂದ್ರನೇ, (ನೀನು) ಯತ್ = ಯಾವ ಕಾರಣದಿಂದ, ಮಹಿನಾ = ತನ್ನ ಮಹಿಮೆಯಿಂದ, ವಿಶ್ವತಃ = ಸರ್ವಕಾಲದಲ್ಲಿಯೂ, ಸೀಂ = (ಶ್ರೇಷ್ಠಾವಿಕಲ್ಪಯೋಃ ಸಂ ಸ್ಯಾತ್ಪಾಧ್ವರ್ಥ ಉಪಸರ್ಜನೇ, ಎಂಬ ಕೋಶದಿಂದ ಸಂ ಶಬ್ದವು ಸಾಧ್ವರ್ಥಕವು.) ಚೆನ್ನಾಗಿಯೇ (ಮುಖ್ಯವಾಗಿಯೇ) ರೋದಸೀ = ದ್ಯಾವಾಪೃಥಿವಿಗಳನ್ನು ಉಭೇ = ಮಿಲಿತಗಳಾದವುಗಳನ್ನೇ (ಏಕ ಕಾಲದಲ್ಲಿಯೇ ಪರಿ ಅಬುಬೋಜಃ =ಸಂಪೂರ್ಣ ಭೋಗಿಸುವವನಾಗಿರುತ್ತಿಯೋ (ಭುಜಪಾಲನಾಭ್ಯವಹಾರಯೋಃ ಅಥವಾ ಭುಜೋಽನವನೇ) ಇಂದ್ರ =ಪರಮೈಶ್ವರ್ಯ ಸಂಪನ್ನನೇ, (ಆ ಕಾರಣ ದೆಶೆಯಿಂದ) (ನೀನು) ಅಮನ್ಯಮಾನಾನ್ = (ಮನ ಜ್ಞಾನೇ) ನಿಮ್ಮನ್ನು ತಿಳಿಯದಿರುವ ದಸ್ಯೂನ್ =ದಸ್ಯುಗಳಾದ ಅಭಕ್ತರನ್ನು ಅಭಿಮನ್ಯು ಮಾನ್ಯೆಃ ನಿನ್ನನ್ನು ತಿಳಿದಿರುವ, ಬ್ರಹ್ಮಭಿಃ = (ಬ್ರಹ್ಮಾ ವಿರಿಂಚ ದ್ವಿಜಯೋಃ ಇತಿ ವಿಶ್ವಃ । ಬ್ರಾಹ್ಮಣರಿಂದ, (ಭಕ್ತರ, ಸಮೂಹಗಳಿಂದ, ನಿಃ ಅಧಮಃ = ನಿರಾಕರಿಸುವವನಾಗಿರುತ್ತಿ. (ಯಾವ ಕಾರಣದಿಂದ ನೀನು ಮಹಾ ಸಮರ್ಥನಾಗಿರುತ್ತಿಯೋ, ಆದ ಕಾರಣ ನಿನ್ನ ಭಕ್ತರು ಕೂಡಾ ನಿನ್ನನ್ನು ಆಶ್ರಯಿಸಿಕೊಂಡು ವಿರೋಧಿಗಳನ್ನು ನಿರಾಕರಿಸುವ ವಿಷಯದಲ್ಲಿ ಸಮರ್ಥರೇ ಆಗಿರುತ್ತಾರೆ. ।।೬।।

ಭಾ ।। ಪರ್ಯಭುಂಕ್ಥಾಃಸಹ ಯದ್ರೋದಸೀ ಬ । ಸ್ವಮಹಿಮ್ನಾ ವಿಶ್ವತಃ ಸಮ್ಯಗೇವ ತ್ವದಬಕ್ತಾನ್ನಿರಧಮೋ ಭಕ್ತಸಂಘೈಃ ।।೯।।

ಅ ।। ಯಾವ ಕಾರಣದಿಂದ ತನ್ನ ಮಹಿಮೆಯಿಂದಲೇ ಸರ್ವಕಾಲದಲ್ಲಿಯೂ ಚೆನ್ನಾಗಿಯೇ, ಸ್ವರ್ಗಭೂಮಿಗಳನ್ನು

ಏಕಕಾಲದಲ್ಲಿಯೇ, ಹೆಚ್ಚಾಗಿ ಭೋಗಿಸುವವನಾಗಿರುತ್ತಿಯೋ, ಆದ ಕಾರಣ ನಿನ್ನ ಅಭಕ್ತರನ್ನು ನಿನ್ನ ಭಕ್ತರ ಸಮೂಹಗಳಿಂದ ನಿರಾಕರಿಸುವವನಾಗಿರುತ್ತಿ.) ಇಲ್ಲಿ ಒಂದು ಇಂದ್ರ ಶಬ್ದವು ಸಾಂಕೇತಿಕವು. ಇನ್ನೊಂದು ಶಬ್ದವು ಪರಮೈಶ್ವರ್ಯ ವಾಚಕವು. ಅಥವಾ ಇಂದ್ರ ಇಂದ್ರ ಎಂದು ಅದರಾತ್ ದ್ವಿರ್ವಚನವು) ||೯||

ಋ || (೨೯೩) ವಯೇ ದಿವಃ ಪೃಥಿವ್ಯಾ ಅಂತಮಾಪುರ್ನ ಮಾಯಾಭಿರ್ಧನದಾಂ ಪರ್ಯಭೂವನ್ ।

ಯುಜಂ ವಜ್ರಂ ವೃಷಭಶ್ಚಕ್ರ ಇಂದ್ರೋ ನಿರ್ಜ್ಯೋತಿಷಾ ತಮಸೋ ಗಾ ಅದುಕ್ಷತ್ ||೧೦||೨||

ಅ|| ಯೇ=ಯಾವ ದಸ್ಯುಗಳಾದ ದೈತ್ಯರು (ತಮ್ಮ ಕಪಟಗಳಿಂದಲೇ ಸ್ವರ್ಗ ಭೂಸಂಬಂಧಿಗಳಾದ ಸಮಸ್ತ ಭೋಗಗಳನ್ನು ಇಚ್ಛಿಸುತ್ತಾ ಇಂದ್ರನನ್ನು ಗೆಲ್ಲಲಿಚ್ಛಿಸುತ್ತಾರೋ, ಅಂತಹ ದೈತ್ಯರು) ದಿವಾಃ =ಸ್ವರ್ಗದ ಪೃಥಿವ್ಯಾಃ = ಮತ್ತು ಭೂಲೋಕದ, ಅಂತಂ =ಏಕದೇಶವನ್ನೂ ಕೂಡ, ನ ಅಪುಃ =ಹೊಂದಲಿಲ್ಲ. ಮಾಯಾಭಿಃ = ಛದ್ಮ (ಕಪಟ)ಗಳಿಂದಲೂ ಕೂಡ ಧನದಾ=ಧನವನ್ನು ಕೊಡತಕ್ಕ ಇಂದ್ರನನ್ನು ನಪರ್ಯಭೂವನ್ = ಗೆಲ್ಲಲಿಲ್ಲ (ಹಾಗಾದರೆ ಇದತರರ ಸಹಾಯವುಳ್ಳವನಾಗಿ ಬಹುಜನರಿಂದಲೂ ಪರಾಜಿತನಾಗಲಿಲ್ಲವೋ ಏನು ? ಅಲ್ಲವೆನ್ನುತ್ತಾರೆ) ವೃಷಭಃ =ಭಕ್ತರಿಗೆ ಅಭೀಷ್ಟದಾಯಕನು, ಶ್ರೇಷ್ಠನೂ ಆದ ಇಂದ್ರನು (ದಸ್ಯುಗಳಾದ ದೈತ್ಯರನ್ನು ಸಂಹರಿಸುವುದಕ್ಕಾಗಿ) ವಿಜ್ರಂ =ತನ್ನ ವಜ್ರಾಯುಧವನ್ನೇ (ವಿಷ್ಣು ಪಕ್ಷದಲ್ಲಿ) ವಜ್ರಂ ವಿಷ್ಣುಜ್ಞಾನುವನ್ನೇ, ಯುಜಂ=ಯುಕ್ತವನ್ನಾಗಿ, ಚಕ್ರೇ ಮಾಡಿದನು ಮತ್ತು ಇಂದ್ರಃ =ಶ್ರೀ ಹರಿಯು ಜ್ಯೋತಿಷಃ=ತನ್ನ ಪ್ರಭಾವದಿಂದ ಗಾಃ=ಗೋವುಗಳನ್ನು ತಮಸಃ =ಪರ್ವತದ ಗುಹೆಯ ಅಂಧಕಾರ ದೆಶೆಯಿಂದ ನಿಃ ಅದುಕ್ಷತ್ = (ಮಹಪ್ರಪೂರಣೇ) ಹೊರತುಪಡಿಸಿ ಪೂರ್ಣೀಕರಿಸಿದನು. (ಶ್ರೀ ವಿಷ್ಣು ಪಕ್ಷದಲ್ಲಿ ನಿಃ ನಿಶ್ಚಯ ರೂಪವಾದ ಜ್ಯೋತಿಷಾ=ಯಥಾರ್ಥ ಜ್ಞಾನದಿಂದ, (ಅಂದರೆ -ಸ್ವವಿಷಯಕವಾದ ನಿಶ್ಚಯಾತ್ಮಕವಾದ ಜ್ಞಾನವನ್ನು ಹುಟ್ಟಿಸಿ) ಗಾಃ =ಜ್ಞಾನದಿಂದ, (ಅಂದರೆ =ಸ್ವವಿಷಯಕವಾದ ನಿಶ್ಚಯಾತ್ಮಕವಾದ ಜ್ಞಾನವನ್ನು ಹುಟ್ಟಿಸಿ) ಗಾಃ =ಜ್ಞಾನಗಳನ್ನು (ತಮಸಃ ಎಂಬ ವಚನ ಸಾಮರ್ಥ್ಯದಿಂದ ಭಕ್ತ ಹೃದಯದಲ್ಲಿರುವ ತಮಸ್ಸಿನಿಂದ (ಅಜ್ಞಾನದಿಂದ ಗುಪ್ತಗಳಾದವುಗಳನ್ನು) ಅದುಕ್ಷತ್ =ಪೂರ್ಣೀಕರಿಸಿದನು. (ಅಂದರೆ ಆವರಣವನ್ನು ನಿರಾಕರಿಸಿ ವ್ಯಕ್ತಗಳನ್ನಾಗಿ ಮಾಡಿದನು.)

ಭಾ (೧) ಯೇ ದಸ್ಯವೋ ದ್ಯುಪೃಥಿವ್ಯೋರಶೇಷ ಬೋಗೇಚ್ಛವೋ ಧನದಂ ಚೇಶ್ವರಂ ತಂ || ಜೇಗೀಷವಃ ಸ್ವೀಯಮಾಯಾಭಿರೇವ ನೈವೋದಾಪುರ್ದ್ವಯಮೇತಕ್ಕದಾಚಿತ್ (೨) ಯುಕ್ತಂ ಜ್ಞಾನಂ ವಜ್ರಮೇವಾಯುಧಂ ವಾ ದಸ್ಯೂನ್‌ಹಂತುಂ ಕೃತವಾನ್ ದೇವ ದೇವಃ। (೩) ನಿಜೇನೈವ ಜ್ಯೋತಿಷಾ ಭಕ್ತಹೃದ್ಗತಮೋಗೂಢಾನ್ಯದುಹನ್ನಿಶ್ಚಯೇನ । ಜ್ಞಾನಾನಿ ವಿಷ್ಣುರ್ಯದಜ್ಞಾನಮುಗ್ರಂ ||೧೦|| ||೧೦||೨||

ಅ || (೧) (ಯೇ ಎನ್ನುವುದಕ್ಕಿಂತ ಮೇಲೆ ಅಧ್ಯಾಹ್ಯಾರ ಮಾಡಲು ಯೋಗ್ಯವಾದ ಪದಗಳನ್ನು ತೋರಿಸಿ ಶ್ರುತಿ ಸಿದ್ಧವಾದ ತೇ ಎನ್ನುವುದರಿಂದ ಅನ್ವಿತವಾಗಿ ವ್ಯಾಖ್ಯಾನ ಮಾಡುತ್ತಾರೆ) ಯಾವದಸ್ಯುಗಳಾದ ದೈತ್ಯರು ತಮ್ಮ ಕಟಪಗಳಿಂದಲೇ ಸ್ವರ್ಭೂಸಂಭಂಧಿಗಳಾದ ಸಮಸ್ತಭೋಗಗಳನ್ನು ಇಚ್ಛಿಸುವವರಾಗಿ ಧನವನ್ನು ಕೊಡುವ ಸರ್ವೇಶ್ವರರಾದ ಶ್ರೀ ಹರಿಯನ್ನು ಗೆಲ್ಲಲಿಚ್ಛಿಸುತ್ತಾರೋ ಅಂತಹವರು ಯಾವಾಗಲೂ ಈ ಎರಡನ್ನು (ಅಂದರೆ ಸ್ವರ್ಗಭೂಮಿಗಳ ಏಕದೇಶವನ್ನು)

ಹೊಂದಲೇ ಇಲ್ಲ. (೨) ದೇವತೆಗಳಿಗೆ ಸ್ವಾಮಿಯಾದ ಶ್ರೀ ಹರಿಯು ದಸ್ಯುಗಳಾದ ದೈತ್ಯರನ್ನು ಕೊಲ್ಲುವುದಕ್ಕಾಗಿ ವಿಷ್ಣುಜ್ಞಾನವನ್ನೇ ವಜ್ರಾಯುಧವನ್ನೇ ಯುಕ್ತವನ್ನಾಗಿ ಮಾಡಿದನು. (೩) ಮತ್ತು ಶ್ರೀ ಹರಿಯು ತನ್ನ ಪ್ರಭಾವದಿಂದಲೇ ಅಂದರೆ ಸ್ವವಿಷಯ ಕವಾದ ನಿಶ್ಚಯಾತ್ಮಕವಾದ ಜ್ಞಾನವನ್ನುಂಟುಮಾಡಿ ಜ್ಞಾನಗಳು ಭಕ್ತರ ಹೃದಯದಲ್ಲಿರತಕ್ಕ ತಮಸ್ಸಿನಿಂದ ಆಚ್ಛಾದಿತಗಳಾಗಿವೆ. ಆದ ಕಾರಣ ಆವರಣವನ್ನು ನಿರಾಕರಿಸಿ ವ್ಯಕ್ತಗಳನ್ನಾಗಿ ಮಾಡಿದನು.

(ಹಾಗಾದರೆ ತಮಸ್ಸೆಂದರೆ ಜ್ಞಾನಭಾವವು. ಅದು ಜ್ಞಾನಗಳನ್ನು ಹೇಗೆ ಅಭಾದಿಸಿತು. ಜ್ಞಾನಾಭಾವವು ಜ್ಞಾನಕ್ಕೆ ಆಚ್ಛಾದಕವಾಗುವುದಾದರೆ ಜ್ಞಾನನಿವರ್ತ್ಯತ್ವವು ಬಾರದೆ ಹೋಗುವುದು. ಆಚ್ಛಾದ್ಯವು ಆಚ್ಛಾದಕವನ್ನು ನಿವರ್ತಿಸುತ್ತದೆ ಎನ್ನುವುದು ದೃಷ್ಟವಾಗಲಿಲ್ಲ. ಆದ ಕಾರಣ ಜ್ಞಾನದಿಂ ಹೇಗೆ ನಿವೃತ್ತವಾಗುವುದು ಎಂದರೆ) ಯಾವುದು ಕ್ರೂರವಾದ ಮೂಲ ಅವಿದ್ಯೆಯೆಂದು ಹೆಸರುಳ್ಳ ಭಾವರೂಪವಾದ ಅಜ್ಞಾನವಿದೆಯೋ, (ಅದೇವೇ ಇಲ್ಲಿ ತಮಶ್ಶಬ್ದದಿಂದ ವಿವಕ್ಷಿತವು. ಅದು ಅಜೇ ದ್ವೇಪ್ರಕೃತಿ ದುಷ್ಟೇ ನೃಷು ಪ್ರಾತಿ ಸ್ವಿಕಂ ಸ್ಥಿತೇ। ಸ್ವಗುಣಾಚ್ಛಾದಿಕಾ ಶ್ವೇಕಾ ಇತ್ಯಾದಿ ಪ್ರಮಾಣಗಳಿಂದ ಸ್ವರೂಪ ಜ್ಞಾನವನ್ನು ಆವರಿಸುತ್ತದೆ. ಭಿದ್ಯತೇ ಹೃದಯಗ್ರಂಥಿಃ ಇತ್ಯಾದಿ ಪ್ರಮಾಣಗಳಿಂದ ಪ್ರಮಾಣಜ್ಞಾನದಿಂದ ನಿವರ್ತ್ಯವೂ ಆಗಿದೆ. ||೧೦||೨

ಋ || (೩೯೪) ಅನು ಸ್ವಧಾ ಮಕ್ಷರನ್ನಾಪೋ ಅಸ್ಯಾವರ್ಧತ ಮಧ್ಯ ಆನಾ ವ್ಯಾನಾಂ ।

ಸಧ್ರೀಚೀನೇನ ಮನಸಾ ತಮಿಂದ್ರ ಓಜಿಷ್ಠೇನ ಹನ್ಮನಾಃ ಹನ್ನಭಿದ್ಯೂನ್ || ||೧೧||

ಅ || ಯಸ್ಯ ಅಸ್ಯ =ಯಾವ ಈ ಇಂದ್ರನ, ಅಪಃ =ಕರ್ಮಗಳು, ಸ್ವಧಾಂ = (ಸ್ವತ(ಶ್ರೀ =ಸ್ವಭಾವದಿಂದಲೇ, ಧೀಯತೇ =ಧರಿಸಲ್ಪಡುತ್ತದೆ. ಸ್ರಕ್ ಚಂದನಾದಿಗಳಂತೆ ಸುಖೋದ್ದೇಶದಿಂದ ಅಲ್ಲ. ಸ್ವಶಬ್ದೋಪಪದಾತ್ ಡುಧಾಞ ಧಾರಣೇ ಸೌಖ್ಯವನ್ನೇ, ಅನು ಅಕ್ಷರನ್ = (ಕ್ಷರ ಸಂಚಲನೇ) ನಿರಂತರದಲ್ಲಿಯೂ, ದಾನಮಾಡಿದವರೋ, (ಯಾರ ವ್ಯಾಪಾರ ಜ್ಞಾನಾದಿಗಳಿಂದ ಪರಮಾನಂದವು ಪ್ರಾಪ್ತವಾಗುತ್ತದೋ, ಅಂತಹ ಪರಮೈಶ್ವರ್ಯ ಸಂಪನ್ನನಾದ ಶ್ರೀ ಹರಿಯೇ (ತನ್ನ ಚರಿತ್ರೆಯನ್ನು ತಿಳಿದವನಿಗೆ ಮೋಕ್ಷವನ್ನು ಕೊಡುವವನು (ಯಾವುದು ಅಯಥಾರ್ಥಜ್ಞಾನರೂಪವಾದುದು ಮೋಕ್ಷಕ್ಕೆ ವಿರೋಧಿಯಾದುದು) ನಾವ್ಯಾನಾಃ =ಸಂಸಾರಕ್ಕೆ ದೋಣಿಯಂತಿರುವ, ಅಂದರೆ ಸಂಸಾರ ಸಾಗರವನ್ನು ದಾಟಲಿಕ್ಕೆ ಉಪಾಯ ಭೂತಗಳಾದ ವೇದ ವಚನಗಳ ಮಧ್ಯೇ =ಮಧ್ಯದಲ್ಲಿ, ಅವರ್ಧತ =ಬೆಳೆಯಿತೋ (ಅಂದರೆ ಮಿಥ್ಯಾಜ್ಞಾನವೂ ಅನ್ಯಥಾ ಜ್ಞಾತವಾದ ವೇದದಿಂದುಂಟಾಗುತ್ತದೋ) ತಂ =ಅಂತಹದನ್ನು ಇಂದ್ರಃ =ಪರಮೇಶ್ವರ್ಯ ಸಂಪನ್ನನಾದ ಶ್ರೀ ಹರಿಯು, ಓ ಜಿಷ್ಠೇನ ವೀರ್ಯವತ್ವಾದ, ಹನ್ಮನಾ = ಹತಿರೂಪವಾದ (ಹತಿಂ = ಹನನವನ್ನು ರೂಪಯತಿ = ಮಾಡುತ್ತಿದೆ. ಅನರ್ಥವಾದ ದುಃಖಾದಿಗಳಿಗೆ ನಾಶಕವಾದ, ಸಧ್ರೀಚೀನೇನ ಮನಸಾ = ಸಮೀಚೀನವಾದ ಜ್ಞಾನದಿಂದ, ಅಭಿದ್ಯೂನ್ (ಅಭಿತಃ ದ್ಯೌಃಯೇರಷಾಂ) ಸರ್ವತ್ರ ಪ್ರಕಾಶವು (ಪ್ರಸಿದ್ಧಿಯು) ಯಾವ ಪುರುಷಾರ್ಥಗಳಿಗೆ ಇದೆಯೋ ಅಂತಹ ಆನಂದಾದಿ ಪುರುಷಾರ್ಥಗಳನ್ನುದ್ದೇಶಿಸಿ (ಮೋಕ್ಷ ಪ್ರಕಾಶಕ್ಕಾಗಿ) (ಮೋಕ್ಷ ಪ್ರಾಪ್ತಿಗಾಗಿ ಅ=ಚೆನ್ನಾಗಿ, ಅಹಕ್ =ಸಂಹರಿಸಿದನು. (ಆನಂದಾದಿ ಪುರುಷಾರ್ಥಗಳಿಗೆ ಪ್ರಸಿದ್ಧಿಯೆಂದರೆ ಚೆನ್ನಾಗಿ ಅನುಭವವು. (ರೂಢವಾದ ಮೋಕ್ಷ ಎಂಬ ಪದವನ್ನು ಬಿಟ್ಟು

ಅಭಿದ್ಯೂನ್ ಎಂದು ಯೌಗಿಕ ಪದವನ್ನು ತೆಗೆದುಕೊಳ್ಳಲಿಕ್ಕೆ ಪ್ರಯೋಜನ ಹೇಳುತ್ತಾರೆ. ಜ್ಞಾನ ಆನಂದಾದಿ ರೂಪವಾದ ಮೋಕ್ಷವು (ಅವಿದ್ಯಾ ನಿವೃತ್ತಿ ರೂಪವಾದುದು ಅಲ್ಲ) (ನಿತ್ಯ ಸಿದ್ಧವಾದ ಪ್ರಯುಕ್ತ ಪ್ರಕಾಶವೇ ಮೋಕ್ಷ ಪ್ರಾಪ್ತಿಯು ಎಂದುಕ್ತವಾಯ್ತು) (ಇಂದ್ರ ಪಕ್ಷದಲ್ಲಿ) ನಾವ್ಯಾನಾಂ = ದೋಣಿಯಿಂದ ದಾಟಲರ್ಹಗಳಾದ ಅಗಾಧಗಳಾದ ಜಲಗಳ ಮಧ್ಯದಲ್ಲಿ ಯಾವನು ಬೆಳೆದಿರುವನೋ ಅಂತಹಜಲಗಳ ಮಧ್ಯದಲ್ಲಿ ಅಭಿವೃದ್ಧನಾದ ಅಹಿದೈಯನ್ನು ಸಂಹರಿಸಿದನು. ಹಾಗೆಯೇ ಸಧ್ರೀ ಚೀನೇನ ಮನಸಾ = ನಿರ್ಭಯವಾದ ಹೃದಯಿದಿಂದ, ಹನ್ಮನಾ = ಆಯುಧ ವಿಶೇಷದಿಂದ, ಯುದ್ಧದಿಂದಲೂ, ಅಭಿದ್ಯೂನ್ = ಸರ್ವತ್ರ ಪ್ರಕಾಶವುಳ್ಳ ದೇವತೆಗಳನ್ನು (ಬೇರೆಯೆಲ್ಲವೂ ಹಿಂದಿನಂತೆ) ॥೧೧॥

**ಭಾ ॥ (1) ಯಸ್ಯ ಕರ್ಮಾಣ್ಯಕ್ಷರನ್ ಸೌಖ್ಯಮೇವ (2) ಯೋ ವೇದವಾಚಾಂ ಸೃತಿನಾವಾತ್ಮಕಾನಾಂ ಮಧ್ಯೇಽ ವರ್ಧದಯಥಾಜ್ಞಾನರೂಪಃ । ಸಮೀಚೀನಜ್ಞಾನತೋ ಹಂಸ್ತಮೀಶ ಓಜಿಷ್ಠೇನ ಹತಿ ರೂಪೇಣ ಸಮ್ಯಕ್ । ಮೋಕ್ಷ ಪ್ರಕಾಶಾರ್ಥ (3) ಮಥಾಪಿ ನಾವಾತರಣೀಯಾನಾಂ ಮಧ್ಯತೋಽಪಾಂ ವೃಧಂ ತಂ ॥ ಅಹಿಂವಾ ॥೧೧॥**

ಅ ॥ (1) (ಯಸ್ಯ ಎಂದು ಅಧ್ಯಾಹಾರ ಮಾಡದಿದ್ದರೆ ಅಸ್ಯ ಕರ್ಮಾಣಿ ಸೌಖ್ಯಮೇವಾಕ್ಷರನ್ = ಇವರ ಕರ್ಮಗಳು ಸೌಖ್ಯವನ್ನೇ ಕೊಟ್ಟವು, ಎಂದು ಒಂದು ವಾಕ್ಯವು. ಯೋಽವರ್ಧತ ತಮಿಂದ್ರ ಅಹನ್=ಯಾವನು ಬೆಳೆದಿರುತ್ತಾನೋ ಆತನನ್ನು ಇಂದ್ರನು ಸಂಹರಿಸಿದನು, ಎಂದು ಇನ್ನೊಂದು ವಾಕ್ಯವು. ಹೀಗೆ ವಾಕ್ಯಭೇದವು ಬರುವುದು. ಯಸ್ಯ ಎಂದು ಅಧ್ಯಾಹಾರ ಮಾಡಿದರೆ ಯಾವ ಇಂದ್ರನ ಕರ್ಮಗಳು ಸುಖವನ್ನು ಕೊಟ್ಟಿರುತ್ತಾವೋ ಅಂತಹ ಇಂದ್ರನು ಎಂದು ಒಂದು ವಾಕ್ಯವಾಗುವುದು. ಹೀಗೆ ಏಕವಾಕ್ಯತ್ವವು ಸಿದ್ಧಿಸುವುದಕ್ಕಾಗಿ ಯತ್ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ವ್ಯಾಖ್ಯಾನ ಮಾಡುತ್ತಾರೆ) ಯಾವ ಇಂದ್ರನ ಕರ್ಮಗಳು ಸೌಖ್ಯವನ್ನೇ ನಿರಂತರದಲ್ಲಿಯೂ ಕೊಟ್ಟಿರುತ್ತಾವೋ (ಅಂದರೆ ಯಾವ ಶ್ರೀ ಹರಿಯ ಚರಿತ್ರೆಗಳ ಜ್ಞಾನಾದಿಗಳಿಂದ ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷವಾಗುತ್ತದೋ ಅಂತಹ ಶ್ರೀ ಹರಿಯು ತನ್ನ ಚರಿತ್ರೆಗಳನ್ನು ತಿಳಿದವನಿಗೆ ಮೋಕ್ಷವನ್ನು ಕೊಡುತ್ತಾನೆ.) (2) ಯಾವುದು ಅನ್ಯಥಾಜ್ಞಾನರೂಪವಾದುದು, ಮೋಕ್ಷಕ್ಕೆ ವಿರೋಧಿಯಾದುದು ಸಂಸಾರ ಸಾಗರವನ್ನು ದಾಟಲಿಕ್ಕೆ ಉಪಾಯ ಭೂತಗಳಾದ ವೇದ ವಚನಗಳ ಮಧ್ಯದಲ್ಲಿ ಬೆಳೆಯಿತೋ (ಮಿಥ್ಯಾಜ್ಞಾನವೂ ಕೂಡ ಅನ್ಯಥಾ ತಿಳಿದ ವೇದದಿಂದಲೇ ಉಂಟಾಗುತ್ತದೋ) ಅಂತಾಹ ಮೋಕ್ಷಕ್ಕೆ ವಿರೋಧಿಯಾದುದನ್ನು ವೀರ್ಯವತ್ತಾದ ಅನರ್ಥವಾದ ದುಃಖಾದಿಗಳಿಗೆ ನಾಶಕವಾದ ಯಥಾರ್ಥವಾದ ಜ್ಞಾನದಿಂದ ಮೋಕ್ಷಪ್ರಾಪ್ತಿಗಾಗಿ ಚೆನ್ನಾಗಿ ಸಂಹರಿಸಿದನು (3) ಆದಾಗ್ಯೂ (ಪ್ರಸಿದ್ಧ ಇಂದ್ರ ಪಕ್ಷದಲ್ಲಿ) ದೋಣಿಯಿಂದ ದಾಟಲರ್ಹಗಳಾದ ಅಗಾಧಗಳಾದ ಜಲಗಳ ಮಧ್ಯದಲ್ಲಿ ಅಭಿವೃದ್ಧನಾದ ಆ ಅಹಿನಾಮಕ ದೈತ್ಯನನ್ನು ಸಂಹರಿಸಿದನು ॥೧೧॥

**ಋ ॥ (೩೯೫) ನ್ಯಾವಿಧ್ಯದಿಲೀಬಿಶಸ್ಯ ದೃಹಾ ವಿಶೃಂಗಿಣಮಭಿನಚ್ಛುಷ್ಣ ಮಿಂದ್ರಃ ।**

**ಯಾವತ್ತರೋ ಮಘವನ್ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಂ ॥೧೨॥**

ಅ ॥ ಇಂದ್ರಃ = ಪ್ರಸಿದ್ಧ ಇಂದ್ರನು, ಇಲೀಬಿಶಸ್ಯ = (ಇಲಾ =ಭೂಮಿಯು, ಏಷಾಮಸ್ತ್ಯಾಶ್ರ ಯತ್ವೇನ = ಇವರಿಗೆ ಆಶ್ರಯವಾಗಿದೆ ಆದ ಕಾರಣ, ಇಳಿನಃ =ಭೂಮಿಯಲ್ಲಿರತಕ್ಕ ಮನುಷ್ಯರು, ಇಳಿನಃ ವಿಶತೀತಿ = ಆ ಮನುಷ್ಯರನ್ನು

ಪ್ರವೇಶಿಸುತ್ತಾನೆ) ಇಳೀ ವಿಶ ಎಂಬ ಅಸುರನಿಗೆ, ದೃಹ್ಯಾ = ದೃಢಗಳಾದ ಯಾವ ಬಲಾದಿಗಳು ಇವೆಯೋ, (ಅವುಗಳನ್ನು) ನಿಅವಿಧ್ಯತ್ =ವಿನಾಶಗೊಳಿಸಿದನು. (ಶ್ರೀ ವಿಷ್ಣುವಾದರೆ) ಇಳೀವಿಶಕ್ಯ = ಮನುಷ್ಯರಲ್ಲಿರತಕ್ಕ ಅಜ್ಞಾನಾದಿಗಳ (ಬಲಾದಿಗಳನ್ನು) ನಿ ಅವಿಧ್ಯತ್ = ನಾಶಗೊಳಿಸಿದನು. (ವ್ಯಧತಾಡನೇ) (ಮತ್ತೂ) ಇಂದ್ರಃ =ಪ್ರಸಿದ್ಧನಾದ ಇಂದ್ರನು, ಶುಷ್ಣಂ =ಶೋಷಕನಾದ, (ಜನರಿಗೆ ದುಃಖಕ್ಕೆ ಕಾರಣನಾದ,) ಶೃಂಗಿಣಂ =ವೃಷರೂಪನಾದ ದೈತ್ಯನನ್ನು ವಿ ಅಭಿನತ್ =ಸಂಹರಿಸಿದನು. (ವಿಷ್ಣುವಾದರೆ) ಶೃಂಗಿಣಂ =ಕಾಮನನ್ನು, ಪಿ ಅಭಿನತ್ = ಸಂಹರಿಸಿದನು. (ಕಾಮಾತುರರಾದವರು ಕೂಡ ಒಣಗುತ್ತಾರೆ. ಆದ ಕಾರಣ ಆ ದೈತ್ಯನೂ ಕೂಡ ಶೋಷಕನು, ದೊಡ್ಡ ಎತ್ತಿನಂತೆ ನಿಗ್ರಹಿಸಲಶಕ್ಯನು. ಮತ್ತು ಶೃಂಗವುಳ್ಳವರು. (ಪರೋಕ್ಷವಾಗಿಯೂ ಸ್ತುತಿಸಿ ಅಪರೋಕ್ಷವಾಗಿಯೂ, ಸ್ತುತಿಸುತ್ತಾರೆ.) ಮಘವನ್ = ಇಂದ್ರನೇ, ಯಾವತ್ತರಃ =ತನಗೆ ಎಷ್ಟು ವೇಗವಿದೆಯೋ, ಅಷ್ಟು ವೇಗದಿಂದ, ಯಾವತ್ ಓಜಃ =ಎಷ್ಟು ಶಕ್ತಿಯಿದೆಯೋ, ಎಷ್ಟು ಪರಾಕ್ರಮವಿದೆಯೋ ಅಷ್ಟರಿಂದ, ಪೃತನ್ಯಂ=ಇನ್ನೊಬ್ಬ ಯುದ್ಧ ಮಾಡತಕ್ಕ ಶತ್ರುವನ್ನು, ವಜ್ರೇಣ=ವಜ್ರಾಯುಧದಿಂದ, ಅವಧೀಃ = ಸಂಹರಿಸಿರುತ್ತಿ. ವಜ್ರೇಣ ಸುಜ್ಞಾನದಿಂದ, ಸಂಹರಿಸಿರುತ್ತಿ. ||೧೨||

ಭಾ || (1) ಇಳಿನೋ ಭೂಸ್ಥಿತಾಃ ಸ್ಯುಸ್ತತ್ರಾವಿಶನ್ನ ಸುರೋ ನಾಮ ತಸ್ಯ| ಇಳೀವಿಶಸ್ತಸ್ಯ (2) ದೃಢಾನಿ ಯಾನಿ ಬಲಾದೀನಿ ನ್ಯಹನತ್ತಾನಿ ದೇವಃ । ತಮಸೋ ವಾ (3) ಶೃಂಗಿಣಂ ಶೋಷಕಂ ಚ ವೃಷರೂಪಂ ದೈತ್ಯಮಹನ್ನಥೋ ವಾ । ಕಾಮಂ (4) ಯಾವಚ್ಛಕ್ತಿತೋ ವಿಕ್ರಮಾದ್ವಾ ವೇಗೇನ ವಾ ಶತ್ರುಮಥೋ ಪೃತನ್ಯಂ । ಜಘಂಥ ವಜ್ರೇಣ ಸುಬೋಧತೋ ವಾ ನ (5) ಶಕ್ತಿ ಸಾಮಸ್ತ್ಯ ಮಿಹೋದಿತಂ ಹರೇಃ (6) ಅನಂತಶಕ್ತಿರ್ಹಿ ಹರಿಃ ಸದೈವ ಕುತ ಏವ ಶತ್ರುಸ್ತದಮುಷ್ಯ ಕೋಽಪಿ|| (7) ಅತೋ ಯಥಾ ಶಕ್ತ್ಯಭಿಯುದ್ಧ್ಯಮಾನಂ ಶತ್ರುಂ ಜಘಂಥೇತಿ ಮಹಾನಿಹಾರ್ಥ ||೧೨||

ಅ || (1) ಭೂಮಿಯಲ್ಲಿರತಕ್ಕ ಮನುಷ್ಯರು ಇಲಿನಃ ಎನಿಸುತ್ತಾರೆ. (ಇಲಾ =ಭೂಮಿಯು ಅಸ್ತಿ ಏಷಾಮಾತ್ರಯಃ ಮನುಷ್ಯರಿಗೆ ಭೂಮಿಯು ಆಶ್ರಯವಾಗಿದೆ.) ಆ ಮನುಷ್ಯರಲ್ಲಿ ಪ್ರವೇಶ ಮಾಡಿಕೊಂಡಿರುವವನು ಯಾವ ಅಸುರನೋ, ಆ ಅಸುರನಿಗೆ, ಇಳೀಬಿಶಃ =ಇಲಿಬಿಶಃ ಎಂದು ಹೆಸರು. (ಇಲಿನಃವಿಶತೀತಿ ಇಲಿಬಿಶಃ) (೩) ಇಂದ್ರನು ಇಲಿವಿಶ ಅಸುರನ ಅತಿ ದೃಢಗಳಾದ ಯಾವ ಬಲಾದಿಗಳಿವೆಯೋ ಅವುಗಳನ್ನು ನಾಶಗೊಳಿಸಿದನು. ಸಾಕ್ಷಾದ್ವಿಷ್ಣುವು (ಇಲಿನಃ=ಭೂಮಿಯಲ್ಲಿರುವ ಮನುಷ್ಯರನ್ನು ವಿಶತಿ =ಅಜ್ಞಾನವೂ ಪ್ರವೇಶಿಸುತ್ತದೆ. ಇತಿ । ಅಜ್ಞಾನದ ದೃಢಗಳಾದ ಬಲಾದಿಗಳನ್ನು ನಾಶಗೊಳಿಸಿದನು. (3) ಇಂದ್ರನು ಜನರಿಗೆ ದುಃಖಕ್ಕೆ ಕಾರಣನಾದ ಶೃಂಗಿಣಂ=ವೃಷರೂಪವಾದ ದೈತ್ಯನನ್ನು ಸಂಹರಿಸಿದನು. (ಅಧ್ಯಾತ್ಮದಲ್ಲಿ) ಶ್ರೀ ವಿಷ್ಣುವು ಕಾಮನನ್ನು ಸಂಹರಿಸಿದನು. (ಕಾಮಾತುರರಾದವರೂ ಕೂಡ ಒಣಗುತ್ತಾರೆ. ಆ ಕಾರಣ ಕಾಮವೂ ಕೂಡ ಶೋಷಕವಾದುದರಿಂದ ಶುಷ್ಣ ಶಬ್ದ ವಾಚ್ಯವು. ಕಾಮವೂ ಕೂಡ ವೃಷಭದಂತೆ ನಿಗ್ರಹಿಸಲಶಕ್ಯವು. ಶೃಂಗೀ ಎನಿಸುತ್ತದೆ) ಅಮುಖ್ಯ ವೃತ್ತಿಯಿಂದ ಶೃಂಗಿ ಶಬ್ದವು ಕಾಮ ಪ್ರತಿಪಾದಕವು) (4) ಇಂದ್ರಃನ್ಯವಿಧ್ಯತ್ ಎಂದು ಪರೋಕ್ಷವಾಗಿ ಸ್ತುತಿಸಿ ಅವಧೀಃ ಎಂದು ಅಪರೋಕ್ಷವಾಗಿ ಸ್ತುತಿಸುತ್ತಾರೆ. ಎಲೋ ಇಂದ್ರನೇ ನಿನಗೆ ಎಷ್ಟು ವೇಗವಿದೆಯೋ ಅಷ್ಟು ವೇಗದಿಂದ, ಎಷ್ಟು ಶಕ್ತಿಯಿದೆಯೋ ಅಷ್ಟು ಸಮಸ್ತ ಶಕ್ತಿಯಿಂದ (ಶಕ್ತಿ=ಶಾರೀರಬಲವು) ತನಗೆ ಇರತಕ್ಕ ಪರಾಕ್ರಮದಿಂದಲಾಗಲೀ (ವಿಕ್ರಮ=ಜಗತ್ತನ್ನು ವಶೀಕರಿಸುವ ಸಾಮರ್ಥ್ಯದಿಂದ) ಯುದ್ಧ ಮಾಡತಕ್ಕ ಇತರ ಶತ್ರುವನ್ನೂ ಕೂಡ ವಜ್ರಾಯುಧದಿಂದ ಸಂಹರಿಸಿರುತ್ತಿ. (ವಿಷ್ಣುಪಕ್ಷದಲ್ಲಿ) ಎಲೋ ಶ್ರೀ ವಿಷ್ಣುವೇ ನಿನಗೆ ಎಲ್ಲಿ ವಿಷ್ಣುವೇಗಾವಾವಶ್ಯಕವೋ ಅಂತಹ ವೇಗದಿಂದ, ಎಷ್ಟು ಶಕ್ತಿ ಅವಶ್ಯಕವೋ ಅಂತಹ ಶಕ್ತಿಯಿಂದ ಎಲ್ಲಿ ಎಷ್ಟು ವೀರ್ಯವಾವಶ್ಯಕವೋ. ಅಂತಹ ವೀರ್ಯದಿಂದ ಕ್ರೋಧ

ಮೊದಲಾದ ಶತ್ರುಗಳನ್ನು (ವಜ್ರೇಣ) ಒಳ್ಳೇ ಜ್ಞಾನದಿಂದ ಸಂಹರಿಸುತ್ತೀ (5) (ಅವಧಿಃ (=ಎಂದು ಶತ್ರುವನ್ನು ಸಂಹರಿಸಲಿಕ್ಕೆ ಶ್ರೀ ಹರಿಯು ಶಕ್ತ್ಯಾದಿಗಳೆಲ್ಲವನ್ನೂ ಪ್ರಯೋಗಿಸಿರುತ್ತಾನೆಂದು ಅರ್ಥವು ಪ್ರತೀತವಾಗುತ್ತದೆ. ಯಾವದವಧಾರಣೇ ಯಾವತ್ ಶಬ್ದಕ್ಕೆ ಸಾಮಸ್ತ್ಯರೂಪವಾದ ಅವಧಾರಣೆ) (ನಿಶ್ಚಯ) ಎಂಬ ಅರ್ಥದಲ್ಲಿ ಅವ್ಯಯಿಭಾವ ಸಮಾಸವನ್ನು ವಿಧಿಸಿರುತ್ತಾರೆ. ಆದ ಪ್ರಯುಕ್ತ ಯಾವತ್ ಎಂಬ ಭಿನ್ನ ಪದಕ್ಕೂ ಸಮಸ್ತ ಎಂಬ ಅರ್ಥವು ಹೇಳಲು ತಕ್ಕವಾಗುವುದು. ಅಂತಹ ಪ್ರತೀತಿಯನ್ನು ನಿರಾಕರಿಸುತ್ತಾರೆ.) ಇಲ್ಲಿ ಶ್ರೀ ಹರಿಗೆ ಪೂರ್ಣಶಕ್ತಿ ಸಮಸ್ತವೇಗ, ಇತ್ಯಾದಿಗಳು ಹೇಳಲ್ಪಡುವುದಿಲ್ಲ. (ಏಕೆ ಹೇಳಲ್ಪಡುವುದಿಲ್ಲ ಎಂದರೆ) (6) ಯಾವ ಕಾರಣದಿಂದ ಶ್ರೀ ಹರಿಯು ಯಾವಾಗಲೂ ಅನಂತಾನಂತ ಶಕ್ತಿಗಳುಳ್ಳವನೋ, ಆದ ಕಾರಣ (ಯಾವ ಶತ್ರುವಿನಲ್ಲಿ ಸಂಪೂರ್ಣ ಶಕ್ತ್ಯಾದಿಗಳನ್ನು ಪ್ರಯೋಗಿಸುವನೋ, ಅಂತಹನು ಶ್ರೀ ವಿಷ್ಣುವಿನ ಶತ್ರುವು ಯಾವನು ಇದ್ದಾನೆ. ಯಾವ ಕಾರಣದಿಂದ ಶತ್ರುವಾಗುವನು. (ಅಂತಹನು ಯಾವನೊಬ್ಬನೂ ಇಲ್ಲವೇ ಇಲ್ಲ. ಯಾವ ಕಾರಣದಿಂದಲೂ ಆಗಲಾರನು) (7) (ಆದ ಕಾರಣ ಯಥಾಯೋಗ್ಯವಾದುದು ಎಂದು ಹಿಂದೆ ಹೇಳಿದ್ದೇ ಅರ್ಥವು ಎಂದು ಪರಿಹಾರವ್ಯಾಜದಿಂದ ಹೇಳಿ ಹೇಳಿದುದನ್ನು ವಿವರಿಸುತ್ತಾರೆ.) ಆದ ಕಾರಣ ತನ್ನ ಶಕ್ತ್ಯನುಸಾರ ಯುದ್ಧ ಮಾಡುವ ಮತ್ತು ಪ್ರಮಾಣಗಳನ್ನು ಅನುಸರಿಸಿಕೊಂಡಿರುವುದು ಅರ್ಥವು (ಇಂದ್ರನಲ್ಲಿಯೂ ಹೀಗೆಯೇ ಯಥಾಯೋಗ್ಯವಾಗಿ ಯೋಜನಾ ಮಾಡಬೇಕು. ||೧೨||

ಋ || (೩೯೬) ಅಭಿಸಿಧ್ಮೋ ಅಜಿಗಾದಸ್ಯ ಶತ್ರೂನ್ವಿತಿಗ್ಮೇನ ವೃಷಭೇಣಾ ಪುರೋಽಭೇತ್ ।

ಸಂ ವಜ್ರೇಣಾಸೃಜದ್ವೃತ್ರಮಿಂದ್ರಃ ಪ್ರಸ್ವಾಂ ಮತಿಮತಿರಚ್ಛಾಶದಾನಃ ||೧೩|| ||೩||

ಅ || ಅಭಿ ಸಿಧ್ಮಃ = (ಷಿಧಗತ್ಯಾಂ) ಸರ್ವತ್ರ ಸರ್ವ ದೇಶಗಳಲ್ಲಿಯೂ ಸರ್ವ ಕಾಲಗಳಲ್ಲಿಯೂ ಸಿದ್ಧಿಯಿಂದ ಕೂಡಿರುವ, ಶ್ರೀ ಪರಮೇಶ್ವರನು ಅಸ್ಯ=(ಈ ಜೀವರ ಸಮುದಾಯದ, ಶತ್ರೂನ್=ಕಾಮಾದಿ ಶತ್ರುಗಳನ್ನು, ಅಜಿಗಾತ್=(ಜಿ ಜಯೇ) (ಅಜಯತ್, ಯಕಾರಕ್ಕೆ ಗಾಭಾವವು, ಜಕಾರಕ್ಕೆ ಜಿಕಾರವು) ಗೆದ್ದನು. (ಮತ್ತು ವಿರೋಧಿಗಳನ್ನು ಕುರಿತು) ತಿಗ್ಮೇನ = ತೀಕ್ಷ್ಣರಾದ, ಕ್ರೂರರಾದ, ವೃಷಭೇಣ=ಜೀವಶ್ರೇಷ್ಠರಾದ, ಮುಖ್ಯಪ್ರಾಣ ದೇವರಿಂದ, ಪುರಃ =ಪ್ರಾಣಿಗಳ ಸಂಸಾರ ರೂಪಗಳಾದ ಪಟ್ಟಣಗಳನ್ನು ವ್ಯಭೀತ್ = (ಭಿದಿರ್ ವಿದಾರಣೇ) ವಿಶೇಷವಾಗಿ ಭೇದಿಸಿದನು. (ಮುಖ್ಯಪ್ರಾಣನು ಸಂಸಾರವನ್ನು ಭೇದಿಸಲಿಕ್ಕೆ ಕಾರಣನು ಹೇಗೆ ಆಗುವನು ಎಂದರೆ ಲಿಂಗಶರೀರವೇ ಸಂಸಾರಕ್ಕೆ ಮೂಲಕಾರಣವಾಗಿರುವುದರಿಂದ ಸಂಸಾರ ರೂಪವಾದ ಲಿಂಗವು ಪ್ರಾಣಿಗಳಿಗೆ ಪಟ್ಟಣದಂತಿರುವುದು. ಮುಖ್ಯಪ್ರಾಣನ ಉಪದೇಶವಿಲ್ಲದೆ ಮೋಕ್ಷವಾಗದಿರುವುದರಿಂದ ಮುಖ್ಯಪ್ರಾಣನಿಂದ ಉಪದೇಶಾದಿಗಳನ್ನು ಮಾಡಿಸುತ್ತಾ ಶ್ರೀ ಹರಿಯು ಸಂಸಾರವನ್ನು ಭೇದಿಸುತ್ತಾನೆ. ಮುಕ್ತಿಯನ್ನು ಕೊಡುತ್ತಾನೆ.) ಇಂದ್ರನಾದರೂ ಅಸ್ಯ=ಈ ಲೋಕಕ್ಕೆ ಶತ್ರೂನ್ =ಶತ್ರುಗಳಾದ ದೈತ್ಯರನ್ನು ಅಜಿಗಾತ್ = ಗೆದ್ದನು. ವೃಷಭೇಣ = (ಭಕ್ತರ ಅಭೀಷ್ಟಕ್ಕೆ ಪ್ರತಿಬಂಧಕೀಭೂತರಾದ ದೈತ್ಯರನ್ನು ನಾಶಗೊಳಿಸುವುದರಿಂದ) ವರ್ಷಣಕ್ಕೆ ಅಂಗವಾದ, ತಿಗ್ಮೇನ =ತೀಕ್ಷ್ಣವಾದ, ವಜ್ರೇಣ =ವಜ್ರಾಯುಧದಿಂದ, ಪುರಃ = ಶಂಬರಾಸುರನ ಪಟ್ಟಣಗಳನ್ನು ವಿಅಭೇತ್=ಭೇದಿಸಿದನು. ಇಂದ್ರಃ =ಇಂದ್ರನು ವೃತ್ರಂ =ವೃತ್ರಾಸುರನನ್ನು ವಜ್ರೇಣ =ವಜ್ರಾಯುಧದಿಂದ (ಈ ವೃತ್ರಾಸುರನನ್ನು ಸಂಹರಿಸುವುದಕ್ಕಾಗಿ) ಸಮ್‌ಅಸೃಜಿತ್ = ಕೂಡಿಸಿದನು. (ಕೊಡಲಿಗೆ ದಾರು ಸಂಯೋಗವಾಗದೆ ಮರವನ್ನು ಭೇದಿಸಲು

ಸಾಧ್ಯವಿಲ್ಲವಷ್ಟೆ) ಹಾಗೆಯೇ ವಜ್ರಕ್ಕೆ ವೃತ್ರಾಸುರನ ಸಂಬಂಧವಾಗಿಯೇ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದನು.) ಶ್ರೀ ಹರಿಯು ವೃತ್ರಂ=ಅಜ್ಞಾನವನ್ನು ವಜ್ರೇಣ = ಜ್ಞಾನದಿಂದ (ಅಜ್ಞಾನವನ್ನು ನಾಶಗೊಳಿಸುವುದಕ್ಕಾಗಿ) ಸಮಸೃಜತ್ = ಕೂಡಿಸಿದನು. (ಸಮಾನ ವಿಷಯವನ್ನಾಗಿ ಮಾಡಿದನು) ಶಾತದಾನ = (ಅತಿಶಯಿತವಾದ, ಶ=ಸುಖವು ಶಶಂ, ಶಶಸ್ಯಅದನಃ ಅತಿಶಯಿತವಾದ ಸುಖವನ್ನು ಅನುಭವಿಸುವನು.) ಯಾವಾಗಲೂ ಶೋಭನವಾದ ಸುಖವುಳ್ಳ ಆ ಇಂದ್ರನು ಸ್ವಾಂ=ಸ್ವವಿಷಯಕವಾದ ಮತಿಂ =ಬುದ್ಧಿಯನ್ನು ಪ್ರಅತಿರತ್ = (ತೃಪ್ಲವನತರಣಯೋಃ) (ತನ್ನ ಪ್ರಜೆಗಳಿಗೋಸ್ಕರ ಕೊಟ್ಟನು) ||೧೩||

ಭಾ || (1) ಸ ಸರ್ವತಃ ಸಿದ್ಧಿಯುತಃ ಸದೈವ ಜಿಗಾಯ ಜೀವಾರಿಗಣಾನ್ (2) ಪುರಶ್ಚ | ಸಂಸಾರರೂಪಾಃ ಅಭಿನದ್ಮುಷೇಣ ಪ್ರಾಣೇನ ತಿಗ್ಮೇನ ವಿರೋಧಿನಃ ಪ್ರತಿ|| (3) ಸಂಓಜಯಾಮಾಸ ವಜ್ರೇಣ ಜ್ಞಾನೇನ ವಾ ಜ್ಞಾನಮಮುಷ್ಯ ಹತ್ಯೈ | (4) ಮತಿಂಚ ಸ್ವಾಮದಿತತ್ಸ್ವಪ್ರಜಾಭ್ಯಃ ಸಶಾಶದಾನಃ ಸುಸುಖೀ ಸದೈವ ||೧೩||

ಅ || (1) ಸಮಸ್ತ ದೇಶಗಳಲ್ಲಿಯೂ ಸಮಸ್ತ ಕುಲಗಳಲ್ಲಿಯೂ ಯಾವಾಗಲೂ ಸರ್ವ ಸಿದ್ಧಿಯಿಂದ ಕೂಡಿರುವ ಶ್ರೀ ಹರಿಯು ಜೀವರಿಗೆ ಶತ್ರುಗಳಾದ ಕಾಮ ಕ್ರೋಧಾದಿಗಳನ್ನು ಗೆದ್ದನು. (2) ವಿರೋಧಿಗಳನ್ನು ಕುರಿತು (ವಿರೋಧಿಗಳಿಗೆ) ಕ್ರೂರರಾದ ಜೀವ ಶ್ರೇಷ್ಠರಾದ ಮುಖ್ಯಪ್ರಾಣ ದೇವರಿಂದ ಪ್ರಾಣಿಗಳ ಸಂಸಾರರೂಪಗಳಾದ ಪಟ್ಟಣಗಳನ್ನು ಭೇದಿಸಿದನು. (ಅಂದರೆ ಮುಖ್ಯಪ್ರಾಣದೇವರಿಂದ ತತ್ವಜ್ಞಾನವನ್ನುಪದೇಶ ಕೊಡಿಸಿ ಲಿಂಗ ಶರೀರವನ್ನು ಭೇದಿಸಿ ಮೋಕ್ಷವನ್ನು ಕೊಡುವನು) (3) ಇಂದ್ರನು ವೃತ್ರಾಸುರನನ್ನು ವಜ್ರದಿಂದ (ವ್ರತಾಸುರನನ್ನು ಸಂಹರಿಸುವುದಕ್ಕಾಗಿ) ಕೂಡಸಿದನು. (ಅಂದರೆ ವಜ್ರದಿಂದ ಸಂಹರಿಸಿದನು.) ಶ್ರೀ ಹರಿಯು ಅಜ್ಞಾನವನ್ನು ಜ್ಞಾನದಿಂದ (ಅಜ್ಞಾನವನ್ನು ನಾಶಗೊಳಿಸುವುದಕ್ಕಾಗಿ) ಸಮಾನ ವಿಷಯವನ್ನಾಗಿ ಮಾಡಿದನು. (4) ಶಾಶದಾನಃ = ಯಾವಾಗಲೂ ಚೆನ್ನಾಗಿ ಸುಖವುಳ್ಳ ಶ್ರೀ ಹರಿಯಃ ಸ್ವವಿಷಯಕವಾದ ಬುದ್ಧಿಯನ್ನು ತನ್ನ ಪ್ರಜೆಗಳಿಗೋಸ್ಕರ ಕೊಟ್ಟನು (ಶ್ರೀ ಹರಿ ಸರ್ವೋತ್ತಮತ್ವ ಜ್ಞಾನವನ್ನು ಹುಟ್ಟಿಸಿದನು) ||೧೩||

ಋ || (೩೯೭) ಆವಃ ಕುತ್ಸ ಮಿಂದ್ರ ಯಸ್ಮಿನ್ ಚಾಕನ್ಪ್ರಾವೋ ಯು ಧ್ಯಂತಂ ವೃಷಭಂ ದಶದ್ಯುಂ |
ಶಫಚ್ಯುತೋ ರೇಣುರ್ನಕ್ಷತ ದ್ಯಾ ಮುಚ್ಛ್ವೈತ್ರೇಯೋ ನೃಷಾಹ್ಯಾಯ ತಸ್ಥೌ ||೧೪||

ಅ|| ಇಂದ್ರ =ಶ್ರೀ ಹರಿಯೇ, ಚಾಕನ್= (ಕೃಞಕರಣೇ) ಸರ್ವಕ್ರಿಯಾಶ್ರಯನಾದ, ಸರ್ವ ಸ್ವತಂತ್ರನಾದ, ನೀನು, ಯಸ್ಮಿನ್=ಯಾವ ಕುತ್ಸ ಋಷಿಯಲ್ಲಿ ದರ್ಶನ ವಿಷಯನಾಗಿರುತ್ತಿಯೋ, (ಅಂದರೆ ಯಾವ ಕುತ್ಸ ಋಷಿಯ ಸುಭಕ್ತಿಯಿಂದ ಸಂತೋಷಗೊಂಡ ನೀನು ನಿನ್ನ ರೂಪವನ್ನು ತೋರಿಸಿರುತ್ತಿಯೋ, (ತಂ ಕುತ್ಸಂ=ಆ ಕುತ್ಸನಾಮಕೃಷಿಯನ್ನು ಅವಃ =ರಕ್ಷಿಸುತ್ತಿರುತ್ತಿ. ಯುದ್ಧ್ಯಂತಂ=ಯುದ್ಧ ಮಾಡುವ, ವೃಷಭಂ=ವೃಷ (ಎತ್ತು) ರೂಪವಾದ, ದಶದ್ಯುಂ=ದಶದ್ಯು ನಾಮಕ ರಾಜನನ್ನೂ, ಪ್ರ ಅವಃ =ಚೆನ್ನಾಗಿ ರಕ್ಷಿಸಿರುತ್ತಿ (ಆ ದಶದ್ಯುವಿನ =ಯುದ್ಧವನ್ನೇ ಉತ್ತರಾರ್ಧದಲ್ಲಿ ವಿವರಿಸುತ್ತಾರೆ. ಆ ಯುದ್ಧವೂ ಕೂಡ ಶ್ರೀ ಹರಿಯ ಅಧೀನವೇ, ಎಂದು ಸೂಚಿಸುವುದಕ್ಕಾಗಿ) ಯದಾ =ಯಾವಾಗ, ಶ್ವೈತ್ರೇಯಃ = (ಪ್ರಸಾದರ್ಥಂ ಬಕಸ್ಯಾಪಿ, ವಾಯುನೋಕ್ತಃಶ್ವರೂಪಿಣಾ ಎಂಬ ಪ್ರಮಾಣದಿಂದ ಶ್ವಾ=ವಾಯುದೇವರು, ಶುನಾ ವಾಯು

ದೇವರಿಂದ, ಇತಃ = ಭಾರ್ಯೆಯಾಗಿ ಹೊಂದಲ್ಪಟ್ಟವಳು. ಶ್ವೇತಾ = ವಾಯುದೇವರು, ಶುನಾ ವಾಯು ದೇವರಿಂದ, ಇತಾ = ಭಾರ್ಯೆಯಾಗಿ ಹೊಂದಲ್ಪಟ್ಟವಳು. ಶ್ವೇತಾ = ವಾಣಿಯು, ವಾಯುವಿನ ಹೆಂಡತಿಯು, ರಮತೇ ಇತ್ತಿರಾ, ಶ್ವೇತಾ ಚಸಾ ರಾ ಚ ಶ್ವೇತ್ರಾ. ಶ್ವೇತ್ರಾಯಾಃಸುತಃ ಶ್ವೈತ್ರೇಯಃ) ವಾಣೀ ಪುತ್ರನಾದ ದಶದ್ಯುರಾಜನು, ನೃಷಾಹ್ಯಾಯ = ಪ್ರತಿಭಟರಾದ ಪುರುಷರನ್ನು ಸಹಿಸುವುದಕ್ಕಾಗಿ ತಿರಸ್ಕರಿಸುವುದಕ್ಕಾಗಿ (ಅಂದರೆ ಯುದ್ಧ ಮಾಡತಕ್ಕ ಪ್ರತಿಭಟರನ್ನು ತಿರಸ್ಕರಿಸುವುದಕ್ಕಾಗಿ) ಉತ್ತಸ್ಥೌ=ಎದ್ದು ನಿತ್ತನೋ, ಆಗ ಶಫಚ್ಯುತಃ = (ಶತದ್ಯು ರಾಜನ ಕುದುರೆಗಳ) ಗೊರಸುಗಳಿಂದ ಮೇಲಕ್ಕೆ ಬಂದ, ರೇಣುಃ = ಧೂಳಿಯು, ದ್ಯಾಂ= ಅಂತರಿಕ್ಷ ಲೋಕವನ್ನು, ಉತ್ ನಕ್ಷತ = (ಣಹ ಬಂಧನೇ) ಅಥವಾ ತೃಕ್ಷಸ್ತೃಕ್ಷ ನಕ್ಷ ಗತೌ) ಮೇಲಕ್ಕೆ ಹೋಯ್ತು. (ಅಧ್ಯಾತ್ಮರೂಪವಾದ ಅರ್ಥವು) ಇಂದ್ರ = ಶ್ರೀ ಪರಮಾತ್ಮನೇ, ಕುತ್ಸಂ=(ಕುತ್=ಕುತ್ಸಿತಾರ್ಥವಾದ ನಿಪಾತವು ಸ್ವಗತೌ. ಭಕ್ತರ ಧರ್ಮವನ್ನು (ನೀನು) ಅವಃ =ರಕ್ಷಿಸಿರುತ್ತಿ. (ನಿನ್ನ ವಿಷಯಕವಾದಜ್ಞಾನವು) ಯಸ್ಮಿನ್ =ಯಾವ ಧರ್ಮದ ಅಧೀನವೋ, (ಜ್ಞಾನವು ಕರ್ಮದಿಂದ ಹುಟ್ಟತಕ್ಕದಾದುದರಿಂದ ಕರ್ಮದ (ಧರ್ಮದ) ಅಧೀನವೇ) (ಅಂತಹ ಪಾಪದಿಂದ ಕೂಡಿಕೊಂಡು ಯುದ್ಧ ಮಾಡುವ) ದಶದ್ಯುಂ = (ವೃಷಭಃ ಪುಂಗವೇ ವೃಷೇ ಎಂಬ ವಿಶ್ವಕೋಶದಿಂದ ವೃಷಭ ಶಬ್ದವು ಶ್ರೇಷ್ಠಾರ್ಥಕವಾಗಿದೆ ೪ ವಿಧ ಪುರುಷಾರ್ಥಗಳಲ್ಲಿ ಧರ್ಮವು ಪ್ರಾಥಮಿಕವಾಗಿ ಶ್ರೇಷ್ಠವಾಗಿದೆ. ಮತ್ತು ವೃಷಃಸ್ಯಾದ್ವಾ ಸವೇ ಧರ್ಮೇ ಎಂಬ ವಿಶ್ವಕೋಶದಿಂದ ಧರ್ಮ ನಾಮವು) ಅದೃಷ್ಟ ರೂಪವಾದ ಧರ್ಮವನ್ನು, ಪ್ರ ಅವಃ = ಚೆನ್ನಾಗಿ ರಕ್ಷಿಸಿರಿ. (ಪ್ರವೃತ್ತ ನಿವೃತ್ತ ಭೇದದಿಂದ ಧರ್ಮವು ೨ ವಿಧವು, ಪ್ರವೃತ್ತ ಧರ್ಮದಿಂದ ಸ್ವರ್ಗವು. ನಿವೃತ್ತ ಧರ್ಮದಿಂದ ಮೋಕ್ಷವು ಏವಂಚ ಪ್ರವೃತ್ತಿ ರೂಪವಾದ ಅಲ್ಪ ಧರ್ಮವು, ಸ್ವರ್ಗ ಮಾತ್ರ. ಸಾಧನವು. ನಿವೃತ್ತಿ ರೂಪ ಸಾಕ್ಷಾದ್ಧರ್ಮವು ಪರಂಪರಯಾಮೋಕ್ಷ ಸಾಧನವು) ಎಂಬ ಅಭಿಪ್ರಾಯದಿದ ಧರ್ಮ ಸ್ವರೂಪವನ್ನು ವಿವರಿಸುತ್ತಾರೆ. (ಹೇಗೆ ಧೂಲಿಯು ಗೊರಸಿನಿಂದ ಮೇಲಕ್ಕೆ ಹೋಗುತ್ತದೋ ಹಾಗೆಯೇ ಮಹಾ ಫಲವುಳ್ಳ ನಿವೃತ್ತ ಧರ್ಮದಿಂದ ಚ್ಯುತವಾದ ಅಲ್ಪ ಫಲವುಳ್ಳ ಪ್ರವೃತ್ತ ಧರ್ಮವು ನಿವೃತ್ತ ಧರ್ಮ ಜಾತೀಯವಾದುದು ರೇಣುಃ ಎನಿಸುತ್ತದೆ = ಶಫಚ್ಯುತ ಇವ ರೇಣುಃ = ಅಲ್ಪ ಅಸ್ಥಿರ ಫಲವುಳ್ಳದ್ದಾದುದರಿಂದ ಗೊರಸಿನಿಂದ ಮೇಲೆ ಹೋದ ಧೂಲಿಯಂತೆ ಇರುವ ಪ್ರವೃತ್ತ ಧರ್ಮವು, ದ್ಯಾಂ =ಸ್ವರ್ಗವನ್ನು, ಉತ್ ನಕ್ಷತ = ಮೇಲಕ್ಕೆ ಹೋಯಿತು. ಶ್ವೈತ್ರೇಯ್ಯಾ =ವೇದ ಪ್ರತಿಪಾದ್ಯವಾದ ನಿವೃತ್ತರೂಪವಾದ ಮುಖ್ಯ ಧರ್ಮವಾದರೂ, ನೃಷಾಹ್ಯಾಯ = ಜ್ಞಾನಿಗಳಿಗೆ ಸಾಹಾಯ್ಯಕ್ಕಾಗಿ, ಉತ್ತಸ್ಥೌ = ಆಗುವುದು. ||೧೪||

**ಭಾ ||(1) ಕುತ್ಸಂ ದಶದ್ಯುಂಚ ಮುನಿಂ ನೃಪಂ ಚ ಯಸ್ಮಿಂಸ್ಥಿತಃ ಸ್ವಾತ್ಮರೂಪಂ ಸುಭಕ್ತ್ಯಾ | ಆದರ್ಶಯಸ್ತೋಷಿತೋ (2) ಯಃಸ್ವತಂತ್ರಶ್ಚಾಕನ್ನುಕ್ತಃ ಕರ್ಮ ಯತಃ ಸ್ವತಂತ್ರೇ | (3) ವೃಷರೂಪಸ್ಯಾಸ್ಯ ನೃಪಸ್ಯ ಯುದ್ಧ್ಯತಃ ತಫಚ್ಯುತೋ ರೇಣುರುನ್ನಕ್ಷತ ಧ್ಯಾಂ || (4) ಶ್ವೇತಾ ವಾಣೀ ವಾಯುಭಾರ್ಯಾ ಸುತೋಽಸ್ಯಾಃಶ್ವೈತ್ರೇಯೋಽಯಂ ಯುದ್ಧ್ಯತೋ ಹ್ಯುದಸ್ಥಾತ್ || (5) ವೃಷಃ ಶ್ವೈತ್ರೇಯೋ ಧರ್ಮ ಏವಾಥ ಕುತ್ಸನಾಮಾಽಧ್ಯಾತ್ಮೇ ಕುತ್ಸಿತೋತ್ಸಾರಣಾತ್ಸ್ಯಾತ್ || (9) ಧರ್ಮರೇಣಃ ಸ್ವರ್ಗ ಮಾತ್ರಾ ಭಿಗಾಮೀ ಸಾಕ್ಷಾದ್ಧರ್ಮೋ ಮೋಕ್ಷಫಲೋಪಗಃ ಸ್ಯಾತ್ ||೧೪||**

ಅ|| ಕುತ್ಸನನ್ನು ಋಷಿಯನ್ನಾಗಿಯೂ ದಶದ್ಯು ಎಂಬವನನ್ನು ರಾಜನನ್ನಾಗಿಯೂ ಹೀಗೆ ಕ್ರಮದಿಂದ ಪೇಳುತ್ತಾರೆ. ನೀನು ಯಾವ ಕುತ್ಸನಲ್ಲಿ ದರ್ಶನ ವಿಷಯವಾಗಿರುತ್ತೀಯೋ ಇಂದ್ರನೆನಿಸಿದ ಶ್ರೀ ಹರಿಯು ಸರ್ವತ್ರ ಇದ್ದ ಪ್ರಯುಕ್ತ ಯಸ್ಮಿನ್ ಎನ್ನುವುದು ವ್ಯರ್ಥವೆಂದರೆ ಯಾವ ಕುತ್ಸ ಋಷಿಯ ಪರಮಭಕ್ತಿಯಿಂದ ಸಂತೋಷಗೊಂಡ ನೀನು ನಿನ್ನ ರೂಪವನ್ನೇ ತೋರಿಸಿರುತ್ತೀಯೋ (2) ಚಾಕನ್ ಎಂಬುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಯಾರು ಸರ್ವಸ್ವತಂತ್ರನೋ

ಆತನು ಚಾಕನ್ ಎಂದು ಹೇಳಲ್ಪಡುತ್ತಾನೆ. (ಹೇಗೆಂದರೆ) ಯಾವ ಕಾರಣದಿಂದ ಸ್ವತಂತ್ರನಾದವನಲ್ಲಿ ಕ್ರಿಯೆಯು ಇರುವುದು ಅಂದರೆ ಶತಂತ್ರವಾದ ಕೃಜ್ಞಧಾತುವಿಗೆ ಚಾಕನ್ ಎಂದು ಛಂದಸ್ಸಿನಲ್ಲಿ ರೂಪವು. ಕುರ್ವನ್ ಎನ್ನುವುದರಿಂದ ಕ್ರಿಯಾಶ್ರಯನಾದವನು ಹೇಳಲ್ಪಡುತ್ತಾನೆ. ಕರ್ಮಾಪರ ಪರ್ಯಾಯವಾದ ಕ್ರಿಯೆಯು ಕರ್ತೃವಿನಲ್ಲಿ ಇರುವುದು. ಸ್ವತಂತ್ರಃ ಕರ್ತಾ ಎಂಬ ಸೂತ್ರ ವ್ಯಾಖ್ಯಾನವು ಯುಕ್ತವೇ. (ಏವಂಚ ಎಲೋ ಶ್ರೀ ಹರಿಯೇ ಸ್ವತಂತ್ರನಾದ ನೀನು ಯಾವ ಕುತ್ಸ ಋಷಿಯಲ್ಲಿ ಇದ್ದಿಯೋ, ಅಂತಹ ಕುತ್ಸನೆಂಬ ಮುನಿಯನ್ನು ರಕ್ಷಿಸಿರುತ್ತಿ) (3) ಯುದ್ಧ ಮಾಡತಕ್ಕ ವೃಷರೂಪನಾದ ದಶದ್ಯು ಎಂಬ ರಾಜನನ್ನು ಚೆನ್ನಾಗಿ ರಕ್ಷಿಸಿರುತ್ತಿ. ಆತನ ಯುದ್ಧವನ್ನೇ ವಿವರಿಸುತ್ತಾರೆ.) ವೃಷರೂಪನಾದ ಈ ದಶದ್ಯುರಾಜನು ಯುದ್ಧ ಮಾಡುತ್ತಿರುವಾಗ (ರಾಜನ ಕುದುರೆಗಳ) ಗೊರಸುಗಳಿಂದ ಎದ್ದು ಮೇಲಕ್ಕೆ ಹೋದ ಧೂಲಿಯು ಅಂತರಿಕ್ಷ ಲೋಕವನ್ನು ಹೊಂದಿತು. (4) (ಯಾವಾಗ ಎಂದರೆ) ವಾಯುವಿನ ಹೆಂಡತಿಯಾದ ವಾಣಿಯು ಶ್ವರೂಪನಾದ ವಾಯುವಿನಿಂದ ಪತ್ನಿಯಾಗಿ ಹೊಂದಲ್ಪಟ್ಟವಳು. ಇವಳ ಮಗನಾದ ಶ್ವೈತ್ರೇಯನಾದ ಈ ದಶದ್ಯುರಾಜನು ಯುದ್ಧ ಮಾಡುತ್ತಿರುವ ಶತ್ರುಗಳನ್ನು (ತಿರಸ್ಕರಿಸುವುದಕ್ಕಾಗಿ) ಎದ್ದು ನಿಂತನೋ (ಆಗ ಧೂಲಿಯು ಅಂತರಿಕ್ಷಲೋಗದಲ್ಲಿ ವ್ಯಾಪಿಸಿತು (5) (ಆಧ್ಯಾತ್ಮರೂಪ ಅರ್ಥದಲ್ಲಿ) ಧರ್ಮವೇ ವೃಷಃ, ಎಂದೂ ಶ್ವೇತ್ರೇಯಃ ಎಂದೂ ಹೇಳಲ್ಪಡುತ್ತದೆ. (ಹಿಂದಿನಂತೆ ಅರ್ಥವು) ಕುತ್ಸಿತಗಳಾದ ಪಾಪಾದಿಗಳನ್ನು ನಾಶಗೊಳಿಸುವುದರಿಂದ ಕುತ್ಸ ಎಂದು ಹೆಸರುಳ್ಳದ್ದೂ ಆಗುವುದು. (ಧರ್ಮ, ಏವ ಎಂಬಲ್ಲಿದ್ದ ಏವ ಶಬ್ದವು ದಶದ್ಯು ಕುತ್ಸ ಶಬ್ದಗಳಿಗೆ ವಾಚ್ಯಾರ್ಥಗಳು ಬೇರೆ ಅಲ್ಲ, ಎರಡೂ ಧರ್ಮಕ್ಕೆ ವಿಶೇಷಣವು ಎಂಬುದನ್ನು ತೋರಿಸುವುದಕ್ಕಾಗಿ) (6) ಶಫಚ್ಯುತಃ ಇತ್ಯಾದಿಗಳ ತಾತ್ಪರ್ಯವನ್ನು ಹೇಳುತ್ತಾರೆ)ಪ್ರವೃತ್ತಿರೂಪವಾದ ಅಲ್ಪಧರ್ಮವು ಸ್ವರ್ಗಮಾತ್ರಕ್ಕೆ ಸಾಧನವು. ನಿವೃತ್ತಿ ರೂಪವಾದ ಸಾಕ್ಷ್ಯಾದ್ಧರ್ಮವು ಜ್ಞಾನದಿಂದ ಪೂರ್ವದಲ್ಲಿ ಮಾಡಲ್ಪಟ್ಟದ್ದೂ ಕರ್ಮಣಾ ಜ್ಞಾನಮಾತನೋತಿ ಜ್ಞಾನೇನಾಮೃತೀಭವ (ಎಂಬ ಶ್ರುತಿಯಿಂದ) ಜ್ಞಾನದ್ವಾರಾ ಮೋಕ್ಷಕ್ಕೆ ಸಾಧನವೂ (ಮೋಕ್ಷವು ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ಹೀಗೆ ಉಭಯ ಸ್ವರೂಪವಾಗಿರುವುದರಿಂದ ಅಪರೋಕ್ಷ ಜ್ಞಾನ ಬಂದ ಮೇಲೆ ಮಾಡಿದ ಧರ್ಮವಾದರೂ ಮೋಕ್ಷದಲ್ಲಿಯೇ ಅಂತರ್ಭೂತಗಳಾದ ಆನಂದಾದಿಗಳ ವೃದ್ಧಿಗೆ ಸಾಧನವು. (ತಥಾಚಯೋಜನಾವನ್ನು ಹಿಂದಿನಂತೆ ಇಟ್ಟುಕೊಳ್ಳಬೇಕು.) ||೧೪||

ಋ || (೩೯೮) ಆವಃ ಶಮಂ ವೃಷಭಂ ತುಗ್ರ್ಯಾಸು ಕ್ಷೇತ್ರಜೇಷೇ ಮಘವಞ್ಛ್ವಿತ್ರ್ಯಂ ಗಾಂ |

ಜೋಕ್ಚಿದತ್ರ ತಸ್ಥಿವಾಂಸೋ ಅಕ್ರಞ್ಛತ್ರೂಯತಾ ಮಧರಾ ವೇದನಾಕಃ ||೧೫||೩||೩೩||

ಅ || ಮಘವನ್ = ಎಲೋ ಸರ್ವೇಶ್ವರನೇ, ಶಮಂ = (ಕ್ರಿಯಾ ಅದೃಷ್ಟಾತ್ಮಕವಾದುದು ಮಾತ್ರವಲ್ಲ. ಮತ್ತೆ ಭಕ್ತರ ಶಮಾತ್ಮಕವಾದುದೂ ಆದ, ವೃಷಭಃ =ಧರ್ಮವನ್ನೇ, ತ್ವಂ =ನೀನು, ಅವಃ =ರಕ್ಷಿಸಿರುತ್ತಿ. (ಭಕ್ತರದ್ದು ಮಾತ್ರವಲ್ಲ ಮತ್ತೆ) ತುಗ್ರ್ಯಾಸು =ಭಕ್ತರ ಸಂತತಿಗಳಲ್ಲಿಯೂ, ಕೂಡ ವೃಷಭಂ =ಧರ್ಮವನ್ನು ಆವಃ =ರಕ್ಷಿಸುತ್ತಿರುತ್ತಿ. ತ್ವಂ =ನೀನು, (ಅದಾವ) ಶ್ವಿತ್ರ್ಯಂ=ಶ್ವಿತ್ರ್ಯ ಎಂದು ಹೆಸರುಳ್ಳ, ವಾಣಿಯ ಮಗನಾದ (ಅಂದರೆ ವೇದಬೋಧ್ಯವಾದ) ಗಾಂ =ಧರ್ಮವನ್ನು (ಯಾವ ಕಾರಣದಿಂದ ರಕ್ಷಿಸುತ್ತಿರುತ್ತಿಯೋ ಅದು) ಕ್ಷೇತ್ರ ಜೇಷೇ = (ಕ್ಷಿಯಂತಿ ಅತ್ರ ಕ್ಷೇತ್ರಂ, ಮುಕ್ತ್ಯಾವಸ್ಥೆಯು ಕ್ಷಿಕ್ಷಯೇ =ಅಥವಾ ಕ್ಷಿನಿವಾಸಗತ್ಯೋಃ ಪ್ರಜೆಗಳು ಆವಾಸ ಮಾಡುತ್ತಾರೆ. ಜೆ ಜಯೇ. ಜಯಃ =ಕೇವಲ ಪ್ರಾಪ್ತಿಯು. ತಿರಸ್ಕಾರವಲ್ಲ)

ಇಲ್ಲಿ ಮುಕ್ತಿರೂಪವಾದ ಕ್ಷೇತ್ರದ ವಿಜಯಕ್ಕಾಗಿಯೇ, (ಮುಕ್ತಿ ಪ್ರಾಪ್ತಿಗಾಗಿಯೇ, ಕ್ಷುದ್ರಗಳಾದ ವಿಷಯಗಳ ಪ್ರಾಪ್ತಿಗಾಗಿ ಅಲ್ಲ.) ಅಂದರೆ ಸಸ್ಯಾದ್ಯುತ್ಪತ್ತಿ ಸ್ಥಾನ ರೂಪಗಳಾದ ಕ್ಷೇತ್ರಗಳ ಪ್ರಾಪ್ತಿಯು ಲೌಕಿಕ ಪ್ರಭುಗಳ ದರ್ಶನಾದಿಗಳಿಂದಲೇ ಸಾಧ್ಯವಾಗಿರುವುದರಿಂದ ಅವುಗಳಿಗೆ ಈಶ್ವರ ಪ್ರಾರ್ಥನೆಯು ಅವಶ್ಯಕವಲ್ಲ) ಅತ್ರ =ಇಂತಹ ನಿನ್ನಲ್ಲಿಯೇ =ಯಾವ ಪುರುಷರು, ತಸ್ಥಿವಾಂಸಃ =ಜ್ಞಾನದಲ್ಲಿ ಆಸಕ್ತರಾಗಿ ಇರುತ್ತಾರೋ ತೇ ಚಿತ್ =ಅವರೂ ಕೂಡ ಜ್ಯೋಕ್ ಅಕ್ರನ್ = (ದ್ಯುತದೀಪ್ತೌ, ಕೃಇಕರಣೇ) ತನ್ನ ರೂಪವನ್ನು ಮೋಕ್ಷಪ್ರಾಪ್ತಿಯಿಂದ ಅತ್ಯಂತದ ಪ್ರಕಾಶ ವಿಶಿಷ್ಟವಾಗಿ ಮಾಡಿದರು. (ಅಂದರೆ ಯಾರು ನಿನ್ನನ್ನು ಯಥಾರ್ಥವಾಗಿ ತಿಳಿಯುತ್ತಾರೋ.) ಅಂತಹವರು ಮುಕ್ತರಾಗಿ ಪ್ರಕಾಶ ಸ್ವರೂಪವುಳ್ಳವರಾಗಿರುತ್ತಾರೆ.) ಸರ್ವರೂ ಹೀಗೆ ಆಗುತ್ತಾರೋ ಎಂದರೆ ಅಲ್ಲವೆನ್ನುತ್ತಾರೆ. ಶತ್ರೂಯತಾಂ=ಶತ್ರುಗಳಂತೆ ಆಚರಿಸುವ ಅಯೋಗ್ಯರ, ಶ್ರೀ ಹರಿಗೆ ಸಾಕ್ಷಾತ್ತಾಗಿ ಶತ್ರುವೇ ಇಲ್ಲ. ಆದ ಕಾರಣ ಅಯೋಗ್ಯರಾದವರ ಎಂದರ್ಥವು) ವೇದನಾ = ಜ್ಞಾನವನ್ನು ಅಧರಾ = ಅಧರಗಳನ್ನಾಗಿಯೇ, (ಫಲ ದೆಶೆಯಿಂದ ಅಪಭ್ರಷ್ಟಗಳನ್ನಾಗಿಯೇ) ಅಕಃ = ಮಾಡಿರುತ್ತಿ. (ಇಂದ್ರ ಪಕ್ಷದಲ್ಲಿ ಆದರೂ) ದಶಪ್ಯ ರಾಜನೇ ವೃಷಭನು. ತಮಗುಣದಿಂದ ಕೂಡಿರುವ ಪ್ರಯುಕ್ತ ಶಮಃ ಎನಿಸುತ್ತಾನೆ. ಕ್ಷೇತ್ರಂ= ಭೂ ಮಂಡಲವು, ಬೇರೆ ಎಲ್ಲದಕ್ಕೂ ಹಿಂದಿನಂತೆ ಅರ್ಥವು. ||೪೫||

**ಭಾ || (1) ತಮಾತ್ಮಕಂ ವೃಷಭಂ ಧರ್ಮಮೇವಾಷ್ಯರಕ್ಷಸ್ತ್ವಂ ತುಗ್ರಿಯಾಸ್ವಪ್ಯದೀಶ || (2) ತುಗ್ರ್ಯಾಖ್ಯಾ ಸ್ಯಾತ್ಸಂತತಿರ್ದೀರ್ಘಕಾಲಾ || (3) ಮುಕ್ತಿಕ್ಷೇತ್ರ ವಿಜಯಾ ಯೈವ ಧರ್ಮಂ । ಶ್ವೇತಾಸುರಂ (4) ರಮಣಾದ್ರೇಫ ಉಕ್ತಸ್ತಮರಕ್ಷಸ್ತ್ವಂ (5) ತ್ವಯಿ ಯೇ ತಸ್ಥಿವಾಂಸಃ। ಜ್ಯೋತಿಶ್ಚಕ್ರುಃ ನಿಜರೂಪಂ ವಿಮುಕ್ತ್ಯಾ (6) ಜ್ಞಾನಾನ್ಯರೀಣಾಮಧರಾಣಿ ಚಾಕರೋಃ ||೧೫||೩||೧||**

ಅ || (1) ಸರ್ವೇಶ್ವರನೇ ಭಕ್ತರ ಜ್ಞಾನಾತ್ಮಕವಾದೂದು ಶ್ರೇಷ್ಠವಾದ ಧರ್ಮವನ್ನೇ ನೀನು ರಕ್ಷಿಸಿರುತ್ತಿ. (ಭಕ್ತರದ್ದು ಮಾತ್ರವಲ್ಲ, ಮತ್ತೆ) ತುಗ್ರ್ಯಾಗಲ್ಲಿಯೂ ಕೂಡ. (೨) (ತುಗ್ರ್ಯಾ ಎಂದರೆ) ತುಗ್ರ್ಯಾ ಎಂದು ಹೆಸರುಳ್ಳದ್ದು ಭಕ್ತರ ಸಂತತಿಯು (ಆದ ಕಾರಣ ಭಕ್ತರ ಸಂತತಿಗಳಲ್ಲಿಯೂ ಧರ್ಮವನ್ನು ರಕ್ಷಿಸಿರುತ್ತಿ.) (ಸಂತತಿಯು ತುಗ್ರ್ಯಾ ಎನಿಸುವುದು ಹೇಗೆ ? ಎಂದರೆ ದೀರ್ಘಕಾಲವುಳ್ಳದ್ದೂ (ಅನ್ನ ಆಕಾಶವುಳ್ಳದ್ದೂ. (ಅನ್ನ ಆಕಾಶ ಯಜ್ಞ ವರಿಷ್ಠೇಷು ತುಗ್ರ ಶಬ್ದಃ ಎಂದು ವೃತ್ತಿಕಾರರು ಹೇಳಿರುತ್ತಾರೆ. ಇಲ್ಲಿ ವರಿಷ್ಠ (ಶ್ರೇಷ್ಠ) ಎಂಬ ಅರ್ಥವು. ವರಿಷ್ಠ ಎಂಬುದಕ್ಕೆ ಕಾಲವು ವಿಶೇಷ್ಯವು. ತಥಾಚ ವರಿಷ್ಠಃ = ಶ್ರೇಷ್ಠವಾದ ಕಾಲವು ತುಗ್ರ್ಯ ಎನಿಸುತ್ತದೆ. ಅಥವಾ ಸಾಕ್ಷಾತ್ ದೀರ್ಘವಾದ ಕಾಲವು ತುಗ್ರಃ ಎನಿಸುತ್ತದೆ. ತತ್ರಭವಃ ಎಂಬ ಅರ್ಥದಲ್ಲಿ ತುಗ್ರೆ ಶಬ್ದದಿಂದ ಘನ್ ಪ್ರತ್ಯಯವು. ಮತ್ತು ಯನ್ ಪ್ರತ್ಯಯವು. ತುಗ್ರ್ಯಾ ಎಂದು ರೂಪವು, ಅಂತೂ ತುಗ್ರ್ಯಾ=ಶ್ರೇಷ್ಠವಾದ ದೀರ್ಘಕಾಲದಲ್ಲಿ ಹುಟ್ಟಿದ್ದು. ವಿಶೇಷ್ಯವು ಯಾವುದೆಂದು ಆಕಾಂಕ್ಷೆ ಬಂದರೆ ಸ್ತ್ರೀಲಿಂಗ ಪ್ರಯೋಗವಿದ್ದುದರಿಂದ ಯೋಗ್ಯತಯಾ ಸಂತತಿಯು ಎಂದು ಲಭಿಸುತ್ತದೆ.) (3) ಅಂತಹ ವೇದಬೋಧ್ಯವಾದ ಧರ್ಮವನ್ನು ಯಾವ ಕಾರಣದಿಂದ ರಕ್ಷಿಸುತ್ತಿಯೋ, ಅದು ಮುಕ್ತ್ಯವಸ್ಥಾರೂಪಕ್ಷೇತ್ರವನ್ನು ಹೊಂದುವುದಕ್ಕಾಗಿಯೇ (ಸಸ್ಯಾದ್ಯುತ್ಪತ್ತಿ ಸ್ಥಾನರೂಪ ಕ್ಷೇತ್ರಗಳ ಪ್ರಾಪ್ತಿಗಾಗಿ ಅಲ್ಲ) (೪) (ಶ್ವಿತ್ರ್ಯಂ ಎಂಬುದು ಹೇಗೆಂದರೆ) (ಶ್ವ=ವಾಯುವು ಶುನಾ ಇತಾ ಶ್ವಿತಾ =ವಾಯುವಿನಿಂದ ಪತ್ನಿಯಾಗಿ ಸ್ವೀಕರಿಸಲ್ಪಟ್ಟ ಏಳು ವಾಣಿಯು) ಕ್ರೀಡಿಸುವುದರಿಂದ ಆಕಾರ ಶಿರಸ್ಕವಾದ ರೇಫವು ಹೇಳಲ್ಪಟ್ಟಿದೆ. ರಮಣಾತ್ ರಾ. (ಶ್ವಿತಾ ಚ ಸಾ ರಾ ಚ ಶ್ವಿತ್ರಾ. ಅಪತ್ಯ ಎಂಬ ಅರ್ಥದಲ್ಲಿ ಟ್ಯಪ್ರತ್ಯಯವು. ತಥಾಚ ಶ್ವಿತ್ರ್ಯಂ ಎಂದಾಗುತ್ತದೆ.) ಅಂತಹ ಧರ್ಮವನ್ನು ರಕ್ಷಿಸಿರುತ್ತಿ. (5) ನಿನ್ನಲ್ಲಿ ಯಾವ ಪುರುಷರು ಜ್ಞಾನದಲ್ಲಿ ಅಸಕ್ತರಾಗಿ ಇರುತ್ತಾರೋ

ಅಂತಹವರೂ ಕೂಡ ತಮ್ಮ ರೂಪವನ್ನು ಪ್ರಕಾಶ ವಿಶಿಷ್ಟವನ್ನಾಗಿ ಮಾಡಿದರು. (ಅಂದರೆ ವಿಮುಕ್ತಿಗಾಗಿ ಯಾರು ನಿನ್ನನ್ನು ಯಥಾರ್ಥವಾಗಿ ತಿಳಿಯುತ್ತಾರೋ, ಅವರು ಮುಕ್ತರಾಗಿ ಪ್ರಕಾಶ ಸ್ವರೂಪರಾಗಿ ಇರುತ್ತಾರೆ.) (6) (ಸರ್ವರೂ ಹೀಗೆಯೇ ಇರುತ್ತಾರೋ ಎಂದರೆ) ಅಯೋಗ್ಯರಾದವರ ಜ್ಞಾನಗಳನ್ನು ಫಲದಿಂದ ಅಪಭ್ರಷ್ಟಗಳನ್ನಾಗಿಯೇ (ಫಲರಹಿತಗಳನ್ನಾಗಿಯೇ) ಮಾಡಿರುತ್ತಿ. ||೧೫||೩||೧||

ಅವ || ತ್ರಿಶ್ಚಿನ್ನೋ ಎಂಬ ೩೪ನೇ ಸೂಕ್ತಕ್ಕೆ ೧೨ ಋಕ್ಕುಗಳು. ೨ ವರ್ಗಗಳು. ಅಶ್ವಿನೀ ದೇವತೆಗಳು ದೇವತೆಯು. ಅದರಲ್ಲಿ ೯, ೧೨ ಋಕ್ಕುಗಳು ತ್ರಿಷ್ಟುಬ್ ಛಂದಸ್ಸುಗಳು. ಇತರಗಳು ಜಗತೀ ಛಂದಸ್ಸುಗಳು.

ಋ || (೩೯೯) ತ್ರಿಶ್ಚಿನ್ನೋ ಅದ್ಯಾ ಭವತಂ ನವೇದಸಾ ವಿಭುರ್ವಾಂ ಯಾಮ ಉತರಾತಿರಶ್ವಿನಾ |

ಯುವೋರ್ಹಿ ಯಂತ್ರಂ ಹಿಮ್ಯೇವ ವಾಸಸೋಽಭ್ಯಾಯಂಸೇನ್ಯಾ ಭವತಂ ಮನೀಷಿಭಿಃ ||೧||

ಅ || ನ ವೇದಸಾ = (ನ ವಿದ್ಯತೇ ಅನ್ಯಃವೇದಾಃ ಯಾಭ್ಯಾ=ಯಾರಿಂದ ಇನ್ನೊಬ್ಬನು ತಿಳಿಯುವವನ ಇಲ್ಲವೋ) (ನಿಃಇಪೂರ್ವಕಾತ್ ವಿದಜ್ಞಾನೇ ಅಸುನ್ ಪ್ರತ್ಯಯವು. ನಭ್ರಾಣ್‌ನ ಪಾನ್‌ನವೇದಾಃ ಇತ್ಯಾದಿ ಸೂತ್ರದಿಂದ ನ ಲೋಪವಿಲ್ಲ) ಸರ್ವರಿಂದಲೂ ಅಧಿಕ ಜ್ಞಾನವುಳ್ಳ, ಅಶ್ವಿನಾ = ಅಶ್ವಿನೀ ದೇವತೆಗಳಿರಾ, ಅದ = ಇಂದು ಆರಂಭಿಸಿಯೇ ತ್ರಿಶ್ಚಿತ್ = ಮೂರು ಕಾಲವೂ (ಹಗಲು ರಾತ್ರಿ ಸಂಧ್ಯಾಕಾಲ ಹೀಗೆ ಮೂರು ಕಾಲಗಳಲ್ಲಿಯೂ) ಸರ್ವ ಕಾಲಗಳಲ್ಲಿಯೂ) (ನೀವಿಬ್ಬರೂ) ನಃ = ನಮಗೇನೇ ಭವತಂ = ಸರ್ವರಿಗಿಂತಲೂ ನಮ್ಮಲ್ಲಿ ಕೃಪೆ ಮಾಡಿರಿ) (ನೀವಿಬ್ಬರು ಎಂತಹವರೆಂದರೆ) ವಾಂ = ಯಾವ ನಿಮ್ಮಿಬ್ಬರನ್ನೇ, ಯಾಮಃ = (ಯಾ ಪ್ರಾಪಣೇ ಕರಣೇ ಮನ್ ಪ್ರತ್ಯಯವು. ಯಾಂತ್ಯನೇನೇತಿ ಯಾಮಃ) ಮಾರ್ಗವು, ವಿಭುಃ = ವ್ಯಾಪಿಯು, (ಸಮಸ್ಯ ದೇಶಗಳಲ್ಲಿ ವಿಷ್ಣುವು ಸಂಚರಿಸುವುದರಿಂದ ಮಾರ್ಗವು ವ್ಯಾಪಿಸಿಕೊಂಡಿದೆ) ರಾಶಿಃ = (ರಾದಾನೇ ಭಾವಿಕ್ತಿನ್) ದಾನವೂ, ವಿಭು = ವ್ಯಾಪ್ತಿಯು. (ಅಂದರೆ ಭಕ್ತರಿಗೆ ಅಭೀಷ್ಟವನ್ನು ಕೊಡುವುದರಿಂದ ದಾನವೂ ವಿಭುವಾಗಿದೆ) ಯುವೋಃ = ನಿಮ್ಮಿಬ್ಬರ, ಯಂತ್ರಂ = (ಯತ್ರಿ ಸಂಕೋಚೇ, ಕರಣೇ ಅಚ್ ಪ್ರತ್ಯಹುವು) (ಯಮ್ಯತೇ ನಿಯಮ್ಯತೇ ಅವೇನ ಯಂತ್ರಂ) ನಿಯಮನವು, ವಾಸಸಃ =ವಸ್ತ್ರದ, ಹಿಮ್ಯೇದ = (ಹಿಗತೌ, ಮ್ಯಕ್ ಪ್ರತ್ಯಯವು) ತಂತುಗಳನ್ನು ಚೆಲ್ಲುವ ತುರಿಯಂತೆ ಅಂದರೆ-ಕುರಿಯು ಹೇಗೆ ಅತಿ ಪ್ರಯತ್ನವಿಲ್ಲದೇನೇ ವಸ್ತ್ರವನ್ನುಂಟು ಮಾಡುತ್ತದೋ, ಹಾಗೆಯೇ ಪ್ರಯತ್ನವಿಲ್ಲದೇನೇ ಸಮಸ್ತ ಜನರ ಬುದ್ಧಿಗಳಿಗೆ ಪ್ರೇರಕರು.) (ನೀವಿಬ್ಬರು) = ಮನೀಷಿಭಿಃ = ಜ್ಞಾನಿಗಳಾದ ದೇವತೆಗಳಿಂದ ಕೂಡಿಯೇ ಅಭ್ಯಾಯಂಸೇನ್ಯಾಃ = (ಅಭಿ ಇತ್ಯುವಸ್ಯಷ್ಟಾತ್ ಅಯಷಯ ಗತೌ ಘಃಇ) ನಮ್ಮನ್ನು ಕುರಿತು ಬರಲಿಕ್ಕೆ ನಿಮ್ಮ ಸೇನೆಯಿಂದ ಯುಕ್ತರಾಗಿರುವಿರಿ. ಹಿ = ಪ್ರಸಿದ್ಧವು. ||೧||

ಭಾ || (1) ಅರಭ್ಯ ಚಾದ್ಯೈವ ದಿವಾನಿಶಾಯಾಂ ತದಂತರೇ ಚತ್ರಿರಪಿ ಸ್ಮ ಸರ್ವದಾ || ಅಸ್ಮಾಕಮೇವ ಭವತಂ ಯತೋಽನ್ಯೋ ವೇತ್ತಾ ನ ತಾವಿತ್ಯುದಿತೌ ನವೇದಸೌ || (2) ಗೌಣಂ ತದನ ತ್ರ ಹರೌ ತು ಮುಖ್ಯತೋ ವ್ಯಾಪೀ ತು ಮಾರ್ಗೋ ಯುವಯೋಸ್ತು ದಾನಂ || ಅಶೇಷದೇಶೇಷು ಗತೇರಶೇಷದಾತ್ವತ್ವತಶ್ಚೈವ (3) ಯುವೋರ್ಹಿ ಯಂತ್ರಂ | ವಾಸೋಯಂತ್ರಂ ಯದ್ವದಯತ್ನತಃ ಸ್ಯಾದ್ವಿಮ್ಯಾ ಹಿನೋತೇ ಸ್ತಂತುವಿಕ್ಷೇಪಣೇ ಹಿ || (4) ತದ್ವದ್ಬುದ್ಧಿ ಪ್ರೇರಕಾಽಯತ್ನತೋ

**ವಾಮಾಯಾರ್ಥ ಸೇನೌ ಭವತಂ ಮನೀಷಿಭಿಃ । ಸಹೈವ ದೇವೈಃ** ||೧||

ಅ ॥ (1) ಸರ್ವರಿಗಿಂತಲೂ ಅಧಿಕ ಜ್ಞಾನವುಳ್ಳ ಅಶ್ವಿನೀ ದೇವತೆಗಳಿರಾ ಇಂದು ಆರಂಭಿಸಿಕೊಂಡೇ, ಸಂಕುಚಿತವಾಗಿ ಪ್ರಾರ್ಥಿಸಲಿಕ್ಕೆ ಕಾರಣವಿಲ್ಲ ಎಂಬ ಅಭಿಪ್ರಾಯದಿಂದ ಸ್ಮ ಶಬ್ದವು) ಹಗಲು ರಾತ್ರಿ ಅವುಗಳ ಮಧ್ಯವಾದ ಸಂಧ್ಯಾಕಾಲ ಹೀಗೆ ಮೂರು ಕಾಲಗಳಲ್ಲಿಯೂ ಸರ್ವದಾ ನೀವಿಬ್ಬರೂ (ಸರ್ವ ಪ್ರಕಾರದಿಂದಲೂ ನಮ್ಮಲ್ಲಿ ಕೃಪೆ ಮಾಡಿರಿ. ಯಾವ ಕಾರಣದಿಂದ ಅವರಿಬ್ಬರಿಗಿಂತ ಇನ್ನೊಬ್ಬನು ತಿಳಿಯುವವನು ಇಲ್ಲವೋ ಆ ಕಾರಣದಿಂದ ಅವರಿಬ್ಬರು ನವೇದ ಸೌ ಎಂದು ಹೇಳಲ್ಪಡುತ್ತಾರೆ. ಸರ್ವರಿಗಿಂತಲೂ ಅಧಿಕ ಜ್ಞಾನವುಳ್ಳವರೆಂದು ಅರ್ಥವು (2) ಈ ವ್ಯಾಖ್ಯಾನವು ಇತರ ದೇವತೆಗಳಲ್ಲಿಯೂ ಶ್ರೀ ಹರಿಯಲ್ಲಿಯೂ ಸಮಾನವೋ ಎಂದರೆ) ವಿಷ್ಣುವಿನಿಂದ ಇತರರಾದ ದೇವತೆಗಳಲ್ಲಿ ಅಮುಖ್ಯವು. ಶ್ರೀ ಹರಿಯಲ್ಲಿ ಆದರೂ ಮುಖ್ಯವಾಗಿಯೇ ಇರುವುದು. ಯಾವ ನಿಮ್ಮಿಬ್ಬರದೂ ಮಾರ್ಗವು ವಿಭುವಾಗಿದೆಯೋ, ದಾನವೂ ಕೂಡ ವಿಭುವಾಗಿದೆಯೋ, (ಮಾರ್ಗದಾನಗಳಿಗೆ ವಿಭುತ್ವವು ಹೇಗೆ ಎಂದರೆ) ಶ್ರೀ ವಿಷ್ಣುವು ಸಮಸ್ತ ದೇಶಗಳಲ್ಲಿಯೆಲ್ಲಾ ಸಂಚರಿಸುವುದರಿಂದ ಮಾರ್ಗವು ವಿಭುವಾಗಿಯದೆ. ವ್ಯಾಪಿಸಿಕೊಂಡಿದೆ. ಭಕ್ತರಿಗೆ ಸರ್ವಾಭೀಷ್ಟವನ್ನು ಕೊಡುವುದರಿಂದಲೇ ದಾನವೂ ವಿಭುವಾಗಿಯದೆ. (3) ಮತ್ತು ನಿಮ್ಮಿಬ್ಬರ (ಯಂತ್ರ್ಯತೇ ನಿಯಮ್ಯಂತೇ ಅನೇನೇತಿ ಯಂತ್ರಂ) ನಿಯಮನ ಸಾಧನವು ವಸ್ತ್ರದ ಹಿಮ್ಯೆಯಂತೆ. ಅಂದರೆ ವಸ್ತ್ರಯಂತ್ರವಾದ ಹಿಮ್ಯಾ ಎಂದು ಹೆಸರುಳ್ಳ ತುರಿಯು ಹೇಗೆ ಮಹಾ ಪ್ರಯತ್ನವಿಲ್ಲದೇನೇ ವಸ್ತ್ರವನ್ನು ಹುಟ್ಟಿಸುತ್ತದೋ, ಹಾಗೆಯೇ (ಹಿಮ್ಯಾ ಎಂದರೆ ಯಾವುದು ಎಂದರೆ) ತಂತವಃ ವಿಕ್ಷಿಪ್ಯಂತೇ ಅನಯಾ ಎಂಬ ವ್ಯುತ್ಪತ್ತಿಯಿಂದ ತಂತು ವಿಕ್ಷೇಪಣಿಯು ತುರಿಯು. (ತಂತುಗಳನ್ನು ಒಟ್ಟಿಗೆ ಕೂಡಿಸಿ ಬಟ್ಟೆ ಮಾಡಲಿಕ್ಕೆ ಸಾಧನವಾದುದು) ಹಿನೋತೇಃ ಹಿಮ್ಯಾ (ಹಿ ಗತೌ ಮ್ಯಕ್) (ತಂತುಗಳಲ್ಲಿ ಸಂಚಾರವಿದ್ದುದರಿಂದ ಹಿಮ್ಯಾ ಎನಿಸುತ್ತದೆ.) (4) ಹೇಗೆ ತುರಿಯು ಅತಿ ಪ್ರಯತ್ನವಿಲ್ಲದೇನೇ ವಸ್ತ್ರವನ್ನುಂಟುಮಾಡುತ್ತದೋ, ಹಾಗೆಯೇ ಪ್ರಯತ್ನವಿಲ್ಲದೇನೇ ಸರ್ವರ ಬುದ್ಧಿಗಳಿಗೆ ಪ್ರೇರಕರಾದ ನೀವು ಜ್ಞಾನಿಗಳಿಂದ ದೇವತೆಗಳಿಂದೊಡಗೂಡಿಯೇ ನಮ್ಮನ್ನು ಕುರಿತು ಬರಲಿಕ್ಕೆ ಸೇನೆಯಿಂದ ಕೂಡಿದವರು ಆಗುವಿರಿ. ||೧||

**ಋ ॥ (೪೦೦) ತ್ರಯಃ ಪವಯೋ ಮಧುವಾಹನೇ ರಥೇ ಸೋಮಸ್ಯ ವೇನಾ ಮನು ವಿಶ್ವ ಇದ್ವಿದುಃ ।**

**ತ್ರಯಃ ಸ್ಕಂಭಾಸಃ ಸ್ಕಬಿತಾಸ ಆರಭೇ ತ್ರಿರ್ನಕ್ತಂಯಾಥಸ್ತ್ರಿರ್ವಶ್ವಿನಾ ದಿವಾ** ||೨||

ಅ ॥ ಅಶ್ವಿನಾ = ಅಶ್ವಿನೀ ದೇವತೆಗಳಿರಾ, ಮಧುವಾಹನೇ ರಥೇ = (ವಹ ಪ್ರಾರಣೇ) (ನಿಮ್ಮದಾ) ಮಧು ಸೋಮಂ ಪ್ರತ್ಯೂಹ್ಯೇತೇ ಭವಂತೌ ಯೇನ) ನೀವಿಬ್ಬರು ಯಾವ ರಥದಿಂದ ಮಧು ಸೋಮವನ್ನು ಹೊರುವಿರೋ ಅಂತಹ ರಥದಲ್ಲಿ, ತ್ರಯಃ ಸ್ಕಂಭಾಸಃ ಸ್ಕಭಿತಾಸ ಅರಭೇ ತ್ರಿರ್ನಕ್ತಂಯಾಥಸ್ತ್ರಿರ್ವಶ್ವಿನಾ ದಿವಾ ||೨||

ಅ ॥ ಅಶ್ವಿನಾ = ಅಶ್ವಿನೀ ದೇವತೆಗಳಿರಾ, ಮಧುವಾಹನೇ ರಥೇ = (ವಹ ಪ್ರಾರಣೇ) (ನಿಮ್ಮದಾ) ಮಧು ಸೋಮಂ ಪ್ರತ್ಯೂಹ್ಯೇತೇ ಭವಂತೌ ಯೇನ) ನೀವಿಬ್ಬರು ಯಾವ ರಥದಿಂದ ಮಧು ಸೋಮವನ್ನು ಹೊರುವಿರೋ ಅಂತಹ

ರಥದಲ್ಲಿ, ತ್ರಯಃ ಪದಯಃ = ವಜ್ರ ಖಡ್ಗ ಶರ ರೂಪಗಳಾದ ಮೂರು ಆಯುಧಗಳು (ವಜ್ರದ ಸಾಹಸಚರ್ಯದಿಂದ ಖಡ್ಗ ತರಗಳನ್ನು ಪವಿ ಶಬ್ದದಿಂದ ತೆಗೆದುಕೊಂಡದ್ದು) ತ್ರಯಃ ಸ್ಕಂಭಾಸ್ತು: = ಕುಂತಾ ಪ್ರಾಸೇ ಚಂಡ ಭಾವಃ ಎಂಬ ವಿಶ್ವ ಕೋಶದಿಂದ ಪ್ರಾಸಾದಿಗಳಿಂದ ಕೂಡಿದ ಮೂರು ವೇಣುಗಳು ಸ್ತಂಭ ಎಂದು ಹೆಸರುಳ್ಳವುಗಳು. ಸ್ತಂಭ್ಯಂತೇ ಸ್ಕಭ್ಯಂತೇ ವಿರುದ್ಧ್ಯಂತೇ ಗರ್ತಾದೌ ಗರ್ತಾದಿಗಳಲ್ಲಿ ತಡೆಯಲ್ಪಡುತ್ತವೆ. ಹುಗಿಯಲ್ಪಡುತ್ತವೆ.) ಸ್ಕಭಿತಾಸಃ = ಸ್ಥಾಪಿತಗಳಾಗಿವೆ. ತೇ ವಿತ್ಕೇವಿತ್=ಅವುಗಳೆಲ್ಲವೂ ವಜ್ರಾದಿಗಳೆಲ್ಲವೂ (ಅಂದರೆ ಪವಿ ಮೊದಲಾದ ಶಬ್ದಗಳಿಂದ ಹೇಲಲ್ಪಟ್ಟ ವಜ್ರಾದಿಗಳಿಗೆ ನಿಯಾಮಕನಾದ ಚೇತನರು) ಸೋಮಸ್ಯ=ಸೋಮದ್ಯವೇವಾಂ = (ವೀ ಗತಿ ವ್ಯಾಪಿ, ಪ್ರಜನ ಕಾಂತ್ಯಸನ ಖುದನೇಷು) ಖಾದನ (ಪಾನ)ವನ್ನು ಅಥವಾ ಪಾನಕ್ರಿಯೆಯನ್ನು ಅಥವಾ ರಸವನ್ನು ಅನು ವಿದ್ಯುಃ = ತಿಳಿಯುತ್ತಾರೆ. (ಇಂತಹ ರಥದಿಂದ ಸೀವಿಬ್ಬರು) ಅರಭೇ = ಪ್ರಾಣಿಗಳ ಯಜ್ಞಾದಿ ಕರ್ಮಗಳನ್ನು ಆರಂಭಿಸುವುದಕ್ಕಾಗಿ (ಅಂದರೆ ಯಜ್ಞಾದಿ ಕರ್ಮಗಳನ್ನು ಮಾಡಿಸುವುದಕ್ಕಾಗಿ) ಅಥವಾ ಯಜ್ಞಾದಿ ಕರ್ಮಗಳನ್ನು ಮಾಡಿದವರಿಗೆ ಸ್ವರ್ಗ ಮೊದಲಾದ ಲೋಕಗಳು ಪ್ರಾಪ್ತಿಯಾಗುವುದರಿಂದ ಆರಂಭಿಸುವುದಕ್ಕಾಗಿ) ನಕ್ತಂ=ರಾತ್ರಿಯಲ್ಲಿ, ತ್ರಿಃ =ಮೂರಾವರ್ತಿ, ದಿವಾಚ=ಹಗಲು, ತ್ರಿಃ =ಮೂರಾವರ್ತಿ, ಅನುಯಾಥಃ = ಅನುಸರಿಸಿ ಬನ್ನಿರಿ. (ಬಹಿಷ್ಕ ವಿಷ್ಣುರೂಪ ವಿಷಯದಲ್ಲಿ ಆದರೂ) ಎಲೋ ಅಶ್ವಿನೀ ದೇವತೆಗಳಿರಾ ಮಧುವಾಹನೇ ರಥೆ = ನಿಮ್ಮದ್ದಾದ ಸುಖವನ್ನುಂಟು ಮಾಡತಕ್ಕ ವಾಹನರೂಪವಾದ ಅಧಿದೇವರಥದಲ್ಲಿ ತ್ರಯಃ ಪವಯಃ =ಚಕ್ರ ಗದಾ ಶರ ಎಂಬ ಮೂರು ಆಯುಧಗಳು, ತ್ರಯಃಸ್ತಂಬಾಸಃ = ೩ ಪ್ರಸಿದ್ಧ ವೇಣುಃ ಗಳು (ಬೇರೆ ಎಲ್ಲವೂ ಸಮವೇ) (ಆಧ್ಯಾತ್ಮ =ಶರೀರಾಂತರ್ಗತ ವಿಷ್ಣುವಿನಲ್ಲಿ) ಮಧುವಾಹನೇ =ಮೋಕ್ಷವನ್ನು ಹೊಂದಿಸಿಕೊಂಡುವ (ಅಂದರೆ ಮೋಕ್ಷ ಸಾಧನವಾದ) ರಥೇ=ಭಕ್ತರ ದೇಹಾಖ್ಯವಾದ ರಥದಲ್ಲಿ ತ್ರಯಃ ಪವಯಃ = ೩ ದೇವತೆಗಳು, ತ್ರಯಃ ಸ್ತಂಭಾಸಃ = ಪಂಚ ಪ್ರಾಣರಲ್ಲಿ ಪ್ರಧಾನರಾದ ೩ ಪ್ರಾಣರು, ಸೋಮಸ್ಯವೇನಾಂ = ಮನಸ್ಸಿನ ಗತಿಯನ್ನೂ (ಬೇರೆ ಎಲ್ಲವೂ ಸಮಾನವು) ॥೨॥

**ಭಾ ॥ (1) ಪವಯಶ್ಚಾಯುಧಾನಿ (2) ಸೋಮಸ್ಯ ಪಾನಂ ಚೇತನತ್ವಾದ್ವಿಮಸ್ತೇ ॥ (3) ವಜ್ರಖಡ್ಗಃ ಶರ ಇತ್ಯಾಯುಧಾನಿ (4) ತ್ರಿವೇಣವಃ ಸ್ತಂಭನಾಮಾನ ಏವ ॥ (5) ದಿವಾ ನಿಶಾಯಾಂ ತ್ರಿಸ್ತ್ರಿರೇವಾನುಯಾಥಃ ಕರ್ಮಾರಂಭಾರ್ಥಂ ಲೋಕ ಸಿದ್ಧ್ಯರ್ಥಮಂಜಃ । (6) ಚಕ್ರಂ ಗದಾ ಶರ ಇತ್ಯಾಯುಧಾನಿ (7) ವೇದಾಸ್ತ್ರಯೋ ವಾಸುದೇವಸ್ಯ ಚ ಸ್ಯುಃ । (8) ರಥಃ ಸ್ತ್ರಿಯೋ ಜ್ಞಾನಿನಾಂ ವಾ ಶರೀರಂ ಪ್ರಾಣಾದಯಃ ಸ್ತಂಭಸಾ ನ್ಯಸ್ಯ ಚಾಪಿ ॥೨॥**

ಅ ॥ (1) ಪವಿ ಶಬ್ದವು ಯದ್ಯಪಿ ವಜ್ರವಾ ಚಕವು, ಆದಾಗ್ಯೂ ಘಾತಕತ್ವ (ಸಂಹಾರ ಕತ್ವ) ಸಾ ದೃಶ್ಯದಿಂದ ಆಯುಧದಲ್ಲಿಯೇ ಪ್ರಯುಕ್ತವಾಗಿದೆ ಎನ್ನುತ್ತಾರೆ ಪ್ರಪಯಃ ಎಂದರೆ ಆಯುಧಗಳೇ (2) (ಆಯುಧ ಸ್ತಂಭಗಳು ಜಡವಾಗಿರುವುದರಿಂದ ಸೋಮ ಪಾನ ಜ್ಞಾನವು ಅವುಗಳಿಗೆ ಇಲ್ಲದಿರುವುದರಿಂದ ಸೋಮಸ್ಯ ವಾತಂ ಎನ್ನುವುದು ಆಯುಕ್ತವು ಎಂದರೆ) ಆ ಆಯುಧ ಸ್ತಂಭಗಳು ಚೇತನದಿಂದ ಅದಿಷ್ಟಿತಗಳಾಗಿರುವುದರಿಂದ ಸೋಮದ ಪಾನವನ್ನು ತಿಳಿದಿರುತ್ತವೆ. (ತಥಾಚ ಪವಿ ಸ್ಕಂದ ಶಬ್ದಗಳಿಗೆ ಲಕ್ಷಣಯಾ ಅವುಗಳಲ್ಲಿರತಕ್ಕ ಛೇತನರು ಎಂದರ್ಥವು) (3) (೩ ಹವಿಗಳು ಎಂದು ಹೇಳಿಯದೆ. ಅ ೩ ಆಯುಧಗಳು ಯಾವುವು ಎಂದರೆ) ವಜ್ರ ಖಡ್ಗ ಶರ ಎಂದು ೩ ಆಯುಧಗಳು. (4) ತ್ರಯಃ ಸ್ತಂಭಾಸಃ ಎಂದು ಹೇಳಿದೆ. ಅವುಗಳು ಯಾವುವು ಎಂದರೆ) ಕುಂತಾ ಪ್ರಾಸ ಚಂಡಭಾವ ಎಂಬ ೩ ವೇಣುಗಳೇ ಸ್ತಂಭ ಎಂದು ಹೆಸರುಗಳುಳ್ಳವುಗಳು. (5) (ಅರಭೇ ಇತ್ಯಾದಿಗಳನ್ನು ವ್ಯಾಖ್ಯಾನ ಮಾಡುತ್ತಾರೆ) (ಭಕಾರಂತ ಅರಬ್ ಶಬ್ದಾತ್

ತಾದರ್ಥ್ಯೇ ಚತುರ್ಥೀ) ಪ್ರಾಣಿಗಳಿಗೆ ಯಜ್ಞಾದಿ ಕರ್ಮಗಳ ಆರಂಭಕ್ಕಾಗಿ (ಕರ್ಮಗಳನ್ನು ಮಾಡಿಸುವುದಕ್ಕಾಗಿ) ಅಥವಾ ಚೆನ್ನಾಗಿ ಕರ್ಮಗಳನ್ನು ಮಾಡಿದ ಜನರಿಗೆ ಸ್ವರ್ಗ ಮೊದಲಾದ ಲೋಕಗಳ ಪ್ರಾಪ್ತಿಗಾಗಿ ರಾತ್ರಿಯಲ್ಲಿ ಮೂರಾವರ್ತಿ, ಹಗಲು, ಮೂರಾವರ್ತಿಯೇ ಬನ್ನಿರಿ. (6) ಬಹಿಷ್ಮ ವಿಷ್ಣುವಿನಲ್ಲಿ, ಅಂದರೆ ಅಶ್ವಿನೀ ದೇವತೆಗಳಲ್ಲಿ ಅಂತರ್ಗತವಾಗದಿರುವ ಮತ್ತು ಶರೀರದಲ್ಲಿ ಅಂತರ್ಗತವಾಗದಿರುವ ಪೃಥಕ್ ವಿಷ್ಣುರೂಪದಲ್ಲಿರುವ ಆಯುಧಗಳನ್ನು ಹೇಳುತ್ತಾರೆ.) ಚಕ್ರ ಗದಾಶತ ಎಂಬುವುದು ಆಯುಧಗಳು (7) (ಆಧ್ಯಾತ್ಮ =ಶರೀರಾಂತರ್ಗತ ವಿಷ್ಣುವಿನಲ್ಲಿ ಹೇಳುತ್ತಾರೆ.) ಚಕ್ರ ಗತಾಶತ ಎಂಬುವುದು ಆಯುಧಗಳು (7) (ಅಧ್ಯಾತ್ಮ =ಶರೀರಾಂತರ್ಗತ ವಿಷ್ಣುವಿನಲ್ಲಿ ಹೇಳುತ್ತಾರೆ.) ಶ್ರೀ ವಾಸುದೇವನಿಗೆ ೩ ವೇದಗಳೇ ೩ ಪವಿಗಳು ಆಗುವುವು. (8) ಬಹಿಃಮತ್ತೂ ಆಧ್ಯಾತ್ಮ ರಥವನ್ನೂ ಕ್ರಮವಾಗಿ ಹೇಳುತ್ತಾರೆ) ಜಹಿಷ್ಮವಾದುದು) ವೈಷ್ಣವ ರಥವು ಜ್ಞಾನಿಗಳ ಶರೀರವು. (ರಥಕ್ಕೆ ಆಧಾರಭೂತಗಳಾದ ೩ ಸ್ತಂಭಗಳು ಪ್ರಸಿದ್ಧಗಳು) (ಆಧ್ಯಾತ್ಮ = ಶರೀರಾಂತರ್ಗತ ವಿಷ್ಣು) ಅರ್ಥದಲ್ಲಿ ಹೇಳುತ್ತಾರೆ. ಪ್ರಾಣಾದಿಗಳು ದೇಹದ ಸ್ತಂಭಗಳು, ದೇಹಕ್ಕೆ ಸ್ಥಾಪಕಗಳು (ಇತರವಾದುದನ್ನೂ ಹೀಗೆಯೇ ವ್ಯಾಖ್ಯಾನ ಮಾಡಬೇಕೆಂದು ತಿಳಿಸುವುದಕ್ಕಾಗಿ ಅಪಿ ಪದವು)

ವಿ || (1) ಕೆಲವು ಧ್ಯಾನದಲ್ಲಿ ಉದಾನ ಸಮಾನರು ಪ್ರಾಣಾದಿಗಳಲ್ಲಿ ಹೊಂದುವುದರಿಂದ ಪ್ರಾಣಾದಿಗಳು ಮೂವರೇ ಉಳಿಯುತ್ತಾರೆ. ಹಾಗೆ ಭಾಗವತದಲ್ಲಿ ಹೇಳಿದೆ, ವಾಚಂ ಜುಹಾವ ಮನಸಿ ತತ್ಪ್ರಾಣ ಇತರೆ ಪರಂಧೃತ್ಯಾ ಹ್ಯಪಾನಂ ಸೋತ್ಸರ್ಗಂ ತತ್ಪರತ್ವೇ ಹ್ಯಚೋ ಹವೀತ್ || ತ್ರಿತ್ವೇ ಹುತ್ವಾಂಥ ಪಂಚತ್ವಂ ತಚ್ಚೈಕತ್ವೇಽಜುಹೋನ್ಮುನಿಃ || ಅಂದರೆ ವಾಗಭಿಮಾನಿನಿಯಾದ ಪಾರ್ವತಿಗೆ ಮನೋಭಿಮಾನಿಯಾದ ರುದ್ರನಲ್ಲಿ ಲಯವು. ರುದ್ರನಿಗೆ ಪ್ರಾಣನಲ್ಲಿ, ಪ್ರಾಣನಿಗೆ ಅಪಾನನಲ್ಲಿ, ಅಪಾನನಿಗೆ ವ್ಯಾನನಲ್ಲಿ ಲಯಂವನ್ನು ಚಿಂತಿಸಬೇಕು. ಪ್ರಾಣಾದಿ ಮೂವರಲ್ಲಿ ಉದಾನ ಸಮಾನರಿಗೆ ಲಯವು ಎಂದು ಧ್ಯಾನಿಸಿ ಆ ಪ್ರಾಣಾದಿ ಮೂವರು ಮುಖ್ಯ ಪ್ರಾಣನಲ್ಲಿ ಲಯ ಹೊಂದುತ್ತಾರೆಂದು ಧ್ಯಾನಿಸಬೇಕು ಎಂದು ಹೇಳಿದೆ. (೩) ವಾಕ್ ಮೊದಲಾದ ಅನೇಕ ಇಂದ್ರಿಯಗಳು ಇದ್ದರೂ ಪ್ರಧಾನವಾಗಿರುವುದರಿಂದ ಚಕ್ಷುರಾದಿ ಐದೇ ಇಂದ್ರಿಯಗಳನ್ನು ಹೇಗೆ ಹೇಳಿರುವರೋ ಹಾಗೆಯೇ ಐದು ಪ್ರಾಣರಲ್ಲಿ ಮೂವರನ್ನೇ ಹೇಳಿರುತ್ತಾರೆ. (3) ಅಧ್ಯಾತ್ಮದಲ್ಲಿ ಮಧುಮೋಕ್ಷವು. ಸೋಮಸ್ಯ = ಮನಸ್ಸಿನ, ಸೇನಾಂ =ಗತಿಯನ್ನು ಹೀಗೆ ಇಟ್ಟುಕೊಳ್ಳಬೇಕು ||೨||

ಋ || (೪೦೧) ಸಮಾನೇ ಅಹನ್ ತ್ರಿರವದ್ಯ ಗೋಹನಾ ತ್ರಿರದ್ಯ ಯಜ್ಞಂ ಮಧುನಾ ಮಿಮಿಕ್ಷತಂ|

ತ್ರಿರ್ವಾಜತೀರಿಷೋ ಅಶ್ವಿನಾ ಯುವಂ ದೋಷಾ ಅಸ್ಮಭ್ಯಮುಷಸಶ್ಚ ಪಿನ್ವತಂ ||೩||

ಅ|| ಅಶ್ವಿನೌ = ಅಶ್ವಿನೀ ದೇವತೆಗಳಿರಾ, ಸಮಾನೇ = ಸುಖ ದುಃಖ ರೂಪವಾದ ವೈಚಿತ್ರ್ಯವಿಲ್ಲದಿರುವ ಮತ್ತೆ ಕೇವಲ ಸುಖಕ್ಕೇನೇ ಆಶ್ರಯವಾಗಿರುವ, ಅಹನ್ =ಹಗಲಿನಲ್ಲಿ (ಮೋಕ್ಷ ಕಾಲದಲ್ಲಿ) ತ್ರಿಃ =ಸರ್ವ ಕಾಲದಲ್ಲಿಯೂ (ಅವದ್ಯ ಗೋಹನಾ =ದೋಷಗಳಿಗೆ ಆಚ್ಛಾದಕರಾದ, (ಅಂದರೆ ಸಮಸ್ತ ದೋಷಗಳನ್ನು ನಾಶಗೊಳಿಸುವ) (ನೀವಿಬ್ಬರು) (ಪ್ರಸಿದ್ಧ ಅಶ್ವಿನೀ ಪಕ್ಷದಲ್ಲಿ) ಸಮಾನೇ ಅಹನ್ = ಯಜ್ಞದಲ್ಲಿ, ತ್ರಿಃ = ತ್ರಿಕಾಲದಲ್ಲಿಯೂ ಅವದ್ಯಗೋಹನಾ =ಸಮಸ್ತ ಕ್ರಿಯೆಗಳ ದೋಷಗಳನ್ನೂ ನಾಶಗೊಳಿಸುವರು (ಎಂದು ಇಟ್ಟುಕೊಳ್ಳಬೇಕು) ಅದ್ಯ = ಈಗ, (ನಿಮ್ಮ ಭಕ್ತರಾದ ನಮ್ಮ) ಯಜ್ಞಂ =ಯಾಗವನ್ನು ತ್ರಿಃ = ಮೂರು ಆವರ್ತಿಯೂ ಮಧುನಾ= ಮಧುತ್ವ ನಿಮಿತ್ತವಾದ ಹಸ್ತದಿಂದ, ಮಿಮಿಕ್ಷತಂ =ಸ್ಪರ್ಶ

ಮಾಡಿರಿ. (ಅಂದರೆ ಹಸ್ತಸ್ಪರ್ಶದಿಂದ ಶುದ್ಧೀಕರಿಸಿರಿ.) ಮತ್ತು ಯುವಂ=ನೀವಿಬ್ಬರು, ಅಸ್ಮಭ್ಯಂ = ನಮಗಾಗಿ, ದೋಷಾ=ರಾತ್ರಿಯಲ್ಲಿ, ಉಷಸಶ್ಚ = ಉಷಃಕಾಲದಲ್ಲಿಯೂ, ಅದಕ್ಕಿಂತ ಮರುದಿವಸದಲ್ಲಿಯೂ, ಹಗಲು ರಾತ್ರಿ, ತ್ರಿಃ = ಸರ್ವ ಕಾಲಗಳಲ್ಲಿಯೂ =ವಾಜವತೀಃ =ಯುದ್ಧವುಳ್ಳ, ಯುದ್ಧಲ್ಲಿ ಗೆದ್ದು ತಂದಿರುವ, ಇಷಃ =ಅನ್ನಗಳನ್ನು ಅಥವಾ ಮೋಕ್ಷದಲ್ಲಿರುವ ಸುಖಗಳನ್ನು (ಅವುಗಳು ವಾದ ವಿತಂಡಾರೂಪ ಆಧ್ಯಾತ್ಮಿಕ ಯುದ್ಧವನ್ನು ಹೊಂದಿ ಲಬ್ಧಗಳಾದವುಗಳು) ಪಿನ್ವತಂ, ಚೆನ್ನಾಗಿ ಕೊಡಿರಿ. ||೩||

ಭಾ || (1) ವೈಷಮ್ಯಹೀನೇ ಸುಖಭಾಜನೇಽಹ್ನಿ ವಿಮುಕ್ತಿ ಕಾಲೇಽಖಿಲ ದೋಷನಾಶಕೌ। ಸ್ವಭಕ್ತಾನಾಂ ಶೋಧಯಂತಂ ಚ ಯಜ್ಞಂ ತ್ರಿರಸ್ಮಾಕಂ ಯುದ್ಧಜಿತಾ ಇಷಶ್ಚ। ಸುಖಾನಿ ವಾ ಮೋಕ್ಷಗತಾನಿ ನೋಽಲಮಹೋರಾತ್ರಂ ಕ್ಷರತಂ ಸರ್ವದೈವ ||೩||

ಅ || (1) ಸುಖದುಃಖರೂಪವಾದ ವೈಷಮ್ಯವಿಲ್ಲದಿರುವ, ಅಂದರೆ ಕೇವಲ ಸುಖಕ್ಕೇನೇ ಆಶ್ರಯವಾಗಿರುವ ಹಗಲಿನಲ್ಲಿ ಅಂದರೆ ಮೋಕ್ಷ ಕಾಲದಲ್ಲಿ ಸಮಸ್ತ ದೋಷಗಳನ್ನು ನಾಶಗೊಳಿಸುವ, ನೀವಿಬ್ಬರೂ (ಅಶ್ವಿನೀ ದೇವತೆಗಳ ಪಕ್ಷದಲ್ಲಿ) ಸಮಸ್ತ ಕ್ರೀಯೆಗಳ ಭ್ರೇಷ=ಭ್ರಂಶವನ್ನು ನಾಶಗೊಳಿಸುವವರು, ಭ್ರಂಶವೆಂದರೆ -ಯಾವಾಗ ಹೇಗೆ ಯಾವ ಕರ್ಮವನ್ನು ಮಾಡಬೇಕೋ, ಆಗ ಹಾಗೆ ಪ್ರಮಾದದಿಂದ ಆವಾವ ಕರ್ಮಗಳನ್ನು ಮಾಡದಿರುವಿಕೆ) ನಿಮ್ಮ ಭಕ್ತರಾದ ನಮ್ಮ ಯಜ್ಞವನ್ನು ಹಸ್ತಸ್ಪರ್ಶದಿಂದ ಶುದ್ಧೀಕರಿಸಿರಿ. ಮತ್ತು ನೀವಿಬ್ಬರು, ನಮಗಾಗಿ ಯುದ್ಧದಲ್ಲಿ ಗೆದ್ದು ತಂದ ಅನ್ನಗಳನ್ನು ಮತ್ತೂ ಮೋಕ್ಷದಲ್ಲಿರುವ ವಾದ ವಿತಂಡಾಖ್ಯಯುದ್ಧದಲ್ಲಿ ಲಬ್ಧಗಳಾದ ಸುಖವನ್ನು ಹಗಲು ರಾತ್ರಿ ಸರ್ವಕಾಲಗಳಲ್ಲಿಯೂ ಅತ್ಯಂತವಾಗಿ ಕೊಡಿರಿ. ||೩||

ಋ || (೪೦೨) ತ್ರಿರ್ವರ್ತಿರ್ಯಾತಂ। ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ।
ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ||೪||

ಅ || ಅಶ್ವಿನೌ = ಅಶ್ವಿನೀ ದೇವತೆಗಳಿರಾ, (ನೀವಿಬ್ಬರು ಯಾವುದು) ವರ್ತಿ = ಸಮಸ್ತ ಲೋಕಗಳಲ್ಲಿರುವಿಕೆಯು, (ಕೇವಲ ಪ್ರವೃತ್ತಿ ಮಾತ್ರವೇ ಅಲ್ಲ, ಮತ್ತೆ ಕಾಲ ವಿಶೇಷ ಸಹಿತವಾದುದು) ಯಾವುದು, ತ್ರಿಃ = ಕಾಲತ್ರಯದಲ್ಲಿರತಕ್ಕುದೋ, ಅದನ್ನು ಕುರಿತು, ಯಾತಂ =ಹೋಗಿರಿ (ಅಂದರೆ ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿರತಕ್ಕದ್ದು. ಸಮಸ್ತ ಪ್ರಾಣಿಗಳ ಕರ್ಮವನ್ನು ಪ್ರವರ್ತಿಸುವುದಕ್ಕಾಗಿ ಸರ್ವತ್ರ ಸನ್ನಿಹಿತರು ಆಗಿರಿ. ಆ ಎಲ್ಲಾ ಕರ್ಮಗಳೂ ನಿಮ್ಮ ಅಧೀನಗಳೇ. ಮತ್ತೂ ಅನುವ್ರತೇ =ಭಕ್ತ ಜನರ ವಿಷಯದಲ್ಲಿ ತ್ರಿಃ =ಸರ್ವಕಾಲಗಳಲ್ಲಿಯೂ, ಶಿಕ್ಷತಂ=ಶಿಕ್ಷಿಇಸರಿ. ತ್ರೇಧೇವ=೩ ಕಾಲಗಳಲ್ಲಿಯೂ ಇರುವ, ಸುಪ್ರಾವ್ಯೇ =(ಸುಪ್ರಪೂರ್ವಕಾತ್ ಅವರಕ್ಷಣೇ) ಚೆನ್ನಾಗಿ ರಕ್ಷಿಸಿಕೊಳ್ಳಲಿಕ್ಕೆ ಅರ್ಹನಾದ, ಅತಿಭಕ್ತನ ವಿಷಯದಲ್ಲಿ (ಗುರು ಮೊದಲಾದವರಿಂದ ಶಿಕ್ಷಿತನಾದ ಪ್ರಯುಕ್ತವೇ ಭಕ್ತನು ಸುಖವಾಗಿ ರಕ್ಷಣಾರ್ಹನು) ಭಕ್ತನಿಗೆ ಅತೀತಾದಿ ಕಾಲ ಸಂಬಂಧದಿಂದಲೇ ತ್ರೈವಿಧ್ಯವು. ಅಂದರೆ ಅತೀತ ಭಕ್ತ, ವರ್ತಮಾನ ಕಾಲಿಕ ಭಕ್ತ, ಭವಿಷ್ಯತ್ಕಾಲಿಕ ಭಕ್ತ, ಎಂದು ಮೂರು ಪ್ರಕಾರವುಳ್ಳವನು. ವಸ್ತುತಃ ಸ್ವರೂಪತಃ =ಭಕ್ತನಿಗೆ ತ್ರೈವಿಧ್ಯವಿಲ್ಲ, ಎಂಬ ಅಭಿಪ್ರಾಯದಿಂದ ತ್ರೇ ದೇಷ ಎಂಬಲ್ಲಿ ಇವ

ಶಬ್ದವು ತ್ರಿಃ =ಸರ್ವ ಕಾಲಗಳಲ್ಲಿಯೂ ಶಿಕ್ಷತಂ = ಅತಿಶಯವಾಗಿ ಶಿಕ್ಷಿಸಿರಿ. ಇಂತಹ, ಯುವಂ=ನೀವಿಬ್ಬರು ಅಸ್ಮೇ =ನಮಗಾಗಿ, ತ್ರಿಃ =ಸರ್ವ ಕಾಲದಲ್ಲಿಯೂ, ನಾಂದ್ಯಂ (ನದಿ ಹರ್ಷೇ -ನಂದತೀತಿ ನಂದಃ ತಸ್ಯಭಾವಃ) ಸುಖವನ್ನು, ವಹತಂ = (2ವಹಪ್ರಾಪಣೇ) ಹೊಂದಿಸಿ ಕೊಡಿರಿ. ವೃಕ್ಷಃ = (ಪೃಪಾಲನ ಪೂರಣಯೋಃ) ಪುಷ್ಟಿಯನ್ನೂ ತ್ರಿಃ = ಮೂರುಕಾಲದಲ್ಲಿರತಕ್ಕುದನ್ನೂ ಅಂದರೆ ಸರ್ವದಾನಿತ್ಯದಲ್ಲಿಯೂ, ಅಕ್ಷರೇವ -ವೇದಗಳ ಅಕ್ಷರಗಳಂತೆಯೇ, (ಅಂದರೆ ವೇದೋಕ್ತಗಳಾದ ಮಂತ್ರಗಳು ನಿಖಿಲ ಅಭೀಷ್ಟವನ್ನು ಹೇಗೆ ಕೊಡುತ್ತವೋ ಹಾಗೆಯೇ) ಪಿನ್ವತಂ ಕೊಡಿರಿ. ||೪||

**ಭಾ ||** **(1) ಯದ್ವರ್ತನಂ ಸರ್ವಲೋಕೇಷು ತಚ್ಚ ತ್ರಿ ಕಾಲಗಂ ಯುವಯೋರೇವ ಸರ್ವಂ || (2) ಭಕ್ತೇ ಜನೇ ಸುಷ್ಠು ರಕ್ಷೇ ಸುಭಕ್ತೇ ತ್ರಿಧೇವ ಕಾಲಾನುಗತೇ ಸುಶ್ಶಿಕ್ಷತಂ || (3) ಸುಖಂ ವಹೇತಂ ಚ ಯುವಾಂ ತು ನಃ ಸದಾ ಪುಷ್ಟಿಂ ಚ ನಿತ್ಯಾಂ ಕ್ಷರತಂ ವರ್ಣವಚ್ಚ** ||೪||

ಅ || (1) ಸಮಸ್ತ ಲೋಕಗಳಲ್ಲಿರುವಿಕೆಯು, ಯಾವುದೋ, ಮೂರು ಕಾಲಗಳಲ್ಲಿಯೂ ಇರತಕ್ಕದ್ದು ಯಾವುದೋ, ಆ ಎಲ್ಲಾ ಕರ್ಮಗಳೂ ನಿಮ್ಮಿಬ್ಬರ ಅಧೀನಗಳೇ. (ಅಂದರೆ ಅತೀತಾದಿ ಮೂರು ಕಾಲಗಳಲ್ಲಿರತಕ್ಕ ಪ್ರಾಣಿಗಳ ಸಮಸ್ತ ಕರ್ಮಗಳನ್ನು ಪ್ರವರ್ತಿಸುವುದಕ್ಕಾಗಿ ಸರ್ವತ್ರ ಸನ್ನಿಹಿತರಾಗಿರಿ. ಎಲ್ಲಾ ಕರ್ಮಗಳೂ ನಿಮ್ಮ ಅಧೀನಗಳೇ ಆಗಿವೆ.) (2) ಭಕ್ತ ಜನರ ವಿಷಯದಲ್ಲಿ ಸರ್ವದಾ ಶಿಕ್ಷಿಸಿರಿ. ೩ ಕಾಲಗಳಲ್ಲಿರತಕ್ಕ ಚೆನ್ನಾಗಿ ರಕ್ಷಣಾರ್ಹನಾದ ಅತಿಭಕ್ತನ ವಿಷಯದಲ್ಲಿ ಸರ್ವದಾ ಚೆನ್ನಾಗಿ ಅತಿಶಯವಾಗಿ ಶಿಕ್ಷಿಸಿರಿ. (ತ್ರಿಕಾಲ ಸಂಬಂಧ ನಿಮಿತ್ತವಾಗಿ ಭಕ್ತನಿಗೆ ತ್ರೈವಿಧ್ಯವು. ಸ್ವರೂಪತಃ ತ್ರೈವಿಧ್ಯವಿಲ್ಲ ಎಂದು ತೋರಿಸುವುದಕ್ಕಾಗಿ ಇವ ಶಬ್ದವು) (3) ನೀವಿಬ್ಬರು ನಮಗೆ ಸದಾ ಸುಖವನ್ನು ಹೊಂದಿಸಿಕೊಡಿರಿ. ವೈದಿಕಮಂತ್ರಗಳು ಸರ್ವಾಭೀಷ್ಟವನ್ನು ಹೇಗೆ ಕೊಡುತ್ತವೋ ಹಾಗೆಯೇ ಸದಾ ನಿತ್ಯವಾದ ಪುಷ್ಟಿಯನ್ನು ಕೊಡಿರಿ. ||೪||

**ಋ ||** **(೪೦೩) ತ್ರಿರ್ನೋ ರಯಿಂ ವಹತಮಶ್ವಿನಾ ಯುವಂ ತ್ರಿರ್ದೇವ ತಾತಾ ತ್ರಿರುತಾವತಂ ಧಿಯಃ |**

**ತ್ರಿಃ ಸೌಭಗತ್ವಂ ತ್ರಿರುತ ಶ್ರವಾಂಸಿ ನಸ್ತ್ರಿಷ್ಠಂ ವಾಂ ಸೂರೇ ದುಹಿತಾಽಽರುಹದ್ರಥಂ ||೫||**

ಅ || ಸೂರೇ = ಸೂರ್ಯನ, ದುಹಿತಾ =ಮಗಳಾದ ಉಷಾದೇವಿಯು, ತ್ರಿಷ್ಠಂ = ಮೂರು ಕಾಲಗಳಲ್ಲಿರತಕ್ಕ, ವಾಂ ರಥಂ = ನಿಮ್ಮದ್ವಾದ ರಥವನ್ನು, ಅರುಹತ್ =ಏರಿರುವಳು. ಅಂತಹ ಸೂರ್ಯನ ಪುತ್ರಿಯ ಪತಿರೂಪರಾದ, ಅಶ್ವಿತಾ = ಅಶ್ವಿನೀದೇವತೆಗಳಿರಾ, ಯುವಂ=ನೀವಿಬ್ಬರು, ನಃ =ನಮಗೆ , ತ್ರಿಃ = ನಿತ್ಯದಲ್ಲಿಯೂಃ ರಯಿಂ = ದ್ರವ್ಯವನ್ನು ವಹತಂ =ಹೊಂದಿಸಿಕೊಡಿರಿ, ದೇವತಾತಾ = (ತನು ವಿಸ್ತಾರೇಕರಣೇಚ) ದೇವತೆಗಳ ಸಮುದಾಯವನ್ನು, ತ್ರಿಃ =ನಿತ್ಯದಲ್ಲಿಯೂ, ವಹತಂ =ಹೊಂದಿಸಿಕೊಡಿರಿ (ದೇವತೆಗಳು ಸದಾ ನಾವು ಮಾಡತಕ್ಕ ಪೂಜೆಯನ್ನು ಸ್ವೀಕರಿಸುವುದಕ್ಕಾಗಿ ಹೇಗೆ ಬಂದಾರೋ, ಹಾಗೆ ಮಾಡಿರಿ.) ಉತ = ಮತ್ತೂ, ಧಿಯಃ = ಬುದ್ಧಿಗಳನ್ನು, ಶುದ್ಧವಾದ ಬುದ್ಧಿಯನ್ನು ಕೂಡ, ತ್ರಿಃ = ನಿತ್ಯದಲ್ಲಿಯೂ, ಅವತಂ =ರಕ್ಷಿಸಿರಿ. ಸೌಭಗತ್ವಂ=) (ಸುಭಗ ಏವಸೌಭಗಃ ತಸ್ಯಭಾವಃ ಸೌಭಗತ್ವಂ ಸೌಭಾತ್ಯವನ್ನೂ, ನಃ = ನಮಗೆ, ತ್ರಿ=ಸರ್ವಕಾಲಗಳಲ್ಲಿಯೂ, ಅವತಂ= ರಕ್ಷಿಸಿರಿ. ಶ್ರವಾಂಸಿ ಉತ =ಕೀರ್ತಿಯನ್ನು ಕೂಡ, ಸದಾ ರಕ್ಷಿಸಿ = (ಆಧ್ಯಾತ್ಮ) ವಾಂ =ನಿಮ್ಮಿಬ್ಬರ ಪ್ರಸಾದದಿಂದ, ಸೂರೇಃ ಜ್ಞಾನಿಯಾದ ಗುರುವಿನ, ದುಹಿತಾ =ಮಗಳಾದ ಬುದ್ಧಿಯು, ತ್ರಿಷ್ಠಂ=೩

ಕಾಲಗಳಲ್ಲಿರುವ, ರಥಂ = ರಥವನ್ನು ಅರುಹತ್ = ಏರಿತು. (ಅಂದರೆ ಭಕ್ತರ ದೇಹದಲ್ಲಿ ಜ್ಞಾನೋದಯವು ಆಯ್ತು.) ||೫||

**ಭಾ ||** **(1) ವಿತ್ತಂ ಚ ನಿತ್ಯಂ ದೇವತತಿಂ ಚ ನಿತ್ಯಂ ಧಿಯಂ ಚ ಶುಭ್ರಾಂ ನಿತ್ಯಮೇನಾ ದತಂ ನಃ। (2) ಕೀರ್ತಿಂ ಸೌಭಾಗ್ಯಂ ರಕ್ಷತಂ ನಃ ಸದೈವ ಕಾಲತ್ರಯೇ ಯುಷ್ಮದೀಯಂ ರಥಂ ಚ। ಪುತ್ರೀ ಸೂರ್ಯಸ್ಯಾರುಹ (3) ದ್ಭಕ್ತದೇಹೇ ಜ್ಞಾನೋದಯೋ ವಾ ಭಗವತ್ಪ್ರಸಾದಾತ್ ||೫||**

ಅ|| ಅಶ್ವಿನೀ ದೇವತೆಗಳಿರಾ ನಿತ್ಯದಲ್ಲಿಯೂ ದ್ರವ್ಯವನ್ನು ನಿತ್ಯದಲ್ಲಿಯೂ ದೇವತೆಗಳ ಸಮುದಾಯವನ್ನೂ (ಸಮಸ್ತ ಚೇತನರಿಗೂ ಬುದ್ಧಿಯು ಸ್ವಾಭಾವಿಕವಾಗಿಯೇ ಇದ್ದುದರಿಂದ ಪ್ರಾರ್ಥನೆಯು ಏತಕ್ಕೆ ಎಂದರೆ) ಶುಭ್ರವಾದ ಶುದ್ಧವಾದ ಬುದ್ಧಿಯನ್ನು ನಿತ್ಯದಲ್ಲಿಯೂ ರಕ್ಷಿಸಿರಿ (2) ಸದಾ ೩ ಕಾಲಗಳಲ್ಲಿಯೂ ನಮಗೆ ಕೀರ್ತಿಯನ್ನು ಸೌಭಾಗ್ಯವನ್ನೂ ರಕ್ಷಿಸಿರಿ. ಸೂರ್ಯನ ಮಗಳಾದ ಉಷಾದೇವಿಯು ಕಾಲತ್ರಯದಲ್ಲಿರುವ ನಿಮ್ಮ ರಥವನ್ನು ಏರಿರುವಳು. (3) (ಅಧ್ಯಾತ್ಮಾರ್ಥವು) ಪೂಜ್ಯರಾದ ನಿಮ್ಮಿಬ್ಬರ ಅನುಗ್ರಹದಿಂದ (ಆಷಾವಕಾಲದಲ್ಲಿರತಕ್ಕದೇ ಹಾಖ್ಯ ರಥವನ್ನು ಏರಿದನು) ಭಕ್ತ ಜನರ ದೇಹದಲ್ಲಿ ಜ್ಞಾನೋದಯವಾಯ್ತು. ||೫||

**ಋ (೪೦೪) ತ್ರಿರ್ನೋ ಅಶ್ವಿನಾ ದಿವ್ಯಾನಿ ಭೇಷಜಾ ತ್ರಿಃ ಪಾರ್ಥಿವಾನಿ ತ್ರಿರುದತ್ತ ಮದ್ಭ್ಯಃ।**

**ಓಮಾನಂ ಶಂಯೋರ್ಮಮಕಾಯ ಸೂನವೇ ತ್ರಿಧಾತು ಶರ್ಮ ವಹತಂ ಶುಭಸ್ಪತೀ ||೬||೪||**

ಅ || ಅಶ್ವಿನಾ = ಅಶ್ವಿನೀ ದೇವತೆಗಳಿರಾ, ಅದ್ಭ್ಯಃಉ=ಸುಖಕ್ಕಾಗಿಯೇ, ನಃ= ನಮಗೋಸ್ಕರ, ತ್ರಿಃ =ಸರ್ವಕಾಲಗಳಲ್ಲಿಯೂ, ದಿವ್ಯಾನಿ=ಸ್ವರ್ಗಲೋಕದಲ್ಲಿ ಉಂಟಾಗತಕ್ಕ ಭೇಷಜಾ =ಔಷಧಗಳನ್ನು ದತ್ತಂ =ಕೊಡಿರಿ. ತ್ರಿಃ = ಸಮಸ್ತ ಕಾಲಗಳಲ್ಲಿಯೂ ಪಾರ್ಥಿವಾನಿ = ಪ್ರಥಿವಿಯಲ್ಲಿ ಉಂಟಾಗತಕ್ಕ ಔಷಧಗಳನ್ನೂ ಕೊಡಿರಿ. ಹಾಗೆಯೇ ಸರ್ವಕಾಲಗಳಲ್ಲಿಯೂ ಅಂತರಿಕ್ಷದಲ್ಲಿರತಕ್ಕ ಸೂರ್ಯಾದಿ ಲೋಕದಲ್ಲಿರುವ ಔಷಧಗಳನ್ನು ಕೊಡಿರಿ. (ಔಷಧಗಳು ಸುಖಸಾಧನಗಳು ಮಾತ್ರವಲ್ಲ ಮತ್ತೆ) ಶುಭಸ್ಪತೀ =ಶುಭ ಕರ್ಮಾದಿಗಳಿಗೆ ಅಧಿಪತಿಗಳಾದ, ನೀವಿಬ್ಬರು ಶಂಯೋಃ = ಔಷಧದಿಂದುಂಟಾದ ಐಹಿಕ ಸುಖವುಳ್ಳ, ಸೂನವೇ =ನಿಮ್ಮ ಮಗ, ಮಮಕಾಯ=ಸ್ವಲ್ಪನಾದ, ನನಗೋಸ್ಕರ ಅಥವಾ ನಿಮ್ಮ ಮಗನಾದ ಮಮಕಾಯ=ನನ್ನ ಸಂಬಂಧಿಯಾದ ಮಗನಿಗೋಸ್ಕರ, ಓಮಾನಲ= (ಮಾನೇಷು ಜ್ಞಾನೇಷು ಊಯತೇ ವಿಷಯೀಕ್ರಿಯತೇ ಡಃ ಓಮಾನಂ ಅಜ್ ಪೂರ್ವಕಾತ್ ವೇಞತಂತು ಸಂತಾನೇ) ಅನುಭವವಿಷಯಕವಾದ ತ್ರಿಧಾತು = ಮೂರು ಕಾಲಗಳಲ್ಲಿಯೂ ಧರಿಸಲ್ಪಡುವ, ಅಂದರೆ ನಿತ್ಯವಾದ, ಶರ್ಮ=ಮುಕ್ತಿಯಲ್ಲಿರುವ ಸುಖವನ್ನು ವಹತಂ =ಕೊಡಿರಿ ||೬||

**ಭಾ ||** **(1) ಸರ್ವೇಷು ಕಾಲೇಷ್ವಪಿ ಭೇಷಜಾನಿ ನಃ ಸರ್ವಲೋಕಪ್ರಭವಾನಿ ದತ್ತಂ । ಅದ್ಭ್ಯಃ ಸುಖಾಯೈವ (2) ಸುಖಂ ಮಮೈವ ಸ್ವಲ್ಪಸ್ಯ ಯುಷ್ಮತ್ಪುತ್ರ ಕಸ್ಮಾಥದತ್ತಂ || ಪತೀ ಶುಭಸ್ಯಾಥ (3) ಸುತಸ್ಯ ಶಂಯೋರ್ಮದೀಯಸ್ಯೈವಾವಹತಂ ಸುಖಂ ವಾ ||೬||೪||**

ಅ ॥ (1) ಪೂರ್ವಾರ್ಧವನ್ನು ಸಂಕ್ಷೇಪತಃ ವ್ಯಾಖ್ಯಾನ ಮಾಡುತ್ತಾರೆ.) ಕರ್ಮಜನ್ಯವಾದ ಸುಖಕ್ಕೋಸ್ಕರವೇ ಸಮಸ್ತ ಲೋಕಗಳಲ್ಲಿ ಹುಟ್ಟಿರುವ ಔಷಧಗಳನ್ನೂ ಸಮಸ್ತ ಕಾಲಗಳಲ್ಲಿಯೂ ನಮಗೆ ಕೊಡಿರಿ. (ಅಪ್ (ಜಲಗಳು) ಲೋಕಗಳಾಗದಿರುವುದರಿಂದ ಯೇದೇವಾಸಃ ಎಂಬುವಲ್ಲಿ ಹೇಗೋ ಹಾಗೆಯೇ ಅಪ್‌ಶಬ್ದದಿಂದ ಅಂತರಿಕ್ಷ ಲೋಕವನ್ನು ಉಪಲಕ್ಷಣವಾಗಿಟ್ಟುಕೊಂಡರೆ ವಿರೋಧವಿಲ್ಲ. ತಥಾಚ) ಅಂತರಿಕ್ಷ ಲೋಕದಲ್ಲಿ ಉಂಟಾದ ಔಷಧಗಳನ್ನು ತಮ್ಮ ಸುಖಕ್ಕೋಸ್ಕರವೇ ಕೊಡಿರಿ. (ಈ ಕಲ್ಪದಲ್ಲಿ ಸುಖಾಯ ಎನ್ನುವುದು ಅಧ್ಯಾಹಾರವು) (2) (ಉತ್ತರಾರ್ಧವನ್ನು ವ್ಯಾಖ್ಯಾನ ಮಾಡುತ್ತಾರೆ.) (ಔಷಧಗಳು ಸುಖಸಾಧನಗಳು ಮಾತ್ರವಲ್ಲ ಮತ್ತೆ ಶುಭಕರ್ಮಾದಿಗಳಿಗೆ ಅಧಿಪತಿಗಳಾದ ನೀವಿಬ್ಬರು ಔಷಧದಿಂದುಂಟಾದ ಐಹಿಕ ಸುಖವುಳ್ಳ ನಿಮ್ಮ ಪುತ್ರನಾದ, ಅತ್ಯಲ್ಪವಾದ ನನಗೇನೇ ಕೊಡಿರಿ. (3) (ಅಥಸುತಸ್ಯ ಇತ್ಯಾದಿಗಳಿಂದ ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ. ಐಹಿಕ ಸುಖವುಳ್ಳ ನನ್ನ ಸಂಬಂಧಿಯಾದ ಮಗನಿಗೇನೇ ನಿತ್ಯವಾದ ಮುಕ್ತಿಯಲ್ಲಿರುವ ಸುಖವನ್ನು ಕೊಡಿರಿ.

ವಿ ॥ ಯೇದೇವಾಸೋ ದಿವ್ಯೇಕಾದಶಸ್ಥ ಪೃಥಿವ್ಯಾ ಮಧ್ಯೇಕಾದತಸ್ಥ । ಅಪ್ಸುಕ್ಷಿತೋ ಮಹಿನ್ಯೈಕಾಡತಸ್ಥ ತೇ ದೇವಾಸೋ ಯಜ್ಞಮಿಮಂಜುಷಧ್ವಂ ॥ ಈ ಋಕ್ಕಿನಲ್ಲಿ ೩೩ ದೇವತೆಗಳು ಸೋಮಪಾನ ಮಾಡುವವರು ೩೩ ದೇವತೆಗಳು ಸೋಮಪಾನ ಮಾಡದಿದ್ದವರು ಎಂದು ಪ್ರತಿಜ್ಞೆ ಮಾಡಿ ಸೋಮಪಾನ ಮಾಡತಕ್ಕ ದೇವತೆಗಳನ್ನು ಹೇಳಿ, ೧೧ ಪ್ರಯಾಜರು ೧೧ ಅನುಯಾಜರು, ೧೧ ಉಪಯಾಜರು, ಇವರು ಸೋಮಪಾನ ಮಾಡುವವರು, ಎಂಬ ಬ್ರಾಹ್ಮಣ ವಾಕ್ಯಾನುಸಾರವಾಗಿ ಎಲೋ ದೇವತೆಗಳಿರಾ, ಪ್ರಯಾಜ ಎಂದು ಹೆಸರುಳ್ಳ ೧೧ ಮಂದಿ ನೀವು, ಸ್ವರ್ಗದಲ್ಲಿರುತ್ತಿರೋ ಯಾರು ಪೃಥಿವಿಯಲ್ಲಿ ಅನುಯಾಜ ಎಂದು ಹೆಸರುಳ್ಳವರು ೧೧ ಮಂದಿ ಯಾರು ಅಂತರಿಕ್ಷದಲ್ಲಿರತಕ್ಕ ಸೂರ್ಯಾದಿ ಲೋಕಗಳಲ್ಲಿ ಆವಾಸ ಮಾಡುವ ೧೧ ಮಂದಿ ಇರುತ್ತಾರೋ ಆ ಎಲ್ಲಾ ದೇವತೆಗಳಾದ ನೀವು ಭಕ್ತರಲ್ಲಿ ದಯೆ ಮಾಡುವುದು ಇದು ಮೊದಲಾದ ಮಹಿಮೆಯಿಂದ ಕೂಡಿದವರಾಗಿ ಈ ಯಜ್ಞವನ್ನು ಅಂಗೀಕರಿಸಿರಿ, ಎಂದು ಅರ್ಥವು ತೋರುತ್ತದೆ. ಹಾಗೆಯೇ ಅದ್ಭ್ಯ ಎನ್ನುವಲ್ಲಿಯೂ ಅಂಗೀಕರಿಸಬಹುದು. ಅದ್ಭ್ಯಃ =ಅಂತರಿಕ್ಷದಲ್ಲಿರತಕ್ಕ ಸೂರ್ಯಾದಿ ಲೋಕಗಳಲ್ಲಿರುವ ಔಷಧಗಳನ್ನು ಕೊಡಿರಿ. ॥೬॥೪॥

ಅ ವ ॥ ಈ ವರ್ಗವನ್ನು ಶಿಷ್ಯರ ಬುದ್ಧಿಯನ್ನು ಪರೀಕ್ಷಿಸುವುದಕ್ಕಾಗಿಯೂ, ತಾನು ಹೇಳಿದ ಮಾರ್ಗದಿಂದಲೇ ಬುದ್ಧಿವಂತರಾದ ಶಿಷ್ಯರು ವ್ಯಾಖ್ಯಾನ ಮಾಡಬೇಕೆಂದು ಶಿಕ್ಷಿಸುವುದಕ್ಕಾಗಿಯೂ ಆಚಾರ್ಯರು ವ್ಯಾಖ್ಯಾನ ಮಾಡಲಿಲ್ಲ, ಎಂದು ಸಂಪ್ರದಾಯವೇತ್ತೃಗಳು ಹೇಳುತ್ತಾರೆ.

ಋ ॥ (೪೦೫) ತ್ರಿರ್ನೋ ಅಶ್ವಿನಾ ಯಜತಾ ದಿವೇ ದಿವೇ ಪರಿ ತ್ರಿಧಾತು ಪೃಥಿವೀ ಮಶಾಯತಂ ।
ತಿಸ್ರೋನಾಸತ್ಯಾ ರಥ್ಯಾಪರಾವತ ಆತ್ಮೇವ ವಾತಃ ಸ್ವಸರಾಣಿ ಗಚ್ಛತಂ ॥೭॥

ಅ ॥ ಅಶ್ವಿನೌ = ಅಶ್ವಿನೀ ದೇವತೆಗಳಿರಾ, (ಯಾವ ನೀವು) ತ್ರಿಧಾತು = (ದತ್ತೇ ಇತಿ ಧಾತುಃ = ಕಾಲವು. ಧಾ ಞ ಧಾರಣ ಪೋಷಣಯೋ, ತುನ್ ಪ್ರತ್ಯಯವು. (ಮೂರು ಕಾಲಗಳಲ್ಲಿಯೂ, ಪ್ರಥಿವಿ = ಭೂಲೋಕವನ್ನುಪರಿ ಆಶಾಯತಂ

= (ಶ್ರೀಜಸ್ಯಷ್ನೇ) ಸ್ಥಾಪಿಸುವವರಾಗಿರುತ್ತೀರೋ, ಅಂತಹ ನೀವು, ದಿವೇ ದಿವೇತಿಃ =ಪ್ರತಿ ದಿವಸದಲ್ಲಿಯೂ ಸಾರ್ಯಂಕಾಲ ಪ್ರಾತಃಕಾಲ ಮಧ್ಯಾಹ್ನ ರೂಪ ೩ ಕಾಲಗಳಲ್ಲಿಯೂ, ನಃ =ನಮಗೆ, ಯಜತಾ (ಯಜ ದೇವ ಪೂಜಾ ಸಂಗತಿ ಕರಣ ದಾನೇಷು, ಕರ್ಮಣಿ ಅತಜ್ ಪ್ರತ್ಯಯವು) ಯಾಜ್ಯರು ಆಗುವಿರಿ. ನಾಸತ್ಯಾ=ಅಶ್ವಿನೀ ದೇವತೆಗಳಿರಾ, ಪರಾವತಃ =ದೂರದಿಂದಲೂ (ಬರುವುದಕ್ಕಾಗಿ) ತಿಸ್ರಃ ಮೂರು ಲೋಕಗಳ ಸಂಬಂಧಿಗಳಾದ, ರಥ್ಯಾಃ =ರಥವು ಹೋಗತಕ್ಕ ಮಾರ್ಗಗಳು (ನಿಮ್ಮಿಬ್ಬರಿಗೆ ಸುಗಮಗಳಾಗಿವೆ. ಆದ ಕಾರಣ) ಆತ್ಮೇವ ದಾತಃ =ಜಗತ್ತಿಗೆ ನಿಯಾಮಕನಾಗಿ ಒಳಗೆ ಇರುವ ವಾಯುವಿನಂತೆ, ಸ್ವಸರಾಣಿ = ಸಮಸ್ತ ದಿನಗಳಲ್ಲಿಯೂ, ಗಚ್ಛತಂ =ಬನ್ನಿರಿ ||೭||

ಋ || (೪೦೬) ತ್ರಿರಶ್ವಿನಾ ಸಿಂಧುಭಿಃ ಸಪ್ತಮಾತೃಭಿಸ್ತ್ರಯ ಆಹಾವಾ ಸ್ತ್ರೇಧಾ ಹವಿಷ್ಕೃತಂ |

ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ||೮||

ಅ || ಹೇ ಅಶ್ವಿನಾ = ಎಲೋ ಅಶ್ವಿನೀ ದೇವತೆಗಳಿರಾ (ಯಾವ ಕಾರಣದಿಂದ ನಿಮ್ಮನ್ನು ಕುರಿತು) ತ್ರಯಃ = ಪ್ರಾತಃ ಸವನ ಮೊದಲಾದ ೩ ಸವನ ಸಂಬಂಧಿಗಳಾದ, ಆಹಾವಾಃ = (ಅಜ್ ಪೂರ್ವಕಾತ್ ಹ್ವೇಞ ತಂತು ಸಂತಾನೇ) ಆಹ್ವಾನಗಳು (ಮಾಡಲ್ಪಡುತ್ತವೋ, (ಹೇಗೆ) ತ್ರೇಧಾ = ಮೂರು ಪ್ರಕಾರ ಚರು ಆಜ್ಯ ಪುರೋಡಾಶ ರೂಪವಾಗಿ, ಹವಿಃ =ಹವಿಸ್ಸು, ಕೃತಂ =ಮಾಡಲ್ಪಟ್ಟಿದೋ, ಯಾವ ನೀವು, ದಿವೋಽಪ್ಯುಪರಿ =ಸ್ವರ್ಗಕ್ಕಿಂತಲೂ ಮೇಲುಗಡೆ, ಪ್ರವ್ಯಾಃ = ಪ್ರಕೃಷ್ಟ ಗತಿಯುಳ್ಳವರೋ (ವಾಗತಿಗಂಧ ನಯೋಃ) ಯಾವ ನೀವಿಬ್ಬರು, ನಾಕಂ =ಸ್ವರ್ಗಲೋಕವನ್ನು ದ್ಯುಭಿಃ =ದಿನಗಳಿಂದ, (ದಿನಗಳಲ್ಲಿ) ಅಕ್ತುಭಿಃ = ರಾತ್ರಿಗಳಿಂದಲೂ (ರಾತ್ರಿಗಳಲ್ಲಿಯೂ) ಹಿತಂ = ಹಿತಕರವು ಹೇಗಾದೀತೋ ಹಾಗೆ ರಕ್ಷೇಥೇ = ರಕ್ಷಿಸಿರುವಿರೋ, ಅಂತಹ ನೀವು, ಸಿಂಧುಭಿಃ = ನದಿಗಳಿಂದಲೂ, ಸಪ್ತ ಮಾತೃಭಿಶ್ಚ = ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವಿತಥಾ | ವಾರಾಹೀ ಚ ತಥೇಂದ್ರಾಣೀ ಚಾಮುಂಡಾ ಸಪ್ತಮಾತರಃ || ಎಂಬ ಪ್ರಮಾಣಾನುಸಾರ ಸರಸ್ವತ್ಯಾದಿ ೭ ಮಂದಿ ಮಾತೃಗಳಿಂದಲೂ ಕೂಡಿ, ತಿಸ್ರಃ =ಪ್ರಥಿವಿಃ = ವೇದ್ಯುತ್ತರಾ ಸದತ್ಶ್ಚೈವ ಪ್ರಾಗ್ವಂಶೋ ಯೋನಯಃ ಸ್ಮೃತಾಃ || ಎಂಬ ಭಾಷ್ಯಾನುಸಾರ ಉತ್ತರಾವೇದಿ, ಸದೋ ಮಂಟಪ, ಪ್ರಾಗ್ವಂಶ (ಹವಿರ್ಗೃಹದಿಂದ ಪ್ರಾಗ್ಭಾಗವು ಪ್ರಾಗ್ವಂತವೆನಿಸುತ್ತದೆ.) ಹೀಗೆ ದೇವತೆಯನ್ನು ಕೂಡ್ರಿಸುವುದಕ್ಕಾಗಿ ಹೇಳಿದ ಯೋನಿ ಎನಿಸಿಕೊಂಡ ೩ ಪೃಥಿವಿಗಳನ್ನು ಕುರಿತು ಪ್ರತ್ಯಾಗಚ್ಛತಃ = ಬನ್ನಿರಿ. ||೮||

ಋ || (೪೦೭) ಕ್ವೇ ತ್ರೀ ಚಕ್ರಾ ತ್ರಿವೃತೋ ರಥಸ್ಯ ಕ್ವ ತ್ರಯೋ ಬಂಧುರೋ ಯೇ ಸನೀಳಾಃ |

ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ ||೯||

ಅ || ನಾಸತ್ಯಾ = ಅಶ್ವಿನೀ ದೇವತೆಗಳಿರಾ, (ನಿಮ್ಮಿಬ್ಬರ) ತ್ರಿವೃತಃ = (ವೃ ಞವರಣೇ) ೩ ಲೋಕಗಳನ್ನೂ ವರಿಸುವ, (ಸಂಚಾರದಿಂದ ೩ ಲೋಕಗಳ ಸಂಬಂಧವುಳ್ಳ) ರಥಸ್ಯ=ರಥದ, ತ್ರೀ =ಮೂರು, ಚಕ್ರಾ =ಚಕ್ರಗಳು, ಕ್ವ=ಎಲ್ಲಿ ? (ಅಶ್ವಿನೀ

ದೇವತೆಗಳ ಸ್ತೋತ್ರ ಪ್ರಸಂಗದಲ್ಲಿ ಚಕ್ರಾದಿಗಳ ಪ್ರಶ್ನೆಯು ಏಕೆ ? ಎಂದರೆ ಅಶ್ವಿನೀ ದೇವತೆಗಳನ್ನು ನೋಡಬೇಕೆಂಬ ಲವಲವಿಕೆಯಿಂದ ಈ ರೀತಿಯಾಗಿ ಪ್ರಶ್ನಿಸಿರುತ್ತಾರೆ) ರಥಸ್ಯ ರಥದ, ಯೇ ಸನೀಳಾಃ = ಯಾವುವು ಪಕ್ಷಿಗಳ ಅವಾಸಸ್ಥಾನವಾದ ಗೃಹಗಳಿಂದ (ಗೂಡು) ಕೂಡಿ ಇವೆಯೋ, ಅಂತಹ, ಬಂಧುರಃ =ಉನ್ನತ ಆನತಗಳಾದ (ಉಚ್ಚ ನಮ್ರಗಳಾದ) ಅಂದರೆ ಅತಿ ರಮ್ಯಗಳೂ ತಗ್ಗು ಪ್ರದೇಶಗಳೂ ಆದ, ತ್ರಯಃ = ೩ ಪ್ರದೇಶಗಳು, ಕ್ವ=ಎಲ್ಲಿ ? ಯೇನ = ಯಾವ ರಥದಿಂದ ಯಜ್ಞಂ =ನಮ್ಮ ಯಜ್ಞವನ್ನು ಉಪಯಾಥಃ = ಬರುತ್ತೀರೋ (ಅಂತಹ ರಥದಲ್ಲಿ) ರಾಸಭಸ್ಯ =ಗರ್ದಭದ (ಕತ್ತೆಯ) ಅಥವಾ, ವಾಜಿನಃ =ಕುದುರೆಯಯೋಗಃ =ಸಂಬಂಧವು ಕದಾ =ಯಾವಾಗ ತಾನೇ ಆಗುವುದು ॥೯॥

ಋ (೪೦೮) ಆ ನಾಸತ್ಯಾ ಗಚ್ಛತಂ ಹೂಯತೇ ಹವಿರ್ಮಧ್ವಃ ಪಿಬತಂ ಮಧುಪೇಭಿರಾಸಭಿಃ ।

ಯುವೋರ್ಹಿ ಪೂರ್ವಂ ಸವಿತೋಷಸೋ ರಥಮೃತಾಯ ಚಿತ್ರಂ ಘೃತವಂತಮಿಷ್ಯತಿ ॥೧೦॥

ಅ ॥ ನಾಸತ್ಯಾ = ಅಶ್ವಿನೀ ದೇವತೆಗಳಿರಾ, (ಯಾವ ಕಾರಣದಿಂದ ನಿಮ್ಮಿಬ್ಬರನ್ನು ಕುರಿತು ನಮ್ಮಿಂದ) ಹವಿಃ ಹೂಯತೇ =ಹವಿಸ್ಸು ಹೋಮಿಸಲ್ಪಡುತ್ತದೋ (ಆದ ಕಾರಣ) ಆ ಗಚ್ಛತಂ =ಬನ್ನಿರಿ. ಮತ್ತೂ, ಮಧುಪೇಭಿಃ =ಸೋಮಪಾನ ಮಾಡುವ, ಅಸಭಿ=ಅಸ್ಯಗಳಿಂದ, ಮಧ್ವಃ =ಮಧುವನ್ನು (ಅಂದರೆ ಸೋಮವನ್ನು) ಪಿಬತಂ=ಕುಡಿಯಿರಿ (ಹಾಗಾದರೆ ನಾಸತ್ಯರಿಬ್ಬರಿಗೆ ೨ ಮುಖಗಳಿರುವುದರಿಂದ ಅಸಭ್ಯಾಂ ಎಂದು ದ್ವಿವಚನವನ್ನು ಹೇಳಬೇಕಿತ್ತು. ಅಸಭಿಃ ಎಂದು ಬಹುವಚನವು ಹೇಗೆ ಕೊಡುತ್ತದೆ ? ಎಂದರೆ ಉಷಾದೇವಿಯನ್ನು ಮುಂದೆ ಹೇಳುವುದರಿಂದ ಅವಳ ಮುಖವನ್ನೂ ಸೇರಿಸಿಕೊಂಡು ಅಸಭಿಃ ಎಂದು ಬಹುವಚನವನ್ನು ಹೇಳಿದ್ದು) ಯುವೋಃ = ನಿಮ್ಮಿಬ್ಬರ ಚಿತ್ರಂ =ಅತ್ಯದ್ಭುತವಾದ, ಘೃತವಂತ = (ಘೃಕ್ಷರಣದೀಪ್ತ್ಯೋಃ) ಮಹಾ ಪ್ರಕಾಶವುಳ್ಳ, ರಥಂ =ರಥವನ್ನು ಸವಿತಾಉಷಸಃ = ಸೂರ್ಯನ ಮಗಳಾದ ಉಷಾದೇವಿಯು (ಸವಿತೃಶಬ್ದದ ಷಷ್ಠೀ ವಿಭಕ್ತಿಗೆ ಸು ಆದೇಶವು ಉಷಸ್ ಶಬ್ದದ ಪ್ರಥಮಾವಿಭಕ್ತಿಗೆ ಷಷ್ಠೀ ವಿಭಕ್ತಿಯ ಆದೇಶವು. ಹೀಗೆ ವ್ಯತ್ಯಾಸವು ಸವಿತುಃ ಸುತಾಉಷಾಃ ಎಂದು) ಋತಾಯ=(ಋತ ಮುಂಚ್ಛಶಿಲೇ ತೋಯೇ ದೀಪ್ತೇ ಸತ್ಯೇಽಭಿ ಪೂಜಿತೇ । ಎಂಬ ವಿಶ್ವಕೋಶದಿಂದ ಋತಂ =ಪೂಜಿಸಲ್ಪಟ್ಟ ಯಜ್ಞವು) ಯಜ್ಞಕ್ಕೋಸ್ಕರ, (ಅಂದರೆ ಯಜ್ಞವನ್ನು ಕುರಿತು ಹೋಗುವುದಕ್ಕಾಗಿ) ಹಿ - ಯಾವ ಕಾರಣದಿಂದ ಪೂರ್ವಂ = ಪ್ರಥಮದಲ್ಲಿಯೇ, ಇಷ್ಯತಿ = (ಇಷಗತೌ) ಹೋಗುತ್ತಾಳೋ ಹಿ=ಪ್ರಸಿದ್ಧ. ಉಷೋದೇವಿಯು ರಥವನ್ನು ಕುರಿತು ಹೋಗಿದ್ದಾಳೆ ಎಂದು ಹೇಳಿದ್ದಕ್ಕೆ ಪ್ರಯೋಜನವೇನೆಂದರೆ) ಆತಃ =ಆದ ಕಾರಣ ಆ ಉಷೋದೇವಿಯಿಂದ ಕೂಡಿಕೊಂಡು ನೀವು ಬನ್ನಿರಿ ಎಂದು ಭಾವವು) ॥೧೦॥

ಋ ॥ (೪೦೯) ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।

ಪ್ರಾಯುಸ್ತಾರಿಷ್ಟಂ ನೀರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥೧೧॥

ಅ ॥ ನಾಸತ್ಯಾ ಅಶ್ವಿನಾ = ನಾಸಿಕಾಭಿಮಾನಿಗಳಾದ ಅಶ್ವಿನೀ ದೇವತೆಗಳಿರಾ, ತ್ರಿಭಿಃ ಏಕಾದಶೈಃ =ಹನ್ನೊಂದರ ಮೂರು ವರ್ಗಗಳಾದ, (ಅಂದರೆ ಮೂವತ್ತಮೂರು) ದೇವೇಭಿಃ =ದೇವತೆಗಳಿಂದೊಡಗೂಡಿ, ಇಹ = ಈ ಯಜ್ಞದಲ್ಲಿ, ಮಧು ಪೇಯಂ=ಪಾನ ಮಾಡಲಿಕ್ಕೆ ಅರ್ಹವಾದ ಸೋಮವನ್ನು ಕುರಿತು ಆಯಾತಂ =ಬನ್ನಿರಿ. ಬಂದು. ಆಯುಃ =ಆಯುಷ್ಯವನ್ನು (ನಮಗಾಗಿ) ಪ್ರತಾರಿಷ್ಟಂ= (ತೃಪ್ಲವನ ತರಣಯೋಃ) ಕೊಡಿರಿ. ರಪಾಂಸಿ= (ರಪವಧೇ ಕರಣೆ ಅಸುನ್ ಪ್ರತ್ಯಯವು ರಪ್ಯತೇ ಬಧ್ಯತೇ ನರಕಾದೌ ಯೈಃ ಪಾಪೈಃ ತಾನಿ ರಪಾಂಸಿ ಯಾವ ಪಾಪಗಳಿಂದ ನರಕಾದಿಗಳಲ್ಲಿ ಬಂಧಿಸಲ್ಪಡುತ್ತಾನೋ ಅಂತಹ ಪಾಪಗಳು ರಪಾಂಸಿ ಎನಿಸುತ್ತವೆ) ನಮ್ಮ ಪಾಪಗಳನ್ನು ನಿಃ ಮೃಕ್ಷತಂ= (ಮೃಜುಷ್ ಶುದ್ಧೌ) ಶೋಧಿಸಿರಿ. ದ್ವೇಷಃ = (ದ್ವಿಷ ಅಪ್ರೀತೌ) ದ್ವೇಷಿಗಳಾದ ಶತ್ರುಗಳನ್ನು ಸೇಧತಂ=ಪ್ರತಿಷೇಧಿಸಿರಿ. ಸಚಾಭುವಾ= (ಸಹ ಶಬ್ದದ ಚಕಾರಕ್ಕೆ ಚಕಾರಾದೇಶವು. ಸಹ ಭರತಃ = ಒಟ್ಟಿಗೇನೇ ಇರುವ) ನಮಗೆ ಸಖಿಗಳಾಗಿ, ಭವತಂ =ಆಗುವಿರಿ.

ವಿ ॥ ಅಷ್ಟೌ ವಸವಃ ಏಕಾದಶರುದ್ರಾಃದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾ್ಯ ಸೋಮಪಾಃ ಎಂದು ಬ್ರಾಹ್ಮಣವು. ೮ ವಸುಗಳು. ೧೧ ರುದ್ರರು, ೧೨ ಆದಿತ್ಯರು, ಪ್ರಜಾ ಪತಿ ವಷಟ್ಕಾರ, ಎಂದು ಸೋಮಪಾನ ಮಾಡುವ ದೇವತೆಗಳು (೩೩) ಮೂವತ್ತಮೂರು ॥೧೧॥

ಋ ॥ ೪೧೦ ॥ ಆ ನೋ ಅಶ್ವಿನಾ ತ್ರಿವೃತಾ ರಥೇನಾರ್ವಾಂಚಂ ರ ಯಿಂ ವಹತಂ ಸುವೀರಂ ।
ಶೃಣ್ವಂತಾ ವಾಮವಸೇ ಜೋಹವೀಮಿವೃಧೇ ಚ ನೋ ಭವತಂ ವಾಜಸಾತೌ ॥೧೨॥೫॥೩೪॥

ಅ ॥ ಅಶ್ವಿನಾ = ಅಶ್ವಿನೀ ದೇವತೆಗಳಿರಾ, ನಃ ನಮಗೆ (ಕೊಡುವುದಕ್ಕಾಗಿ) ಸುವಿರಂ = (ಶೋಭನಃವೀರಃ=ತಿಳಿ೨ ಪುತ್ರಃ ಯಸ್ಯ) ಪುತ್ರನಿಂದ ಕೂಡಿರುವ, ರಯಿಂ =ದ್ರವ್ಯವನ್ನು, ತ್ರಿವೃತಾರಥೇನ =ಸಂಚಾರದಿಂದ ೩ ಲೋಕಗಳ ಸಂಬಂಧವುಳ್ಳ ರಥದಿಂದ, ಅರ್ವಾಂಚಂ =ಸ್ವರ್ಗಕ್ಕಿಂತ ಅಧಮಫಲರೂಪವಾದುದನ್ನು ಆ ವಹತಂ =ಹೊಂದಿಕೊಡಿರಿ (ಅಂದರೆ =ಸ್ವರ್ಗಕ್ಕಿಂತ ಅಧಮ ಫಲರೂಪವಾದ ಪುತ್ರ ಸಹಿತವಾದ ದ್ರವ್ಯವನ್ನು ನಮಗೆ ಕೊಡುವುದಕ್ಕಾಗಿ ರಥದಿಂದ ತಮ್ಮನ್ನು ಹೊಂದಿರಿ) ಶೃಣ್ವಂತಾ =ಕೇಳುವ (ಹೇಳಿದುದನ್ನು ನಿಶ್ಚಯಿಸುವ) ವಾಂ =ನಿಮ್ಮನ್ನು ಕುರಿತು, (ಅಹಂ =ನಾನು) ಅವಸೇ =ರಕ್ಷಣೆಗೋಸ್ಕರ, ಜೋಹವೀಮಿ = (ಹ್ವೇಞ್ತಂತು ಸಂತಾನೇ) ಕರೆಯುತ್ತೇನೆ. (ಆ ಕಾರಣ) ವಾಜಸಾತೌ =ಯುದ್ಧದಲ್ಲಿ (ವಾಜ =ಯುದ್ಧದ ಪ್ರೈಕ್ಷಯೇ, ತಥಾ ಪಿ ಧಾತುಗಳಿಗೆ ಅನೇಕಾರ್ಥಗಳಿದ್ದುದರಿಂದ, ಪ್ರಾಪ್ತಿಯೆಂದರ್ಥವು) ನಃ ನಮ್ಮ ಅವಸೇ = ರಕ್ಷಣೆಗಾಗಿಯೂ ವೃಧೇ = ಅಭಿವೃದ್ಧಿಗಾಗಿಯೂ, ಭವತಂ =ಆಗಿರಿ ॥೧೨॥೫೩೪॥

ಅವ ॥ ಹ್ವಯಾಮ್ಯಗ್ನಿಂ ಎನ್ನುವ ೩೫ನೇ ಸೂಕ್ತಕ್ಕೆ ೧೧ ಋಕ್ಕುಗಳು, ೨ ವರ್ಗಗಳು ೧ನೇ ಋಕ್ಕಿಗೆ ಅಗ್ನಿ ಮಿತ್ರ ವರುಣ ರಾತ್ರಿ ಸವಿತೃ ದೇವತೆಗಳು. ಬೇರೆ ಋಕ್ಕುಗಳಿಗೆ ಸವಿತೃ ದೇವತೆಯು. ೧ನೇ ಮತ್ತೂ ೯ನೇ ಋಕ್ಕುಗಳು ಜಗತೀ ಛಂದಸ್ಸುಗಳು ಬೇರೆ ಋಕ್ಕುಗಳು, ತ್ರಿಷ್ಟುಪ್ ಛಂದಸ್ಸುಗಳು.

ಋ ॥ (೪೧೧) ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ ಹ್ವಯಾಮಿ ಮಿತ್ರಾ ವರುಣಾವಿಹಾವಸೇ ।

ಹ್ವಯಾಮಿ ರಾತ್ರೀಂ ಜಗತೋ ನಿವೇಶನೀಂ ಹ್ವಯಾಮಿ ದೇವಂ ಸವಿತಾರಮೂತಯೇ ||೧||

ಅ || (ನಾನು) ಸ್ವಸ್ತಯೇ = ನಿರಂತರದಲ್ಲಿಯೂ ಸೌಖ್ಯವಾಗುವುದಕ್ಕಾಗಿ, ಪ್ರಥಮಂ ಅಗ್ನೀ=ವೈಶ್ವಾನ ರಾಖ್ಯ ಅಗ್ನಿಯನ್ನು, ಪ್ರಯಾಮಿ =ಕರೆಯುತ್ತೇನೆ. ಮಿತ್ರಾ ವರುಣೌ =ಮಿತ್ರ ವರುಣರೆಂಬ ಭಗವದ್ರೂಪ ವಿಶೇಷಗಳನ್ನು ಅವಸೇ =ರಕ್ಷಣೆಗೋಸ್ಕರ, ಇಹ = ಆ ಯಜ್ಞದಲ್ಲಿ ಹ್ವಯಾಮಿ = ಕರಿಯುತ್ತೇನೆ. ಜಗತಃ =ಸಮಸ್ತ ಜಗತ್ತಿಗೆ, ನಿವೇಶನೀಂ = (ನಿವಿಂಶಂತೇ ಅಶ್ರ) ಅಶ್ರಯಭೂತಗಳಾದ, ರಾತ್ರೀಂ = (ರಾತಿ ದದಾತಿ ಇಷ್ಟಂ ರಾಧಾತುವಿಗೆ ತ್ರಿಪ್ ಪ್ರತ್ಯಯ) ರಾತ್ರೀ ಎಂದು ಹೆಸರುಳ್ಳ ಶ್ರೀ ವಿಷ್ಣುವನ್ನು, ರಾತ್ರಿ ದೇವತೆಯನ್ನು, ಹ್ವಯಾಮಿ = ಕರಿಯುತ್ತೇನೆ. ಸವಿತಾರಂ ದೇವಂ=ಸವಿತೃ ದೇವತೆಯನ್ನು ಕೂಡ ಊತಯೇ =ರಕ್ಷಣೆಗೋಸ್ಕರ ಹ್ವಯಾಮಿ = ಕರಿಯುತ್ತೇನೆ (ಆಗ್ನ್ಯಾದಿ ಪದಗಳಿಂದ ಶ್ರೀ ವಿಷ್ಣುವನ್ನೇ ಇಟ್ಟುಕೊಳ್ಳಬೇಕು. ಅವುಗಳನ್ನು ಶ್ರೀ ವಿಷ್ಣುವಿನಲ್ಲಿ ನಿರ್ವಚನ ಮಾಡಿಯಾಗಿದೆ.)

ವಿ || (1) ಸ್ಥೂಲಭುಗ್ವೈಶ್ವಾನರಃ ಪ್ರಥಮ ಪಾದಃ ಎಂದು ಮಾಂಡೂಕೋಪನಿಷತ್ತಿನಲ್ಲಿ ವಿಶ್ವ ಎಂದು ಹೆಸರುಳ್ಳ ಜಾಠರಾಗ್ನಿಯಲ್ಲಿ ಅಂತರ್ಗತನಾದ ವೈಶ್ವಾನರನು ಪ್ರಥಮನೆಂದು ಹೇಳಿದೆ. (2) ಆದುದರಿಂದಲೇ ಬ್ರಾಹ್ಮಣದಲ್ಲಿ ಅಗ್ನಿರ್ವಾವಿಷವೈಶ್ವಾನರಃ ಎಂಬ ವಾಕ್ಯದಲ್ಲಿ ಶರೀರದಲ್ಲಿರತಕ್ಕ ಜಾಠಾರಾಗ್ನಿಗೆ ವೈಶ್ವಾನರ ಎಂದು ಹೆಸರುಳ್ಳ ವಿಶ್ವನೆನಿಸಿದ ಶ್ರೀ ಹರಿಯ ಸನ್ನಿಧಾನವಿದ್ದುದರಿಂದ ವೈಶ್ವಾನರನೆಂದು ಹೆಸರು ೫ ಜ್ವಾಲೆಗಳಿವೆ ಎಂದೂ ಹೇಳಿದೆ. (3) ಈ ಅಭಿಪ್ರಾಯದಿಂದಲೇ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ । ಪ್ರಾಣಾಪಾನಸ ಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ । ಎಂದು ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಅರ್ಜುನನಿಗೆ ಉಪದೇಶಿಸಿರುವನು. ||೧||

ಭಾ || (1) ಹ್ವಯಾಮಿ ದೇವಾನಗ್ನಿಪೂರ್ವಾನಥೋವಾ ವಿಷ್ಣುಂ ತೈಸ್ತೈರ್ನಾಮಭೀರಾಶಿ ಯಸ್ಮಾತ್ । ರತಿ ತ್ವಾದ್ವಾ ರತಿದತ್ವಾತ್ಸರಾತ್ರೀ ||೧||

ಅ|| ಅಗ್ನಿಯೇ ಮೊದಲಾಗಿ ಉಳ್ಳ ದೇವತೆಗಳನ್ನು ಕರಿಯುತ್ತೇನೆ. ಅಥವಾ ಅಗ್ನಿ ಮೊದಲಾದ ಪದಗಳನ್ನು ಮೊದಲು ಶ್ರೀ ವಿಷ್ಣುಗಳನ್ನು ನಿರ್ವಚನ ಮಾಡಿದ ಪ್ರಕಾರ ಆವಾವ ಅಗ್ನ್ಯಾದಿ ನಾಮಗಳಿಂದ ಯುಕ್ತನಾದ ಶ್ರೀ ವಿಷ್ಣುವನ್ನು ಕರಿಯುತ್ತೇನೆ. (2) (ಮೊದಲು ವ್ಯಾಖ್ಯಾನ ಮಾಡದಿರುವುದರಿಂದ ರಾತ್ರಿ ಶಬ್ದವನ್ನು ಶ್ರೀ ವಿಷ್ಣುವಿನಲ್ಲಿ ನಿರ್ವಚನ ಮಾಡುತ್ತಾರೆ) ಯಾವ ಕಾರಣದಿಂದ ಶ್ರೀ ವಿಷ್ಣುವು ಭಕ್ತರಿಗೆ ಅಭೀಷ್ಟವನ್ನು ಕೊಡುತ್ತಾನೋ ಆದ ಕಾರಣ ಶ್ರೀ ವಿಷ್ಣುವು ರಾತ್ರಿ ಎನಿಸುತ್ತಾನೆ. (ಸರ್ವಧಾತುಭ್ಯಃಷ್ಟನ್ ಎಂಬ ಸೂತ್ರದಿಂದ ರಾತಿಧಾತುವಿಗೆ ಷ್ಟನ್ ಜೀಷ್ಂ) ಅಥವಾ ಶ್ರೀ ಹರಿಯು ರಮಣಕರ್ತನಾದುದರಿಂದ ರಾತ್ರೀ ಎನಿಸುತ್ತಾನೆ. (ರಮುಕ್ರೀಡಾಯಾಂ ಆಕಾರಾಗಮವು ಷ್ಟಪ್ರತ್ಯಯವು) ಅಥವಾ ರತಿಯನ್ನು ಕೊಡುವುದರಿಂದ ಶ್ರೀ ಹರಿಯು ರಾತ್ರೀ ಎನಿಸುತ್ತಾನೆ (ರತಂ ರಾತೀತಿ ರಾತ್ರೀ ರಾದಾನೇ ರತಶಬ್ದದಲ್ಲಿ ರೇಫದಿಂದ ಪರವಾದ ಆ ಆಕಾರಕ್ಕೆ ದೀರ್ಘವು. ತಕಾರದಿಂದ ಮೇಲಿನ ಆಕಾರಕ್ಕೆ ಲೋಪವು ಈ ಕಾರವು.) ||೧||

ಋ || (೪೧೨) ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।

**ಹಿರಣ್ಯಯೇವ ಸವಿತಾ ರಥೇನಾ ದೇವೋಯಾತಿ ಭುವನಾನಿ ಪಶ್ಯನ್** ॥೨॥

ಅ ॥ ದೇವಾ, ಸವಿತಾ = ಕ್ರೀಡಾದಿಗುಣವಿಶಿಷ್ಟನಾದ ಸೂರ್ಯನು, ಕೃಷ್ಣೇನ ರಜಸಾ =ರಾತ್ರಿಯಲ್ಲಿ ಉಂಟಾಗತಕ್ಕ ಕಗ್ಗತ್ತಲೆಯನ್ನು) ನಿವರ್ತಕನಾಗಿ ಪ್ರವರ್ತಿಸುತ್ತಾ, ಆ ವರ್ತಮಾನಃ=ಚೆನ್ನಾಗಿ ಪ್ರವರ್ತಿಸುವವನಾಗಿ, ಅಮೃತಂ =ದೇವತೆಗಳ ಸಮುದಾಯವನ್ನು, ಮರ್ತ್ಯಂ=ಮನುಷ್ಯರ ಸಮುದಾಯವನ್ನೂ, (ಇತರ ಪ್ರಾಣಿಗಳನ್ನೂ) ನಿವೇಶಯನ್ =ರಾತ್ರಿಗಳಲ್ಲಿ ನಿದ್ದೆ ಬರುವಂತೆ ಮಾಡುವವರಾಗಿ, ಹಿರಣ್ಯಯೇನ ರಥೇನ=ಹಿರಣ್ಮಯವಾದ ರಥದಿಂದ, ಭುವನಾನಿ = ಎಲ್ಲಾ ಲೋಕಗಳನ್ನು, ಪಶ್ಯನ್=ನೋಡುತ್ತಾ, ಅಯಾತಿ =ಬರುತ್ತಾನೆ. (ಲೋಕಗಳನ್ನು ನೋಡುವುದಕ್ಕಾಗಿ ಸೂರ್ಯ ಸಂಚಾರವೆಂದುಕ್ತವಾಯ್ತು) ಅಥವಾ ಸವಿತಾ ದೇವಃ =ಸೂರ್ಯಂತರ್ಗತನಾದ ಜನಾರ್ದನನು, ಕೃಷ್ಣೇನ ರಜಸಾ ಆ ವರ್ತಮಾನಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು, ಅಥವಾ (ಕೇವಲ ವಿಷ್ಣುಪಕ್ಷದಲ್ಲಿಯೂ ಆಧ್ಯಾತ್ಮಸ್ಥ ವಿಷ್ಣುಪಕ್ಷದಲ್ಲಿಯೂ) ಸವಿತಾ ದೇವಃ ಜಗತ್ತನ್ನು ಸೃಷ್ಟಿಸುವ ಶ್ರೀ ವಿಷ್ಣುವು, ಕೃಷ್ಣೇನ ರಜಸಾ = ಅವಿದ್ಯೆಯೆನ್ನುವ ಹೃದಯಾಂಧಕಾರದಿಂದ, (ಅದನ್ನು ಹೋಗಲಾಡಿಸುವವನಾಗಿ) ಆ ವರ್ತಮಾನಃ =ಚೆನ್ನಾಗಿ ಪ್ರವರ್ತಿಸುವವನಾಗಿ, ಅಮೃತಂ =ಮುಕ್ತರ ಸಮುದಾಯವನ್ನೂ ಮರ್ತ್ಯ=ಸಂಸಾರಿಗಳ ಸಮುದಾಯವನ್ನೂ ನಿವೇಶಯನ್ = ಪ್ರಲಯಕಾಲದಲ್ಲಿ ತನ್ನಲ್ಲಿಯೇ ಆವಾಸಗೊಳಿಸುವವನಾಗಿ, ಹಿರಣ್ಯಯೇನ ರಿಥೇನ =ಹಿರಣ್ಮಯವಾದ ತನ್ನ ರಥದಿಂದ, ಅಥವಾ ಭಕ್ತರ ಶುದ್ಧವಾದ ಶರೀರದಿಂದ, ಭುವನಾನಿ=ಲೋಕಗಳನ್ನು ಪಶ್ಯನ್ =ನೋಡುತ್ತಾ, ಆಯಾತಿ =ಬರುತ್ತಾನೆ. ॥೨॥

**ಭಾ ॥ (1) ಕೃಷ್ಣಂ ರಜಃ ತಾರ್ವರಂ ಹೃತ್ತಮೋ ವಾ। (2) ದೇವಾನ್ಸುಜಾತಾನಥವಾ ವಿಮುಕ್ತಾನಸ್ಯಾನ್ಮರ್ತ್ಯಾನ್ ಸೃತಿಗಾನ್ಪ್ರಾಲಯೇಷು । ನಿಶಾಸು ವಾ ಸ್ವಾತ್ಮನಿ ಸಂನಿವೇಶಯನ್ ಪ್ರಸ್ವಾಪಯನ್ಸ್ವಾ ರವಿಗೋ ಜನಾರ್ದನಃ ॥೨॥**

ಅ ॥ (1) (ಇಲ್ಲಿ ಕೃಷ್ಣಂ ರಜಃ ಎನ್ನುವುದನ್ನು ಶರೀರದಿಂದ ಹೊರಗೂ ಒಳಗೂ ವ್ಯಾಖ್ಯಾನ ಮಾಡುತ್ತಾರೆ) ಕೃಷ್ಣಂರಜಃ ಅಂದರೆ - (ಬಹಿಃ) ರಾತ್ರಿಯಲ್ಲಿ ಉಂಟಾಗತಕ್ಕ ಕಗ್ಗತ್ತಲೆಯು (ಅಂತಃ) ಶರೀರದೊಳಗಿನ ಅಜ್ಞಾನಾಂಧಕಾರವು. (2) (ದೇವೋ ಅಮೃತಂ ಮರ್ತ್ಯಂಚ ನಿವೇಶಯನ್ನಾಯಾತಿ ಎಂಬುದನ್ನು ಈ ಪ್ರಕಾರ ವ್ಯಾಖ್ಯಾನ ಮಾಡುತ್ತಾರೆ.) (ಸೂರ್ಯದೇವನು, ಕಗ್ಗತ್ತಲೆಯನ್ನು ಪ್ರವರ್ತಿಸುವವನಾಗಿ) ದೇವತೆಗಳ ಸಮುದಾಯಗಳನ್ನೂ ಮನುಷ್ಯರ ಸಮೂಹಗಳನ್ನೂ (ಇತರ ಪ್ರಾಣಿಗಳನ್ನು) ರಾತ್ರಿಗಳಲ್ಲಿ ನಿದ್ದೆ ಮಾಡುವವನಾಗಿ, (ಹಿರಣ್ಮಯವಾದ ರಥದಿಂದ ಲೋಕಗಳನ್ನು ನೋಡುತ್ತಾ ಬರುತ್ತಾನೆ.) ಅಥವಾ ಸೂರ್ಯಂತರ್ಗತನಾದ ಜನಾರ್ದನನು ಕೃಷ್ಣೇನ ರಜಸಾ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥವು. ಅಥವಾ (ಜಗತ್ತನ್ನು ಸೃಷ್ಟಿಸುವ ಶ್ರೀ ವಿಷ್ಣುವು ಅವಿದ್ಯೆಯೆನ್ನುವ ಹೃದಯಾಜ್ಞಾನಾಂಧಕಾರವನ್ನು ಹೋಗಲಾಡಿಸುವವನಾಗಿ) ವಿಮುಕ್ತರ ಸಮುದಾಯಗಳನ್ನೂ ಸಂಸಾರದಲ್ಲಿರುವ ಮನುಷ್ಯರ ಸಮೂಹಗಳನ್ನು ಪ್ರಲಯಕಾಲದಲ್ಲಿ ತನ್ನಲ್ಲಿಯೇ ಇರಿಸುವವನಾಗಿ (ಹಿರಣ್ಮಯವಾದ ತನ್ನ ರಥದಿಂದ ಅಥವಾ ಭಕ್ತರ ಶುದ್ಧ ಶರೀರದಿಂದ ಲೋಕಗಳನ್ನು ನೋಡುತ್ತಾ ಬರುತ್ತಾನೆ. ॥೨॥

**ಋ ॥ (೪೧೩) ಯಾತಿ ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ ಯಜತೋ ಹರಿಭ್ಯಾಂ ।**

ಆದೇವೋ । ಯಾತಿ ಸವಿತಾ ಪರಾವತೋಽಪ ವಿಶ್ವಾ ದುರಿತಾ ಬಾಧಮಾನಃ ||೩||

ಅರ್ಥ || (೪೧೨ ನೇ ಋಕ್ಕಿನಲ್ಲಿ ಹೇಳಿದ ಆಯಾತಿ ಎನ್ನುವುದನ್ನು ಅನುವಾದ ಮಾಡಿ ಅಲ್ಲಿಯ ವಿಶೇಷಗಳು ಇಲ್ಲಿ ಹೇಳಲ್ಪಡುತ್ತವೆ.) ದೇವಃ ಸವಿತಾ = ಸೂರ್ಯದೇವನು, ಪ್ರವತಾ = (ಪ್ರಪೂರ್ವಸ್ಯ ವನ ಷಣ ಸಂಭಕ್ತೌ ಪಚಾದ್ಯಜಂತಃ , ನೀಚತ್ವಾರ್ಥಕಃ) ಬಗ್ಗಿದ ಪ್ರದೇಶದಿಂದ (ಅಂದರೆ ದಕ್ಷಿಣಾಯನದಲ್ಲಿ ತಗ್ಗು ಪ್ರದೇಶಗಳಿಂದ) ಅಯಾತಿ = ಬರುತ್ತಾನೆ. ಉತ್ತರಾಯಣದಲ್ಲಿ, ಉದ್ವರಾ = ಎತ್ತರ ಪ್ರದೇಶಗಳಿಂದ ಉಚ್ಚಪ್ರದೇಶಗಳಿಂದ ನಿತ್ಯದಲ್ಲಿಯೂ ಆ ಯಾತಿ =ಬರುತ್ತಾನೆ. (ನಿತ್ಯಂ ಎಂಬ ವಚನವು ಕ್ರಿಯೆಯು ನಿತ್ಯವಾದುದು ಸೂರ್ಯನ ಸಂಚಾರವು ಸದಾತನ ಎಂಬ ಅರ್ಥದಲ್ಲಿ ಲಟ್ ಪ್ರಯೋಗವು.) ಯಜತಃ = (ಯಜಃ ಧಾತುವಿಗೆ ಆತ ಪ್ರತ್ಯಯವು ಯಾ ವಿಷಯನಾದವನು, ಶುಭ್ರಾಭ್ಯಾಂ = (ಶುಭ್ರೌ ಚ್ರತೌರಾ ಚ ರಮಣೀಯೌ ಚ) (ಗಮನಾದಿಗಳಿಂದ ಶುಭ್ರಗಳೂ ರೂಪದಿಂದ ರಮಣೀಯಗಳೂ ಆದ, ಹರಿಭ್ಯಾಂ = ಎರಡು ಕುದುರೆಗಳಿಂದ, (ಯುಕ್ತವಾದ ರಥದಿಂದ) ಆಯಾತಿ = ಬರುತ್ತಾನೆ. ಮತ್ತು ಸವಿತಾ = ಸೂರ್ಯನು (ಪ್ರಾಣಿಗಳ) ವಿಶ್ವಾ ದುರಿತಾ =ಸಮಸ್ತದುರಿತಗಳನ್ನು, ಅನಬಾಧಮಾನಃ = ನಾಶಗೊಳಿಸುವವನಾಗಿ, ಪರಾವತಃ =ದೂರದಿಂದಲೇ ಅಯಾತಿ = ಬರುತ್ತಾನೆ ||೩||

ಭಾ || (1) ಅಯಾತಿ ನಿತ್ಯಂ ಚೋಚ್ಚನೀಚೈಃ ಪ್ರದೇಶೈಃ ಶುಭ್ರಾಶ್ವಯುಕ್ತೇನ ರಥೇನ ಯಾಜ್ಯಃ । (2) ಶುಭ್ರೌ ಚ ತೌ ರಮಣ್ಮಯೌಚ ಶುಭ್ರೌ ಪುರೋಗಾಶ್ವೌ ಹರಿದಶ್ವೋ ಹಿ ಸೂರ್ಯ । ಪರಾವತೋ ದೂರತೋ ||೩||

ಅರ್ಥ || (1) ಯಾಗವಿಷಯನಾದ ಸೂರ್ಯನು ನಿತ್ಯದಲ್ಲಿಯೂ ಉಚ್ಚಪ್ರದೇಶ ನೀಚಪ್ರದೇಶಗಳಿಂದ ಬರುತ್ತಾನೆ. ಶುಭ್ರಗಳೂ ರಮಣೀಯಗಳೂ ಆದ ಅಶ್ವಗಳಿಂದ ಕೂಡಿದ ರಥದಿಂದ ಬರುತ್ತಾನೆ.) (೩) ಶುಭ್ರ ಶಬ್ದವು ಶ್ವೇತ (ಬಿಳಿಪು) ಎಂಬ ಅರ್ಥವನ್ನು ಹೇಳುತ್ತದೆ ಎಂಬ ಪ್ರತೀತಿಯನ್ನು ನಿವಾರಿಸುವುದಕ್ಕಾಗಿ ಹೇಳುತ್ತಾರೆ) ರಮುಧಾತುವಿಗೆ ಡ ಪ್ರತ್ಯಯವು. ಆಕಾರ ಲೋಪವು) ಶುಭೌಚತೌ ಕೌ =ರಮಣೀಯೌಚ ಶುಭ್ರೌ = ಗತ್ಯಾದಿಗಳಿಂದ ಶುಭ್ರಗಳೂ ರೂಪದಿಂದ ರಮಣೀಯಗಳೂ ಆಗಿರುವುದರಿಂದ ತುಭ್ರೌ ಎನಿಸುತ್ತದೆ. ಹಾಗಾದರೆ ಸೂರ್ಯನಿಗೆ ೭ ಕುದುರೆಗಳು. ೨ ಕುದುರೆಗಳನ್ನು ತೆಗೆದುಕೊಂಡದ್ದು ಹೇಗೆ ? ಎಂದರೆ ) ೭ ಕುದುರೆಗಳಲ್ಲಿ ಮುಂದೆ ಹೋಗುವವುಗಳು ಎರಡು ಕುದುರೆಗಳು. ಅವುಗಳೇ ಪ್ರಧಾನಗಳು. ಆದ ಕಾರಣ ಎರಡೇ ಕುದುರೆಗಳನ್ನು ಹೇಳಿರುತ್ತಾರೆ) ಶುಭ್ರ ಶಬ್ದಕ್ಕೆ ಪ್ರಸಿದ್ಧವಾದ ಬಿಳಿಪು ಎಂಬ ಅರ್ಥವನ್ನು ಬಿಡಲು ಕಾರಣವೇನೆಂದರೆ) ಸೂರ್ಯನು ಹಸುರು ಬಣ್ಣದ ಕುದುರೆಗಳುಳ್ಳವನು. (ಆದ ಕಾರಣ (ಹೀಗೆ ಅರ್ಥ ಹೇಳಿದ್ದು) ಪ್ರರಾವತಃ ಎನ್ನುವುದಕ್ಕೆ ದೂರದಿಂದ ಎಂದರ್ಥವು) ||೩||

ಋ || (೪೧೪) ಅಭೀವೃತಂ ಕೃಶನೈರ್ವಿಶ್ವರೂಪಂ ಹಿರಣ್ಯತಮ್ಯಂ ಯಜತೋ ಬೃಹಂತಂ ।

ಆಸ್ಥಾದ್ರಥಂ ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ ತವಿಷೀಂ ದಧಾನಃ ||೪||

ಅರ್ಥ || ಯಜತಃ = (ಯಜಧಾತೋಃ ಅತಚ್ ಪ್ರತ್ಯಯಃ) ಯಾಗ ವಿಷಯನಾದ, ಚಿತ್ರಭಾನುಃ = ಚಿತ್ರ ರಶ್ಮಿಗಳುಳ್ಳ,

ಚಿತ್ರಜ್ಞಾನಗಳುಳ್ಳ, ಸವಿತಾ = ಶ್ರೀ ಜನಾರ್ದನನು, ಕೃಷ್ಣಾ ರಜಾಂಸಿ = ಕಗ್ಗತ್ತಲೆಗಳನ್ನೂ, ತವಿಷೀಂ = ತೇಜಸ್ಸನ್ನು ಕೂಡ, ದಧಾನಃ =ಧರಿಸಿದವನಾಗಿ, (ಅಂದರೆ ಅವುಗಳಿಗೆ ನಿಯಾಮಕನಾಗಿ) ಅಥವಾ ಕೃಷ್ಣಾ, ರಜಾಂಸಿ, ತವಿಷೀಂ = ತಮೋಗುಣ ರಜೋಗುಣ ಸತ್ವಗುಣಗಳನ್ನು (ಅವುಗಳಿಗೆ ನಿಯಾಮಕನಾಗಿ) ದಧಾನಃ = ಧರಿಸುವವನಾಗಿ, ಕೃಶನ್ಯೈಃ =ಸುವರ್ಣಗಳಿಂದ, ಅಭಿವೃತಂ = ಆಚ್ಛಾದಿತವಾದ, ವಿಶ್ವರೂಪಂ = ವಿಚಿತ್ರವಾದ, ಹಿರಣ್ಯಶಮ್ಯಂ = ಹಿರಣ್ಮಯವಾದ ನುಗ ಕೀಲುಗಳಿಂದ ಕೂಡಿದ, ಬೃಹಂತಂ ರಥಂ = ದೊಡ್ಡ ರಥವನ್ನು ಆ ಅಸ್ಥಾತ್ = ಏರಿದನು. (ಅಜಪೂರ್ವಕಾತ್ ಪ್ಯಾಗತಿ ನಿವೃತ್ತ್ಯಾ) ||೪||

ಭಾ || (1) ಅಭಿವೃತಶ್ಚ ರಥೋ ಹಿರಣ್ಯೈಸ್ತಸ್ಯ ಶಮ್ಯಾ ಯುಗಾಣೀ (2) ತಮಃ ಪ್ರಕಾಶೌ ಯದಧೀನೌ ಯತಸ್ತೌ ದಧಾನ ಇತ್ಯುಚ್ಯತೇ ವಾಸುದೇವಃ || (3) ಕೃಷ್ಣಂ ರಜಸ್ತವಿಷಿಃ ಸತ್ವಪೂರ್ವಾ ಗುಣಾಸ್ತ್ರಯೋ ವ್ಯುತ್ಕ್ರಮಾತ್ ||೪||

ಅರ್ಥ || (1) ಇಲ್ಲಿ ರಥವು ಕೃಶನಗಳಿಂದ ಅಭಿವೃತ (ಆಚ್ಛಾದಿತ) ಎಂದು ಹೇಳಿದೆ. ಅದನ್ನು ವ್ಯಾಖ್ಯಾನ ಮಾಡುತ್ತಾರೆ.) (ಕೃಶನಂ ಲೋಹಂ ಕನಕಂ ಎಂದು ಕೃಶನ ಶಬ್ದವು ಹಿರಣ್ಯನಾಮಗಳಲ್ಲಿ ಪಠಿತವಾದ ಪ್ರಯುಕ್ತ) ರಥವು ಹಿರಣ್ಯಗಳಿಂದ ಅಚ್ಛಾದಿತವಾಗಿದೆ. (ರಮ್ಯಾ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ. ರಥದ ಶಮ್ಯಾ ಅಂದರೆ ಯುಗಾಣೀ =ಯುಗ ಕೀಲವು. (ಕೀಲಕಂತು ದ್ವಯೋರಣೀ ಎಂಬ ಕೋಶದಿಂದ ಕೀಲ=ಅಣಿಯು (ಕೀಲು) (ನುಗದ ಕೀಲು) (2) ಆದಿತ್ಯವರ್ಣಂ ತಮಸಃ ಪರಸ್ತಾತ್ ಎನ್ನುವುದರಿಂದ ಶ್ರೀ ವಿಷ್ಣುವು ತಮಸ್ಸಿನಿಂದ ದೂರನು ಎಂದು ಹೇಳಿದೆ. ಮತ್ತು ನ ತತ್ರ ಸೂರ್ಯೋ ಭಾತಿ ಎಂಬ ವಾಕ್ಯದಿಂದ ಶ್ರೀ ವಿಷ್ಣುವು ಸೂರ್ಯಾದಿ ಪ್ರಕಾಶಗಳಿಗೆ ಅವಿಷಯನು ಎಂದೂ ಹೇಳಿದೆ. ಆದ ಕಾರಣ ತಮಃ ಪ್ರಕಾಶಗಳನ್ನು ಶ್ರೀ ಹರಿಯು ಧರಿಸಿರುತ್ತಾನೆ ಎಂಬ ಉಕ್ತಿಯು ಹೇಗೆ ಕೂಡುತ್ತದೆ ಎಂದರೆ) ತಮಃ ಪ್ರಕಾಶಗಳನ್ನು ಶ್ರೀ ಹರಿಯು ಧರಿಸಿರುತ್ತಾನೆ ಎಂಬ ಉಕ್ತಿಯು ಹೇಗೆ ಕೂಡುತ್ತದೆ ಎಂದರೆ) ತಮಃ ಪ್ರಕಾಶಗಳು ಪ್ರವೃತ್ತಿ ರೂಪ ಕಾರ್ಯದಲ್ಲಿ ಯಾವ ಶ್ರೀ ವಿಷ್ಣುವಿನ ಅಧೀನಗಳಾಗಿಯೇ ಇವೆಯೋ, ಯಾವ ಶ್ರೀ ವಿಷ್ಣುವಿನಿಂದಲೇ ಉತ್ಪನ್ನಗಳಾಗಿಯೇ ಇವೆಯೋ, ಅಂತಹ ವಾಸುದೇವನು ಆ ತಮಃ ಪ್ರಕಾಶಗಳನ್ನೂ ಧರಿಸಿರುತ್ತಾನೆ ಎಂದು ಹೇಳಲ್ಪಡುತ್ತಾನೆ. (ಕೃಷ್ಣಾ ಇತ್ಯಾದಿ ಪದಗಳಿಗೆ ಬೇರೆ ರೀತಿಯಾಗಿಯೂ ಅರ್ಥಗಳನ್ನು ಹೇಳುತ್ತಾರೆ) (ಕೃಷ್ಣಾ ರಜಾರಿಸಿ ಎಂಬುವಲ್ಲಿ ಕೃಷ್ಣ ರಜಃ ಶಬ್ದಗಳಿಗೆ ಮೊದಲು ಅಂಧಕಾರ ಎಂಬ ಅರ್ಥವನ್ನು ಹೇಳಿರುವರು. ಈಗಲಾದರೂ ತಮೋಗುಣ ರಜೋಗುಣ ಎಂಬ ಅರ್ಥವನ್ನು ಗ್ರಹಿಸಿರುವರು. ಸತ್ವಾದಿಗುಣಗಳ ಪ್ರವೃತ್ತಿ ವಿಕಾರವು ಮಹತ್ತತ್ವ ಅಹಂಕಾರ ತತ್ವ ಮೊದಲಾದುದು. ಅವು ಅನೇಕ ವಿಧಗಳಾಗಿರುವುದರಿಂದ ಅದನ್ನು ವಿವಕ್ಷಾ ಮಾಡಿಕೊಂಡು ಶ್ರುತಿಯಲ್ಲಿ ಕೃಷ್ಣಾ ರಜಾಂಸಿ ಎಂಬ ಬಹುವಚನವು) ಸತ್ವ ಗುಣವೇ ಮೊದಲಾದ ಮೂರು ಗುಣಗಳು ಕೃಷ್ಣ ರಜಃ ತವಿಷೀ ಎಂಬ ಮೂರು ಪದಗಳಿಂದ ಹೇಳಲ್ಪಡುತ್ತವೆ. (ಯಥಾ ಕ್ರಮವಾಗಿ ಅಲ್ಲ ಮತ್ತೆ) ವ್ಯುತ್ಕ್ರಮವಾಗಿ (ಏಕೆಂದರೆ ಸತ್ವ ಗುಣದಲ್ಲಿ ಕೃಷ್ಣತ್ವವಿಲ್ಲ. ತಮಸ್ಸಿನಲ್ಲಿ ತವಿಷೀತ್ವ (ತೇಜಸ್ಸು)ವಿಲ.

ವಿ || (1) ಕೃಷ್ಣತ್ವವು ತಪಸ್ಸಿನಲ್ಲಿದೆ ಎಂಬುವುದು ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಜನಯಂತೀಂ ಸರೂಪಾಂ, ಎಂಬಲ್ಲಿ ಪ್ರಕೃತಿಯಿಂದ ಆಗತಕ್ಕ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣೀಭೂತಗಳಾದ ರಜೋ ಗುಣ ಸತ್ವಗುಣ ತಮೋಗುಣಗಳನ್ನು ಲೋಹಿತ ಶುಕ್ಲ ಕೃಷ್ಣ ಶಬ್ದಗಳಿಂದ ಗ್ರಹಣ ಮಾಡಿರುವುದರಿಂದ ಸಿದ್ಧಿಸುತ್ತದೆ. (2) ಸತ್ವಾತ್ಸಂಜಾಯತೇ ಜ್ಞಾನಂ ಎಂಬ ಪ್ರಮಾಣದಿಂದ ತೇಜಸ್ಸಿನಲ್ಲಿ ಪ್ರಕಾಶ ಹೇತುತ್ವವಿದ್ದ ಪ್ರಯುಕ್ತ ಸತ್ವ ಗುಣವಿದೆ ಎಂಬುವುದು ಸಿದ್ಧವಾಗುತ್ತದೆ. ||೪||

ಋ || (೪೧೫) ವಿಜನಾನ್ ಚ್ಛ್ಯಾವಾಃ ಶಿತಿಪಾದೋ ಅಖ್ಯನ್ರಥಂ ಹಿರಣ್ಯಪ್ರ ಉಗಂ ವಹಂತಃ |

ತ್ವದ್ವಿಶಃ ಸವಿತುರ್ದೈರ್ವ್ಯಸ್ಯೋಪಸ್ಥೇ ವಿಶ್ವಾ ಭುವನಾನಿ ತಸ್ಥುಃ ||೫||

ಅ || ಶ್ಯಾವಾಃ = (ಕ್ವಾ ಗ್ವಾ ಶ್ವಾ ದ್ವಾ ಭ್ಯೋವಃ ಎಂಬ ಸೂತ್ರದಿಂದ ವ ಪ್ರತ್ಯಯವು. ಶ್ಯೈಜ್ ಗತೌ) (ಶ್ಯಾವಃ ಸ್ಯಾತ್ಕಪಿತೋ ಧೂಮಃ ಎಂಬ ಕೋಶದಿಂದ ಕೃಷ್ಣ ಪೀತ (ಕಪ್ಪು ಹಳದಿ) ಬಣ್ಣಗಳಿಂದ ಮಿತ್ರವಾದ ರೂಪವಿದ್ದುದರಿಂದ) ಶ್ಯಾಮ ವರ್ಣಗಳಾದ ಶಿತಿ ಪಾದಃ ಶಿಶಿಃಕೃಷ್ಣೇ ಶಿತೇ ಪೂಜ್ಯೇ ಎಂಬ ವಿಶ್ವ ಕೋಶದಿಂದ) ನೀಲ ಪಾದಗಳುಳ್ಳ, ಹಿರಣ್ಯ ಪ್ರಉಗಂ = ಹಿರಣ್ಯದಿಂದ ಸಂಬಂಧ್ಧವಾದ ರಥದ ಅವಯವಗಳ ಸಂಧಿ ಉಳ್ಳ, ರಥಂ = ರಥವನ್ನು, ಜನಾನ್ = ಜನರನ್ನು ಕುರಿತು, ವಹಂತಃ =ಹೊರುತ್ತಿರುವ ಸವಿತುಃ = ಸೂರ್ಯನ (ಆ ಪ್ರಸಿದ್ಧಗಳಾದ ಕುದುರೆಗಳು) ಶಶ್ವತ್ = ಯಾವಾಗಲೂ, ವಿಶಃ = ಪ್ರಜೆಗಳನ್ನು (ಇಡೀ ಜಗತ್ತನ್ನು) ವಿ ಅಖ್ಯತ್ ನೋಡುತ್ತವೆ (ಯಾವ ಸೂರ್ಯನ ಕುದುರೆಗಳೂ ಕೂಡ ಸಮಸ್ತವನ್ನು ನೋಡುತ್ತವೆ ಎಂದಾದ ಮೇಲೆ ಈ ಸೂರ್ಯನು ಸಮಸ್ತವನ್ನು ನೋಡುತ್ತಾನೆನ್ನುವುದು ಸುತರಾಂ ಸಿದ್ಧ) ಮತ್ತೂ ವಿಶ್ವಾ = ಸಮಸ್ತ, ಭುವನಾನಿ = ಜಗತ್ತುಗಳು, ದೈವ್ಯಸ್ಯ = (ದೇವತೆಗಳಿಗೆ ಪ್ರಿಯನಾದುದರಿಂದ ಅಥವಾ ದೇವತೆಗಳಿಗೆ ಸಂಬಂಧಿಯಾದುದರಿಂದ) ದೈವ್ಯನೆಂದು ಹೆಸರುಳ್ಳ, ಸವಿತುಃ = ಶ್ರೀ ಹರಿಯ, ಉಪಸ್ಥೇ ಸಮೀಪದಲ್ಲಿ, ತಸ್ಥುಃ =ಇರುತ್ತದೆ. ||೫||

ಭಾ || (1) ತತ್ತುರಂಗಾಃ | ಶ್ಯಾವಾಃ ಶ್ಯಾಮತ್ವಾನ್ನೀಲ ಪಾದೋ ಜಗತ್ತೇ ಪಶ್ಯಂತಿ (2) ಸಂಧಿಃ ಪ್ರಉಗಂ ತದ್ರಥಸ್ಯ || (3) ದೇವ ಪ್ರಿಯತ್ವಾದ್ದೈವ್ಯನಾಮ್ನೋ ಹರೇಸ್ತು ಸಮೀಪಸ್ಥಂ ಸರ್ವಗತ್ವಾಜ್ಜಗದ್ಧಿ ||೫||

ಅ || (1) ಕೃಷ್ಣ ಪೀತ ಮಿಶ್ರರೂಪಗಳಿದ್ದುದರಿಂದ ಶ್ಯಾಮಗಳೆನಿಸಿಕೊಂಡ, ನೀಲ ಪಾದಗಳುಳ್ಳ, (ಹಿರಣ್ಯದಿಂದ ಸಂಬದ್ಧ ಸಂಧಿಯುಳ್ಳ ಜನರನ್ನು ಕುರಿತು ಹೊರುತ್ತಿರುವ) ಸೂರ್ಯನ ಪ್ರಸಿದ್ಧ ಕುದುರೆಗಳು ಜಗತ್ತನ್ನು ನೋಡುತ್ತವೆ. (ಕುದುರೆಗಳೂ ಸರ್ವ ಜಗತ್ತನ್ನು ನೋಡುವಾಗ ಸೂರ್ಯನು ನೋಡುತ್ತಾನೆ ಎಂಬುವುದು ಸುತಾರಾಂ ಸಿದ್ಧ) (2) ಪ್ರಉಗವೆಂದರೆ ಯಾವುದೆಂದರೆ) ರಥದ ಮತ್ತು ರಥಾಯವಗಳ ಸಂಧಿಯು ಪ್ರಉಗ ಎನಿಸುತ್ತದೆ. (3) ಸಮಸ್ತ ಜಗತ್ತು ದೇವತೆಗಳಿಗೆ ಪ್ರಿಯನಾದುದರಿಂದ ದೈವ್ಯನೆಂದು ಹೆಸರುಳ್ಳಃ ಶ್ರೀ ಹರಿಯ ಸಮೀಪದಲ್ಲಿಯೇ ಇರುತ್ತದೆ. (ಜಗತ್ತೂ ವೈಕುಂಠದಲ್ಲಿರತಕ್ಕ ಶ್ರೀ ವಿಷ್ಣುವಿನ ಸಮೀಪದಲ್ಲಿರತಕ್ಕುದು ಹೇಗೆ ? ಎಂದರೆ) ಶ್ರೀ ಹರಿಯು ಸರ್ವತ್ರ ವ್ಯಾಪ್ತನಾದುದರಿಂದ ಯುಕ್ತವಾಗುತ್ತದೆ. ಸರ್ವತ್ರವ್ಯಾಪ್ತನೆಂಬುವುದು ಯಚ್ಛಕಿಂಚಿ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ | ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃಸ್ಥಿತಃ || ಇತ್ಯಾದಿ ಶ್ರುತಿ ಸಿದ್ಧವಾಗಿದೆ ||೫||

ಋ || (೪೧೬) ತಿಸ್ರೋ ದ್ಯಾವಃ ಸವಿತುರ್ದ್ವಾ ಉಪಸ್ಥಾಸಿ ಏಕಾ ಯಮಸ್ಯ ಭುವನೇ ವಿರಾಷಾಟ್ |

ಆಣಿಂ ನ ರಥಮಮೃತಾಧಿತಸ್ಥು ರಿಹಬ್ರವೀತು ಯ ಉ ತಚ್ಚಿಕೇತತ ||೬||೬||

ಅ ॥ ತಿಸ್ರಃ = ಮೂರು, ದ್ಯಾವಃ = (ದಿವು ಕ್ರೀಡಾ ವಿಜಿಗೀಷಾ ವ್ಯವಹಾರ ದ್ಯುತಿ ಸ್ತುತಿ ಮೊದಲಾದ ಸ್ವಪ್ನ ಕಾಂತಿ ಗತಿಷು) ಪ್ರತ್ಯಕ್ಷ ಅನುಮಾನ ಅಗಮಗಳಿಂದುಂಟಾದ ಯಥಾರ್ಥ ಜ್ಞಾನಗಳು, ಯಮಸ್ಯ (ಯಮ ಉಪಯಮೇ. ಯಚ್ಛತಿ ನಿಯಮಯತಿ ವಿಶ್ವ ಮಿತಿಯಮಃ) ಸರ್ವ ಜಗತ್ತನ್ನು ನಿಯಮಿಸುವ ಸವಿತುಃ = ಶ್ರೀ ಹರಿಯ ಉಪಸ್ಥಾ =ಸಮೀಪದಲ್ಲಿರುತ್ತವೆ. ಹಾಗೆಯೇ, ದ್ವೌ= ಜಡ ಅಜಡ ವಸ್ತುಗಳ ಸಮೂಹಗಳು, ಸಮೀಪದಲ್ಲಿಯೇ ಇರುತ್ತವೆ. ಭುವನೇ = ಭುವನ ವಿಷಯದಲ್ಲಿ, ಏಕಾ = ಅದ್ವಿತೀಯಳಾದ (ಅಸದೃಶ್ಯಳಾದ) ವಿರಾಷಾಟ್ =ಲಕ್ಷ್ಮೀದೇವಿಯು, (ವಿರಾಂ = ವಿಶೇಷವಾಗಿ ಪ್ರಕಾಶಿಸಿಕೊಂಡಿರುವಿಕೆಯನ್ನು, ಸರ್ವೇಶ್ವಹತ್ವವನ್ನು ಸಹತೇ ಪ್ರಾಪ್ನೋತಿ `ಹೊಂದಿದವಳು •ಎಂಬ ವ್ಯುತ್ಪತ್ತಿಯಿಂದ) ವಿರಾಷಾಟ್. ಲಕ್ಷ್ಮೀದೇವಿಯು (ರಾಜದೀಪ್ತೌ ರಾಜ್ಯ ಐಶ್ವರ್ಯೇ) ಯಮಸ್ಯ ಸವಿತುಃ = ಸರ್ವ ನಿಯಾಮಕನಾದ ಶ್ರೀ ಹರಿಯ, ಉಪಸ್ಥಾ = ಸಮೀಪದಲ್ಲಿಯೇ ಇರುತ್ತಾಳೆ. (ದ್ಯುತ್ರಯಾದಿಗಳು ಸವಿತೃ ಎನಿಸಿದ ಶ್ರೀ ಹರಿಯ ಸಮೀಪದಲ್ಲಿ ಇರುತ್ತವೆ. ಎಂದರೆ ಸವಿತೃ ನಾಮಕ ಶ್ರೀ ಹರಿಯನ್ನೇ, ಅಧಿತಸ್ಥುಃ =ಆಶ್ರಯಿಸಿಕೊಂಡು ಇರುತ್ತಾರೆ. (ಈ ಎಲ್ಲಾ ಹೇಳಿದ ಪ್ರಮೇಯವು ಮಿಥ್ಯೆಯು ಎಂದು ಏಕೆ ಆಗಬಾರದು ಎಂದರೆ) ಯ ಉ =ಯಾರು ತಾನೇ ತತ್ = ಹಿಂದೆ ಹೇಳಿದ ಶ್ರೀ ಹರಿಯೇ ಸರ್ವಾಶ್ರಯನು ಇತ್ಯಾದಿ ಪ್ರಮೇಯಗಳನ್ನು, (ಅನ್ಯಥಾ = ಹಿಂದೆ ಹೇಳಿದುದಕ್ಕೆ ವಿರುದ್ಧವಾಗಿ) ಚಿಕೇತತ್ = (ಕಿತ ಜ್ಞಾನೇ) ತಿಳಿಯುವನೋ, ಮಾಡುವನೋ, ಸಃ =ಅಂತಹವನು, ಇಹ =ಇಲ್ಲಿ, ಮನ ಪುರತಃ =ನನ್ನ ಇದಿರು, ಪ್ರವೀತು, ಹೇಳಲಿ. (ಬಾಧಕವಿಲ್ಲದಿರುವುದರಿಂದ ಹೇಳಿದ್ದು ಸರ್ವಥಾ ಮಿಥ್ಯೆಯಲ್ಲ) ಅಥವಾ ಸವಿತೃ ನಾಮಕ ಶ್ರೀ ಹರಿಯ ಸ್ವರೂಪವನ್ನು ನಾನು ಇಷ್ಟು ತಿಳಿದಿರುತ್ತೇನೆ. ಯಾವಾತನು ಇದಕ್ಕಿಂತ ಅತಿಶಯವಾಗಿ ತಿಳಿಯುವನೋ, ಆತನು ಇಲ್ಲಿ ನಮಗೋಸ್ಕರ, ನಮಗೆ ತಿಳಿದಿರುವ ಶ್ರೀ ಹರಿಯ ಸ್ವರೂಪವನ್ನು ಹೇಳಲಿ. ಅಥವಾ ಯಾವ ಶ್ರೀ ಹರಿಯು, ಈ ಜಗತ್ತನ್ನು ಸೃಷ್ಟಿಸಿರುವನೋ, ಆತನು ನಮಗಾಗಿ ತನ್ನ ಸ್ವರೂಪವನ್ನು ಉಪದೇಶಿಸಲಿ. ॥೩॥

**ಭಾ ॥ (1) ತಿಸ್ರೋ ದ್ಯಾವೋ ಮಾತ್ರಯಂ ದ್ವಾವುಪಸ್ಥೌ ಜಡಾಜಡೇ ಶ್ರೀರ್ವಿರಾಷಾಡಧೀಶ । (2) ವಿಶ್ವಸ್ಯ ಸಾಕ್ಷಾದ್ಭಗವಾನ್ನಿಯಂತಾ ಯಮೋಽಸ್ಯ ಸರ್ವಂಗದಿತಂ ಸದೈವ ॥ (3) ಜಡಾಜಡತ್ವಾನ್ನಾನ್ಯಮುಕ್ತಂ ಪ್ರಥಗ್ಘಿ (4) ಸರ್ವಸ್ವಾಮ್ಯಂವಕ್ತುಮೇವೋದಿತಾ ಶ್ರೀಃ ॥ (5) ಅನ್ಯೋನ್ಯ ಸಂಬಂಧವಿವಕ್ಷಯೈವ ಹ್ಯುವಸ್ಥತ್ವಂ (6) ಮುಕ್ತಭೂತಾನಿ ಯಾನಿ ॥ ಅಶೇಷತಸ್ತಾನಿ ರಥಸ್ಯ ಯದ್ವದಾಣಿಂ ರಥ್ಯಂ ಸಂಶ್ರಿತಂ ಸರ್ವದೈವ ॥ ಏವಂ ಹರಿಂ ಸಂಶ್ರಿತಾನ್ಯಬ್ಜಜೇಶ ಪೂರ್ವಾಣ್ಯಪೀತ್ಯೇ (7) ಷ ವೇದಾರ್ಥ ಸಾ ರಃ ॥ (8) ಇಹ ಬ್ರವೀತ್ವನ್ಯಥಾ ಯೋಽಭಿಪಶ್ಯೇ ಕುಯಾದ್ವಾ (9) ತದ್ಯೋ ಯಥಾವಚ್ಚ ಪಶ್ಯೇತ್ । ಶೇಷಂ ಜ್ಞಾನಂ ಸಬ್ರವೀತ್ವಸ್ಮದರ್ಥೇ ಚಕಾರಯೋ ವಿಷ್ಣು ರೇತತ್ಸ ವಾ ನಃ ॥೬॥**

ಅ ॥ (1) (ತಿಸ್ರೋದ್ಯಾವಃ ಎನ್ನುವುದನ್ನು ಅನುವಾದ ಮಾಡಿ ವ್ಯಾಖ್ಯಾನ ಮಾಡುತ್ತಾರೆ) ತಿಸ್ರಃ ದ್ಯಾವಃ ಎಂದರೆ ಪ್ರತ್ಯಕ್ಷ ಅನುಮಾನ ಆಗಮಗಳಿಂದ ಉಂಟಾದ ಮೂರು ಪ್ರಮೆಗಳು, ಯಥಾರ್ಥ ಜ್ಞಾನಗಳು (ದ್ವೌಉಪಸ್ಥೌ ಎನ್ನುವುದನ್ನು (ದ್ವೌಉಪಸ್ಥೌ ಎನ್ನುವುದನ್ನು ಅನುವಾದ ಮಾಡಿ ದ್ವೌ ಎಂಬ ಪದಕ್ಕೆ ಅರ್ಥ ಹೇಳುತ್ತಾರೆ) ದ್ವೌ=ಜಡಾಜಡ ವಸ್ತುಗಳು ಸಮೀಪದಲ್ಲಿ ಇರುತ್ತವೆ. (ವಿರಾಷಟ್ ಎನ್ನುವುದಕ್ಕೆ ವಾಚ್ಯಾರ್ಥವನ್ನು ಅಧೀಶತ್ವರೂಪವಾದ ನಿಮಿತ್ತವನ್ನೂ ಹೇಳುತ್ತಾರೆ) ಎಲೋ ಸರ್ವೇಶ್ವರನೇ ಲಕ್ಷ್ಮೀದೇವಿಯು ವಿಶೇಷವಾಗಿ ಪ್ರಕಾಶಿಸಿ ಕೊಂಡಿರುವಿಕೆಯನ್ನೂ ಸರ್ವಜಗತ್ತಿನ ನಿಯಾಮಕತ್ವವನ್ನೂ) ಹೊಂದಿರುವುದರಿಂದ ವಿರಾಷಾಟ್ ಎನಿಸುತ್ತಾಳೆ (2) (ಯಮಶಬ್ದಕ್ಕೆ ನಿಮಿತ್ತ ಸಹಿತವಾಗಿ ವಾಚ್ಯಾರ್ಥವನ್ನು ಹೇಳುತ್ತಾರೆ) ಸಮಸ್ತ ಜಗತ್ತಿಗೆ ಸಾಕ್ಷಾತ್ತಾಗಿ ಮುಖ್ಯವಾಗಿ ನಿಯಮಿಸುವ ಭಗವಂತನು ಯಮಃ ಎನಿಸುತ್ತಾನೆ. ಹಿಂದೆ ಹೇಳಿದ ಮೂರು

ಯಥಾರ್ಥ ಜ್ಞಾನಗಳಿಗೆ ಆಶ್ರಯನಾಗಿದ್ದಾನೆ. ಇದು ಮೊದಲಾದುದು ಎಲ್ಲವೂ ಶ್ರೀ ಭಗವಂತನಿಗೆ ಯಾವಾಗಲೂ ಸಮೀಪದಲ್ಲಿಯೇ ಇವೆ. (ತಥಾಚ ಪ್ರತ್ಯಕ್ಷಾದಿಗಳಿಂದುಂಟಾದ ಮೂರು ಯಥಾರ್ಥಜ್ಞಾನಗಳೂ ಶ್ರೀ ಹರಿಯ ಸಮೀಪದಲ್ಲಿಯೇ ಇರುವವು. ಜಡ ಅಜಡ ವಸ್ತುಗಳ ಸಮೂಹಗಳೂ ಶ್ರೀ ಹರಿಯ ಸಮೀಪದಲ್ಲಿಯೇ ಇರುವವುಗಳು. ಅಸ್ಪೃಶಗಳಾದ ಲಕ್ಷ್ಮೀದೇವಿಯೂ ಶ್ರೀ ಹರಿಯ ಸಮೀಪದಲ್ಲಿಯೇ ಇರುವವಳು) (3) (ಹಾಗಾದರೆ ಸಮಸ್ತ ಜಗತ್ತೂ ಜಡಅಜಡ ವಸ್ತುಗಳ ಸಮೂಹದಲ್ಲಿಯೇ ಸೇರಿದೆ. ಆದ ಕಾರಣ ತಿಸ್ರೋದ್ವ್ಯಾವಃ = ಪ್ರಮೇಗಳು ಎಂದು ಪ್ರತ್ಯೇಕ ತೆಗೆದುಕೊಂಡದ್ದು ಏತಕ್ಕೆ ಎಂದರೆ) ಜಡ ಅಜಡ ಶಬ್ದಗಳಿಂದ ಯಾವುದು ಕೇವಲ ಜಡವಿದೆಯೋ ಯಾವುದು ಕೇವಲ ಚೈತನ್ಯವಿದೆಯೋ ಅದು ಮಾತ್ರ ಲಭ್ಯವಾಗುತ್ತದೆ. ಎರಡರ ಸಮಾಹಾರದ್ವ್ಯಾವಃ ಎಂದು ಪ್ರಮಾತ್ರಯವನ್ನು ಪ್ರತ್ಯೇಕ ಹೇಳಿದ್ದಾರೆ. (ಹಾಗಾದರೆ ಜಡಭಾಗವು ಜಡಶಬ್ದದಿಂದಲೂ ಚೈತನ್ಯವು ಅಜಡ ಶಬ್ದದಿಂದಲೂ ಗೃಹೀತವಾಗುವುದು ಎಂದೆನ್ನಕೂಡದು. ಏಕೆಂದರೆ ಸಂಸಾರದಲ್ಲಿ ಚೈತನ್ಯಕ್ಕೂ, ಸ್ವರೂಪಜ್ಞಾನರೂ, ಮನೋವೃತ್ತಿರೂಪವಾದ ಜ್ಞಾನಕ್ಕೂ ಮಿಶ್ರೀಭಾವದಿಂದಲೇ ಪ್ರವೃತ್ತಿಯಾಗುವುದರಿಂದ ಸಂಸಾರದಲ್ಲಿ ಪ್ರತ್ಯೇಕ ಮಾಡಲಿಕ್ಕೇನೇ ಬರುವುದಿಲ್ಲ ಮತ್ತು ಮನಸ್ಸು ಚಿತ್‌ಅಚಿತ್‌ಗಳ ಮಿಶ್ರೀಭಾವ ರೂಪವೇ ಆಗಿದೆ. ಮುಕ್ತಿಯಲ್ಲಿ ಆದರೂ ಶುದ್ಧ ಚೈತನ್ಯಕ್ಕೇನೇ ಪ್ರವೃತ್ತಿಯು) ಆ ಅಭಿಪ್ರಾಯವು ೨ನೇ ಸ್ಕಂದ ಭಾಗವತ ತಾತ್ಪರ್ಯದಲ್ಲಿ ಉದಾಹೃತವಾದ ಬ್ರಹ್ಮಪುರಾಣದಲ್ಲಿ ಉಕ್ತವಾಗಿದೆ. ಚಿನ್ಮಾತ್ರಾಣೀಂದ್ರಿಯಾಣ್ಯಾಹುರ್ಮುಕ್ತಾವಾಮನ್ಯದೈವತು । ತಾನ್ಯೇವ ಜಡಯುತ್ತಾನಿ ವಿಭಿನ್ನಾನಿ ಸ್ವರೂಪತಃ ॥ ಎನ್ನುವುದರಿಂದ ಮುಕ್ತರಿಗೆ ಚಿನ್ಮಾತ್ರಗಳಾದ ಮನಸ್ಸು ಮೊದಲಾದ ಇಂದ್ರಿಯಗಳಿಂದ ಪ್ರವೃತ್ತಿಯನ್ನು ಹೇಳಿ ಸಂಸಾರದಲ್ಲಿ ಸ್ವರೂಪತಃ ಭೇದವಿಲ್ಲದಿರುವ ಜಡೇಂದ್ರಿಯಗಳಿಂದ ಮಿಶ್ರಗಳಾದ ಚಿದಿಂದ್ರಿಯಗಳಿಂದ ಪ್ರವೃತ್ತಿಯು ಉಕ್ತವಾಗಿದೆ.) ಹಿ = ಪ್ರಸಿದ್ಧವು (೫) (ಹಾಗಾದರೆ ಕೇವಲ ಚೈತನ್ಯರೂಪಳಾದ ನಿತ್ಯಮುಕ್ತಳಾದ ಲಕ್ಷ್ಮೀದೇವಿಯನ್ನು ಪೃಥಕ್ ಹೇಳಬೇಕಿತ್ತು. ಎಂದರೆ -ಸತ್ಯವೇ ಆದಾಗ್ಯೂ) ಸಾಮಾನ್ಯತಃ ಲಕ್ಷ್ಮೀದೇವಿಯು ಬ್ರಹ್ಮಾದಿಗಳೆಲ್ಲರಿಗೂ ನಿಯಾಮಕಳು ಎಂಬೀ ವಚನವು ಜಗತ್ಸೃಷ್ಟಿಕರ್ತನಾದ ಶ್ರೀ ಹರಿಯ ಉತ್ಕರ್ಷಕ್ಕಾಗಿ ಉಪಯುಕ್ತವಾಗುವುದು. ಅಂದರೆ ಸರ್ವರಿಗೂ ನಿಯಾಮಕಳಾದ ಲಕ್ಷ್ಮೀದೇವಿಯೂ ಸಹಯಾವ ಶ್ರೀ ಹರಿಗೆ ನಿಯಮ್ಯಳಾಗಿರುತ್ತಾಳೋ ಎಂಬ ಉಕ್ತಿಯಿಂದ ಶ್ರೀ ವಿಷ್ಣುವಿಗೆ ಅತಿಶಯವಾಗಿ ಸರ್ವೋತ್ತಮತ್ವವು ಸಿಗುವುದು.) (5) (ಹಾಗಾದರೆ ದ್ಯುತ್ರಯಾದಿಗಳು ಶ್ರೀ ಹರಿಯ ಸಮೀಪದಲ್ಲಿ ಇರುತ್ತವೆ ಎಂದು ಹೇಳಿದುದರಿಂದ ಶ್ರೀ ಹರಿಯನ್ನು ಏನು ಸ್ತೋತ್ರ ಮಾಡಿದಂತೆ ಆಯ್ತು. ಎಂದರೆ) ಪರಸ್ಪರ ಸಂಬಂಧ, ಅಂದರೆ ನಿಯಮ್ಯ ನಿಯಾಮಕ ಭಾವ, ಪ್ರೇರ್ಯ ಪ್ರೇರಕ ಭಾವ, ಇದು ಮೊದಲಾದ ಸಂಬಂಧಗಳ ವಿವಕ್ಷೆಯಿಂದಲೇ ಸಮೀಪದಲ್ಲಿದ್ದಾರೆಂದು ಹೇಳಿದ್ದು (ಅಂದರೆ ಲಕ್ಷ್ಮೀಬ್ರಹ್ಮಾದಿಗಳು ಶ್ರೀಹರಿಯಿಂದ ನಿಯಮ್ಯರು ಪ್ರೇರ್ಯರು, ಶ್ರೀ ಹರಿಯು ಅವರಿಗೆ ನಿಯಾಮಕನು ಪ್ರೇರಕನು ಎಂಬ ಅಭಿಪ್ರಾಯದಿಂದ ಶ್ರೀ ಹರಿಯ ಸಮೀಪದಲ್ಲಿರುತ್ತಾರೆ.) (6) (೩ನೇ ಪಾದವನ್ನು ವ್ಯಾಖ್ಯಾನ ಮಾಡುತ್ತಾರೆ.) (ಶ್ರೀ ಹರಿಯು ಸಂಸಾರಿಗಳಿಗೆ ಮಾತ್ರ ಆಶ್ರಯನೆಂದಲ್ಲ ಮತ್ತೆ) ರಥದ ಸಂಬಂಧಿಯಾದ ವಸ್ತುಗಳ ಸಮುದಾಯವು ರಥದ ಅಣೆಯನ್ನು (ಕೀಲನ್ನು) ಹೇಗೆ ಸರ್ವದಾ ಆಶ್ರಯಿಸಿ ಕೊಂಡಿದೆಯೋ ಹೀಗೆಯೇ ಮುಕ್ತಾರಾದವರು ಯಾರು ಇದ್ದಾರೋ, ಅಂತಹ ಬ್ರಹ್ಮ ಗರುಡ ಶೇಷ ಮೊದಲಾದವರೆಲ್ಲರೂ ಸವಿತೃನಾಮಕ ಶ್ರೀ ಹರಿಯನ್ನು ಆಶ್ರಯಿಸಿ ಕೊಂಡಿರುತ್ತಾರೆ. (7) ಶ್ರೀ ಹರಿಯು ೩ ಪ್ರಮಾ ಮೊದಲಾದವುಗಳಿಗೆ ನಿಯಾಮಕನು, ಇತ್ಯಾದಿಗಳು ವಿಷ್ಣುವಿನ ಸ್ತುತಿ ಮಾತ್ರವು. ಶ್ರುತಿಗೆ ಅಲ್ಲಿ ತಾತ್ಪರ್ಯವಿಲ್ಲ, ಎಂದು ಅದ್ವೈತಿಗಳು ಹೇಳುತ್ತಾರೆ. ಅದನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ) ಇದೇವೇ ವೇದಾರ್ಥ ಸಾರವು (ಅಂದರೆ ವೇದಗಳ ತಾತ್ಪರ್ಯಕ್ಕೆ ವಿಷಯವಾದ ಅರ್ಥವು) (8) (ಏಕೆ ಎಂಬ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ೪ನೇ ಪಾದದ ತಾತ್ಪರ್ಯವನ್ನು ಹೇಳುತ್ತಾರೆ) ಯಾರು ತಾವಿ ಆ ಹೇಳಿದ ಸರ್ವಾಶ್ರಯತ್ವಾದಿ ಪ್ರಮೇಯಗಳನ್ನು ವ್ಯತ್ಯಾಸವಾಗಿ ತಿಳಿಯುವನೋ, ಆತನು ಇಲ್ಲಿ ನನ್ನ ಇದಿರು ಹೇಳಲಿ

(ಕಾಲಾಂತರದಲ್ಲಿ ವಿಪರೀತವಾಗಿ ಮಾಡುವಿಕೆ, ಅಂದರೆ ಪ್ರಮಾತ್ರಯಾದಿಗಳಿಗೆ ಇನ್ನೊಬ್ಬನೂ ನಿಯಾಮಕನಾಗುವನು ಎಂದು ಪ್ರತಿಪಾದಿಸುವಿಕೆ ಎಂಬ ಅಶಂಕಾನಿರಾಸಕ್ಕಾಗಿ) ಕುರ್ಯಾತ್=ಅನ್ಯಥಾ ಮಾಡುವನೋ, ಅನ್ಯಥಾ ಪ್ರತಿಪಾದಿಸುವನೋ, ಆತನು ನನ್ನ ಇದಿರು ಹೇಳಲಿ. (ಯಾವುದೊಂದು ಬಾಧಕವೂ ಇಲ್ಲದಿರುವುದರಿಂದ ಹೇಳಿದ್ದು ಮಿಥ್ಯೆಯಲ್ಲ) (9) (ಆನೇ ಪಾದವನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ.) ಆ ಸವಿತೃ ಎನಿಸಿದ ಶ್ರೀ ಹರಿಯ ಸ್ವರೂಪವು ನನಗೆ ಇಷ್ಟು ಮಾತ್ರ ತಿಳಿದಿದೆ. ಯಾರು ತಾನೇ ಯಥಾವತ್ ಇದಕ್ಕಿಂತ ಅತಿಶಯವಾಗಿಯೇ ತಿಳಿಯುವನೋ, ಆತನು ಇಲ್ಲಿ ನಮಗಾಗಿ ನಮಗೆ ತಿಳಿಯದಿದ್ದ ಆ ಶ್ರೀ ಹರಿಯ ಸ್ವರೂಪವನ್ನು ಹೇಳಲಿ. (ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ಯಾವ ವಿಷ್ಣುವೇ ಆ ಈ ಜಗತ್ತನ್ನೂ ಸೃಷ್ಟಿಸಿರುವನೋ, ಆತನು ಇಲ್ಲಿ ನಮ್ಮನ್ನು ಕುರಿತು ತನ್ನ ಸ್ವರೂಪವನ್ನು ಹೇಳಲಿ. ಉಪದೇಶಿಸಲಿ ॥ ॥೬॥೬॥

ಋ ॥ (೪೧೭) ವಿಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರ ವೇಪಾ ಅಸುರಃ ಸುನೀಥಃ ।

ಕ್ವೇsದಾನೀಂ ಸೂರ್ಯ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ॥೭॥

ಅ ॥ ಸುಪರ್ಣ =ಅತಿಶಯವಾಗಿ ಅತ್ಯುತ್ಕೃಷ್ಟವಾದ ಸುಖವುಳ್ಳ, ಗಭೀರವೇಪಾಃ = ಗಂಭೀರವಾದ ವೇಗ ಉಳ್ಳ, ಅಸುರಃ = (ಸವಿಷೋಸುಃಸೇಷ ಪ್ರಾಣಃ ಎಂಬ ಶ್ರೌತ ಪ್ರಯೋಗದಿಂದ) ಅಸು ಎನಿಸಿದ ಮುಖ್ಯ ಪ್ರಾಣನಲ್ಲಿ ರತಿಯುಳ್ಳ ಸುನೀಥಃ - (ನೀ ಞ ಪ್ರಾಪಣೇ) ಶೋಭನ ನೀತಿಯುಳ್ಳ ಸವಿತೃ ನಾಮಕ ಶ್ರೀ ವಿಷ್ಣುವು ಅಂತರಿಕ್ಷಾಣಿ = (ಈಕ್ಷ ದರ್ಶನಾಂಕನಯೋಃ (ತನ್ನೊಳಗೆ ನೋಡಲರ್ಹಗಳಾದವುಗಳನ್ನು, ವಿ ಅಖ್ಯತ್ = (ಖ್ಯಾ ಪ್ರಕಥನೇ ಅಥವಾ ಚಕ್ಷಿಙ ವ್ಯಕ್ತಾಯಾಂ ವಾಚಿ) ನೋಡಿದರನು ಸೂರ್ಯ =ಇಂತಹ ಜ್ಞಾನಿ ಶ್ರೇಷ್ಠರಾದ ಬ್ರಹ್ಮಾದಿಗಳಿಂದ ಹೊಂದಲ್ಪಡತಕ್ಕ ಶ್ರೀ ಹರಿಯು, ಇದಾನೀಂ = ಈಗ, ಕ್ವ=ಎಲ್ಲಿರುತ್ತಾನೆ. ಅಸ್ಯ = ಈ ಶ್ರೀ ಹರಿಯ, ರಶ್ಮಿಃ =ರಶ್ಮಿಯು, ಕತಮಾಂದ್ಯಾ=ಯಾವ ಅಂತರಿಕ್ಷ ಪ್ರದೇಶದಲ್ಲಿ, ಆತ ತಾನ =ವ್ಯಾಪ್ತವಾಯ್ತು. ಹೀಗೆ, ಕಶ್ಚಿಕೇತ =ಈ ಪ್ರಮೇಯವನ್ನು (ಇಂತಹ ಶ್ರೀ ಹರಿಯನ್ನು ಯಾರು ನೋಡಿರುವನು ? ಯಾವನೊಬ್ಬನೂ ಕಾಣಲಿಲ್ಲ) (ಸೂರ್ಯನನ್ನೂ ಸೂರ್ಯನ ರಶ್ಮಿಗಳನ್ನೂ ಸರ್ವರೂ ಪ್ರತ್ಯಕ್ಷವಾಗಿ ಕಾಣುತ್ತಿದ್ದರೂ ಶ್ರೀ ವಿಷ್ಣುವಿನ ರಶ್ಮಿಗಳನ್ನೂ ಪ್ರತ್ಯಕ್ಷವಾಗಿ ಕಾಣದಿರುವುದರಿಂದ ಅದನ್ನುಪೇಕ್ಷಿಸಿ ಕ್ವ ಎಲ್ಲಿ ಎಂದು ಅಕ್ಷೇಪವೆಂದು ತಿಳಿಯಬೇಕು. ಶ್ರೀ ಹರಿಯನ್ನು ತಿಳಿದವನು ದುರ್ಲಭವೆಂದು ತಾತ್ಪರ್ಯವು ॥೭॥

ಭಾ ॥ (1) ಗಂಭೀರವೇಗೋ ಭಗವಾನ್ಸ್ವಾ ಸುವರ್ಣ ಪರಾನಂದಾದಂತರಿಕ್ಷಾಣ್ಯಪತ್ಯತ್ । ಅಸೌ ರತಿಃ ಶುಭನೀತಿಶ್ಚ (2) ವಿಷ್ಣುರಿತ್ಯಪತ್ಯದ್ದುರ್ಲಭತ್ವಾತ್ಕ ಏವ ॥ (3) ಪತ್ಯನ್ರವೇರಶ್ಮಿಗಣಾನಪೀಹ ಸರ್ವವ್ಯಾಪ್ತಾನಪಿ ವಿಷ್ಣೋರ್ನರಶ್ಮೀನ್ । ಲೋಕಃ ಪಶ್ಯೇದಿತಿ ಕುತ್ರಾತತಾನೇತ್ಯಾಕ್ಷಿಪ್ಯತೇ ವ್ಯಕ್ತಿಮಪೇಕ್ಷ್ಯ ರಶ್ಮೇಃ ॥೭॥

ಅ ॥ (1) ಸರ್ವೋತ್ಕೃಷ್ಟವಾದ ಆನಂದವಿರುವ ಕಾರಣ ಸುವರ್ಣ ಎನಿಸಿಕೊಂಡವನು ಅತಿಶಯವಾಗಿ ಉತ್ಕೃಷ್ಟವಾದ ಆನಂದವುಳ್ಳವನು ಗಂಭೀರವಾದ ವೇಗವುಳ್ಳವನು. ಮುಖ್ಯಪ್ರಾಣನಲ್ಲಿ ರಮಿಸಿಕೊಂಡಿರುವವನು ಶೋಭನವಾದ ನೀತಿಯುಳ್ಳವನು ಇಂತಹ ಷಡ್ಗುಣ ಪರಿಪೂರ್ಣನಾದ ಶ್ರೀ ವಿಷ್ಣುವು ತನ್ನೊಳಗೆ ಇರುವ ಜಗದಾದಿ ಸರ್ವವಸ್ತುಗಳನ್ನು ಕಂಡನು. (2) (ಉತ್ತರಾರ್ಧದ ತಾತ್ಪರ್ಯವನ್ನು ಹೇಳುತ್ತಾರೆ. (ಈ ರೀತಿಯಾಗಿರುವ ಉತ್ಕೃಷ್ಟ ಆನಂದವುಳ್ಳವನು. ಆಗಾಧ

ವೇಗವುಳ್ಳವನು. ಪ್ರಾಣರಲ್ಲಿ ರಮಿಸಿ ಕೊಂಡಿರುವವನು. ಎಲ್ಲಿಯೂ ದೋಷವಿಲ್ಲದ ನೀತಿಯುಳ್ಳವನು. (ಯಾವನೊಬ್ಬನೂ ಕಾಣಲಿಲ್ಲ ಏಕೆಂದರೆ) ಇಂತಹ ಪರಮಾತ್ಮ ಜ್ಞಾನಿಯೆ ದುರ್ಲಭನಾಗಿದ್ದ ಕಾರಣ ಯಾವನೂ ಕಾಣುವುದಿಲ್ಲ. (ಇಂತಹ ಸೂರ್ಯನು ಈಗ ಎಲ್ಲಿ ಇದ್ದಾನೆ ? ಆತನ ರಶ್ಮಿಯು ಯಾವ ಅಂತರಿಕ್ಷ ಪ್ರದೇಶದಲ್ಲಿ ವ್ಯಾಪ್ತವಾಗಿದೆ. ಯಾವನು ನೋಡಿರುವನು ? ಯಾವನೊಬ್ಬನೂ ನೋಡಲಿಲ್ಲ) (3) ಇದರತ್ರ ಅಗ್ನ್ಯಾದಿ ಶಬ್ದಗಳಿಗೆ ಅಗ್ನ್ಯಾದಿ ಶಬ್ದಗಳಿಂದ ಮುಖ್ಯವಾಚ್ಯನು ಎಂದು ಹೇಳುತ್ತವೆ. ಹಾಗೆ ಇಲ್ಲಿ ವ್ಯಾಖ್ಯಾನ ಮಾಡುವುದಿಲ್ಲ. ಮತ್ತೆ ಕೇವಲ ಭಗವಂತನೇ ವಾಚ್ಯನು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ. ಈ ಆಕಾಶದಲ್ಲಿ ಸೂರ್ಯನ ರಶ್ಮಿಗಳ ಸಮೂಹಗಳನ್ನು ನೋಡುತ್ತಿದ್ದರೂ ಜನರು ಸರ್ವತ್ರ ವ್ಯಾಪ್ತಗಳಾದಾಗ್ಯೂ ಶ್ರೀ ವಿಷ್ಣುವಿನ ರಶ್ಮಿಗಳನ್ನೂ ಆ ವಿಷ್ಣುವನ್ನೂ ಕೂಡ ನೋಡುವುದಿಲ್ಲ. ಈ ಅಭಿಪ್ರಾಯದಿಂದಲೇ ಎಲ್ಲಿ ವ್ಯಾಪ್ತವಾಗಿದೆ. ಇತ್ಯಾದಿ ಪ್ರಕಾರ ಆಕ್ಷೇಪಿಸಿದ್ದು. (ಅಂದರೆ ಸೂರ್ಯನೂ ಸೂರ್ಯನ ರಶ್ಮಿಗಳೂ ಕೂಡ ಆಕಾಶದ ಕೆಳಭಾಗದಲ್ಲಿ ವ್ಯಾಪಿಸಿಕೊಂಡು ಇದ್ದಾವೆ ಎಂದು ಜನರು ಕಾಣುತ್ತಲೇ ಇದ್ದಾರೆ. ಆದ ಕಾರಣ ಅದನ್ನು ಅಪೇಕ್ಷಿಸಿಕೊಂಡು ಈ ಆಕ್ಷೇಪವು ಯುಕ್ತವಲ್ಲ, ಮತ್ತೆ ಭಗವಂತನು ಸರ್ವತ್ರ ವ್ಯಾಪ್ತನಾಗಿದ್ದರೂ ಆತನ ರಶ್ಮಿಗಳನ್ನು ಪ್ರಾಕೃತ ಜನರು ಕಾಣುವುದಿಲ್ಲ. ಮತ್ತೆ ಭಗವದ್ವಿಷಯದಲ್ಲಿಯೇ ಆಕ್ಷೇಪವು. (ಹಾಗಾದರೆ ಇದನ್ನು ಆಕ್ಷೇಪವೆಂದು ಹೇಗೆ ಹೇಳುವುದು ? ಆಕ್ಷೇಪಕ್ಕೆ ವಿಪರ್ಯಯ ಪರ್ಯವಸಾನವು ಅವಶ್ಯಕವು. ಅದು ಇಲ್ಲಿ ಇಲ್ಲ. ಸೂರ್ಯನು ಎಲ್ಲಿ ? ಎಲ್ಲಿಯೂ ಇಲ್ಲ. ರಶ್ಮಿಯು ಯಾವ ಅಂತರಿಕ್ಷ ಪ್ರದೇಶದಲ್ಲಿ ವ್ಯಾಪ್ತವಾಗಿದೆ. ಎಲ್ಲಿಯೂ ಇಲ್ಲ ಎಂದಾಗಬೇಕಾಗುವುದು ಎಂದರೆ) ರಶ್ಮಿಯ ವ್ಯಕ್ತಿಯನ್ನು ಅಪೇಕ್ಷಿಸಿ ಹೀಗೆ ಆಕ್ಷೇಪವು. (ಅಂದರೆ ಸೂರ್ಯನನ್ನೂ ರಶ್ಮಿಯನ್ನೂ ಸರ್ವರೂ ಪ್ರತ್ಯಕ್ಷವಾಗಿ ತಿಳಿಯುವುದಾದರೂ ಶ್ರೀ ಹರಿಯನ್ನು ಶ್ರೀ ಹರಿಯ ರಶ್ಮಿಯನ್ನು ತಿಳಿದಿರುವುದರಿಂದ ಅದನ್ನು ಅಪೇಕ್ಷಿಸಿಕೊಂಡು ಈ ಆಕ್ಷೇಪವು.) ||೭||

**ಋ || (೪೧೮) ಅಷ್ಟೌ ವ್ಯಖ್ಯತ್ಕಕುಭಃ ಪೃಥಿವ್ಯಾಸ್ತ್ರೀ ಧನ್ವ ಯೋಜನಾ ಸಪ್ತ ಸಿಂಧೂನ್ ।**

**ಹಿರಣ್ಯಾಕ್ಷಃ ಸವಿತಾ ದೇವ ಆಗಾದ್ದಧ ದ್ರತ್ನಾ ದಾಶುಷೇ ವಾರ್ಯಾಣಿ ||೮||**

ಅ || ಯಃ = ಯಾವಾತನು ಪೃಥಿವ್ಯಾಃ = ಪ್ರಸಿದ್ಧ ಪೃಥಿವಿಯ, ಅಷ್ಟೌ ಕಕುಭಃ =ಪೂರ್ವ ದಿಕ್ಕು ಮೊದಲಾದ ಎಂಟು ದಿಕ್ಕುಗಳು, ಆ ದಿಕ್ಕುಗಳಲ್ಲಿ ತಕ್ಕ ಪ್ರದೇಶಗಳು, ಮತ್ತು ಪೃಥುತ್ವಾತ್ ವಿಸ್ತೃತವಾಗಿರುವುದರಿಂದ ಪೃಥಿವೀ ಎನಿಸಿಕೊಂಡ ಪ್ರಕೃತಿಯೂ ಅಷ್ಟೌ ಕಕುಭ್ಯಃ = ೮ ದಿಕ್ಕುಗಳೂ, ಪ್ರದೇಶಗಳೂ ಮಹದಾದಿ ತತ್ವಗಳೂ ಅವುಗಳನ್ನೆಲ್ಲಾ, ಶ್ರೀಧನ್ವ (ಸಮಾನೌ ಮರುಧನ್ವಾನೌ ಎಂದು ಕೋಶವು) ಊರ್ಧ್ವ ಮಧ್ಯ ಅಧರ ಭೇದದಿಂದ ೩ ವಿಧಗಳಾದ ಸುಖಲೇಶವೂ ಇಲ್ಲದಿರುವ, (ಧನ್ವನ್ ಶಬ್ದವು ಉದಕವಿಲ್ಲದಿರುವ ದೇಶವನ್ನು ಹೇಳುತ್ತದೆ. ಅದರಿಂದ ಸುಖರಾಹಿತ್ಯದಲ್ಲಿ ಲಕ್ಷಣಾ) ಯೋಜನಾ = (ಯುಜಿರ್ ಯೋಗೇ) ಯುಜ್ಯತೇ ಶ್ಲಿಷ್ಯತೇ ಸ್ವಗತ್ಯೈಃ ಎಂಬ ವ್ಯುತ್ಪತ್ತಿಯಿಂದ ಯೋಜನಂ = ತಮಸ್ಸು) ನಮಸ್ಸುಗಳನ್ನೂ ಸಪ್ತಸಿಂಧೂನ್ = (ಲವರಾ ಇಕ್ಷು ಸುರಾ ಸರ್ಪಿ ದಧಿ ಕ್ಷೀರ ಶುಭೋದಕಂ । ಎಂಬ ೭ ಸಮುದ್ರಗಳನ್ನೂ, ವಿ ಅಖ್ಯನ್ = ನೋಡಿರುವನೋ (ಸಃ = ಅಂತಹ) ಹಿರಣ್ಯಾಕ್ಷಃ= ನರಸಿಂಹರೂಪಿಯಾದ, ಸವಿತಾ ದೇವಃ =ಜಗತ್ತಿನ ಸೃಷ್ಟಿಕರ್ತನಾದ ಶ್ರೀಹರಿಯು, ದಾಶುಷೇ = (ದಾತೃದಾನೇ) ಯಜಮಾನನಿಗೆ ಕೊಡುವುದಕ್ಕಾಗಿ, ವಾರ್ಯಾಣಿ ಸ್ವೀಕರಿಸಲು ಯೋಗ್ಯಗಳಾದ, ರತಾ =ರತ್ನಗಳನ್ನು ದಧತ್ = (ಡು ಧಾಞ್ಧಾರಣ ಪೋಷಣಯೋಃ) ಧರಿಸುವವನಾಗಿ, ಅಥವಾ ಕೊಡುವವನಾಗಿ ಆ ಅಗಾತ್ = (ಇಣಿಗತೌ) ನಮ್ಮನ್ನು ಕುರಿತು ಬರಲಿ ||೮||

ಭಾ ॥ (1) ಊರ್ಧ್ವಂ ಮಧ್ಯಮಧರಂ ಚೇತಿ ಧನ್ವತ್ರಯಂ ತಮಃ ಸುಖಲೀನಂ ಯತಸ್ತತ್ । (2) ಯುಕ್ತಂ ಭವೇತ್ತದ್ಗತೈಃ ಸರ್ವದೈವ ದೃಢಶ್ಲೇಷಾದ್ಯೋಜನಂ ಸ್ಯಾತ್ತಮೋಹಿ । (3) ಅಷ್ಟೌದಿಶಃ ಪ್ರಕೃತೇರ್ವಾ ಪೃಥಿವ್ಯಾಃ ಮಹದಾದ್ಯಾಃ ಸಿಂಧವಸ್ತಾನ್ಯಪಶ್ಯತ್ ॥ (4) ಹಿರಣ್ಯಾಕ್ಷೋ ನರಸಿಂಹಾತ್ಮವಾ ಸ ವಾರ್ಯಾಣಿ ಯದ್ವರಣೀಯಂ ಸುವಿತ್ತಂ ॥೮॥

ಅ ॥ (1) (ಇಲ್ಲಿ ತ್ರೀಧನ್ವ ಎಂಬ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಊರ್ಧ್ವ ಮಧ್ಯ ಅಧರ ಎಂದು ಮೂರು ವಿಧವಾದ ತಮಸ್ಸು ಧನ್ವತ್ರಯವೆನಿಸುತ್ತದೆ. (ಅದಕ್ಕೆ ಧನ್ವಶಬ್ದ ವಾಚ್ಯತ್ವವು ಹೇಗೆಂದರೆ ಆ ತಮಸ್ಸು ಯಾವ ಕಾರಣದಿಂದ ಸುಖಲೇಶವಿರಹಿತವೋ, ಆದ ಕಾರಣ ಅದನ್ನು (ಧನ್ವ ಎಂಬ ಶಬ್ದವು ವಾಚಕವಾಗಿ ಉಳ್ಳದ್ದನ್ನಾಗಿ ಹೇಳುತ್ತಾರೆ.) (ಜಲವಿಲ್ಲದಿರುವ ಮರುಪ್ರದೇಶವು ಧನ್ವ ಶಬ್ದದಿಂದ ಹೇಳಲ್ಪಡುತ್ತದೆ. ಅದರಿಂದ ಸುಖಲೇಶವಿಲ್ಲವೆಂದು ಲಕ್ಷಿತವಾಗುತ್ತದೆ) (2) ಯೋಜನ ಶಬ್ದಕ್ಕೆ ವಾಚ್ಯವಾದ ಅರ್ಥವನ್ನೂ ನಿರ್ವಚನವನ್ನೂ ಹೇಳುತ್ತಾರೆ.) ತಮಸ್ಸೇ ಯೋಜನವೆನಿಸುತ್ತದೆ. (ಹೆಗೆಂದರೆ) (ಯುಜ್ಯತೇ ಕ್ಲಿಷ್ಯತೇ ಸ್ವಗತೈಃ = ತಮ್ಮವರಿಂದ ಚೆನ್ನಾಗಿ ಸಂಬಂಧಿಸಲ್ಪಡುತ್ತದೆ. ಆದ ಕಾರಣ ಯೋಜನವೆನಿಸುವುದು) ಸರ್ವರಿಗೂ ತಮ್ಮಲ್ಲಿ ಸಂಬಂಧವಿದ್ದ ಪ್ರಯುಕ್ತ ತಮಸ್ಸಿಗೇನೇ ಯೋಜನವೆಂದು ವಿಶೇಷಣ ಕೊಟ್ಟಿದೆ. ಆದ ಕಾರಣ ಯೋಜನವೆನಿಸುವುದು.) ಸರ್ವರಿಗೂ ತಮ್ಮಲ್ಲಿ ಸಂಬಂಧವಿದ್ದ ಪ್ರಯುಕ್ತ ತಮಸ್ಸಿಗೇನೇ ಯೋಜನವೆಂದು ವಿಶೇಷಣ ಕೊಟ್ಟಿದೆ. ಆದ ಕಾರಣ ಚೆನ್ನಾಗಿ ಪ್ರಾಪ್ತಿಯನ್ನು ತಿಳಿಯುವ ಪ್ರಯುಕ್ತ ತಮಸ್ಸಿಗೇನೇ ಯೋಜನವೆಂದು ವಿಶೇಷಣ ಕೊಟ್ಟಿದೆ, ಆದ ಕಾರಣ ಚೆನ್ನಾಗಿ ಪ್ರಾಪ್ತಿಯನ್ನು ತಿಳಿಯುವ ಪ್ರಯುಕ್ತ ದೃಢವಾಗಿ ಸಂಬಂಧವಿದೆ. ಅದುದರಿಂದ ತನುಸ್ಸೇ ಯೋಜನವೆನಿಸುವುದು (ಅದನ್ನೇ ವಿವರಿಸುತ್ತಾರೆ) ತಮಸ್ಸಿನಲ್ಲಿ ಇರುವವರಿಂದ ಯಾವಾಗಲೂ ಸಂಬದ್ಧವೇ ಆಗುವುದು. (3) ಪ್ರಸಿದ್ಧ ಪೃಥಿವಿಗೆ ಪ್ರಾಚ್ಯಾದಿ ೮ ದಿಕ್ಕುಗಳು, ದಿಕ್ಕುಗಳಿಂದ ಕೂಡಿದ ಭೂ ಪ್ರದೇಶಗಳು ಮತ್ತು ವಿಸ್ತೃತವಾಗಿರುವುದರಿಂದ ಪೃಥಿವೀ ಎನಿಸಿದ ಪ್ರಕೃತಿಗೆ ತದಭಿಮಾನಿ ಲಕ್ಷ್ಮಿಗೆ. ಲಕ್ಷ್ಮಿಯಿಂದ ಅಭಿಮನ್ಯಮಾನವಾದ ಅವ್ಯಾಕೃತಾಕಾಶಕ್ಕೆ ೮ ದಿಕ್ಕುಗಳು, ೭ ಸಮುದ್ರಗಳು, ಮಹತ್ತತ್ವ ಅಹಂಕಾರ ತತ್ವ, ಪಂಚಮಹಾ ಭೂತಗಳು (ಸಿಂಧವಃ) (ಸ್ಯಂದೂ ಪ್ರಸ್ರವಣೇ ಸ್ಯಂದನಾತ್=ಕಾರ್ಯಪ್ರವಾಹ ರೂಪವಾಗಿರುವುದರಿಂದ ಅಂದರೆ ಪ್ರಕೃತಿಯಿಂದ ಮಹತ್ತತ್ವ, ಆದರಿಂದ ಅಹಂಕಾರ ತತ್ವ ಇತ್ಯಾದಿ ಕ್ರಮದಿಂದ ಪ್ರವಾಹರೂಪವಾಗಿ ಸಿಂಧುಗಳೆನಿಸುತ್ತವೆ. ಆ ದಿಕ್ಕು ಮೊದಲಾದ ವಸ್ತುಗಳನ್ನು ಕಂಡನು. (4) ತಪ್ತಹಾಟಕಕೇ ಶಾಂತ ಜ್ವಲತ್ಪಾವಕ ಲೋಚನ ಎಂಬ ಪ್ರಮಾಣದಿಂದ ಅಗ್ನಿಗೆ ಸದೃಶವಾದ ಕಣ್ಣುಗಳು ಇದ್ದುದರಿಂದ ಹಿರಣ್ಯಾಕ್ಷನೆನಿಸಿದ ಶ್ರೀ ಹರಿಯು ನರಸಿಂಹ ರೂಪದಿಂದ, ಯಾವ ಕಾರಣದಿಂದ ಶೋಭನಗಳಾದ ದ್ರವ್ಯಗಳು ಸ್ವೀಕಾರಾರ್ಹಗಳೋ, ಆದ ಕಾರಣ ಸ್ವೀಕಾರಾರ್ಹಗಳಾದ ದ್ರವ್ಯಗಳನ್ನು (ಕೊಡುವವನಾಗಿ ನಮ್ಮನ್ನು ಹೊಂದಲಿ.) ॥೮॥

।ಋ ॥ (೪೧೯) ಹಿರಣ್ಯಪಾಣೀಃ ಸವಿತಾ ವಿಚರ್ಷಣಿರುಭೇ ದ್ಯಾವಾಪೃಥಿವೀ ಅಂತರೀಯತೇ ।

ಅಪಾಮೀವಾಂ ಬಾಧತೇ ವೇತಿ ಸೂರ್ಯಮಭಿಕೃಷ್ಣೇನ ರಜಸಾ ದ್ಯಾಮೃಣೋತಿ ॥೯॥

ಅ ॥ ಹಿರಣ್ಯಪಾಣೀ =ಹಿರಣ್ಯಾತ್ಮಕವಾದ ಪಾತ್ರವು ಕೈಯಲ್ಲಿ ಉಳ್ಳವನು. (ಅಂದರೆ ರತ್ನಾದಿಗಳಿಂದ ಸಂಪೂರ್ಣವಾಗಿ ತುಂಬಿದ ಹಿರಣ್ಯ ಪಾತ್ರವನ್ನು ಕೈಯಲ್ಲಿ ಧರಿಸುವವನಾಗಿರುವುದರಿಂದ ಹಿರಣ್ಯಪಾಣಿಃ ಎನಿಸುತ್ತಾನೆ) ಅಥವಾ ಹಿರಣ್ಯದಂತೆ ವರ್ಣವುಳ್ಳ ದೇಹವುಳ್ಳವನು, ಅಥವಾ ಹಿರಣ್ಯದಂತೆ ವರ್ಣವುಳ್ಳ ಪಾಣಿಗಳುಳ್ಳವನು, ವಿಚರ್ಷಣಿಃ = ನಾನಾ ವಿಧರಾದ ಪ್ರಜೆಗಳುಳ್ಳವನು. ಅಥವಾ ಎಲ್ಲಾ ಪ್ರಜೆಗಳಿಗಿಂತಲೂ ಉತ್ತಮನು, ಇಂತಹ, ಸವಿತಾ = ಶ್ರೀ ಹರಿಯು, ಉಭೇದ್ಯಾವಾ ಪೃಥಿವೀ =ದ್ಯಾವಾಪ್ರಥಿವಿಗಳ (ಸ್ವರ್ಗಭೂಮಿಗಳ ಅಂತಃ =ಮಧ್ಯದಲ್ಲಿ, ಈಯತೇ = (ಇಣುಗತೌ) ತೋರುತ್ತಾನೆ. ಮತ್ತೂ, ಅಮೀವಾಂ = (ಅಮಗತ್ಯಾದೌ) (ಅಮ್ಯತೇ ಗಮ್ಯತೇ ನರಕಂ ಅನೇನ ಪಾಪೇನ ಈ ಪಾಪದಿಂದ ನರಕವು ಹೊಂದಲ್ಪಡುತ್ತದೆ.) ಪ್ರಾಣಿಗಳ ಪಾಪವನ್ನು ಅಪಬಾಧತೇ =ಕೆಡಿಸುತ್ತಾನೆ. ಪರಿಹರಿಸುತ್ತಾನೆ. ಸೂರ್ಯಂ = ಪ್ರಸಿದ್ಧಸೂರ್ಯನನ್ನು ವೇತಿ = (ವೀಗೂ ವ್ಯಾಪ್ತಿ ಪ್ರಜನ ಕಾಂತ್ಯಸನಖಾಚನೇಷು) ಹೊಂದುತ್ತಾನೆ. ಕೃಷ್ಣೇನ ರಜಸಾ = ಶಾರ್ವರ ತಮಸ್ಸಿನಿಂದ, ದ್ಯಾಂ = ಅಂತರಿಕ್ಷ ಲೋಕವನ್ನು ಅಭಿಯಣೋತಿ = ಪೂರ್ಣೀಕರಿಸುತ್ತಾನೆ. ॥೯॥

**ಭಾ ॥ (1) ಚರ್ಷಣಿಭ್ಯೋ ಯತ್ಪ್ರಜಾಭ್ಯೋ ವಿಶಿಷ್ಟೋ ವಿಚರ್ಷಣಿಃ ಕೇಶವಃ ಸೂರ್ಯಮೇತಿ (2) ಋಣೋತಿ ಸಪೂರಯತಿ ॥೧॥**

ಅ॥ (1) (ನಾನಾ ವಿಧರಾದ ಪ್ರಜೆಗಳುಳ್ಳವನು. ವಿಚರ್ಷಣಿಯೆನಿಸುತ್ತಾನೆ ಎಂದು ಸಿದ್ಧವಾಗುವುದಾದರೂ ಅರ್ಥಾಂತರವನ್ನು ಹೇಳುತ್ತಾರೆ.) ಚರ್ಷಣಿಭ್ಯಃ = ಪ್ರಜೆಗಳ ದೆಶೆಯಿಂದ ಯಾವ ಕಾರಣದಿಂದ ಉತ್ತಮನೋ, ಆದ ಕಾರಣ ಶ್ರೀ ಹರಿಯು ವಿಚರ್ಷಣಿಯೆನಿಸುತ್ತಾನೆ. (ಸೂರ್ಯಂ ಏತಿ ಎನ್ನುವುದಕ್ಕೆ ಅರ್ಥ ಹೇಳುತ್ತಾರೆ. ) ಶ್ರೀ ಕೇಶವನನ್ನೂ ಪ್ರಸಿದ್ಧ ಸೂರ್ಯನನ್ನೂ ಹೊಂದುತ್ತಾನೆ. (2) ಧಾತುಗಳಿಗೆ ಅನೇಕಾರ್ಥಗಳಿದ್ದುದರಿಂದ ಋಣೋತಿ ಎನ್ನುವುದು ಪೂರ್ಣೀಕರಿಸುತ್ತಾನೆಂದು ವ್ಯಾಖ್ಯಾತವಾಯ್ತು. ಅಥವಾ ಋಣಪ್ರಾಪಣೇ ಎಂದು ಧಾತುವಿಗೆ ಪ್ರಾವಣ ಎಂದು ಅರ್ಥವಿರುವುದರಿಂದ ಹೊಂದಿಸುತ್ತಾನೆಂದರ್ಥವು ಪೂರ್ಣೀಕರಿಸುತ್ತಾನೆ ಎಂದು ತಾತ್ಪರ್ಯಾರ್ಥವನ್ನು ಹೇಳಿದ್ದು. ॥೯॥

**ಋ ॥ (೪೨೦) ಹಿರಣ್ಯಹಸ್ತೋ ಅಸುರಃ ಸುನೀಥಃ ಸುಮೃಳೀಕಃ ಸ್ವವಾಯಾತ್ವರ್ವಾಙ್ ॥**

**ಅಪಸೇಧನ್ರಕ್ಷಸೋ ಯಾತುಧಾನಾನಸ್ಥಾದ್ದೇವಃ ಪ್ರತಿದೋಷಂ ಗೃಣಾನಃ ॥೧೦॥**

ಅ ॥ ಯಃ ದೇವಃ = ಯಾವ ಶ್ರೀ ಹರಿಯು ರಕ್ಷಸಃ = ರಾಕ್ಷಸರನ್ನು, ಯಾತುಧಾನಾಂ =ರಾಕ್ಷಸರ ಅವಾಂತರ ಜಾತಿ ಪ್ರಭೇದಗಳನ್ನು ಅಪಸೇಧನ್ =ನಿರಾಕರಿಸುವವನಾಗಿ, ಪ್ರತಿದೋಷ = ಎಲ್ಲಾ ರಾತ್ರಿಗಳಲ್ಲಿ ರಾತ್ರಿಯ ಉಪಕ್ರಮ ಉಪಸಂಹಾರ ರೂಪ ಸಂಧ್ಯಾಕಾಲಗಳಲ್ಲಿ ಗೃಣಾನಃ =ಗಾಯತ್ರ್ಯಾದಿ ಮಂತ್ರಗಳಿಂದ ಸ್ತುತಿಸಲ್ಪಡುವವನಾಗಿ, ಅಸ್ಥಾತ್ = ಇರುತ್ತಾನೋ, ಸಃ =ಅಂತಹ, ಹಿರಣ್ಯಹಸ್ತಃ = ಹಿರಣ್ಯಾತ್ಮಕವಾದ ಪಾತ್ರವು ಕೈಯಲ್ಲಿ ಉಳ್ಳ, ಅಸುರಃ =ಮುಖ್ಯಪ್ರಾಣರೂಪಗಳಲ್ಲಿ ಸ್ನೇಹವುಳ್ಳ ಸುನೀಥಃ = ಶೋಭನವಾದ ನೀತಿಯಿಂದ ಕೂಡಿದ, ಸುಮೃಳೀಕಃ = (ಮೃಡಸುಖನೇ) ಅಧಿಕವಾಗಿ ರಕ್ಷಿಸತಕ್ಕ, ಸ್ವವಾನ್ = ತನ್ನ ಸತ್ತಾದಿಗಳಲ್ಲಿ ತನ್ನ ಅಪೇಕ್ಷೆಯಿರುವ, ಸರ್ವಸ್ವತಂತ್ರನಾದ, ಶ್ರೀ ಹರಿಯು, ಅರ್ವಾಙ್ =ನೀಚರಾದ ನಮ್ಮನ್ನು ಕುರಿತು ಯಾತು = ಬರಲಿ. ॥೧೦॥

ಭಾ || (1) ಸ್ವವಾನ್ ಸ ಸ್ವತಂತ್ರತ್ವಾತ್ಸ್ವರ್ಣ ಪಾತ್ರಂ ಸಂಪೂರ್ಣಂ । ದಧಾನೋಽಸೌ ಸ್ವರ್ಣ ವರ್ಣಶ್ಚ ತೇನ ಸ್ವರ್ಣಪಾಣಿಃ ಸ್ವರ್ಣಹಸ್ತಶ್ಚ ದೇವಃ || (3) ಪೃಥಕ್ಪೃಥಕ್ ಪಾಣಿ ಪೂರ್ವಾಂಗ ವಿತ್ತ್ವೈ ಸ್ವರ್ಣವರ್ಣ ಸ್ವರ್ಣಪಾಣಿಃ ಸ ಉಕ್ತಃ || (4) ಪಿತ್ರ್ಯೈರ್ಲಿಂಗೈರ್ವೇತ್ತಿ ಸೂರ್ಯಂ ಯತಶ್ಚ ಸೂರ್ಯಾದನ್ಯಃ ಸವಿತಾ ವಾಸುದೇವಃ || (5) ಉಕ್ತೋಽಗಾಯತ್ರ್ಯಾ ಚಾರಣ್ಯೈಸ್ತತ್ರತತ್ರ ಕಪ್ಯಾಸ ಪದ್ಮಾಕ್ಷ ಇತಿ ಹ್ಯುದಾಖ್ಯಃ ||೧೦||

ಅ || (1) ತನಗೆ ತನ್ನಿಂದ ಸಂಬಂಧವಿಲ್ಲದಿರುವುದರಿಂದ ಸ್ವವಾನ್ ಎಂಬುವುದು ಅಮುಕ್ತವೆಂದರೆ (ನಿತ್ಯದಲ್ಲಿಯೂ ತನ್ನ ಸತ್ತಾದಿಗಳಲ್ಲಿ ಪರರ ಅಪೇಕ್ಷೆಯುಳ್ಳವನು ಪರವಾನ್=ಪರತಂತ್ರನು) ನಿತ್ಯದಲ್ಲಿಯೂ ತನ್ನ ಸತ್ತಾದಿಗಳಲ್ಲಿ ತನ್ನ ಅಪೇಕ್ಷೆ ಮಾತ್ರ ಉಳ್ಳವನು ಸ್ವತಂತ್ರನು) ತಥಾಚ ಆ ಶ್ರೀ ವಿಷ್ಣುವು ಸರ್ವಸ್ವತಂತ್ರನಾದುದರಿಂದ ಸ್ವವಾನ್ ಎನಿಸುತ್ತಾನೆ. (2) ಹಿರಣ್ಯಹಸ್ತ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾ ಪೂರ್ವ ದಿಕ್ಕಿನಲ್ಲಿದ್ದ ಹಿರಣ್ಯಪ್ರಾಣಿ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ) ರತ್ನಾದಿಗಳಿಂದ ಪರಿಪೂರ್ಣವಾದ ಸುವರ್ಣ ಪಾತ್ರವನ್ನು ಯಾವ ಕಾರಣದಿಂದ ಶ್ರೀ ಹರಿಯು ಧರಿಸುವವನಾಗಿ ಇರುತ್ತಾನೋ (ಆ) ಕಾರಣಪೂರ್ವ ಋಕ್ಕಿನಲ್ಲಿ ಸ್ವರ್ಣಪಾಣಿಯೇ ಹಿರಣ್ಯಪಾಣಿಯಾಗಿಯೂ ಈ ಋಕ್ಕಿನಲ್ಲಿ ಸ್ವರ್ಣಹಸ್ತವೇ ಹಿರಣ್ಯಹಸ್ತನಾಗಿಯೂ ಹೇಳಲ್ಪಟ್ಟಿದ್ದಾನೆ. (ಎಂದು ಒಂದು ವ್ಯಾಖ್ಯಾನವು) ಹಿರಣ್ಯಾತ್ಮಕವಾದ ಪಾತ್ರವು ಕೈಯಲ್ಲಿ ಉಳ್ಳವನು ಎಂದು ನಿರ್ವಚನವು. ಯಾವ ಕಾರಣದಿಂದ ಸುವರ್ಣದಂತೆ ವರ್ಣವುಳ್ಳವನೋ, ಅದರಿಂದಲೂ ಸುವರ್ಣಪಾಣಿಃ ಎನಿಸುತ್ತಾನೆ, ಎಂದು ಇನ್ನೊಂದು ವ್ಯಾಖ್ಯಾನವು (3) (ಪಾಣಿ ಶಬ್ದವು ವರ್ಣವಾಚಕವು ಆಗದಿರುವುದರಿಂದ ಈ ವ್ಯಾಖ್ಯಾನವು ಹೇಗೆ ಕೂಡುತ್ತದೆ. ಎಂದರೆ) ಸ್ವರ್ಣದಂತೆ ವರ್ಣವುಳ್ಳ ಆ ಶ್ರೀ ಹರಿಯು ಸ್ವರ್ಣಪಾಣಿಯಾಗಿ ಹೇಳಲ್ಪಟ್ಟಿದ್ದಾನೆ. (ಹಿರಣ್ಯ ವರ್ಣೌಪಾಣೀ ಆಸ್ಯ=ಹಿರಣ್ಯದಂತೆ ವರ್ಣವುಳ್ಳ ಪಾಣಿಗಳುಳ್ಳವನು ಎಂದು ನಿರ್ವಚನವು) ಆದಾಗ್ಯೂ ಪಾಣಿಗಳಿಗೇ ಮಾತ್ರವೇ ಹಿರಣ್ಯ ವರ್ಣತ್ವವು ಸಿಗುತ್ತದೆ. ಸಮಸ್ತ ಅವಯವಗಳಿಗೆ ಹಿರಣ್ಯ ವರ್ಣತ್ವವು ಸಿಗುವುದಿಲ್ಲ. ಎಂದು ಹೇಳಕೂಡದು ಉಪಲಕ್ಷಣ ಯಾ ಪಾಣಿ ಶಬ್ದದಿಂದ ಸಮಸ್ತ ಅವಯವಗಳನ್ನೂ ಇಟ್ಟುಕೊಳ್ಳಬೇಕು) ಪ್ರಪ್ರತ್ಯೇಕವಾಗಿ ಸಮಸ್ತ ಅವಯವಗಳಿಗೂ ಅಂದರೆ ಪ್ರಾಣಿಯೇ ಮೊದಲಾಗಿ ಉಳ್ಳ ಸಮಸ್ತ ಅವಯವಗಳೂ ಹಿರಣ್ಯ ವರ್ಣವುಳ್ಳವುಗಳಾಗಿವೆ, ಎಂದು ತಿಳಿಸುವುದಕ್ಕಾಗಿ ಸ್ವರ್ಣವುಳ್ಳ ಆ ಶ್ರೀ ಹರಿಯೇ ಸ್ವರ್ಣಪಾಣಿಯಾಗಿ ಹೇಳಲ್ಪಟ್ಟಿದ್ದಾನೆ. (ಏವಂಚ ಎಲ್ಲಾ ಅವಯವಗಳೂ ಸುವರ್ಣವರ್ಣಗಳಾಗಿವೆ, ಎಂದು ತಿಳಿಸಿಕೊಡುವುದಕ್ಕಾಗಿ ಪಾಣಿ ಶಬ್ದವನ್ನು ಗ್ರಹಣ ಮಾಡಿದ್ದು) (ಪ್ರಪ್ರತ್ಯೇಕವಾಗಿ ಪ್ರತಿ ಅಂಗವು, ಸುವರ್ಣ ವರ್ಣವುಳ್ಳದ್ದೆಂದು ಧ್ಯಾನಿಸಬೇಕು. ಒಂದೊಂದು ಅಂಗವು ಸುವರ್ಣವರ್ಣವುಳ್ಳದ್ದೆಂದು ದೃಢವಾದಾಗ ಮತ್ತೊಂದು ಅಂಗವನ್ನು ಸುವರ್ಣವರ್ಣವುಳ್ಳದ್ದೆಂದು ಧ್ಯಾನಿಸಬೇಕು. ಪ್ರಥಮದಲ್ಲಿಯೇ ಸಮುದಾಯರೂಪದಿಂದ ಸುವರ್ಣವರ್ಣವುಳ್ಳದೆಂದು ಧ್ಯಾನಿಸಲಸಾಧ್ಯವು. ಅಲ್ಪಜ್ಞಾನಿಗಳಿಗೆ ಹಾಗೆ ಧ್ಯಾನಿಸಲಿಕ್ಕೆ ಶಕ್ತಿಯಿಲ್ಲವೆಂದು ತಿಳಿಸಿಕೊಡುವುದಕ್ಕಾಗಿ ಪಾಣಿ ಶಬ್ದವನ್ನು ಗ್ರಹಣ ಮಾಡಿದ್ದು) (ಹಾಗಾದರೆ ರಾತ್ರಿಯಲ್ಲಿ ಸಂಧ್ಯಾವಂದನೆಯನ್ನು ನಿಷೇಧಿಸಿದುದರಿಂದ ಪ್ರತಿದೋಷಂ ಎಂದದ್ದು ಹೇಗೆಂದರೆ ಪ್ರತಿದೋಷಂ ಎನ್ನುವುದರಿಂದ ೨ ಸಂಧ್ಯಾಕಾಲಗಳನ್ನು ಮಾತ್ರ ಇಟ್ಟುಕೊಳ್ಳಬೇಕು. ಹಾಗಾದರೆ ರಾತ್ರಿಯಲ್ಲಿ ಸಂಧ್ಯಾವಂದನ ಮಾಡಕೂಡದು ಎಂಬ ವಾಕ್ಯಕ್ಕೆ ಸಂಧ್ಯಾಕಾಲಃ ಪ್ರಾಗುದಯಾದ್ವಿಪ್ರಸ್ಯ ದ್ವಿಮುಹೂರ್ತಕಃ । ರಾತ್ರೌ ಪ್ರಹರ ಪರ್ಯಂತಂ ದಿವಾ ಕರ್ಮಾಣಿಕಾರಯೇತ್ || ಇತ್ಯಾದಿ ಪ್ರಮಾಣಾನುಸಾರ ಮಧ್ಯರಾತ್ರಿ ಕಾಲದಲ್ಲಿ ಸಂಧ್ಯಾವಂದನೆ ಮಾಡಕೂಡದು ಎಂದಭಿಪ್ರಾಯವು) (ತಥಾಚ ಯಾವ ಶ್ರೀ ಹರಿಯು ರಾಕ್ಷಸಾದಿಗಳನ್ನು ನಿರಾಕರಿಸುತ್ತಾ ೨ ಸಂಧ್ಯಾಕಾಲದಲ್ಲಿ ಸ್ತುತಿಸಲ್ಪಡುವವನಾಗಿದ್ದನೋ, ಅಂತಹ

ಹಿರಣ್ಮಪಾಣಿಯಾದ ಶ್ರೀ ಹರಿಯು ನೀಚರಾದ ನಮ್ಮನ್ನು ಹೊಂದಲಿ) (4) (ಇತರತ್ರ ಅಗ್ನ್ಯಾದಿ ಶಬ್ದಗಳಿಗೆ ಅಗ್ನ್ಯಾದಿರೂಪವಾದ ಅರ್ಥವನ್ನೇ ಇಟ್ಟುಕೊಂಡೇ ಭಗವತ್ಪರತ್ವವನ್ನೂ ವ್ಯಾಖ್ಯಾನ ಮಾಡಿದುದರಿಂದ ಇಲ್ಲಿಯೂ ಹಾಗೆಯೇ ಎಂಬ ಪ್ರತೀತಿಯನ್ನು ಅಂದರೆ ಜೀವತಾಂತರ ಪರತ್ವ ಪ್ರತೀತಿಯನ್ನು ನಿವಾರಣೆ ಮಾಡುತ್ತಾರೆ) ಕ್ವೇದಾನೀಂಸೂರ್ಯ ಇತ್ಯಾದಿಲಿಂಗಗಳಿಂದ ಹೇಳಲ್ಪಟ್ಟ ಪ್ರಾಕೃತಾಜ್ಞೆಯತ್ವ ಮೊದಲಾದ ಲಿಂಗಗಳಿಂದ ಅಲ್ಲಿ ಸವಿತೃ ಶಬ್ದದಿಂದ ಸೂರ್ಯನಿಂದ ಭಿನ್ನನು ವಾಚ್ಯನು. ಅವನು ವಾಸುದೇವನೇ. (ಮತ್ತು ಹಿಂದಿನ ಋಕ್ಕಿನಲ್ಲಿ) ಯಾವ ಕಾರಣದಿಂದ ಸೂರ್ಯವೇತಿ = ಸೂರ್ಯನನ್ನು ಹೊಂದುತ್ತಾನೆ ಎಂದು ಸೂರ್ಯನ ಸಮೀಪಕ್ಕೆ ಗಮನವು ಉಕ್ತವಾಗಿದೆ. (ಆದ ಕಾರಣ ಕರ್ಮ ಕರ್ತೃಗಳಿಗೆ ಬೇಧವು ಅವಶ್ಯಕವಾದ ಪ್ರಯುಕ್ತ) ಸೂರ್ಯಂ ಎಂಬ ದ್ವಿತೀಯಾಂತ ಪದದಿಂದ ವಾಸುದೇವನನ್ನೇ ಇಟ್ಟುಕೊಳ್ಳಬೇಕು.) (ಏತೈರ್ಲಿಂಗೈಃ ಎಂಬ ಭಾಷ್ಯವನ್ನು ಪ್ರಕಾರಾಂತರದಿಂದ ವ್ಯಾಖ್ಯಾನ ಮಾಡುತ್ತಾರೆ) ಆದಾಗ್ಯೂ ವಾಸುದೇವನೆಂದು ಹೇಗೆ ಸಿದ್ಧವಾಗುವುದೆಂದರೆ ಅಣಿಂ ನ ರಥ್ಯಂ ಇತ್ಯಾದಿಗಳಿಂದ ಹೇಳಲ್ಪಟ್ಟ ಮುಕ್ತಾಶ್ರಯತ್ವ ಮೊದಲಾದ ಲಿಂಗಗಳಿಂದ ಸವಿತೃ ಶಬ್ದವಾಚ್ಯನು ವಾಸುದೇವನೇ (5) ಮತ್ತು ೨ ಸಂಧ್ಯಾಕಾಲಗಳಲ್ಲಿ ಸ್ತುತಿಸಲ್ಪಡುವವನು ಗಾಯತ್ರೀ ಪ್ರತಿಪಾದ್ಯನೆಂದು ಹೇಳಬೇಕು. (ಅಂದರೆ - ೨ ಸಂಧ್ಯಾಕಾಲಗಳೂ ಪ್ರದೋಷಕಾಲವಾದುದರಿಂದ, ಪ್ರದೋಷಕಾಲದಲ್ಲಿ ವೇದಾಧ್ಯಯನವನ್ನು ಮಾಡಬಾರದೆಂದು ಹೇಳಿದ ಕಾರಣ ಸಂಧ್ಯಾಂಗ ಗಾಯತ್ರೀ ಮಂತ್ರದಿಂದ ಸ್ತುತ್ಯನೆಂದೇ ಅವಶ್ಯವಾಗಿ ಹೇಳಬೇಕು) ಗಾಯತ್ರೀ ಪ್ರತಿಪಾದ್ಯನು ವಾಸುದೇವನೇ ಧ್ಯೇಯಸ್ಸದಾ ಸವಿತೃ ಮಂಡಲ ಮಧ್ಯವರ್ತೀ ಎಂಬ ಪುರಾಣ ವಾಕ್ಯದಿಂದ ಮತ್ತು ಇಲ್ಲಿ ಹಿರಣ್ಯವರ್ಣವುಳ್ಳವನಾಗಿ ಹೇಳಲ್ಪಟ್ಟಿದ್ದಾನೆ. ಅ ಹಿರಣ್ಯವರ್ಣವುಳ್ಳವನು) ಅರಣ ಉಪನಿಷತ್ತುಗಳಿಂದ ಅಲ್ಲಿ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಚ್ರಣವಾತ್ಸರ್ವ ಏವ ಸುವರ್ಣ ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಇತ್ಯಾದಿ ಪ್ರಮಾಣಗಳಲ್ಲಿ (ವಾಸುದೇವನೆಂದೇ ಹೇಳಲ್ಪಟ್ಟಿದ್ದಾನೆ. ಅಲ್ಲಿಯೂ ಸೂರ್ಯನೇ ಹೇಳಲ್ಪಟ್ಟಿದ್ದಾನೆಂದು ಹೇಳಲಾಗುವುದಿಲ್ಲ. ಯ ಏಷ ಆದಿತ್ಯೇ ಹಿರಣ್ಮಯಃ ಪುರುಷಃ ಎಂಬ ಶ್ರುತಿಯಲ್ಲಿ ಸೂರ್ಯನಲ್ಲಿ ಹಿರಣ್ಮಯನಾದ ಶ್ರೀ ವಾಸುದೇವನು ಇದ್ದಾನೆಂದು ಹೇಳಿದೆ. ಹಿರಣ್ಮಯನಾದವನು ಶ್ರೀ ವಾಸುದೇವನಿಂದ ಭಿನ್ನರಾದ ಬ್ರಹ್ಮರುದ್ರಾದಿಗಳೆಂದು ಹೇಳಕೂಟದು. ಏಕೆಂದರೆ) ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಣೀ ಎಂದು ಕಪ್ಯಾಸ ಪದ್ಮಾಕ್ಷಃ =ಪದ್ಮದಳಗಳಂತೆ ಕಣ್ಣುಗಳುಳ್ಳವನೆಂದು ಹೇಳಿದೆ. (ಕಪ್ಯಾಸ ಶಬ್ದಾರ್ಥವನ್ನು ಪ್ರಮಾಣದಿಂದ ಹೇಳುತ್ತಾರೆ) ಕಂಪಿಬನ್ನಾಲ ಸಂಬಂಧಿ ಕಮಲಾಯುತಲೋಚನಃ ಕಪ್ಯಾಸವೆಂದರೆ ಬಾಡದಿರುವ ಪದ್ಮವು ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ. (ಮತ್ತು ಹಿರಣ್ಯಶ್ಮಶ್ರುಃ ಎಂಬ ವಾಕ್ಯ ಪ್ರತಿಪಾದ್ಯನಾದವನು ಶ್ರೀ ವಿಷ್ಣುವೇ, ಸೂರ್ಯಾದಿಗಳಲ್ಲಿ, ಎಂಬಲ್ಲಿ ಉಪನಿಷತ್ತಿನಲ್ಲಿರತಕ್ಕ ಜ್ಞಾನಕಾಂಪರವನ್ನು ಹೇಳುತ್ತಾರೆ) ತಸ್ಯೋದಿತಿನಾಮೇತ್ಯಸಾವುದಾಖ್ಯಃ ಆತನಿಗೆ ಉತ್ ಎಂದು ಹೆಸರು ಆದ ಕಾರಣ ಈ ಹಿರಣ್ಯತ್ಮತ್ರುವು ಉತ್ ಎಂದು ಹೆಸರುಳ್ಳವನು ಎಂದು ಹೇಳಲ್ಪಟ್ಟಿದ್ದಾನೆ. ಸೂರ್ಯಾದಿಗಳಿಗೆ ಉತ್ ಎಂಬ ಹೆಸರು ಸರ್ವಥಾ ಕೂಡುವುದಿಲ್ಲ. ಸ ಏಷಃ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ ಆ ಶ್ರೀ ಹರಿಯು ಸಮಸ್ತ ಪಾಪಗಳಿಂದ ಉದ್ಗತನಾದುದರಿಂದ (ಸರ್ವದಾ ಪಾಪಲೇಶ ರಹಿತನಾದುದರಿಂದ ಉತ್ ಹೆಸರುಳ್ಳವನು ಎಂದು ಉತ್ ಶಬ್ದವನ್ನು ನಿರ್ವಚನ ಮಾಡಿದ್ದಾನೆ. ಸರ್ವಪಾಪರಾಹಿತ್ಯರೂಪವಾದ ಉತ್ ಶಬ್ದಾರ್ಥವು ಸಂಸಾರಿಗಳಲ್ಲಿ ಸರ್ವಥಾ ಕೂಡಲಾರದು) ||೧೦||

ಋ || (೪೨೧) ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ ಅಂತರಿಕ್ಷೇ |

**ತೇಭಿರ್ನೋ‌ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚನೋ ಅಧಿ ಚ ಬ್ರೂಹಿ ದೇವ** ||೧೧||೭||೩೪||೬||

ಅ || ಹೇ ಸವಿತಃ ದೇವ = ಜಗತ್ಸೃಷ್ಟಿಕರ್ತನಾದ, ಶ್ರೀ ಹರಿಯೇ, ತೇ =ನಿನ್ನ ಸಂಬಂಧಿಗಳಾದ ಯೇ = ಯಾವ ಪ್ರಸಿದ್ಧಗಳಾದ ದೇವಯಾನಗಳು (ಶರೀರದಲ್ಲಿರುವ ಸುಷುಮ್ನಾದಿ ನಾಡಿಗಳು) ಪೂರ್ವ್ಯಾಸಃ =ಪೂರ್ವದಲ್ಲಿಯೇ ಇದ್ದುವುಗಳೋ, ಯೇ=ಯಾವುವು ಅಂತರಿಕ್ಷೇ = ಅಂತರಿಕ್ಷ ಲೋಕದಲ್ಲಿ ಅರ್ಚಿರಾದಿ ಲೋಕಗಳಲ್ಲಿ ಸಾಧಿಸಲು ಶಕ್ಯಗಳಾದ, ಅರೇಣವಃ =ವಿಷಯಗಳಲ್ಲಿ ರಾಗ, ರಜೋಗುಣರಹಿತರಾದ ಪುರುಷರ ಸಂಬಂಧಿಗಳಾದ, ಸುಕೃತಾಃ = ನಿವೃತ್ತ ಕರ್ಮಗಳಿಂದಲೇ ಪ್ರಾಪ್ಯಗಳಾದ ಪಂಥಾಃ=ಮಾರ್ಗಗಳಿವೆಯೋ, ತೇಭಿಃ= ಅಂತಹ ಸುಗೇಭಿಃ = (ಸುಪೂರ್ವಾತ್ ಗಮ್‌ಗತೌ, ಸುಖೇನ ಗಚ್ಛಂತ್ಯತ್ರ) ಸುಖದಿಂದ ಹೋಗಲು ಶಕ್ಯಳಾದ, (ಕಂಟಕಾದಿಗಳಿಂದ ವಿರಹಿತಗಳಾದ) ಪಥಿಭಿಃ = ಮಾರ್ಗಗಳಿಂದ (ಮಾರ್ಗಗಳನ್ನು ಕೊಟ್ಟು) ಅದ್ಯ = ಈಗ, ನಃ = ನಮ್ಮನ್ನು ರಕ್ಷಚ = (ಸಂಸಾರದಿಂದ ಬಿಡುಗಡೆ ಮಾಡಿ) ರಕ್ಷಿಸು, ಅಥೋ=ಮತ್ತು, ನಃ = ಅಧಿಚ =ನಮ್ಮನ್ನು ಅಧಿಕರನ್ನಾಗಿಯೂ ಬ್ರೂಹಿ = ಹೇಳು, (ನಿನ್ನ ವಚನ ಮಾತ್ರದಿಂದ ಅಧಿಕರಾಗುವೆವು) ||೧೧||

ಭಾ || **(1) ಯೇ ಪಂಥಾನೋ ದೇವಯಾನಾ ಅಮುತ್ರ ಸಾಧ್ಯಾಯೇ ತೇ ರೇಣವೋಽರಾಗತೋ ವಾ | ರಜೋಹಾನಾದಥವಾ ತಾತ್ಪ್ರದಾಯ ರಕ್ಷಾಧಿಕಾನ್ ಬ್ರೂಹಿನೋಽಥೋ ಸಮೇಭ್ಯಃ** ||೧೧||೭||೭||

ಅ || (ಎಲೋ ಶ್ರೀ ಹರಿಯೇ) ನಿನ್ನ ಸಂಬಂಧಿಗಳಾದ ಪ್ರಸಿದ್ಧಗಳಾದ ಶರೀರದಲ್ಲಿರತಕ್ಕ ಸುಷುಮ್ನಾದಿ ನಾಡಿಗಳು ಪೂರ್ವದಲ್ಲಿರತಕ್ಕವುಗಳೋ, ಯಾವವು ಅರ್ಚಿರಾದಿಲೋಕಗಳಲ್ಲಿ ಸಾಧಿಸಲು ಶಕ್ಯಗಳಾದ ರಾಗವಿಲ್ಲದಿರುವುದರಿಂದ ಅಥವಾ ರಜೋ ಗುಣವಿಲ್ಲದಿರುವುದರಿಂದ ಅರೇಣುಗಳೆನಿಸಿಕೊಂಡ, (ರೇಣು ಶಬ್ದದಿಂದ ರಜಃ ಶಬ್ದಾರ್ಥವು ಲಕ್ಷಿತವಾಗುತ್ತದೆ. ಅದಕ್ಕೆ ರಾಗವು ಅಥವಾ ರಜೋಗುಣವು ಅರ್ಥವು ತಥಾಚ ವಿಷಯರಾಗ ರಜೋಗುಣ ರಹಿತವಾದ ಪುರುಷರ ಸಂಬಂಧಿಗಳಾದ) ಮಾರ್ಗಗಳಿವೆಯೋ ಅಂತಹ ಮಾರ್ಗಗಳನ್ನು ಕೊಟ್ಟು ನಮ್ಮನ್ನು ರಕ್ಷಿಸು. ನಮ್ಮನ್ನು ಅಧಿಕರನ್ನಾಗಿಯೂ ಹೇಳು. (ನಿನ್ನ ವಚನ ಮಾತ್ರದಿಂದ ಅಧಿಕರಾಗುವೆವು) ಸಮಾನಿಕರಿಂದಲೂ ಅಧಿಕರನ್ನಾಗಿ ಹೇಳು.

ವಿ|| (1) ಹೀನರಿಗಿಂತ ಅಧಿಕರೆಂದು ಸುತರಾಂ ಸಿದ್ಧವಾಗಿದೆ. ಅಧಿಕರಾದವರಿಂದ ಅಧಿಕ್ಯವು ಹೊಂದಲಶಕ್ಯವೇ ಆಗಿದೆ. ಆದ ಕಾರಣ ಸಮಾನಿಕರಿಂದ ಅಧಿಕ್ಯ ಪ್ರಾರ್ಥನೆಯು. (2) ಹಾಗಾದರೆ ಅಧಿಕರಾದವರಿಂದ ಅಧಿಕ್ಯ ಪ್ರಾಪ್ತಿಯು ಹೇಗೆ ಆಗಲಾರದೋ, ಹಾಗೆಯೇ ಸ್ವರೂಪಕ್ಕೆ ನಾಶವಿಲ್ಲದಿರುವುದರಿಂದ ಸಮಾನಿಕರಿಂದಲೂ ಅಧಿಕ್ಯ ಪ್ರಾಪ್ತಿಯು ಸರ್ವಥಾ ಆಗಲಾರದು. ಎಂದರೆ ಯಾರು ತನಗೆ ಸಮಾನಿಕರೋ, ಕಾಲಾಂತರದಲ್ಲಿ ಮೋಕ್ಷವನ್ನು ಹೊಂದುವವರೋ, ಅವರಿಗಿಂತ ಶೀಘ್ರವಾಗಿ ಮುಕ್ತಿಯಾದದ್ದು ಅಧಿಕ್ಯವು ಅಥವಾ ತನಗೆ ಸಮಾನಿಕರಾದವರು ಸತ್ಕರ್ಮ ಮಾಡದೆ ದುಷ್ಕರ್ಮ ಮಾಡುವುದರಿಂದ ಆಂದಾದಿಹ್ರಾಸವನ್ನು ಹೊಂದುವರು. ಅವರಿಗಿಂತ ಮೊದಲು ಸಂಪೂರ್ಣ ಸ್ವರೂಪಾನಂದಾನುಭವರೂಪವಾದ ಅಧಿಕ್ಯವನ್ನು ಛಾಂದೋಗ್ಯ ಭಾಷ್ಯಾದಿಗಳಲ್ಲಿ ಉಪಪಾದಿಸಿರುವರು. (3) ಮೋಕ್ಷಮಾರ್ಗವು ಒಂದೇಯಾದುದರಿಂದ ಪಥಿಭಿಃ ಎಂಬೀ ಬಹುವಚನವು ಹೇಗೆ ಕೊಡುತ್ತದೆ ಎಂದರೆ ಗರುಡಮಾರ್ಗ ಶೇಷಮಾರ್ಗ ಎಂದು ಭೇದವಿದೆ. ಮತ್ತು ಗರುಡ ಮಾರ್ಗ ಶೇಷ ಮಾರ್ಗಗಳಲ್ಲಿಯೂ ಪ್ರತ್ಯೇಕ ಅವಾಂತರ ಭೇದಗಳಿವೆ. ಅದರಿಂದ ಮಾರ್ಗಭೂತಗಳಾದ ಅರ್ಚಿರಾದಿ ಲೋಕಗಳಿಗೂ ಭೇದವಿದೆ. ಆದ ಕಾರಣ ಬಹುವಚನವು ಯುಕ್ತವೇ ||೧೧||೬೩||೭||

ಅವ॥ ಪ್ರವೋ ಯಹ್ವಂ ಎಂಬುವುದನ್ನಾರಂಭಿಸಿ, ತ್ವಮಗ್ನೇ ಎನ್ನುವುದಕ್ಕಿಂತ ಮೊದಲಿನದ್ದಾದ ೧೧೦ ಋಕ್ಕುಗಳಿಗೆ ಕಣ್ವರು ಋಷಿಗಳು. ಅವರಿಗೆ ಶತರ್ಚಿಗಳು ಎಂದು ಪ್ರಸಿದ್ಧಿ ಇದ್ದರೂ ಕಾಲಾಂತರದಲ್ಲಿ ಹೆಚ್ಚು ೧೦ ಋಕ್ಕುಗಳನ್ನು ಕಂಡಿರುವುದರಿಂದ ಶತರ್ಚಿಗಳು ಎಂಬ ಹೆಸರು ಯುಕ್ತವಾಗುವುದು. ಛಂದಸ್ಸನ್ನು ಯಥಾ ಯೋಗ್ಯವಾಗಿ ತಿಳಿದುಕೊಳ್ಳಬೇಕು. ಪ್ರವೋಯಹ್ವಂ ಇತ್ಯಾದಿಗಳು ೨೦ ಋಕ್ಕುಗಳು. ೪ ವರ್ಗಗಳು. ಪ್ರಗಾಥಾ ಛಂದಸ್ಕವು. ೨೬ನೇ ಸೂಕ್ತವು.

**ಋ ॥ (೪೨೨) ಪ್ರವೋ ಯಹ್ವಂ ಪುರೂಣಾಂ ವಿಶಾಂ ದೇವಯತೀನಾಂ ।**

**ಅಗ್ನಿಂ ಸೂ ಕ್ತೇಭಿರ್ವಚೋಭಿರೀಮಹೇ ಯಂ ಸೀಮಿದನ್ಯ ಈಳತೇ ॥೧॥**

ಅ ॥ (ಎಲೋ ಪ್ರಜೆಗಳಿರಾ ಜ್ಞಾನ ಕರ್ಮಗಳಲ್ಲಿ ಅಧಿಕಾರ ಹೊಂದಿದವರೇ) ದೇವಯತೀನಾಂ = (ದ್ವಿತೀಯಾಂತವಾದ ದೇವ ಶಬ್ದಕ್ಕೆ ಇಣ್‌ಗತೌ. ತತ್ರಂತಾತ್ ಸ್ತ್ರಿಯಾಂ ಙೀಪ್. ಗತಿಯೆಂದರೆ ಜ್ಞಾನವು ಮತ್ತು ಯಜನವು. ಕಥಾಚ) ದೇವಾನ್ ಯಂತೀತಿ ದೇವಯತ್ಯಃ) ಶ್ರೀ ಹರಿಯ ಜ್ಞಾನವಿದ್ದುದರಿಂದಲೂ ದೇವತೆಗಳನ್ನುದ್ದೇಶಿಸಿ ಯಾಗ ಮಾಡಿದುದರಿಂದಲೂ ದೇವಯತಿಗಳೆನಿಸಿಕೊಂಡ, ಪುರೂಣಾಂ =ಬಹುಮಂದಿಗಳಾದ ವಿಶಾಂ -ಪ್ರಜೆಗಳಾದ, ವಃ=ನಿಮಗೆ, ಅನ್ಯೇ =ಇತರರಾದ, ಸಂತಃ =ಸಜ್ಜನರು, ಯಂ=ಯಾರನು ಸೀಂ ಇತ್ =ಚೆನ್ನಾಗಿಯೇ, ಈಳತೇ = (ಈಡಸ್ತುತೌ) ಸ್ತುತಿಸುತ್ತಾರೋ ಅಂತಹ, ಯಹ್ವಂ= (ಯಹುಃಸೂನುಃ ಎಂದು ಅಪತ್ಯನಾಮಗಳಲ್ಲಿ ಪಠಿತವಾಗಿದೆ.) ಪುತ್ರನಾದ, ಅಗ್ನಿಂ=ಅಗ್ನಿಯನ್ನೂ ಶ್ರೀ ವಿಷ್ಣುವನ್ನೂ (ನಾವು) ಸೂಕ್ತೇಭಿಃ ಚೆನ್ನಾಗಿ ಪ್ರಯುಕ್ತಗಳಾದ, ವಚೋಭಿಃ = ವಚನಗಳಿಂದ ಪ್ರಈಮಹೇ =ಈಜ್ ಯಾಜ್ಞಾಯಾಂ ಯಾವಾಗಲೂ ಚೆನ್ನಾಗಿ ಪ್ರಾರ್ಥಿಸುತ್ತೇವೆ. ಹೊಂದುತ್ತೇವೆ ತಿಳಿಯುತ್ತೇವೆ ॥೧॥

ಭಾ ॥ **(1) ಕಣ್ವಸ್ತ್ವಧ್ಯಾಪಯನ್ ವಿಷ್ಣೋರನುಗ್ರಹಮಥಾಪ್ನುವನ್ । ಇಚ್ಛಂಶ್ಚ ಜ್ಞಾನ ವಿತಂತಿಂ ದೇವಾಂಸ್ತುಷ್ಟಾವ ಭಕ್ತಿತಃ॥ (2) ಋಕ್‌ಶತೇವಾವಶಿಷ್ಟಂಚ ಜವ್ಯಸ್ಯಾಂ ತೇ ತು ಕಾಲತಃ । ಶೃಣ್ವಂತು ಸ್ತೋಮಮಿತ್ಯಂತಾ ದದರ್ಶೈಕಾಗ್ರಮಾನಸಃ ॥ (3) ಬ್ರಹ್ಮಾಧೇಯಶ್ಚತಃ ಪುತ್ರಂಬಹೂನಾಂ ವೋ ಹುತಾಶನಂ । ಬಹುಜ್ಞೇಯತ್ವಕೋ ವಿಷ್ಣುಂ ವೇಮಹೇ ಹೇ ಪ್ರಜಾಸ್ಸದಾ । ದೇವಜ್ಞಾನಾದ್ವಾ ಯಜನಾದ್ದೇವಯತ್ಯಃ (4) ಸಮೀಳತೇ ॥ ಯಮನ್ಯೇಚ ಜನಾಃಸಂತಃ ॥೧॥**

ಅ ॥ (1) ಹಿಂದೆ ಹೇಳಿದ ಪ್ರಕಾರ ಹಿರಣ್ಯಸ್ತೂಪರು ಕಂಡಿರುವ ಋಕ್ಕುಗಳನ್ನು ವ್ಯಾಖ್ಯಾನ ಮಾಡಿ ಈಗ ಮೇಲಿನ ಋಕ್ಕುಗಳಿಗೆ ಋಷಿಯನ್ನು ಹೇಳುತ್ತಾರೆ.) ಕಣ್ವಋಷಿಗಳಾದರೂ ಶ್ರೀ ವಿಷ್ಣುವಿನ ಅನುಗ್ರಹವನ್ನು ಹೊಂದುವವರಾಗಿಯೇ ಸಜ್ಞಾನ ವಿಸ್ತಾರವನ್ನು ಇಚ್ಛಿಸುವವರಾಗಿಯೇ ಅಧ್ಯಯನ ಮಾಡಿಸುವವರಾ (ಅಂದರೆ ಶ್ರೀ ವಿಷ್ಣುವಿನ ಅನುಗ್ರಹಕ್ಕಾಗಿಯೇ ಮತ್ತು ಅತಿಶಯ ಜ್ಞಾನ ಸಂಪಾದನೆಗಾಗಿಯೇ ಸಚ್ಛಿಷ್ಯರಿಗೆ ಅಧ್ಯಯನ ಮಾಡಿಸುವವರಾಗಿ (ಅದರಿಂದ ತಮ್ಮ ಜೀವನಕ್ಕಾಗಿ ಅಧ್ಯಯನ ಮಾಡಿಸುವುದು ಅಲ್ಪವೆಂದುಕ್ತವಾಯ್ತು) ಶ್ರೀ ವಿಷ್ಣುವೇ ಪ್ರಧಾನನಾಗಿ ಉಳ್ಳ ಅಗ್ನ್ಯಾದಿದೇವತೆಗಳನ್ನು ಸ್ತೋತ್ರ ಮಾಡಿದರು. (2) ಆ ಕಣ್ವ ಋಷಿಗಳೇ ಏಕಾಗ್ರಚಿತ್ತರಾಗಿ ೧೦೦ ಋಕ್ಕುಗಳಿಂದ ಅವಶಿಷ್ಟಗಳಾದ ಶೃಣ್ವಂತು ಸ್ತೋಮಮ್ ಎಂಬ ಪರ್ಯಂತ ಇರತಕ್ಕ ಋಕ್ಕುಗಳನ್ನು ಜಪದ ಅವಸಾನದಲ್ಲಿ (ಜಪ ಅವ್ಯಕ್ತೇ ಶಬ್ದೇ) ಕಾಲಾಂತರದಲ್ಲಿ ನೋಡಿದರು.

ವಿ ॥ (1) ಕಾಲತಃ ಎನ್ನುವುದರಿಂದ ಕಾಲಾಂತರತ್ವವೂ, ಜಪ್ಯಸ್ಯಾಂತೇ ಎನ್ನುವುದರಿಂದ ಅವಸ್ಥಾಂತರತ್ವವೂ ಉಕ್ತವಾಯ್ತು. ಇದಕ್ಕಾಗಿಯೇ ಅಧ್ಯಾಪಯನ್ ಎಂದದ್ದು. ಅಂತೂ ಅಧ್ಯಯನ ಮಾಡಿಸುವ ಅವಸ್ಥೆಯಲ್ಲಿ ೧೦೦ ಋಕ್ಕುಗಳನ್ನು ಕಂಡದ್ದು. ಜಪಾವಸಾನರೂಪವಾದ ಅವಸ್ಥಾಂತರದಲ್ಲಿ ಆದರೂ ಅವಶಿಷ್ಟಗಳಾದ ೧೪ ಋಕ್ಕುಗಳನ್ನು ನೋಡಿದ್ದು. (2) ಅವಶಿಷ್ಟಂ ಎಂದು ಹೇಳಿದುದನ್ನೇ ತೃಣ್ವಂತು ಸ್ತೋಮಮಿತ್ಯಂ ತಾಃ ಎನ್ನುವುದರಿಂದ ವಿವರಿಸಿದರು. ಇದು ತದ್ಗುಣ ಸಂವಿಜ್ಞಾನ ಬಹುವ್ರೀವಿಯು. ಯಾವ ಬಹುವ್ರೀಹಿಯಲ್ಲಿ ಅಲ್ಲಿರತಕ್ಕ ಪದಾರ್ಥದ ಜ್ಞಾನವೂ ಇದೆಯೋ. ಅದು ತದ್ಗುಣಸಂವಿಜ್ಞಾನ. ಬಹುವ್ರೀಹಿಯೆನಿಸುತ್ತದೆ. ಪ್ರಕೃತ, ಶೃಣ್ವಂತು ಸ್ತೋಮಂ ಎಂಬ ಋಕ್ಕು, ಯಾವ ಋಕ್ಕುಗಳ ಅಂತ್ಯದಲ್ಲಿದೆಯೋ, ಅಂತಹ ತ್ವಮಗ್ನೇ ವಸೂಂರಿಹ ಎಂಬ ಋಕ್ಕಿನಿಂದ ಮೊದಲಿನ ಋಕ್ಕುಗಳು (3) ಈಗ ಅನುಕ್ರಮಣಿಕೆಯಲ್ಲಿ ಹೇಳಿದ್ದು ಅಯುಕ್ತವೆನ್ನುತ್ತಾರೆ.) ತ್ರ್ಯಮಗ್ನೇ ಎನ್ನುವುದಕ್ಕಿಂತ ಮೊದಲಿನ ಋಕ್ಕುಗಳು ಕಣ್ವ ಋಷಿಗಳಿಂದ ದೃಷ್ಟಗಳಾದವುಗಳು ಎಂದು ಹೇಳಿದುದರಿಂದ ಅಗ್ನೇ ಷಕೂನಾ ಪ್ರತ್ಕಣ್ವಃ ಎಂಬಲ್ಲಿ ಅಗ್ನೇ ಎನ್ನುವುದರಿಂದ ಅಗ್ನೇ ವಿವಸ್ವದುಷಸಃ ಎಂಬ ಸೂಕ್ತದ ಪ್ರತೀಕವನ್ನೂ ಷಳೂನಾ ಎನ್ನುವುದರಿಂದ ೧೪ ಎಂಬ ಸಂಖ್ಯೆಯನ್ನೂ, ಪ್ರಸ್ಕಣ್ವಃ ಎನ್ನುವುದರಿಂದ ಋಷಿಯನ್ನು ಗ್ರಹಣ ಮಾಡಿದ್ದು ಎಂದು ಅನುಕ್ರಮಣಿಕೆಯಲ್ಲಿ ಕಣ್ವ ಋಷಿಗಳು ಕಂಡಿರುವ ಋಕ್ಕುಗಳಲ್ಲಿಯೇ ೧೪ ಋಕ್ಕುಗಳನ್ನು ಪ್ರಸ್ಕಣ್ವರು ಕಂಡದ್ದು, ಎಂದು ಹೇಳಿದ್ದು ಅಯುಕ್ತವೆಂದು ಉಕ್ತವಾಯ್ತು. (೫) ನಾವು ಯಾವುದು ಋಷ್ಯಾದಿಗಳನ್ನು ಹೇಳುತ್ತೇವೋ ಅವು ಋಕ್ಸಂಹಿತಾ, ವ್ಯಾಸೋಕ್ತ ಸ್ವಾಧ್ಯಾಯಾದಿ ಗ್ರಂಥಾನುಸಾರವಾಗಿ ಹೇಳುತ್ತೇವೆಂದು ಹೇಳಿದ ಅರ್ಥದಲ್ಲಿ ಪ್ರಮಾಣವನ್ನು ಮೊದಲೇ ಹೇಳಿರುತ್ತೇವೆ. ॥

ಅ ವ॥ (1) ಪ ವೋ ವಿಂಶತಿಃ ಕಣ್ವೋ ಘೌರಂ ಅಗ್ನೇಯಂ ಪ್ರಾಗಾಥ ಮೂರ್ಧ್ವ ಊಷಂ ಯೌಪ್ಯೌ ಎಂದು ಅನುಕ್ರಮಣಿಕೆಯು. ಪ್ರವೋಯಹ್ವಂ ಎಂಬ ಸೂಕ್ತವು ೨೦ ಋಕ್ಕುಗಳದ್ದು. ಈ ಸೂಕ್ತವನ್ನಾರಂಭಿಸಿ ಘೌರ ಪುತ್ರರಾದ ಕಣ್ವರು ಋಷಿಗಳು. ಅಗ್ನಿಯು ದೇವತೆಯು ಪ್ರಗಾಥಾ ಛಂದಸ್ಕವು. ಊರ್ಧ್ವ ಊಷುಣ ಊತಯೇ, (೪೩೪) ಊರ್ಧ್ವೋನಃ ಪ್ರಾತ್ಯಂಹಸಃ (೪೨೫) ಎಂಬೀ ೨ ಋಕ್ಕುಗಳು ಯೂಪದೇಹವಾಕಗಳು, ಎಂದು ಕೆಲವರು ಅಂದರೆ ಅನುಕ್ರಮಣಿಕಾಕಾರರು ಹೇಳುತ್ತಾರೆ. ಆದರೆ ಯಾವ ವಿಷಯಕ ಶ್ರುತಿ ಲಿಂಗಾದಿಗಳು ಇಲ್ಲದಿರುವುದರಿಂದಲೂ ಸ್ವಾಧ್ಯಾಯೆ ಮೊದಲಾದ ಗ್ರಂಥಗಳ ವಿರೋಧವಿದ್ದುದರಿಂದಲೂ ಇದು ಅಯುಕ್ತವು. (2) ಪ್ರಗಾಥ್ಯಂತೇ ಸಂಮೇಣ್ಯಂತೇ ಛಂದಾಸಿ ಯಸ್ಮಿನ್ ಪ್ರಗಾಥಗಳು ಅನೇಕ ವಿಧಗಳು. ಅವುಗಳಲ್ಲಿ ಈ ಸೂಕ್ತದಲ್ಲಿ ಬಾರ್ಹತ ಎಂದು ಹೆಸರುಳ್ಳ ಪ್ರಗಾಥ ಛಂದಸ್ಕ ಋಕ್ಕುಗಳು. ಭಹತೀ ಸತೋಬ್ಧಹತಿಗಳು ಬಾರ್ಹತ ಪ್ರಗಾಥವೆನಿಸುತ್ತವೆ. ಯಾವ ಸೂಕ್ತದಲ್ಲಿ ಬೃಹತೀ ಛಂದಸ್ಕ ಋಕ್ಕುಗಳೂ ಪಜ್ತ್ತ ವಿಶೇಷ ಸತೋ ಬೃಹತೀ ಛಂದಸ್ಕ ಋಕ್ಕುಗಳು ಇವೆಯೋ ಅಂತಹ ಋಕ್ಕುಗಳ ಸಮೂಹವು ಬಾರ್ಹತ ಪ್ರಗಾಥವೆನಿಸುತ್ತದೆ. (3) ಈ ಸೂಕ್ತದಲ್ಲಿಯೂ ಪ್ರಾಯಶಃ ಪ್ರಥಮ ತೃತೀಯಾದಿವಿಷಮ ಋಕ್ಕುಗಳು ಬೃಹತೀ ಛಂದಸ್ಕಗಳು. ಆದಿರೋಽಷ್ಟಾಕ್ಷರೌಪಾದೌ ತೃತೀಯೋ ದ್ವಾದಶಾಕ್ಷರಃ ಚತುರ್ಥೋಽಷ್ಟಾಕ್ಷರಶ್ಚೇತಿ ಬೃಹತೀ ಖಲು ವೈಭವೇತ್ ॥ ೧, ೨ನೇ ಪಾದಗಳಲ್ಲಿ ೮ ಅಕ್ಷರಗಳು. ೩ನೇ ಪಾದದಲ್ಲಿ ೧೨ ಅಕ್ಷರಗಳು, ೪ನೇ ಪಾದದಲ್ಲಿ ೮ ಅಕ್ಷರಗಳು ೩ನೇ ಪಾದದಲ್ಲಿ ೧೨ ಅಕ್ಷರಗಳು, ೪ನೇ ಪಾದದಲ್ಲಿ ೮ ಅಕ್ಷರಗಳು. ಅಂತಹುದು ಬೃಹತೀ ಎನಿಸುತ್ತದೆ (೨) ೨ ೪ ಮೊದಲಾದ ಸಮ ಋಕ್ಕುಗಳು. ಪ್ರಾಯಃ ಸತೋಬೃಹತೀ ಛಂದಸ್ಕಗಳು. ಯಾವ ಋಕ್ಕಿನಲ್ಲಿ ೧ನೇ ೩ನೇ ಪಾದಗಳಲ್ಲಿ ೧೨ ಅಕ್ಷರಗಳು ಇವೆಯೋ, ೨ನೇ ೪ನೇ ಪಾದಗಳಲ್ಲಿ ೮ ಅಕ್ಷರಗಳು ಇವೆಯೋ ಅದು ಸತೋ ಸತೋ ಬೃಹತೀ ಎನಿಸುತ್ತದೆ. ಬೃಹತೀ ಎಂದರೆ ಪಜ್ತ್ತಿ ವಿಶೇಷ

ಛಂದಸ್ಸು. ವಜ್ರ ಛಂದಸ್ಸಿನ ದೇವತೆಯನ್ನು ಹೇಳಿಯಾಗಿದೆ. (5) ಬೃಹತೀ ಛಂದಸ್ಸಿಗೆ ಶ್ರೀಃ ಬ್ರಹ್ಮಾಣೀ ಭಾರತೀ ಗರುಡ ತಾರಾ ಎಂದು ಐದು ಮಂದಿ ದೇವತೆಗಳು.

ಅ॥ (3) ಶ್ರೀ ಹರಿಯ ಜ್ಞಾನವಿದ್ದುದರಿಂದಲೂ ದೇವತೆಗಳನ್ನುದ್ದೇಶಿಸಿ ಯಾಗ ಮಾಡುವುದರಿಂದಲೂ ದೇವಯತ್ಯಃ ಎನಿಸಿಕೊಂಡ, (ಅಂದರೆ ಜ್ಞಾನ ಕರ್ಮಗಳಲ್ಲಿ ಅಧಿಕಾರ ಹೊಂದಿದ) ಮೇಲೇ ಪ್ರಜೆಗಳೇ ದೇವಾನ್ ಯಂತೀತಿ ದೇವಯತ್ಯಃ =ಇಣ್ ಗತೌ, ಗತಿಯೆಂದರೆ ಜ್ಞಾನವು. ಅಥವಾ ಯಜನವು ಜ್ಞಾನವು ಮೋಕ್ಷ ರೂಪವಾದ ಗತಿಗೆ ಸಾಧನವಾಗಿದೆ. ಯಜನವು ಸ್ವರ್ಗಾದಿಗಳಿಗೆ ಸಾಧನವಾಗಿದೆ. ಆದ ಕಾರಣ ಲಕ್ಷಣಯಾ ಇಣ್ ಧಾತುವಿನಿಂದ ವಾಚ್ಯವಾದ ಗತಿತ್ವವಿದೆ.) ಬಹುಮಂದಿ ಪ್ರಜೆಗಳಾದ ನಿಮಗೆ, ಬಹು ಮಂದಿ ಆಧಾನಾಖ್ಯ ಕರ್ಮ ಮಾಡಿ ಅದರಿಂದ ಹುಟ್ಟಿಸಿದ ಪ್ರಯುಕ್ತ ಪುತ್ರನೆನಿಸಿದ ಅಗ್ನಿಯನ್ನು, ಬಹುಮಂದಿ ವಿಷ್ಣು ವಿಷಯಕ ತಮ್ಮ ಜ್ಞಾನವನ್ನು ಇತರರ ಜ್ಞಾನವನ್ನೂ ಅಭಿವ್ಯಕ್ತೀಕರಿಸಿದ ಪ್ರಯುಕ್ತ ಪುತ್ರನೆನಿಸಿಕೊಂಡ ಶ್ರೀ ವಿಷ್ಣುವನ್ನು ಸದಾ ಹೊಂದುತ್ತೇನೆ. ತಿಳಿಯುತ್ತೇನೆ (ಹೀಗೆ ಅಗ್ನಿಗೆ ಪುತ್ರತ್ವ ಘಟಕವಾದ ಆಧಾನಾಖ್ಯ ಪ್ರಯೋಜನ ಶ್ರೀ ವಿಷ್ಣುವಿಗೆ ಪುತ್ರತ್ವ ಘಟಕವಾದ ಜ್ಞಾನಾಖ್ಯ ಪ್ರಯೋಜನಗಳಿದ್ದ ಪ್ರಯುಕ್ತವೇ ದೇವ ಯತೀ ಶಬ್ದವನ್ನು ಎರಡು ಪ್ರಕಾರ ವ್ಯಾಖ್ಯಾನ ಮಾಡಿದರು.) (ತಥಾಚ ನಾವು ಸದಾ ಅಗ್ನಿಯನ್ನು ಶ್ರೀ ಹರಿಯನ್ನು ಪ್ರಾರ್ಥಿಸುತ್ತೇವೆ) (ಞ) (ಎಂತಹವನೆಂದರೆ) ಇತರರಾದ ಸಜ್ಜನರು ಯಾವ ಅಗ್ನಿಯನ್ನೂ ಶ್ರೀ ಹರಿಯನ್ನೂ ಸರ್ವದಾ ಚೆನ್ನಾಗಿ ಸ್ತುತಿಸುತ್ತಾರೋ. ॥೧॥

ಋ॥ (೪೨೩) ಜನಾಸೋ ಅಗ್ನಿಂ ದಧಿರೇ ಸಹೋವೃಧಂ ಹವಿಷ್ಮಂತೋ ವಿಧೇಮ ತೇ ।

ಸತ್ವಂನೋ ಅದ್ಯ ಸುಮನಾ ಇಹಾವಿತಾ ಭವಾ ವಾಜೇಷು ಸಂತ್ಯ ॥೨॥

ಅ॥ (ಯಂ ಯಾವ) ಸಹೋವೃಧಂ = (ವೃಧು ವರ್ಧನೇ) ವಾಯುವಿನಿಂದ ಅಭಿವೃದ್ಧಿಯನ್ನು ಹೊಂದಿದ (ಶೂಷಂ ಸಹಃ ಎಂದು ಸಹ ಶಬ್ದವು ಬಲ ನಾಮಗಳಲ್ಲಿ ಪಠಿತವಾಗಿದೆ. ವಾಯುದೇವರು ಸಮಸ್ತ ಬಲಕ್ಕೂ ನಿಯಾಮಕರು. ಆದುದರಿಂದ ವಾಯುದೇವರು ಸಹಃ ಎನಿಸುತ್ತಾರೆ. ಹಾಗೆಯೇ ಅಗ್ನಿಯು ವ್ಯಜನಾದಿಗಳಿಂದುಂಟಾದ ವಾಯುವಿನಿಂದ ಅಭಿವೃದ್ಧಿಯನ್ನು ಹೊಂದುತ್ತಾನೆ.) ಅಗ್ನಿಂ =ಅಗ್ನಿಯನ್ನು (ವಿಷ್ಣುಪಕ್ಷದಲ್ಲಿ) ಸಹೋ ವೃಧಂ = ವಾಯು ದೇವರಿಗೆ ವೃದ್ಧಿಯನ್ನು ಮಾಡುವ (ಸಹಸಂ ವರ್ಧಯತೀತಿ ಸಹೋವೃಧ್, ಅಥವಾ ಸಹಃ ವರ್ಧಯತೀತಿ ಸಹೋವೃತ್, ತಂ ಅಗ್ನೀ=ಅಗ್ನಿ ಶಬ್ದ ವಾಚ್ಯನಾದ ನಿನ್ನನ್ನು, ಜನಾಸಃ =ಸಜ್ಜನರು, ದಧಿರೇ = ಧರಿಸುತ್ತಾರೆ. (ನಾವಾದರೂ) ತಸ್ಯ ತೇ = ಅಂತಹ ನಿನಗೆ, ಹವಿಷ್ಮಂತಂ =ಹವಿಸ್ಸು ಮೊದಲಾದುದನ್ನು ಕೊಡುವವರಾಗಿ, ವಿಧೇಮ =ಪರಿಚರಣಾದಿ ರೂಪವಾದ ಕರ್ಮವನ್ನು ಮಾಡುತ್ತೇವೆ. ಸಂತ್ಯ = (ಸಮ್ ಪೂರ್ವಕಾತ್, ತನು ವಿಸ್ತಾರೇ ಕರಮೇಚ) ಚೆನ್ನಾಗಿ ವ್ಯಾಪ್ತನಾದವನೇ, ಸಃ ಸುಮನಾಃ =ತ್ವಂ (ಹೀಗೆ ನಮ್ಮಿಂದ ಪೂಜಿಸಿಕೊಳ್ಳಲ್ಪಟ್ಟ ಪ್ರಶಸ್ತ ಮನಸ್ಸುಳ್ಳ) ನೀನು, ಇಹ = ಈ ಲೋಕದಲ್ಲಿ, ಅದ್ಯ =ಈಗ, ವಾಜೇಷ್ = ಅನ್ನಗಳ ವಿಷಯಗಳಲ್ಲಿ, ನಃ = ನಮಗೆ, ಅವಿತಾ = (ಅವ ರಕ್ಷಣೇ) ರಕ್ಷಕನು, ಭವ ಆಗು ॥೨॥

ಭಾ॥ (1) ಸಹಸಾ ವಾಯುನೈಧಿತಂ । ಧಾರಯಂತಿ ಜನಾಸ್ತಸ್ಯ ಕರ್ಮ ಕುರ್ಮೋ ವಯಂ ಚ ತೇ ॥ ಸಂತ್ಯಃ ಸಮ್ಯಕ್ತ್ವತೋ ವಿಷ್ಣುರ್ವಾಯೋರಪಿ ವಿವೃದ್ಧಿಕೃತ್ ॥೨॥

ಅ|| (1) ಪೂರ್ವಾರ್ಧವನ್ನು ವ್ಯಾಖ್ಯಾನ ಮಾಡುತ್ತಾರೆ) ಸಹಸಾ =ವಾಯುದೇವರಿಂದ ಅಭಿವೃದ್ಧಿಯನ್ನು ಹೊಂದಿದ ನಿನ್ನನ್ನು ಜನರು ಧರಿಸುತ್ತಾರೆ. ಅಂತಹ ನಿನ್ನ ಸೇವಾದಿ ರೂಪವಾದ ಕರ್ಮವನ್ನು ನಾವು ಮಾಡುತ್ತೇವೆ. (2) ಉತ್ತರಾರ್ಧದಲ್ಲಿರತಕ್ಕ ಸಂಶ್ಯ ಎಂಬ ಪದವನ್ನು ವ್ಯಾಖ್ಯಾನ ಮಾಡುತ್ತಾರೆ) ಚೆನ್ನಾಗಿ ಸರ್ವಸ್ರ ವ್ಯಾಪ್ತನಾಗಿದ್ದುದರಿಂದ ಶ್ರೀ ವಿಷ್ಣುವು ಸಂತ್ಯಃ ಎನಿಸುತ್ತಾನೆ. ಆ ವಿಷ್ಣುವು ಮುಖ್ಯಪ್ರಾಣನಿಗೂ ವಿಶೇಷತಃ ಅಭಿವೃದ್ಧಿಯನ್ನು ಮಾಡುವವನು. (ಧಾರ್ಯನಾದ ಅಗ್ನಿಯೂ ಅಗ್ನಿಯಲ್ಲಿರತಕ್ಕ ಶ್ರೀ ವಿಷ್ಣುವೂ ವ್ಯಾಪ್ತನಾಗಿದ್ದಾನೆಂಬುವುದು ಪ್ರಸಿದ್ಧವೇ) ||೨||

**ಋ || (೪೨೪) ಪ್ರ ತ್ವಾ ದೂತಂ ವೃಣೀಮಹೇ ಹೋತಾರಂ ವಿಶ್ವ ವೇದಸಂ |**

**ಮಹಸ್ತೇ ಸತೋ ವಿಚರಂತ್ಯರ್ಚಯೋ ದಿವಿ ಸ್ಪೃಶಂತಿ ಭಾನವಃ ||೩||**

ಅ || (ಎಲೋ ಅಗ್ನಿಯೇ ನಾವು) ದೂತಂ = ದೇವತೆಗಳು ಪ್ರಾರ್ಥಿಸಿದುದನ್ನು ಮಾಡುವುದರಿಂದ ಅಮುಖ್ಯತಃ ದೂತನೆನಿಸಿದ, ಹೋತಾರಂ =ಇಂದ್ರಿಯಾಖ್ಯ ಅಗ್ನಿಗಳಲ್ಲಿ ವಿಷಯರೂಪಗಳಾದ ಹವಿಸ್ಸುಗಳನ್ನು ಹೋಮಿಸುವ (ಹುದಾನಾದನಯೋಃ) (ಅಂದರೆ ವಿಷಯಗಳಿಗೆ ಭೋಗವನ್ನು ಕೊಡುವ ವಿಶ್ವವೇದಸಂ =ವಿಶ್ವಂ ವೇತ್ತೀತಿ ವಿಶ್ವವೇದಾಃ ) ಸರ್ವಜ್ಞನಾದ, ತ್ವಾ=ನಿನ್ನನ್ನು, ವೃಣೀಮಹೇ =ಅಂಗೀಕರಿಸುತ್ತೇವೆ. (ಯಸ್ಯ = ಯಾವ) ಮಹಃ ಶ್ರೇಷ್ಠನಾದ ಸಾಃ = ಸರ್ವಜ್ಞನಾದ, ತೇ ನಿನ್ನ, ಅರ್ಚಯಃ = (ಅರ್ಚ ಪೂಜಾಯಾಂ) ಜ್ವಾಲೆಗಳು, ವಿಚರಂತಿ =ವಿಶೇಷವಾಗಿ ಸರ್ವತ್ರ ಸಂಚರಿಸುತ್ತವೋ, ಭಾನವಶ್ಚ =ರಶ್ಮಿಗಳು (ಪ್ರಕಾಶಗಳು) ದಿವಿ ಸ್ವರ್ಗಲೋಕವನ್ನು ಸ್ಪೃಶಂತಿ =ಮುಟ್ಟುತ್ತವೋ (ಅಂತಹ ನಿನ್ನನ್ನು ಅಂಗೀಕರಿಸುತ್ತೇವೆ. ಸ್ತುತಿಸುತ್ತೇವೆ. ||೩||

**ಋ || (೪೨೫) ದೇವಾಸಸ್ತ್ವಾ ವರುಣೋ ಮಿತ್ರೋಃ ಅರ್ಯಮಾ ಸಂ ದೂತಂ ಪ್ರತ್ನಮಿಂಧತೇ |**

**ವಿಶ್ವಂ ಸೋ ಅಗ್ನೇ ಜಯತಿ ತ್ವಯಾ ಧನಂ ಯಸ್ತೇ ದದಾತ ಮರ್ತ್ಯ ||೪||**

ಅ || ಅಗ್ನೇಃ = ಶ್ರೀ ಹರಿಯೇ, ವರುಣಃ = ವರುಣನು ಮಿತ್ರಃ = ಮಿತ್ರಾಖ್ಯಸೂರ್ಯನು, ಆರ್ಯಮಾ =ಆರ್ಯ ಮೂಖ್ಯ ಸೂರ್ಯನು, ಇವರೇ ಮೊದಲಾದ, ದೇವಾಸಃ =ದೇವತೆಗಳು, ದೂತಂ =ದೂತನೆನಿಸಿದ, ಪ್ರತ್ನಂ =ಚೆನ್ನಾಗಿ ವ್ಯಾಪ್ತನಾದ, ಅಥವಾ ಪುರಾತನವಾದ ತ್ವಾ =ನಿನ್ನನ್ನು ಸಮ್ ಇಂಧತೇ = ಪ್ರಕಾಶಗೊಳಿಸುತ್ತಾರೆ ಯಃಮರ್ತ್ಯ =ಯಾವ ಮನುಷ್ಯನು, ತೇ =ನಿನಗಾಗಿ, ದದಾಶ= (ದಾಶೃದಾನೇ (ಹವಿಸ್ಸು ಮೊದಲಾದುವನ್ನು) ಕೊಡುತ್ತಾನೋ, ಸಃ =ಅಂತಹನು, ತ್ವಯಾ =ಸಂತುಷ್ಟನಾದ ನಿನ್ನ ನಿಮಿತ್ತದಿಂದ (ಅಂದರೆ ನಿನ್ನ ಅನುಗ್ರಹದಿಂದ) ವಿಶ್ವಂ =ಸಂಪೂರ್ಣವಾದ, ಧನಂ=ಅಗ್ನಿಯ ಪ್ರಸಾದದಿಂದ ಬಾಹ್ಯಧನವನ್ನೂ ವಿಷ್ಣುವಿನ ಪ್ರಸಾದದಿಂದ ಜ್ಞಾನಾಖ್ಯ ದ್ರವ್ಯವನ್ನೂ ಜಯಃ = ಹೊಂದುತ್ತಾನೆ. ||೪||

**ಭಾ || ಪ್ರತತೇಃ ಪುರಾತನತ್ವಾದ್ವಾ ಪ್ರತ್ನಃ ||೪||**

ಅ || (ಪ್ರತ್ನ ಶಬ್ದಾರ್ಥವನ್ನು ಹೇಳುತ್ತಾರೆ) (ಪ್ರಪೂರ್ವಕಾತ್‌ತನು ವಿಸ್ತಾರೇ ಕರಣೇಜ) ಚೆನ್ನಾಗಿ ವ್ಯಾಪ್ತಿಯಿದ್ದುದರಿಂದ

ಅಥವಾ (ಪ್ರತ್ನಂ ಪ್ರತಿವಃ ಎಂದು ಪುರಾತನ ಎಂಬ ಅರ್ಥದಲ್ಲಿ ಪಾಠವಿದ್ದ ಪ್ರಯುಕ್ತ) ಬಹು ಪುರಾತನನು ಆದುದರಿಂದ ಪ್ರಶ್ನಃ ಎನಿಸುತ್ತಾನೆ. ||೪||

ಋ || (೪೨೭) ಮಂದ್ರೋ ಹೋತಾ ಗೃಹಪತಿರಗ್ನೇ ದೂತೋ ವಿಶಾಮಸಿ ।

ತ್ವೇ ವಿಶ್ವಾ ಸಂಗತಾನಿ ವ್ರತಾ ಧ್ರುವಾ ಯಾನಿ ದೇವಾ ಅಕೃಣ್ವತ ||೫||೮||

ಅ ||ಅಗ್ನೇ = ಎಲೋ ಅಗ್ನಿಯೇ, ಮಂದ್ರಃ = (ಮದೀಹರ್ಷೇ) (ಮಂದಂತೇ ಅನೇನ ದೇವಾಃ) (ಅಲಾಕ್ಷಣಿಕವಾದ ನುಗಾಗಮದಿಂದ, ಮಜ್‌ಪರ್ಯಾಯವಾದ ರಪ್ರತ್ಯಯದಿಂದ ಮಹತ್ತ್ವವು ಉಕ್ತವಾಗಿದೆ.) ಮಹಾಮುಖವುಳ್ಳ ನೀನು ವಿಶಾಂ=ಪ್ರಜೆಗಳಿಗೆ ಹೋತಾ = ಹೋತನಿಗೆ ನಿಯಾಮಕನಾಗಿ ವಿಶೇಷತಃ ಹೋತೃವಿನಲ್ಲಿ ಸನ್ನಿಧಾನವಿದ್ದುದರಿಂದ ಹೋತೃ ಎಂದೆನಿಸಿಕೊಂಡನು, ಗೃಹಪತಿಃ =ಯಜಮಾನನು ದೂತಃ =ದೂತನೆನಿಸಿಕೊಂಡವನೂ, ಅಸಿ =ಆಗಿರುತ್ತಿ, ಮತ್ತೂ ದೇವಾಃ =ದೇವತೆಗಳು, ಯಾನಿ =ಯಾವ, ಧ್ರುವಾ=ನಿರ್ದುಷ್ಟಗಳಾದ ವ್ರತಾ=ಕರ್ಮಗಳನ್ನು ಅಕೃಣ್ವತ =ಮಾಡಿದರೋ, (ತಾನಿ=ಅಂತಹ) ವಿಶ್ವಾ=ಸಮಸ್ತಕರ್ಮಗಳೂ ತ್ವೇ = ನಿನ್ನಲ್ಲಿ. ಸಂಗತಾನಿ =ಸಂಬದ್ಧಗಳೇ ಆಗಿವೆ. (ನಿನ್ನ ವಿಷಯಕಗಳೇ ಆಗಿವೆ.) ||೫||

ಭಾ || ಮಂದ್ರೋ ಮಹಾಮುಖಃ ||೫||

ಅ || (ಮಂದ್ರ ಶಬ್ದಾರ್ಥವನ್ನು ಹೇಳುತ್ತಾರೆ)

ಅ । ಮಹಾನ್‌ಮಖಃ ಯಸ್ಮಿನ್ ವಿಷಯೇ ಸಃ ಮಹಾಮಖಃ =ಯಾರ ಉದ್ದಿಶ್ಯ ಮಹತ್ತಾದ ಯಜ್ಞವು ಆಗುತ್ತದೋ ಆತನು ಮಹಾಮುಖನೆನಿಸುತ್ತಾನೆ. ಅಧಿಕ್ಯೇ ಅಧಿಕಂ ಎಂಬ ಸೂತ್ರದಿಂದ ಮಂದ್ರ ಎಂಬಲ್ಲಿದ್ದ ನಕಾರದಿಂದ ಮಹತ್ವವು ಅಥವಾ ಭೂಮನಿಂದಾ ಪ್ರಶಂಸಾಯಾಂ ಇತ್ಯಾದಿಗಳಿಂದ ಅತಿಶಾಯನರೂಪವಾದ ಮತ್ವರ್ಥದಲ್ಲಿ ಮಂದ್ರ ಎಂಬಲ್ಲಿ ರ ಪ್ರತ್ಯಯವು ||೫||೮||

ಋ || (೪೨೮) ತ್ವೇ ಇದಗ್ನೇ ಸುಭಗೇ ಯವಿಷ್ಠ್ಯ ವಿಶ್ವಮಾ ಹೂಯತೇ ಹವಿಃ ।

ಸತ್ವಂನೋ ಅದ್ಯ ಸುಮನಾ ಉತಾಪರಂ ಯಕ್ಷಿ ದೇವಾನ್ ಸುವಿರ್ಯಾ ||೬||

ಅ || ಯವಿಷ್ಠ್ಯ = (ಯವೀಯಸ್ಸು ಸ್ಥಿತತ್ವೇನ ಯವಿಷ್ಠ್ಯೋ ಹರಿರುಚ್ಯತೇ ಎಂಬ ಪ್ರಮಾಣದಿಂದ ಅಧಮರಾದ ಬ್ರಹ್ಮಾದಿಗಳಲ್ಲಿ ನಿಯಾಮಕನಾಗಿದ್ದುದರಿಂದ ಯವಿಷ್ಠ್ಯ ಎನಿಸಿಕೊಂಡ ಶ್ರೀ ವಿಷ್ಣುವೇ (ಪ್ರಸಿದ್ಧ ಅಗ್ನಿಪಕ್ಷದಲ್ಲಿ) (ಬ್ರಹ್ಮಾದ್ಯಪೇಕ್ಷಯಾ ನಿತ್ಯಂ ಯವಿಷ್ಠ್ಯತಮ ಏವಯತ್ । ಅಗ್ನಿರ್ಯವಿಷ್ಠ್ಯ ಇತ್ಯುಕ್ತಃ ಎಂಬ ಪ್ರಮಾಣದಿಂದ) ಬ್ರಹ್ಮಾದಿಗಳಿಗಿಂತ ಅತ್ಯಂತ ನಿಕೃಷ್ಟನಾದುದರಿಂದ ಯವಿಷ್ಠ್ಯ ಎನಿಸಿಕೊಂಡ, ಅಗ್ನೇ=ಎಲೋ ಅಗ್ನಿಯೇ, ವಿಶ್ವಂ ಹವಿಃ =ಸಮಸ್ತ ಹವಿಸ್ಸು, ಸುಭಗೇ = ಮಹೈಶ್ವರ್ಯವುಳ್ಳ, ತ್ವೇ ಇತ್ =ನಿನ್ನಲ್ಲಿಯೇ, ಆ =ಚೆನ್ನಾಗಿ ಹೂಯತೇ = (ನಮ್ಮಿಂದ)

ಹೋಮಿಸಲ್ಪಡುತ್ತದೆ. ಸಃ = ಹೀಗೆ ನಮ್ಮಿಂದ ಕೊಡಲ್ಪಟ್ಟ ಹವಿಸ್ಸುಳ್ಳ ಸುಮನಾಃ =ಪ್ರಶಸ್ತ ಮನಸ್ಸುಳ್ಳ ತ್ವಂ = ನೀನು, ಅದ್ಯ =ಈಗ, ನಃ =ನಮಗಾಗಿ ಸುವೀರ್ಯಾ=ಒಳ್ಳೇ ವೀರ್ಯವುಳ್ಳವುಳ್ಳವನಾದುದರಿಂದ ದೇವಾನ್ = ದೇವತೆಗಳನ್ನೂ ಯಕ್ಷಿ= (ಯಜದೇವಪೂಜಾಕರಣದಾನೇಷು) ಯಾಗ ಮಾಡುತ್ತಿ. ಅಪರಂಉತ = ಮುಂದಿನ ಕಾಲದಲ್ಲಿಯೂ ಯಜ=ಯಾಗ ಮಾಡು.

ವಿ॥ ಒಬ್ಬನೇ ಅನೇಕ ದೇವತೆಗಳಿಗೆ ಏಕ ಕಾಲದಲ್ಲಿ ಅನೇಕ ಯಜಮಾನರು ಕೊಟ್ಟ ಹವಿಸ್ಸನ್ನು ಹೊಂದಿಸಿಕೊಡುವುದು ಎಂಬುದು ಯಾವುದಿದೆಯೋ ಅದೇ ವೇ ಸುವೀರ್ಯಕಾರ್ಯವು ॥೯॥

**ಭಾ ॥ ದೇವಾನ್ ಸುವೀರ್ಯಾದ್ಯ ಜಹಿ ॥೬॥**

ಅ ॥ ಒಳ್ಳೇ ವೀರ್ಯವುಳ್ಳವನಾದುದರಿಂದ ದೇವತೆಗಳನ್ನು ಯಾಗ ಮಾಡುತ್ತಿ. (ಒಬ್ಬ ಅಗ್ನಿಯೇ ಅನೇಕ ಯಜಮಾನರು ಕೊಡತಕ್ಕ ಹವಿಸ್ಸನ್ನು ಅನೇಕ ದೇವತೆಗಳಿಗೆ ಹೊಂದಿಸಿಕೊಡುವುದೇ ಸುವೀರ್ಯಕಾರ್ಯವು. ॥೯॥

**ಋ ॥ (೪೨೮) ತಂ ಘೇಮಿತ್ಥಾ ನಮಸ್ವಿನ ಉಪ ಸ್ವರಾಜಮಾಸತೇ ।**
**ಹೋತ್ರಾಭಿರಗ್ನಿಂ ಮನುಷಃ ಸಮಿಂಧತೇ ತಿತಿರ್ವಾಂಸೋ ಅತಿಸ್ರಿಧಃ ॥೭॥**

ಅ ॥ (ಅಗ್ನಿಯೇ) (ಯೇ=ಯಾವ) ಮನುಷಃ = (ಮನಜ್ಞಾನೇ) ಜ್ಞಾನಿಗಳಾದ ಸಜ್ಜನರಾದ ಮನುಷ್ಯರು, ಸ್ವರಾಜಂ =ತಮಗೆ ರಾಜನಾದ, ತಂ = ಹಿಂದೆ ಹೇಳಿದ ಗುಣಗಳುಳ್ಳ, ಅಗ್ನಿಂ = ಅಗ್ನಿ ಎನಿಸಿಕೊಂಡ, (ತ್ವಾಂ ಈಂ = ನಿನ್ನನ್ನೇ) ಇತ್ಥಾಂ =ನಿರ್ವಿಕಾರವಾಗಿ, ಸರ್ವಕಾಲದಲ್ಲಿಯೂ, ನಮಸ್ವಿನಃ = ನಮಸ್ಕಾರ ಮಾಡುವವರಾಗಿ, ಉಪ ಆಸತೇ = ಹೊಂದುತ್ತಾರೋ. (ಹೊಂದಿಯೂ) ಹೋತ್ರಾಭಿಃ = (ಹ್ವೇಞ್ತಂತು ಸಂತಾನೇ) ಆಹ್ವಾನ ರೂಪಗಳಾದ ಋಕ್ಕುಗಳಿಂದ, ಸಮಿಂಧತೇ = ಪ್ರಕಾಶಗೊಳಿಸುತ್ತಾರೋ, (ಅಂತಹವರಾದರೂ) ಸ್ರಿಧಃ = ಬಂಧನದೆಶೆಯಿಂದ, ಅತಿ =ಅತಿಶಯವಾಗಿ, ತಿತಿರ್ವಾಂಸಃ = (ತೃ ಪ್ಲವನ ತರಣಯೋಃ) ಸಂಸಾರದಿಂದ ದಾಟುವವರಾದರು. (ಬಿಡುಗಡೆ ಹೊಂದಿದರು) ಘ = ನಿಶ್ಚಯವು (ರೀತ್ಯಂತರಿದಂದ ವ್ಯಾಖ್ಯಾನ ಮಾಡುತ್ತಾರೆ. ಯಾವ ಸಜ್ಜನರು ಸರ್ವಕಾಲದಲ್ಲಿಯೂ, ನಿನ್ನನ್ನೇ ನಮಸ್ಕರಿಸುತ್ತಾರೋ, ಅಂತಹವರು ಸ್ವರಾಜಂ = ತನ್ನ ರಾಷ್ಟ್ರವನ್ನು (ಉತ್ತಮ ಬ್ರಾಹ್ಮಣನನ್ನು) ಹೊಂದುತ್ತಾರೆ. ಹೊಂದಿ ಸದ್ವಚನಗಳಿಂದ, ಸಮಿಂಧತೇ =ಅತಿ ಪ್ರಕಾಶಮಾನರಾದ ವಿದ್ವಾಂಸರು ಆಗುತ್ತಾರೆ. ಆ ಮೇಲೆ ನಿನ್ನ ಅನುಗ್ರಹದಿಂದ, ಸ್ರೀಧಃ ಅತಿ ತಿತಿರ್ವಾಂಸಃ ಹಿ =ಈ ಜನ್ಮದಲ್ಲಿಯೇ ದುಃಖಗಳನ್ನು ದಾಟುತ್ತಾರೆ. (ಅಂದರೆ ಜೀವನ್ಮುಕ್ತರಾಗುತ್ತಾರೆ. ಘ =ನಿಶ್ಚಯವು.) ॥೭॥

**ಭಾ ॥ (1) ತಂ ಹಿ ತ್ವಾಮೇವ ಸರ್ವದಾ । ಉಪಾಸತೇ ನಮಸ್ಯಂತಃ ಸಂತಸ್ತೀರ್ಣಾಸ್ತು ಸಂಸೃತೇಃ । (2) ಸ್ರಿಧೋ ಹ್ಯತಿ ತಿತಿರ್ವಾಂಸಸ್ತೀರ್ಣದುಃಖಾ ಇಹೈವ ವಾ। ತ್ವತ್ಪ್ರಸಾದೇನ ವಿದ್ವಾಂಸಃ ಪ್ರಾಪ್ಯ ಬ್ರಾಹ್ಮಣ್ಯಮುತ್ತಮಂ ॥೭॥**

ಅ ॥ (1) ಎಲೋ ಅಗ್ನಿಯೇ ಯಾವ ಸಜ್ಜನರು ಹಿಂದೆ ಹೇಳಿದ ಗುಣಗಳುಳ್ಳ ನಿನ್ನನ್ನೇ ಸರ್ವದಾ ನಮಸ್ಕರಿಸುವವರಾಗಿ ಹೊಂದುತ್ತಾರೋ, ಅಂತಹವರು ಸಂಸಾರದಿಂದ ಬಿಡುಗಡೆ ಹೊಂದುತ್ತಾರೆ. (2) ಯಾವ ಸಜ್ಜನರು ನಿನ್ನನವಿ

ನಮಸ್ಕರಿಸುತ್ತಿರುತ್ತಾರೋ, ಅಂತಹವರು ಉತ್ತಮ ಬ್ರಾಹ್ಮಣ್ಯವನ್ನು ಹೊಂದಿ ವಿದ್ವಾಂಸರು ಆಗುತ್ತಾರೆ. ಆ ಮೇಲೆ ನಿನ್ನ ಅನುಗ್ರಹದಿಂದ ಸ್ರಿದಃ ಅತಿ ತಿತಿರ್ವಾಂಸಃ ಹಿ = ಅಂದರೆ ಈ ಜನ್ಮದಲ್ಲಿಯೇ ದುಃಖವನ್ನು ದಾಟಿದವರು ಆಗುತ್ತಾರೆ. ಅಂದರೆ ಜೀವನ್ಮುಕ್ತರಾಗುತ್ತಾರೆ. ನಿಶ್ಚಯ ||೭||

**ಋ || (೪೨೯) ಘ್ನಂತೋ ವೃತ್ರಮತರನ್ರೋದಸೀ ಅಪ ಉರು ಕ್ಷಯಾಯ ಚಕ್ರಿರೇ |**

**ಭುವತ್ಕಣ್ವೇ ವೃಷಾ ದ್ಯುಮ್ನ್ಯಾಹುತಃ ಕ್ರಂದದಶ್ವೋ ಗವಿಷ್ಟಿಷು ||೮||**

ಅ || (ಎಲೋ ಅಗ್ನಿಯೇ ಯಾವ ಉತ್ತಮ ಪುರುಷರು) ಅಪಃ =ಕರ್ಮಗಳನ್ನು, ಮನಸ್ಸು ಮೊದಲಾದುವುಗಳನ್ನೂ, (ಅಂದರೆ ಚಕ್ಷುರಾದಿ ಜ್ಞಾನೇಂದ್ರಿಯಗಳು, ವಾಗಾದಿ ಕರ್ಮೇಂದ್ರಿಯಗಳು, ಇವುಗಳನ್ನೂ ಇಟ್ಟುಕೊಳ್ಳಬೇಕು. ಕರೌ ಹರೇರ್ಮಂದಿರ ಮಾರ್ಜನಾದಿಷು ಶ್ರುತಿಂ ಚ ಕಾರಾಚ್ಯುತ ಸತ್ಕಥೋದಯೇ | ಇತ್ಯಾದಿ ಪ್ರಮಾಣ ಪ್ರಕಾರ ಸಮಸ್ತ ಇಂದ್ರಿಯಗಳನ್ನೂ ಯಜ್ಞಾದಿಕರ್ಮಗಳನ್ನೂ ಭಗವದ್ವಿಷಯಕಗಳನ್ನಾಗಿಯೇ ಮಾಡಿದರು.) ಉರುಕ್ಷಯಾಯ =ಸರ್ವಗುಣ ಪರಿಪೂರ್ಣನಾದ ನೀನೇ ಆಶ್ರಯನು ಎನ್ನುವುದಕ್ಕಾಗಿ (ಅಂದರೆ ನಿನ್ನ ವಿಷಯಕಗಳನ್ನಾಗಿಯೇ ಕ್ಷಿನಿವಾಸ ಗತ್ಯೋಃ) ಚಕ್ರಿರೇ =ಮಾಡಿರುವರೋ ಅಂತಹವರು ವೃಕ್ರಂ=ಅಜ್ಞಾನಾಖ್ಯ ತಮಸ್ಸನ್ನು, ಅಥವಾ ತಮಸ್ಸನ್ನು, ಅಜ್ಞಾನವನ್ನು, ಘ್ನಂತಃ =ನಾಶ ಮಾಡುವವರಾಗಿ, ರೋದಸೀ =ದ್ಯಾವಾ ಪೃಥಿವಿಗಳನ್ನು, ಅಲ್ಲಿರತಕ್ಕ ಜನರನ್ನು ಅತರತ್ =ಅತಿಕ್ರಮಿಸುವವರು (ಅವರಿಂದಲೂ ಉತ್ತಮರಾಗುವರು.) ಸಃ = ಹೀಗೆ ತನ್ನನ್ನು ಯಾರು ಆರಾಧಿಸುತ್ತಾರೋ, ಅವರನ್ನು ಸರ್ವರಿಗಿಂತಲೂ ಉತ್ತಮರನ್ನಾಗಿ ಮಾಡುವ, ವೃಷಾ= ಶ್ರೇಷ್ಠನಾದ, ದ್ಯುಮ್ನೀ=ದ್ಯುತದೀಪ್ತೌ) ಮಹಾ ಪ್ರಕಾಶವುಳ್ಳ ಶ್ರೀ ವಿಷ್ಣುವು, ಕ್ರಂದದಶ್ವಃ = (ಆ ಕ್ರಂದ ಶಬ್ದ ಸಾತತ್ಯೇ ಶಬ್ದಾರ್ಥಕಃ) ಶಬ್ದ ಮಾಡತಕ್ಕ ಅಶ್ವಸ್ವರೂಪನೇ, (ಅಂದರೆ ಸರ್ವದಾ ವೇದಗಳನ್ನು ಉಚ್ಚಾರಣ ಮಾಡತಕ್ಕ ಹಯಗ್ರೀವ ರೂಪನಾಗಿಯೇ) ಗವಿಷ್ಟಿಷು = (ಗೌಃಸ್ವರ್ಗೇ ಚ ವೃಷೇ ರಶ್ಮೌ ಎಂಬ ವಿಶ್ವಕೋಶದಿಂದ ಜ್ಞಾನವೂ ಪ್ರಕಾಶ ರೂಪವೇ ಆಗಿದೆ. ಇಷು ಇಚ್ಛಾಯಾಂ. ಇಷ್ಟಿ ಶಬ್ದವು ಅನ್ವೇಷಣಾರ್ಥಕವು) ಕಣ್ವ ಋಷಿಯಾದ ನನ್ನಿಂದ ಜ್ಞಾನದ ಅಥವಾ ವೇದ ವಚನಗಳ (ಇಷ್ಟಿಷು) ಅನ್ವೇಷಣಗಳು (ಪ್ರಾರ್ಥನೆಗಳು) ಮಾಡಲ್ಪಡುತ್ತಿರಲು, ಕಣ್ವೇ = ಕಣ್ವ ಋಷಿಯಾದ ನನ್ನಲ್ಲಿ, ಅಹುತಃ = ಅಜ್ ಪೂರ್ವಕಾತ್ ಡು ಧಾ ಇ ಧಾರಣ ಪೋಷಣಯೋಃ ಕ್ತ ಪ್ರತ್ಯಯವು. ದಧಾ ತೇರ್ಹಿ ಆ ಹಿತನು, (ಇದ್ದವನು) ಭಾವತ್ = ಆದನು. (ಅಂದರೆ ಕಣ್ವ ಋಷಿಯು ಜ್ಞಾನಕ್ಕಾಗಿ ಪ್ರಾರ್ಥಿಸಿದುದರಿಂದ ಹಯಗ್ರೀವ ದೇವರು ಕಣ್ವಋಷಿಯಲ್ಲಿ ಜ್ಞಾನಾದಿಗಳನ್ನು ಕೊಡುವುದಕ್ಕಾಗಿ ಇದ್ದಾರೆ.

**ಭಾ || (1) ತಮೋ ಘ್ನಂತೋಽತರಲ್ಲೋಕಾನಪಃ ಕರ್ಮಾಣಿ ಚೋತ್ತಮಾಃ | ಉರು ಬ್ರಹ್ಮಕ್ಷಿತಿತ್ವೇನ ಚಕ್ರುಸ್ತತ್ರೈವ ಸಂಸ್ಥಿತೇಃ | (2) ವೃಷಾ ಸ ಭಗವಾನ್ವಿಷ್ಣುಃ ಮುನೌ ಕಣ್ವೇಽಭವಸ್ಥಿತಃ | ಕ್ರಂದದತ್ವಸ್ವರೂಪಶ್ಚ ಜ್ಞಾನಸ್ಯಾನ್ವೇಷಣೇ ಕೃತೇ | (3) ತತಃ ಕಣ್ವಾನ್ನಿಃಸರಂತಿಶುದ್ಧಾ ವೇದಾನುಗಾ ಗಿರಃ || (4) ದ್ಯುತಿಮತ್ತ್ವಾತ್ಸತುದ್ಯುಮ್ನೀ ||೮||**

ಅ|| (ಯಾವ ಉತ್ತಮ ಪುರುಷರು ಅಪಃ =ಕರ್ಮಗಳನ್ನು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನೂ, ಸರ್ವಗುಣಪರಿಪೂರ್ಣನಾದ ಬ್ರಹ್ಮನೇ ಆಶ್ರಯನಾಗಿರುವುದರಿಂದ ಅಂದರೆ ಅಂತಹ ನಿನ್ನಲ್ಲಿಯೇ ಇರುವುದರಿಂದ

(ಅಂದರೆ ನಿನ್ನಲ್ಲಿಯೇ ಇರುವವುಗಳನ್ನಾಗಿ) ಮಾಡಿದರೋ, ಅಂತಹವರು ಅಜ್ಞಾನಾಖ್ಯ ಅಂಧಕಾರವನ್ನು ನಾಶಗೊಳಿಸುವವರಾಗಿ ಸ್ವರ್ಗಭೂಮಿಗಳಲ್ಲಿರತಕ್ಕ ಜನರನ್ನು ಅತಿಕ್ರಮಿಸಿದರು. (ಅವರಿಗಿಂತಲೂ ಉತ್ತಮರಾದರು.) (2) ಹೀಗೆ ತನ್ನನ್ನು ಆರಾಧನೆ ಮಾಡುವವರನ್ನು ಉತ್ತಮರನ್ನಾಗಿ ಮಾಡುವ ಸರ್ವಶ್ರೇಷ್ಠನಾದ ಷಡ್ಗುಣ ಪರಿಪೂರ್ಣನಾದ ಶ್ರೀ ವಿಷ್ಣುವು ಕಣ್ವ ಋಷಿಯಿಂದ ಜ್ಞಾನಕ್ಕಾಗಿ ಪ್ರಾರ್ಥನೆಯು ಮಾಡಲ್ಪಡುತ್ತಿರಲು ಸರ್ವದಾ ವೇದಗಳನ್ನುಚ್ಚಾರಣ ಮಾಡತಕ್ಕ ಹಯಗ್ರೀವ ರೂಪದಿಂದ ಜ್ಞಾನಾದಿಗಳ ಪ್ರಾಪ್ತಿಗಾಗಿ ಕಣ್ವಋಷಿಯಲ್ಲಿ ಸನ್ನಿಹಿತನಾಗಿದ್ದನು. (3) ಕಣ್ವಋಷಿಗೆ ಪ್ರಯೋಜನವು ಸಿದ್ಧವಾಯ್ತು ಎಂದು ಭಾಷ್ಯಕಾರರು ಹೇಳುತ್ತಾರೆ.) ಶ್ರೀ ಹಯಗ್ರೀವ ದೇವರ ಸನ್ನಿಧಾನವಿದ್ದ ಪ್ರಯುಕ್ತ ಕಣ್ವಋಷಿಯಿಂದ ಶುದ್ಧಗಳಾದ ಪೂರ್ವದಲ್ಲಿ ಅಭ್ಯಸ್ತಗಳಾದ ವೇದಗಳ ಅತ್ಯಂತ ಸಾದೃಶ್ಯವುಳ್ಳ ಮಾತುಗಳು ಹೊರಡುತ್ತವೆ. (4) (ತ್ವಿಷಿರ್ದೀಪ್ತೌ) ಪ್ರಕಾಶವಿದ್ದುದರಿಂದ ಆ ಶ್ರೀ ಹರಿಯು ದ್ಯುಮ್ನೀ ಎನಿಸುತ್ತಾನೆ.

ವಿ || (1) ಕಣ್ವಋಷಿಯಿಂದ ಹೊರಟ ವಚನಗಳು ವೇದಗಳಾದುದರಿಂದ ವೇದಾಸುಗಾಃ ಎಂದದ್ದು ಹೇಗೆ ಎಂದರೆ ತನಗೇನೆ ತೋರಿದ ವೇದವನ್ನು ಇಂತಹವನು ಮಾಡಿದ್ದೆಂದು ಕರ್ತೃ ಪ್ರಸಿದ್ಧಿಯು ಇಲ್ಲದಿರುವುದರಿಂದ ಪೂರ್ವದಲ್ಲಿ ಗುರುಗಳಿಂದ ಅಭ್ಯಸ್ತವಾದ ವೇದದಿಂದ ಅತ್ಯಂತ ಸಾದೃಶ್ಯವಿದೆ. ಆದ ಕಾರಣ ಪೂರ್ವದಲ್ಲಿ ಅಭ್ಯಸ್ತಗಳಾದ ಇತರ ವೇದಗಳ ಅತ್ಯಂತ ಸಾದೃಶ್ಯವುಳ್ಳವುಗಳು. ಜನ್ಮಾಂತರೇ ಶ್ರುತಾಸ್ತಾಸ್ತು ವಾಸುದೇವಪ್ರಸಾದತಃ । ಮುನೀನಾಂ ಪ್ರತಿಭಾಸ್ಯಂತಿ ಭಾಗೇನೈವ ನ ಸರ್ವತಃ ॥ ಎಂಬ ಪ್ರಮಾಣದಿಂದ ಹಿಂದೆ ಇದ್ದ ವೇದವನ್ನೇ ಅಧ್ಯಯನ ಮಾಡುತ್ತೇವೆ ಎಂಬ ಅನುಭವದಿಂದಲೂ ಪೂರ್ವೋತ್ತರ ವೇದಗಳಿಗೆ ಐಕ್ಯವು ಸಿದ್ಧವಾದ ಪ್ರಯುಕ್ತ ಹಿಂದೆ ಅಭ್ಯಾಸ ಮಾಡಿದ್ದ ವೇದದ ಸಾದೃಶ್ಯವನ್ನು ಹೇಳಿದುದು ಯುಕ್ತವು. ಇಲ್ಲಿ ವೇದಲಕ್ಷಣವೂ ಇದೆ. ||೮||

**ಋ || (೪೩೦) ಸಂ ಸೀದಸ್ವ ಮಹಾ ಅಸಿ ಶೋಚಸ್ವ ದೇವವೀತಮಃ ।**

**ವಿಧೂಮಮಗ್ನೇ ಅರುಷಂ ಮಿಯೇಧ್ಯ ಸೃಜ ಪ್ರಶಸ್ತ ದರ್ಶತಂ ||೯||**

ಅ || ಮಿಯೇಧ್ಯ = ನಿತ್ಯದಲ್ಲಿಯೂ ಹೋಮಿಸಲ್ಪಡತಕ್ಕ (ಯಾಗಾರ್ಹನಾದ) ಪ್ರಶಸ್ತ = (ಪ್ರಪೂರ್ವಾತ್ ಶಂಸಸ್ತುತೌ) ಚೆನ್ನಾಗಿ ಸ್ತುತಿಸಲ್ಪಡತಕ್ಕ, ಅಗ್ನೇ = ಎಲೋ ಅಗ್ನಿಯೇ, ಶ್ರೀ ಹರಿಯೇ, (ಯಾವ ನೀನು) ದೇವವೀತಮಃ = (ವೀಗತೌ, ಗತಿಃ =ಜ್ಞಾನವು). ಅತಿಶಯೇನ ವೀರ್ವೀತಮಃ) ದೇವತೆಗಳಲ್ಲಿ ಅತಿಶಯವಾಗಿ ಜ್ಞಾನವುಳ್ಳವನು ಅಸಿ =ಆಗಿರುತ್ತಿಯೋ, ಮಹಾನ್ = ಇತರ ಗುಣಗಳಿಂದಲೂ ಶ್ರೇಷ್ಠನಾಗಿರುತ್ತಿಯೋ (ಅಂತಹ ನೀನು (ಈ ಯಜ್ಞದಲ್ಲಿ) ಸಮ್‌ಸೀದಸ್ವ=ಸನ್ನಿಹಿತನಾಗು. ಶೋಚಸ್ವ=(ಶುಚ ಶೋಕೇ (ಅನೇಕಾರ್ಥಾಹಿ ಧಾತವಃ ಎಂಬ ಪ್ರಮಾಣದಿಂದ ದೀಪ್ತ್ಯರ್ಥವೂ ಇದೆ.) ವಿಶೇಷತಃ ಪ್ರಕಾಶಿಸಿಕೊಂಡಿರು. (ಅಗ್ನಿ ಪಕ್ಷದಲ್ಲಿ) ದರ್ಶತಂ =ದೃಷ್ಟಿಗೋಚರವಾದ, ಅರುಷಂ =ದೋಷವಿಲ್ಲದಿರುವ (ನಿರ್ದೋಷವಾದ) ಅಂದರೆ ಆಜ್ಯಾಬ್ಯಾಹುತಿಗಳಿಂದುಂಟಾದ ಶುಭಗಂಧವುಳ್ಳ) ಧೂಮಂ =ಧೂಪಾವನೇ, ನಿಸ್ಸೃಜ=ಸೃಷ್ಟಿಸು (ವಿಷ್ಣುಪಕ್ಷದಲ್ಲಿ) ಧೂಮಃ =(ಧೂನೋತಿ ಸಂಸಾರಂ ಇತಿ ಧೂಮಃ) (ಧೂ ಞ ಕಂಪನೇ) ಸಂಸಾರ ನಿವರ್ತಕವಾದ, ಅರುಷಃ =ದೋಷವಿಲ್ಲದಿರುವ, (ನಿರ್ದೋಷವಾದ) ದರ್ಶತಂ =ನಿನ್ನ ಅಪರೋಕ್ಷ ಜ್ಞಾನವನ್ನು ವಿ=ವಿಶೇಷವಾಗಿ, ಸೃಜ=ಉಂಟು ಮಾಡು ||೯||

ಭಾ ॥ (1) ದೇವೇಷು ಜ್ಞಾನವತ್ತಮಃ । ಸತ್ವಂ ತೋಚಸ್ವ ದೀಪ್ಯಸ್ವ (2) ಧೂಮಃ ಸಂಸಾರ ಧೂತ್ಸೃತೇಃ ॥ (3) ಅರುಷೋ ರೋಷಹೀನತ್ವಾ (4) ದ್ಧೂಮಶ್ಚೇಶ್ಚುಭಗಂಧನಾತ್ ॥೯॥

ಅ ॥ (1) ದೇವತೆಗಳ ಮಧ್ಯದಲ್ಲಿ ಅತಿಶಯವಾಗಿ ಜ್ಞಾನವುಳ್ಳವನು ಆಗಿರುತ್ತಿ. ಅಂತಹ ನೀನು ಶೋಚಸ್ವ ವಿಶೇಷತಃ ಪ್ರಕಾಶಿಸಿ ಕೊಂಡಿರು. (2) (ವಿಷ್ಣುಪಕ್ಷದಲ್ಲಿ) (ಸಂಸಾರನಿವರ್ತಕವಾದ ನಿರ್ದುಷ್ಟವಾದ ನಿನ್ನ ಸಾಕ್ಷ್ಯಾತ್ಕಾರವನ್ನು ನಮಗೆ ವಿಶೇಷವಾಗಿ ಉಂಟುಮಾಡು.) (ದರ್ಶನ) (ಸಾಕ್ಷಾತ್ಕಾರ)ಕ್ಕೆ ಧೂಮತ್ವಾದಿಗಳು ಹೇಗೆಂದರೆ) ಸಂಸಾರಸ್ಯಯ ಧೂತ್ಸೃತಿಃ = ನಿರಾಕರಣವು ಯಾವ ಸಾಕ್ಷಾತ್ಕಾರದಿಂದ ಯಾವ ಕಾರಣದಿಂದ ಆಗುತ್ತದೋ, ಆ ಕಾರಣ ದರ್ಶತ ಶಬ್ದದಿಂದ ಹೇಳಲ್ಪಟ್ಟ ಈಶ್ವರ ಸಾಕ್ಷಾತ್ಕಾರವು ಧೂಮಃ ಎನಿಸುತ್ತದೆ (ಧುನೋತೀತಿದೂಮಃ ಧೂಞ ಕಂಪನೇ) (3) ದೋಷ (ಕೋಪ) ವಿಲ್ಲದಿರುವುದರಿಂದ ಸಾಕ್ಷಾತ್ಕಾರವು ಅರುಷವೆನಿಸುತ್ತದೆ. (ಕೋಪವು ಚೇತನಧರ್ಮವಾದುದರಿಂದ ಸಾಕ್ಷಾತ್ಕಾರಕ್ಕೆ ಕೋಪವಿಲ್ಲವೆಂದದ್ದು ಆಯುಕ್ತವೆಂದರೆ) ಕೋಪರಾಹಿತ್ಯವೆಂದರೆ ಸಾಕ್ಷಾತ್ಕಾರವೂ ಕೋಪವೂ ಒಂದು ಕಡೆ ಇಲ್ಲವೆಂದರ್ಥವು. (4) (ಅಗ್ನಿಪಕ್ಷದಲ್ಲಿ ಆದರೂ) ದರ್ಶತವೆಂದರೆ ದೃಷ್ಟಿಗೆ ಗೋಚರವು. ಅರುಷವಾದ ಧೂಮವನ್ನು ವಿಶೇಷತಃ ಸೃಷ್ಟಿಸು ಎಂದು. (ಧೂಮಕ್ಕೆ ಅರುಷತ್ವವು ಹೇಗೆಂದರೆ) ಪ್ರಸಿದ್ಧ ಧೂಮವು ವಿಶೇಷ್ಯವೆಂದು ವಿವಕ್ಷಿತವಾದರೆ, ಅಜ್ಯ ಮೊದಲಾದ ದ್ರವ್ಯಗಳಿಂದುಂಟಾದ ಶುಗಂಧವಿದ್ದುದರಿಂದ ಧೂಮವು ಅರುಷವಾಗಿದೆ. ಅಂದರೆ ಶುಭಗಂಧವಿದ್ದುದರಿಂದ ನಿರ್ದೋಷವಾದುದು ಎಂದರ್ಥವು. ॥೯॥

ಋ ॥ (೪೩೧) ಯಂ ತ್ವಾ ದೇವಾಸೋ ಮನವೇ ದಧುರಿಹ ಯಜಿಷ್ಠಂ, ಹವ, ವಾಹನ ।
ಯಂ ಕಣ್ವೋ ಮೇಧ್ಯಾತಿಥಿರ್ಧನಸ್ಪೃತಂ ಯಂ ವೃಷಾ ಯ ಮುಪಸ್ತುತಃ ॥೧೦॥೯॥

ಅ ॥ ಹವ್ಯವಾಹನ = (ಹವ್ಯಂ ವಹತೀತಿ) ಹವಿರ್ಭಾಗವನ್ನು ಸ್ವೀಕರಿಸುವ ಅಗ್ನಿಯೇ, ಯಂ =ಯಾವ, ಯಜಿಷ್ಠಂ = ಕನಿಷ್ಠವಾದ, ಅಥವಾ (ಯಜದೇವ ಪೂಜಾಸಂಗತಿ ಕರಣದಾನೇಷು) ಮುಖ್ಯ- ಪೂಜ್ಯನಾದ, ತ್ವಾ=ನಿನ್ನನ್ನು, ಇಹ =ಈ ಲೋಕದಲ್ಲಿ, ದೇವಾಸಃ =ದೇವತೆಗಳು, ಮನವೇ =ಮನುವಿನ ಅಭೀಷ್ಟ ಪ್ರಯೋಜನ ಸಿದ್ಧಿಗಾಗಿ, ದಧುಃ =ಅಧಾನೇಷ್ಟಿಯಿಂದ ಸ್ಥಾಪಿಸಿದರು. ಯಂ ಚತ್ವಾ=ಯಾವ ನಿನ್ನನ್ನು ಧನಸ್ಪೃತಂ=ಧನಸಂಪರ್ಕವುಳ್ಳವನನ್ನಾಗಿ, ಧನಿಕನನ್ನಾಗಿ, ಕಣ್ವಃ = ಕಣ್ವನ ಪುತ್ರನಾದ ಮೇಧಾತಿಥಿಃ =ಮೇಧಾತಿಥಿಯೂ ಕೂಡ, ದಧೌ =ಅಧಾನೇಷ್ಟಿಯಿಂದ ಸ್ಥಾಪಿಸಿರುವನೋ, (ಯಾವ ನಿನ್ನನ್ನು ವೃಷಾ=(ವೃಷಾಧರ್ಮಮಹೇಂದ್ರಯೋಃ ಎಂಬ ವಿಶ್ವಕೋಶದಿಂದ) ಯಮಧರ್ಮರಾಜನು, ಅಥವಾ ದೇವೇಂದ್ರನು, ಅಧಾನೇಷ್ಟಿಯಿಂದ ಸ್ಥಾಪಿಸಿರುವತೋ ಯಂ =ಯಾವ ನಿನ್ನನ್ನು ಉಪಸ್ತುತಃ =ರಾಜನು, ದಧೌ=ಅಧಾನೇಷ್ಟಿಯಿಂದ ಸ್ಥಾಪಿಸಿರುವನೋ ॥ ಅಂತಹ ನೀನು ಸನ್ನಿಹಿತನಾಗು, ಎಂದು ಪೂರ್ವ ಋಕ್ಕಿನಿಂದ ಸಂಬಂಧವು) ॥೧೦॥೯॥

ಋ ॥ (೪೩೨) ಯಮಗ್ನಿಂ ಮೇಧ್ಯಾತಿಥಿಃ ಕಣ್ವ ಈಧ ಋತಾದಧಿ ।
ತಸ್ಯ ಪ್ರೇಷೋ ದೀದಿಯುಸ್ತಮಿಮಾ ಋಚಸ್ತಮಗ್ನಿಂ ವರ್ಧಯಾಮಸಿ ॥೧೧॥

ಅ ॥ ಯವ ಗ್ನಿಂ = ಯಾವ ಅಗ್ನಿಯನ್ನು ಕಣ್ವಃ = (ಪಿತೃಪುತ್ರರಿಗೆ ಅಭೇದೋಪಚಾರದಿಂದ) ಕಣ್ವನಾದ ನನ್ನ ಮಗನಾದ ವೇಂಧ್ಯಾತಿಥಿಃ = ವೇಧಾತಿಥಿಯು, ಋತಾತ್ = ಯಥಾಭೂತವಾದ ಅರ್ಥವನ್ನು ಪ್ರತಿಪಾದಿಸುವ ಪ್ರಮಾಣಭೂತವಾದ, ವೇದಾಂತ =ವೇದದೆಶೆಯಿಂದ, (ಅಂದರೆ ಸತ್ಯವಾದ ವೇದವಚನವನ್ನು ಹೇಳಿ, ಅಂದರೆ ವ್ಯಾಖ್ಯಾನ ಮಾಡಿ) ಅಧಿಈಧೇ = (ಞ ಇಂಧೀದಿಪ್ತೌ) ಪ್ರಕಾಶಗೊಳಿಸಿದನೋ. ತಸ್ಯ= ಅಂತಹ ಅಗ್ನಿಗೋಸ್ಕರ ಇಷಃ = ಅನ್ನಗಳು ಪ್ರದೀದಿಯುಃ = (ದಾಣ್‌ದಾನೇ) ನಮ್ಮಿಂದಲೂ ಕೊಡಲ್ಪಡಬೇಕು. ನಿಶ್ಚಯ ತನುಗ್ನಿಂ = ಅಂತಹ ಅಗ್ನಿಯನ್ನು ಕುರಿತೇ ಇಮಾಃಋಚಃ = ಈ ಎಲ್ಲಾ ಋಕ್ಕುಗಳು ಪ್ರವರ್ತಿಸಲರ್ಹಗಳು. (ಶಿಷ್ಯರನ್ನು ಕುರಿತು ಋಕ್ಕು ಪ್ರವೃತ್ತವಾದ ಪ್ರಯುಕ್ತ) ತಮಗ್ನಿಂ = ಆ ಅಗ್ನಿಯನ್ನು (ತಾವು) ವರ್ಧಯಾ ಮಸಿ = ಅಭಿವೃದ್ಧಿಕರಿಸುತ್ತೇವೆ. (ಆ ಅಗ್ನಿಯು ಪೂರ್ಣನಾಗಿದ್ದಾನೆಂದು ಪ್ರಕಾಶಗೊಳಿಸುತ್ತವೆ.) ॥೧೧॥

**ಭಾ ॥೧॥ಯಂ ಸುತೋ ಮೇ ಸಮೀಧೇಽಗ್ನಿಂ ಮೇಧ್ಯಾತಿಥಿ ಯತಾವಧಿ। ಉಕ್ತ್ವಾ ಸತ್ಯಾಂ ವೇದವಾಚಂ ದೇ ಯಾನ್ಯನ್ನಾನಿ ತಸ್ಯ ಹಿ॥ ॥೨॥ ತಂ ಪ್ರತೀಮಾ ಋಚಃ ಸರ್ವಾ ಪ್ರಕಾಶಾದ್ವರ್ಧಯಾಮ ತಂ। ಇಂಧನಂ ತು ಹರೇರ್ನಾನ್ಯತ್ಕ್ವಚಿದಸ್ತಿ ಪ್ರಕಾಶನಾತ್** ॥೧೧॥

ಅ॥ (೧) ಯಾವ ಅಗ್ನಿಯನ್ನು ಕಣ್ವನಾದ ನನ್ನ ಮಗನಾದ, ಮೇಧ್ಯಾತಿಥಿ ಋಷಿಯು ಯಥಾಭೂತನಾದ ಅರ್ಥವನ್ನು ಪ್ರತಿಪಾದಿಸುವ ಪ್ರಮಾಣರೂಪವಾದ ವೇದದ್ದೆಶೆಯಿಂದ (ಲ್ಯಪ್‌ಲೋಪನಿಮಿತ್ತವಾದ ಪಂಚಮೀ ವಿಭಕ್ತಿಯು) ಅಂದರೆ ಸತ್ಯವಾದ ವೇದ ವಚನವನ್ನು ಹೇಳಿ (ವ್ಯಾಖ್ಯಾನ ಮಾಡಿ) ಪ್ರಕಾಶಗೊಳಿಸಿರುವನೋ, ಅಂತಹ ಅಗ್ನಿಗೋಸ್ಕರ ಅನ್ನಗಳು (ನಮ್ಮಿಂದ) ಕೊಡಲ್ಪಡಬೇಕು. (ಅಂದರೆ ನಾವೂ ಅನ್ನಗಳನ್ನು ಕೊಡಬೇಕು.) (೨) ಅಂತಹ ಅಗ್ನಿಯ ಉದ್ದಿಶ್ಯವೇ ಈ ಎಲ್ಲಾ ಋಕ್ಕುಗಳೂ (ಪ್ರವರ್ತಿಸಲರ್ಹಗಳು.) ಅಂತೂ ಶಿಷ್ಯರನ್ನು ಕುರಿತು ಋಕ್ಕುಗಳು ಪ್ರವೃತ್ತಗಳಾಗಿರುವುದರಿಂದ ಪ್ರಕಾಶದಿಂದ ಆ ಅಗ್ನಿಯನ್ನು ಅಭಿವೃದ್ಧೀಕರಿಸುತ್ತೇವೆ. (ಅಂದರೆ ಆ ಅಗ್ನಿ ಶಬ್ದವಾಚ್ಯನಾದ ಶ್ರೀ ಹರಿಯು ಸರ್ವಗುಣಪರಿಪೂರ್ಣನೆಂದು ಪ್ರಕಾಶಗೊಳಿಸುತ್ತೇವೆ. (ಈಧೇ ಎನ್ನುವುದರಿಂದ ಪ್ರಕಾಶವಿಲ್ಲದಿದ್ದುದಕ್ಕೆ ಪ್ರಕಾಶವನ್ನು ಹುಟ್ಟಿಸುವುದು ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ.) ಶ್ರೀಹರಿಗೆ ಇಂಧನವೆಂದರೆ ಪ್ರಕಾಶನ ದೆಶೆಯಿಂದ (ಅಂದರೆ ಶಿಷ್ಯರನ್ನು ಚೆನ್ನಾಗಿ ಬೋಧಿಸುವುದಕ್ಕಿಂತ) ಇತರವಾದುದು ಎಲ್ಲಿಯೂ ಇಲ್ಲವೇ ಇಲ್ಲ. ॥೧೧॥

ಋ ॥ (೪೩೩) ರಾಯಸ್ಪೂರ್ಧಿ ಸ್ವಧಾವೋಽಸ್ತಿ ಹಿ ತೇಽಗ್ನೇ ದೇವೇಷ್ವಾಪ್ಯಂ ।

ತ್ವಂ ವಾಜಸ್ಯ ಶ್ರುತ್ಯಸ್ಯ ರಾಜಸಿ ಸ ನೋ ಮೃಳ ಮಹಾ ಅಸಿ ॥೧೨॥

ಅ ॥ ಅಗ್ನೇಃ =ಎಲೋ ಅಗ್ನಿಯೇ, ತೇ =ಯಾವ ನಿನಗೆ, ದೇವೇಷ = ದೇವ ಗಂಧರ್ವಾದಿಗಳಲ್ಲಿ, ಅಪ್ಯಂ =ಪ್ರಾಪ್ಯವಾದುದು, ಅಸ್ತಿಹಿ =ಇದೆಯೋ, ತ್ವಂ=ಯಾವ ನೀನು, ಸ್ವಧಾನಃ=ಸುಖವನ್ನು ವೃದ್ಧಿಗೊಳಿಸುವವನೋ (ಸುಖ ವಾಚಕವಾದ ಸ್ವಧಾ ಶಬ್ದವು ಉಪಪದವಾಗಿರುವಾಗ ಣಿಜಂತವಾದ ವೃಧುಧಾತುವಿಗೆ ಡ ಪ್ರತ್ಯಯವು) ತ್ವಂ = ಅಂತಹ ನೀನು, (ನಮಗೆ) ರಾಯಃ =ದ್ರವ್ಯಗಳನ್ನು, ಪೂರ್ಧಿ= (ತೃಪಾಲನ ಪೂರಣಯೋಃ) ಪೂರ್ಣಗಳನ್ನಾಗಿ ಮಾಡು. ಯಾವ ನೀನು

ಶ್ರುತ್ಯಸ್ಯ=ಶ್ರುತಿಸಂಬಂಧಿಯಾದ ಶ್ರುತಿ ಶಬ್ದದಿಂದ ಭವ ಎಂಬ ಅರ್ಥದಲ್ಲಿ ಯತ್ಪ್ರತ್ಯಯವು. ವಾಜಸ್ಯ = ಅನ್ನಕ್ಕೆ. (ಅಂದರೆ ಯಜ್ಞಭಾಗಕ್ಕೆ, ರಾಜಸಿ = (ರಾಜರ್ ದೀಪ್ತೌ) ರಾಜನಾಗಿರುತ್ತಿಯೋ, (ಯಜ್ಞಭಾಗದಿಂದ ಪೂಜ್ಯನಾಗಿರುವುದರಿಂದ ರಾಜಸಿ ಎಂದು ಹೇಳಲ್ಪಡುತ್ತಾನೆ) ಯಾವ ನೀನು, ಮಹಾನ್ ಅಸಿ = ಸರ್ವೋತ್ತಮನಾಗಿರುತ್ತಿಯೋ, ಅಂತಹ ನೀನು ನಃ = ನಮ್ಮನ್ನು ಮೃಳ = ಸುಖಗೊಳಿಸು ಅಥವಾ ರಕ್ಷಿಸು. ||೧೨||

**ಭಾ || (೧) ವಿತ್ತಾನಿ ಪೂರಯಾಸ್ಮಾಕಂ ದೇವೇಷ್ವಪ್ಯಾಪ್ಯಮಸ್ತಿ ತೇ । ಯಜ್ಞಭಾಗಾದಿ ಪೂಜ್ಯತ್ವಾತ್ಸ್ವಧಾವಃ ಸುಖವರ್ಧಕಃ || (೨) ಶ್ರುತ್ಯವಾಜೋ ಯಜ್ಞಭಾಗೋ ರಾಜಾ ಭವಸಿ ತಸ್ಯ ಹಿ ||೧೨||**

ಅ || (೧) ಎಲೋ ಅಗ್ನಿಯೇ, ನೀನು ಹಿ=ಯಜ್ಞ ಭಾಗಾದಿಗಳಿಂದ ಪೂಜಿಸಲ್ಪಡುವುದರಿಂದ ಯಾವ ನಿನಗೆ ದೇವತೆಗಳು ಗಂಧರ್ವರು ಮೊದಲಾದವರಲ್ಲಿಯೂ ಪ್ರಾಪ್ಯವಾದುದು ಇದೆಯೋ ಯಾವ ನೀನು ಸ್ವಧಾವಃ = ದೇವಾದಿಗಳಿಗೆ ಸುಖವನ್ನು ವೃದ್ಧಿಗೊಳಿಸುವವನೋ, ಅಂತಹ ನೀನು ದ್ರವ್ಯಗಳನ್ನು ನಮಗೆ ಪೂರ್ಣಕರಿ ಅಥವಾ ಸುಖವನ್ನು ವೃದ್ಧಿಗೊಳಿಸುವ ಶ್ರೀ ವಿಷ್ಣುವು ಸ್ವಧಾವಃ ಎಂಬ ಪದದಿಂದ ಕರೆಯಲ್ಪಡುತ್ತಾನೆ. (೨) ಶ್ರುತಿ ಸಂಬಂಧಿಯಾದ ಅನ್ನವೆಂದರೆ ಯಜ್ಞಭಾಗವು. ಅದಕ್ಕೆ ನೀನು ರಾಜನಾಗಿರುತ್ತಿ. (ಅಂದರೆ ಯಾವ ಕಾರಣದಿಂದ ಯಜ್ಞಭಾಗಕ್ಕೆ ರಾಜನಾಗಿರುತ್ತಿಯೋ ಆ ಕಾರಣ ಅಗ್ನಿಯಾದ ನೀನು ಶ್ರುತಿ ಸಂಬಂಧಿಯಾದ ಅನ್ನಕ್ಕೆ ರಾಜನಾಗಿರುತ್ತಿ ಎಂದು ಹೇಳಲ್ಪಡುವುದು) (ಅಂತಹ ನೀನು ನಮ್ಮನ್ನು ರಕ್ಷಿಸು, ಸುಖಗೊಳಿಸು) ||೧೨||

**ಋ || (೪೩೪) ಊರ್ಧ್ವ ಊಷುಣ ಊತಯೇ ತಿಷ್ಠಾ ದೇವೋ ನ ಸವಿತಾ ।**
**ಊರ್ಧ್ವೋ ವಾಜಸ್ಯ ಸನಿತಾ ಯದಂಜಿಭಿರ್ವಾಘದ್ಭಿರ್ವಿಹ್ವಯಾ ಮಹೇ || ||೧೩||**

ಅ || ಯಾವ ನೀನು, ನಃ = ನಮಗೋಸ್ಕರ, ವಾಜಸ್ಯ ಸನಿತಾ = (ಷಣು ದಾನೇ) ತಾನು ಅನ್ನವನ್ನು ಕೊಡುವವನೋ ಇತರರಿಂದ ಕೊಡಿಸುವವನೋ, ಊರ್ಧ್ವ = (ಊರ್ಧ್ವ ಸ್ಯಾದುತ್ಥಿತೇ ತುಂಗೇ ಎಂಬ ಕೋಶದಿಂದ) ಸಮಸ್ತ ಕಾರ್ಯಗಳಲ್ಲಿಯೂ ಸದಾ ಉದ್ಯೋಗವುಳ್ಳವನೋ, ಅಂತಹ ನೀನು ನಃ ಊತಯೇ = ನಮ್ಮ ರಕ್ಷಣೆಯನ್ನು ಮಾಡುವುದಕ್ಕಾಗಿ, ಸವಿತಾ ದೇವಃ ನ =ಜಗತ್ತನ್ನು ಸೃಷ್ಟಿಸುವ ಕ್ರೀಡಾದಿಗಳು ವಿಶಿಷ್ಟವಾದ ಶ್ರೀ ವಿಷ್ಣುವಿನಂತೆ, ಊರ್ಧ್ವ ಸುತಿಷ್ಠ =ಚೆನ್ನಾಗಿ ಉದ್ಯೋಗವುಳ್ಳವನಾಗು. (ವಿಷ್ಣು ಪಕ್ಷದಲ್ಲಿ ತಾನೇ ದೃಷ್ಟಾಂತನು.) ಯತ್ = ಯಾವ ಕಾರಣದಿಂದ, ವಾಘದ್ಭಿಃ = (ವಚಪರಿಭಾಷಣೇ) ಹೇಳುವ ಸ್ತುತಿಸುವ ಋತ್ವಿಜರಿಂದ (ಯುಕ್ತರಾದ ನಾವು ನಿನ್ನನ್ನು) ಅಂಜಿಭಿಃ = (ಅಂಜೂಸಂಗೇ) ಸ್ನೇಹ ವಿಶೇಷಗಳಿಂದ (ಭಕ್ತಿಗಳಿಂದ) ವಿಹ್ವಯಾಮಃ = (ಹ್ವೇಞ ಸ್ಪರ್ಧಾಯಾಂ ಶಬ್ದೇಚ) ಕರೆಯುತ್ತೇವೋ, ಸ್ತೋತ್ರ ಮಾಡುತ್ತೇವೋ, (ಆದ ಕಾರಣ ನಮ್ಮನ್ನು ರಕ್ಷಿಸುವುದಕ್ಕಾಗಿ ಚೆನ್ನಾಗಿ ಉದ್ಯೋಗವುಳ್ಳವನಾಗು. ||೧೩||

**ಭಾ || (1) ಅಸ್ಮದ್ರಕ್ಷಾಕೃತೇ ನಿತ್ಯಂ ಸೂದ್ಯತೋ ಭವ ವಿಷ್ಣುವತ್ || ವಿಷ್ಣುಶ್ಚೇತ್ಸ್ವಾತ್ಮ ದೃಷ್ಟಾಂತೋ ನೋನ್ನದಾತಾ ತಥೋದ್ಯಮೀ || (2) ಯತ್ಸ್ತುದ್ಭಿರ್ದ್ವಿಜೈರ್ಯುಕ್ತಾಃ ಸ್ನೇಹೈಸ್ತ್ವಾಂ ವಿಹ್ವಯಾಮಹೇ ||೧೩||**

ಅ॥ (೧) ನಮ್ಮ ರಕ್ಷಣೆಯನ್ನು ಮಾಡುವುದಕ್ಕಾಗಿ ನಮಗೆ ತಾನು ಅನ್ನವನ್ನು ಕೊಡುವವನಾಗಿಯೂ ಇತರರಿಂದ ಕೊಡಿಸುವವನಾಗಿಯೂ ಹಾಗೆಯೇ ಕಾರ್ಯದಲ್ಲಿ ಸದಾ ಉದ್ಯೋಗವುಳ್ಳವನಾಗಿಯೂ ಶ್ರೀ ವಿಷ್ಣುವಿನಂತೆ ನಿರಂತರದಲ್ಲಿಯೂ ಚೆನ್ನಾಗಿ ಉದ್ಯೋಗವುಳ್ಳವನಾಗು. (ಹಾಗಾದರೆ ಇಲ್ಲಿ ಶ್ರೀ ವಿಷ್ಣುವನ್ನೇ ಪ್ರಾರ್ಥಿಸುವುದಾದರೆ ಈಗ ಸವಿತಾಸ (ಶ್ರೀ ವಿಷ್ಣುವಿನಂತೆ) ಎನ್ನುವುದನ್ನು ಹೇಗೆ ವ್ಯಾಖ್ಯಾನ ಮಾಡಬೇಕೆಂದರೆ) ಶ್ರೀ ವಿಷ್ಣುವನ್ನು ಪ್ರಾರ್ಥಿಸುವುದಾದರೆ ತನಗೆ ತಾನೇ ದೃಷ್ಟಾಂತನು. (೨) (ರಕ್ಷಣೆಗಾಗಿ ಚೆನ್ನಾಗಿ ಉದ್ಯುಕ್ತನಾಗಿದ್ದಾನೆಂಬುವುದು ಯಾವುದರಿಂದ ಸಿದ್ಧಿಸುತ್ತದೆ. ಎಂದರೆ) ಯಾವ ಕಾರಣದಿಂದ ಸ್ತೋತ್ರ ಮಾಡುವ ಋತ್ವಿಜರಿಂದೊಡಗೂಡಿದ ನಾವು ಮಾಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹದಿಂದಲೇ ನಿನ್ನನ್ನು ಸ್ತುತಿಸುತ್ತೇವೋ, (ಆದ ಕಾರಣ ನಮ್ಮ ರಕ್ಷಣೆಗಾಗಿ ಚೆನ್ನಾಗಿ ಉದ್ಯುಕ್ತನಾಗು.) ॥೧೩॥

ಋ ॥ (೪೩೫) ಊರ್ಧ್ವೋ೯ನಃ ಪಾಹ್ಯಂಹಸೋ ನಿ ಕೇತುನಾ ವಿಶ್ವಂ ಸಮತ್ರಿಣಂ ದಹ ।
ಕೃಧೀ ನ ಊರ್ಧ್ವಾ೯ಞ್ಚರಥಾಯ ಜೀವಸೇ ವಿದಾದೇವೇಷು ನೋ ದುವಃ ॥೧೪॥

ಅ ॥ ಊರ್ಧ್ವ೯ =ಉದ್ಯೋಗವುಳ್ಳವನು, ಗುಣಗಳಿಂದ ಉಚ್ಚನು. ಅಂದರೆ ಸರ್ವೋ೯ತ್ಕೃಷ್ಟ ಗುಣಗಳುಳ್ಳವನಾದಾಗ್ಯೂ ನೀನು ನಃ = ನಮ್ಮನ್ನು, ಕೇತುನಾ = ಜ್ಞಾನವನ್ನು ಕೊಟ್ಟು ; ಅಂಹಸಃ = ಪಾಪದ್ವೆಶೆಯಿಂದ, ನಿ = ಅತ್ಯಂತವಾಗಿ, ಪಾಹಿ = ರಕ್ಷಿಸು. (ಪಾಪವನ್ನು ಪರಿಹರಿಸು) (ಅಂದರೆ ಜ್ಞಾನೋಪದೇಶಕ್ಕಿಂತ ಮೊದಲೂ ರಕ್ಷಿಸುವವನೇ ಸರಿ. ಜ್ಞಾನೋಪದೇಶ ಮಾಡಿದ ಮೇಲೆಯಾದರೂ ಮೊದಲಿನ ಪಾಪಗಳಿಗೆ ವಿನಾಶ, ಮೇಲಿನ ಪಾಪಗಳಿಗೆ ಅಶ್ಲೇಶ, (ಸಂಬಧಾಭಾವ)ಗಳನ್ನು ಮಾಡುವುದರಿಂದ ನಿತರಾಂ ಎಂದು ಹೇಳಿದ್ದು) (ಪಾಪದಿಂದ ಸಂರಕ್ಷಿಸುವುದಕ್ಕಾಗಿ) ವಿಶ್ವಂ ಅತ್ರಿಣಂ = ಸ್ವರ್ಗ ಮುಕ್ತಿಮಾನುಷ ರೂಪವಾದ ಮೂರುಮಾರ್ಗಗಳು ಇಲ್ಲದಿರುವುದರಿಂದ ಅತ್ರಿ ಶಬ್ದವಾಚ್ಯರಾದ ಅಸುರರನ್ನು ಅಥವಾ (ಅದಭಕ್ಷಣೇ) ಅದಂತ್ಯಧಿಕಃ = ಅಧಿಕವಾಗಿ ಭಕ್ಷಿಸುವುದರಿಂದ ಅತ್ರಿ ಶಬ್ದವಾಚ್ಯಕರಾದ) ರಾಕ್ಷಸರನ್ನು, ಸಮದಹ =ಭಸ್ಮಾಧೀನರನ್ನಾಗಿ ಮಾಡು. (ಸುಟ್ಟುಬಿಡು) ಮತ್ತು, ನಃ = (ನಮ್ಮನ್ನು, ಚರಥಾಯ =ಸಂಚಾರಕ್ಕಾಗಿ, (ಚರಗತಿ ಭಕ್ಷಣಯೋ) ಭಕ್ಷಿಸುವುದಕ್ಕಾಗಿ ಭೋಗಕ್ಕಾಗಿಯೂ ನಿನ್ನ ಸಂಬಂಧಿಯಾದ ಲೋಕವನ್ನೂ ಕುರಿತು ಸಂಚರಿಸುವುದಕ್ಕಾಗಿಯೂ, ಜೀವಸೇ =ಜೀವನಕ್ಕಾಗಿಯೂ =ಊರ್ಧ್ವಾನ್ =ಉತ್ತಮರನ್ನಾಗಿಯೂ ಕೃಧಿ =ನಿತ್ಯದಲ್ಲಿಯೂ ಮಾಡು. (ಅಂದರೆ ಭೋಗಾದಿ ವಿಷಯದಲ್ಲಿ ನಮ್ಮನ್ನು ಉತ್ತಮರನ್ನಾಗಿ ಮಾಡು.) ಮತ್ತು, ದೇವೇಷು =ದೇವತೆಗಳಿಗೋಸ್ಕರ, ದುವಃ = (ಮಹಪ್ಪಪೂಂಜೇ) ಅತಿಮಹತ್ತಾದ ಸಮಸ್ತ ಕಾಮ್ಯಗಳನ್ನು, ನಃ = ನಮ್ಮನ್ನು, ವಿದಾಃ = (ವಿದ್ರಲಾಭೇ) ಸರ್ವದಾ ಹೊಂದಿಸಿಕೊಡು. ॥೧೪॥

ಭಾ ॥ (1) ಜ್ಞಾನೇನ ಪಾಹಿ ನಿತರಾಮುದ್ಯಮ್ಯುಚ್ಚಗುಣೋಽಪಿ ನಃ ॥ (2) ಅಸುರಾ ಅತ್ರಯಃ ಪ್ರೋಕ್ತಾ ಮಾರ್ಗತ್ರಯವಿವರ್ಜಿತಾಃ । ಸ್ವರ್ಗಾಪವರ್ಗಮಾನುಷ್ಯಂ ತ್ಯಕ್ತ್ವಾ ಯಾಂತಿ ತಮೋ ಹೀ ತೇ ॥ (3) ಅದಂತೀತ್ಯಥ ರಕ್ಷಾಂಸಿ ವಾ ತ್ರಯೋಧಿಕ ಭಕ್ಷಣಾತ್ ॥ (4) ಭೋಗಾಯ ಜೀವನಾಯಾಪಿ ಸ್ವಲೋಕಚರಣಾಯ ಚ । ಉತ್ತಮಾನ್ ಕುರು ನೋ ನಿತ್ಯಂ (5) ದೋಹನಾನಿ ಚ ಲಂಭಯ । ದೇವೇಭ್ಯೋಽಖಿಲ ಕಾಮ್ಯಾನಿ ಸದಾ ನೋಽತಿಮಹಾಂತಿ ಚ॥ ॥೧೪॥

ಅ ॥ (೧) ಕಾರ್ಯದಲ್ಲಿ ಸದಾ ಉದ್ಯೋಗವುಳ್ಳವನು ಮತ್ತು ಸರ್ವೋ೯ತ್ಕೃಷ್ಟಗುಣಗಳುಳ್ಳವನಾದಾಗ್ಯೂ ನೀನು

ನಮ್ಮನ್ನು ಜ್ಞಾನೋಪದೇಶಮಾಡಿ ಅತ್ಯಂತವಾಗಿ ರಕ್ಷಿಸು. (೨) ಸ್ವರ್ಗ ಮೋಕ್ಷ ಮನುಷ್ಯರೂಪ ೩ ಮಾರ್ಗಗಳೂ ವಿರಹಿತಗಳಾಗಿರುವುದರಿಂದಲೇ ಅಸುರನು ಅತ್ರಿಗಳೆನಿಸುತ್ತಾರೆ. ಅಂತಹ ಅಸುರರು ಸ್ವರ್ಗ ಮೋಕ್ಷ ಮನುಷ್ಯಲೋಕವನ್ನು ಬಿಟ್ಟು (ಹೊಂದದೆ) ಅಂಧಂತಮಸ್ಸನ್ನೇ ಹೊಂದುತ್ತಾರೆ. ಶ್ರುತ್ಯಾದಿ ಪ್ರಸಿದ್ಧವು. (2) (ಅರ್ಥಾಂತರವನ್ನು ಹೇಳುತ್ತಾರೆ.) ಅಥವಾ ಸರ್ವರಿಗಿಂತ ವಿಶೇಷತಃ ಭಕ್ಷಿಸುತ್ತಾರೆ. ಅಂದರೆ ಸರ್ವರಿಗಿಂತ ಅತ್ಯಧಿಕವಾಗಿ ಭಕ್ಷಿಸುವುದರಿಂದ ರಾಕ್ಷಸರು ಅತ್ರಿಗಳೆನಿಸುತ್ತಾರೆ. (ತಥಾಚ ಅತ್ರಿರ್ಯವ್ಯೆ ನಾಮ್ಯೆತದ್ಯದತ್ತಿರಿತಿ ಎಂದು ಶ್ರುತಿಯು) (೪) ಯಥೇಷ್ಟಭೋಗಕ್ಕಾಗಿಯೂ ಜೀವಿಸುವುದಕ್ಕಾಗಿಯೂ, ನಿನ್ನ ಲೋಕವನ್ನು ಕುರಿತು ಸಂಚರಿಸುವುದಕ್ಕಾಗಿಯೂ (ಅಂದರೆ ಭೋಗಾದಿ ವಿಷಯದಲ್ಲಿ ನಮ್ಮನ್ನು ನಿತ್ಯದಲ್ಲಿಯೂ ಉತ್ತಮರನ್ನಾಗಿ ಮಾಡು (೫) ದೇವತೆಗಳಿಗೋಸ್ಕರ ದೋಹನಗಳನ್ನು ಅಂದರೆ ಅತ್ಯಂತ ಶ್ರೇಷ್ಠಗಳೇ ಆದ ಸಮಸ್ತಕಾಮ್ಯಗಳನ್ನು ಸರ್ವದಾ ನಮ್ಮನ್ನು ಹೊಂದಿಸಿಕೊಂಡು. ||೧೪||

ಋ || (೪೩೬) ಪಾಹಿ ನೋ ಅಗ್ನೇ ರಕ್ಷಸಃ ಪಾಹಿ ಧೂರ್ತೇರರಾವ್ಣಃ ।

ಪಾಹಿ ರೀಷತ ಉತ ವಾ ಜಿಘಾಂಸತೋ ಬೃಹದ್ಭಾನೋ ಯವಿಷ್ಠ್ಯ ||೧೫||೧೦||

ಅ || ಬೃಹದ್ಭಾನೋ = ಬಹಳ ರಶ್ಮಿಗಳುಳ್ಳ, ಯವಿಷ್ಠ್ಯ=ಚಿಕ್ಕವರಲ್ಲಿಯೂ ನಿಯಾಮಕನಾಗಿರುವ, ಅಗ್ನೇ =ಶ್ರೀ ಹರಿಯೇ, ನಃ =ನಮ್ಮನ್ನು ರಕ್ಷಸಃ =ರಾಕ್ಷಸರ ದೆಸೆಯಿಂದ, ಪಾಹಿ =ರಕ್ಷಿಸು. ಆರಾವ್ಣಃ = (ದೋಷಾರಛಿದ್ರತಬ್ಬಾನಾಂ ಹರ್ಯಾಯತ್ವಂ ಯತಸ್ತತಃ । ಎಂಬ ಅನು ವ್ಯಾಖ್ಯಾನದಿಂದಲೂ, ಅರಂ ಶೀಘ್ರೇಚ ಚಕ್ರಾಂಗೇ ಶೀಘ್ರಗಾಮಿನಿ ಕಿಲ್ಬಿಷೇ ಎಂಬ ಕೋಶದಿಂದಲೂ) ಅರ =ದುಃಖಾದಿ ದೋಷಗಳನ್ನು ಆವಾತಿ = ಇತರರಿಗೆ ಹೊಂದಿಸಿಕೊಡುವುದರಿಂದ ಆರಾವಾ ಎನಿಸಿಕೊಂಡ ಪಾಪಿಷ್ಠ ಪುರುಷನ (ಅರಶಬ್ದೋ ಪಪದಾತ್ಅಜ್‌ಪೂರ್ವಕಾತ್ ವಾಗತಿ ಗಂಧನಯೋಃ ಇತ್ಯಸ್ಮಾತ್ ದನ್‌ಪ್ರತ್ಯಯವು) ದೂರ್ತೇ = (ತುರ್ವೀ ಅಜ್ ಹಿಂಸಾಯಾಂ) ಹಿಂಸಾರೂಪವಾದ ವಚನ ದೆಸೆಯಿಂದ, ನಃ =ನಮ್ಮನ್ನು ಪಾಹಿ =ರಕ್ಷಿಸು. ಹಾಗೆಯೇ, ರಿಷತಃ = ರುಷರಿಷಹಿಂಸಾಯಾಂ) ನಾಶಮಾಡುವ ದುಷ್ಟನ ದೆಸೆಯಿಂದ, ಪಾಹಿ =ರಕ್ಷಿಸು, ಉತವಾ=ಮತ್ತು, ಜಿಘಾಂಸತಃ =ನಮ್ಮನ್ನು ಕೊಲ್ಲುವುದಕ್ಕಾಗಿ ಪ್ರವೃತ್ತಿ ಮಾಡಿದ ಪುರುಷನ ದೆಸೆಯಿಂದ ನಃ =ನಮ್ಮನ್ನು, ಪಾಹಿ =ರಕ್ಷಿಸು. (ಅಂದರೆ ರಾಕ್ಷಸರು ದುಷ್ಟ ವಿಷಯದಲ್ಲಿ ಇಂದ್ರಿಯಾದಿಗಳಿಗೆ ಪ್ರೇರಕರು. ಇತರರು ಕೆಲವರು ದುಷ್ಟವಚನವನ್ನು ಕೇಳುವವರು, ಕೆಲವರು ಅತಿದುಷ್ಟರಾದುದರಿಂದ ಸಂಬಂಧಕ್ಕೇನೇ ಆಯೋಗ್ಯರು. ಕೆಲವರು ಶರೀರಹನನಾದಿಗಳಿಗಾಗಿ ಪ್ರವೃತ್ತರಾಗುವರು. ಆದ ಕಾರಣ ಅವರಿಂದ ಎಲ್ಲಾ ರಕ್ಷಿಸು ಎಂಬ ವಿವಕ್ಷೆಯಿಂದ ರಕ್ಷಸಃ ಪಾಹಿ ಇತ್ಯಾದಿಗಳನ್ನು ಪ್ರಪ್ರತ್ಯೇಕ ಹೇಳಿದ್ದು) ||೧೫||೧೦||

ಭಾ || ಅರಂ ಛಿದ್ರಂ ಪ್ರಾಪಯತೀತ್ಯರಾವಾ ಪಾಪಪೂರಷಃ || (೨) ಭೂತ್ಯತೇಸ್ತಸ್ಯ ನೋ ರಕ್ಷ ನಶ್ಯತೋಽಸ್ಮದ್ವಧಾಯ ಚ || (೩) ಯವೀಯಸ್ಸು ಸ್ಥಿತತ್ವೇನ ಯವಿಷ್ಠ್ಯೋ ಹರಿರುಚ್ಯತೇ । ಬ್ರಹ್ಮಾದ್ಯಪೇಕ್ಷಯಾ ನಿತ್ಯಂ ಯವಿಷ್ಠ ತಮ ಏವಯತ್ । ಅಗ್ನಿರ್ಯವಿಷ್ಠ್ಯ ಇತ್ಯುಕ್ತೋ ಯದಾಧಿಕ್ಯಾರ್ಥತೋಽಧಿಕಂ ||೧೫||೧೦||

ಅ || (೧) ಅರಂ=ಛಿದ್ರವನ್ನು (ದುಃಖಾದಿದೋಷವನ್ನು) ಇತರರಿಗೆ ಹೊಂದಿಸಿಕೊಡುವುದರಿಂದ, ಅರಾವಾಃ

=ಪಾಪಿಷ್ಠಪುರುಷನು. (೨) ಆ ಪಾಪ ಪುರುಷನ ಹಿಂಸಾರೂಪ ವಚನಗಳಿಂದಲೂ ನಾಶಕನಾದ ದುಷ್ಟ ಪುರುಷನಿಂದಲೂ ನಮ್ಮನ್ನು ಕೊಲ್ಲುವುದಕ್ಕಾಗಿ ಪ್ರವರ್ತಿಸತಕ್ಕ ಪುರುಷನ ದೆಶೆಯಿಂದಲೂ ನಮ್ಮನ್ನು ರಕ್ಷಿಸು. (೩) (ಯವಿಷ್ಠ್ಯಶಬ್ದವನ್ನು ಶ್ರೀ ವಿಷ್ಣುವಿನಲ್ಲಿಯೂ ಅಗ್ನಿಯಲ್ಲಿಯೂ ಕ್ರಮದಿಂದ ವ್ಯಾಖ್ಯಾನ ಮಾಡುತ್ತಾರೆ.) ಚಿಕ್ಕವರಾದ ಬ್ರಹ್ಮಾದಿಗಳಲ್ಲಿ ನಿಯಾಮಕನಾಗಿದ್ದುದರಿಂದ ಶ್ರೀ ಹರಿಯು ಯವಿಷ್ಠ್ಯನೆನ್ನಿಸುತ್ತಾನೆ. ಅಗ್ನಿಯಾದರೂ ಯಾವ ಕಾರಣದಿಂದ ಬ್ರಹ್ಮಾದಿಗಳಿಂದ ನಿತ್ಯದಲ್ಲಿಯೂ ಚಿಕ್ಕವನೇ ಆಗಿರುತ್ತಾನೋ, ಆದ ಕಾರಣ ಯವಿಷ್ಠ್ಯನೆಂದು ಹೇಳಲ್ಪಡುತ್ತಾನೆ. (ಇದು ಹೇಗೆ ಸಿಗುತ್ತದೆ ಎಂದರೆ) (ಅಧಿಕ್ಯೇ ಅಧಿಕಂ ಎಂಬ ಸೂತ್ರದಿಂದ) ಯಾವ ಕಾರಣದಿಂದ ಅಧಿಕ್ಯವೆಂಬ ಅರ್ಥದಲ್ಲಿ ಅಧಿಕ ಶಬ್ದರೂಪವು ಆಗುತ್ತದೋ, ಆದ ಕಾರಣ ಯವಿಷ್ಠ ಶಬ್ದದಿಂದ ಮೇಲೆ ತಮಬ್ ಎಂಬ ಅರ್ಥವುಳ್ಳ ಯ ಶಬ್ದವು ಆಗುವುದು (ತಥಾಚ ಅತಿಶಯವೆಂಬ ಅರ್ಥದಲ್ಲಿ ತಮಬ್ ಪ್ರತ್ಯಯವನ್ನು ವಿಧಿಸಿದುದರಿಂದ ಯವಿಷ್ಠ್ಯ ಎಂಬಲ್ಲಿದ್ದ ಯ ಶಬ್ದವು ಅಧಿಕ್ಯವೆಂಬ ಅರ್ಥವುಳ್ಳದ್ದು ||೧೫||೧೦||

**ಋ ||** **(೪೩.೭) ಘನೇವ ವಿಷ್ವಗ್ವಿ ಜಹ್ಯರಾವ್ಣಸ್ತಪುರ್ಜಂಭ ಯೋ ಅಸ್ಮಧ್ರುಕ್ ।**

**ಯೋ ಮರ್ತ್ಯ ಶಿಶೀತೇ ಅತ್ಯಕ್ತುಭಿರ್ಮಾನಃ ಸರಿಪುರೀ ಶತ** ||೧೯||

ಅ || ಯತ್ = ಯಾವ ಕಾರಣದಿಂದ, ತಪುರ್ಜಂಭ = (ತಪಸಂತಾಪೇ. ಜಭೀ ಗಾತ್ರವಿನಾಮೇ ಇತ್ಯತಃ ಸಂಹಾರಾರ್ಥಕಃ ಶಾಪದಿಂದಲೇ ಸಂಚರಿಸುವ ಅಗ್ನಿಯೇ, ತ್ವಂ = ನೀನು, ಅರಾವ್ಣಃ =ಪಾಪಿಷ್ಠ ಪುರುಷರನ್ನು, ಘನಾ ಇವ = ವಾಯುವು ಮೇಘಗಳೆನ್ನಂಬಂತೆ, ವಿಷ್ವಕ್ ಸರ್ವಪ್ರದೇಶಗಳಲ್ಲಿಯೂ, ವಿಜಹಿ = ನಾಶಗೊಳಿಸು. (ಹನಹಿಂಸಾಗತ್ಯೋಃ ) ಯಶ್ಚ=ಯಾವನು, ಅಸ್ಮಧ್ರುಕ್=ನಮ್ಮನ್ನು ದ್ರೋಹಿಸುವನೋ ಆತನನ್ನು ಕೂಡ, ವಿಜಹಿ=ಸಂಹರಿಸು, ಯಃ = ಯಾವ ಮರ್ತ್ಯನು, ಅತಿ ಅಕ್ತುಭಿಃ = (ಅಂಜೂ ವ್ಯಕ್ತಿಮ್ಲಕ್ಷ್ಣ ಕಾಂತಿ ಗತಿಷು. ಮ್ಲಕ್ಷ್ಣಃ = ಸಂಗಮ) ಸ್ನೇಹಗಳ ಅತಿಕ್ರಮಿಸುವಿಕೆಗಳಿಂದ ಅಂದರೆ ಸ್ನೇಹಾಭಾವಗಳಿಂದ, (ಸ್ನೇಹ ಮಾತ್ರವನ್ನು ಬಿಟ್ಟು) ಅಥವಾ ಸ್ನೇಹವಿಲ್ಲದಿರುವ ಪುರುಷರಿಂದ ಕೂಡಿಕೊಂಡು (ತೀಕ್ಷ್ಣವಾದ ಕುಠಾರದಂತೆ) ಶಿಶೀತೇ = (ಶೋ ತನೂಕರಣೇ) ಸರ್ವದಾ ತೀಕ್ಷ್ಣನಾಗುತ್ತಾನೋ ಸಃ ರಿಪುಃ =ಅಂತಹ ಶತ್ರುವಾದ ದುರಾಚಾರಿಯಾದ ಪಾಪಪುರುಷನು, ನಃ =ನಮಗೆ, ಮಾ ಈಶತ= (ಈಶ ಐಶ್ವರ್ಯೇ ನಿಯಾಮಕನಾಗಬಾರದು) ||೧೬||

**ಭಾ ||** **(೧) ವಾಯುರ್ಮೇಘಾನಿವ ಜಹಿ ಸರ್ವತಃ ಪಾಪಪುರೂಷಾನ್ (೨) ಅಸ್ಮದ್ರೋಹೀ ಚ ಯಸ್ತಂ ಚ (೩) ತಾಪೇನೈವಾತ್ತಿ ಯತ್ತತಃ । ತಪುರ್ಜಂಭಃ (೪) ಶಿಶೀತೇ ಯಸ್ತೀಕ್ಷ್ಣೋ ಭವತಿ ಸರ್ವದಾ ॥ ನೇಶೋ ಭವತು ಸೋಽಸ್ಮಾಕಂ ದುರಾತ್ಮಾ ಪಾಪಪೂರುಷಃ** ||೧೬||

ಅ || (೧) ವಾಯುವು ಮೇಘಾಗಳನ್ನೆಂಬಂತೆ ಸರ್ವಪ್ರದೇಶಗಳಲ್ಲಿಯೂ ಪಾಪಿಷ್ಠಪುರುಷರನ್ನು ಸಂಹಿರಿಸು (೨) ಯಾವನು ನಮಗೆ ದ್ರೋಹಿಯೋ ಆತನನ್ನು ಕೂಡ ಸಂಹರಿಸು. (೩) ಯಾವ ಕಾರಣದಿಂದ ತಾಪದಿಂದಲೇ ಸಂಹರಿಸುತ್ತಾನೋ ಆದ ಕಾರಣ ತಪುರ್ಜಂಭಃ ಎನಿಸುತ್ತಾನೆ. (೪) ಯಾವಾತನು ಶಿಶೀತೇ = ಸರ್ವದಾ ತೀಕ್ಷ್ಣನಾಗುತ್ತಾನೋ, ಅಂತಹ ದುಷ್ಟ ಸ್ವಭಾವವುಳ್ಳ ಪಾಪಪುರುಷನು ನಮಗೆ ನಿಯಾಮಕನಾಗಬಾರದು ||೧೬||

ಋ || (೪೩೮) ಅಗ್ನಿರ್ವವ್ನೇ ಸುವೀರ್ಯಮಗ್ನಿ: ಕಣ್ವಾಯ ಸೌಭಗಂ ।

ಅಗ್ನಿ: ಪ್ರಾವನ್ಮಿತ್ರೋತ ಮೇಧ್ಯಾತಿಥಿಮಗ್ನಿ: ಸಾತಾಉಪಸ್ತುತಂ ||೧೭||

ಅ || ಅಗ್ನಿಃ =ಸರ್ವೇಶನಾದ ಶ್ರೀಹರಿಯು, ಕಣ್ವಾಯ ಕಣ್ವನಾದ ನನ್ನನ್ನು, ಸುವೀರ್ಯಂ= ಒಳ್ಳೆಯ ವೀರ್ಯವುಳ್ಳವನನ್ನಾಗಿ, ವವ್ನೇ= (ವನಷಣ ಸಂಭಕ್ತೌ) ಹೊಂದಿಸಿಕೊಟ್ಟನು. ಮತ್ತು ಅಗ್ನಿಃ = ಅಗ್ನಿಯು ಕಣ್ವಾಯ= ಕಣ್ವನಾದ ನನ್ನನ್ನು, ಸೌಭಗಂ =ಒಳ್ಳೇ ಐಶ್ವರ್ಯವುಳ್ಳವನನ್ನಾಗಿಯೂ ವವ್ನೇ = ಹೊಂದಿಸಿಕೊಟ್ಟನು. ಅಗ್ನಿರೇವ = ಅಗ್ನಿಯೇ, ಮೇಧ್ಯಾತಿಥಿಂ = ನನ್ನ ಮಗನಾದ ಮೇಧಾತಿಥಿಯನ್ನು, ಉತಮಿತ್ರಾ=ನನ್ನ ಮಿತ್ರರನ್ನೂ, ಪ್ರ ಅವತ್ = ಚೆನ್ನಾಗಿ ರಕ್ಷಿಸಿದನು. (ಅವರ ರಕ್ಷಣೆ) (ಹೀಗೆ ಕೇವಲ ನನಗೆನೇ ಉಪಕಾರಕವಲ್ಲ, ಮತ್ತೆ) ಅಗ್ನಿಃ = ಅಗ್ನಿಯೇ, ಉಪಸ್ತುತಂ = ಉಪಸ್ತುತ ಮುನಿಯನ್ನು, ಸಾತೌ=ಷಣುಲಾಭೇ) ಲಾಭವಿಷಯದಲ್ಲಿ, ಪ್ರ ಆವತ್ ಚೆನ್ನಾಗಿ ರಕ್ಷಿಸಿದನು. ||೧೭||

ಭಾ || (೧) ಸುವೀರ್ಯಂ ಸೌಭಗಂ ಚೈವಮಮೇಶಃ ಸಮಭಾಜಯತ್ || (೨) || ಮೇಧ್ಯಾತಿಥಿಂ ಸುತಂ ಚೈವ ಮಿತ್ರಾಣಿ ಚ ರರಕ್ಷ ಮೇ || (೩) ಉಪಸ್ತುತಂ ಚೈವ ಮುನಿಂ ಸಾತೌ ಲಾಭೇ ರರಕ್ಷಹ ||೧೭||

ಅ || ಶ್ರೀ ಹರಿಯು ನನ್ನನ್ನು ಒಳ್ಳೇ ವೀರ್ಯವುಳ್ಳವನನ್ನಾಗಿಯೂ ಒಳ್ಳೇ ಐಶ್ವರ್ಯವುಳ್ಳವನನ್ನಾಗಿಯೂ ಹೊಂದಿಸಿಕೊಟ್ಟನು. (೨) ನನ್ನ ಮಗನಾದ ಮೇಧ್ಯಾತಿಥಿಯನ್ನೂ ಮಿತ್ರರನ್ನೂ ರಕ್ಷಿಸಿದನು. (೩) ಉಪಸ್ತುತನೆಂಬ ಮುನಿಯನ್ನೂ ಸಾತೌ = ಲಾಭ ವಿಷಯದಲ್ಲಿ ರಕ್ಷಿಸಿದನು. ಪ್ರಸಿದ್ಧ ||೧೭||

ಋ || (೪೩೯) ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।

ಅಗ್ನಿರ್ನಯನ್ನವವಾಸ್ತ್ವಂ ಬೃಹದ್ರಥಂ ತುರ್ವೀತಿಂ ದಸ್ಯವೇ ಸಹಃ ||೧೮||

ಅ || (ನಾವು) ತುರ್ವಶಂಯದುಂ ಉಗ್ರದೇವಂ = ಎಂಬೀತುರ್ವಶಾದಿರಾಜರನ್ನು, ಅಗ್ನಿನಾ =ಅಗ್ನಿಯಿಂದ ಕೂಡಿಕೊಂಡು, ಪರಾವತಃ = ದೂರದಲ್ಲಿಯೇ ಹವಾಮಹೇ =ಕರೆಯುತ್ತೇವೆ. ಅಗ್ನಿಃ = ಅಗ್ನಿಯು, ನವವಾಸ್ತ್ವಂ ಬೃಹದ್ರಥಂ ತುರ್ವೀತಿಂ = ಎಂಬೀ ನವವಾಸ್ತ್ವಾದಿರಾಜರನ್ನೂ, ದಸ್ಯವೇ =ದಸ್ಯು ಸಂಬಂಧಿಯಾದನಿಗ್ರಹಕ್ಕಾಗಿ, (ದಸ್ಯುಗಳನ್ನು ವಿಶೇಷತಃ ನಿಗ್ರಹಿಸುವ ವಿಷಯದಲ್ಲಿ) ಸಹಃ =ಬಲವನ್ನು, ನಯತ್ =ಹೊಂದಿಸಿಕೊಟ್ಟನು. (ಅಂದರೆ ದಸ್ಯುಗಳನ್ನು ಸಂಹರಿಸಲಿಕ್ಕಾಗಿ ಉಪಯುಕ್ತವಾದ ಬಲವುಳ್ಳವರನ್ನಾಗಿ ಮಾಡಿದನು.) ವಿಷ್ಣು ಪಕ್ಷದಲ್ಲಿ ಆದರೂ) ತುರ್ವತಂ = (ಸುರತ್ವರಣೆ) ತುರ ಶಬ್ದವು ಮಹಾವೇಗದಿಂದ ಕೂಡಿರುವುದರಿಂದ ವಾಯುವಾಚಕವು) ತುರಃ = ವಾಯುವು, ವಶೋ ಯಸ್ಯ ಎಂಬ ವ್ಯುತ್ಪತ್ತಿಯಿಂದ, ವಾಯುವು ಯಾವ ವಿಷ್ಣುವಿನ ಅಧೀನದಲ್ಲಿರುವನೋ ಅಂತಹ ವಿಷ್ಣುವನ್ನು ಯದುಂ = (ಯತ್ ಅಸ್ತಿ ತತಃ ಉತ್=ಉಚ್ಚಃ) ಯಾವುದು ಯಾವುದು ಇದೆಯೋ ಆ ಎಲ್ಲಾದಕ್ಕಿಂತಲೂ ಉಚ್ಚ (ಉತ್ತಮ)ನಾದ ಪ್ರಯುಕ್ತ ಯದು ನಾಮಕ ಶ್ರೀ ವಿಷ್ಣುವನ್ನು, ಉಗ್ರದೇವಂ =ಅಸುರರನ್ನು ಕುರಿತು ಉಗ್ರನು (ಕ್ರೂರನು)

ಕ್ರೀಡಾದಿಗುಣ ವಿಶಿಷ್ಟನೂ ಆದ ಉಗ್ರದೇವ ನಾಮಕ ಶ್ರೀ ವಿಷ್ಣುವನ್ನು ಅಗ್ನಿನಾ =ಶ್ರೀ ವಿಷ್ಣುವಿನ ಪ್ರಸಾದದಿಂದಲೇ, ಹವಾಮಹೇ =ಕರೆಯುತ್ತೇವೆ. ||೧೮||

**ಭಾ || (೧) ತುರ್ವಶಾದೀಂಸ್ತಥಾ ರಾಜ್ಞೋ ವಯಂ ತೇನ ಹವಾಮಹೇ || (೨) ತುರೋऽಪಿ ಯದ್ವಶೋ ವಿಷ್ಣುಃ ಸ ಚ ತುರ್ವಶನಾಮವಾನ್ || ಯದಸ್ತಿ ತತ ಉಚ್ಚತ್ವಾದ್ಯದು ರುಗ್ರೋऽಸುರಾನ್ಪ್ರತಿ || (3) ತಮೇವ ತತ್ಪ್ರಸಾದೇನ ಹ್ವಯಾಮೋऽ (4) ನಯ ದೇವ ಸಃ । ನವವಾಸ್ತ್ವಾದಿಕಾನ್ ರಾಜ್ಞೋ ಬಲಂ ದಸ್ಯುವಿನಿಗ್ರಹವೇ ||೧೮||**

ಅ|| (೧) (ಅಗ್ನಿ ವಿಷಯದಲ್ಲಿ ಪೂರ್ವಾರ್ಧ ತಾತ್ಪರ್ಯವನ್ನು ಹೇಳುತ್ತಾರೆ.) ಪೂರ್ವ ಋಕ್ಕಿನಲ್ಲಿ ಹೇಳಲ್ಪಟ್ಟ ಮೇಧಾತಿಥ್ಯಾದಿಗಳ ರಕ್ಷಣೆಯು ಮಾತ್ರವಲ್ಲ, ಮತ್ತೆ ನಾವು ತುರ್ವಶ, ಯದು ಉಗ್ರದೇವ ಎಂಬೀ ತುರ್ವಶ ಮೊದಲಾದ ರಾಜರನ್ನು ಯಾವ ಅಗ್ನಿಯ ಪೂಜೆಗೋಸ್ಕರ (ಪರಾವತಃ) = ದೂರದಲ್ಲಿಯೇ ಕರೆಯುತ್ತೇವೋ ಅದು ಕೂಡ ಆ ಅಗ್ನಿಯ ಸಾಮರ್ಥ್ಯದಿಂದಲೇ (೨) (ಶ್ರೀ ವಿಷ್ಣುವಿನಲ್ಲಿ ವ್ಯಾಖ್ಯಾನ ಮಾಡುವುದಕ್ಕಾಗಿ ತುರ್ವಶ ಮೊದಲಾದ ಶಬ್ದಗಳಿಗೆ ಅರ್ಥ ಹೇಳುತ್ತಾರೆ) (ತುರತ್ವರಣೇ ಎಂಬುದರಿಂದುಂಟಾದ ತುರ ಶಬ್ದವು ಮಹಾ ವೇಗವುಳ್ಳ ವಾಯುವಾಚಕವು. ಅಪಿ ಶಬ್ದವು ಸರ್ವಜೀವೋತ್ತಮರಾದ ವಾಯುದೇವರು ಕೂಡ ಯಾವಾಗ ಶ್ರೀ ವಿಷ್ಣುವಿನ ಅಧೀನದಲ್ಲಿರುವವರೋ ಆಗ ಇತರವಾದುದೆಲ್ಲವೂ ಶ್ರೀ ವಿಷ್ಣುವಿನ ಅಧೀನದಲ್ಲಿಯೇ ಇರುವುದೆಂದು ಸುತರಾಂ ಸಿದ್ಧ ಎಂಬ ಕೈಮುತ್ಯವನ್ನು ತೋರಿಸುತ್ತದೆ. ತುರಃ = ವಶಃ ಯಸ್ಯಾಸೌ ತುರ್ವತಃ = ಯಾವ ಶ್ರೀ ವಿಷ್ಣುವಿನ ಅಧೀನದಲ್ಲಿ ವಾಯುವು ಇದ್ದಾನೋ ಆ ವಿಷ್ಣುವು ತುರ್ವತನು, ತಥಾಚ) ವಾಯು ದೇವರೂ ಕೂಡ ಯಾವ ಶ್ರೀ ವಿಷ್ಣುವಿನ ಅಧೀನದಲ್ಲಿ ವಾಯುವು ಇದ್ದಾನೋ ಆ ವಿಷ್ಣುವು ತುರ್ವತನು, ತಥಾಚ) ವಾಯು ದೇವರೂ ಕೂಡ ಯಾವ ಶ್ರೀ ವಿಷ್ಣುವಿನ ಅಧೀನದಲ್ಲಿ ವಾಯುವು ಇದ್ದಾನೋ ಆ ವಿಷ್ಣುವು ತುರ್ವತನು, ತಥಾಚ) ವಾಯು ದೇವರೂ ಕೂಡ ಯಾವ ಶ್ರೀ ವಿಷ್ಣುವಿನ ಅಧೀನದಲ್ಲಿಯೇ ಇರುವವರೋ, ಅಂತಹ ಶ್ರೀ ವಿಷ್ಣುವೂ ಕೂಡ (ರಾಜನು ಮಾತ್ರವಲ್ಲ) ತುರ್ವತನೆಂದು ಹೆಸರುಳ್ಳವನು. ಯಾವ ಯಾವ ವಸ್ತುವು ಇದೆಯೋ ಆ ಎಲ್ಲಾ ವಸ್ತುಗಳಿಗಿಂತಲೂ ಉತ್ಕೃಷ್ಟನಾಗಿರುವುದರಿಂದ ಶ್ರೀ ವಿಷ್ಣುವು ದುಃ ಎನಿಸುತ್ತಾನೆ. ಅಸುರಾದಿಗಳನ್ನು ಕುರಿತು ಕ್ರೂರನೂ ಕ್ರೀಡಾದಿ ಗುಣ ವಿಶಿಷ್ಟನೂ ಆದುದರಿಂದ ಶ್ರೀ ಹರಿಯು ಉಗ್ರದೇವನನೆನಿಸುತ್ತಾನೆ. (2) (ಈಗ ವಾಕ್ಯಾರ್ಥವನ್ನು ಹೇಳುತ್ತಾರೆ) ತುರ್ವಶ ಮೊದಲಾದ ನಾಮಗಳುಳ್ಳ ಶ್ರೀ ವಿಷ್ಣುವನ್ನು ಆ ವಿಷ್ಣುವಿನ ಪ್ರಸಾದದಿಂದಲೇ ಕರೆಯುತ್ತೇವೆ. (೪) (ಆನೆಯದೇವಸಃ ಇತ್ಯಾದಿಗಳಿಂದ ಉತ್ತರಾರ್ಧವನ್ನು ವ್ಯಾಖ್ಯಾನ ಮಾಡುತ್ತಾರೆ) ಆ ಅಗ್ನಿಯೇ, ನವವಾಸ್ತ್ವ, ಬೃಹದ್ರಥ, ತುರ್ವೀತಿ, ಎಂಬೀ ನವವಾಸ್ತ್ವಾದಿರಾಜರಿಗೆ ದಸ್ಯುಗಳ ವಿನಿಗ್ರಹವಿಷಯದಲ್ಲಿ ಜಲವನ್ನು ಹೊಂದಿಸಿಕೊಟ್ಟನು. (ಅಂದರೆ ದಸ್ಯುಗಳ ಸಂಹಾರಕ್ಕೆ ಉಪಯುಕ್ತವಾದ ಜಲವುಳ್ಳವರನ್ನಾಗಿ ಮಾಡಿದನು. ||೧೮||

**ಋ || (೪೪೦) ನಿ ತ್ವಾಮಗ್ನೇ ಮನುರ್ದಧೇ ಜ್ಯೋತಿರ್ಜನಾಯ ಶಶ್ವತೇ ।**

**ದೀದೇಥ ಕಣ್ವ ಋತಜಾತ ಉಕ್ಷಿತೋ ಯಂ ನಮಸ್ಯಂತಿ ಕೃಷ್ಟಯಃ ||೧೯||**

ಅ || ಅಗ್ನೇ =ಎಲೋ ಅಗ್ನಿಯೇ, ಮನುಃ = (ಮನುಷ್ಯರು ಮನುವಿನಿಂದ ಹುಟ್ಟಿದವರಾದ ಪ್ರಯುಕ್ತ ಮನು

ಶಬ್ದದಿಂದ ಮನುಷ್ಯರನ್ನು ಇಟ್ಟುಕೊಳ್ಳಬೇಕು) ಮನುಷ್ಯನಾಗಿ ನಾನು, ಶಶ್ವತೇ ಶಾಶ್ವತನಾದ, ಜನಾಯ =ಮುಕ್ತ ಜನರಿಗೋಸ್ಕರವೂ ಕೂಡ ಜ್ಯೋತಿಃ =ಜ್ಞಾನಪ್ರದನಾದ, ತ್ವಾಂ =ನಿನ್ನನ್ನು (ಹೃದಯದಲ್ಲಿ) ನಿದಧೇ =ಚೆನ್ನಾಗಿ ಧರಿಸಿರುತ್ತೇನೆ. (ನನ್ನ ಧಾರ್ಷ್ಟ್ಯವು ಅತ್ಯಾಶ್ಚರ್ಯವು. ನಾನು ಅತ್ಯಲ್ಪನಾದಾಗ್ಯೂ ನಿನ್ನನ್ನು ನೋಡಲಿಕ್ಕೆ ಆಲೋಚಿಸುತ್ತೇನೆ. ನಿನ್ನ ದಯಾಲುತನವೂ ಆಶ್ಚರ್ಯವು. ಹೇಗೆಂದರೆ) ಯಂ =ಯಾವ ನಿನ್ನನ್ನು, ಕೃಷ್ಟಯಃ =ಸಮಸ್ತ ಪ್ರಜೆಗಳೂ ; ನಮಸ್ಯಂತೆ =ನಮಸ್ಕರಿಸುತ್ತಾರೋ, (ಯಾವ ನೀನು) ಋತಜಾತಃ = (ಋತಮುಂಛ ಶಿಲೇ ತೋಯೇ ದೀಪ್ತೇ ಸತ್ಯೇಽಭಿಪೂಜಿತೇ ಎಂಬ ಕೋಶದಿಂದ) ಅರ್ಥದೋಷವಿಲ್ಲದಿರುವ ವೇದ ವಾಕ್ಯ ದೆಶೆಯಿಂದ ಅಭಿವ್ಯಕ್ತನಾದವನೋ, ಪ್ರಸಿದ್ಧ ಅಗ್ನಿಪಕ್ಷದಲ್ಲಿ) ಋತಂ ಸತ್ಯಂ ಪರಬ್ರಹ್ಮ ಎಂಬ ಶ್ರುತಿಯಿಂದ) ಪರಬ್ರಹ್ಮನಿಂದ ಹುಟ್ಟಿದವನೋ, ಉಕ್ಷಿತಃ = ಉಕ್ಷಸೇಚನೇ ಸಮಸ್ತ ತನ್ನ ಗುಣಗಳಿಂದ ಸಂಬದ್ಧನೋ (ಕೂಡಿದವನೋ) (ಇಂತಹ ಗುಣಗಳುಳ್ಳ ನೀನು) ಕಣ್ವೇ = ಕಣ್ವನಾದ ನನ್ನಲ್ಲಿ, ದೀದೇಥ (ದೀಪೀದೀಪ್ತೌ, ಅಥವಾ ದ್ಯುತಿ ಎಂದರ್ಥವುಳ್ಳ ದಿವು ಧಾತುವು. ಅಥವಾ ದೀಧೀಙ್‌ದೀಪ್ತಿ ದೇವನಯೋಃ) ಸರ್ವದಾ ಪ್ರಕಾಶಿಸಿ ಕೊಂಡಿರುತ್ತಿ. ||೧೯||

**ಭಾ ||** (೧) ಮನುಷ್ಯಸ್ಸನ್ನಹಂ ತ್ವಾಂ ತು ಜ್ಯೋತಿರ್ಮುಕ್ತಜನಾಯ ಚ। ನಿದಧೇ ಹೃದಿ (೨) ಸತ್ತ್ವಂಚ ದೀಪ್ಯಸೇ ಮಯಿ ಸರ್ವದಾ ॥ ಬ್ರಹ್ಮಜೋಽಗ್ನಿಋತಾದ್ವೇದವಾ ಚೋಽಭಿವ್ಯಜ್ಯತೇ ಹರಿಃ ॥ ಉಕ್ಷಿತಃ ಸ್ವಗುಣೈಃ ಸರ್ವೈರ್ಯುಕ್ತೋ ||೧೯||

ಅ || ಮನುಷ್ಯನಾಗಿ ನಾನು ಮುಕ್ತ ಜನರಿಗೋಸ್ಕರವೂ ಕೂಡ ಜ್ಞಾನದಾಯಕನಾದ ನಿನ್ನಾದರೂ ಹೃದಯದಲ್ಲಿ ಧರಿಸುವೆನು. ಅಲ್ಪನಾದಾಗ್ಯೂ ನಾನು ಅತಿ ಮಹತ್ತಾದ ನಿನ್ನನ್ನು ನೋಡಲು ಚಿಂತಿಸುತ್ತೇನೆ ಎನ್ನುವುದು (ಆಶ್ಚರ್ಯವು ನನ್ನ ಧಾರ್ಷ್ಟ್ಯವು (೨) ಅಗ್ನಿಯಾದರೆ ಬ್ರಹ್ಮನಿಂದ ಹುಟ್ಟಿದವನು. ಶ್ರೀ ಹರಿಯು ವೇದವಾಕ್ಯಗಳಿಂದ ಅಭಿವ್ಯಕ್ತನಾಗುತ್ತಾನೆ. ಉಕ್ಷಿತಃ =ಸಮಸ್ತ ತನ್ನ ಗುಣಗಳಿಂದಲೂ ಕೂಡಿದವನು. ಇಂತಹ ಗುಣಗಳುಳ್ಳ ನೀನು ಕಣ್ವನಾದ ನನ್ನಲ್ಲಿ ಸರ್ವಧಾ ತೋರುತ್ತಿ. ಪ್ರಕಾಶಿಸಿಕೊಂಡಿರುತ್ತಿ. ||೧೯||

**ಋ ||** (೪೪೧) ತ್ವೇಷಾಸೋ ಅಗ್ನೇರಮವಂತೋ ಅರ್ಚಯೋ ಭೀಮಾಸೋ ನ ಪ್ರತೀತಯೇ ।
ರಕ್ಷಸ್ವಿನಃ ಸದಮಿದ್ಯಾತುಮಾವತೋ ವಿಶ್ವಂ ಸಮತ್ರಿಣಂ ದಹ ||೨೦||೧೧||೩೬||

ಅ || ಅಗ್ನೇಃ =ಹಿಂದೆ ಹೇಳಿದ ಗುಣಗಳುಳ್ಳ ಶ್ರೀ ಹರಿಯ, ತ್ವೇಷಾಸ (ತ್ವಿಷದೀಪ್ತೌ ಆದಾಗ್ಯೂ ಅರ್ಚಯಃ ಎಂದು ಪ್ರತ್ಯೇಕ ಹೇಳಿದ ಪ್ರಯುಕ್ತ ಇಲ್ಲಿ ಶಕ್ತಿಗಳನ್ನು ಇಟ್ಟುಕೊಳ್ಳಬೇಕು) ತ್ವೇಷಾಃ ಎಂದು ಹೇಳಲ್ಪಟ್ಟ ಶಕ್ತಿಗಳೂ, ಅರ್ಚಯಃ =ರಶ್ಮಿಗಳೂ, ಆಮವಂತಃ = (ಮಾಙ್‌ಮಾನೇ ಮಾ ಶಬ್ದವು ಜ್ಞಾನ ವಾಚಕವು. ಅಥವಾ ಮಾ=ಮರ್ಯಾದೆಯು. ವಿಷಯತಾ ಸಂಬಂಧ ರೂಪವಾದ ಅರ್ಥದಲ್ಲಿ ಮತುಬ್ ಪ್ರತ್ಯಯವು. ತಥಾಚ ಅಮೇಯಗಳೇ. ಜ್ಞಾನ ವಿಷಯಗಳಾಗದೇನೇ ಇದ್ದವುಗಳು, ಅಥವಾ ಇಯತ್ತಾ ಇಲ್ಲದಿದ್ದವುಗಳು ಭೀಮಾಸಃ=ಭಯಂಕರಗಳೇ ಆಗಿವೆ. (ಹೇಗೆಂದರೆ) ಸದಮಿತ್=ಎಲ್ಲಾ ಸ್ಥಾನಗಳಲ್ಲಿ (ಸಭೆಗಳಲ್ಲಿ) ಯಾತುಮಾವತಃ =ಯಾತೋರ್ಮಾಯಾತುಮಾ. ಯಾತುಮಾ ಅಸ್ಯಾಸ್ತೀತಿ ಯಾತುಮಾವಾನ್

ತಸ್ಯ) ಯಾತನೆಯನ್ನನುಭವಿಸತಕ್ಕ ರಕ್ಷಸ್ವಿನಃ = (ರಕ್ಷಾಂಸಿ ಅಸ್ಯ ಸಂತಿ ಎಂಬ ವ್ಯುತ್ಪತ್ತಿಯಿಂದ) ರಾಕ್ಷಸರ ಪಕ್ಷವುಳ್ಳ ಪುರುಷನ, ಪ್ರತೀತಯೇ = (ಪ್ರತೀತ್ಯುಪ ಸೃಷ್ಟಾತ್ ಇಣ್‌ಗತೌ) ಅಭಿಮುಖವಾಗಿ ಹೋಗುವುದಕ್ಕಾಗಿಯೂ, ನ = ಶಕ್ಯಗಳಲ್ಲ (ಇಂತಹ ನೀನು, ವಿಶ್ವಂ=ಎಲ್ಲಾ, ಅತ್ರಿಣಂ = ಅಸುರರನ್ನು ಸಂದಹ = (ದಹ ಭಸ್ಮೀಕರಣೇ) ಸಂಹರಿಸು. ॥೨೦॥೧೧॥೩೬॥

ಭಾ ॥ (೧) ಮೇಯಾಶ್ಚ ಶಕ್ತಯಃ। ತ್ವೇಷಾ ಇತ್ಯುದಿತಾಸ್ತಸ್ಯ ಹರೇರಶ್ಮಯ ಏವಚ। ಭೀಮಾ (೨) ನಪ್ರತಿಗಂತುಂ ಚ ಶಕ್ಯಾ ರಾಕ್ಷಸ ಪಕ್ಷಿಣಃ ॥ (೩) ಯಾತವೋ ಜಂಗಮಾ ಸ್ತೇಷಾಂ ಹಿಂಸನಾವಾಂಸ್ತು ರಾಕ್ಷಸಃ ॥ ಯಾತುಮಾವಾನಿತಿ ಪ್ರೋಕ್ತೋ (೪) ಯಾತನಾನುಭವಾತ್ಕ್ವಚಿತ್। (೫) ಯಾತುರಿತ್ಯೇವಚ ಪ್ರೋಕ್ತಃ (೬) ಸಂತಂ ಪ್ರತ್ಯನು ಕೂಲತಃ। ಸ್ಥಿತಾಸ್ತಾಃ ಶಕ್ತಯೋ ವಿಷ್ಣೋಃ ॥೨೦॥೧೧॥೪॥

ಅ ॥ (೧) ಹಿಂದೆ ಹೇಳಿದ ಗುಣಗಳುಳ್ಳ ಶ್ರೀ ಹರಿಯ ಶೇಷಗಳೆಂದು ಹೇಳಲ್ಪಟ್ಟ ಶಕ್ತಿಗಳೂ, ರಶ್ಮಿಗಳೂ ಕೂಡ ಅಮೇಯಗಳೇ ಆಗಿವೆ. (೨) ಅವುಗಳು ರಾಕ್ಷಸರ ಪಕ್ಷವುಳ್ಳ ಪುರುಷನ ಇದಿರು ಹೋಗಲಿಕ್ಕೂ ಶಕ್ಯಗಳಲ್ಲ. (ಎಲ್ಲಾ ಅಸುರರನ್ನೂ ಸಂಹರಿಸು) (೩) ರಾಕ್ಷಸರ ಪಕ್ಷವುಳ್ಳ ಪುರುಷನು ಯಾತುಮಾವಾನ್ ಎಂಬ ಯಾವ ಕಾರಣದಿಂದ ಹೇಳಲ್ಪಡುತ್ತಾನೆ ಎಂದರೆ) ಯಾಂತಿ ಗಚ್ಛಂತಿ ಎಂಬವುತ್ಪತ್ತಿಯಿಂದ ಜಂಗಮ ಪ್ರಾಣಿಗಳು ಯಾತು ಶಬ್ದ ವಾಚ್ಯಗಳು. ಆ ಜಂಗಮ ಪ್ರಾಣಿಗಳ ಹಿಂಸೆಯು ಯಾತುಮಾ ಎನಿಸುತ್ತದೆ. (ಮಾಜ್ ಹಿಂಸಾಯಾಂ ಮಾನಂ ಜಾನಂ ಲಯಶ್ಚೈವ ಮರ್ಯಾದಾಪಿ ಕಥ್ಯತೇ ಎಂದು ಕೋಶವು ಯಾನ ಕಾರಣದಿಂದ ರಾಕ್ಷಸನು ಜಂಗಮ ಪ್ರಾಣಿಗಳ ಹಿಂಸೆಯುಳ್ಳವನೋ ಆದ ಕಾರಣ ರಕ್ಷಸ್ವಿಯು ಯಾತುಮಾವಾನ್ ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. ತಥಾಚ ಯಾತೂನಾಂ ಹಿಂಸಾ ಯೈಸ್ತಾನಿ ಯಾತುಮಾನಿ, ಯಾತುಮಾನಿ ಅಸ್ಯ ಸಂತೀತಿ ಯಾತುಮಾವಾನ್ ಎಂದು ವಿಗ್ರಹವು) (೪) ಯಾತನೆಯನ್ನು ಅನುಭವಿಸುವ ಪ್ರಯುಕ್ತವೂ ರಕ್ಷಸ್ವಿಯು ಯಾತುಮಾವಾನ್ ಎಂದು ಹೇಳಿಸಿ ಕೊಳ್ಳಲ್ಪಡುತ್ತಾನೆ. ಯಾತೋಃ ಯಾತನೆಯ (ನರಕಾದ್ಯನರ್ಥಗಳ) ಮಾ =ಅನುಭವವು ಯೇಷಾಂ ತಾನಿ ಯಾತುಮಾನಿ =ರಾಕ್ಷಸರು, ಯಾತುಮಾನಿ ಅಸ್ಯಸಂತೀತಿ ಯಾತುಮಾವಾನ್ ಎಂದು) (೫) (ಪ್ರಸಂಗ ಸಂಗತಿಯಿಂದ ನಾವೂ ಹೀಗೆಯೇ ಮಾಡಬೇಕೆಂದು ಶಿಷ್ಯರಿಗೆ ತಿಳಿಸುವುದಕ್ಕಾಗಿ ಹೇಳುತ್ತಾರೆ) ಕೆಲವು ಕಡೆ ಯಾತುಃ ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ ಉಙೂಕ ಯಾತುಂ ಶುಶುರೂಕಯಾತುಂ ಇತ್ಯಾದಿ ಋಕ್ಕಿನಲ್ಲಿಯೂ ಯಾತು ಶಬ್ದ ಪ್ರವೃತ್ತಿ ನಿಮಿತ್ತವು ಯಾತನೆಯೇ ನರಕಾದ್ಯವರ್ಥವೆ) (ಹೇಗೆಂದರೆ) ಯಾತ್ಯತೇ =ಖಿದ್ಯತೇ ಎಂಬ ಕರ್ಮವ್ಯುತ್ಪತ್ತಿಯಿಂದ ದುಃಖಕ್ಕೆ ಆಸ್ಪದನಾದ ರಾಕ್ಷಸನು ಯಾತುಃ ಎನಿಸುತ್ತಾನೆ. (೬) (ರಕ್ಷಸ್ವಿನೋ ನ ಪ್ರತೀಯತೇ ಎಂಬಲ್ಲಿ ಪ್ರತೀಯತೇ ಎನ್ನುವುದಕ್ಕೆ ರಕ್ಷಸ್ವಿನಃ ಎಂಬ ವಿಶೇಷಣವು ಏತಕ್ಕೆಂದರೆ) ಶ್ರೀ ವಿಷ್ಣುವಿನ ಆ ಶಕ್ತಿಗಳು ರಶ್ಮಿಗಳೂ ಕೂಡ ಯೋಗ್ಯ ಪುರುಷರಿಗೆ ಅನುಕೂಲಗಳಾಗಿಯೇ ಇರುತ್ತದೆ. (ಅಭಿಮುಖವಾಗಿ ಹೋಗಲಿಕ್ಕೆ ಶಕ್ಯಗಳೇ ಆಗಿವೆ. ಪ್ರಹ್ಲಾದಾದಿಗಳಿಗೆ ಹೇಗೋ ಹಾಗೆಯೇ ಆದ ಕಾರಣ ರಕ್ಷಸ್ವಿನಃ ಎಂಬ ವಿಶೇಷಣಟು ಸಾರ್ಥಕವೇ ಆಗಿದೆ. ॥೨೦॥೧೧॥೪॥

ಅ ॥ ೧೫ ಋಕ್ಕುಗಳು, ೩ ವರ್ಗಗಳು, ಮರುದ್ದೇವಶಾಕವು. ಗಾಯತ್ರೀ ಛಂದಸ್ಸವು ೩೭ನೇ ಸೂಕ್ತವು. ಅದರಲ್ಲಿ ೧-೩-೫ ಈ ಋಕ್ಕುಗಳು ಪ್ರಧಾನ ಮರುದ್ವಿಷಯಕಗಳು. ಬೇರೆ ಋಕ್ಕುಗಳು ಪ್ರಧಾನ ವಾಯು ಮತ್ತು ಐವತ್ತು ಮರುದ್ವಿಷಯಕಗಳು.

ಋ ॥ (೪೪೨) ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇ ಶುಭಂ । ಕಣ್ವಾ ಅಭಿ ಪ್ರಗಾಯತ ॥೧॥

ಅ ॥ ಕಣ್ವಾಃ =ನನ್ನವರಾದ ಕಣ್ವರೇ, ಕ್ರೀಳಂ=ಕ್ರೀಡಿಸುತ್ತಿರುವ ಶರ್ಧ =ಸುಖಪರಿಪೂರ್ಣನಾದ, ಅಥವಾ ಪೂರ್ಣ ಬಲವುಳ್ಳ ಅನರ್ವಾಣಂ =ಇಂದ್ರಿಯಾಣಿ ಹಯಾನಾಹುಃ ಎಂಬ ಶ್ರುತಿಯಿಂದ ಇಂದ್ರಿಯಾಭಿಮಾನಿ ದೇವತೆಗಳು ಇಲ್ಲದಿರುವವನು, ರಥೇ ಶುಭಂ =ಶರೀರಂ ರಥಮೇವಚ ಎಂಬ ಪ್ರಮಾಣದಿಂದ ಪ್ರಾಣಿಗಳ ದೇಹದಲ್ಲಿ ವಿಶೇಷತಃ ಶೋಭಿಸಿಕೊಂಡಿರುವವನು, ನಃ =ನಿಮಗೆ ಸ್ವಾಮಿಯಾದ, ಮಾರುತಂ ಚ ಕ್ರೀಡೆಯೇ ಸ್ವಭಾವ ಇತ್ಯಾದಿ ಗುಣಗಳಿಂದ ಕ್ರೀಡಾದಿಶಬ್ದವಾಚ್ಯನಾದ ವಿಷ್ಣುವನ್ನೂ ಕೂಡ, ಅಭಿಪ್ರಗಾಯತ =ಸ್ತುತಿ

ಭಾ ॥ (1) ಕ್ರೀಡಾಶೀಲಂಚ ಮಾರುತಂ ॥ ಶರ್ಧ ಸುಖಬಲಾಢ್ಯಂ ವ್ಯಾಹ್ಯನರ್ವಾಣಮ ನಿಂದ್ರಿಯಂ ॥ ನ ವಾಯೋರಿಂದ್ರಿಯಾಣಾಂ ಹಿ ದೇವಾಃ ಸಂತ್ಯಭಿಮಾನಿನಃ ॥ ಅತೋಽನಿಂದ್ರಿಯತಾ ತಸ್ಯ ರಥೇ ದೇಹೇ ಶುಭಶ್ಚ ಸಃ ॥ ಕಣ್ವಾಸ್ತಂ ಗಾಯತಾ ಭೀಕ್ಷ್ಣಂ ವಿಷ್ಣುಂ ವಾ ತಾದೃಶೈರ್ಗುಣೈಃ ॥೧॥

ಅ ॥ (1) ಕ್ರೀಡ=ಕ್ರೀಡಾಸ್ವಭಾವವುಳ್ಳವನು. (ಯದ್ಯಪಿ ಪಚಾದ್ಯಚ್. ಇಗುಪಧಜ್ಞಾಪ್ರೀಕಿರಃ ಕಃ, ಎಂಬ ಈ ಪ್ರತ್ಯಯವಾಗಲೀ, ಕ್ರೀಡಾಕರ್ತನು ಎಂಬ ಅಥದಲ್ಲಿ ಮಾತ್ರ ವಿಹಿತವಾಗಿದೆ. ಆದಾಗ್ಯೂ ಜಗದ್ರಕ್ಷಣಾದಿರೂಪವಾದ ಕ್ರೀಡೆಯಿಂದ ಈ ಶ್ರೀ ಪರಮಾತ್ಮನಿಗೆ ಯಾವುದೊಂದು ಪ್ರಯೋಜನವೂ ಇಲ್ಲ ಎಂದು ತಿಳಿಸುವುದಕ್ಕಾಗಿಯೇ (ಕ್ರೀಡಾ ಶೀಲಂ ಎಂದದ್ದು) ಕ್ರೀಡಾಶೀಲತ್ವಾದಿಗುಣಗಳಿಂದ ಕ್ರೀಡಾದಿ ಶಬ್ದವಾಚ್ಯನಾದವನು. ಶರ್ಧ=ತೇನ = ಸುಖದಿಂದ ಋದ್ಧಃ =ಸಮೃದ್ಧನಾದವನು, ಎಂಬ ಅವಯವಾರ್ಥವಿವಕ್ಷೆಯಿಂದ ಸುಖದಿಂದ ಪೂರ್ಣನಾದವನು ಅಥವಾ ಬಲಾಢ್ಯನು ಎಂದರ್ಥವು. ಅನರ್ವಾಣಂ =ನ ವಿದ್ಯಂತೇ ಆರ್ವಂತಃ ಹಯಾಃ ಯಸ್ಯ ಎಂಬ ವ್ಯುತ್ಪತ್ತಿಯಿಂದ ಕುದುರೆಗಳು ಇಲ್ಲದವನು ಎಂದು ಹೇಳುವುದರಿಂದ, ಅನಿಂದ್ರಿಯಂ =ಇಂದ್ರಿಯಗಳಿಲ್ಲದವನು ಎಂಬ ವ್ಯಾಖ್ಯಾನವು ಹೇಗೆಂದರೆ - ಇಂದ್ರಿಯಾಣಿ ಹಯಾನಾಹುಃ ಎಂದು ಶ್ರುತಿಯಲ್ಲಿ ಇಂದ್ರಿಯಗಳಿಗೆ ಹಯಸಾಮ್ಯವನ್ನು ಹೇಳಿದುದರಿಂದ ಇಂದ್ರಿಯಾಭಿಮಾನಿ ದೇವತೆಗಳು ಇಲ್ಲದವನು ಎಂದರ್ಥವು. ಶ್ರೀ ವಿಷ್ಣುವಿಗೆ ಪ್ರಾಕೃತ ಶರೀರವು ಇಲ್ಲದಿರುವುದರಿಂದ ಇಂದ್ರಿಯಗಳಿಲ್ಲವೆನ್ನುವುದು ಯುಕ್ತವು. ಶ್ರೀ ವಾಯುವಿಗೆ ಹೇಗೆಂದರೆ) ಶ್ರೀ ವಾಯುವಿಗೆ ಇಂದ್ರಿಯಾಭಿಮಾನಿಗಳಾದ ದೇವತೆಗಳು ನಿಯಾಮಕರಾಗಿ ಇರುವುದಿಲ್ಲ. ಆದ ಕಾರಣ ವಾಯು ದೇವರಿಗೆ ಅನಿಂದ್ರಿಯತ್ವವು ಯುಕ್ತವಾಗುತ್ತದೆ. ಯಾವ ಪ್ರಸಿದ್ಧನಾದ ಶ್ರೀ ಹರಿಯು ರಥೇ = ಪ್ರಾಣಿಗಳ ದೇಹದಲ್ಲಿ ಶೋಭೆಯುಳ್ಳವನೋ ಅಂತಹ ಕ್ರೀಡಾಶೀಲತ್ವಾದಿಗುಣಗಳಿಂದ ಕ್ರೀಡಾದಿಶಬ್ದವಾಚ್ಯಗಳಾದ ಶ್ರೀ ವಿಷ್ಣುವನ್ನೂ ನಿತ್ಯದಲ್ಲಿಯೂ ನಮ್ಮವರಾದ ಕಣ್ವರೇ ಸ್ತುತಿಸಿರಿ. ॥೧॥

ಋ ॥ (೪೪೩) ಯೇ ಪೃಷತೀ ಭಿಋ ಷ್ಟಿಭಿಃ ಸಾಕಂ ವಾತೀಭಿರಂಜಿಭಿಃ । ಅಜಾಯಂತ ಸ್ವಭಾನವಃ ॥ ॥೨॥

ಅ ॥ ಯೇ = ಯಾವ ಮಾರುತಗಳು, ಸ್ವಭಾನವಃ =ಸ್ವಾಭಾವಿಕವಾಗಿಯೇ ಇರುವ ತೇಜಸ್ಸುಗಳುಳ್ಳವುಗಳೋ, ವೃಷತೀಭಿಃ = ವಾಹನಗಳಿಂದ ಋಷ್ಟಿಭಿಃ ವಾಶೀಭಿಃ ಅಂಜಭಿಶ್ಚ =ಋಷ್ಟಿ, ವಾಶೀ, ಅಂಜಿ ಎಂಬ ಆಯುಧ ವಿಶೇಷಗಳಿಂದ

ಸಾಕು =ಕೂಡಿಕೊಂಡು, ಅಜಾಯಂತ =ಹುಟ್ಟಿದರೋ, (ಜನ್ಮವನ್ನು ಆರಂಭಿಸಿಯೇ ಆಯುಧಾದಿಗಳಿಂದ ಕೂಡಿದವರಾಗಿರುತ್ತಾರೋ) (ವಿಷ್ಣುಪಕ್ಷದಲ್ಲಿ ಆದರೂ) ಸ್ವಭಾನವಃ =ಸ್ವವಿಷಯಕವಾದ ಜ್ಞಾನ (ಪ್ರಕಾಶ)ವುಳ್ಳ ಯೇ =ಯಾವ ಪೃಷತ್ಯಾದಿನಾಮಕ ವಾಹನ ಮತ್ತೂ ಆಯುಧ ವಿಶೇಷಗಳಿಂದ, ಕೂಡಿ ಹುಟ್ಟತಕ್ಕ ಮರುತಗಳಲ್ಲಿ ಅಭಿವ್ಯಕ್ತಗಳಾಗುವ ಭಗವದ್ರೂಪ ವಿಶೇಷಗಳೂ ಕೂಪ, ಪೃಷತ್ಯಾದಿ ವಾಹನ ಆಯುಧ ವಿಶೇಷಗಳಿಂದ ಕೂಡಿಯೇ, ಅಜಾಯಂತ =ಅಭಿವ್ಯಕ್ತಗಳಾದವು. ॥೨॥

ಭಾ ॥ (1) ಪೃಷತ್ಯೋ ವಾಹನಾನ್ಯೇಷಾಮನ್ಯದಾಯುಧಮುಚ್ಯತೇ ॥ (2) ಸ್ವಪ್ರಕಾಶೋಽಥವಾ ವಿಷ್ಣುಸ್ತಲ್ಲಿಂಗೈರ್ವ್ಯಜ್ಯತೇ ಸಹ ॥ ತತ್ತದ್ದೇವಗತಸ್ಯಾಪಿ ವಿಷ್ಣೋರ್ಲಿಂಗಂ ಚ ತದ್ಭವೇತ್ ॥೨॥

ಅ ॥ (1) ಈ ಮರುತ್‌ಗಳ ವಾಹನಗಳು ವೃಷತ್‌ಗಳು ಎನಿಸುತ್ತವೆ. ಇತರವಾದುದು ಋಷ್ಟಿವಾಶೀ ಅಂಜ ಎಂಬ ಶಬ್ದಗಳಿಂದ ಹೇಳಲ್ಪಟ್ಟದ್ದು ಆಯುಧ ವಿಶೇಷವು. ಅಂದರೆ -ಋಷ್ಟಿಃ =ಅಸಿ ಖಡ್ಗ ಶಬ್ದ ವಾಚ್ಯ ಆಯುಧವು. ಅಂಜಿಃ =ಅಪ್ರಸಿದ್ಧವಾದ ಆಯುಧವು. (2) (ಶ್ರೀ ವಿಷ್ಣುವಿನಲ್ಲಿ ಇದನ್ನು ಕೂಡಿಸುತ್ತಾರೆ.) ಅಥವಾ ಶ್ರೀ ವಿಷ್ಣುವು ಸ್ವವಿಷಯಕವಾದ ಜ್ಞಾನವುಳ್ಳವನು. ಪೃಷತ್ಯಾದಿ ಲಿಂಗಗಳಿಂದ ಕೂಡಿಕೊಂಡು ಅಭಿವ್ಯಕ್ತನಾಗುತ್ತಾನೆ ಎನ್ನುವುದರಿಂದ ಅಜಾಯಂತ ಎನ್ನುವುದರಿಂದ ಉಕ್ತವಾದ ಜನ್ಮವು ಸಮರ್ಥಿತವಾಯ್ತು. (3) (ಆವಾವ ಲಿಂಗಗಳಿಂದ ಕೂಡಿ ಇದ್ದಾನೆ ಎನ್ನುವುದು ಹೇಗೆ ಕೂಡುತ್ತದೆ ? ಎಂದರೆ) ಆವಾವ ದೇವತೆಗಳಲ್ಲಿರತಕ್ಕ ಶ್ರೀ ವಿಷ್ಣುವಿಗೂ ಕೂಡ ಆ ಲಿಂಗವೇ ಆಗುವುದು. ಅದರೊಂದ್ರಾದಿ ದೇವತೆಗಳಿರತಕ್ಕ ವಜ್ರರತ್ನಾದಿ ಲಿಂಗವು ಶ್ರೀ ವಿಷ್ಣುವಿಗೂ ಇಂದ್ರಾದಿಗಳಿಗೂ ಕೂಡ ಆಗುವುದು.

ಋ ॥ (೪೪೪) ಇಹೇವ ಶೃಣ್ವ ಏಷಾಂ ಕಶಾ ಹಸ್ತೇಷು ಯದ್ವದಾನ್ । ನಿಯಾಮ ಇತ್ರಮೃಂಜತೇ ॥೩॥

ಅ ॥ (ಆ ಮರುತ್‌ಗಳು) ಯತ್ =ಯಾವ ವಾಹನವನ್ನು, ವದಾನ್ = (ವದ ವ್ಯಕ್ತಾಯಾಂ ವಾಚಿ) ಹೇಳುತ್ತಾರೋ, ತ್ =ಅಂತಹುದು, ಇಹೇವ ಶೃಣ್ವೇ = ಈ ಪೃಥಿವಿಯಲ್ಲಿರತಕ್ಕವರಿಂದಲೂ ಕೇಳಲ್ಪಡುವಂತೆ ಇದೆ. ಅಂದರೆ ಅವರಿಂದ ವರ್ಣಗಳಿಗೆ ಅಭಿವ್ಯಕ್ತನಾಗುವಂತೆ ಅವರಿಂದ (ಮೇಘಗಳಿಂದ) (ಮಾಡಲ್ಪಡತಕ್ಕ ಮೇಘನಾದಗಳೂ ಕೇಳಲ್ಪಡುತ್ತವೆ. ) (ಆ ಮರುತ್‌ಗಳು ಮೇಘನಾದಗಳನ್ನು ಹೇಗೆ ಹುಟ್ಟಿಸುತ್ತವೆ ಎಂದರೆ) ಏಷಾಂ = ಈ ಮರುತ್‌ಗಳ, ಹಸ್ತೇಷ = ಕೈಗಳಲ್ಲಿ, ಕಶಾ= ಮೇಘಗಳ್ನು ಹೊಡೆಯಲಿಕ್ಕೆ ಉಪಯುಕ್ತಗಳಾದ ಬಾರ್ಕೋಲುಗಳು ಇರುತ್ತವೆ. ಏಷಾಂ = ಈ ಮರುತ್‌ಗಳ, ಯಾಮ್ನಿ = (ಯಾಂತ್ಯಸ್ಮಿನ್ ಅನೇನ ಎಂಬ ವ್ಯುತ್ಪತ್ತಿಯಿಂದ) ಮಾರ್ಗದಲ್ಲಿ, ಚಿತ್ರಂ =ಆಶ್ಚರ್ಯವಾಗಿ, ನಿ ಋಂಜತೇ = (ಋಂಜ ಗತೌ) ಹೊಂದಲ್ಪಡುತ್ತದೆ. (ಮರುತ್‌ಗಳು ಹೋಗುತ್ತಿರಲು ಧೂಳಿ ಮೊದಲಾದ ಸಮಸ್ತ ವಸ್ತುಗಳೂ ಅವುಗಳಿಂದೊಡಗೂಡಿ ಹೋಗುವುದರಿಂದ ಮಾರ್ಗವು ಚಿತ್ರವಾಗಿದೆ. (ಶ್ರೀ ವಿಷ್ಣುವನ್ನು ವಿವಕ್ಷಾ ಮಾಡಿದರೆ) ಚಿತ್ರಂ=ನಾನಾ ವಿಧವಾದ ಸಮಸ್ತ ಜಗತ್ತೂ, ಯಾಮನ್ =ತಂತಮ್ಮ ಮಾರ್ಗದಲ್ಲಿ ನಿ ಋಂಜತೇ =ಮರುತ್‌ಗಳಲ್ಲಿರತಕ್ಕ ರೂಪದಿಂದ ಚೆನ್ನಾಗಿ ಪ್ರೇರೇಪಿಸಲ್ಪಡುತ್ತದೆ.

ಭಾ ॥ (1) ಯತ್ತೇ ವದಂತಿ ವಚನಂ ಮೇಘನಾದಾತ್ಮಕಂ ಹಿ ತತ್ । ಇಹಾಪಿ ಶ್ರೂಯತ ಇವ ವರ್ಣಾವ್ಯಕ್ತೇರಿವೇತಿ ಚ ॥ (2) ಹಸ್ತೇಷ್ವೇಷಾಂ ಕಶಾಃ ಸಂತಿ ಚಿತ್ರಂ ಮಾರ್ಗೇಽಧಿ ಗಮ್ಯತೇ ॥ (3) ರೇಣ್ವಾದಿಸರ್ವವಸ್ತೂನಾಂ

**ಗಮನಾನ್ಮಾರ್ಗಚಿತ್ರತಾ (4) ವಿಷ್ಣೋಸ್ಸರ್ವಂ ಜಗಚ್ಚಿತ್ರಂ ಮಾರ್ಗೇ ಸಂಪ್ರರ್ಯತೇಽಮುನಾ ||೩||**

ಅ || (1) ಆ ಮರುತ್‌ಗಳು ಯಾವುದೊಂದು ವಚನವನ್ನು ಹೇಳುತ್ತಾರೋ, ಆ ವಚನವು ಈ ಪೃಥಿವಿ)ಯಲ್ಲಿರತಕ್ಕವರಿಂದಲೂ ವರ್ಣಗಳಿಗೆ ಅಭಿವ್ಯಕ್ತಿಯಾಗಿರುವುದರಿಂದ ಕೇಳಲ್ಪಡುವಂತಿದೆ. ಏಕೆಂದರೆ ಆ ವಚನವು ಮೇಘಗಳ ಧ್ವನಿರೂಪವಾದುದು. (ಅಂದರೆ ಆ ಮರುತ್‌ಗಳಿಂದ ಮಾಡಲ್ಪಡತಕ್ಕ ಮೇಘ ಧ್ವನಿಗಳು ಕೇಳಲ್ಪಡುತ್ತವೆ.) (2) (ಆ ಮರುತ್‌ಗಳು ಆ ಮೇಘ ಧ್ವನಿಗಳನ್ನು ಹೇಗೆ ಹುಟ್ಟಿಸುತ್ತವೆ ಎಂದರೆ) ಆ ಮರುತ್‌ಗಳ ಕೈಗಳಲ್ಲಿ ಕಶಗಳು (ಅಂದರೆ ಅಶ್ವಾದಿಗಳನ್ನು ಹೊಡೆಯುವುದಕ್ಕಾಗಿ ಮಾಡಲ್ಪಟ್ಟ ಆಕಾರ ವಿಶೇಷ ವಿಶೇಷ್ಟಗಳಾದ ರಜ್ಜುಗಳು) ಇವೆ. ಈ ಮರುತ್‌ಗಳ ಮಾರ್ಗದಲ್ಲಿ ಅತ್ಯಾಶ್ಚರ್ಯವು ಹೊಂದಲ್ಪಡುತ್ತದೆ. (ಋಜಿಭೃಜೀ ಭರ್ಜನೇ ಎಂದು ಭರ್ಜನಾರ್ಥದಲ್ಲಿ ಪಠಿತವಾದ ಋಂಜ ಧಾತುವಿಗೆ ಹೊಂದಲ್ಪಡುತ್ತದೆ ಎಂಬ ವ್ಯಾಖ್ಯಾನವು ಹೇಗೆ ಕೊಡುವುದೆಂದರೆ ಅನೇಕಾರ್ಥಾಹಿ ಧಾತವಃ ಎಂದು ಇದ್ದ ಪ್ರಯುಕ್ತ ಧಾತುಗಳಿಗೆ ಅನೇಕಾರ್ಥಗಳಿದ್ದ ಪ್ರಯುಕ್ತ ಹೊಂದುತ್ತದೆ. (3) (ಮಾರ್ಗಗಳು ಚಿತ್ರವಾಗುವುದು ಹೇಗೆಂದರೆ) ಮರುತ್‌ಗಳು ಹೋಗುವಾಗ ಮರುತ್‌ಗಳ ಮಾರ್ಗದಲ್ಲಿರತಕ್ಕ ಪರ್ಣಧೂಲಿ ಮೊದಲಾದ ಸಮಸ್ತ ವಸ್ತುಗಳೂ ಅವುಗಳೊಡನೇ ಹೋಗುವುದರಿಂದ ಶುದ್ಧವಾಗುವ ಪ್ರಯುಕ್ತ ಹಿಂದಿನ ಅವಸ್ಥೆಗಿಂತ ಮಾರ್ಗವು ಚಿತ್ರವಾಗುವುದು.) (4) (ಶ್ರೀ ವಿಷ್ಣುವಿನಲ್ಲಿ ಉತ್ತರಾರ್ಧವನ್ನು ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ) ಶ್ರೀ ವಿಷ್ಣುವನ್ನು ವಿವಕ್ಷಾ ಮಾಡಿದರೆ (ಹೀಗೆ ವ್ಯಾಖ್ಯಾನ ಮಾಡಬೇಕು) ನಾನಾ ವಿಧವಾದ ಸಮಸ್ತ ಜಗತ್ತು, ತಮ್ಮದ್ವಾದ ಮೋಕ್ಷ ಮಾರ್ಗದಲ್ಲಿ, ಮರುತ್‌ಗಳಲ್ಲಿ ನಿಯಾಮಕವಾಗಿರುವ ರೂಪದಿಂದ ಚೆನ್ನಾಗಿ ಪ್ರೇರೇಪಿಸಲ್ಪಡುತ್ತದೆ ||೩||

**ಋ || (೪೪೫) ಪ್ರ ವಃ ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ । ದೇವತ್ತಂ ಬ್ರಹ್ಮ ಗಾಯತ ||೪||**

ಅ || ಕಣ್ವಾಃ =ಕಣ್ವರೇ, ವಃ =ನಿಮಗೆ, ಶರ್ಧಾಯ =ಬಲಕ್ಕಾಗಿ, ಬಲವನ್ನು ಕೊಡುವ, ವಾ, ಸುಖವನ್ನು ಕೊಡುವ, ಘೃಷ್ವಯೇ =ಶೋಧಕನಾದ, ಅಥವಾ ಶುದ್ಧನಾದ, ತ್ವೇಷದ್ಯುಮ್ನಾಯ=ಚೆನ್ನಾಗಿ ಪ್ರಕಾಶರೂಪ ಜ್ಞಾನವುಳ್ಳ, ಅಂದರೆ ಪ್ರತಿಬದ್ಧವಾಗದಿರುವ ಜ್ಞಾನವುಳ್ಳ, ಶುಷ್ಮಿಣೇ = ವೀರ್ಯವುಳ್ಳ ಅಥವಾ ಅತಿಬಲವುಳ್ಳ, ಪ್ರಧಾನ ವಾಯುವಿಗೋಸ್ಕರ, ದೇವತ್ತಂ =ದೇವತೆಗಳಲ್ಲಿ ವ್ಯಾಪಿಸಿಕೊಂಡಿರುವ ಬ್ರಹ್ಮ =ಪರಬ್ರಹ್ಮನನ್ನು ಪ್ರಗಾಯತ =ಚೆನ್ನಾಗಿ ಸ್ತುತಿಸಿರಿ. ಅಂದರೆ ಪ್ರಧಾನ ವಾಯುವಿಗೋಸ್ಕರ ಶ್ರೀ ವಿಷ್ಣುವನ್ನು ಸ್ತುತಿಸಿರಿ. ಶ್ರೀ ವಿಷ್ಣುವನ್ನು ಗಾನಮಾಡಿ ಶ್ರೀ ವಾಯುವನ್ನು ಸಂತೋಷಗೊಳಿಸಿರಿ. (ಶ್ರೀ ವಿಷ್ಣುಪಕ್ಷದಲ್ಲಿ ಆದರೂ) ಶರ್ಧಾದಿಪದಗಳಿಂದ ಹೇಳಲ್ಪಟ್ಟ ಶ್ರೀ ವಿಷ್ಣುವಿಗೋಸ್ಕರ, ದೇವತ್ತಂ = ದೇವತೆಗಳು ಅಧ್ಯಯನ ಮಾಡುವುದರಿಂದ ದೇವತೆಗಳಲ್ಲಿ ವ್ಯಾಪ್ತವಾದ, ಬ್ರಹ್ಮ=ವೇದಾಖ್ಯ ಬ್ರಹ್ಮವನ್ನು ಗಾನಮಾಡಿರಿ. ||೪||

**ಭಾ || (1) ಶೋಧಕಾಯ ಪ್ರಧಾನಾಯ ವೋ ಬಲಾಯ ಚ ವಾಯವೇ । ಶುದ್ಧಾಯ ವಾ ಸುಪ್ರಕಾಶಜ್ಞಾನಾಯಾತಿಬಲಾಯ ಚ|| ಗಾಯತ ಬ್ರಹ್ಮದೇವತ್ತಂ ದೇವೇಷು ಶತಮೀಶ್ವರಂ || (2) ಪ್ರೀತಿರ್ವಾಯೋರ್ವಿಷ್ಣುಗಾವಾ (3) ದ್ವೇದಾಖ್ಯಂ ಬ್ರಹ್ಮವಿಷ್ಣವೇ || (4) ದೇವೈರಧೀಯಮಾನತ್ವಾದ್ದೇವತ್ತಂ ಬ್ರಹ್ಮವೈಷ್ಣವಂ|| ||೪||**

ಅ || (೧) ನಿಮಗೆ ಬಲಕ್ಕಾಗಿ, ಬಲವನ್ನು ಕೊಡುವವನು ಅಥವಾ ಸುಖವನ್ನು ಕೊಡುವವನು ಶುದ್ಧಿಯನ್ನು

ಮಾಡುವವನು, ಅಥವಾ ಶುದ್ಧನಾದವನು ಒಳ್ಳೇ ಪ್ರಕಾಶ ಜ್ಞಾನವುಳ್ಳವನು, ಅಂದರೆ -ಪ್ರತಿಬಂಧಕವಿಲ್ಲದ ಜ್ಞಾನವುಳ್ಳವನು, ಅಥವಾ ಅತ್ಯಂತ ಬಲವುಳ್ಳವನು, ಇಂತಹ ಪ್ರಧಾನ ವಾಯುವಿಗೋಸ್ಕರ, (ಮರುತ್ ಸೂಕ್ತವಾದ ಪ್ರಯುಕ್ತ ವಾಯವೇ ಎಂದು ಸಿಗುತ್ತದೆ.) ದೇವತ್ತಂ =ದೇವತೆಗಳಲ್ಲಿ ವ್ಯಾಪ್ತನಾದ, ಸರ್ವಗುಣ ಪರಿಪೂರ್ಣನಾದ ಶ್ರೀ ಪರಬ್ರಹ್ಮನನ್ನು ಚೆನ್ನಾಗಿ ಸ್ತುತಿಸಿರಿ. (೨) (ಪ್ರಧಾನ ವಾಯುವಿಗೋಸ್ಕರ ಶ್ರೀ ವಿಷ್ಣುವನ್ನು ಸ್ತುತಿಸಿರಿ ಎಂಬುದು ಹೇಗೆ ಕೂಡುತ್ತದೆ ? ಎಂದರೆ) ಶ್ರೀ ವಿಷ್ಣುವಿನ ಗಾನದಿಂದ ಶ್ರೀ ವಾಯುವಿಗೆ ಪ್ರೀತಿಯುಂಟಾಗುತ್ತದೆ. ಅಂತೂ ಶ್ರೀ ವಿಷ್ಣುವನ್ನು ಗಾನಮಾಡಿ ಶ್ರೀ ವಾಯುವನ್ನು ಸಂತೋಷಗೊಳಿಸಿರಿ, ಎಂದು ತಾತ್ಪರ್ಯವು. (೩) (ಶ್ರೀ ವಿಷ್ಣುವಿನಲ್ಲಿ ವ್ಯಾಖ್ಯಾನ ಮಾಡುತ್ತಾರೆ) ಶರ್ಧಾದಿ ಪದಗಳಿಂದ ಹೇಳಲ್ಪಟ್ಟ ಶ್ರೀ ವಿಷ್ಣುವಿಗೋಸ್ಕರ, ವೇದವೆಂಬ ಬ್ರಹ್ಮನನ್ನು ಗಾನಮಾಡಿರಿ. (೪) ದೇವತ್ತಂ ಎಂಬ ವಿಶೇಷಣವು, ವೇದಲ್ಲಿ ಹೇಗೆ ಕೊಡುತ್ತದೆ. ಎಂದರೆ) ಶ್ರೀ ವಿಷ್ಣು ವಿಷಯಕವಾದ ವೇದವು ದೇವತೆಗಳಿಂದ ಅಧ್ಯಯನ ಮಾಡಲ್ಪಡುವುದರಿಂದ ದೇವತ್ತಂ ಎನಿಸುತ್ತದೆ. ||೪||

**ಋ || (೪೪೬) ಪ್ರಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಂ | ಜಂಭೇ ರಸಸ್ಯ ವಾವೃಧೇ || ||೫||೧೨||**

ಅ || (ತನ್ನನ್ನು ಕುರಿತೇ ಹೇಳುವುದು) (ಕಣ್ವ =ಎಲೋ ಕಣ್ವ ಋಷಿಯೇ) ಯತ್ = ಯಾವ ಈ ವಾಯುವು, ರಸಸ್ಯ =ಸೋಮನನ್ನು ಜಂಭೇ = (ಜಂಭೋ ದೈತ್ಯಾಂತರೇ ದಂತೇ ಜಂಬೀರೇ ಭಕ್ಷಣೇಽಪಿ ಚ ಎಂಬ ವಿಶ್ವಕೋಶದಿಂದ, ಭಕ್ಷಿಸುವುದಕ್ಕಾಗಿ, ವವೃಧೇ = ಪ್ರಕಟನಾದನೋ, ಯತ್ =ಯಾವಾತನು, ಶರ್ಧ = ಸುಖ ಪರಿಪೂರ್ಣನೋ, ಅಥವಾ ಪರಿಪೂರ್ಣ ಬಲವುಳ್ಳವನೋ, ಅಂತಹ, ಅಘ್ನ್ಯಂ=ಸಂಹರಿಸಿಕೊಳ್ಳಲ್ಪಡುವುದರಿಂದ ಅಘ್ನ್ಯ ಎನಿಸಿಕೊಂಡವನು, ಗೋಷು=ವೇದರೂಪ ವಚನಗಳಲ್ಲಿ ಅಥವಾ, ವೇದಾಭಿಮಾನಿಗಳಾದ ಧೇನುಗಳಲ್ಲಿ, ಕ್ರೀಳಂ =ಕ್ರೀಡಿಸುತ್ತಿರುವನೋ, ಇಂತಹ, ವೃಷಭ ರೂಪಿಯಾದ, ಮಾರುತಂ = ವಾಯುವನ್ನು, ಪ್ರಶಂಸ = ಚೆನ್ನಾಗಿ ಸ್ತುತಿಸು. ಅಥವಾ, ಮಾರುತಂ = ವೇದಾದಿ ಪ್ರಮಾಣಗಳಿಂದ ಸ್ತುತಿಸಲ್ಪಡುವುದರಿಂದ ಮಾರುತವೆನಿಸಿದ ಶ್ರೀ ವಿಷ್ಣುವನ್ನು ಚೆನ್ನಾಗಿ ಸ್ತುತಿಸು ||೫||

**ಭಾ || (೧) ಅಹಂತವ್ಯತ್ವತ ಸ್ತ್ವಘ್ನ್ಯಂ ವಾಯುಂ ವೃಷಭರೂಪಿಣಂ | ಕ್ರೀಡಂತಂ ವೇದರೂಪಾ ಸು ಗೋಷು ತಂ ಸ್ತುಹಿ ಮಾರುತಂ || (೨) ಮಾಭಿರ್ವೇದ್ಯೈಃಸ್ತುತತ್ವೇನ ಮಾರುತೋ ವಿಷ್ಣುರೇವನಾ || (೩) ಭಕ್ಷಣಾರ್ಥಂ ರಸಸ್ಯಾಸೌ ವವೃಧೇ ಮರುತಾಂ ಪಿತಾ || ||೫||೧೨||**

ಅ || (೧) ಸಂಹರಿಸಿಕೊಳ್ಳಲ್ಪಡದಿರುವುದರಿಂದ ಅಘ್ನ್ಯ ಎನಿಸಿಕೊಂಡವನು, ವೇದಾಭಿಮಾನಿಗಳಾದ ಗೋವುಗಳಲ್ಲಿ ಕ್ರೀಡಿಸಿಕೊಂಡಿರುವವನು, (ಗೋವುಗಳಲ್ಲಿ ಕ್ರೀಡಿಸಿಕೊಂಡಿದ್ದಾನೆನ್ನುವುದು ಅನ್ಯಥಾ ಅನುಪಪನ್ನವಾಗಿರುವುದರಿಂದ ವೃಷಭ ರೂಪಿಣಂ ಎಂದು ಹೇಳಿದ್ದು) ಅಂತಹ ವೃಷಭ ರೂಪಿಯಾದ ವಾಯುವನ್ನು ಸ್ತುತಿಸು. (೨) (ಮಾರುತನೆಂದರೆ ವಾಯುವು. ಅಥವಾ ಶ್ರೀ ವಿಷ್ಣುವೇ ಮಾರುತವೆನಿಸುತ್ತಾನೆ. ಹೇಗೆಂದರೆ) ಮಾಭಿಃ =ದೇವತೆಗಳಿಂದ ; ರುತತ್ವೇನ = (ರು ಶಬ್ದೇ) ಸ್ತುತಿಸಲ್ಪಡುವುದರಿಂದ ಮಾರುತಃ =ಶ್ರೀ ವಾಯುವು. ಅಥವಾ ಶ್ರೀ ವಿಷ್ಣುವು (೩) ಅಥವಾ (ಮರುತಾಂ ಅಯಂ ಮಾರುತಃ =ಮರುತ್‌ಗಳಿಗೆ ಸಂಬಂಧಪಟ್ಟವನು, ಪಿತೃ ಪುತ್ರತ್ವ, ಸಂಬಂಧವು ತಥಾಚ) ಈ ಮರುತ್‌ಗಳ ತಂದೆಯಾದ ಮುಖ್ಯ ವಾಯುವು ಸೋಮವನ್ನು ಭಕ್ಷಿಸುವುದಕ್ಕಾಗಿ ಅಭಿವೃದ್ಧನಾದವನು. ||೫||೧೨||

ಋ || (೪೭೭) ಕೋ ವೋ ವರ್ಷಿಷ್ಠ ಆನರೋ ದಿವಶ್ಚ ಗ್ಮಶ್ಚ ಧೂತಯಃ । ಯತ್ಸೀಮಂತಂ ನ ಧೂನುಥ ||೬||

ಅ || ನರಃ = ಎಲೋ ಮರುತ್‌ಗಳೇಷ ವಃ ನಿಮ್ಮ ಮಧ್ಯದಲ್ಲಿ (ಕೋ ವಾಯುರಿತಿ ತ ಬ್ದಿತಃ ಎಂಬ ಪ್ರಮಾಣದಿಂದ) ಪ್ರಧಾನ ವಾಯುವು, ಆ ವರ್ಷಿಷ್ಠಃ =ಚೆನ್ನಾಗಿ ಸರ್ವೋತ್ಕೃಷ್ಟನು. (ಅಂದರೆ ಅತ್ಯಧಿಕ ವಯಸ್ಸಿನಿಂದ ಮುಖ್ಯತಃ ಕೂಡಿದವನು. ಕಾಲದಿಂದಲೂ ಸಮಸ್ತ ವಸ್ತುಗಳಿಂದಲೂ ಗುಣಗಳಿಂದಲೂ ಜ್ಯೇಷ್ಠನೇ. ಇಂತಹ ಪ್ರಭುವು ನಿಮಗೆ ಅಧಿಪತಿಯಾಗುವುದರಿಂದ ನೀವು ಕೂಡ ಶ್ರೇಷ್ಠರೇ ಮತ್ತು ನೀವು) ದಿವಶ್ಚ =ಸ್ವರ್ಗವನ್ನೂ ಗ್ಮಶ್ಚ -ಭೂಮಿಯನ್ನು, ಧೂತಯಃ =ಕಂಪಿಸು (ನಡುಗಿಸು)ವವರೂ ಆಗಿರುವಿರಿ. (ಹೇಗೆಂದರೆ) ಯತ್ =ಯಾವ ಕಾರಣದಿಂದ, (ಈ ಸಮಸ್ತ ಜಗತ್ತನ್ನು) ಅಂತಂನ =ಪ್ರಲಯವನ್ನು ಮಾಡುವುದಕ್ಕೋಸ್ಕರವೋ ಎಂಬಂತೆ, ಸೀಮ್ =ಚೆನ್ನಾಗಿ, ಧೂನುಥ =ನಡುಗಿಸುತ್ತೀರೋ, (ಆದ ಕಾರಣ ಸಮಸ್ತ ಸ್ವರ್ಗ ಭೂಮಿಗಳನ್ನು ನಡುಗಿಸುತ್ತೀರಿ) (ವಿಷ್ಣು ಪಕ್ಷದಲ್ಲಿ ಆದರೂ) ನರಃ =ಮರುತ್‌ಗಳಲ್ಲಿರತಕ್ಕ ವಿಷ್ಣುರೂಪ ವಿಶೇಷಗಳೇ, ವಃ =ನಿಮ್ಮ ಸಕಾಶದಿಂದ, ವರ್ಷಿಷ್ಠಃ = ಉತ್ತಮನು, ಕಃ ಭವೇತ್ = ಯಾವನಾದಾನು (ಯಾವನೂ ಇಲ್ಲವೇ ಇಲ್ಲ.) ನೀನು ಎಂತಹ ಶ್ರೇಷ್ಠನೋ ಅಂತಹ ನಿನಗೆ ಸಮಾನಿಕನಾಗಲೀ, ಯಾವನು ಇದ್ದಾನು ? ಯಾವನೂ ಇಲ್ಲ. ||೬||

ಭಾ || (1) ಅಸಮಂತಾದುತ್ತಮಃ ಕಃ ಪ್ರಧಾನೋ ವಾಯುರೇವ ವಃ || (೨) ವಿಷ್ಣೋ ರಾಕ್ಷೇಪ ಏವ ಸ್ಯಾತ್ಕೋ ನಾಮಾಪ್ತಿ ಪರಸ್ತ್ವಿತಿ || (೩) ತ್ವತ್ಪರ್ಯಂತಂ ಚ ವರ್ಷಿಷ್ಠಃ ಕೋ ಭವೇದಿತಿ ವಾ ಭವೇತ್ || (೪) ಅಧೂತಯೋ ದಿವೋ ಗ್ಮಶ್ಚ ಭೂಮ್ಯಾ ಇತ್ಯನ್ವಯೋ ಭವೇತ್ || (೫) ತಸ್ಮಾದಂತಂ ಪ್ರತೀವೈತಜ್ಜಗ ತ್ಸಂಧೂನುಥಾಖಿಲಂ ||೬||

ಅ || (೧) (ಕಃ ವಃ ವರ್ಷಿಷ್ಠಃ ಆ ಎಂಬ ಆದಿಯ ನಾಲ್ಕು ಪದಗಳನ್ನು ಪ್ರಧಾನ ವಾಯು ವಿಷಯದಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಆ =ಸಮಂ ತಾತ್ =ಸರ್ವರಿಂದಲೂ, ವರ್ಷಿಷ್ಠಃ =ಉತ್ತಮನು. ಕಃ =ಕಃ ಪ್ರಜಾಪ್ರತಿರುದ್ದಿಷ್ಟಃ ಕೋ ವಾಯುರಿತಿ ಶಬ್ದಿನಃ = ಎಂಬ ವರರುಚಿಯ ವಚನದಿಂದ ಪ್ರಧಾನ ವಾಯುವೇ ಎಂದರ್ಥವು. ವಃ =ನಿಮ್ಮ ಮಧ್ಯದಲ್ಲಿ. (೨) ಸರ್ವೋತ್ತಮನಾದ ಶ್ರೀ ವಿಷ್ಣುವಿನಲ್ಲಿ ಇದನ್ನು ಹೇಗೆ ವ್ಯಾಖ್ಯಾನ ಮಾಡುವುದು ಎಂದರೆ) ಶ್ರೀ ವಿಷ್ಣುವನ್ನು ವಿವಕ್ಷಾ ಮಾಡಿದರೆ ಕ್ವಾ ಎಂಬ ಶಬ್ದವು ಆಕ್ಷೇಪವೇ ಆಗುವುದು. (ಅದನ್ನೇ ಸ್ಪಷ್ಟೀಕರಿಸುತ್ತಾರೆ.) ಮರುತ್‌ಗಳಲ್ಲಿರತಕ್ಕ ವಿಷ್ಣುರೂಪ ವಿಶೇಷಗಳೇ ನಿಮ್ಮ ಸಕಾಶದಿಂದ, ಉತ್ತಮನು ಯಾವನಿದ್ದಾನೆ. (ಯಾವನೊಬ್ಬನೂ ಇಲ್ಲವೇ ಇಲ್ಲ, (೩) (ನಿಮಗಿಂತ ಉತ್ತಮನು ಇಲ್ಲವೆಂದು ಮಾತ್ರವಲ್ಲ. ನಿಮಗೆ ಸಮಾನಿಕನೂ ಇಲ್ಲವೇ ಇಲ್ಲವೆನ್ನುತ್ತಾರೆ) ನಿಮ್ಮ ಪರ್ಯಂತ ಶ್ರೇಷ್ಠನು ಯಾವನು ಇರುವನು ? ಅಂದರೆ ನೀನು ಎಂತಹ ಶ್ರೇಷ್ಠನೋ ಅಷ್ಟು ಶ್ರೇಷ್ಠನು ಅಂದರೆ ನಿನಗೆ ಸಮಾನಿಕನು ಯಾವನು ? ಇರುವನು, ಅಂದರೆ ಸಮಾನಿಕನೂ ಇಲ್ಲ, ಉತ್ತಮನು ಸುತಾರಾಂ ಇಲ್ಲವೇ ಇಲ್ಲ ಎಂದೂ ಅರ್ಥ ಆಗುವುದು. (೪) ವಾಯು ಪಕ್ಷದಲ್ಲಿ ಅಜಗೆವರ್ಷಿಷ್ಠ ಶಬ್ದದಿಂದ ಅನ್ವಯವನ್ನು ಮಾಡಿದ್ದಾರೆ. ಶ್ರೀ ವಿಷ್ಣುಪಕ್ಷದಲ್ಲಿ ಹಾಗೆ ಅನ್ವಯ ಮಾಡಲಾಗುವುದಿಲ್ಲ. ಏಕೆಂದರೆ ವಿಷ್ಣು ರೂಪ ವಿಶೇಷಗಳೇ ನಿಮಗಿಂತ ಚೆನ್ನಾಗಿ ಸಮಸ್ತ ಗುಣಾದಿಗಳಿಂದಲೂ ಶ್ರೇಷ್ಠನು. ಯಾವನು ? ಇರುವನು ಎಂದು ಆಕ್ಷೇಪಿಸಿ ವ್ಯಾಖ್ಯಾನ ಮಾಡಿದರೆ ಯತ್ಕಿಂಚಿತ್ ಗುಣಾದಿಗಳಿಂದ ಶ್ರೇಷ್ಠನು ಇರಬಹುದು ಎಂದರ್ಥವು ಬರಬೇಕಾಗುವುದು. ಅಂತಹ ಅರ್ಥವು ಬರಬಾರದೆಂಬ ಉದ್ದಿಶ್ಯ ಆ ಎಂಬುವುದಕ್ಕೆ ಧೂತಯಃ ಎನ್ನುವುದರಿಂದ ಅನ್ವಯವು ಎನ್ನುತ್ತಾರೆ) ಸ್ವರ್ಗವನ್ನೂ ಸ್ಮಶ್ಚ = ಭೂಮಿಯನ್ನು ಕೂಡ, ಆ ಧೂತಯಃ =ಚೆನ್ನಾಗಿ ನಡುಗಿಸಿ ಕೊಂಡಿರುವಿರಿ,

ಎಂದು ಆ ಎನ್ನುವುದಕ್ಕೆ ಧೂತಯಃ ಎನ್ನುವುದರಿಂದ ಅನ್ವಯವು ಆಗುವುದು. (೫) ಉತ್ತರಾರ್ಧವನ್ನು ಶಾಖ್ಯಾನ ಮಾಡುತ್ತಾರೆ.) ಆ ಕಾರಣದಿಂದ ಈ ಸಮಸ್ತ ಜಗತ್ತನ್ನು ನಾಶಮಾಡುವಂತೆ ಚೆನ್ನಾಗಿ ನಡುಗಿಸುತ್ತೀರಿ. ॥೭॥

ಋ (೪೪೮) ನಿ ವೋ ಯಾಮಾಯ ಮಾನುಷೋ ದಧ್ರ ಉಗ್ರಾಯ ಮನ್ಯವೇ । ಜಿಹೀತ ಪರ್ವತೋ ಗಿರಿಃ ॥೭॥

ಅ ॥ (ಎಲೋ ಮರುತ್‌ಗಳೇ) ವಃ =ನಿಮಗೆ ಯಾಮಾಯ = (ಯಾಂತ್ಯಸ್ಮಿನ್ನಿತಿ ಎಂಬ ವ್ಯುತ್ಪತ್ತಿಯಿಂದ) ಮಾರ್ಗಕ್ಕೋಸ್ಕರ, ಉಗ್ರಾಯ ಮನ್ಯವೇ ಚ =ಕ್ರೂರವಾದ ಕೋಪಕ್ಕೋಸ್ಕರವೂ, ಮಾನುಷಃ =ಮನುಷ್ಯರು, ನಿದಧ್ರೇ = ನೀಚರಿಂದ ಧರಿಸಲ್ಪಟ್ಟರು. (ಅಂದರೆ ನೀಚರಾದ ಅಸುರರು ಮರುತ್‌ಗಳಾದ ನಿಮಗೆ ವಿರೋಧಿಗಳಾಗಿರುವುದರಿಂದ ನಿಮ್ಮ ಮಾರ್ಗವನ್ನು ಹೊಂದುವುದಕ್ಕಾಗಿಯೂ ನಿಮಗೆ ಕೋಪವನ್ನು ಹುಟ್ಟಿಸುವುದಕ್ಕಾಗಿಯೂ ಒಬ್ಬ ಮನುಷ್ಯನನ್ನು ಸ್ವೀಕರಿಸಿರುವರು) ನಿಮ್ಮ ಮಾರ್ಗದಲ್ಲಿ ಇರಲಿಕ್ಕೂ ನಿಮ್ಮ ಕೋಪವನ್ನು ತಿರಸ್ಕರಿಸಲಿಕ್ಕೂ ಅತ್ಯಲ್ಪನಾದುದರಿಂದ ಮನುಷ್ಯನು ಸಮರ್ಥನಾಗಲಾರನು.) (ಹೇಗೆಂದರೆ) ಪರ್ವತಃ = (ಪರ್ವಸ್ಯಾದುತ್ಸವೇ ಗ್ರಂಥೌ ಎಂಬ ವಿಶ್ವಕೋಶದಿಂದ) ಬಹುವರ್ಷಗಳಿಂದ ಕೂಡಿದ (ಅಂದರೆ ಅತ್ಯುಚ್ಛವಾದ) ಗಿರಿಃ =ಎಂತಹ ಬೆಟ್ಟವೂ ಕೂಡ, (ನಿಮ್ಮ ಮಾರ್ಗದಲ್ಲಿದ್ದುದಾಗಿ) (ಜಿಹೀತಃ = (ಓಹಾಕ್ ತ್ಯಾಗೇ) ಮೂಲವನ್ನೇ ಬಿಟ್ಟಿದೆ. (ಅಂದರೆ ಉನ್ಮೂಲವಾಯ್ತು. ಮೂಲವೇ ಇಲ್ಲವೆಂದಾಯ್ತು. ॥೭॥

ಭಾ(೧) ನಿಚೈರ್ಧೃತೋ ಮಾನುಷೋ ವೋ ಮಾರ್ಗಾಯೋಗ್ರಾಯ ಮನ್ಯವೇ ॥ (೨) ॥ ನ ಪೂರ್ಯತೇ ಚ ಕೋಪಾಯ ಸ್ವಲ್ಪತ್ವಾನ್ಮಾನುಷಃ ಕ್ವಚಿತ್ ॥ (೩) ಬಹುವರ್ಷಯುತೋಽತ್ಯುಚ್ಚಗಿರಿರ್ಮಾರ್ಗೇ ಹಿ ವೋಽತ್ಯಜತ್ ॥ ಮೂಲಂ ॥೭॥

ಅ ॥ (೧) ಮರುತ್‌ಗಳಾದ ನಿಮ್ಮ ಮಾರ್ಗಕ್ಕೋಸ್ಕರವೂ, ಕ್ರೂರವಾದ ಕೋಪಕ್ಕೋಸ್ಕರವೂ, ಕೂಡ ಮನುಷ್ಯನು, ನೀಚರಾದ ಅಸುರರಿಂದ ಧರಿಸಲ್ಪಟ್ಟನು. (೨) ಅಂದರೆ ನಿಮ್ಮ ಕೋಪವನ್ನು ತಿರಸ್ಕರಿಸುವುದಕ್ಕಾಗಿಯೂ, ನಿಮ್ಮ ಮಾರ್ಗದಲ್ಲಿರಲಿಕ್ಕೂ ಅತ್ಯಲ್ಪವಾದ ಪ್ರಯುಕ್ತ ಎಲ್ಲಿಯೂ ಮನುಷ್ಯನು ಶಕ್ತನಾಗಲಾರನು. (೩) ಬಹು ವರ್ಷ ರೂಪ ಗ್ರಂಥಿಗಳಿಂದ ಕೂಡಿದ ಅಂದರೆ ಬಹು ಎತ್ತರವಾದ ಪರ್ವತವು ನಿಮ್ಮ ಮಾರ್ಗದಲ್ಲಿರತಕ್ಕುದಾಗಿ ಮೂಲವನ್ನೇ ಬಿಟ್ಟು ಬಿಟ್ಟಿದೆ. ಮೂಲವೇ ಇಲ್ಲವೆಂದಾಯ್ತು. ॥೭॥

ಋ ॥ (೪೪೯) ಯೇಷಾಮಜ್ಮೇಷು ಪೃಥಿವೀ ಜುಜುರ್ವಾ ಇವ ವಿಶ್ಪತಿಃ । ಭಿಯಾ ಯಾಮೇಷುರೇಜತೇ ॥೮॥

ಅ ॥ ಯೇಷಾ =ಯಾವ ಮರುತ್‌ಗಳಿಗೆ ಅಜ್ಮೇಷು =ಪೃಥಿವೀ ಸಂಬಂಧಿಗಳಾಗದೆ ಇದ್ದ ಅಂತರಿಕ್ಷಾಶ್ರಿತಗಳಾದ, ಯಾಮೇಷು=ಮಾರ್ಗಗಳು ಇರುತ್ತಿರಲು (ಅಂದರೆ ಆ ಮಾರ್ಗಗಳಿಂದ ಮರುತ್‌ಗಳು ಹೋಗುತ್ತಿರಲು) ಪೃಥಿವೀ = ಭೂದೇವಿಯು ಭಿಯಾ =ಬಹು ಭೀತಿಯಿಂದ, ಜುಜುರ್ವಾನಿವ ವಿಶ್ಪತಿಃ = (ಜ್‌ನಯೋ ಹಾನೌ) ಜೀರ್ಣನಾದ ರಾಜನಂತೆ, ಹೇಗೆ ದುರ್ಬಲನಾದ ರಾಜನು ಪರರಿಂದ ಭಯಪಟ್ಟವನಾಗಿ ನಡುಗುತ್ತಾನೋ, ಹಾಗೆಯೇಷ ರೇಜತೇ = (ರೇಜೃ ದೀಪ್ತೌ, ಅಥವಾ ರೇಜೃ ಭಯ ಕಂಪನಯೋಃ) ನಡುಗುತ್ತದೆ. ॥೮॥

ಭಾ || ಯೇಷಾಂ ತಥಾಽಜ್ಮೇಷು ಮಾರ್ಗೇಷ್ವತಿ ಭಿಯಾ ಧರಾ | ಕಂಪತೇ ಜೀರ್ಣರಾಜೇವ ||೮||

ಅ || ಯಾವ ಮರುತ್‌ಗಳು ಅಂತರಿಕ್ಷಾಶ್ರಿತಗಳಾದ ಮಾರ್ಗಗಳಿಂದ ಹೋಗುತ್ತಿರಲು ಭೂದೇವಿಯು ದುರ್ಬಲ ರಾಜನು ಇತರರಿಗೆ ಹೆದರಿ ಹೇಗೆ ನಡುಗುತ್ತಾನೋ, ಹಾಗೆಯೇ ಹೆದರಿಕೆಯಿಂದ ನಡುಗುತ್ತದೆ. ||೮||

ಋ || (೪೫೦) ಸ್ಥಿರಂ ಹಿ ಜಾನಮೇಷಾಂ ವಯೋ ಮಾತುರ್ನಿರೇತವೇ | ಯತ್ಸೀಮನು ದ್ವಿತಾ ಶವಃ ||೯||

ಅ || (ಎಲೋ ಮರುತ್‌ಗಳೇ) ಏಷಾಂ = ಹಿಂದೆ ಹೇಳಿದ ಗುಣಗಳುಳ್ಳ ನಿಮ್ಮ, ಜಾನಂ = (ಜನೀ ಪ್ರಾದುರ್ಭಾವೇ) ಜನನವು ಸ್ಥಿರಂ ಹಿ =ಸ್ಥಿರವಾಗಿರುವುದರಿಂದ ಉತ್ತಮವಾಗಿದೆ. ಹಿ=ಮರುತ್‌ಗಳು ವಾಯುದೇವರಿಂದ ಭಾರತೀದೇವಿಯಲ್ಲಿ ಹುಟ್ಟಿರುವುದರಿಂದ ವಿಶಿಷ್ಟಮಾತಾಪಿತೃಗಳ ಸಂಬಂಧವಿದ್ದುದರಿಂದ ಉತ್ತಮ ಜನ್ಮವು (ಮತ್ತು ಆ ಮರುತ್‌ಗಳು, ನಿರೇತರೇ = (ನಿರ್ ಪೂರ್ವಾತ್ ಇಣ್ ಗತೌ ಹೊರಡುವುದಕ್ಕಾಗಿ, (ಹುಟ್ಟಿದ ಉತ್ತರ ಕ್ಷಣದಲ್ಲಿಯೇ, ಅಂದರೆ ಸಮಸ್ತ ಲೋಕಗಳನ್ನು ಸಂಚರಿಸುವುದಕ್ಕಾಗಿ)ಮಾತುಃ= ತಾಯಿಯಾದ ಭಾರತೀಯ ಪ್ರಸಾದದಿಂದ, ವಯಃ =ವಯೋ ವಿಶೇಷವಾದ ಯೌವನವನ್ನು (ಹೊಂದಿರುತ್ತಾರೆ) (ಅಂದರೆ ಜನ್ಮಾರಭ್ಯ ಅವರು ತರುಣರೆಂದೇ ಪ್ರಸಿದ್ಧರು) ಯತ್=ಯಾವ ಕಾರಣದಿಂದ, ಏಷಾಂ=ಈ ಮರುತ್‌ಗಳ, ಅನು=ತಾಯಿಯ ಪ್ರಸಾದವನ್ನನುಸರಿಸಿ, (ತಾಯಿಯ ಪ್ರಸಾದದಿಂದಲೇ) ಸೀಮ್=ಚೆನ್ನಾಗಿ, ದ್ವಿತಾ ಶವಃ = ದ್ವಿತ್ವದಿಂದ ಕೂಡಿದ, ಅಂದರೆ ಎರಡು ವಿಧವಾದ ಪ್ರಸಿದ್ಧವಾದ ಪ್ರಜ್ಞಾಬಲವೂ ಬಾಹುಬಲವೂ ಇದೆಯೋ, ತಸ್ಮಾತ್ = ಆದ ಕಾರಣ, ಪ್ರಜ್ಞಾಬಲವು ವ್ಯಾಖ್ಯಾನ ಮಾಡಲಿಕ್ಕೂ ಬಾಹುಬಲವು ದಿಗ್ವಿಜಯಕ್ಕೂ ಹೇತುವೆಂದು ಉಕ್ತವಾಗಿದೆ. ||೯||

ಭಾ || (೧) ಸ್ಥಿರಂ ವೋ ಜನನಂ (೨) ಯತಃ | ಜಾತಾ ವಾಯೋರ್ದಿವಿ (೩) ವಯೋ ಮಾತುಃ ಪ್ರಾಪ್ತಾ ನಿರೇತವೇ | ನಿರ್ಗಂತುಂ ತತ್ಕ್ಷಣೇ ನೈವ ಸರ್ವಲೋಕಾಟನಾಯುಹಿ || ಯೌವನಂ (೪) ತೇ ಯುವಾನೋ ಹಿ ನಿಸರ್ಗಾನ್ಮಾತುರಾಜನೇಃ || (೫) ಮಾತುರೇವ ಪ್ರಸಾದೇವ ಸಮ್ಯಕ್ತದ್ವಿವಿಧಂ ಬಲಂ | ಪ್ರಜ್ಞಾ ಬಾಹು ಬಲಂ ಯಸ್ಮಾತ್ತಸ್ಮಾತ್ ||೯||

ಅ ||೧|| ಹಿಂದೆ ಹೇಳಿದ ಗುಣಗಳುಳ್ಳ ಮರುತ್‌ಗಳಾದ ನಿಮ್ಮ ಜನನವು ಸ್ಥಿರವಾಗಿರುವುದರಿಂದ ಉತ್ತಮವಾಗಿದೆ. (೨) (ಹೇಗೆಂದರೆ) ಯಾವ ಕಾರಣದಿಂದ (ಮರುತ್‌ಗಳು) ಪ್ರಧಾನ ವಾಯುದೇವರ ದೆಶೆಯಿಂದ ಕ್ರೀಡಾದಿ ಗುಣ ವಿಶಿಷ್ಟಳಾದ ಭಾರತಿಯರಲ್ಲಿ ಹುಟ್ಟಿಸುತ್ತಾರೋ, ಆದ ಕಾರಣ ವಿಶಿಷ್ಟ ಮಾತಾಪಿತೃ ಸಂಬಂಧದಿಂದ ಇವರ ಜನನವು ಉತ್ತಮವೇ, ಎಂದು ಶ್ರುತಿಯಲ್ಲಿದ್ದ ಹಿ ಶಬ್ದಾರ್ಥವು (೩) (ಆ ಮರುತ್‌ಗಳು ನಿರೇಶವೇ =ತತ್ಕ್ಷಣದಲ್ಲಿ ಹೊರಡುವುದಕ್ಕಾಗಿ ಅಂದರೆ ಹುಟ್ಟಿದ ಉತ್ತರ ಕ್ಷಣದಲ್ಲಿಯೇ, ಸಮಸ್ತ ಲೋಕಗಳ ಸಂಚಾರಕ್ಕಾಗಿ, ತಾಯಿಯಾದ ಭಾರತಿಯ ಪ್ರಸಾದದಿಂದ ವಯೋವಿಶೇಷವಾದ ತಾರುಣ್ಯವನ್ನು ಹೊಂದಿರುತ್ತಾರೆ. (೪) (ತಾರುಣ್ಯ ಪ್ರಾಪ್ತಿಯು ಸರ್ವಸಾದಾರಣವಾದುದರಿಂದ ಅದನ್ನು ಹೇಳಬೇಕಾಗಿಲ್ಲ ಎಂದರೆ) ಆ ಮರುತ್‌ಗಳು ತಾಯಿಯಾದ ಭಾರತಿಯ ಪ್ರಸಾದದಿಂದ ಸ್ವಾಭಾವಿಕವಾಗಿಯೇ, ಅಂದರೆ ಹುಟ್ಟಿದಂದಿನಿಂದ ತರುಣರೇ ಆಗಿರುತ್ತಾರೆ (೫) ಯಾವ ಕಾರಣದಿಂದ ತಾಯಿಯ ಅನುಗ್ರಹದಿಂದಲೇ ಚೆನ್ನಾಗಿ ಎರಡು ವಿಧವಾದ ಬಲವು ಅಂದರೆ ಪ್ರಜ್ಞಾಬಲವು ಬಾಹುಬಲವೂ ಇದೆಯೋ, ಆದ ಕಾರಣ (ಪ್ರಜ್ಞಾಬಲವು ವ್ಯಾಖ್ಯಾನ

ಮಾಡಲಿಕ್ಕೂ ಬಾಹುಬಲವೂ ದಿಗ್ವಿಜಯಕ್ಕೂ ಹೇತುವು.) ||೯||

ಋ || (೪೫೧) ಉದು ತ್ಯೇ ಸೂನವೋ ಗಿರಃ ಕಾಷ್ಠಾ ಅಜ್ಮೇಷ್ವತ್ನತ । ವಾಶ್ರಾ ಅಭಿಜ್ಞು ಯಾತವೇ ||೧೦||೧೩||

ಅ || ಗಿರಃ =ಭಾರತೀದೇವಿಯ, ಸೂನವಃ = ಪುತ್ರರು, ವಾಶ್ರಾಃ = (ವಾಶೃಶಬ್ದೇ) ವ್ಯಾಖ್ಯಾನ ಮಾಡತಕ್ಕ ಸ್ವಭಾವವುಳ್ಳವರು. ತ್ಯೇ = ಪ್ರಸಿದ್ಧರಾದ ಮರುತ್‌ಗಳು ಅಜ್ಮೇಷು =ಅಮಾರ್ಗಗಳಲ್ಲಿ ಅಂತರಿಕ್ಷಾಶ್ರಿತ ಮಾರ್ಗಗಳಲ್ಲಿ (ಆಕಾಶದಲ್ಲಿ ಸಂಚರಿಸುವವರೇ ಆಗಿ) ಕಾಷ್ಠಾ= ದಿಕ್ಕುಗಳನ್ನು ಉತ್ ಅತ್ನತ = (ಅತಸಾತತ್ಯಗ ಮನೇ) ಹೊಂದಿರುವರು. (ಏಕೆಂದರೆ) ಯಾವ ಕಾರಣದಿಂದ ದಿಕ್ಕುಗಳನ್ನೇ ಹೊಂದಿರುವರೋ, ಆದ ಕಾರಣ ಅಭಿಜ್ಞು = (ಅಭಿಪೂರ್ವಕಾತ್ ಜನೀಪ್ರಾದುರ್ಭಾವೇ) ಉತ್ತಮವಾದ ಜನ್ಮವನ್ನನುಸರಿಸಿ, ಉತ್ತಮ ಜನ್ಮಾನುಸಾರವಾಗಿ ಯಾತವೇ = (ಯಾ ಪ್ರಾಪಣೇ) ಗುಣಗಳನ್ನು ಹೊಂದುವುದಕ್ಕಾಗಿ ಉದತ್ನತ =ಹೊಂದಿದರು. (ಭಾರತೀ ಪುತ್ರರಾದ ಮರುತ್‌ಗಳು ವ್ಯಾಖ್ಯಾನಮಾಡಲಿಕ್ಕೆ ಉಪಯುಕ್ತವಾದ ಸಾಮರ್ಥ್ಯದಿಂದ ಕೂಡಿದವರು. ಅಂತಹವರು ಲೋಕಗಳನ್ನುದ್ಧರಿಸುವುದಕ್ಕಾಗಿ ದಿಗ್ವಿಜಯವನ್ನು ಮಾಡದೆ ಇದ್ದರೆ ಅವರಿಗೆ ಉತ್ತಮ ಜನಪ್ರಾಪ್ತಿಯು ಹೇಗೆ ತಾನೇ ಸಫಲವಾಗುವುದು ? ಮಹಾಗುಣವುಳ್ಳವರು ಹೇಗೆ ತಾನೇ ಆಗುವರು ? ಇಂತಹುದಕ್ಕೆ ಸಾಮರ್ಥ್ಯವಿದೆ ಎಂಬುವುದು ಹಿಂದಿನ ಋಕ್ಕಿನಲ್ಲಿ ಹೇಳಿದೆ.) ||೧೦||೧೩||

ಭಾ || (೧) ದಿಶ ಉದಾಪಿರೇ। ತೇ ಗಿರಃ ಸೂನವೋ ದೇವ್ಯಾ ವಾಶ್ರಾ ವಚನಶೀಲಿನಃ । ಅಭಿಜನ್ಮಾನುಸಾರೇಣ ಗುಣಾನ್ಯಾತುಮುದಾಪಿರೇ ||೧೦||೧೩||

ಋ || (೪೫೨) ತ್ಯಂ ಚಿದ್ಘಾ ದೀರ್ಘಂ ಪೃಥುಂ ಮಿಹೋ ನಪಾತಮಮೃಧ್ರಂ ಪ್ರಚ್ಯಾವಯಂತಿ ಯಾಮಭಿಃ ||೧೧||

ಅ || (ಮರುತಃ = ಮರುತ್‌ಗಳು) ದೀರ್ಘಂ =ಬಹು ಎತ್ತರವಾದ ಪೃಥುಂ =ಬಹು ವಿಸ್ತಾರವಾದ ಅತಿಸ್ಥೂಲವಾದ ಅಡ್ಡವಾಗಿ ವ್ಯಾಪಿಸಿಕೊಂಡಿರುವ ಅಮೃಧ್ರಂ =ಮೃಧು ಉಂದೇ, ಉಂದೀಕ್ಲೇದನೇ) ಒದ್ದೆಯಾಗದಿರುವುದರಿಂದ ಸಹಿಸಲಶಕ್ಯವಾದ ಮಿಹಃ =(ಮಿಹ ಸೇಚನೇ) ಅಭೀಷ್ಟಸೇಚಕನಾದ ಶ್ರೀ ಹರಿಯ ಮಗಳಾದ ಧರಾದೇವಿಯಿಂದ ಹುಟ್ಟಿದ ಪರ್ವತಗಳ ಸಮುದಾಯವನ್ನು ನಪಾತಂ =ನಪ್ತೃಭೂತವಾದ, (ಪೌತ್ರಭೂತವಾದ ತ್ಯಂಚಿತ್ =ಪ್ರಸಿದ್ಧ ಮೇರ್ವಾದಿಗಳನ್ನೂ ಯಾಮಭಿಃ = (ಯಾ ಪ್ರಾಪಣೇ) ಗಮನಗಳಿಂದ, ಪ್ರಚ್ಯಾವಯಂತಿ = ತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡುತ್ತಾರೆ. ಸ್ಥಾನಭ್ರಷ್ಟಗಳನ್ನಾಗಿ ಮಾಡುತ್ತವೆ. ||೧೧||

ಭಾ || (೧) ಪದ್ಭ್ಯಾಂ ಭೂಮಿರಿತಿ ಶ್ರುತ್ಯಾ ಸುತಾ ವಿಷ್ಣೋರ್ವಸುಂಧರಾ । (೨) ತತ್ಸುತ್ವಾತ್ಪರ್ವತಾ ವಿಷ್ಣೋರ್ನಪ್ತಾರಃ (೩) ಸೇಚನಾದ್ಧಿ ಮಿಟ್ || ಹರಿ (೪) ಸ್ತ್ವಮಪಿ ಮೇರ್ವಾದಿಂ ಮರುತಶ್ಚ್ಯಾವಯಂತಿ ಹಿ || ಅಮೃಧ್ರಮಪ್ರಧೃಷ್ಯತ್ವಾತ್ ||

ಅ || (೧) ಪದ್ಭ್ಯಾಂಭೂಮಿರಜಾಯತ =ಪಾದಗಳಿಂದ ಭೂಮಿಯು ಹುಟ್ಟಿತು ಎಂಬ ಶ್ರುತಿಯಿಂದ ಭೂದೇವಿಯು ಶ್ರೀ ವಿಷ್ಣುವಿನ ಪುತ್ರಿಯು, (೨) ಭೂದೇವಿಯಿಂದ ಹುಟ್ಟಿರುವುದರಿಂದ ಪರ್ವತಗಳು ಶ್ರೀವಿಷ್ಣುವಿಗೆ ನಪ್ತೃಗಳ (ಪುತ್ರೀಪುತ್ರಗಳು)

(೩) ಶ್ರೀ ಹರಿಯು ಅಭೀಷ್ಟವನ್ನು ಸೇಚಿಸುವುದರಿಂದ ವಿಟ್ ಎನಿಸುತ್ತಾನೆ.

(೪) ಸಹಿಸಲಶಕ್ಯವಾದುದರಿಂದ ಅಮೃಧ್ರಂ ಎನಿಸಿಕೊಂಡ ಆ ಮೇರುಪರ್ವತ ಮೊದಲಾದುದನ್ನು ಮರುತ್‌ಗಳು ಸ್ಥಾನಭ್ರಷ್ಟರನ್ನಾಗಿ ಮಾಡುತ್ತವೆ. ||೧೧||

ಋ || (೪೫೩) ಮರುತೋ ಯುದ್ಧವೋ ಬಲಂ ಜನಾ ಅಚುಚ್ಯವೀತನ । ಗಿರೀ ರಚುಚ್ಯವೀತನ ||೧೨||

ಅ || ಮರುತಃ =ಎಲೋ ಮರುತ್‌ಗಳೇ ಯತ್ =ಯಾವ ಕಾರಣದಿಂದ, ವಃ = ನಿಮಗೆ, ಬಲಂಹ =ಸಂಪೂರ್ಣ ಬಲವಿದೆಯೋ, (ಆ ಕಾರಣದಿಂದ) (ನೀವು) ಜನಾನ್=ಜನರನ್ನು, ಅಚುಚ್ಯವೀತನ = (ಚ್ಯು ಇಗತೌ) ಗಿರೀಶ್ಚ =ಅಚುಚ್ಯವೀತನ =ಪರ್ವತಗಳನ್ನೂ ಕೂಡ ತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡಿರುವಿರಿ. (ಜನರನ್ನೂ ಪರ್ವತಗಳನ್ನೂ ಕೂಡ ತಂತಮ್ಮ ಸ್ಥಾನಕ್ಕಿಂತ ತಪ್ಪಿಸಲಿಕ್ಕೆ ಶಕ್ತರಾಗಿರುತ್ತೀರಿ. (ಚೆನ್ನಾಗಿ ಶಕ್ತಿಯಿದೆ ಎಂದು ತೋರಿಸುವುದಕ್ಕಾಗಿ ೨ ಸಲ ಕ್ರೀಯೆಯನ್ನು ಹೇಳಿದ್ದು.) ||೧೨||

ಅ || (೧) ಬಲಂ ಯದಪಿ ವೋಽಖಿಲಂ । (೨) ಜನಾಂಶ್ಚ್ಯಾವಯಿತುಂ ಸ್ಥಾನಾಚ್ಛಕ್ತಾಃ ಸಮ್ಯಗ್ಗಿರೀನಪಿ ||೧೨||

ಅ || (೧) ಯಾವ ಕಾರಣದಿಂದ ನಿಮಗೆ ಸಮಸ್ತಬಲವೂ ಇದೆಯೋ, (೨) ಆದಕಾರಣ ನೀವು ಜನರನ್ನೂ ಪರ್ವತಗಳನ್ನೂ ತಂತಮ್ಮ ಸ್ಥಾನಕ್ಕಿಂತ ಚ್ಯುತಗಳನ್ನಾಗಿ ಮಾಡುವಿರಿ.

ವಿ|| (ಪರ್ವತಾದಿಗಳು ತಂತಮ್ಮ ಸ್ಥಾನಗಳಲ್ಲಿಯೇ ಇರುವುದರಿಂದ ತಪ್ಪಿಸುವಿರಿ ಎನ್ನುವುದು ಪ್ರಮಾಣ ವಿರುದ್ಧವೆಂದರೆ ಪರ್ವತಾದಿಗಳನ್ನು ತಮ್ಮ ಸ್ಥಾನಕ್ಕಿಂತ ತಪ್ಪಿಸಲಿಕ್ಕೆ ಶಕ್ತರಾಗುತ್ತೀರಿ ಎಂದು ತಾತ್ಪರ್ಯವು. (2) ಚೆನ್ನಾಗಿ ಅಂತಹ ಸಾಮರ್ಥ್ಯವಿದೆ ಎಂದು ತೋರಿಸುವುದಕ್ಕಾಗಿ ಅಚುಚ್ಯವೀತನ ಎಂದು ೨ ಸಲ ಕ್ರಿಯೆಯನ್ನು ಹೇಳಿದ್ದು ||೧೨||

ಋ || (೪೬೪) ಯುದ್ಧ ಯಾಂತಿ ಮರುತಃ ಸಂ ಹ ಬ್ರುವತೇಽಧ್ವನ್ನಾ । ಶೃಣೋತಿ ಕಶ್ಚಿದೇಷಾಂ || ||೧೩||

ಅ || ಮರುತಃ =ಮರುತ್‌ಗಳು, ಯತ್ =ಯಾವಾಗ, ಯಾಂತಿ = ಹೋಗುತ್ತಾವೋ, (ಆಗ) ಏಷಾಂ =ಈ ಮರುತ್‌ಗಳ ಮಧ್ಯದಲ್ಲಿ, ಕಶ್ಚಿತ್ =ಕೆಲವರು, ಅಧ್ವನ್=ಮಾರ್ಗದಲ್ಲಿ, ಸಮ್‌ಬ್ರುವತೇಹ=ಶಾಸ್ತ್ರವಿಷಯಕ ಸಂವಾದವನ್ನು ಮಾಡುತ್ತಾರೆ. ಪ್ರಸಿದ್ಧ ಕಶ್ಚಿತ್ =ಕೆಲವರು, ಆ =ಚೆನ್ನಾಗಿ, ಶೃಣೋತಿ ಹ=ಕೇಳುತ್ತಿರುತ್ತಾರೆ. (ಸರ್ವದಾ ಶಾಸ್ತ್ರಾಭ್ಯಾಸಗಳಲ್ಲಿಯೇ ಆಸಕ್ತರಾಗಿರುತ್ತಾರೆ.) ||೧೩||

ಭಾ || ಕುರ್ವಂತಿ ಶಾಸ್ತ್ರ ಸಂವಾದಂ ಮಾರ್ಗೇ ಶೃಣ್ವಂತಿ ಕೇಚನ । ತೇಷಾಂ ಮಧ್ಯೇ ಹಿ ಮರುತಾಂ ||೧೩||

ಅ || ಅ ಮರುತ್‌ಗಳ ಮಧ್ಯದಲ್ಲಿ ಕೆಲವರು ಮಾರ್ಗದಲ್ಲಿ ಶಾಸ್ತ್ರ ವಿಷಯಕ ಸಂವಾದವನ್ನು ಮಾಡುತ್ತಿದ್ದಾರೆ. ಕೆಲವರು ಸರ್ವದಾ ಶಾಸ್ತ್ರಾಭ್ಯಾಸಗಳಲ್ಲಿಯೇ ಆಸಕ್ತರಾಗಿರುತ್ತಾರೆ. ||೧೩||

ಋ || (೪೫೫) ಪ್ರಯಾತ ಶೀಭಮಾಶುಭಿಃ ಸಂತಿ ಕಣ್ವೇಷು ವೋ ದುವಃ | ತತ್ರೋಷು ಮಾದಯಾಧ್ವೈ ||೧೪||

ಅ || (ಎಲೋ ಮರುತ್‌ಗಳೇ ನೀವು, ಅಶುಭಿಃ = (ಅಶುರ್ಬ್ರಧ್ನಃ ಎಂದು ಅಶ್ವನಾಮಗಳಲ್ಲಿ ಪಲಿತವಾಗಿದೆ.) ವಾಹನಗಳಿಂದ, ಶೀಭಂ =ಶೀಘ್ರದಲ್ಲಿ, ನಃ =ನಮ್ಮನ್ನು ಕುರಿತು, ಪ್ರಯಾತ =ಬನ್ನಿರಿ (ಬಂದು) ತತ್ರೋ=ಅಲ್ಲಿಯೇ (ನಮ್ಮ ಮನೆಗಳಲ್ಲಿಯೇ) ಸು = ಚೆನ್ನಾಗಿ ಮಾದಯಾಧ್ವೈತ್ =ಮದವನ್ನು ಮಾಡಿರಿ. (ಸುಖಿಗಳಾಗಿರಿ) (ಹೇಗೆಂದರೆ) ಕಣ್ವೇಷು =ಣ್ವ ಗೃಹಗಳಲ್ಲಿ, ವಃ =ನಿಮಗಾಗಿ, ದುವಃ =ದೋಹನಗಳು, ಸಂತಿ ಹಿ = ಇರುತ್ತವೆಯಷ್ಟೆ. ||೧೪||

ಭಾ || (೧) ಶೀಭಂ ಇಪ್ರಂ ಪ್ರಯಾತ ನಃ | (೨) ಮದಂ ಕುರುತ ತತ್ರೈವ ದೋಹಕಾನ್ಯತ್ರ ಸಂತಿ ಹಿ ||೧೪||

ಅ || (೧) ಶೀಭಂ = (ಶೀಘ್ರನಾಸಃ ಶೀಭಂ ಎಂದು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ.) ಶೀಘ್ರವಾಗಿ ನಮ್ಮನ್ನು ಕುರಿತು ಬನ್ನಿರಿ. (೨) ಬಂದು ನಮ್ಮ ಗೃಹಗಳಲ್ಲಿಯೇ ಸುಖಿಗಳಾಗಿ ಆಗಿರುವಿರಿ. ಕಣ್ವಗೃಹಗಳಲ್ಲಿಯೇ ನಿಮಗಾಗಿ (ದುಹ ಪ್ರಪೂರಣೇ) ದೋಹನಗಳು (ಸುಖ ಸಾಧನಗಳು) ಸಮೃದ್ಧಗಳಾಗಿವೆ. ಪ್ರಸಿದ್ಧ ||೧೪||

ಋ || (೪೫೬) ಅಸ್ತಿ ಹಿ ಷ್ಮಾ ಮದಾಯ ವಃ ಸ್ಮಸಿಷ್ಮಾ ವಯಮೇಷಾಂ | ವಿಶ್ವಂ ಚಿದಾಯುರ್ಜೀವಸೇ ||೧೫|| ೧೪||೩೭||

ಅ || (ಎಲೋ ಮರುತ್‌ಗಳೇ) ವಃ = ನಿಮಗೆ, ಮದಾಯ =ಸುಖಕ್ಕಾಗಿ, ಅಸಿ=ನಮ್ಮ ಗೃಹಗಳಲ್ಲಿ ಹವಿಸ್ಸು ಮೊದಲಾದ ಸಾಧನವಿದೆ. ಹಿಸ್ಮ =ಇದು ಸುಪ್ರಸಿದ್ಧವು. ಮತ್ತ, ವಯಂ =ನಾವು, ಏಷಾಂ =ಈ ಮರುತ್‌ಗಳ ಸಂಬಂಧಿಗಳು, ಸ್ಮಸಿ ಸ್ಮ=ಆಗಿರುವೆವು. (ಹೇಗೆಂದರೆ) ನಃ = ನಮಗೆ, (ಮರುತ್‌ಗಳ ಅನುಗ್ರಹದಿಂದ) ಜೀವಸೇ =ಜೀವನಕ್ಕಾಗಿ, ವಿಶ್ವಂ ಚಿತ್ = ಸಂಪೂರ್ಣವಾದ ಆಯುಷ್ಯವೂ, ಆಸ್ತಿ ಹಿ =ಇದೆ (ಆ ಮರುತ್‌ಗಳ ಪ್ರಸಾದದಿಂದ ಆಯುಷ್ಯ ಅನ್ನಾದಿಗಳನ್ನು ಹೊಂದಿರುವ ನಾವು ಮರುತ್‌ಗಳ ಸಂಬಂಧಿಗಳು ಹೇಗೆ ತಾನೇ ಆಗದೆ ಹೋದೇವು ? ಆದ ಕಾರಣ ನಮ್ಮನ್ನು ಕುರಿತು ಬನ್ನಿರಿ. ||೧೫||೧೪||೩೭||

ಭಾ || ಸರ್ವಮಾಯುರ್ಜೀವಸ್ತೇಽಸ್ತಿ ಪ್ರಸಾದಾನ್ಮರುತಾಂ ಹಿ ನಃ ||೧೫||೧೪||೫||

ಅ || (ಇಲ್ಲಿ ಉತ್ತರಾರ್ಧವು ಅಪೂರ್ಣವಾಗಿರುವುದರಿಂದ ಅದನ್ನು ಪ್ರಸಾದಾನ್ಮರುತಾಂಹಿನಃ ಶಿಂದು ಪೂರ್ಣೀಕರಿಸಿಕೊಂಡು ವ್ಯಾಖ್ಯಾನ ಮಾಡುತ್ತಾರೆ.) (ಎಲ್ಲೋ ಮರುತ್‌ಗಳೇ, ನಿಮ್ಮ ಸುಖಕ್ಕಾಗಿ ನಮ್ಮ ಮನೆಗಳಲ್ಲಿ ಹರಿರಾದಿ ಸಾಧನಗಳಿವೆ. ನಾವು ಮರುತ್‌ಗಳ ಸಂಬಂಧಿಗಳಾಗಿರುವೆವು. ಹೇಗೆಂದರೆ) ನಮಗೆ ಮರುತ್‌ಗಳ ಅನುಗ್ರಹದೆಸೆಯಿಂದ ಜೀವನಕ್ಕಾಗಿ ಸಂಪೂರ್ಣವಾದ ಆಯುಷ್ಯವೂ ಇದೆಯಷ್ಟೆ. (ಆದ ಕಾರಣ ಈ ಮರುತ್‌ಗಳ ಅನುಗ್ರಹದಿಂದಲೇ ದೀರ್ಘಾಯುಷ್ಯ ಅನ್ನ ಮೊದಲಾದವುಗಳನ್ನು ನಾವು ಹೊಂದಿರುತ್ತೇವೆ. ಆದ ಕಾರಣ ಮರುತ್‌ಗಳ ಸಂಬಂಧಿಗಳು ನಾವು ಹೇಗೆ ತಾನೆ ಆಗದೆ ಹೋದೆವು. ಆದ ಕಾರಣ ನಮ್ಮನ್ನು ಹೊಂದಿರಿ) ||೧೫||೧೪||೫||

ಅವ || ಕದ್ಧ ಇತ್ಯಾದಿಗಳು ೧೫ ಋಕ್ಕುಗಳುಳ್ಳದ್ದು ೩ ವರ್ಗಗಳು. ಮರುದ್ದೇವತಾಕವು. ಗಾಯತ್ರೀ ಛಂದಸ್ಕವು. ೩೮ನೇ ಸೂಕ್ತವು

ಋ ॥ (೪೫೭) ಕದ್ಧ ನೂನಂ ಕಧಪ್ರಿಯಃ ಪಿತಾ ಪುತ್ರಂ ನ ಹಸ್ತಯೋಃ । ದಧಿಧ್ವೇ ವೃಕ್ತಬರ್ಹಿಷಃ ॥೧॥

ಅ ॥ ಹೇ ವೃಕ್ತ ಬರ್ಹಿಷಃ = (ವೃಚೀ ವರಣೇ) (ವೃಕ್ತಂ ಬರ್ಹಿಯೇಷು ಎಂಬ ವಿಗ್ರಹದಿಂದ) ಯಾವ ವಿಷಯದಲ್ಲಿ ಬರ್ಹಿಸ್ಸು ವಿಸ್ತೃತವಾಗಿದೆಯೋ, ಅಂತಹ ವಿಸ್ತೃತ ಬರ್ಹಿಸ್ಸುಳ್ಳ, ಮರುತ್‌ಗಳಾದ ನೀವು, ಕತ್ =ಯಾವಾಗ, ಹಸ್ತಯೋಃ =ಈ ಶರೀರ ಸಂಬಂಧಿಗಳಾದ ಹಸ್ತಗಳಲ್ಲಿ (ಜನ್ಮಾಂತರಭಾವಿಗಳಾದ ಹಸ್ತಗಳಲ್ಲಿ ಅಲ್ಲಿ ) ನೂನಂ =ನಿಶ್ಚಯವಾಗಿಯೂ, ದಧಿಧ್ವೇ =ಧರಿಸಿರುವಿರಿ, ಹ =ಆಸ್ವಾದನ, ಕಧಪ್ರಿಯಃ =ಸರ್ವದಾ ಪ್ರಿಯನಾದ, ಪಿತಾ =ತಂದೆಯು, ಪುತ್ರಂ ನ =ಪುತ್ರನನ್ನೆಂಬಂತೆ. (ಅಂದರೆ ಮಗನನ್ನು ಪ್ರಿಯನಾದ ತಂದೆಯಂತೆ ಧರಿಸಿರುವಿರಿ) ॥೧॥

ಭಾ ॥ (೧) ಕದಾಽನಯೋರ್ಹಸ್ತಯೋರ್ದೇವಾದದ್ವೇ ಪ್ರಿಯತಾತವತ್ ॥ (೨) ಕದಾಪಿ ಯತ್ಪ್ರಿಯಸ್ತಾತಃ ಕಧಪ್ರಿಯ ಇತೀರಿತಃ ॥ (೩) ಸ್ಪೃತಂ ಬರ್ಹಿರ್ಯದ್ವಿಷಯೇ ತೇ ಪ್ರೋಕ್ತಾ ವೃಕ್ತಬರ್ಹಿಷಃ ॥೧॥

ಅ ॥ ಎಲೋ ಮರುತ್ ದೇವತೆಗಳಿರಾ ಮಗನನ್ನು ಪ್ರಿಯನಾದ ತಂದೆಯಂತೆ ಯಾವಾಗ ಈ ಶರೀರ ಸಂಬಂಧಿಗಳಾದ ಹಸ್ತಗಳಲ್ಲಿ ಧರಿಸುವಿರಿ. (೨) ಸರ್ವದಾ ತಂದೆಯು ಯಾವ ಮಗನಿಗೆ ಪ್ರಿಯನೇ ಆಗಿರುತ್ತಾನೋ, ಅಂತಹ ತಂದೆಯು ಕಧ ಪ್ರಿಯಃ ಎನಿಸುತ್ತಾನೆ. (೩) ಯಾವ ವಿಷಯದಲ್ಲಿ ಬರ್ಹಿಸ್ಸು ವಿಸ್ತೃತವಾಗಿದೆಯೋ, ಅಂತಹವರು ವಿಸ್ತೃತ ಬರ್ಹಿಸ್ಸುಳ್ಳವರು, ಎಂದು ಹೇಳಲ್ಪಟ್ಟಿರುತ್ತಾರೆ ॥೧॥

ಋ ॥ (೪೫೮) ಕ್ವ ನೂನಂ ಕದ್ವೋ ಅರ್ಥಂ ಗಂತಾ ದಿವೋ ನ ಪೃಥಿವ್ಯಾಃ । ಕ್ವ ವೋ ಗಾವೋ ನ ರಣ್ಯಂತಿ ॥೨॥

ಅ ॥ (ಎಲೋ ಮರುತ್‌ಗಳೇ ನೀವು) ನೂನಂ =ಈಗ, ದಿವಃ =ಸ್ವರ್ಗದೇಶೆಯಿಂದಲೂ ಪೃಥಿವ್ಯಾಶ್ಚ = ಪೃಥಿವಿಯ ದೆಶೆಯಿಂದಲೂ, ಕ್ವಗಂತಾ=ಎಲ್ಲಿಗೆ ಹೋಗುವಿರಿ. (ಹೋದರೆ) ವಃ =ನಿಮಗೆ, ಕತ್ ಅರ್ಥಂ=ಏನು ಅರ್ಥವು ? ಏನು ಪ್ರಯೋಜನವು ? (ಎಲ್ಲವೂ ಹೋಗಬೇಡಿರಿ) ಮತ್ತು, ನಃ = ನಿಮ್ಮನ್ನು, ಕ=ಎಲ್ಲಿಗೆ, ರಣ್ಯಂತಿ =ಕರೆಯುತ್ತಾರೆ. (ಹೇಗೆಂದರೆ) ಗಾಮಃ ನ =ಗೋವುಗಳಂತೇ, ಹೇಗೆ ಹಸಿ ಹುಲ್ಲನ್ನು ಇಚ್ಛಿಸುವ ಗೋವುಗಳು ಹಸಿ ಹುಲ್ಲನ್ನು ಕೊಡುವವರನ್ನು ಕರೆಯುತ್ತವೋ ಹಾಗೆಯೇ ಮೋಕ್ಷಾದಿ ಫಲವನ್ನು ಇಚ್ಛಿಸುತ್ತಾ ಸ್ತುತಿಸುವ ಸಾಧಕರು ನಿಮ್ಮನ್ನು ಎಲ್ಲಿಗೆ ಕರೆದೊಯ್ಯುತ್ತಾರೆ ಎಂದದ್ದು ಹೇಗೆ ಎಂದರೆ, ಭಕ್ತರು ನಿಮ್ಮನ್ನು ಕರೆಯುತ್ತಾರೆ ಎಂಬುವುದು ದುರ್ಲಭವು ಎಂದು ಭಾವವು.) ॥೨॥

ಭಾ ॥ (೧) ದಿವಃ ಪೃಥಿವ್ಯಾಶ್ಚೇದಾನೀಂ ಕ್ವ ಗಚ್ಛಥ ಚ ಕಿಂ ಫಲಂ । ನ ಗಚ್ಛಥ ಕ್ವವಾಽಪ್ಯೇತ ಜ್ಞಾತವ್ಯಂ ತತ್ಪ್ರಸಾದತಃ । (೨) ಆ ಹ್ವಯಂತಿ ಕ್ವ ವಾ ಗಾವೋ । ಯಥೈವ ಯವಸಾರ್ಥಿನಃ । ಫಲಾರ್ಥಿನಃ ಸ್ತುವಂತೋ ವಃ ಕ್ವಾಹ್ವಯಂತಿ ತಥೈವ ಚ ॥೨॥

ಅ ॥ (೧) ಎಲೋ ಮರುತ್‌ಗಳೇ ಈಗ ಸ್ವರ್ಗದಿಂದಲೂ, ಭೂಲೋಕದಿಂದಲೂ, ಎಲ್ಲಿಗೆ ಹೋಗುವಿರಿ. ಹೋದರೆ ನಿಮಗೆ ಏನು ಪ್ರಯೋಜನವು ? ಎಲ್ಲಿಗೆ ಹೋಗಬೇಡಿರಿ. ಅವರ ಅನುಗ್ರಹದಿಂದ ಇದನ್ನು ತಿಳಿಯಬೇಕು. (೨) ಹೇಗೆ ಬಾಲತೃಣವನ್ನು ಇಚ್ಛಿಸುವ ಗೋವುಗಳು ಬಾಲತೃಣವನ್ನು ಕೊಡುವವರನ್ನು ಕರೆಯುತ್ತವೋ, ಹಾಗೆಯೇ ಮೋಕ್ಷಾದಿ

ಫಲಗಳನ್ನು ಇಚ್ಛಿಸುವ ಸ್ತುತಿಯಿಂದ ಸಾಧಕರಾದ ಭಕ್ತರು ನಿಮ್ಮನ್ನು ಎಲ್ಲಿಗೆ ಕರೆಯುತ್ತಾರೆ. ॥೨॥

ಋ ॥ (೪೫೯) ಕ್ವ ವಃ ಸುಮ್ನಾ ನವ್ಯಾಂಸಿ ಮರುತಃ ಕ್ವ ಸುವಿತಾ । ಕ್ವೋ೩ ವಿಶ್ವಾನಿ ಸೌಭಗಾ ॥೩॥

ಅ ॥ ಹೇ ಮರುತಃ =ಎಲೋ ಮರುತ್‌ಗಳೇ ವಃ =ನಿಮ್ಮ ನವ್ಯಾಂಸಿ = (ಣು ಸ್ತುತೌ) ಸ್ತುತ್ಯಗಳಾದ, ಸುಮ್ನಾ=(ಸುಮ್ನಂ ಸ್ಯೋನಂ ಎಂದು ಸುಖ ನಾಮಗಳಲ್ಲಿ ಪಠಿತವಾಗಿದೆ) ಸುಖಗಳು, ಕ್ವ=ಹೇಗೆ ಇರುವವುಗಳು. ಯಾವ ಉಪಾಯದಿಂದ ಜ್ಞೇಯಗಳು. ಸುವಿತಾ = (ಸು ಪ್ರಸವೈಶ್ವರ್ಯಯೋಃ) ಒಳ್ಳೇ ಮಂಗಳಕರಗಳಾದ ಚರಿತಗಳು, ಕ್ವ=ಹೇಗೆ ಇರುವವುಗಳು. ಯಾವ ಉಪಾಯದಿಂದ ತಿಳಿಯಲರ್ಹಗಳು. ವಿಶ್ವಾನಿ = ಸಂಪೂರ್ಣಗಳಾದ, ಸೌಭಗಾ =ಸೌಭಾಗ್ಯಗಳು (ಯಾವ ಲಕ್ಷಣವಿದ್ದರೆ ಜನರು ಅಧೀನರು ಆಗುತ್ತಾರೋ ಅದು ಸೌಭಾಗ್ಯವೆನಿಸುತ್ತದೆ. ಅವುಗಳು) ಕ್ವೋ =ಹೇಗೆ ತಾನೇ ಇರುವವುಗಳು. ಯಾವ ಉಪಾಯದಿಂದ ತಿಳಿಯಲರ್ಹಗಳು. ॥೩॥

ಭಾ ॥ (೧) ಸ್ತುತ್ಯಾನಿ ವಃ ಸುಖಾನಿ ಚ ಕಥಂ ಜ್ಞೇಯಾನಿ ನಃ ಸದಾ । ಇತ್ಯಭಿಪ್ರಾಯತಃ ಪ್ರಶ್ನಃ (೨) ಕಸ್ಮಿನ್ನೋ ಜ್ಞಾಪಕಸ್ತ್ವಿತಿ ॥ (೩) ಸುವಿತಾನಿ ಸುಭದ್ರಾಣಿ ಸೌಭಗಂ ಲಕ್ಷಣಂ ಪರಂ ॥೩॥

ಅ ॥ (೧) ನಿಮ್ಮ ಸ್ತುತ್ಯಗಳಾದ ಸುಖಗಳು ಹೇಗೆ ಇರುವವುಗಳು. ಯಾವ ಉಪಾಯದಿಂದ ನಮಗೆ ತಿಳಿಯಲರ್ಹಗಳು ಈ ಅಭಿಪ್ರಾಯದಿಂದ ಪ್ರಶ್ನೆಯು ಸಮರ್ಥಿತವಾಗಿದೆ. (೨) ನಿಮಗೆ ಸುಖ ಮೊದಲಾದ ಧರ್ಮಗಳು ಯಾವ ಆಚಾರ್ಯರು ನಿಮಿತ್ತರಾಗುತ್ತಿರಲು (ತತ್ತ್ವೋಪದೇಶಕರಾಗುತ್ತಿರಲು) ನಮಗೆ ಸ್ವಸ್ವ ರೂಪವನ್ನು ತಿಳಿಸಿಕೊಡುವವು? ಸುಖಾದಿಗಳು ಬಹಳವಿದ್ದ ಪ್ರಯುಕ್ತ ಜ್ಞಾಪಕಃ ಎಂದು ಏಕವಚನವು ಹೇಗೆ ಎಂದರೆ ಭಗವಂತನು ಒಬ್ಬನೇ ಆ ಭಗವದ್ರೂಪಗಳೇ ಆದ ಸುಖ ಚರಿತ್ರೆ ಸೌಭಾಗ್ಯಗಳೂ ಒದೇ ಎಂಬ ವಿವಕ್ಷೆಯಿಂದ ಜ್ಞಾಪಕಃ ಎಂದು ಏಕ ವಚನವು ಯುಕ್ತವೇ) (ಮರುತ್‌ಗಳಲ್ಲಿ ಆದರೂ ಮರುತ್‌ಗಳು ಬಹುಮಂದಿಯಾದುದರಿಂದ ನಿಮ್ಮ ಸುಖಾದಿ ಧರ್ಮಗಳು ಯಾವ ಆಚಾರ್ಯರು ತತ್ತ್ವೋಪದೇಶಕರಾಗುತ್ತಿರಲು ನಮಗೆ ಜ್ಞಾಪಕರಾಗುತ್ತಾರೆ, ಎಂದು ಬಹುವಚನವನ್ನು ತಿಳಿದುಕೊಳ್ಳಬೇಕು.) (೩) (ಸುವಿತಸೌಭಗ ಶಬ್ದಾರ್ಥಗಳನ್ನು ಹೇಳುತ್ತಾರೆ) ಸುವಿತಾಃ= ಒಳ್ಳೇ ಮಂಗಳಕರಗಳು. ಷಣ್ಣವತ್ಯಂಗುಲೋಯಸ್ತು ನ್ಯಗ್ರೋಧ ಪರಿಮಂಡಲಃ ಸಪ್ತಪಾದಶ್ಚತುರ್ಹಸ್ತಃ ಇತ್ಯಾದಿ ಪ್ರಕಾರ ಹೇಳಿದ ೩೨ ಲಕ್ಷಣಗಳಲ್ಲಿ ಸೌಭಾಗ್ಯವೆಂಬುವುದು ಒಂದು ಲಕ್ಷಣವು. ಯಾವುದಿದ್ದರೆ ಜನರು ಅಧೀನರು ಆಗುತ್ತಾರೋ, ಅದು ಸೌಭಾಗ್ಯವೆನ್ನಿಸುತ್ತದೆ. ॥೩॥

ಋ ॥ (೪೬೦) ಯದ್ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ । ಸ್ತೋತಾ ವೋ ಅಮೃತಃ ಸ್ಯಾತ್ ॥೩॥

ಅ ॥ ಹೇ ಪ್ರಶ್ನಿಮಾತರಃ = (ಪ್ರಶ್ನಿರ್ಮಾತಾ ಯೇಷಾಂ ಎಂಬ ವ್ಯುತ್ಪತ್ತಿಯಿಂದ) ಭಾರತಿಯೇ ತಾಯಿಯಾಗಿಉಳ್ಳ ಮರುತ್‌ಗಳೇ, ಅಥವಾ ಪ್ರಶ್ನಯೋಗ್ಯತ್ವಾತ್=ಪ್ರಶ್ನೆಗೆ ಯೋಗ್ಯವಾಗಿರುವುದರಿಂದ ಪ್ರಶ್ನಿಃ =ವೇದವು, ಮಾತಾ = (ಜ್ಞಾತಾ ಯಸ್ಯ ಎಂಬವ್ಯುತ್ಪತ್ತಿಯಿಂದ) ವೇದೈಕಸಮಧಿಗಮ್ಯನಾದ ಶ್ರೀ ಹರಿಯು ಅಥವಾ ವೇದಾರ್ಥಗಳನ್ನು ಚೆನ್ನಾಗಿ ತಿಳಿದಿರುವವನು, ಇಂತಹ ವಿಷ್ಣುರೂಪ ವಿಶೇಷಗಳೇ ಯೂಯಂ =ನೀವು, ಯತ್ =ಯಾವ ಪಕ್ಷದಲ್ಲಿ, ಮರ್ತಾಸಃ = ಮನುಷ್ಯರು, ಸ್ಯಾತನ

= (ಅಸಭುವಿ) ಆಗುತ್ತಿರೋ) ಆದಾಗ್ಯೂ ವಃ = ನಿಮ್ಮನ್ನು, ಸ್ತೋತಾ=ಸ್ತುತಿಸುವವನು, ಅಮೃತಃ =ದೇವನು, ಸ್ಯಾತ್ ಆಗುವನು. (ತಂದರೆ ಮನುಷ್ಯಾವತಾರದಲ್ಲಿಯೂ ನೀವು ಭಕ್ತರಿಗೆ ದೇವತ್ವಾದಿಗಳನ್ನು ಕೊಡಲಿಕ್ಕೆ ಸಮರ್ಥರೇ ಆಗುವಿರಿ. ||೪||

**ಭಾ || (೧) ಪೃಶ್ನಿರ್ವೇದಃ ಪ್ರಶ್ನಯೋಗ್ಯಃ ಪೃಶ್ನಿಮಾತಾ ಹರಿಸ್ಮೃತಃ । ಜ್ಞೇಯಸಸ್ಯಾಪಿ ವಿಜ್ಞಾತಾ (೨) ಮರುತಶ್ಚೇತ್ ಸುತಾ ಗಿರಃ || (೩) ಮಾನುಷಾ ಯದಿ ಯೂಯಂ ವಃ ಸ್ತೋತಾ ದೇವೋ ಭವೇದಪಿ ||೪||**

ಅ || (ಪ್ರಶ್ನಿ ಮಾತೃ ಶಬ್ದವನ್ನು ಶ್ರೀ ಹರಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ.) ಪ್ರಶ್ನಕ್ಕೆ ಯೋಗ್ಯವಾಗಿರುವುದರಿಂದ ಪೃಶ್ನಿಃ =ವೇದವು. ವೇದದಿಂದ ಜ್ಞೇಯನಾದುದರಿಂದ ಪೃಶ್ನಿಮಾತಾ = ಶ್ರೀ ಹರಿಯು, ಅಥವಾ ವೇದವನ್ನು ಚೆನ್ನಾಗಿ ತಿಳಿಯುವವನು ಶ್ರೀ ಹರಿಯು. (೨) ಮರುತ್‌ಗಳು ವಿವಕ್ಷಿತರಾದರೆ ಆಗ ಪ್ರಶ್ನಿಮಾತರಃ ಎನ್ನುವುದಕ್ಕೆ ಭಾರತೀಯ ಮಕ್ಕಳು ಎಂದರ್ಥವು. (ಪ್ರಶ್ನಿರ್ಗೀರ್ಭಾರತೀ ಎಂದು ವಾಙ್‌ನಾಮಗಳಲ್ಲಿ ಪಠಿತವಾಗಿದೆ.) (೩) (ಈಗ ಈ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ) ಎಲೋ ಮರುತ್‌ಗಳೇ ನೀವು ಯಾವ ಪಕ್ಷದಲ್ಲಿ ಮನುಷ್ಯರು ಆಗಿರುವಿರೋ, ಆಗಲೂ ನಿಮ್ಮನ್ನು ಸ್ತುತಿಸುವವನು ದೇವನು ಆಗುವನು. (ಅಂದರೆ ಮನುಷ್ಯಾವತಾರದಲ್ಲಿಯೂ ಭಕ್ತರಿಗೆ ದೇವತ್ವಾದಿಗಳನ್ನು ಕೊಡಲಿಕ್ಕೆ ಸಮರ್ಥರೇ ಆಗಿರುವಿರಿ) ||೪||

**ಋ || (೪೬೧) ಮಾ ವೋ ಮೃಗೋನ ಯವಸೇ ಜರಿತಾ ಭೂದಜೋಷ್ಯಃ । ಪಥಾ ಯಮಸ್ಯ ಗಾದುಪ ||೫||೧೫||**

ಅ|| (ಮರುತ್‌ಗಳೇ) ವಃ =ನಿಮ್ಮನ್ನು, ಜರಿತಾ =ಸ್ತುತಿಸುವವನು, (ಪ್ರಾಯಸ್ಸತಾಂ ನ ಮನಃ ಪಾಪಮಾರ್ಗೇ ಗಚ್ಛೇತ್, ಎಂದು ಹೇಳಿದ ಪ್ರಕಾರ ಕಥಂಚಿತ್ ಪಾಪಮಾಡಿದವನಾದಾಗ್ಯೂ ಈ ಜನ್ಮದಲ್ಲಿ) ಯವಸೇ = ಗೋವುಗಳಿಂದ ಹೊಂದಲು ಯೋಗ್ಯವಾದ ಬಾಲತೃಣದಾನ ಸಮಯದಲ್ಲಿ ಮೃಗೋನ ಜೋಷ್ಯಃ = ವ್ಯಾಘ್ರಾದಿ ಮೃಗಗಳು ಹೇಗೆ ಸೇವಿಸಲು ಅರ್ಹಗಳು ಅಲ್ಲವೋ, ಹಾಗೆಯೇ ಅಜೋಷ್ಯಃ = (ಜುಷೀ ಪ್ರೀತಿಸೇವನಯೋಃ ಸೇವಿಸಲನರ್ಹನು ಮಾಭೂತ್ - ಆಗ ಬಾರದು. ಮಾತನಾಡಿಸಿ ಕೊಳ್ಳಲನರ್ಹನು ಮಾಭೂತ್=ಆಗಬಾರದು (ಇಲ್ಲಿ ಮಾತನಾಡಿಸಿಕೊಳ್ಳಲು ಅನರ್ಹನು ಆಗುವುದಿಲ್ಲವೆಂದು ಇಷ್ಟು ಮಾತ್ರವಲ್ಲ. ಮತ್ತೆ ಪರಲೋಕದಲ್ಲಿ) ಯಮಸ್ಯ ಪಥಾ ಮಾ ಉಪಗಾತ್ =ಯಮಮಾರ್ಗವನ್ನು ಹೊಂದಬಾರದು ||೫||೧೫||

**ಭಾ || (೧) ನ ಸ್ಯಾದಸೇವ್ಯಃ ಸ್ತೋತಾಽತ್ರ ಪಥಾ ಯವಸಗೋಚರೇ + ಗೋಪ್ರಾಪ್ಯೇ ತು ಮೃಗೋ ಸೇವ್ಯೋ (೨) ಯಮಮಾರ್ಗಂ ನ ಚ ವ್ರಜೇತ್ || (೩) ಯಾಜ್ಞಾರೀತಿ ವಿಶೇಷೋಽಯಂ ನಿಂದಾಸ್ತುತ್ಯೇಕದೇಯಯುಕ್ ||೫||೧೫||**

ಅ || (೧) ನಿಮ್ಮನ್ನು ಸ್ತುತಿಸುವವನು ಕಥಂಚಿತ್ ಪಾಪನನ್ನು ಮಾಡಿದವನಾದಾಗ್ಯೂ ಈ ಜನ್ಮದಲ್ಲಿ ಸೇವಿಸಿಕೊಳ್ಳನರ್ಹನು ಆಗಲಾರದು. (ವ್ಯತಿರೇಕ ದೃಷ್ಟಾಂತವೆಂಬ ಅಭಿಪ್ರಾಯದಿಂದ ವ್ಯಾಖ್ಯಾನಮಾಡುತ್ತಾರೆ.) ಹೇಗೆ ಪಂಚ ಮಹಾಯಜ್ಞ ಮಧ್ಯದಲ್ಲಿ ಗೋವುಗಳಿಂದ ಪ್ರಾಪ್ಯವಾದ ಗೋಗ್ರಾಸ ದಾನ ಸಮಯದಲ್ಲಿ ಹಸಿಹುಲ್ಲು ಮೊದಲಾದುದನ್ನು

ಕೊಡುವ ಸಮಯದಲ್ಲಿ ವ್ಯಾಘ್ರ ಮೊದಲಾದ ಮೃಗವು ಸೇವಿಸಲರ್ಹವು ಆಗುವುದಿಲ್ಲವೋ (ಹಾಗೆ ಈ ಸ್ತುತಿಸುವವನು ಪೂಜಾದಿಗಳಲ್ಲಿ ಅಸೇವ್ಯನು ಆಗುವುದೇ ಇಲ್ಲ) (೨) (ಈ ಜನ್ಮದಲ್ಲಿ ಮಾತನಾಡಿಸಿಕೊಳ್ಳಲಿಕ್ಕೆ ಅನರ್ಹನು ಆಗುವುದಿಲ್ಲವೆಂದಿಷ್ಟು ಮಾತ್ರವಲ್ಲ. ಮತ್ತೆ) ಯಮ ಮಾರ್ಗವನ್ನು ಹೊಂದುವುದಿಲ್ಲ. (೩) (ಹಾಗಾದರೆ ಸೇವಿಸಿಕೊಳ್ಳಲು ಯೋಗ್ಯವಾದ ಒಂದು ವಸ್ತುವನ್ನು ದೃಷ್ಟಾಂತ ಹೇಳಬೇಕಿತ್ತು. ವ್ಯತಿರೇಕ ಮುಖದಿಂದ ಅಸೇವ್ಯಗಳಾದ ವ್ಯಾಘ್ರಾದಿಗಳನ್ನು ದೃಷ್ಟಾಂತವಾಗಿ ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ) ಆದ ಕಾರಣ ನಮ್ಮನ್ನು ಸ್ತೋತೃಗಳನ್ನಾಗಿ ಮಾಡಿರಿ, ಎಂದು ಪ್ರಾರ್ಥನೆಯಲ್ಲಿ ತಾತ್ಪರ್ಯವು. ಇದು ಯಾಜ್ಞಾರೀತಿ ವಿಶೇಷವು, ಪರರ ನಿಂದೆಯನ್ನು ವ್ಯಸನಿಯಾಗಿ ಮಾಡುವುದಿಲ್ಲ. ಮತ್ತೆ ಪ್ರಕೃತ ಗೋವಿನ ಸ್ತುತಿಗಾಗಿ, ಹೀಗೆ ಸ್ತುತಿಯು ಪರನಿಂದೆಯ ಏಕದೇಶವು ಅಂದರೆ ವ್ಯಾಘ್ರಾದಿಗಳ ನಿಂದೆಯಿಂದ ಸ್ತುತಿಸುವ ಪುರುಷನನ್ನು ಪ್ರಶಂಸಿದ ಹಾಗೆ ಆಯ್ತು ; (ಆದ ಕಾರಣ ಹೇಳಿದ್ದು ಯುಕ್ತವು) ॥೫೧೫॥

ಋ ॥ (೪೬೨) ಮೋ ಷು ಣಃ ಪರಾಪರಾ ನಿರ್ಋತಿ ದುರ್ಹಣಾ ವಧೀತ್ । ಪದೀಷ್ಟ ತೃಷ್ಣಯಾ ಸಹ ॥೬॥

ಅ ॥ (ಎಲೋ ಮರುತ್‌ಗಳೇ) ನಿಮ್ಮ ಅನುಗ್ರಹದಿಂದ ಮರ್ಹಣಾ =ದುಃಖವನ್ನು ಹೊಂದಿಸಿಕೊಡುವುದು ಸಂಹರಿಸುವುದು ಆದ ಕಾರಣ ದುರ್ಹಣಾ ಎನಿಸಿಕೊಂಡ, ನಿಋತೀ =ನಿರ್ಋತಿಯೆಂದು ಹೆಸರುಳ್ಳ ದೇವತೆಯು, (ಮೃತ್ಯುದೇವತೆಯು) ನಃ =ನಮ್ಮನ್ನು, ಪರಾಪರಾ = ಮುಂದಿನ ಕಾಲದಲ್ಲಿ ಅದಕ್ಕಿಂತ ಮುಂದಿನ ಕಾಲದಲ್ಲಿ ಸು =ಎಲ್ಲಿಯೂ, ಮೋ ವಧೀತ್ =ಸರ್ವಥಾ ಕೊಲ್ಲಲೇಬಾರದು. (ಆ ನಿರ್ಋತಿಯು) ತೃಷ್ಣಯಾ ಸಹ =ಆಶೆಯಿಂದ ಕೂಡಿಕೊಂಡೇ, ಪದೀಷ್ಟ = (ಪದಗತೌ) ಹೋಗಲಿ (ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಲಿ) ॥೬॥

ಭಾ ॥ ಮಾ ವಧೀನ್ನಃ ಕ್ವಚಿನ್ಮೃತ್ಯುಃ ಪರತಃ ಪರತೋಽಪಿ ಚ । ದುರ್ಹಣಾ ದುಃಖದಾ ಹಂತ್ರೀ ಯಾತು ಸಾ ತೃಷ್ಣಯಾ ಸಹ ॥೬॥

ಅ ॥ ದುರ್ಹಣಾ=ದುಃಖವನ್ನು ಕೊಡುವವಳು ಸಂಹರಿಸುವಳು. ಇಂತಹ ಯಾವ ಮೃತ್ಯು ದೇವತೆಯು ಪರಕಾಲದಲ್ಲಿಯೂ ಅದಕ್ಕಿಂತಲೂ ಮೇಲಿನ ಕಾಲದಲ್ಲಿಯೂ ಎಲ್ಲಿಯೂ ನಮ್ಮನ್ನು ಕೊಲ್ಲಬಾರದು. ಆ ಮೃತ್ಯುದೇವತೆಯು ಅಭಿಲಾಷೆಯಿಂದ ಕೂಡಿ ಎಲ್ಲಿಗಾದರೂ ಹೋಗಲಿ ॥೬॥

ಋ ॥ (೪೬೩) ಸತ್ಯಂ ತ್ವೇಷಾ ಅಮವಂತೋ ಧನ್ವ ಞ್ಚಿದಾ ರುದ್ರಿಯಾಸಃ । ಮಿಹಂ ಕೃಣ್ವಂತ್ಯವಾತಾಂ ॥೭॥

ಅ ॥ ತ್ವೇಷಾಃ = (ತ್ವಿಷದೀಪ್ತೌ) ದೀಪ್ತಿ (ಪ್ರಕಾಶ)ವುಳ್ಳ ; ಅಮವಂತಃ = (ಮಾ ಪ್ರಮಾ ಪರಿಚ್ಛೇದಃ ತದ್ವಂತಃ) ಪರಿಚ್ಛೇದ ಇಲ್ಲದಿರುವ, ಅಥವಾ (ನ ವಿದ್ಯತೇ ಮಾ ಯಸ್ಯ ಸಾಮರ್ಥ್ಯಸ್ಯ ತದಮಂ, ತದ್ವಂತಃ ) ಅಪ್ರಮೇಯರಾದ, ಅಪರಿಮಿತ ಸಾಮರ್ಥ್ಯವುಳ್ಳ, ರುದ್ರಿಯಾಸಃ = (ದ್ರುಗತೌ ರುಜಃ ವಿದ್ರಾವಕಃ, ತದ್ವಂತಃ) ಅಪ್ರಮೇಯರಾದ, ಅಪರಿಮಿತ ಸಾಮರ್ಥ್ಯವುಳ್ಳ, ರುದ್ರಿಯಾಸಃ = (ದುಗತೌ ರುಜಶ್ರ್ ವಿದ್ರಾವಕಃ, ರುದ್ರಃ =ರೋಗ ಪರಿಹಾರಕನಾದ ವಾಯುವು ರುದ್ರಸ್ಯ ಪುತ್ರಾಃ =) ವಾಯುವಿನ ಪುತ್ರರಾದ ಮರುತ್‌ಗಳು, ಸತ್ಯಂ =ಯಥಾರ್ಥ ಹೇಗೆ ಆದೀತೋ ಹಾಗೆಯೇ, (ಮಾಯೆಯಿಂದ

ಅಲ್ಲ) ಧನ್ವನ್ ಚಿತ್ =(ಸಮಾನೌ ಮರುಧನ್ವಾರೌ) ಮರು ಪ್ರದೇಶದಲ್ಲಿಯೂ, ಅವಾತಾಂ =ಗಾಳಿಯಿಲ್ಲದ (ಅಚೇತನವಾದ ಗಾಳಿ ಹೊರತೆ) ಮಿಹಂ = (ಮಿಹಸೇಚನೇ ದೃಷ್ಟಿಯನ್ನು, ಆ =ಚೆನ್ನಾಗಿ ಇಚ್ಛೆಯಿಂದಲೇ, ಕೃಣ್ವಂತಿ =ಮಾಡುತ್ತಾರೆ. ||೭||

ಅ || (೧) ರೋಗಗಳನ್ನು ಓಡಿಸುವ (ಪರಿಹರಿಸುವ) ವಾಯುದೇವರ ಮಕ್ಕಳು ರುದ್ರಿಯರೆನಿಸುತ್ತಾರೆ. ಇಂತಹ ಅಪರಿಮಿತ ಸಾಮರ್ಥ್ಯವುಳ್ಳ ಮರುತ್‌ಗಳು ಸತ್ಯ ಹೇಗೆ ಆದೀತೋ ಹಾಗೆ ಮರು ಪ್ರವೇಶದಲ್ಲಿಯೂ ಕೂಡ ಅಚೇತನರಾದ ಗಾಳಿ ಹೊರತು ಕೂಡ (ಗಾಳಿಯಿಲ್ಲದೇನೇ) ಸೇಚನಂ = ದೃಷ್ಟಿಯನ್ನು ಇಚ್ಛೆಯಿಂದಲೇ ಮಾಡುತ್ತಾರೆ. ||೭||

**ಋ || (೪೬೪) ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ । ಯದೇಷಾಂ ವೃಷ್ಟಿರಸರ್ಜಿ ||೮||**

ಅ || ಯತ್ = ಯಾವ ಕಾರಣದಿಂದ, ಏಷಾಂ = ತುರುತ್‌ಗಳ ಸಕಾಶದಿಂದ, ವೃಷ್ಟಿಃ ಮಳೆಯು, ಆ ಸರ್ಜಿ =ಸೃಷ್ಟಿಸಲ್ಪಟ್ಟಿದೋ, (ಯಾವಾಗ ಈ ಮರುತ್‌ಗಳು ಸೃಷ್ಟಿಯನ್ನು ಸೃಷ್ಟಿಸುತ್ತಾರೋ) ಆಗ ವಿದ್ಯುತ್=ಮಿಂಚು, ಮಿಮಾತಿ =ಭೂಮಿಯನ್ನು ಪ್ರಕಾಶಗೊಳಿಸುವುದು, ಹೇಗೆಂದರೆ -ವಾತ್ರೇವ = (ವಾಶ್ರಾ ಶ್ರುತಸ್ತನಾಧೇನುಃ ಎಂಬ ಕೋಶದಿಂದ) ಕರುಗಳಲ್ಲಿ ಪ್ರೀತಿಯುಳ್ಳ ತಾಯಿಯು ಹೇಗೆ ಕರುವನ್ನು ನೋಡುವುದೋ ಹಾಗೆಯೇ ಪ್ರಕಾಶಗೊಳಿಸುವುದು ಮತ್ತು ಮಾತಾ =ತಾಯಿಯಾದ ಗೋವು ವತ್ಸಂ ನ =ಕರುವನ್ನೆಂಬಂತೆ (ಭೂಮಿಯಲ್ಲಿರತಕ್ಕ ವಸ್ತುಗಳನ್ನು) ವಿದ್ಯುತ್ =ಮಿಂಚು ಸಿಷಕ್ತಿ=ಆಲಿಂಗಿಸುತ್ತದೆ. (ಏವಂಚ ಮಿಂಚಿನ ಕಾರ್ಯವಾದ ಮಳೆಯೂ ಕೂಡ ಮರುತ್‌ಗಳಿಂದಲೇ ಆಗುವುದು.)||೮||

**ಭಾ || (೧) ಏಷಾಂ ಸಕಾಶಾದ್ವೃಷ್ಟಿಶ್ಚ ವಿದ್ಯುದ್ಭೂಮಿಂ ಪ್ರಕಾಶಯೇತ್ । (೨) ಗೌರ್ವತ್ಸ ಮಿದ ಭೂಮ್ಯಾಂ ಚ ||೮||**

ಅ || (೧) ಈ ಮರುತ್‌ಗಳ ಸಕಾಶದಿಂದ ದೃಷ್ಟಿಯು ಸೃಷ್ಟಿಸಲ್ಪಟ್ಟಿತು. (ಮರುತ್‌ಗಳು ವೃಷ್ಟಿಯನ್ನು ಸೃಷ್ಟಿಸುತ್ತಾರೆ.) ಆಗ ಮಿಂಚು ಭೂಮಿಯನ್ನು ಪ್ರಕಾಶಗೊಳಿಸುವುದು. (೨) ಗೋವು ಕರುವನ್ನೆಂಬಂತೆ ಭೂಮಿಯಲ್ಲಿರತಕ್ಕ ವಸ್ತುಗಳನ್ನೆಲ್ಲಾ ಮಿಂಚು ಅಲಿಂಗಿಸುತ್ತದೆ. ||೮||

**ಋ || (೪೬೫) ದಿವಾ ಚಿತ್ತಮಃ ಕೃಣ್ವಂತಿ ಪರ್ಜನ್ಯೇನೋದವಾಹೇನ || ಯತ್ಪೃಥಿವೀಂವ್ಯುಂದಂತಿ ||೯||**

ಅ || ಮರುತ್ =ಮರುತ್‌ಗಳು, ಯತ್ =ಯಾವಾಗ, ಪೃಥಿವೀಂ =ಲೋಕವನ್ನುವ್ಯುಂದಂತಿ =ಇಉಂದೀಕ್ಲೇದನೇಕ್ಲಿದೂ ಅರ್ದ್ರಭಾವೇ) ತಾಯಿಯಂತೆ ಸೇಚಿಸುತ್ತಾರೋ, ಹೇಗೆ ತಾಯಿಯಾದ ಗೋವು ಕರುವನ್ನು ಹಾಲಿನಿಂದ ಸೇಚಿಸುತ್ತದೋ (ತೃಪ್ತಿಗೊಳಿಸುತ್ತದೋ) (ಹಾಗೆಯೇ ಭೂಮಿಯನ್ನು ಯಾವಾಗ ವೃಷ್ಟಿಯಿಂದ ಒದ್ದೆ ಮಾಡುತ್ತಾರೋ, ಆಗ ಉದವಾಹೇನ =ಮೇಘ ಮಂಡಲದಿಂದ, ವದಿವಾಚಿತ್ =ಹಗಲೂ ಕೂಡ, ತಮಃ =ಕಗ್ಗತ್ತಲೆಯನ್ನು ಕೃಣ್ವಂತಿ = (ಕೃವಿ ಹಿಂಸಾಕರಣಯೋಃ) ಮಾಡುತ್ತಾರೆ. ||೯||

**ಭಾ || ಲೋಕಂ ಸಿಂಚಂತಿ ಮಾತೃವತ್ ||೯||**

ಅ ॥ ಗೋವು ಕರುವನ್ನು ಹಾಲಿನಿಂದ ತೃಪ್ತಿಗೊಳಿಸುವಂತೆ ಲೋಕವನ್ನು ವೃಷ್ಟಿಯಿಂದ ಮರುತ್‌ಗಳು ತೃಪ್ತಿಗೊಳಿಸುತ್ತಾರೆ. ॥೯॥

**ಋ ॥ (೪೬೬) ಅಧ ಸ್ವನಾನ್ಮರುತಾಂ ವಿಶ್ವಮಾ ಸದ್ಮ ಪಾರ್ಥಿವಂ । ಅರೇಜಂತ ಪ್ರ ಮಾನುಷಾಃ ॥೧೦ ॥೧೬॥**

ಅ ॥ ಅಧ = ಇನ್ನೊಂದು ವಿಷಯವನ್ನೂ ಹೇಳುತ್ತೇವೆ (ಯಾವುದೆಂದರೆ) ಮರುತಾಂ = ವಾಯುಗಳ, ಸ್ವನಾತ್ = ಧ್ವನಿಮಾತ್ರದಿಂದ ಆ = ಸುತ್ತಲೂ ಇರುವ, ವಿಶ್ವಂ = ಎಲ್ಲಾ, ಪಾರ್ಥಿವಂ = ಪೃಥಿವಿಯಲ್ಲಿ ಹುಟ್ಟತಕ್ಕ, ಸದ್ಮ =ಗೃಹಗಳ ಸಮುದಾಯವು, ಗೃಹಾಭಿಮಾನಿಗಳ ಸಮುದಾಯವು, ಮಾನುಷಾಃ =ಅಲ್ಲಿರುವ ಮನುಷ್ಯರೂ ಕೂಡ ಪ್ರ ಅರೇಜಂತ (ದೇಜ್‌ಕಂಪನೇ) ಹೆದರಿದರು. ॥೧೦॥೧೬॥

**ಭಾ ॥ (೧) ಮಾನುಷಾದಿತ್ವಮಸ್ಯಚ್ಚ ಬಿಭೇದೇಷಾಂ ಸ್ವನಾದಪಿ । ಗೃಹಮಾನಿನೋ ಗೃಹಾದ್ಯಂ ವಾ ಚರ್ಚಾಲೈಷಾಂ ಸ್ವನಾದಪಿ ॥೧೦ ॥೧೬॥**

ಅ॥ (೧) ಈ ಮರುತ್‌ಗಳ ಧ್ವನಿ ಮಾತ್ರದಿಂದಲೇ, ಮನುಷ್ಯರೇ ಮೊದಲಾದವರು ಇತರವಾದುದೂ ಕೂಡ ಹೆದರುವವು. (೨) ಈ ಮರುತ್‌ಗಳ ಧ್ವನಿ ಮಾತ್ರದಿಂದಲೇ ಗೃಹಾದ್ಯಭಿಮಾನಿಗಳು ಗೃಹಾದಿಗಳು ಎಲ್ಲವೂ ಹಂದಾಡಿದವು.

ವಿ ॥ (1) ಮಾನುಷಾದಿಕಂ ಎಂದು ಹೇಳದೆ ಮಾನುಷಾದಿತ್ವಂ ಎಂದು ತ್ವಪ್ರತ್ಯಯ ಸಹಿತವಾಗಿ ಹೇಳಿದ್ದು ಜಾತಿ ವ್ಯಕ್ತಿಗಳಿಗೆ ಅಭೇದವು ಎಂದು ತಿಳಿಸುವುದಕ್ಕಾಗಿ (2) ಅಥವಾ ಪರಮೇಶ್ವರ ವಿಷಯಕವಾದ ಸ್ತುತಿರೂಪವಾದ ಧ್ವನಿಯಿಂದ ಕರ್ಮ ಫಲ ರೂಪವಾದುದು ಯಾವುದು ಮನುಷ್ಯತ್ವವಿದೆಯೋ, ಯಾವುದು ಗೃಹಾದಿಗಳಲ್ಲಿ ಅಭಿಮಾನವಿದೆಯೋ, ಅದೆಲ್ಲವೂ ಹೆದರಿದಂತೆಯೇ ಓಡಿತು, ಎಂಬ ಅರ್ಥವನ್ನು ಸೂಚಿಸುವುದಕ್ಕಾಗಿ, ಮಾನುಷಾದಿತ್ವಂ ಎಂದು ಭಾವ ಪ್ರಧಾನ ನಿರ್ದೇಶಕರಾಗಿ ವ್ಯಾಖ್ಯಾನ ಮಾಡಿದ್ದು, (3) ಹಾಗಾದರೆ ಅಚೇತನಗಳಾದ ಗೃಹಗಳಿಗೆ ಭಯವು ಹೇಗೆಂದರೆ. ಸದ್ಮ ಶಬ್ದದಿಂದ ಗೃಹಾಭಿಮಾನಿಗಳನ್ನೂ ಇಟ್ಟುಕೊಳ್ಳಬೇಕು. (4) ಅಥವಾ ಪ್ರಾರೇಜಂತ ಎನ್ನುವುದು ಭಯಾರ್ಥಕವಲ್ಲ. ಮತ್ತೆ ಜ್ವಲನಾರ್ಥಕವು. ತಥಾಚಸದ್ಮ =ಮನೆಯು, ಹೀಗೆ ಅರ್ಥ ಇಟ್ಟುಕೊಂಡರೂ ವಿರೋಧವಿಲ್ಲ. ॥೧೦॥೧೬॥

**ಋ ॥ (೪೬೭) ಮರುತೋ ವೀಳುಪಾಣಿಭಿಶ್ಚಿತ್ರಾ ರೋಧಸ್ವತೀರನು । ಯಾತೇ ಮಖಿದ್ರಯಾಮಭಿಃ ॥೧೧॥**

ಅ ॥ ಮರುತಃ =ಎಲೋ ಮರುತ್‌ಗಳೇ (ನೀವು) ವೀಳು ಪಾಣಿಭಿಃ =ದೃಢಗಳಾದ ತಮ್ಮ ಹಸ್ತಗಳಿಂದಲೂ ಅಖಿದ್ರಯಾಮಭಿಃ ಈಮ್ = (ಖಿದದೈನ್ಯೇ) ಭೇದವಿಲ್ಲದಿರುವ ಪಾದಗಳಿಂದಲೂ, ಚಿತ್ರಾಃ = ವಿಚಿತ್ರಗಳಾದ, ರೋಧಸ್ವತೀ =ನದಿಗಳನ್ನು, ಅನುಸರಿಸಿ ಹೋಗಿರಿ (ಯಾವ ನದಿಗಳ ತೀರಗಳಲ್ಲಿ ನಾವು ತಪಸ್ಸನ್ನು ಮಾಡುತ್ತಿರುತ್ತೇವೋ ಅಂತಹ ನದಿಗಳನ್ನು ಕುರಿತು ಬನ್ನಿರಿ) ॥೧೧॥

**ಭಾ ॥ (೧)ಅಖಿನ್ನೈರ್ಗಮನೈಶ್ಚೈವ ದೃಢಸ್ಥೇಯೈಶ್ಚ ಪಾಣಿಭಿಃ । ಅನು ಯಾತ ನದೀ ಶ್ಚಿತ್ರಾಃ ॥೧೧॥**

ಅ ॥ (ಗಚ್ಛಂತ್ಯೇತೈಃ ಇತಿ ಗಮನಾಃ =ಪಾದಗಳು) ಖೇದವಿಲ್ಲದ ಪಾದಗಳಿಂದಲೂ ದೃಢಗಳೂ ತಮ್ಮದ್ದೂ ಆದ ಹಸ್ತಗಳಿಂದಲೂ ವಿಚಿತ್ರಗಳಾದ ನದಿಗಳನ್ನು ಕುರಿತು ಹೋಗಿರಿ.

ವಿ ॥ ಹಂದಾಡಿಸಿದರೂ ಶ್ರಮವಿಲ್ಲದಿರುವ ಹಸ್ತಗಳನ್ನು ಹಂದಾಡಿಸುತ್ತಿರುತ್ತಾರೆ. ವೇಗವುಳ್ಳ ಗಮನಗಳಿಂದ ಯಾವ ನದೀ ತೀರಗಳಲ್ಲಿ ನಾವು ತಪಸ್ಸನ್ನು ಮಾಡುತ್ತಿರುತ್ತೇವೋ ಅಂತಹ ನದಿಗಳನ್ನು ಕುರಿತು ಹೋಗಿರಿ. (2) ಅಥವಾ ಋಗ್ಭಾಷ್ಯದಲ್ಲಿರತಕ್ಕ ಯಾಮನ್ ಗಮನ ಶಬ್ದಗಳು ಕರಣಾರ್ಥಕಗಳು. ಆದ ಕಾರಣ ನೀವು ಹಸ್ತ ಪಾದಗಳಿಂದ ಕೂಡಿದವರು. ಅಚೇತನ ವಾಯು ರೂಪದಲ್ಲಿ ಎಂದರ್ಥವು. ॥೧೧॥

ಋ ॥ (೪೬೮) ಸ್ಥಿರಾಃ ವಃ ಸಂತು ನೇಮಯೋ ರಥಾ ಅಶ್ವಾಸ ಏಷಾಂ । ಸುಸಂಸ್ಕೃತಾ ಅಭಿ ಶವಃ ॥೧೨॥

ಅ ॥ (ಎಲೋ ಮರುತ್‌ಗಳೇ) ತಃ = ನಿಮಗೆ (ಇಲ್ಲಿಗೆ ಬರಲಿಕ್ಕೆ) ಸ್ಥಿರಾಃ =ದೃಢಗಳಾದ, ಸುಸಂಸ್ಕೃತಾಃ =ಚೆನ್ನಾಗಿ ಸಂಸ್ಕಾರವುಳ್ಳ, ಅಭೀಷವಃ =ತೇಜಸ್ಸುಳ್ಳ, ರಥಾಃ =ರಥಗಳು ಸಂತು =ಇರುತ್ತವೆ, ಏಷಾಂ =ಈ ರಥಗಳಿಗೆ ನೇಮಯಶ್ಚ =ಚಕ್ರಗಳು, ಸ್ಥಿರಾಃ =ದೃಢಗಳಾಗಿ ಸಂತು =ಇರುತ್ತವೆ. ಅಶ್ವಾಸಃ =ಆ ರಥಗಳ ಸಂಬಂಧವುಳ್ಳ ಕುದುರೆಗಳೂ ಕೂಡ ದೃಢಗಳಾಗಿವೆ. (ಅಂತಹ ರಥಗಳಿಂದ ಬನ್ನಿರಿ) ॥೧೨॥

ಭಾ ॥ ಸ್ಥಿರಾಃ ಸಂತಿ ರಥಾದಯಃ ॥೧೨॥

ಅ ॥ ರಥ ಮೊದಲಾದವುಗಳೆಲ್ಲವೂ ದೃಢಗಳಾಗಿಯೇ ಇರುತ್ತವೆ. ॥೧೨॥

ಋ ॥ (೪೬೯) ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ । ಅಗ್ನಿಂ ಮಿತ್ರಂ ನ ದರ್ಶತಂ ॥ ॥೧೩॥

ಅ ॥ (ಎಲೋ ಕಣ್ವಋಷಿಯೇ, ನೀವು) ಬ್ರಹ್ಮಣಃ ಪತಿಂ =ಚತುರ್ಮುಖ ಬ್ರಹ್ಮನಿಗೆ ಸ್ವಾಮಿಯಾದ ತ್ರಿವಿಷ್ಣುವನ್ನೂ, ಭಾರತೀಪತಿಯಾದ ಮುಖ್ಯಪ್ರಾಣನನ್ನೂ ತನಾ = (ತನುವಿಸ್ತಾರೇ ಕರಣೇಚ) ವ್ಯಾಪ್ತವಾದ ಬಹು ವಿಷಯಕವಾದ, ಗಿರಾ=ಮಾತಿನಿಂದ, ಜರಾಯೈ =ಚೆನ್ನಾಗಿ ಸ್ತುತಿರೂಪವಾಗಿ, ಅಗ್ನಿಂನ =ಅಗ್ನಿಯನ್ನೇ ಬಂತೆ, ಮಿತ್ರಂನ =ಸೂರ್ಯನನ್ನೆಂಬಂತೆ, ದರ್ಶತಂ =ಹೇಗೆ ಅಗ್ನಿಸೂರ್ಯರು ಬೇರೆ ಪ್ರಕಾಶದ ಅಪೇಕ್ಷೆಯಿಲ್ಲದೇನೇ ತಮ್ಮ ಮಹಿಮೆಯಿಂದಲೇ ಕಾಣಿಸಿಕೊಳ್ಳಲ್ಪಡುತ್ತಾರೋ ಹಾಗೆಯೇ ತನ್ನಪ್ರಸಾದದಿಂದಲೇ ಕಾಣಲ್ಪಡತಕ್ಕವನನ್ನಾಗಿ ಅಚ್ಛವದ =ಯಥಾಯೋಗ್ಯವಾಗಿ ಹೇಳಿರಿ. ॥೧೩॥

ಭಾ ॥ (೧) ಬ್ರಹ್ಮಣಶ್ಚ ಪತಿಂ ವಿಷ್ಣುಂ ಯಥಾವದ್ವ್ಯಾಪ್ತಯಾ ಗಿರಾ। ಜರಾಯೈ ಸಂಸ್ತುತಿತ್ವೇನ (೨) ತೃತೀಯಾ ಭಾವರೂಪಿಣೇ ॥ (೩) ಸರ್ವಾ ವಿಭಕ್ತಯಶ್ಚೇತ್ಥಂ ಭಾವ ವಾಚಿನ್ಯ ಏವ ಚ॥ ಮಹಾವಾಕ್ಯರಣೇ ಸೂತ್ರಮಿತಿ (೪) ಸಂಸ್ತುತಿರೂಪತಃ (೫ ವಿದ ವಿಷ್ಣುಂ ಸ್ವಪ್ರಕಾಶಮಗ್ನಿವತ್ಸೂರ್ಯವತ್ತಥಾ ॥ (೬) ಅಹ ಚಾತ್ಮಾನ ಮೇವಾತ್ರ ದಾರ್ಢ್ಯೇ ಸ್ವಪ್ರತಿಯೋಗಿತಾ ॥ ಇತಿ ಸೂತ್ರಾತ್ ॥

ಅ ॥ (೧) ಚತುರ್ಮುಖನಿಗೆ ಸ್ವಾಮಿಯಾದ ಶ್ರೀ ವಿಷ್ಣುವನ್ನೂ ಭಾರತೀಪತಿಯಾದ ಶ್ರೀ ವಾಯುವನ್ನೂ ಬಹು ವಿಷಯಕವಾದ ಮಾತಿನಿಂದ (ಜರಾಯೈ =ಜ್ಯಾಷ್ ಪಯೋಹಾಸೌ) ಚೆನ್ನಾಗಿ ಸ್ತುತಿರೂಪದಿಂದ ಕೂಡಿದ ಮಾತಿನಿಂದ ಯೋಗ್ಯ ರೀತಿಯಾಗಿ ಹೇಳಿರಿ. (೨) (ಜರಾಯೈ ಎಂಬ ಚತುರ್ಥಿಯು ತೃತೀಯಾರ್ಥದಲ್ಲಿ, ತೃತೀಯಾವಿಭಕ್ತಿಯು ಯಾವ ಅರ್ಥದಲ್ಲಿ ಎಂದರೆ) ತತೀಯಾ ವಿಭಕ್ತಿಯು ಭಾವರೂಪವುಳ್ಳದ್ದು. ಇತ್ಥಂಭೂತಲಕ್ಷಣಾರ್ಥಕವಾದುದು, (ಅಂದರೆ - ಫಲದಾನ ಸಾಮರ್ಥ್ಯರೂಪವಾದ ಒಂದಾನೊಂದು ಪ್ರಕಾರವನ್ನು ಹೊಂದಿರುವ ಅಂದರೆ ಫಲವನ್ನು ಕೊಡಲು ಸಮರ್ಥವಾದ ವಚನವನ್ನು ತಿಳಿಸಿಕೊಡುವುದು, ಸಂಸ್ತುತಿತ್ವವು. ಅದನ್ನು ಹೇಳುವ ಶಬ್ದದಲ್ಲಿ ಚತುರ್ಥೀ ವಿಭಕ್ತಿಯು ಬರುವುದು (೩) (ಅಥವಾ ಚತುರ್ಥಿ ವಿಭಕ್ತಿಯನ್ನು ತೃತೀಯಾಂತವಾಗಿ ವ್ಯತ್ಯಾಸ ಮಾಡಿಕೊಳ್ಳುವುದು ಬೇಡ. ಜರಾಯೈ ಎಂಬ ಚತುರ್ಥೀ ವಿಭಕ್ತಿಗೇನೇ ಇತ್ಥಂಭೂತಲಕ್ಷಣಾರ್ಥವಾಗಿ ವ್ಯಾಖ್ಯಾನ ಮಾಡಬೇಕು. ಹೇಗೆಂದರೆ) ಸಮಸ್ತ ವಿಭಕ್ತಿಗಳೂ ಕೂಡ ಇತ್ಥಂಭೂತಲಕ್ಷಣರೂಪ ಅರ್ಥವನ್ನು ಹೇಳುವವುಗಳೇ ಹೀಗೆಯೇ ಮಹಾವ್ಯಾಕರಣದಲ್ಲಿ ಈ ಅರ್ಥವನ್ನು ಪ್ರತಿಪಾದಿಸುವ ಸೂತ್ರವಿದೆ. (೪) (ಇದ ರಿಂದ ಯಾವ ಅರ್ಥವು ಸಿದ್ಧಿಸಿತೆಂದರೆ) ಫಲವನ್ನು ಕೊಡಲಿಕ್ಕೆ ಸಮರ್ಥವಾದುದು ಎಂಬ ಅರ್ಥವನ್ನು ತಿಳಿಸಿಕೊಡುವ ಚೆನ್ನಾಗಿ ಸ್ತುತಿತ್ವದಿಂದ ಕೂಡಿದ ಮಾತಿನಿಂದ. ಎಂರ್ಥವುಂಟಾಯ್ತು.) (೫) (ಅಗ್ನಿ ಸೂರ್ಯರಂತೆ ಸ್ವಾದೀನ ಪ್ರಕಾಶವುಳ್ಳ ಶ್ರೀ ವಿಷ್ಣುವನ್ನು ತಿಳಿ. ಅಂದರೆ (ಅಗ್ನಿ ಸೂರ್ಯರು ಇತರ ಪ್ರಕಾಶದ ಅಪೇಕ್ಷೆಯಿಲ್ಲದೇನೇ ತಮ್ಮ ಮಹಿಮೆಯಿಂದಲೇ ಹೇಗೆ ಕಾಣಿಸಿಕೊಳ್ಳುತ್ತಾರೆ ಹಾಗೆಯೇ ತನ್ನ ಪರಮಾನುಗ್ರಹದಿಂದಲೇ ಕಾಣಿಸಿಕೊಳ್ಳುವವನು. (ಮಿತ್ರಂ ನ ದರ್ಶತಂ ಎನ್ನುವಲ್ಲಿ ದರ್ಶತ ಶಬ್ದವು ಅಗ್ನಿಗೆ ವಿಶೇಷಣವಲ್ಲ. ವಿಷ್ಣುವಿಗೇನೇ ವಿಶೇಷಣವು ಎಂದು ತೋರಿಸುವುದಕ್ಕಾಗಿ ಪುನಃ ವಿದವಿಷ್ಣುಂ ಎಬಲ್ಲಿ ವಿಷ್ಣುಂ ಎಂದು ಹೇಳಿದ್ದು) (ಈ ಸೂಕ್ತವು ಅಗ್ನಿಯನ್ನೇ ಪ್ರತಿಪಾದಿಸುವುದೆಂದು ಹೇಳಿದರೆ ಮಾರುತ ಸೂಕ್ತವೆಂದದ್ದು ವಿರುದ್ಧವಾಗುವುದು.) (೬) (ಈ) ಋಕ್ಕಿನಲ್ಲಿ ವದ ಎಂದು ಹೇಳಿರುವರು. (ಹಾಗಾದರೆ ಯುಷ್ಮತ್ ಶಬ್ದವಿದ್ದರೇನೇ ಮಧ್ಯಮ ಪುರುಷನು (ವದ ಎಂಬುವುದು) ಕೂಡುವುದರಿಂದ ಆತ್ಮನ್ ಶಬ್ದಕ್ಕೆ ಯುಷ್ಮದರ್ಥತ್ವವು ನೀವು ಎಂಬ ಅರ್ಥವು) ಕೂಡದಿರುವುದರಿಂದ ಪದ ಎಂಬ ಮಧ್ಯಮ ಪುರುಷವು ಹೇಗೆ ಕೂಡುತ್ತದೆ? ಎಂದರೆ) ದಾರ್ಢ್ಯ ಎಂಬ ಅರ್ಥದಲ್ಲಿ ಆತ್ಮಶಬ್ದಕ್ಕೆ ಯುಷ್ಮದರ್ಥತ್ವವಿದೆ. ಎಂಬ ಸೂತ್ರದಿಂದ ಇದು ಉಪಪನ್ನವಾಗುತ್ತದೆ. ॥೧೩॥

**।ಋ ॥ (೪೭೦) ಮಿಮೀಹಿ ಶ್ಲೋಕಮಾಸ್ಯೇ ಪರ್ಜನ್ಯ ಇವ ತತನಃ । ಗಾಯ ಗಾಯತ್ರಮುಕ್ಥ್ಯಂ ॥೧೪॥**

ಅ ॥ ಆತ್ಮನ್ =ಎಲೋ ಆತ್ಮನೇ, ತ್ವಂ =ನೀನು) (ಈ ವಿಷ್ಣುವಿನ) ಶ್ಲೋಕಂ =ಕೀರ್ತಿಯನ್ನು ಆಸ್ಯೇ=ಮುಖದಲ್ಲಿ ಮಿಮೀಹಿ = (ಮಾಙ್ಮಾನೇ) ನಿರ್ಮಿಸುತ್ತಿರು. ಸದಾ ಮಾಡುತ್ತಿರು. ಪರ್ಜನ್ಯ ಇವ=ಧ್ವನಿಯುಕ್ತವಾದ ಮೇಘದಂತೆ (ಪರ್ಜನ್ಯೋ ಮೇಘಶಬ್ದೇಽಪಿಧ್ವನದಂಬುದಶಕ್ರಯೋ) ಇತಿವಿತ್ಸಃಂ ಶಕನ್ಯ = (ತನುವಿಸ್ತಾರೇ ಕರಣೇಚ) ವಿಸ್ತರಿಸು, ಶಿಷ್ಯರಿಗೂಉಪದೇಶಿಸಿತು. (ಅಂದರೆ ಮೇಘವುಹೇಗೆ ಮಳೆಯನ್ನುಸರ್ವತ್ರ ವಿಸ್ತರಿಸುತ್ತದೋ, ತನ್ನಲ್ಲಿ ಮಾತ್ರ ನೀರನ್ನು ಮಾಡುವುದಲ್ಲ) ಹಾಗೆಯೇ ನೀನು ಶ್ರೀ ಹರಿಯ ಸತ್ಯವಾದ ಕೀರ್ತಿಯನ್ನು ಜಗತ್ತಿನಲ್ಲಿಯೂ ವಿಸ್ತರಿಸು) ಮತ್ತು ಉತ್ಥ್ಯಂ= (ಪ್ರಾಣೋ ವಾ ಉಕ್ಥ್ಯಂ ಎಂಬ ಶ್ರುತಿಯಿಂದ ಉತ್ಥ್ಯಃ =ಚತುರ್ಮುಖನಿಗೆ ಅಧಿಪತಿಯಾದ ಶ್ರೀ ವಿಷ್ಣುವು) ವಿಷ್ಣು ವಿಷಯಕದಿಂದ ಗಾಯತ್ರಂ =ಗಾಯತ್ರ ಸಾಮವನ್ನು ಗಾಯ = (ಗೈ ಶಬ್ದೇ) ಗಾನಮಾಡು ॥೧೪॥

ಭಾ ॥ (೧) ಕೀರ್ತಿಮಸ್ಯ ವಿಷ್ಣೋಃ ಕುರುಮುಖೇ ಸದಾ । (೨) ವಿಸ್ತಾರಯತಿ ಪರ್ಜನ್ಯೋ ಯದ್ವದ್ವೃಷ್ಟಿಂ ಕತ್ವೆವ ಚ । ವಿಸ್ಪಣೇಹಿ ತಥೇತಸ್ಯ ತಥಾ ಕೀರ್ತಿಂ ಜಗತ್ಯಪಿ ॥೧೪॥

ಅ ॥ (೧) (ಇಲ್ಲಿಯೂ ಕಣ್ವ ಋಷಿಯು ತನ್ನನ್ನು ಕುರಿತೇ ಹೇಳುತ್ತಾನೆ) ಈ ವಿಷ್ಣುವಿನ ಕೀರ್ತಿಯನ್ನು ಆಸ್ಯದಲ್ಲಿ ಸದಾ ಮಾಡುತ್ತಿರು. (ಸರ್ವದಾ ಸ್ತುತಿಸುತ್ತಿರು) (೨) ಧ್ವನಿಗೈಉವ ಮೇಘವು ದೃಷ್ಟಿಯನ್ನು ಹೇಗೆ ವಿಸ್ತರಿಸುತ್ತದೋ ಹಾಗೆಯೇ ಶ್ರೀ ಹರಿಯ ಕೀರ್ತಿಯನ್ನೂ ಜಗತ್ತಿನಲ್ಲಿಯೂ ಕೂಡ ವಿಸ್ತಾರಗೊಳಿಸು. ॥೧೪॥

ಋ ॥ (೪೭೧) ವಂದಸ್ವ ಮಾರುತಂ ಗಣಶ್ರಿ ತ್ವೇಷಂ ಪನಸುಮರ್ಕಿಣಂ । ಅಸ್ಥೇ ವೃಧ್ಧಾ ಅಸನ್ನಿಹ ॥೧೫॥೧೭॥೩೪॥

ಅ ॥ (ಇಲ್ಲಿಯೂ ಕಣ್ವ ಋಷಿಯು ತನ್ನನ್ನು ಕುರಿತೇ ಹೇಳುವುದು) (ಎಲೋ ಆತ್ಮನೇ ನೀನು) ತ್ವೇಷ = ಪ್ರಕಾಶವುಳ್ಳ, ಪನಸ್ಯುಂ = (ಪನಜ್ಞಾನೇ) ಜ್ಞಾನನೇ ಸ್ವಭಾವವಾಗಿ ಉಳ್ಳ ಅರ್ಕಿಂ = (ಅರ್ಕಾ =ಋಚಃ ಅಸ್ಯ ಜ್ಞಾಪಿಕಾಃ ಸಂತಿ ಎಂಬ ವ್ಯುತ್ಪತ್ತಿಯಿಂದ) ಋಕ್ಕುಗಳಿಂದ ಜ್ಞೇಯನಾದ, ಮಾರುತಂ ಗಣಂ =ಮರುತ್‌ಗಳ ಸಂಬಂಧಿಯಾದ ಗಣವನ್ನೂ, ವಂದಸ್ವ =ಸ್ತುತಿಸು. (ಸ್ತುತಿಸಲಿಕ್ಕೆ ತಿಳಿಯುವುದಿಲ್ಲ ಎಂದು ಹೇಳಕೂಡದು. ಏಕೆಂದರೆ) ಅಸ್ಮೇ=ನಮಗೆ, ಇಹ =ಈ ಮರುತ್ ನಿಮಿತ್ತವಾಗಿ ಮರುತ್‌ಗಳ ಅನುಗ್ರಹದಿಂದ ವೃದ್ಧಾಃ =ವೃದ್ಧರು, ಅಸನ್ =ಜ್ಞಾಪಕರಾದರು. ॥೧೫॥

ಭಾ ॥ (೧) ಪನಸ್ಯುಂ ಜ್ಞಾನಶೀಲಂ ಚ ವಿಜ್ಞೇಯಂ ಗಣಮರ್ಕಿಣಂ (೨) ಅಭವನ್ ಜ್ಞಾಪಕಾ ವೃದ್ಧಾಃ ಅಸ್ಮಾಕಂ ತದನುಗ್ರಹಾತ್ ॥೧೫॥

ಅ ॥ (೧) ವನಸ್ಯುಂ ಜ್ಞಾನವೇ ಸ್ವಭಾವವಾಗಿ ಉಳ್ಳದ್ದು. ಅರ್ಕಿಣಂ =ಋಕ್ಕುಗಳಿಂದ ತಿಳಿಯಲರ್ಹವಾದುದು, ಇಂತಹ ಮರುದ್ಗಣವನ್ನು ಸ್ತುತಿಸು. (೨) ನಮಗೆ ಆ ಮರುತ್‌ಗಳ ಅನುಗ್ರಹದಿಂದ ವೃದ್ಧರು ಜ್ಞಾಪಕರಾಗುತ್ತಾರೆ. (ವೃದ್ಧರು ತತ್ವವನ್ನೂ ತಿಳಿಸಿರುವರು.) ॥೧೫॥೧೭॥೬॥

ಅ ವ ॥ ಪ್ರಯತ್ ಇತ್ಯಾದಿಗಳು ೧೦ ಋಕ್ಕುಗಳುಳ್ಳದ್ದು ೨ ವರ್ಗಗಳು. ಮರುದ್ದೇವತಾಳವು. ಪ್ರಗಾಥಾ ಛಂಸ್ಕವು. ಅವುಗಳಲ್ಲಿ ವಿಷಮ ಋಕ್ಕುಗಳು ಬೃಹತೀ ಛಂದಸ್ಕಗಳು. ಸಮ ಋಕ್ಕುಗಳು ಸತೋಬೃಹತೀ ಛಂದಸ್ಕಗಳು. ಕಣ್ವರೇ ಋಷಿಗಳು. ೩೯ನೇ ಸೂಕ್ತವು.

ಋ ॥ (೪೭೨) ಪ್ರಯದಿತ್ಥಾ ಪರಾವತಃ ಶೋಚಿರ್ನ ಮಾನಮಸ್ಯಥ ।

ಕಸ್ಯ ಕ್ರತ್ವಾ ಮರುತಃ ಕಸ್ಯ ವರ್ಪಸಾ ಕಂ ಯಾಥ ಕಂ ಹ ಧೂತಯ ॥೧॥

ಅ ॥ ಮರುತ್ = ಎಲೋಎ ಮರುತ್‌ಗಳೇ ನೀವು ಪರಾವತಃ =ದೂರದಲ್ಲಿಯೇ (ಶ್ರೀ ಹರಿಯ ಸ್ಥಾನವಾದ ಸ್ವರ್ಗಲೋಗದಲ್ಲಿ ನಿಂತುಕೊಂಡೇ ಪ್ರಾಣಿಗಳಲ್ಲಿ) ಶೋಚಿರ್ನ =ಪ್ರಕಾಶವನ್ನೆಂಬಂತೆ ಮಾನಂ =ಜ್ಞಾನವನ್ನು ಪ್ರ ಅಸ್ಯಥ = (ಅಸುಕ್ಷೇಪೇ) ಚೆನ್ನಾಗಿ ಅಲ್ಪೀಕರಿಸಿರಿ (ಅಂದರೆ ಸೂರ್ಯಾದಿಗಳು ಪ್ರಕಾಶವನ್ನು ಹೇಗೆ ದೂರದಿಂದಲೇ

ಪ್ರಾಣಿಗಳಲ್ಲಿ ಹೊಂದಿಸಿಕೊಡುವರೋ, ಹೀಗೆಯೇ ಸತ್ಸಂಪ್ರದಾಯದಿಂದ ಬಂದಾಗ್ಯೂ ನೀಚರಲ್ಲಿರತಕ್ಕ ಜ್ಞಾನವನ್ನು ತಮ್ಮ ಜ್ಞಾನಕ್ಕಿಂತ ಅಲ್ಪವನ್ನಾಗಿ ಮಾಡಿರಿ.) ಏವಂಚ ಎಲೋ ಮರುತ್‌ಗಳೇ, ಅಥವಾ ಶ್ರೀ ವಿಷ್ಣುವೇ ಶ್ರೀ ವಿಷ್ಣುರೂಪ ವಿಶೇಷಗಳೇ ಸತ್ಸಂಪ್ರದಾಯದಿಂದ ಬಂದಿರುವ ನೀಚರಲ್ಲಿರುವ ಜ್ಞಾನವನ್ನು ತಮ್ಮ ಜ್ಞಾನಕ್ಕಿಂತ ಅಲ್ಪವನ್ನಾಗಿ ಮಾಡಿರಿ.) ಯತ್‌ಇತ್ಥಾಂ =ಯಾವುದು ಹೀಗೆಯೇ ಎಂದು ಪ್ರಮಿತವಾಗಿದೆಯೋ (ಅದು ಹಾಗೆಯೇ ಮರುತ್‌ಗಳಾದ ನಿಮಗೆ ಮಾಡಲ್ಪಟ್ಟಿದೆ. ಅಂದರೆ ಸಪ್ತಾಕಾರವಾದ ಕಾರ್ಯ ಸಮುದಾಯವನ್ನೂ ನೀವೇ ನಿರ್ಮಿಸಿದ್ದು) (ಹೀಗೆಯೇ ನೀವು ಜ್ಞಾನಪೂರ್ವಕವಾಗಿ ಎಲ್ಲಿಗಾದರೂ ಹೋಗುವಿರೋ. ಯತ್ಕಿಂಚಿತ್ ಜ್ಞಾನವಿಷವನ್ನು ಮಾಡುತ್ತೀರೋ, ತಿಳಿಯುತ್ತೀರೋ, ಅದು) ಕಸ್ಯ =ಯಾರ ಅಧೀನವಾಗಿ, ಕ್ರತ್ವಾ=ಜ್ಞಾನಪೂರ್ವಕವಾಗಿ, (ಬಲಾತ್ಕಾರವಾಗಿ ಎಲ್ಲಿಗಾದರೂ ಹೋಗುವಿರೋ ಬಲವಿಷಯವನ್ನು ಮಾಡುವಿರೋ, ಅದು ಕಸ್ಯ =ಯಾರ ಅಧೀನವಾದ ವರ್ಪಸಾ =ಬಲದಿಂದ (ಸರ್ವಸ್ವಾತಂತ್ರ್ಯವಿದ್ದುದರಿಂದ ಜ್ಞಾನದಲ್ಲಿ ಬಲದಲ್ಲಿ ಆಗಲೀ ಪರಾಪೇಕ್ಷೆಯು ಇಲ್ಲ. ಮತ್ತೆ) ಕಂ =ಯತ್ಕಿಂಚಿತ್ ವಿಷವನ್ನು ಯಾಥ =ತಿಳಿಯುವಿರಿ. ಅದು (ಸ್ವಾದೀನವಾದ ಜ್ಞಾನದಿಂದಲೇಷ (ಯಾವುದು ಬಲಾತ್ಕಾರದಿಂದ) ಕಂ ಧೂತಯಃ =ನೀವು ಯಾರನ್ನಾದರೂ ನಡುಗಿಸುವಿರೋ, (ಅದು ತನ್ನ ಬಲದಿಂದಲೇ) ಹ=ಪ್ರಸಿದ್ಧ. ॥೧॥

**ಭಾ ॥ (೧) ಪರಾವತೋ ಹರೇಃ ಸ್ಥಾನಾನ್ಮಾನಂ ಶ್ಲೋಚಿರಿವಾಸ್ಯಥ ॥ (೨) ಸೂರ್ಯಾದಯೋ ಯಥಾ ತೋಚಿರ್ದೂರಾದಸ್ಯಂತಿ ಜಂತುಷು ॥ ಏವಂ ಜ್ಞಾನಂ ಸಂಪ್ರದಾಯಾನ್ಮರುತೋ ವಿಷ್ಣುರೇವ ದಾ । (೩) ಇತ್ಥಂ ಯಥಾ ಸರ್ವದೃಶ್ಯಂ ತತ್ತಥಾ ಭವಂತಾಂಕೃತಂ ॥ (೪) ಏವಂ ಯತ್ರ ಕ್ವವಾ ಜ್ಞಾನಾದ್ಬಲಾದ್ವಾ ಗಚ್ಛತ ಕ್ವಚಿತ್ ॥ (೫) ಸ್ವತಂತ್ರತ್ವಾತ್ಪರಾಪೇಕ್ಷಾನ ಹಿ ವಃ ಕ್ವಚಿದಿಷ್ಯತೇ ॥ (೬) ಕಿಂಚಿದ್ಯಾಥ ಬಲಾತ್ಕಿಂಚಿದ್ಧೂನುಥ ಸ್ವಬಲಾದ್ಧಿ ತತ್** ॥೧॥

ಅ ॥ (೧) ಎಲೋ ಮರುತಗಳೇ ದೂರದಲ್ಲಿ ಅಂದರೆ ಶ್ರೀ ಹರಿಯ ಸ್ಥಾನದಲ್ಲಿ ಅಂದರೆ ತನ್ನ ಲೋಕದಲ್ಲಿದ್ದೇ ಪ್ರಾಣಿಗಳಲ್ಲಿ ಪ್ರಕಾಶವನ್ನೆಂಬಂತೆ. ಜ್ಞಾನವನ್ನು ನಿರಾಕರಿಸಿರಿ. (೨) (ಇದನ್ನೇ ವಿವರಿಸುತ್ತಾರೆ) ಶ್ರೀ ವಿಷ್ಣುವೇ ಮುಖ್ಯ ವೃತ್ತಿಯಿಂದ ಈ ಮಂತ್ರ ಪ್ರತಿಪಾದ್ಯನು. ಸೂರ್ಯಾದಿಗಳು ಹೇಗೆ ಪ್ರಕಾಶವನ್ನು ದೂರದಿಂದಲೇ ಪ್ರಾಣಿಗಳಲ್ಲಿ ಇಡುತ್ತಾರೋ ಹೀಗೆಯೇ ಸತ್ಸಂಪ್ರದಾಯದಿಂದ ಬಂದಿರುವ ಜ್ಞಾನವನ್ನು ಮರುತ್‌ಗಳು ಶ್ರೀ ವಿಷ್ಣುವು ಅಥವಾ ಮರುನ್ನಾಮಕ ವಿಷ್ಣುರೂಪ ವಿಶೇಷಗಳು ಪ್ರಾಣಿಗಳಲ್ಲಿ ಇಡುತ್ತಾರೆ. (೩) ಮತ್ತು ಯಾವುದು ಯಾವುದು ಸರ್ವರಿಂದಲೂ ದೃಶ್ಯವಾಗಿ ಪ್ರಮೀತವಾಗಿದೆಯೋ, ಅದು ಹಾಗೆಯೇ ಮರುನ್ನಾಮಕರಾದ ನಿಮಗೇನೇ ಮಾಡಲ್ಪಟ್ಟಿದೆ. (ಅಂದರೆ ಧರ್ಮಾದಿಗಳಿಂದ ಕೂಡಿದ ಕಾರ್ಯ ಸಮುದಾಯವನ್ನು ನೀವೇ ಮಾಡಿದ್ದು) (೪) ಹೀಗೆಯೇ ಇತರವನ್ನು ಇಟ್ಟುಕೊಳ್ಳಬೇಕು. ಹೀಗೆಯೇ ಜ್ಞಾನಪೂರ್ವಕವಾಗಿ ಎಲ್ಲಿಗಾದರೂ ಹೋಗುವಿರೋ, ಯತ್ಕಿಂಚಿತ್ ಜ್ಞಾನವಿಷಯವನ್ನು ತಿಳಿಯುತ್ತೀರೋ, ಅದು ಯಾರ ಅಧೀನವಾದ ಜ್ಞಾನದಿಂದ ಯಾವುದಾದರೂ ಬಲಾತ್ಕಾರದಿಂದ ಎಲ್ಲಿಗಾದರೂ ಹೋಗಿವಿರೋ (ಅಂದರೆ ಬಲ ವಿಷಯವನ್ನು ಮಾಡುತ್ತೀರೋ ಅದು ಯಾರ ಅಧೀನವಾದ ಬಲದಿಂದ (೫) (ಆಕ್ಷೇಪದ ತಾತ್ಪರ್ಯ ಹೇಳುತ್ತಾರೆ.) ಸರ್ವ ಸ್ವಾತಂತ್ರ್ಯವಿದ್ದುದರಿಂದ ಜ್ಞಾನದಲ್ಲಿಯೂ ಬಲದಲ್ಲಿಯೂ ಎಲ್ಲಿಯೂ ನಿಮಗೆ ಇತರಾಪೇಕ್ಷೆಯು ಇಲ್ಲವೇ ಇಲ್ಲ. (೬) ಯಾವುದನ್ನಾದರೂ ತಿಳಿಯುತ್ತೀರೋ ಅದು ಸ್ವಾದೀನವೇ ಆದ ಜ್ಞಾನದಿಂದಲೇ ಯಾವುದನ್ನಾದರೂ ಬಲಾತ್ಕಾರದಿಂದ

ನಡುಗಿಸುತ್ತೀರೋ ಅದು ಸ್ವಾಧೀನವೇ ಆದ ಬಲಾತ್ಕಾರದಿಂದಲೇ ||೧||

ಋ || (೪೭೩) ಸ್ಥಿರಾ ವಃ ಸಂತ್ವಾಯುಧಾ ಪುರಾಣುದೇ ವೀಳೂ ಉತ ಪ್ರತಿಷ್ಕಭೇ ।

ಯುಷ್ಮಾಕಮಸ್ತು ತವಿಷೀ ಪನೀಯಸೀ ಮಾ ಮರ್ತ್ಯಸ್ಯ ಮಾಯಿನಃ ||೨||

ಅ || (ಎಲೋ ಮರುತ್‌ಗಳೇ) ವಃ = ನಿಮಗೆ, ಪರಾಣುದೇ =ಈ ಜಗತ್ತಿನಲ್ಲಿ ಶತ್ರುಗಳನ್ನು ನಾಶಗೊಳಿಸುವುದಕ್ಕಾಗಿ ಉತ ಪ್ರತಿಷ್ಕಭೇ = (ಷ್ಟಭಿ ಸ್ಕಭಿ ಪ್ರತಿಬಂಧೇ) ಶತ್ರುಗಳನ್ನು ಸ್ತಂಬಿಸುವುದಕ್ಕಾಗಿಯೂ ಆಯುಧಾ =ಆಯುಧಗಳು ಸಂತು=ಇರುತ್ತವೆ. (ಕೇವಲ ಆಯುಧ ಮಾತ್ರವಲ್ಲ. ಮತ್ತೆ ಆ ಆಯುಧಗಳು ಸ್ಥಿರಾ=ಸ್ಥಿರಗಳು. ವೀಳು=ಸದಾ ಸುದೃಢಗಳೇ ಆಗಿವೆ. (ಸ್ಥಿರ ಶಬ್ದವಾಚ್ಯಗಳಾದ ದೀರ್ಘಕಾಲದಲ್ಲಿದ್ದುದರಿಂದಲೇ ವೀಳು ಶಬ್ದವಾಚ್ಯಗಳಾದ ದೃಢಗಳಾಗಿವೆ.) ಯುಷ್ಮಾಕಂ =ನಿಮಗೆ, ಪನೀಯಸೀ= (ಪ್ರಣವ್ಯ ವಹಾರೇ ಸ್ತುತೌಚ) ಸ್ತುತಿಯಿಂದ ಸದಾ ಉತ್ತಮವಾದ ; ತವಿಷಿ =ತೇಜಸ್ಸು, ಅಥವಾ ಒಲವು, ಅಸ್ತು=ಇದೆ. ಮಾಯಿನಃ = (ಮಾಯಾ ದಂಭೇ ಕೃಪಾಯಾಂ ಚ ದಂಭಸ್ತು ಕೈತವೇ ಕಲ್ಕೇ ಇತಿವಿಶ್ವಃ) ಮನುಷ್ಯರಾದ ಕಪಟಿಗಳಾದ ದೈತಾದಿಗಳಿಗೆ ಪನಿಯಸೀ ತವಿಷೀ =ಉತ್ತಮವಾದ ಬಲವು ಅಥವಾ ಉತ್ತಮವಾದ ತೇಜಸ್ಸು, ಮಾ ಅಸ್ತು, ಇಲ್ಲ ಹಿ =ಪ್ರಸಿದ್ಧವು. (ಆದ ಕಾರಣ ನಮ್ಮ ತಪಸ್ಸಿಗೆ ವಿಘ್ನ ಮಾಡುವವರನ್ನು ಸಂಹರಿಸಿರಿ.) ||೨||

ಭಾ || (೧) ಶತ್ರೂಣಾಮಪನೋದಾಯ ಸ್ತಂಶು ವಸ್ತ್ವಿಹಹೇಯತಃ । ಸ್ತಂಭನಾಯ ಚ ಶತ್ರೂಣಾಂ ಸುದೃಢಾನ್ಯೇವ ತಾಸ್ಸದಾ || (೨) ಸ್ಥಿರತ್ನಂ ದೀರ್ಘಕಾಲತ್ವಂ ವೀಳುತ್ವಂ ದೃಢತಾತಥಾ || (೩) ಯುಷ್ಮಾಕಂ ತವೀಷೀ ತೇಜೋ ಬಲಮಸ್ತ್ಯುತ್ತಮಂ ಸದಾ || (೪) ಮಾಯಿನೋ ನ ಹಿ ಮರ್ತ್ಯಸ್ಯ ಬಲಂ ತೇಜೋಽಥ ವೋತ್ತಮಂ ||೨||

ಅ || ಮರುತ್‌ಗಳೇ ನಿಮಗೆ ಈ ಜಗತ್ತಿನಲ್ಲಿರತಕ್ಕ ಶತ್ರುಗಳನ್ನು ನಿರಾಕರಿಸುವುದಕ್ಕಾಗಿಯೂ ಶತ್ರುಗಳನ್ನು ಸ್ತಂಭಿಸುವುದಕ್ಕಾಗಿಯೂ ಆಯುಧಗಳು ಇರುತ್ತವೆ. (ಆಯುಧ ಮಾತ್ರವಲ್ಲ, ಮತ್ತೆ ಆ ಆಯುಧಗಳು) ಸುದೃಢಗಳಾಗಿಯೇ ಇವೆ. (೨) (ಸ್ಥಿರತ್ವ ವಿಳುತ್ವಗಳಿಗೆ ಏನು ಭೇದವು ? ಎಂದರೆ) ಸ್ಥಿರ್ತ್ವವೆಂದರೆ ದೀರ್ಘಕಾಲದಲ್ಲಿರುವಿಕೆ. ವೀಳುತ್ವವೆಂದರೆ ಅತಿದಾರ್ಢ್ಯವು. (೩) ನಿಮಗೆ, ತವಿಷೀ = ತೇಜಸ್ಸು ಅಥವಾ ಸ್ತುತಿಯಿಂದ ಸದಾ ಅತ್ಯುತ್ತಮವಾದ ಬಲವಿದೆ. (೪) ಕಪಟಿಗಳಾದ ಮನುಷ್ಯರಾದ ದೈತ್ಯಾದಿಗಳಿಗೆ ಬಲವು ಅಥವಾ ಉತ್ತಮವಾದ ತೇಜಸ್ಸಾಗಲೀ ಇಲ್ಲವೇ ಇಲ್ಲ. (ಮರುತ್‌ಗಳ ಮಾಹಾತ್ಮ್ಯವನ್ನು ಹೇಳುವ ಸಮಯದಲ್ಲಿ ದೈತ್ಯಾದಿಗಳ ಬಲವನ್ನಾಗಲೀ ತೇಜಸ್ಸನ್ನಾಗಲೀ ನಿಷೇಧಿಸುವುದು ಅಸಂಗತವೆಂದರೆ) ನಮ್ಮ ತಪಸ್ಸಿಗೆ ವಿಘ್ನಕಾರಿಗಳಾದ ದೈತ್ಯಾದಿಗಳನ್ನು ಸಂಹರಿಸಿರಿ ಎಂದು ತಾತ್ಪರ್ಯವು. ||೨||

ಋ || (೪೭೪) ಪರಾ ಹ ಯತ್ಸ್ಥಿರಂ ಹಥ ನರೋ ವರ್ತಯಥಾ ಗುರು ।

ವಿ ಯಾಥನ ವನಿನಃ ಪೃಥಿವ್ಯಾ ವ್ಯಾತಾಃ ಪರ್ವತಾನಾಂ ||೩||

ಅ ॥ (ಎಲೋ ಮರುತ್‌ಗಳೇ, ನೀವು) ಯತ್ =ಯಾವುದು, ಸ್ಥಿರಂ =ದೀರ್ಘಕಾಲದಲ್ಲಿರತಕ್ಕ ಅನಾದಿಯಾದ ಅಜ್ಞಾದಿಯಾದ ಅಜ್ಞಾನ ಪಾಪಾದಿಗಳು ಇವೆಯೋ, ತಚ್ಚ = ಅವೆಲ್ಲವನ್ನೂ, ಭಕ್ತಾಯ =ನಿಮ್ಮ ಭಕ್ತನದ್ದನ್ನು, ಪರಾಹಥ =ವಿನಾಶಗೊಳಿಸಿರಿ. ಗುರು=ಉತ್ತಮರಾದಾಗ್ಯೂ, ನರಃ =ಮನುಷ್ಯರನ್ನು (ನಿತ್ಯದಲ್ಲಿಯೂ ಚೆನ್ನಾಗಿ ಗುಣಗಳನ್ನು ಕೊಟ್ಟು) ವರ್ತಯಥ = ಇರಿಸುತ್ತೀರಿ (ನೀವು) ವನಿನಃ =ಅರಣ್ಯ ಸಂಬಂಧಿಗಳಾದ, ತರೂನ್=ವೃಕ್ಷಗಳನ್ನು,(ಹರಿಪಕ್ಷದಲ್ಲಿ) ಭಜಿಸಿಕೊಳ್ಳಲು ಯೋಗ್ಯರಾದ ದೇವತೆಗಳನ್ನು ಕುರಿತು, ವಿಯಾಥನ =ವಿಶೇಷವಾಗಿ ಹೋಗಿರಿ. ಪರ್ವತಾನಾಂ ಪೃಥಿವ್ಯಾಶ್ಚ=ಪರ್ವತಗಳ ಮತ್ತು ಪೃಥಿವಿಯ, ಆಶಾಃ = ದಿಕ್ಕುಗಳನ್ನೂ ಪ್ರದೇಶಗಳನ್ನೂ) ಸರ್ವಥಾ, ವಿಯಾಥನ =ಹೋಗಿರಿ. (ನಿಮಗೆ ಅಗಮ್ಯವಾದುದು ಯಾವುದೂ ಇಲ್ಲ. ॥೩॥

ಭಾ ॥ (೧) ಸ್ಥಿರಂ ಚಾಜ್ಞಾನಪಾಪಾದಿ ತದ್ಭಕ್ತಾಯ ಪರಾಹಥ । (೨) ಗುರೂನಪಿ ನರಾನ್ನಿತ್ಯಂ ಗುಣವೈರ್ತಯಥಾಂಜಸಾ ॥ (೩) ಪರ್ವತಾನಾಂ ಪೃಥಿವ್ಯಾಶ್ಚದಿಶೋ ನಿತ್ಯಂ ವಿಯಾಥನ । (೪) ವನಿನಶ್ಚ ತರೂನ್ ಸಮ್ಯಕ್ ಭಜನೀಯಾನ್ ಸುರಾನ್ ಹರಿಃ ॥೩॥

ಅ ॥ ಸ್ಥಿರವಾದ ದೀರ್ಘಕಾಲಿಕವಾದ ಅನಾದಿ ಅಜ್ಞಾನ ಪಾಪಾದಿಗಳು ಇವೆಯೋ, ನಿಮ್ಮ ಭಕ್ತನ ಸಂಬಂಧಿಗಳಾದ ಅವುಗಳನ್ನು ವಿನಾಶಗೊಳಿಸಿರಿ. (೨) ಉತ್ತಮರಾದ ಮನುಷ್ಯರನ್ನು (ರಿಗೆ) ಚೆನ್ನಾಗಿ ಗುಣಗಳನ್ನು ಕೊಟ್ಟು ಇರಿಸುತ್ತೀರಿ. (ಪರ್ವತಗಳ ಮತ್ತು ಪೃಥಿವಿಯ ಭಾಗಗಳನ್ನು ನಿತ್ಯದಲ್ಲಿಯೂ, ವಿಶೇಷವಾಗಿ ಹೋಗಿರಿ. (ನಿಮಗೆ ಅಗಮ್ಯವಾದುದು ಯಾವುದೂ ಇಲ್ಲ.) (೪) ಅರಣ್ಯ ಸಂಬಂಧಿಗಳಾದ ವೃಕ್ಷಗಳನ್ನು ವಿಶೇಷವಾಗಿ ಹೊಂದಿರಿ. ಶ್ರೀ ಹರಿಯು ಚೆನ್ನಾಗಿ ಭಜಿಸುತ್ತಿರುವ ದೇವತೆಗಳನ್ನು ಹೊಂದುತ್ತಾನೆ. (ವಿಷ್ಣುಪಕ್ಷದಲ್ಲಿ ಪೃಥಿವ್ಯಾಃ ಪರ್ವತಾನಾಂ ವ್ಯಾತಾಃ ಎನ್ನುವುದಕ್ಕೆ ಏನರ್ಥವು ಎಂದರೆ) ಮಹೀ ದ್ಯೌಃ ಪೃಥಿವೀಚನ ಎಂಬ ಋಗ್ವ್ಯಾಖ್ಯಾನದಲ್ಲಿ ಪೃಥಿವೀ ಶಬ್ದವು ಭೂದೇವಿಪರವೆಂದೂ, ಯ ಈಂಖಯಂತಿ ಪರ್ವತಾನ್ ಎಂಬಲ್ಲಿ ಪರ್ವತ ಶಬ್ದವು ಜನ್ಮಾಖ್ಯ ಪರ್ವವಿದ್ದುದರಿಂದ ಚೇತನಾರ್ಥಕವೆಂದೂ ವ್ಯಾಖ್ಯಾತವಾಗಿದೆ. ಪೃಥಿವೀ ಶಬ್ದವಾಚ್ಯವಾದ ಭೂದೇವಿಯ, ಪರ್ವತ ಶಬ್ದವಾಚ್ಯರಾದ ಸಮಸ್ತ ಜೀವರ ಆಶಾಃ =ಅಪೇಕ್ಷೆಗಳನ್ನು ವಿಯಾಥನ = ಹೊಂದುತ್ತೀರಿ. ॥೩॥

ಋ ॥ (೪೭೫) ನಹಿ ವಃ ಶತ್ರುರ್ವಿವಿದೇ ಅಧಿ ದ್ಯವಿ ನ ಭೂಮ್ಯಾಂ ರಿಶಾ ದಸಃ ।
ಯುಷ್ಮಾಕಮಸ್ತು ತವಿಷೀ ತವಾ ಯುಜಾ ರುದ್ರಾಸೋ ನೂ ಚಿದಾಧೃಷೇ ॥೪॥

ಅ ॥ ಹೇ ರಿಶಾದಸಃ = (ರಿಶಾ=ಸುಖದಿಂದ, (ಸಾಧನ ಮೊದಲಾದುವುಗಳನ್ನು ಸಂಪಾದಿಸುವಿಕೆ, ಮೊದಲಾದ ಆಯಾಸವಿಲ್ಲದೇನೇ)ತ=ಸುಖವನ್ನು, ಅದಂತಿ-ಅನುಭವಿಸುತ್ತಾರೆ, ಎಂಬ ವ್ಯುತ್ಪತ್ತಿಯಿಂದ) ಚೆನ್ನಾಗಿ ಸುಖವುಳ್ಳ ಎಲೋ ಮರುತ್‌ಗಳೇ, ವಃ =ನಿಮಗೆ, ದ್ಯವಿ=ಸ್ವರ್ಗದಲ್ಲಿ, ಶತ್ರುಃ = ನಾಶಕನು, ನ ಹಿ ಅಧಿ ವಿವಿದೇ =ಸರ್ವಥಾ ಹೊಂದಲ್ಪಡುವುದೇ ಇಲ್ಲ. ಭೂಮ್ಯಾಂ =ಭೂಮಿಯಲ್ಲಿಯೂ, ನ ಅಧಿ ವಿವಿದೇ = (ವಿದ್ಯಲ್ಲಾಭೇ ಎಲ್ಲಿಯೂ ಸರ್ವಥಾ ಹೊಂದಲ್ಪಡುವುದೇ

ಇಲ್ಲ. ಏಕೆಂದರೆ ರುದ್ರಾಸಃ =ರೋಗ ಪರಿಹಾರಕಗಳಾದ ಮರುತ್‌ಗಳೇ, ನಿಮಗೆ, ನು ಚಿತ್ =ಈಗಲೂ ಕೂಡ ಸರ್ವದಾ, ಆ ದೃಷೇ (ಆ ಡ ಪೂರ್ವಕಾತ್ ಞ ದೃಷಾ ಪ್ರಾಗಲ್ಭ್ಯೇ) ಸಮಸ್ತ ದೈತ್ಯರ ಸಮುದಾಯವನ್ನು ಸೆಳೆಯುವುದಕ್ಕೋಸ್ಕರವೇ, ಅಂದರೆ ಸಮಸ್ತ ದೈತ್ಯರನ್ನೂ ನಾಶಗೊಳಿಸುವುದಕ್ಕಾಗಿಯೇ ತನಃ =ಸರ್ವತ್ರ ವ್ಯಾಪ್ತವಾದ, ಯುಜಾ=ನಿತ್ಯವಾಗಿ ಆವಾವ ದೈತ್ಯರನ್ನು ನಾಶಮಾಡುವ ಉಪಾಯದಿಂದ ಕೂಡಿದ, ತವಿಷೀ=ಬಲವು, ಅಥವಾ ತೇಜಸ್ಸು, ಅಸ್ತು=ಇದೆ ಹಿ =ಪ್ರಸಿದ್ಧವು. ||೪||

ಭಾ || (೧) ಭೂಮೌ ದಿವಿಚ ವಃ ಶತ್ರುಃ ಕ್ವ ಚಿನ್ನೈವ ಹಿ ಲಭ್ಯತೇ | (೨) ರಿಶಾದಸಃ ಸು ಸುಖಿನಃ ಸುಖೇನ ಶಮದಂತಿ ಯತ್ (೩) ಬಲಂ ತೇಜೋऽಪಿ ವೋ ಹ್ಯಸ್ತಿ ವ್ಯಾಪ್ತಾ ನಿತ್ಯತಯಾ ಯುಜಾ | ಅದ್ಯಾಪ್ಯಾಧರ್ಷಣಾಯೈವ ನಿಖಿಲಾಶುಭಸಂತತೇಃ ||೪||

ಅ || ಭೂಮಿಯಲ್ಲಿಯೂ ಸ್ವರ್ಗಲೋಕದಲ್ಲಿಯೂ ಕೂಡ ನಿಮಗೆ ಶತ್ರುವು ಎಲ್ಲಿಯೂ ಹೊಂದಲ್ಪಡುವುದೇ ಇಲ್ಲ. (೨) ಯಾವ ಕಾರಣದಿಂದ ಧನಾರ್ಜನಾದ್ಯಾಯಾಸವಿಲ್ಲದೇನೇ ಸುಖವನ್ನು ಅನುಭವಿಸುತ್ತಾರೋ ಆದ ಕಾರಣ ರಿಕಾದಸಃ =ಚೆನ್ನಾಗಿ ಸುಖವುಳ್ಳವರು (೩) ಈಗಲೂ ಸರ್ವಕಾಲದಲ್ಲೂ ಸಮಸ್ತ ಅನುಭವಗಳ ಸಮುದಾಯವನ್ನು ಸೆಳೆಯುವುದಕ್ಕಾಗಿ ಅಂದರೆ ಸಮಸ್ತ ದೈತ್ಯರನ್ನು ನಾಶಗೊಳಿಸುವುದಕ್ಕಾಗಿ ನಿತ್ಯವಾಗಿ ಆಯಾಯ ದೈತ್ಯರನ್ನು ನಾಶಮಾಡಲು ಯೋಗ್ಯವಾದ ಉಪಾಯದಿಂದ ಕೂಡಿದ ವ್ಯಾಪ್ತವಾದ ಬಹಳವಾದ ಬಲವೂ ತೇಜಸ್ಸಾಗಲೀ ಇದೆ. ಪ್ರಸಿದ್ಧ ||೪||

ಋ || (೪೭೬) ಪ್ರ ವೇಪಯಂತಿ ಪರ್ವತಾನ್ ವಿವಿಂಚಂತಿ ವನಸ್ಪತೀನ್ |
ಪ್ರೋ ಆರತ ಮರುತೋ ದುರ್ಮದಾ ಇವ ದೇವಾಸಃ ಸರ್ವಯಾ ವಿಶಾ ||೫||೧೪||

ಅ || ಮರುತಃ =ಮರುದ್ದೇಶಗಳು, ಪರ್ವತಾನ್ = ಪರ್ವತಗಳನ್ನು, ಪ್ರವೇಪಯಂತಿ= (ವೇಪೃಕಂಪನೇ) ನುಡಗಿಸುತ್ತಾರೆ. ವನಸ್ಪತೀನ್=ವೃಕ್ಷಗಳನ್ನು, ವಿವಿಂಚಂತಿ = (ವಿಚಿರ್ ಪೃಥಗ್ಭಾವೇ, ಬುಡ ಸಮೇತ ಕಿತ್ತು ಹಾಕುತ್ತಾರೆ. ಮರುತಃ =ಮರುತ್ ದೇವತೆಗಳು, ಸರ್ವಯಾವಿಶಾ = (ಸಮಸ್ತ ಪ್ರಜೆಗಳಿಂದ ಕೂಡಿಯೇ, ಪ್ರೋ ಅರತ = (ಋಗತಿ ಪ್ರಾಪಣಯೋಃ) ಸಂಬದ್ಧರಾದರು. (ಸಮಸ್ತ ಪ್ರಜೆಗಳಲ್ಲಿ ಸನ್ನಿಹಿತರಾದರು.) ದುರ್ಮದಾ ಇತ = ಮದೋನ್ಮತ್ತರಂತೆ ತಮ್ಮ ಪ್ರಯೋಜನಾನುಸಂಧಾನ ವಿರಹಿತರಾಗಿಯೇ (ಮನುಷ್ಯರನ್ನು ಶುಭ ಅಶುಭಗಳ್ನು ಮಾಡುವ ವಿಷಯದಲ್ಲಿ ಪ್ರೇರೇಪಿಸುತ್ತಾರೆ.) (ವಿಷ್ಣು ಪಕ್ಷದಲ್ಲಿ ಪರ್ವತಾನ್=ಜೀವರನ್ನು), ಪ್ರವೇಶಯಂತಿ =ಚೆನ್ನಾಗಿ ಪ್ರೇರೇಪಿಸುತ್ತಾರೆ. ವನಸ್ಪತೀನ್ =ಭಜಿಸಿಕೊಳ್ಳಳು ಯೋಗ್ಯರಾದ ಇಂದ್ರಾದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿ ದೇವತೆಗಳನ್ನು ಫಲವನ್ನು ಕೊಡೋಣದರಿಂದ ತಾರತಮ್ಯಾನುಸಾರವಾಗಿ ಪೃಥಕ್ಕರಿಸುತ್ತಾರೆ) ||೫||೧೪||

ಭಾ || (೧) ಪ್ರವೇಷಯಂತಿ ಪರ್ವತಾನ್ ವಿವಿಂಚಂತಿ ವನಸ್ಪತೀನ್ (೨) ಜನಿಪರ್ವತತೋ ಜೀವಾನ್ ಸಂಪ್ರೇರಯತಿ ಕೇಶವಃ || (೩) ಭಜನೀಯಪತೀನ್ ಬ್ರಹ್ಮಪೂರ್ವಾಂಶ್ಚ ಫಲದಾನತಃ | ತಾರತಮ್ಯೇನ ಸಮ್ಯಕ್ಚ ವಿವೇಚಯತಿ

**ಸರ್ವದಾ । (೪) ಸರ್ವಪ್ರಜಾಸ್ಥಿತಿಷ್ಮಂತ ಪ್ರಾಪ್ತಾಸ್ತಾಭಿಃ ಸಹೈವಚ ।। (೫) ಮತ್ತಾ ಇವ ಪ್ರೇರಯಂತಿ ಶುಭಾಶುಭಕೃತೌ ನರಾನ್ ।। ।।೫।।೧೮।।**

ಅ ।। (೧) (ಮರುತ್‌ಗಳು) ಪರ್ವತಗಳನ್ನು ಚೆನ್ನಾಗಿ ನಡುಗಿಸುತ್ತಾರೆ. ವೃಕ್ಷಗಳನ್ನು ಮೂಲ ಸಮೇತ ಕಿತ್ತು ಬಿಸಾಡುತ್ತವೆ. (೨) ಶ್ರೀ ಕೇಶವನು ಜನನ ರೂಪ ಪರ್ವಗಳುಳ್ಳ ಜೀವರನ್ನು ಚೆನ್ನಾಗಿ ಪ್ರೇರೇಪಿಸುತ್ತಾನೆ. (೩) ಭಜಿಸಿಕೊಳ್ಳಲು ಯೋಗ್ಯರಾದ ಗರುಡ ಶೇಷ ರುದ್ರಾದಿಗಳಿಗೆ ಅಧಿಪತಿಗಳಾದ ಬ್ರಹ್ಮಾದಿ ದೇವತೆಗಳಿಗೆ ಸರ್ವದಾ ಫಲವನ್ನು ದಾನ ಮಾಡುತ್ತಾ ತಾರತಮ್ಯಾನುಸಾರವಾಗಿ ಪೃಥಕ್ಕರಿಸುತ್ತಾನೆ. (೪) ಆ ಪ್ರಜೆಗಳಿಂದ ಕೂಡಿಕೊಂಡೇ ಸಂಬದ್ಧರಾದವರಾದರು. ಅಂದರೆ ಸಮಸ್ತ ಪ್ರಜೆಗಳಲ್ಲಿ ಸನ್ನಿಹಿತರಾಗಿದ್ದರು. (೫) ಮದೋನ್ಮತ್ತರಾದವರಂತೆ ತಮಗೆ ಪ್ರಯೋಜನಾನುಸಂದಾನರಹಿತರಾದವರಾಗಿಯೇ ಶುಭ ಅಶುಭ ಕರ್ಮಗಳನ್ನು ಮಾಡುವ ವಿಷಯದಲ್ಲಿ ಮನುಷ್ಯರನ್ನು ಪ್ರೇರೇಪಿಸುತ್ತಾರೆ. ।।೫।।

ಋ ।। **(೪೭೭) ಉಪೋ ರಥೇಷು ಪೃಷತೀರಯುಗ್ಧ್ವಂ ಪ್ರಷ್ಟಿರ್ವಹತಿ ರೋಹಿತಃ**

**ಅವೋ ಯಮಾಯ ಪೃಥಿವೀ ಚಿದಶ್ರೋದಬೀಭಯಂತ ಮಾನುಷಾಃ** ।।೬।।

ಅ ।। (ಎಲೋ ಮರುತ್‌ಗಳೇ) ರಥೇಷು=ರಥಗಳಲ್ಲಿ, ಪೃಪತಿಃ =ಹೆಣ್ಣು ಜಿಂಕೆಗಳನ್ನು, ಉಪೋ ಅಯುಗ್ಧ್ವಂ=ಕೂಡಿಸಿರುತ್ತೀರಿ. (ಸಂಬಂಧಿಸಿರುತ್ತೀರಿ) (ರೋಹಿತಶ್ಚ =ಜಿಂಕೆಯು, ಪ್ರಷ್ಟಿಃ =ಪೃಷ್ಠವನ್ನು ವಹತಿ =ಹೊಂದುತ್ತದೆ. (ಅಂದರೆ ಜಿಂಕೆಯನ್ನು ರತದಲ್ಲಿ ಪೃಷ್ಠಭಾಗದಲ್ಲಿ (ಹಿಂದುಗಡೆ) ಕೂಡಿಸಿರುತ್ತೀರಿ) ಆಗ, ವಃ =ನಿಮಗೆ, ಯಾಮಾಯ =ಗಮನವನ್ನು ಕುರಿತು, (ಗಮನವನ್ನು ಸಹಿಸುವುದಕ್ಕಾಗಿ) ಪೃಥಿವೀ ಚಿತ್=ಧರಾ ದೇವಿಯೂ ಕೂಡ, ದಾಢ್ಯಾಯ =ದೃಢವಾಗಿ ನಿಲ್ಲುವುದಕ್ಕಾಗಿ, ಆ ಅಶ್ರೋತ್=ಪುನಃ ಅತಿಶಯವಾಗಿ (ತನಗೆ ಆಧಾರಭೂತರಾದ ಶೇಷ ದೇವರನ್ನು) ಆಶ್ರಯಿಸಿತು. ಮಾನುಷಾಃ = ಮನುಷ್ಯರೂ ಕೂಡ, ಅಭೀಭಯಂತ = (ಅಭೀಭಯೇ) ಭಯವನ್ನು ಹೊಂದಿದರು. ।।೬।।

ಭಾ ।। **(೧) ಅಯುಜ್‌ಧ್ವಂ ಪೃಷತೀಶ್ಚೈವ ರೋಹಿತಂ ಪೃಷ್ಠತೋ ರಥೇ (೨) ವೋ ಯಾ ಮಂ ಪ್ರತಿದಾಢ್ಯಾಯ ಶೇಷಮಶ್ರೇತ್ಪುನರ್ಧರಾ । (೩) ಭೀತಿಮಾಪುರ್ಮಾನು ಷಾಶ್ಚ** ।।೬।।

ಅ ।। ರಥದಲ್ಲಿ ಹೆಣ್ಣು ಜಿಂಕೆಗಳನ್ನೂ ಪೃಷ್ಠ ಭಾಗದಲ್ಲಿ ಜಿಂಕೆಯನ್ನೂ (ಸಂಬಂಧಿರಿ) ಕೂಡಿಸಿರಿ (೨) ಧರಾದೇವಿಯೂ ಕೂಡ ನಿಮ್ಮ ಗಮನವನ್ನು ಸಹಿಸುವುದಕ್ಕಾಗಿ ಅತಿಶಯವಾಗಿ ಭೂಮಿಗೆ ಆಧಾರಭೂತನಾದ ಶೇಷ ದೇವನನ್ನು ಆಶ್ರಯಿಸಿದಳು. (೩) ಮನುಷ್ಯರೂ ಕೂಡ ಭಯವನ್ನು ಹೊಂದಿದರು. ।।೬।।

ಋ ।। **(೪೭೮) ಆ ವೋ ಮಕ್ಷೂ ತನಾಯ ಕಂ ರುದ್ರಾ ಅವೋ ವೃಣೀಮಹೇ ।**

**ಗಂತಾ ನೂನಂ ನೋಽವಸಾ ಯಥಾ ಪುರೇತ್ಥಾ ಕಣ್ವಾಯ ಬಿಭ್ಯುಷೇ ॥೭॥**

ಅ ॥ ರುದ್ರಾಃ = ರೋಗಪರಿಹಾರಕರಾದ ಮರುತ್‌ಗಳೇ, (ನಾವು) ವಃ =ನಿಮ್ಮ ಸಕಾಶದಿಂದ, ಕಂ =ಸುಖದ, ತನಾಯ=ಪ್ರಾಪ್ತಿಗಾಗಿ, ಮಕ್ಷು=ಶೀಘ್ರದಲ್ಲಿ, ವಃ=ನಿಮ್ಮ ಅವಃ =ರಕ್ಷಣೆಯನ್ನು ಆ ವೃಣೀ ಮಹೇ =ಪ್ರಾರ್ಥಿಸುತ್ತೇವೆ. ಆದ ಕಾರಣ ಹೇಗೆ, ಪುರಾ =ಪೂರ್ವ ಕಾಲದಲ್ಲಿ ಬಿಭ್ಯುಷೇ = ಭಯದಿಂದ ಕೂಡಿದ, ಕಣ್ವಾಯ = ಕಣ್ವನಾದ ನನಗೋಸ್ಕರ, (ಹೋಗುವವರಾಗಿ) ಇತ್ಥಾ=ಹಾಗೆಯೇ ನೂನಂ=ನಿಶ್ಚಯವಾಗಿ ಈಗಲೂ ಕೂಡ, ನಃ =ನಮ್ಮನ್ನು ಕುರಿತು, ಅವಸಾ =ರಕ್ಷಣವನ್ನು ಮಾಡುವವರಾಗಿಯೇ ಗಂತ = ಬನ್ನಿರಿ. ॥೭॥

**ಭಾ ॥ (೧) ಕ್ಷಿಪ್ರಂ ವಃ ಪ್ರಾಪ್ತಯೇ ಸುಖಂ ॥ ರಕ್ಷಾಂ ವೃಣೀಮಹೇ ಯುಷ್ಮದ್ಗಂತಾಽದ್ಯಾ (೨) ಪಿ ಚ ನೋಽವಸಾ ॥ ಭೀತಿಯುಕ್ತಾಯ ಕಣ್ವಾಯ ಮಹ್ಯಂ ॥೭॥**

ಅ ॥ (೧) ನಿಮ್ಮ ಸಕಾಶದಿಂದ, ಸುಖದ ಪ್ರಾಪ್ತಿಗಾಗಿ ಶೀಘ್ರವಾಗಿ, ನಿಮ್ಮ ರಕ್ಷಣೆಯನ್ನು ಪ್ರಾರ್ಥಿಸುತ್ತೇವೆ. (೨) (ಆದ ಕಾರಣ ಪೂರ್ವದಲ್ಲಿ) ಭಯದಿಂದ ಕೂಡಿರುವ ಅಣ್ವನಾದ ನನಗೋಸ್ಕರ, ಈಗಲೂ ಕೂಡ ನಮ್ಮನ್ನು ಕುರಿತು ರಕ್ಷಣೆಯನ್ನು ಮಾಡುವವರಾಗಿಯೇ ಬನ್ನಿರಿ ॥೭॥

**ಋ (೪೭೯) ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆ ಯೋನೋ ಅಭ್ವ ಈಷತೇ ।**

**ವಿ ತಂ ಯುಯೋತ ಶವಸಾ ವ್ಯೋಜಸಾ ವಿ ಯುಷ್ಮಾಕಾಭಿರೂತಿಭಿಃ ॥೮॥**

ಅ ॥ ಮರುತಃ =ಎಲೋ ಮರುತ್‌ಗಳೇ, ಯಃ=ಯಾವ ದುರಾತ್ಮನು, ಯುಷ್ಮೇಷಿತಃ = ಇಷುಗತೌ, ನೀವು ಸರ್ವಕ್ಕೂ ನಿಯಂತೃಗಳಾಗಿರುವುದರಿಂದ ಮುಖ್ಯವಾಗಿ ನಿಮ್ಮಿಂದಲೇ ಪ್ರೇರೇಪಿಸಲ್ಪಟ್ಟಿರುವನೋ ಅಥವಾ ಮರ್ತ್ಯೇಷಿತಃ =ಬಾಹ್ಯದೃಷ್ಟಿಯಿಂದ ಮನುಷ್ಯರಾದ ರಾಜಾದಿಗಳಿಂದ ಪ್ರೇರೇಪಿಸಲ್ಪಟ್ಟವನಾಗಿ, ನಃ = ನಮಗೆ ಅಭ್ವಃ = ಐಶ್ವರ್ಯಾಭಾವಗಳನ್ನು ಆ ಈಷತೇ =ಚೆನ್ನಾಗಿ ಇಚ್ಛಿಸುತ್ತಾನೋ, ತಂ =ಅಂತಹನನ್ನು (ನೀವು) ಶವಸಾ =ಸುಖದಿಂದ, ವಿಯುಯೋತ =ಓಡಿಸಿರಿ (ದುಃಖಿಗಳನ್ನಾಗಿ ಮಾಡಿರಿ.) ಓಜಸಾ =ಬಲದಿಂದಲೂ ವಿಯುಯೋತ=ಬಿಡಿಸಿರಿ. ಹಾಗೆಯೇ ಯುಷ್ಮಾಕಾಭಿಃ ಊತಿಭಿಃ =ನಿಮ್ಮದ್ವಾದ ಅಭಿಪ್ರಾಯಗಳಿಂದಲೂ, ವಿಯುಯೋತ= (ಯುಯು ವಿಯೋಗೇ) ಬಿಡಿಸಿರಿ. (ಉಪದ್ರವರಹಿತರನ್ನಾಗಿ ಮಾಡಿರಿ. ॥೮॥

**ಭಾ ॥ (೧) ಯುಷ್ಮಾಭಿರೇವಚ । ಪ್ರೇರಿತೋಽಥ ನಿಯಂತೃತ್ವಾದ್ಯುಷ್ಮಾಳಂ (೨) ಮಾನುಷೇಣ ವಾ । ಬಾಹ್ಯದೃಷ್ಟ್ಯಾತ್ವಭೂತೀರ್ನೋ ಯ ಇಚ್ಛತಿ (೩) ತಮೋಜಸಾ ॥ ಬಲೇನ ಚ ದ್ರಾವಯತ ಯುಷ್ಮದೀಯೋತಿಭಿಸ್ತಥಾ ॥೮॥**

ಅ ॥ (೧) ಯಾವ ದುರಾತ್ಮನು ನೀವು ಸಮಸ್ತಕ್ಕೂ ನಿಯಾಮಕರಾಗಿರುವುದರಿಂದ ಮುಖ್ಯವಾಗಿ ನಿಮ್ಮಿಂದಲೇ ಪ್ರೇರೇಪಿಸಲ್ಪಟ್ಟಿರುವನೋ, (೨) ಅಥವಾ ಬಾಹ್ಯದೃಷ್ಟಿಯಿಂದ ರಾಜಾದಿಮನುಷ್ಯರಿಂದ ಪ್ರೇರಿತನಾಗಿ ನಮಗೆ ಐಶ್ವರ್ಯಾಭಾವವನ್ನು ಚೆನ್ನಾಗಿ ಇಚ್ಛಿಸುತ್ತಾನೋ (೩) ಆತನನ್ನು ನೀವು ಪ್ರಕಾಶದಿಂದಲೂ ಬಲದಿಂದಲೂ ಹಾಗೆಯೇ ನಿಮ್ಮದ್ವಾದ ಅಭಿಪ್ರಾಯಗಳಿಂದಲೂ ಓಡಿಸಿರಿ ॥೮॥

ಋ (೪೮೦) ಅಸಾಮಿ ಹಿ ಪ್ರಯಜ್ಯವಃ ಕಣ್ವಂದದ ಪ್ರಚೇತಸಃ ।

ಅಸಾಮಿ ಭಿರ್ಮರುತ ಆನ ಊತಿಭಿರ್ಗಂತಾ ವೃಷ್ಟಿಂ ನ ವಿದ್ಯುತಃ ॥೯॥

ಅ ॥ ಪ್ರಯಜ್ಯವಃ =ಚೆನ್ನಾಗಿ ಯಾಗಗಳಿಂದ ಪೂಜಿಸಲ್ಪಡುವ ಪ್ರಚೇತಸಃ =ಪ್ರಕೃಷ್ಟಚಿತ್ತವುಳ್ಳ ಮರುತಃ = ಮರುತ್‌ಗಳೇ, (ನೀವು) ಕಣ್ವಂ =ಕಣ್ವನಾದ ನನಗೋಸ್ಕರ ಅಸಾಮಿ =ಅಸದೃಶವಾದ, ಅನುತ್ತಮವಾದ ಹಿ (ಅಭೀಪ್ಸಿತಂ) ಇಷ್ಟವಾದುದನ್ನೇ, ದದ =(ದದದಾನೇ) ಕೊಡಿರಿ. ಮತ್ತು ಅಸಾಮಿ ಭಿಃ =ಅಸದೃಶಗಳಾದ, ಊತಿಭಿಃ =ಅಭಿಪ್ರಾಯಗಳಿಂದ, (ನಮ್ಮನ್ನು ರಕ್ಷಿಸುವ ವಿಷಯದಲ್ಲಿ ಅಸದೃಶ ಅಭಿಪ್ರಾಯವುಳ್ಳ ನೀವು) ವಿದ್ಯುತ್=ಮಿಂಚುಗಳು, ವೃಷ್ಟಿಂನ = ಮಳೆಯನ್ನೆಂಬಂತೆ, (ಶೀಘ್ರವಾಗಿನಃ =ನಮ್ಮನ್ನು ನಮ್ಮ ರಕ್ಷಣಾದಿಗಳಿಗಾಗಿ ಶೀಘ್ರದಲ್ಲಿ) ಆ ಗಂತ =ಬನ್ನಿರಿ.

ಋ ॥ (೪೮೧) ಅಸಾಮ್ಯೋಜೋ ಬಿಭೃಥಾ ಸುದಾನವೋಽಸಾಮಿ ಧೂತಯಃ ಶವಃ ।

ಋಷಿದ್ವಿಷಃ ಮರುತಃ ಪರಿಮನ್ಯವ ಇಷುಂ ನಸೃಜತ ದ್ವಿಷಂ ॥೧೦॥

ಅ ॥ ಸುದಾನವಃ =ಚೆನ್ನಾಗಿ ದಾನ ಮಾಡುವ ಸ್ವಭಾವವುಳ್ಳ ಧೂತಯಃ =ಶತ್ರುಗಳನ್ನು ನಡುಗಿಸುತ್ತಿರುವ ಮರುತಃ =ಮರುತ್‌ಗಳೇ (ನೀವು) ಆಸಾಮಿ =ಅಸದೃಶವಾದ ಓಜಃ =ಬಲವನ್ನೂ ಬಿಭೃಥಃ = (ಡುಭೃಞ್‌ಧಾರಣ ಪೋಷಣಯೋಃ ಧರಿಸಿರುವಿರಿ. ಆಸಾಮಿ ಶವಃ=ಅಸದೃಶವಾದ ಸುಖವನ್ನೂ ಕೂಡ, ಬಿಭೃಥ=ತರಿಸಿರುವಿರಿ. (ಆದ ಕಾರಣ) ಪರಿಮನ್ಯವೇ =ಕೋಪವನ್ನು ಹೊಂದಿದ ಋಷಿದ್ವಿಷೇ=ಋಷಿಗೆ ದ್ವೇಷಿಯಾದ ದೈತ್ಯನನ್ನು ಕೊಲ್ಲುವುದಕ್ಕಾಗಿ ಇಷುಂ ನ=ಬಾಣವನ್ನೆಂಬಂತೆ ದ್ವಿಷಂ =ದೈತ್ಯರಿಗೆ ಪ್ರತಿವಿರೋಧಿಗಳಾದ ದೇವಾದಿಗಳನ್ನು ಸೃಜತ =ಸೃಷ್ಟಿಸಿರಿ. ॥೧೦॥೧೯॥೩॥

ಭಾ ॥ (೧) ಓಜೋ ಸಮಂ ಬಿಭೃಥ ಚ ಮಖೇಜ್ಯಾಃ ಸಮಮುತ್ತಮಂ । ಸುದಾನಶೀಲಾಃ ಕಣ್ವಾಯ ದತ್ತಾ ಸಮಮಭೀಪ್ಸಿತಂ ॥ (೨) ಅಸಮೈರ್ನೋಽಪ್ಯಭಿಪ್ರಾಯೈರ್ಗಂತ ವೃಷ್ಟಿಂ ನ ವಿದ್ಯುತಃ ॥೯॥೧೦॥೧೯॥೩॥

ಅ ॥ (೧) ಯಾಗಗಳಿಂದ ಪೂಜಿಸಲ್ಪಡತಕ್ಕ ಒಳ್ಳೆದಾನ ಮಾಡುವ ಸ್ವಭಾವವುಳ್ಳ ಮರುತ್‌ಗಳೇ ಅಸದೃಶವಾದ ಅನುತ್ತಮವಾದ ಬಲಾದಿಗಳನ್ನು ಧರಿಸಿರುತ್ತೀರಿ. (ಅಸಮಶಬ್ದವು ಸಮಾಭಾವವನ್ನು ಹೇಳುತ್ತದೆ. ಉತ್ತಮಾಭಾವವೆಂದು ಹೇಗೆ ಸಿಗುತ್ತದೆ ಎಂದರೆ) ಸಮವೆಂದರೆ ಉತ್ತಮವು. (ಅಂದರೆ ಸಮಶಬ್ದವು ಉತ್ತಮಕ್ಕೂ ಉಪಲಕ್ಷಕವು. ಕಣ್ವನಾದ

ನನಗೋಸ್ಕರ ಅಸದೃಶವಾದ ಇಷ್ಟವನ್ನು ಕೊಡಿರಿ. (೨) (ಇಸದೃಶ ಅಭಿಪ್ರಾಯಗಳಿಂದ ಅಂದರೆ ನಮ್ಮನ್ನು ರಕ್ಷಿಸುವ ವಿಷಯದಲ್ಲಿ ಅನುತ್ತಮ ಅಭಿಪ್ರಾಯಗಳುಳ್ಳ ನೀವು) ಮಿಂಚುಗಳ ವೃಷ್ಟಿಯನ್ನೆಂಬಂತೆ ನಮ್ಮನ್ನು ಹೊಂದಿರಿ. ||೧೦||೧೯||೭||

ವಿ || ಈ ೨ ಋಕ್ಕುಗಳಿಗೆ ಒಟ್ಟಿಗೆ ವ್ಯಾಖ್ಯಾನ ಮಾಡಲಿಕ್ಕೆ ಪ್ರಯೋಜನವೇನೆಂದರೆ ಅಸಾಮ್ಯೋಜಃ ಎಂಬ ಋಕ್ಕಿನಲ್ಲಿ ಸುದಾನವ ಎಂಬ ವಿಶೇಷಣಕ್ಕೂ ಶವೋಬಿಭೃಥ ಎನ್ನುವುದಕ್ಕೂ ಪ್ರಯೋಜನವಿಲ್ಲದಿರುವುದರಿಂದ ಎನ್ನುವುದರಿಂದ ಅನ್ವಯವೆಂದು ತಿಳಿಸುವುದಕ್ಕಾಗಿ ಮಿತ್ರವಾಗಿ (ಒಟ್ಟಿಗೆ) ವ್ಯಾಖ್ಯಾನ ಮಾಡಿದ್ದು. ತಥಾಚ ಯಕಾರಣದಿಂದ ನೀವು ದಾನ ಸ್ವಭಾವವುಳ್ಳವರೋ ಮಹಾಸುಖವುಳ್ಳವರೋ ಆದ ಕಾರಣ ಕೊಡಿರಿ ಎಂದು ಭಾವವು. ||೯||೧೦||೧೯||೩೯||೭||

ಅವ || ಉತ್ತಿಷ್ಠ ಇತ್ಯಾದಿಗಳು ೮ ಋಕ್ಕುಗಳುಳ್ಳದ್ದು ಮಾವವರ್ತಗಳು. ಬ್ರಹ್ಮಣ ಸ್ಪತ್ಯಾದಿಗಳು ದೇವತೆಗಳು ಪ್ರಗಾಥಾ ಛಂದಸ್ಕವು ಕಣ್ವನೇ ಋಷಿಯು. ೪೦ನೇ ಸೂಕ್ತವು.

ಋ || (೪೮೨) ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।
ಉಪ ಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ||೧||

ಅ || ಹೇ ಬ್ರಹ್ಮಣಸ್ಪತೇ =ಚತುರ್ಮುಖನಿಗೆ ಅಧಿಪತಿಯಾದ ಶ್ರೀ ವಿಷ್ಣುವೇ ಭಾರತೀಪತಿಯಾದ ಶ್ರೀ ವಾಯುವೇ, ಉತ್ತಿಷ್ಠ=ನಮ್ಮ ಸಮೀಪಕ್ಕೆ ಬರುವುದಕ್ಕಾಗಿ) ಎದ್ದು ನಿಲ್ಲು. ದೇವಯಂತಃ = (ದೀವು ಕ್ರೀಡಾವಿಜಿಗೀಷಾ ವ್ಯವಹಾರ ದ್ಯುತಿ ಸ್ತುತಿ ಮೋದ ಮದ ಸ್ವಪ್ನ ಕಾಂತಿ ಗತಿಷು ವ್ಯವಹಾರ ಶಬ್ದದಿಂದ ಪೂಜಾ ರೂಪಾ ವ್ಯವಹಾರವನ್ನು ಇಟ್ಟುಕೊಳ್ಳಬೇಕು) ಪೂಜೆಯನ್ನು ಸ್ತುತಿಯನ್ನಾಗಲೀ ಮಾಡುತ್ತಿರುವ, ನಾವು, ಯಾವ ಕಾರಣದಿಂದ ತ್ವಾ=ನಿನ್ನನ್ನು, ಈಮಹೇ = (ಈ ಇ ಗತೌ) ಶರಣು ಹೊಂದುತ್ತೇವೋ, (ಆದ ಕಾರಣ ಸುದಾನವಃ ಮರುತಃ =ಒಳ್ಳೇ ದಾನ ಮಾಡುವ ಸ್ವಭಾವವುಳ್ಳ, ಮರುತ್‌ಗಳೇ ನಮ್ಮನ್ನು, ಉಪ ಪ್ರಯಂತುಃ =ಬನ್ನಿರಿ. ಇಂದ್ರಂ =ಇಂದ್ರನೇ ನೀನು, ಸಂಚಾ =ಸುಖದಿಂದಲೇ (ನಮ್ಮ ಯಜ್ಞವನ್ನು, ಪ್ರಾಶೂರ್ಭವ= (ಪ್ರಕರ್ಷೇಣ ಅಶ್ನಾತೀತಿ ಪ್ರಾಶೂಃಅಶಭೋಜನೇ) ಚೆನ್ನಾಗಿ ಭೋಜನ ಮಾಡಿದವನು ಆಗು. ||೧||

ಭಾ (೧) ದೇವಯಂತಃ ಪೂಜಯಂತಃ ಸ್ತುವಂತೋऽ (೨) ಶಿಕೃತಾತನಃ । ಪ್ರಾಶೂಃ ||೧||

ಅ || (೧)ದೇವಯಂತಃ =ಪೂಜಿಸುತ್ತಿರುವ, ಅಥವಾ ಸ್ತುತಿಸುತ್ತಿರುವ ನಾವು (೨) ಪ್ರಾಶೂಃ =ಅತಿಶಯವಾಗಿ, ಕೃತಂ=ಮಾಡಲ್ಪಟ್ಟ ಆತನಂ=ಭೋಜನಂ ಅನೇನ ಎಂಬ ವ್ಯುತ್ಪತ್ತಿಯಿಂದ) ಅತಿಶಯವಾಗಿ ಭೋಜನ ಮಾಡಿದವನು ಪ್ರಾಶೂಃ ಎನಿಸುತ್ತಾನೆ ||೧||

ಅ || (೨ನೇ ಈ ಋಕ್ಕಿಗೆ ಸಹಸಸ್ಪುತ್ರರು ಮರುತ್‌ಗಳೂ ಕೂಡ ದೇವತೆಗಳು) ಹೇಸಹಸಃ ಪುತ್ರ =ವಾಯು ದೇವರಿಂದ ಅಭಿವ್ಯಂಗ್ಯನಾದ ಪ್ರಯುಕ್ತ ವಾಯುವಿನ ಪುತ್ರನೆನಿಸಿಕೊಂಡ ಶ್ರೀ ವಿಷ್ಣುವೇ ಅಥವಾ ವಾಯುವಿನಿಂದ ಹುಟ್ಟಿರುವ ಪ್ರಯುಕ್ತ ವಾಯು ಪುತ್ರನಾದ ಇಂದ್ರನೇಷ ಯಃ ಮರ್ತ್ಯ =ಯಾವ ಮನುಷ್ಯನು ತ್ವಾ ಮಿತ್ =ನಿನ್ನನ್ನೇ, ಹೇ

ಮರುತಃ =ಎಲೋ ವಾಯುಗಳೇ, ವಃ = ನಿಮ್ಮನ್ನು ಕೂಡ, ಹಿತೇ ಧನೇ=ಯುದ್ಧ ವಿಷಯದಲ್ಲಿ, ಅಥವಾ ನಿಹಿತವಾದ ಅಂದರೆ ನಿಧಿ ರೂಪವಾದ ಧನ ವಿಷಯದಲ್ಲಿ ಆದರೂ, ಉಪಬ್ರೂತೇ = ಅತ್ಯಂತವಾಗಿ ಸ್ತುತಿಸುತ್ತಾನೋ, ಆಜಕೇ = (ಚಕ ತೃಪ್ತೌ) ನೋಡಿರುವನೋ, ಸಃ =ಆತನು, ಸುವೀರ್ಯಂ= ಬಹು ವೀರ್ಯವತ್ತಾದ, ಸ್ವಶ್ವ್ಯ= (ಶೋಭನಾಶ್ವತೇ ಅಶ್ವಾಶ್ವ ಸ್ವ್ಯಶ್ವಾಃ =ಇಂದ್ರಿಯಗಳು. ತೇಷಾಂ ಇದಂ ಸ್ವಶಂ) ಜ್ಞಾನ ಮೊದಲಾದುದನ್ನೂ, ಅದಧೀತ =ಧರಿಸಿರುವನು. ಹೊಂದಿರುವನು. ಹಿ=ಪ್ರಸಿದ್ಧವು. ॥೨॥

ಭಾ ॥ (೧) ಸುತೇತ್ಯೇವ ಸಹಸಸ್ಪುತ್ರ ಇತ್ಯಥ ॥ (೨) ತದ್ವ್ಯಂಗ್ಯತ್ವಾದ್ಧರಿಃ ಪ್ರೋಕ್ತಃ ಶಕ್ರಸ್ತತ್ಸುತ ಏವಚ ॥ (೨) ಯುದ್ಧಂ ಹಿತಧನಂ ಪ್ರೋಕ್ತಂ ನಿಹಿತಂ ಧನಮೇವ ವಾ ॥ (೪) ಸ್ವಶ್ವ್ಯಂತು ಸ್ವಿಂದ್ರಿಯ ಫಲಮಾಚಕೇಽಪತ್ಯದಿತ್ಯಪಿ ॥೨॥

ಅ ॥ (೧) ಸಹಸಸ್ಪುತ್ರ ಎನ್ನುವುದಕ್ಕೆ ವಾಯುವಿನ ಮಗನು ಎಂದೇ ಸಾಮಾನ್ಯತಃ ಅರ್ಥವು (ಶ್ರುತಿಯಲ್ಲಿ ಸಹಸಸ್ಪುತ್ರ ಎಂದು ಸಂಬುಧ್ಯಂತನಾದುದಕ್ಕೆ ಬಾಷ್ಯದಲ್ಲಿ ಸಹಸಃ ಪುತ್ರಃ ಎಂದು ಸಂಧಿಯಿಲ್ಲದೆ ಪ್ರಯೋಗವು. ಹೇಗೆಂದರೆ ವಿವಕ್ಷಿತವಾದ ಸಂಧಿಯು ಆಗುತ್ತದೆ, ಎಂದು ವೈಯಾಕರಣ ವ್ಯವಹಾರದಿಂದ ಪುತ್ರಃ ಎಂದು ಸಂಧಿಯಿಲ್ಲದೆ ನಿರ್ದೇಶ ಮಾಡಿದ್ದು. ಹಾಗಾದರೆ ಸಹಃ ಶಬ್ದಕ್ಕೆ ವಾಯು ಎಂಬ ಅರ್ಥವು ಹೇಗೆ ಎಂದರೆ ಸಹಃ ಶಬ್ದಕ್ಕೆ ಬಲನಾಮಗಳಲ್ಲಿ ಪಾಠವಿದೆ. ವಾಯು ಶಬ್ದವು, ಬಳಿತ್ತೇತ್ಯಾದಿಗಳಲ್ಲಿ ಬಲ ಜ್ಞಾನಾಥಕವೆಂದು ವ್ಯಾಖ್ಯಾತವಾಗಿದೆ. ಆದ ಕಾರಣ ಏಕದೇಶಕ್ಕೆ ವಿಶಿಷ್ಟ ಲಕ್ಷಣೆಯಿಂದ ವಾಯುವೆಂದರ್ಥವು. ಸಿದ್ಧವಾಗಿದೆ ಎಂಬ ಅಭಿಪ್ರಾಯದಿಂದ ಸುರೇತ್ಯೇವ ಎಂಬಲ್ಲಿ ಏವ ಶಬ್ದವು.) (೨) (ಸಾಮಾನ್ಯತಃ ವ್ಯಾಖ್ಯಾನ ಮಾಡಿ ವಿಶೇಷತಃ ವ್ಯಾಖ್ಯಾನವನ್ನು ತೋರಿಸುತ್ತಾರೆ) ಸಹಸಸ್ಪುತ್ರ ಎನ್ನುವುದಕ್ಕೆ ವಾಯು ಪುತ್ರನು ಶ್ರೀ ಹರಿಯು ಎಂದು ಅರ್ಥವಿವಕ್ಷಿತವಾದರೆ) ಶ್ರೀ ಹರಿಯು ರುದ್ರಾದಿಗಳಿಗೆ ವಾಯುವೇದರ ಉಪದೇಶದಿಂದ ವ್ಯಕ್ತನಾಗುವುದರಿಂದ ಶ್ರೀ ಹರಿಯು ವಾಯುವಿನ ಪುತ್ರನೆಂದು ಹೇಳಲ್ಪಡುತ್ತಾನೆ. ದೇವೇಂದ್ರನು ವಾಯುವಿನಿಂದ ಹುಟ್ಟಿರುವುದರಿಂದ ವಾಯುಪುತ್ರನೇ ಆಗಿರುತ್ತಾನೆ. (ಅಲ್ಲಿ ಔಪಚಾರಿಕ ಪ್ರಯೋಗವೆಂದು ಹೇಳಬೇಕಾಗಿಲ್ಲ. (೩) (ಧನೇಹಿತೇ ಎನ್ನುವುದರ ಅರ್ಥ ಹೇಳುತ್ತಾರೆ) ಯುದ್ಧವು ಹಿತಧವೆಂದು ಹೇಳಲ್ಪಡುತ್ತದೆ. (ಆಜೌ ಪ್ರಧನೇ ಎಂದು ಸಂಗ್ರಾಮ ನಾಮಗಳಲ್ಲಿ ಪಠಿತವಾದ ಪ್ರಯುಕ್ತ ನಿಘಂಟುಸಿದ್ಧವೆಂದು ಯುಕ್ತವಾಯ್ತು. ಅಥವಾ ನಿಹಿತಂ=ನಿಧಿರೂಪವಾದ ಧನವೇ ಹಿತಧನವೆನಿಸುತ್ತದೆ. (೪) (ಸ್ವಶ್ವ್ಯಂ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಶೋಭನಗಳಾದ ಅಶ್ವರೂಪಗಳಾದ ಇಂದ್ರಿಯಗಳ ಫಲವಾದ ಜ್ಞಾನಾದಿಗಳನ್ನು ಆ ಚಕೇ = (ಚಕತೃಪ್ತೌ ಎಂಬುವುದು ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ದರ್ಶಣಾರ್ಥದಲ್ಲಿಯೂ ಇದೆ.) ಕಂಡನು. ॥೨॥

ಋ ॥ (೪೮೪) ಪ್ರೈತು ಬ್ರಹ್ಮಣಸ್ಪತಿಃ ಪ್ರದೇವ್ಯೇತು ಸೂನೃತಾ ।
ಅಚ್ಛಾ ವೀರಂ ನರ್ಯಂ ಪಙ್ಕ್ತರಾಧಸಂ ದೇವಾ ಯಜ್ಞಂ ನಯಂತು ನಃ ॥೩॥

ಅ ॥ (ಈ ೩ನೇ ಋಕ್ಕಿಗೆ ಬ್ರಹ್ಮಣಸ್ಪತಿಯು ಸೂನೃತಾ ದೇವಿಯು, ಮತ್ತು ದೇವತೆಗಳೂ ದೇವತೆಗಳು)

ಬ್ರಹ್ಮಣಸ್ಪತಿಃ = ಶ್ರೀ ವಿಷ್ಣುವು, ಅಥವಾ ವಾಯುವು, ಪ್ರಏತು = (ಸೂನೃತಂ ಮಂಗಲೇ ಸತ್ಯೇ ಪ್ರಿಯ ವಾಚಿಚ ಸೂನೃತಂ ಇತಿವಿಶ್ವಃ) ಪ್ರಿಯವಚನಕ್ಕೆ ಅಭಿಮಾನಿನಿಯಾದ, ದೇವೀ = ಸರಸ್ವತೀದೇವಿಯು, ಅಥವಾ ವಿಷ್ಣುಸಂಬಂಧಿನಿಯಾದ ಅಜ್ಞಾನರೂಪವಾದ ವಚನವು, ಪ್ರಏತು=ಮುಂಡುಗಡೆ ಹೋಗಲಿ, ದೇವಾಃ =ಇತರ ಸಮಸ್ತ ದೇವತೆಗಳೂ ಕೂಡಾ ನಃ =ನಮ್ಮದಾದ, ಯಜ್ಞಂ ಯಾಗವನ್ನು ವೀರಂ = (ವೀರಸ್ತು ಸುಭಟೇ ಶ್ರೇಷ್ಠೇ ಇತಿ ವಿಶ್ವಃ) ಶ್ರೇಷ್ಠವಾದ, ನರ್ಯಂ = (ನ ರೀಯತೇ ನ ಕ್ಷಿಯತೇ ಇತಿ ನರ್ಯಂ ) ಕ್ಷಯ (ನಾತ) ರಹಿತನಾದ, ಪಜ್ತ್ರರಾಧಸಂ = (ಪಜ್ತ್ರ ವಿಂಶತಿ ತ್ರಿಂಶಚ್ಚತ್ವಾರಿಂತನ್, ಇತ್ಯಾದಿ ನಿಪಾತ ಮಾಡಿರುವುದರಿಂದ ಪಜ್ತ್ರು ಶಬ್ದವು ಪಂಚನ್ ಪರ್ಯಾಯವು.) ಪಂಚ ವಿಧರಾದ ದೇವ ಗಂಧರ್ವ ನೃ ಪಿತೃದೈತ್ಯರೂಪರಾದ ಜನರನ್ನು (ರಾಧಯತಿ) ಸೃಷ್ಟಿಸ್ಥಿತ್ಯಾದಿಗಳಿಂದ ಅಭಿವೃದ್ಧೀಕರಿಸುವ ಶ್ರೀ ಹರಿಯನ್ನು, ಅಚ್ಛ=ಕುರಿತು, ನಿಯಂತ = ಹೊಂದಿಸಲಿ. ||೩||

ಭಾ || **(೧) ಪತಿಸ್ತು ಬ್ರಹ್ಮಣೋ ವಿಷ್ಣುರ್ವಾಗೀಶತ್ವಾತ್ಸಮೀರಣಃ || (೨) ಅಗ್ರತೋ ಯಾತ್ವಸಾ ವಸ್ಮತ್ಕಾರ್ಯೇಷ್ವೇವಂ ಸರಸ್ವತೀ || ಸೂನೃತಾ ವೈಷ್ಣವೀ ವಾಗ್ವಾ (೩) ಯಜ್ಞಂ ವೀರಂ ನರಂ ರತಿನಯಂತು । ದೇವಾಃ ಸರ್ವೇಽಪಿ (೪) ಯತ್ವಂಚಜನವರ್ಧನಃ । ಪಂಜ್ತ್ರುರಾಧಾ ಹರಿಸ್ತೇನ (೫) ವೀರೋ ನರ್ಯಸ್ಸ ಏವಚ || (೬) ದೇವ ಗಂಧರ್ವ ನೃ ಪಿತೃ ದೈತ್ಯಾಃ ಪಂಚಜನಾಭಿಧಾಃ ||೩||**

ಅ || (೧) (ಬ್ರಹ್ಮಣಸ್ಪತಿ ಶಬ್ದಾರ್ಥವನ್ನು ಪುನಃ ಸ್ಮೃತಿದಥಕ್ಕೆ ತರಿಸುತ್ತಾರೆ.) ಶ್ರೀ ವಿಷ್ಣುವು ಚತುರ್ಮುಖನಿಗೆ ಅಧಿಪತಿಯಾದುದರಿಂದ ಬ್ರಹ್ಮಣಸ್ಪತಿಯೆನಿಸುತ್ತಾನೆ. ಹಾಗೆಯೇ ವಾಯುದೇವರೂ ಭಾರತಿಗೆ ಪತಿಯಾಗಿ ನಿಯಾಮಕರಾದುದರಿಂದ ಬ್ರಹ್ಮಣಸ್ಪತಿಯೆನಿಸುತ್ತಾರೆ. (೨) (ಈಗ ಋಕ್ಕನ್ನು ವ್ಯಾಖ್ಯಾನ ಮಾಡುತ್ತಾರೆ) ಈ ವಿಷ್ಣು ವಾಯುಗಳು ನಮ್ಮ ಕಾರ್ಯಗಳಲ್ಲಿ ಮುಖ್ಯಾಸಾಥಕರಾಗಲಿ ಹೀಗೆಯೇ ಪ್ರಿಯವಚನಕ್ಕೆ ಅಭಿಮಾನಿನಿಯಾದ ಸರಸ್ವತಿಯೂ ಅಥವಾ ವಿಷ್ಣು ಸಂಬಂಧಿಯಾದ ಅಜ್ಞಾರೂಪವಚನವೂ ಮುಖ್ಯ ಸಾಧಕವಾಗಲಿ. (೩) ಇತರ ಸಮಸ್ತ ದೇವತೆಗಳೂ ನಮ್ಮ ಯಜ್ಞವನ್ನು ಸರ್ವಶ್ರೇಷ್ಠನೂ ನಾಶವಿರಹಿತನೂ ಆದ ಶ್ರೀ ಹರಿಯನ್ನು ಕುರಿತು ಹೊಂದಿಸಲಿ. (೪) ಯಾವ ಕಾರಣದಿಂದ ಶ್ರೀ ಹರಿಯು ದೇವಾದಿ ಐದು ವಿಧ ಜನರನು ಸೃಷ್ಟಿಸ್ಥಿತ್ಯಾದಿಗಳಿಂದ ಅಭಿವೃದ್ಧೀಕರಿಸುವನೋ, ಆದುದರಿಂದ ಶ್ರೀ ಹರಿಯು ಪಂಜ್ತ್ರರಾಧಾಃ (ಪಂಜ್ತ್ರಂರಾಧಯತೀತಿ ಎಂಬ ವ್ಯುತ್ಪತ್ತಿಯಿಂದ) ದೇವಾದಿಗಳಿಗೆ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವವನೆನಿಸುತ್ತಾನೆ. (೫) ಆ ಶ್ರೀ ಹರಿಯೇ ವೀರಃ = ಸರ್ವಶ್ರೇಷ್ಠನೆಂದೂ ನರ್ಯ =ನಾಲ್ಕು ವಿಧ ನಾಶರಹಿತನೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ. (೬) (ಪಂಚ ಜನರು ಯಾರೆಂದರೆ) ದೇವತೆಗಳು, ಗಂಧರ್ವರು, ನರರು, ಪಿತೃ ದೇವತೆಗಳು ದೈತ್ಯರು ಎಂದು ಪಂಚ ಜನರೆಂದು ಹೆಸರುಳ್ಳವರು. ||೩||

ಋ **(೪೮೫) ಯೋ ವಾಘತೇ ದದಾತಿ ಸೂನರಂ ವಸು ಸ ಧತ್ತೇ ಅಕ್ಷಿತಿ ಶ್ರವಃ ।**

**ತಸ್ಮಾ ಇಳಾಂ ಸುವೀರಾಮಾ ಯಜಾಮಹೇ ಸುಪ್ರತೂರ್ತಿ ಮನೇಹಸಂ** ||೪||

ಅ || (ಈ ನಾಲ್ಕನೇ ಋಕ್ಕಿಗೂ ೫ನೇ ಋಕ್ಕಿಗೂ ಬ್ರಹ್ಮಣ ಸ್ಪತಿಯು ದೇವತೆಯು) ಯಃ = ಯಾವ ಶ್ರೀ ವಿಷ್ಣುವು,

ವಾಘತೇ =ಸ್ತೋತ್ರಮಾಡುವ ಭಕ್ತನಿಗೋಸ್ಕರ, ಸೂನರಂ ವಸು = (ಸುಷ್ಠುಭವತಿ ನರಃಯೇನ ಎಂಬ ವ್ಯುತ್ಪತ್ತಿಯಿಂದ) ಒಳ್ಳೇ ಜ್ಞಾನವನ್ನು, ದದ್ಯಾ= ಕೊಡುತ್ತಾನೋ, ಸಃ =ಅಶ್ರೀ ವಿಷ್ಣುವು, ಅಕ್ಷಿತಿಶ್ರವಃ =ವಿನಾಶವಿಲ್ಲದಿರುವ (ಶಾಶ್ವತವಾದ) ಕೀರ್ತಿಯನ್ನು ಧತ್ತೆ = ಧರಿಸುತ್ತಾನೆ. ಯಾವ ಶ್ರೀ ಹರಿಯು ಅಕ್ಷಯ ಕೀರ್ತಿಯನ್ನು ಧರಿಸುತ್ತಾನೋ, ತಸ್ಮೈ =ಅಂತಹ ಶ್ರೀ ವಿಷ್ಣುವಿಗೋಸ್ಕರ, ಸುವಿರಾಂ =ಶೋಭನವಾದ ವೀರ್ಯವುಳ್ಳ, (ಒಳ್ಳೇವೀರ್ಯವನ್ನುಂಟು ಮಾಡುವ) ಸುಪ್ರತೂರ್ತಿಂ= (ಪ್ರಪೂರ್ವಾತ್ ತುರ್ವೀ ಹಿಂಸಾಯಾಂ, ಪ್ರಶೂರ್ತಿ ಶಬ್ದಃ ರೂಪ ನಾಮಸು ಪಠಿತಃ) ಒಳ್ಳೇ ರೂಪವನ್ನು ಮಾಡುವ (ಅಥವಾ ತೂರೀ ಗತಿತ್ವರ ಹಿಂಸಯೋಃ) ವೇಗವನ್ನುಂಟು ಮಾಡುವ, ಅನೇಹಸಂ = (ಅನಾನಾಂ ಈಹಾ ಯಸ್ಯಾಃ ಎಂಬ ವ್ಯುತ್ಪತ್ತಿಯಿಂದ) ಇಂದ್ರಿಯಗಳಿಗೆ ವಿಶೇಷತಃ ಚೇಷ್ಟೆಯನ್ನುಂಟು ಮಾಡುವ, ಇಳಾಂ=ಅನ್ನವನ್ನು (ಹವಿಸ್ಸನ್ನು) ಆಯಜಾಮಹೇ =ಕೊಡುತ್ತೇವೆ. ||೪||

ಭಾ || (೧) ವಾಘತೇ ಸ್ತುವತೇ ವಿಷ್ಣುರ್ದದಾತಿ ಸೂನರಂ ವಸು || (೨) ಸುಷ್ಠುಯೇನ ನರೋ ಭೂಯಾತ್ಸೂನರಂ ಜ್ಞಾನಮುಚ್ಯತೇ || (೩) ಸ ಧತ್ತೇ ಚಾಕ್ಷಯಾಂ ಕೀರ್ತಿಮಿಳಾಮನ್ನಂ ಯಜಾಮಹೇ || (೪) ಸುವೀರ್ಯತ್ವಾತ್ಸುವೀರಂ ತತ್ಸುಪ್ರತೂರ್ತಿ ಸುಪೇಶಕೃತ್ | ಪ್ರಾಣಚೇಷ್ಟಾ ನಿಮಿತ್ತತ್ವಾತ್ತದನೇಹ ಇತೀರಿತಂ ||೪||

ಅ || (೧) ಶ್ರೀ ವಿಷ್ಣುವು, ವಾಘತೇ =ಸ್ತುತಿಸುವ ಭಕ್ತನಿಗೋಸ್ಕರ, ಸೂನರಂವಸುವನ್ನು ಕೊಡುತ್ತಾನೆ) (೨) (ಸೂನರವೆಂದರೆ ಯಾವುದು ಹೇಗೆ ಎಂದರೆ) ಮನುಷ್ಯನು ಯಾವುದರಿಂದ ಚೆನ್ನಾಗಿ ಯೋಗ್ಯನು ಆಗುತ್ತಾನೋ ಅಂತಹ ಪ್ರಶಸ್ತ ಜ್ಞಾನವು ಸೂವರನೆನಿಸುತ್ತದೆ. (೩) ಯಾವ ವಿಷ್ಣುವು ಸ್ತುತಿಸುವವನಿಗೆ ದ್ರವ್ಯವನ್ನು ಕೊಡುತ್ತಾನೋ, ಆತನು ಅಕ್ಷಯಕೀರ್ತಿಯನ್ನು ಹೊಂದುತ್ತಾನೆ. ಯಾವನು ಅಕ್ಷಯಕೀರ್ತಿಯನ್ನು ಹೊಂದುತ್ತಾನೋ, ಆತನಿಗೆ ಇಳಾಂ = ಅನ್ನವನ್ನು ಕೊಡುತ್ತೇವೆ. (೪) (ಅನ್ನದಲ್ಲಿ ಸುವೀರಾದಿ ಶಬ್ದಗಳನ್ನು ವ್ಯಾಖ್ಯಾನ ಮಾಡುತ್ತಾರೆ) ಅನ್ನವು ಒಳೇ ವೀರ್ಯವನ್ನುಂಟು ಮಾಡುವುದರಿಂದ ಸುವೀರವೆನ್ನಿಸುತ್ತದೆ. ಒಳ್ಳೇರೂಪವನ್ನುಂಟುಮಾಡುವುದರಿಂದ ಸುಪ್ರಮೂರ್ತಿ ಎನಿಸುತ್ತದೆ. ಇಂದ್ರಿಯಗಳ ಚೇಷ್ಟೆಗೆ ನಿಮಿತ್ತ ಕಾರಣವಾದುದರಿಂದ ಆ ಅನ್ನವು ಅನೇಹಃ ಎನಿಸುತ್ತದೆ. ||೪||

ಋ || (೪೮೬) ಪ್ರನೂನಂ ಬ್ರಹ್ಮಣಸ್ಪತಿರ್ಮಂತ್ರಂ ವದತ್ಯುಕ್ಥ್ಯಂ |
ಯಸ್ಮಿನ್ನಿಂದ್ರೋ ವರುಣೋ ಮಿತ್ರೋ ಅರ್ಯಮಾ ದೇವಾ ಓಕಾಂಸಿ ಚಕ್ರಿರೇ ||೫||೨೦||

ಅ || ಬ್ರಹ್ಮಣಸ್ಪತಿಃ = ಆ ಶ್ರೀ ವಿಷ್ಣುವೇ, ಯಸ್ಮಿನ್ ಮಂತ್ರೇ = ಯಾವ ಮಂತ್ರದಲ್ಲಿ, ಇಂದ್ರಃ = ಇಂದ್ರನು, ವರುಣಃ =ವರುಣನು, ಮಿತ್ರಃ =ಮಿತ್ರಾಖ್ಯ ಸೂರ್ಯನು, ಅರ್ಯಮಾ=ಸೂರ್ಯನು ಇತರ ದೇವತೆಗಳೂ ಕೂಡ ಓಂಕಾಸಿ =ಮನೆಗಳನ್ನು, ಚಕ್ರಿರೇ =ಮಾಡಿರುವರೋ (ಪ್ರತಿಪಾದ್ಯರಾಗಿರುತ್ತಾರೋ ಅಂದರೆ ಅಮುಖ್ಯವಾಗಿ ಇಂದ್ರಾದಿ ದೇವತೆಗಳು ವಾಚ್ಯರಾಗಿರುತ್ತಾರೋ) ಅಂತಹ, ಉಕ್ಥ್ಯಂ = (ಉತ್‌ಪೂರ್ವಕಾತ್ ಷ್ಠಾಗತಿ ನಿವೃತ್ತೌ ಸರ್ವರಿಗೂ ಉತ್ಪಾದಕನಾಗಿರುವುದರಿಂದ ಉಕ್ಥಃ =ಉಕ್ಥ್ಯನೆನಿಸಿದ ಶ್ರೀ ವಿಷ್ಣುವು) ಶ್ರೀ ವಿಷ್ಣು ವಿಷಯಕವಾದ ಮಂತ್ರಂ = ಮಂತ್ರವನ್ನು ನೂನಂ ನಿಶ್ಚಿತ ಹೇಗೆ

ಆದೀತೂ ಹಾಗೆ, ಪ್ರವದತಿ = ಹೇಳುವನು. (ಅಂದರೆ ಸಮಸ್ತ ವೇದಗಳಿಗೆ ಪ್ರವರ್ತಕನೂ ಮುಖ್ಯತಃ ವಾಚ್ಯನೂ ಶ್ರೀ ವಿಷ್ಣುವೇ) ||೫||

**ಭಾ || (೧) ಸ ಏವ ಭಗವಾನ್ ವಿಷ್ಣುರ್ಮಂತ್ರಂ ತದ್ವಿಷಯಂ ವದೇತ್ || (೨) ಉಕ್ಥ ಮುತ್ಥಾಪಕತ್ವೇನ ಸ ಏವ ಭಗವಾನ್ ಹರಿಃ || (೩) ತನ್ಮಂತ್ರವಾಚ್ಯಾ ದೇವಾಶ್ಚ ||೫||೨೦||**

ಅ || (೧) ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವೇ ಮಂತ್ರವನ್ನು ವಿಷ್ಣು ವಿಷಯಕವನ್ನಾಗಿ ಹೇಳುತ್ತಾನೆ. (೨) (ಯಾವುದು ಉಕ್ಥವು ಹೇಗೆ ಎಂದರೆ) ಆ ಶ್ರೀ ಹರಿಯೇ ಸರ್ವವಸ್ತುವಿಗೂ ಉತ್ಪಾದಕನಾದುದರಿಂದ ಉಕ್ಥನೆನಿಸುತ್ತಾನೆ. (೩) ಇಂದ್ರಾದಿ ದೇವತೆಗಳು ಕೂಡ ಭಗವದ್ವಿಷಯಕವಾದ ಮಂತ್ರಕ್ಕೂ ಅಮುಖ್ಯವಾಗಿ ವಾಚ್ಯರು ಆಗುತ್ತಾರೆ. (ಸಮಸ್ತ ವೇದಗಳಿಗೂ ಮುಖ್ಯತಃ ಪ್ರವರ್ತಕನೂ ವಾಚ್ಯನೂ ಆ ಶ್ರೀ ಹರಿಯೇ) ||೫||

**ಋ || (೪೮೭) ತಮಿದ್ವೋಚೇಮಾ ವಿದಥೇಷು ಶಂಭುವಂ ಮಂತ್ರಂ ದೇವಾ ಅನೇಹಸಂ |**

**ಇಮಾಂ ಚ ವಾಚಂ ಪ್ರತಿಹರ್ಯಥಾ ನರೋ ವಿಶ್ವೇದ್ವಾಮಾ ವೋ ಅಶ್ನವತ್ ||೬||**

ಅ || (೬, ೭ನೇ ಋಕ್ಕುಗಳಿಗೆ ದೇವತೆಗಳೇ ದೇವತೆಗಳು) ದೇವಾಃ =ದೇವತೆಗಳಿರಾ, ವಯಂ =ನಾವು, ತಮಿತ್ =

(ಇಂದ್ರಾದಿ ದೇವತೆಗಳು ಯಾವ ಮಂತ್ರಕ್ಕೆ ಅಮುಖ್ಯವಾಗಿ ವಾಚ್ಯರೆಂದು ಹೇಳಲ್ಪಟ್ಟಿರುತ್ತಾರೋ) ಅಂತಹ ಶಂಭುವಂ = (ಶಂಭವತ್ಯಸ್ಮಾದಿತಿ, ಅಥವಾ ಶಂ =ಸುಖವು ಯಸ್ಮಾದ್ಭವತಿ ಎಂಬ ವ್ಯುತ್ಪತ್ತಿಯಿಂದ) ಸುಖ ಕಾರಣವಾದ, ಅನೇಹಸಂ = ಇಂದ್ರಿಯಗಳ ಪ್ರವೃತ್ತಿಗೆ ಕಾರಣವಾದ, ಮಂತ್ರಂ =ಮಂತ್ರವನ್ನು ವಿಧಥೇಷು = (ವಿದಜ್ಞಾನೇ ಅಥ ಇ ಪ್ರತ್ಯಯವು) ಜ್ಞಾನಕ್ಕಾಗಿ, ವೋಚೇಮ = (ವಚಪರಿಭಾಷಣೇ) ಜಪಿಸುತ್ತೇವೆ. ನರಃ = ಎಲೋ ದೇವತೆಗಳೇ, (ನಿಮ್ಮ ಮಂತ್ರವನ್ನು ಜಪಿಸತಕ್ಕ ನಾವು) ಇಮಾಂ ಚ ವಾ ಚಂ = ನಮ್ಮ ಈ ಮಾತನ್ನು ಪ್ರತಿಹರ್ಯಥ = (ಹರ್ಯಕ್ಲಮೇ ಗತೌ) ಸತ್ಯವಾಗಿ ಸ್ವೀಕರಿಸಿರಿ. ವಃ =ನಿಮ್ಮ ಪ್ರಸಾದದಿಂದ, ವಿಶ್ವಾ ಇತ್ =ಎಲ್ಲಾ ವಾಮಾ =ಮಂಗಲಗಳನ್ನು, ಅಶವತ್ = (ಅಶಭೋಜನೇ) ನಾನು ಹೊಂದಿರುತ್ತೇನೆ. ||೬||

**ಭಾ || ಯದ್ವಾಚ್ಯಾ ದೇವತಾಸ್ತು ತಾಃ | ತಮೇವ ಮಂತ್ರಂ ವೋಚೇಮ ಜ್ಞಾನಾರ್ಥಾಂ ಸುಖಕಾರಣಂ (೨) ಇಮಾಂ ವಾಚಂ ಸ್ವೀಕುರುತ ಸಕಾತಾದ್ವೋಃ ಖಿಲಂ ಶುಭಂ | ಅಶ್ನವಾನಿ ||೬||**

ಅ || (೧) ಇಂದ್ರ ಮೊದಲಾದ ಆ ದೇವತೆಗಳಾದರೂ ಯಾವ ಮಂತ್ರದಿಂದ ವಾಚ್ಯರಾಗಿರುತ್ತಾರೋ, ಸುಖಕಾರಣವಾದ ಆ ಮಂತ್ರವನ್ನೇ, ಜ್ಞಾನಕ್ಕಾಗಿ ಜಪಿಸುತ್ತೇವೆ. (೨) ನಮ್ಮ ಈ ಮಾತನ್ನು ಸತ್ಯವನ್ನಾಗಿ ಸ್ವೀಕರಿಸಿ, ನಿಮ್ಮ ಅನುಗ್ರಹದಿಂದ ಎಲ್ಲಾ ಶುಭವನ್ನು ಉಣ್ಣುವೆವು. (ಹೊಂದುವೆವು) ||೬||

ಅ || (೧) ಇಂದ್ರ ಮೊದಲಾದ ಆ ದೇವತೆಗಳಾದರೂ ಯಾವ ಮಂತ್ರದಿಂದ ವಾಚ್ಯರಾಗಿರುತ್ತಾರೋ, ಸುಖ

ಕಾರಣವಾದ ಆ ಮಂತ್ರವನ್ನೇ, ಜ್ಞಾನಕ್ಕಾಗಿ ಅರ್ಪಿಸುತ್ತೇವೆ. (೨) ನಮ್ಮ ಈ ಮಾತನ್ನು ಸತ್ಯವನ್ನಾಗಿ ಸ್ವೀಕರಿಸಿ, ನಿಮ್ಮ ಅನುಗ್ರಹದಿಂದ ಎಲ್ಲಾ ಶುಭವನ್ನು ಉಣ್ಣುವೆವು. (ಹೊಂದುವೆವು) ||೬||

ಋ || (೪೮೮) ಕೋ ದೇವಯಂತಮಶ್ನವಜ್ಜನಂ ಕೋ ವೃಕ್ತ ಬರ್ಹಿಷಂ ।

ಪ್ರಪ್ರ ದಾಶ್ವಾನ್ ಪಸ್ತ್ಯಾಭಿರಸ್ಥಿತಾಂತರ್ವಾದ ತ್ಕ್ಷಯಂ ದಧೇ ||೭||

ಅ || ದೇವಾಃ=ದೇವತೆಗಳಿರಾ, ದೇವಯಂತ (ದೇವಾನ್ ಯಾತಿ ಭಜತೇ, ದೇವಪೂರ್ವಕ ಯಾ ಪ್ರಾವಣೇ ದೇವತೆಗಳ ಭಕ್ತನಾದ, (ನಿಮ್ಮ ಭಕ್ತನಾದ) ಜನಂ =ಜನರನ್ನು, ಕಃ =ಯಾವನು, ಅಶ್ನವತ್ = (ಅತ ಭೋಜನೇ ಹೊಂದಿಯಾನು. (ಮತ್ತು ನಿಮ್ಮನ್ನುದ್ದೇಶಿಸಿ, ವೃಕ್ತ ಬರ್ಹಿಷಂ = (ವೃಚೀ ಸಂಪರ್ಕೇ, ವೃಕ್ತಂ = ಸಂಬದ್ಧವಾದ ಅಸ್ಪೃತವಾದ, ಬರ್ಹಿಸ್ಸುಳ್ಳ) ಬರ್ಹಿಸ್ಸನ್ನು ವಿಸ್ತರಿಸುವ ಯಜಮಾನನ್ನಾಗಲೀ, ಕಃ ಯಾವನು ? ಅಶ್ನವತ್ ಹೊಂದಿಯಾನು (ಅಂತೂ ದೇವ ಭಕ್ತನಾಗಿರುವ ಯಜಮಾನನು ಅತಿ ದುರ್ಲಭನು) (ಅಂತಹ ಯಜಮಾನನು ದುರ್ಲಭನೆಂದು ಮಾತ್ರವಲ್ಲ. ಮತ್ತೆ) ದಾಶ್ವಾನ್ = ದಾಶೃ ದಾನೇ) ಯಜಮಾನನು, ಪಸ್ತ್ಯಾಭಿಃ =ಸುಖಗಳಿಂದ ಯುಕ್ತನಾಗಿಯೇ, ಪ್ರಪ್ರಾಸ್ಥಿತ (ಷ್ಠಾ ಗತಿ ನಿವೃತ್ತ್ಯೋಃ) ಆವಾವ ತಮ್ಮ ಇಷ್ಟ ಸ್ಥಾನಗಳಲ್ಲಿಯೇ ಚೆನ್ನಾಗಿ ಇರುತ್ತಾನೆ. ದಾಶ್ವಾನ್ =ಜ್ಞಾನ ಪೂರ್ವಕವಾಗಿ ಹವಿರಾದಿಗಳನ್ನು ಕೊಡುವವನು, ಅಂತರ್ವಾವತ್ ಕ್ಷಯಂ = (ಅಂತರುವವದಾತ್ ವಾಗತಿ ಗಂಧನಯೋಃ) ಸಮಸ್ತ ವತ್ತುಗಳೊಳಗೆ, ನಿಯಾಮಕನಾಗಿರುವುದರಿಂದ, ಅಂತರ್ವಾ=ಶ್ರೀ ವಿಷ್ಣುವು) ವಿಷ್ಣು ಸಾದೃಶ್ಯದಿಂದ ಯುಕ್ತವಾದ ಸ್ಥಾನವನ್ನು, ಅಥವಾ ಶ್ರೀ ವಿಷ್ಣುವೇ ಸ್ವಾಮಿಯಾಗಿರುವುದರಿಂದ ಯುಕ್ತವಾದ ಸ್ಥಾನವನ್ನು, ದಧೇ =ಹೊಂದುತ್ತಾನೆ. (ಸರ್ವ ವ್ಯಾಪಿಯು ಆಗುತ್ತಾನೆ) ||೭||

ಭಾ (೧) ಅತಿ ದೌರ್ಲಭ್ಯಾದ್ದೇವ ಭಕ್ತಂ ಕ ಅಶ್ನುಯಾತ್ । ಯಜಮಾನಂ ವಾಽನು ಗಚ್ಛೇತಃ ಸಮ್ಯಕ್ ಸ್ಮೃತಬರ್ಹಿಷಂ || (೨) ತತ್ರ ತತ್ರ ಪ್ರಸ್ಥಿತೋಽಸೌ ಯಜಮಾನಃ ಸುಖೈಃ ಸ್ವಯಂ । ಸ್ವೇಷ್ಟ ಸ್ಥಾನೇಷು (೩) ಚಾಂತರ್ವಾ ವಿಷ್ಣುರಂತರ್ಗತೋ ಯತಃ । ತದ್ವತ್ತ್ವೇನ ಕ್ಷಯಂ ಸ್ಥಾನಂ ಪ್ರಾಪ್ನೋತಿ ಜ್ಞಾನತೋ ಯಜನ್ ||೭||

ಅ|| (೧) ನಿಮ್ಮ ಭಕ್ತರಾದ ಜನರನ್ನು ಯಾರು ಹೊಂದುವರು. ಸಮ್ಯಕ್ ಜ್ಞಾನಾದಿ ಪೂರ್ವಕವಾಗಿ ಬರ್ಹಿಸ್ಸನ್ನೂ ವಿಸ್ತರಿಸಿಕೊಂಡಿರುವ ಯಜಮಾನನನ್ನಾಗಲೀ ಯಾವನು ಹೊಂದುವನು. (ಯಾವನೂ ಹೊಂದಲಾರದು) (ದೇವ ಭಕ್ತ ಯಜಮಾನರು ಅಪ್ರಾಪ್ಯರು ಯಾವುದರಿಂದ ಎಂದರೆ) ಅತಿಶಯವಾಗಿ ದುರ್ಲಭನಾಗಿರುವುದರಿಂದ (೨) (ದುರ್ಲಭನು ಮಾತ್ರವಲ್ಲ. ಮತ್ತೆ) (ಈ ಯಜಮಾನನು ಪರಾಪೇಕ್ಷಾ ಇಲ್ಲದೇನೇ (೩) ಯಜಮಾನನು ಜ್ಞಾನಪೂರ್ವಕವಾಗಿ ಹವಿರಾದಿಗಳನನಲು ಕೊಡುವವನು, ವಿಷ್ಣುವೇ ಸ್ವಾಮಿಯಾಗಿ ಉಳ್ಳಸ್ಥಾನವನ್ನು ಹೊಂದುತ್ತಾನೆ. ಶ್ರೀ ವಿಷ್ಣುವು ಯಾವ ಕಾರಣದಿಂದ ಸಮಸ್ತ ವಸ್ತುಗಳ ಒಳಗೆ ನಿಯಾಮಕನಾಗಿರುತ್ತಾನೋ, ಆದ ಕಾರಣ ಶ್ರೀ ವಿಷ್ಣುವು ಅಂತರ್ವಾ=ಎನಿಸುತ್ತಾನೆ. ವಿಷ್ಣು ಸಾದೃಶ್ಯದಿಂದ ಯುಕ್ತವಾದ ಸ್ಥಾನವನ್ನು ಹೊಂದುತ್ತಾನೆ. (ಅಂತರ್ವಾವತ್ ಎಂಬಲ್ಲಿ ಪ್ರಕಾರಾಂತರವನ್ನು ಹೇಳುತ್ತಾರೆ) (ಅಂತರ್ವಾ

ಅಸ್ಮಾಸ್ತೀತಿ ಅಂತರ್ವಾವತ್) ಶ್ರೀ ವಿಷ್ಣುವೇ ಸ್ವಾಮಿಯಾಗಿರುವುದರಿಂದ ಅಂತರ್ವಾವತ್, ಅಂದರೆ, ವಿಷ್ಣುವೇ ಸ್ವಾಮಿಯಾಗಿ ಉಳ್ಳ ಸ್ಥಾನವನ್ನು ಹೊಂದುತ್ತಾನೆ. (ಸರ್ವವ್ಯಾಪಿಯಾಗಿರುತ್ತಾನೆ.) ॥೭॥

**ಋ ॥ (೪೮೯) ಉಪ ಕ್ಷತ್ರಂ ಪೃಂಚೀತ ಹಂತಿ ರಾಜಭಿರ್ಭಯೇ ಚಿತ್ಸು ಕ್ಷಿತಿಂ ದಧೇ ।**

**ನಾಸ್ಯ ವರ್ತಾ ನ ತರುತಾ ಮಹಾಧನೇ ನಾರ್ಭೇ ಅಸ್ತಿ ವಜ್ರಿಣಃ** ॥೮॥೨೧॥೪೦॥

ಅ ॥ (ಅನೇ ಋಕ್ಕಿಗೆ ಇಂದ್ರನು ದೇವತೆಯು) (ಆ ಜನಾರ್ದನನು) ಕ್ಷತ್ರಮುಪ ಪೃಂಚೀತ = (ಪ್ರಚೀ ಸಂಪರ್ಕೇ) ಕ್ಷತ್ರಿಯರಾದ ಮನ್ವಾದಿಗಳಿಂದ ಸಂಬದ್ಧನಾಗುತ್ತಾನೆ. (ಅಂದರೆ ಮನ್ವಾದಿಗಳಲ್ಲಿ ಆವೇಶ ಮಾಡಿ ಅವರಿಂದ ಮಿತ್ರನಾಗುತ್ತಾನೆ) ಅವರಲ್ಲಿ ಅವಿಷ್ಟನಾದ ಶ್ರೀ ಹರಿಯು ಆ ರಾಜರಿಂದ) ಹಂತಿ = (ಶತ್ರುಗಳನ್ನು ಸಂಹರಿಸುತ್ತಾನೆ. ಭಯೇಚಿತ್ = (ಭಕ್ತರಿಗೆ) ಭಯವು ಪ್ರಾಪ್ತವಾದಾಗ, ಸುಕ್ಷಿತಿಂ =ಕ್ಷಿನಿವಾಸಗತ್ಯೋಃ, ಶೋಭನವಾದ ಆಶ್ರಯವನ್ನು (ಭಯನಿವಾರಣವನ್ನು ದಧೇ= ಕೊ (ಮಾ)ಡುತ್ತಾನೆ. ಅಸ್ಯವಜ್ರಿಣಃ = ಇಂದ್ರನಿಗೆ) ಮಹಾಧನೇ = ಯುದ್ಧಾಖ್ಯ ಮಹಾಧನವಿಷಯದಲ್ಲಿ, ವರ್ತಾ= (ವೃತು ವರ್ತನೇ) ಇದಿರು ಹೋಗುವವನು, (ಪ್ರತಿ ಯುದ್ಧ ಮಾಡುವವನು ನ=ಎಲ್ಲಿಯೂ ಇಲ್ಲವೇ ಇಲ್ಲ. ತರುತಾ = (ತೄ ಪ್ಲವನ ತರಣಯೋಃ, ಗೆಲ್ಲುವವನಾಗಲೀ, ನ=ಇಲ್ಲವೇ ಇಲ್ಲ (ಹೀಗೆಯೇ) ಅರ್ಭೇ = ಅಲ್ಪಧನದಲ್ಲಿ, ಪ್ರಸಿದ್ಧವಾದ ವಿತ್ತ ರೂಪವಾದ ಧನ ವಿಷಯದಲ್ಲಿ, ವರ್ತಾ ತರುತಾ ವಾ = ಇದಿರು ಯುದ್ಧ ಮಾಡುವವನು, ಗೆಲ್ಲುವವನಾಗಲೀ, ನ = ಇಲ್ಲವೇ ಇಲ್ಲ. ॥೮॥೧೨॥೪೦॥

**ಭಾ ॥ (೧) ಉಪಪೃಕ್ತಃ ಕ್ಷತ್ರಿಯೈಸ್ಸ ಆವೇಶೇನ ಜನಾರ್ದನಃ (೨) ಹಂತಿ ಶಂತ್ರೂಶ್ಚತೈರ್ದೇವೋ ಭಯೇ ಚ ಸ್ವಾತ್ರಯಂ ದದೌ ॥ (೩) ವರ್ತಾಽಭಿಗಂತಾ ತರುತಾ ಜೇತಾ ಚಾಸ್ಯ ನ ಹಿ ಕ್ವಚಿತ್ । (೪) ಯುದ್ಧಂ ಮಹಾಧನಂ ತ್ವರ್ಭಂ ಪ್ರಸಿದ್ಧಂ ಧನಮೇವಹಿ** ॥೮॥೨೧॥೮॥

ಅ ॥ (೧) ಆ ಜನಾರ್ದನನು ಕ್ಷತ್ರಿಯರಿಂದ ಸಂಬದ್ಧನಾದನು. (ಅಂದರೆ ಅವರಲ್ಲಿ ಪ್ರವೇಶ ಮಾಡಿ ಮಿಶ್ರನಾದನು. (೨) ರಾಜರಿಂದ ಶತ್ರುಗಳನ್ನು ಸಂಹರಿಸುತ್ತಾನೆ. ಭಕ್ತರಿಗೆ, ಭಯವು ಪ್ರಾಪ್ತವಾದಾಗ ಭಯ ನಿವಾರಣವನ್ನು ಕೊಟ್ಟನು. ಮಾಡಿದನು (೩) ಯಾವನು ಇದಿರಾಗಿ ಹೋಗುತ್ತಾನೋ ಆತನು ವರ್ತಾ ಎನಿಸುತ್ತಾನೆ. ಯಾವನು ಅತಿಕ್ರಮಿಸುತ್ತಾನೋ ಗೆಲ್ಲುತ್ತಾನೋ, ಅವನ ತರುತಾ ಎನಿಸುತ್ತಾನೆ. ಈ ಇಂದ್ರನ ಇದಿರು ಯುದ್ಧ ಮಾಡುವವನು. ಗೆಲ್ಲುವವನಾಗಲೀ ಎಲ್ಲಿಯೂ ಇಲ್ಲವೇ ಇಲ್ಲ. (೪) (ಮಹಾಧನ ವಿಷಯದಲ್ಲಿ ಆಗಲೀ ಅಲ್ಪ ಧನ ವಿಷಯದಲ್ಲಿ ಆಗಲೀ ಯಾವನೊಬ್ಬನೂ ಇಲ್ಲವೇ ಇಲ್ಲ. ಮಹಾಧನ ಯಾವುದು, ಅಲ್ಪಧನವು ಯಾವುದೆಂದರೆ) (ಪ್ರಧನ ಶಬ್ದ ಪರ್ಯಾಯವು ಮಹಾಧನ ಶಬ್ದವು. ಅರ್ಭ ಶಬ್ದವು ಅಲ್ಪವಾಚಕವು. ಕ್ಷತ್ರಿಯರಿಗೆ) ಯುದ್ಧವು ಮಹಾಧನವು ಪ್ರಸಿದ್ಧ ಧನವು ಯುದ್ಧಕ್ಕಿಂತ ಅಲ್ಪ ಧನವೇ ಆಗಿದೆ. ಎಂದು ಹಿ ಶಬ್ದಾರ್ಥವು, ಅಥವಾ ಯಂ ರಕ್ಷಂತಿ ಇದು ಮೊದಲಾದ ಮೇಲಿನ ಮಂತ್ರಭಾಗವನ್ನು ಏಕೆ ವ್ಯಾಖ್ಯಾನ ಮಾಡಲಿಲ್ಲ ಎಂದರೆ, ನಿಘಂಟು ವ್ಯಾಕರಣ ಮೊದಲಾದ ಈ ಮಾರ್ಗದಿಂದಲೇ ಮೇಲಿನ ಮಂತ್ರಗಳ ಸಮುದಾಯವನ್ನು






ವ್ಯಾಖ್ಯಾನ ಮಾಡುವುದು ಸುಲಭವಾಗಿದೆ ಎಂಬ ಅಭಿಪ್ರಾಯದಿಂದ ಇಲ್ಲಿ ಉಪರಮ ಮಾಡುತ್ತೇವೆ, ಎಂದು ಹಿ ಶಬ್ದದಿಂದ ಶ್ರೀ ಮದಾಚಾರ್ಯರು ಹೇಳಿರುವರು. ||೮||೨೧||೮||

ವಿ || (1) ಈ ಗ್ರಂಥದ ಆದಿಯಲ್ಲಿ ಅತಿತುಷ್ಟಿಕರಂ ಎಂದೂ ಅಂತ್ಯದಲ್ಲಿ ಪ್ರಸಿದ್ಧಂ ಧನಮೇವ ಹಿ ಎಂದೂ ಹೇಳಿದ ಪ್ರಯುಕ್ತ ಈ ಗ್ರಂಥವು ಶ್ರೀ ಪರಮಾತ್ಮನಿಗೆ ಅತಿ ಪ್ರಿತಿಕರವಾದುದು, ಈ ಗ್ರಂಥವನ್ನು ಅಧ್ಯಯನ ಮಾಡುವವರಿಗೆ ಐಹಿಕಾಮುಷ್ಮಿಕ ನಿಖಿಲಪುರುಷಾರ್ಥಗಳೂ ಸಿಗುತ್ತವೆ ಎಂದುಕ್ತವಾಯ್ತು. ಹೇಗೆಂದರೆ - ಈ ಅಂತಿಮ ಋಕ್ಕಿನ ಪೂರ್ವಾರ್ಧದಿಂದ ಶ್ರೀ ಭಗವಂತನ ಅನುಗ್ರಹದಿಂದ ಭಕ್ತರ ಸಕಲ ಅನಿಷ್ಟಗಳೂ ನಿವೃತ್ತಗಳಾಗುತ್ತವೆ ಎಂದೂ, ಉತ್ತರಾರ್ಧದಿಂದ ಸಮಸ್ತ ಅಭೀಷ್ಟಗಳು ಸಿದ್ಧಿಸುತ್ತವೆ ಎಂದೂ ಪ್ರತಿಪಾದಿಸುತ್ತಾ ಶ್ರೀ ಮಧ್ವಾಚಾರ್ಯರು ಮಂತ್ರ ವ್ಯಾಖ್ಯಾದಿಂದಲೇ ಗ್ರಂಥವನ್ನು ಸಮಾಪ್ತಿಸಿರುವರು. (2) ಹೇಗೆ ಶ್ರೀ ಮದಾಚಾರ್ಯರು ತಾನು ಮಾಡಿದ ಬ್ರಹ್ಮಸೂತ್ರ ಭಾಷ್ಯ ಮೊದಲಾದ ಮೊದಲಾದ ಇತರ ಎಲ್ಲಾ ಗ್ರಂಥಗಳಲ್ಲಿ ಯಸ್ಯತ್ರೀಣ್ಯು ದಿತಾನಿ ಇತ್ಯಾದಿಗಳಿಂದ ತಮ್ಮ ಮಾಹಾತ್ಮ್ಯ ಪ್ರತಿಪಾದನ ಪರವಾದ ಬಳಿತ್ಥಾತದ್ವಪುಷೇ ಇದು ಮೊದಲಾದ ಮಂತ್ರಗಳ ಅರ್ಥ ಸಂಗ್ರಹವನ್ನು ಹೇಳಿ ಅಷ್ಟರಿಂದಲೇ ಸಮಾಪ್ತಿಯನ್ನು ಇಚ್ಛಿಸದೆ ಅಂತ್ಯದಲ್ಲಿಯೂ ಭಗವಂತನ ನಮನ ಸ್ತುತ್ಯಾದಿಗಳನ್ನು ಹೇಳಿ ಸಮಾಪ್ತಿಗೊಳಿಸಿರುವರೋ, ಹಾಗೆ ಈ ಋಗ್ಭಾಷ್ಯದಲ್ಲಿ ತಮ್ಮ ಮಹಿಮೆಯನ್ನು ಪ್ರತಿಪಾದಿಸುವ ಮಾರುತಸೂಕ್ತ ವ್ಯಾಖ್ಯಾನದಿಂದಲೇ ಗ್ರಂಥ ಸಮಾಪ್ತಿ ಮಾಡಲಿಕ್ಕೆ ಇಚ್ಛಿಸದೆ ಶ್ರೀ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ ಬ್ರಹ್ಮರುದ್ರಾದಿ ನಿಖಿಲ ದೇವತೆಗಳಿಂದಲೂ ಉತ್ತಮನು, ಆತನಿಗೆ ಸಮಾನಿಕನು ಯಾವನೊಬ್ಬನೂ ಇಲ್ಲವೇ ಇಲ್ಲ. ಆತನೇ ಬ್ರಹ್ಮರುದ್ರಾದಿ ದೇವತೆಗಳ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವವನು. ಸಮಸ್ತ ವೇದಶಾಸ್ತ್ರಗಳಿಂದ ಮುಖ್ಯತಃ ಪ್ರತಿಪಾದಕನು, ಸರ್ವೇಂದ್ರಿಯಗಳಿಗೆ ಪ್ರೇರಕನು, ಸರ್ವವ್ಯಾಪ್ತನು, ಭಕ್ತರಿಗೆ ಮೋಕ್ಷಾದಿ ಪುರುಷಾರ್ಥಗಳನ್ನು ಒಡುವವನು, ಇತ್ಯಾದ್ಯರ್ಥಗಳನ್ನು ಪ್ರತಿಪಾದಿಸುವ, ಸೂಕ್ತವನ್ನು ಅಂತ್ಯದಲ್ಲಿ ವ್ಯಾಖ್ಯಾನ ಮಾಡಿಯೇ ಗ್ರಂಥವನ್ನು ಸಮಾಪ್ತಿಗೊಳಿಸಿದರು (3) ಏವಂಚ ಶ್ರೀ ಮದಾಚಾರ್ಯರು ಶ್ರೀ ಮದೃಕ್ ಸಂಹಿತೆಯ ಪ್ರಥಮಾಷ್ಟಕದಲ್ಲಿ ೩ನೇ ಅಧ್ಯಾಯದಲ್ಲಿ ೨೧ ವರ್ಗ ಅಂದರೆ ಪ್ರಥಮ ಮಂಡಲದಲ್ಲಿ ೮ನೇ ಅನುವಾಕ ೪೦ ಸೂಕ್ತದವರೆಗೇನೇ ವ್ಯಾಖ್ಯಾನ ಮಾಡಿರುವರು (4) ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವಚ । ವ್ಯತ್ಯಾ ಸಾದೀನ್ ಸಪ್ತ ಭೇದಾನ್ ವೇದಾದ್ಯರ್ಥಂ ತು ಯೋ ವದೇತ್ । ಸ ಯಾತಿ ನಿರಯಂ ಘೋರಮನ್ಯಥಾಜ್ಞಾನಸಂಭವಂ ಯಾವನು ಗುಹ್ಯ, ಸಮಾಧಿ ದರ್ಶನ ಎಂಬ ೩ ಭಾಷೆಗಳನ್ನು ವೈದರ್ಭಿರೀತಿ ಮೊದಲಾದ ೧೦೦ ವ್ಯಾಖ್ಯಾನ ಪ್ರಕಾರ ವಿಶೇಷಗಳನ್ನು ವ್ಯತ್ಯಾಸ, ಪ್ರಾತಿ ಲೋಮ್ಯ, ಗೋಮೂತ್ರೀ ಪ್ರಘಸ ಉಕ್ಷಣ, ಸುಧರ, ಸಾಧು ಎಂಬ ೭ ಭೇದಗಳನ್ನು ತಿಳಿಯದೆ ವೇದಾದಿಗಳ ಅರ್ಥಗಳನ್ನು ಹೇಳುವನೋ, ಆತನು ವಿಪರೀತ ಜ್ಞಾನಪ್ರಯುಕ್ತ ನರಕಾದ್ಯನರ್ಥವನ್ನು ಹೊಂದುತ್ತಾನೆ, ಎಂದು ವೇದವ್ಯಾಸರು ಮಾಡಿದ ಅಕ್ಷಣ ನಾಶ್ತ್ರದಲ್ಲಿ ಹೇಳಿದೆ. ಆ ಕಾರಣ ಭಾಷಾಶ್ರಯ ೧೦೦ ರೀತಿ ಇತ್ಯಾದಿಗಳ ಲಕ್ಷಣಗಳನ್ನು ಪ್ರತಿಪಾದಿಸುವ ಗ್ರಂಥಗಳನ್ನು, ಸತ್ಯಂ ಸತ್ಯಂ ಪುನಸ್ಸತ್ಯಂ । ನ ಹಿ ವಿಷ್ಣುಃ ಪ್ರಣಮತಿ ಕಸ್ಮೈಚಿದ್ವಿಬುಧಾಯ ತು ಇದು ಮೊದಲಾದ ನಿರ್ಣಯ ಗ್ರಂಥಗಳನ್ನು ಅನುಸರಿಸಿಕೊಂಡೇ ನಿಗಮ, ನಿರುಕ್ತ, ವ್ಯಾಕರಣ, ನಿಘಂಟು ಮೊದಲಾದ ಮಾರ್ಗದಿಂದಲೇ ಮಂತ್ರಗಳ ಸಮುದಾಯವನ್ನು ವ್ಯಾಖ್ಯಾನ ಮಾಡಬೇಕೆಂಬ ಅಭಿಪ್ರಾಯದಿಂದ ಶ್ರೀ ಮನ್ಮಧ್ವಾಚಾರ್ಯರು ಮುಂದಿನ ಋಕ್ಕುಗಳನ್ನು ತಾವು ವ್ಯಾಖ್ಯಾನ ಮಾಡದೆ ಇಲ್ಲಿಯೇ ಅವಸಾನ ಮಾಡಿರುತ್ತಾರೆ.

ಇತಿ ಶ್ರೀ ಮದಾನಂದತೀರ್ಥ ಭಗವತ್ಪಾದಕೃತಂ ಶ್ರೀ ಮದೃಗ್ಭಾಷ್ಯಂ ಸಂಪೂರ್ಣಂ

ಶ್ರೀ ಮದಾನಂದ ತೀರ್ಥಭಗವತ್ಪಾದಾಚಾರ್ಯರು ವಿರಚಿಸಿರುವ ಋಗ್ಭಾಷ್ಯವು ಸಂಪೂರ್ಣವಾಯ್ತು.

ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ಅನಂತಾಮ್ನಾಯ ವೇದ್ಯಾಯ ಶ್ರೀ ಪ್ರಾಣಪತಯೇ ನಮಃ ।
ದೇವತಾಃ ಕಂಚುಕಾಯಂತೇ ವೇದೋ ಬಂದಿಜನಾಯತೇ ।
ಯಸ್ಯ ತಸ್ಮಿನ್ರಮಾನಥೇ ಸುದೃಢಾ ಪ್ರೀತಿರಸ್ತು ಮೇ ॥
ಶ್ರೀಮನ್ಮಧ್ವಮುನೇಃ ಕೃತೀಃ ಪ್ರಥಯತಾ ಭಾಷಾಮಯ ವ್ಯಾಖ್ಯಯಾ
ಋಗ್ಭಾಷ್ಯಸ್ಯ ಚ ಸ್ವಾಂತಃ ಶುಭಹಿತಾ ಮಂತ್ರಾರ್ಥ ಸನ್ಮಂಜರೀಂ
ಮೂಲೀಕೃತ್ಯ ತದೀಯಭಾಷ್ಯ ವಿವೃತಿಂ ಟೀಕಾಪ್ರಕಾಶಂ

ತಥಾ ಶ್ರೀ ನಾರಾಯಣ ತಂತ್ರಿಣಾ ವಿರಚಿತಾ ಸಚ್ಛ್ರೇಯಸ್ ಕಲ್ಪತಾಂ ॥ ನಮೋಽಸ್ತು ಹರಯೇ ಯುಕ್ತಿಗಿರಿಯೇ ನಿರ್ಜಿತಾರಯೇ ।

ಸಮಸ್ತಗುರವೇ ಕಲ್ಪತರವೇ ಪರಮೇದಿನಾಂ ॥
ಹಯಗ್ರೀವಾಯ ದೇವಾಯ ಜ್ವಲದ್ವಾಹಾಯ ದುರ್ಹೃದಾಂ ।
ತ್ರಯೀಗೇಯಾಯ ನಿರ್ಮಾಯಜನಧ್ಯೇಯಾಯ ತೇ ನಮಃ ॥
ವ್ಯಾಸಂ ಶುಭಗುಣಾವಾಸಂ ಶ್ರಿತಂ ನೌಮಿ ಸತಾಂ ವತಂ ।
ಯೋಽಶಂಕೋ ಮಾಂ ಸುಹೃಲ್ಲೇಶಂ ದಾಸಂ ದರ್ಶಯತೀದೃತಂ ॥
ಸನ್ಮುಖ್ಯಗತಯೇ ಶ್ಲಾಘ್ಯಕೃತಯೇ ವೀತಭೀಯೇ ।
ಸ್ವರ್ವಾಗ್ಮಿಪತಯೇ ಪೂರ್ಣಮತಯೇ ಯತಯೇ ನಮಃ ॥
ಅನಯಾ ಸೇವಯಾ ಶ್ರೀತಃ ಪ್ರೀಯತಾಂ ಮೇ ಹಯಾನನಃ ।
ಹರಿಭಕ್ತಾಗ್ರಣೀರ್ಮಧ್ವೋ ಗುರುತ್ವ ಪ್ರೀಯತಾಂ ಮಮ ॥
॥ಶ್ರೀಃ॥ ॥ಶ್ರೀಃ॥

ಮೂ॥ ಹೇ ಚಿತ್ತ ಚಿಂತಯಸ್ವೇಹ ವಾಸುದೇವ ಮಹರ್ನಿಶಂ।
ನೂನಂ ಯಶ್ಚಿಂತಿತಃ ಪುಂ ಸಾಂ ಹಂತಿ ಸಂಸಾರಬಂಧನಂ ॥

ಅ॥ ಎಲೋ ಮನಸ್ಸೇ! ವಾಸುದೇವನನ್ನು ಹಗಲು ರಾತ್ರಿ ಸರ್ವದಾ ಧ್ಯಾನಿಸು ನಿನ್ನಿಂದ ಧ್ಯಾನಿಸಲ್ಪಟ್ಟ ಯಾವ ವಾಸುದೇವನು ಪುರುಷರಿಗೆ ಅನಾದಿಕಾಲವನ್ನಾರಂಭಿಸಿರುವ ಸಂಸಾರ ಬಂಧನವನ್ನು ನಿಶ್ಚಯವಾಗಿಯೂ ನಾಶಗೊಳಿಸುತ್ತಾನೆ ॥

ಮೂ॥ ಕಿಂ ತಸ್ಯ ಚರಣೈಃ ಕಾರ್ಯಂ ವೃಥಾ ಸಂ ಚರಣೈರ್ದ್ವಿಜ।
ಯೈ ರ್ಹಿ ನ ವ್ರಜತೇ ಜಂತುಃ ಕೇಶವಾಲಯದರ್ಶನೇ ॥

ಅ॥ ಮನುಷ್ಯನು ಯಾವ ಪಾದಗಳಿಂದ ದೇವಾಲಯದಲ್ಲಿದ್ದ ಶ್ರೀ ಹರಿಯನ್ನು ನೋಡುವುದಕ್ಕಾಗಿ ಹೋಗುವುದಿಲ್ಲವೋ, ಅಂತಹ ಪಶುತುಲ್ಯನಾದ ಮನುಷ್ಯನಿಗೆ ದೇವಾಲಯಕ್ಕೆ ಹೋಗದೆ ವ್ಯರ್ಥವಾಗಿ ಸಂಚರಿಸುವ ಪಾದಗಳಿಂದ ಏನು ಪ್ರಯೋಜನವು ? ॥

॥ ಕೃಷ್ಣಾಮೃತ ಮಹಾರ್ಣವ ॥




ಮುದ್ರಣ: ಮನೋರಮ ಆಫ್‌ಸೆಟ್ಸ್, ಮಂಗಳೂರು-8. ದೂರವಾಣಿ:0824-411398, 41